ಮಂಗಳೂರು  ವಿಶ್ವವಿದ್ಯಾನಿಲಯ

MANGALORE UNIVERSITY

**ಎಸ್.ವಿ.ಪಿ. ಕನ್ನಡ ಅಧ್ಯಯನ ಸಂಸ್ಥೆ**

**ಮಂಗಳ ಗಂಗೋತ್ರಿ, ಮಂಗಳೂರು**

ಪಿಎಚ್.ಡಿ. ಪದವಿಗಾಗಿ
ಮಂಗಳೂರು ವಿಶ್ವವಿದ್ಯಾನಿಲಯಕ್ಕೆ ಸಾದರ ಪಡಿಸಿದ
ಸಂಶೋಧನಮಹಾಪ್ರಬಂಧ

# ಆಧುನಿಕ ಪೂರ್ವ ಸಾಹಿತ್ಯಕ್ಕೆ ಕರ್ನಾಟಕದ ಅರಸಿಯರ ಕೊಡುಗೆ


**ಸಂಶೋಧನ ವಿದ್ಯಾರ್ಥಿನಿ**

**ಸಂಧ್ಯಾ.ವಿ**

**ಮಾರ್ಗದರ್ಶಕರು**

**ಪ್ರೊ.ಸಬಿಹಾ**

**ಪ್ರಾಧ್ಯಾಪಕರು**
**ಎಸ್.ವಿ.ಪಿ ಕನ್ನಡ ಅಧ್ಯಯನ ಸಂಸ್ಥೆ**
**ಮಂಗಳೂರು ವಿಶ್ವವಿದ್ಯಾನಿಲಯ**
**ಮಂಗಳಗಂಗೋತ್ರಿ–೫೭೪೧೯೯**


**೨೦೧೭**

# ಪ್ರಮಾಣ ಪತ್ರ

ಮಂಗಳೂರು ವಿಶ್ವವಿದ್ಯಾನಿಲಯದ ಎಸ್.ವಿ.ಪಿ ಕನ್ನಡ ಅಧ್ಯಯನ ಸಂಸ್ಥೆಯ ಪ್ರಾಧ್ಯಾಪಕರಾದ **ಪ್ರೊ.ಸಬಿಹಾ** ಅವರ ಮಾರ್ಗದರ್ಶನದಲ್ಲಿ "*ಆಧುನಿಕ ಪೂರ್ವ ಸಾಹಿತ್ಯಕ್ಕೆ ಕರ್ನಾಟಕದ ಅರಸಿಯರ ಕೊಡುಗೆ*" ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ ಪದವಿಗಾಗಿ ಮಂಗಳೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಲು ಸಿದ್ಧಪಡಿಸಿದ್ದೇನೆ. ಈ ಮಹಾಪ್ರಬಂಧವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಪದವಿಗಾಗಲೀ, ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸ್ಥಳ :

ದಿನಾಂಕ :

**ಸಂಧ್ಯಾ.ವಿ**

**ಕೃತಜ್ಞತೆ**

ಸಂದೇಹವೀ ಕೃತಿಯೊಳಿನ್ನಿಲ್ಲವೆಂದಲ್ಲ ।
ಇಂದು ನಂಬಿಹುದೆ ಮುಂದೆಂದುಮೆಂದಲ್ಲ॥
ಕುಂದು ತೋರ್ದಂದದನು ತಿದ್ದಿಕೊಳೆ ಮನಸುಂಟು।
ಇಂದಿಗೀಮತವುಚಿತ – ಮಂಕುತಿಮ್ಮ ॥

ಮಂಗಳೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿರುವ ಈ ಮಹಾಪ್ರಬಂಧವು ನನ್ನ ಐದು ವರ್ಷಗಳ ಅಧ್ಯಯನದ ಫಲಿತವಾಗಿದೆ. ಈ ವೇಳೆಯಲ್ಲಿ ಓತಪ್ರೋತವಾಗಿ ಸಾಗಿದ ನನ್ನ ಅಧ್ಯಯನದ ದಿಕ್ಕನ್ನು ಸರಿಯಾದ ಕ್ರಮದಲ್ಲಿ ಸಾಗುವಂತೆ ಮಾರ್ಗದರ್ಶನ ಮಾಡಿ, ಅರೆ–ಕೊರೆಗಳನ್ನು ತಿದ್ದಿ ಸ್ಪಷ್ಟರೂಪ ಬರಲು ಕಾರಣರಾದವರು ನನ್ನ ಮಾರ್ಗದರ್ಶಕರಾದ ಪ್ರೊ.ಸಬಿಹಾ ಮೇಡಂ. ಅವರಿಗೆ ನನ್ನ ಮನಃಪೂರ್ವಕ ಕೃತಜ್ಞತೆಗಳನ್ನು ಈ ಮೂಲಕ ಅರ್ಪಿಸುತ್ತೇನೆ.

ನನಗೆ ಅಗತ್ಯವಿದ್ದ ಹಲವಾರು ಪುಸ್ತಕಗಳನ್ನು ಒದಗಿಸಿ ಸಹಕಾರ ನೀಡಿದ ನನ್ನ ಮಿತ್ರವೃಂದಕ್ಕೆ, ವಿಶ್ವವಿದ್ಯಾನಿಲಯದ ನಿಯಮಾವಳಿಗಳನ್ನು ತಿಳಿಸಿ ಸಕಾಲದಲ್ಲಿ ಪ್ರಬಂಧಸಲ್ಲಿಸಲು ಸಹಾಯ ಮಾಡಿದ ಸಹಪಾಠಿ ಪ್ರವೀಣ್ ಅವರಿಗೆ, ವಿಶ್ವವಿದ್ಯಾನಿಲಯದ ಎಲ್ಲ ಪ್ರಾಧ್ಯಾಪಕರಿಗೆ ಹಾಗೂ ಸಿಬ್ಬಂದಿ ವರ್ಗದವರಿಗೆ, ನನ್ನ ಅಧ್ಯಯನಕ್ಕೆ ಸಹಕರಿಸಿ ಶುಭಹಾರೈಸಿದ ಕುಟುಂಬವರ್ಗದವರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇನೆ.

**ಸಂಧ್ಯಾ.ವಿ**

# ಆಧುನಿಕ ಪೂರ್ವ ಸಾಹಿತ್ಯಕ್ಕೆ ಕರ್ನಾಟಕದ ಅರಸಿಯರ ಕೊಡುಗೆ

## ಪರಿವಿಡಿ

## ೩. ಕನ್ನಡ ನಾಡಿನ ಅರಸಿಯರು

### ೩.೧ ಆಡಳಿತ ಮತ್ತು ಕೊಡುಗೆ

೩.೧.೧ ಆಳ್ವಿಕೆ ನಡೆಸಿ, ಉತ್ತಮ ಕೊಡುಗೆ ನೀಡಿದ ಅರಸಿಯರ ಪಟ್ಟಿಕೆ

೩.೧.೨ ಆಳ್ವಿಕೆ ನಡೆಸದೆಯೆ ಉತ್ತಮ ಕೊಡುಗೆ ನೀಡಿದ ಅರಸಿಯರ ಪಟ್ಟಿಕೆ

### ೩.೨ ಅರಸಿಯರ ಆಡಳಿತ

೩.೨.೧ ಆಳ್ವಿಕೆಯ ಅವಕಾಶ ಪಡೆದ ಸಂದರ್ಭ

೩.೨.೨ ಆಳ್ವಿಕೆಯ ಅವಧಿಯಲ್ಲಿ ಹೊರಡಿಸಿದ ಶಾಸನ

೩.೨.೩ ಆಡಳಿತ ವಿಧಾನ

೩.೨.೪ ಆಳ್ವಿಕೆಯ ಅವಧಿಯಲ್ಲಿ ನಿರ್ಮಿಸಿದ ಕೆರೆ ಕಾಲುವೆ

೩.೨.೫ ವ್ಯಾಪಾರ-ವಾಣಿಜ್ಯ

೩.೨.೬ ತೆರಿಗೆ-ಕಂದಾಯ

೩.೨.೭ ಯುದ್ಧ

### ೩.೩ ಅರಸಿಯರ ಸಾಂಸ್ಕೃತಿಕ ಕೊಡುಗೆಗಳು

೩.೩.೧ ವಾಸ್ತುಶಿಲ್ಪಕ್ಕೆ ನೀಡಿದ ಪ್ರೋತ್ಸಾಹ

೩.೩.೨ ಸಂಗೀತ, ನೃತ್ಯ ಮೊದಲಾದ ಲಲಿತ ಕಲೆಗಳಿಗೆ ನೀಡಿದ ಕೊಡುಗೆ

೩.೩.೩ ವಿದ್ಯಾಭ್ಯಾಸಕ್ಕೆ ನೀಡಿದ ಮಹತ್ವ

## 4 ಐತಿಹಾಸಿಕ ಮತ್ತು ಇತರ ಕಾವ್ಯಗಳಲ್ಲಿ ಕರ್ನಾಟಕದ ಅರಸಿಯರು

### 4.1 ಕನ್ನಡ ಕಾವ್ಯೋಲ್ಲೇಖದಲ್ಲಿನ ಅರಸಿಯರು

ಕಲ್ಯಾಣದ ಚಾಲುಕ್ಯ ಅರಸಿಯರಾದ ಸುಗ್ಗಲಾದೇವಿ, ರಾಣಿ ಲಕ್ಷ್ಮೀದೇವಿ,
ರಟ್ಟವಂಶದ ಚಂದ್ರಿಕಾದೇವಿ, ಬರ್ಮಭೂಪಾಲನ ಅರಸಿ ಸುಗ್ಗಲದೇವಿ,
ಸಾಹಸಿ ಸಾವಿಯಬ್ಬೆ, ಕೆಳದಿಯ ಅರಸಿ ಚೆನ್ನಮ್ಮ,
ಚೌಟ ರಾಣಿ ಅಬ್ಬಕ್ಕ, ಬೆಳವಡಿಯ ಮಲ್ಲಮ್ಮ

### 4.2 ಸಂಸ್ಕೃತ ಕಾವ್ಯೋಲ್ಲೇಖದಲ್ಲಿನ ಕರ್ನಾಟಕದ ಅರಸಿಯರು

ಕುಂಬಳೆ ಮನೆತನದ ರಾಣಿ ಸುಶೀಲ, ಮೃಣಾಳವತಿ,
ವಿಕ್ರಮಾದಿತ್ಯನ ಅರಸಿ ಚಂದ್ರಿಕಾದೇವಿ

### 4.3 ಜನಪದ ಸಾಹಿತ್ಯಗಳು ಉಲ್ಲೇಖಿಸುವ ಕರ್ನಾಟಕದ ಅರಸಿಯರು

ಕಿತ್ತೂರಿನ ರಾಣಿ ಚೆನ್ನಮ್ಮ, ಓಬವ್ವ ನಾಗತಿ, ಗಿರಿಜವ್ವೆ, ಕೊಡಗಿನ ಲಿಂಗರಾಜಮ್ಮ,
ಬೈಲಂಗಡಿಯ ಸೋಮಲಾದೇವಿ

5 **ಪ್ರಾಚೀನ ಕರ್ನಾಟಕದ ಅರಸಿಯರ ಸಾಹಿತ್ಯ ಪೋಷಣೆ**

ಕದಂಬಳಿಗೆ ಸಾಸಿರದ ಅರಸಿ ಜಕ್ಕಿಯಬ್ಬೆ, ನಾಗರಖಂಡ ಎಪ್ಪತ್ತರ ಅರಸಿ ಜಕ್ಕಿಯಬ್ಬೆ, ಕಂಚಿಕಬ್ಬೆ, ಅತ್ತಿಮಬ್ಬೆ, ದೀವಳಬ್ಬರಸಿ, ಮೋಚಬ್ಬರಸಿ, ಬನವಾಸಿ ಪನ್ನೀರ್ಚಾಸಿರದ ಜೋಗಬ್ಬರಸಿ, ಕದಂಬ ಮಾಳಲದೇವಿ, ಚಾಲುಕ್ಯ ಅರಸಿ ಜಾಕಲದೇವಿ, ಹೊಯ್ಸಳರಾಣಿ ಶಾಂತಲಾದೇವಿ, ಕದಂಬ ಅರಸಿ ಕಮಲಾದೇವಿ, ಹರಿಯಬ್ಬರಸಿ, ಹೊಯ್ಸಳ ರಾಣಿ ಉಮಾದೇವಿ, ಹೊಯ್ಸಳ ರಾಣಿ ಬೈಚಲಾದೇವಿ

6 **ಮಧ್ಯಕಾಲೀನ ಕರ್ನಾಟಕದ ಅರಸಿಯರ ಸಾಹಿತ್ಯ ಪೋಷಣೆ**

ಸಾಳ್ವ ಮನೆತನದ ಅರಸಿಯರು: ಭೈರಾದೇವಿ, ಚೆನ್ನಭೈರಾದೇವಿ, ಕೆಳದಿ ಅರಸಿಯರಾದ ಸೋಮಶೇಖರನ ಅರಸಿ ಚನ್ನಮ್ಮ, ಬಸವಪ್ಪ ನಾಯಕನ ಅರಸಿ ಚೆನ್ನಮ್ಮ, ಮೂಲ್ಕಿ ಅರಸು ಮನೆತನದ ರಾಣಿ ಚೆನ್ನಾಂಬಿಕೆ, ಮೈಸೂರು ಅರಸಿಯರು: ರಾಣಿ ಅಮೃತಾಂಬೆ, ದೇವಾಜಮ್ಮಣ್ಣಿ, ದೇವೀರಾಂಬೆ, ಗೌರಮ್ಮಣ್ಣಿ, ಮುಮ್ಮಡಿ ಕೃಷ್ಣರಾಜ ಒಡೆಯರ ಅರಸಿಯರಾದ ಚೆಲುವಾಜಮ್ಮಣ್ಣಿ, ದೇವಾಜಮ್ಮಣ್ಣಿ, ಕಿತ್ತೂರಿನ ರಾಣಿ ಚೆನ್ನಮ್ಮ, ಚೌಟರಾಣಿಯರು: ಅಬ್ಬಕ್ಕ, ಚನ್ನಮ್ಮ, ಬಂಗ ಅರಸುಮನೆತನದ ರಾಣಿ ಚಂದ್ರಮತಿ

7. **ಕರ್ನಾಟಕದ ಅರಸಿಯರು ರಚಿಸಿದ ಕನ್ನಡ ಕಾವ್ಯಗಳು**

ವಚನ ಸಾಹಿತ್ಯ,
ಚಂಪೂಕಾವ್ಯ,
ಸಾಂಗತ್ಯ,
ಚೌಪದಿ,
ಗದ್ಯಕೃತಿ,
ಕೀರ್ತನೆಗಳು

8. **ಅರಸಿಯರು ರಚಿಸಿದ ಸಂಸ್ಕೃತ ಸಾಹಿತ್ಯ**

ಸಂಸ್ಕೃತ ಮುಕ್ತಕಗಳು
ನಾಟಕ
ಐತಿಹಾಸಿಕ ಕಾವ್ಯಗಳು

9. **ಸಮಾರೋಪ**

9.1 ಅಧ್ಯಯನದ ಫಲಿತಗಳು
9.2 ಮುಂದಿನ ಅಧ್ಯಯನದ ಸಾಧ್ಯತೆಗಳು

9 **ಅನುಬಂಧ**

9.1 ಪರಾಮರ್ಶನ ಗ್ರಂಥಗಳು
9.2 ಮೂಲಪಠ್ಯ ಗ್ರಂಥಗಳು
9.3 ಲೇಖನಗಳು
9.4 ಶಾಸನ ಸಂಪುಟಗಳು
9.5 ಇ-ಲೈಬ್ರರಿ (ಅಂತರ್ಜಾಲದ) ಪುಸ್ತಕಗಳು

# ಅಧ್ಯಾಯ 1

## ಪ್ರಸ್ತಾವನೆ

ಸಂಗೀತ, ಸಾಹಿತ್ಯ, ಮೊದಲಾದ ಕಲೆಗಳು ರಾಜಾಶ್ರಯದಲ್ಲಿ ಹುಲುಸಾಗಿ ಬೆಳೆಯುತ್ತದೆಂಬುದನ್ನು ಪ್ರಾಚೀನಕಾಲದಿಂದ ಇಲ್ಲಿಯವರೆಗೂ ಮನಗಂಡಿದ್ದೇವೆ. ಪ್ರಸಿದ್ಧ ಕವಿ, ವಿದ್ವಾಂಸರು, ಕಲಾವಿದರಿಗೆ ತಮ್ಮ ಆಸ್ಥಾನದಲ್ಲಿ ಆಶ್ರಯ ನೀಡುವುದನ್ನು ಪ್ರತಿಷ್ಠೆಯೆಂದೇ ಅರಸರು ಬಗೆಯುತ್ತಿದ್ದರು. ರಾಜನೀತಿ, ಯುದ್ಧ, ವ್ಯಾಪಾರ ಚತುರತೆಯೊಂದಿಗೆ ರಾಜ ಕಲಾಪೋಷಕನಾಗಿರುತ್ತಿದ್ದ, ಸಾಹಿತ್ಯಾರಾಧಕನಾಗಿರುತ್ತಿದ್ದ. ಇತಿಹಾಸದಲ್ಲಿ ಕೇವಲ ಯುದ್ಧದಲ್ಲಿ ಸಾಹಸ–ಶೌರ್ಯ ಮೆರೆದ ರಾಜರು ಮಾತ್ರ ಕೀರ್ತಿವಂತರಾಗಿಲ್ಲ; ಕಲಾ ಪೋಷಣೆಯಿಂದಲೂ ಪ್ರಖ್ಯಾತಿ ಪಡೆದಿದ್ದ ರಾಜರನ್ನು ಕಾಣಬಹುದು. ಶೌರ್ಯದಲ್ಲಾಗಲೀ, ರಾಜನೀತಿಯಲ್ಲಾಗಲೀ ಅಷ್ಟೇನು ಪ್ರಸಿದ್ಧನಲ್ಲದ ವೇಮುಲವಾಡದ ಚಾಲುಕ್ಯದೊರೆ ಅರಿಕೇಸರಿಯು, ಪಂಪನ ಆಶ್ರಯದಾತನಾಗಿದ್ದ ಕಾರಣ ಸಾಹಿತ್ಯವಲಯದಲ್ಲಿ ಇಂದು ಚಿರಸ್ಥಾಯಿಯಾಗಿದ್ದಾನೆ.

ರಾಜಾಶ್ರಯದಲ್ಲಿದ್ದ ಕವಿಗಳ ಕೃತಿಗಳು ಚರಿತ್ರೆಯ ಪುನಾರಚನೆಗೆ ಮುಖ್ಯ ಆಕರಗಳಾಗಿ ಬಳಕೆಯಾಗುತ್ತಿರುವುದು, ಇವುಗಳಿಗಿರುವ ಐತಿಹಾಸಿಕ ಮಹತ್ವವನ್ನು ತಿಳಿಸುತ್ತವೆ. ಕವಿಗಳು ತಮ್ಮ ಆಶ್ರಯದಾತನ ವಿಚಾರಗಳನ್ನು ತಮ್ಮ ಕಾವ್ಯಗಳ ಪುಷ್ಪಿಕೆಗಳಲ್ಲಿ, ಸ್ತುತಿರೂಪವಾಗಿ ಉಲ್ಲೇಖಿಸಿರುತ್ತಾರೆ. ಕೆಲವೊಂದುಬಾರಿ ತಮ್ಮ ಆಶ್ರಯದಾತನನ್ನೇ ಕಾವ್ಯನಾಯಕನನ್ನಾಗಿ ಕಾವ್ಯ ರಚಿಸಿರುವುದೂ ಉಂಟು. ಇಂಥ ಕಾವ್ಯಗಳಲ್ಲಿ ಕೆಲವೊಂದು ವರ್ಣನೆಗಳು ಉತ್ಪ್ರೇಕ್ಷೆ ಎನಿಸಿದರೂ, ಇವು ಹಲವಾರು ಮಹತ್ವದ ಐತಿಹಾಸಿಕ ದಾಖಲೆಗಳನ್ನು ಒಳಗೊಂಡಿರುತ್ತವೆ. ಇಂಥ ಕಾವ್ಯಗಳು ಕೇವಲ ರಾಜ, ರಾಜಕೀಯ ವಿಚಾರಗಳನ್ನಷ್ಟೇ ಅಲ್ಲದೆ, ಅಂದಿನ ಸಮಾಜ, ಜನಜೀವನ, ರಾಜ್ಯದ ಗಡಿ, ನಗರವರ್ಣನೆ, ಧಾರ್ಮಿಕ ವಿಧಿ–ವಿಧಾನ, ದಾನ, ಯುದ್ಧ ಮೊದಲಾದ ವಿಚಾರಗಳನ್ನು ತಿಳಿಸುತ್ತವೆ.

ಆಧುನಿಕಪೂರ್ವ ಕನ್ನಡಸಾಹಿತ್ಯವು ಬಹುತೇಕ ಪುರಾಣದ ವಿಚಾರಗಳನ್ನು ಕಾವ್ಯ ವಸ್ತುವನ್ನಾಗಿಸಿಕೊಂಡು ರಚಿತವಾದದ್ದಾಗಿದೆ. ಕಾವ್ಯಗಳು ಪೌರಾಣಿಕ ಕಥನಗಳನ್ನು ಬಣ್ಣಿಸಿದರೂ, ಅದರಲ್ಲಿ ಐತಿಹಾಸಿಕ ಘಟನೆಗಳನ್ನು ಸೇರಿಸಿ ಹೇಳುವ ಜಾಣ್ಮೆಯನ್ನು ನಮ್ಮ ಪ್ರಾಚೀನಕವಿಗಳು ತೋರಿದ್ದಾರೆ. ಸಾಧಾರಣವಾಗಿ ಪೌರಾಣಿಕ ಕಥಾವಸ್ತುಗಳೆಲ್ಲಾ ಪುರುಷಪ್ರಧಾನವಾದುದೇ ಆಗಿರುವುದರಿಂದ ಆಸ್ಥಾನ ಕವಿಗಳು ತಮ್ಮ ಕಾವ್ಯಗಳಲ್ಲಿ ಆಶ್ರಯದಾತ ಅರಸನನ್ನೇ ಪ್ರಧಾನವಾಗಿರಿಸಿಕೊಂಡು ಕಾವ್ಯರಚನೆ ಮಾಡಿದ್ದಾರೆ.

ಅನೇಕ ಅರಸರು ಕಲಾಪೋಷಕರಾಗಿ, ಸ್ವತಃ ಕವಿಗಳಾಗಿ, ಕವಿಗಳಿಗೆ ಆಶ್ರಯ ನೀಡಿದ್ದ ಉದಾಹರಣೆಗಳು ದೊರಕುತ್ತವೆ. ಕಲಾವಲ್ಲಭ, ಕಲಾಪೋಷಕ ಮೊದಲಾದವು ಸಾಧಾರಣವಾಗಿ ರಾಜರಿಗಿರುತ್ತಿದ್ದ ಬಿರುದಾವಳಿಗಳಾಗಿರುತ್ತಿದ್ದವು. ಅರಸಿಯರೂ, ರಾಜರ ಸರಿಸಮಾನ ವಿದ್ಯಾಭ್ಯಾಸವನ್ನು ಪಡೆದವರಾಗಿ, ಸಾಹಿತ್ಯ, ಸಂಗೀತ, ನೃತ್ಯ ಮೊದಲಾದ ಲಲಿತಕಲೆಗಳಲ್ಲಿ ಪರಿಣತರಾಗಿರುತ್ತಿದ್ದರೆನ್ನುವ ವಿಚಾರ, ಶಾಸನ–ಕಾವ್ಯಗಳಿಂದ ತಿಳಿದುಬರುತ್ತದೆ. ತಮ್ಮ ಅಭಿರುಚಿಯನ್ನು ಪ್ರಕಟಿಸಲು ತಮಗಿದ್ದ ಅಧಿಕಾರವನ್ನು ರಾಣಿಯರು ಬಳಸಿಕೊಂಡಿದ್ದ ನಿದರ್ಶನಗಳೂ ಇವೆ. ಲೋಕಮಹಾದೇವಿ, ತ್ರೈಲೋಕ್ಯ ಮಹಾದೇವಿಯರು ಪಟ್ಟದಕಲ್ಲಿನಲ್ಲಿ ದೇವಾಲಯವನ್ನು ಕಟ್ಟಿಸಿ ತಮ್ಮ ಕಲಾಭಿರುಚಿ ಪ್ರಕಟಿಸಿದರೆ, ಶಾಂತಲೆ ಬೇಲೂರು, ಹಳೇಬೀಡು ಮೊದಲಾದ ಕಡೆಗಳಲ್ಲಿ ದೇವಾಲಯಗಳನ್ನು ನಿರ್ಮಿಸಿ ಶಿಲೆಯಲ್ಲಿ ಕಲೆಯನ್ನರಳಿಸಿದ ಕೀರ್ತಿಗೆ ಭಾಜನಳಾದವಳು. ರಾಣಿಯರು ದೇವಾಲಯ, ಕೆರೆ–ಕಾಲುವೆ,

ಅಗ್ರಹಾರಗಳ ನಿರ್ಮಾಣಗಳಿಗೆ, ಕೇವಲ ಧಾರ್ಮಿಕ ವಿಧಿಗಳಿಗೆ ಮಾತ್ರ ಗಮನ ಹರಿಸದೆ ಕಲೆ, ಸಾಹಿತ್ಯಕ್ಕೂ ಕೊಡುಗೆ ನೀಡಿದ್ದಾರೆ. ಅನೇಕ ರಾಣಿಯರು ಸ್ವತಃ ಕಾವ್ಯಗಳನ್ನೂ ರಚಿಸಿದ್ದಾರೆ. ಸಾಹಿತ್ಯಕ್ಕೆ ಕರ್ನಾಟಕದ ರಾಣಿಯರು ನೀಡಿರುವ ಕೊಡುಗೆ, ಅದರ ಮಹತ್ವವನ್ನು ಸಾಂಸ್ಕೃತಿಕ, ರಾಜಕೀಯ, ಸಾಮಾಜಿಕ ಹಿನ್ನೆಲೆಯಲ್ಲಿ ಗುರುತಿಸುವ ಅಗತ್ಯವಿದೆ.

## ೧.೧ ಅಧ್ಯಯನದ ಉದ್ದೇಶ

ಕರ್ನಾಟಕವನ್ನಾಳಿದ ರಾಜಮನೆತನಗಳಲ್ಲಿ ಪ್ರಭಾವೀ ರಾಣಿಯರೂ ಆಳ್ವಿಕೆ ನಡೆಸಿರುವುದನ್ನು ಕಾಣುತ್ತೇವೆ. ಎಲ್ಲ ರಾಣಿಯರಿಗೂ ಆಡಳಿತದಲ್ಲಿ ಅವಕಾಶ ದೊರೆಯದಿದ್ದರೂ, ಹಲವರು ಅಧಿಕಾರದ ಚುಕ್ಕಾಣಿ ಹಿಡಿದಿದ್ದಾರೆ. ರಾಜಮನೆತನಗಳಲ್ಲಿ ರಾಜರು ಸ್ವಾಭಾವಿಕವಾಗಿ ಅಧಿಕಾರಕ್ಕೆ ಬಂದರೆ, ರಾಣಿಯರು ವಿಷಮ ರಾಜಕೀಯ ಪರಿಸ್ಥಿತಿಯಲ್ಲಿ ಆಡಳಿತದ ಅವಕಾಶ ಪಡೆಯುತ್ತಿದ್ದರು. ಅರಸಿಯರು ಮಗನ ಪರವಾಗಿಯೋ, ಪತಿಯ ಅವಸಾನದ ನಂತರವೋ ಆಳ್ವಿಕೆ ನಡೆಸಿರುವುದನ್ನು ಕಾಣುತ್ತೇವೆ. ಇಂಥ ಸಮಯದಲ್ಲಿ ರಾಣಿಯೊಬ್ಬಳು ಮುಂದಿನ ಪೀಳಿಗೆಗಾಗಿ ನೀಡಿದ ಕೊಡುಗೆ ರಾಜನ ಕೊಡುಗೆಗಿಂತ ಮಹತ್ವಪೂರ್ಣದ್ದಾಗಿರುತ್ತದೆ. ಬಹುಪತ್ನೀ ವಲ್ಲಭನಾಗಿರುತ್ತಿದ್ದ ರಾಜ ತನ್ನೆಲ್ಲ ರಾಣಿಯರಿಗೂ ಸಮಾನ ಅವಕಾಶವನ್ನು, ಅಧಿಕಾರವನ್ನು ನೀಡಲು ಸಾಧ್ಯವಾಗುತ್ತಿರಲಿಲ್ಲ ಇಂಥ ಸನ್ನಿವೇಶದಲ್ಲಿಯೂ ತಮಗೆ ದೊರೆತ ಅಲ್ಪ ಅವಕಾಶವನ್ನು ಬಳಸಿಕೊಂಡು ರಾಣಿಯರು ಆಳ್ವಿಕೆ ಮತ್ತು ಕಲೆ–ಸಾಹಿತ್ಯಗಳಿಗೆ ನೀಡಿದ ಕೊಡುಗೆ ಮಹತ್ವಪೂರ್ಣದ್ದಾಗಿದೆ. ಇದೇ ಮೊದಲಾದ ಕಾರಣಗಳಿಂದ ರಾಣಿಯರ ಕೊಡುಗೆಯನ್ನು ಪ್ರತ್ಯೇಕವಾಗಿ ವಿಭಿನ್ನ ಆಯಾಮದಿಂದ ನೋಡುವ ಅಗತ್ಯವಿದೆ.

ಕರ್ನಾಟಕದ ರಾಣಿಯರು ಎಲ್ಲ ಕ್ಷೇತ್ರಕ್ಕೂ ಕೊಡುಗೆಯನ್ನು ನೀಡಿದ್ದಾರೆ. ಸಂಸ್ಕೃತ ಸಾಹಿತ್ಯ, ಕನ್ನಡ ಸಾಹಿತ್ಯ, ಧಾರ್ಮಿಕ ಗ್ರಂಥಗಳು, ದೇವಾಲಯ, ಅಗ್ರಹಾರ, ಕೆರೆ ನಿರ್ಮಾಣ, ಅವುಗಳಿಗೆ ನೀಡಿದ ದಾನ ದತ್ತಿ, ಯುದ್ಧ, ರಾಜಕೀಯ, ವ್ಯಾಪಾರ, ಸಂಗೀತ, ನೃತ್ಯ, ಶಿಲ್ಪಕಲೆ ಎಲ್ಲೆಡೆ ರಾಣಿಯರು ನೀಡಿದ ಕೊಡುಗೆಯನ್ನು ಗಮನಿಸಬಹುದು.

ಪ್ರಾಚೀನ ಕಾಲದ ರಾಜಕೀಯ ಪರಿಸ್ಥಿತಿಗಿಂತ ಮಧ್ಯಕಾಲೀನ ರಾಜಕೀಯ ಪರಿಸ್ಥಿತಿ ಭಿನ್ನವಾಗಿದೆ. ಮಧ್ಯಕಾಲೀನ ಪರಿಸ್ಥಿತಿಯಲ್ಲಿ ವಿದೇಶಿಗರ ದಾಳಿ, ಸಣ್ಣಪುಟ್ಟ ರಾಜವಂಶಗಳ ಆಡಳಿತ, ಪಾಳೆಗಾರರ ಅಧಿಕಾರ, ಧಾರ್ಮಿಕ ಸ್ಥಿತಿಗತಿಗಳಲ್ಲಿ ಬದಲಾವಣೆ ಮೊದಲಾದವು ಹೆಚ್ಚಾಗಿ ಕಂಡುಬರುತ್ತವೆ. ಸ್ವತಂತ್ರವಾಗಿ ಆಡಳಿತ ನಡೆಸಿದ ಅರಸಿಯರು ಮಧ್ಯಕಾಲೀನ ಸಂದರ್ಭದಲ್ಲಿ ಹೆಚ್ಚು ಕಂಡುಬರುತ್ತಾರೆ.

ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ರಾಣಿಯರು ಅನೇಕರಿದ್ದರೂ, ಇತಿಹಾಸದ ಪಠ್ಯಗಳಲ್ಲಿ ಹೆಸರಿಸುವುದು ಬೆರಳೆಣಿಕೆಯ ರಾಣಿಯರನ್ನು ಮಾತ್ರ. ಗಮನಾರ್ಹ ಸಾಧನೆಯನ್ನು ಮಾಡಿ ಕಲೆ, ವಾಸ್ತುಶಿಲ್ಪ, ಸಾಹಿತ್ಯಗಳಿಗೆ ಕೊಡುಗೆಗಳನ್ನು ನೀಡಿರುವ ಕರ್ನಾಟಕದ ರಾಣಿಯರನ್ನು ಒಂದೆಡೆ ಗುರುತಿಸುವ ಅಗತ್ಯವಿದೆ.

ಪ್ರಾಚೀನ ಕಾಲದಿಂದಲೂ ಕರ್ನಾಟಕದಲ್ಲಿ ಸಾಹಿತ್ಯರಚನೆ ಸಮೃದ್ಧವಾಗಿ ಬೆಳೆದುಬಂದಿದೆ. ವಿಭಿನ್ನ ಪ್ರಕಾರಗಳ ಸಾಹಿತ್ಯರಚನೆಗಳು ಇಲ್ಲಿ ನಡೆದಿರುವುದನ್ನು ಗಮನಿಸಬಹುದು. ಈ ಪ್ರಕಾರವಾಗಿ ಬೆಳೆದು ಬಂದಿರುವ ಸಾಹಿತ್ಯಗಳ ಮಾಹಿತಿಯನ್ನು ಒಂದೆಡೆ ದಾಖಲಿಸುವ ಕಾರ್ಯ ಕಳೆದೊಂದು ಶತಮಾನದಲ್ಲಿ ಹೆಚ್ಚಾಗಿ ನಡೆದಿದೆ. ಸಾಹಿತ್ಯವನ್ನು ಅನೇಕ ಮಜಲುಗಳಲ್ಲಿ ಚರ್ಚಿಸುವ, ವಿಮರ್ಶಿಸುವ, ಸಂಕ್ಷಿಪ್ತವಾಗಿ ಪರಿಚಯಿಸುವ ನಾನಾ ಪರಿಯನ್ನು ಕಾಣುತ್ತೇವೆ. ಪ್ರಾಚೀನ ಕನ್ನಡಸಾಹಿತ್ಯ, ವಚನಸಾಹಿತ್ಯ, ಮಧ್ಯಕಾಲೀನಸಾಹಿತ್ಯ, ರಗಳೆ, ಕನ್ನಡದ ಷಟ್ಪದಿಗಳು, ಚಂಪೂಕಾವ್ಯಗಳು, ಸಂಸ್ಕೃತಕಾವ್ಯಕ್ಕೆ ಕರ್ನಾಟಕದ ಕೊಡುಗೆ, ಕರ್ನಾಟಕ ಕವಿಗಳ ಪ್ರಾಕೃತರಚನೆ, ದಾಸಸಾಹಿತ್ಯ, ಚಾರಿತ್ರಿಕ ಕಾವ್ಯಗಳು, ರಾಷ್ಟ್ರಕೂಟರ ಕಾಲದ ಸಾಹಿತ್ಯ, ವಿಜಯನಗರ ಪೂರ್ವದ ಜೈನಸಾಹಿತ್ಯ ಇವೇ ಮೊದಲಾದ ಬಗೆಯನ್ನು ಇಲ್ಲಿ ಕಾಣುತ್ತೇವೆ.

ಈ ನಿಟ್ಟಿನಲ್ಲಿ ಕವಿಗಳ ಪೋಷಣೆ, ಕಾವ್ಯ ರಚನೆಗೆ ಪ್ರೇರಣೆ, ಪ್ರೋತ್ಸಾಹ ನೀಡಿರುವ ರಾಣಿಯರೊಂದಿಗೆ ಸ್ವತಃ ಕಾವ್ಯ ರಚನೆಗೆ ತೊಡಗಿ ಸಾಹಿತ್ಯ ವಲಯದಲ್ಲಿ ತಮ್ಮದೇ ಆದ ಕೊಡುಗೆಯನ್ನು ನೀಡಿರುವ ಕರ್ನಾಟಕದ ರಾಣಿಯರ ಕುರಿತಾದ ಸಮಗ್ರ ಅಧ್ಯಯನವನ್ನು ಇಲ್ಲಿ ಕೈಗೊಳ್ಳಲಾಗಿದೆ.

## ೧.೨ ಅಧ್ಯಯನದ ಸ್ವರೂಪ ಮತ್ತು ತಾತ್ವಿಕತೆ

ಕರ್ನಾಟಕದ ವಿಭಿನ್ನ ರಾಜಮನೆತನಗಳಲ್ಲಿ ಆಳ್ವಿಕೆ ನಡೆಸಿದ ರಾಣಿಯರನ್ನು ಕುರಿತಾಗಿ ಅವರ ಸಾಧನೆ, ನಾಡಿಗೆ ಅವರು ನೀಡಿರುವ ಸಾಂಸ್ಕೃತಿಕ ಕೊಡುಗೆ, ವಿಶೇಷವಾಗಿ ಅವರ ಸಾಹಿತ್ಯಿಕ ಕೊಡುಗೆಯ ಕುರಿತಾದ ಅಧ್ಯಯನ ಈ ಪ್ರಬಂಧದ ಮುಖ್ಯ ಉದ್ದೇಶವಾಗಿದೆ. ರಾಣಿಯರ ಪೋಷಣೆಯಲ್ಲಿ ಕಾವ್ಯ ರಚಿಸಿರುವ ಕವಿಯ, ಕಾವ್ಯ ವಿಮರ್ಶೆ ಹಾಗೂ ಅದರಲ್ಲಿ ಬಿಂಬಿತವಾಗಿರುವ ರಾಣಿಯರ ಜೀವನ ವಿಚಾರ, ಸ್ವತಃ ಕಾವ್ಯ ರಚಿಸಿರುವ ರಾಣಿಯರ ಕಾವ್ಯ, ವಿಮರ್ಶೆ ಕುರಿತಾಗಿ ರಚಿತವಾಗಿರುವ ಈ ಪ್ರಬಂಧವು ವಿಭಿನ್ನ ದೃಷ್ಟಿಕೋನ ಹೊಂದಿರುವ ಸಾಹಿತ್ಯ ಚರಿತ್ರೆಯಾಗಿದೆ.

ಈ ಅಧ್ಯಯನಕ್ಕೆ ಅರಸಿಯರ ಆಶ್ರಯದಲ್ಲಿ ಕವಿಗಳು ರಚಿಸಿರುವ ಕಾವ್ಯಗಳು ಹಾಗೂ ಸ್ವತಃ ಅರಸಿಯರೇ ರಚಿಸಿರುವ ಕಾವ್ಯಗಳೇ ಮುಖ್ಯ ಆಕರವಾಗಿದೆ. ಇವುಗಳೊಂದಿಗೆ ಅರಸಿಯರ ಜೀವನ ಶೈಲಿ, ವಿದ್ಯೆ, ಸಾಧನೆ, ಧಾರ್ಮಿಕ ಹಾಗೂ ಸಾಮಾಜಿಕ ಕೊಡುಗೆಗಳನ್ನು ಬಣ್ಣಿಸುವ, ಉಲ್ಲೇಖಿಸುವ ಕಾವ್ಯಗಳು, ಸಾಧನೆಯ ಪ್ರಮುಖ ದಾಖಲಾತಿ ಎಂದೆನಿಸಿದ ಶಾಸನಗಳು, ಕೈಫಿಯತ್ತು, ಬಖೈರು ಹಾಗೂ ಅಗತ್ಯವಿದ್ದೆಡೆ ವಿದೇಶಿ ಪ್ರವಾಸಿಗರ ಲೇಖನವನ್ನೂ ಬಳಸಿಕೊಂಡು ಅಧ್ಯಯನ ನಡೆಸಲಾಗಿದೆ.

ಅರಸಿಯರ ಪೋಷಿತ ಕವಿಗಳಲ್ಲಿ ಶಾಸನ ಕವಿಗಳನ್ನೂ ಗುರುತಿಸಲಾಗಿದೆ. ರಾಣಿಯರ ಪ್ರೋತ್ಸಾಹ ಕಾವ್ಯರಚನೆಗಷ್ಟೇ ಸೀಮಿತವಾಗಿರದೆ ಪ್ರಾಚೀನ ಕಾವ್ಯಗಳನ್ನು ಪ್ರತಿ ಮಾಡಿಸುವ ಕೆಲಸವನ್ನೂ ಕೈಗೊಂಡಿದ್ದಾರೆ. ಅನೇಕ ರಾಣಿಯರು ವಿದ್ಯಾಪಾರಂಗತರಾಗಿದ್ದುದಲ್ಲದೆ, ಸಾಹಿತ್ಯಾಭ್ಯಾಸ ಮಾಡುತ್ತಿದ್ದುದನ್ನೂ ಗಮನಿಸಬಹುದು. ಇಂತಹ ಅರಸಿಯರು ಪ್ರಾಚೀನಕಾವ್ಯಗಳನ್ನು ಪ್ರತಿಮಾಡಿಸಿರುವುದು ಮುಂದಿನ ಪೀಳಿಗೆಗೆ ಪ್ರಾಚೀನಕಾವ್ಯವನ್ನು ಉಳಿಸಿ, ತಲುಪಿಸಿದ ಮಹತ್ಕಾರ್ಯಕ್ಕೆ ಎಡೆಮಾಡಿದೆ. ಹೀಗೆ ಗ್ರಂಥಗಳನ್ನು ಪ್ರತಿಮಾಡಿಸಿರುವ ಕೆಲವು ಕಾರ್ಯಗಳ ಹಿಂದೆ ಧಾರ್ಮಿಕ ಮನೋಭಾವನೆಯೂ ಕಂಡುಬರುತ್ತದೆ. ವಿಶೇಷವಾಗಿ ಜೈನ ಧಾರ್ಮಿಕ ವಿಧಿಗಳಲ್ಲೊಂದಾದ ಶಾಸ್ತ್ರದಾನವನ್ನು ಕೈಗೊಂಡ ಹಲವರು ಅರಸಿಯರು ಅಪೂರ್ವ ಗ್ರಂಥಗಳನ್ನು ಪ್ರತಿಮಾಡಿಸಿರುವುದು, ಇಂದಿನ ಪೀಳಿಗೆಯವರೆಗೂ ಕೆಲವು ಮಹತ್ವದ ಗ್ರಂಥಗಳು ಉಳಿದು ಬರಲು ಕಾರಣವಾಗಿದೆ. ಇದೂ ಸಹ ಸಾಹಿತ್ಯ ಉಳಿಸಿ ಬೆಳೆಸುವ ಕಾರ್ಯಗಳಲ್ಲೊಂದಾಗಿದೆ.

ರಾಣಿಯರ ಆಸಕ್ತಿ, ಅಭಿರುಚಿ, ಅವರ ಕಾವ್ಯರಚನಾಸಾಮರ್ಥ್ಯ, ಪ್ರತಿಭೆಯನ್ನು ಗುರುತಿಸುವ ಹಾಗೂ ಅವರು ರಚಿಸಿರುವ ಕಾವ್ಯದ ವಸ್ತು ವಿವೇಚಿಸುವ ಸಲುವಾಗಿ ಕರ್ನಾಟಕದ ಅರಸಿಯರು ಸಾಹಿತ್ಯ ರಚನೆ, ಪೋಷಣೆ, ಸಾಹಿತಿಗಳ ಬೆಳವಣಿಗೆಗೆ ಪ್ರೋತ್ಸಾಹ ನೀಡಿರುವ ಸಮಗ್ರ ಕಾರ್ಯವನ್ನೂ ಗುರುತಿಸುವ ಪ್ರಯತ್ನ ಇಲ್ಲಿ ನಡೆಸಲಾಗಿದೆ.

ನಮ್ಮ ನಾಡಿನ ರಾಜಮನೆತನದವರು ತಮ್ಮ ಚರಿತ್ರೆಯನ್ನು ಕ್ರಮಬದ್ಧವಾಗಿ ದಾಖಲಿಸುವ ಕಡೆ ಗಮನಹರಿಸದೆ **'ಭಾರತೀಯರಿಗೆ ಚಾರಿತ್ರಿಕ ಪ್ರಜ್ಞೆ ಇಲ್ಲ'** ಎನ್ನುವ ಕಳಂಕಕ್ಕೆ ತುತ್ತಾಗಿದ್ದಾರೆ. ಆದರೆ ಬಹುತೇಕ ಸಂದರ್ಭಗಳಲ್ಲಿ, ದಾಖಲಿಸಿದ ವಿವರಗಳು ಉಳಿದು ಬರದೆ, ದೊರಕಿರುವ ಮಾಹಿತಿಗಳನ್ನು ಅರ್ಥೈಸಿಕೊಳ್ಳಲಾಗದೆಯೇ ತೊಡಕು ಎದುರಾಗುತ್ತಿದೆ. ವಿವಿಧೆಡೆಗಳಲ್ಲಿ ದೊರಕುವ ವಿಚಾರಗಳನ್ನು ಕ್ರೋಢೀಕರಿಸುವ ಕೆಲಸ ನಡೆಯಬೇಕಿದೆ. ಕೆಲವೊಂದು ಕಾವ್ಯಗಳಲ್ಲಿ ಪ್ರಾಸ್ತಾವಿಕವಾಗಿ ರಾಣಿಯರ ಕುರಿತಾದ ವಿಚಾರ ತಿಳಿದುಬರುತ್ತದೆ. ಉದಾಹರಣೆಗೆ, ಚಾಲುಕ್ಯ ಚಕ್ರವರ್ತಿ ಜಗದೇಕಮಲ್ಲ ಎರಡನೆಯ ಜಯಸಿಂಹನ ಪಿರಿಯರಸಿ ಸುಗ್ಗಲದೇವಿಯನ್ನು ಕುರಿತು ಕೆಲವು ವೀರಶೈವ ಕಾವ್ಯ

ಪುರಾಣಗಳು ಉಲ್ಲೇಖಿಸುತ್ತವೆ. ಇವಳು ತನ್ನ ಗುರು ದೇವರದಾಸಿಮಯ್ಯನ ಪವಾಡ ಸದೃಶ ಘಟನೆಯೊಂದಕ್ಕೆ ಕಾರಣಳಾಗಿ ಪಾಲ್ಕುರಿಕೆ ಸೋಮನಾಥನ **ಬಸವಪುರಾಣಮು,** ಷಡಕ್ಷರಿಯ **ಬಸವರಾಜ ವಿಜಯ,** ವಿರೂಪಾಕ್ಷಪಂಡಿತನ **ಚೆನ್ನಬಸವ ಪುರಾಣ,** ಭೀಮಕವಿಯ **ಬಸವಪುರಾಣ** ಕೃತಿಗಳಲ್ಲಿ ಪರಮ ಶಿವಭಕ್ತೆಯಾಗಿ ಕಂಡುಬರುತ್ತಾಳೆ. ಈ ಕಾವ್ಯಗಳಲ್ಲಿನ ವಿಚಾರವನ್ನೇ ಸೂಕ್ಷ್ಮವಾಗಿ ಲಕ್ಕಣದಂಡೇಶನ **ಶಿವತತ್ತ್ವ ಚಿಂತಾಮಣಿ,** ಶಾಂತಲಿಂಗದೇಶಿಕನ **ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ** ಮೊದಲಾದ ಕೃತಿಗಳಲ್ಲಿಯೂ ಕಾಣಬಹುದು. ಇದೇ ರೀತಿ ವಿಕ್ರಮಾದಿತ್ಯನ ರಾಣಿ ಲಕ್ಷ್ಮೀದೇವಿಗೆ ಸಂಬಂಧಿಸಿದ ಒಂದು ಪ್ರಸಂಗ ಕವಿ ಹರಿಹರನ **ತೆಲುಗು ಜೊಮ್ಮಯ್ಯನ ರಗಳೆ**ಯಲ್ಲಿ ಉಕ್ತವಾಗಿದೆ. ಇದೇ ವಿಚಾರ ಲಕ್ಕಣದಂಡೇಶನ **ಶಿವತತ್ವ ಚಿಂತಾಮಣಿ**ಯಲ್ಲಿಯೂ ಹೇಳಲಾಗಿದೆ. ಇಂಥ ಕಾವ್ಯಗಳಲ್ಲಿನ ರಾಣಿಯರ ವಿಚಾರಗಳೊಂದಿಗೆ ಆ ಪ್ರಸಂಗಗಳ ಚಾರಿತ್ರಿಕವಿಚಾರಗಳನ್ನು ಅವಲೋಕಿಸಲಾಗಿದೆ. ಇವುಗಳಲ್ಲದೆ ಪತಿಯೊಂದಿಗೆ ಹೆಸರಿಸಲಾದ ಕೆಲವು ರಾಣಿಯರು ಕಂಡುಬರುತ್ತಾರೆ ಉದಾಹರಣೆಗೆ, ನೇಮಿಚಂದ್ರನ **ಲೀಲಾವತಿ ಪ್ರಬಂಧ**ದಲ್ಲಿ ಉಲ್ಲೇಖಿತಳಾಗಿರುವ ರಟ್ಟವಂಶದ ರಾಣಿ ಚಂದ್ರಿಕಾದೇವಿ, ಕರ್ಣಪಾರ್ಯನ **ನೇಮಿನಾಥ ಪುರಾಣ**ದಲ್ಲಿ ಕಂಡುಬರುವ ಕರಹಾಟದ ಶಿಲಾಹಾರ ವಿಜಯಾದಿತ್ಯನ ಮಹಿಷಿ ಸೊನ್ನಲಾದೇವಿ, ಬಿಲ್ಹಣನ **ವಿಕ್ರಮಾಂಕದೇವಚರಿತ**ದ ರಾಣಿ ಚಂದಲಾದೇವಿ ಮೊದಲಾದವರು. ಇಲ್ಲಿ ರಾಣಿಯರನ್ನು ಪ್ರಾಸಂಗಿಕವಾಗಿ ಹೆಸರಿಸಲಾಗಿದ್ದರೂ, ಈ ರಾಣಿಯರ ಕುರಿತಾದ ಮತ್ತಷ್ಟು ವಿಚಾರ ಶಾಸನಗಳಲ್ಲಿಯೂ ತಿಳಿದುಬರುತ್ತದೆ. ಇಂಥ ಸಮಗ್ರ ಅಧ್ಯಯನಕ್ಕಾಗಿ ಕಾವ್ಯಗಳೊಂದಿಗೆ ಶಾಸನಗಳನ್ನು ಗಮನಿಸಲಾಗಿದೆ. ಅರಸಿಯರ ಉಲ್ಲೇಖವನ್ನು ನೀಡುವ ಕಾವ್ಯಗಳಲ್ಲಿ ಶಿಷ್ಟ ಹಾಗೂ ಜನಪದ ಕಾವ್ಯಗಳೆರಡೂ ದಾಖಲೆಯನ್ನು ನೀಡುವುದಾದ್ದರಿಂದ ಈ ಎಲ್ಲ ಬಗೆಯ ಸಾಹಿತ್ಯವನ್ನೂ ಕುರಿತು ಅಧ್ಯಯನ ನಡೆಸಲಾಗಿದೆ.

ವಿಚಾರ ಸ್ಪಷ್ಟತೆಗಾಗಿ ಕೆಲವು ಅಧ್ಯಾಯಗಳನ್ನಾಗಿ ರೂಪಿಸಿಕೊಂಡು ಅಧ್ಯಯನ ನಡೆಸಲಾಗಿದೆ. ಕನ್ನಡನಾಡಿಗೆ ಅರಸಿಯರು ನೀಡಿರುವ ಸಾಹಿತ್ಯಿಕ ಕೊಡುಗೆಯನ್ನು ಗಮನಿಸುವ ಈ ಅಧ್ಯಯನವು ಸಾಹಿತ್ಯ ಚರಿತ್ರೆಯ ಸ್ವರೂಪವನ್ನೇ ಹೊಂದಿದೆಯಾದ್ದರಿಂದ ಈ ಹಿಂದೆ ರಚಿತವಾಗಿರುವ ಅನೇಕ ಪ್ರಕಾರದ ಸಾಹಿತ್ಯ ಚರಿತ್ರೆಗಳಲ್ಲಿ, ಆಧುನಿಕಪೂರ್ವ ಕಾಲಘಟ್ಟಗಳಲ್ಲಿ ಮಹಿಳೆಯರು ನೀಡಿರುವ ಕೊಡುಗೆಯ ಪರಿಗಣನೆ ಹೇಗೆ ನಡೆದಿದೆ ಎನ್ನುವ ವಿಚಾರವನ್ನು **'ಕನ್ನಡ ಸಾಹಿತ್ಯ ಚರಿತ್ರೆಗಳಲ್ಲಿ ಲೇಖಕಿಯರ ಪ್ರತಿನಿಧೀಕರಣ'** ಎಂಬ ಎರಡನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಕನ್ನಡನಾಡಿನಲ್ಲಿ ಆಳ್ವಿಕೆ ನಡೆಸಿದ ಅರಸಿಯರ ಆಡಳಿತ, ಆಳ್ವಿಕೆ ನಡೆಸಿದ ಕಾಲ, ಪ್ರದೇಶ, ಆಳ್ವಿಕೆಯ ಸಮಯದಲ್ಲಿನ ಅವರ ಸಾಧನೆ, ವಾಣಿಜ್ಯ-ವ್ಯವಹಾರ ದೃಷ್ಟಿ, ಮೊದಲಾದ ವಿಚಾರಗಳನ್ನು ಕುರಿತು ಮೂರನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ತಮ್ಮ ಸಾಹಸಮಯ ಜೀವನ, ಸಮಾಜಮುಖಿ ಸಾಧನೆಗಳಿಂದಾಗಿ ಸಾಹಿತ್ಯಕ್ಕೆ ಪ್ರೇರಣೆಯಾದ ಅರಸಿಯರು ಕಾವ್ಯಗಳಲ್ಲಿ ಪ್ರಶಂಸೆಗೆ ಪಾತ್ರರಾಗಿದ್ದಾರೆ. ಕನ್ನಡ ಹಾಗೂ ಸಂಸ್ಕೃತ ಗ್ರಂಥಸ್ಥ ಸಾಹಿತ್ಯಗಳಷ್ಟೇ ಅಲ್ಲದೆ ಮೌಖಿಕ ಕಾವ್ಯಗಳಲ್ಲಿಯೂ ಅರಸಿಯರು ಬಣ್ಣಿತರಾಗಿದ್ದಾರೆ. ಇಂತಹ ಕಾವ್ಯಗಳಲ್ಲಿನ ಅರಸಿಯರ ವಿಚಾರಗಳನ್ನು ಕುರಿತಾಗಿ ನಾಲ್ಕನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಅರಸಿಯರು ಸಾಹಿತ್ಯ ರಚನೆಗೆ ನೀಡಿರುವ ಪ್ರೋತ್ಸಾಹವನ್ನು ಕುರಿತಂತೆ ನಡೆಸಿದ ವಿಚಾರವನ್ನು ಐದನೆಯ ಅಧ್ಯಾಯದಲ್ಲಿ ಎರಡು ವಿಭಿನ್ನ ವಿಭಾಗಗಳಲ್ಲಿ ಅವಲೋಕಿಸಲಾಗಿದೆ. ಇಲ್ಲಿ ಪ್ರಾಚೀನ ಸಾಹಿತ್ಯಕ್ಕೆ ಅರಸಿಯರ ಪ್ರೋತ್ಸಾಹ ಹಾಗೂ ಮಧ್ಯಕಾಲೀನ ಸಾಹಿತ್ಯಕ್ಕೆ ಅರಸಿಯರ ಪ್ರೋತ್ಸಾಹವನ್ನು ಪ್ರತ್ಯೇಕ ವಿಭಾಗಗಳಲ್ಲಿ ಗಮನಿಸಲಾಗಿದೆ. ಆರನೆಯ ಅಧ್ಯಾಯದಲ್ಲಿ ಸ್ವತಃ ಅರಸಿಯರೇ ರಚಿಸಿರುವ ಕನ್ನಡ ಕಾವ್ಯವನ್ನು ಕುರಿತಂತೆ ಹಾಗೂ ಏಳನೆಯ ಅಧ್ಯಾಯದಲ್ಲಿ ರಾಣಿಯರು ರಚಿಸಿರುವ ಸಂಸ್ಕೃತ ಕಾವ್ಯಗಳನ್ನು ಕುರಿತು ವಿವೇಚಿಸಲಾಗಿದೆ. ಈ ಅಧ್ಯಯನದ ಒಟ್ಟು ಫಲಿತದ ವಿಶ್ಲೇಷಣೆಯನ್ನು ಎಂಟನೆಯ ಅಧ್ಯಾಯ ಸಮಾರೋಪದಲ್ಲಿ ಮಂಡಿಸಲಾಗಿದೆ.

**ತಾತ್ವಿಕತೆ:** ಪ್ರಸ್ತುತ ಸಂಶೋಧನೆಯು ಅಂತರ್ಶಿಸ್ತೀಯ ಅಧ್ಯಯನವಾಗಿದೆ. ಆಕರಗಳಿಗೆ ಚರಿತ್ರೆಯ ಗ್ರಂಥಗಳು, ಶಾಸನಗಳು, ಸಾಹಿತ್ಯ ಕೃತಿಗಳು ಮತ್ತು ಜಾನಪದ ಈ ಎಲ್ಲ ಕ್ಷೇತ್ರಗಳನ್ನು ಅವಲಂಬಿಸಲಾಗಿದೆ. ಈಗಾಗಲೇ ಚರಿತ್ರೆಯ

ಕೃತಿಗಳಲ್ಲಿ ಕರ್ನಾಟಕದ ಅರಸಿಯರ ಕೊಡುಗೆಯ ಬಗ್ಗೆ ಏನು ದಾಖಲಾಗಿದೆ? ಯಾವ ಮತ್ತು ಯಾರ ಕುರಿತು ಮಾಹಿತಿಗಳು ಅಸಂಪೂರ್ಣವಾಗಿವೆ ಅಥವಾ ಕೊರತೆಯಾಗಿವೆ ಎಂಬುದನ್ನು ಗಮನಿಸಿ, ಅದಕ್ಕೆ ಇತರ ಆಕರಗಳ ಆಧಾರಗಳಿಂದ ದೊರೆಯುವ ಮಾಹಿತಿಗಳಿಂದ ಅರಸಿಯರ ರಾಜಕೀಯ, ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಕೊಡುಗೆಗಳನ್ನು ದಾಖಲಿಸುವ ಪ್ರಯತ್ನವನ್ನು ಮಾಡಲಾಗಿದೆ. ಅದೇ ರೀತಿಯಲ್ಲಿ, ಸಾಹಿತ್ಯಚರಿತ್ರೆಯ ಕೃತಿಗಳು ದಾಖಲಿಸದ ಅರಸಿಯರು ಮತ್ತು ಅವರ ಸಾಹಿತ್ಯಿಕ ಕೊಡುಗೆಯನ್ನು ಇಲ್ಲಿ ವಿಶೇಷವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಪ್ರಸಿದ್ಧ ವಚನ, ರಗಳೆ ಕಾವ್ಯಗಳು ಪ್ರಾಸ್ತಾವಿಕವಾಗಿ ಬಿಂಬಿಸುವ ಅರಸಿಯರ ಬದುಕಿನ ಘಟನೆಗಳು ಅರಸಿಯರು ವಹಿಸಿದ ಮಹತ್ವದ ಪಾತ್ರಗಳನ್ನು ಚರ್ಚೆಗೆ ಒಳಪಡಿಸಲಾಗಿದೆ. ಸಂಸ್ಕೃತ ಸಾಹಿತ್ಯದಲ್ಲಿ ಎಡೆಪಡೆದ ಕರ್ನಾಟಕದ ಮಹಿಳೆಯರ ವೈಶಿಷ್ಟ್ಯ ಹಾಗೂ ಅವರು ಸಾಹಿತ್ಯದಲ್ಲಿ ಬಿಂಬಿತರಾಗಿರುವ ಪರಿಯನ್ನು ವಿಶ್ಲೇಷಿಸಲಾಗಿದೆ. ಜನಪದ ಸಾಹಿತ್ಯ ಪ್ರಕಾರಗಳಲ್ಲಿ ಉಲ್ಲೇಖಿತವಾದ ಅರಸಿಯರ ಕುರಿತ ಮಾಹಿತಿಗಳನ್ನು ಅಧ್ಯಯನಕ್ಕೆ ಒಳಪಡಿಸಿ, ಜನಪದರಿಗೆ ಅರಸಿಯರಲ್ಲಿ ಯಾರು ಮತ್ತು ಏಕೆ ಮುಖ್ಯರಾಗಿದ್ದಾರೆ ಎಂಬುದನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

### ೧.೩ ಅಧ್ಯಯನದ ವ್ಯಾಪ್ತಿ

ಕರ್ನಾಟಕದ ಅರಸಿಯರನ್ನು ಕುರಿತಾದ ಈ ಅಧ್ಯಯನವು ಸಮಗ್ರವಾಗಿ ನಡೆಯಬೇಕೆಂಬ ಉದ್ದೇಶದಿಂದ ಈ ಪ್ರಬಂಧಕ್ಕೆ ಕಾಲದ ಪರಿಮಿತಿಯನ್ನಾಗಲಿ, ರಾಜಕೀಯ ಮನೆತನದ ಪರಿಮಿತಿಯನ್ನಾಗಲಿ ರೂಪಿಸದೆ ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ಕನ್ನಡದ ಮೊದಲ ರಾಜಮನೆತನದಿಂದ ಬ್ರಿಟಿಷರ ಅಧಿಕಾರದೊಂದಿಗೆ ಲೀನವಾಗುವವರೆಗಿನ ಎಲ್ಲ ರಾಜಮನೆತನಗಳ ಅರಸಿಯರ ಸಾಹಿತ್ಯಿಕ ಕಾರ್ಯಗಳನ್ನು ಇಲ್ಲಿ ಗಮನಿಸಲಾಗಿದೆ.

ಕರ್ನಾಟಕದಲ್ಲಿ ಬ್ರಿಟೀಶರ ಆಳ್ವಿಕೆ ಆರಂಭವಾದ ಅನಂತರವೂ ಅವರ ಅಧೀನದಲ್ಲಿ ಮೈಸೂರು ಸಂಸ್ಥಾನವನ್ನೂ ಒಳಗೊಂಡಂತೆ, ಸುಗುಟೂರು, ಸುರಪುರ, ಹರಪ್ಪನಹಳ್ಳಿ ಮೊದಲಾದ ಪಾಳೆಯಗಾರ ಮನೆತನದವರು ಆಡಳಿತವನ್ನು ನಡೆಸುತ್ತಿದ್ದರು. ಈ ಸಂದರ್ಭದಲ್ಲಿ ಮೈಸೂರಿನ ವಾಣೀವಿಲಾಸ ಸನ್ನಿಧಾನದ ಕೆಂಪನಂಜಮ್ಮಣ್ಣಿ, ಹರಪ್ಪನಹಳ್ಳಿ ಪಾಳೆಯಗಾರರ ಮನೆತನದ ನೀಲಮ್ಮ, ಸುಗುಟೂರು ಮನೆತನದ ಗೌರಮ್ಮ, ಸುರಪುರದ ಈಶ್ವರಮ್ಮ ಮೊದಲಾದವರು ರಾಜ್ಯಾಡಳಿತದಲ್ಲಿ ಸಕ್ರಿಯವಾಗಿ ಪಾಲುಗೊಂಡವರಾಗಿದ್ದರು. ಆದುದರಿಂದ ಈ ಅವಧಿಯವರೆಗೂ ಅಧ್ಯಯನದ ವ್ಯಾಪ್ತಿಯನ್ನು ವಿಸ್ತರಿಸಲಾಗಿದೆ.

ಇಲ್ಲಿ ಕರ್ನಾಟಕದ ಅರಸಿಯರು ಎಂಬ ಪದವನ್ನು ವ್ಯಾಪಕವಾದ ಅರ್ಥದಲ್ಲಿ ಬಳಸಿಕೊಳ್ಳಲಾಗಿದೆ. ರಾಜನ ಪಟ್ಟದರಸಿ, ಪಿರಿಯರಸಿ, ಕಿರಿಯರಸಿ, ರಾಜಕುಮಾರಿ, ರಾಜಮಾತೆ ಹೀಗೆ ಅಂತಃಪುರದ ಮಹಿಳೆಯರೆಲ್ಲರ ಸಾಹಿತ್ಯಿಕ ಕೊಡುಗೆಗಳನ್ನು ಇಲ್ಲಿ ಗಮನಿಸಲಾಗಿದೆ. ಜೊತೆಗೆ ಚಕ್ರವರ್ತಿ, ಸಾಮಂತ ಅರಸು, ಮಾಂಡಳೀಕರು, ಪಾಳೆಯಗಾರರು, ಮನ್ನೆಯರಸರು ಈ ಎಲ್ಲ ಮನೆತನದ ಮಹಿಳೆಯರೂ ಅಧ್ಯಯನದ ವ್ಯಾಪ್ತಿಗೆ ಬರುತ್ತಾರೆ. ಅಲ್ಲದೆ, ವಿಶೇಷ ಕಾರ್ಯಗಳನ್ನು ಕೈಗೊಂಡು, ವಿಶಿಷ್ಟ ಕೊಡುಗೆ ನೀಡಿದ ಗೌಡತಿ, ನಾಗತಿಯರ ಸಾಧನೆಗಳನ್ನೂ ಇಲ್ಲಿನ ವ್ಯಾಪ್ತಿಯೊಳಗೆ ತೆಗೆದುಕೊಳ್ಳಲಾಗಿದೆ.

ಕನ್ನಡ ನಾಡಿನಲ್ಲಿ ವಿಭಿನ್ನ ಕಾಲಘಟ್ಟದಲ್ಲಿ, ವಿಭಿನ್ನ ಮನೆತನಕ್ಕೆ ಸೇರಿದ ನೂರಾರು ರಾಣಿಯರು ಆಳ್ವಿಕೆ ನಡೆಸಿದ್ದಾರೆ. ಅನೇಕ ಕವಿಗಳಿಗೆ ಆಶ್ರಯ ನೀಡಿ, ಉತ್ತಮ ಕಾವ್ಯಗಳ ರಚನೆಗೆ ಕಾರಣರಾದ ರಾಣಿಯರಿದ್ದಾರೆ. ಸುಮಾರು ಅರಸಿಯರು ಸ್ವತಃ ಸಾಹಿತ್ಯ ರಚನೆಗೆ ತೊಡಗಿದ್ದಾರೆ. ಇವರಲ್ಲಿ ಕೆಲವರು ಸಂಸ್ಕೃತ ಕಾವ್ಯಗಳನ್ನು ರಚಿಸಿದ್ದರೆ, ಕೆಲವರು ಕನ್ನಡದಲ್ಲಿ ಧಾರ್ಮಿಕ ಗ್ರಂಥಗಳನ್ನು ರಚಿಸಿದ್ದಾರೆ. ನಾಟಕ, ಚಂಪೂಕಾವ್ಯ, ಸಾಂಗತ್ಯ ಮೊದಲಾದ ಪ್ರಕಾರಗಳಲ್ಲಿ ರಚಿತವಾಗಿರುವ ರಾಣಿಯರು ರಚಿಸಿದ ಕಾವ್ಯಗಳಲ್ಲಿ ಕೆಲವು ಐತಿಹಾಸಿಕ ಮಹತ್ವವನ್ನು ಹೊಂದಿದ್ದರೆ, ಕೆಲವು

ಕಾವ್ಯಗಳು ಧಾರ್ಮಿಕ ಮಹತ್ವಗಳನ್ನು ಪಡೆದಿವೆ. ಈ ಪ್ರಬಂಧದಲ್ಲಿ ಕನ್ನಡನಾಡಿನ ರಾಣಿಯರು ರಚಿಸಿರುವ, ರಚನೆಗೆ ಪ್ರೋತ್ಸಾಹ ನೀಡಿ ಬರೆಯಿಸಿರುವ ಕನ್ನಡ ಸಾಹಿತ್ಯದೊಂದಿಗೆ ಸಂಸ್ಕೃತಕಾವ್ಯಗಳನ್ನೂ ಗಮನಿಸಲಾಗಿದೆ. ಜೊತೆಗೆ ಶಿಷ್ಟ, ಜನಪದ, ಶಾಸನ ಸಾಹಿತ್ಯಗಳಲ್ಲಿ ಕಂಡುಬರುವ ಅರಸಿಯರ ಕುರಿತಾದ ಮಾಹಿತಿಗಳನ್ನು ಗಮನಿಸಲಾಗಿದೆ.

**ಶೀರ್ಷಿಕೆ**: 'ಆಧುನಿಕ ಪೂರ್ವ ಸಾಹಿತ್ಯಕ್ಕೆ ಕರ್ನಾಟಕದ ಅರಸಿಯರ ಕೊಡುಗೆ' ಎಂಬ ಈ ಶೀರ್ಷಿಕೆಯಲ್ಲಿ ಆಧುನಿಕ ಪೂರ್ವ ಎಂಬುದು ಕಾಲಘಟ್ಟವನ್ನು ಸೂಚಿಸುತ್ತದೆ. ಈ ಅಧ್ಯಯನದಲ್ಲಿ ಸಮಗ್ರತೆಯ ದೃಷ್ಟಿಯಿಂದ, ಇಂತಿಷ್ಟೇ ರಾಜಮನೆತನಗಳು ಎಂದಾಗಲಿ, ಇಂತಹುದೇ ಕಾಲಘಟ್ಟದ ಅರಸಿಯರೆಂದಾಗಲೀ ನಿರ್ಬಂಧ ನಿಯಮಿಸಿಕೊಂಡಿಲ್ಲ. ಅಂತೆಯೇ ಸಾಹಿತ್ಯದ ವಿಷಯದಲ್ಲಿಯೂ ಕೂಡ ಕನ್ನಡ, ಸಂಸ್ಕೃತ ಕಾವ್ಯಗಳನ್ನು ಬಳಸಿಕೊಂಡಿರುವಂತೆ, ಕನ್ನಡ ಸಾಹಿತ್ಯದಲ್ಲಿ ಹಳಗನ್ನಡ ಹಾಗೂ ನಡುಗನ್ನಡದ ಸಾಹಿತ್ಯವನ್ನು ಗಮನಿಸಲಾಗಿದೆ. ಹೊಸಗನ್ನಡದ ಸಾಹಿತ್ಯ ಈ ವ್ಯಾಪ್ತಿಗೆ ಬರುವುದಿಲ್ಲವಾದ್ದರಿಂದ, ಆಧುನಿಕ ಸಾಹಿತ್ಯದ ಆರಂಭದವರೆಗೂ ಎನ್ನುವ ಉತ್ತರದ ಗಡಿಯನ್ನು ರೂಪಿಸಿಕೊಳ್ಳಲಾಗಿದೆ. ಶೀರ್ಷಿಕೆಯಲ್ಲಿ ಹಳಗನ್ನಡ, ನಡುಗನ್ನಡ ಹಾಗು ಸಂಸ್ಕೃತ ಸಾಹಿತ್ಯ – ಎಂದು ಪ್ರತ್ಯೇಕವಾಗಿ ಹೆಸರಿಸದೆ, ಆಧುನಿಕ ಪೂರ್ವ ಎಂಬ ಪದದಿಂದ ಸೂಚಿಸಲಾಗಿದೆ. ಇಲ್ಲಿ ಪ್ರಾಚೀನ ಕಾಲದಿಂದ ಆಧುನಿಕಕಾಲ ಆರಂಭವಾಗುವವರೆಗಿನ ಕಾಲಮಾನವನ್ನು ಪರಿಗಣಿಸಲಾಗಿದೆ.

ಕನ್ನಡ ಸಾಹಿತ್ಯದಲ್ಲಿ ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದ ಅನಂತರ ಆಧುನಿಕಸಾಹಿತ್ಯವನ್ನು ಗುರುತಿಸಲಾಗುತ್ತದೆ. ಕನ್ನಡದಲ್ಲಿ ಅಚ್ಚಿನಯುಗ ಪ್ರಾರಂಭವಾದ ನಂತರದ ಕಾಲವನ್ನು ಆಧುನಿಕ ಕಾಲ ಎಂದು ಗುರುತಿಸುವ ಹಿನ್ನೆಲೆಯಲ್ಲಿ, ಅದಕ್ಕೂ ಪೂರ್ವದ ಕಾಲವನ್ನು ಆಧುನಿಕಪೂರ್ವಕಾಲ ಎನ್ನಬಹುದು. ಕವಿಯ ಕಾಲವನ್ನು ಮಾನದಂಡವನ್ನಾಗಿಸಿಕೊಂಡ, ಕನ್ನಡ ಸಾಹಿತ್ಯ ಚರಿತ್ರೆಯಲ್ಲಿನ ವಿಭಜನಾ ಕ್ರಮದ ಪ್ರಕಾರ ಹೇಳುವುದಾದಲ್ಲಿ ಮುದ್ದಣನ ಕಾಲದ ನಂತರವೇ ಆಧುನಿಕ ಸಾಹಿತ್ಯವನ್ನು ಗುರುತಿಸಲಾಗುತ್ತದೆ. ಈ ಮಾನದಂಡಗಳು ವಿಭಿನ್ನ ಸಾಹಿತ್ಯಚರಿತ್ರೆಗಳಲ್ಲಿ ವಿಭಿನ್ನವಾಗಿ ಬಳಸಿಕೊಂಡಿರುವರಾದರೂ, ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧಕ್ಕೂ ಹಿಂದಿನ ಕಾಲಘಟ್ಟವನ್ನು 'ಆಧುನಿಕ ಪೂರ್ವ' ಎಂದು ಗುರುತಿಸಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧ ಆರಂಭವಾಗುವವರೆಗಿನ ಕಾಲವನ್ನು ಉತ್ತರದ ಗಡಿಯಾಗಿರಿಸಿಕೊಂಡಿರುವುದರಿಂದ, 'ಆಧುನಿಕಪೂರ್ವ ಸಾಹಿತ್ಯಕ್ಕೆ ಕರ್ನಾಟಕದ ಅರಸಿಯರ ಕೊಡುಗೆ' ಎಂಬ ಶೀರ್ಷಿಕೆಯನ್ನು ನೀಡಲಾಗಿದೆ.

**ಆಕರಗಳು ಮತ್ತು ಸಮಸ್ಯೆ:** ಈ ಹಿಂದೆಯೇ ತಿಳಿಸಿರುವಂತೆ ಈ ಅಧ್ಯಯನದಲ್ಲಿ ಕಾವ್ಯಗಳು ಹಾಗೂ ಶಾಸನಗಳು ಪ್ರಮುಖ ಆಕರವಾಗಿವೆ. ಇದಲ್ಲದೆ ವಿದೇಶಿ ಪ್ರವಾಸಿಗರ ಬರಹಗಳು, ಕೈಫಿಯತ್ತು ಮೊದಲಾದವುಗಳನ್ನು ಪೂರಕ ಮಾಹಿತಿಗಾಗಿ ಬಳಸಿಕೊಳ್ಳಲಾಗಿದೆ. ಆದರೆ ಪ್ರಸ್ತುತ ಅಧ್ಯಯನಕ್ಕೆ ಅಗತ್ಯವಿರುವ ಕೆಲವು ಆಕರಗಳನ್ನು ಕಲೆಹಾಕುವುದರಲ್ಲಿಯೇ ಸಮಸ್ಯೆಗಳಿವೆ. ಕೆಲವು ಕಾವ್ಯಗಳು ಮುದ್ರಣ ಕಾಣದೆ, ತಾಳೆಗರಿಯಲ್ಲಿಯೇ ಉಳಿದಿವೆ. ಇಂತಹ ತಾಡಪತ್ರಗಳು ಪ್ರಯತ್ನಿಸಿದರೂ ನೋಡಲು ಕೂಡ ದೊರಕದೆ ಇರುವುದು ಸಮಸ್ಯೆಯಾಗಿದೆ. ಇವುಗಳಲ್ಲಿ ಬಂಗ ಅರಸು ಮನೆತನಕ್ಕೆ ಸೇರಿದ ಅರಸಿ ಚಂದ್ರಮತಿ ಪೋಷಿತ ಕವಿ ಧರಣೀಂದ್ರ ರಚಿಸಿರುವ ಕೆಲವು ಕೃತಿಗಳು, ಚೌಟ ಅರಸಿ ಚೆನ್ನಮ್ಮಳ ಪೋಷಿತ ಕವಿ ಸುರಾಲ ರಚಿಸಿರುವ ಕೃತಿ, ಅಬ್ಬಕ್ಕಳ ಉಲ್ಲೇಖವಿರುವ ರತ್ನಶೇಖರ ಚರಿತ್ರೆ, ಮೊದಲಾದ ಕೃತಿಗಳ ಹಸ್ತಪ್ರತಿಗಳು ಇಂದಿಗೆ ಅಲಭ್ಯವಾಗಿವೆ. ಇದರಂತೆಯೇ ಸುರಪುರದ ಅರಸಿ ರಂಗಮ್ಮ ರಚಿಸಿರುವ ಕೀರ್ತನೆಗಳು ಒಂದೆಡೆ ದೊರಕುವುದಿಲ್ಲ. ಇದು ಜನಪದ ಗೀತೆಯಂತೆ ಹಾಡಲು ಬರುವವರಿಂದ ಸಂಗ್ರಹಿಸುವ ಪರಿಸ್ಥಿತಿಯಲ್ಲಿದೆ. ಅರಸಿಯ ಅಂಕಿತ ದೊರಕಿರುವುದರಿಂದ, ಅದರ ಆಧಾರದಿಂದ ಕೀರ್ತನೆಗಳನ್ನು ಸಂಗ್ರಹಿಸಬೇಕಾಗಿದೆ. ಕೆಲವು ಸ್ವರವಚನಗಳನ್ನು ರಚಿಸಿರುವ ಮಹಿಳೆಯರು ದೊರಕುತ್ತಾರೆ, ಆದರೆ ಅಂಕಿತವೊಂದನ್ನು ಹೊರತುಪಡಿಸಿ ಮತ್ಯಾವ ವೈಯಕ್ತಿಕ ವಿವರಗಳು ದೊರಕುವುದಿಲ್ಲ.

ಕರ್ನಾಟಕದಲ್ಲಿ ಇತಿಹಾಸದ ಪುನಾರಚನೆಗೆ ಬಳಸಲಾಗುವ ಪ್ರಮುಖ ಸಾಧನ ಶಾಸನಗಳು. ಕರ್ನಾಟಕದಲ್ಲಿ ದೊರಕುವ ವೈವಿಧ್ಯಮಯವಾದಷ್ಟು ಶಾಸನಗಳು ಬಹುಶಃ ಬೇರೆಲ್ಲೂ ದೊರಕುವುದಿಲ್ಲ. ಆದರೆ ಈ ಶಾಸನಗಳ ಸಂಗ್ರಹ ಕಾರ್ಯ ಇನ್ನೂ ಸಮಗ್ರವಾಗಿ ನಡೆದಿಲ್ಲ. ಶಾಸನಗಳು ಅಧಿಕೃತ ಮಾಹಿತಿಗಳನ್ನೊಳಗೊಂಡ ಆಕರವಾಗಿವೆ. ಆದರೆ ಕೆಲವು ಜಿಲ್ಲೆಯ ಶಾಸನಗಳು ಒಂದೆಡೆ ಸಂಗ್ರಹವಾಗಿರದೆ ಹಲವಾರು ಸಂಪುಟಗಳಲ್ಲಿ ಚದುರಿಹೋಗಿದೆ. ಹಳೆಮೈಸೂರು ವಿಭಾಗದ ಶಾಸನಗಳೆಲ್ಲ ಎಪಿಗ್ರಾಫಿಯ ಕರ್ನಾಟಿಕದಲ್ಲಿ ಒಂದೆಡೆ ಸಿಗುತ್ತವೆ. ಜೊತೆಗೆ ಹಂಪಿ ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟಗಳು ಕೆಲವು ಉತ್ತರ ಕರ್ನಾಟಕ ಜಿಲ್ಲೆಗಳ ಶಾಸನಗಳ ಅಧ್ಯಯನಕ್ಕೆ ಉತ್ತಮ ಆಕರವಾಗಿವೆ. ಆದರೆ ದಕ್ಷಿಣ ಕನ್ನಡ, ಉತ್ತರ ಕನ್ನಡ, ಕರಾವಳಿಯ ಶಾಸನಗಳು, ಗೋವೆಯನ್ನು ಆಳುತ್ತಿದ್ದ ಕನ್ನಡ ಅರಸರ ಶಾಸನಗಳು, ಮಹಾರಾಷ್ಟ್ರದ ಕೆಲವು ಪ್ರದೇಶಗಳ ಕನ್ನಡ ಶಾಸನಗಳು ಸಮಗ್ರವಾಗಿ ದೊರಕುವುದಿಲ್ಲ. ಕೆಲವು ಶಾಸನಗಳು ಪ್ರಕಟವಾಗಿವೆಯಾದರೂ ಒಂದೆಡೆ ದೊರಕುವುದಿಲ್ಲ. ಈ ಕೆಲವು ಶಾಸನಗಳು ಕರ್ನಾಟಕ ಇನ್ಸ್ಕ್ರಿಪ್ಷನ್ಸ್ ಸಂಪುಟಗಳು, ಎಪಿಗ್ರಾಫಿಯಾ ಇಂಡಿಕಾ ಸಂಪುಟಗಳು, ಜರ್ನಲ್ಸ್ ಆಫ್ ಬಾಂಬೆ ರಾಯಲ್ ಏಷ್ಯಾಟಿಕ್ ಸೊಸೈಟಿ ಸಂಪುಟಗಳು, ಸೌತ್‌ಇಂಡಿಯನ್ ಇನ್ಸ್ಕ್ರಿಪ್ಷನ್ಸ್ ಸಂಪುಟಗಳು ಮೊದಲಾದೆಡೆಗಳಲ್ಲಿ ಬೆರೆತು ಹೋಗಿದೆ. ಇಲ್ಲಿನ ಕೆಲವು ಶಾಸನ ಸಂಪುಟಗಳಲ್ಲಿ ಕನ್ನಡ ಶಾಸನಗಳು  ಲಾಟಿನ್ (ಇಂಗ್ಲಿಶ್) ಲಿಪಿಯಲ್ಲಿ ಪ್ರಕಟವಾಗಿರುವುದನ್ನು ಕನ್ನಡಕ್ಕೆ ಲಿಪ್ಯಂತರ ಗೊಳಿಸಿಕೊಂಡು ಓದಬೇಕಾಗಿದೆ.

ಇತಿಹಾಸದ ಕೆಲವು ದಾಖಲಾತಿಗಳು ಕೂಡ ಗೊಂದಲ ಸೃಷ್ಟಿಸಿ ಅಧ್ಯಯನಕ್ಕೆ ತೊಡಕು ಉಂಟುಮಾಡುತ್ತವೆ. ಉದಾಹರಣೆಗೆ, ಕರ್ನಾಟಕದ ಕರಾವಳಿ ತೀರದ ರಾಣಿಯರ ಕುರಿತಾಗಿ ನಡೆದಿರುವ ಅಧ್ಯಯನವು ಸಮರ್ಪಕವಾಗಿಲ್ಲ ಎಂದೇ ಹೇಳಬಹುದು. ನಡೆದಿರುವ ಕೆಲವು ಅಧ್ಯಯನಗಳು ಗೊಂದಲಗಳನ್ನು ಬಗೆಹರಿಸಲು ಸಹಕಾರಿಯಾಗುವುದಿಲ್ಲ. ಚೌಟ ಅರಸಿ ಅಬ್ಬಕ್ಕ ಒಬ್ಬಳೇ, ಇಬ್ಬರೆ ಎನ್ನುವುದು ಇನ್ನೂ ಅಸ್ಪಷ್ಟವಾಗಿರುವಾಗ ಕೆಲವರು ಈ ಮನೆತನದಲ್ಲಿ ನಾಲ್ಕು ಜನ ಅಬ್ಬಕ್ಕರನ್ನು ಗುರುತಿಸಿದ್ದಾರೆ. ಅಂತೆಯೇ ಸಾಳ್ವ ಮನೆತನದ ರಾಣಿ ಭೈರಾದೇವಿಯ ವಿಚಾರದಲ್ಲಿಯೂ ಗೊಂದಲಗಳಿರುವುದನ್ನು ಕಾಣಬಹುದು. ಇಬ್ಬರಿಂದ ಏಳುಮಂದಿಯವರೆಗೂ ಈ ಹೆಸರಿನ ಅರಸಿಯರನ್ನು ಗುರುತಿಸಿದ್ದಾರೆ. ಇಂತಹ ಹಲವಾರು ಕೊರತೆಗಳು ಅಧ್ಯಯನದ ವೇಳೆಯಲ್ಲಿ ಸಮಸ್ಯೆಗಳನ್ನು ತಂದೊಡ್ಡಿವೆ.

## ೧.೪ ಈ ವಿಷಯದಲ್ಲಿ ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ

ಕನ್ನಡದ ಮಹಿಳೆಯರ ಸಾಹಿತ್ಯಿಕ ಕೊಡುಗೆಯನ್ನು ಗಮನಿಸುವ ಕೆಲವು ಅಧ್ಯಯನಗಳು ನಡೆದು ಬಂದಿವೆಯಾದರೂ, ಅವುಗಳಲ್ಲಿ ಬಹುಪಾಲು ಆಧುನಿಕ ಕಾಲಘಟ್ಟಕ್ಕಷ್ಟೇ ಸೀಮಿತವಾಗಿವೆ. ಪ್ರಾಚೀನ ಕಾಲದ ಮಹಿಳೆಯರನ್ನು ಗುರುತಿಸುವ ಪ್ರಬಂಧಗಳು ಅತ್ಯಲ್ಪವೆನ್ನಬಹುದು. ಅವುಗಳಲ್ಲಿ ಚೆನ್ನಕ್ಕ ಎಲಿಗಾರ ಅವರ **'ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ'**, ಎಂ.ಬಿ.ಪದ್ಮ ಅವರ 'The Position of women in Medieval Karnataka', ಎನ್. ಸರಸ್ವತಿ ಅವರ The Position of women during Vijayanagar Period (೧೩೩೬–೧೬೪೬), ರತ್ನಮ್ಮ ಅವರ **'ಕನ್ನಡ ನಾಡಿನ ವೀರ ಜೈನ ಮಹಿಳೆಯರು'**, ಡಿ.ಕೆ.ವಾಣಿಶ್ರೀ ಅವರ **'ಕರ್ನಾಟಕದ ಚರಿತ್ರೆ ಮತ್ತು ಸ್ತ್ರೀವಾದಿ ನೆಲೆಗಳು'**, ವಿಜಯಕುಮಾರಿ ಗುರುಲಿಂಗಪ್ಪ ಅವರ **'ಕನ್ನಡದಲ್ಲಿ ಮಹಿಳಾ ಕಾವ್ಯ ಪರಂಪರೆ – ಒಂದು ಅಧ್ಯಯನ'**, ವಿದ್ಯಾವತಿ ಪಾಟೀಲ ಅವರ **'ಸ್ತ್ರೀ ವಚನಕಾರ್ತಿಯರ ವಚನಗಳಲ್ಲಿ ಸ್ತ್ರೀ ಸಂವೇದನೆ'**, ವೀಣಾ ಆಚಾರ್ಯ ಅವರ **'ಅಕ್ಕಮಹಾದೇವಿ ವಚನಗಳಲ್ಲಿ ಸ್ತ್ರೀ ಸಂವೇದನೆ'**, ವಿನಯ ಜಿ.ನಾಯಕ ಅವರ **'ಕನ್ನಡದಲ್ಲಿ ಮಹಿಳಾ ಸಾಹಿತ್ಯದ ವಿಕಾಸದ ಘಟ್ಟಗಳು'**, ಸರೋಜಿನಿ ಮಹಿಷಿ ಅವರ **'ಕರ್ನಾಟಕದ ಕವಯಿತ್ರಿಯರು'** ಗಮನಾರ್ಹ ಕೃತಿಗಳಾಗಿವೆ.

ಪ್ರಸ್ತುತ ಪ್ರಬಂಧವು ರಾಜವಂಶದ ಪುರುಷರ ಸಾಧನೆಯ ಅಡಿಯಲ್ಲಿ ಮರೆಯಾಗಿರುವ ಅರಸುಕುಲದ ಮಹಿಳೆಯರ ಸಾಧನೆಯನ್ನು ಗುರುತಿಸುವೆಡೆ ಗಮನಹರಿಸುವ ನಿಟ್ಟಿನಲ್ಲಿ ನಡೆಯಲಿದ್ದು, ಮೇಲಿನ ಈ ಎಲ್ಲ ವಿಚಾರಗಳಿಗಿಂತ ಭಿನ್ನವಾಗಿದೆ.

## ೧.೫ ಪ್ರಸ್ತುತ ಅಧ್ಯಯನದ ಮಹತ್ವ

ಪ್ರಸ್ತುತ ಸಂಶೋಧನೆಯು ಮಹಿಳಾ ಅಧ್ಯಯನಕ್ಕೆ ವಿಶಿಷ್ಟ ಕೊಡುಗೆಯಾಗಬಲ್ಲದು ಎಂದು ಭಾವಿಸಲಾಗಿದೆ. ಇತಿಹಾಸ, ಸಾಹಿತ್ಯ, ಜಾನಪದ ಈ ಎಲ್ಲ ಶಿಸ್ತುಗಳ ಅಧ್ಯಯನದ ಸ್ವರೂಪವನ್ನು ಒಳಗೊಂಡು, ಮಹಿಳೆಯರ ಅದರಲ್ಲೂ, ಅರಸಿಯರ ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಕೊಡುಗೆಗಳ ಸ್ವರೂಪ ಮತ್ತು ಮಹತ್ವವನ್ನು ಈ ಅಧ್ಯಯನದಿಂದ ರೂಪಿಸಬಹುದಾಗಿದೆ. ಇದು ಮುಂದಿನ ದಿನಗಳಲ್ಲಿ ಸಾಹಿತ್ಯ, ಇತಿಹಾಸ ಮತ್ತು ಮಹಿಳಾ ಅಧ್ಯಯನ ಈ ಎಲ್ಲ ಕ್ಷೇತ್ರಗಳ ಅಭ್ಯಾಸಿಗಳಿಗೆ ಹಾಗೂ ಆಸಕ್ತರಿಗೆ ಮುಖ್ಯ ಆಕರ ಗ್ರಂಥವಾಗಬಲ್ಲದು.

ಶಿಷ್ಟಕಾವ್ಯ, ಜನಪದ ಕಾವ್ಯ, ಶಾಸನಸಾಹಿತ್ಯ ಮೊದಲಾದೆಡೆಗಳಲ್ಲಿ ಚದುರಿಹೋಗಿರುವ ವಿಚಾರಗಳನ್ನು ಒಂದೆಡೆ ಸೇರಿಸಿ ಲಭ್ಯವಿರುವ ಇತಿಹಾಸದ ವಿಚಾರಗಳಿಗೆ ಮತ್ತಷ್ಟು ಪುಷ್ಟಿಯನ್ನೊದಗಿಸುವ, ಕಣ್ಮರೆಯಾಗಿರುವ ವಿಚಾರಗಳನ್ನು ಸಾಹಿತ್ಯಗಳಲ್ಲಿ ಹುಡುಕುವ ಪ್ರಯತ್ನವನ್ನು ಇಲ್ಲಿ ನಡೆಸಲಾಗಿದೆ. ಜೊತೆಗೆ ಇತಿಹಾಸವು ಕೇವಲ ಪುರುಷರಿಂದ ಮಾತ್ರ ನಿರ್ಮಿತವಾದುದಲ್ಲ, ಇದರಲ್ಲಿ ಮಹಿಳೆಯರ ಪಾಲೂ ಇದೆ ಎನ್ನುವ ವಿಚಾರವನ್ನು ತಿಳಿಸುವ ಕಾವ್ಯದ ಅಂಶಗಳನ್ನು ಇಲ್ಲಿ ಗುರುತಿಸಿ ತೋರಿಸಲಾಗಿದೆ.

ಇತಿಹಾಸ ಎಂಬುದು ನಡೆದ ಘಟನೆಗಳನ್ನು ತಿಳಿಸುವ ವಿಚಾರವಾಗಿದೆ. ಪುರುಷಪ್ರಧಾನ ಸಮಾಜದಲ್ಲಿ ಇತಿಹಾಸವೆಂದರೆ ಕೇವಲ ಪುರುಷರ ವಿಚಾರವನ್ನೇ ಶೋಧಿಸಿ, ಕಟ್ಟುವುದು ಸ್ವಾಭಾವಿಕವಾಗಿದೆ. ಇತಿಹಾಸ ಎಂಬುದರ ಆಂಗ್ಲ ಸಂವಾದಿಪದ history ಎಂಬುದು his story ಎನ್ನುವ ಮಟ್ಟಿಗೆ ಕೇವಲ ಪುರುಷರ ವಿಚಾರಗಳನ್ನು ಒಳಗೊಂಡಿದೆ. ಇದರಲ್ಲಿ her story ಕೂಡ ಇದೆ ಎಂಬುದನ್ನು ಗುರುತಿಸಿ ತೋರಿಸುವ ಪ್ರಯತ್ನವನ್ನು ಈ ಪ್ರಬಂಧದಲ್ಲಿ ನಡೆಸಲಾಗಿದೆ. ರಾಜ್ಯವನ್ನು ರಕ್ಷಿಸುವ, ವಿಸ್ತರಿಸುವ, ಗದ್ದುಗೆಗಾಗಿ ಹೋರಾಡುವ ಹಕ್ಕು, ಜವಾಬ್ದಾರಿ ಕೇವಲ ಪುರುಷರದಾಗಿರದೆ ಮಹಿಳೆಯರೂ ಈ ಕಾರ್ಯದಲ್ಲಿ ಹೇಗೆ ಪ್ರಯತ್ನಿಸಿದ್ದರು, ಯಶಸ್ವಿಯಾಗಿದ್ದರು ಎನ್ನುವ ಐತಿಹಾಸಿಕ ಸಂಗತಿಗಳ ಮೇಲೆ ಆಧಾರಪೂರ್ವಕವಾಗಿ ಬೆಳಕು ಚೆಲ್ಲುವ, ರಾಜವಂಶದ ಮಹಿಳೆಯರು ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ, ಸಮಾಜಮುಖಿಯಾಗಿ ಕೊಟ್ಟ ಕೊಡುಗೆಗಳನ್ನು ಗಮನಿಸಿ, ಸಾಹಿತ್ಯ ಕ್ಷೇತ್ರಕ್ಕೆ ಅರಸಿಯರು ನೀಡಿದ ಕೊಡುಗೆಯನ್ನು ಎತ್ತಿಹಿಡಿಯುವ ಮಹತ್ವದ ದಾಖಲೆಯನ್ನು ಈ ಪ್ರಬಂಧದಲ್ಲಿ ಮಂಡಿಸಲಾಗಿದೆ.

ನಮ್ಮ ಇತಿಹಾಸವನ್ನು ರಚಿಸಲು ಪ್ರೇರಕರೂ ಸಹಾಯಕರೂ ಆದ ಪಾಶ್ಚಾತ್ಯರು 'ಭಾರತೀಯರಿಗೆ ಐತಿಹಾಸಿಕ ಪ್ರಜ್ಞೆ ಕಡಿಮೆ' ಎಂದು ಕಟುವಾಗಿ ಟೀಕಿಸಿದ್ದಾರೆ. ಆದರೆ ಶಾಸನ, ಐತಿಹಾಸಿಕ ಕಾವ್ಯಗಳು, ಸನ್ನದು, ಶ್ರೀಮುಖ, ಕೈಫಿಯತ್ತು, ಬಖೈರು ಮೊದಲಾದ ಬರಹಗಳು ನಮ್ಮ ಐತಿಹಾಸಿಕ ದಾಖಲುಗಳಾಗಿವೆ. ಸುಸಂಸ್ಕೃತ ಇತಿಹಾಸವನ್ನು ನಿರ್ಮಿಸಿದ ಭಾರತೀಯರು ತಮ್ಮ ಹೆಗ್ಗಳಿಕೆಯ ಹಲವಾರು ವಿಚಾರಗಳನ್ನು ದಾಖಲಿಸಿದ್ದಾರೆ. ಆದರೆ ಇವುಗಳನ್ನು ಸಮಗ್ರವಾಗಿ ಗುರುತಿಸುವ ಕಾರ್ಯ ಸಮರ್ಪಕವಾಗಿ ನಡೆದಿಲ್ಲ. ಹಲವಾರು ವಿಚಾರಗಳು ಉದಾಸೀನತೆಯ ಕಾರಣದಿಂದ ಬೆಳಕು ಕಂಡಿಲ್ಲ. ಇತಿಹಾಸಕಾರರಿಗೆ ಯಾವುದೇ ರೀತಿಯ ಪೂರ್ವಾಗ್ರಹವಾಗಲೀ, ಪಕ್ಷಪಾತಗುಣವಾಗಲೀ ಸಲ್ಲದು. ಇಂತಹ ಕಾರಣಗಳಿಂದಾಗಿ ಜನಸಾಮಾನ್ಯರಿಂದ ಮರೆಯಾಗಿರುವ ಕರ್ನಾಟಕದ ಕೆಲವು ಕವಯತ್ರಿಯರ ಹಾಗೂ ಉತ್ತಮ ಕೊಡುಗೆಯನ್ನು ನೀಡಿದ ಕರ್ನಾಟಕದ ಅರಸಿಯರ ಕುರಿತಾದ ವಿಚಾರವನ್ನು ಇಲ್ಲಿ ಎತ್ತಿ ಹಿಡಿಯಲಾಗಿದೆ.

# ಅಧ್ಯಾಯ – ೨

## ಕನ್ನಡ ಸಾಹಿತ್ಯ ಚರಿತ್ರೆಗಳಲ್ಲಿ ಲೇಖಕಿಯರ ಪ್ರತಿನಿಧೀಕರಣ

ಇಪ್ಪತ್ತನೆಯ ಶತಮಾನದಿಂದ ಗುರುತಿಸಲಾಗುವ ಆಧುನಿಕಯುಗದ ಕಾಲಘಟ್ಟದಲ್ಲಿ ನಾಡಿನಾದ್ಯಂತ ಎಲ್ಲ ಕ್ಷೇತ್ರಗಳಲ್ಲಿಯೂ ಕ್ರಾಂತಿ–ಬದಲಾವಣೆಗಳು ಕಂಡುಬಂದು, ಹೊಸತನದ ತರಂಗವೆದ್ದಿತು. ಅಂತೆಯೇ ಸಾಹಿತ್ಯ ಕ್ಷೇತ್ರದಲ್ಲಿಯೂ ಬದಲಾವಣೆಗಳು ಕಂಡುಬಂದು, ಇದನ್ನು ಹೊಸಗನ್ನಡದ ಕಾಲಘಟ್ಟವೆಂದು ಗುರುತಿಸಲಾಯಿತು. ಈ ಆಧುನಿಕ ಕನ್ನಡ ಸಾಹಿತ್ಯದ ಆರಂಭ ಕಾಲಘಟ್ಟದಲ್ಲಿ, ತಲೆದೋರಿದ ಭಿನ್ನತೆ ನವೀನತೆಗಳನ್ನು ಮೈಗೂಡಿಸಿಕೊಳ್ಳುವುದರೊಂದಿಗೆ, ಪ್ರಾಚೀನ ಸಾಹಿತ್ಯದೆಡೆಗೂ ಗಮನಹರಿಸಲಾಯಿತು. ಈ ಕಾಲದಲ್ಲಿ ಕನ್ನಡ ಸಾಹಿತ್ಯ ನಡೆದು ಬಂದ ಹಾದಿ, ಕರ್ನಾಟಕದಲ್ಲಿ ಸಾಹಿತ್ಯ ಬೆಳೆದುಬಂದ ಪರಿಯನ್ನು ಗುರುತಿಸುವ ಕೆಲಸವೂ ವಿಪುಲವಾಗಿ ನಡೆಯಿತು. ಈ ಕಾರ್ಯವು ಕನ್ನಡಸಾಹಿತ್ಯದ ಪ್ರಾಚೀನತೆಯನ್ನೂ, ವೈಶಿಷ್ಟ್ಯವನ್ನೂ ಎತ್ತಿಹಿಡಿಯುವುದರೊಂದಿಗೆ ಬೆಳಕಿಗೆ ಬಾರದ ಕವಿ, ಕೃತಿ ವಿಚಾರಗಳನ್ನು ಹುಡುಕಿ ಚರಿತ್ರೆ ಕಟ್ಟುವ ಮಹದುದ್ದೇಶದಿಂದ ಕೂಡಿತ್ತು. ಸ್ವಾತಂತ್ರ್ಯಪೂರ್ವದಲ್ಲಿಯೇ ಆರಂಭವಾದ ಚರಿತ್ರೆಯನ್ನು ಪುನಾರಚಿಸುವ ಕಾರ್ಯ ಇತ್ತೀಚಿನವರೆಗೂ ವಿಭಿನ್ನ ದೃಷ್ಟಿಕೋನಗಳಿಂದ ನಡೆಯುತ್ತಲೇ ಬಂದಿದೆ. ಪ್ರಾಚೀನ ಕವಿಗಳು ನಡೆಸಿದ ಕೆಲಸವನ್ನು ಉಲ್ಲೇಖಿಸುವ, ಗುರುತಿಸುವ, ವಿಮರ್ಶಿಸುವ, ವಿಶ್ಲೇಷಿಸಿ ವಿವೇಚಿಸುವ ಈ ಸರಣಿಯಲ್ಲಿ ಕವಿಯ ಕಾಲ, ಮತ, ದೇಶ, ಆಶ್ರಿತದೊರೆ, ಕೃತಿಗಳು, ಕೃತಿಗಳಲ್ಲಿನ ಕವಿಯ ಆಶಯ, ಪ್ರೇರಣೆ, ಪ್ರಭಾವ, ಅಲಂಕಾರ, ಛಂದಸ್ಸು, ವರ್ಣನೆ, ಮೊದಲಾದ ವಿಚಾರಗಳು ವಿಪುಲವಾದ ಚರ್ಚೆಗಳಿಗೆ ಒಳಗಾಗಿ ಇಂದಿಗೂ ಹೊಸ ಹೊಸ ವಿಚಾರಗಳು ಬೆಳಕಿಗೆ ಬರುತ್ತಲೇ ಇವೆ.

ಕನ್ನಡ ಆಧುನಿಕಪೂರ್ವ ಯುಗದ ಕವಿಗಳು ವೈಯಕ್ತಿಕ ವಿಚಾರಗಳನ್ನು ತಮ್ಮ ಕಾವ್ಯದಲ್ಲಿ ಹೇಳಿಕೊಂಡಿಲ್ಲದ ಕಾರಣ, ಅನೇಕ ಕವಿಗಳ ವಿಚಾರ ಇಂದಿಗೂ ಗೊಂದಲಮಯವಾಗಿಯೇ ಉಳಿದಿದೆ. ಸಾಧಾರಣವಾಗಿ ಕವಿಗಳು ತಮ್ಮ ಕಾವ್ಯಾರಂಭದಲ್ಲಿ ಇಷ್ಟದೇವತಾ ಸ್ತುತಿಗಳೊಂದಿಗೆ ಪೂರ್ವದ ಕವಿಗಳನ್ನು ಸ್ಮರಿಸುವುದನ್ನೂ ಸಂಪ್ರದಾಯವನ್ನಾಗಿಸಿಕೊಂಡಿರುವುದನ್ನು ಕಾಣುತ್ತೇವೆ. ಇಂತಹ ಪದ್ಧತಿಯಿಂದ ಕೆಲವೊಮ್ಮೆ ಇತರ ಕವಿಗಳ ವಿಚಾರ ಅಲ್ಪಸ್ವಲ್ಪ ತಿಳಿದು ಬರುತ್ತದೆ. ಉದಾಹರಣೆಗೆ ಆಚಣ್ಣನ **ವರ್ಧಮಾನ ಪುರಾಣ**ದಿಂದ ಎರಡನೆಯ ನಾಗವರ್ಮನೂ ವರ್ಧಮಾನನ ಕುರಿತಾದ ಒಂದು ಕಾವ್ಯ ರಚಿಸಿದ್ದಾನೆಂದು ತಿಳಿದುಬಂದು ಆ ಕೃತಿಯನ್ನು ಶೋಧಿಸಲು ಮೊದಲಾಯಿತು, ಆದರೆ ಅಸಗ, ಗುಣನಂದಿ, ಗುಣವರ್ಮ ಮೊದಲಾದ ಅನೇಕ ಕವಿಗಳ ಹೆಸರು ಇತರ ಕವಿಗಳಿಂದ ತಿಳಿದು ಬರುತ್ತದೆಯಾದರೂ ಅವರ ಕೃತಿಗಳು ಮಾತ್ರ ಇಂದಿಗೂ ಉಪಲಬ್ಧವಾಗಿಲ್ಲ. ಕೆಲವೊಂದು ದೊರೆತಿರುವ ಕೃತಿಗಳ ಕರ್ತೃ ವಿಚಾರ ಅಸ್ಪಷ್ಟವಾಗಿಯೇ ಉಳಿದಿದೆ. ಕಂತಿಯೆಂಬ ಕವಯತ್ರಿ ಸಮಸ್ಯಾರೂಪಕವಾದ ಮುಕ್ತಕಗಳನ್ನು ರಚಿಸಿರುವಳಾದರೂ ಇವಳ ವಿಚಾರದಲ್ಲಿ ಖಚಿತವಾದ ಮಾಹಿತಿ ದೊರಕದೆ ಅನೇಕ ಗೊಂದಲಗಳುಂಟಾಗಿವೆ. ಅವಳ ವಿಚಾರ ಹೆಚ್ಚು ಚರ್ಚೆಗೆ ಗ್ರಾಸವಾಗಿಯೂ ಬಗೆಹರಿಯದ ಸಮಸ್ಯೆಯಾಗಿ ಉಳಿದಿದೆ. ಕವಿ ನಾಗಚಂದ್ರ (ಅಭಿನವಪಂಪ)ನ ಸಮಕಾಲೀನಳೆನ್ನಲಾದ ಕಂತಿಯು ಅಕ್ಕಮಹಾದೇವಿಯ ಪೂರ್ವದವಳಾದರೂ ಈಕೆಯ ಬಗ್ಗೆ ನಿಖರ ಮಾಹಿತಿ ದೊರೆಯದ ಕಾರಣ ಕನ್ನಡದ ಮೊದಲ ಕವಯತ್ರಿಯ ಪಟ್ಟದಲ್ಲಿ ಅಕ್ಕಮಹಾದೇವಿಯನ್ನೇ ಕೂರಿಸಲಾಗಿದೆ. ಅನೇಕ ಕವಿಗಳ ಹಾಗೂ ಕಾವ್ಯಗಳ ಕುರಿತಾಗಿ ದೊರಕಿರುವ ಅಪೂರ್ಣ ಮಾಹಿತಿಗಳು ಇನ್ನೂ ಹಲವಾರು ಊಹಾಪೋಹಗಳ ನಡುವೆಯೇ ನಿಂತಿವೆ. ಇಂಥ ಅನೇಕ

ಚರ್ಚೆಗಳ ನಡುವೆ, ವಿದ್ವಾಂಸರ ಬಹುಮತದ ಅಭಿಪ್ರಾಯಗಳನ್ನಾಧರಿಸಿ ಸಾಹಿತ್ಯಚರಿತ್ರೆಗಳು ರಚಿತವಾಗಿವೆ. ಹೊಸ ಹೊಸ ಸಂಶೋಧನೆಗಳಿಂದ ಸಾಬೀತಾದ ಸತ್ಯಗಳನ್ನು ಆನಂತರ ರಚಿತವಾದ ಸಾಹಿತ್ಯ ಚರಿತ್ರೆಗಳು ದಾಖಲು ಮಾಡುತ್ತಿವೆ. ಕರ್ಣಾಟಕ ಕವಿಚರಿತೆಯಲ್ಲಿ ಹೇಳಿರುವ "ರಾಷ್ಟ್ರಕೂಟ ರಾಜರಲ್ಲಿ ಒಬ್ಬನಾದ ನೃಪತುಂಗನು ಕನ್ನಡದಲ್ಲಿ ಕವಿರಾಜಮಾರ್ಗವೆಂಬ ಒಂದು ಅಲಂಕಾರ ಗ್ರಂಥವನ್ನು ಬರೆದಿದ್ದಾನೆ"[೧] ಎಂಬ ಹೇಳಿಕೆಯು ಮುಂದಿನ ಪ್ರಮುಖ ವಿದ್ವಾಂಸರ ಸಂಶೋಧನೆಗಳನ್ನಾಧರಿಸಿ ಕವಿರಾಜಮಾರ್ಗದ ಕರ್ತೃ 'ಶ್ರೀವಿಜಯ' ಎಂದು ಬದಲಾಗಿರುವುದನ್ನು ಆನಂತರದ ಸಾಹಿತ್ಯ ಚರಿತ್ರೆಗಳಲ್ಲಿ ಕಾಣುತ್ತೇವೆ. ಈ ಪ್ರಕಾರವಾಗಿ ಕಾಲಾನುಕ್ರಮದಲ್ಲಿ ಒಂದು ಘಟ್ಟದಿಂದ ಮತ್ತೊಂದು ಘಟ್ಟದಲ್ಲಿ ರಚಿತವಾದ ಸಾಹಿತ್ಯಚರಿತ್ರೆಗಳಲ್ಲಿನ ಮಾಹಿತಿ ಹೆಚ್ಚು ನಿಖರವೂ, ಖಚಿತವೂ ಆಗುತ್ತಾ ಸಾಗಿಬಂದಿದೆ. ಈ ಹಾದಿಯಲ್ಲಿ ವಿಪುಲವಾಗಿ ಚರ್ಚೆಗೆ ಒಳಗಾಗಿರುವ ವಿಚಾರಗಳಲ್ಲಿ ಲೇಖಕಿಯರ ಕೃತಿಗಳು ಹೇಗೆ ಉಲ್ಲೇಖಗೊಂಡಿವೆ? ಎಷ್ಟು ಚರ್ಚೆಗೆ ಒಳಗಾಗಿವೆ? ಇಲ್ಲಿ ಮಹಿಳಾ ಸಾಹಿತ್ಯಕ್ಕೆ ಎಷ್ಟರಮಟ್ಟಿಗೆ ನ್ಯಾಯ ಒದಗಿಸಲಾಗಿದೆ? ಎಂಬುದನ್ನು ಕುರಿತು ಚರ್ಚಿಸುವುದು ಅತ್ಯಗತ್ಯವಾಗಿದೆ. ಈ ಅಧ್ಯಾಯವು ಸಾಹಿತ್ಯ ಚರಿತ್ರೆಗಳಲ್ಲಿ ಮಹಿಳಾ ಪ್ರತಿನಿಧೀಕರಣದ ಸ್ವರೂಪವನ್ನು ವಿಶ್ಲೇಷಿಸುವ ಉದ್ದೇಶವನ್ನು ಹೊಂದಿದೆ.

ಸಾಹಿತ್ಯಚರಿತ್ರೆಯು ಕೇವಲ ಸಾಹಿತ್ಯದ ವಿಚಾರವನ್ನು ಮಾತ್ರ ತಿಳಿಸದೆ, ಸಾಹಿತಿಯ ಕುರಿತಾದ ವಿಚಾರಗಳನ್ನೂ ದಾಖಲಿಸುವ ಕೆಲಸವಾದ್ದರಿಂದ, ಕವಿಯ ಕಾಲ, ದೇಶ, ವಂಶ, ಮತ, ಗುರು, ಪೋಷಕ, ಬಿರುದುಗಳು, ಜೀವನವೃತ್ತಾಂತದ ಮಹತ್ವದ ವಿಚಾರಗಳು, ಕವಿಯಿಂದ ರಚಿತವಾದ ಗ್ರಂಥಗಳ ಸಂಕ್ಷಿಪ್ತ ವಿವರ, ಇವೇ ಮೊದಲಾದ ಕವಿಯ ಕುರಿತಾದ ಹಾಗೂ ಕೃತಿಗಳ ಮಾಹಿತಿಯನ್ನು ತಕ್ಕಮಟ್ಟಿಗೆ ಒದಗಿಸುವಂತಿರಬೇಕು. ಈ ಪ್ರಕಾರವಾಗಿ ಸಂಗ್ರಹಗೊಂಡ ಕವಿ, ಕೃತಿಗಳ ಪರಿಚಯವು ಕೇವಲ ಸಾಹಿತ್ಯ ಚರಿತ್ರೆಯಾಗಿ ಉಳಿಯದೆ, ಒಂದು ನಾಡಿನ ಸಾಂಸ್ಕೃತಿಕ, ಧಾರ್ಮಿಕ, ಸಾಮಾಜಿಕ ವಿಚಾರಗಳನ್ನು ಅಧ್ಯಯನ ಮಾಡಲು ಮೂಲಭೂತ ಆಕರವಾಗಿ ಪರಿಣಮಿಸುತ್ತದೆ. ಲೇಖಕಿಯರನ್ನು ಕುರಿತಾದ ಈ ಬಗೆಯ ಮಾಹಿತಿಗಳು ಸಮಾಜದಲ್ಲಿ ಮಹಿಳೆಯರಿಗೆ ಯಾವ ಕಾಲದಲ್ಲಿ, ಯಾವ ರಾಜರ ಆಳ್ವಿಕೆಯಲ್ಲಿ, ಹೆಚ್ಚು ಸ್ವಾತಂತ್ರ್ಯವಿತ್ತು, ಯಾವ ಕುಲ/ಧಾರ್ಮಿಕ ಪಂಗಡದಲ್ಲಿ ಸಾಹಿತ್ಯಿಕ ಚಟುವಟಿಕೆಗಳಲ್ಲಿ ಪಾಲ್ಗೊಳ್ಳಲು ಮಹಿಳೆಯರಿಗೆ ಮುಕ್ತ ಅವಕಾಶ ದೊರೆಯುತ್ತಿತ್ತು. ಕಾಲಾಂತರದಲ್ಲಿ ಈ ವಿಚಾರಗಳು ಬದಲಾದದ್ದು ಹೇಗೆ? ಮತ್ತು ಏಕೆ? ಎನ್ನುವ ವಿಚಾರಗಳನ್ನು ಸೂಕ್ಷ್ಮವಾಗಿ ಹಾಗೂ ಹೆಚ್ಚು ವಿಸ್ತೃತವಾಗಿ ಚರ್ಚಿಸಲು ಅವಕಾಶ ಮಾಡಿಕೊಡುತ್ತವೆ.

ಆಧುನಿಕಪೂರ್ವ ಕನ್ನಡ ಸಾಹಿತ್ಯದಲ್ಲಿ ಮಹಿಳೆಯರ ಹೆಸರು ಕಂಡುಬಂದಿರುವುದು ಕಡಿಮೆ. ಪ್ರತಿಭೆಗಳಿದ್ದರೂ, ಪ್ರೇರಣೆ–ಪೋಷಣೆ ಅವಕಾಶಗಳ ಕೊರತೆಯು ಸಾಧಕಿಯರಿಗೆ ಮುಖ್ಯವಾಹಿನಿಗೆ ಬರಲು ತಡೆಯುಂಟುಮಾಡುತ್ತದೆ ಎಂಬ ಅಂಶ ಇಲ್ಲಿ ಸಾಬೀತಾಗಿದೆ. ೧೨ನೆಯ ಶತಮಾನದ ವಚನಸಾಹಿತ್ಯದ ವೇಳೆಯಲ್ಲಿ ಸಾಮಾನ್ಯ ವರ್ಗದ ಮಹಿಳೆಯರು ಹೆಚ್ಚು ಪ್ರಸಿದ್ಧಿ ಪಡೆದಂತೆ ಆ ನಂತರದ ಕಾಲದಲ್ಲಿ ಅವಕಾಶ ಪಡೆಯಲಿಲ್ಲ. ವಚನ ಚಳುವಳಿಯ ಈ ಕಾಲದ ಅನಂತರ ಸಾಹಿತ್ಯ ಕ್ಷೇತ್ರದಲ್ಲಿ ಮಹಿಳೆಯರನ್ನು ಹೆಚ್ಚಾಗಿ ಕಾಣುವುದು ೧೯ನೆಯ ಶತಮಾನದಿಂದೀಚೆಗೆ. ಬಸವಣ್ಣನ ಕಾಲದ ವೀರಶೈವ ಧರ್ಮದಡಿಯಲ್ಲಿ ಸಾಮಾನ್ಯ ಮಹಿಳೆಯರಿಗೆ ಸಿಕ್ಕಿದ್ದ ಪ್ರಾಶಸ್ತ್ಯ, ಮುಕ್ತವಾತಾವರಣ ಬೇರೆ ಕಾಲದಲ್ಲಿ ಬಂದ ಇದೇ ಧರ್ಮದ ಮುಖಂಡರಿಂದ ಹೆಚ್ಚಾಗಿ ದೊರೆಯಲಿಲ್ಲ. ಬಿಜ್ಜಳನ ಆಳ್ವಿಕೆಯ ಆರಂಭ ಕಾಲದಲ್ಲಿ ಶಿವಶರಣರಿಗೆ ದೊರೆತ ಅನುಕೂಲ ಪರಿಸ್ಥಿತಿ ವಿಜಯನಗರದ ಅರಸರ ಕಾಲದಲ್ಲಿಯೂ ಶರಣರಿಗೆ, ದಾಸರಿಗೆ, ಕವಿಗಳಿಗೆ ದೊರಕಿತು. ಲಕ್ಕಣ್ಣದಂಡೇಶ ಮೊದಲಾದವರ ಕಾಲದಲ್ಲಿ ವೀರಶೈವ ಧರ್ಮದಡಿಯಲ್ಲಿ ಶಿವಶರಣರ ಕೃತಿಗಳು ದೊರಕುವಂತೆ, ಶರಣೆಯರ ಕೃತಿಗಳು ಕಂಡುಬರುವುದಿಲ್ಲ. ಸಾಹಿತ್ಯ ಚರಿತ್ರೆಯು ರಾಜಕೀಯ ಇತಿಹಾಸ, ಧಾರ್ಮಿಕ, ಸಾಮಾಜಿಕ ಸ್ಥಿತಿಗತಿಗಳು, ಕುಲ ಮತಗಳ ಹಿನ್ನೆಲೆಯಲ್ಲಿ ರಚಿತವಾದಾಗ ಇಂತಹ ವಿಚಾರಗಳು ಚರ್ಚೆಗೊಳಗಾಗುತ್ತವೆ.

ಹತ್ತೊಂಬತ್ತನೆಯ ಶತಮಾನದ ಕೆಲವು ಮಹಿಳೆಯರು ಅನಕ್ಷರಸ್ಥರಾಗಿದ್ದರೂ, ಅವರ ಮೌಖಿಕ ಸಾಹಿತ್ಯವನ್ನು ಬರೆದಿಡುವುದರಲ್ಲಿ ಮನೆಯವರ, ಇತರರ ಸಹಕಾರ ಹಾಗೂ ಪ್ರೋತ್ಸಾಹ ಕೆಲವು ಮಧ್ಯಮವರ್ಗದ ಮಹಿಳೆಯರಿಗೆ ದೊರೆತಿರುವುದು ಕಂಡುಬರುತ್ತದೆ. ಈ ಕಾಲಘಟ್ಟದಲ್ಲಿ ಮಹಿಳೆಯರಿಗೆ ದೊರೆಯುತ್ತಿದ್ದ ಆದ್ಯತೆ, ಸ್ವಾತಂತ್ರ್ಯ ಗಣನೀಯವಾಗಿ ಹೆಚ್ಚುತ್ತಾ ಬಂದದ್ದು ಗೋಚರಿಸುತ್ತದೆ. ಓದುಬರಹ ಬಾರದ ಹರಪ್ಪನಹಳ್ಳಿಯ ಭೀಮವ್ವ, ಸಾವಿತ್ರೀಬಾಯಿ ಬಾಳೇಗದ್ದೆಯಂಥವರಿಗೆ ಸಿಕ್ಕ ಜನಾದರ ಪ್ರಸಿದ್ಧಿಯನ್ನು ಇಲ್ಲಿ ಉದಾಹರಿಸಬಹುದು. ಈ ನಿಟ್ಟಿನಲ್ಲಿ ೧೮೯೩ರಲ್ಲಿ ಎಂ.ರಾಮಾನುಜಯ್ಯಂಗಾರ್ ಮತ್ತು ಎಸ್.ಜಿ.ನರಸಿಂಹಾಚಾರ್ಯರು ಆರಂಭಿಸಿದ **'ಕರ್ಣಾಟಕ ಕಾವ್ಯಮಂಜರಿ'**ಯು **"ಶ್ರೀರಾಮಪಟ್ಟಾಭಿಷೇಕಂ"** ಎಂಬ ಮಹಾಲಕ್ಷ್ಮಿ ವಿರಚಿತ ಕಾವ್ಯವನ್ನು ಪ್ರಕಟಿಸುವ ಸಂದರ್ಭದಲ್ಲಿ ತೋರಿದ ಉತ್ಸಾಹವನ್ನು ಗಮನಿಸಬಹುದು (ಇದು ಮುದ್ದಣ ವಿರಚಿತ ಕೃತಿ ಎಂಬುದು ಆನಂತರ ತಿಳಿದುಬಂದ ವಿಷಯವಾಗಿದೆ). ಜೊತೆಗೆ ಈ ಪ್ರಕಾಶಕರು "ಕವಯತ್ರಿ ಮಹಾಲಕ್ಷ್ಮಿಯೆಂಬಾಕೆಯ ವಿಷಯ, ಅವಳ ಚರಿತ್ರವೇನಾದರೂ ತಿಳಿದಿದ್ದರೆ ವಿಚಾರಿಸಿ ಬರೆಯುವುದು, ನಿಮ್ಮ ಕಾರ್ಡಿನಲ್ಲಿ ನೀವು ತಿಳಿಸುವ ವೆಂಕಟಸುಬ್ಬಮ್ಮನೆಂಬಾಕೆಯು ಯಾರು? ಅವಳು ಬರೆದಿರುವ ಗ್ರಂಥಗಳೇನಾದರೂ ಉಂಟೆ? ಅವುಗಳೇನಾದರೂ ದೊರೆಯುತ್ತವೆಯೆ? ಮತ್ತಾರಾದರೂ ಸ್ತ್ರೀಯರು ನಿಮ್ಮಕಡೆ ಗ್ರಂಥಗಳನ್ನು ಬರೆದಿರುತ್ತಾರೆಯೆ?" ಎಂಬ ಮೊದಲಾದ ಪ್ರಶ್ನೆಗಳನ್ನು ಮುದ್ರಣಕ್ಕೆಂದು ಕೃತಿಯನ್ನು ಕಳಿಸಿದ್ದ ಕವಿ ಮುದ್ದಣನಲ್ಲಿ ಕೇಳಿರುವುದು, ಮಹಿಳಾ ಸಾಹಿತಿ ಹಾಗೂ ಸಾಹಿತ್ಯವನ್ನು ಕುರಿತಂತೆ ಇವರ ಕಾಳಜಿಯನ್ನು ತಿಳಿಸುತ್ತದೆ. ಇವರದೇ ಮಾಲಿಕೆಯಲ್ಲಿ ಸಂಚಿಹೊನ್ನಮ್ಮಳ **'ಹದಿಬದೆಯ ಧರ್ಮ'** ಪ್ರಕಟವಾಗಿರುವುದನ್ನೂ ಗಮನಿಸಬಹುದು.

ಮಹಿಳಾ ಸಾಹಿತ್ಯ ಬೆಳೆದು ಬರಲು ಜನಸಾಮಾನ್ಯರು, ಧಾರ್ಮಿಕ ಮುಖಂಡರು, ರಾಜಾಸ್ಥಾನಗಳು ಪ್ರೋತ್ಸಾಹ ನೀಡಿರುವ ಅನೇಕ ಉದಾಹರಣೆಗಳನ್ನು ಸಾಹಿತ್ಯ ಚರಿತ್ರೆಗಳು ನೀಡುತ್ತವೆ. ಆದರೆ ಇದು ಎಲ್ಲ ಕಾಲದಲ್ಲಿಯೂ ಲಭ್ಯವಿರಲಿಲ್ಲವೆನ್ನುವುದೂ ಅಷ್ಟೇ ಸತ್ಯ. ಅಂತೆಯೇ ಆಧುನಿಕಪೂರ್ವ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿಯೂ ಮಹಿಳೆಯರು ರಚಿಸಿರುವ ಕೃತಿಗಳು ದೊರಕುತ್ತವೆ; ಆದರೆ ಅವುಗಳ ಸಂಖ್ಯೆ ಬಹಳ ಕಡಿಮೆ.

## ಸಾಹಿತ್ಯ ಮತ್ತು ಚರಿತ್ರೆಯ ಸಂಬಂಧ

ಸಾಹಿತ್ಯಕ್ಕೆ ಕರ್ನಾಟಕದ ರಾಣಿಯರು ನೀಡಿರುವಂಥ ಕೊಡುಗೆಯನ್ನು ಕುರಿತಾದ ಈ ಮಹಾಪ್ರಬಂಧದ ಅಧ್ಯಯನವು, ಕೆಲವೊಂದು ನಿರ್ದಿಷ್ಟ ದೃಷ್ಟಿಕೋನ ಹೊಂದಿರುವ ಕರ್ನಾಟಕ ಸಾಹಿತ್ಯ ಚರಿತ್ರೆಯೆ ಆಗಿದೆ. ಆದರೆ ಹಿಂದಿನ ಅಧ್ಯಾಯದ 'ಅಧ್ಯಯನದ ಸ್ವರೂಪ'ದಲ್ಲಿ ತಿಳಿಸಿರುವಂತೆ ಇದು ಕೇವಲ ಕರ್ನಾಟಕದ ಅರಸಿಯರಿಂದ ರಚಿತವಾದ ಹಾಗೂ ಅರಸಿಯರಿಂದ ಪ್ರೇರಣೆ ಹಾಗೂ ಪ್ರೋತ್ಸಾಹಗೊಂಡು ರಚಿತವಾದ ಸಾಹಿತ್ಯಗಳ ಇತಿವೃತ್ತಗಳೊಂದಿಗೆ ಅರಸಿಯರನ್ನು ಕುರಿತಾಗಿ ರಚಿತವಾಗಿರುವ ಸಾಹಿತ್ಯಗಳ ಅಧ್ಯಯನವನ್ನೂ ಒಳಗೊಂಡಿದೆ. ಇದು ಬೆಳಕಿಗೆ ಬಾರದ ರಾಣಿಯರ ವಿಚಾರಗಳನ್ನು ಕುರಿತು ಚರ್ಚಿಸಲು ಸಹಾಯಕವಾಗುತ್ತದೆ. ಅಷ್ಟೇ ಅಲ್ಲದೆ ಕಾವ್ಯಗಳಲ್ಲಿ ಉಲ್ಲೇಖವಾಗಿರುವ ಅರಸಿಯರ ವಿಚಾರ ಕುರಿತಾದ ಕೆಲವೊಂದು ಚರ್ಚೆಗಳು ಕವಿಗಳ ಹಾಗೂ ಕೃತಿರಚನಾಕಾಲ ನಿರ್ಧರಿಸಲು ಸಹಕಾರಿಯಾಗಿದೆ. ಕಾವ್ಯಗಳಲ್ಲಿನ ರಾಣಿಯರ ಉಲ್ಲೇಖಗಳಿಂದಲೇ ಇತಿಹಾಸದ ಪುನಾರಚನೆಗೆ ಪೂರಕವಾದ ಅನೇಕ ಹೊಸ ಅಂಶಗಳು ಬೆಳಕಿಗೆ ಬಂದಿವೆ.

ಕವಿ ರುದ್ರಭಟ್ಟನ **'ಜಗನ್ನಾಥ ವಿಜಯ'** ಕಾವ್ಯದ ಕಾಲವನ್ನು ನಿರ್ಣಯ ಮಾಡುವಾಗ ಎ.ವೆಂಕಟಸುಬ್ಬಯ್ಯನವರು ಈ ಕಾವ್ಯದಲ್ಲಿ 'ವಿಬುಧತನುಮಾಕಾಮಿನೀಜೀವಿತೇಶಂ' ಎಂಬ ಸಾಲಿನಲ್ಲಿ ಅರಸಿ ಉಮಾದೇವಿಯ ಉಲ್ಲೇಖದ ಮೂಲಕ ಬಲ್ಲಾಳನನ್ನು ಸ್ತುತಿಸಿರುವ ಅಂಶವನ್ನು ಗಣನೆಗೆ ತೆಗೆದುಕೊಂಡು ಕಾಲವನ್ನು ಗುರುತಿಸಿದ್ದಾರೆ. ರಾಣಿ ಉಮಾದೇವಿಯ ಹೆಸರಿನೊಂದಿಗಿರುವ ರಾಜ ಬಲ್ಲಾಳನ ಸ್ತುತಿಗಳು ಕೇವಲ ಕಾವ್ಯದಲ್ಲಿ ಮಾತ್ರವಲ್ಲದೆ ಹಲವಾರು

ಶಾಸನಗಳಲ್ಲಿಯೂ ಕಂಡುಬಂದಿವೆ. ಅರಸೀಕೆರೆಯ ೯೩ನೇ ಸಂಖ್ಯೆಯ ಶಾಸನ ಹಾಗೂ ೪೦, ೭೭, ೮೫, ೯೦ನೇ ಸಂಖ್ಯೆಯ ಶಾಸಗಳಲ್ಲಿಯೂ ಈ ಉಲ್ಲೇಖವನ್ನು ಕಾಣಬಹುದು. ಆದರೆ ಕ್ರಿ.ಶ.೧೧೮೫ರ ಡಿ.೨೩ರ ಸುಮಾರಿನಲ್ಲಿ ರಚಿತವಾದ ೯೩ನೇ ಸಂಖ್ಯೆಯ ಶಾಸನದ ನಂತರವೇ ಈ ಉಲ್ಲೇಖ ಗುರುತಿಸಬಹುದಾದ್ದರಿಂದ ಬಲ್ಲಾಳನು ಉಮಾದೇವಿಯನ್ನು ೧೧೮೫ರ ಆಸುಪಾಸಿನಲ್ಲಿ ವಿವಾಹವಾದನೆಂದೂ, ಹಾಗಾಗಿ ಇದೇ ಉಲ್ಲೇಖವಿರುವ ರುದ್ರಭಟ್ಟನ ಕೃತಿ ಕೂಡ ೧೧೮೫ರ ನಂತರ ರಚಿತವಾದುದೆಂದು ಇವರು ಪ್ರತಿಪಾದಿಸುತ್ತಾರೆ.[೨]

ಕವಿ ನೇಮಿಚಂದ್ರನ 'ಲೀಲಾವತಿ ಪ್ರಬಂಧ' ಕೃತಿಯಲ್ಲಿ ಉಕ್ತವಾಗಿರುವ ಚಂದಲದೇವಿಯ ಉಲ್ಲೇಖವು ಕವಿ ನೇಮಿಚಂದ್ರನ ಕಾಲವನ್ನು ತಿಳಿಯಲು ಸಹಕಾರಿಯಾಗಿದೆ. ಕವಿ ನೇಮಿಚಂದ್ರನು ಸೌಂದತ್ತಿಯ ರಟ್ಟವಂಶದ ಲಕ್ಷ್ಮಣನ ಆಶ್ರಯದಲ್ಲಿ ಇದ್ದಾಗ ಈ ಕಾವ್ಯ ರಚಿಸಿದ್ದೆಂದು ಈ ಕೃತಿಯ ಕೆಲವು ಪದ್ಯಗಳಿಂದ ಸಾಬೀತಾಗುವುದಾದರೂ ರಟ್ಟವಂಶದಲ್ಲಿ ಲಕ್ಷ್ಮಣನೆಂಬ ಹೆಸರಿನ ಇಬ್ಬರು ರಾಜರು ಕ್ರಮವಾಗಿ ಕ್ರಿ.ಶ.೧೧೯೦ ಹಾಗೂ ಕ್ರಿ.ಶ.೧೨೨೮ರ ಕಾಲದಲ್ಲಿ ಆಳ್ವಿಕೆ ನಡೆಸಿರುವುದು ಇತಿಹಾಸದಿಂದ ತಿಳಿದು ಬರುತ್ತದೆ. ನೇಮಿಚಂದ್ರನು ತನ್ನ ಕಾವ್ಯದಲ್ಲಿ ಚಂದಲದೇವಿಯನ್ನು "ಅಂಬುಧಿವೇಷ್ಟಿತಾವನಿಗೆ ಲಕ್ಷ್ಮಣದೇವನೇ............... ಪುಣ್ಯಸತಿ ಚಂದಲದೇವಿಯೇ" (೧೪–೧೩೬) "ಧರೆಯಂ ರಕ್ಷಿಸುತಿರೆ....................ಶ್ರೀ ಚಂದ್ರಿಕಾದೇವಿ" (೧೪–೧೫೦) ಎಂಬುದಾಗಿ ಸ್ಮರಿಸಿದ್ದಾನೆ. ಕಾವ್ಯದಲ್ಲಿ ರಾಣಿ ಚಂದ್ರಿಕಾದೇವಿಯ ಕುರಿತಾದ ಈ ಉಲ್ಲೇಖದಿಂದ ಕವಿ ಸ್ತುತಿಸಿರುವ ಲಕ್ಷ್ಮೀದೇವ ಈ ವಂಶದ ಮೊದಲನೆಯ ಲಕ್ಷ್ಮೀದೇವ ಎಂಬುದು ಸ್ಪಷ್ಟಗೊಂಡಿದೆ. ಇದರಿಂದ ರಾಜನ ಕಾಲವನ್ನು ಪರಿಗಣಿಸಿರುವುದಲ್ಲದೆ ಕವಿಯ ಕಾಲವನ್ನು ನಿಖರವಾಗಿ ಗೊತ್ತುಪಡಿಸಲು ಸಾಧ್ಯವಾಯಿತು.

ಕಾವ್ಯಗಳಲ್ಲಿನ ರಾಣಿಯ ಉಲ್ಲೇಖವು ಕವಿಯ ಕಾಲವನ್ನು ತಿಳಿಯಲು ಸಹಕಾರಿಯಾದಂತೆ ಸವಾಲನ್ನು ತಂದೊಡ್ಡಿದ ಸಂದರ್ಭವೂ ಎದುರಾಗಿದೆ. ಕರ್ಣಪಾರ್ಯ ಹಾಗೂ ನೇಮಿಚಂದ್ರ ಕವಿಗಳಿಬ್ಬರೂ ಸೌದತ್ತಿಯ ರಟ್ಟರಾಜನಾದ ಲಕ್ಷ್ಮೀದೇವನ ಆಶ್ರಿತರಾಗಿದ್ದರೆಂದು ಆರ್.ನರಸಿಂಹಾಚಾರ್ಯರು ಮೈಸೂರು ಶಾಸನ ಇಲಾಖೆಯ ವರದಿಯಲ್ಲಿ ತಿಳಿಸಿದ್ದಾರೆ[೩]. ಆದರೆ ಕೆಲಕಾಲದ ನಂತರ ಇತರ ಆಧಾರಗಳು ದೊರೆತಮೇಲೆ ಹಾಗೂ ಕೆಲ ವಿದ್ವಾಂಸರ ಹೇಳಿಕೆಯನ್ನು ಕೂಲಂಕಶವಾಗಿ ಪರಿಶೀಲಿಸಿ ತಮ್ಮ ಅಭಿಪ್ರಾಯವನ್ನು ಬದಲಿಸಿಕೊಂಡ ಇವರು, "ಕರ್ಣಪಾರ್ಯನು ಶಿಲಾಹಾರರಾಜ ವಿಜಯಾದಿತ್ಯನ ಆಳ್ವಿಕೆಯಲ್ಲಿ ಲಕ್ಷ್ಮಣ ಅಥವಾ ಲಕ್ಷ್ಮೀದೇವನ ಪ್ರೋತ್ಸಾಹದಿಂದಲೂ, ನೇಮಿಚಂದ್ರನು ಸೌಂದತ್ತಿಯ ರಟ್ಟರಾಜನಾದ ಮೂರನೆಯ ಕಾರ್ತವೀರ್ಯನ ಮಗ ಲಕ್ಷ್ಮೀದೇವನ ಪ್ರೋತ್ಸಾಹದಿಂದಲೂ ಗ್ರಂಥಗಳನ್ನು ಬರೆದಿದ್ದಾರೆ. ಇವರಿಬ್ಬರಿಗೂ ಲಕ್ಷ್ಮೀದೇವನೆಂಬ ಒಂದೇ ಹೆಸರಿರುವುದರಿಂದಲೂ ಅಲ್ಲದೆ ಇಬ್ಬರ ಹೆಂಡತಿಯರಿಗೂ ಚಂದ್ರಿಕಾದೇವಿ ಎಂಬ ಒಂದೇ ಹೆಸರಿರುವುದರಿಂದಲೂ ಈ ಭ್ರಮೆವುಂಟಾಯಿತು" ಎಂದು ತಿಳಿಸಿದ್ದಾರೆ[೪].

ಡಿ.ಎಲ್.ನರಸಿಂಹಾಚಾರ್ ಅವರು ತಮ್ಮ 'ಸಾಹಿತ್ಯಚರಿತ್ರೆಯ ಸ್ವರೂಪ' ಲೇಖನದಲ್ಲಿ "ದೇಶಚರಿತ್ರೆಯೆಂದರೆ ಸಾಮಾನ್ಯವಾಗಿ ಅದರ ಅರಸುಗಳ ಚರಿತ್ರೆ. ಅವರು ಮಾಡಿದ ಕಾರ್ಯಗಳು, ಹೂಡಿದ ಯುದ್ಧಗಳು, ನಡೆಸಿದ ಪಿತೂರಿಗಳು– ಇವೇ ಮೊದಲಾದವು ಅಲ್ಲಿ ಪ್ರತಿಪಾದ್ಯವಾಗುವ ವಿಷಯಗಳು. ಸ್ಥೂಲವಾಗಿ ಇದು ದೇಶದ ಜೀವನ ಚರಿತ್ರೆ, ಸಾಹಿತ್ಯ ಚರಿತ್ರೆಯಾದರೆ ದೇಶದ ಆತ್ಮಕಥೆ......... ಒಂದು ಜನಾಂಗದ ಆತ್ಮಪರಿಚಯ ಮಾಡಿಕೊಳ್ಳಬೇಕಾದರೆ ಅದರ ಸಾಹಿತ್ಯಾಭ್ಯಾಸವೊಂದೇ ರಾಜಮಾರ್ಗ. ದೇಶಚರಿತ್ರೆಯನ್ನು ಎಲ್ಲ ದೃಷ್ಟಿಗಳಿಂದಲೂ ಸಾಹಿತ್ಯ ಚರಿತ್ರೆ ಪರಿಪೂರ್ಣಗೊಳಿಸುತ್ತದೆ"[೫] ಎಂದಿದ್ದಾರೆ. ಹೀಗೆ ದೇಶಚರಿತ್ರೆಯನ್ನು ಪರಿಪೂರ್ಣಗೊಳಿಸಬೇಕಿರುವ ಸಾಹಿತ್ಯ ಚರಿತ್ರೆಯಲ್ಲಿ ಮಹಿಳೆಯರ ಸಾಧನೆಯ ಪ್ರತಿನಿಧೀಕರಣವನ್ನು ಗುರುತಿಸುವುದಕ್ಕೂ ಆದ್ಯತೆ ನೀಡಬೇಕಿದೆ. ಇದು ಸಾಹಿತ್ಯ ರಚನೆಯಲ್ಲಿ ಲೇಖಕಿಯರ ಉಲ್ಲೇಖ ಹೇಗೆ ಆಗಿದೆ? ಕವಿ, ಕವಯತ್ರಿಯರ ದಾಖಲಾತಿಯ

ಸ್ವರೂಪದಲ್ಲಿ ತಾರತಮ್ಯ ನಡೆದಿದೆಯೆ? ದಾಖಲು ಮಾಡುವಾಗ ಆಯ್ಕೆಗಳ ಹಿಂದಿನ ಮತ್ತು ಅವಗಣನೆಯ ಹಿಂದಿನ ರಾಜಕಾರಣವನ್ನು ಅನಾವರಣ ಮಾಡುವುದು ಇಲ್ಲಿನ ಉದ್ದೇಶವಾಗಿದೆ.

## ಕನ್ನಡ ಸಾಹಿತ್ಯ ಚರಿತ್ರೆಗಳು ಸಾಗಿಬಂದ ಹಾದಿ

**ಕನ್ನಡ ಸಾಹಿತ್ಯ ಚರಿತ್ರೆಯ ಉಗಮ ಮತ್ತು ವಿಕಾಸ:** ಯಾವುದೇ ಅಧ್ಯಯನದ ಆರಂಭಕಾಲೀನ ರೂಪುರೇಷೆಗಳು, ಅಗತ್ಯಗಳು, ದೊರಕುವ ಅವಕಾಶಗಳು, ಆಕರಗಳು ಬಹಳ ಮಿತವಾಗಿರುತ್ತವೆ. ಆನಂತರ ಕಾಲದಲ್ಲಿ ಇದೇ ವಿಚಾರಗಳು ಹೆಚ್ಚು ವೈಜ್ಞಾನಿಕವಾಗಿಯೂ, ಕ್ರಮಬದ್ಧವಾಗಿಯೂ ರೂಪುಗೊಳ್ಳಲು ಈ ಆರಂಭಿಕ ಹಂತದ ಕಾರ್ಯಗಳು ಉತ್ತಮ ತಳಪಾಯವನ್ನು ನಿರ್ಮಿಸಿ ಕೊಡುತ್ತವೆ. ಹಾಗಾದಾಗ ಮಾತ್ರ ಅಧ್ಯಯನ ನಿಗದಿತ ಕಾರ್ಯ ಸಾಧಿಸಲು ಸಾಧ್ಯವಾಗುತ್ತದೆ. ಈ ನಿಟ್ಟಿನಲ್ಲಿ ಕನ್ನಡ ಸಾಹಿತ್ಯ ಚರಿತ್ರೆ ಬೆಳೆದು ಬಂದ ವಿಧಾನವನ್ನು ಅವಲೋಕಿಸುವುದು ಅವಶ್ಯಕವಾಗಿದೆ.

ಆಧುನಿಕ ಕಾಲಘಟ್ಟದಲ್ಲಿ ಭಾರತೀಯರು ಪಾಶ್ಚಿಮಾತ್ಯರಿಂದ ಕಲಿತ ಅನೇಕ ವಿಚಾರಗಳಲ್ಲಿ, ಚರಿತ್ರೆಯನ್ನು ಪುನಾರಚಿಸುವ ಕ್ರಮವೂ ಒಂದಾಗಿದೆ. ನಮ್ಮ ಪೂರ್ವಜರು ದಾಖಲಿಸಿರುವ ಇತಿಹಾಸವನ್ನು, ಪುರಾಣ ಕಾವ್ಯ ಶಾಸನ ಜನಪದ ಮೊದಲಾದ ವಿಭಿನ್ನ ಆಕರಗಳಿಂದ ಹೆಕ್ಕಿ ತೆಗೆದು, ಐತಿಹ್ಯವನ್ನು ಇತಿಹಾಸದಿಂದ ಬೇರ್ಪಡಿಸುವುದು ಸುಲಭದ ಕೆಲಸವಲ್ಲ. ಸಾವಿರಾರು ವರ್ಷಗಳ ಇತಿಹಾಸ ಹೊಂದಿರುವ ಕರ್ನಾಟಕ ಸಾಹಿತ್ಯ ಪರಂಪರೆ ಎಂದಿನಿಂದ ಆರಂಭವಾಯಿತೆನ್ನುವ ಪ್ರಶ್ನೆಗೆ ಸೂಕ್ತ ಉತ್ತರ ಕಂಡುಕೊಳ್ಳುವುದೇ ತ್ರಾಸದಾಯಕ ವಿಚಾರವಾಗಿದೆ. ಪೂರ್ವದ ಕವಿಗಳು ರಚಿಸಿರಬಹುದಾದ ಕಾವ್ಯಗಳನ್ನು ಪಟ್ಟಿಮಾಡುವುದೇ ದೊಡ್ಡ ಸವಾಲಾಗಿದ್ದ ೧೯ನೆಯ ಶತಮಾನದಲ್ಲಿ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯನ್ನು ರಚಿಸುವುದು ದುಸ್ಸಾಹಸದ ವಿಷಯವಾಗಿತ್ತು. ಸಹಸ್ರಾರು ವರ್ಷಗಳಿಂದ ಬೆಳೆದು ಬಂದ ಕನ್ನಡ ಸಾಹಿತ್ಯವನ್ನು ಮೊದಲು ಒಂದೆಡೆ ಕಲೆಹಾಕಿ ಪಟ್ಟಿಮಾಡುವ, ಸಂಪಾದಿಸಿ ಪ್ರಕಟಿಸುವ ಕಾರ್ಯ ಆರಂಭವಾದದ್ದೇ ೧೯ನೆಯ ಶತಮಾನದ ಉತ್ತರಾರ್ಧ ಕಾಲದಲ್ಲಿ.

೧೮೫೦ರಿಂದ ೧೯೦೦ರ ಕಾಲದಲ್ಲಿ ಪಾಶ್ಚಾತ್ಯ ವಿದ್ವಾಂಸರಾದ ಕಿಟ್ಟೆಲ್, ಬಿ.ಎಲ್.ರೈಸ್, ವೆರ್ಯ್‌ಗ್ಲೆ ಮೊದಲಾದವರು ಕನ್ನಡ ಸಾಹಿತ್ಯ ಚರಿತ್ರೆಯನ್ನು ಕುರಿತ ಲೇಖನಗಳನ್ನು ರಚಿಸಿದರು. ಅವರಲ್ಲಿ ವೆಯ್‌ಗ್ಲೆಯವರು ZDMG ಪತ್ರಿಕೆಯಲ್ಲಿ ಜರ್ಮನ್ ಭಾಷೆಯಲ್ಲಿ ೧೮೫೮ರಲ್ಲಿ ಬರೆದ Canares Sprache U. Literature ಎಂಬ ೨೮ ಪುಟಗಳ ಲೇಖನವೇ ಕನ್ನಡ ಸಾಹಿತ್ಯ ಚರಿತ್ರೆಯನ್ನು ಕುರಿತ ಮೊದಲ ಬರಹವಾಗಿದೆ. ಈ ಲೇಖನದ ಸಾರವನ್ನು ಶ್ರೀನಿವಾಸ ಹಾವನೂರರು ಸಂಗ್ರಹಿಸಿಕೊಟ್ಟಿದ್ದಾರೆ[೬] ಕೇವಲ ಜನಪ್ರಿಯ ಶಿಷ್ಟಕಾವ್ಯವನ್ನಷ್ಟೇ ಅಲ್ಲದೆ ಜನಪದ ಕಾವ್ಯವನ್ನೂ ಕುರಿತು "ಇವು ಪ್ರಪಂಚದ ಯಾವ ಜನಪದ ಕಥನಗಳಿಗೂ ಕಡಿಮೆಯಿಲ್ಲ" ಎಂಬ ಮೆಚ್ಚುಗೆಯನ್ನು ಈ ಮೊದಲ ಲೇಖನದಲ್ಲಿಯೇ ಕಾಣುತ್ತೇವೆ.

೧೮೭೩ರಲ್ಲಿ ಕಿಟೆಲ್ಲರು **'ಇಂಡಿಯನ್ ಇವಾಂಜಲಿಕಲ್ ರಿವ್ಯೂ'** ಎಂಬ ಪತ್ರಿಕೆಯಲ್ಲಿ Old Kanarese Literature ಎಂಬ ಲೇಖನವನ್ನು ಬರೆದರು. ಮುಂದೆ ಇದೇ ವಿಚಾರವನ್ನು ವಿಸ್ತರಿಸಿ 1875ರಲ್ಲಿ ತಾವೇ ಸಂಪಾದಿಸಿದ **'ನಾಗವರ್ಮನ ಕನ್ನಡ ಛಂದಸ್ಸು'** ಎಂಬ ಕೃತಿಯ ಆರಂಭದಲ್ಲಿ An Essay On Canarese Literature ಎಂಬ ಹೆಸರಿನಲ್ಲಿ ಸುಮಾರು ೬೦ ಪುಟಗಳ ಪ್ರಬಂಧವೊಂದನ್ನು ಪ್ರಕಟಿಸಿದರು. ಈ ಲೇಖನದ ಮತ್ತೊಂದು ಸ್ವಾರಸ್ಯಕರ ಅಂಶವೆಂದರೆ "ಭಾರತದ' ದೇಶೀಯ ಭಾಷೆಗಳಲ್ಲಿ ತಮಿಳು ಸಾಹಿತ್ಯ ಒಂದೇ ಸಂಸ್ಕೃತ ಅನುಕರಣಕ್ಕೆ ಪ್ರಯತ್ನಿಸದೆ ಅದಕ್ಕೆ ಸರಿಸಮನಾಗಿ ನಿಲ್ಲಲು ಪ್ರಕಾಶಿಸಲು ಪ್ರಯತ್ನಿಸಿದೆ" ಎಂದು ಹೇಳಿದ್ದ ಕಾಲ್ಡ್‌ವೆಲ್ಲರ ನಿಲುವನ್ನು ಒಪ್ಪದ ಕಿಟಲ್‌ರು "ನನ್ನ ಅಭಿಪ್ರಾಯದಲ್ಲಿ ಬೇರೆ ಯಾವುದೇ ದೇಶೀಯ ಭಾಷೆಗಳಿಗೆ ಹೋಲಿಸಿದರೂ ಕನ್ನಡ ಕೃತಿಗಳು

ಹೆಚ್ಚು ಪ್ರಸಿದ್ಧವಾಗಿರುವುದು ಸಾಬೀತಾಗುತ್ತದೆ" ಎಂಬ ಸೂಕ್ತ ಮೆಚ್ಚುಗೆಯ ಹೇಳಿಕೆಯನ್ನು ನೀಡಿದ್ದಾರೆ[೭]. ಮುಂದೆ ಎರಡು ವರ್ಷಗಳಲ್ಲಿ ಕಿಟೆಲ್ಲರು **'ಇಂಡಿಯನ್ ಆಂಟಿಕ್ವೆರಿ'** ಪತ್ರಿಕೆಯಲ್ಲಿ ಬರೆದ On the Karnataka Vaishnava Dasas, ಹಾಗೂ Nijaguna's notes on Indian Music ಲೇಖನಗಳೂ ಸಾಹಿತ್ಯ ಚರಿತ್ರೆಯ ಬೆಳವಣಿಗೆಯ ದೃಷ್ಟಿಯಿಂದ ಮಹತ್ವಪೂರ್ಣವಾಗಿವೆ.

೧೮೭೭ರಲ್ಲಿ ಬಿ.ಎಲ್.ರೈಸರು ತಾವು ಸಂಪಾದಿಸಿ ಪ್ರಕಟಿಸಿದ ಮೈಸೂರು ಗೆಜಿಟಿಯರ್‌ನ ಮೊದಲ ಸಂಪುಟದಲ್ಲಿ, ೧೮೮೪ರ ಕರ್ಣಾಟಕ ಭಾಷಾಭೂಷಣದಲ್ಲಿ ಹಾಗೂ ೧೮೯೦ರ ಕರ್ಣಾಟಕ ಶಬ್ದಾನುಶಾಸನಂ ಗ್ರಂಥಗಳ ಪೀಠಿಕಾಭಾಗದಲ್ಲಿ ಹಾಗೂ ೧೮೮೬-೧೮೯೦ರ ಅವಧಿಯಲ್ಲಿ JRASನ ಕೆಲವು ಸಂಚಿಕೆಗಳಲ್ಲಿ ಕನ್ನಡ ಸಾಹಿತ್ಯ ಚರಿತ್ರೆಗೆ ಸಂಬಂಧಿಸಿದಂತೆ ಹಲವು ವಿಚಾರಗಳನ್ನು ವಿಮರ್ಶಿಸಿ ಕೊಟ್ಟಿದ್ದಾರೆ. ಆದರೆ ಕಿಟೆಲ್ ಯಾವ ಲೇಖನದಲ್ಲಿಯೂ ಲೇಖಕಿಯರನ್ನು ಗುರುತಿಸಿಲ್ಲ. ಆದರೆ ರೈಸರು ತಮ್ಮ ಲೇಖನದಲ್ಲಿ ಹೊನ್ನಮ್ಮನನ್ನು ಸೇರಿಸಿ "ನಮ್ಮ ಪಟ್ಟಿಯಲ್ಲಿರುವ ಏಕೈಕ ಲೇಖಕಿ" ಎಂದು ತಿಳಿಸಿದ್ದಾರೆ. **ಈ ಮೂಲಕ ಕನ್ನಡಸಾಹಿತ್ಯ ಚರಿತ್ರೆಯಲ್ಲಿ ಮೊತ್ತಮೊದಲು ದಾಖಲಾದ ಕವಯತ್ರಿ ಹೊನ್ನಮ್ಮಳಾಗಿದ್ದಾಳೆ.**

ಕಿಟ್ಟೆಲ್ ಮತ್ತು ರೈಸರು ಕನ್ನಡ ಸಾಹಿತ್ಯ ಚರಿತ್ರೆಗೆ ಅಡಿಪಾಯ ಹಾಕಿದವರು. ಇವರ ಈ ಲೇಖನಗಳು ಪ್ರಕಟವಾದನಂತರ, ಸಾಹಿತ್ಯಚರಿತ್ರೆಯನ್ನು ಕುರಿತಂತೆ ಕನ್ನಡ ವಿದ್ವಾಂಸರು ಹೆಚ್ಚುಹೆಚ್ಚು ಚಿಂತಿಸಲಾರಂಭಿಸಿದರು. ಬಿ.ಎಂ.ಶ್ರೀ ಅವರು "ಕಿಟೆಲ್ಲರ ಲೇಖನವು ಕನ್ನಡ ಸಾಹಿತ್ಯ ಚರಿತ್ರೆಯನ್ನು ಸಾಧನೆ ಮಾಡಲು ಪೂರ್ವಭಾವಿಯಾಗಿ ನೆರವೇರಿಸಿದ ಆಯುಧಪೂಜೆ"[೮] ಎಂದಿರುವಂತೆ, ಆಯುಧ ಪೂಜೆಯನ್ನು ಸಾಂಗವಾಗಿ ನೆರವೇರಿಸಿದ ಬಳಿಕ ಸಾಕಷ್ಟು ವಾಕ್‌ಸಮರಗಳು, ಚರ್ಚೆಗಳೆಂಬ ಗದಾಪ್ರಹಾರಗಳು ಈ ಸಾಹಿತ್ಯಚರಿತ್ರೆಯ ಕುರಿತಾಗಿ ವಿದ್ವತ್‌ವಲಯದಲ್ಲಿ ಹೆಚ್ಚುಹೆಚ್ಚು ನಡೆದಿವೆ. ಎ.ವೆಂಕಟಸುಬ್ಬಯ್ಯನವರು ಕವಿಚರಿತೆಯ ಸಂಪುಟಗಳನ್ನು ವಿಮರ್ಶಿಸಿ ಬರೆದ ಹಲವು ಕವಿಗಳ ಜೀವನ, ಕಾಲ ವಿಚಾರಗಳ ವಿದ್ವತ್ಪೂರ್ಣ ವಿಚಾರಸರಣಿಗಳಿಂದ ಕವಿಚರಿತೆಯ ಮಾಹಿತಿ ಹೆಚ್ಚು ಪಕ್ವವಾಗುವಂತಾಯಿತು. ಕವಿಗಳ ಕುರಿತಾಗಿ ವಿದ್ವಾಂಸರು ಎತ್ತಿದ ಆಕ್ಷೇಪಣೆಗಳು ವಿದ್ವತ್‌ಜನತೆಯನ್ನು ಹೆಚ್ಚು ಆಲೋಚನೆಗೆ ವಿಮರ್ಶೆಗೆ ತೊಡಗುವಂತೆ ಪ್ರೇರೇಪಿಸಿತು. ಪ್ರಬುದ್ಧ ಕರ್ಣಾಟಕ, ಮಾನವಿಕ ಕರ್ಣಾಟಕ, ಪರಿಷತ್ಪತ್ರಿಕೆ ಮೊದಲಾದ ಸಂಶೋಧನ ಪತ್ರಿಕೆಯ ಸಂಪುಟಗಳಲ್ಲಿ ಕವಿ, ಕೃತಿಗಳ ಕುರಿತಾಗಿ ಚರ್ಚಿತಗೊಂಡ ಲೇಖನಗಳು, ಸವಾಲುಗಳು, ಜವಾಬುಗಳು ಪ್ರಕಟವಾಗಲು ತೊಡಗಿದವು.

ಕ್ರಿ.ಶ.೧೯೨೧ರಲ್ಲಿ ಇ.ಪಿ.ರೈಸರು ರಚಿಸಿರುವ A History of Kanarese Literature ಕೃತಿಯನ್ನು ಶಾಸ್ತ್ರೀಯ ದೃಷ್ಟಿಯನ್ನೊಳಗೊಂಡ ಮೊತ್ತಮೊದಲ ಸಾಹಿತ್ಯಚರಿತ್ರೆಯೆಂದು ವಿದ್ವಾಂಸರು ಗುರುತಿಸಿದ್ದಾರೆ. ೧೯೧೯ರಲ್ಲಿ ಕರ್ಣಾಟಕ ಕವಿಚರಿತೆಯ ಎರಡನೆಯ ಸಂಪುಟದಲ್ಲಿ ಬೆಳಕಿಗೆ ಬಂದ ಬಹಳಷ್ಟು ಸಂಗತಿಗಳನ್ನು ಸೇರಿಸಿಕೊಂಡು ಈ ಕೃತಿಯನ್ನು ಪುನರ್‌ಪರಿಷ್ಕರಿಸಿ ಪ್ರಕಟಿಸಲಾಗಿದೆ[೯]. ಇದು ಆಂಗ್ಲಭಾಷೆಯಲ್ಲಿ ರಚಿತವಾದ ೧೧೫ ಪುಟಗಳ ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆಯಾಗಿದೆ. ಇದರಲ್ಲಿ **ಕಂತಿ, ಅಕ್ಕಮಹಾದೇವಿ, ನಾಗಲಾಂಬಿಕೆ, ಹೊನ್ನಮ್ಮ** ಮೊದಲಾದ ಲೇಖಕಿಯರ ವಿಚಾರ ಸಂಕ್ಷಿಪ್ತವಾಗಿ ದಾಖಲಾಗಿದೆ.

**ಕರ್ಣಾಟಕ ಕವಿಚರಿತೆ:** ಪಾಶ್ಚಾತ್ಯ ವಿದ್ವಾಂಸರು ಹಾಕಿಕೊಟ್ಟ ಬುನಾದಿಯ ಮೇಲೆ ಕವಿಚರಿತೆಯ ಮೂರು ಸಂಪುಟಗಳನ್ನು ಆರ್.ನರಸಿಂಹಾಚಾರ್ಯರು ಸಂಪಾದಿಸಿದರು. ಈ ಮೂರು ಸಂಪುಟಗಳ ಮೊದಲ ಅವತರಣಿಕೆ ಕ್ರಮವಾಗಿ ೧೯೦೭, ೧೯೧೯, ೧೯೨೯ರಲ್ಲಿ ಪ್ರಕಟವಾಯಿತು. ಆರ್.ನರಸಿಂಹಾಚಾರ್ಯ ಮತ್ತು ಎಸ್.ಜಿ.ನರಸಿಂಹಾಚಾರ್ಯರ ಸಂಯುಕ್ತ ಸಂಪಾದಕತ್ವದಲ್ಲಿ ಹೊರಬಂದ ಮೊದಲನೆಯ ಸಂಪುಟದಲ್ಲಿ ಆರಂಭಕಾಲದಿಂದ ೧೪ನೆಯ ಶತಮಾನದ ಕೊನೆಯ ವರೆಗಿನ ಕಾಲದಲ್ಲಿದ್ದ ಕವಿಗಳನ್ನು, ದ್ವಿತೀಯ ಸಂಪುಟವು

೧೭ನೆಯ ಶತನಮಾನದವರೆಗಿನ, ಹಾಗೂ ತೃತೀಯ ಸಂಪುಟವು ೧೯ನೆಯ ಶತಮಾನದವರೆಗಿನ ಕವಿಗಳ ಪರಿಚಯವನ್ನೊಳಗೊಂಡಿದೆ. ಕನ್ನಡ ವಾಙ್ಮಯದ ಎಲ್ಲಾ ಅಭ್ಯಾಸಕ್ಕೂ ಕವಿಚರಿತೆಯ ಸಂಪುಟಗಳು ಆಕರಗ್ರಂಥಗಳಾಗಿವೆ. ಕವಿಕಾವ್ಯ ವಿಚಾರಗಳಿಗೆ ಮೂಲಆಕರ ಎನಿಸುವ ಕವಿಚರಿತೆಯು ಇಲ್ಲಿ ಉಕ್ತವಾದ ವಿಚಾರಗಳಿಗಷ್ಟೆ ಅಲ್ಲದೆ ಇಲ್ಲಿ ಅನುಕ್ತರಾದ ಕವಿಗಳ ವಿಚಾರವನ್ನು ಕುರಿತು ಹೇಳುವಾಗಲೂ ಮಾನದಂಡವಾಗಿರುವುದು, ಕಾಲ ಮೊದಲಾದ ವಿಚಾರಗಳ ನಿರ್ಣಯದಲ್ಲಿ ಖಚಿತ ಅಂಶಗಳಿಗಾಗಿ ಉಲ್ಲೇಖಿಸುವುದಲ್ಲದೆ, ಭಿನ್ನಾಭಿಪ್ರಾಯವಿದ್ದಲ್ಲೂ ಕವಿಚರಿತೆಯ ವಿಚಾರದೊಂದಿಗೇ ಚರ್ಚಿಸುವ ಪರಿ ಈ ಕೃತಿಯ ಹಿರಿಮೆ ಗರಿಮೆಗಳನ್ನು ಸಾರುತ್ತದೆ.

ಆರ್.ನರಸಿಂಹಾಚಾರ್ಯರ ಈ ಕವಿಚರಿತೆಯಲ್ಲಿ ಸಾಧಾರಣವಾಗಿ ಕವಿಗಳ ವಿವರವನ್ನು ಕೊಡುವಾಗ ಅನುಸರಿಸಿರುವ ಪದ್ಧತಿಯೆಂದರೆ, ಕವಿಯ ಕಾಲ, ದೇಶ, ವಂಶ, ಮತ, ಗುರು, ಪೋಷಕ, ಬಿರುದುಗಳು, ಜೀವನ ವೃತ್ತಾಂತದ ಮಹತ್ವದ ವಿಚಾರಗಳು, ಅನಂತರ ವಿಚಾರಪೂರ್ವಕವಾಗಿ ಕಾಲನಿರ್ಣಯ, ಕವಿಯನ್ನು ಸ್ತುತಿಸುವ ಇತರ ಕವಿಗಳ ಹೆಸರು, ಈ ಕವಿಯಿಂದ ಸ್ಮರಿಸಲ್ಪಟ್ಟ ಇತರ ಕವಿಗಳು. ಆನಂತರ ಕವಿ ತನ್ನ ಕವಿತಾಚಾತುರ್ಯ, ಗುಣಗಳು ಮೊದಲಾದುವನ್ನು ಹೇಳಿಕೊಳ್ಳುವ ಪದ್ಯಗಳು, ಈ ಕವಿಯಿಂದ ರಚಿತವಾದ ಗ್ರಂಥಗಳ ಪ್ರತ್ಯೇಕ ಪರಿಚಯ, ಕಾವ್ಯದ ಸ್ವರೂಪ, ಪ್ರತಿಪಾದ್ಯವಿಷಯ, ಕಥಾಗರ್ಭ, ಆಶ್ವಾಸ ಸಂಖ್ಯೆ, ಇಷ್ಟದೇವತಾ ಸ್ತುತಿ, ಗುರುಪರಂಪರೆ, ಗ್ರಂಥರಚನೆಗೆ ಕಾರಣ ಮೊದಲಾದುವನ್ನು ವಿವರಿಸಿ ಬಳಿಕ ಆಶ್ವಾಸಾಂತ್ಯಗಳಲ್ಲಿ ದೊರೆಯುವ ಗದ್ಯಗಳ ಅನುವಾದ, ಆನಂತರ ಗ್ರಂಥದ ಬಂಧದ ವಿಷಯವಾಗಿ ಒಂದೆರಡು ಮಾತುಗಳನ್ನು ಹೇಳಿ ಕವಿತೆಯ ಧೋರಣೆಯನ್ನು ತೋರಿಸುವುದಕ್ಕಾಗಿ ಕೆಲವು ಪದ್ಯಗಳನ್ನು ಉದಾಹರಿಸಲಾಗಿದೆ. ಈ ಕ್ರಮವನ್ನು ಅನುಸರಿಸಿ ಕವಿಗಳ ಚರಿತೆಯನ್ನು ಬರೆಯಲಾಗಿದ್ದರೂ, ಮೇಲೆ ವಿವರಿಸಿದ ಅಂಶಗಳೆಲ್ಲಾ ತಿಳಿದುಬಾರದಿರುವ ಕೆಲವು ಕವಿಗಳ ಚರಿತೆಯನ್ನು ಯಥೋಚಿತವಾಗಿ ಸಂಕ್ಷೇಪಿಸಿ ಬರೆದಿದೆ. ಕವಿಗಳು ಗೊತ್ತಿಲ್ಲದ ಕೆಲವು ಗ್ರಂಥಗಳ ವಿಚಾರಗಳನ್ನೂ ಪ್ರಸ್ತಾಪಿಸಿದ್ದಾರೆ. ಕವಿಗಳ ಕಾಲವನ್ನು ನಿರ್ಣಯಿಸುವುದರಲ್ಲಿ ಅವಶ್ಯಕವಾದ ಸಾಮಗ್ರಿಗಳನ್ನು ಸಂಗ್ರಹಿಸಿ, ಅವನ್ನು ಅಳವಡಿಸಿಕೊಂಡು ನಿರ್ಧಾರಕ್ಕೆ ಬಂದಿರುವ ಈ ಕ್ರಮವು ಶಾಸ್ತ್ರೀಯ ದೃಷ್ಟಿಯಿಂದ ಕೂಡಿದೆ. ಇವರ ಕೃತಿಯನ್ನು ಹಾಗೂ ಕೃತಿಯ ಹಿಂದಿನ ಪರಿಶ್ರಮವನ್ನು ಕುರಿತು ದೇಶ ವಿದೇಶದ ವಿದ್ವಾಂಸರು ನಾನಾ ಪರಿಯಲ್ಲಿ ಶ್ಲಾಘಿಸಿದ್ದಾರೆ.

**ಕವಯತ್ರಿಯರ ಉಲ್ಲೇಖ:** ಆರಂಭಿಕ ಹಂತದ ಈ ಗ್ರಂಥದಲ್ಲಿ ಮಹಿಳೆಯರ ಪ್ರಾತಿನಿಧ್ಯ ಯಾವ ಮಟ್ಟದಲ್ಲಿದೆ ಎಂಬುದನ್ನು ಗಮನಿಸುವ ಅಗತ್ಯವಿದೆ. ಕವಿಚರಿತೆ ಮೊದಲನೆಯ ಸಂಪುಟದಲ್ಲಿ ಉಲ್ಲೇಖಿತರಾಗಿರುವ ಕವಯತ್ರಿಯರು ಈ ಪ್ರಕಾರವಾಗಿದ್ದಾರೆ: ಕಂತಿಯೆಂದೇ ಪ್ರಸಿದ್ಧವಾದ ಕವಯತ್ರಿಯೋರ್ವಳ ಕುರಿತಾಗಿ ಹೇಳುತ್ತಾ, ಈಕೆ ರಚಿಸಿರುವ ಕೃತಿಗಳು ದೊರೆತಿಲ್ಲವಾದರೂ ಕಂತಿಹಂಪನ ಸಮಸ್ಯೆಗಳಿಂದ ಕೆಲವು ಪದ್ಯಗಳನ್ನು ಉದಾಹರಿಸಿ, ಈಕೆಯನ್ನು ಸ್ತುತಿಸಿರುವ ಇತರ ಕವಿಗಳಿಂದ ತಿಳಿದುಬರುವ ವಿವರಗಳನ್ನು ನೀಡಿದ್ದಾರೆ. ಬಸವಣ್ಣನ ಮಡದಿ ನೀಲಮ್ಮ ಕುರಿತಾದ ಕೆಲವು ವಿಚಾರಗಳೊಂದಿಗೆ ಇವಳು ರಚಿಸಿರುವ ಕಾಲಜ್ಞಾನ ವಚನ ಹಾಗೂ ಇವಳನ್ನು ಕುರಿತಾಗಿ ರಚಿತವಾದ ನೀಲಮ್ಮನ ಸ್ತೋತ್ರ, ನೀಲಾಂಬಿಕಾ ಪಂಚವಿಂಶತಿ, ನೀಲಮ್ಮನ ತ್ರಿವಿಧಿ ಮೊದಲಾದ ಗ್ರಂಥಗಳನ್ನು ಉಲ್ಲೇಖಿಸಿದ್ದಾರೆ. ಮಹಾದೇವಿಯಕ್ಕನ ಕಿರುಪರಿಚಯದೊಂದಿಗೆ ಇವಳ ವಚನಗಳನ್ನು ಹಾಗೂ ಯೋಗಾಂಗ ತ್ರಿವಿಧಿಯ ಕೆಲವು ವಚನಗಳನ್ನು ಕೊಟ್ಟಿದ್ದಾರೆ. ಗೊಗ್ಗವ್ವೆ, ರೆಮ್ಮವ್ವೆ, ರೇಚವ್ವೆ, ಬುದ್ಧಯ್ಯನ ಹೆಂಡತಿ ಕಾಳವ್ವೆ, ಕೊಟ್ಟಣದ ಸೋಮವ್ವೆ , ಬಾಚಿಕಾಯಕದ ಬಸವಪ್ಪನ ಹೆಂಡತಿ ಕಾಳವ್ವೆ, ಉರಿಲಿಂಗಪೆದ್ದಿಯ ಹೆಂಡತಿ ಕಾಳವ್ವೆ, ಬೊಂತಲದೇವಿ, ವೀರಮ್ಮ, ಲಿಂಗಮ್ಮ, ಸತ್ಯಕ್ಕ, ಬಿಜ್ಜಳದೇವಿ, ಮೋಳಿಗೆ ಮಾರಯ್ಯನ ಮಡದಿ ಮಹಾದೇವಿ ಮೊದಲಾದವರ ಕುರಿತಾದ ಸಂಕ್ಷಿಪ್ತ ವಿವರದೊಂದಿಗೆ ಅವರ ಕೆಲವೊಂದು ವಚನಗಳನ್ನು ಉದಾಹರಿಸಿದ್ದಾರೆ. ಈ ಪ್ರಕಾರವಾಗಿ ಮೊದಲನೆಯ ಸಂಪುಟದಲ್ಲಿ ೧೪ನೆಯ ಶತಮಾನದವರೆಗಿನ ಕಾಲದ

ಸುಮಾರು ೧೫ ವಚನಕಾರ್ತಿಯರನ್ನೂ ಹಾಗೂ ಅವರ ವಚನಗಳನ್ನು ಪರಿಚಯಿಸಿರುವುದಲ್ಲದೆ ಸುಮಾರು ೧೦ ಲೇಖಕಿಯರ ಉಲ್ಲೇಖಗಳನ್ನು ಇತರ ಕವಿಗಳ ಸ್ತುತಿಯಿಂದ ದಾಖಲಿಸಿದ್ದಾರೆ.

ದ್ವಿತೀಯ ಸಂಪುಟದಲ್ಲಿ ಎಡೆಮಟದ ನಾಗಿದೇವನ ಹೆಂಡತಿ ಮಸಣಮ್ಮ, ಕಾಲು ಕಣ್ಣಿಯ ಕಾಯಮ್ಮ, ಗುಡ್ಡವ್ವೆ, ರೇವಣ ಸಿದ್ಧಯ್ಯನ ಹೆಂಡತಿ ರೇಕಮ್ಮರ ವಿಚಾರವನ್ನು ತಿಳಿಸಿ, ಇವರು ರಚಿಸಿರುವ ವಚನಗಳನ್ನು ಉದಾಹರಿಸಿ ಬರೆದಿದ್ದಾರೆ. ೧೭ನೆಯ ಶತಮಾನದಲ್ಲಿ ಮೈಸೂರಿನ ಅರಸ ಚಿಕ್ಕದೇವರಾಯನ ಆಸ್ಥಾನದಲ್ಲಿದ್ದ ಹೊನ್ನಮ್ಮ ಹಾಗೂ ಶೃಂಗಾರಮ್ಮರನ್ನು ಕುರಿತಾಗಿ ಹಾಗೂ ಇವರು ರಚಿಸಿರುವ ಹದಿಬದೆಯ ಧರ್ಮ ಹಾಗೂ ಪದ್ಮಿನೀ ಕಲ್ಯಾಣ ಕೃತಿಗಳ ಕುರಿತಾದ ಪರಿಚಯ ಮಾಡಿಕೊಟ್ಟಿದ್ದಾರೆ.

೧೮ನೆಯ ಶತಮಾನದಲ್ಲಿದ್ದ ಹೆಳವನಕಟ್ಟೆ ಗಿರಿಯಮ್ಮಳ ಹಾಗೂ ಇವಳ ಕೃತಿಗಳ ಪರಿಚಯ, ಇದೇ ಕಾಲದಲ್ಲಿದ್ದ ಮೈಸೂರು ದೊಡ್ಡ ಕೃಷ್ಣರಾಜನ ರಾಣಿ ಚೆಲುವಾಂಬೆಯ ಪರಿಚಯದೊಂದಿಗೆ ಇವರು ರಚಿಸಿರುವ ಕೃತಿಗಳ ಕೆಲವು ಪದ್ಯಗಳ ಉದಾಹರಣೆಯೊಂದಿಗೆ ಪರಿಚಯಿಸಿದ್ದಾರೆ.

೧೯ನೆಯ ಶತಮಾನದಲ್ಲಿನ ಕವಯತ್ರಿಯರಲ್ಲಿ ಉತ್ತರ ಕರ್ನಾಟಕ ಪ್ರಾಂತದ ಶಾಂತಿಬಾಯಿ, ನಂಜನಗೂಡಿನ ಹಾಡಿನ ರಂಗಮ್ಮ, ಎಣ್ಣೆಹೊಳೆ ಕೊಪ್ಪಲು ಸೀಮೆಯ ಶ್ರೀವೈಷ್ಣವ ಕವಯತ್ರಿ ವೆಂಕಟಲಕ್ಷ್ಮಮ್ಮ, ಮೈಸೂರಿನ ತುಳಸೀಬಾಯಿ, ಸಿ.ಆರ್.ಚೆಲ್ಲಮ್ಮ ಮೊದಲಾದವರ ಒಂದೆರಡು ಸಾಲಿನ ಪರಿಚಯದೊಂದಿಗೆ ಲಭ್ಯ ಕೃತಿಗಳ ಉಲ್ಲೇಖವಿದೆ.

ದ್ವಿತೀಯ ಸಂಪುಟದ ಮುನ್ನುಡಿಯಲ್ಲಿ ರಾಣಿಯರು ಪ್ರೋತ್ಸಾಹ ನೀಡಿ ಕಾವ್ಯ ರಚನೆಗೆ ಕಾರಣವಾದ ಕೆಲವು ಪ್ರಸಂಗಗಳನ್ನು ತಿಳಿಸಿದ್ದಾರೆ. ಚೆನ್ನಮಾಂಬೆಯ ಆಳಿಕೆಯಲ್ಲಿ ತಿರುಮಲಸಾಮಂತನ ಕೋಶಾಧ್ಯಕ್ಷನಾದ ಪದ್ಮನಾಭ ರಚಿಸಿದ ಪದ್ಮಾವತೀ ಚರಿತೆ, ಅಬ್ಬಕ್ಕದೇವಿಯ ಆಳಿಕೆಯಲ್ಲಿ ಪಟ್ಟಾಭಿರಾಮ ರಚಿಸಿದ ರತ್ನಶೇಖರ ಚರಿತೆ, ಚೌಟರಸ ಚಂದ್ರಶೇಖರ ಚಿಕ್ಕರಾಯನ ರಾಣಿವಾಸದ ಚೆನ್ನಮ್ಮದೇವಿಯ ಆಜ್ಞಾನುಸಾರ ಪದ್ಮಾವತೀ ಚರಿತೆಯನ್ನು ರಚಿಸಿದ ಸುರಾಲ. ಮೈಸೂರು ಖಾಸಾಚಾಮರಾಜನ ಮಹಿಷಿ ದೇವೀರಮ್ಮಣ್ಣಿಯ ಪ್ರೇರಣೆಯಿಂದ ದೇವಚಂದ್ರ ರಚಿಸಿದ ರಾಜಾವಳೀ, ಮುಮ್ಮಡಿ ಕೃಷ್ಣರಾಜರ ಮಹಿಷಿಯರ ಆಜ್ಞಾನುಸಾರವಾಗಿ ಭಾಗವತ ಕೃಷ್ಣಸ್ವಾಮಿಯಿಂದ ರಚಿತವಾದ ಕೃತಿಗಳನ್ನು ಉಲ್ಲೇಖಿಸಿದ್ದಾರೆ.[೧೦] ಕಾವ್ಯಕ್ಕೆ ಪ್ರೋತ್ಸಾಹ ನೀಡಿರುವ ಕನ್ನಡ ನಾಡಿನ ಕೆಲವು ಅರಸಿಯರ ವಿಚಾರವನ್ನು ಒಂದೆಡೆ ಕಲೆಹಾಕಿ ಕವಿಚರಿತೆಯಲ್ಲಿ ಇಂಥ ಅಧ್ಯಯನಗಳು ನಡೆಯಲು ಇರುವ ಅವಕಾಶವನ್ನು ಸೂಚ್ಯವಾಗಿ ತಿಳಿಸಿದ್ದಾರೆ.

ಕರ್ಣಾಟಕ ಕವಿಚರಿತೆಯ ಸಂಪುಟಗಳಲ್ಲಿ ಕೆಲವು ಸಂಸ್ಕೃತ ಕವಿಗಳನ್ನು, ಶಾಸನ ಕವಿಗಳನ್ನು, ಕೃತಿಲಭ್ಯವಿಲ್ಲದ ಕೆಲವು ಕವಿಗಳ ಹೆಸರುಗಳನ್ನು ಉಲ್ಲೇಖಿಸಿ ಈತ ಯಾವುದಾದರೂ ಕನ್ನಡ ಗ್ರಂಥ ಬರೆದಿರುವ ಶಕ್ಯವಿದೆ ಎಂಬ ಅನುಮಾನ ವ್ಯಕ್ತಪಡಿಸಿರುವಂತೆ ಲೇಖಕಿಯರನ್ನೂ ಗುರುತಿಸಿದ್ದಾರೆ. ಮೊದಲನೆಯ ಸಂಪುಟದಲ್ಲಿ ಹೇರೂರ ಹೆಣ್ಣು, ಸೂಳೆ ಸಂಕಲದೇವಿ, ಕಾಮಲದೇವಿ, ನಂಬಿಯಕ್ಕ, ಪದ್ಮಲದೇವಿ, ಬೊಮ್ಮಲದೇವಿ, ಮುಕ್ತಾಯಕ್ಕ, ರಾಯಮ್ಮ ಮೊದಲಾದವರ ಹೆಸರುಗಳನ್ನು ಇತರ ಕವಿಗಳ ಉಲ್ಲೇಖಗಳ ಆಧಾರಗಳಿಂದ ಹೆಸರಿಸಿದರೆ, ದ್ವಿತೀಯ ಸಂಪುಟದಲ್ಲಿ ಕುಂತಿ, ಚವುಂಡಿಯರನ್ನು ಹೆಸರಿಸಿ ನೀತಿಸಾರ ಗ್ರಂಥದ ಆಧಾರದಮೇಲೆ ಸುಮಾರು ೧೫೦೦ರ ಕಾಲದಲ್ಲಿದ್ದಿರಬಹುದಾದ ಇವರನ್ನು ಕವಿಗಳ ಗೋಷ್ಠಿಯಲ್ಲಿ ಸೇರಿಸಿರುವುದರಿಂದ ಗ್ರಂಥ ರಚಿಸಿರಬಹುದೆಂದು ಊಹಿಸಿದ್ದಾರೆ.

ತೃತೀಯ ಸಂಪುಟವನ್ನು ೧೮–೧೯ನೆಯ ಶತಮಾನದ ಕವಿಗಳಿಗೆ ಮೀಸಲಿಟ್ಟಿದ್ದರೂ ೨೦ನೆಯ ಶತಮಾನದ ಕೆಲವು ಕವಿಗಳನ್ನು ಉಲ್ಲೇಖಿಸಿದ್ದಾರೆ ಅಂತೆಯೇ ಕೆಲವು ಕವಯತ್ರಿಯರನ್ನೂ ಗುರುತಿಸಿದ್ದಾರೆ. (ಈ ಕಾರಣದಿಂದ ತೃತೀಯ ಸಂಪುಟದಲ್ಲಿ ಲೇಖಕಿಯರನ್ನು ಒಂದೆರಡು ಸಾಲಿನಲ್ಲಿ ಪರಿಚಯಿಸಿರುವುದನ್ನು, ಲೇಖಕಿಯರ ಮೇಲಿನ ಅಸಡ್ಡೆ ಎನ್ನಲಾಗುವುದಿಲ್ಲ) ಈ ಸಂಪುಟದ ಮುನ್ನುಡಿಯಲ್ಲಿ ಕಂತಿಯ ಕುರಿತಾದ ಕೆಲವು ಆಕ್ಷೇಪಗಳಿಗುತ್ತರಿಸುತ್ತಾ ಕಂತಿಯೆಂಬುವ ಕವಿಯತ್ರಿ ಇದ್ದಳೆ? ಎನ್ನುವ ಸಂಶಯಕ್ಕೆ ಲಭ್ಯಮಾಹಿತಿಯಿಂದ ಕಂತಿಯ ಐತಿಹಾಸಿಕ ಸಂದೇಹ ನಿವಾರಿಸುವಲ್ಲಿ ಸೂಕ್ತ ಉತ್ತರ ನೀಡಿದ್ದಾರೆ.[೧೧] ಆದರೂ ಆನಂತರದ ಕೆಲವು ಸಾಹಿತ್ಯ ಚರಿತ್ರೆಗಳಲ್ಲಿ ಕಂತಿಯನ್ನು ಅಲಕ್ಷಿಸಿರುವುದನ್ನು ಕಾಣುತ್ತೇವೆ.

### ಕರ್ಣಾಟಕ ಕವಿಚರಿತೆಯ ನಂತರ ಬಂದ ಕೆಲವು ಸಾಹಿತ್ಯಚರಿತ್ರೆಗಳು

ಎನ್.ಕೆ.ಕುಲಕರ್ಣಿಯವರ 'ಕನ್ನಡ ಸಾಹಿತ್ಯವಾಹಿನಿ' (೧೯೨೯), ಎಂ.ಜಿ.ವೆಂಕಟೇಶಯ್ಯನವರ 'ಕನ್ನಡ ಸಾಹಿತ್ಯ ಚರಿತ್ರೆಯ ಟಿಪ್ಪಣಿ' (೧೯೩೮), ಕೆ.ವೆಂಕಟರಾಮಪ್ಪನವರ 'ಕನ್ನಡಸಾಹಿತ್ಯ' (೧೯೩೯), ಬಿ.ಎಂ.ಶ್ರೀ ಅವರ 'ಕನ್ನಡ ಸಾಹಿತ್ಯ ಚರಿತ್ರೆ'[೧೨] ಮೊದಲಾದ ಸಾಹಿತ್ಯ ಚರಿತ್ರೆಗಳು ತಮ್ಮದೇ ಆದ ಹೊಸ ಆಯಾಮಗಳೊಂದಿಗೆ ರಚಿತವಾದವು.

ಎನ್.ಕೆ.ಕುಲಕರ್ಣಿಯವರ 'ಕನ್ನಡ ಸಾಹಿತ್ಯವಾಹಿನಿ'ಯನ್ನು ಕುರಿತು 'ಕನ್ನಡ ಸಾಹಿತ್ಯ ಚರಿತ್ರೆಯ ವಿಭಜನ ಕ್ರಮಗಳು' ಎಂಬ ಲೇಖನದಲ್ಲಿ[೧೩] ಡಿ.ಕೆ.ರಾಜೇಂದ್ರರು "ನಿರೂಪಣೆ ಬಹು ಸಂಕ್ಷೇಪವಾದರೂ, ಹಿಡಿದ ದಾರಿಯಲ್ಲಿ ಹೊಸತನವಿದೆ. ಸಾಹಿತ್ಯ ರೂಪಗಳಿಗೆ ಆದ್ಯತೆಕೊಟ್ಟು ಬರೆದ ಸಾಹಿತ್ಯ ಚರಿತ್ರೆಗಳಲ್ಲಿ ಪ್ರಾಯಃ ಇದೇ ಮೊದಲನೆಯದು" ಎಂದಿದ್ದಾರೆ. ಬಿ.ಎಂ.ಶ್ರೀ ಅವರ 'ಕನ್ನಡ ಸಾಹಿತ್ಯ ಚರಿತ್ರೆ'ಯು 'ಕನ್ನಡ ಕೈಪಿಡಿ' ಗ್ರಂಥದ ಐದನೆಯ ಭಾಗ, ದ್ವಿತೀಯ ಸಂಪುಟವಾಗಿ ಎರಡನೆಯ ಬಾರಿ ಮುದ್ರಿತವಾಗಿ ೧೯೪೭ರಲ್ಲಿ ಪುನಃ ಪ್ರಕಟಗೊಂಡಿತು. ಆದರೆ ಇದು 'ಕರ್ಣಾಟಕ ಕವಿಚರಿತೆ' ತೃತೀಯ ಸಂಪುಟವು ಹೊರಬರುವ (೧೯೨೯) ಪೂರ್ವದಲ್ಲಿಯೇ ರಚಿತವಾಗಿತ್ತೆಂದು ಇದರ ಮುನ್ನುಡಿಯಲ್ಲಿ ಕುವೆಂಪು ಅವರು ತಿಳಿಸಿದ್ದಾರೆ. ಆರ್.ನರಸಿಂಹಾಚಾರ್ಯರ 'History of Kannada Literature'ಎಂಬ ೭೭ ಪುಟಗಳ ಪುಟ್ಟ ಗ್ರಂಥವು ೧೯೪೦ರಲ್ಲಿ ಪ್ರಕಟವಾಗಿದೆ. ಇದು ಕವಿಚರಿತ್ರೆಯನ್ನು ಕುರಿತಾಗಿ ಮಾಡಿರುವ ಆಂಗ್ಲ ಉಪನ್ಯಾಸಗಳ ಸಂಗ್ರಹ. ಕನ್ನಡ ಸಾಹಿತ್ಯದ ಪ್ರಾಚೀನತೆ, ತೆಲುಗು, ತಮಿಳು ಮತ್ತು ಸಂಸ್ಕೃತಗಳೊಡನೆ ಕನ್ನಡದ ಸಂಬಂಧ ಮುಂತಾದ ವಿಷಯಗಳು ವಿಸ್ತಾರವಾಗಿ ಪ್ರಸ್ತಾಪಗೊಂಡಿವೆ.

೧೯೫೦ರ ಕಾಲದಲ್ಲಿ ಬಂದ ಈ ಸಾಹಿತ್ಯ ಚರಿತ್ರೆಯನ್ನು ಮೊದಲ ಹಂತವೆಂದು ಪರಿಗಣಿಸಿದಲ್ಲಿ ಮುಂದೆ ರಂ.ಶ್ರೀ ಮುಗಳಿಯವರ ಕನ್ನಡ ಸಾಹಿತ್ಯ ಚರಿತ್ರೆ, ಧರ್ಮಾಧಾರಿತ ಕಾಲವಿಂಗಡಣೆಯನ್ನು ಆಯಾಕಾಲದ ಪ್ರಮುಖ ಕವಿಗಳ ಹೆಸರಿನಲ್ಲಿ ಪಂಪಯುಗ ಬಸವಯುಗ ಮೊದಲಾಗಿ ಕರೆದು ಮಾನದಂಡಗಳನ್ನು ರೂಪಿಸಿ, ಪ್ರಸಿದ್ಧ ವಿದ್ವಾಂಸರ ಲೇಖನಗಳಲ್ಲಿ ಚರ್ಚಿತವಾದ ವಿಚಾರಗಳ ಕಾವ್ಯವಿಮರ್ಶೆಯನ್ನು ಬಳಸಿಕೊಂಡು, ಯುಗವೈಶಿಷ್ಟ್ಯಗಳನ್ನು ಎತ್ತಿಹಿಡಿದ ಕೃತಿಯಾಗಿದೆ.

ಸಾಹಿತ್ಯದ ವಿಭಿನ್ನ ಪ್ರಕಾರಗಳನ್ನೇ ಪ್ರಮುಖ ವಿಭಾಗಗಳನ್ನಾಗಿಸಿಕೊಂಡು ರಚಿಸಿಲಾದ ಮರಿಯಪ್ಪ ಭಟ್ಟರ 'ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ'[೧೪] (೧೯೬೦), ಪ್ರಾಚೀನಕಾಲ, ಮಧ್ಯಕಾಲ, ಅರ್ವಾಚೀನ ಕಾಲವೆಂಬ ವಿಭಿನ್ನ ಘಟ್ಟಗಳಲ್ಲಿನ ಸಾಹಿತ್ಯಗಳನ್ನು ವಿಭಾಗಿಸಿಕೊಂಡು ರಚಿಸಿದ ರಂಶ್ರೀ.ಮುಗಳಿಯವರ 'ಕನ್ನಡ ಸಾಹಿತ್ಯದ ಇತಿಹಾಸ'[೧೫] (೧೯೬೩), ಪಂಪಪೂರ್ವಯುಗ, ಹರಿಹರಯುಗ ಅಥವಾ ಸ್ವಾತಂತ್ರ್ಯಯುಗ, ಕುಮಾರವ್ಯಾಸಯುಗ

ಅಥವಾ ಷಟ್ಪದಿಯುಗ ಎಂಬ ವಿಭಾಗಕ್ರಮದಲ್ಲಿ ಹಳಗನ್ನಡ, ನಡುಗನ್ನಡದ ಸಾಹಿತ್ಯವನ್ನು ಕುರಿತು ೧೯೬೪ರಲ್ಲಿ ಹೊರಬಂದ ತ.ಸು.ಶಾಮರಾಯರ 'ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ, ೧೯೭೦ರಲ್ಲಿ ಪ್ರಕಟಿಸಲಾದ ಎನ್.ಅನಂತರಂಗಾಚಾರ್ ಅವರ 'ಸಾಹಿತ್ಯಭಾರತೀ'[೧೪], ೧೯೭೪ರಲ್ಲಿ ಹೊರಬಂದ ಕೆ.ವೆಂಕಟರಾಮಪ್ಪನವರ 'ಸಾಹಿತ್ಯಚರಿತ್ರೆ'[೧೫] ೧೯೮೧ರ ಡಿ.ಎಲ್.ಎನ್ ಅವರ 'ಕನ್ನಡ ಸಾಹಿತ್ಯ ಇತಿಹಾಸ' (ತರಗತಿ ಪಾಠದ ಟಿಪ್ಪಣಿಗಳು). ಇವುಗಳಲ್ಲದೆ ನಿಗದಿತ ಕಾಲವನ್ನು ಆಧರಿಸಿದ ಸಾಹಿತ್ಯ ಚರಿತ್ರೆಗಳು, ಕೆಲವೊಂದು ಧರ್ಮದಡಿಯಲ್ಲಿ ಬಂದ ಸಾಹಿತ್ಯಗಳು, ಶಾಸ್ತ್ರ ಗ್ರಂಥ, ಶಾಸನ ಸಾಹಿತ್ಯ, ಸಾಹಿತ್ಯದ ಪ್ರಕಾರಗಳನ್ನು ಆಧರಿಸಿ ರಚಿಸಲಾದವು, ಪಿಹೆಚ್.ಡಿ ಮೊದಲಾದ ಮಹಾಪ್ರಬಂಧ, ವಿಮರ್ಶೆಗಳ ಜೊತೆಯಲ್ಲಿ ವಿಶ್ವವಿದ್ಯಾಲಯಗಳು ಹೊರತಂದಿರುವ ಸಾಹಿತ್ಯ ಚರಿತ್ರೆಗಳು ಈ ಕ್ಷೇತ್ರದ ಗ್ರಂಥಗಳನ್ನು ಇನ್ನಷ್ಟು ಸಂವೃದ್ಧಿಗೊಳಿಸಿದವು. ಅವುಗಳಲ್ಲಿ ಕೆಲವನ್ನು ಹೆಸರಿಸುವುದಾದರೆ ೧೯೭೬ರಲ್ಲಿ ಹೊರಬಂದ ಸದಾನಂದ ಕನವಳ್ಳೀ ಚನ್ನಪ್ಪ ಕೆರಿಮನಿಯವರ 'ವೀರಶೈವ ಸಾಹಿತ್ಯ ಸಮೀಕ್ಷೆ', ಇದೇ ಕಾಲದಲ್ಲಿ ಬಂದ ವಿ.ಶಿವಾನಂದ ಅವರ ಶತಮಾನ ಕನ್ನಡ ಸಾಹಿತ್ಯ ಚರಿತ್ರೆ – (ವೀರಶೈವ ವಸಂತಕಾಲ) ಕೃತಿಯು ೧೫ನೆಯ ಶತಮಾನದ ವೀರಶೈವ ಸಾಹಿತ್ಯವನ್ನು ಕುರಿತಾದ ಸಾಹಿತ್ಯ ಚರಿತ್ರೆಯಾಗಿದೆ.

ನಿರ್ದಿಷ್ಟ ರಾಜಾಶ್ರಯಗಳಲ್ಲಿನ ಸಾಹಿತ್ಯ ಕೃತಿಗಳನ್ನು ಕುರಿತಂತೆ ರಚಿತವಾದ ಕೃತಿಗಳೆಂದರೆ ೧೯೩೮ರಲ್ಲಿ ಪ್ರಕಟವಾದ ಎನ್ ಅನಂತರಂಗಾಚಾರ್ ಅವರ 'ಕಲಾಸಾಹಿತ್ಯಗಳಿಗೆ ಮೈಸೂರರಸರ ಪ್ರೋತ್ಸಾಹ', ಡಿ.ಎಸ್.ರಾಮು ಅವರ ಕನ್ನಡ ಸಾಹಿತ್ಯ ಮತ್ತು ರಾಜಾಶ್ರಯ (೧೯೪೭), ೧೯೫೫ರಲ್ಲಿ ಹೊರಬಂದ ಡಿ.ಟಿ.ರಂಗಸ್ವಾಮಿಯವರ 'ಕನ್ನಡ ಸಾಹಿತ್ಯ ಮತ್ತು ಮೈಸೂರೊಡೆಯರು', ಸೀತಾರಾಮ್ ಎಸ್. ಜಾಗೀರದಾರ್ ಅವರ 'ಕನ್ನಡ ಸಾಹಿತ್ಯದ ಬೆಳವಣಿಗೆ ಮತ್ತು ರಾಷ್ಟ್ರಕೂಟ ಅರಸರ ಮನೆತನ' (೧೯೭೨), ಕೆ.ವೆಂಕಟರಾಮಪ್ಪನವರ 'ಶ್ರೀಕೃಷ್ಣದೇವರಾಯನ ಕಾಲದ ಕರ್ಣಾಟಾಂಧ್ರ ಸಾಹಿತ್ಯ ಸಮೀಕ್ಷೆ' (೧೯೭೪), ೧೯೭೭ರ ವಿ.ಶಿವಾನಂದರ 'ವಿಜಯನಗರದ ಪ್ರೌಢರಾಯನ ಕಾಲದ ಕನ್ನಡ ಸಾಹಿತ್ಯ', ಮೊದಲಾದವುಗಳನ್ನು ಹೆಸರಿಸಬಹುದು.

ಇದೇ ರೀತಿ ಪಿಹೆಚ್.ಡಿ ಮಹಾಪ್ರಬಂಧಕ್ಕಾಗಿ ರಚಿಸಲಾದ ಹೆಚ್.ಟಿ.ಸಾಸನೂರು ಅವರ 'ಇಲವೆಂತ್ ಅಂಡ್ ಟ್ವೆಲ್ತ್ ಸೆಂಚುರಿ ಕನ್ನಡ ಲಿಟರೇಚರ್' (೧೯೫೩), ಕೆ.ಶ್ರೀಕಂಠಯ್ಯ ಅವರ 'ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ', ಎಸ್.ಜಿ.ಕಾಡದೇವರ ಮಠ ಅವರ 'ಕನ್ನಡ ಲಿಟರೇಚರ್ ಡ್ಯೂರಿಂಗ್ ದಿ ಪೀರಿಯಡ್ ಆಫ್ ಕೆಳದಿ ಚೀಫ್ಸ್' (೧೯೫೪), ಸಾ.ಶಿ.ಮರುಳಯ್ಯ ಅವರ 'ಕೆಳದಿ ಅರಸರ ಕಾಲದ ಕನ್ನಡ ಸಾಹಿತ್ಯ'[೧೬], ಶ್ರೀನಿವಾಸ ಹಾವನೂರ ಅವರ 'ಹೊಸಗನ್ನಡದ ಅರುಣೋದಯ'[೧೭] (೧೯೭೪), ರಾ.ಯ.ಧಾರವಾಡಕರ ಅವರ 'ಹೊಸಗನ್ನಡ ಸಾಹಿತ್ಯದ ಉದಯಕಾಲ' (ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ) (೧೯೭೫), ವೆಂಕಟೇಶಸಾಂಗ್ಲಿಯವರ 'ಸಿರಿಗನ್ನಡ ಗ್ರಂಥಕರ್ತರಕೋಶ, ಇವುಗಳಲ್ಲದೆ ೧೯೭೫ರಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯವು ಹೊರತಂದ ಹತ್ತು ಸಂಪುಟಗಳ 'ಸಾಹಿತ್ಯ ಚರಿತ್ರೆ'[೧೮], ೧೯೭೪–೧೯೮೧ರ ಅವಧಿಯಲ್ಲಿ ಮೈಸೂರು ವಿಶ್ವವಿದ್ಯಾನಿಲಯವು ಪ್ರಕಟಿಸಿದ ೧೦ ಸಂಪುಟಗಳ ಸಾಹಿತ್ಯಚರಿತ್ರೆ.[೧೯] ಕನ್ನಡ ಸಾಹಿತ್ಯ ಚರಿತ್ರೆಯ ಮಹತ್ವದ ಕೃತಿಗಳಾಗಿವೆ.

ಈ ಎಲ್ಲ ಸಾಹಿತ್ಯ ಚರಿತ್ರೆಗಳೊಂದಿಗೆ ಹಂಪಿ ಕನ್ನಡ ವಿಶ್ವವಿದ್ಯಾಲಯ ಹೊರತಂದಿರುವ 'ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ'[೨೦] ಪ್ರಸಕ್ತ ಅಧ್ಯಯನದ ದೃಷ್ಟಿಯಿಂದ ವಿಶೇಷವಾಗಿ ಪರಿಗಣಿಸಬೇಕಾಗಿರುವ ಕೃತಿಯಾಗಿದೆ. ಎಚ್.ಎಸ್.ಶ್ರೀಮತಿ ಅವರು ಸಂಪಾದಿಸಿರುವ ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಎಂಟು ವಿಭಿನ್ನ ಅಧ್ಯಾಯಗಳಲ್ಲಿ ಸುಮಾರು ೭೫೦ ಪುಟಗಳ ಸುದೀರ್ಘ ಮಹಿಳಾ ಸಾಹಿತ್ಯ ಚರಿತ್ರೆಯನ್ನು ಒಳಗೊಂಡಿದೆ.

ಸಾಹಿತ್ಯ ಚರಿತ್ರೆಗಳು ಸಾಕಷ್ಟು ಸೃಷ್ಟಿಯಾದರೂ, ಕೆಲವೊಂದು ಕೊರತೆಗಳು ತುಂಬಲಾರದಾಗಿದ್ದವು. ಇದಕ್ಕೊಂದು ನಿದರ್ಶನವೆಂಬಂತೆ, ಇಪ್ಪತ್ತನೆಯ ಶತಮಾನದ ಮೊದಲ ಲೇಖಕಿ ಎಂದು ಗುರುತಿಸುವ ನಂಜನಗೂಡು ತಿರುಮಲಾಂಬ ಅವರ ಕುರಿತು ಬರೆಯುವಾಗ ಪ್ರೊ.ಚಿ.ನ.ಮಂಗಳ ಅವರಿಗೆ ಮಾಹಿತಿ ಕೊರತೆ ಉಂಟಾದುದನ್ನೂ, ಅದರಿಂದಾದ ಪ್ರಮಾದವನ್ನೂ ಕುರಿತು ಅವರೇ ತಿಳಿಸಿದ್ದಾರೆ. ಅವರು ಲೇಖನ ರಚಿಸಿದ ಕಾಲದಲ್ಲಿ ಜೀವಂತವಾಗಿದ್ದ ತಿರುಮಲಾಂಬ ಅವರನ್ನು ದಿವಂಗತ ತಿರುಮಲಾಂಬ ಎಂದು ಪ್ರಕಟಿಸಿ, ಆನಂತರ ತಿರುಮಲಾಂಬ ಅವರು ಮದ್ರಾಸಿನಲ್ಲಿ ಅವರ ಸೋದರಳಿಯ ರಂಗ ಅವರ ಮನೆಯಲ್ಲಿರುವುದನ್ನು ತಿಳಿದು ಅಲ್ಲಿಗೆ ಖುದ್ದಾಗಿ ಹೋಗಿ ಅವರಲ್ಲಿ ಕ್ಷಮಾಪಣೆ ಕೇಳಿದರಂತೆ. ಸರಸ್ವತಿ ಬಾಯಿ ರಾಜವಾಡೆ ಅವರ ಕುರಿತಂತೆಯೂ ಕರ್ನಾಟಕ ಲೇಖಕಿಯರ ಸಂಘದಿಂದ ಇದೇ ರೀತಿಯ ಪ್ರಮಾದ ನಡೆದಿದೆ. ಇದು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಲೇಖಕಿಯರ ಮಾಹಿತಿಯ ಕೊರತೆ ಯಾವ ಮಟ್ಟದಲ್ಲಿತ್ತೆಂಬುದಕ್ಕೆ ನಿದರ್ಶನವಾಗಿದೆ.

**ಸಾಹಿತ್ಯಚರಿತ್ರೆಯಲ್ಲಿ ಲೇಖಕಿಯರ ಸ್ಥಾನಮಾನ:**

'ಕನ್ನಡ ಸಾಹಿತ್ಯ ಚರಿತ್ರೆಗಳಲ್ಲಿ ಲೇಖಕಿಯರ ಪ್ರತಿನಿಧೀಕರಣ' ಕುರಿತಾದ ಈ ಅಧ್ಯಾಯದಲ್ಲಿ ಸಾಹಿತ್ಯ ಚರಿತ್ರೆಗಳಲ್ಲಿ ಆಧುನಿಕ ಪೂರ್ವ ಕಾಲಘಟ್ಟದ ಕವಿಯತ್ರಿಯರು ಪಡೆದ ಸ್ಥಾನಮಾನಗಳನ್ನು ಕುರಿತು ಚರ್ಚಿಸಲಾಗಿದೆ. ಪುರುಷ ಪ್ರಧಾನ ಸಮಾಜದಲ್ಲಿನ ರಾಜಕೀಯ, ಸಾಮಾಜಿಕ, ಧಾರ್ಮಿಕ ಸ್ಥಿತ್ಯಂತರಗಳ ನಡುವೆಯೂ ತನ್ನ ಹೆಜ್ಜೆಯನ್ನೂರಲು ಹೆಣಗಾಡಿದ ಪರಿಸ್ಥಿತಿ, ಪರಿಶ್ರಮದ ಹಿಂದಿರುವ ಮಹಿಳೆಯರ ವಿಶಿಷ್ಟ ಸಾಧನೆಯನ್ನು ಗುರುತಿಸುವಲ್ಲಿ ಸಾಹಿತ್ಯ ಚರಿತ್ರೆಗಳು ಪರಿಣಾಮಕಾರಿಯಾಗಿವೆಯೆ? ಸಾಹಿತ್ಯದ ವಿಭಿನ್ನ ಪ್ರಕಾರಗಳಲ್ಲಿ ಕಂಡು ಬರುವ ಮಹಿಳೆಯರ ಪ್ರಯೋಗಗಳ ಸಮಗ್ರ ಚಿತ್ರಣ ನೀಡುವುದರಲ್ಲಿ, ಸಾಹಿತ್ಯ ಕ್ಷೇತ್ರದ ಸಾಧಕಿಯರನ್ನೂ ಅವರ ಪಠ್ಯಗಳನ್ನು ಉತ್ತಮ ವಿಮರ್ಶೆಗೆ ಒಳಪಡಿಸುವಲ್ಲಿ, ಸಮಾನ ವಿಚಾರಗಳ ಚರ್ಚೆಗಳಲ್ಲಿ ಲೇಖಕಿಯರ ಸಾಹಿತ್ಯವನ್ನು ಮುಖ್ಯ ಆಕರವನ್ನಾಗಿಸಿಕೊಳ್ಳುವಲ್ಲಿ ಮಹಿಳಾ ಸಾಹಿತ್ಯವನ್ನು ಎಷ್ಟು ಪರಿಣಾಮಕಾರಿಯಾಗಿ ಬಳಸಿಕೊಳ್ಳಲಾಗಿದೆ ಎಂಬುದೂ ಇಲ್ಲಿ ಮುಖ್ಯವೆನಿಸುತ್ತದೆ.

ಕನ್ನಡನಾಡಿನ ವೀರ ವನಿತೆಯರು ಎಂದ ಕೂಡಲೆ ಕಿತ್ತೂರು ರಾಣಿ ಚೆನ್ನಮ್ಮ, ಒನಕೆ ಓಬವ್ವ, ಬೆಳವಡಿ ಮಲ್ಲಮ್ಮ ಎಂಬ ಮೂವರನ್ನು ಕರ್ನಾಟಕ ಚರಿತ್ರೆಯಲ್ಲಿ ಹೆಸರಿಸುವಂತೆ ಬಹುತೇಕ ಕನ್ನಡ ಸಾಹಿತ್ಯ ಚರಿತ್ರೆಗಳಲ್ಲಿ ಅಕ್ಕಮಹಾದೇವಿ, ಸಂಚಿಹೊನ್ನಮ್ಮ, ಹೆಳವನಕಟ್ಟೆ ಗಿರಿಯಮ್ಮ ಮೂರುಜನರು ಮಾತ್ರ ಉಲ್ಲೇಖಿತರಾಗಿದ್ದಾರೆ. ನೆಪಮಾತ್ರಕ್ಕೆ ಎಂಬಂತೆಯೋ ಅಥವಾ ಮಹಿಳೆಯರನ್ನು ಹೆಸರಿಸಿ ಪರಿಸಮಾಪ್ತಿ ಗೊಳಿಸುವ ವಾಡಿಕೆಯಂತೆಯೋ ಮೂರು–ನಾಲ್ಕು ಕವಯತ್ರಿಯರು ಸ್ಥಾನ ಪಡೆದಿರುವುದನ್ನು ಬಹುತೇಕ ಸಾಹಿತ್ಯ ಚರಿತ್ರೆಗಳಲ್ಲಿ ಕಾಣಬಹುದು. ಕವಿಗಳನ್ನು ಉಲ್ಲೇಖಿಸುವಾಗ ಚರಿತ್ರೆಕಾರರು ತೋರುವ ಆಸಕ್ತಿ ಕವಯತ್ರಿಯರನ್ನು ಹೆಸರಿಸುವಾಗ ತೋರುವುದಿಲ್ಲ ಎಂಬುದು ಈ ಕೆಳಗಿನ ಸಮೀಕ್ಷೆಯಲ್ಲಿ ಮೇಲುನೋಟಕ್ಕೇ ಸಾಬೀತಾಗುತ್ತದೆ.

ರಂ.ಶ್ರೀ.ಮುಗಳಿಯವರ ಕನ್ನಡ ಸಾಹಿತ್ಯ ಚರಿತ್ರೆ ಕೃತಿಯಲ್ಲಿ[೨೧] ಕಂತಿ, ಹೆಳವನಕಟ್ಟೆ ಗಿರಿಯಮ್ಮರನ್ನು ಹೆಸರಿಸಲಾಗಿದ್ದು ಕೇವಲ ಅಕ್ಕಮಹಾದೇವಿ, ಹೊನ್ನಮ್ಮರನ್ನು ಕುರಿತ ವಿವರಣೆ ದೊರಕುತ್ತದೆ. ಇದೇ ವಿಭಜನಾಕ್ರಮವನ್ನನುಸರಿಸಿ ಬಂದ ತ.ಸು.ಶಾಮರಾಯರ ಕನ್ನಡ ಸಾಹಿತ್ಯ ಚರಿತ್ರೆ ಕೃತಿಯಲ್ಲಿಯೂ ಕೂಡ ಮಹಾದೇವಿ ಅಕ್ಕ, ಹೆಳವನಕಟ್ಟೆ ಗಿರಿಯಮ್ಮ, ಸಂಚಿ ಹೊನ್ನಮ್ಮ, ಶೃಂಗಾರಮ್ಮ ಕವಯತ್ರಿಯರು ಮಾತ್ರ ಉಲ್ಲೇಖಿತರಾಗಿದ್ದಾರೆ. ಹೆಚ್.ನಂಜೇಗೌಡ ಅವರ ಕನ್ನಡ ಸಾಹಿತ್ಯಚರಿತ್ರೆಯಲ್ಲಿ ಈ ಮೂವರೊಂದಿಗೆ ಮುಕ್ತಾಯಕ್ಕನ ಉಲ್ಲೇಖವೊಂದು ಹೆಚ್ಚುವರಿಯಾಗಿದೆ. ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟವಾದ ಇವರದೇ ಸಾಹಿತ್ಯ ಚರಿತ್ರೆಯಲ್ಲಿ ಕೇವಲ ಮಹಾದೇವಿ ಅಕ್ಕ, ಸಂಚಿಹೊನ್ನಮ್ಮರ ವಿವರಣೆಗಳು ದೊರಕುತ್ತದೆ. 'ಕರ್ನಾಟಕ

ಸಂಸ್ಕೃತಿ ಸಮೀಕ್ಷೆ' ಕೃತಿಯಲ್ಲಿ ಎಚ್.ತಿಪ್ಪೇರುದ್ರಸ್ವಾಮಿಯವರು ಸಾಹಿತ್ಯದಲ್ಲಿ ಸಂಸ್ಕೃತಿ ವಿಭಾಗದಲ್ಲಿ ಶರಣರ ಸಾಹಿತ್ಯದೊಂದಿಗೆ ಅಕ್ಕಮಹಾದೇವಿ, ಆಯ್ದಕ್ಕಿ ಲಕ್ಕಮ್ಮರ ವಚನಗಳನ್ನು ಉಲ್ಲೇಖಿಸಿದ್ದಾರೆ. ಕನ್ನಡ ಸಾಹಿತ್ಯ ಚರಿತ್ರೆ ಒಂದು ಸಮೀಕ್ಷೆ ಎಂಬ ಕೃತಿಯನ್ನು ರಚಿಸಿರುವ ಎಲ್.ಎಸ್.ಕಾಡದೇವರಮಠ ಅವರು ಪ್ರಾಚೀನ ಕಾಲದಿಂದ ಹೊಸಗನ್ನಡ ದಲಿತ ಬಂಡಾಯ ಸಾಹಿತ್ಯದವರೆಗೂ ಸಮೀಕ್ಷೆ ನಡೆಸಿ ಪ್ರಾಚೀನ ಸಾಹಿತ್ಯದ ವಿಭಾಗದಲ್ಲಿ ಅಕ್ಕಮಹಾದೇವಿ, ಅಮ್ಮುಗೆ ರಾಯಮ್ಮ, ಆಯ್ದಕ್ಕಿ ಲಕ್ಕಮ್ಮ, ಮುಕ್ತಾಯಕ್ಕ ನಾಲ್ಕುಜನ ವಚನಕಾರ್ತಿಯರ ಉಲ್ಲೇಖ ನೀಡಿದ್ದಾರೆ. ವಿದ್ಯಾರ್ಥಿಗಳನ್ನು ಗಮನದಲ್ಲಿರಿಸಿಕೊಂಡು, ಸ್ಪರ್ಧಾತ್ಮಕ ಪರೀಕ್ಷೆಗಳಿಗಾಗಿ ಸಿದ್ಧಪಡಿಸಿದ ರಾಜಪ್ಪ ದಳವಾಯಿಯವರ ಕನ್ನಡ ಸಾಹಿತ್ಯಕೋಶದ ಹಳಗನ್ನಡ ಹಾಗೂ ನಡುಗನ್ನಡದ ವಿಭಾಗದಲ್ಲಿ ಅಕ್ಕಮಹಾದೇವಿ ಹಾಗೂ ಸಂಚಿಹೊನ್ನಮ್ಮರಿಬ್ಬರು ಮಹಿಳೆಯರು ಮಾತ್ರ ಸೇರಿದ್ದಾರೆ. ಸಾಧಾರಣವಾಗಿ ಕಂತಿಯನ್ನು ಗಣನೆಗೆ ತೆಗೆದುಕೊಂಡಿರುವುದು ಅಪರೂಪವೇ ಆಗಿದೆ. ಅಂತೆಯೇ ಹರಿದಾಸ ಸಾಹಿತ್ಯ ಘಟ್ಟದಲ್ಲಿಯೂ ಕೂಡ ಹೆಳವನಕಟ್ಟೆ ಗಿರಿಯಮ್ಮನನ್ನು ಹೊರತು ಪಡಿಸಿದರೆ ಮತ್ತಾವ ಮಹಿಳೆಯ ಉಲ್ಲೇಖವೂ ಕಾಣಸಿಗುವುದಿಲ್ಲ. ಎಸ್.ಎಂ ಹಿರೇಮಠರ ಕೃತಿ, ಎಚ್.ತಿಪ್ಪೇರುದ್ರಸ್ವಾಮಿಯವರ ಕರ್ಣಾಟಕ ಸಂಸ್ಕೃತಿ ಸಮೀಕ್ಷೆ[೨೨] ಮೊದಲಾದ ಕೃತಿಗಳಲ್ಲಿ ಒಬ್ಬ ಮಹಿಳಾ ಹರಿದಾಸರ ಉಲ್ಲೇಖವೂ ಇಲ್ಲ.

ವಿಭಿನ್ನ ದೃಷ್ಟಿಕೋನಗಳಿಂದ ರಚಿತವಾದ ಸಾಹಿತ್ಯ ಹಾಗೂ ಸಾಂಸ್ಕೃತಿಕ ಚರಿತ್ರೆಗಳನ್ನು ಗಮನಿಸುವುದಾದಲ್ಲಿ, ಅಲ್ಲಿಯೂ ಮಹಿಳೆಯರ ಅವಗಣನೆ ಎದ್ದು ಕಾಣುತ್ತದೆ. ಎನ್.ಅನಂತರಂಗಾಚಾರ್ ಅವರ ಸಾಹಿತ್ಯ ಭಾರತಿ[೨೩] ಕೃತಿಯಲ್ಲಿ ಐತಿಹಾಸಿಕ ಕಾವ್ಯಗಳು ಎಂಬ ಶೀರ್ಷಿಕೆಯಡಿ ಬಿಲ್ಹಣನ 'ವಿಕ್ರಮಾಂಕದೇವ ಚರಿತೆ'ಯನ್ನು ಮಾತ್ರ ಉಲ್ಲೇಖಿಸಿದ್ದಾರೆ. ವಿಜಯನಗರ ಕಾಲದ ಎರಡು ಮಹತ್ವದ ಐತಿಹಾಸಿಕ ಕಾವ್ಯಗಳೆಂಬ ಪ್ರಖ್ಯಾತಿಗೆ ಒಳಗಾದ ಗಂಗಾಂಬಿಕೆಯ 'ವೀರಕಂಪಣರಾಯ ಚರಿತೆ' ಯಾಗಲೀ ತಿರುಮಲಾಂಬಾ ರಚಿಸಿರುವ 'ವರದಾಂಬಿಕಾ ಪರಿಣಯಚಂಪೂ' ಕೃತಿಯ ಕುರಿತಾಗಲೀ ಮಾಹಿತಿ ಇಲ್ಲ. ಕೀರ್ತಿನಾಥ ಕುರ್ತುಕೋಟಿಯವರ ಯುಗಧರ್ಮ ಹಾಗೂ ಸಾಹಿತ್ಯ ದರ್ಶನ ಕೃತಿಯು[೨೪] ಹೊಸಗನ್ನಡದ ಅನೇಕ ಪ್ರಕಾರಗಳಲ್ಲಿ ಬಂದ ಕೃತಿಗಳ ವಿಮರ್ಶೆಯನ್ನೊಳಗೊಂಡಿದೆ. ಇದು ಕವಿ–ಲೇಖಕರ ಕೃತಿಗಳೊಂದಿಗೆ ಅವರನ್ನು ಪರಿಚಯಿಸುತ್ತದೆ. ಈ ಗ್ರಂಥದಲ್ಲಿ ಕಾವ್ಯ, ಮಹಾಕಾವ್ಯ ನಾಟಕ, ಸಣ್ಣಕತೆ, ಕಾದಂಬರಿ, ಇದರ ವಿಭಾಗವಾಗಿ ಸಾಮಾಜಿಕತೆಯ ಅರಿವು, ಆದರ್ಶವಾದಿತ್ವ, ವಿನೋದಪರತೆ, ಐತಿಹಾಸಿಕ ಕಾದಂಬರಿ, ಕೆಲವು ಹೊಸಕಾದಂಬರಿಗಳು, ಸಾಹಿತ್ಯ–ವಿಮರ್ಶೆ ಇವೇ ಮೊದಲಾದ ವಿಭಾಗಗಳಲ್ಲಿ ಕೆಲವು ಸಾಹಿತಿಗಳ ಕೃತಿಗಳನ್ನು ಕುರಿತು ವಿಮರ್ಶೆ ಮಾಡಿದ್ದಾರೆ. ವೀಣಾಶಾಂತೇಶ್ವರ, ರಾಜಲಕ್ಷ್ಮಿ.ಎನ್.ರಾವ್ ಅವರ ಕೃತಿಗಳನ್ನು ಹೊರತುಪಡಿಸಿದರೆ ಕೀರ್ತಿನಾಥ ಕುರ್ತುಕೋಟಿ ಅವರು ತಮ್ಮ ಈ ವಿಮರ್ಶೆಗಳಿಗೆ ಮತ್ಯಾವ ಲೇಖಕಿಯರ ಕೃತಿಗಳನ್ನೂ ಬಳಸಿಕೊಂಡಿಲ್ಲ.

ಹೊಸಗನ್ನಡ ಕಾಲಘಟ್ಟದಲ್ಲಿಯೂ ಇಂಥ ಕೊರತೆ ಹೇರಳವಾಗಿ ಕಂಡುಬರುತ್ತದೆ. 'ಕನ್ನಡ ಸಾಹಿತ್ಯ ಚರಿತ್ರೆಯ ಘಟ್ಟಗಳು' ಕೃತಿಯಲ್ಲಿ ಕಾದಂಬರಿಕಾರ್ತಿಯರಲ್ಲಿ ತ್ರಿವೇಣಿಯನ್ನು ಮಾತ್ರ ಹೆಸರಿಸಿ ಉಳಿದವರನ್ನು ಮುಂತಾದವರು ಎಂದು ಸೂಚಿಸಲಾಗಿದೆ ಅಂತೆಯೇ ಸಣ್ಣಕತೆಯ ವಿಭಾಗದಲ್ಲಿ ಕೂಡ ಕೊಡಗಿನ ಗೌರಮ್ಮ, ಎಂ.ಕೆ.ಇಂದಿರಾ, ಎಚ್.ಎಸ್.ಪಾರ್ವತಿ, ಪ್ರೇಮಾಭಟ್ ಅವರನ್ನು ಮಾತ್ರ ಹೆಸರಿಸಲಾಗಿದೆ. ಕನ್ನಡ ಸಾಹಿತ್ಯ ಚರಿತ್ರೆ ಒಂದು ಸಮೀಕ್ಷೆ ಕೃತಿಯಲ್ಲಿ ಸುಮಾರು ೮೦ ಕವಿಗಳ ವಿವರಗಳೊಂದಿಗೆ ದಲಿತ ಬಂಡಾಯ ಸಾಹಿತ್ಯದಡಿಯಲ್ಲಿ ವಿಜಯಾದಬ್ಬೆ, ಮಾಲತಿ ಪಟ್ಟಣಶೆಟ್ಟಿಯರನ್ನು ಮಾತ್ರ ಉಲ್ಲೇಖಿಸಲಾಗಿದೆ. ರಾಜಪ್ಪ ದಳವಾಯಿಯವರ 'ಕನ್ನಡ ಸಾಹಿತ್ಯಕೋಶ'[೨೫] ಕೃತಿಯಲ್ಲಿ ಹೊಸಗನ್ನಡದ ಪ್ರಮುಖ ಕೃತಿಗಾರರ ಪಟ್ಟಿಯ ನಾಲ್ಕು ವಿಭಾಗಗಳಲ್ಲಿ ಸುಮಾರು ೧೪೧ ಕವಿಗಳೊಂದಿಗೆ ತ್ರಿವೇಣಿ, ಕೊಡಗಿನ ಗೌರಮ್ಮ, ವಾಣಿ, ಅನುಪಮಾ ನಿರಂಜನ, ಲಲಿತಾ ನಾಯಕ್, ವೀಣಾ ಶಾಂತೇಶ್ವರ, ಸಾರಾ ಅಬೂಬಕರ್, ವಿಜಯಾದಬ್ಬೆ ಎಂಟುಜನ ಲೇಖಕಿಯರು ಸ್ಥಾನಪಡೆದಿದ್ದಾರೆ.

ಇಲ್ಲಿನ ಸಮೀಕ್ಷೆಗೆ ಜನಪ್ರಿಯವೂ, ಹೆಚ್ಚು ಬಳಕೆಗೊಳ್ಳುವ ಕೆಲವು ಪ್ರಸಿದ್ಧ ಕೃತಿಗಳನ್ನು ಬಳಸಿಕೊಳ್ಳಲಾಗಿದೆ. ಇವು ಆರಂಭಕಾಲದ ಕೃತಿಗಳಲ್ಲ. ಈ ಸಾಹಿತ್ಯ ಚರಿತ್ರೆಗಳು ಪ್ರಕಟವಾಗುವ ವೇಳೆಗೆ ಅನೇಕ ಹಳಗನ್ನಡ ಕೃತಿಗಳ ಮುದ್ರಣಗಳು, ಸಂಶೋಧನೆ, ವಿಮರ್ಶೆ, ನಡೆದು ಲೇಖಕಿಯರ ಕುರಿತಾದ ಅನೇಕ ಮಹತ್ವದ ಕೃತಿಗಳು, ವಿಚಾರಗಳು ಹೊರಬಂದಿದ್ದವು. ಆದರೂ ಸಾಹಿತ್ಯಚರಿತ್ರೆಯ ದಾಖಲೀಕರಣದಲ್ಲಿ ಅವುಗಳನ್ನು ಬಳಸಿಕೊಂಡಿಲ್ಲ.

ಇಪ್ಪತ್ತನೆಯ ಶತಮಾನದ ಆರಂಭಕಾಲದಿಂದಲೂ ರಚಿತವಾಗುತ್ತಾ ಬಂದಿರುವ ಸಾಹಿತ್ಯಚರಿತ್ರೆಗಳಲ್ಲಿ ಕವಿಗಳಿಗೆ ಹೋಲಿಸಿದರೆ ಕವಯತ್ರಿಯರಿಗೆ ಸಲ್ಲಬೇಕಾದ ಸ್ಥಾನ ಸಂಪೂರ್ಣವಾಗಿ ಸಂದಿಲ್ಲವೆನ್ನಬಹುದು. 'ಕರ್ಣಾಟಕ ಕವಿಚರಿತೆ'ಯಲ್ಲಿ ಉಲ್ಲೇಖಿತರಾದ ಅನೇಕ ಕವಯತ್ರಿಯರನ್ನು ಮುಂದಿನ ಹಲವಾರು ಸಾಹಿತ್ಯ ಚರಿತ್ರೆಗಳಲ್ಲಿ ಕೈಬಿಡಲಾಗಿದೆ. ಜೊತೆಗೆ ಆರಂಭಕಾಲದ ಸಾಹಿತ್ಯಚರಿತ್ರೆ ರಚನಾಕಾಲದಲ್ಲಿ ಮಾಹಿತಿ ಕೊರತೆಯಿಂದಾಗಿ ಸೇರ್ಪಡೆಯಾಗದ ಕೆಲವು ಕವಯತ್ರಿಯರು, ಇತರ ನಿರ್ದಿಷ್ಟ ಕ್ಷೇತ್ರದ ಸಂಶೋಧನೆಗಳ ಫಲದಿಂದ ಬೆಳಕಿಗೆ ಬಂದರೂ ಅವರನ್ನು ಮುಂದಿನ ಕೆಲವು ಸಾಹಿತ್ಯಚರಿತ್ರೆಗಳಲ್ಲಿ ಗಮನಿಸಿಲ್ಲದಿರುವುದು ಈ ಕ್ಷೇತ್ರದ ಅಸಮರ್ಪಕ ಕಾರ್ಯಕ್ಕೆ ಕಾರಣವಾಗಿದೆ. ರಾಜಾಶ್ರಯದ ವಿಚಾರವನ್ನು ತಿಳಿಸುವಾಗಲೂ ಕೂಡ ಕೆಲವೊಂದು ಮಾಹಿತಿಗಳನ್ನು ಕೈಬಿಡಲಾಗಿದೆ. ಉದಾಹರಣೆಗೆ ಕವಿ ಷಡಕ್ಷರಿಯನ್ನು ಕುರಿತು ವಿಮರ್ಶಿಸುವಾಗ ಈತ ಮೈಸೂರು ದೊರೆ ಚಿಕ್ಕದೇವರಾಯನ ಆಸ್ಥಾನದಲ್ಲಿ ಇದ್ದನೆ? ಇಲ್ಲವೆ? ಎನ್ನುವುದನ್ನು ಕುರಿತು ಮಾತ್ರ ಚರ್ಚಿಸಲಾಗುತ್ತದೆ. ಆದರೆ ಈತ ರಾಣಿ ಅಮೃತಾಜಮ್ಮಣ್ಣಿಯಿಂದ ಸನ್ಮಾನಿತನಾಗಿದ್ದಾನೆ. ಈ ಕುರಿತಾಗಿ ಕವಿಚರಿತೆಯಲ್ಲಿಯೂ ಉಲ್ಲೇಖವಿದೆ, ಗೋವಿಂದ ಪೈ ಅವರ ಸಂಶೋಧನಾ ಲೇಖನದಲ್ಲಿಯೂ ವಿಸ್ತೃತವಾಗಿ ಈ ಕುರಿತ ಚರ್ಚೆ ನಡೆದಿದೆ. ಆದರೂ ಮುಂದಿನ ಚರಿತ್ರೆಕಾರರು ಇದನ್ನು ಉಲ್ಲೇಖಿಸುವುದಿಲ್ಲ.

ಹಲವಾರು ಸಾಹಿತ್ಯಚರಿತ್ರೆಗಳಲ್ಲಿ ಕಂತಿಯ ಉಲ್ಲೇಖವೇ ಇಲ್ಲ. ಸಾಧಾರಣವಾಗಿ ಧಾರ್ಮಿಕ ಸಾಹಿತ್ಯಗಳೇ ಮೇಳೈಸಿರುವ ಪ್ರಾಚೀನ ಹಾಗು ನಡುಗನ್ನಡದ ಸಾಹಿತ್ಯಗಳಲ್ಲಿ ಮಹಿಳೆಯೋರ್ವಳು ವಿಭಿನ್ನರೀತಿಯ ಚಿತ್ರಕಾವ್ಯವನ್ನು ರಚಿಸಿರುವುದು ಮಹತ್ವದ ವಿಚಾರವೆನಿಸುತ್ತದೆ. ಅದರಲ್ಲಿಯೂ ನಾಗಚಂದ್ರನಂಥ ಕವಿಯೋರ್ವನಿಗೆ ಸವಾಲು ಹಾಕುವ ಧಾಟಿಯಲ್ಲಿ ರಚಿತವಾಗಿರುವ ಈ ಚಿತ್ರಕವಿತ್ವಕ್ಕೆ ಸಲ್ಲಬೇಕಿದ್ದ ಸ್ಥಾನ ದೊರೆಯದಿರುವುದು ಕವಿಯತ್ರಿಯೋರ್ವಳಿಗೆಸಗಿದ ಅನ್ಯಾಯವಾಗಿದೆ. ಈ ಹಿಂದೆ ಹೇಳಿರುವಂತೆ ವಚನಸಾಹಿತ್ಯದಲ್ಲಿ ಸಾಧಾರಣವಾಗಿ ಕಂಡುಬರುವುದು ಅಕ್ಕಮಹಾದೇವಿ, ಇವಳೊಂದಿಗೆ ಕೆಲವೊಂದು ಸಾಹಿತ್ಯ ಚರಿತ್ರೆಯಲ್ಲಿ ಅಮುಗೆ ರಾಯಮ್ಮ ಅಥವಾ ಲಕ್ಕಮ್ಮರನ್ನು ಉಲ್ಲೇಖಿಸಲಾಗಿದೆ. ಇದೇ ಕ್ರಮವನ್ನು ದಾಸಸಾಹಿತ್ಯದಡಿಯಲ್ಲಿಯೂ ಕಾಣುತ್ತೇವೆ.

ಧರ್ಮದ ಹಿನ್ನೆಲೆಯಲ್ಲಿನ ವಿಭಜನಾಕ್ರಮವನ್ನು ಗಮನಿಸಿದಲ್ಲಿ, ಮಹಿಳೆಯರು ಪುರುಷರು ನಿರ್ಮಿಸಿದ ಅಧಿಪತ್ಯ ಸಂಪ್ರದಾಯಮಾರ್ಗಗಳನ್ನು ಅನುಸರಿಸುತ್ತಾ, ಅನುಕರಿಸುತ್ತಾ ಅದರಡಿಯಲ್ಲಿ ತಮ್ಮ ಅನುಭವಗಳನ್ನು ಸಾಹಿತ್ಯರೂಪದಲ್ಲಿ ಅಭಿವ್ಯಕ್ತಿ ಪಡಿಸಿದ್ದಾರೆ ಎಂಬಂತೆಯೇ ಬಿಂಬಿತರಾಗಿದ್ದಾರೆ. ಸಾಹಿತ್ಯ ಪ್ರಕ್ರಿಯೆಯಲ್ಲಿ ಮಹಿಳೆಯರೂ ಇದ್ದರೆಂಬುದಷ್ಟೇ ಇಂಥ ದಾಖಲಾತಿಯ ವಿಚಾರವಾಗಿದೆ. ಕೆಲವೊಂದು ಸಾಹಿತ್ಯಚರಿತ್ರೆಯ ವಿಭಜನಾಕ್ರಮವು ಆಯಾ ಯುಗದ ಪ್ರಸಿದ್ಧ ಕವಿಗಳ ಯುಗಗಳೆಂದು ವಿಭಾಗಗೊಂಡಿವೆ. ಪಂಪಯುಗ, ಬಸವಯುಗ, ಕುಮಾರವ್ಯಾಸಯುಗ ಮೊದಲಾದ ವಿಭಜನಾಕ್ರಮಗಳು ಪುರುಷ ಪ್ರಾಧಾನ್ಯವನ್ನು ಎತ್ತಿಹಿಡಿಯುವ ಮನಃಸ್ಥಿತಿಯನ್ನೇ ತೋರುತ್ತದೆ. ಈ ಕವಿಗಳು ಇತರರಿಗೆ ಪ್ರೇರಣೆಯೊದಗಿಸುವಲ್ಲಿ, ಜನ-ಮನ ಗೆಲ್ಲುವಲ್ಲಿ ಕೇವಲ ಆಯಾ ಯುಗದಲ್ಲಿ ಮಾತ್ರವಲ್ಲದೆ ಎಲ್ಲ ಕಾಲಗಳಲ್ಲಿಯೂ ಮಾನ್ಯರಾಗಿದ್ದಾರೆ. ಹಾಗಿರುವಾಗ ೧೦-೧೧ನೇ ಶತಮಾನ ಪಂಪಯುಗ, ೧೨-೧೩ ಬಸವಯುಗ, ೧೪-೧೬ ಕುಮಾರವ್ಯಾಸಯುಗ ಎಂದು ವಿಭಜಿಸುವುದು ಅನೌಚಿತ್ಯವೆನಿಸುತ್ತದೆ.

ಮಹಿಳಾಸಾಹಿತ್ಯ ಚರಿತ್ರೆಯೆಂದರೆ ಇಲ್ಲಿಯವರೆಗೆ ಅಜ್ಞಾನವಾಗಿದ್ದ, ಗುರುತಿಸಲಾರದ ಕವಯತ್ರಿಯರ, ಲೇಖಕಿಯರ ಹೆಸರುಗಳನ್ನು ಗುರುತಿಸುವುದಷ್ಟೇ ಅಲ್ಲದೆ, ಇಲ್ಲಿಯವರೆಗೆ ಸಾಹಿತ್ಯ ಚರಿತ್ರೆಯಲ್ಲಿ ಹೆಸರಿಸಲಾದ ಕವಯತ್ರಿಯರ ಕಾವ್ಯಗಳನ್ನೂ, ಕಾವ್ಯಸೃಷ್ಟಿಯ ಸಂದರ್ಭಗಳನ್ನೂ ವಿಶ್ಲೇಷಿಸಿ, ಕವಯತ್ರಿಯರಿಗಿದ್ದ ತೊಡಕುಗಳು, ಅವಶ್ಯಕತೆಗಳು, ಪ್ರೇರಣೆ–ಪ್ರಭಾವ ಅವಕಾಶಗಳನ್ನು ಕಾಲದ ಹಿನ್ನೆಲೆಯಲ್ಲಿ ಚರ್ಚಿಸಿದರೆ ಸಾಹಿತ್ಯಚರಿತ್ರೆಯು ಅರ್ಥಪೂರ್ಣ ಎನಿಸುತ್ತದೆ.

ಮಹಿಳಾಸಾಹಿತ್ಯವನ್ನು ಅಂದಾಜುಮಾಡಲು ರಾಜಕೀಯವಾಗಿ ಸಾಮಾಜಿಕವಾಗಿ ಬಂದ ಬದಲಾವಣೆಗಳು ಸ್ತ್ರೀಯರ ಅಂತಸ್ತು, ಸ್ಥಾನಗಳನ್ನು ಹೇಗೆ ಪ್ರಭಾವಗೊಳಿಸಿವೆ. ಈ ಪ್ರಭಾವಕ್ಕೆ ಒಳಗಾದ ವ್ಯಕ್ತಿಗಳಾಗಿ ಲೇಖಕಿಯರು ಹೇಗೆ ಕಾರ್ಯಗೈದಿದ್ದಾರೆ ಎಂಬ ವಿಷಯವನ್ನು ಒಂದು ಸೂತ್ರವಾಗಿ ತೆಗೆದುಕೊಳ್ಳಬಹುದು. ಹಾಗೇ ಆ ಲೇಖಕಿ ಎಂಥ ಮಾದರಿಗಳನ್ನು ಕೊಡುತ್ತಾಳೆ. ಆಕೆಯ ಸಾಹಿತ್ಯ ಪರಿಣತಿಗೆ ಇರುವ ಪರಿಮಿತಿಗಳು ಯಾವುವು ಎಂಬುದು ನಾವು ಗುರುತಿಸಬಹುದು. ಈ ಪ್ರಪಂಚವನ್ನು, ಸಾಹಿತ್ಯವನ್ನೂ, ಸಾಹಿತ್ಯದ ದೃಷ್ಟಿಕೋನವನ್ನು ಸ್ತ್ರೀಯರು ಹೇಗೆ ಅರ್ಥಮಾಡಿಕೊಳ್ಳುತ್ತಾರೆಂಬುದು ಈ ಸಮಾಜದಲ್ಲಿ ಅವರ ಸ್ಥಾನದ ಮೇಲೆ ಆಧರಿಸಿರುತ್ತದೆ. ಆ ಸ್ಥಾನವನ್ನು ನಿರ್ಣಯಿಸುವ ಲೈಂಗಿಕತ್ವ, ಮಾತೃತ್ವ ಶ್ರಮ ಮುಂತಾದ ಸೂತ್ರಗಳನ್ನು ನಾವು ಗಮನಿಸಿ ಅವುಗಳ ಆಧಾರದಿಂದ ಒಂದು ಅಂದಾಜಿಗೆ ಬಂದಾಗ ಮಹಿಳಾ ಸಾಹಿತ್ಯ ವಿಶ್ಲೇಷಣೆಗೆ ನ್ಯಾಯ ಒದಗಿಸಲು ಸಾಧ್ಯವಾಗುತ್ತದೆ.

ಸಾಹಿತ್ಯಚರಿತ್ರೆಗಳಲ್ಲಿ ಲೇಖಕಿಯರ ಸಂಪೂರ್ಣ ಅವಗಣನೆ ನಡೆದಿದೆ ಎಂದು ಹೇಳಲಾಗುವುದಿಲ್ಲ. ಕೆಲವೊಂದು ಕೃತಿಗಳಲ್ಲಿ ಮಹಿಳೆಯರ ಸಮಗ್ರ ಮಾಹಿತಿ ದೊರಕಿರುವ ಉದಾಹರಣೆಗಳಿವೆ. ಕುಂದೂರು ಮಠ ಮೈಸೂರಿನಿಂದ ಪ್ರಕಟವಾಗಿರುವ 'ಸಂಸ್ಕೃತ ಸಾಹಿತ್ಯಕ್ಕೆ ಕರ್ನಾಟಕದ ಕೊಡುಗೆ'[೨೮] ಕೃತಿಯಲ್ಲಿ ಸಂಸ್ಕೃತ ಸಾಹಿತ್ಯಕ್ಕೆ ಕೊಡುಗೆ ನೀಡಿರುವ ಮಹಿಳಾಸಾಹಿತಿಗಳ ವಿವರ ವಿಸ್ತೃತವಾಗಿ ದೊರಕುತ್ತದೆ. ಮೈಸೂರು ಹಾಗೂ ಬೆಂಗಳೂರು ವಿಶ್ವವಿದ್ಯಾನಿಲಯಗಳು ಪ್ರಕಟಿಸಿರುವ ಸಾಹಿತ್ಯ ಚರಿತ್ರೆಯ ಸಂಪುಟಗಳು, ಸಮಗ್ರ ವಚನಸಾಹಿತ್ಯ, ಸಮಗ್ರ ದಾಸಸಾಹಿತ್ಯ ಸಂಪುಟಗಳಲ್ಲಿ ಸಾಧ್ಯವಾದಷ್ಟು ಮಟ್ಟಿಗಿನ ಸಮಗ್ರ ಮಾಹಿತಿ ದೊರಕಿಸುವ ಪ್ರಯತ್ನ ಕಾಣುತ್ತೇವೆ. ಮಾಹಿತಿಯ ಕೊರತೆ, ಕಣ್ತಪ್ಪಿನಿಂದ ಕೆಲವೊಂದು ವಿಚಾರ ಬಿಟ್ಟಿರುವ ಸಾಧ್ಯತೆಗಳಿದ್ದರೂ ಈ ಗ್ರಂಥಗಳಲ್ಲಿ ಕವಯತ್ರಿಯರಿಗೂ ಸಮಾನ ಆದ್ಯತೆ ನೀಡಿರುವುದನ್ನು ಕಾಣಬಹುದು.

**ಮಹಿಳೆಯರಿಂದ ರಚಿತವಾದ ಸಾಹಿತ್ಯ ಚರಿತ್ರೆಗಳು.**

ಮಹಿಳಾ ಸಂವೇದನೆಗಳನ್ನು, ಸಾಧನೆಯ ಹಾದಿಯಲ್ಲಿನ ತೊಡಕುಗಳನ್ನು ಅರ್ಥಮಾಡಿಕೊಳ್ಳಲು ಮಹಿಳೆಯರೇ ಸಮರ್ಥರು ಎಂಬ ಆಶಯದ ಹಿನ್ನೆಲೆಯಲ್ಲಿ ಕೆಲವು ಮಹಿಳೆಯರು ಕಾರ್ಯಪ್ರವೃತ್ತರಾದರು. ಅವರುಗಳಲ್ಲಿ ಸರೋಜಿನಿ ಮಹಿಷಿಯವರು ಮೊದಲಿಗರು, ಇವರು ರಚಿಸಿರುವ **'ಕರ್ನಾಟಕದ ಕವಯಿತ್ರಿಯರು'**[೨೯] ಇವರಿಗೆ ಡಾಕ್ಟರೇಟ್ ಪದವಿಯನ್ನು ಗಳಿಸಿಕೊಟ್ಟಿದೆ. ನಂಜನಗೂಡು ತಿರುಮಲಾಂಬ ಅವರ ಹೆಸರಿನಲ್ಲಿ **'ಶಾಶ್ವತಿ'** ಪ್ರಶಸ್ತಿಯನ್ನು ಲೇಖಕಿಯರಿಗೆ ನೀಡಿ ಸನ್ಮಾನಿಸುವ ಪರಂಪರೆಯನ್ನು ಹುಟ್ಟುಹಾಕಿರುವುದಲ್ಲದೆ, ಶಾಶ್ವತಿ ವಸ್ತುಪ್ರದರ್ಶನಾಲಯ ಸ್ಥಾಪಿಸುವುದರ ಮೂಲಕ ಪ್ರೊ.ಚಿ.ನ.ಮಂಗಳ ಅವರು ಮಹಿಳಾ ಲೇಖಕಿಯರನ್ನು ಪ್ರೋತ್ಸಾಹಿಸುವ ಹಲವಾರು ಕಾರ್ಯಕ್ರಮಗಳಿಗೆ ಮೇಲ್ಪಂಕ್ತಿ ಹಾಕಿಕೊಟ್ಟರು. ಪ್ರಶಸ್ತಿ ನೀಡಿ ಪ್ರೋತ್ಸಾಹಿಸುವುದಲ್ಲದೆ, ಲೇಖಕಿಯರ ವಿಚಾರವನ್ನು ಸಮಗ್ರವಾಗಿ ದಾಖಲಿಸುವ, ಶೋಧಿಸಿ ಹುಡುಕುವ ಕಾರ್ಯವು ಹೀಗೆ ಮಹಿಳೆಯರಿಂದಲೇ ಆರಂಭವಾಯಿತು.

ಡಾ॥ಸರೋಜಿನಿ ಮಹಿಷಿಯವರು ರಚಿಸಿರುವ 'ಕರ್ನಾಟಕದ ಕವಯಿತ್ರಿಯರು' ಕೃತಿಯು ಲೇಖಕಿಯರ ಕುರಿತಾಗಿ ರಚಿಸಲಾದ ಸಾಹಿತ್ಯಚರಿತ್ರೆಗಳಲ್ಲಿಯೇ ಮೊಟ್ಟಮೊದಲನೆಯದು. ಕ.ಸ.ಸಾಹಿತ್ಯಸಂಘ, ಧಾರವಾಡದಿಂದ

ಕ್ರಿ.ಶ.೧೯೬೫ರಲ್ಲಿ ಪ್ರಕಟವಾದ ಈ ಕೃತಿಯಲ್ಲಿ ವೇದ–ಪುರಾಣ ಜೈನ–ಬೌದ್ಧಯುಗಗಳಲ್ಲಿನ ಸ್ತ್ರೀ ಜೀವನ, ಸಾಹಿತ್ಯ ಅಭಿವ್ಯಕ್ತಿ, ಧಾರ್ಮಿಕ–ಸಾಮಾಜಿಕ ಸ್ಥಾನಗಳಮೇಲಾದ ಪರಿಣಾಮ, ಮಧ್ಯಯುಗದ ಧಾರ್ಮಿಕ ಸಾಮಾಜಿಕ ಕ್ರಾಂತಿ ಮೊದಲಾದವುಗಳನ್ನು ಚರ್ಚಿಸಿ ಕನ್ನಡದಲ್ಲಿ ಸ್ತ್ರೀ–ಸಾಹಿತ್ಯದ ಕುರಿತಾಗಿ ಅಧ್ಯಯನ ನಡೆಸಿದ್ದಾರೆ. ಕನ್ನಡದಲ್ಲಿ ಸ್ತ್ರೀಸಾಹಿತ್ಯ ಎಂಬ ಅಧ್ಯಾಯದಲ್ಲಿ ಇವರ ಕಾಲದಲ್ಲಿ ರಚಿತವಾಗಿದ್ದ ಸಾಹಿತ್ಯ ಚರಿತ್ರೆಗಳಲ್ಲಿ ಉಲ್ಲೇಖವಾಗಿರುವ ಮಹಿಳೆಯರ ಅಪ್ರಕಟಿತ ಕೃತಿಗಳು, ಕೇವಲ ಅಂಕಿತ ಮಾತ್ರ ದೊರಕಿರುವ ವಚನಕಾರ್ತಿಯರ ವಚನಗಳು, ಪುರಾತನದೇವಿಯರ ವಚನಾಮೃತದ ಮೇರೆಗೆ ವಚನಕಾರ್ತಿಯರು, ಅಲ್ಲಮಪ್ರಭು–ಸಿದ್ಧರಾಮೇಶ್ವರ ವಾದದ ವಚನಗಳ ಸಂಗ್ರಹದಲ್ಲಿ ದೊರೆತ ವಚನಕಾರ್ತಿಯರು, ಇತರ ಕಾವ್ಯ ರಚಿಸಿದ ಕವಯಿತ್ರಿಯರು. ಎಂಬ ಮೊದಲಾದ ವಿಭಾಗಗಳಲ್ಲಿ ವಚನಕಾರ್ತಿಯರು ಹಾಗೂ ನಡುಗನ್ನಡದ ಕವಯಿತ್ರಿಯರ ಕುರಿತಾಗಿ ವಿವರಣೆ ನೀಡಿದ್ದಾರೆ. ಹಂಪ–ಕಂತಿಯರ ಸಮಸ್ಯೆಯನ್ನು ಕುರಿತು ಚರ್ಚಿಸಿದ್ದಾರೆ. ಅಕ್ಕಮಹಾದೇವಿ, ರಾಣಿ ಮಹಾದೇವಿ, ಲಿಂಗಮ್ಮನವರ ಜೀವನ, ವಚನಗಳು ಶೈಲಿ ವಿಮರ್ಶೆಗಳೊಂದಿಗೆ ಇತರ ವಚನಕಾರ್ತಿಯರ ವಚನ ಹಾಗೂ ವಿಮರ್ಶೆಗಳನ್ನು ಮಾಡಿದ್ದಾರೆ. ಚಿಕ್ಕದೇವರಾಯರ ಕಾಲದ ಕವಯಿತ್ರಿಯರು ಎಂಬ ಅಧ್ಯಾಯದಲ್ಲಿ ಹೊನ್ನಮ್ಮ, ಶೃಂಗಾರಮ್ಮ, ಚೆಲುವಾಂಬೆಯರ ಕೃತಿಗಳನ್ನು ಕುರಿತು ಚರ್ಚಿಸಿದ್ದಾರೆ. ವೈಷ್ಣವ ಭಕ್ತಪಂಥದ ಕವಯಿತ್ರಿಯರ ಕುರಿತಾದ ಅಧ್ಯಾಯದಲ್ಲಿ ಸುಮಾರು ಹತ್ತುಜನ ಕವಯಿತ್ರಿಯರ ಕುರಿತು ಮಾಹಿತಿ ನೀಡಿ, ಅವರ ಕೃತಿಗಳ ವಿಮರ್ಶೆ ಮಾಡಿದ್ದಾರೆ. ಆಧುನಿಕ ಯುಗದ ಅನೇಕ ಕವಯತ್ರಿಯರ ಹಾಗೂ ಅವರ ಕೃತಿಗಳ ಕುರಿತಾಗಿ ವಿವರಣೆ ನೀಡಿದ್ದಾರೆ. ಇವರ ಕೃತಿಗಳಲ್ಲಿ ಉಲ್ಲೇಖಿತರಾಗಿರುವ ಕವಯತ್ರಿಯರಲ್ಲಿ ಅನೇಕರ ಹೆಸರು ಮೊದಲಬಾರಿಗೆ ಸಾಹಿತ್ಯ ಚರಿತ್ರೆಯೊಂದರಲ್ಲಿ ಸ್ಥಾನ ಪಡೆದುಕೊಂಡಿವೆ. ಇವರ ಈ ಕೃತಿಯ ರಚನೆಯ ಸಂದರ್ಭದಲ್ಲಿ ಹೆಳವನಕಟ್ಟೆ ಗಿರಿಯಮ್ಮನ ಕೆಲವು ಹಾಡುಗಳು ಮಾತ್ರ ಅಲ್ಲಲ್ಲಿ ಪ್ರಕಟವಾಗಿದ್ದವು, ಹರಪನಹಳ್ಳಿ ಭೀಮವ್ವ, ಗಣಪಕ್ಕ, ಸುಂದರಬಾಯಿ, ಪನ್ನಿ ಲಕ್ಷ್ಮೀಬಾಯಿ, ಕುಂದಗೋಳದ ಹಾಡಿನ ವೆಂಕಮ್ಮ ಮೊದಲಾದವರ ಕೃತಿ ಹಾಗೂ ಜೀವನ ಚರಿತ್ರೆಗಳಿಗಾಗಿ ಅವರ ವಂಶಸ್ಥರ, ತಿಳಿದವರ ಬಳಿ ಸಂಪಾದಿಸಲು ಸಾಕಷ್ಟು ಪರಿಶ್ರಮ ವಹಿಸಿರುವುದು ಕಂಡುಬರುತ್ತದೆ. ಚೆಲುವಾಂಬಾಳ ಕೃತಿಗಳು, ಗಿರಿಯಮ್ಮನ ಹಾಡುಗಳು ಮೊದಲಾದವುಗಳಿಗೆ ಹಸ್ತಪ್ರತಿ ಭಂಡಾರದ ತಾಳೆಗರಿಗಳನ್ನು ಪರಿಶೀಲಿಸಿ ಸಂಗ್ರಹಿಸಿದ್ದಾರೆ, ಅಲ್ಲಲ್ಲಿ ಕೆಲವು ಪತ್ರಿಕೆಗಳಲ್ಲಿ, ಇತರ ವಚನಕಾರರ ಸಂಪುಟಗಳಲ್ಲಿ ಪ್ರಕಟವಾಗಿದ್ದ ವಚನಕಾರ್ತಿಯರ ವಚನಗಳನ್ನು ಸಂಪಾದಿಸಿ ವಿವರಣೆ ಒದಗಿಸಿದ್ದಾರೆ. ಈ ಕೃತಿಯು ಮುಂದೆ ಕನ್ನಡದ ಕವಿಯತ್ರಿಯರನ್ನು ಕುರಿತು ರಚಿಸಲಾಗಿರುವ ಎಲ್ಲ ಕೃತಿಗಳಿಗೂ ಆಕರಗ್ರಂಥವಾಗಿದೆ. ವಿಶ್ವವಿದ್ಯಾಲಯಗಳು, ಸಂಘ ಸಂಸ್ಥೆಗಳು ನಡೆಸಬೇಕಾದ ಕೆಲಸವನ್ನು ಸರೋಜಿನಿ ಮಹಿಷಿಯವರು ಸಮರ್ಥವಾಗಿ ನಡೆಸಿ, ತಮ್ಮ ಕಾಲದಲ್ಲಿ ಲಭ್ಯವಿದ್ದ ಎಲ್ಲ ಮಾಹಿತಿಗಳನ್ನೂ ತಮ್ಮ ಗ್ರಂಥದಲ್ಲಿ ಒದಗಿಸಿದ್ದಾರೆ. ಅನುಬಂಧದಲ್ಲಿ ಕರ್ನಾಟಕದ ಸಂಸ್ಕೃತ ಕವಯತ್ರಿಯರನ್ನೂ ಹಾಗೂ ಅವರ ಕೃತಿಗಳ ಕುರಿತಾದ ಸುದೀರ್ಘ ವಿಮರ್ಶೆ ಮಾಡಿದ್ದಾರೆ.

**ನುಡಿಗವಳ** ಎಂಬ ಗ್ರಂಥವು ಸೃಜನೇತರ ಸಾಹಿತ್ಯವನ್ನು ರಚಿಸಿದ ಮಹಿಳೆಯರ ವಿವರಣೆ ನೀಡುವ ಕೃತಿಯಾಗಿದೆ.[೨೮] ಇದನ್ನು ರಚಿಸಿರುವ ಸಬಿಹಾ ಭೂಮಿಗೌಡ ಅವರು ಸಾಹಿತ್ಯ–ಸಂಸ್ಕೃತಿ, ಸಂಪಾದನೆ/ಸಂಶೋಧನೆ/ಭಾಷಾಂತರ, ಭಾಷೆ/ನಿಘಂಟು, ಮಾನವಿಕ, ವಿಜ್ಞಾನ, ಲಲಿತಕಲೆ, ಮೊದಲಾದ ವಿಭಾಗಗಳಲ್ಲಿ ಹಾಗೂ ಇವುಗಳ ಸುಮಾರು ೪೨ ಉಪವಿಭಾಗಗಳಲ್ಲಿ ಆಧುನಿಕ ಕಾಲದ ಮಹಿಳೆಯರ ಸೃಜನೇತರ ಸಾಹಿತ್ಯ ಕೃತಿಗಳ ಪರಿಚಯ ಮಾಡಿಕೊಟ್ಟಿದ್ದಾರೆ. ಜೊತೆಗೆ ಅನುಬಂಧದಲ್ಲಿ ಮಹಿಳೆಯರ ಸಂಶೋಧನ ನಿಬಂಧಗಳ ಪಟ್ಟಿ, ಸೃಜನೇತರ ಮಹಿಳಾ ಸಾಹಿತಿಗಳ ಪಟ್ಟಿಯನ್ನು ನೀಡಿದ್ದಾರೆ. ಇವರು ನೀಡಿರುವ ಪಟ್ಟಿಯಲ್ಲಿನ ಸುಮಾರು ೫೬೦ಕ್ಕೂ ಹೆಚ್ಚಿನ ಸೃಜನೇತರ ಮಹಿಳಾ ಸಾಹಿತಿಗಳ ಉಲ್ಲೇಖವು ಸಾಹಿತ್ಯ ಕ್ಷೇತ್ರಕ್ಕೆ ಮಹಿಳೆಯರು

ನೀಡಿರುವ ಕೊಡುಗೆಯನ್ನು (ಸೃಜನಶೀಲಸಾಹಿತ್ಯದ ಲೇಖಕಿಯರನ್ನು ಹೊರತು ಪಡಿಸಿ) ಕುರಿತ ಸ್ಥೂಲ ಚಿತ್ರಣ ನೀಡುತ್ತದೆ.

**ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ:** ಸಮಗ್ರ ಕನ್ನಡ ಕಬ್ಬಿಗಿತ್ತಿಯರ ಚರಿತ್ರೆಯೊಂದಿಗೆ ಅವರ ಸಾಹಿತ್ಯ ಚರಿತ್ರೆಯನ್ನು ವಿವರವಾಗಿ ಚರ್ಚಿಸಿರುವ ಈ ಬೃಹದ್‌ಗ್ರಂಥ ತರಲಾಯಿತು. ಈ ಸಾಹಿತ್ಯ ಚರಿತ್ರೆಯಲ್ಲಿ ಪ್ರಾಚೀನ ಕನ್ನಡ ಮಹಿಳಾ ಸಾಹಿತ್ಯ:, ೧೫೫೦–೧೮೯೯ರ ವರೆಗಿನ ಕನ್ನಡ ಮಹಿಳಾ ಸಾಹಿತ್ಯ, ತಿರುಮಲಾಂಬ ಅವರಿಂದ ೧೯೫೦ರ ವರೆಗಿನ ಕನ್ನಡ ಮಹಿಳಾ ಸಾಹಿತ್ಯ, ೧೯೫೦–೧೯೭೫ವರೆಗಿನ ಕನ್ನಡ ಮಹಿಳಾ ಸಾಹಿತ್ಯ, ೧೯೭೫ರ ಆನಂತರದ ಕನ್ನಡ ಮಹಿಳಾ ಸಾಹಿತ್ಯ, ಎಂಬ ವಿಭಾಗಗಳಲ್ಲಿ ವಿಭಿನ್ನ ಕಾಲಘಟ್ಟಗಳಲ್ಲಿ ಮೂಡಿಬಂದ ಮಹಿಳೆಯರ ಸಾಹಿತ್ಯ ಚರಿತ್ರೆಗಳನ್ನು ತಿಳಿಸಿ ಮುಂದಿನ ಎರಡು ಅಧ್ಯಾಯಗಳಲ್ಲಿ ಸೃಜನೇತರ ಕನ್ನಡ ಮಹಿಳಾ ಸಾಹಿತ್ಯ, ಮಹಿಳಾ ಜನಪದ ಸಾಹಿತ್ಯದ ಕುರಿತಾದ ವಿಪುಲ ಮಾಹಿತಿ ಇಲ್ಲಿದೆ.

ಪ್ರಾಚೀನ ಕನ್ನಡ ಸಾಹಿತ್ಯ ಅಧ್ಯಯನವನ್ನು ಜೈನ ಕವಿಗಳಿಂದ ಆರಂಭಿಸಲಾಗುತ್ತದೆ. ಆದರೆ ಪ್ರಾಚೀನ ಕನ್ನಡ ಮಹಿಳಾ ಸಾಹಿತ್ಯವು ಕನ್ನಡ ಸಾಹಿತ್ಯಚರಿತ್ರೆಯ ಎರಡನೆಯ ಘಟ್ಟವೆನಿಸಿದ ಬಸವಯುಗದಿಂದ ಆರಂಭವಾಗುತ್ತದೆ. ಹೀಗೆ ಕನ್ನಡ ಸಾಹಿತ್ಯದ ಪ್ರಾಚೀನ ಕಬ್ಬಿಗಿತ್ತಿಯರೆನಿಸಿದ ವಚನಕಾರ್ತಿಯರ ವಿಭಾಗದಲ್ಲಿ ಬಸವಪೂರ್ವಯುಗ, ಬಸವಯುಗ ಹಾಗೂ ಬಸವೋತ್ತರಯುಗದ ವಚನಕಾರ್ತಿಯರೆಂದು ಪ್ರತ್ಯೇಕ ವಿಭಾಗ ಮಾಡಿಕೊಂಡು ವಚನಕಾರ್ತಿಯರನ್ನು ಕುರಿತಾಗಿ ವಿವರವಾಗಿ ಚರ್ಚೆ ನಡೆಸಲಾಗಿದೆ.

ಮೂರನೆಯ ಭಾಗವಾದ ೧೭ನೇ ಶತಮಾನದಿಂದ ೧೯ನೆಯ ಶತಮಾನದ ವರೆಗಿನ ಮೂರು ಶತಮಾನಗಳ ಕವಯತ್ರಿಯರ ಸಾಹಿತ್ಯಚರಿತ್ರೆಯನ್ನು ಮೂರು ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ. ಈ ವಿಭಾಗದಲ್ಲಿ ೧೭ ಹಾಗೂ ೧೮ನೆಯ ಶತಮಾನದಲ್ಲಿ ಬರುವ ಕವಯತ್ರಿಯರ ಮಹತ್ವದ ಕೃತಿಗಳನ್ನು ವಿವರವಾಗಿ ಪರಿಚಯ ಮಾಡಿಕೊಡಲಾಗಿದೆ ಹಾಗೂ ೧೯ನೆಯ ಶತಮಾನದ ಕವಯತ್ರಿಯರ ಸಾಹಿತ್ಯದ ಕುರಿತಾಗಿ ಸಮಗ್ರ ಮಾಹಿತಿಯನ್ನು ಒದಗಿಸಿಕೊಟ್ಟಿದ್ದಾರೆ. ಐದನೆಯ ಭಾಗವಾದ ತಿರುಮಲಾಂಬ ಅವರಿಂದ ೧೯೫೦ರ ವರೆಗಿನ ಕನ್ನಡ ಮಹಿಳಾ ಸಾಹಿತ್ಯದಲ್ಲಿ ಸಂಕ್ಷಿಪ್ತವಾಗಿ ಹಲವಾರು ಕವಯತ್ರಿಯರ ಕಾಲ ದೇಶ, ಮತ, ಜೀವನದ ಮುಖ್ಯ ಘಟನೆ ಮೊದಲಾದವುಗಳನ್ನು ತಿಳಿಸಿ, ಸುಮಾರು ೨೫ ಕವಯತ್ರಿಯರ ಹೆಸರು ಹಾಗೂ ಕೃತಿಗಳನ್ನು ಉಲ್ಲೇಖಿಸಿದ್ದಾರೆ. ಈ ವಿಭಾಗದಲ್ಲಿ ಅಕಾರಾದಿಯಾಗಿ ಈ ಕಾಲದ ಕವಯತ್ರಿಯರ ಪಟ್ಟಿಯನ್ನು ನೀಡಿದ್ದಾರೆ. ೧೯೫೦–೧೯೭೫ರ ವರೆಗಿನ ಕನ್ನಡ ಮಹಿಳಾ ಸಾಹಿತ್ಯ ವಿಭಾಗದಲ್ಲಿ ಲೇಖಕಿಯರ ಕೃತಿ ಪರಿಚಯವಷ್ಟೇ ಅಲ್ಲದೆ ಸಂಕ್ಷಿಪ್ತವಾದ ವಿಮರ್ಶೆಯನ್ನೂ ಮಾಡಿದ್ದಾರೆ. ಈ ವಿಭಾಗದಲ್ಲಿ ಕೂಡ ಅನುಬಂಧದಲ್ಲಿ ಲೇಖಕಿಯರ ಅಕಾರಾದಿ ಪಟ್ಟಿಯನ್ನು ಕೊಟ್ಟಿದ್ದಾರೆ. ಆರನೇ ಭಾಗದಲ್ಲಿ ೧೯೭೫ರ ನಂತರದ ಕನ್ನಡ ಮಹಿಳಾ ಸಾಹಿತ್ಯದಲ್ಲಿ ಸಮಕಾಲೀನ ಮಹಿಳಾ ಸಾಹಿತ್ಯ, ಕಾವ್ಯ ಕಥಾಸಾಹಿತ್ಯ ಇತರ ಪ್ರಕಾರಗಳು, ಮಹಿಳಾ ಸಾಹಿತ್ಯ ಮತ್ತು ವಿಮರ್ಶೆಗಳನ್ನು ಕುರಿತು ಚರ್ಚಿಸಿದ್ದಾರೆ. ಸೃಜನೇತರ ಸಾಹಿತ್ಯವನ್ನು ಕುರಿತ ವಿಭಾಗವನ್ನೊಳಗೊಂಡಿರುವುದು ಈ ಸಾಹಿತ್ಯ ಚರಿತ್ರೆಯ ವೈಶಿಷ್ಟ್ಯದಲ್ಲೊಂದಾಗಿದೆ. ಇದರಲ್ಲಿ ಸಾಹಿತ್ಯ–ಸಂಸ್ಕೃತಿ, ಸಂಪಾದನೆ–ಸಂಶೋಧನೆ–ಭಾಷಾಂತರ, ಭಾಷೆ/ನಿಘಂಟು, ಮಾನವಿಕ, ವಿಜ್ಞಾನ, ಕಲೆ–ಲಲಿತ ಕಲೆ, ಸಂಕೀರ್ಣವೆಂಬ ವಿಭಿನ್ನ ಅಧ್ಯಾಯಗಳಲ್ಲಿ ಸೃಜನೇತರ ಸಾಹಿತ್ಯಕ್ಕೆ ಮಹಿಳೆಯರು ನೀಡಿರುವ ಕೊಡುಗೆಯನ್ನು ಕೃತಿಗಳ ವಿವರಣೆಯೊಂದಿಗೆ, ಕಾಲಮಾನ ಹಾಗೂ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಚರ್ಚಿಸಿದ್ದಾರೆ. ಜೊತೆಗೆ ಅಕಾರಾದಿಯಾಗಿ ಲೇಖಕಿಯರ ಪಟ್ಟಿಯನ್ನು ಕೊಟ್ಟಿದ್ದಾರೆ. ಕನ್ನಡ ಸೃಜನೇತರ ಸಾಹಿತ್ಯದ ಎಲ್ಲ ವಿಭಾಗಗಳಲ್ಲಿಯೂ ಮಹಿಳೆಯರು ತಮ್ಮ ಕೊಡುಗೆಯನ್ನು ನೀಡಿದ್ದಾರೆನ್ನುವ ಹೆಮ್ಮೆಪಡುವಂಥ ದಾಖಲೆಯನ್ನು ಈ ವಿಭಾಗದಲ್ಲಿ ಸಮರ್ಪಕ ಮಾಹಿತಿಯೊಂದಿಗೆ ಕಾಣಬಹುದು. ಎಂಟನೆಯ

ವಿಭಾಗದಲ್ಲಿ ಮಹಿಳಾ ಜನಪದಸಾಹಿತ್ಯದಲ್ಲಿ ಜಾನಪದ ಅಧ್ಯಯನಕಾರ್ತಿಯರು, ಜಾನಪದದಲ್ಲಿ ಮಹಿಳೆಯರು ಮೊದಲಾದ ವಿಚಾರಗಳನ್ನು ಕುರಿತು ಚರ್ಚಿಸಲಾಗಿದೆ.

## ಸಾಹಿತ್ಯ ಚರಿತ್ರೆಗಳಿಂದ ಹೊರಗುಳಿದ ಹಲವು ಕವಯತ್ರಿಯರು

ಈ ಮೇಲಿನ ಸಾಹಿತ್ಯ ಚರಿತ್ರೆಗಳಲ್ಲಿ ಒಂದೆರಡನ್ನು ಹೊರತುಪಡಿಸಿದರೆ ಉಳಿದೆಲ್ಲ ಚರಿತ್ರೆಗಳಲ್ಲಿ ಲೇಖಕಿಯರ ಮಾಹಿತಿಯ ಕೊರತೆ ಕಂಡುಬರುತ್ತದೆ. ಕೆಲವು ಕವಯತ್ರಿಯರು ಇಲ್ಲಿ ಸ್ಥಾನವನ್ನೇ ಪಡೆದಿಲ್ಲವೆನ್ನಬಹುದು. ಉದಾಹರಣೆಗೆ:

**ಗಂಗಾದೇವಿ:** ಕೆಳದಿ ಮಠದ ಶ್ರೀಗುರು ಚೆನ್ನವೀರಾಚಾರ್ಯರ ಪತ್ನಿ. ಹದಿನೇಳನೆಯ ಶತಮಾನದಲ್ಲಿ ಜೀವಿಸಿದ್ದ ಈಕೆ **ಕೆಳದಿ ರಾಜಾಭ್ಯುದಯಮ್** ಎಂಬ ಐತಿಹಾಸಿಕ ಗ್ರಂಥವನ್ನು ಬರೆದಿದ್ದಾಳೆ. ಕೆಳದಿಯ ರಾಜಗುರುವಿನ ಮಡದಿಯಾದ ಈಕೆಯ ಸಾಹಿತ್ಯ ರಚನಾ ಸಾಮರ್ಥ್ಯವನ್ನು ಮನಗಂಡ ಕೆಳದಿ ನೃಪ ಬಸವರಾಜೇಂದ್ರನ ಅರಸಿ ಚೆನ್ನಮ್ಮಾಜಿಯು ಪ್ರೋತ್ಸಾಹ ನೀಡಿ, ಕಾವ್ಯರಚನೆಗೆ ಮೂಲ ಪ್ರೇರಣೆಯಾದಳೆಂದು ಈ ಕಾವ್ಯದಲ್ಲಿ ಕವಯತ್ರಿ ಗಂಗಾದೇವಿಯು ತಿಳಿಸಿದ್ದಾಳೆ. ಇವಳಿಗೆ 'ಕರ್ನಾಟಕ ಕವಿ–ಪರಮೇಶ್ವರಿ', 'ವಿದ್ವಸ್ಸಭಾ ಸರಸ್ವತಿ' ಎಂಬ ಬಿರುದುಗಳಿತ್ತೆನ್ನುವುದನ್ನು ಸ್ವತಃ ಕವಯತ್ರಿಯೇ ತನ್ನ ಕಾವ್ಯದಲ್ಲಿ ತಿಳಿಸಿದ್ದಾಳೆ. 'ಕೆಳದಿ ರಾಜಾಭ್ಯುದಯಂ' ಕಾವ್ಯವು ಕೆಳದಿ ರಾಜಮನೆತನದ ಇತಿಹಾಸವನ್ನು ಕುರಿತು ರಚಿಸಲಾದ ಕನ್ನಡ ಕಾವ್ಯ. ದೊರೆತಿರುವ ಈ ಅಪೂರ್ಣ ಕೃತಿಯನ್ನು ಸಾ.ಶಿ.ಮರುಳಯ್ಯನವರು ಪ್ರಕಟಿಸಿದ್ದಾರೆ.

**ನಾಗಲದೇವಿ:** ನಗಿರೆ ನಾಡಿನ ಸಾಳುವ ರಾಜವಂಶದ ಭೈರವರಾಯನ ಮಡದಿ ನಾಗಲದೇವಿ 'ಷೋಡಶಭಾವನಾ' ಯೆಂಬ ಕಾವ್ಯವನ್ನು ರಚಿಸಿದ್ದಾಳೆ. ಕ್ರಿ.ಶ.೧೪೭೦ರ ಆಸುಪಾಸಿನಲ್ಲಿ ಜೀವಿಸಿದ್ದ ಈ ರಾಣಿ, ಕನ್ನಡದಲ್ಲಿ ಚಂಪೂ ಪ್ರಕಾರದಲ್ಲಿ ರಚಿಸಿರುವ ಏಕೈಕ ಕವಯತ್ರಿಯೆನಿಸಿದ್ದಾಳೆ. ಇವಳ ವಿಚಾರ ಕೇವಲ ಮೈಸೂರು ವಿಶ್ವವಿದ್ಯಾನಿಲಯದಿಂದ ಹೊರಬಂದಿರುವ ಕನ್ನಡ ಸಾಹಿತ್ಯ ಚರಿತ್ರೆಯನ್ನು ಹೊರತುಪಡಿಸಿ ಮತ್ಯಾವ ಸಾಹಿತ್ಯ ಚರಿತ್ರೆಯಲ್ಲಿಯೂ ಇವಳ ಪ್ರಸ್ತಾಪ ಕಂಡುಬರುವುದಿಲ್ಲ. ಈ ಕೃತಿಯನ್ನು ಕಮಲಾ ಹಂಪನಾ ಅವರು ಸಂಪಾದಿಸಿ, ಜೈನ ಅಧ್ಯಯನ ಸಂಸ್ಥೆಯಿಂದ ೨೦೦೪ರಲ್ಲಿ ಪ್ರಕಟಿಸಿದ್ದಾರೆ.

**ರಂಗಮ್ಮ:** ಸುರಪುರದ ವೆಂಕಟಪ್ಪನಾಯಕನ ಮಡದಿಯಾದ ಈಕೆ ಅನೇಕ ಕೀರ್ತನೆಗಳನ್ನು ರಚಿಸಿದ್ದಾಳೆ. ಇವಳು ಕನ್ನಡ ಹಾಗೂ ತೆಲುಗು ಎರಡೂ ಭಾಷೆಗಳಲ್ಲಿ ಕೀರ್ತನೆಗಳನ್ನು ರಚಿಸಿದ್ದು, ದಾಸಸಾಹಿತ್ಯದ ಪ್ರಭಾವವನ್ನು ಇವಳ ಕೀರ್ತನೆಗಳಲ್ಲಿ ಗುರುತಿಸಬಹುದಾಗಿದೆ. ಆದಾಗ್ಯೂ ಇವಳನ್ನು ಹರಿದಾಸ ಪಂಥದಲ್ಲಿ ಗಮನಿಸಿಲ್ಲ. ಇವಳನ್ನು ಸಾಹಿತ್ಯ ಚರಿತ್ರೆಗಳಿಂದ ಹೊರಗೆಯೇ ಇಡಲಾಗಿದೆ.

೧೯ನೆಯ ಶತಮಾನದಲ್ಲಿ ಯುಗ್ಗಮ್ಮ ಎಂಬುವವರು 'ಶ್ರೀರಂಗ ಮಹಾತ್ಮೆ'ಯನ್ನು ರಚಿಸಿದ್ದಾಳೆ. ಆದರೆ ಇದು ಹಸ್ತಪ್ರತಿ ರೂಪದಲ್ಲಿಯೇ ಇದ್ದು ಪ್ರಕಟಣೆಯಾಗಿಲ್ಲ. ಸಾಹಿತ್ಯ ಚರಿತ್ರೆಗಳಲ್ಲಿ ದಾಖಲು ಪಡೆಯದ ಹತ್ತೊಂಬತ್ತನೆಯ ಶತಮಾನದಲ್ಲಿದ್ದ ಇತರ ಕವಯತ್ರಿಯರುಗಳಲ್ಲಿ ಸುವ್ವಾಲೆ, ಶೋಭಾನೆಪದಗಳನ್ನು ರಚಿಸಿರುವ ಕಾಸರಗೋಡಿನ ಕಡುಮನೆ ಭಾಗೀರಥಿ ಹೆಬ್ಬಾರ, 'ದಾನಲಿಂಗ ಪುರಾಣ'ವೆಂಬ ಭಾಮಿನೀ ಷಟ್ಪದಿ ಕೃತಿರಚಿಸಿ, ಅನೇಕ ಕೀರ್ತನೆಗಳನ್ನು ರಚಿಸಿರುವ ಧಾರವಾಡದ ವಾಸಂತಿದೇವಿ ಮೊದಲಾದವರು ಸೇರುತ್ತಾರೆ. ಇವರುಗಳ ವಿಚಾರ ಹಸ್ತಪ್ರತಿ ಸೂಚಿ ಅಥವಾ ಆಯಾ ಪ್ರಾಂತೀಯ ವಿಚಾರಗಳನ್ನು ಸಂಶೋಧಾತ್ಮಕವಾಗಿ, ವಿಮರ್ಶಾತ್ಮಕವಾಗಿ ರಚಿಸಲಾಗಿರುವ ಲೇಖನಗಳಲ್ಲಿ ದೊರಕುತ್ತದೆ. ಆದರೆ ಸಮಗ್ರವಾಗಿ ದೊರಕಬೇಕಿರುವ ಸಾಹಿತ್ಯ ಚರಿತ್ರೆಗಳಲ್ಲಿ ಸೇರ್ಪಡೆಯಾಗಿಲ್ಲ.

**ಅಲಭ್ಯ ಕೃತಿಗಳು**

**ಜಕ್ಕಲಾಂಬ:** ೧೨ನೆಯ ಶತಮಾನದಲ್ಲಿ ಜೀವಿಸಿದ್ದ ಜಕ್ಕಲಾಂಬೆ 'ಗುಣಾಂಕಮಾಲೆ ಚರಿತೆ' ಕೃತಿಯನ್ನು ರಚಿಸಿದ್ದಾಳೆ. ಇವಳು ರಚಿಸಿರುವ ಕೃತಿ ಲಭ್ಯವಿಲ್ಲದಿದ್ದರೂ ಇವಳ ಕುರಿತಾದ ಸುದೀರ್ಘ ಶಾಸನ ಪದ್ಯವೊಂದು ಲಭಿಸಿ ಇವಳ ಕುರಿತಾದ ಹೆಚ್ಚಿನ ಮಾಹಿತಿ ನೀಡುತ್ತದೆ. ವಿಪುಲವಾದ ಚರ್ಚೆಗೆ ಅವಕಾಶವಿರುವ ಈಕೆಯ ವಿಚಾರವನ್ನು ಯಾವ ಸಾಹಿತ್ಯ ಚರಿತ್ರೆಯೂ ಉಲ್ಲೇಖಿಸದಿರುವುದು ಆಶ್ಚರ್ಯವಾಗಿದೆ. ಕವಿಗಳನ್ನು ಉಲ್ಲೇಖಿಸುವಾಗ ಇತರ ಮೂಲಗಳಿಂದ ವಿಷಯಗಳನ್ನು ಶೋಧಿಸಿ, ಇರಬಹುದು.. ಇದ್ದಿರಬಹುದು... ಆಗಿರಬಹುದು... ಎಂಬ ಸಂಭಾವ್ಯವನ್ನು ಹುಡುಕುವ ಸಾಹಿತ್ಯಚರಿತ್ರೆಕಾರರು ಕವಯತ್ರಿಯೋರ್ವಳ ವಿಚಾರವನ್ನು ಆ ಬಗೆಯಲ್ಲಿ ಗಮನಿಸಿಲ್ಲ ಎನ್ನುವುದಕ್ಕೆ ಇದೊಂದು ಉತ್ತಮ ಉದಾಹರಣೆಯಾಗಿದೆ.

**ಅಜ್ಞಾತ ಕವಯಿತ್ರಿಯರು:**

ತ್ರಿಪದಿ ಛಂದಸ್ಸಿನಲ್ಲಿ ರಚಿತವಾಗಿರುವ 'ಚಂದನಾಂಬಿಕೆಯ ಕಥೆ' ಯ ಕರ್ತೃವಿನ ವಿಚಾರವೇನೂ ತಿಳಿಯದಿದ್ದರೂ 'ಭಾಮೆಯರೆಲ್ಲಾ ನೆರೆಬನ್ನಿ' 'ನೀತಿಕುಸಲೆಯೊಬ್ಬ ಮಾತಿನ ಕಡುಜಾಣೆ', 'ನುಡಿದಳು ಮಾತೆ ಚಂದನೆಯ ಕಥೆಯನು' ಎಂಬ ಮೊದಲಾದ ಸಾಲುಗಳಿಂದ ಇದನ್ನು ಮಹಿಳೆಯೊಬ್ಬಳು ರಚಿಸಿರುವುದೆಂಬುದು ಸಾಬೀತಾಗುತ್ತದೆ. ೧೯೭೭ರಲ್ಲಿ ಜಯಚಂದ್ರರಿಂದ ಸಂಪಾದಿತಗೊಂಡು ಪ್ರಕಟಣೆ ಕಂಡ ಈ ಕೃತಿಯನ್ನು ಪರಿಶೀಲಿಸಿ ಹಂಪನಾ ಅವರು ಈ ಕೃತಿಯ ಭಾಷೆ, ತ್ರಿಪದಿಯ ಲಯ, ವಿನ್ಯಾಸ, ಆಂತರಿಕ ಪ್ರಮಾಣಾಧಾರಗಳಿಂದ ಇದು ೧೫ನೇ ಶತಮಾನದಲ್ಲಿ ರಚಿತವಾಗಿರಬಹುದೆಂದು ಊಹಿಸಿದ್ದಾರೆ. ಅಂಶ ತ್ರಿಪದಿಯಲ್ಲಿ ರಚಿತವಾಗಿರುವ ಈ ಕಾವ್ಯವು ಕೂಡ ಮುಂದಿನ ಸಾಹಿತ್ಯ ಚರಿತ್ರೆಗಳಲ್ಲಿ ಸೇರ್ಪಡೆಯಾಗಬೇಕಿದೆ.

ಮತ್ತೊರ್ವ ಅಜ್ಞಾತ ಕವಯತ್ರಿಯು ಹಾಗಲವಾಡಿ ಮನೆತನದಲ್ಲಿ ೧೮ನೆಯ ಶತಮಾನದಲ್ಲಿ ಆಳ್ವಿಕೆ ನಡೆಸಿದ ಇಮ್ಮಡಿ ಮುದಿಯಪ್ಪನಾಯಕನ ಮಗಳು. ಅನೇಕ ಸ್ವರವಚನಗಳನ್ನು ರಚಿಸಿರುವ ಇವಳು ತನ್ನ ಹೆಸರನ್ನು ನಮೂದಿಸದೆ ಗುರುಸಂಗಮೇಶ್ವರ ಲಿಂಗವೇ, ಗುರುಹುಚ್ಚಾರ್ಯ, ಗುರುಧೀರ ಹುಚ್ಚಾರ್ಯ ಎಂಬ ಅಂಕಿತಗಳನ್ನು ಬಳಸಿದ್ದಾಳೆ.

ಕೃಷ್ಣದೇವರಾಯನ ಆಸ್ಥಾನದಲ್ಲಿದ್ದ ಅಷ್ಟದಿಗ್ಗಜರ ಸಾಹಿತ್ಯವನ್ನು ಅಭ್ಯಾಸ ಮಾಡಿರುವ ಉಮಾ ರಾಮರಾವ್ ಅವರು ತಮ್ಮ ಕೂಚಿಪುಡಿ ಭಾರತಮ್ ನಲ್ಲಿ 'ಈ ಕಾಲದ ನೂರಾರು ನರ್ತಕಿಯರು ಸ್ವಯಂ ಕವಯತ್ರಿಯರಾಗಿದ್ದರು, ಸ್ವತಃ ಹಾಡು ಕಟ್ಟಿ ಆನಂದ ನರ್ತನ ಮಾಡುತ್ತಿದ್ದರು' ಎಂಬ ವಿಚಾರವನ್ನು ತಿಳಿಸಿದ್ದಾರೆ. ಕೃಷ್ಣದೇವರಾಯನ ಆರಾಧ್ಯದೈವ ತಿರುಪತಿ ವೆಂಕಟೇಶನನ್ನು ಕುರಿತ ಹಾಡು ಕಟ್ಟಿ ನರ್ತನ ಮಾಡುವವರಲ್ಲಿ ಕುಪ್ಪೈ ಎಂಬುವಳು ಖ್ಯಾತ ನರ್ತಕಿಯಾಗಿದ್ದಳೆಂಬ ವಿಚಾರವನ್ನು ತಿಳಿಸಿದ್ದಾರೆ. ಆದರೆ ಇವರ ಕೃತಿಗಳಾವುವೂ ದೊರೆತಿಲ್ಲ.

**ಶಾಸನ ಕವಯತ್ರಿಯರು: ಶಾಸನಕಾರ್ತಿಯರು:**

ಕನ್ನಡ ನಾಡಿನಲ್ಲಿ ಶಾಸನಗಳನ್ನು ರಚಿಸಿದ ಮಹಿಳೆಯರೂ ಇದ್ದರೆನ್ನುವುದಕ್ಕೆ ಕೆಲವು ಉದಾಹರಣೆಗಳು ದೊರಕುತ್ತವೆ. ಇಂತಹ ವಿಶೇಷ ವಿಚಾರಗಳನ್ನು ಸಾಹಿತ್ಯಚರಿತ್ರೆಯ 'ಶಾಸನಕವಿಗಳು–ಕವಯತ್ರಿಯರು' ವಿಭಾಗದಲ್ಲಿ ಸೇರಿಸಬೇಕಿದೆ. ವಿಪರ್ಯಾಸವೆಂದರೆ ಈವರೆಗೆ ಬಂದಿರುವ ಯಾವುದೇ ಸಾಹಿತ್ಯಚರಿತ್ರೆಯಲ್ಲಿಯೂ ಈ ವಿಚಾರ ಉಕ್ತವಾಗಿಲ್ಲ.

ಚಿತ್ರದುರ್ಗದ ಪಾಂಡುರಂಗನ ಬೆಟ್ಟದಲ್ಲಿರುನ ಪ್ರಾಚೀನ ಶಾಸನವೊಂದನ್ನು ರಚಿಸಿದವಳು ಮಹಿಳೆ. ಈ ಶಾಸನದ ಕಡೆಯಲ್ಲಿ ಶ್ರೀಬಿಜಾಬೆ ಎಂಬ ಈಕೆಯ ಹೆಸರೂ ದಾಖಲಾಗಿದೆ. ರೈಸ್‌ರ ಶಾಸನ ಸಂಪುಟದಲ್ಲಿಯೇ ಈ ಶಾಸನ ಪ್ರಕಟವಾಗಿದ್ದರೂ[೩೨] ಈ ಶಾಸನವನ್ನು ರಚಿಸಿರುವುದು ಮಹಿಳೆ ಎಂಬ ವಿಚಾರ ಆಗ ಗಮನಿಸಿರಲಿಲ್ಲ (ಮಹತ್ವ ಪಡೆದಿರಲಿಲ್ಲ). ಇತ್ತೀಚೆಗೆ ಈ ಶಾಸನದ ಲಿಪಿಯ ಅಧ್ಯಯನ ನಡೆಸಿದ ಬಿ.ರಾಜಶೇಖರಪ್ಪ ಅವರು, ಇದು ಕ್ರಿ.ಶ.೭–೮ನೆಯ ಶತಮಾನದ ಬಾದಾಮಿಯ ಚಲುಕ್ಯ ಕಾಲದ ಶಾಸನ ಲಿಪಿಯನ್ನು ಹೋಲುವುದನ್ನೂ, ಇದನ್ನು ರಚಿಸಿದವಳು ಬಾದಾಮಿ ಚಳುಕ್ಯ ರಾಣಿ ವಿಜಯಬ್ಬೆ / ವಿಜಯಾಂಬೆ ಎಂಬ ತಮ್ಮ ನಿಲುವನ್ನೂ ಸಂಶೋಧನಾತ್ಮಕವಾಗಿ ತಿಳಿಸಿದ್ದಾರೆ.[೩೩]

ಕ್ರಿ.ಶ.೧೧೯೯ರ ನೂಲಗೇರಿಯ ಒಂದು ಶಾಸನದಲ್ಲಿನ 'ಹರಿಸೆಟ್ಟಿಕವ್ವೆಯ ಬರಪ' ಎಂಬ ಉಲ್ಲೇಖವಿರುವ ಸಾಲು ಇದು ಮಹಿಳಾ ಶಾಸನಕಾರ್ತಿಯ ರಚನೆ ಎಂಬುದನ್ನು ತಿಳಿಸುತ್ತದೆ.[೩೪]

ವಿಜಯನಗರದ ಅಚ್ಯುತರಾಯನ ಕಾಲದಲ್ಲಿ ಓದುವ ತಿರುಮಲಾಂಬೆಯು ಸಂಸ್ಕೃತ ಕಾವ್ಯವನ್ನು ರಚಿಸಿರುವಳಲ್ಲದೆ ಕೆಲವು ಶಾಸನಗಳನ್ನೂ ರಚಿಸಿದ್ದಾಳೆ. ಇವಳ ಸಂಸ್ಕೃತ ಶಾಸನ ಶ್ರೀರಂಗಂನಲ್ಲಿಯೂ ದೊರೆತಿದೆ. ಅಲ್ಲಿನ ಶಾಸನಗಳಲ್ಲಿಯೂ ಇವಳು ಓದುವ ತಿರುಮಲಾಂಬೆ ಎಂದು ಉಲ್ಲೇಖಿತಳಾಗಿದ್ದಾಳೆ. ಇವಳ ಹೆಸರಿನ ಮುಂದಿರುವ 'ಓದುವ' ಎಂಬ ವಿಶೇಷಣ ಇವಳು ಕನ್ನಡತಿ ಎಂಬುದನ್ನು ಸಾರುತ್ತಿದೆ. ತಿರುಮಲಾಂಬೆಯು ಆಂಧ್ರ, ತಮಿಳುನಾಡುಗಳಲ್ಲಿನ ಶಾಸನಗಳನ್ನು ರಚಿಸಿದ ಕನ್ನಡತಿ ಎಂಬ ಹೆಮ್ಮೆಗೆ ಭಾಜನಳಾಗಿದ್ದಾಳೆ.

ಕನ್ನಡನಾಡಿನಲ್ಲಿ ಹಲವಾರು ಶಾಸನಗಳನ್ನು ಮಹಿಳೆಯರು ರಚಿಸಿದ್ದರು ಎನ್ನುವುದಕ್ಕೆ ಇವೆಲ್ಲ ನಿದರ್ಶನಗಳಾಗಿವೆ. ಶಾಸನಕಾರ್ತಿಯರ ಕುರಿತಾದ ಶಿಲ್ಪವೂ ಕೂಡ ಈ ಕುರಿತಾದ ವಿಚಾರವನ್ನು ತಿಳಿಸುತ್ತದೆ. ಜಲಸಂಗಿಯ ಮಹಾದೇವ ದೇವಾಲಯದ ಹೊರಗೋಡೆಯ ಮೇಲೆ ಕೆತ್ತಲ್ಪಟ್ಟ ಶಿಲ್ಪದಲ್ಲಿ, ಶಿಲಾಬಾಲಿಕೆಯೊಬ್ಬಳು ಲೇಖನ ಪಟವನ್ನು ತನ್ನ ಎಡಗೈಯಿಂದ ಎತ್ತರದಲ್ಲಿ ಹಿಡಿದು ಬಲಗೈಯಲ್ಲಿ ಲೇಖನಿಯನ್ನು ಹಿಡಿದು ಶಾಸನವನ್ನು ಬರೆಯುತ್ತಿದ್ದಾಳೆ. ಬರಹ ಸಂಸ್ಕೃತಭಾಷೆಯ ಕನ್ನಡ ಲಿಪಿಯಲ್ಲಿ ಈ ರೀತಿಯಾಗಿದೆ "ಸಪ್ತದ್ವೀಪೋದರಿ ಭೂತಂ ಭೂತಲಂ ಸ್ವೀಕರಿಷ್ಯತಿ, ಚಲುಕ್ಯೋ ವಿಕ್ರಮಾದಿತ್ಯ ಸಪ್ತಮೋ ವಿಷ್ಣುವರ್ಧನಃ" ಕಲ್ಯಾಣಿ ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಪರಾಕ್ರಮವನ್ನು ಹೊಗಳಿ ಶಾಸನವನ್ನು ಬರೆಯುತ್ತಿದ್ದಾಳೆ.

ಕವಿಚರಿತೆಯು ಆರಂಭಘಟ್ಟದ ಕೃತಿಯಾದರೂ ಆರ್.ನರಸಿಂಹಾಚಾರ್ಯರು ಸಾಕಷ್ಟುಮಟ್ಟಿಗೆ ಕವಿಗಳ ವಿಚಾರವನ್ನು ವಿಸ್ತೃತವಾಗಿ, ವಿಮರ್ಶಾತ್ಮಕವಾಗಿ ಕೊಟ್ಟಿದ್ದಾರೆ. ಇಲ್ಲಿ ಕರ್ನಾಟಕದ ಕೆಲವು ಸಂಸ್ಕೃತ ಕವಿಗಳನ್ನೂ, ಶಾಸನ ಕವಿಗಳನ್ನೂ ಉಲ್ಲೇಖಿಸಿ ಇಂತಹ ಪಾಂಡಿತ್ಯವಿರುವ ಕವಿ ಕನ್ನಡದಲ್ಲಿಯೂ ಬರೆದಿರಬಹುದೆಂಬ ಸಂದೇಹವನ್ನು ಹಲವರ ವಿಚಾರದಲ್ಲಿ ವ್ಯಕ್ತಪಡಿಸಿದ್ದಾರೆ. ಇವರ ಮುಂದಿನ ಚರಿತ್ರೆಕಾರರು ಇವರು ಉಲ್ಲೇಖಿಸಿರುವ ಕವಿಗಳ ಕುರಿತಾದ ಹೆಚ್ಚಿನ ಮಾಹಿತಿ, ಇವರು ಉಲ್ಲೇಖಿಸದಿರುವ ಕವಿಗಳ ವಿಚಾರಗಳನ್ನು ಚರ್ಚಿಸಿದ್ದಾರಾದರೂ ಕವಿಯತ್ರಿಯರ ವಿಚಾರದಲ್ಲಿ ಈ ಮಟ್ಟಿಗಿನ ದಾಖಲೀಕರಣ ನಡೆದಿಲ್ಲ. ಉದಾಹರಣೆಗೆ ಸುಮಾರು ೧೩ನೆಯ ಶತಮಾನದಲ್ಲಿದ್ದ ಕಲ್ಯಾಣದೇವಿಯು "ವಾಯುಸ್ತುತಿ" ಎಂಬ ಸಂಸ್ಕೃತ ಪದ್ಯವನ್ನು ರಚಿಸಿದ್ದಾಳೆ. ಇವರು ರಚಿಸಿರುವ ಕೆಲವು ಸ್ತೋತ್ರಗೀತೆಗಳಲ್ಲಿ 'ತಾರತಮ್ಯ ಸ್ತೋತ್ರ' ಮುಖ್ಯವಾದುದು. ಮಹಿಳೆಯರ ಇಂಥ ದಾಖಲೆಗಳು, ಮುಂದಿನ ಸಂಶೋಧನೆಗೆ ನಾಂದಿಯಾಗುವುದು. ಆದರೆ ಸಾಹಿತ್ಯ ಚರಿತ್ರೆಗಳಲ್ಲಿ ಇಂಥ ಉಲ್ಲೇಖಗಳನ್ನು ಕೈಬಿಟ್ಟಿರುವುದು ಒಂದು ದೊಡ್ಡ ಕೊರತೆಯಾಗಿದೆ.

ಉಷ ಅವರು ತಮ್ಮ 'ಮಹಿಳಾ ಸಾಹಿತ್ಯಚರಿತ್ರ ರಚನಾಕ್ರಮ' ಲೇಖನದಲ್ಲಿ ಮಹಿಳಾ ಸಾಹಿತ್ಯ ಚರಿತ್ರೆಯೊಳಗೆ ಕಾಲಾನುಕ್ರಮಣಿಕೆಯ ಪ್ರಶ್ನೆಯನ್ನು ಮೀರಿ ಮಹಿಳಾ ಜನಪದ ಸಾಹಿತ್ಯ ಸೇರಿಸಿಕೊಳ್ಳುವುದನ್ನು

ಗಮನಿಸಬೇಕೆಂದಿದ್ದಾರೆ. ಮುಂದುವರಿದು ೧೯೮೦ರ ದಶಕದ ಪೂರ್ವದಲ್ಲಿ ಕಂಡುಬರುವ ಮಹಿಳಾ ಸಾಹಿತ್ಯ ಚರಿತ್ರೆ ರಚನೆಯ ಪ್ರಯತ್ನಗಳು ಕನ್ನಡ ಸಾಹಿತ್ಯ ಚರಿತ್ರ ರಚನೆಯ ಮುಂದುವರಿಕೆಯಾಗಿ, ಅದರ ಅಧೀನದಲ್ಲಿಯೇ ಎರಡು ಮಾದರಿಗಳಲ್ಲಿ ಮುಂದುವರಿಯುತ್ತದೆ. ಅದೇ ವಿಭಜನಾ ಕ್ರಮವನ್ನು ಕಾಲಾನುಕ್ರಮಣಿಕೆಯನ್ನು ಅನುಸರಿಸಿ ವಿಧೇಯತೆಯನ್ನು ಮೆರೆದುದಾಗಿದೆ ಎಂದಿದ್ದಾರೆ.

ಮಹಿಳೆಯರಿಗೆ ನೀಡಿದ ಸ್ಥಾನಮಾನದಿಂದ ಯಾವುದೇ ದೇಶದ ಸಂಸ್ಕೃತಿಯ ಉತ್ಕೃಷ್ಟತೆ ತಿಳಿದುಬರುತ್ತದೆ. ಸಾಹಿತ್ಯವು ಆಯಾ ಕಾಲದ ಸಮಾಜ ಮಹಿಳೆಯನ್ನು ಯಾವರೀತಿ ಕಾಣುತ್ತಾ ಬಂದಿದೆ ಎಂಬುದನ್ನು ಅರಿಯುವ ಸಾಧನವಾಗಿದೆ.

ಸಾಹಿತ್ಯ ಚರಿತ್ರೆಯು ಒಂದು ರಾಜ್ಯ, ಜನಾಂಗದ ಸಾಂಸ್ಕೃತಿಕ ವೈಭವವನ್ನು ಕುರಿತು ಹೇಳುವ ಅತ್ಯುತ್ತಮ ದಾಖಲೆಯಾಗಿದೆ. ಈ ವಲಯದಲ್ಲಿ ಮಹಿಳೆಯರ ಸಾಧನೆಯನ್ನು ಗುರುತಿಸಿ ಹೇಳುವುದು ಇಲ್ಲಿನ ವೈಭವಕ್ಕೆ ಮತ್ತಷ್ಟು ಮೆರುಗನ್ನು ನೀಡುತ್ತದೆ. "ಲೇಖಕನ ಜೀವನಚರಿತ್ರೆ, ಸಾಹಿತ್ಯಗಳನ್ನು ಚರಿತ್ರೆಕಾರ ಗಮನಿಸಬೇಕಾದ ಮುಖ್ಯವಿಚಾರ, ಈ ಚರಿತ್ರೆ ಕೇವಲ ಘಟನೆಗಳ ಪಟ್ಟಿಯಲ್ಲ ಅದು ಒಬ್ಬ ಲೇಖಕನ ಅಥವಾ ಒಂದು ಅವಧಿಯ ಲೇಖಕರ ಜೀವನಾನುಭವಸಾರ"[೩೫]. ಈ ಅನುಭವ ಸಾರದಲ್ಲಿ ಮಹಿಳೆಯರ, ಲೇಖಕಿಯರ ಅನುಭವ ಸೇರದೆ ಸಮಾಜದ ಸಾಂಸ್ಥಿಕ ವ್ಯವಸ್ಥೆಯ ಪರಿಪೂರ್ಣ ಅರಿವು ನೀಡಲು ಸಾಧ್ಯವಾಗುವುದಿಲ್ಲ. ಸಾಹಿತ್ಯ ಚರಿತ್ರೆಯನ್ನು ಸಾಮಾನ್ಯರು ಹಾಗೂ ಸಾಹಿತ್ಯದ ವಿದ್ಯಾರ್ಥಿಗಳಿಬ್ಬರನ್ನೂ ಗಮನದಲ್ಲಿರಿಸಿಕೊಂಡು ರಚಿಸಲಾಗಿರುತ್ತದೆ. ಜೊತೆಗೆ ಪಠ್ಯಪುಸ್ತಕವಾಗಿರುವ ಈ ಕೆಲವು ಸಾಹಿತ್ಯಚರಿತ್ರೆಗಳಲ್ಲಿ ಲೇಖಕಿಯರ ಉಲ್ಲೇಖ ಸಮರ್ಪಕವಾಗಿಲ್ಲದಿರುವುದು ಕೇವಲ ಲೇಖಕಿಯರಿಗಷ್ಟೇ ಅಲ್ಲ ಒಂದು ನಾಡಿನ ಇತಿಹಾಸ, ಸಂಸ್ಕೃತಿಯನ್ನು ಬಿಂಬಿಸುವಲ್ಲಿ ಪ್ರಮುಖ ಕೊರತೆಯಾಗಿ ತೋರುವುದು.

ಈ ಅಧ್ಯಾಯದಲ್ಲಿ ಗಮನಿಸಿದಂತೆ ಹಲವಾರು ಕವಯತ್ರಿಯರ ಉಲ್ಲೇಖ ಸಮರ್ಪಕವಾಗಿ ಪ್ರಸಿದ್ಧ ಸಾಹಿತ್ಯ ಚರಿತ್ರೆಗಳಲ್ಲಿಯೇ ದಾಖಲಾಗಿಲ್ಲ. ಸಂಚಿಹೊನ್ನಮ್ಮ, ಚೆಲುವಾಂಬೆ ಮೊದಲಾದವರ ಕೃತಿರಚನೆಯ ಕುರಿತು ಸಂದೇಹ ವ್ಯಕ್ತಪಡಿಸುವುದು, ಇತರರು ಇವರ ಹೆಸರಿನಲ್ಲಿ ಬರೆದಿರಬಹುದೆಂಬ ಊಹೆಗಳನ್ನು ಮಾಡುವುದು, ಹೆಚ್ಚಿನ ಮಾಹಿತಿ ದೊರತಿಲ್ಲವೆಂಬ ಕಾರಣದಿಂದ ಕಂತಿಯ ಉಲ್ಲೇಖವನ್ನೇ ಕೈಬಿಡುವುದು, ಕವಿಚರಿತೆಯಲ್ಲಿ ದಾಖಲು ಪಡೆದು, ಮಾಹಿತಿ ಲಭ್ಯವಿದ್ದರೂ ಆನಂತರ ಬಂದ ಸಾಹಿತ್ಯ ಚರಿತ್ರೆಗಳಲ್ಲಿ ಕವಯತ್ರಿಯರು ಉಲ್ಲೇಖಗೊಳ್ಳದಿರುವುದನ್ನು 'ಮಹಿಳೆಯ ಸಾಹಿತ್ಯ ಚರಿತ್ರೆಯ ದಾಖಲೀಕರಣದಲ್ಲಿ ಲಿಂಗರಾಜಕಾರಣ ನಡೆದಿದೆ' ಎಂದೇ ಖಂಡಿಸಬೇಕಾಗುತ್ತದೆ.

**ಟಿಪ್ಪಣಿಗಳು ಹಾಗೂ ಆಕರಗ್ರಂಥಗಳು**


೧. ನರಸಿಂಹಾಚಾರ್.ಆರ್., ೨೦೧೧, ***ಕರ್ಣಾಟಕ ಕವಿಚರಿತೆ,*** ಕ.ಸಾ.ಪ, ಬೆಂಗಳೂರು, ಪು.೧೧

೨. ವೆಂಕಟಾಚಲಶಾಸ್ತ್ರಿ.ಟಿ.ವಿ(ಸಂ) ೨೦೦೧, ಡಾ.***ಎ.ವೆಂಕಟಸುಬ್ಬಯ್ಯನವರ ಸಂಶೋಧನ ಲೇಖನಗಳು*** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ಪು.೭೫

೩. M.A.R. ೧೯೧೬, ಪು.೫೦

೪. ನರಸಿಂಹಾಚಾರ್.ಆರ್., ೨೦೧೧, ಮುನ್ನುಡಿ, ***ಕರ್ಣಾಟಕ ಕವಿಚರಿತೆ***, ಸಂಪುಟ–೩, ಕ.ಸಾ.ಪ, ಬೆಂ, ಪು.೬೪

೫. ನರಸಿಂಹಾಚಾರ್.ಡಿ.ಎಲ್., ೧೯೭೧, ***ಪೀಠಿಕೆಗಳು ಲೇಖನಗಳು***, ಡಿ.ವಿ.ಕೆ.ಮೂರ್ತಿ, ಮೈಸೂರು ಪು.೯೩

೬. ಶ್ರೀನಿವಾಸ ಹಾವನೂರ, ೧೯೭೪, ***ಹೊಸಗನ್ನಡದ ಅರುಣೋದಯ***, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ ಪು.೪೪೪–೪೭

೭. ಕಿಟೆಲ್, ೧೯೮೮, **Nagavarma's Canarese Prosody'**, ದ್ವಿತೀಯ ಮುದ್ರಣ, ಏಷ್ಯನ್ ಎಜುಕೇಷನಲ್ ಸರ್ವೀಸಸ್, ನವದೆಹಲಿ, ಪು. XXIV-LXXXI

೮. ಶ್ರೀಕಂಠಯ್ಯ.ಬಿ.ಎಂ. ೧೯೭೪, ***ಕನ್ನಡ ಸಾಹಿತ್ಯದ ಚರಿತ್ರೆ,*** 'ಕನ್ನಡ ಕೈಪಿಡಿ', ೨ ಪ್ರಸಾರಾಂಗ, ಮೈಸೂರು, ಪು.೩೯೬

೯. ರೈಸ್.ಇ.ಪಿ. ೧೯೨೧, ***A History of Kanarese Literature*** ಅಸೋಸಿಯೆಷನ್ ಪ್ರೆಸ್, ೫,ರಸ್ಸಲ್ ಸ್ಟ್ರೀಟ್, ಕಲ್ಕತ್ತ

೧೦. ನರಸಿಂಹಾಚಾರ್.ಆರ್., ೨೦೧೧, ***ಕರ್ಣಾಟಕ ಕವಿಚರಿತೆ,*** ಕ.ಸಾ.ಪ, ಬೆಂಗಳೂರು, ಪು.೩೮

೧೧. ಪೂರ್ವೋಕ್ತ, ಪು.೭೬

೧೨. ಶ್ರೀಕಂಠಯ್ಯ.ಬಿ.ಎಂ. ೧೯೭೪, ***ಕನ್ನಡ ಸಾಹಿತ್ಯದ ಚರಿತ್ರೆ,*** 'ಕನ್ನಡ ಕೈಪಿಡಿ', ೨ ಪ್ರಸಾರಾಂಗ, ಮೈಸೂರು

೧೩. ಶ್ರೀಕಂಠಯ್ಯ.ಬಿ.ಎಂ. ೧೯೭೪, ***ಕನ್ನಡ ಸಾಹಿತ್ಯದ ಚರಿತ್ರೆ,*** ಕನ್ನಡ ಕೈಪಿಡಿ–೧ ಪ್ರಸಾರಾಂಗ, ಮೈಸೂರು, ಪು.೫೫

೧೩ಅ. ಮರಿಯಪ್ಪ ಭಟ್ಟ.ಎಂ, ೧೯೬೦, ***ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ,*** ಭಾರತಿ ಪ್ರಕಾಶನ, ಮೈಸೂರು

೧೪. ರಂ.ಶ್ರೀ.ಮುಗಳಿ, ೧೯೬೮, ಕನ್ನಡ ಸಾಹಿತ್ಯದ ಇತಿಹಾಸ ಸಾಹಿತ್ಯ ಅಕಾಡೆಮಿ, ನವದೆಹಲಿ

೧೪ಅ. ಅನಂತರಂಗಾಚಾರ್.ಎನ್., ೧೯೭೦, ***ಸಾಹಿತ್ಯಭಾರತಿ,*** ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೧೫. ವೆಂಕಟರಾಮಪ್ಪ.ಕೆ, ೧೯೭೪, ***ಕನ್ನಡ ಸಾಹಿತ್ಯ ಚರಿತ್ರೆ,*** ವೆಸ್ಲಿಪ್ರೆಸ್, ಮೈಸೂರು

೧೬ ಮರುಳಯ್ಯ.ಸಾ.ಶಿ., ೨೦೦೧, **'*ಕೆಳದಿ ಅರಸರ ಕಾಲದ ಕನ್ನಡ ಸಾಹಿತ್ಯ*'**, ಸಪ್ನ ಬುಕ್‌ಹೌಸ್, ಬೆಂಗಳೂರು

೧೭. ಶ್ರೀನಿವಾಸ ಹಾವನೂರ, ೧೯೭೪, ***ಹೊಸಗನ್ನಡದ ಅರುಣೋದಯ***, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು

೧೮. ಶಿವರುದ್ರಪ್ಪ.ಜಿ.ಎಸ್(ಸಂ)., ***ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ,*** ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು

೧೯. ಟಿ.ವಿ.ವೆಂಕಟಾಚಲಶಾಸ್ತ್ರೀ (ಸಂ), ೧೯೭೪, ***ಕನ್ನಡ ಸಾಹಿತ್ಯ ಚರಿತ್ರೆ,*** ಕನ್ನಡ ಅಧ್ಯಯನ ಸಂಸ್ಥೆಯ ಮೈಸೂರು

೨೦. ಶ್ರೀಮತಿ.ಎಚ್.ಎಸ್(ಸಂ)., ೨೦೦೬, ***ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ,*** ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೧. ರಂ.ಶ್ರೀ.ಮುಗಳಿ, ೨೦೧೧, ***ಕನ್ನಡ ಸಾಹಿತ್ಯ ಚರಿತ್ರೆ,*** ಗೀತಾಬುಕ್ ಹೌಸ್, ಮೈಸೂರು,

೨೨. ತಿಪ್ಪೇರುದ್ರಸ್ವಾಮಿ.ಎಚ್, ೨೦೧೧, ***ಕರ್ಣಾಟಕ ಸಂಸ್ಕೃತಿ ಸಮೀಕ್ಷೆ***, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು,

೨೩. ಅನಂತರಂಗಾಚಾರ್.ಎನ್., ೧೯೭೦, ***ಸಾಹಿತ್ಯಭಾರತೀ*** ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೨೪. ಕೀರ್ತಿನಾಥ ಕುರ್ತುಕೋಟಿ, ೧೯೮೩, ***ಯುಗಧರ್ಮ ಹಾಗೂ ಸಾಹಿತ್ಯ ದರ್ಶನ,*** ಕನ್ನಡ ಮತ್ತು ಸಂಸ್ಕೃತಿ ವಿಶ್ವಕನ್ನಡ ಸಮ್ಮೇಳನ, ಬೆಂಗಳೂರು,

೨೫. ರಾಜಪ್ಪದಳವಾಯಿ, ೧೯೯೬, ***ಕನ್ನಡ ಸಾಹಿತ್ಯಕೋಶ,*** ಶ್ರೀ ರಾಘವೇಂದ್ರ ಪ್ರಕಾಶನ, ಬೆಂಗಳೂರು

೨೬. ಇಮ್ಮಡಿ ಶಿವಬಸವಸ್ವಾಮಿಗಳು, ೧೯೯೯, ***ಸಂಸ್ಕೃತ ಸಾಹಿತ್ಯಕ್ಕೆ ಕರ್ನಾಟಕದ ಕೊಡುಗೆ'*** ಸಂವಹನ, ಶಿವರಾಂ ಪೇಟೆ, ಮೈಸೂರು

೨೭. ಸರೋಜಿನಿ ಮಹಿಷಿ, ೧೯೬೫, ***ಕರ್ನಾಟಕದ ಕವಯತ್ರಿಯರು***, ಕ.ಸ.ಸಾಹಿತ್ಯ ಸಂಘ, ಧಾರವಾಡ

೨೮. ಸಬಿಹಾ ಭೂಮಿಗೌಡ, ೨೦೦೬, ***ನುಡಿಗವಳ*** (ಮಹಿಳೆಯರ ಸೃಜನೇತರ ಸಾಹಿತ್ಯದ ಅವಲೋಕನ), ಕ.ಸಾ.ಪ ಬೆಂಗಳೂರು

೨೯ ಶ್ರೀಮತಿ.ಎಚ್.ಎಸ್(ಸಂ)., ೨೦೦೬, ***ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ,*** ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೦. ಮರುಳಯ್ಯ.ಸಾ.ಶಿ (ಸಂ)., ಗಂಗಾದೇವಿ, ***ಕೆಳದಿ ರಾಜ್ಯಾಭ್ಯುದಯಂ,*** ಬೆಂಗಳೂರು

೩೧. ಕಮಲಾ ಹಂಪನಾ (ಸಂ)., ೨೦೦೪, ನಾಗಲಾದೇವಿ, ***ಷೋಡಶಭಾವನಾ ಕಾವ್ಯ,*** ಜೈನ ಅಧ್ಯಯನ ಸಂಸ್ಥೆ, ಶ್ರವಣಬೆಳಗೊಳ

೩೨. E.C XI ಚಿತ್ರದುರ್ಗ ಶಾ.ಸಂ.೨೪

೩೩. ರಾಜಶೇಖರಪ್ಪ.ಬಿ, ೨೦೦೧, ***ಇತಿಹಾಸ ಕಥನ,*** ಸಿ.ವಿ.ಜಿ.ಪಬ್ಲಿಕೇಷನ್ಸ, ಬೆಂ. ಪು.೧೩೨

೩೪. KI. ಸಂ.iv ೩೪ ನೂಲಗೇರಿ (ತಾ) ಧಾರವಾಡ (ಕ್ರಿ.ಶ.೧೧೧೯)

೩೫. ರಂ.ಶ್ರೀ.ಮುಗಳಿ, ೧೯೭೪, ***ಕನ್ನಡ ಸಾಹಿತ್ಯ ಚರಿತ್ರೆ,*** ಗೀತಾಬುಕ್ ಹೌಸ್, ಮೈಸೂರು, ಪು.೨೯

# ಅಧ್ಯಾಯ – ೩

# ಕರ್ನಾಟಕದ ರಾಣಿಯರು

## ಆಡಳಿತ ಮತ್ತು ಕೊಡುಗೆ

ಸುಮಾರು ಎರಡು ಸಾವಿರ ವರ್ಷಗಳ ಕರ್ನಾಟಕದ ರಾಜಕೀಯ ಇತಿಹಾಸದಲ್ಲಿ, ಅನೇಕ ರಾಜಮನೆತನಗಳು ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ್ದನ್ನು ಕಾಣುತ್ತೇವೆ. ಬಹುಪತ್ನಿವಲ್ಲಭನಾದ ದೊರೆಯ ಮಡದಿಯರಲ್ಲಿ ಪಟ್ಟದರಸಿಯ ಉಲ್ಲೇಖ ಮಾತ್ರ ರಾಜನ ಹೆಸರಿನೊಂದಿಗೆ ದಾಖಲಾಗುವುದು ಸಾಮಾನ್ಯ ಸಂಗತಿ. ಉಳಿದ ಅರಸಿಯರು ತಮ್ಮ ಸಾಧನೆಗಳ ಮೂಲಕ ಶಾಸನಗಳಲ್ಲಿ, ಸಾಹಿತ್ಯಗಳಲ್ಲಿ ಉಲ್ಲೇಖಿತರಾಗಿದ್ದಾರೆ. ಕೇವಲ ರಾಜನ ಮಡದಿಯಾಗಷ್ಟೇ ಅಲ್ಲದೆ ಕೆಲವೊಂದು ಗಮನಾರ್ಹ ಕಾರ್ಯಗಳಿಂದ ಇತಿಹಾಸದಲ್ಲಿ ತಮ್ಮ ಹೆಸರುಗಳನ್ನು ದಾಖಲಿಸಿದ ಅನೇಕ ಅರಸಿಯರ ವಿಚಾರಗಳು ಇತಿಹಾಸದ ಕೆಲವು ಆಕರಗಳಿಂದ ದೊರಕುತ್ತದೆ. ಬಹುಪಾಲು ಮಾಹಿತಿಗಳು ಅರಸಿಯರು ಕೈಕೊಂಡ ಧಾರ್ಮಿಕ ಕಾರ್ಯಗಳನ್ನು ತಿಳಿಸುವ ವಿಚಾರಗಳೊಂದಿಗೇ ಲಭಿಸಿವೆಯಾದರೂ, ಕೆಲವು ಅರಸಿಯರು ಸ್ವತಂತ್ರವಾಗಿ ರಾಜಕೀಯ, ಸಾಂಸ್ಕೃತಿಕ, ಶೈಕ್ಷಣಿಕ, ಸಾಮಾಜಿಕ ವಲಯಗಳಲ್ಲಿ ಉಲ್ಲೇಖಾರ್ಹ ಸಾಧನೆಗಳನ್ನು ನಡೆಸುವುದರ ಮೂಲಕ ಗುರುತಿಸಿಕೊಂಡಿದ್ದಾರೆ.

ಈ ಅಧ್ಯಾಯದಲ್ಲಿ ಕರ್ನಾಟಕದ ವಿಭಿನ್ನ ರಾಜಮನೆತನಗಳ ರಾಣಿಯರು, ರಾಜಮಾತೆ, ರಾಜಕುಮಾರಿಯರ ಸಂಕ್ಷಿಪ್ತ ಮಾಹಿತಿಯನ್ನು ಒಂದೆಡೆ ಗಮನಿಸಲಾಗಿದೆ. ಕೇವಲ ಅಧಿಕಾರ ಚುಕ್ಕಾಣಿ ಹಿಡಿದ ರಾಣಿಯರನ್ನು ಮಾತ್ರ ಗಮನಿಸದೆ, ಅಧಿಕಾರದಲ್ಲಿ ಪಾಲ್ಗೊಳ್ಳದೆಯೂ ದಾನ, ಧಾರ್ಮಿಕ ಕಾರ್ಯಗಳು, ಸಾಂಸ್ಕೃತಿಕ ಕೊಡುಗೆ ನೀಡಿದ, ಕೊಡುಗೆ ನೀಡಲು ಪ್ರೇರಣೆಯಾದ ರಾಜಮನೆತನದ ಮಹಿಳೆಯರನ್ನು ಇಲ್ಲಿ ಗುರುತಿಸಲಾಗಿದೆ. ಇಲ್ಲಿ ಅರಸಿಯರು ಅಧಿಕಾರ ನಡೆಸಿದ ಸಂದರ್ಭ ಹಾಗೂ ಅವರು ನೀಡಿದ ಕೊಡುಗೆಗಳಿಗೆ ಮಹತ್ವ ನೀಡಲಾಗಿದೆಯಾದ್ದರಿಂದ, ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ಪ್ರಸಿದ್ಧ ರಾಜಮನೆತನದ ಅರಸಿಯರ ಜೊತೆಗೆ ಸಣ್ಣಪುಟ್ಟ ಪ್ರದೇಶವನ್ನಾಳಿದ ನಾಯಕಿಯರ ವಿಚಾರಗಳನ್ನು ಗಮನಿಸಲಾಗಿದೆ. 'ತೊಟ್ಟಿಲನ್ನು ತೂಗುವ ಕೈ ಜಗವನ್ನಾಳುವುದು' ಎಂಬುದು ಕೇವಲ ಪಡೆನುಡಿಯಲ್ಲ ಎಂಬುದನ್ನು ಕರ್ನಾಟಕದ ವಿಭಿನ್ನ ಮನೆತನಗಳಲ್ಲಿ, ವಿಭಿನ್ನ ಕಾಲಘಟ್ಟಗಳಲ್ಲಿ, ವಿಶಿಷ್ಟ ಸನ್ನಿವೇಶಗಳಲ್ಲಿ ಸಾಧಿಸಿ ತೋರಿಸಿರುವ ಅರಸಿಯರ ಇತಿಹಾಸದಲ್ಲಿ ಕಾಣುತ್ತೇವೆ.

ಪ್ರಾಚೀನಕಾಲದಿಂದಲೂ ಕರ್ನಾಟಕದಲ್ಲಿ ಮಹಿಳೆಯರಿಗೆ ಉಚಿತವಾದ ಸ್ಥಾನಮಾನ, ಸ್ವಾತಂತ್ರ ನೀಡಲಾಗಿತ್ತೆಂಬುದನ್ನು ಇಲ್ಲಿ ಕಾಣುತ್ತೇವೆ. ರಾಜಮನೆತನಗಳ ಹಾಗೂ ಸಮಾಜದ ಮೇಲ್ವರ್ಗದ ಮಹಿಳೆಯರಿಗೆ ತಕ್ಕಮಟ್ಟಿಗಿನ ಸ್ವಾತಂತ್ರ, ವಿದ್ಯಾಭ್ಯಾಸದ ಅವಕಾಶಗಳಿತ್ತು. ಆದರೆ ಇವು ದೇಶ–ಕಾಲ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಕೆಲವೊಮ್ಮೆ ಬದಲಾಗಿರುವುದನ್ನು ಕಾಣುತ್ತೇವೆ. ಆದರೆ ತಮಗೆ ದೊರೆತ ವಿದ್ಯೆ, ಸ್ವಾತಂತ್ರ, ಅವಕಾಶಗಳನ್ನು ಅವರು ಬಳಸಿಕೊಂಡು ಸಾಧನೆಗೈಯುವಲ್ಲಿ ಎಷ್ಟರಮಟ್ಟಿಗೆ ಯಶಸ್ವಿಯಾಗಿದ್ದಾರೆ ಎನ್ನುವುದು ಚರಿತ್ರೆಯಲ್ಲಿ ಮುಖ್ಯವಾಗುತ್ತದೆ.

ಸಾವಿರಾರು ವರ್ಷದ ಇತಿಹಾಸದುದ್ದಕ್ಕೂ ಕಂಡುಬರುವ ಕರ್ನಾಟಕದ ಅರಸಿಯರ ಕುರಿತಾದ ಸಮಗ್ರ ವಿಚಾರವನ್ನೂ ಒಂದೆಡೆ ವಿಶ್ಲೇಷಿಸುವುದು ದುಃಸ್ಸಾಹಸವೆನಿಸುತ್ತದೆ. ಇವರಲ್ಲಿ ಅಪಾರ ಜನಮನ್ನಣೆಗಳಿಸಿ ದಾಖಲೆ ಸೃಷ್ಟಿಸಿದ ಕೆಲವು ಅರಸಿಯರ ಸಂಕ್ಷಿಪ್ತ ಮಾಹಿತಿಯ ಪಟ್ಟಿಕೆಯೊಂದನ್ನು ಸಿದ್ಧಪಡಿಸಿಕೊಂಡು ಇವರ ಸಾಧನೆಯ

ಕುರಿತಾದ ಸ್ಥೂಲನೋಟವನ್ನು ವಿಶ್ಲೇಷಿಸಲಾಗಿದೆ. ಅರಸಿಯರ ಆಡಳಿತ ಮತ್ತು ಕೊಡುಗೆಯನ್ನು ಗಮನಿಸುವ ನಿಟ್ಟಿನಲ್ಲಿ ಅಧಿಕಾರದ ಚುಕ್ಕಾಣಿ ಹಿಡಿದ ಕರ್ನಾಟಕದ ವಿವಿಧ ಕಾಲದ, ಮನೆತನದ ಅರಸಿಯರ ಅಗತ್ಯ ಮಾಹಿತಿಗಳನ್ನು ಒಳಗೊಂಡ ಪಟ್ಟಿಕೆಯು ಅರಸಿಯರ ಸಾಧನೆಯ ಕುರಿತಾದ ಸ್ಥೂಲನೋಟವನ್ನು ಕಟ್ಟಿಕೊಡಲು ಸಹಾಯಕವಾಗುತ್ತದೆ. ಆಡಳಿತದ ಚುಕ್ಕಾಣಿ ಹಿಡಿಯದ ಅರಸಿಯರೂ ಹಲವು ಉತ್ತಮ ಕೊಡುಗೆ ಕೊಟ್ಟಿರುವುದನ್ನು ಗಮನಿಸಬಹುದು. ಇಲ್ಲಿ ಕೇವಲ ಉದಾಹರಣೆಗೆಂದು ಆಳ್ವಿಕೆ ನಡೆಸದೆ ಕೊಡುಗೆ ನೀಡಿದ ಕೆಲವು ಅರಸಿಯರ ಮಾಹಿತಿ ಒದಗಿಸುವ ಪಟ್ಟಿಕೆಯನ್ನೂ ನೀಡಲಾಗದೆ.

ಆಳ್ವಿಕೆ ನಡೆಸಿದ ಅರಸಿಯರು ಪಟ್ಟಿಕೆಯಲ್ಲಿ ಅರಸಿಯರು, ಅರಸು ಮನೆತನ, ಅರಸಿಯರ ಕಾಲದೊಂದಿಗೆ ಆಳ್ವಿಕೆಗೆ ಸಂಬಂಧಿಸಿದಂತೆ ಅವರ ಕುರಿತಾದ ಇತರ ಮಾಹಿತಿಗಳ ಸಂಕ್ಷಿಪ್ತ ವಿಚಾರ ನೀಡಲಾಗಿದೆ. ಅರಸಿಯರು ಆಳ್ವಿಕೆ ನಡೆಸಿದ ಸಂದರ್ಭ ಕೆಲವೊಮ್ಮೆ ಭಿನ್ನವಾಗಿ ತೋರುತ್ತದೆ. ಕೆಲವರು ಪತಿಯೊಂದಿಗೆ ಆಡಳಿತದಲ್ಲಿ ಭಾಗವಹಿಸಿದರೆ ಮತ್ತೆ ಕೆಲವರು ಪತಿಯ ಆಳ್ವಿಕೆಯಲ್ಲಿ ತಮ್ಮದೇ ಆದ ಕೆಲವು ಪ್ರದೇಶಗಳನ್ನು ಸ್ವತಂತ್ರವಾಗಿ ಆಳ್ವಿಕೆ ನಡೆಸಿದ್ದಾರೆ. ಮತ್ತೆ ಕೆಲವು ಪ್ರಸಿದ್ಧ ಮನೆತನದ ಅರಸಿಯರಿಗೆ ಮದುವೆಯ ಬಳುವಳಿಯಾಗಿ ತಂದೆಯ ಕಡೆಯಿಂದ ಕೆಲವು ಪ್ರದೇಶಗಳು ದೊರೆತಿದ್ದು, ಅವುಗಳ ಆಳ್ವಿಕೆ ನಡೆಸಿದ್ದಾರೆ. ಇದಲ್ಲದೆ ಪತಿಯ ಮರಣಾನಂತರ, ಅಪ್ರಾಪ್ತ ವಯಸ್ಸಿನ ಮಕ್ಕಳ ಪರವಾಗಿ ಆಳ್ವಿಕೆ ನಡೆಸಿದ ಅರಸಿಯರು, ಅಳಿಯ ಸಂತಾನ ಸಂಪ್ರದಾಯವನ್ನು ಹೊಂದಿದ ಮನೆತನದಲ್ಲಿ ಹಿರಿಯ ಹೆಣ್ಣುಮಗಳಾಗಿ ಅಧಿಕಾರವನ್ನು ಪಡೆದ ಅರಸಿಯರೂ ಕಂಡುಬರುತ್ತಾರೆ. ಅರಸಿಯರು ಅಧಿಕಾರ ಚುಕ್ಕಾಣಿ ಹಿಡಿದ ಈ ವಿಭಿನ್ನ ಕಾರಣಗಳು ಗಮನಾರ್ಹವಾಗಿದ್ದು ಈ ಕೆಳಗಿನ ಪಟ್ಟಿಕೆಯಲ್ಲಿ ಇದನ್ನೂ ಗುರುತಿಸಲಾಗಿದೆ. ಇದರೊಂದಿಗೆ ಅರಸಿಯರು ಆಳ್ವಿಕೆ ನಡೆಸಿದ ಪ್ರದೇಶ, ಆಳ್ವಿಕೆಯ ಸಂದರ್ಭದಲ್ಲಿ ಹೊರಡಿಸಿದ ಶಾಸನ, ಅರಸಿಯರ ಕೊಡುಗೆ, ಭಾಗವಹಿಸಿದ ಯುದ್ಧ ಹಾಗು ಪೋಷಿತ ಕವಿಗಳನ್ನು ಈ ಪಟ್ಟಿಕೆಯಲ್ಲಿ ಪ್ರತ್ಯೇಕವಾಗಿ ಗಮನಿಸಲಾಗಿದೆ.

ಕರ್ನಾಟಕದ ಅರಸಿಯರ ಸಾಧನೆಯನ್ನು ಸ್ಥೂಲವಾಗಿ ಗುರುತಿಸಲು ಈ ಪಟ್ಟಿಕೆಯು ಸಹಾಯಕವಾಗುತ್ತದೆ. ಇಲ್ಲಿನ ಮಾಹಿತಿಗಳನ್ನು ಹಾಗೂ ಅರಸಿಯರ ಸಾಧನೆಗಳನ್ನು ಅವರು ಹೊರಡಿಸಿರುವ ಶಾಸನಗಳನ್ನು ಆಧರಿಸಿ ದಾಖಲಿಸಲಾಗಿದೆ. ಆದರೆ ಬಹುತೇಕ ಅರಸಿಯರು ತಮ್ಮ ಸಾಧನೆಗಳನ್ನು ದಾಖಲಿಸದೇ ಇರುವುದು ಕೂಡ ಗಮನಿಸಬಹುದು, ಇಂತಹ ಕೆಲವು ವಿಚಾರಗಳನ್ನು ಇತರರ ಶಾಸನಗಳಲ್ಲಿ ದೊರಕುವ ಮಾಹಿತಿಯನ್ನು ಆದರಿಸಿ ದಾಖಲಿಸಬೇಕಾಗುತ್ತದೆ. ಅರಸಿಯೋರ್ವಳು ಅಧಿಕಾರ ನಡೆಸುತ್ತಿದ್ದ ವಿಚಾರ ಅವಳ ಕೈಕೆಳಗಿನ ಅಧಿಕಾರಿ ಹಾಕಿಸಿರುವ ಶಾಸನದಲ್ಲಿ ಕಂಡುಬರುತ್ತದೆ. ಈತ ತನ್ನನ್ನು ಪರಿಚಯಿಸಿಕೊಳ್ಳುವಾಗ ತಾನು ಇಂತಹ ಅರಸಿಯ ಪಾದಪದ್ಮೋಪಜೀವಿ ಎಂತಲೋ, ಇಂತಹ ಅರಸಿಯ ಆಡಳಿತಾವಧಿಯಲ್ಲಿ ಈ ಶಾಸನ ಹೊರಡಿಸಲಾಗಿದೆ ಎಂದೋ ತಿಳಿಸುವ ಮಾಹಿತಿಯ ಆಧಾರದಿಂದ ಅರಸಿಯನ್ನು ಗುರುತಿಸುವ ಸಂದರ್ಭ ಎದುರಾಗುತ್ತದೆ.

ಈ ಪಟ್ಟಿಕೆಯಲ್ಲಿ ಆಡಳಿತ ನಡೆಸಿದ ಕರ್ನಾಟಕದ ಅರಸಿಯರ ಮಾಹಿತಿಯನ್ನು ಸಮಗ್ರವಾಗಿ ನೀಡಲು ಪ್ರಯತ್ನಿಸಲಾಗಿದೆಯಾದರೂ ನಿಖರವಾದ ಅಂಕಿ ಅಂಶವನ್ನು ನೀಡುವುದು ದುಃಸ್ಸಾಹಸವೆನಿಸುತ್ತದೆ. ಇದರ ಕಾರಣವನ್ನು ಈ ಹಿಂದಿನ ಅಧ್ಯಾಯದಲ್ಲಿ ಆಕರಗಳು ಹಾಗೂ ಸಮಸ್ಯೆ ಶೀರ್ಷಿಕೆಯ ಅಡಿಯಲ್ಲಿ ಚರ್ಚಿಸಲಾಗಿದೆ. ಸಾವಿರಾರು ವರ್ಷಗಳ ಇತಿಹಾಸವಿರುವ ವಿಶಾಲ ಕರ್ನಾಟಕದ ಎಲ್ಲ ಅರಸು ಹಾಗೂ ಸಾಮಂತ ಮನೆತನದ ಮಹಿಳೆಯರು ದಾನ–ದತ್ತಿಗಳನ್ನು ನೀಡಿರುವ ವಿವರಗಳನ್ನು ಒಂದೆಡೆ ಕಲೆಹಾಕುವುದು ಅಸಾಧ್ಯದ ಕೆಲಸವಾಗಿದೆ. ಆಳ್ವಿಕೆ ನಡೆಸದ ಅರಸಿಯರ ಕುರಿತಾದ ಎರಡನೆಯ ಪಟ್ಟಿಕೆಯಲ್ಲಿ ಪ್ರಸಿದ್ಧ ಅರಸಿಯರನ್ನು ಕೆಲವು ವಿವರಗಳನ್ನು ಮಾತ್ರ ನೀಡಲಾಗಿದೆ.

## ಆಳ್ವಿಕೆ ನಡೆಸಿದ ಅರಸಿಯರು

| ಅರಸಿಯರು | ರಾಜಮನೆತನ | ಕಾಲ | ಆಳ್ವಿಕೆಯ ಕಾರಣ | ಆಳಿದ ಸ್ಥಳ | ಹೊರಡಿಸಿದ ಶಾಸನ | ಸಾಧನೆ – ಧಾರ್ಮಿಕ, ಸಾಮಾಜಿಕ ಕೊಡುಗೆ, ಯುದ್ಧ | ಸಾಂಸ್ಕೃತಿಕ ಕೊಡುಗೆ |
|---|---|---|---|---|---|---|---|
| **ವಿಜ್ಜಿಕಾ / ವಿಜಯ ಭಟ್ಟಾರಿಕ** | ಬಾದಾಮಿ ಚಳುಕ್ಯ ಚಂದ್ರಾದಿತ್ಯನ ರಾಣಿ | ೭ನೆಯ ಶತಮಾನ | ಪತಿಯೊಂದಿಗೆ ಆಳ್ವಿಕೆ, ಪತಿಯ ಮರಣಾನಂತರ ಮಾಂಡಳಿಕಳಾಗಿ ಆಳ್ವಿಕೆ | ಸಾವಂತ ವಾಡಿಯಲ್ಲಿ ಸ್ವತಂತ್ರ ಆಳ್ವಿಕೆ | I.A vii ಪು.೧೬೩ ನೇರೂರು (ಕ್ರಿ.ಶ.೬೫೯) E.I IX ಪು.102 ಕ್ರೋಚೆ ತಾಮ್ರಪಟ | ಈ ಕ್ರೋಚೆ, ನೇರೂರು ತಾಮ್ರಪಟಗಳು ಭೂದಾನದ ವಿಚಾರದೊಂದಿಗೆ ಇವಳ ಆಳ್ವಿಕೆಯ ವಿಚರ ತಿಳಿಸುತ್ತದೆ. | ಸ್ವತಃ ಕವಯತ್ರಿ ಸಂಸ್ಕೃತದಲ್ಲಿ ನಾಟಕ, ಬಿಡಿ ಮುಕ್ತಕಗಳ ರಚನೆ. ಶಾಸನ ರಚನೆ |
| **ಲೋಕಾಂತಿಕಾ/ ಲೋಕ ಮಹಾದೇವಿ:** | ಬಾದಾಮಿ ಚಳುಕ್ಯ ವಿಕ್ರಮಾದಿತ್ಯನ ರಾಣಿ | ೮ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಅಧಿಕಾರ | ಕುರ್ತಕುಂಟ/ ಕುರ್ತಕೋಟಿ | I.A x ನಂ.೨೨ ಗದ್ವಾಲತಾಮ್ರಪಟ (ಕ್ರಿ.ಶ.೭೫೪) | ಪಟ್ಟದಕಲ್ಲಿನಲ್ಲಿ ಲೋಕೇಶ್ವರ (ವಿರೂಪಾಕ್ಷ) ದೇವಾಲಯ ನಿರ್ಮಾಣ | |
| **ಶೀಲ ಮಹಾದೇವಿ/ ಶೀಲಭಟ್ಟಾರಿಕಾ** ಬಿರುದುಗಳು: ಪರಮ ಭಟ್ಟಾರಿಕಾ, ಪರಮೇಶ್ವರಿ | ರಾಷ್ಟ್ರಕೂಟ ಧ್ರುವನ ಪಟ್ಟದ ರಾಣಿ. ವೆಂಗಿಚಾಳುಕ್ಯ ರಾಜಕುಮಾರಿ | ೮ ನೆಯ ಶತಮಾನ | ಪತಿಯೊಂದಿಗೆ ಆಳ್ವಿಕೆ | | E.I xxii, ಸಂ.೧೭ (ಕ್ರಿ.ಶ.೭೮೯) ಜಿತ್ವಾಯ್ ; E.I vi ಪು.163 ; S.I.I xx ಸಂ. ೧೦ | ಗ್ರಾಮವೊಂದನ್ನು ದಾನವಾಗಿ ಕೊಟ್ಟು, ಇದನ್ನು ನಡೆಸಿಕೊಡಲು ದುರ್ಗಾದಿತ್ಯನೆಂಬುವನಿಗೆ ಆದೇಶಿಸಿದ್ದಾಳೆ | ಸ್ವತಃ ಕವಯತ್ರಿ ಸಂಸ್ಕೃತದಲ್ಲಿ ಬಿಡಿಮುಕ್ತಕ ಗಳನ್ನು ರಚಿಸಿದ್ದಾಳೆ |
| ವಿನಿ.ತ್ರಿ ನಿಮ್ಮಡಿ /ವಿನಯವತಿ | ಗಂಗ ಶ್ರೀಪುರುಷನ ರಾಣಿ | ೮ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಆಡಳಿತ | ಮಣಿವೆಲ್ಲೂರು | E.C *Sup* xvi ತುಮಕೂರು | | |
| ಕಂಚಿಕಬ್ಬೆ | ಗಂಗ ದುಗ್ಗಮಾರ ಎಱೆಯಪ್ಪನ ಅರಸಿ | ೮ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಆಡಳಿತ | ಆಗಳಿ | E.C V. ಚೆನ್ನರಾಯಪಟ್ಟಣ | | |
| ಚಂದ್ರೋಬ್ಬಲಬ್ಬೆ | ಗಂಗ ಬೂತುಗನ ೧ ರಾಣಿ ರಾಷ್ಟ್ರಕೂಟ ರಾಜಕುಮಾರಿ | ೮ನೆಯ ಶತಮಾನ | ಮದುವೆಯ ಬಳುವಳಿಯಾಗಿ ದೊರೆತಿದ್ದ ಪ್ರದೇಶಗಳ ಆಳ್ವಿಕೆ | ರಾಯಚೂರು ದೋಅಬ್ (ಕೃಷ್ಣ–ತುಂಗಭದ್ರಾ ನದಿಗಳ ನಡುವಣ ಪ್ರದೇಶ) | | | |

| | | | | | | | |
|---|---|---|---|---|---|---|---|
| **ನೊಳಂಬ ಮಾದವೆ** | ನೊಳಂಬ ರಾಜಕುಮಾರಿ<br><br>ಸಿಂಹಪೋತನ ಮಗಳು | ೯ ನೆಯ ಶತಮಾನ | ತನ್ನ ಸಹೋದರ ಚಾರುಪೊನ್ನೇರನ ಆಳ್ವಿಕೆಯಲ್ಲಿನ ಆಡಳಿತ | ಮದರಿಕಲ್ಲು | ಚಿತ್ರದುರ್ಗದ ಚಳ್ಳಕೆರೆಯ ಶಾಸನದಲ್ಲಿ ಉಕ್ತಳಾಗಿದ್ದಾಳೆ | | |
| **ಗವಗಣಬ್ಬೆ** | ನೊಳಂಬ ಚಾರುಪೊನ್ನೇರನ ರಾಣಿ | ೯ ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಆಡಳಿತ | ಮದರಿಕಲ್ಲು | E.C xi ಚಿತ್ರದುರ್ಗ, ಚಳ್ಳಕೆರೆಯ | ಮದರಿಕಲ್ಲಿನಲ್ಲಿ ಗವಗಣೇಶ್ವರ ದೇವಾಲಯ ನಿರ್ಮಾಣ | |
| **ಗಾಮುಂಡಬ್ಬೆ** | ರಾಷ್ಟ್ರಕೂಟ ಮೂರನೆ ಗೋವಿಂದನ ರಾಣಿ | ೯ನೆಯ ಶತಮಾನದ ಆದಿಭಾಗ | ಪತಿಯೊಂದಿಗೆ ಆಳ್ವಿಕೆ | | I.A xi ಪು.೧೫೬<br>M.A.R. ೧೯೪೨ ಪು.೧೭೫ | ಯುದ್ಧಶಿಬಿರದಲ್ಲಿ ಪುತ್ರ ಶರ್ವ ಅಮೋಘವರ್ಷನನ್ನು ಪ್ರಸವಿಸಿದ ವೀರ ರಾಣಿ.<br>ಪತಿಯೊಡನೆ ದಂಡಯಾತ್ರೆ ಯಲ್ಲಿ ಭಾಗವಹಿಸಿ ರಾಮೇಶ್ವರ ತೀರ್ಥದಲ್ಲಿ ದಾನ ನೀಡಿದ್ದಾಳೆ | |
| **ಬಿಜಾ ಮಹಾದೇವಿ** | ನೊಳಂಬ ಮಹೇಂದ್ರನ ಅರಸಿ | ೯ನೆಯ ಶತಮಾನ | ಪತಿಯ ಆಳಿಕೆಯಲ್ಲಿ ಅಧಿಕಾರ | ಧರ್ಮ ಪೊಳಲ್ | E.C XII ಸಿರಾ ೨೪ ಕಾಮ ಗೊಂಡನಹಳ್ಳಿ | ಧಾರ್ಮಿಕ ಕಾರ್ಯಗಳಿಗೆ ದಾನ | |
| **ಪರಮ ಮಹಾದೇವಿ** | ನೊಳಂಬ ಮಹೇಂದ್ರನ ಅರಸಿ | ೯ನೆಯ ಶತಮಾನ | ಪತಿಯ ಆಳಿಕೆಯಲ್ಲಿ ಅಧಿಕಾರ | ಬರಗೂರು | ಈ ಮೇಲಿನ ಸಿರಾ ಶಾಸನದಲ್ಲಿ ಉಕ್ತಳಾಗಿದ್ದಾಳೆ | | |
| **ಮಾರಕ್ಕಬ್ಬೆ** | ನೊಳಂಬ ಮಹೇಂದ್ರನ ಅರಸಿ | ೯ನೆಯ ಶತಮಾನ | ಪತಿಯ ಆಳಿಕೆಯಲ್ಲಿ ಅಧಿಕಾರ | ಸಿಯವೂರು | ಸಿರಾ ಶಾಸನದಲ್ಲಿ ಉಕ್ತಳಾಗಿದ್ದಾಳೆ | ಧಾರ್ಮಿಕ ಕಾರ್ಯಗಳಿಗೆ ದಾನ | |
| **ಗಾಮಬ್ಬೆ** | ನೊಳಂಬ ಮಹೇಂದ್ರನ ಅರಸಿ | ೯ನೆಯ ಶತಮಾನ | ಪತಿಯ ಆಳಿಕೆಯಲ್ಲಿ ಅಧಿಕಾರ | ತ್ರೈಲೋಕ್ಯ ಪೊಳಲ್ | ಸಿರಾ ಶಾಸನದಲ್ಲಿ ಉಕ್ತಳಾಗಿದ್ದಾಳೆ | | |
| **ಭಾಗಿಯವ್ವೆ** | ರಾಷ್ಟ್ರಕೂಟ ನಾಲ್ವಡಿ ಗೋವಿಂದನ ರಾಣಿ, ವೆಂಗಿ ಚಾಲುಕ್ಯ ರಾಜಕುಮಾರಿ | ೧೦ನೆಯ ಶತಮಾನ | ಪತಿಯೊಂದಿಗೆ ಆಳ್ವಿಕೆ | | ಅಂದೂರ ತಾಮ್ರಪಟಗಳು | ರಾಜ್ಯದ ೧೨ಜನ ಸಾಮಂತರಿಂದ ಪಟ್ಟದ ಕಿರೀಟವನ್ನು ತೊಡಿಸಿಕೊಂಡು ಪಟ್ಟದ ರಾಣಿ ಎನಿಸಿದ ವಿಶೇಷ ಸಂದರ್ಭದಲ್ಲಿ ಹಿರಣ್ಯಗರ್ಭ, ಉಭಯಮುಖಿ, ಗೋಸಹಸ್ರ ಮತ್ತು ಕಲ್ಪವೃಕ್ಷ ದಾನಯಜ್ಞಗಳ ಆಚರಣೆ ಹಾಗೂ ದಾನ | |

| | | | | | | | |
|---|---|---|---|---|---|---|---|
| **ಸರಮಬ್ಬೆ** (ಪರಮಬ್ಬೆ) | ಗಂಗ ಬೂತುಗ ೧ ಅರಸಿ | ೧೦ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಆಡಳಿತ | ಕೂರ್ಗ್ಗಲ್ಲು | E.C ಮೈಸೂರು ೯೨ ಹುಣಸೂರು, | ಕೂರ್ಗ್ಗಲ್ಲಿನ ಗಾವುಂಡ ತುಱುಗೋಳಿನಲ್ಲಿ ಮಡಿದ ವಿಚಾರ ತಿಳಿಸುವ ವೀರಗಲ್ಲು ಅರಸಿಯನ್ನು ಉಲ್ಲೇಖಿಸುತ್ತದೆ | |
| **ಬುಜಬ್ಬರಸಿ** | ಗಂಗ ಎಱೆಯಪ್ಪನ ರಾಣಿ | ೧೦ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿನ ಆಡಳಿತ | ಪುಲಿಗೆರೆ ೩೦೦ ಕ್ಕೆ ಸೇರಿದ್ದ ಪತ್ತು ಪೆರ್ಬಾಳಿನ ಆಳ್ವಿಕೆ | E.I iv ನಂ ೫೦ ಹೆಬ್ಬಾಳು (ತಾ) ಶಿರಹಟ್ಟಿ ಕ್ರಿ.ಶ.೯೭೫ | ಶಿರಹಟ್ಟಿಯ ಹೆಬ್ಬಾಳುವಿನ ದೇವಾಲಯಕ್ಕೆ ದಾನ ಹಾಗೂ ಅಲ್ಲಿ ಸೇವೆ ನಡೆಸುವವರಿಗೆ ವೃತ್ತಿ ಸಹಿತ ದತ್ತಿನೀಡಿದ್ದಾಳೆ | ಸಂಗೀತಗಾರರು ನೃತ್ಯಗಾರ್ತಿಯರ ಪೋಷಣೆ |
| **ರೇವಕ ನಿರ್ಮ್ಮಡಿ** ಬಿರುದು ಚಾಗವೆಡಂಗಿ | ಗಂಗ ಇಮ್ಮಡಿ ಬೂತುಗನ ರಾಣಿ ರಾಷ್ಟ್ರಕೂಟ ರಾಜಕುಮಾರಿ | ೧೦ನೆಯ ಶತಮಾನ | ಮದುವೆಯ ಬಳುವಳಿಯಾಗಿ ದೊರೆತಿದ್ದ ಪ್ರದೇಶಗಳಲ್ಲಿ ಹಾಗೂ ಪತಿಯೊಡನೆ ಆಳ್ವಿಕೆ | ಬೆಳ್ವೊಲ೩೦೦, ಪುಲಿಗೆರೆ ೩೦೦, ಎಡೆವೊಳಲು ೭೦, ಕಿಸು ಕಾಡು ೭೦, ಎಡದೊರೆ ನಾಡು | ಉಲ್ಲೇಖ ಬಿ.ಕೆ.ಅಯ್.li7 ಕೆಸರಭಾವಿ (ತಾ) ಹುನಗುಂದ (ಕ್ರಿ.ಶ.೮೩೭) | ಎಡದೊರೆಯ ಆಳ್ವಿಕೆಯ ಕಾಲದಲ್ಲಿ ಅಧಿಕಾರಿ ಹಾಕಿಸಿದ ಕೆಸರಬಾವಿ ಶಾಸನ | |
| **ಪದುಮಬ್ಬರ** (ಪದ್ಮಬ್ಬರಸಿ) | ಗಂಗ ಇಮ್ಮಡಿ ಬೂತುಗನ ರಾಣಿ | ೧೦ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿನ ಆಡಳಿತ | ನರೇಗಲ್ಲ / ನೆರೆಯಂಗಲ್ ೧೨ | S.I.I xi-i ಶಾ.ಸಂ.೩೮ | ಜಿನಾಲಯ ಹಾಗೂ ಕೆರೆ ನಿರ್ಮಾಣ | |
| **ಅಂಕಬ್ಬರಸಿ** | ಗಂಗ ಇಮ್ಮಡಿ ಮಾರಸಿಂಹನ ರಾಣಿ, ವೆಂಗಿಚಾಲುಕ್ಯ ರಾಜಕುಮಾರಿ. | ೧೦ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿನ ಆಡಳಿತ | ಪುಲ್ಲುಂಗೂರು | E.I xxxiv ಭಾಗ ೨ ಹುಲಗೂರು ಶಾಸನ, ಶಾ.ಸಂ ೧೨ ಪುಟ ೫೯ ; E.I xiv ಹೆಮ್ಮಿಗೆ ಶಾಸನ, ಪುಟ ೨೩೪ | ಧಾರ್ಮಿಕ ಕಾರ್ಯಕ್ಕಾಗಿ 'ಪತ್ತೊಂದಿ' ತೆರಿಗೆಯ ವರಮಾನವನ್ನು ದಾನ ಮಾಡಿದಳು. (ಹೆಮ್ಮಿಗೆಯ ಶಾಸನ) | |
| **ದೀವಬ್ಬರಸಿ** | ನೊಳಂಬ ಪೊಳಲ್ಚೋರನ ರಾಣಿ, ಕದಂಬ ರಾಜಕುಮಾರಿ. | ೧೦ನೆಯ ಶತಮಾನ | ಮಗ ನೊಳಿಪಯ್ಯ ನೊಂದಿಗೆ ಆಳ್ವಕೆ | ಕೋಲಾರ | E.C. x ಮುಳುಬಾಗಿಲು, ಸಂ.೩೮ | ಆವನಿಯಲ್ಲಿ ನೊಳಂಬ ನಾರಾಯಣೇಶ್ವರ ದೇವಾಲಯ ವಿಷ್ಣುದೇವಾಲಯ, ಮಹೇಂದ್ರ ಕೊಳ, ಪೊಱಲ್ಚೋರ ಮಂಗಲ ಅಗ್ರಹಾರ,ದೀವಬ್ಬೆ ಸಮುದ್ರಗಳ ನಿರ್ಮಾಣ | |
| **ಜೋಗಬ್ಬೆ** | ಚಾಳುಕ್ಯರ ಸಾಮಂತ ಕುಂದಮರಸನ ರಾಣಿ | ೧೦ನೆಯ ಶತಮಾನ | ಕಲ್ಯಾಣಿ ಚಾಳುಕ್ಯರ ಸಾಮಂತರಾಗಿ ಆಳ್ವಿಕೆ | ಅಜ್ಜಡಿ | SSI Vol xviii No 44 | ಅಜ್ಜಡಿಯ ದೇವಾಲಯಕ್ಕೆ ಭೂದಾನ ನೀಡಿದ್ದಾಳೆ. ಈ ಶಾಸನವು ಇವಳಿಗೆ ಮುಂಜ ಎಂಬ ಲೆಂಕ ಇದ್ದ ವಿಚಾರವನ್ನು ಈ ಶಾಸನ ತಿಳಿಸುತ್ತದೆ. | |

| | | | | | | | |
|---|---|---|---|---|---|---|---|
| **ಪಂಪಾದೇವಿ** | ಚಾಳುಕ್ಯರ ಸಾಮಂತ ಕುಂದಮರಸನ ರಾಣಿ | ೧೦ನೆಯ ಶತಮಾನ | ಕಲ್ಯಾಣಿ ಚಾಳುಕ್ಯರ ಸಾಮಂತರಾಗಿ ಆಳ್ವಿಕೆ | ಜಿಡುಗೂರು | | | |
| **ಚಟ್ಟಲದೇವಿ** | ಗಂಗ ರಾಜಕುಮಾರಿ ಚೋಳ ಕಾಡುವೆಟ್ಟಿಯ ಅರಸಿ ಸಾಂತರ ಅರಸಿ ಕಂಚಲದೇವಿಯ ಸಹೋದರಿ | ೧೦ನೆಯ ಶತಮಾನ | ಸಾಂತರ ಅರಸಿ ಕಂಚಲದೇವಿಯ ಮಕ್ಕಳನ್ನು ಪೋಷಿಸಿ, ಅವರ ಪರವಾಗಿ ಕೆಲಕಾಲ ಆಳ್ವಿಕೆ ನಡೆಸಿದ್ದಾಳೆ | ಹೊಂಬುಜ | E.C viii, ನಗರ ೩೫ & ೩೬ | ಹೊಂಬುಜದಲ್ಲಿ ಪಂಚಕೂಟ ಬಸದಿಯನ್ನು ನಿರ್ಮಿಸಿದ್ದಾಳೆ. ಕೆರೆ ಕಟ್ಟಿಸಿ, ಕಾಲುವೆಗಳನ್ನೂ ನಿರ್ಮಿಸಿದ್ದಾಳೆ. ಸಾಂತರ ಮನೆತನಕ್ಕೆ ಸೇರದ ಅರಸಿಯೊಬ್ಬಳು ಅಲ್ಲಿ ಅಧಿಕಾರ ನಡೆಸಿದಳೆನ್ನುವುದು ವಿಶೇಷ | |
| **ಗೋವಿಂದಬ್ಬೆ** | ರಾಷ್ಟ್ರಕೂಟ ಇಂದ್ರನ ರಾಣಿ | ೧೦ನೆಯ ಶತಮಾನ | ಮಾವ ಹಾಗೂ ಪತಿಯ ಆಳ್ವಿಕೆಯಲ್ಲಿ ಆಡಳಿತ | ದೇವಗೇರಿ | S.I.I xviii ಸಂ ೧೪ ದೇವಗೇರಿ ಪುಟ.೮ | ಗೋವಿಂದಬ್ಬೆ ದೇವಗೇರಿಯ ಆಳ್ವಿಕೆಯ ಸಂದರ್ಭದಲ್ಲಿ ಈಕೆಯ ಅಧಿಕಾರಿ ಕಲಿಯಮ್ಮನಾಳ್ಗಾಮುಂಡ ಹಾಕಿಸಿದ ಶಾಸನ | |
| **ಜಕ್ಕಿಯಬ್ಬೆ** | ಸತ್ತರ ವಂಶ ನಾಗರಖಂಡದ ನಾಗಾರ್ಜುನನ ರಾಣಿ | ೧೦ನೆಯ ಶತಮಾನ | ಪತಿಯಮರಣಾ ನಂತರ ಆಳ್ವಿಕೆ | ನಾಗರಖಂಡ ೭೦ | E.C. vii ಶಿಕಾ ೨೧೯. ಬಂದಳಿಕೆ (ಕ್ರಿ.ಶ.೯೧೮) | ದಕ್ಷತೆಯಿಂದ ರಾಜ್ಯಭಾರ ನಡೆಸಿ, ನಾಗರಖಂಡದ ದೇವಾಲಯಕ್ಕೆ ಭೂದಾನ ಮಾಡಿದ್ದಾಳೆ. | |
| **ಕೇತಲದೇವಿ** 'ರೂಪ ವಿದ್ಯಾಧರಿ', 'ಸರಸ್ವತೀ ಕರ್ಣಾವತಂಸೆ' ಬಿರುದುಗಳು | ಕ.ಚಾಳುಕ್ಯ ಮೊದಲನೆಯ ಸೋಮೇಶ್ವರನ ರಾಣಿ | ೧೧ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಕೆಲ ಪ್ರದೇಶಗಳ ಆಡಳಿತ | ಪೊನ್ನವಾಡ ಅಗ್ರಹಾರ, ಕರಡಿಕಲ್ಲು ೩೦೦, ಬನ್ನಿಗೋಳ | IA xix ೧೯೦ ಹೊನ್ನವಾಡ(ತಾ) ಬಿಜಾಪುರ (ಕ್ರಿ.ಶ.೧೦೫೪) ; ಬನ್ನಿಗೋಳದ ಶಾಸನ | ಹೊನ್ನವಾಡದ ಸಿದ್ದೇಶ್ವರದೇವಸ್ಥಾನದ ಜೀರ್ಣೋದ್ಧಾರ ಮಾಡಿಸಿ, ಪೂಜೆಗೆ ದತ್ತಿ ಬಿಟ್ಟಿದ್ದಾಳೆ. ಪೊನ್ನವಾಡದ ಶಾಂತಿನಾಥ ತ್ರಿಭುವನತಿಲಕ ಚೈತ್ಯಾಲಯಕ್ಕೆ ದತ್ತಿ ಬಿಟ್ಟಿದ್ದಾಳೆ. | |
| **ಮೈಳದೇವಿ** ವಿಳಾಸ ವಿದ್ಯಾಧರಿ, ದಾನ ಚಿಂತಾಮಣಿ ಬಿರುದುಗಳು | ಕ.ಚಾಲುಕ್ಯ ಒಂದನೆಯ ಸೋಮೇಶ್ವರನ ಪಟ್ಟದರಾಣಿ | ೧೧ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಕೆಲ ಪ್ರದೇಶಗಳ ಆಡಳಿತ | ಬನವಾಸಿ ಪನ್ನಿರ್ಚ್ಛಾಸಿರ | S.I.I. IX Part I ಬಾಗೇವಾಡಿ ೮೩ (ಕ್ರಿ.ಶ.೧೦೫೮); S.I.I. IX i 121 ನಂದಿಕೋಟಕೂರು (ತಾ) ಕರ್ನೂಲ (ಕ್ರಿ.ಶ.೧೦೫೭) S.I.I. IX Part I ಕೊಟ್ಟಪಲ್ಲೈ (ತಾ) | ಹೊಂನವಾಡಿ ಸೋಮೇಶ್ವರದೇಗುಲಕ್ಕೆ ದತ್ತಿ, ಶ್ರೀಶೈಲದ ದೇವಸ್ಥಾನಕ್ಕೆ, ಅಲ್ಲಿನ ತಪೋಧನರಿಗೆ, **ವಿದ್ಯಾಭ್ಯಾಸಕ್ಕೆ** ದಾನ, ಮೆಹಬೂಬನಗರದ ಅಗಸ್ತೇಶ್ವರ ದೇವಾಲಯಕ್ಕೆ ದಾನ | |

| | | | | | | | |
|---|---|---|---|---|---|---|---|
| **ಚಾಮಲ ದೇವಿ** | ಕ.ಚಾಳುಕ್ಯ ಸೋಮೇಶ್ವರನ ರಾಣಿ | ೧೧ನೆಯ ಶತಮನ | ಪತಿಯ ಆಳ್ವಿಕೆಯಲ್ಲಿ ಕೆಲ ಪ್ರದೇಶಗಳ ಆಡಳಿತ | ಮೊಸಳಿಕಲ್ಲು– ೩೦೦ರ ಕೆಲವು ಭತ್ತಗ್ರಾಮಗಳಾದ ಕಪಗಲ್ಲು, ಮಲೆವೂರು, ಬಲ್ಲಟಗಿಗಳಲ್ಲಿ ಆಳ್ವಿಕೆ ನಡೆಸುತ್ತಿದ್ದಳು. | ಕವಿಶಾಸಂ vii ರಾಯಚೂರು ಮಾನ್ವಿ ೯೫ ಕ್ರಿ.ಶ.೧೦೫೮ | ಬಲ್ಲಟಗಿಯಲ್ಲಿ ಚಾಮೇಶ್ವರ ದೇವಾಲಯವನ್ನು ನಿರ್ಮಿಸಿ, ಹಲವಾರು ಸೇವೆಗಳಿಗೆ, ಜೀರ್ಣೋದ್ಧಾರಕ್ಕೆ ದತ್ತಿ ನೀಡಿದ್ದಾಳೆ. ಕಪಗಲ್ಲಿನ ಭೋಗೇಶ್ವರದೇವರಿಗೆ, ಮಲೆವೂರು ಹಾಗೂ ಬಲ್ಲಟಗಿಗಳಲ್ಲಿ ದತ್ತಿಗಳನ್ನು ಬಿಟ್ಟಿದ್ದಾಳೆ. | ಸಂಗೀತಗಾರರು ನೃತ್ಯಗಾರ್ತಿಯರ ಪೋಷಣೆ |
| **ತ್ರೈಲೋಕ್ಯ ಮಹಾದೇವಿ** | ಕ.ಚಾಳುಕ್ಯ ಸೋಮೇಶ್ವರನ ರಾಣಿ | ೧೧ನೆಯ ಶತಮನ | ಪತಿಯ ಆಳ್ವಿಕೆಯಲ್ಲಿ ಕೆಲ ಪ್ರದೇಶಗಳ ಆಡಳಿತ | ನಿಟ್ಟರವೆ ೭೦ರ ಬಳಿಯ ಅಗ್ರಹಾರ ಮುಕ್ಕುಂದೆಯ ಲ್ಲಿ ಆಳ್ವಿಕೆ | ಕವಿಶಾಸಂ vii ರಾಯಚೂರು ಸಿಂಧನೂರು ತಾ. ಮುಕ್ಕುಂದಿ ೨೦ ಕ್ರಿ.ಶ.೧೦೬೬ | ತುಂಗಭದ್ರಾ ತೀರದ ಕಪಾಳೇಶ್ವರ ದೇವರಿಗೆ ೧೨ ಮತ್ತರು ಭೂಮಿ, ತೋಟ, ಗಾಣ ದಾನನೀಡಿದ್ದಾಳೆ. | |
| **ಲಚ್ಚಲ ಮಹಾದೇವಿ** | ಕ.ಚಾಳುಕ್ಯ ಒಂದನೆಯ ಸೋಮೇಶ್ವರನ ರಾಣಿ | ೧೧ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಕೆಲ ಪ್ರದೇಶಗಳ ಆಡಳಿತ | ಹಾನಗಲ್ಲಿನ ಬೆಳವಟ್ಟಿ | | | |
| **ಹೊಯ್ಸಳ ದೇವಿ** ಕ್ರಿ.ಶ.೧೦೫೫ | ಕ.ಚಾಳುಕ್ಯ ಸೋಮೇಶ್ವರನ ರಾಣಿ ಹೊಯ್ಸಳ ವಿನಯಾದಿತ್ಯನ ಮಗಳು | ೧೧ನೆಯ ಶತಮಾನ | ಪತಿಯೊಂದಿಗೆ ಆಳ್ವಿಕೆ | ಕಲ್ಯಾಣ | ಹೊನ್ನಾಳಿ ಶಾಸನ | ಹೊನ್ನಾಳಿಯ ಮಲ್ಲಿಕೇಶ್ವರ ತೀರ್ಥದ ದೇವರಿಗೆ ದತ್ತಿ ಬಿಟ್ಟಿದ್ದಾಳೆ | |
| **ಸುಗ್ಗಲದೇವಿ** | ಮಹಾ ಮಂಡಲೇಶ್ವರ ಸಿಂಹಣದೇವರಸನ ಮಡದಿ ಕ.ಚಾಳುಕ್ಯ ರಾಜಕುಮಾರಿ | ೧೧ನೆಯ ಶತಮಾನ | ತಂದೆ ಆಹವಮಲ್ಲ ದೇವ ಹಾಗೂ ಅಣ್ಣ ಭುವನೈಕ ಮಲ್ಲರ ಅಧೀನದಲ್ಲಿ ಆಳ್ವಿಕೆ ನಡೆಸುತ್ತಿದ್ದಳು | ಕಿಸುಕಾಡು ೭೦ರ ನಿಡಗುಂದಿ | ಅಯ್.ಎನ್.ಕೆ. v ನಿಡಗುಂದಿ (ಜಿ) ವಿಜಾಪುರ (ಕ್ರಿ.ಶ.೧೦೭೧) | ನಿಡುಗುಂದಿಯ ದೇವಾಲಯಕ್ಕೆ ದಾನ | |

| | | | | | | | |
|---|---|---|---|---|---|---|---|
| **ಅಕ್ಕಾದೇವಿ** | ಹಾನುಗಲ್ಲು ಕದಂಬ ಮಯೂರವರ್ಮನ ಅರಸಿ ಚಾಲುಕ್ಯ ರಾಜಕುಮಾರಿ | ೧೧ನೆಯ ಶತಮಾನ | ಪತಿಯೊಡನೆ ಹಾಗೂ ಪತಿಯ ಮರಣಾನಂತರ | ಕಿಸುಕಾಡು ೭೦, ತೊರೆಗೆರೆ ೬, ಮಾಸವಾಡಿ೧೪೦ ಪಾನುಗಲ್ಲು೫೦೦, ಬನವಾಸಿ ೧೨೦೦ | IA xvii ಪು.೨೭೦-೭೫ ಬೇಲೂರು (ತಾ) ಬದಾಮಿ ಕ್ರಿ.ಶ.೧೦೨೨ E.I. xvii no.10 ಅರಸಿಬೀದಿ ಹುನಗುಂದ (ಕ್ರಿ.ಶ.೧೦೪೭) E.I. xv ನಂ.೬ ಸೂಡಿ (ತಾ)ರೋಣ(ಕ್ರಿ.ಶ.೧೦೫೦) BKI I-i ೮೬ ಕೊರಲಹಳ್ಳಿ (ತಾ) ಮುಂಡರಗಿ (ಕ್ರಿ.ಶ.೧೦೫೦) BKI I-i ೮೮ ಅರಸಿ ಬೀದಿ ಹುನಗುಂದ, ಕ್ರಿ.ಶ.೧೦೫೩ E.I. xvi No.11 ಹೊಟ್ಟೂರು (ತಾ) ಶಿಗ್ಗಾಂವ | ಅಗ್ರಹಾರ ನಿರ್ಮಾಣ, ಸೂಡಿಯಲ್ಲಿ ಅಕ್ಕೇಶ್ವರ ದೇವಾಲಯ ನಿರ್ಮಾಣ, ವಿಕ್ರಮಪುರದ ಗುಣದ ಬೆಡಂಗಿ ಜಿನಾಲಯ ನಿರ್ಮಾಣ, ತ್ರೈಪುರುಷ ಶಾಲೆಯ ನಿರ್ಮಾಣ ಹಾಗೂ ಉಚಿತ ವಿದ್ಯಾಭ್ಯಾಸದ ವ್ಯವಸ್ಥೆ, ಬಂಕಾಪುರದ ಬಳಿಯ ಮಠವೊಂದರಲ್ಲಿ ನಡೆಯುವ ವಿದ್ಯಾಭ್ಯಾಸಕ್ಕಾಗಿ ಕಾಳಾಮುಖ ಸನ್ಯಾಸಿನಿಗೆ ದಾನ | |
| **ಶಾಂತಲಾ ದೇವಿ** ನಾಟ್ಯರಾಣಿ ಅಭಿನವ ಶಾರದೆ | ಹೊಯ್ಸಳ ವಿಷ್ಣುವರ್ಧನನ ಪಟ್ಟದರಸಿ | ೧೧-೧೨ ನೆಯ ಶತಮಾನ | ಪತಿಯೊಂದಿಗೆ ಆಳ್ವಿಕೆ ನಡೆಸುತ್ತಿದ್ದಳು | | E.C. v ಸಂ. ೧೬ ಬೇಲೂರು ಕ್ರಿ.ಶ.೧೧೨೦ ; E.C v ಸಂ ೧೧೬, ಗ್ರಾಮ ಕ್ರಿ.ಶ.೧೧೨೨ E.C ii ಶ್ರವಣಬೆಳಗೊಳ ೧೬೨ ಕ್ರಿ.ಶ.೧೧೨೩ | ಶ್ರವಣಬೆಳಗೊಳದಲ್ಲಿ ಸವತಿ ಗಂಧವಾರಣೆ ಬಸದಿ, ಕೆರೆ ಕಟ್ಟಿಸಿ, ದತ್ತಿಗಳನ್ನು ಬಿಟ್ಟಿದ್ದಾಳೆ. ಶಾಂತಿ ಗ್ರಾಮ ಹಾಗೂ ಅಲ್ಲಿ ದೇವಾಲಯಗಳ ನಿರ್ಮಾಣ, ಬೇಲೂರಿನಲ್ಲಿ ದೇವಾಲಯದ ನಿರ್ಮಾಣ | ಸ್ವತಃ ನೃತ್ಯಕಲಾವಿದೆ ; ವಾಸ್ತುಶಿಲ್ಪಕ್ಕೆ ಉತ್ತಮ ಕೊಡುಗೆ ನೀಡಿದವಳು |
| **ಬಮ್ಮಲದೇವಿ** | ಹೊಯ್ಸಳ ವಿಷ್ಣುವರ್ಧನನ ರಾಣಿ. ನೊಳಂಬ ಪಲ್ಲವ ರಾಜಕುಮಾರಿ . | ೧೧-೧೨ ನೆಯ ಶತಮಾನ | ಪತಿಯೊಂದಿಗೆ ಆಡಳಿತ ಹಾಗೂ ಪತಿಯ ಆಳ್ವಿಕೆಯಡಿಯಲ್ಲಿ ಕೆಲ ಭಾಗಗಳ ಸ್ವತಂತ್ರ ಆಳ್ವಿಕೆ | ಆಸುಂಡಿ-೫೦೦, ನೀರಗುಂದ-೨೦೦, ಹಾಗು ಪತಿಯೊಂದಿಗೆ ಪಾನುಂಗಲ್ (ಹಾನುಗಲ್ಲು) ನಲ್ಲಿ ಆಳ್ವಿಕೆ | E.C. v ಸಂ ೨೩೫ ಅರಸಿಕೆರೆ. E.C xii ಸಂ ೧೩ ಗುಬ್ಬಿ ಬೇಚಿನಗೆರೆ ಕ್ರಿ.ಶ.೧೧೪೦ | ನೀರಗುಂದದಲ್ಲಿ ಅಗ್ರಹಾರ ಸ್ಥಾಪನೆ, ನಾಗಮಂಗಲದ ಶಂಕರನಾರಾಯಣ ದೇವಾಲಯಕ್ಕೆ ದಾನ, ಸಾಂತಗೆರೆಯಲ್ಲಿ ಅಶ್ವಶಾಲೆ ಸ್ಥಾಪನೆ ಹಾಗೂ ನಿರ್ವಹಣೆ. ಗೋವೆ ಕದಂಬದೊರೆ ಜಯಕೇಶಿಯ ವಿರುದ್ಧದ ಯುದ್ಧದಲ್ಲಿ ಭಾಗಿಯಾಗಿ ಪತಿಯ ಗೆಲುವಿಗೆ ಕಾರಣಳಾದವಳು | |
| **ದೇವಕಿದೇವಿ** | ಹೊಯ್ಸಳ ವಿಷ್ಣುವರ್ಧನನ ಅರಸಿ | ೧೧-೧೨ ನೆಯ ಶತಮಾನ | ಪತಿಯೊಂದಿಗೆ ಆಳ್ವಿಕೆ | ನಿಡುಗಟ್ಟದ ಶಾಸನ ಈಕೆ ಬೇಲೂರಿನಿಂದ ಆಳ್ವಿಕೆ ಮಾಡುತ್ತಿದ್ದ ವಿಚಾರವನ್ನು ತಿಳಿಸುತ್ತದೆ. | ಕ್ರಿ.ಶ.೧೧೩೯ರ ನಿಡುಗಟ್ಟದ ಶಾಸನ | ಧಾರ್ಮಿಕ ಕಾರ್ಯಗಳಲ್ಲಿ ಗುರುತಿಸಿಕೊಂಡಿದ್ದಾಳೆ. | |

| | | | | | | | |
|---|---|---|---|---|---|---|---|
| **ಲಕ್ಷ್ಮೀದೇವಿ** | ಕ.ಚಾಳುಕ್ಯ ಆರನೆಯ ವಿಕ್ರಮಾದಿತ್ಯನ ರಾಣಿ | ೧೧–೧೨ ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಕೆಲ ಪ್ರದೇಶಗಳ ಆಡಳಿತ | ದ್ರೋಣಪುರ, & ಡಂಬಳದ ೧೮ ಅಗ್ರಹಾರಗಳು, ಜೊತೆಗೆ ನಿಟ್ಟಸಿಂಗಿ, ಧರ್ಮಪುರ ಗಳಲ್ಲಿ ಆಡಳಿತ | SII XI(II)126, ಡೋಣಿ,ಮುಂಡರಗಿ (೧೦೮೦); EI XV no.6 ಸೂಡಿ ರೋಣ(ತಾ) ;SII XX 94 ಖೇಡಗಿ, ಇಂಡಿ(ತಾ) IA 10 CXVI ಡಂಬಳ, ಗದಗ | ಸೂಡಿಯ ಆಚಲೇಶ್ವರ ದೇಗುಲಕ್ಕೆ ಕಿಸುಕಾಡು ಬಳಿಯ ಪೊಂಗರಿ ಎಂಬ ಗ್ರಾಮವನ್ನು ದತ್ತಿಯಾಗಿ ನೀಡಿದಳು. ಅಗ್ರಹಾರ ನಿರ್ಮಾಣ, ವಿದ್ಯಾಭ್ಯಾಸಕ್ಕೆ ದಾನ ಮೊದಲಾದ ಕಾರ್ಯಗಳನ್ನು ನಡೆಸಿ ಹಲವಾರು ಶಾಸನಗಳಲ್ಲಿ ಉಕ್ತಳಾಗಿದ್ದಾಳೆ. | |
| **ಚಂದಲ ದೇವಿ** (೧೦೮೨) ನೃತ್ಯ ವಿದ್ಯಾಧರಿ, ಕಲಿಕಾಲ ಸರಸ್ವತಿ | ಕ.ಚಾಳುಕ್ಯ ವಿಕ್ರಮಾದಿತ್ಯನ ಪಟ್ಟಮಹಿಷಿ ಶಿಲಾಹಾರ ಮಾರಸಿಂಹನ ಮಗಳು. | ೧೧–೧೨ ನೆಯ ಶತಮಾನ | ಪತಿಯೊಡನೆ ರಾಜ್ಯಕಲಾಪಗಳಲ್ಲಿ ಪಾಲ್ಗೊಳ್ಳುತ್ತಿದ್ದಳಲ್ಲದೆ, ಸ್ವತಂತ್ರವಾಗಿಯೂ ಆಳ್ವಿಕೆ ನಡೆಸುತ್ತಿದ್ದಳು. | ಅಳಂದೆ ಸಾಸಿರ ಪ್ರಾಂತ್ಯದಲ್ಲಿ ಆಡಳಿತ | ಕಲ್ಬುರ್ಗಿ ಜಿಲ್ಲೆಯ ಶಾಸನಗಳು, ೩೮, ಹುಣಸಿಹಡಗಲಿ, ಕ್ರಿ.ಶ.೧೧೯೯, ಪು.೨೨೯; S.I.I xi-ii ೧೪೨ ಕಟಗೇರಿ (ತಾ) ಬಾದಾಮಿ (ಕ್ರಿ.ಶ.೧೧೯೬) ಕವಿಶಾಸಂ ೭ ರಾಯಚೂರು ಮಾನ್ವಿ ೯೬ (೧೧೧೫) | ಅಲಂದೆಪುರದ ಸ್ವಯಂಭೂ ಸೋಮೇಶ್ವರ ದೇವರಿಗೆ ದತ್ತಿ ಬಿಡಿಸಿದ್ದಾಳೆ. ರುದ್ರವಾಡಿಯ ಕೇಶವ ದೇಗುಲಕ್ಕೆ ದತ್ತಿ ನೀಡಿದ್ದಾಳೆ, ಕಡಕೆರೆಯಲ್ಲಿ ವಿದ್ಯಾಭ್ಯಾಸಕ್ಕೆ ದಾನ ನೀಡಿದ್ದಾಳೆ. | |
| **ಜಾಕಲದೇವಿ** | ಕ.ಚಾಲುಕ್ಯ ೬ನೇ ವಿಕ್ರಮಾದಿತ್ಯನ ರಾಣಿ | ೧೧–೧೨ ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ಇಂಗುಣಿಗೆ | ಕಲ್ಬುರ್ಗಿ ಜಿಲ್ಲೆಯ ಶಾಸನಗಳು, ೨, ಇಂಗಳಗಿ; Jainism in South India & Some Jain Epigraphs Pg.229 | ಇಂಗಳಿಗೆಯಲ್ಲಿ ಬಸದಿಯನ್ನು ನಿರ್ಮಿಸಿ, ತಳವೃತ್ತಿ ಸಹಿತ ಇಂದ್ರಸೇನ ಭಟ್ಟಾರಕರಿಗೆ ದಾನ ನೀಡಿದ್ದಾಳೆ. | |
| **ಮಲಯಮತಿ** | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ | ೧೧–೧೨ ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ಸಿಂದವಾಡಿನಾಡಿನ ಕೆಲವು ಭಾಗಗಳು | ಎ.ಪಿ.ಎ.ಎಸ್.೧೭ ದಿಗ್ಗಾವ (ಜಿ) ಗುಲಬರ್ಗಾ (ಕ್ರಿ.ಶ.೧೧೦೭) | ಚಿಲ್ಲಾರಗ್ರಾಮದ ಬ್ರಹ್ಮೇಶ್ವರದೇವರಿಗೆ ದಾನ, ಸಿಂದವಾಡಿನಾಡಿನ ಅಗ್ರಹಾರ ತುಂಬುಳದ ಮಹಾಜನರಿಗೆ ದಾನ ನೀಡಿದ್ದಾಳೆ | |
| **ಮಲ್ಲಣದೇವಿ** | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ | ೧೧–೧೨ ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ಕಲ್ಯಾಣದ ಕೆಲವು ಭತ್ತಗ್ರಾಮಗಳ ಆಳ್ವಿಕೆ | ಅಯ್.ಎನ್.ಡಿ. ಪು.೩೨/೨೩ (ಕ್ರಿ.ಶ.೧೧೨೩) | ಈಕೆಯ ಭಂಡಾರ ನಿಯೋಗ ಹಾಗೂ ದಂಡನಾಯಕನಾಗಿದ್ದ ನಾಗವರ್ಮನ ಮೂಲಕ ದಾನಗಳನ್ನು ಕೊಡಿಸಿದ್ದಾಳೆ | |

| | | | | | | | |
|---|---|---|---|---|---|---|---|
| **ಸುಗ್ಗಲದೇವಿ** | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ | ೧೨ ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | | ಕ್ರಿ.ಶ.೧೧೨೨ರ ಬಿಮ್ರಾಶಾಸನ | ಅಧಿಕಾರಿ ನಾಗರಾಜನ ಕೋರಿಕೆಯ ಮೇರೆಗೆ ದಾನ ನೀಡಿದ್ದಾಳೆ. | |
| **ಅಬ್ಬಲದೇವಿ** | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ | ೧೨ ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ಕರಡಿಕಲ್ಲು-೩೦೦ರ ಲಿಂಗಸುಗೂರು (ಲಿಂಗದೂರು) | ಕವಿಶಾಸಂ ೭ ರಾಜಚೂರು, ಲಿಂಗಸಗೂರು ತಾ. ೧; | ತನ್ನ ಅಧಿಕಾರಿಗಳೊಂದಿಗೆ ಊರಿನ ಕಲಿದೇವದೇವರಿಗೆ ಹಲವಾರು ಸೇವೆಗಳಿಗೆ ದಾನನೀಡಿ ತೆರಿಗೆಗಳನ್ನು ಮಾನ್ಯ ಮಾಡಿದ್ದಾಳೆ | |
| **ಕೇತಲದೇವಿ** ಅಭಿನವ ಸರಸ್ವತಿ, ದ್ವಿತೀಯ ಲಕ್ಷ್ಮೀ, ಸಂಗೀತ ವಿದ್ಯಾಧರಿ | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ | ೧೨ ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ಸಿರಿಗುಪ್ಪೆ, ಕೊಳನೂರು ಮೊದಲಾದ ಊರುಗಳಲ್ಲಿ ಆಳ್ವಿಕೆ | S.I.I ix-i, 159 ಸಿರುಗುಪ್ಪ ಬಳ್ಳಾರಿ (ಕ್ರಿ.ಶ.೧೦೯೨) S.I.I xx 51 ಬಿಜಾಪುರ, ಸಿಂದಗಿ ಕುಳೇಕುಮಟ್ಟಿ (೧೦೭೭) | ಬಳ್ಳಾರಿಯ ಸಿರುಗುಪ್ಪದ ಕೇತಲೇಶ್ವರ ದೇವರಿಗೆ, ಹಾಗೂ ಅಲ್ಲಿನ ತಪೋಧನರಿಗೆ ಆರುಮತ್ತರು ಭೂಮಿ, ನಿವೇಶನ, ಎರಡು ಗಾಣ, ತೋಟ ದಾನ, ಚಂಡೇಶ್ವರ ದೇವರಿಗೆ ಭೂಮಿ & ಗಾಣ ತೆರಿಗೆಸಹಿತ ದಾನ ನೀಡಿದ್ದಾಳೆ | |
| **ಸಾವಳದೇವಿ** | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ | ೧೨ ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ನೆರೆಯಮಂಗಲ / ನೆರೆಯಂಗಲ | AR(S)IE ೧೯೪೬-೪೭ (೫೨) ೨೨೭ ; ಧಾರವಾಡ ಜಿಲ್ಲೆ ಶಾಸನ ಹಾನಗಲ್ಲು ೧೪೧ ನರೇಗಲ್ಲು (ಕ್ರಿ.ಶ.೧೧೦೦) | ತನ್ನಾಳ್ವಿಕೆಯ ಊರಿನಲ್ಲಿ ಅಧಿಕಾರಿಯೊಬ್ಬ ನಿರ್ಮಿಸಿದ ಶಿವದೇವಾಲಯಕ್ಕೆ ದಾನ ನೀಡಿದ್ದಾಳೆ | |
| **ಮಲಯಮತಿ** | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ | ೧೨ ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ಪಿರಿಯ ಕೆರೆಯೂರು, ಎಲೆಯ ಪೂರ್ವದವಳ್ಳಿ, ಆಲಂಪುರ, ದಿಗ್ಗವಿಗೆ, ಸಿನ್ದವಾಡಿಗಳ ಅಗ್ರಹಾರ, ತುಂಬುಳ | ಧಾರವಾಡದ ಚಿಕ್ಕೇರೂರಿನ ಶಾಸನ, ಕ್ರಿ.ಶ.೧೧೧೦ರ ಕಾಲದ ಎಲೆಯ ಪೂರ್ವದವಳ್ಳಿ, ಆಲಂಪುರ ಶಾಸನ, | ಇವಳ 'ಪಾದಪದ್ಮೋಪಜೀವಿ' ಎಂದು ಕರೆದುಕೊಂಡಿರುವ ಮಹಾಮಂಡಳೇಶ್ವರ ಅಯ್ಯಣ್ಣನ ಶಾಸನದಲ್ಲಿ ಉಕ್ತಳಾಗಿದ್ದಾಳೆ. | |
| **ಪದ್ಮಲದೇವಿ** ಅಭಿನವಸರಸ್ವತಿ | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ ಸಿಂದವಾಡಿ ನಾಡಿನ ಅರಸಿ | ೧೨ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ಬಿಜಾಪುರ ಜಿಲ್ಲೆಯ ಮಂಗಳ (ಮಂಗೋಳಿ) | SII ix-i ೧೯೫ ಬಳ್ಳಾರಿ ರಂಗಪುರ (ತಾ) ಹಡಗಲಿ (ಕ್ರಿ.ಶ.೧೧೧೬) ; ಕವಿಶಾಸಂ ೭೧ | ಮಾಂಗೊಳದ ಹಾಗೂ ರಂಗಪುರದ ಜನತೆಯ ಕೋರಿಕೆಯ ಮೇರೆಗೆ ನಾರಸಿಂಘದೇವರ ಹಾಗೂ ನವಮಾಲಾ ದೇವಾಲಯಗಳಿಗೆ ದತ್ತಿ ನೀಡಿದ್ದಾಳೆ | |

| | | | | | | | |
|---|---|---|---|---|---|---|---|
| **ಮಾಳಲದೇವಿ** | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ | ೧೨ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ಎಳವಟ್ಟಿ ಗ್ರಾಮ | | ಎಳವಟ್ಟಿ ಗ್ರಾಮದಲ್ಲಿ ಮಾಳಲೇಶ್ವರ ದೇವಾಲಯ ನಿರ್ಮಾಣ | |
| **ಅಚಲಾದೇವಿ** | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ | ೧೨ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ದುತ್ತರಗಾವೆ | ದುತ್ತರಗಾವೆ ಶಾಸನ | ದುತ್ತರಗಾವೆಯಲ್ಲಿ ಅಗ್ರಹಾರ ನಿರ್ಮಾಣ ಹಾಗು ಕೇಶವ ದೇವಾಲಯಕ್ಕೆ ದಾನ | |
| **ಧಾರಲದೇವಿ** ಗುಣದಂಕಕಾರ್ತಿ,ಮಹಾಸತಿ ತಿಳಕೆ | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ | ೧೨ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | | | ಕೈಕೆಳಗಿನ ಅಧಿಕಾರಿಗಳೊಂದಿಗೆ ದೇವಾಲಯಕ್ಕೆ ದಾನ | |
| **ಮೈಳಲದೇವಿ** | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ | ೧೨ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ಕನ್ನವಳ್ಳಿಯ ಆಡಳಿತ | ತೆಂಗುಳಿಯ ಶಾಸನ ಕನ್ನವಳ್ಳಿಯ ಶಾಸನ | ದೇವಾಲಯವೊಂದಕ್ಕೆ ೨ ಗ್ರಾಮಗಳನ್ನು ದತ್ತಿಯಾಗಿ ನೀಡಿದ್ದಾಳೆ | |
| **ಜಾಕಲದೇವಿ** | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ | ೧೨ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ಧಾರವಾಡದ ಸುತ್ತಮುತ್ತಲಿನ ಕೆಲವು ಪ್ರದೇಶ, ಹುಣಸಿಹಡಗಲಿ ಯಲ್ಲಿ ಆಳ್ವಿಕೆ | ಧಾರವಾಡಜಿಲ್ಲೆಯ ಶಾಸನ | | |
| **ಜಾಕಲದೇವಿ** | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ ಕದಂಬ ತಿಕ್ಕಣನ ಮಗಳು | ೧೨ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ಹಿರೇಲಿಂಗದ ಹಳ್ಳಿ | ಹಿರೇಲಿಂಗದ ಹಳ್ಳಿಯ ಶಾಸನ | ಹಿರೇಲಿಂಗದ ಹಳ್ಳಿಯಲ್ಲಿನ ಸ್ವಯಂಭೂಲಿಂಗಕ್ಕೆ ದತ್ತಿ | |
| **ಭಾಗಲ ಮಹಾದೇವಿ** | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ | ೧೨ ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ಭತ್ತಗ್ರಾಮ | | ಈಕೆಯ ಅನುಮತಿಯ ಮೇರೆಗೆ ಅಧಿಕಾರಿಯಾಗಿದ್ದ ಇವಳ ಸೋದರ ಮಾವ ರಾಜರಸ ದಾನ ನೀಡಿ ಶಾಸನ ಹಾಕಿಸಿದ್ದಾನೆ | |
| **ಶ್ರೀಯಾದೇವಿ** | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ | ೧೨ ನೆಯ ಶತ ಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ಬೀದರಜಿಲ್ಲೆಯ ಬಗದಾಳ | ಕ.ವಿ.ವಿ ಶಾ.ಸಂ.೮ ಬೀದರ್ ೬೭, ಬಗ್ದಲ (ಬಗದಾಳ) ಪು.೧೭೮ | ದಾನ ಶಾಸನ (ಶಾಸನ ಪಾಠ ಬಹಳವಾಗಿ ತೃಟಿತವಾಗಿದೆ) | |
| **ಮೈಳಲದೇವಿ** | ಗೋವೆಯ ಕದಂಬ ಜಯಕೇಶಿಯ ರಾಣಿ ಚಾಲುಕ್ಯ ರಾಜಕುಮಾರಿ | ೧೨ನೆಯ ಶತಮಾನ | ಮದುವೆಯ ಬಳುವಳಿಯಾಗಿ ದೊರೆತಿದ್ದ ಪ್ರದೇಶಗಳ ಆಳ್ವಿಕೆ ಹಾಗೂ ಪತಿಯೊಡನೆ ಆಳ್ವಿಕೆ | ಹಲಸಿಗೆ ೧೨೦೦ ಹಾಗೂ ಸ್ಥಾನ ಕುಂದೂರು | E.I xiii ನಂ.೨೮ ನರೇಂದ್ರ (ತಾ) ಧಾರವಾಡ (ಕ್ರಿ.ಶ.೧೧೨೫) | ಧಾರವಾಡದ ಗೂಗಿ ಕಟ್ಟಿಯಲ್ಲಿ ಕೇಶವದೇವಾಲಯ, ದುಮಗಳ್ಳಿಯ ಮೈಳಲೇಶ್ವರ ದೇವಾಲಯಗಳ ನಿರ್ಮಾಣ ಹಾಗೂ ಮಂದೂರ ಸ್ವಯಂಭು ಕಲಿದೇವರಿಗೆ ದತ್ತಿ | |

| | | | | | | | |
|---|---|---|---|---|---|---|---|
| **ರೆಬ್ಬಲದೇವಿ** | ವಿಕ್ರಮಾದಿತ್ಯನ ಕಾಲದ ಮಹಾ ಮಂಡಲೇಶ್ವರ ಕಲಿಚೋರನ ಅರಸಿ | ೧೨ನೆಯ ಶತಮಾನ | ಪತಿಯ ಮರಣಾನಂತರ ಕಲ್ಯಾಣಿ ಚಾಳುಕ್ಯರ ಮಹಾಮಂಡಳೇಶ್ವರಿಯಾಗಿ ಅಧಿಕಾರ ನಡೆಸುತ್ತಿದ್ದಳು | ಆವಂತೀ ಪುರ, ಕರ್ಹಾಡ ಮೊದಲಾದ ಸ್ಥಳಗಳು | ಕರ್ಹಾಡ, ಸಗ್ರೋಳಿ, ಬಿಮ್ರಾ ಬೈರೋಲಿ ಶಾಸನಗಳು IND (ಇನ್ಸ್ಕ್ರಿಪ್ಷನ್ಸ್ ಫ್ರಂ ನಾಂದೇಡ್ ಡಿಸ್ಟ್ರಿಕ್ಟ್) No.೧೯, ಪು.೩೧–೩೨ ; No.೧೧ ಪು.೨೩ | ಅಧಿಕಾರಿಗಳೊಂದಿಗೆ ದೇವಾಲಯಗಳಿಗೆ ದಾನ–ದತ್ತಿ ನೀಡಿದ್ದಾಳೆ | |
| **ದೇಮಲ ದೇವಿ.** | ಸಿಂಧವಂಶದ ಚಾವುಂಡರಾಯನ ಮಡದಿ | ೧೨ನೆಯ ಶತಮಾನ | ಪತಿಯ ಆಳ್ವಿಕೆಯಡಿಯಲ್ಲಿ ಮಗನೊಂದಿಗೆ ಆಡಳಿತ | ಪಟ್ಟದ ಕಿಸುವೊಳಲು | ಕವಿಶಾಸಂ ಬಳ್ಳಾರಿ ೧೦೧ ; ಜೆ.ಬಿ.ಬಿ.ಆರ್.ಎ.ಎಸ್ ೧೧ ಪು.೨೫೯ (ಕ್ರಿ.ಶ.೧೧೬೩) | ಧಾರ್ಮಿಕಕಾರ್ಯಗಳಲ್ಲಿ ಭಾಗಿಯಾದ ಬಗ್ಗೆ ಶಾಸನ ಉಲ್ಲೇಖಿಸುತ್ತದೆ | |
| **ಲಕ್ಷ್ಮಿ ದೇವಿ** | ಸಿಂಧವಂಶದ ಚಾಮುಂಡರಾಯನ ರಾಣಿ | ೧೨ನೆಯ ಶತಮಾನ | ಪತಿಯ ಆಳ್ವಿಕೆಯಡಿಯಲ್ಲಿ ಆಡಳಿತ | ಸೂಂಡಿ, ಹೊಸವೂರ ಮತ್ತು ಕಡಕೆರೆ ಮಂಡಲದ ಕೆಲವು ಊರುಗಳಲ್ಲಿ ಆಡಳಿತ | ಕ.ವಿ.ವಿ.ಶಾ.ಸಂ ೯ ಹೊಸೂರು ೩೮೩, ಬಾದಾಮಿ ತಾ ಕ್ರಿ.ಶ.೧೧೬೨ | ಭಕ್ತರ ಕೋರಿಕೆಯ ಮೇರೆಗೆ ಮಲ್ಲಿಕಾರ್ಜುನ ದೇವಾಲಯವನ್ನು ಅಭಿವೃದ್ಧಿಪಡಿಸಿ, ಪೂಜಾಕಾರ್ಯಗಳಿಗೆ ಭೂದಾನ ನೀಡಿದ್ದಾಳೆ. ಅಲ್ಲದೆ ದುರುಪಯೋಗವಾಗದಂತೆ ಕ್ರಮ ಕೈಗೊಂಡಿದ್ದಾಳೆ. | |
| **ಚಾಗಲದೇವಿ** | ಆರನೇ ವಿಕ್ರಮಾದಿತ್ಯನ ಸಾಮಂತರಸ ತೊರಗಲೆಯ ದಂಡನಾಯಕನ ರಾಣಿ | ೧೨ನೆಯ ಶತಮಾನ | ಪತಿಯೊಂದಿಗೆ ಆಡಳಿತ | ತೊರಗಲೆ ನಾಡು | ಕವಿಶಾಸಂ ೯ ಬಾಗಲಕೋಟೆ, ನೀಲಗುಂದ ೨೩ ಕ್ರಿ.ಶ.೧೧೦೬ | ಯುದ್ಧವೀರಳಾಗಿದ್ದು, ಸ್ವತಃ ಸೇನೆಯನ್ನು ಮುನ್ನಡೆಸುತ್ತಿದ್ದ ಳು. ನೀಲಗುಂದ ಗ್ರಾಮದ ಮೇಲೆ ದಾಳಿಯಿಟ್ಟ ವಿಚಾರವನ್ನು ಇಲ್ಲಿಯ ಶಾಸನ ತಿಳಿಸುತ್ತದೆ | |
| **ಪದುಮಲ ದೇವಿ** ಕ್ರಿ.ಶ.೧೧೭೭ | ಗುತ್ತಿ ಮಲ್ಲಿದೇವನ ರಾಣಿ | ೧೨ನೆಯ ಶತಮಾನ | ಪತಿಯೊಂದಿಗೆ ಆಳ್ವಿಕೆ ನಡೆಸುತ್ತಿದ್ದಳು | | E.C.ಸಂ.viii ಸೊ–೪೧೨ ಹಿರೇಮಾಗಡಿ ಕ್ರಿ.ಶ.೧೧೭೭ | ಸೋಯಿದೇವನನ್ನು ಎದುರಿಸಿ ಕುಪಟೂರನ್ನು ಸೂರೆಗೈದು ತುರುಗೋಳ್ ಕದನವನ್ನು ನಡೆಸಿದ್ದಾಳೆ | |

| | | | | | | | |
|---|---|---|---|---|---|---|---|
| **ಮೈಳಲದೇವಿ** | ಹೊಯ್ಸಳ ನಾರಸಿಂಹನ ಅರಸಿ | ೧೨ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಕೆಲ ಭಾಗಗಳ ಆಳ್ವಿಕೆ | ಮೊದರು ನಾಡು | E.C ಮಂಡ್ಯ ಕೃಷ್ಣರಾಜಪೇಟೆ ೧೨ | | |
| **ಪದ್ಮಲದೇವಿ** | ಹೊಯ್ಸಳ ವೀರಬಲ್ಲಾಳನ ಪಟ್ಟದರಸಿ | ೧೨ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಕೆಲ ಭಾಗಗಳ ಆಳ್ವಿಕೆ | ಗುತ್ತೊಳಲು ಪೊಸಪಡಂಗಿಲೆ (ಹೊಸಹಡಗಲಿ) | ಕವಿಶಾಸಂ ಬಳ್ಳಾರಿ ಹಡಗಲಿ ೫ ಕ್ರಿ.ಶ.೧೨೦೫ | ಮಹಾಪ್ರಧಾನಿ ಭಂಡಾರಿ ಸೋವರಸ ತನ್ನ ಶಾಸನದಲ್ಲಿ ಸ್ತುತಿಸಿದ್ದಾನೆ | |
| **ಉಮಾದೇವಿ** | ಹೊಯ್ಸಳ ವೀರಬಲ್ಲಾಳನ ರಾಣಿ. | ೧೨ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಕೆಲ ಭಾಗಗಳ ಸ್ವತಂತ್ರ ಆಳ್ವಿಕೆ | ಪತಿ ಬಲ್ಲಾಳನ ಅನುಪಸ್ಥಿತಿ ಯಲ್ಲಿ ದೋರ ಸಮುದ್ರ ದಿಂದ ಆಳ್ವಿಕೆ<br><br>ಮಗರೆ ಮುನ್ನೂರು ಮೊದಲಾದ ಅರಸಿಕೆರೆಯ ಪ್ರದೇಶಗಳಲ್ಲಿ ಸ್ವತಂತ್ರವಾದ ಆಳ್ವಿಕೆ | E.C v ಅರಸಿಕೆರೆ ಶಾ.ಸಂ.೮೬, ೯೦, ೯೩, ೨೦೫, ಶಾಸನಗಳು | ನೀಲೇಶ್ವರ, ಸಿದ್ದೇಶ್ವರ, ಅಡಗೂರಿನ ನರಸಿಂಹ ದೇವಾಲಯಗಳಿಗೆ ದಾನ–ದತ್ತಿ ನೀಡಿ ಹಸ್ತಾಕ್ಷರ ಹಾಕಿದ್ದಾಳೆ.<br>ವಿಷಮ ಪರಿಸ್ಥಿತಿಯಲ್ಲಿ ಅಣ್ಣಿಗನ ಹಳ್ಳಿ, ಕಿತ್ತನ ಕೆರೆಯ ಕೆಲವು ಜನರಿಗೆ ತೆರಿಗೆ ಮನ್ನಾಮಾಡಿದ್ದಾಳೆ.<br>ಅರಸಿಕೆರೆಯಲ್ಲಿ ಕೋಡಿ, ಕೆರೆಯ ನಿರ್ಮಾಣಕ್ಕಾಗಿ ಹಲವು ಸುಂಕದ ದತ್ತಿ ಬಿಟ್ಟು, ಭೂಮಿ ನೀಡಿದ್ದಾಳೆ.<br>ಕಲಿದೇವರ ದೇವಾಲಯದ ಬಳಿ ಕನ್ನೆಗೆರೆ ನಿರ್ಮಾಣ.<br>ಬೆಳಗುತ್ತಿ,ಕತ್ತಿಗೆಯ ಸಾಮಂತರ ವಿರುದ್ಧ ಯುದ್ಧನಡೆಸಿದ್ದಾಳೆ | |
| **ಕೇತಲದೇವಿ** | ಹೊಯ್ಸಳ ವೀರಬಲ್ಲಾಳನ ರಾಣಿ | ೧೨ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಕೆಲ ಭಾಗಗಳ ಆಡಳಿತ | ಕೊಪ್ಪಳ ತಾಲೂಕಿನ ಅಳವಂಡಿ ಮತ್ತಿಹಳ್ಳಿ ಮೊದಲಾದ ಪ್ರದೇಶಗಳು | E.C vii (ಪರಿ) ಹಾಸನ ೧೧೭ ಜಕ್ಕೇನಹಳ್ಳಿ (ಕ್ರಿ.ಶ.೧೧೭೬) | ಕೈಕೆಳಗಿನ ಅಧಿಕಾರಿಗಳಿಗೆ ಆದೇಶ ನೀಡಿ ಕಾಳೇಶ್ವರ ದೇವಸ್ಥಾನಕ್ಕೆ ದಾನ ಕೊಟ್ಟಿದ್ದಾಳೆ | |
| **ಚೋಳ ಮಹಾದೇವಿ** | ಹೊಯ್ಸಳ ವೀರಬಲ್ಲಾಳನ ಅರಸಿ | ೧೨ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಕೆಲ ಭಾಗಗಳ ಸ್ವತಂತ್ರ ಆಳ್ವಿಕೆ | ಕೆಂಬಾಳು | E.C. V ಅರಸಿಕೆರೆ ಕಾಟಿಗೆರೆ ಸಂ.೧೦೨ (ಕ್ರಿ.ಶ.೧೧೮೩)<br><br>(ಚ.ಪ.೭೨) | ಬೇವೂರಿನ ಮೇಲೆ ಜಯಸಾಧಿಸಿ, ಯುದ್ಧದಲ್ಲಿ ತನ್ನನ್ನು ಎದುರಿಸಿ ಮಡಿದ ಕೇತಮಲ್ಲನಾಯಕನಿಗೆ ವೀರಗಲ್ಲು ಹಾಕಿಸಿ ಅವನ ಮಕ್ಕಳಿಗೆ ಉಂಬಳಿ ಬಿಟ್ಟು, ವೈಶಿಷ್ಟತೆ ತೋರಿದ್ದಾಳೆ.<br>ಇವಳ ಅಧಿಕಾರಿ ಗಂಗ ಪೆರುಮಾಳೆ ದೇವರಸ ಸ್ವಾಮಿನಿಷ್ಠೆಯ ಪ್ರತೀಕವಾಗಿ ಅಭಿವೃದ್ಧಿ ಪಡಿಸಿದ ಊರಿಗೆ ಚೋಳಮಹಾದೇವಿಪುರ ಎಂಬ ನಾಮಧೇಯವಿತ್ತಿದ್ದಾನೆ | |

| | | | | | | | |
|---|---|---|---|---|---|---|---|
| **ಬಮ್ಮಲದೇವಿ** ಬಿರುದು: ನರ್ತನ ಪ್ರವೀಣೆ, ಪ್ರತ್ಯುತ್ಪನ್ನ ವಾಚಸ್ಪತಿ, ಗೀತವಾದ್ಯ ನೃತ್ಯಸೂತ್ರಧಾರೆ | ಹೊಯ್ಸಳ ವೀರಬಲ್ಲಾಳನ ಮಡದಿ | ೧೨ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಕೆಲ ಭಾಗಗಳ ಸ್ವತಂತ್ರ ಆಳ್ವಿಕೆ | ಮಹಾಮಂಡಳೇಶ್ವರಿ ಯಾಗಿ ಹೆಮ್ಮನಹಳ್ಳಿ ಮೊದಲಾದೆಡೆ ಗಳಲ್ಲಿ ಹಾಗೂ ದ್ವಾರಸಮುದ್ರದಿಂದ ಲೂ ಆಡಳಿತ | E.C. V ಚನ್ನರಾಯಪಟ್ಟಣ ೨೫೪, ಅತ್ತಿಹಳ್ಳಿ (ಕ್ರಿ.ಶ.೧೧೮೪) ; E.C. ಮೈ.೨೧೯ ಹುಲಿಕಲ್ಲು ಕ್ರಿ.ಶ.೧೧೭೩ | ಮಲಪರೊಂದಿಗೆ ಯುದ್ಧ ನಡೆಸಿ ಅವರನ್ನು ನಿಯಂತ್ರಿದ್ದಾಳೆ. | ಸಂಗೀತ ಹಾಗು ನಾಟ್ಯಕಲಾವಿದೆ |
| **ತುಳುವಲ ಮಹಾದೇವಿ** | ಹೊಯ್ಸಳ ಬಲ್ಲಾಳನ ರಾಣಿ, ಗುಪ್ತವಂಶದ ಇಮ್ಮಡಿ ವಿಕ್ರಮಾದಿತ್ಯನ ಮಗಳು | ೧೨ನೆಯ ಶತಮಾನ | ಪತಿಯೊಡನೆ ಆಳ್ವಿಕೆ | | E.C ಯಳಂದೂರು ತಾ ಹೊನ್ನೂರು ಕ್ರಿ.ಶ.೧೧೯೧ ; E.C V ಅಕೆ.೨೭೭, ದ್ಯಾಮೇನಹಳ್ಳಿ ಶಾಸನ ಕ್ರಿ.ಶ.೧೧೧೯ | ಇವಳು ಪೊನ್ನೂರಿನ ದೇವಸ್ಥಾನಕ್ಕೆ ದತ್ತಿ ಬಿಟ್ಟಿರುವುದನ್ನೂ ಮತ್ತು ಇಮ್ಮಡಿ ಬಲ್ಲಾಳನು ಇವಳ ಹೆಸರಿನಿಂದ ಕೊಟ್ಟಿರುವ ದಾನವಿವರವನ್ನು ಶಾಸನಗಳು ತಿಳಿಸುತ್ತದೆ. | |
| **ಮಧುಕಲಾಂಬಿಕೆ** ಸಂಗೀತ ಚೂಡಾಮಣಿ, ಜಂಗಮ ಸರಸ್ವತಿ | ಹೊಯ್ಸಳ ವೀರಬಲ್ಲಾಳನ ರಾಣಿ | ೧೨ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಕೆಲ ಭಾಗಗಳ ಸ್ವತಂತ್ರ ಆಳ್ವಿಕೆ | ಚಿಕ್ಕಮಗಳೂರು ತಾಲೂಕಿನ ಕೆಂಕೆರೆ | E.C vi ಚಿಕ್ಕಮಗಳೂರು ೧೫೭ ಹಾಗೂ ೧೫೮ ಕೆಂಕೆರೆ (ಕ್ರಿ.ಶ.೧೧೯೫) (ತರಿಕೆರೆ ೪೬). ಕ್ರಿ.ಶ.೧೧೮೦ರ ಗುಡಿಹಳ್ಳಿ ಶಾಸನ | ಧಾರ್ಮಿಕ ಕಾರ್ಯಗಳಲ್ಲಿ ಆಸಕ್ತಿ ತೋರಿದಂತೆಯೇ ಯುದ್ಧಪ್ರಿಯೆಯಾಗಿ ತುರುಗೋಳಿನಲ್ಲಿ ಮಡಿದ ವೀರರಿಗೆ ವೀರಕೊಡುಗೆ ದತ್ತಿಗಳನ್ನು ನೀಡಿದ ನಾಲ್ಕು ಶಾಸನಗಳು ದೊರಕಿವೆ. | ಸಂಗೀತ ಹಾಗು ನಾಟ್ಯಕಲಾವಿದೆ |
| **ತುಪ್ಪದ ಭಾಗಲದೇವಿ** | ಹೊಯ್ಸಳ ವೀರಬಲ್ಲಾಳನ ರಾಣಿ | ೧೨ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಕೆಲ ಭಾಗಗಳ ಸ್ವತಂತ್ರ ಆಳ್ವಿಕೆ | | E.C. vii ಶಿಕಾರಿಪುರ ಸಂ.೮೭ | ಬಳ್ಳಿಗಾವೆಯ ಬಲ್ಲೇಶ್ವರ ದೇವರ ದೇವಕಾರ್ಯಕ್ಕೆ ಕೆಲವು ಗದ್ಯಾಣಗಳನ್ನು ದತ್ತಿಯನ್ನಾಗಿ ಬಿಟ್ಟು ವರ್ಷದಿಂದ ವರ್ಷಕ್ಕೆ ವೃದ್ಧಿಯಾಗುವಂತೆ ಉಪಯೋಗಿಸಬೇಕೆಂದು ಸೂಚನೆ ನೀಡಿದ್ದಾಳೆ | |
| **ಬಮ್ಮಲದೇವಿ** ವಿವೇಕ ಬೃಹಸ್ಪತಿ, ವಾಚಸ್ಪತಿ ಸಕಳ ವಂದಿಜನ ಚಿಂತಾಮಣಿ | ವೀರಬಲ್ಲಾಳನ ರಾಣಿ | ೧೨ನೆಯ ಶತಮಾನ | ಪತಿಯೊಂದಿಗೆ ರಾಜಧಾನಿಯಲ್ಲಿ ಆಳ್ವಿಕೆ ಹಾಗೂ ಕೆಲ ಊರುಗಳಲ್ಲಿ ಸ್ವತಂತ್ರ ಆಳ್ವಿಕೆ | ಹೆಮ್ಮನಹಳ್ಳಿ ಮೊದಲಾದೆಡೆಗಳಲ್ಲಿ ಮಹಾಮಂಡಳೇಶ್ವರಿ ಯಾಗಿ ಆಳ್ವಿಕೆ, ಪತಿಯೊಂದಿಗೆ ದೋರಸಮುದ್ರದಿಂದ ಆಳ್ವಿಕೆ | E.C V ಅರಸಿಕೆರೆ ೭೨ ; E.C V ಚೆನ್ನರಾಯಪಟ್ಟಣ ೨೫೪ ಅತ್ತಿಹಳ್ಳಿ ಕ್ರಿ.ಶ.೧೧೮೩ | ಅತ್ತಿಹಳ್ಳಿ ಶಾಸನವು ಇವಳು ಅಮೃತೇಶ್ವರ ದೇವರಿಗೆ ನೀಡಿದ ದಾನದ ವಿಚಾರ ತಿಳಿಸುತ್ತದೆ. ಯುದ್ಧ ಸಾಹಸದಲ್ಲಿಯೂ ಮೆರೆದು ಮಲಪ ಕುಲವನ್ನು ನಿಯಂತ್ರಿಸಿದ್ದಳು | ಗೀತವಾದ್ಯನೃತ್ಯ ಸೂತ್ರಧಾರೆ, ಪಾತ್ರ ಚೂಡಾಮಣಿ ಮೊದಲಾದ ಬಿರುದು ಹೊಂದಿದ ಕಲಾವಿದೆ |

| | | | | | | | |
|---|---|---|---|---|---|---|---|
| **ರಾಣಿ ಬೈಚಲದೇವಿ** | ಹೊಯ್ಸಳ ಇಮ್ಮಡಿ ಬಲ್ಲಾಳನ ಅಗ್ರಮಹಿಷಿ | ೧೨ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಕೆಲವು ಪ್ರದೇಶಗಳ ಸ್ವತಂತ್ರ ಆಳ್ವಿಕೆ | ಮಗರೆ ಮುನ್ನೂರನ್ನು | E.C vi ಕಡೂರು ಸಂ.೧೪೯ ಕ್ರಿ.ಶ.೧೨೧೭ | ಮಾಧವಪುರದಲ್ಲಿ ಪ್ರಸನ್ನ ಮಾಧವ ದೇವಾಲಯವನ್ನು ನಿರ್ಮಿಸಿ ದಾನ–ದತ್ತಿಗಳನ್ನು ನೀಡಿದ್ದಾಳೆ. | ಶಾಸನಕವಿ ನಾಗದೇವನ ಪೋಷಿತಳು |
| **ಅಭಿನವ ಕೇತಲದೇವಿ** | ಹೊಯ್ಸಳ ಬಲ್ಲಾಳನ ರಾಣಿ | ೧೩ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಕೆಲ ಭಾಗಗಳ ಸ್ವತಂತ್ರ ಆಳ್ವಿಕೆ | ಕುಂದವಾಡ | E.C. Xi ದಾವಣಗೆರೆ ೧೦೫ ಕುಂದವಾಡದ ಕ್ರಿ.ಶ.೧೨೪೦ | ತನ್ನ ಸೋದರಮಾವ ಮಾಧವ ದಣ್ಣಾಯಕ ಬಂದಳಿಕೆಯ ಮಹಾಜನರಿಗೆ ನೀಡಿದ ೩೩ ವೃತ್ತಿಗಳನ್ನು ದೃಢೀಕರಿಸಿದ್ದಾಳೆ. ಕ್ರಿ.ಶ.೧೨೪೦ ರಲ್ಲಿ ತನ್ನ ಆಳ್ವಿಕೆಯ ಪ್ರದೇಶವಾದ ಕುಂದವಾಡದಲ್ಲಿ ಸಂತೆಯನ್ನು ಸ್ಥಾಪಿಸಿದ್ದಾಳೆ | |
| **ಭಾಗುಬಾಯಿ** ಯಾದವ ಸಿಂಘಣ ನಿಂದ ಬಿರುದು 'ಪರಮವಿಶ್ವಾಸಿ' | ಯಾದವ ಅರಸು ಸಿಂಘಣ ಸರ್ವಾಧಿಕಾರಿಣಿ | ೧೩ನೆಯ ಶತಮಾನ | ಮಹಾ ಮಂಡಳೇಶ್ವರಿ ಯಾಗಿ ಆಳ್ವಿಕೆ ನಡೆಸಿದವಳು | ಹೇಡ, ಕಣಂಬಾಡಿ & ತರ್ದವಾಡಿ | SII XVIII 223; ಕವಿಶಾಸಂ ೧೦, ಬಿಜಾಪುರ ೯ ಪು.೧೯ | ಉತ್ತಮ ಆಡಳಿತಗಾರ್ತಿ | |
| **ದೇಮಲಾ ದೇವಿ** | ಮೂರನೆಯ ಬಲ್ಲಾಳನ ರಾಣಿ | ೧೪ನೆಯ ಶತಮಾನ | ಪತಿಯೊಂದಿಗೆ ಆಳ್ವಿಕೆ | | E.C ಕೃಷ್ಣರಾಜಪೇಟೆ ಸಂ ೧೦೮ ಕ್ರಿ.ಶ.೧೩೩೪ | ಮಹಾಪ್ರಧಾನಿ ಆದಿಸಿಂಗೇಯನಾಯಕನು ಈಕೆಯ ಹೆಸರಿನಲ್ಲಿ ದೇಮಲಾಪುರವೆಂಬ ಅಗ್ರಹಾರವನ್ನು ನಿರ್ಮಿಸಿ, ಸ್ವಾಮಿ ನಿಷ್ಠೆ ತೋರಿದ್ದಾನೆ | |
| **ಕಿಕ್ಕಾಯಿ ತಾಯಿ** | ಹೊಯ್ಸಳ ಮೂರನೆಯ ಬಲ್ಲಾಳನ ರಾಣಿ, ಆಳುಪ ರಾಜಕುಮಾರಿ | ೧೪ನೆಯ ಶತಮಾನ | ಅಳಿಯಸಂತಾನ ಕ್ರಮದಂತೆ ಆಳುಪ ರಾಜ್ಯದ ಆಳ್ವಿಕೆ. ಪತಿ ಬಲ್ಲಾಳನ ಮರಣಾನಂತರ ವಿಜಯನಗರದ ಅರಸರ ಅಧೀನ ದಲ್ಲಿ ಆಡಳಿತ | ಕರಾವಳಿ ತೀರ ಪ್ರದೇಶಗಳಲ್ಲಿ (ಆಳುಪ ರಾಜ್ಯ) ಆಳ್ವಿಕೆ ನಡೆಸುತ್ತಿದ್ದಳು | E.C. vii ಶೃಂಗೇರಿ ಕ್ರಿ.ಶ.೧೩೪೬ SII XXVII ಸಂಖ್ಯೆ ೩೯ ಶಿವಳ್ಳಿ | ವಿಜಯನಗರದ ಮೊದಲನೆಯ ಹರಿಹರನು ಶೃಂಗೇರಿ ಮಠಕ್ಕೆ ದಾನನೀಡಿದ ಸಂದರ್ಭದಲ್ಲಿ **ಕಿಕ್ಕಾಯಿ ತಾಯಿಯು** ಸಾಂತಳಿಗೆ ನಾಡಿನ ಕೆಲವು ಸೀಮೆಗಳನ್ನು ದಾನನೀಡಿದ್ದಾಳೆ. (ಪತಿಯ ಮರಣಾನಂತರ) ಶಿವಳ್ಳಿ ಶಾಸನವು ಬಲ್ಲಾಳನ ಜೀವಿತಾವಧಿಯ ದಾನಶಾಸನ | |
| **ಸೆಟ್ಟಿಕವ್ವೆ** | ನಾಗರ ಖಂಡದ ಸಾತೇನಹಳ್ಳಿಯ ನಾಳ್ಗಾವುಂಡ ಕಾಮಿಸೆಟ್ಟಿಯ ಕುಲಾಂಗನೆ | ೧೩ನೆಯ ಶತಮಾನ | ಹೊಯ್ಸಳ ವೀರಬಲ್ಲಾಳನ ಆಳ್ವಿಕೆಯಲ್ಲಿ ಗಾವುಂಡಿಯಾಗಿದ್ದ ವಳು | ಸಾತೇನಹಳ್ಳಿ | KI IV – 1 ಸಾತೇನಹಳ್ಳಿ (ಕ್ರಿ.ಶ.೧೨೦೪) ; KI IV – 2 ಸಾತೇನಹಳ್ಳಿ (ಕ್ರಿ.ಶ.೧೨೪೧) | ಸಾತೇಯನಹಳ್ಳಿಯಲ್ಲಿ ಹರಿಹರೇಶ್ವರನನ್ನು ಪ್ರತಿಷ್ಠಿಸಿ ದೊರೆ ಬಲ್ಲಾಳನಿಂದ ದತ್ತಿ ಪಡೆದು ಕೊಟ್ಟಿದ್ದಾಳೆ. ಯುದ್ಧದಲ್ಲಿ ಭಾಗವಹಿಸಿ ವೈರಿಗಳನ್ನು ಸಂಹರಿಸಿದ ಸಾಹಸಿ | |

| | | | | | | | |
|---|---|---|---|---|---|---|---|
| **ಮಹಾದೇವಿ** (೧೨೩೦–೧೨೫೦) | ಆಳುಪ ವಲ್ಲಭದೇವನ ರಾಣಿ ಸಾಂತರ ಕುಲದ ರಾಜಕುಮಾರಿ. | ೧೩ನೆಯ ಶತಮಾನ | ಪತಿಯೊಂದಿಗೆ ರಾಜ್ಯಾಡಳಿತ ನಿರ್ವಹಣೆ ಪತಿಯ ಮರಣಾನಂತರ ಮಗ ವೀರಪಾಂಡ್ಯನ ಪರವಾಗಿ ರಾಜ್ಯಾಡಳಿತ | ಬಾರಕೂರು, ಮಂಗಳೂರು ಪ್ರದೇಶಗಳು | SII ಸಂ IX ಭಾಗ–೧ ನಂ.೩೯೫, ೩೯೬, ಸಂ.೨೭. ನಂ.೨೦೮ | | |
| **ಬಲ್ಲಮಹಾದೇವಿ**<br><br>ಆಳುಪ ಅರಸರಿಗಿದ್ದ ಬಿರುದುಗಳನ್ನು ಧರಿಸಿದ್ದಾಳೆ. | ಆಳುಪ ವೀರಪಾಂಡ್ಯನ ರಾಣಿ | ೧೩ನೆಯ ಶತಮಾನ | ಪತಿಯ ಮರಣಾನಂತರ ಅತ್ತೆಯ ಸಹಕಾರದಿಂದ ಸ್ವತಂತ್ರವಾಗಿ ರಾಜ್ಯವನ್ನು ಆಳಿದಳು. | ಬಾರಹಕನ್ಯಾಪುರ ಬಾರಕೂರು, ಮಂಗಳೂರು ಪ್ರದೇಶಗಳು | SII ಸಂ.IX ಭಾಗ ೧ ನಂ.೩೯೫, ೩೯೬, ಸಂ.೨೭. ನಂ.೨೦೮ ; ಅದೇ ೨೨೦ ಶಾಸನ SII XXVII ಸಂಖ್ಯೆ ೨೧೮ ಕೊಡವೂರು; ಅದೇ ೨೨೦ ಅಲೆವೂರು; ಅದೇ ಬೈಲೂರು ಶಾಸನ ೨೨೧ | ಉಡುಪಿ ಜಿಲ್ಲೆಯ ಕಚ್ಚೂರು (ಕೊಟಕೇರಿ)ಯ ಮಾರ್ಕಂಡೇಶ್ವರ ದೇವರಿಗೆ ದಾನ, ಸಂತೆ ನಿರ್ಮಾಣ, ವ್ಯಾಪಾರ,ತೆರಿಗೆ ಕುರಿತಂತೆ ಶಾಸನಗಳನ್ನು ಹೊರಡಿಸಿದ್ದಾಳೆ.<br>ವ್ಯಾಪಾರ ವಹಿವಾಟುಗಳನ್ನು ಸೂಕ್ತ ರೀತಿ ನಿಭಾಯಿಸಿ ವಿದೇಶಿಯರ ಕಡತಗಳಲ್ಲಿ ಪ್ರಸಿದ್ಧಿಯಾಗಿದ್ದಾಳೆ. | |
| **ಜಾಕಲ ಮಹಾದೇವಿ** | ತೋಳಹಾರ ಮನೆತನದ ಅರಸಿ | ೧೩ನೆಯ ಶತಮಾನ | ಅಳಿಯ ಸಂತಾನ ಪರಂಪರೆ | ಸುರಾಳು | E.C.VI ಮೂಡಿಗೆರೆ ಸಂ ೬೭, ೭೦ | ಅಧಿಕಾರಿಗಳೊಂದಿಗೆ ಕಳಸ ಮೊದಲಾದ ದೇವಾಲಯಗಳಿಗೆ ದಾನ | |
| **ಕಾಳಲ ಮಹಾದೇವಿ** | ತೋಳಹಾರ ಮನೆತನದ ಅರಸಿ | ೧೩ನೆಯ ಶತಮಾನ | ಅಳಿಯ ಸಂತಾನ ಪರಂಪರೆ | ಸುರಾಳು | E.C VI ಮೂಡಿಗೆರೆ ಸಂ ೭೧,೭೨, ೭೩ & ೭೫ | ದಾನ ಹಾಗೂ ಧಾರ್ಮಿಕ ಕಾರ್ಯಗಳಲ್ಲಿ ಉಕ್ತವಾಗಿದ್ದಾಳೆ | |
| **ಹಲಸೂರಮ್ಮ** | ಆವಂತಿ ನಾಡಪ್ರಭು ಹಿರಿಯ ಕೆಂಪೇಗೌಡನ ಪತ್ನಿ | ೧೬ನೆಯ ಶತಮಾನ | ಪತಿಯ ಮರಣಾ ನಂತರ ಅಧಿಕಾರ ವಹಿಸಿಕೊಂಡಳು | ಶಿಡಿಲಘಟ್ಟದ ಸುತ್ತಮುತ್ತಲ ಪ್ರದೇಶ | | ಕ್ರಿ.ಶ.೧೫೨೬ರಲ್ಲಿ ಮಾವ ಸಿಡಿಲೇಗೌಡನ ಹೆಸರಾಗಿ ಶಿಡ್ಲಘಟ್ಟ ಎಂಬ ಊರನ್ನು ನಿರ್ಮಿಸಿ, ಕೆರೆಕಟ್ಟಿಸಿದ್ದಾಳೆ. ಊರಿನ ಉತ್ತರಕ್ಕೆ ಅಬ್ಲೋಡು ಕೋಟೆಯನ್ನು ಕಟ್ಟಿಸಿದಳು. | |

| | | | | | | | |
|---|---|---|---|---|---|---|---|
| **ಭೈರಾದೇವಿ** | ಸಾಳ್ವಮನೆತನ ಸಾಳುವೇಂದ್ರ (ಹೈವಭೂಪ)ನ ರಾಣಿ. | ೧೫ನೆಯ ಶತಮಾನದ ಆರಂಭ | ಪತಿಯ ಮರಣಾನಂತರ ಆಳ್ವಿಕೆ ನಡೆಸಿದ್ದಾಳೆ | ಹಾಡುವಳ್ಳಿಯಿಂದ ಆಳ್ವಿಕೆ ನಡೆಸುತ್ತಿದ್ದಳು | MAR 1939-40 P.90 | ಸಮಾಧಿಮರಣ ಹೊಂದಿದ ಇವಳಿಗಾಗಿ ಮಗ ಸಂಗೀರಾಯ ನಿಸಿದಿಗಲ್ಲನ್ನು ಹಾಕಿಸಿದ್ದಾನೆ. | |
| **ವೀರಾದೇವಿ** (೧೪೮೯–೧೫೩೨) | ಸಾಳ್ವ ಮನೆತನ ಗುರುರಾಜವೊಡೆಯನ ರಾಣಿ | ೧೫ನೆಯ ಶತಮಾನ | | ಭಟ್ಕಳದಿಂದ ಕೆಲಕಾಲ ಆಳ್ವಿಕೆ ನಡೆಸುತ್ತಿದ್ದಳು | ಕುಂದನಾಡಿನ ಶಾಸನ | ಕ್ರಿ.ಶ.೧೫೨೭ರ ಭಟ್ಕಳದಲ್ಲಿ ಬಸದಿ ನಿರ್ಮಾಣ | |
| **ಮಹಾಮಂಡಲೇಶ್ವರಿ ಪದುಮಲ ದೇವಿ (ಪದ್ಮಾಂಬಾ)** **(೧೫೨೨–೧೫೩೦)** | ಸಾಳ್ವ ಮನೆತನ ಗುರುರಾಜ ಒಡೆಯ ಹಾಗೂ ದೇವರಾಯ ಒಡೆಯರ ಸಹೋದರಿ | ೧೬ನೆಯ ಶತಮಾನ | ವಿಜಯ ನಗರದ ಅರಸು ಕೃಷ್ಣದೇವ ರಾಯನ ಆಳ್ವಿಕೆಯಲ್ಲಿ ಮಹಾ ಮಂಡಳೇಶ್ವರಿ | ಹೊನ್ನಾವರ ರಾಜಧಾನಿ ಯಿಂದ ಹೈವೆ, ತುಳು, ಕೊಂಕಣ ಪ್ರದೇಶಗಳ ಆಳ್ವಿಕೆ ನಡೆಸುತ್ತಿದ್ದಳು | SII ೨೧ ಕ್ರಿ.ಶ.೧೫೭೧ ಪು.೧೦೬<br><br>ಕುಂದನಾಡಿನ ಶಾಸನಗಳು ಸಂ.೬೫ | ಪೋರ್ಚುಗೀಸ್ ಹಾಗೂ ಇತರ ವಿದೇಶಿಯರೊಂದಿಗೆ ಸಮುದ್ರ ವ್ಯಾಪಾರ ನಡೆಸಿ, ವ್ಯಾಪಾರ ಚಾತುರ್ಯತೆಗೆ ಹೆಸರಾದವಳು.<br>ಡೇವರ್ಸ್: ದಿ ಪೋರ್ಚುಗೀಸ್ ಇನ್ ಇಂಡಿಯಾ. ಸಂಪುಟ ೧ ಪು.೧೪೪ – ಇವಳ ವ್ಯಾಪಾರ ವ್ಯವಹಾರಗಳ ಕುರಿತಾದ ಒಪ್ಪಂದ ದಾಖಲಾಗಿದೆ | |
| **ಭೈರಾದೇವಿ** | ಸಾಳ್ವ ಮನೆತನ ಕೃಷ್ಣದೇವರಸನ ಸಹೋದರಿ. | ೧೬ನೆಯ ಶತಮಾನ | ಸಹೋದರನ ಆಳ್ವಿಕೆಯಲ್ಲಿ ಕೆಲ ಭಾಗಗಳನ್ನು ನೋಡಿಕೊಳ್ಳು ತ್ತಿದ್ದಳು | ಹಾಡುವಳ್ಳಿ | K I – 1 ಸಂ. 49 | | ಕವಿ ಬ್ರಹ್ಮಸೂರಿಗೆ ಆಶ್ರಯ ನೀಡಿದ ಅರಸಿ |
| **ಚೆನ್ನಾದೇವಿ** | ಸಾಳ್ವ ಮನೆತನ ಭೈರಾದೇವಿಯ ಮಗಳು | ೧೬ನೆಯ ಶತಮಾನ | ಸೋದರ ಮಾವ ಕೃಷ್ಣ ದೇವರಸನ ಆಳ್ವಿಕೆಯಲ್ಲಿ ಕೆಲವು ಪ್ರದೇಶಗಳನ್ನಾಳುತ್ತಿ ದ್ದಳು | ಭಟ್ಕಳದಿಂದ ಕೆಲಕಾಳ ಆಳ್ವಿಕೆ ನಡೆಸಿದಳು | KI. ಸಂ.೧೨–೧೩ | ಪೋರ್ಚುಗೀಸರೊಂದಿಗೆ ಯುದ್ಧ ನಡೆಸಿದ್ದಾಳೆ.<br>ಎಂಕಪ್ಪ ನಾಯಕ ಮತ್ತು ಇತರರಿಗೆ ವೀರಗಲ್ಲು ಹಾಕಿಸಿ ಅವರ ಮನೆಯವರಿಗೆ ಉಂಬಳಿ ನೀಡಿದ್ದಾಳೆ. | (ಡೇವರ್ಸ್: ದಿ ಪೋರ್ಚುಗೀಸ್ ಇನ್ ಇಂಡಿಯಾ. ಸಂ.೪೬೦–೬೧) |
| **ಚೆನ್ನಭೈರಾ ದೇವಿ** (೧೫೬೦–೧೬೦೮) ಪೋರ್ಚುಗೀಸರಿಂದ ಬಿರುದು: **ಕರಿಮೆಣಸಿನ ರಾಣಿ** (ರೈನಾ.ಡಾ. ಪಿಮೆಂಟಾ) | ಸಾಳ್ವ ಮನೆತನ ಭೈರಾದೇವಿಯ ಮಗಳು ಸಾಳ್ವ ಕೃಷ್ಣದೇವರಸನ ಸೋದರಸೊಸೆ. ಚೆನ್ನಾದೇವಿಯ ಸಹೋದರಿ. | ೧೬ನೆಯ ಶತಮಾನ | ವಿಜಯನಗರದ ಮಹಾ ಮಂಡಳೇಶ್ವರಿ | ಅಂಕೋಲಾ ಭಟ್ಕಳ,ಮಿರ್ಜಾನ ಗೋಕರ್ಣ,ಕರೂರು,ಚಂದಾವರ, ಹೊನ್ನಾವರ, ಬೈಂದೂರು, ಉಪ್ಪುಂದ, ತ್ರಾಸಿ, ಮೊದಲಾದ ಹೈವ– ತುಳು– ಕೊಂಕಣ ಪ್ರದೇಶಗಳು | K I III part 1, No.16 & 17<br><br>ಕುಂದನಾಡಿನ ಶಾಸನ ಸಂ.೬೮–೭೩ | ಪೋರ್ಚುಗೀಸ್, ಪರ್ಷಿಯ ಅರಬ್, ಮೊದಲಾದ ಹೊರ ದೇಶಗಳೊಂದಿಗೆ ವ್ಯಾಪಾರ, ಪೋರ್ಚುಗೀಸ್‌ರಂಥ ವಿದೇಶಿ, ಬೀಳಗಿ, ಕೆಳದಿ ಮೊದಲಾದ ದೇಸೀ ಅಸರೊಂದಿಗೆ ಯುದ್ಧ ಗೇರುಸೊಪ್ಪೆ ಮೊದಲಾದ ಕಡೆಗಳಲ್ಲಿ ಬಸದಿ ನಿರ್ಮಾಣ, ಬಸದಿ–ದೇಗುಲಗಳಿಗೆ ದಾನ–ದತ್ತಿ | ಹಲವಾರು ಕವಿಗಳಿಗೆ ಆಶ್ರಯ ನೀಡಿದ್ದಳು. ವಿದೇಶಿ ಪ್ರವಾಸಿಗ ಬುಕಾನನ್ ಮೊದಲಾದವರ ಬರಹಗಳಲ್ಲಿ ಉಕ್ತಳಾಗಿದ್ದಾಳೆ |

| | | | | | | | |
|---|---|---|---|---|---|---|---|
| **ತಿರುಮಲ ದೇವಿ** | ಚೌಟ ಅರಸು ಮನೆತನ | ೧೬ನೆಯ ಶತಮಾನ | ಅಳಿಯ ಸಂತಾನ ಪರಂಪರೆ | ಉಲ್ಲಾಳ | | ಕಾರ್ಕಳದ ಭೈರರಸನೊಂದಿಗೆ ಹೋರಾಡಿ ವೀರ ಮರಣ ಹೊಂದಿದವಳು | |
| **ಹಿರಿಯ ಅಬ್ಬಕ್ಕದೇವಿ** ಕ್ರಿ.ಶ.೧೫೪೪ರಿಂದ ೧೫೮೨ರ | ಚೌಟ ಅರಸುಮನೆತನ | ೧೬ನೆಯ ಶತಮಾನ | ಅಳಿಯ ಸಂತಾನ ಪರಂಪರೆ | ಉಲ್ಲಾಳ | | ಸಹೋದರಿ ಪದುಮಲದೇವಿಯ ಪರೋಕ್ಷವಿನಯವಾಗಿ ಕಾರ್ಕಳದ ಬಸದಿಯಲ್ಲಿ ಆಹಾರದಾನಕ್ಕಾಗಿ ದತ್ತಿ ನೀಡಿದ್ದಾಳೆ.<br>ಪೋರ್ಚುಗೀಸರ ವಿರುದ್ಧ ಕೆಲವು ಯುದ್ಧಗಳನ್ನು ನಡೆಸಿದ್ದಾಳೆ. | ಪೋರ್ಚುಗೀಸರನ್ನೆದುರಿಸಿದ ದಿಟ್ಟ ಅರಸಿ ಎಂಬ ಖ್ಯಾತಿಯಿಂದ ದೇಶ ವಿದೇಶಗಳಲ್ಲಿ ಪ್ರಸಿದ್ಧಳಾದವಳು. |
| **ಲೋಕದೇವಿ** | ಚೌಟ ಅರಸುಮನೆತನ ಅಬ್ಬಕ್ಕದೇವಿಯ ಸಹೋದರಿ | ೧೬ನೆಯ ಶತಮಾನ | ಅಳಿಯ ಸಂತಾನ ಪರಂಪರೆ | ಪುತ್ತಿಗೆ | SII Vol.7 No.210 | ತನ್ನ ಸಹೋದರಿ ಪದುಮಲ ದೇವಿಯ ಪರೋಕ್ಷ ವಿನಯವಾಗಿ ಮೂಡುಬಿದರೆ ಪಾರ್ಶ್ವನಾಥ ಬಸದಿಗೆ ದಾನ ನೀಡಿದ್ದಾಳೆ. | |
| **ಕಿರಿಯ ಅಬ್ಬಕ್ಕದೇವಿ** (ಚನ್ನಮ್ಮ ದೇವಿ) ಕ್ರಿ.ಶ.೧೬೨೩ರಲ್ಲಿ | ಚೌಟ ಅರಸು ಮನೆತನ (ಭೋಜರಾಜನ ಸೊಸೆ?) ಬಂಗರಾಜನ ಅರಸಿ | ೧೭ನೆಯ ಶತಮಾನ | ಅಳಿಯ ಸಂತಾನ ಪರಂಪರೆ | ಉಲ್ಲಾಳ | | ಉತ್ತಮ ಆಳ್ವಿಕೆ, ವ್ಯಾಪಾರ ದಕ್ಷತೆ ಹಾಗೂ ಯುದ್ಧ ಸಾಹಸಿಯಾಗಿ ಹೆಸರು ಗಳಿಸಿದವಳು | ಇಟಲಿಯ ಪ್ರವಾಸಿ ದೆಲ್ಲಾವೆಲ್ಲೆ ಇವಳನ್ನು ಭೇಟಿಯಾಗಿ ಇವಳ ಕುರಿತು ವಿವರಣೆ ನೀಡಿದ್ದಾನೆ |
| ಸೋಮಲಾದೇವಿ | ಮೂಲರು ಅರಸುವಂಶ ಲಕ್ಷ್ಮಪ್ಪ ಬಂಗರಸನ ಕಿರಿಯರಸಿ | ೧೭ನೆಯ ಶತಮಾನ | ಅಳಿಯಸಂತಾನ ಪದ್ಧತಿಯಂತೆ ಸಿಂಹಾಸನವೇರಿದವಳು | ಬೈಲಂಗಡಿ | | ಬೈಲಂಗಡಿಯಲ್ಲಿ ಪಾರ್ಶ್ವನಾಥ ಜಿನಮಂದಿರ ನಿರ್ಮಾಣ | |
| **ಚೆನ್ನಾಂಬಿಕೆ ಅಥವಾ ಚೆನ್ನಮ್ಮ** ೧೬೧೮ | ಮೂಲ್ಕಿಯ ಸಾವಂತರು ದುಗ್ಗಣ ಸಾವಂತನ ಸೋದರಸೊಸೆ, ದೇಮ್ಮಾಜಿಯ ಮಗಳು | ೧೭ನೆಯ ಶತಮಾನ | ಅಳಿಯ ಸಂತಾನ ಪರಂಪರೆ | ಮೂಲ್ಕಿ | ಶಾ.ಶ.೧೫೩೨ರ ಮೂಲ್ಕಿಯ ಶಾಸನ ಸಂ. ವಸಂತಮಾಧವ | ಪೋರ್ಚುಗೀಸರೊಂದಿಗೆ ವ್ಯಾಪಾರ ವ್ಯವಹಾರ ನಡೆಸುತ್ತಿದ್ದಳು.<br>ಪೋರ್ಚುಗೀಸರ ಸಹಾಯ ಪಡೆದು ಕೆಳದಿ ವೆಂಕಟಪ್ಪನಾಯಕನ ವಿರುದ್ಧ ಯುದ್ಧ ನಡೆಸಿದಳು. ಮೂಲ್ಕಿಯ ಬಸದಿ ಹಾಗೂ ದೇವಾಲಯಗಳಿಗೆ ದಾನ ನೀಡಿದ್ದಾಳೆ. | ಇಟಲಿಯ ಪಿಯತ್ರೊ ದೆಲ್ಲೆವೆಲ್ಲಾ ೧೬೨೩ ರಲ್ಲಿ ಭೇಟಿಯಾದ ಇವಳ ಕುರಿತು ಬರೆದಿದ್ದಾನೆ. ಪದ್ಮನಾಭ ಇವಳ ಆಸ್ಥಾನ ಕವಿ. |

| | | | | | | | |
|---|---|---|---|---|---|---|---|
| **ಚಿನ್ನಾದೇವಿ** | ತುಳುವ ವಂಶದ ಪ್ರಸಿದ್ಧದೊರೆ ಕೃಷ್ಣದೇವ ರಾಯನ ರಾಣಿ | ೧೬ನೆಯ ಶತಮಾನ | ಪತಿಯೊಡನೆ ಆಳ್ವಿಕೆ | | E.C. xii, ಪಾವುಗಡ ೬೯ ; ತಿರುಪತಿ ದೇವಸ್ಥಾನದ ಶಾಸನ ; ಆಂಧ್ರಪ್ರದೇಶದ ಶಾಸನ ಸಂಪುಟ | ತಿರುಪತಿ ಮೊದಲಾದ ದೇವಾಲಯಗಳಿಗೆ ದಾನ–ದತ್ತಿಗಳನ್ನು ನೀಡಿದ್ದಾಳೆ.<br>ಪತಿಯೊಡನೆ ಕೆಲವು ಯುದ್ಧಗಳಲ್ಲಿ ಭಾಗಿ.<br>ಪಾವುಗಡದ ಶಾಸನವ ಇಮ್ಮಡಿ ದೇವರಾಯನ ಕಾಲದ ದತ್ತಿ ಗಳನ್ನು ಇವಳು ಪುನರ್ ನವೀಕರಿಸಿದ ವಿಚಾರ ತಿಳಿಸಿದೆ | ನರ್ತನ ಮೊದಲಾದ ಕಲೆಗಳಲ್ಲಿ ಪ್ರವೀಣೆ ಎಂಬ ಹೊಗಳಿಕೆಗೆ ಪಾತ್ರಳಾದವಳು |
| **ತಿರುಮಲ ದೇವಿ** | ತುಳುವ ವಂಶದ ಪ್ರಸಿದ್ಧದೊರೆ ಕೃಷ್ಣದೇವ ರಾಯನ ರಾಣಿ | ೧೬ನೆಯ ಶತಮಾನ | ಪತಿಯೊಡನೆ ಆಳ್ವಿಕೆ | | ಇನ್‌ಸ್ಕ್ರಿಪ್‌ಷನ್ ಆಫ್ ಆಂದ್ರಪ್ರದೇಶ್ ಪು.೫೨ & ೫೩; ತಿರುಮಲ ತಿರುಪತಿ ದೇವಸ್ಥಾನಂ ಇನ್‌ಸ್ಕ್ರಿಪ್‌ಷನ್ ೧೧೧ ಪು.೧೬೪–೧೬೭ | ತಿರುಪತಿ ಮೊದಲಾದ ದೇವಾಲಯಗಳಿಗೆ ದಾನ–ದತ್ತಿಗಳನ್ನು ನೀಡಿದ್ದಾಳೆ.<br>ಕೆಲವು ಯುದ್ಧಗಳಲ್ಲಿ ಪತಿಯೊಡನೆ ಭಾಗಿಯಾಗಿದ್ದಾಳೆ.<br>ಪತಿಯ ಮರಣಾ ನಂತರ ಅಚ್ಯುತರಾಯನಿಗೆ ಆಳ್ವಿಕೆಯ ಅಧಿಕಾರ ನೀಡುವಲ್ಲಿ ಸಮ್ಮತ ಸೂಚಿಸಿದ್ದಾಳೆ.<br>ಮುಂದೆ ತನ್ನ ಅಳಿಯಂದಿರಿಗೆ ಅಧಿಕಾರ ಕೊಡಿಸುವಲ್ಲಿಯೂ ಪಾತ್ರ ವಹಿಸಿದ್ದಾಳೆ | |
| **ಮಧುರಕ್ಕ ದೇವಿ/ ಅಮ್ಮಾಜಿಲ** | ಅಜಿಲ ಮನೆತನ ತಿಮ್ಮಣ್ಣ ಅಜಿಲನ ಸೋದರಸೊಸೆ | ೧೭ನೆಯ ಶತಮಾನ | ಅಳಿಯ ಸಂತಾನ ಪದ್ಧತಿಯಂತೆ | ಪುಂಜಳಿಕೆ ಯ ರಾಜ್ಯ | ಉಲ್ಲೇಖ S.I.I ಸಂ. VII. No.255 ೧೬೨೧ | ಬಸದಿಯ ಧಾರ್ಮಿಕ ವಿಧಿಗಳಿಗೆ ದಾನ | |
| **ಮಲ್ಲಮ್ಮ** | ಬೆಳವಡಿಯ ಈಶಪ್ರಭುವಿನ ಸತಿ ಸ್ವಾದಿಯ ರಾಜಕುಮಾರಿ ಸದಾಶಿವ ನಾಯಕನ ಸಹೋದರಿ | ೧೭ ನೆಯ ಶತಮಾನ | ಪತಿಯ ಮರಣಾನಂತರ ಬೆಳವಡಿ ಸಂಸ್ಥಾನದಲ್ಲಿ ಆಳ್ವಿಕೆ ನಡೆಸಿದಳು | ಬೆಳವಾಡಿ | ಯಾರವಾಡದ ಶಾಸನ.<br>ಹೂಲಿ ಮಠದ ತಾಮ್ರಶಾಸನ | ಶಿವಾಜಿಯ ವಿರುದ್ಧ ಸೆಣಸಾಡಿ, ಶಿವಾಜಿಯನ್ನು ಮಣಿಸಿದ ವೀರ ಮಹಿಳೆ. 'ಸ್ತ್ರೀ ಸೈನ್ಯ'ವನ್ನು ಕಟ್ಟಿದ ಯುದ್ಧಪ್ರಿಯೆ. | ಶೇಷೋ ಶ್ರೀನಿವಾಸ ಮುತಾಲಿಕ ಮೊದಲಾದವರು ಈಕೆಯ ಕುರಿತು ಬರೆದಿದ್ದಾರೆ |

| | | | | | | | |
|---|---|---|---|---|---|---|---|
| **ಕೆಳದಿ ಚೆನ್ನಮ್ಮ** | ಕೆಳದಿ ಸೋಮಶೇಖರ ನಾಯಕನ ರಾಣಿ. | ೧೭ನೆಯ ಶತಮಾನ | ಪತಿಯೊಡನೆ ಆಳ್ವಿಕೆ ನಡೆಸುತ್ತಿದ್ದಳು, ಪತಿಯ ಮರಣಾನಂತರ ಕ್ರಿ.ಶ.1672ರಲ್ಲಿ ವಿಧಿವತ್ತಾಗಿ ಕೆಳದಿ ರಾಜ್ಯದ ಸಿಂಹಾಸನವನ್ನೇರಿ ಆಡಳಿತ ನಡೆಸಿದಳು | ಕೆಳದಿ, ಇಕ್ಕೇರಿ, ಶಿವಮೊಗ್ಗ, ಸಾಗರ ಮೊದಲಾದ ಪ್ರದೇಶಗಳು | ಕೆಳದಿ ಅರಸ ಶಾಸನ ಸಂಪುಟ ಪು.೨೮೧–೩೩೦. ಸುಮಾರು ೪೫ ಶಾಸನಗಳು | ಮೈಸೂರು, ಸೋಂದೆ, ಬಿಜಾಪುರ ಮೊದಲಾದ ದೊರೆಗಳೊಂದಿಗೆ ಯುದ್ಧ ನಡೆಸಿದುದಲ್ಲದೆ, ಔರಂಗಜೇಬನ ಸೈನ್ಯದೊಂದಿಗೆ ಕಾದಾಡಿದ ವೀರ ಮಹಿಳೆ. ರಾಜ್ಯಾಡಳಿತ, ಕಾನೂನು ಸುವ್ಯವಸ್ಥೆ, ತೆರಿಗೆ ನೀತಿ, ಒಳನಾಡು ವ್ಯಾಪಾರ ಹಾಗೂ ಪೋರ್ಚುಗಿಸ್ ಮೊದಲಾದವರೊಂದಿಗಿನ ಸಮುದ್ರ ವ್ಯಾಪಾರ–ವ್ಯವಹಾರಗಳನ್ನು ಸಮರ್ಥವಾಗಿ ನಡೆಸಿದ ರಾಣಿ | ಶರಜ ಹನುಮಪ್ಪ ಇವಳ ಆಸ್ಥಾನದಲ್ಲಿ ಮಂತ್ರಿಯಾಗಿದ್ದ ಬಸವಪ್ಪನಾಯಕನನ್ನು ಸಾಕಿ ಸಲಹಿದವಳು |
| **ಚನ್ನವೀರಮ್ಮ** | ಇಮ್ಮಡಿ ಬಸವಪ್ಪನಾಯಕನ ಪತ್ನಿ, | ೧೮ನೆಯ ಶತಮಾನ | ಪತಿಯೊಡನೆ ಆಳ್ವಿಕೆ ನಡೆಸುತ್ತಿದ್ದು, ಪತಿಯ ಮರಣಾನಂತರ ಮಗನ ಪರವಾಗಿ ಆಡಳಿತ ನಡೆಸಿದಳು | ಕೆಳದಿ, ಇಕ್ಕೇರಿ, ಶಿವಮೊಗ್ಗ, ಸಾಗರ ಮೊದಲಾದ ಪ್ರದೇಶಗಳು | ಕೆಳದಿ ಅರಸ ಶಾಸನ ಸಂಪುಟ ಸಂ.೨೨೪ | ಇಂಗ್ಲೀಷರು, ಪೋರ್ಚುಗೀಸರು ಮೊದಲಾದವರೊಂದಿಗೆ ವ್ಯಾಪಾರ ವ್ಯವಹಾರ ನಡೆಸಿ, ಹಲವಾರು ಯುದ್ಧಗಳನ್ನು ನಡೆಸಿದ್ದಾಳೆ. ಹಲವಾರು ದಾನಶಾಸನಗಳಲ್ಲಿ ಉಕ್ತಳಾಗಿದ್ದಾಳೆ | |
| **ರಾಣಿ ಅಮ್ಮಾನಾಗತಿ** | ಸುರಪುರ ಪಾಮನಾಯಕನ ಮಡದಿ | ೧೭ನೆಯ ಶತಮಾನ | ಪತಿಯ ನಿಧನಾನಂತರ | ಸುರಪುರ | | ಉತ್ತಮ ಆಡಳಿತಗಾರ್ತಿ. | |
| **ರಾಣಿ ಕಾಂತಮ್ಮ** (೧೮೦೧–೧೮೦೩) | ಸುರಪುರದ ಇಮ್ಮಡಿ ವೆಂಕಟಪ್ಪನಾಯಕನ ಪತ್ನಿ | ೧೮೦೧– ೧೮೦೩ | ಪತಿಯ ಮರಣಾನಂತರ ಮೊಮ್ಮಗಳು ವೆಂಕಟರಂಗಮ್ಮಳನ್ನು ಸಿಂಹಾಸನದ ಮೇಲೆ ಕೂಡಿಸಿ ಅವಳ ಪರವಾಗಿ ಆಳ್ವಿಕೆ ನಡೆಸಿದಳು | ಗುಲ್ಬರ್ಗ ಸುರಪುರ | | ಉತ್ತಮ ಆಡಳಿತಗಾರ್ತಿ | |
| **ರಾಣಿ ಈಶ್ವರಮ್ಮ** | ಕೃಷ್ಣಪ್ಪನಾಯಕನ ಮಡದಿ, ನಾಲ್ವಡಿ ವೆಂಕಟಪ್ಪನಾಯಕನ ತಾಯಿ. | ೧೯ ನೆಯ ಶತಮಾನ | ಪತಿಯಮರಣಾನಂತರ ಅಪ್ರಾಪ್ತ ವಯಸ್ಕ ಮಗನ ಪರವಾಗಿ ಆಡಳಿತ ನಡೆಸುತ್ತಾಳೆ | ಗುಲ್ಬರ್ಗ ಸುರಪುರ | | ನಿಜಾಮ ಹಾಗೂ ಬ್ರಿಟಿಷ್ ಸರ್ಕಾರದ ವಿರುದ್ಧ ಹೋರಾಟ ನಡೆಸುತ್ತಾಳೆ. ತನ್ನ ಮಗ ವೆಂಕಟಪ್ಪನಾಯಕ ಬ್ರಿಟಿಷರ ವಿರುದ್ಧ ಹೋರಾಡಲು ಪ್ರೇರಣೆಯಾಗುತ್ತಾಳೆ | |

| | | | | | | | |
|---|---|---|---|---|---|---|---|
| **ಬಾಗುಳಿ ಹರಿಯಮ್ಮಾಜಿ** | ಹರಪ್ಪನ ಹಳ್ಳಿ ಪಾಳೆಯಗಾರ್ತಿ ಎರಡನೆಯ ಬಸವಂತನಾಯಕನ ಅರಸಿ | ೧೭ ನೆಯ ಶತ ಮಾನ | ಪತಿಯ ನಿಧನಾನಂತರ ರಾಜ್ಯಭಾರ ನಿರ್ವಹಿಸಿದಳು | ಹರಪ್ಪನ ಹಳ್ಳಿ, ಅಲಗಿಲವಾಡದ ಕೋಟೆ | ಉದ್ಗಟಿಯ ೧೬೪೮ರ ಶಾಸನ | ಉತ್ತಮ ಆಡಳಿತ ನಡೆಸಿದಳಲ್ಲದೆ, ಹಲವಾರು ಯುದ್ಧಗಳಲ್ಲಿಯೂ ಭಾಗಿಯಾಗಿದ್ದಾಳೆ. ಉಚ್ಚಂಗಿದುರ್ಗದ ಬಳಿ ಇವಳ ಹೆಸರಿನಲ್ಲಿ ಹರೇನಹಳ್ಳಿ–ಹರಿಯಮ್ಮನಹಳ್ಳಿ ಎಂಬ ಹಳ್ಳಿಯನ್ನೂ, ಉದ್ಗಟಿ ಎಂಬ ಊರಿನಲ್ಲಿ ಕೂಡ್ಲಿ ಶೃಂಗೇರಿ ಮಠದ ಶಾಖೆಯನ್ನೂ ಸ್ಥಾಪಿಸಿದ್ದಾಳೆ | |
| **ಸೋಮಮ್ಮಾಜಿ** | ಹರಪ್ಪನ ಹಳ್ಳಿ ಸೋಮ ಶೇಖರನ ಮಡದಿ | | ಪತಿಯ ಮರಣಾನಂತರ ದತ್ತುಮಕ್ಕಳ ಪರವಾಗಿ, ಮುಂದೆ ಮೊಮ್ಮಗನ ಪರವಾಗಿ ಆಡಳಿತ ನಡೆಸುತ್ತಾಳೆ. | ಹರಪ್ಪನ ಹಳ್ಳಿ | ಮಠದ ನಿರೂಪ | ಧಾರ್ಮಿಕ ಕಾರ್ಯಗಳಲ್ಲಿ ಗುರುತಿಸಿಕೊಂಡಿದ್ದಾಳಲ್ಲದೆ, ಉತ್ತಮ ಆಡಳಿತಗಾರ್ತಿಯಾಗಿದ್ದಳು | |
| **ರಾಮಕ್ಕ** | ಗುಮ್ಮನಾಯಕನ ಹಳ್ಳಿ ಪಾಳೆಯಗಾರ್ತಿ ನರಸಿಂಹ ನಾಯಕನ ಪತ್ನಿ | ೧೮ನೆಯ ಶತಮಾನ | ಪತಿಯೊಂದಿಗೆ ಆಳ್ವಿಕೆ | ಚಿಕ್ಕಬಳ್ಳಾಪುರ ಬಾಗೇಪಲ್ಲಿ | | ಸಾನಿ ನರಸಿಂಹಯ್ಯನೆಂಬ ದಳವಾಯಿಇಂದ ಪಾಳೆಯ ಪಟ್ಟನ್ನು ರಕ್ಷಿಸಿದ ನಾಗತಿ | |
| **ಚೆನ್ನಮ್ಮ** | ಕಿತ್ತೂರಿನ ಮಲ್ಲಸರ್ಜ ದೇಸಾಯಿಯ ಮಡದಿ, ಕಾಕತಿಯ ದೇಸಾಯಿಯ ಮಗಳು | ೧೮ನೆಯ ಶತಮಾನ | ಪತಿಯ ಅನುಪಸ್ಥಿತಿಯಲ್ಲಿಪತಿಯ ಮರಣಾನಂತರ ಮಗನೊಂದಿಗೆ ಹಾಗೂ ದತ್ತು ಮೊಮ್ಮಗನ ಪರವಾಗಿ ಆಳ್ವಿಕೆ | ಬೆಳಗಾವಿಯ ಕಿತ್ತೂರು | | ದತ್ತಕನಿಗೆ ಅಧಿಕಾರ ದೊರಕಿಸಿಕೊಡಲು ಬ್ರಿಟಿಶ್ ರೊಂದಿಗೆ ಎರಡು ಬಾರಿ ಯುದ್ಧ ನಡೆಸಿ, ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಮೊದಲ ಮಹಿಳೆ ಎನಿಸಿದ್ದಾಳೆ | |
| **ಚನ್ನವ್ವ ದೇಸಾಯಿಣಿ** (೧೭೧೬–೧೭೩೩) | ಸಿರಸಂಗಿ ನವಲಗುಂದ ಲಿಂಗಪ್ಪ ದೇಸಾಯಿಯ ಹಿರಿಯ ಪತ್ನಿ | ೧೮ನೆಯ ಶತಮಾನ | ಪತಿಯ ನಿಧನಾನಂತರ ಸವಣೂರ ನವಾಬ ಅಬ್ದುಲ್ ಗಫಾರ್‌ಖಾನ್‌ನ ಅದೀನ ಆಳ್ವಿಕೆ | | | ಶೌರ್ಯ, ನಿಷ್ಠೆಗೆ ಮೆಚ್ಚಿ ಸವಣೂರ ನವಾಬ, ಕರವೀರಪುರದ ಮರಾಠ ಅರಸ, ಪುಣೆಯ ಪೇಶ್ವೆ, ಮೊದಲಾದವರು ಇವಳಿಗೆ ಗ್ರಾಮಗಳನ್ನು ಉಂಬಳಿಯಾಗಿ ಕೊಟ್ಟು, ಆಳ್ವಿಕೆಗೆ ಸಹಕರಿಸಿದ್ದಾರೆ | |

| | | | | | | | |
|---|---|---|---|---|---|---|---|
| **ಗೌರಮ್ಮ** ಕ್ರಿ.ಶ.೧೭೯೩ | ಸುಗುಟೂರು ಐಮಗೌಡ ಹಿರಿಯ ರಾಣಿ | ೧೮ನೆಯ ಶತಮಾನ | ಪತಿಯ ಮರಣಾನಂತರ ಕೆಲವು ಪ್ರದೇಶ ಗಳನ್ನು ವಶ ಪಡಿಸಿಕೊಂಡು ಆಳ್ವಿಕೆನಡೆಸಿದ್ದಾಳೆ | ಪಾಲ್ಕೋಡು, ಮಾರಂಡನಹಳ್ಳಿ | | ಪತಿಯ ಮರಣಾನಂತರ ಬ್ರಿಟಿಶ್ ರೊಂದಿಗೆ ಹೋರಾಡಿ ಸಂಸ್ಥಾನದ ಪಟ್ಟ ದೊರಕಿಸಿಕೊಂಡಳಲ್ಲದೆ, ಮುಂದೆ ಚಿಕ್ಕರಾಯನೆಂಬ ಬಾಲಕನನ್ನು ದತ್ತು ಸ್ವೀಕಾರ ಮಾಡಿ, ಆನೇಕಲ್‌ಸಂಸ್ಥಾನದ ಉತ್ತರಾಧಿಕಾರಿಯನ್ನಾಗಿಸಿದಳು | |
| **ದೇವ ರಾಜಮ್ಮ/ ದೇವಾಜಮ್ಮ** ಸು.ಕ್ರಿ.ಶ.೧೬೮೫–೧೭೧೪ | ಮೈಸೂರು ಚಿಕ್ಕದೇವರಾಜ ಒಡೆಯರ್‌ನ ರಾಣಿ, ಯಳಂದೂರಿನ ರಾಜಕುಮಾರಿ | ೧೭ನೆಯ ಶತಮಾನ | ಪತಿಯ ಮರಣಾನಂತರ ಮಗನ ಪರವಾಗಿ ಆಳ್ವಿಕೆ | ಮೈಸೂರು ಸಂಸ್ಥಾನ | ಚಿಕ್ಕದೇವರಾಜನ ಕಾವ್ಯಗಳಲ್ಲಿ ಹಾಗೂ ಶಾಸನಗಳಲ್ಲಿ ಉಲ್ಲೇಖಿತಳಾಗಿದ್ದಾಳೆ. | ಪತಿಯ ಮರಣಾನಂತರ ಸಿಂಹಾಸನ ಇತರರ ಪಾಲಾಗುವುದನ್ನು ತಪ್ಪಿಸಲು ಕಿವುಡ ಮತ್ತು ಮೂಕನಾದ ಮಗ ಎರಡನೆಯ ಕಂಠೀರವ ನರಸರಾಜ ಒಡೆಯರ್‌ನನ್ನು ಪಟ್ಟಕ್ಕೆ ತಂದಳು | ಸಂಚಿಯ ಹೊನ್ನಮ್ಮನ ಕಾವ್ಯ ರಚನೆಗೆ ಮೂಲ ಪ್ರೇರಣೆಯಾದವಳು, |
| **ಲಕ್ಷ್ಮಿ ಅಮ್ಮಣ್ಣಿ/ ಲಕ್ಷ್ಮಮ್ಮಣ್ಣಿ** ಸು.ಕ್ರಿ.ಶ.೧೭೪೧– | ಮೈಸೂರು ಎರಡನೆಯ ಕೃಷ್ಣರಾಜ ಒಡೆಯರ್‌ನ ಪಟ್ಟಮಹಿಷಿ, ಬೆಟ್ಟದಕೋಟೆಯ ಕತ್ತಿಗೋಪಾಲರಾಜ ಅರಸ್‌ನ ಮಗಳು | ೧೮ನೆಯ ಶತಮಾನ | ಪತಿಯೊಂದಿಗೆ ಆಡಳಿತದಲ್ಲಿ ಭಾಗವಹಿಸುತ್ತಿದ್ದಳು | ಮೈಸೂರು ಸಂಸ್ಥಾನ | | ಪತಿ ಹಾಗೂ ಇಬ್ಬರು ಮಕ್ಕಳ ಮರಣಾನಂತರ ಖಾಸಾ ಚಾಮರಾಜ ಒಡೆಯರ್ ನನ್ನು ದತ್ತು ಪಡೆಯುತ್ತಾಳೆ. ಟಿಪ್ಪುವಿನ ಪ್ರಾಬಲ್ಯದಿಂದ ಮೈಸೂರು ಸಿಂಹಾಸನವನ್ನು ಮರಳಿ ಪಡೆವಲ್ಲಿ ಯಶಸ್ವಿಯಾಗುತ್ತಾಳೆ. ಟಿಪ್ಪುವಿನಿಂದ ಗೃಹಬಂಧನಕ್ಕೆ ಒಳಗಾಗಿದ್ದರೂ ಮರಾಠ, ನಿಜಾಮ, ಬ್ರಿಟಿಶ್‌ರನ್ನು ಸಂಪರ್ಕಿಸಿ ಚಾಣಕ್ಷತನ ತೋರಿದವಳು | |
| **ಕೆಂಪ ನಂಜಮ್ಮಣ್ಣಿ** ವಾಣಿವಿಲಾಸ ಸನ್ನಿಧಾನ | ಚಾಮರಾಜೇಂದ್ರ ಒಡೆಯರ್‌ನ ಮಹಿಷಿ, ಕಳಲೆ ಅರಸು ಮನೆತನದ ಮಗಳು. ನಾಲ್ವಡಿ ಕೃಷ್ಣರಾಜ ಒಡೆಯರ್‌ನ ತಾಯಿ | ೧೯ನೆಯ ಶತಮಾನ | ಪತಿಯೊಡನೆ ಆಡಳಿತದಲ್ಲಿ ಭಾಗಿಯಾಗಿದ್ದು, ಪತಿಯ ಅಕಾಲಿಕ ಮರಣದ ನಂತರ ೧೦ವರ್ಷದ ಮಗನ ಪರವಾಗಿ ಆಳ್ವಿಕೆ ನಡೆಸಿದವಳು | ಮೈಸೂರು ಸಂಸ್ಥಾನ | | ಗಣಿಗಾರಿಕೆಗೆ ಆದ್ಯತೆ, ಕೃಷಿ ಇಲಾಖೆ ಸ್ಥಾಪನೆ, ಶಿವನಸಮುದ್ರದಲ್ಲಿ ಜಲವಿದ್ಯುತ್ ಆಗರ ಸ್ಥಾಪನೆ, ಭಾರತದಲ್ಲಿಯೇ ಮೊಟ್ಟಮೊದಲು ನೀರನ್ನು ಬಳಸಿ ವಿದ್ಯುತ್ ಉತ್ಪಾದಿಸುವ ಯಂತ್ರಾಗಾರ ಸ್ಥಾಪನೆ, ಚಿತ್ರದುರ್ಗದಲ್ಲಿ 'ವಾಣಿವಿಲಾಸ–ಸಾಗರ' ಎಂಬ ಹೆಸರಿನ ಅಣೆಕಟ್ಟಿನ ನಿರ್ಮಾಣ, ಕೆರೆ–ಸೇತುವೆಗಳ ನಿರ್ಮಾಣ, ೧೮೯೫ರಲ್ಲಿ ಕಾಣಿಸಿಕೊಂಡ ಭೀಕರ ಪ್ಲೇಗ್–ಕ್ಷಯರೋಗ ನಿರ್ಮೂಲನಕ್ಕೆಂದು ಹೊಸಬಡಾವಣೆ ಯೋಜನೆಗಳು, ಶಿಕ್ಷಣಕ್ಕೆ ಪ್ರೋತ್ಸಾಹ, ವಿದ್ಯಾರ್ಥಿನಿಯರಿಗೆ ಪ್ರತ್ಯೇಕ ಶಾಲಾ–ಕಾಲೇಜು, ಅಂಬಾವಿಲಾಸ ಅರಮನೆಯ ನಿರ್ಮಾಣ | |

ಈ ಮೇಲಿನ ಪಟ್ಟಿಕೆಯಲ್ಲಿ ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ಅರಸಿಯರೆಲ್ಲರ ಮಾಹಿತಿಗಳನ್ನು ಸಾಧ್ಯವಾಗುವ ಮಟ್ಟಿಗೆ ಒದಗಿಸುವ ಪ್ರಯತ್ನ ನಡೆಸಲಾಗಿದೆ. ಶಾಸನಗಳು ಹಾಗೂ ಕಾವ್ಯಗಳು ದೊರಕಿಸಿಕೊಡುವ ಮಾಹಿತಿಗಳನ್ನು ಅವಲಂಬಿಸಿ ಈ ಮಾಹಿತಿಗಳನ್ನು ಕ್ರೋಢೀಕರಿಸಲಾಗಿದೆ. ಇಲ್ಲಿ ಅರಸಿಯರೇ ಹೊರಡಿಸಿರುವ ಶಾಸನಗಳನ್ನು ಪಟ್ಟಿಮಾಡುವ ಪ್ರಯತ್ನ ಮಾಡಲಾಗಿದೆಯಾದರೂ, ಆಳ್ವಿಕೆ ನಡೆಸಿದ ಎಲ್ಲ ಅರಸಿಯರ ಶಾಸನಗಳೂ ದೊರಕುವುದಿಲ್ಲ. ಕೆಲವು ಅರಸಿಯರು ಆಳ್ವಿಕೆ ನಡೆಸಿದ ಕುರಿತಾಗಿ ನೇರವಾಗಿ ಉಲ್ಲೇಖಿಸುವ ಶಾಸನಗಳು ಲಭಿಸಿಲ್ಲ ಆದರೆ ಅರಸಿಯರ ಅಧಿಕಾರಿಗಳು, ಸಾಮಂತರು ಎಂದು ಕರೆದುಕೊಳ್ಳುವವರು ಹೊರಡಿಸಿರುವ ಶಾಸನಗಳಿಂದ ಆ ರಾಣಿಯರು ಆಳ್ವಿಕೆ ನಡೆಸುತ್ತಿದ್ದರೆನ್ನುವುದು ತಿಳಿದು ಬರುತ್ತದೆ. ಆದರೆ ಅವರು ಆಳ್ವಿಕೆ ನಡೆಸುತ್ತಿದ್ದ ಪ್ರದೇಶ ಮೊದಲಾದ ವಿವರಗಳು ನಿಖರವಾಗಿ ತಿಳಿದು ಬರುವುದಿಲ್ಲ ಉದಾಹರಣೆಗೆ ಮಾಚೆಯನಾಯಕ ತನ್ನನ್ನು ಮಾಳಲದೇವಿಯ ಪಾದಪದ್ಮೋಪಜೀವಿ ಎಂದು ಕರೆದುಕೊಂಡಿದ್ದಾನೆ.[೧] ಮಾಳಲದೇವಿಯು ಸೋವಿದೇವನ ಅರಸಿ ಎಂಬ ಉಲ್ಲೇಖ ಮಾತ್ರ ದೊರಕುತ್ತದೆ, ಇವಳ ಆಳ್ವಿಕೆಯ ಇತರ ವಿವರಗಳು ದೊರಕುವುದಿಲ್ಲ. ಇದೇ ರೀತಿ ವಿಕ್ರಮಾದಿತ್ಯನ ಅರಸಿ ಧಾರಲಾದೇವಿಯ ಅಧಿಕಾರಿಗಳ ದಾನಶಾಸನದಲ್ಲಿ ಈಕೆಯ ಉಲ್ಲೇಖ ದೊರೆತಿದೆ. ಇಂತಹ ಅಪೂರ್ಣಮಾಹಿತಿಗಳನ್ನೂ ಇಲ್ಲಿ ದಾಖಲುಮಾಡಿದೆ.

ರಾಜ–ರಾಣಿಯರು ಜೊತೆ ಜೊತೆಯಾಗಿ ಆಡಳಿತ ನಡೆಸಿದ ಉದಾಹರಣೆ ಪಾಶ್ಚಿಮಾತ್ಯ ರಾಷ್ಟ್ರದಲ್ಲಿ ಸಿಗುವುದು ಹದಿನೇಳನೆಯ ಶತಮಾನದಿಂದೀಚೆಗೆ. ಹದಿನೇಳನೆಯ ಶತಮಾನದಲ್ಲಿ ಇಂಗ್ಲೆಂಡಿನ ರಾಣಿ ಮೇರಿ ಹಾಗೂ ವಿಲಿಯಮ್‌ರು ಸಮಾನ ಅಧಿಕಾರ ಹೊಂದಿ ಜಂಟಿಯಾಗಿ ಆಳ್ವಿಕೆ ನಡೆಸಿದ ಸಂದರ್ಭವೇ ಅಲ್ಲಿನ ಮೊತ್ತಮೊದಲ ದಾಖಲೆಯಾಗಿದೆ.[೨] ಆದರೆ ಅದಕ್ಕೂ ಸುಮಾರು ಸಾವಿರ ವರ್ಷಗಳ ಹಿಂದೆಯೇ ಇಂತಹ ವ್ಯವಸ್ಥೆ ಕರ್ನಾಟಕದ ಇತಿಹಾಸದಲ್ಲಿ ಕಂಡುಬರುತ್ತದೆ. ಕರ್ನಾಟಕದಲ್ಲಿ ಶಾತವಾಹನರ ಕಾಲದಿಂದಲೇ ಅರಸಿಯರ ಉಲ್ಲೇಖ ಶಾಸನಗಳಲ್ಲಿ ದೊರಕುತ್ತಿವೆ. ಕರ್ನಾಟಕವನ್ನಾಳಿದ ಮೊದಲ ಅರಸು ಮನೆತನ ಎಂದು ಗುರುತಿಸುವ ಕದಂಬವಂಶದ ಅರಸಿಯರು ದಾನಶಾಸನಗಳಲ್ಲಿ ಉಕ್ತರಾಗಿದ್ದಾರೆ. ಏಳನೆಯ ಶತಮಾನದಲ್ಲಿಯೇ ವಿಜಯಭಟ್ಟಾರಿಕೆ ಪತಿಯೊಡನೆ ಹಾಗು ಪತಿಯ ಮರಣಾನಂತರ ಆತನ ಸಹೋದರನ ಆಳ್ವಿಕೆಯಲ್ಲಿ ತನ್ನದೇ ಆದ ಪ್ರದೇಶಗಳಲ್ಲಿ ಸ್ವತಂತ್ರವಾಗಿ ಆಡಳಿತ ನಡೆಸುತ್ತಿದ್ದಳು. ಇವಳು ಹೊರಡಿಸಿರುವ ಶಾಸನಗಳೂ ಲಭಿಸಿವೆ.

ಈ ಮೇಲಿನ ಪಟ್ಟಿಕೆಯಲ್ಲಿ ಸ್ವತಂತ್ರವಾಗಿ, ಜಂಟಿಯಾಗಿ ಆಳ್ವಿಕೆ ನಡೆಸಿದ ನೂರಾರು ಅರಸಿಯರ ಮಾಹಿತಿ ಅವರ ಕೊಡುಗೆಗಳೊಂದಿಗೆ ದಾಖಲಾಗಿದೆ. ಆಳ್ವಿಕೆ ನಡೆಸದೆ ಕೊಡುಗೆಗಳನ್ನು ನೀಡಿದ ಅರಸಿಯರು ಅಸಂಖ್ಯಾತವಾಗಿ ಕಂಡುಬರುತ್ತಾರೆ. ಅವರೆಲ್ಲರ ಕೊಡುಗೆಗಳನ್ನೂ ಸಮಗ್ರವಾಗಿ ದಾಖಲಿಸುವುದು ಕಷ್ಟಸಾಧ್ಯವಾಗುವುದರಿಂದ ಕೆಲವು ವಿಭಿನ್ನ ಕಾಲದ ಅರಸಿಯರನ್ನು ಮಾತ್ರ ಈ ಮುಂದಿನ ಪಟ್ಟಿಕೆಯಲ್ಲಿ ಹೆಸರಿಸುವ ಪ್ರಯತ್ನ ನಡೆಸಲಾಗಿದೆ.

## ಆಳ್ವಿಕೆ ನಡೆಸದ ಅರಸಿಯರು

| ಅರಸಿ | ರಾಜಮನೆತನ | ಕಾಲ | ಶಾಸನ | ದಾನ | ಸಾಂಸ್ಕೃತಿಕ ಕೊಡುಗೆ |
|---|---|---|---|---|---|
| **ಶಿವಸ್ಕಂದ ನಾಗಶ್ರೀ** | ಚುಟುಕುಲಾನಂದ ಹಾರತೀಪುತ್ರ ವಿಣ್ಹುಕಡ ಸಾತಕರ್ಣಿಯ ಮಗಳು | | ಲಿಸ್ಟ ಆಫ್ ಬ್ರಾಹ್ಮಿ ಇನ್ಸ್ಕ್ರಿಪ್ಶನ್ಸ ಸಂ.೧೧೯೫ | ಬನವಾಸಿಯಲ್ಲಿ ನಾಗಪ್ರತಿಮೆಯನ್ನು ಮಾಡಿಸಿ ಒಂದು ಕೊಳ ಮತ್ತು ವಿಹಾರವನ್ನು ಮಾಡಿಸಿದ್ದಾಳೆ | |
| **ಪ್ರಭಾವತಿ** | ಕದಂಬ ಮೃಗೇಶವರ್ಮನ ರಾಣಿ | | M.A.R.1911 p.35 | ಪತಿಯ ಮರಣಾನಂತರ ಮಗ ರವಿವರ್ಮನ ಆಳ್ವಿಕೆಯಲ್ಲಿ ಪ್ರಣವೇಶ್ವರ ದೇವಾಲಯದಲ್ಲಿ ದಾನನೀಡಿ ಶಾಸನಹಾಕಿಸಿದ್ದಾಳೆ | |
| **ಕಾದಂಬ ಮಹಾದೇವಿ** | ಬಾದಾಮಿ ಚಳುಕ್ಯ ಮಂಗಲೇಶನ ರಾಣಿ ಆಳುಪ ರಾಜಕುಮಾರಿ | ೬ನೆಯ ಶತಮಾನ | ಎ.ಪಿ.ಜಿ.ಎ.ಎಸ್,–೬ ಪು.೧೪–೧೫ | ತನ್ನ ತಂದೆಯ "ಅಕ್ಷಯಫಲ" (ಮೋಕ್ಷ)ಕ್ಕಾಗಿ ದಾನ ಮಾಡಿಸಿದ್ದಾಳೆ. | |
| **ಅಂಬೇರಾ** | ಇಮ್ಮಡಿ ಪೊಲೆಕೇಶಿಯ ಮಗಳು | ೬ನೆಯ ಶತಮಾನ | I.A.ಸಂ.VIII ಪು. 89-96 & IX P 304 | ದಾನ | |
| **ಗಂಗಮಹಾದೇವಿ** | ಬಾದಾಮಿ ಚಳುಕ್ಯ ವಿಕ್ರಮಾದಿತ್ಯನ ರಾಣಿ, ಗಂಗ ರಾಜಕುಮಾರಿ | ೭ನೆಯ ಶತಮಾನ | E.I. ಸಂ.x ನಂ.೨೨ ಗದ್ವಾಲತಾಮ್ರಪಟ (ಕ್ರಿ.ಶ.೬೭೪) | ಪಲ್ಲವರ ಮೇಲೆ ಜಯ ಸಾಧಿಸಿದ ನಂತರ ಯುದ್ಧರಂಗದಲ್ಲಿ ದಾನ | |
| **ವಿನಯವತಿ** | ಬಾದಾಮಿ ಚಳುಕ್ಯ ವಿನಯಾದಿತ್ಯನ ರಾಣಿ | ೭ ನೆಯ ಶತಮಾನ | ೬೯೮–೯೯ರಲ್ಲಿ | ತ್ರಿಕೂಟಾಚಲ* ವೆಂದೇ ಪ್ರಸಿದ್ಧಿ ಪಡೆದ ಜಂಬುಲಿಂಗ ದೇವಾಲ ನಿರ್ಮಾಣ | * ಒಂದೇ ಅಧಿಷ್ಠಾನದಲ್ಲಿ ಮೂರು ಗರ್ಭಗೃಹಗಳನ್ನು ಪ್ರತಿಷ್ಠಾಪಿಸುವ ತ್ರಿಕೂಟಾಚಲ ದೇವಾಲಯಗಳಲ್ಲಿ ಇದೇ ಮೊದಲಿನದೆಂದು ವಾಸ್ತುಶಿಲ್ಪಿಗಳ ಅಭಿಪ್ರಾಯ |
| **ಕುಂಕುಮ ಮಹಾದೇವಿ** | ಆಳುಪ ರಾಣಿ ಚಿತ್ರವಾಹನನ ಅರಸಿ ಬಾದಾಮಿ ಚಳುಕ್ಯ ರಾಜಕುಮಾರಿ | ೬–೭ನೆಯ ಶತಮಾನ | ಶಿಗ್ಗಾಂವ್ ತಾಮ್ರಶಾಸನ E.I.ಸಂ.XXXII. p.317 ff | ಅಂದಿನ ಕಾಲದ ಪ್ರತಿಷ್ಠಿತ ಬಸದಿ ಎನಿಸಿದ ಆನೆಸಜ್ಜೆ ಬಸದಿಯ ನಿರ್ಮಾಣ | |
| **ತ್ರೈಲೋಕ್ಯ ಮಹಾದೇವಿ** | ಬಾದಾಮಿ ಚಳುಕ್ಯ ವಿಜಯಾದಿತ್ಯನ ರಾಣಿ | ೮ ನೆಯ ಶತಮಾನ | E.I. ಸಂ.III ನಂ.೧ ಪಟ್ಟದಕಲ್ಲು (ತಾ) ಬದಾಮಿ (ಕ್ರಿ.ಶ.೭೫೪) | ಪಟ್ಟದಕಲ್ಲಿನಲ್ಲಿ ತ್ರೈಲೋಕೇಶ್ವರ ದೇವಾಲಯ ನಿರ್ಮಾಣ ಹಾಗು ನಿರ್ವಹಣೆಗಾಗಿ ದಾನ | |
| **ಬೃಹದ್ದೇವಿ (ಜ್ಯೇಷ್ಠಾದೇವಿ)** | ಗಂಗ ಅವನೀತನ ರಾಣಿ, ಪುನ್ನಾಟ ರಾಜಕುಮಾರಿ | | E.C. vii ಶೃಂಗೇರಿ, E.C. ಸಂ IX ದೊಡ್ಡಬಳ್ಳಾಪುರ 67 | ಭೂ ದಾನ | |

| | | | | | |
|---|---|---|---|---|---|
| **ನಾಗಿಯಕ್ಕ** | ಬಾಪ್ಪುರ ಕುಲ | ೧೦ ನೆಯ ಶತಮಾನ | ಕ್ರಿ.ಶ.೧೯೬೮ರ ಬಳ್ಳಿಗಾವೆಯ ಶಾಸನ ೧೦ನೆಯ ಶತಮಾನದಲ್ಲಿನ ಬೌದ್ಧ ಮತದ ಕುರಿತಾಗಿ ತಿಳಿಸುವ ಇದೊಂದು ಮಹತ್ವದ ಶಾಸನವಾಗಿದೆ | ಬಳ್ಳಿಗಾವೆಯಲ್ಲಿ ತಾರಾಭಗವತಿಯ ಮಂದಿರವನ್ನು ಸ್ಥಾಪಿಸಿದಳು. | ಬೌದ್ಧರ ಅಧಿದೇವತೆಯ ಈ ವಿಗ್ರಹವು ಕಾನಿಷ್ಕನ ಕಾಲದ ಸಮ್ಮಿಶ್ರಣ ಕಲೆಯನ್ನು ಒಳಗೊಂಡು ಅಪ್ರತಿಮ ಕಲಾಕೃತಿ ಎನಿಸಿದೆ |
| **ಮಾಳಲದೇವಿ** | ಹಾನುಗಲ್ಲು ಕದಂಬ ಕೀರ್ತಿವರ್ಮನ ಪಟ್ಟಮಹಾದೇವಿ | ೧೦೭೫ | E.C. ಸಂ VIII ಸೊರಬ ೨೬೨ ಮಲ್ಲಾಪುರದ ಶಾಸನ | ಕುಪ್ಪಟೂರಿನ ಶ್ರೀಪಾರ್ಶ್ವನಾಥ ಜಿನಾಲಯ ನಿರ್ಮಾಣ | ಕವಿ ಬಮ್ಮರಹರಿಯಣ್ಣ ಇವಳ ಆಶ್ರಯದಲ್ಲಿ ಶಾಸನಪದ್ಯ ರಚಿಸಿದ್ದಾನೆ |
| **ಕಮಲಾದೇವಿ** | ಹಾನುಗಲ್ಲು ಕದಂಬ ಶಿವಚಿತ್ತ ಪೆರ್ಮಾಡಿಯ ಪಿರಿಯರಸಿ | ೧೧೭೪ | ಜೆ.ಬಿ.ಆರ್.ಎಸ್ ೯ | ಕಿತ್ತೂರಿನ ಸಮೀಪದ ದೇಗಾಂವಿಯ ಕಮಲ ನಾರಾಯಣ ದೇವಾಲಯ ಮತ್ತು ಅಲ್ಲಿ ಅಗ್ರಹಾರ ನಿರ್ಮಾಣ | ಕವಿ ತಿಪ್ಪಣ್ಣೋಜ ಇವಳ ಆಶ್ರಯದಲ್ಲಿ ಶಾಸನಪದ್ಯ ರಚಿಸಿದ್ದಾನೆ |
| **ನೀಜಿಯಬ್ಬರಸಿ / ನೀಜಿಕಬ್ಬರಸಿ** | ಸವದತ್ತಿ ರಟ್ಟರು ಪೃಥ್ವಿರಾಮ/ಪಿಟ್ಟಿಗನ ಪಿರಿಯರಸಿ | ೧೦ ನೆಯ ಶತಮಾನ | | ಸುಗಂಧವರ್ತಿಯ (ಸೌದತ್ತಿ) ಬಸದಿಗೆ ಭೂದಾನ ನೀಡಿದ್ದಾಳೆ | |
| **ಲಕ್ಷ್ಮಮ್ಮ ಗಾವುಂಡಿ** | ಮಾಚಿಗಾವುಣ್ಡನ ಮಗಳು | ೧೧ ನೆಯ ಶತಮಾನ | E.C ಸಂ IX ಹೊಸಕೋಟೆ ೧೧ ಬೆಂಗಳೂರು ಜಿಲ್ಲೆ, ಕ್ರಿ.ಶ.೧೦೪೧ | ಬೆಂಗಳೂರು ಜಿಲ್ಲೆ ಹೊಸಕೋಟೆ ತಾಲೂಕಿನ ಸರಕುನೂರು(ಸರಕೂರು) | ತುರುಗಾಳಗದಲ್ಲಿ ಹೋರಾಡಿದವಳು |
| **ಪರಿಯಲದೇವಿ** ಕ್ರಿ.ಶ.೧೦೬೩ | ರಕ್ಕಸಪೊಯ್ಸಳ ವಿನಯಾದಿತ್ಯನ ರಾಣಿ | ೧೧ನೆಯ ಶತಮಾನ | E.C. XI (ಪರಿ) ಮೂಡಿಗೆರೆ – ೨೨೫ | ಮುಳ್ಳೂರ ಗುಣಸೇನಪಂಡಿತರಿಗೆ ಸೊಸೆವೂರಿನ ಬಸದಿ ಸ್ಥಾನವನ್ನು ಒಪ್ಪಿಸಿದ್ದಾಳೆ | |
| **ಚಂದಲದೇವಿ** | ಹೊಯ್ಸಳ ವಿಷ್ಣುವರ್ಧನನ ಕಿರಿಯರಸಿ. ಪೃಥ್ವಿಕೊಂಗಾಳ್ವನ ಮಗಳು | ೧೧ನೆಯ ಶತಮಾನ | E.C. ಕೆ.ಆರ್.ಪೇಟೆ ೨೧ | ತನ್ನ ತಂದೆಯಿಂದ ತನಗೆ ಬಳುವಳಿಯಾಗಿ ಬಂದಿದ್ದ ಮಂದಗೆರೆಯ ಕಾವನಹಳ್ಳಿಯನ್ನು ದಾನಕೊಟ್ಟಿದ್ದಾಳೆ | |
| **ಸೋಮಲದೇವಿ** | ಕ.ಚಾಲುಕ್ಯ ಮೊದಲನೆಯ ಜಯಸಿಂಹನ ರಾಣಿ | ೧೧ನೆಯ ಶತಮಾನ | ಕವಿಶಾಸಂ–೭ ರಾಯಚೂರು ಮಾನ್ವಿ ೯೧ ; ಕವಿಶಾಸಂ–೭ ರಾಯಚೂರು ಮಾನ್ವಿ ೧೦೦ ಕ್ರಿ.ಶ.೧೦೩೫) | ಏತಗಿರಿ (ಯಾದಗಿರಿ), ಪೊಟ್ಟಲಗೆರೆ ನೆಲೆವೀಡುಗಳಲ್ಲಿದ್ದಾಗ ಬಂಕೇಶ್ವರ ದೇವರಿಗೆ ಗಾಣ, ತೋಟ ದಾನ | |
| **ಸೋಮಲದೇವಿ** | ಕ.ಚಾಲುಕ್ಯ ಮೊದಲನೆಯ ಸೋಮೇಶ್ವರನ ರಾಣಿ | ೧೧ನೆಯ ಶತಮಾನ | ಕವಿಶಾಸಂ–೭ ರಾಯಚೂರು ಮಾನ್ವಿ ೮೧ (ಕ್ರಿ.ಶ.೧೦೨೮) ಕವಿಶಾಸಂ–೭ ರಾಯಚೂರು ಮಾನ್ವಿ ೮೭ (ಕ್ರಿ.ಶ.೧೦೨೮) | ಬಲ್ಲಟಗಿಯ ದೇವಾಲಯಕ್ಕೆ ಹಾಗೂ ಬಸದಿಗೆ ಹೊಲ, ಮನೆ, ಗಾಣ ದಾನ | ಶಾಸನಗಳಲ್ಲಿ ಇವಳ ಕೈಕೆಳಗಿನ ಅಧಿಕಾರಿಗಳ ಉಲ್ಲೇಖವಿದ್ದರೂ, ಇವಳು ಆಳ್ವಿಕೆ ನಡೆಸುತ್ತಿದ್ದುದಕ್ಕೆ ಸ್ಪಷ್ಟ ಆಧಾರ ದೊರಕುವುದಿಲ್ಲ. |
| **ಬಿಜ್ಜಳದೇವಿ** | ಕ.ಚಾಲುಕ್ಯ ಮೊದಲನೆಯ ಸೋಮೇಶ್ವರನ ಅರಸಿ | ೧೧ನೆಯ ಶತಮಾನ | ಕವಿಶಾಸಂ–೭ ರಾಯಚೂರು ಮಾನ್ವಿ ೧೬ (ಕ್ರಿ.ಶ.೧೦೩೩) | ಅಗ್ರಹಾರ ತಡಕಲ್ಲಿನಲ್ಲಿ ದೇವಾಲಯಕ್ಕೆ ಭೂದಾನ | |

| | | | | | |
|---|---|---|---|---|---|
| **ಸೋಮಲದೇವಿ** 'ಸಹಜವೆಡಂಗಿ' | ಕ.ಚಾಲುಕ್ಯ ಮೊದಲನೆಯ ಸೋಮೇಶ್ವರನ ಮಗಳು | ೧೧ನೆಯ ಶತಮಾನ | ಕವಿಶಾಸಂ.೭ ರಾಜಚೂರು, ಲಿಂಗಸಗೂರು ೪೫ (ಕ್ರಿ.ಶ.೧೦೨೭) | ಬಸದಿಗೆ ಭೂದಾನ ಹಾಗೂ ಗಾಣ, ಹೂತೋಟ ದಾನ ನೀಡಿದ್ದಾಳೆ | |
| **ಕಂಚಲ ಮಹಾದೇವಿ** ಶೃಂಗಾರ ವಿದ್ಯಾಧರಿ, ಸಕಳಕಳಾಧರಿ | ಕ.ಚಾಲುಕ್ಯ ಎರಡನೆಯ ಸೋಮೇಶ್ವರನ ಅರಸಿ | ೧೧ನೆಯ ಶತಮಾನ | SII ಸಂ ix-i 134. ನಂದಿಕೋಟಕೂರು (ತಾ) ಕರ್ನೂಲ (ಕ್ರಿ.ಶ.೧೦೬೯) | ಶ್ರೀಶೈಲದಲ್ಲಿ ದಾನ | |
| **ಪಂಪಾದೇವಿ** | ಕ.ಚಾಲುಕ್ಯ ಎರಡನೆಯ ಸೋಮೇಶ್ವರನ ಅರಸಿ | ೧೧ನೆಯ ಶತಮಾನ | ಕವಿಶಾಸಂ–೭ ರಾಯಚೂರು ಮಾನ್ವಿ ೫೫ (ಕ್ರಿ.ಶ.೧೦೬೯) | ಕಪ್ಪಕಲ್ಲ ಭೋಗೇಶ್ವರ ದೇವರಿಗೆ ಭೂದಾನ, ಎಣ್ಣೆಯ ಗಾಣಗಳನ್ನು ದಾನವಾಗಿ ನೀಡಿದ್ದಾಳೆ | |
| **ಪದ್ಮಲದೇವಿ** | ಕ.ಚಾಲುಕ್ಯ ಜಯಸಿಂಹನ ಅರಸಿ | ೧೧ನೆಯ ಶತಮಾನ | | ಕರಡಿಕಲ್ಲು ೩೦೦೦ರ ಬಳಿ ಗೋವಂತಿಗೆಯ ಸ್ವಯಂಭು ಕಲಿದೇವ ಸ್ವಾಮಿಗೆ ದಾನ | |
| **ಸುಗ್ಗಲದೇವಿ** ಕಲಿಕಾಲಸರಸ್ವತಿ, ಆಶ್ರಿತಜನ ಕಲ್ಪಲತೆ, ರೂಪವಿದ್ಯಾಧರಿ | ಕ.ಚಾಲುಕ್ಯ ಜಯಸಿಂಹನ ಅರಸಿ | ೧೧ನೆಯ ಶತಮಾನ | SII ಸಂ xx ೨೩ ದೇವೂರು (ತಾ) ಸಿಂದಗಿ (ಕ್ರಿ.ಶ.೧೦೨೯) | ದೇವಾಪುರದ ಮಾರಸಿಂಗೇಶ್ವರ ದೇವರ ಅಂಗಭೋಗಕ್ಕೆ, ತಪೋಧನರಿಗೆ, ಪಂಡಿತರಿಗೆ, ವಿದ್ಯಾರ್ಥಿಗಳಿಗೆ ದತ್ತಿ | |
| **ಕಂಚಿಕಬ್ಬೆ** | ಧನಗರ ಕರಿಯ ಕೇತಿಮಯ್ಯನ ಅರಸಿ | ೧೦ ನೆಯ ಶತಮಾನ | ಕ್ರಿ.ಶ.೯೮೦ರ ಶಾಸನ E I . XVI p.3 | ಸವದತ್ತಿ ತಾಲ್ಲೂಕಿನ ಸೋಗಲದ ಸುವರ್ಣಾಕ್ಷಿ ದೇವರಿಗೆ ದಾನ | ಕವಿ ಕಮಲಾದಿತ್ಯ ಇವಳ ಆಶ್ರಯದಲ್ಲಿ ಶಾಸನಪದ್ಯ ರಚಿಸಿದ್ದಾನೆ |
| **ಪೊಲ್ಲಿಕಬ್ಬೆ** | ಸಾಮಂತ ಜೋಗಭೂಪನ ಅರಸಿ | | ಕೊರ್ಗಟನೂರ ಕರ್ನಾಟಕ ವಿವಿ 'ಕರ್ನಾಟಕ ಭಾರತಿ' ನವೆಂಬರ್ ೧೯೭೦. ಶಾಸನ.ಸಂ ಆರ್.ಎನ್.ಗುರವ | ತ್ರೈಪುರುಷ ದೇವರ ಪೂಜೆಗೆ, ಅಲ್ಲಿನ ಶಾಲೆಯ ಉಪಾಧ್ಯಾಯರಿಗೆ ಹಾಗೂ ವಿದ್ಯಾರ್ಥಿಗಳ ಊಟ–ಉಡಿಗೆಗಳಿಗಾಗಿ ದತ್ತಿ | |
| **ಜಕ್ಕಿಯಬ್ಬೆ** | ಸಾಮಂತ ಕೇತೆಯ ನಾಯಕನ ಮಡದಿ, ಹೊಯ್ಸಳ ವಿಷ್ಣುವರ್ಧನನ ಅರಸಿ ಚಿಕ್ಕಶಾಂತಲೆಯ ತಾಯಿ | ೧೧ನೆಯ ಶತಮಾನ | E.C. v ಹಾಸನ ೯೯ ಯೆಲಗುಂದ (ಕ್ರಿ.ಶ.೧೦೩೭) | ಮಗಳು ಚಿಕ್ಕಶಾಂತಲೆ, ಮೊಮ್ಮಗಳು ಬೊಪ್ಪಲೆಯರ ಪರೋಕ್ಷವಿನಯವಾಗಿ ಎಲೆಗುಂದದಲ್ಲಿ ಶಾಂತಲೇಶ್ವರ, ಬೊಪ್ಪಲೇಶ್ವರ ದೇವಾಲಯ, ತಟಾಕಗಳ ನಿರ್ಮಾಣ | |
| **ಸುಗ್ಗಿಯಬ್ಬರಸಿ** | ಗಂಗ ಮಾರಸಿಂಗನ ಪತ್ನಿ | ೧೦ ನೆಯ ಶತಮಾನ | E.C. VIII ಸಂ.೨೩೩ ವುದ್ರಿ ಗ್ರಾಮ, ಆನವಟ್ಟಿ | ಉದ್ರಿಯಲ್ಲಿ ಬಸದಿ ನಿರ್ಮಾಣ | |
| **ಮಾಯಾದೇವಿ** | ಕಲ್ಯಾಣಿ ಚಾಲುಕ್ಯರ ಸಾಮಂತ ಬಾಚಯ್ಯನಾಯಕನ ಅರಸಿ | ಕ್ರಿ.ಶ.೧೧೪೧ರ ತಿಳಿಸುತ್ತದೆ. | ನೇಸರಗಿ ಶಾಸನ | ನೇಸರಗಿಯಲ್ಲಿ ಮಾಣಿಕೇಶ್ವರ ದೇವಾಲಯ ನಿರ್ಮಾಣ | |
| **ಅಳಿಯಾದೇವಿ** | ಸಾಂತರು ಅರಸು ಮನೆತನದ ಕಾಮನೃಪನ ಮಗಳು | | | ತನ್ನ ಸ್ತ್ರೀಧನ (ತವರುಮನೆ ಉಡುಗೊರೆ) ದಿಂದ ಸೇತುಪುರದಲ್ಲಿ ಜಿನಾಲಯ ನಿರ್ಮಾಣ | |

| | | | | | |
|---|---|---|---|---|---|
| **ಬಾಚಲದೇವಿ** | ನನ್ನಿ ಶಾನ್ತರ ಹಾಗೂ ಪಂಪಾದೇವಿಯ ಮಗಳು. ಗಂಗ ಮಾರಸಿಂಹನ ಅರಸಿ | ೧೧ನೆಯ ಶತಮಾನ | E.C. ಸಂ. VIII ನಂ.೪೭, ಹೊಂಬುಜ | ತಾಯಿಯೊಡನೆ ಹೊಂಬುಜದಲ್ಲಿ ತೋರಣ ಬಸದಿಯನ್ನು ಕಟ್ಟಿಸಿದ್ದಾಳೆ | |
| **ಪಂಪಾದೇವಿ** ಬಿರುದು: ನೂತನ ಅತ್ತಿಮಬ್ಬೆ | ವಿಕ್ರಮ ಶಾನ್ತರನ ಅಕ್ಕನಾದ | ೧೧ನೆಯ ಶತಮಾನ | | ಮಗಳು ಬಾಚಲದೇವಿಯೊಡನೆ ಪಂಚ ಬಸದಿಗೆ ಬಡಗಣ ಪಟ್ಟಸಾಲೆಯನ್ನು ಮಾಡಿಸಿ, ಕೆಲವು ದಾನ ನೀಡಿದ್ದಾಳೆ | |
| **ರಾಣಿ ರೇವಲದೇವಿ** | ನೊಳಂಬ ಪೆರ್ಮಾನಡಿದೇವನ ರಾಣಿ | ೧೦ ನೆಯ ಶತಮಾನ | | ಬಳ್ಳಾರಿಯ ದೇವರಿಗೆ ೬೦ ಮತ್ತರು ಭೂದಾನ | |
| **ಚಂದಿಯಬ್ಬೆ** | ಸಿಂಧವಾಡಿ ೧೦೦೦ ಪ್ರಾಂತದ ದೊರೆ ಕನ್ನರನ ಅರಸಿ | ೧೦ ನೆಯ ಶತಮಾನ | SII ಸಂ ix ಶಾ.ಸಂ ೬೨ ಹಾಳಹರವಿ ಶಾಸನ ಪುಟ.೮ | ನಂದಾವರದ ಬಸದಿಯನ್ನು ನಿರ್ಮಾಣ | |
| **ಕುಂದಾಚ್ಚಿ** | ಬಾಣವಂಶದ ಪೃಥ್ವಿನಿರ್ಗುಂದ ರಾಜನ ಮಡದಿ | ೮ ನೆಯ ಶತಮಾನ | E.C. ಸಂ.IV. ಪು.೨೩೩ | ಶ್ರೀ ಪುರದಲ್ಲಿ ಲೋಕತಿಲಕ ಎಂಬ ಜಿನಾಲಯ ನಿರ್ಮಾಣ | |
| **ಪೋಚಬ್ಬರಸಿ** | ಕೊಂಗಾಳ್ವ ಅರಸಿ ರಾಜಾಧಿರಾಜನ ತಾಯಿ | | E.C. ಕೊಡಗು ೬೮, ೬೯, ೭೨, ೭೦, ೭೫ | ಮುಳ್ಳೂರಿನಲ್ಲಿ ಬಸದಿ ನಿರ್ಮಾಣ | |
| **ಚಾಗಲದೇವಿ** | ಸಾಂತರು ಅರಸು ಮನಡತನದ ವೀರ ಶಾನ್ತರನ ರಾಣಿ | ೧೧ನೆಯ ಶತಮಾನ | E.C. ಸಂ VIII. ನಗರ. ೪೭ & ೪೮ ಕ್ರಿ.ಶ.೧೦೬೨ | ಬಳ್ಳಿಗಾವಿಯಲ್ಲಿ ಚಾಗಲೇಶ್ವರ ದೇವಾಲಯ ನಿರ್ಮಾಣ ಹಾಗೂ ದಾನ. ನೊಕ್ಕಿಯಬ್ಬೆಯ ಬಸದಿಯ ಮುಂದೆ ಮಕರ ತೋರಣ ಮಾಡಿಸಿದ್ದಾಳೆ. | |
| **ವೀರಮಾಂಬೆ** | ಕೆಳದಿಯ ಹಿರಿಯ ವೆಂಕಟಪ್ಪ ನಾಯಕನ ಅರಸಿ | ೧೭ನೆಯ ಶತಮಾನ | ಕೆಳದಿಅರಸರ ಶಾಸನ ಸಂಪುಟ | ಭಟ್ ಪೇಟೆಯಲ್ಲಿ ಮಠದ ನಿರ್ಮಾಣ ಹಾಗೂ ನಿರ್ವಹಣೆಗಾಗಿ ದಾನ, ಕೊಲ್ಲೂರು ಮೂಕಾಂಬಿಕಾ ದೇವಾಲಯಕ್ಕೆ ಹಲವಾರು ದಾನ | |
| **ಲಕ್ಷ್ಮೀವಿಲಾಸ ದೇವಾಜಮ್ಮಣ್ಣಿ** | ಮುಮ್ಮಡಿ ಕೃಷ್ಣರಾಜ ಒಡೆಯರ ಪಟ್ಟಮಹಿಷಿ | ೧೯ನೆಯ ಶತಮಶನ | | ವರುಣ ಗ್ರಾಮದಲ್ಲಿ ಮಹದೇಶ್ವರ ಮತ್ತು ದೇವಾಂಬಾ ದೇವಿಯರ ದೇವಾಲಯ, ತಟಾಕಗಳ ನಿರ್ಮಾಣ | |
| **ಲಿಂಗಾಜಮ್ಮಣ್ಣಿ** | ಮುಮ್ಮಡಿ ಕೃಷ್ಣರಾಜ ಒಡೆಯರ ಪಟ್ಟಮಹಿಷಿ | | E.C. ಸಂ. IV ಮೈಸೂರು, ವರುಣಾ ಶಾ.ಸಂ.೧೬೬ | ಮಹಾಲಿಂಗೇಶ್ವರ ದೇವಾಲಯ, ಲಿಂಗಾಂಬುದಿಯೆಂಬ ತಟಾಕದ ನಿರ್ಮಾಣ | |

**ಈ ಮೇಲಿನ ಪಟ್ಟಿಕೆಯಲ್ಲಿ ಹಾಗೂ ಸಂಪ್ರಬಂಧದ ಇತರ ಅಧ್ಯಾಯಗಳಲ್ಲಿ ಬಳಸಿರುವ ಸಂಕೇತಾಕ್ಷರಗಳು**

E.C. - ಎಪಿಗ್ರಾಫಿಯಾ ಕರ್ನಾಟಿಕ, ರೈಸ್ ಸಂಪುಟ

E.C (ಪರಿ) – ಎಪಿಗ್ರಾಫಿಯಾ ಕರ್ನಾಟಿಕ ಪರಿಷ್ಕೃತ ಸಂಪುಟ

SII - ಸೌತ್ ಇಂಡಿಯನ್ ಇನ್ಸ್ಕ್ರಿಪ್ಶನ್ಸ್

E I – ಎಪಿಗ್ರಾಫಿಯಾ ಇಂಡಿಯಾ

KI - ಕರ್ನಾಟಕ ಇನ್ಸ್ಕ್ರಿಪ್ಶನ್ಸ್

IA – ಇಂಡಿಯನ್ ಆಂಟಿಕ್ವಿರಿ

M.A.R – ಮೈಸೂರು ಆರ್ಕಿಯಾಜಿಕಲ್ ರಿಪೋರ್ಟ್

ಜೆ.ಬಿ.ಬಿ.ಆರ್.ಎ.ಎಸ್ – ಜರ್ನಲ್ಸ್ ಆಫ್ ಬಾಂಬೆ ರಾಯಲ್ ಏಷ್ಯಾಟಿಕ್ ಸೊಸೈಟಿ

ಕವಿಶಾಸಂ – ಕನ್ನಡ ವಿಶ್ವವಿದ್ಯಾನಿಲಯ ಶಾಸನ ಸಂಪುಟ

A.P.G.A.S – Andhra Pradesh Government Archaeological Series

ಈ ಮೇಲಿನ ಕೋಷ್ಟಕದಲ್ಲಿ ಕರ್ನಾಟಕದ ಅರಸಿಯರ ಕೆಲವೊಂದು ಅಗತ್ಯ ಮಾಹಿತಿಗಳನ್ನು ದಾಖಲಿಸಲಾಗಿದೆ. ಅದು ಅರಸಿಯರ ಹೆಸರು, ಮನೆತನ ಆಳ್ವಿಕೆ ನಡೆಸಿದ ಪ್ರದೇಶ, ಹೊರಡಿಸಿದ ಶಾಸನ, ಸಾಧನೆ ಅಥವಾ ನಡೆಸಿದ ಕಾರ್ಯದ ಕೆಲವು ಮುಖ್ಯಾಂಶಗಳನ್ನು ಮಾತ್ರ ಇಲ್ಲಿ ಗಮನಿಸಲಾಗಿದೆ. ಆದರೆ ಅರಸಿಯರ ವ್ಯಾಪಕವಾದ ಸಾಧನೆಯನ್ನು ಇಷ್ಟರಿಂದ ಗಮನಿಸಲು ಸಾಧ್ಯವಾಗದು. ಕೆಲವೊಂದು ಮುಖ್ಯ ವಿಚಾರಗಳನ್ನು ಗಮನಿಸುವ ಸಲುವಾಗಿ ಅರಸಿಯರು ಆಳ್ವಿಕೆಯ ಅವಕಾಶ ಪಡೆದ ಸಂದರ್ಭ, ಆಡಳಿತದ ವೈಖರಿ, ಹೊರಡಿಸಿದ ಶಾಸನ, ವ್ಯಾಪಾರ–ವಾಣಿಜ್ಯ, ತೆರಿಗೆ–ಕಂದಾಯ, ಯುದ್ಧ, ನಿರ್ಮಿಸಿದ ಕೆರೆ ಕಾಲುವೆ, ಅರಸಿಯರ ಸಾಂಸ್ಕೃತಿಕ ಕೊಡುಗೆಗಳು ಮೊದಲಾದ ವಿಚಾರಗಳನ್ನು ಗಮನಿಸುವ ಅಗತ್ಯವಿದೆ. ಆದರೆ, ಸಾಹಿತ್ಯಿಕ ಕೊಡುಗೆಯನ್ನು ಗಮನಿಸಲು ಕೈಗೊಂಡಿರುವ ಈ ಅಧ್ಯಯನದಲ್ಲಿ ಅರಸಿಯರ ಕುರಿತಾದ ಈ ಎಲ್ಲ ವಿಚಾರಗಳನ್ನೂ ಪ್ರತ್ಯೇಕವಾಗಿ ಅಥವಾ ಸೂಕ್ಷ್ಮವಾಗಿ ಗಮನಿಸುವುದು ಸಾಧ್ಯವಾಗದ ಕಾರಣ, ಎಲ್ಲ ಅರಸಿಯರ ಕೊಡುಗೆಯನ್ನು ಒಟ್ಟಾರೆಯಾಗಿ ಈ ವಿಭಾಗಗಳಲ್ಲಿ ಸ್ಥೂಲ ಚಿತ್ರಣವನ್ನು ಕೊಡುವ ಪ್ರಯತ್ನವನ್ನು ನಡೆಸಲಾಗಿದೆ.

**ರಾಣಿಯರು ಆಳ್ವಿಕೆಯ ಅವಕಾಶ ಪಡೆದ ಸಂದರ್ಭ**

ಪ್ರಾಚೀನ ಕರ್ನಾಟಕದ ಇತಿಹಾಸದಲ್ಲಿ ಅನೇಕ ಅರಸಿಯರು ಅಧಿಕಾರವನ್ನು ಪಡೆದು ಆಳ್ವಿಕೆ ನಡೆಸಿದ್ದಾರೆ. ಇವರಲ್ಲಿ ಬಹುತೇಕ ಅರಸಿಯರು ತಮ್ಮ ಪತಿಯ ಆಳ್ವಿಕೆಯಲ್ಲಿ ಕೆಲವು ಪ್ರಾಂತಗಳ ಜವಾಬ್ದಾರಿಯನ್ನು ಪಡೆದು, ಅಲ್ಲಿ ತಮ್ಮ ಸ್ವತಂತ್ರ ಅಧಿಕಾರವನ್ನು ಕೈಕೊಂಡಿದ್ದನ್ನು ಕಾಣುತ್ತೇವೆ. ಬಾದಾಮಿ ಚಳುಕ್ಯ, ಗಂಗ, ರಾಷ್ಟ್ರಕೂಟ, ನೊಳಂಬ, ಕಲ್ಯಾಣಿ ಚಾಲುಕ್ಯ, ಹೊಯ್ಸಳ, ಹಾನುಗಲ್ಲು ಕದಂಬ ಮೊದಲಾದ ಅರಸು ಮನೆತನಗಳಲ್ಲಿನ ಅರಸಿಯರು ತಮ್ಮ ಪತಿಯರೊಂದಿಗೆ ಆಳ್ವಿಕೆ ನಡೆಸಿದ್ದಾರೆ. ಈ ಪರಿಪಾಟು ಸುಮಾರು ಏಳನೆಯ ಶತಮಾನದಿಂದಲೇ ಕಂಡು ಬಂದರೂ ೧೦–೧೨ನೆಯ ಶತಮಾನಗಳಲ್ಲಿ ಕಲ್ಯಾಣಿ ಚಾಲುಕ್ಯ, ಹೊಯ್ಸಳರ

ಕಾಲದಲ್ಲಿ ಹೆಚ್ಚಾಗಿದ್ದುದನ್ನು ಕಾಣುತ್ತೇವೆ. ಈ ಕಾಲದ ಸಾಮಂತಾಧಿಕಾರಿಗಳು, ಮಾಂಡಳೀಕರ ಮನೆತನದ ಮಹಿಳೆಯರೂ ಕೂಡ ಆಡಳಿತದಲ್ಲಿ ಭಾಗವಹಿಸುತ್ತಿದ್ದುದು ಕಂಡುಬರುತ್ತದೆ. ಕಲ್ಯಾಣಿ ಚಾಲುಕ್ಯ ಅರಸರ ಸಾಮಂತರಾಗಿ ಆಳ್ವಿಕೆ ನಡೆಸಿದ ದೇಮಲದೇವಿ, ಚಾಗಲದೇವಿ, ಜೋಗಬ್ಬೆ, ಪಂಪಾದೇವಿ, ರೆಬ್ಬಲದೇವಿ, ರಾಷ್ಟ್ರಕೂಟ ಅರಸರ ಸಾಮಂತರಾಗಿ ನಾಗರಖಂಡವನ್ನಾಳಿದ ಜಕ್ಕಿಯಬ್ಬೆ, ಅದೇ ಕಾಲದಲ್ಲಿದ್ದ ಲಕ್ಷ್ಮೀಗಾವುಂಡಿ, ಹೊಯ್ಸಳರ ಆಳ್ವಿಕೆಯಲ್ಲಿ ಸೆಟ್ಟಿಕವ್ವೆ, ಸೇವುಣ ಸಿಂಘಣನ ಸಾಮಂತರಾಗಿ ಭಾಗುಬಾಯಿ ಮೊದಲಾದವರನ್ನೂ ಹೆಸರಿಸಬಹುದು.

ಈ ಕಾಲದ ಅರಸಿಯರು ಪತಿಯೊಂದಿಗಿನ ಆಳ್ವಿಕೆಯಲ್ಲದೆ ತಮಗೆ ಮದುವೆಯ ಬಳುವಳಿಯಾಗಿ (ಸ್ತ್ರೀಧನ) ಬಂದ ಪ್ರದೇಶಗಳಲ್ಲಿಯೂ ಆಳ್ವಿಕೆ ನಡೆಸಿದ್ದಾರೆ. ಗಂಗ ಬೂತುಗನನ್ನು ವರಿಸಿದ್ದ ರಾಷ್ಟ್ರಕೂಟ ರಾಜಕುಮಾರಿ ಚಂದ್ರೋಬಲಬ್ಬೆ, ಇಮ್ಮಡಿ ಬೂತುಗನ ಅರಸಿ ರೇವಕನಿಮ್ಮಡಿ, ಗೋವೆಯ ಕದಂಬ ಜಯಕೇಶಿಯನ್ನು ಮದುವೆಯಾದ ಚಾಲುಕ್ಯ ವಿಕ್ರಮಾದಿತ್ಯನ ಮಗಳು ಮೈಳಲದೇವಿ ಮೊದಲಾದವರು ಮದುವೆಯ ಸಂದರ್ಭದಲ್ಲಿ ತಂದೆಯಿಂದ ಕೊಡಲಾದ ಪ್ರದೇಶಗಳಲ್ಲಿಯೂ ಆಳ್ವಿಕೆ ನಡೆಸಿದ್ದಾರೆ. ಸಿಂಹಪೋತನ ಮಗಳು ನೊಳಂಬ ಮಾದವೆಯು ತನ್ನ ಸಹೋದರನ ಅರಸಿಯಾದ ಗವಗಣಬ್ಬೆಯೊಂದಿಗೆ ಮದರಿಕಲ್ಲು ಮೊದಲಾದ ಪ್ರದೇಶದಲ್ಲಿ ಆಡಳಿತ ನಡೆಸುತ್ತಿದ್ದಳು. ಕಲ್ಯಾಣಿ ಚಾಳುಕ್ಯ ರಾಜಕುಮಾರಿಯೂ ಮಹಾಮಂಡಳೇಶ್ವರ ಸಿಂಹಣದೇವರಸನ ಅರಸಿಯೂ ಆದ ಸುಗ್ಗಲದೇವಿಯು ತನ್ನ ತಂದೆ ಆಹವಮಲ್ಲದೇವ ಹಾಗೂ ಅಣ್ಣ ಭುವನೈಕಮಲ್ಲರ ಅಧೀನದಲ್ಲಿ ಕಿಸುಕಾಡು ೭೦ರ ನಿಡುಗುಂದಿಯಲ್ಲಿ ಆಳ್ವಿಕೆ ನಡೆಸುತ್ತಿದ್ದಳು.

ಕೆಲವು ಅರಸಿಯರು ಕೇವಲ ಪತಿಯ ಆಳ್ವಿಕೆಯಲ್ಲಿ ಮಾತ್ರ ಅಧಿಕಾರವನ್ನು ಪಡೆಯದೆ ಅವರ ಮರಣಾ ನಂತರವೂ ಆಳ್ವಿಕೆ ನಡೆಸಿದ್ದಾರೆ. ಬಾದಾಮಿ ಚಳುಕ್ಯ ವಿಜಯಭಟ್ಟಾರಿಕೆ ತನ್ನ ಪತಿಯ ಕಾಲದಲ್ಲಿಯೂ ಆಡಳಿತದಲ್ಲಿ ಭಾಗಿಯಾಗಿದ್ದಳಲ್ಲದೆ ಆತನ ನಂತರವೂ ಪತಿಯ ಸಹೋದರನ ಆಳ್ವಿಕೆಯಲ್ಲಿ ಆಡಳಿತ ಮುಂದುವರೆಸಿದ್ದಾಳೆ, ಗಂಗರಾಜವಂಶದ ಎಱೆಗಂಗನ ಮಡದಿ ಬುಜಬ್ಬರಸಿಯು, ಪೆರ್ಬಾಳುವನ್ನು ಆಳ್ವಿಕೆಗೆಯ್ಯುತ್ತಿರುವ ವಿಚಾರ ತಿಳಿಸುವ ದಾನಶಾಸನವೊಂದು ಇವಳ ಮಗ ಬೂತುಗನ ಮಗನಾದ ಮಾರಸಿಂಹನ ಕಾಲದ್ದಾಗಿದೆ. ಇದು ಮೊಮ್ಮಗನ ಕಾಲದಲ್ಲಿ ಅಜ್ಜಿಯು ಆಡಳಿತ ನಡೆಸುತ್ತಿದ್ದ ವಿಚಾರವನ್ನು ತಿಳಿಸುತ್ತದೆ. ಎರಡನೆಯ ಬಲ್ಲಾಳನ ರಾಣಿ ಉಮಾದೇವಿ ಪತಿಯ ಮರಣಾನಂತರವೂ ಆಳ್ವಿಕೆ ನಡೆಸುತ್ತಿದ್ದಳು. ಈ ಕಾಲದಲ್ಲಿ ಇವಳ ಸವತಿ ಪದ್ಮಲದೇವಿಯ ಮಗ ಇಮ್ಮಡಿ ನಾರಸಿಂಹ ಹೊಯ್ಸಳ ಸಾಮ್ರಾಜ್ಯ ಸಿಂಹಾಸನವನ್ನೇರಿದ್ದ. ಹೀಗೆ ಪತಿಯ ಆಳ್ವಿಕೆಯಲ್ಲಿ ತಮ್ಮದೇ ಆದ ಪ್ರಾಂತಗಳ ಆಡಳಿತ ಅವಕಾಶ ಪಡೆದ ಹಲವಾರು ರಾಣಿಯರು, ಪತಿಯ ಆಳ್ವಿಕೆಯ ಅಥವಾ ಮರಣಾನಂತರವೂ ತಮ್ಮ ಆಡಳಿತ ಮುಂದುವರೆಸಿದ ಉದಾಹರಣೆಗಳು ದೊರಕುತ್ತವೆ.

ಕೆಲವೊಂದು ಸಂದರ್ಭಗಳಲ್ಲಿ ಉತ್ತರಾಧಿಕಾರಿಯಾದ ಅಪ್ರಾಪ್ತ ವಯಸ್ಕ ಮಗನ ಪರವಾಗಿ ಆಳ್ವಿಕೆ ನಡೆಸಿದ ಉದಾಹರಣೆಗಳೂ ಕಂಡುಬರುತ್ತವೆ. ಹತ್ತನೆಯ ಶತಮಾನದ ಕಲ್ಯಾಣಿ ಚಾಲುಕ್ಯ ರಾಜಕುಮಾರಿ ಅಕ್ಕಾದೇವಿ, ಪತಿಯ ಮರಣಾನಂತರ ಅಪ್ರಾಪ್ತವಯಸ್ಸಿನ ಮಕ್ಕಳ ಪರವಾಗಿ ಆಳ್ವಿಕೆ ನಡೆಸಿದ್ದಾಳೆ. ನಾಗರಖಂಡವನ್ನಾಳಿದ ಜಕ್ಕಿಯಬ್ಬೆ, ಆಳುಪ ರಾಣಿ ಬಲ್ಲಮಹಾದೇವಿ, ರೆಬ್ಬಲದೇವಿ ಮೊದಲಾದವರು ಪತಿಯ ಮರಣಾನಂತರ ಅಧಿಕಾರವನ್ನು ಪಡೆದು ಆಳ್ವಿಕೆ ನಡೆಸಿದ್ದಾರೆ.

ಸುಮಾರು ಏಳನೆಯ ಶತಮಾನದಿಂದ ಹದಿಮೂರನೆಯ ಶತಮಾನದವರೆಗಿನ ಕಾಲಘಟ್ಟದಲ್ಲಿ ಅರಸಿಯರು ಪತಿಯ ಆಳ್ವಿಕೆಯಲ್ಲಿ ಅಥವಾ ಚಕ್ರವರ್ತಿಯ ಅಧೀನದ ಮಾಂಡಳೀಕಳಾಗಿ ಅಧಿಕಾರ ನಡೆಸಿರುವುದು ಕಂಡುಬರುತ್ತದೆ. ವಿಜಯನಗರದ ಅರಸರ ಕಾಲದಲ್ಲಿ ಮಹಿಳಾಧಿಕಾರಿಗಳು ಕಂಡುಬರುವುದು ಅಪರೂಪವಾಗಿದೆ. ಆಡಳಿತಾಧಿಕಾರವನ್ನು ಕೈಗೆ ತೆಗೆದುಕೊಳ್ಳದಿದ್ದರೂ ಈ ಕಾಲದ ಕೆಲವು ಅರಸಿಯರು ರಾಜಕೀಯ ವಿಚಾರಗಳಲ್ಲಿ

ಭಾಗವಹಿಸಿದ ಉಲ್ಲೇಖಗಳು ದೊರಕುತ್ತವೆ. ಮೊದಲನೆಯ ಬುಕ್ಕರಾಯನ ಮಗ ವೀರಕಂಪಣನ ಮಡದಿ ಗಂಗಾದೇವಿ ಪತಿಯೊಂದಿಗೆ ಕೋಲಾರ ಪ್ರದೇಶದಲ್ಲಿ ಆಳ್ವಿಕೆ ನಡೆಸುತ್ತಿದ್ದಳಲ್ಲದೆ ಯುದ್ಧರಂಗವನ್ನೂ ಪ್ರವೇಶಿಸಿದ್ದಳು. ಎರಡನೆಯ ಬುಕ್ಕರಾಯನ ಮಗಳು ವಿರೂಪಾದೇವಿ ಮಾಂಡಳೀಕನ ಮಡದಿಯಾಗಿ ಪೆನುಗುಂಡೆಯ ಸುತ್ತಮುತ್ತಲಿನ ಕೆಲವು ಶಾಸನಗಳಲ್ಲಿ ಉಕ್ತಳಾಗಿದ್ದಾಳೆ. ಇವಳ ಮಗಳು ಜೊಮ್ಮಾದೇವಿ ಕೂಡ ಕೆರೆ–ಕಾಲುವೆ ನಿರ್ಮಾಣದಲ್ಲಿ ಆಸಕ್ತಿ ವಹಿಸಿದ್ದಳು. ಕೃಷ್ಣದೇವರಾಯನ ಮಡದಿಯರಾದ ಚಿನ್ನಾದೇವಿ ಹಾಗೂ ತಿರುಮಲದೇವಿಯರೂ ಆಡಳಿತದಲ್ಲಿ ಕೊಂಚಮಟ್ಟಿಗೆ ಸ್ವಾತಂತ್ರ ವಹಿಸಿದ್ದರು. ಇವರು ತಮ್ಮದೇ ಆದ ಖಜಾನೆಯನ್ನೂ ಅದನ್ನು ನೋಡಿಕೊಳ್ಳುವ ಅಧಿಕಾರಿಗಳನ್ನೂ ಹೊಂದಿದ್ದರು ಎಂದು ವಿದೇಶಿ ಪ್ರವಾಸಿಗರೂ ಸಹ ತಿಳಿಸಿದ್ದಾರೆ. ಕೃಷ್ಣದೇವರಾಯನೊಂದಿಗೆ ದಂಡಯಾತ್ರೆಗಳಲ್ಲಿ ಭಾಗವಹಿಸುತ್ತಿದ್ದ ಇವರು ತಮ್ಮ ಕಾಲದಲ್ಲಿ ತಲೆದೋರಿದ ರಾಜಕೀಯ ಬಿಕ್ಕಟ್ಟನ್ನು ಬಗೆಹರಿಸುವಲ್ಲಿಯೂ ಪ್ರಮುಖ ಪಾತ್ರ ವಹಿಸಿದ್ದಾರೆ. ಕೃಷ್ಣದೇವರಾಯನ ಮರಣಾನಂತರ ಅವನ ಅಳಿಯಂದಿರಾದ ರಾಮರಾಯ ಹಾಗೂ ತಿರುಮಲರಾಯರನ್ನು ಆಸ್ಥಾನದ ಕೋಶಾಧಿಕಾರಿ ಕಲಾಕಂ ತಿಮ್ಮಯ್ಯನು ಸೆರೆಮನೆಯಲ್ಲಿರಿಸಲು ತಿರುಮಲಾದೇವಿ ಹಾಗೂ ಚಿನ್ನಾದೇವಿಯರು ತಮ್ಮ ಅಳಿಯಂದಿರಿಗೆ ನಗರವನ್ನು ಬಿಟ್ಟುಕೊಡುವಂತೆ ಆಜ್ಞೆ ಹೊರಡಿಸಿ, ರಾಜ್ಯದ ಉತ್ತರಾಧಿಕಾರಿಯನ್ನು ನೇಮಿಸುವಲ್ಲಿ ತಮ್ಮ ಅಧಿಕಾರ ಚಲಾಯಿಸಿದ ಕೆಲವು ವಿಚಾರಗಳು ಪಾಳೇಗಾರರ ಕಡತಗಳಿಂದ ತಿಳಿದು ಬಂದಿವೆ (ಹಂಡೆ ಅನಂತಪುರನ ವಾರ್ಷಿಕ ಲೆಕ್ಕ ಪತ್ರ, ಸೊನ್ನಲಾಪುರದ ಹಂಡೆ ಹನುಮಪ್ಪನಾಯ್ಕು).

ಈ ಮೇಲಿನ ಕೋಷ್ಟಕದಲ್ಲಿ ಕಂಡುಬರುವಂತೆ ಕರ್ನಾಟಕದಲ್ಲಿ ಆಡಳಿತ, ಅಧಿಕಾರಗಳನ್ನು ನಡೆಸಿದ ಅರಸಿಯರ ಸಂದರ್ಭಗಳನ್ನು ವಿಭಿನ್ನ ಕಾಲದಲ್ಲಿ ಹಾಗೂ ವಿಭಿನ್ನ ಮನೆತನಗಳಡಿಯಲ್ಲಿ ಈ ರೀತಿಯಾಗಿ ಗುರುತಿಸಬಹುದು.

- ಗಂಗ, ಚಾಲುಕ್ಯ, ಹೊಯ್ಸಳ ರಾಜಮನೆತನಗಳ ಅರಸಿಯರಿಗೆ ಪತಿಯ ಆಳ್ವಿಕೆಯ ಅವಧಿಯಲ್ಲಿ ತಮ್ಮದೇ ಆದ ಪ್ರದೇಶಗಳಲ್ಲಿ ಆಡಳಿತ ನಡೆಸುವ ಅಧಿಕಾರದ ಅವಕಾಶಗಳು ಹೆಚ್ಚಾಗಿತ್ತು. ಈ ಕಾಲದ ಹಲವು ಅರಸಿಯರು ಮದುವೆಯ ಬಳುವಳಿಯಾಗಿ ಬಂದಿದ್ದ ಪ್ರದೇಶಗಳಲ್ಲಿಯೂ ಆಳ್ವಿಕೆ ನಡೆಸಿದ್ದಾರೆ.
- ರಾಷ್ಟ್ರಕೂಟ, ವಿಜಯನಗರ ಮೊದಲಾದ ಕರ್ನಾಟಕದ ಪ್ರತಿಷ್ಠಿತ ರಾಜಮನೆತನಗಳ ಕೆಲವು ಅರಸಿಯರು ಪತಿಯೊಡನೆ ಆಳ್ವಿಕೆಯಲ್ಲಿ ಭಾಗವಹಿಸುತ್ತಿದ್ದ ವಿಚಾರ ತಿಳಿದುಬರುತ್ತದೆ ಆದರೆ, ಪ್ರತ್ಯೇಕವಾಗಿ ತಮ್ಮದೇ ಆದ ಪ್ರದೇಶಗಳಲ್ಲಿ ಆಡಳಿತ ನಡೆಸುತ್ತಿದ್ದ ಉದಾಹರಣೆಗಳಾಗಲೀ, ಪತಿಯ ಮರಣಾನಂತರ, ಮಕ್ಕಳ ಪರವಾಗಿ, ಸ್ವತಂತ್ರವಾಗಿ ಆಳ್ವಿಕೆ ನಡೆಸಿದ ರಾಣಿಯರು ಕಂಡುಬರುವುದಿಲ್ಲ.
- ರಾಷ್ಟ್ರಕೂಟರಲ್ಲಿ ಅಪ್ರಪ್ತವಯಸ್ಕ ರಾಜಕುಮಾರರು ಸಿಂಹಾಸನವನ್ನೇರಿದ ಸಂದರ್ಭವಿದ್ದರೂ, ರಾಣಿಯರು ಮಕ್ಕಳ ಪರವಾಗಿ ರಾಜ್ಯಭಾರ ಮಾಡಿದ ಉಲ್ಲೇಖಗಳು ದೊರೆಯುವುದಿಲ್ಲ. ಈ ಕಾಲದಲ್ಲಿ ಪ್ರಬಲ ಸಾಮಂತಾಧಿಕಾರಿಗಳ ಹಿಡಿತ, ವಿಕ್ಷಿಪ್ತ ರಾಜಕೀಯ ಹಿನ್ನೆಲೆಗಳಿದ್ದುದನ್ನು ಗಮನಿಸಬಹುದು.
- ವಿಜಯನಗರದ ಅರಸು ಮನೆತನದಲ್ಲಿ ರಾಣಿಯರು ಅಧಿಕಾರದ ಚುಕ್ಕಾಣಿ ಹಿಡಿಯಲಿಲ್ಲವಾದರೂ, ಕೆಲವು ಅರಸಿಯರು ಪತಿಯೊಂದಿಗೆ ರಾಜಕೀಯ ವಿಚಾರಗಳಲ್ಲಿ ಭಾಗವಹಿಸುತ್ತಿದ್ದ ಉಲ್ಲೇಖ ದೊರಕುತ್ತದೆ.
- ವಿಜಯನಗರದ ಅರಸರ ನಂತರದ ಕಾಲದಲ್ಲಿ ಕರ್ನಾಟಕದ ಕೆಲವು ರಾಜಮನೆತನದ ಅರಸಿಯರು ಸ್ವತಂತ್ರವಾಗಿ ಆಡಳಿತಸೂತ್ರ ಕೈಕೊಂಡಿದ್ದಾರೆ. ಕೆಳದಿಯ ಅರಸಿಯರಾದ ಚನ್ನಮ್ಮ ಹಾಗೂ ಚನ್ನವೀರಮ್ಮ, ಚೌಟ ಅರಸ ಅಬ್ಬಕ್ಕದೇವಿ, ಸೋಮಲದೇವಿ, ಗೇರುಸೊಪ್ಪೆಯ ಭೈರಾದೇವಿ, ಚನ್ನಭೈರಾದೇವಿ, ಬೆಳವಡಿಯ ಮಲ್ಲಮ್ಮ ಮೊದಲಾದ ಪ್ರಸಿದ್ಧ ಆಡಳಿತಗಾರ್ತಿಯರನ್ನು ಈ ಕಾಲದಲ್ಲಿ ಕಾಣಬಹುದು.

ಇವರಲ್ಲಿ ತುಳುನಾಡಿನ ಕೆಲವು ಅರಸಿಯರು ಅಳಿಯ ಸಂತಾನದ ಕಟ್ಟಿನ ಸಂಪ್ರದಾಯದಲ್ಲಿ ಆಳ್ವಿಕೆ ವಹಿಸಿಕೊಂಡರೆ, ಮತ್ತೆ ಕೆಲವು ಅರಸಿಯರು ಪತಿಯ ಅಕಾಲಿಕ ಮರಣಾನಂತರ ವಾರಸುದಾರರು ಇಲ್ಲದ ಸಂದರ್ಭದಲ್ಲಿ ಸ್ವತಃ ತಾವೇ ಪಟ್ಟವನ್ನೇರಿ ಆಳ್ವಿಕೆ ನಡೆಸಿದ್ದಾರೆ.

## ಆಳ್ವಿಕೆಯ ಅವಧಿಯಲ್ಲಿ ಹೊರಡಿಸಿದ ಶಾಸನ

ಶಾಸನಗಳು ಇತಿಹಾಸದ ತಾಯಿಬೇರು. ಕರ್ನಾಟಕದ ರಾಣಿಯರ ಬಹುತೇಕ ವಿಚಾರಗಳು ತಿಳಿದುಬರುವುದೇ ಶಾಸನಗಳಿಂದ. ರಾಣಿಯರ ಉಲ್ಲೇಖವಿರುವ ಹಲವಾರು ಶಾಸನಗಳಲ್ಲಿ ರಾಜನೊಂದಿಗೆ ಪ್ರಾಸಂಗಿಕವಾಗಿ ರಾಣಿಯರ ಉಲ್ಲೇಖವಿದೆ. ಇದಲ್ಲದೆ ಸ್ವತಃ ರಾಣಿಯರೇ ಹೊರಡಿಸಿರುವ ಹಲವಾರು ದಾನ ಶಾಸನಗಳು ದೊರಕುತ್ತವೆ. ರಾಣಿಯರು ದೇವಾಲಯ, ಬಸದಿಗಳಿಗೆ ದಾನ, ದತ್ತಿ ನೀಡಿದ ವಿಚಾರಗಳನ್ನು ತಿಳಿಸುವ ಶಾಸನಗಳು, ದೇವಾಲಯ, ಬಸದಿ ನಿರ್ಮಿಸಿದ ಶಾಸನಗಳು. ಕೆರೆ–ಕಾಲುವೆಗಳನ್ನು ನಿರ್ಮಿಸಿದ ವಿಚಾರ ತಿಳಿಸುವ, ಅಗ್ರಹಾರ–ಬ್ರಹ್ಮಪುರಿಗಳನ್ನು ನಿರ್ಮಿಸಿದ, ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ನೀಡಿದ ಇವೇ ಮೊದಲಾದ ವಿಚಾರಗಳನ್ನು ತಿಳಿಸುವ ರಾಣಿಯರು ಹೊರಡಿಸಿದ ಅನೇಕ ಶಾಸನಗಳನ್ನು ಕಾಣುತ್ತೇವೆ. ಇವುಗಳೊಂದಿಗೆ ತೆರಿಗೆ ವಿನಾಯತಿ ನೀಡಿರುವ, ಕಾಮಗಾರಿಯ ಒಪ್ಪಂದ ಮಾಡಿಕೊಂಡಿರುವ, ಸಂತೆ – ವ್ಯಾಪಾರ ಕುರಿತಾದ ಮಾಹಿತಿ ನೀಡುವ ಶಾಸನಗಳೂ ದೊರೆತಿವೆ. ರಾಣಿಯರು ಯುದ್ಧದಲ್ಲಿ ಭಾಗವಹಿಸಿರುವ ವಿಚಾರ ಹಾಗೂ ಯುದ್ಧ ಕುರಿತಾದ ವಿವರಗಳನ್ನೊಳಗೊಂಡ ವೀರಗಲ್ಲುಗಳು ಸಹಾ ದೊರೆತು ರಾಣಿಯರ ಸಾಹಸ ಮನೋಭಾವವನ್ನು ತಿಳಿಸುತ್ತವೆ.

ರಾಣಿಯರು ಹೊರಡಿಸಿರುವ ದಾನ ಶಾಸನಗಳಲ್ಲಿ ಕೆಲವೊಂದು ಅವರ ಆಡಳಿತ ವೈಖರಿಯನ್ನು ತೋರಿಸುತ್ತವೆ. ಅಕ್ಕಾದೇವಿಯು ಪೆರೂರಿನ ತ್ರೈಪುರುಷ ಶಾಲೆಯ ೫೦೦ ವಿದ್ಯಾರ್ಥಿಗಳ ಊಟ ಮತ್ತು ಬಟ್ಟೆಗಾಗಿ ಅದೇ ಊರಿನಲ್ಲಿ ಐನೂರು ಮತ್ತರು ಭೂಮಿಯನ್ನು, ಐವತ್ತು ಮನೆಯನ್ನು ಎರಡು ಮತ್ತರು ಹೂವಿನ ತೋಟವನ್ನು ದಾನ ಮಾಡಿದಳು. ಈ ಧರ್ಮವನ್ನು ಅವಳು 'ರಾಜರಕ್ಷಿತ ಧರ್ಮವೆಂದು ಕರೆದು ಇದನ್ನ ಪೆರೂರ ೪೦೦ ಮಹಾಜನರು ಪಾಲಿಸಬೇಕು' ಎಂಬ ಆದೇಶವನ್ನು ಮಾಡಿರುವುದು ತಾನು ನೀಡಿರುವ ದಾನವು ಸದುಪಯೋಗ ವಾಗಲು ತೆಗೆದುಕೊಂಡ ಕ್ರಮವನ್ನು ತಿಳಿಸುತ್ತದೆ.

ಸಿಂಧವಂಶದ ಚಾವುಂಡದೇವರಸನ ಪಿರಿಯರಸಿ ದೇಮಲದೇವಿಯು ವಿಜಯೇಶ್ವರ ದೇವರ ಅಂಗ–ರಂಗ ಭೋಗಕ್ಕೆ ಅಲ್ಲಿನ ಇತರ ಕಾರ್ಯಗಳಿಗಾಗಿ ದತ್ತಿ ನೀಡಿದ್ದಾಳೆ.[೩] ಈ ವಿಷಯ ತಿಳಿಸುವ ಶಾಸನವು, ಇವಳು ತಮ್ಮ ಪೂರ್ವದ ಅರಸರು ಬಿಟ್ಟ ದಾನ ದತ್ತಿಗಳು ನಡೆಯುತ್ತಿವೆಯೋ ಅಥವಾ ಇಲ್ಲವೋ ಎಂಬುದನ್ನು ವಿಚಾರಿಸಿ ನೋಡಿದಳೆನ್ನುವುದು ಉಲ್ಲೇಖಿಸಿರುವುದು ವಿಶೇಷವಾಗಿ ತೋರುತ್ತದೆ. ಇಂಥ ವಿಚಾರಣೆಗಳು ಹಿಂದಿನ ದಾನ ದತ್ತಿಗಳು ದುರುಪಯೋಗವಾಗಬಾರದೆಂಬ ರಾಣಿಯ ಕಾಳಜಿಯನ್ನು ತಿಳಿಸುತ್ತದೆ.

ಸಿಂಧವಂಶಕ್ಕೆ ಸೇರಿದ ಲಕ್ಷ್ಮಾದೇವಿಯು ಮಂಡಳೇಶ್ವರ ಚಾಮುಂಡನ ರಾಣಿ. ಇವಳು ಸೂಂಡಿ, ಹೊಸವೂರ ಮತ್ತು ಕಡಕೆರೆ ಮಂಡಲದ ಕೆಲವು ಊರುಗಳಲ್ಲಿ ಆಡಳಿತ ಮಾಡುತ್ತಿದ್ದ ಸಂದರ್ಭದಲ್ಲಿ ಇವಳ ಆಡಳಿತ ಪ್ರದೇಶದ ತೀರ್ಥದ ಮಲ್ಲಿಕಾರ್ಜುನ ದೇವಾಲಯದ ಭಕ್ತರಾದ ಪೆರ್ಗಡೆ ಸೋಮನಾಥನಾಯಕ, ಗಯಾಧರನಾಯಕ, ಕರಣರಾದ ರಾಯರಸ ಮಾಚಿರಾಜ, ಪ್ರತಿಕಂಠಕೇಶವದೇವ, ಮಾಧವದೇವ ಮೊದಲಾದವರು ದೇವಾಲಯದ ಅಭಿವೃದ್ಧಿಗಾಗಿ ರಾಣಿಗೆ ಬಿನ್ನಹ ಮಾಡಿ ಅವಳಿಂದ ಅನುಮತಿ ಪಡೆದುಕೊಂಡು

ಗದ್ದೆ ಮತ್ತು ಎಂಟು ಮತ್ತರು ಹೊಲವನ್ನು ದೇವಾಲಯಕ್ಕೆ ಬಿಡುತ್ತಾರೆ.[೪] ಶಾಸನವು ತಿಳಿಸಿರುವಂತೆ ಈ ದಾನಕ್ಕೆ ಅನುಮತಿ ನೀಡಿರುವುದಲ್ಲದೆ ದುರುಪಯೋಗವಾಗಬಾರದೆಂಬ ರಾಣಿಯ ಷರತ್ತು ಗಮನಾರ್ಹವಾಗಿದೆ.

ರಾಣಿಯರು ಹೊರಡಿಸಿರುವ ಬಹುತೇಕ ಶಾಸನಗಳಲ್ಲಿ ತಮ್ಮ ಪತಿ ಅಥವಾ ಪ್ರಭುತ್ವದಲ್ಲಿರುವ ದೊರೆಯ ಹೆಸರನ್ನು ಮೊದಲು ಉಲ್ಲೇಖಿಸಿ ಆನಂತರ ತಮ್ಮ ವಿಚಾರಗಳನ್ನೂ, ವ್ಯಕ್ತಪಡಿಸಬೇಕಿರುವ ವಿಚಾರಗಳನ್ನೂ ತಿಳಿಸುವುದು ವಾಡಿಕೆಯಾಗಿ ಬಂದಿದೆ. ಕೆಲವೊಂದು ಶಾಸನಗಳು ಮಾತ್ರ ಇಂಥ ಸಂಪ್ರದಾಯವನ್ನೂ ಮೀರಿವೆ. ರಾಷ್ಟ್ರಕೂಟ ರಾಣಿ ಶೀಲಮಹಾದೇವಿಯು ಪತಿಯ ಹೆಸರನ್ನು ಹೇಳದೆಯೆ ಸ್ವತಂತ್ರವಾಗಿ ಶಾಸನಗಳನ್ನು ಹೊರಡಿಸಿದ್ದಾಳೆ. ಶೀಲಭಟ್ಟಾರಿಕಾ, ಪರಮಭಟ್ಟಾರಿಕಾ, ಪರಮೇಶ್ವರಿ ಎಂದು ಇವಳನ್ನು ಕರೆದಿರುವ ಶಾಸನವು, ಈ ಹೆಸರಿನ ಮುಖಾಂತರವೇ ಇವಳಿಗಿದ್ದ ಪರಮಾಧಿಕಾರವನ್ನು ಸೂಚಿಸುತ್ತದೆ. ಗ್ರಾಮವೊಂದನ್ನು ದಾನವಾಗಿ ಕೊಟ್ಟು, ಇದನ್ನು ನಡೆಸಿಕೊಡಲು ದುರ್ಗಾದಿತ್ಯನೆಂಬುವನಿಗೆ ಆದೇಶಿಸಿರುವುದನ್ನು ತಿಳಿಸುವ ಕ್ರಿ.ಶ.೭೮೬ರ ಜೆತ್ವಾಯ್ ತಾಮ್ರಪಟಗಳನ್ನು ರಾಜನ ಸಾಂಪ್ರದಾಯಿಕ ಅನುಮತಿಯನ್ನು ಪಡೆಯದೆಯೇ ಸ್ವತಂತ್ರವಾಗಿ ತನ್ನ ಹೆಸರಿನಲ್ಲೇ ಹೊರಡಿಸಿದ್ದಾಳೆ. ಅಧಿಕಾರಿಗಳಿಗೆ ತನ್ನ ಆದೇಶವನ್ನು ನೀಡಿದ್ದಾಳೆ[೫].

ಧಾರ್ಮಿಕ ಕಾರ್ಯಗಳನ್ನು ಉಲ್ಲೇಖಿಸುವ ಇಂತಹ ಕೆಲವು ಶಾಸನಗಳು ಅರಸಿಯರು ತೋರುತ್ತಿದ್ದ ಸ್ವತಂತ್ರ ಮನೋಭಾವ, ಅವರಿಗಿರುತ್ತಿದ್ದ ಅಧಿಕಾರಗಳನ್ನು ಕುರಿತು ತಿಳಿಸುತ್ತದೆ. ಸಾಧಾರಣವಾಗಿ ತೆರಿಗೆ ವಿನಾಯಿತಿ ನೀಡುವ ಸಂದರ್ಭದಲ್ಲಿ ಕೆಲವು ಅಧಿಕಾರವರ್ಗದವರು ಅರಸರ ಅಥವಾ ಚಕ್ರವರ್ತಿಯ ಅನುಮತಿ ಪಡೆಯುತ್ತಿದ್ದ ಉಲ್ಲೇಖ ವಿರುತ್ತದೆ. ಆದರೆ, ಹೊಯ್ಸಳ ಉಮಾದೇವಿ ಮೊದಲಾದ ಅರಸಿಯರು ತೆರಿಗೆ ವಿನಾಯಿತಿ ತೋರುವ ವಿಚಾರದಲ್ಲಿಯೂ ಕೂಡ ಸ್ವಾತಂತ್ರ ವಹಿಸಿರುವುದನ್ನು ಕಾಣಬಹುದು.

ರಾಣಿಯರು ಹೊರಡಿಸಿರುವ ಶಾಸನಗಳು ಹಲವು ಐತಿಹಾಸಿಕ ಮಹತ್ವದ ಸಂಗತಿಗಳನ್ನು ಒಳಗೊಂಡಿರುವುದನ್ನು ಕಾಣುತ್ತೇವೆ. ವಿಜಯಭಟ್ಟಾರಿಕೆಯ ಶಾಸನವು ಅವಳ ಪತಿಯ ಕಾಲ, ಆಳ್ವಿಕೆ, ಆತನ ತಮ್ಮ ವಿಕ್ರಮಾದಿತ್ಯನ ಸಾರ್ವಭೌಮತ್ವಗಳ ಮೇಲೆ ಬೆಳಕು ಚೆಲ್ಲುತ್ತದೆ. ಅವನೀತನ ರಾಣಿ ಬೃಹದ್ದೇವಿಯ ದಾನಶಾಸನ ಅವನೀತನ ಆಳ್ವಿಕೆಯ ಆರಂಭದ ಕಾಲವನ್ನು ನಿಶ್ಚಯಿಸಲು ಸಹಾಯಕವಾಗಿದೆ. ರಾಷ್ಟ್ರಕೂಟ ದೊರೆ ನಾಲ್ವಡಿ ಗೋವಿಂದನ ರಾಣಿ ಭಾಗಿಯವ್ವೆ ರಾಜ್ಯದ ಹನ್ನೆರಡು ಜನ ಸಾಮಂತರಿಂದ ತನ್ನ ಹಣೆಗೆ ಪಟ್ಟದ ಕಿರೀಟವನ್ನು ತೊಡಿಸಿಕೊಂಡು ಪಟ್ಟಮಹಿಷಿಯ ಅಧಿಕಾರವನ್ನು ಪಡೆದಿದ್ದಳು ಹಾಗೂ ಅವಳಿಗೆ ಧಾರ್ಮಿಕವಾಗಿ ಅಧಿಕಾರದ ಅರ್ಹತೆಯನ್ನು ಉಂಟುಮಾಡಲು ದೊರೆ ಗೋವಿಂದನು ಆ ಸಂದರ್ಭದಲ್ಲಿ ಹಿರಣ್ಯಗರ್ಭ, ಉಭಯಮುಖಿ, ಗೋ ಸಹಸ್ರ ಮತ್ತು ಕಲ್ಪವೃಕ್ಷ ದಾನಯಜ್ಞಗಳನ್ನು ಆಚರಿಸಿದನೆಂದು ಅಂದೂರ ತಾಮ್ರಪಟಗಳು ತಿಳಿಸುತ್ತದೆ.

ಯುದ್ಧ ಪ್ರಸಂಗಗಳಲ್ಲಿ ಯುದ್ಧ ನಡೆದ ಸ್ಥಳದ ಸುತ್ತಮುತ್ತಲಿನ ಕೆಲವು ಗ್ರಾಮಗಳು ಹಾನಿಗೊಳಗಾಗುತ್ತಿದ್ದುದು ಸಹಜ. ಆ ಗ್ರಾಮಗಳ ಅವ್ಯವಸ್ಥೆಯನ್ನು ಸರಿಪಡಿಸಬೇಕಾದದ್ದು ಆಡಳಿತವರ್ಗದವರ ಕರ್ತವ್ಯವಾಗಿರುತ್ತಿತ್ತು. ಇಂಥ ಪ್ರಸಂಗವೊಂದರ ಉಲ್ಲೇಖ ಅಕ್ಕಾದೇವಿಯ ಕಾಲದಲ್ಲಿ ಕಂಡುಬರುತ್ತದೆ[೬]. ಚೋಳರ ದಾಳಿಯಿಂದ ಸೂಡಿಯ ಬಹುಭಾಗ ನಾಶವಾಗಲು ಅಕ್ಕಾದೇವಿ ಅಲ್ಲಿಯ ಎಂಟುಜನ ವರ್ತಕರಿಗೂ, ಎಂಬತ್ತು ಒಕ್ಕಲುಗಳಿಗೂ ಸಲ್ಲಬೇಕಾದ ಅಂಗಡಿ, ಮನೆ, ಹೊಲಗಳನ್ನು 'ಪುನರ್ಭರಣ' ಮಾಡಿಕೊಟ್ಟು, ಇಡೀ ಕಿಸುಕಾಡು ಎಪ್ಪತ್ತಕ್ಕೆ ಅನೇಕ ಸುಂಕಗಳ ವಿನಾಯಿತಿ ನೀಡಿದ್ದಾಳೆ[೭]. ಅಲ್ಲದೆ, ಪಟ್ಟಣದಲ್ಲಿ ಏನಾದರೂ ಅನ್ಯಾಯ ನಡೆದರೆ ಅದಕ್ಕೆ ತಳವಾರನು ಹೊಣೆ, ಅವನು ಆ ನಷ್ಟವನ್ನು ತುಂಬಿ ಕೊಡಬೇಕು. ತಂದೆಯ ದೋಷ ಮಗನನ್ನು, ಮಗನ ದೋಷ ತಂದೆಯನ್ನು ಹೊಂದುವುದಿಲ್ಲ. ಕಳ್ಳ, ಬಂದಿಕಾರ, ಅಂಚಲ್‌ವಿಡಿವಂ, ಮೊದಲಾದ ಕೆಟ್ಟ ಮನುಷ್ಯರನ್ನು ಅಪರಾಧದ ಸ್ಥಳದಲ್ಲಿಯೇ ಇರಿದರೆ ದಂಡವಾಗಲಿ, ದೋಷವಾಗಲಿ ಇಲ್ಲ. ಇವರನ್ನು ಬಿಟ್ಟು ಬೇರೆಯವರನ್ನು

ಇರಿದರೆ ಅದಕ್ಕೆ ತಕ್ಕ ದಂಡವನ್ನು ತೆರಬೇಕು ಎಂದು ಅಕ್ಕಾದೇವಿಯು ರಾಜಾಜ್ಞೆಯನ್ನು ಹೊರಡಿಸಿದ್ದಳು[೮]. ಇಲ್ಲಿ ಅರಸಿಗೆ ಪ್ರಜಾವಾತ್ಸಲ್ಯ, ನ್ಯಾಯಪರತೆ, ದಮನಿತಪರ ನಿಲುವು ಮೊದಲಾದ ಪ್ರಜಾಹಿತಗುಣಗಳು ಕಂಡುಬರುತ್ತವೆ.

ಯುದ್ಧದಿಂದ ಹಾನಿಗೊಳಗಾದವರಿಗೆ ನಷ್ಟ ತುಂಬಿಸಲು ಪ್ರಯತ್ನಿಸಿದ ಮತ್ತೊಂದು ಘಟನೆಯನ್ನು ಹೊಯ್ಸಳ ರಾಣಿಯ ಕಾಲದಲ್ಲಿ ದಾಖಲಾಗಿದೆ. ಹೊಯ್ಸಳ ಬಲ್ಲಾಳನ ಪತ್ನಿಯಾದ ಚೋಳಮಹಾದೇವಿಯು ಗೌಡ ಕೇತಮಲ್ಲನ ಬಗ್ಗೆ ಚಾಡಿಮಾತನ್ನು ಕೇಳಿ ಅವನ ಅಹಂಕಾರ ಮುರಿಯಲು ಅವನ ಗ್ರಾಮ ಬೇವೂರನ್ನು ಮುತ್ತಿ ಅಲ್ಲಿನ ದನಗಳನ್ನು ಅಪಹರಿಸಲು ಸೈನ್ಯ ಕಳಿಸುತ್ತಾಳೆ. ಕೇತಮಲ್ಲ ತನ್ನ ಗ್ರಾಮದ ದನಗಳ ಅಪಹರಣ ತಡೆಯುತ್ತಾ ಹೋರಾಡಿ ಮಡಿಯುತ್ತಾನೆ. ಈ ವೇಳೆಗೆ ಚೋಳಮಹಾದೇವಿಗೆ ತಾನು 'ದುಷ್ಟರ ಮಾತ ಕೇಳಿ ವಿನಾಕಾರಣ ಬೇವೂರನ್ನು ಮುತ್ತಿಗೆ ಹಾಕಿಸಿ, ಕೇತಮಲ್ಲನನ್ನು ಸಾವಿಗೀಡುಮಾಡಿದೆನಲ್ಲ' ಎಂದು ಪಶ್ಚಾತಾಪ ಮೂಡುತ್ತದೆ. "ಎಮ್ಮ ಮಕ್ಕಳನ್ನು ನಾವು ನೋಯಿಸಿದೆವು.." ಎಂದು ಹೇಳಿ ಕೇತಮಲ್ಲನ ಮಗನಿಗೆ ಪರಿಹಾರವಾಗಿ ಉಂಬಳಿಯನ್ನಿತ್ತ ವಿವರಗಳನ್ನು ಶಾಸನವು ತಿಳಿಸುತ್ತದೆ.

ರಾಣಿಯರ ವ್ಯಾಪಾರನೀತಿ, ವ್ಯಾಪಾರಕ್ಕೆಂದು ಬಂದ ವಿದೇಶಿಯರಿಗೆ ಹಾಕಲಾದ ಶರತ್ತುಗಳು ಇವರ ಆಡಳಿತ ನೀತಿಯನ್ನು ಕುರಿತು ತಿಳಿಸುತ್ತವೆ. ಇಂಗ್ಲೀಷರಿಗೆ ಕಾರವಾರದಲ್ಲಿ ಕೋಠಿಯೊಂದನ್ನು ಕಟ್ಟಿಕೊಳ್ಳಲು ಅನುಮತಿ ನೀಡಿದ್ದ ಕೆಳದಿಯ ಚನ್ನವೀರಮ್ಮಾಜಿಯು ಕ್ರಿ.ಶ.೧೬೭೧ರಲ್ಲಿ ನಿರೂಪವೊಂದನ್ನು ಹೊರಡಿಸಿ ತನ್ನ ರಾಜ್ಯದಲ್ಲಿ ಇಂಗ್ಲೀಷರು ಹಸು ಎತ್ತುಗಳನ್ನೂ ಮತ್ತು ಜನರನ್ನು ಹಿಂಸಿಸಬಾರದೆಂದೂ, ಕೊಲ್ಲಬಾರದೆಂದೂ ಆಜ್ಞೆಮಾಡಿದ್ದಳು.

**ಅರಸಿಯರ ಆಡಳಿತ**

ಈ ಹಿಂದೆ ನೋಡಿದಂತೆ ಅರಸಿಯರು ನಾನಾ ಕಾರಣಗಳಿಂದ ಆಡಳಿತದ ಚುಕ್ಕಾಣಿ ಹಿಡಿದು ರಾಜ್ಯವಾಳಿದ್ದಾರೆ. ಆಳ್ವಿಕೆ ನಡೆಸುವ ಅರಸರಿಗೆಂದೇ ಕೆಲವು ಸಂಹಿತೆಗಳು ರಚಿತವಾಗಿದ್ದು, ಅದಕ್ಕನುಗುಣವಾಗಿ ಆಡಳಿತ ನಡೆಸುತ್ತಿದ್ದುದು ಪ್ರಾಚೀನ ಕಾಲದಲ್ಲಿ ಕಂಡು ಬರುತ್ತಿದ್ದ ಸಾಮಾನ್ಯ ಸಂಗತಿಯಾಗಿತ್ತು. ಅರಸಿಯರೂ ಇದಕ್ಕೆ ಹೊರತಾಗಿರಲಿಲ್ಲ. ಸಾಧಾರಣವಾಗಿ ಚಾಣಕ್ಯನ ನೀತಿ, ಶುಕ್ರನೀತಿಸಾರ, ಕರ್ನಾಟಕದಲ್ಲಿ ಚಾಲುಕ್ಯರ ಕಾಲದಲ್ಲಿ ರಚಿತವಾದ ಮಿತಾಕ್ಷರ ಇವೇ ಮೊದಲಾದ ಸಂಹಿತೆಗಳು ರಾಜನೀತಿಯನ್ನು ತಿಳಿಸಿ, ಆಳ್ವಿಕೆಗೆ ಮಾರ್ಗದರ್ಶಿಯಾಗಿರುತ್ತಿತ್ತು. ಅರಸಿಯರಿಗೆ ದೊರಕುತ್ತಿದ್ದ ಹಲವಾರು ವಿಧವಾದ ವಿದ್ಯಾಭ್ಯಾಸಗಳಲ್ಲಿ ರಾಜನೀತಿಯ ಪಾಠವೂ ಆಗಿರುತ್ತಿತ್ತೆನ್ನುವ ಉಲ್ಲೇಖಗಳು ದೊರಕುತ್ತದೆ.

ಅರಸಿಯರು ತಮ್ಮ ಆಳ್ವಿಕೆಯ ಸಂದರ್ಭದಲ್ಲಿ ಹಲವಾರು ಸಚಿವರು, ಸಲಹೆಗಾರರನ್ನು ಹೊಂದಿರುತ್ತಿದ್ದುದರ ಕುರಿತು ಮಾಹಿತಿಗಳು ದೊರಕುತ್ತವೆ. ಅರಸಿಯರ ಕೈಕೆಳಗಿನ ಕೆಲವು ಅಧಿಕಾರಿಗಳ ಉಲ್ಲೇಖವನ್ನು ಶಾಸನಗಳಲ್ಲಿ ಕಾಣುತ್ತೇವೆ. ಸೂಡಿಯ ಶಾಸನದಲ್ಲಿ **ಅರಸಿ ಅಕ್ಕಾದೇವಿ**ಯ ಕೈಕೆಳಗಿನ ಮನೆವೆರ್ಗಡೆ ಕಾಳಿದಾಸಯ್ಯ, ತಂತ್ರಪಾಳ ಮಿಳ್ಳಯ, ತಂತ್ರಪಾಳ ಚಿಟ್ಟಿಮಯ್ಯ, ಪ್ರಧಾನ ದೆಮ್ಮಣ್ಣ, ಅಳಿಯ ಚಂದಿಮಯ್ಯ, ಅಡಪದ ಚಾವುಂಡರಾಯ, ತಂತ್ರದ ಸೇನಬೋವ, ನಾಡಪೆರ್ಗಡೆ ನಾಗದೇವಯ್ಯ ಮೊದಲಾದ ಅಧಿಕಾರ ವರ್ಗದವರ ಹೆಸರುಗಳ ಜೊತೆ ಮಹಾಸಾಮಂತ ಅಜ್ಜರಭೂಪನ ಉಲ್ಲೇಖವಿದೆ.

ಗೋವೆಯ ಕದಂಬ ಅರಸಿಯೂ ಚಾಲುಕ್ಯ ರಾಜಕುಮಾರಿಯೂ ಆದ**ಮೈಳಲದೇವಿ**ಯ ಆಳ್ವಿಕೆಯಲ್ಲಿ ಮಹಾಪ್ರಧಾನ, ಪುರಾಧ್ಯಕ್ಷ, ಮನೆವೆರ್ಗಡೆ, ಮಹಾಪ್ರಧಾನ ದಂಡನಾಯಕ ಹೀಗೆ ವಿಭಿನ್ನ ಅಧಿಕಾರಿವರ್ಗದವರ ಉಲ್ಲೇಖ ದೊರಕುತ್ತದೆ[೯]. ಪೆರ್ಮಾಡಿ ವಿಕ್ರಮಾದಿತ್ಯನ ಮಡದಿ ಮಲ್ಲಣದೇವಿಯ ಮಂತ್ರಿಯನ್ನು ಬಾಗೇವಾಡಿಯ ಇಂಗಳೇಶ್ವರದ ಕ್ರಿ.ಶ.೧೧೭೬ರ ಶಾಸನ ಉಲ್ಲೇಖಿಸುತ್ತದೆ. ಇವಳ ಅರಮನೆಯ ಮಾಣಿಕಭಣ್ಡಾರ ನಿಯೋಗವನ್ನು

ನಾಗವರ್ಮನೆಂಬಾತ ನೋಡಿಕೊಳ್ಳುತ್ತಿದ್ದ. ಅರಸಿಯರಿಗೆ ನಿಷ್ಠೆ ತೋರುತ್ತಿದ್ದ ಅಧಿಕಾರಿಗಳು ಅರಸಿಯರ ಹೆಸರನ್ನು ಶಾಶ್ವತವಾಗಿಸುತ್ತಿದ್ದರು. ಹೊಯ್ಸಳ ರಾಣಿ ಚೋಳಮಹಾದೇವಿಯ ಗೌರವಸೂಚಕವಾಗಿ ಕ್ರಿ.ಶ.೧೨೯೧ರಲ್ಲಿ ಆಕೆಯ ಪಾದಪದ್ಮೋಪಜೀವಿ ಗಂಗ ಪೆರುಮಾಳೆ ದೇವರಸ ಕೊಳ್ಳಿಗನ ಘಟ್ಟಕ್ಕೆ ಆಕೆಯ ಹೆಸರನ್ನು ಇಟ್ಟು 'ಚೋಳಮಹಾದೇವಿಪುರ' ಎಂದು ಕರೆದಿದ್ದಾನೆ.

ರಾಣಿಯರು ತಮ್ಮ ರಕ್ತ ಸಂಬಂಧಿಗಳನ್ನು ಮಾಂಡಲೀಕರಾಗಿ, ಕೈಕೆಳಗಿನ ಅಧಿಕಾರಿಗಳಾಗಿ ನೇಮಿಸಿಕೊಳ್ಳುತ್ತಿದ್ದರು. ಪದ್ಮಲದೇವಿಯ ಸಹೋದರ ಇವಳ ಕೈಕೆಳಗಿನ ಅಧಿಕಾರಿಯಾಗಿ ಕಾರ್ಯನಿರ್ವಹಿಸಿತ್ತಿದ್ದ. ಈತ ಶಾಸನವೊಂದರಲ್ಲಿ ತನ್ನನ್ನು 'ಭಾವನ ಅಂಕಕಾರ; ಪದ್ಮಲದೇವಿಯ ನಿಜಗಂಧವಾರಣ' ಎಂದು ಕರೆದುಕೊಂಡಿದ್ದಾನೆ. ಮತ್ತೊಂದು ಉದಾಹರಣೆ ಎಂದರೆ, ವಿಕ್ರಮಾದಿತ್ಯನ ಅರಸಿ ಭಾಗಲದೇವಿಯ ಕೈಕೆಳಗಿನ ಅಧಿಕಾರಿಯಾಗಿದ್ದ ರಾಜಅರಸ ಎಂಬಾತನು ಈಕೆಯ ಸೋದರಮಾವನಾಗಿದ್ದ.

ಹೊಯ್ಸಳ ವಿಷ್ಣುವರ್ಧನನ ರಾಣಿ ಶಾಂತಲೆಯ ಉಲ್ಲೇಖವಿರುವ ಕ್ರಿ.ಶ.೧೧೧೭ರ ಕಾಲಕ್ಕೆ ಸೇರಿರುವ ಶಾಸನವೊಂದನ್ನು ಮಾಳಿಗೆಯೂರನ್ನಾಳುತ್ತಿದ್ದ ಬಲ್ಲೆಯನಾಯಕನೆಂಬುವನು ಹಾಕಿಸಿದ್ದಾನೆ. ಈತನು ತನ್ನನ್ನು 'ಪಿರಿಯರಸಿ ಪಟ್ಟಮಹಾದೇವಿ ಶಾಂತಲದೇವಿಯರ ಮಯ್ದುನ' ಎಂದು ಕರೆದುಕೊಂಡಿದ್ದಾನೆ. ರಾಣಿಯರ ಪಾದಪದ್ಮೋಪಜೀವಿ, ಅಂಕಕಾರ ಅಥವಾ ಇನ್ನಾವುದೋ ಸಂಬಂಧಿಯೆಂಬಂತೆ ತಮ್ಮನ್ನು ಕುರಿತು ಹೇಳಿಕೊಳ್ಳುವುದು ಆಯಾ ರಾಣಿಯರಿಗಿದ್ದ ಪ್ರಭಾವ ಗೌರವಗಳನ್ನು ತಿಳಿಸುತ್ತದೆ.

ದೇವಾಲಯ ನಿರ್ಮಾಣವು ದೊರೆಗಳ ಹಾಗೂ ಪ್ರಜೆಗಳ ಬಾಂಧವ್ಯಕ್ಕೆ ಸೇತುವೆಯಂತಿತ್ತು. ಅನೇಕ ಕಡೆಗಳಲ್ಲಿ ಪ್ರಜೆಗಳ ಕೋರಿಕೆಯ ಮೇರೆಗೆ ರಾಣಿಯರು ದೇವಾಲಯ ನಿರ್ಮಾಣ ಕೈಗೊಂಡುದುದು ತಿಳಿದುಬರುತ್ತದೆ. ಮಾಂಗೊಳ ಅಗ್ರಹಾರದ ಆಳ್ವಿಕೆ ನಡೆಸುತ್ತಿದ್ದ ಆರನೆಯ ವಿಕ್ರಮಾದಿತ್ಯನ ರಾಣಿ ಪದ್ಮಲದೇವಿಯು ಅಲ್ಲಿಯ ಮಹಾಜನರ ಕಾರುಣ್ಯವಚನಕ್ಕೆ ತಲೆಬಾಗಿ ನಾರಸಿಂಘದೇವರ ಪೂಜೆ ಜೀರ್ಣೋದ್ಧಾರಕ್ಕೆ ಹಾಗೂ ರಂಗಪುರದ ನವಮಾಲಾ ದೇವಸ್ಥಾನಕ್ಕೆ ದತ್ತಿ ನೀಡಿದ್ದಾಳೆ. ಇದೇ ಪ್ರಕಾರ ಸಿಂಧ ಮನೆತನದ ರಾಣಿ ಲಕ್ಷ್ಮಾದೇವಿಯು ಪ್ರಜೆಗಳ ಕೋರಿಕೆಯ ಮೇರೆಗೆ ಮಲ್ಲಿಕಾರ್ಜುನ ದೇವಾಲಯದ ಅಭಿವೃದ್ಧಿ ಕಾರ್ಯ ನೆರವೇರಿಸಿದ್ದಾಳೆ.

ರಾಣಿಯರು ತಾವು ನಂಬಿದ ಧರ್ಮಕ್ಕೆ ನಡೆದುಕೊಳ್ಳುತ್ತಿದ್ದರೂ, ಪ್ರಜೆಗಳ ಹಿತವನ್ನು ಕಾಪಾಡಲು ಸರ್ವಧರ್ಮ ಸಮನ್ವಯ ಕಾಪಾಡುತ್ತಿದ್ದುದಕ್ಕೆ ನಿದರ್ಶನಗಳಿವೆ. ಕಿಸುಕಾಡು ಎಪ್ಪತ್ತರ ಆಳ್ವಿಕೆ ನಡೆಸಿದ ಕದಂಬ ಅಕ್ಕಾದೇವಿ ಜೈನಧರ್ಮೀಯಳಾದರೂ ಎಲ್ಲ ಧರ್ಮವನ್ನೂ ಸಮಾನವಾಗಿ ಕಂಡು ಪುರಸ್ಕರಿಸಿ ದೇವಾಲಯ, ಬಸದಿಗಳಿಗೆ ನೀಡಿರುವ ಹಲವಾರು ದಾನಗಳ ಉಲ್ಲೇಖ ಕಂಡುಬರುತ್ತದೆ. ಇವಳು ಕ್ರಿ.ಶ.೧೦೬೪ರ ಸುಮಾರಿನಲ್ಲಿ ಬಂಕಾಪುರದ ಬಳಿಯ ಮಠವೊಂದರಲ್ಲಿ ನಡೆಯುವ ವಿದ್ಯಾಭ್ಯಾಸಕ್ಕಾಗಿ ದಾನ ನೀಡಿದ್ದಾಳೆ. ಈ ದಾನವನ್ನು ಸ್ವೀಕರಿಸಿರುವವಳು ಕಾಳಾಮುಖ ಸನ್ಯಾಸಿನಿ ಎನ್ನುವುದು ವಿಶೇಷವಾಗಿದೆ[೧೦].

ಕಿಸುಕಾಡು ೭೦ರ ರಾಜಧಾನಿಯಾಗಿದ್ದ ವಿಕ್ರಮಪುರಿಯ ನಂದಿಯಣ್ಣ ಷಡಂಗಿ ಭಟ್ಟೋಪಾಧ್ಯಾಯರ ಜೊತೆ ೪೨ ಜನ ಬ್ರಾಹ್ಮಣರಿಗೆ ಸರ್ವನಮಸ್ಯವಾಗಿ ಭೂದಾನ ನೀಡಿದ್ದಾಳೆ[೧೧]. ಸೂಡಿಯಲ್ಲಿ ಅಕ್ಕೇಶ್ವರ ದೇವಾಲಯವನ್ನು ನಿರ್ಮಾಣ ಮಾಡಿದ್ದಾಳೆ. ವಿಕ್ರಮಪುರದಲ್ಲಿ ಗುಣದ ಬೆಡಂಗಿ ಜಿನಾಲಯ ನಿರ್ಮಿಸಿ, ಅಲ್ಲಿನ ಪೂಜಾವಿಧಿಗಳಿಗೆ, ನಾಗಸೇನ ಪಂಡಿತರಿಗೆ, ಅಲ್ಲಿನ ಋಷಿಗಳಿಗೆ, ಅಜ್ಜಿಯರಿಗೆ ಭೂದಾನ ನೀಡಿದ್ದಾಳೆ.

ಹೀಗೆ ಶೈವರಿಗೆ, ಕಾಳಾಮುಖರಿಗೆ, ಬ್ರಾಹ್ಮಣರಿಗೆ, ಜೈನರಿಗೆ, ವಿದ್ಯಾರ್ಥಿಗಳಿಗೆ ಸಹಾಯ ಮಾಡಿರುವ ಅಕ್ಕಾದೇವಿ ತನ್ನ ನಾಡಿನಲ್ಲಿ ಧರ್ಮಸಮನ್ವಯವನ್ನು ಕಾಪಾಡಿ, ಎಲ್ಲ ಧರ್ಮೀಯರನ್ನೂ ಸಮಾನವಾಗಿ ಕಂಡಿರುವುದನ್ನು ಶಾಸನಗಳು ಉಲ್ಲೇಖಿಸುತ್ತವೆ. ವಿದ್ವಾಂಸರಿಗೆ ಆಶ್ರಯದಾತಳೂ, ವಿದ್ವತ್ಪ್ರೇಮಿಯೂ ಆದ ಇವಳ ರಾಜನೀತಿ,

ಶಸ್ತ್ರಾಭ್ಯಾಸಗಳನ್ನೂ ಶಾಸನಗಳು ಹೊಗಳಿವೆ. ೫೦ ವರ್ಷಗಳ ಸುದೀರ್ಘ ರಾಜ್ಯಾಡಳಿತ ನಡೆಸಿದ ಧೀರ ರಾಣಿ ಇವಳು.

ಹೊಯ್ಸಳ ವಿಷ್ಣುವರ್ಧನನ ರಾಣಿ ಶಾಂತಲೆಯ ತಂದೆ ಮಾರಸಿಂಹನು ಶೈವ, ತಾಯಿ ಮಾಚಿಕಬ್ಬೆಯು ಜೈನಳು, ಶಾಂತಲೆಯ ಪತಿ ವಿಷ್ಣುವರ್ಧನನು ಶ್ರೀವೈಷ್ಣವ ಧರ್ಮದ ಪ್ರಭಾವಕ್ಕೊಳಗಾದವನು. ಶಾಂತಲೆಯು ಸರ್ವಧರ್ಮಗಳಲ್ಲಿಯೂ ಆದರ ತೋರಿದ್ದು, ಶ್ರವಣಬೆಳಗೊಳದಲ್ಲಿನ ಸವತಿ ಗಂಧವಾರಣೆ ಬಸದಿ, ಈಶಪುರದಲ್ಲಿ ರಾಮೇಶ್ವರ ದೇವಾಲಯ, ಬೇಲೂರಿನ ಕಪ್ಪೆ ಚೆನ್ನಿಗರಾಯ ದೇವಾಲಯಗಳನ್ನು ನಿರ್ಮಿಸಿರುವುದರಲ್ಲಿ ವ್ಯಕ್ತವಾಗಿದೆ. ರಟ್ಟವಂಶದ ನಾಲ್ವಡಿ ಕಾರ್ತವೀರ್ಯನ ರಾಣಿ ಏಚಲಾದೇವಿಯು ಜೈನಳಾಗಿದ್ದರೂ ಶಿವಭಕ್ತೆಯಾಗಿದ್ದಳು. ಈಕೆಯ ಸಾಮನ್ತ ಅಂಕರಸ ಮಾಡಿಸಿದ ಅಂಕೇಶ್ವ ದೇವರಿಗೆ ದತ್ತಿಯನ್ನು ನೀಡಿದ್ದಾಳೆ.

ಕೆಳದಿ ರಾಣಿ ಚೆನ್ನಮ್ಮಳು ತನ್ನ ರಾಜ್ಯದಲ್ಲಿ ಕ್ರೈಸ್ತ ಧರ್ಮಕ್ಕೆ ಪ್ರೋತ್ಸಾಹ ಕೊಟ್ಟಿದ್ದಳು. ವ್ಯಾಪಾರ ಸಂಬಂಧವಾಗಿ ತನ್ನ ನಾಡಿಗೆ ಬರುತ್ತಿದ್ದ ಕ್ರೈಸ್ತರು ಇಲ್ಲಿ ಚರ್ಚು ಕಟ್ಟಿಕೊಳ್ಳಲು ಅವಕಾಶ ನೀಡಿದ್ದಳು. ಮುಂದೆ ಟಿಪ್ಪುವಿನ ಸೈನಿಕರ ಆಕ್ರಮಣಕ್ಕೆ ಒಳಗಾದ ಈ ಚರ್ಚ್‌ನ ವಿವರ ವಿದೇಶಿ ಪ್ರವಾಸಿಗರ ಬರಹದಲ್ಲಿ ದೊರಕುತ್ತದೆ.

ರಾಣಿಯರು ಕೇವಲ ಧಾರ್ಮಿಕ ಕಾರ್ಯಗಳಲ್ಲಷ್ಟೇ ಭಾಗವಹಿಸದೆ, ಆಡಳಿತದಲ್ಲಿಯೂ ಸಕ್ರಿಯವಾಗಿ ಭಾಗಿಯಾಗಿರುತ್ತಿದ್ದರು. ಕೃಷ್ಣದೇವರಾಯನ ಪಟ್ಟಮಹಿಷಿ ತಿರುಮಲಾದೇವಿಯು ರಾಜನ ಎಲ್ಲ ದಂಡಯಾತ್ರೆಗಳಲ್ಲೂ ಅವನೊಂದಿಗೆ ಇರುತ್ತಿದ್ದಳು. ಕೃಷ್ಣದೇವರಾಯನ ಉತ್ತರಾಧಿಕಾರಿಯನ್ನು ನೇಮಿಸುವಲ್ಲಿ ಇವಳ ಪಾತ್ರ ಹಿರಿದಾಗಿತ್ತು. ಕೃಷ್ಣದೇವರಾಯನ ಕಿರಿಯರಸಿ ಚಿನ್ನಾದೇವಿಯು ತನ್ನದೇ ಆದ ಸ್ವಂತ ಖಜಾನೆ ಹಾಗೂ ಸ್ವಂತ ಸೇವಕರನ್ನು ಹೊಂದಿದ್ದಳು. ಇವಳು ದೇವಾಲಯಗಳಿಗೆ ಮಾಡಿದ ಅಪಾರವಾದ ದಾನ, ಹಾಗೂ ಜನರ ಹಿತಾಸಕ್ತಿಗಳಿಗಾಗಿ ಮಾಡಿದ ಕೆಲಸಗಳಿಂದ ಜನತೆಯು ಇವಳನ್ನು ಪ್ರೀತಿಸುತ್ತಿದ್ದರೆಂದು ತಿಳಿದುಬರುತ್ತದೆ[೧೨&೧೩]. ಶಾಸನಗಳು ಈ ಕುರಿತಂತೆ ಹೆಚ್ಚಿನ ಮಾಹಿತಿಗಳನ್ನು ನೀಡುತ್ತವೆ. ತುಮಕೂರಿನ ಶಾಸನವೊಂದರಲ್ಲಿ ಅಲ್ಲಿನ ಮಹಾಜನರು ಈ ಹಿಂದೆ ಪ್ರೌಢದೇವರಾಯನ ಕಾಲದಲ್ಲಿ ತಮ್ಮ ಪೂರ್ವಜರಿಗೆ ಹಾಕಿಕೊಟ್ಟ ದತ್ತಿಯನ್ನು ಪುನರ್ನವೀಕರಿಸಬೇಕೆಂದು ಚಿನ್ನಾದೇವಿಯ ಮುಖಾಂತರ ಕೃಷ್ಣದೇವರಾಯನಲ್ಲಿ ಬಿನ್ನಹ ಮಾಡಿಕೊಂಡಿರುವುದು[೧೪], ಇವಳ ಅಧಿಕಾರದ ಗುರುತ್ವವನ್ನು ಸೂಚಿಸುತ್ತದೆ.

ಅರಸಿಯರು ಪ್ರಜೆಗಳೊಂದಿಗೆ ಹೊಂದಿರುತ್ತಿದ್ದ ಉತ್ತಮ ಬಾಂಧವ್ಯಕ್ಕೆ ಮತ್ತೊಂದು ಉತ್ತಮ ನಿದರ್ಶನ ಹೀಗಿದೆ. ಸಾಳ್ವ ಮನೆತನದ ಚೆನ್ನಾದೇವಿಯು ಪೋರ್ಚುಗೀಸರಿಗೆ ಸಲ್ಲಿಸುತ್ತಿದ್ದ ಕಾಣಿಕೆಯನ್ನು ನಿಲ್ಲಿಸಿದಳೆಂದು ಮಂಡಲಾಧಿಕಾರಿ ಅಲ್ಫಾನ್ಸೋ ಡಿಸೋಜ ಇವಳ ವ್ಯಾಪಾರ ಕೇಂದ್ರವಾದ ಭಟ್ಕಳವನ್ನು ಸೂರೆಮಾಡಿ, ಸುಟ್ಟು ನಾಶಪಡಿಸಿದ್ದ ವಿಚಾರ ಪೋರ್ಚುಗೀಸ್ ಇನ್ ಇಂಡಿಯಾ ಕೃತಿಯಲ್ಲಿ ದಾಖಲಾಗಿದೆ. ಇಂತಹ ಸಂದರ್ಭದಲ್ಲಿ ಅಧಿಕಾರ ವಹಿಸಿಕೊಂಡ ಚೆನ್ನಾದೇವಿಯ ಸಹೋದರಿ ಚೆನ್ನಭೈರಾದೇವಿಗೆ ನಗರವನ್ನು ಪುನರ್ನಿರ್ಮಾಣ ಮಾಡಲು ನಾಡಿನ ಸಿರಿವಂತರು ಹಾಗೂ ವರ್ತಕರು ಸಹಕಾರನೀಡಿದ್ದಾರೆ[೧೫].

ಕೆಳದಿಯ ಅರಸಿಯರಾದ ಚೆನ್ನಮ್ಮ ಹಾಗೂ ಚೆನ್ನವೀರಮ್ಮರು ರಾಜಾಡಳಿತದಲ್ಲಿ ತನ್ನ ಅಧಿಕಾರಿಗಳೊಡನೆ ಸಮಾಲೋಚನೆ ನಡೆಸಿ ಅವರ ಸಲಹೆಗಳನ್ನು ಸ್ವೀಕರಿಸಿ, ಆಡಳಿತವನ್ನು ನಡೆಸುತ್ತಿದ್ದರು. ಅಸಮರ್ಥ, ಅವಿಧೇಯ ಮತ್ತು ಲಂಚಗುಳಿ ಅಧಿಕಾರಿಗಳನ್ನು ಕೆಲಸದಿಂದ ನಿವೃತ್ತಿಗೊಳಿಸುತ್ತಿದ್ದರಲ್ಲದೆ, ಅವರ ಅಪರಾಧಗಳಿಗೆ ತಕ್ಕಂತೆ ಶಿಕ್ಷೆಯನ್ನೂ ನೀಡುತ್ತಿದ್ದರು (ಕೆಳದಿ ನೃಪವಿಜಯ). ಕೆಳದಿಯ ಚೆನ್ನಮ್ಮಳು ತನ್ನ ವಿರುದ್ಧ ನಿಂತಿದ್ದ ಸಬುನೀಸ ಕೃಷ್ಣಯ್ಯ ಹಾಗೂ ಕಾಸರಗೋಡು ತಿಮ್ಮಣ್ಣರನ್ನು ರಾಜಕೀಯ ತಂತ್ರವನ್ನು ಬಳಸಿ ತನ್ನ ಪ್ರಧಾನಿಗಳನ್ನಾಗಿ ಮಾಡಿಕೊಂಡು ಅವರ ಸಂಪೂರ್ಣ ಬೆಂಬಲ ಪಡೆದು ಚಾಣಕ್ಯನಿಗೆ ಸರಿಸಾಟಿ ಎನಿಸಿದ್ದಾಳೆ. ತನ್ನ ಅಧಿಕಾರಿ

ವರ್ಗದಲ್ಲಿದ್ದ ಮೂಡಬಿದರೆಯ ಲಿಂಗಪ್ಪನೆಂಬುವವನು ದ್ರೋಹವೆಸಗಿದ ಸಂದರ್ಭದಲ್ಲಿ ಅರಸಿ ಚೆನ್ನವೀರಮ್ಮಳು ಆತನನ್ನು ಕುಂಸಿಯಲ್ಲಿ ಸೆರೆಯಲ್ಲಿರಿಸಿದ್ದಳು.

ಬಾದಾಮಿ ಚಲುಕ್ಯರ ಕಾಲದಿಂದ ಬ್ರಿಟೀಶರ ಅಧೀನದ ಆಳ್ವಿಕೆಯವರೆಗೂ ಹಲವಾರು ರಾಜಮನೆತನಗಳ ಅರಸಿಯರು ಆಳ್ವಿಕೆ ಕೈಗೊಂಡಿರುವುದನ್ನು, ಅಧಿಕಾರದಲ್ಲಿ ಭಾಗಿಯಾಗಿರುವುದನ್ನು ಕಾಣುತ್ತೇವೆ. ಇಲ್ಲಿ ಇವರ ಪ್ರಜಾಪರ ಕಾಳಜಿ, ಧಾರ್ಮಿಕ ಸಮನ್ವಯ, ಕೈ ಕೆಳಗಿನ ಅಧಿಕಾರಿ ವರ್ಗದ ನಿಯಂತ್ರಣ ಮೊದಲಾದವುಗಳನ್ನು ಗುರುತಿಸಬಹುದು.

## ಆಳ್ವಿಕೆಯ ಅವಧಿಯಲ್ಲಿ ನಿರ್ಮಿಸಿದ ಕೆರೆ ಕಾಲುವೆ

ಕೌಟಿಲ್ಯನ ಅರ್ಥಶಾಸ್ತ್ರ ತಿಳಿಸುವಂತೆ ಕೆರೆ ಕಾಲುವೆ ನಿರ್ಮಿಸುವುದು ರಾಜನ ಪ್ರಮುಖ ಕರ್ತವ್ಯಗಳಲ್ಲೊಂದಾಗಿದೆ. ಅಷ್ಟೇಅಲ್ಲ ಕಟ್ಟಿಸುವವರಿಗೆ ಹಣ ಮತ್ತು ಉಪಕರಣಗಳನ್ನು ನೀಡಿ ಸಹಕರಿಸಬೇಕು ಎಂಬ ವಿಚಾರಗಳನ್ನೂ ಸಹ ಸಂಹಿತೆಗಳು ತಿಳಿಸುತ್ತವೆ. ಕೆರೆಯ ನಿರ್ಮಾಣದಷ್ಟೇ ಅದರ ನಿರ್ವಹಣೆಯ ಜವಾಬ್ದಾರಿ ಕೂಡ ಬಹಳ ಮುಖ್ಯವಾದದ್ದು. ಕೆರೆಯ ನೀರಿನ ಶುಚಿತ್ವ ಕಾಪಾಡಿಕೊಳ್ಳುವ, ಹಾಳಾದ ಕೆರೆಯ ಜೀರ್ಣೋದ್ಧಾರ ಕೈಗೊಳ್ಳುವ ಕುರಿತಾಗಿ ಸಹ ಸಂಹಿತೆಗಳಲ್ಲಿ ಹಲವಾರು ವಿಚಾರಗಳನ್ನು ಕಾಣುತ್ತೇವೆ. ಪ್ರಾಚೀನ ಕಾಲದಿಂದಲೂ ಕೃಷಿಯೇ ಮುಖ್ಯ ಕಸುಬಾಗಿದ್ದುದರಿಂದ ಅದಕ್ಕೆ ಅಗತ್ಯವಾದ ನೀರಾವರಿ ವ್ಯವಸ್ಥೆ ಕಲ್ಪಿಸುವುದು ರಾಜರಿಗೆ ಅತ್ಯವಶ್ಯಕವಾಗಿತ್ತು. ನಗರ ನಿರ್ಮಾಣವಾಗಬೇಕಾದಲ್ಲಿ ಕೆರೆಯ ನಿರ್ಮಾಣ ಅಗತ್ಯವಾಗಿತ್ತು. ಕನ್ನಡ ನಾಡಿನ ರಾಣಿಯರು ಕೇವಲ ದಾನಶೀಲೆಯರು, ಆಡಳಿತ ಚತುರೆಯರಷ್ಟೇ ಆಗಿರಲಿಲ್ಲ, ಲೋಕೋಪಕಾರ ದೃಷ್ಟಿಯುಳ್ಳವರೂ ಆಗಿದ್ದರು. ಅಂತೆಯೇ ಕೃಷಿ ಕಾರ್ಯಗಳಿಗೆ ಅನುಕೂಲವಾಗುವಂತೆ ಕೆರೆಗಳನ್ನು ಕಟ್ಟಿಸಿದರು. ಅಗ್ರಹಾರ–ದೇವಾಲಯಗಳ ನಿರ್ಮಾಣದೊಂದಿಗೆ ಕೆರೆಗಳ ಅಗತ್ಯವನ್ನೂ ಗಮನಿಸಿ ದೇವಾಲಯಗಳೊಂದಿಗೆ ತೀರ್ಥದ ಕೆರೆ–ಕಲ್ಯಾಣಿಗಳು, ವಾಸಯೋಗ್ಯವಾದ ಅಗ್ರಹಾರ ನಿರ್ಮಾಣದೊಂದಿಗೆ ಕೆರೆ–ಕಾಲುವೆಗಳನ್ನೂ ಕಟ್ಟಿಸಿದರು.

ಕರ್ನಾಟಕದ ಅರಸಿಯರು ನಿರ್ಮಿಸಿರುವ ಅಸಂಖ್ಯಾತ ಕೆರೆಗಳನ್ನು ನಾಡಿನಾದ್ಯಂತ ಕಾಣಬಹುದು. ಇವುಗಳಲ್ಲಿ ಅನೇಕ ಕೆರೆಗಳ ನಿರ್ಮಾಣದ ವಿಚಾರವನ್ನು ತಿಳಿಸುವ ಶಾಸನಗಳೂ ಲಭಿಸುತ್ತವೆ. ಯೆರೆಯಂಗನ ಮಡದಿ ಮಹಾದೇವಿ ಮುತ್ತಣ್ಣ ಪೊಸವೂರಿನಲ್ಲಿ ಕಟ್ಟಿಸಿದ ಕೆರೆ[೧೬], ಕಲ್ಯಾಣ ಚಾಲುಕ್ಯ ತ್ರಿಭವನಮಲ್ಲ ಜಯಸಿಂಹ ಮಗಳು ಮೋಚಲದೇವಿ ಸಕಲೇಶಪುರದ ಹಳೇಬೇಲೂರಿನಲ್ಲಿ ನಿರ್ಮಿಸಿದ ಮೋಚಲಸಮುದ್ರ ಎಂಬ ಕೆರೆ, ಸಾಂತರ ರಾಣಿ ಚಟ್ಟಲದೇವಿಯು ಹೊಂಬುಜದಲ್ಲಿ ನಿರ್ಮಿಸಿದ ಕೆರೆ.[೧೭] ·ಶಿಡ್ಲಘಟ್ಟದಲ್ಲಿ ಕೆಂಪೇಗೌಡನ ಪತ್ನಿ ಹಲಸೂರಮ್ಮ ಕಟ್ಟಿಸಿದ ಕೆರೆ, ಪೆರ್ಬಾಳನ್ನು ಆಳುತ್ತಿದ್ದ ಭುಜಬ್ಬರಸಿ ಹೆಬ್ಬಾಳಿನಲ್ಲಿ ಕಟ್ಟಿಸಿದ ಕೆರೆ ಮೊದಲಾದವು ಅರಸಿಯರು ನಿರ್ಮಿಸಿದ ಕೆರೆಗಳಿಗೆ ಉದಾಹರಣೆಯನ್ನಾಗಿ ನೋಡಬಹುದು. ಅರಸಿಯರಷ್ಟೇ ಅಲ್ಲದೆ ಗಾವುಂಡಿಯರು, ದಣ್ಣಾಯಕ, ಪ್ರಧಾನಿ ಮೊದಲಾದ ಪ್ರಭಾವಿ ವ್ಯಕ್ತಿಯರ ಮಡದಿ, ತಾಯಿ, ಸಹೋದರಿಯರು ನಿರ್ಮಿಸಿದ ಅಸಂಖ್ಯಾತ ಕೆರೆಗಳ ಉಲ್ಲೇಖ ಕಂಡುಬರುತ್ತವೆ.

ಅರಸಿಯರು ಸ್ವತಃ ನಿರ್ಮಿಸುತ್ತಿದ್ದ ಕೆರೆಗಳಷ್ಟೇ ಅಲ್ಲದೆ, ತಮ್ಮ ಕೈಕೆಳಗಿನ ಅಧಿಕಾರಿಗಳು ನಿರ್ಮಿಸುತ್ತಿದ್ದ ಕೆರೆಗಳಿಗೆ ಧನಸಹಾಯ, ಭೂಮಿ, ತೆರಿಗೆ ಮೊದಲಾದವುಗಳನ್ನು ಕೊಡುವುದರ ಮೂಲಕ ಸಹಕಾರ ನೀಡಿರುವ ದಾಖಲೆಗಳೂ ಹಲವಾರು ದೊರಕುತ್ತದೆ. ಹೊಯ್ಸಳ ಅರಸಿ ಉಮಾದೇವಿಯು ತನ್ನ ಅಧಿಕಾರಿ ಕಟ್ಟಿಸಿದ ಕೆರೆಗೆ ಸಮಸ್ತ ತಿಪ್ಪೆಸುಂಕ, ಆಲೆವೆತ್ತ, ಮಾನೆಣ್ಣೆ, ಹಂದರವಣ, ಪೊಡೆಮೆಳಸು, ಅರಿಸಿ, ಅಡಕೆಯ ಹೇರು, ಸೀರೆಯ ಮಳವೆ, ಎಲೆಯ ಹೇರಿನ ಆಯಗಳನ್ನೆಲ್ಲಾ ಬಿಟ್ಟಿದ್ದಾಳೆ[೧೮].

ಕೆಲವೊಂದು ಕೆರೆಗಳ ನಿರ್ಮಾಣದೊಂದಿಗೆ ಕೆಲವು ರೋಚಕ ವಿಚಾರಗಳು ದೊರಕುತ್ತವೆ. ತಳಂಗೆರೆಯ ಮೋಚಬ್ಬರಸಿಯು ಪಾಳುಭೂಮಿಯನ್ನು ಹಸಿರಾಗಿಸಲು ಕಾಲುವೆಯನ್ನು ತೋಡಿಸಿ, ತಟಾಕಗಳನ್ನು ನಿರ್ಮಿಸಿ ನೀರಿನ ವ್ಯವಸ್ಥೆಮಾಡಿದ ವಿಚಾರವು ಸುಂದರ ಶಾಸನ ಕಾವ್ಯದಲ್ಲಿ ಬಣ್ಣಿತವಾಗಿದೆ[೧೯]. ನೊಳಂಬ ಅರಸಿ ಧರ್ಮಮಹಾದೇವಿಯು ತಾನು ಬೆದ್ದುಗೊಂದೆಯಲ್ಲಿ ಕಟ್ಟಿಸಿದ ಕೆರೆಗೆ ನೀರು ಬಂದ ಸಂಭ್ರಮದಲ್ಲಿ ಕೆರೆಯನ್ನು ಕಟ್ಟಿದಾತನಿಗೆ ಕಡಗವನ್ನು ತೊಡಿಸಿ, 'ಪೊನ್ನೇರದೊಡ್ಡ'ನೆಂದು ತಮ್ಮ ಪೂರ್ವಜರ ಹೆಸರನ್ನಿಟ್ಟು ಮರ್ಯಾದೆ ಮಾಡಿದ ವಿಚಾರವನ್ನು ಕಂಬದೂರಿನ ಶಾಸನವು ತಿಳಿಸುತ್ತದೆ[೨೦].

ನಗರವನ್ನು ಹೊಸದಾಗಿ ನಿರ್ಮಿಸಿ ಅಥವಾ ಪ್ರತಿನಾಮವನ್ನು ಕೊಟ್ಟು ಕೆರೆಯನ್ನು ನಿರ್ಮಿಸಿರುವುದನ್ನು ಕಾಣುತ್ತೇವೆ. ಅರಸಿ ಕಟ್ಟಿಸಿದ ಕರೆಯ ಕಾರಣದಿಂದಲೇ ಊರಿಗೆ ಅರಸೀಕೆರೆ ಎಂಬ ಹೆಸರು ಬಂದಿರುವುದನ್ನು ಗುರುತಿಸಬಹುದು. ಇಲ್ಲಿನ ಕೆರೆಯನ್ನು ಎರೆಯಂಗನ ಮಡದಿ ಮಹಾದೇವಿ ಕಟ್ಟಿಸಿದಳೆಂದು ತಿಳಿದುಬರುತ್ತದೆ[೨೧]. ಎಂಬ ಅಭಿಪ್ರಾಯವೂ ಇದೆ. ಹಾಸನ ತಾಲ್ಲೂಕಿನ ಶಾಂತಿಗ್ರಾಮದ ಶಾಸನದಲ್ಲಿ ಅರಸಿಕಟ್ಟೆ ಎಂಬ ಕೆರೆಯ ನಿರ್ಮಾಣ ಕುರಿತಂತೆ ಪ್ರಸ್ತಾಪವಿರುವುದನ್ನು ಕಾಣಬಹುದು.

ವಿಜಯನಗರದ ಅರಸ ಬುಕ್ಕರಾಯನ ಮಗಳಾದ ವಿರುಪಾದೇವಿಯ ಮಗಳು ಜೊಮ್ಮದೇವಿಯು ಪೆನುಗೊಂಡೆಯ ತಿರುಮಣಿ ಹಳ್ಳಿಯಲ್ಲಿ ಕಾಲುವೆ ನಿರ್ಮಾಣ ಮಾಡಿಸಿದ್ದು, ಈ ಕಾಲುವೆ ನಿರ್ಮಾಣಕ್ಕಾಗಿ ೧೩೦ ಗದ್ಯಾಣ, ಕೆಲವು ಭೂಮಿನೀಡಲಾಗಿದೆಯಲ್ಲದೆ, ಕಾರ್ಯವು ಯಶಸ್ವಿಯಾದ ನಂತರ ಕುದುರೆ ಹಾಗೂ ಕಡಗವನ್ನಿತ್ತು ಸನ್ಮಾನಿಸಲಾಗಿದೆ. ಆದರೆ ಗುತ್ತಿಗೆ ನೀಡಿದ ಸಂದರ್ಭದಲ್ಲಿ ಕಾಲುವೆಯಲ್ಲಿ ನೀರು ಬಾರದಿದ್ದಲ್ಲಿ ಈ ಎಲ್ಲ ಕೊಡುಗೆಯನ್ನೂ ಹಿಂದಿರುಗಿಸಬೇಕು ಜೊತೆಗೆ ನಿರ್ಮಾಣಕಾರ್ಯಕ್ಕೆ ಆದ ವೆಚ್ಚವನ್ನೂ ಗುತ್ತಿಗೆದಾರರೇ ಭರಿಸಬೇಕೆಂಬ ಒಪ್ಪಂದವನ್ನು ಮಾಡಿಕೊಳ್ಳಲಾಗಿತ್ತು ಎನ್ನುವ ವಿಚಾರ ವಿಶಿಷ್ಟವಾಗಿದೆ. ಕಾಲುವೆ ನಿರ್ಮಾಣವಾಗಿ ನೀರು ಬಂದ ಸಂದರ್ಭದಲ್ಲಿ ಮೇಲೆ ಉಲ್ಲೇಖಿಸಿದ ಕೊಡುಗೆಯನ್ನು 'ದಶವಂದ'ವಾಗಿ ನೀಡಿ ಸನ್ಮಾನಿಸಿದ ವಿಚಾರವೂ ಈ ಶಾಸನದಿಂದ ತಿಳಿದುಬರುತ್ತದೆ[೨೨]. ಈ ಶಾಸನದಲ್ಲಿನ ಕರಾರು ಹಾಗೂ ನೀರು ಬಂದ ನಂತರ ಗುತ್ತಿಗೆದಾರರಿಗೆ ಮಾಡಿದ ಸನ್ಮಾನ ಕಾಲುವೆ ನಿರ್ಮಾಣದಲ್ಲಿ ಅರಸಿಯೋರ್ವಳು ತೋರಿಸಿದ ಕಾಳಜಿಯನ್ನು ತಿಳಿಸುತ್ತದೆ.

ಕೆರೆಗಳ ನಿರ್ಮಾಣದ ಹಿಂದೆ ಕೇವಲ ರಾಜಕೀಯ ಕರ್ತವ್ಯವಷ್ಟೇ ಅಲ್ಲದೆ ಧಾರ್ಮಿಕ ಕಾಳಜಿಯೂ ಇರುತ್ತಿತ್ತು. ಸಾಮಾಜಿಕ ಕಳಕಳಿಯೆಂದು ಬಗೆಯುತ್ತಿದ್ದರು. ದೇವಾಲಯ, ಬಸದಿಗಳ ನಿರ್ಮಾಣದೊಂದಿಗೆ ನಡೆಯುತ್ತಿದ್ದ ಕೆಲವು ಕೆರೆ, ತೀರ್ಥಗಳ ಹಿನ್ನೆಲೆಯಲ್ಲಿ ಇಂತಹ ಭಾವನೆಗಳನ್ನು ಗುರುತಿಸಬಹುದು. ಶಾಂತಲೆಯು ಎಳಸನ ಕಟ್ಟದ ಕೆರೆಯನ್ನು ಕಟ್ಟಿಸಿ ಅದನ್ನು ತಾನು ನಿರ್ಮಿಸಿದ ಸವತಿ ಗಂಧವಾರಣ ಬಸದಿಗೆ ಸಮರ್ಪಿಸಿದ್ದಾಳೆ. ನೊಳಂಬಾಧಿರಾಜ ಮಹೇಂದ್ರನ ರಾಣಿ ದೀವಬ್ಬರಸಿಯು, ಆವನಿಯಲ್ಲಿ ನೊಳಂಬನಾರಾಯಣೇಶ್ವರ ದೇವಾಲಯದೊಂದಿಗೆ ಕೊಳವನ್ನೂ, ಪೊಱಲ್ಚೋರ ಮಂಗಲದಲ್ಲಿ ದೀವಬ್ಬೆ ಸಮುದ್ರವನ್ನೂ ಕಟ್ಟಿಸಿದ್ದಾಳೆ[೨೩]. ಹೊಯ್ಸಳ ಮೊದಲನೆಯ ನರಸಿಂಹನ ಆಳ್ವಿಕೆಯಲ್ಲಿ ನಂದಿಹಳ್ಳಿ ಪ್ರದೇಶದಲ್ಲಿ ಸಾತಲೆ ನಾಯಿಕಿತಿಯು ಸಾತಲೇಶ್ವರ ದೇವರ ಪ್ರತಿಷ್ಠೆ ಮಾಡಿ ಕೆರೆಕಟ್ಟಿಸಿದ್ದಾಳೆ. ನಿಡಗಲ್ಲಿನ ಚಿಕ್ಕತಿಪ್ಪರಾಜೇಂದ್ರನ ರಾಣಿ ಲಕ್ಷ್ಮಿ ಕೆರೆಯನ್ನು ನಿರ್ಮಿಸಿ ಭೂದಾನಗಳನ್ನು ನೀಡಿದ್ದಾಳೆ.

ಕೇವಲ ತಮ್ಮ ಶ್ರೇಯಸ್ಸಿಗಾಗಿ ಅಲ್ಲದೆ ಇತರರ ಪರೋಕ್ಷ ವಿನಯವಾಗಿ ಕೆರೆಯನ್ನು ಕಟ್ಟಿಸಿರುವುದನ್ನೂ ಕಾಣುತ್ತೇವೆ. ಹೊಯ್ಸಳ ಚಿಕ್ಕಶಾಂತಲೆಯ ತಾಯಿ ಜಕ್ಕಿಯಬ್ಬೆಯು ತನ್ನ ಮಗಳ ಹಾಗೂ ಮೊಮ್ಮಗಳ ಪರೋಕ್ಷವಿನಯವಾಗಿ ಕಟ್ಟಿಸಿದ ದೇವಾಲಯಗಳೊಂದಿಗೆ ತೀರ್ಥದ ಕೆರೆಯನ್ನೂ ನಿರ್ಮಿಸಿದ್ದಾಳೆ. ಮಗನ

ಹೆಸರಿನಲ್ಲಿ ಕೆರೆಯನ್ನು ನಿರ್ಮಿಸಿದ ಮಹಾಪ್ರಧಾನಿ ಬೂಚಿರಾಜ ತಾಯಿ ಮಾಕಣವ್ವೆ ಮೊದಲಾದವರನ್ನು ಇಲ್ಲಿ ಗಮನಿಸಬಹುದು.

ತಾವು ಇತರರ ಹೆಸರಿನಲ್ಲಿ ಕೆರೆ, ಕಾಲುವೆಯನ್ನು ನಿರ್ಮಿಸಿದಂತೆ ಇತರರಿಗೂ ಕೆರೆ ನಿರ್ಮಿಸುವಂತೆ ಬುದ್ಧಿಮಾತನ್ನು ಹೇಳುತ್ತಿದ್ದ ಅರಸು ಮನೆತನದ ಹಾಗೂ ಅಧಿಕಾರಿವರ್ಗದ ಮಹಿಳೆಯರನ್ನು ಕಾಣಬಹುದು. “ಕೆರೆಯಂ ಕಟ್ಟಿಸು ಬಾವಿಯಂ ಸವೆಸು...” ಎಂದು ಕಿವಿಮಾತು ಹೇಳಿರುವ ಬೆಳೆಸಿದ ಅಮಾತ್ಯ ಲಕ್ಷ್ಮೀಧರನ ತಾಯಿ ಸಿಂಗಲೆಯಂತಹ ಹಲವಾರು ಮಹಿಳೆಯರು ಕಂಡುಬರುತ್ತಾರೆ. ತಾನು ಸತ್ತ ನಂತರ ತನ್ನ ಕುರಿತಾಗಿ ಯೋಚಿಸದೆ ಪ್ರಜೆಗಳ ಹಿತಕ್ಕಾಗಿ ಕೆರೆಯನ್ನು ನಿರ್ಮಿಸುವುದರಲ್ಲಿ ಗಮನಹರಿಸಬೇಕೆಂದು ಮಗನಿಗೆ ಬುದ್ದಿವಾದ ಹೇಳಿದ ಹರ್ಯಲೆ, ತನಗೆ ಉದಕದಾನದ ಫಲ ದೊರಕಬೇಕೆಂದು ಸಾಯುವಗಳಿಗೆಯಲ್ಲಿ ಅಪೇಕ್ಷಿಸಿ ಕೆರೆಯ ನಿರ್ಮಾಣಕ್ಕೆ ಕಾರಣಳಾದ ಸಾಗುಳದ ರಾಜಿಗಾವುಂಡನ ಹೆಂಡತಿ ಸೋರಿಗಾವುಂಡಿ[೨೪] ಮೊದಲಾದ ನಾಯಕಿಯರ ಸಮಾಜಮುಖಿ ಕಾರ್ಯಗಳೂ, ಮಕ್ಕಳಿಗೆ ಹೇಳಿದ ಕಿವಿಮಾತು ಆದರ್ಶವಾಗಿದೆ.

ಕೆರೆ – ಕಾಲುವೆಯ ನಿರ್ಮಾಣದ ಹಿಂದಿರುವ ಒಪ್ಪಂದ ರಾಣಿಯರ ವ್ಯವಹಾರಗುಣಕ್ಕೆ ಸಾಕ್ಷಿಯಾಗಿದೆ. ವಿಜಯನಗರದ ಜೊಮ್ಮದೇವಿಯು ಕಾಲುವೆಯ ಕಾಮಗಾರಿಯ ಗುತ್ತಿಗೆಯನ್ನು ಪಡೆದವರೊಂದಿಗೆ ಕಾಲುವೆಯಲ್ಲಿ ನೀರು ಬಾರದಿದ್ದಲ್ಲಿ ತಾನು ಅದಕ್ಕಾಗಿ ನೀಡಲಿರುವ ಕೊಡುಗೆಯನ್ನೂ ಹಿಂದಿರುಗಿಸಬೇಕು ಜೊತೆಗೆ ನಿರ್ಮಾಣಕಾರ್ಯಕ್ಕೆ ಆದ ವೆಚ್ಚವನ್ನೂ ಗುತ್ತಿಗೆದಾರರೇ ಭರಿಸಬೇಕೆಂದು ಮಾಡಿಕೊಂಡ ಒಪ್ಪಂದವು ಅರಸಿಯರ ಕಾಳಜಿ, ಜವಾಬ್ದಾರಿಗಳನ್ನು ತಿಳಿಸುತ್ತದೆ. ಇಂಥ ಜನೋಪಯೋಗಿ ಕೆಲಸ ಮಾಡುವ ರಾಣಿಯು ತನ್ನ ಅಧಿಕಾರಿಗಳಿಗೆ ಹಾಗೂ ಸಾಮಂತರಿಗೆ ಮಾದರಿಯಾಗಿರುವುದನ್ನೂ ಇಂಥ ಶಾಸನಗಳು ತಿಳಿಸುತ್ತವೆ. ಯೆರೆಯಂಗನ ಮಡದಿ ಮಹಾದೇವಿ ಮುತ್ತಣ್ಣ ಪೊಸವೂರಿನಲ್ಲಿ ಕೆರೆ ಕಟ್ಟಿಸಿದ ವಿಚಾರ ತಿಳಿಸುವ ಶಾಸನವು ಅವಳ ಅಧಿಕಾರಿವರ್ಗದವರ ನಿಷ್ಠೆಯನ್ನು ಸಮರ್ಥರೀತಿಯಲ್ಲಿ ಬಳಸಿಕೊಂಡ ಅರಸಿಯ ವೈಖರಿಯನ್ನು ತಿಳಿಸುತ್ತದೆ. ಊರಿನಲ್ಲಿ ಜನರು ಕೊಡುತ್ತಿದ್ದ ದಂಡರೂಪದ ಉತ್ಪನ್ನವನ್ನು ಕೆರೆಗಳ ನಿರ್ಮಾಣ ಹಾಗೂ ನಿರ್ವಹಣೆಗಳಿಗೆ ವಿನಿಯೋಗಿಸಲೆಂದು ಹೊರಡಿಸುತ್ತಿದ್ದ ಆಜ್ಞೆ, ವಿಶಿಷ್ಟ ತೆರಿಗೆಯ ಹಣವನ್ನು ಕೆರೆಯ ನಿರ್ವಹಣೆಗೆಂದು ಬಿಡುತ್ತಿದ್ದ ನಿರ್ಣಯಗಳ ಹಲವಾರು ಉದಾಹರಣೆಗಳು ಅರಸಿಯರು ಕೆರೆಗಳ ನಿರ್ಮಾಣ ಹಾಗೂ ನಿರ್ವಹಣೆಗಾಗಿ ರೂಪಿಸಿದ ಯೋಜನೆ, ಕೈಗೊಂಡ ಕಾರ್ಯಗಳನ್ನು ತಿಳಿಸುತ್ತವೆ.

## ವ್ಯಾಪಾರ–ವಾಣಿಜ್ಯ

ರಾಜ್ಯದ ಬೊಕ್ಕಸ ತುಂಬಿಸುವಲ್ಲಿ, ವಾಣಿಜ್ಯ–ವ್ಯಾಪಾರಗಳು ಪ್ರಮುಖ ಪಾತ್ರ ವಹಿಸುತ್ತಿತ್ತು. ಅರಸಿಯರು ಇಂತಹ ಕಾರ್ಯಗಳಿಗೆ ಪ್ರೋತ್ಸಾಹ ನೀಡಿರುವುದನ್ನು ಕಾಣುತ್ತೇವೆ. ವೀರಬಲ್ಲಾಳನ ರಾಣಿ ಕೇತಲದೇವಿ ಕುಂದವಾಡದ ವ್ಯಾಪಾರಿ ಸಂಘಗಳಿಗೆ, ಮಹಾಜನರಿಗೆ ಅನುಕೂಲವಾಗುವಂತೆ ಕುಂದವಾಡದಲ್ಲಿ ಸಂತೆಯನ್ನು ಸ್ಥಾಪಿಸಿದಳು[೨೫]. ತನ್ನ ಅಧಿಕಾರಿಗಳೊಂದಿಗೆ ‘ನನ್ನಿ ಕಂಬ’ವನ್ನು ಪ್ರತಿಷ್ಠಾಪಿಸಿ, ಬುಧವಾರದಂದು ಸಂತೆ ನಡೆಸಲಾಗುವಂತೆ ಅನುವು ಮಾಡಿಕೊಟ್ಟಳೆಂಬ ವಿಚಾರವನ್ನು ಈ ದಾಖಲೆ ತಿಳಿಸುತ್ತದೆ.

ಕಲ್ಯಾಣದ ಚಾಲುಕ್ಯರ ಸಾಮಂತ ಬೊಪ್ಪಣ್ಣನ ಅರಸಿ ಸಿರಿದೇವಿಯಕ್ಕಳೂ ಧರ್ಮಸಂತೆಯೊಂದನ್ನು ಸ್ಥಾಪಿಸಿದ್ದಳು. ಇದು ಆನೆ ಕುದುರೆ ಮಾಣಿಕ ಮುಂತಾದವುಗಳ ವ್ಯಾಪಾರ ನೆಡಸಬಹುದಾಗಿದ್ದ ಹಿರಿಯ ಮಟ್ಟದ ಸಂತೆಯಾಗಿತ್ತು[೨೬]. ತನ್ನ ಊರಿನ ಆದಾಯವೂ ಇದರಿಂದ ಹೆಚ್ಚಾಗುವುದನ್ನು ಮನಗಂಡಿದ್ದ ಅರಸಿಯು ಇಂತಹ ಕಾರ್ಯಗಳಿಗೆ ಪ್ರೋತ್ಸಾಹ ನೀಡುತ್ತಿದ್ದರು.

ಆಳುಪ ರಾಣಿ ಪಾಂಡ್ಯಮಹಾದೇವಿಯು ತನ್ನ ಆಡಳಿತ ಸಂದರ್ಭದಲ್ಲಿ, ವ್ಯಾಪಾರಕ್ಕೆ ನೀಡಿದ ಮಹತ್ವವನ್ನೂ, ತೋರಿಸಿದ ಆಸಕ್ತಿಯನ್ನು ಕುರಿತು ಉಡುಪಿಯ ಕೋಟಕೇರಿಯ ಕ್ರಿ.ಶ. ೧೧೫೫ರ ಶಾಸನ ತಿಳಿಸುತ್ತದೆ[೨೭]. ಅಲ್ಲಿನ ವ್ಯಾಪಾರಿ ವರ್ಗಕ್ಕೆ ಇದು ಅನುಕೂಲ ವಾಗುತ್ತಿದ್ದುದಲ್ಲದೆ, "ಆ ಊರನಾಳ್ವ ಪಾಂಡ್ಯಮಹಾದೇವಿಯರ ನಕರಸಮೂಹ" ಎಂಬ ವಾಕ್ಯವು ಅರಸಿಯು ತನ್ನದೇ ಆದ ವರ್ತಕ ಸಂಘವೊಂದನ್ನು ಹೊಂದಿದ್ದಳು ಎಂಬುದನ್ನು ತಿಳಿಸುತ್ತದೆ.

ವ್ಯಾಪಾರಿಗಳಿಂದ ನಾಡಿನ ಆದಾಯ ಹೆಚ್ಚುತ್ತಿತ್ತು. ಇವರಿಂದ ಕೇವಲ ಆದಾಯವನ್ನು ಮಾತ್ರ ಅಪೇಕ್ಷಿಸದೆ ಅವರಿಗೆ ಪ್ರೋತ್ಸಾಹ ನೀಡುವುದು ಹಾಗೂ ಅವರ ಹಿತಾಸಕ್ತಿಯನ್ನು ಗಮನಿಸುವುದೂ ಸಹ ದೊರೆಗಳ ಕರ್ತವ್ಯವಾಗಿತ್ತು. ರಾಜ್ಯದ ಆರ್ಥಿಕ ಸ್ಥಿತಿ–ಗತಿಗಳ ಸಮತೋಲನವು ಯುದ್ಧ ಹಾಗೂ ವ್ಯಾಪಾರಗಳ ಮೇಲೆ ಅವಲಂಬಿತವಾಗಿರುತ್ತಿತ್ತು. ಇತರ ರಾಜ್ಯಗಳ ಮೇಲಿನ ಗೆಲುವು ಬೊಕ್ಕಸ ತುಂಬಿಸುತ್ತಿತ್ತಾದರೂ, ಸೈನ್ಯದ ಖರ್ಚು ನಿಭಾಯಿಸಬೇಕಾಗುತ್ತಿತ್ತು. ಯುದ್ಧದಲ್ಲಿ ಅನುಭವಿಸುತ್ತಿದ್ದ ಸೋಲು ಕೇವಲ ರಾಜ್ಯದ ಬೊಕ್ಕಸಕ್ಕೆ ಉಂಟಾಗುತ್ತಿದ್ದ ಹಾನಿಯಷ್ಟೇ ಆಗಿರದೆ, ಯುದ್ಧ ನಡೆದ ಪ್ರದೇಶ ಸುತ್ತಮುತ್ತಣ ಗ್ರಾಮಗಳು ಹಾನಿಗೊಳಗಾಗುತ್ತಿದ್ದವು. ಇಂತಹ ಸಂದರ್ಭದಲ್ಲಿ ಅವುಗಳ ಪುನರುಜ್ಜೀವನಗೊಳಿಸುವ ಜವಾಬ್ದಾರಿಯನ್ನು ಸ್ವತಃ ರಾಣಿಯೇ ವಹಿಸುತ್ತಿದ್ದಳೆಂಬುದಕ್ಕೂ ಉದಾಹರಣೆಗಳು ಕಂಡುಬರುತ್ತವೆ[೨೮].

ಗೇರುಸೊಪ್ಪೆಯನ್ನಾಳುತ್ತಿದ್ದ ಚನ್ನಭೈರಾದೇವಿ ಹಾಗೂ ಪೋರ್ಚುಗೀಸರ ನಡುವೆ ನಡೆದ ಸಮರದಲ್ಲಿ ಗೋವೆಯ ರಾಜ್ಯಪಾಲ, ಅಲ್ಫಾನೋ ಡಿಸೋಜಾ ಎಂಬುವ ತನ್ನ ಅಧಿಕಾರಿಯೊಂದಿಗೆ ೧೨೦೦ ಸೈನಿಕ ಬಲದೊಂದಿಗೆ ಭಟ್ಕಳದಲ್ಲಿದ್ದ ರಾಣಿಯ ಅರಮನೆಯನ್ನು ಸಂಪೂರ್ಣ ಸೂರೆಮಾಡಿ ಸುಟ್ಟು ನಾಶಪಡಿಸಲು, ಅಲ್ಲಿನ ವರ್ತಕ ಸಂಘದವರು ಹಾಗೂ ವ್ಯಾಪಾರಿಗಳು ನಗರವನ್ನು ಪುನರ್‌ನಿರ್ಮಾಣ ಮಾಡಲು ಸಹಕರಿಸಿದರು. ಇದು ಸಮುದ್ರತೀರದ ವ್ಯಾಪಾರಕ್ಕೆ ರಾಣಿಯು ಬೆಂಬಲವಿತ್ತಂತೆ, ಅಲ್ಲಿನ ವರ್ತಕರು ರಾಣಿಗೆ ಬೆಂಬಲ ನೀಡಿದ್ದನ್ನು ಸೂಚಿಸುವುದಲ್ಲದೆ, ಆ ಕಾಲದ ಮೌಲ್ಯಗಳ ಬಗ್ಗೆ ಬೆಳಕು ಚೆಲ್ಲುತ್ತದೆ.

ಕ್ರಿ.ಶ.೧೭೫೫ರಲ್ಲಿ ಕಣ್ಣಾನೂರಿನ ಸುಲ್ತಾನ ಆಲಿರಾಜ ಸಮುದ್ರಮಾರ್ಗವಾಗಿ ಬಂದು ಮಂಜೇಶ್ವರದ ಬಂದರು ವ್ಯಾಪಾರಿಗಳನ್ನೂ ಹಾಗೂ ಕೊಲ್ಲೂರು ದೇವಾಲಯದ ನಗನಾಣ್ಯಗಳನ್ನು ದೋಚಲು, ರಾಣಿ ಚನ್ನವೀರಮ್ಮಾಜಿಯು ಕೂಡಲೆ ತನ್ನ ಸುಸಜ್ಜಿತವಾದ ಸೈನ್ಯವನ್ನು ಅಲ್ಲಿನ ವ್ಯಾಪಾರಿಗಳ ಬೆಂಬಲಕ್ಕೆ ಕಳುಹಿಸಿದಳು, ಆದರೆ ಅಷ್ಟರಲ್ಲಿ ವ್ಯಾಪಾರಿಗಳನ್ನು ದೋಚಿದ್ದ ಶತ್ರುಗಳು ಅಲ್ಲಿಂದ ಪಲಾಯನ ಮಾಡಿದ್ದರು. ಅಷ್ಟಕ್ಕೇ ಸುಮ್ಮನಾಗದ ರಾಣಿಯು ಮಲಬಾರಿಗೆ ರಾಜ್ಯದಿಂದ ಅಕ್ಕಿಯನ್ನು ರವಾನಿಸಕೂಡದೆಂದು ಆದೇಶನೀಡಿದಳು.

ವರ್ತಕರ ಸಮೂಹ ರಾಜ್ಯಾಡಳಿತದಲ್ಲಿ ಪ್ರವೇಶಿಸುತ್ತಿತ್ತು. ವ್ಯಾಜ್ಯಗಳನ್ನು ಬಗೆಹರಿಸುವಲ್ಲಿ ರಾಣಿಗೆ ಸಹಕರಿಸುತ್ತಿದ್ದುದನ್ನು ಕಾಣುತ್ತೇವೆ. ರಾಣಿ ಅಬ್ಬಕ್ಕಳ ಆಡಳಿತದಲ್ಲಿ ತಲೆದೋರಿದ ಧಾರ್ಮಿಕ ಸಂಘರ್ಷದ ಒಂದು ವ್ಯಾಜ್ಯವನ್ನು ಬಗೆಹರಿಸಲು ವರ್ತಕಸಂಘ ಹಾಗೂ ಮಠಾಧಿಪತಿಗಳು ಮಧ್ಯಸ್ಥಿಕೆ ವಹಿಸಿದ್ದನ್ನು ಶಕ ೧೪೯೬ ಕಾಲಕ್ಕೆ ಸೇರಿದ ತಾಮ್ರಶಾಸನವೊಂದು[೨೮ಅ] ಅನಾವರಣ ಗೊಳಿಸಿದೆ. ಬಿದಿರೆಯಲ್ಲಿ ಜಂಗಮರು ಪೂಜಿಸುತ್ತಿದ್ದ ವೀರೇಶ್ವರನನ್ನು ಕಿತ್ತು ಹಾಕಿದ್ದಕ್ಕೆ ಪ್ರತಿಕಾರವಾಗಿ ನೆಲ್ಲಿ ತೀರ್ಥದಲ್ಲಿ ಬ್ರಾಹ್ಮಣರ ಪೂಜೆಗೆ ಅಡ್ಡಿಪಡಿಸಿದ ಈ ವ್ಯಾಜ್ಯದ ಮಧ್ಯಸ್ಥಿಕೆಯನ್ನು ನಗರದ ಹಲವು ಸೆಟ್ಟಿಗಾರರು ಮತ್ತು ರತ್ನಪ್ಪ ಸೆಟ್ಟಿ ಎಂಬ ವ್ಯಾಪಾರಿಯು ಬಾಳೆಹಳ್ಳಿ ಮಠದ ಕುಮಾರ ಚೆನ್ನಬಸವರೊಂದಿಗೆ ಸಮಸ್ಯೆ ಬಗೆಹರಿಸಿ, ಆನಂತರ ತಮ್ಮ ತೀರ್ಮಾನವನ್ನು ಅರಸಿಗೆ ತಿಳಿಸಿ ಅವಳ ಒಪ್ಪವನ್ನು ಪಡೆದಿದ್ದಾರೆ.

ವಿದೇಶೀ ವ್ಯಾಪಾರದಲ್ಲಿ ಕರ್ನಾಟಕದ ರಾಣಿಯರ ಪಾತ್ರವನ್ನೂ ಗಮನಿಸಬಹುದು. ಆಳುಪ ವೀರ ಪಾಂಡ್ಯದೇವನ ಮರಣಾನಂತರ ಆಳ್ವಿಕೆ ವಹಿಸಿಕೊಂಡ ಆತನ ರಾಣಿ ಬಲ್ಲಮಹಾದೇವಿಯು ವ್ಯಾಪಾರ, ವ್ಯವಹಾರಗಳಿಗೆ ಹೆಚ್ಚಿನ ಪ್ರೋತ್ಸಾಹ ನೀಡಿ ಪಶ್ಚಿಮ ಸಮುದ್ರಾಧಿಪತಿಯಾಗಿದ್ದಳು.  ಆ ಕಾಲದಲ್ಲಿ ಸಮುದ್ರದ ಮೇಲೆ ನಡೆಯುತ್ತಿದ್ದ ಎಲ್ಲ ರೀತಿಯ ಕಾರ್ಯಚಟುವಟಿಕೆಗಳ ಮೇಲೂ ಈಕೆ ಹಿಡಿತ ಸಾಧಿಸಿದ್ದಳು.  ಬೃಹತ್ ಪ್ರಮಾಣದ ವ್ಯಾಪಾರದ ಮೇಲಿನ ನಿಯಂತ್ರಣ ಸಾಧಿಸಬೇಕಿದ್ದ ಅರಸಿಗೆ ದೇಶೀಯ ವ್ಯಾಪಾರಿಗಳಷ್ಟೇ ಅಲ್ಲದೆ ಸಾಮ್ರಾಟರು ಹಾಗೂ ವಿದೇಶಿಗರೊಂದಿಗಿನ ಉತ್ತಮ ಬಾಂಧವ್ಯ ಕೂಡ ಅತ್ಯಂತ ಮಹತ್ವದ್ದಾಗಿತ್ತು. ಇಂತಹ ಕಾರ್ಯವನ್ನು ಸೂಕ್ತರೀತಿಯಲ್ಲಿ ನಿಭಾಯಿಸಿ ತೋರಿಸಿದ ಕರಾವಳಿ ಪ್ರದೇಶದ ಕೆಲವು ಅರಸಿಯರಂತೆ ಅರಸಿ ಬಲ್ಲಮಹಾದೇವಿಯೂ ಸಮರ್ಥ ಆಡಳಿತಗಾರ್ತಿ ಎಂಬುದನ್ನು ನಿರೂಪಿಸಿದ್ದಳು.

ಇವಳ ಕಾಲದಲ್ಲಿ ಬಾರಕೂರು, ಬಸರೂರು ಪಟ್ಟಣಗಳು ತುಳುನಾಡಿನ ಪ್ರಧಾನ ವಾಣಿಜ್ಯ ಕೇಂದ್ರಗಳಾಗಿದ್ದವು. ಆಡಳಿತ ಸೌಕರ್ಯಕ್ಕಾಗಿ ಆ ನಗರವನ್ನು ಹತ್ತು ಕೇರಿಗಳಾಗಿ ವಿಭಜಿಸಲಾಗಿತ್ತು. ಮೂರುಕೇರಿ, ಚೌಳಿಯಕೇರಿ ಮಣಿಗಾರ ಕೇರಿ, ಕೋಟೆ ಕೇರಿ, ಪಡುವ ಕೇರಿಗಳ ಪ್ರಸ್ತಾಪವು ಆ ಕಾಲದ ಅನೇಕ ಶಾಸನಗಳಲ್ಲಿ ಕಂಡುಬರುತ್ತದೆ. ಪ್ರತಿಯೊಂದು ಕೇರಿಯಲ್ಲೂ ಸೆಟ್ಟಿಕಾರ ಮತ್ತು ನಖರಹಂಜಮಾನ (ವ್ಯಾಪಾರಿ) ಸಂಘಗಳಿದ್ದವು.

ಅರಬ ದೇಶದಿಂದ ಜಾತಿಕುದುರೆಗಳನ್ನು ಆಮದು ಮಾಡಿಕೊಳ್ಳಲು ಸಾಮ್ರಾಜ್ಯದ ಅಧಿಕಾರಿಗಳು ಮಂಗಳೂರು, ಬಾರಕೂರು ಮೊದಲಾದ ಬಂದರುಗಳನ್ನು ಉಪಯೋಗಿಸುತ್ತಿದ್ದರು. ಇವರ ಮೇಲೆ ವಿಧಿಸಲಾಗುತ್ತಿದ್ದ ಸುಂಕ ಈ ತೀರ ಪ್ರದೇಶಗಳನ್ನು ಆಳುತ್ತಿದ್ದ ಅರಸರ ಬೊಕ್ಕಸ ತುಂಬಿಸಲು ಕಾರಣವಾಗುತ್ತಿತ್ತು. ಹೀಗೆ ಅರಸಿ ಬಲ್ಲಮಹಾದೇವಿಯು ವ್ಯಾಪಾರ ವಹಿವಾಟುಗಳಿಂದ ರಾಜ್ಯವು ಸಂಪದ್ಭರಿತವಾಗಿರುವಂತೆ ನೋಡಿಕೊಂಡಳಲ್ಲದೆ ಪೂರ್ವದಿಂದ ನಡೆದುಕೊಂಡು ಬಂದ ವ್ಯವಹಾರಕ್ಕೆ ಚ್ಯುತಿಬಾರದಂತೆ ಆಡಳಿತ ನಿರ್ವಹಿಸಿದಳು.

ಮಹಾಮಂಡಲೇಶ್ವರಿ ಎನಿಸಿದ್ದ ಪದುಮಲದೇವಿಯು ಕ್ರಿ.ಶ.೧೫೨೮–೧೫೪೦ರವರೆಗೆ ಹೊನ್ನಾವರದಿಂದ ಆಳ್ವಿಕೆ ನಡೆಸುತ್ತ ಹೈವೆ ತುಳು ಕೊಂಕಣ ಮೊದಲಾದ ಸಮಸ್ತ ರಾಜ್ಯಗಳನ್ನು ಪ್ರತಿಪಾಲಿಸುತ್ತಿದ್ದವಳು. ಪೋರ್ಚುಗೀಸರು ಇವಳ ಕಾಲದಲ್ಲಿ ವ್ಯಾಪಾರವನ್ನು ಆರಂಭಿಸಿದರು. ಕೊಚ್ಚಿಯ ಕ್ಯಾಪ್ಟನ್ ಅಫಾನ್ಸೋ ಮೆಕ್ಸಿಯಾ ಎಂಬುವವನು ಪೋರ್ಚುಗಲ್ಲಿನ ತನ್ನ ಮಹಾರಾಜನಿಗೆ ಬರೆದ ಪತ್ರವೊಂದರ ಒಕ್ಕಣೆಯಿಂದ ರಾಣಿ ಪದುಮಲದೇವಿಯ ವ್ಯಾಪಾರ ವಿಚಾರ ತಿಳಿದುಬರುತ್ತದೆ. ಇವಳ ಕಾಲದಲ್ಲಿ ವಿದೇಶಗಳೊಂದಿಗಿನ ಸಾಂಬಾರ ಪದಾರ್ಥಗಳ ವ್ಯಾಪಾರ ಬಿರುಸಾಗಿ ಸಾಗಿತ್ತು. "ಬೆಟಕಾಲಿಯ ಮತ್ತು ಗೋವಾ ನಡುವೆ ಓನೋರ್ (ಹೊನ್ನಾವರ), ಮೆರ್ಜಿನ್ (ಮಿರ್ಜಾನ) ಮತ್ತು ಅಂಕೋಲಾ ಎಂಬ ಹೆಸರಿನ ಸ್ಥಳಗಳಿವೆ. ಇಲ್ಲಿಂದ ಪ್ರತಿವರ್ಷವೂ ೫೦೦೦ ಕ್ರುಸೆಡೋ ಬೆಲೆಯ ಮೆಣಸು ದಿಯೂ, ಆಮೇಜ್ ಮತ್ತು ಜೆಡ್ಡಾಗಳಿಗೆ ಹಡಗಿನಲ್ಲಿ ಹೋಗುತ್ತದೆ. ಮೂರರ ಹಡಗುಗಳು ಅದನ್ನು ಒಯ್ಯುತ್ತವೆ. ಈ ಸ್ಥಳಗಳು ಗೇರುಸೊಪ್ಪೆಯ ರಾಣಿಯ ಅಧಿಕಾರಕ್ಕೆ ಒಳಪಟ್ಟಿವೆ. ಅವಳು ನರಸಿಂಗರಾಜನ (ವಿಜಯನಗರ) ಅಧೀನಳಾಗಿದ್ದಾಳೆ. ಈ ಮೆಣಸು ಕೊಚ್ಚಿನ್‌ನಲ್ಲಿ ದೊರಕುವುದಕ್ಕಿಂತಲೂ ದೊಡ್ಡದು. ಆದರೆ ಅದರಷ್ಟು ಖಾರವಿಲ್ಲ. ನಾವು ಇದನ್ನು ಸಂಗ್ರಹಿಸಬೇಕೆಂದು ತೋರುತ್ತದೆ. ರಾಣಿಯೊಂದಿಗೆ ಒಂದು ಒಪ್ಪಂದ ಮಾಡಿಕೊಂಡು ಅದನ್ನು ಮಾಡಬಹುದು" ಎಂಬ ದಿ ಪೋರ್ಚುಗೀಸ್ ಇನ್ ಇಂಡಿಯಾ ಸಂಪುಟ ಒಂದರ ವರದಿಯನ್ನು (ಪು.೧೪೪) ಗಮನಿಸಬಹುದು[೨೯]. ಇದರಿಂದ ನಿಚ್ಚಳ ಆಗುವಂತೆ, ಪದುಮಲದೇವಿಯ ಕಾಲದಲ್ಲಿ ವಾಣಿಜ್ಯವು ಭರದಿಂದ ಸಾಗಿತ್ತು.

ಪದುಮಲದೇವಿಯ ಆಡಳಿತದಲ್ಲಿ "ಒಳಭಾಗಗಳಿಂದ ಪಶ್ಚಿಮ ಕರಾವಳಿಯ ಅಂಕೋಲ ಮಿರ್ಜಾನ ಹೊನ್ನಾವರ ಭಟ್ಕಳ ಬೈಂದೂರು ಬಸ್ರೂರು ಮಂಗಳೂರು ಮತ್ತು ಕುಂಬ್ಳೆ ಮೊದಲಾದ ಪಟ್ಟಣಗಳಿಗೆ ಕೃಷಿ ಉತ್ಪನ್ನಗಳು ಕಾವಡಿಗಳ ಮೂಲಕ ಸಾಗುತ್ತಿದ್ದುವು. ಒಂದು ಉದ್ದನೆಯ ಕೋಲಿಗೆ ಎರಡೂ ತುದಿಗಳಲ್ಲಿ ಹಗ್ಗದಿಂದ ಸರಕನ್ನು

ನೇತುಹಾಕಿ, ಹೆಗಲ ಮೇಲೆ ಹೊತ್ತು ಒಯ್ಯುವುದೇ ಕಾವಡಿ/ ತಲೆಹೊರೆಗಳು, ಕುದುರೆ ಹೇರುಗಳು, ಎತ್ತಿನ ಹೇರುಗಳು, ಬಂಡಿಗಳು ಮತ್ತು ಹೇರು ಕತ್ತೆಗಳೂ ಉಪಯೋಗವಾಗುತ್ತಿದ್ದವು. ಕರ್ನಾಟಕದ ಈ ಮುಖ್ಯ ಬಂದರುಗಳಲ್ಲಿ ಪೋರ್ಚುಗೀಸ್ ವರ್ತಕರು ಅಕ್ಕಿ, ಸಕ್ಕರೆ, ಸಾಂಬಾರ ವಸ್ತುಗಳು, ಹತ್ತಿಯ ಬಟ್ಟೆ, ಮೊದಲಾದುವನ್ನು ಕೊಂಡು ವಿದೇಶಗಳಿಗೆ ಹಡಗುಗಳ ಮೂಲಕ ರವಾನಿಸುತ್ತಿದ್ದರು. ಬಸ್ರೂರು ಬಾರಕೂರು ಮತ್ತು ಮಂಗಳೂರು ಬಂದರುಗಳಿಂದ ಮಾಲ್ದೀವ್ ದ್ವೀಪಗಳು, ಏಡನ್ ಮತ್ತು ಆರ್ಮಜ್‌ಗಳಿಗೆ ಅಕ್ಕಿಯು ರಫ್ತಾಗುತ್ತಿತ್ತು[೩೦].

ಮಹಾಮಂಡಲೇಶ್ವರಿ ರಾಣಿ ಪದುಮಲದೇವಿಯ ಆಳ್ವಿಕೆಯಲ್ಲಿ ವಿದೇಶಿ ವ್ಯಾಪಾರ ವಹಿವಾಟು ಭರದಿಂದ ಸಾಗಿತ್ತು. ಒಳ್ಳೆಯ ಆದಾಯ ಬರುತ್ತಿತ್ತು. ಯುದ್ಧಗಳಿರಲಿಲ್ಲವಾಗಿ ಪ್ರಭು–ಪ್ರಜೆಗಳು ನೆಮ್ಮದಿಯ ಬದುಕಿನಿಂದ ಸುಖ ಕಂಡರು. ಹಾಡುವಳ್ಳಿ–ಗೇರುಸೊಪ್ಪೆ ರಾಜ್ಯಗಳನ್ನು ಪ್ರಗತಿಪಥಕ್ಕೆ ಹೊರಳಿಸಿದ ಮೊದಲ ರಾಣಿ ಪದುಮಲದೇವಿ. ಇದು ಇತಿಹಾಸದಲ್ಲಿ ದಾಖಲಾಗಬೇಕಾದ ದೊಡ್ಡ ಸಾಧನೆ ಎಂದು ಕಮಲಾಹಂಪನಾ ಅವರು ಪ್ರತಿಪಾದಿಸುತ್ತಾರೆ[೩೧].

ಕೆಳದಿ ಸಂಸ್ಥಾನವು ಆಫ್ರಿಕದ ಕಾಂಗೋ, ಅರೇಬಿಯಾದ ಮಸ್ಕತ್ ಮತ್ತು ಯೂರೋಪಿನ ಮೆಡಿಟರೇನಿಯನ್ ಸಮುದ್ರ ತೀರದ ದೇಶಗಳೊಡನೆ ವ್ಯಾಪಕವಾದ ವ್ಯಾಪಾರ ವ್ಯವಸ್ಥೆಯನ್ನಿಟ್ಟುಕೊಂಡಿತ್ತು. ಅರಬ್ಬಿ ಕಡಲ ತೀರದಲ್ಲಿ ಮಂಗಳೂರು, ಹೊನ್ನಾವರ ಮಲ್ಪೆ, ಕುಂದಾಪುರ, ಕಾರವಾರ, ಮತ್ತು ಭಟ್ಕಳಗಳು ಮುಖ್ಯ ಬಂದರು ಕಟ್ಟೆಗಳಾಗಿದ್ದವು. ಒಳನಾಡಿನ ನದಿಗಳ ಮೂಲಕವೂ ವ್ಯಾಪಾರ ವಹಿವಾಟು ನಡೆಯುತ್ತಿತ್ತು. ದೋಣಿಗಳಿಗೆ ಮಣಿವೆ ಎಂದು ಕರೆಯುತ್ತಿದ್ದರು. ಒಳನಾಡಿನ ವ್ಯಾಪಾರವು ಸಾಮಾನ್ಯವಾಗಿ ಹೇರೆತ್ತುಗಳ ಮೂಲಕ ನಡೆಯುತ್ತಿತ್ತು. ವ್ಯಾಪಾರಿಗಳು ನೂರಾರು ಎತ್ತುಗಳ ಗುಂಪಿನೊಂದಿಗೆ ಊರಿಂದೂರಿಗೆ ಪ್ರಯಾಣ ಮಾಡುತ್ತಿದ್ದರು. ೫೦ ಎತ್ತುಗಳ ಒಂದು ಗುಂಪಿಗೆ 'ಎತ್ತುನಡೆ' ಎಂಬ ಹೆಸರಿತು. ಈ ಹೇರೆತ್ತುಗಳಲ್ಲಿ ಅಡಿಕೆ, ಮೆಣಸಿನಕಾಯಿ, ಕೊಬ್ಬರಿ, ಉಪ್ಪು ಬೆಲ್ಲ ಎಣ್ಣೆ, ತಂಬಾಕು, ಜವಳಿ, ಗೋದಿ, ಕಡಲೆಯ ಭೂಸಾ ಮುಂತಾದ ವಸ್ತುಗಳನ್ನು ಸಾಗಿಸುತ್ತಿದ್ದರು[೩೨]. ಬಿದನೂರಿನಿಂದ ಪಶ್ಚಿಮ ಕರಾವಳಿಯ ರೇವುಪಟ್ಟಣಗಳಿಗೆ ಅತ್ಯುತ್ತಮವಾದ ರಾಜಮಾರ್ಗಗಳಿದ್ದವು. ಒಳನಾಡಿನಲ್ಲಿಯೂ ಉತ್ತಮ ರಸ್ತೆಗಳಿದ್ದು ಅಲ್ಲಲ್ಲಿ ಸುಂಕದ ಕಟ್ಟೆಗಳಿದ್ದವು.

ವ್ಯಾಪಾರದಿಂದ ಲಾಭವಾಗುವುದಷ್ಟೇ ಅಲ್ಲದೆ, ಅದನ್ನು ಸಮರ್ಥವಾಗಿ ನೆರವೇರಿಸದಿದ್ದಲ್ಲಿ ಆಗುತ್ತಿದ್ದ ನಷ್ಟವು ದುಪ್ಪಟ್ಟಾಗಿರುತ್ತಿತ್ತು. ಇಂಥವರಿಗೆ ಶತ್ರುಗಳನ್ನು ನಿಗ್ರಹಿಸುವ ಛಲ–ಬಲ ಬಹು ಮುಖ್ಯವಾಗಿರಬೇಕಿತ್ತು. ಕರಿಮೆಣಸಿಗೆ ಬಹಳ ಬೇಡಿಕೆ ಒಡ್ಡಿದ್ದ ಪೋರ್ಚುಗೀಸರು ಗೋವಾದಲ್ಲಿ ತಳವೂರಿ ಸಮುದ್ರ ಕಳ್ಳತನಕ್ಕೆ ಕುಖ್ಯಾತರಾಗಿದ್ದರು.

ಪೋರ್ಚುಗೀಸರು ಭಾರತವನ್ನು ಪ್ರವೇಶಿಸಿದ್ದು ಮಹಾಮಂಡಲೇಶ್ವರಿ ಪದುಮಲದೇವಿಯ ಆಳ್ವಿಕೆಯಲ್ಲಿ. ಕ್ರಿ.ಶ.೧೫೨೮– ೧೫೪೦ಕಾಲದಲ್ಲಿ ಹೊನ್ನಾವರದಿಂದ ಆಳ್ವಿಕೆ ನಡೆಸುತ್ತ ಹೈವೆ ತುಳು ಕೊಂಕಣ ಮೊದಲಾದ ಸಮಸ್ತ ರಾಜ್ಯಗಳನ್ನು ಪ್ರತಿಪಾಲಿಸುತ್ತಿದ್ದ ಪದುಮಲದೇವಿಯು ಶರತ್ತುಬದ್ದ ವ್ಯಾಪಾರವನ್ನು ಆರಂಭಿಸಿ ತನ್ನ ವರ್ತಕರಿಗೂ ಪ್ರಜೆಗಳಿಗೂ ರಕ್ಷಣೆ ಒದಗಿಸಿದ್ದಳು.

ಇವಳ ನಂತರದ ಕಾಲದಲ್ಲಿ ಬಂದ ಪ್ರಸಿದ್ಧ ರಾಣಿ ಚೆನ್ನಭೈರಾದೇವಿ ಕರಾವಳಿ ತೀರದ ಹೊನ್ನಾವರ, ಭಟ್ಕಳದಂಥ ಅಂತರಾಷ್ಟ್ರೀಯ ಮಹತ್ವದ ಬಂದರುಗಳ ನಾಡು ಹಾಗೂ ಮಿರ್ಜಾನ ಬೈಂದೂರು, ಅಂಕೋಲೆಗಳಂಥ ಒಳನಾಡನ್ನು ಜೋಡಿಸುವ ಚಿಕ್ಕರೇವುಗಳ ಪ್ರದೇಶಗಳ ಒಡೆತನ ಹೊಂದಿದ್ದಳು. ಇವಳಿಗೂ ಮುನ್ನ ಆಳ್ವಿಕೆ ನಡೆಸಿದ ಭೈರಾದೇವಿಯ ಕಾಲದಲ್ಲಿ ನಿಯಂತ್ರಣಕ್ಕೆ ಸಿಗದೆ ಪೋರ್ಚುಗೀಸರಿಂದ ಸಾಕಷ್ಟು ತೊಂದರೆ ಅನುಭವಿಸಿದ ಘಟನೆಗಳಿಂದ ಚೆನ್ನಭೈರಾದೇವಿಯು ಎಚ್ಚೆತ್ತಿದ್ದಳು. ಕಿರುಕುಳ ಕೊಡಲಾರಂಭಿಸಿದ

ಪೋರ್ಚುಗೀಸರನ್ನು ಅರಸಿ ಚೆನ್ನಭೈರಾದೇವಿಯು ಕೆಲವೊಮ್ಮೆ ಯುದ್ಧದಲ್ಲಿ, ಕೆಲವೊಮ್ಮೆ ಸಂಧಾನದ ಮುಖಾಂತರ ನಿಯಂತ್ರಣದಲ್ಲಿಟ್ಟುಕೊಂಡಿದ್ದಳು. ಇವರನ್ನು ಎದುರಿಸಲು ಅರಸಿಯು ವಿಜಾಪುರ ಮತ್ತು ಕಾಲಿಕತ್ತದ ಝಾಮೋರಿನನೊಡನೆ ಯುದ್ಧ ಸಹಾಯಗಳಿಗಾಗಿ ಒಪ್ಪಂದ ಮಾಡಿಕೊಂಡಿದ್ದಳು. ಹೊನ್ನಾವರವನ್ನು ವಶಪಡಿಸಿಕೊಳ್ಳಲು ಬಂದ ಪೋರ್ಚುಗೀಸರನ್ನು ಸಂಪೂರ್ಣವಾಗಿ ಮಣ್ಣುಮುಕ್ಕಿಸಿ ಅವರಿಗೆ ತಾನು ನೀಡಿದ್ದ ನಿವೇಶನಗಳನ್ನೂ ಫ್ಯಾಕ್ಟರಿಗಳನ್ನೂ ನೆಲಸಮ ಮಾಡಿ ಹೊರದೂಡಿದಳು.

ಚೆನ್ನಭೈರಾದೇವಿಯ ವ್ಯಾಪಾರ ಚತುರತೆ, ಅಪಾರ ಅಗತ್ಯಗಳನ್ನು ಪೂರೈಸುತ್ತಿದ್ದ ಚಾಕಚಕ್ಯತೆಯನ್ನು ಮನಗಂಡ ಪೋರ್ಚುಗೀಸರು ಅರಸಿಯನ್ನು 'ರೈನಾ–ಡಾ–ಪಿಮೆಂಟಾ' (ಕರಿಮೆಣಸಿನ ರಾಣಿ) ಎಂದು ಕರೆದರು. ಪೋರ್ಚುಗೀಸರೊಂದಿಗಷ್ಟೇ ಅಲ್ಲದೆ ಅರಬಸ್ತಾನ್, ಪರ್ಷಿಯ ದೇಶಗಳೊಂದಿಗೆ ಸಹ ಚೆನ್ನಭೈರಾದೇವಿಯು ಸ್ವತಂತ್ರ ವಾಣಿಜ್ಯ ಸಂಪರ್ಕ ಹೊಂದಿದ್ದಳು.

ಕೆಳದಿಯ ಚೆನ್ನಮ್ಮಾಜಿಯೂ ಕೂಡ ಸಮುದ್ರವ್ಯಾಪಾರ ನಡೆಸುತ್ತಿದ್ದಳು. ಹಿರಿಯ ಸೋಮಶೇಖರನಾಯಕನ ಕಾಲದಲ್ಲಿ ಕುಂದಾಪುರ, ಹೊನ್ನಾವರ ಮತ್ತು ಮಂಗಳೂರು ನಗರಗಳಲ್ಲಿ ವ್ಯಾಪಾರ ಕೇಂದ್ರ ತೆರೆಯಲು ಅನುಮತಿ ಪಡೆದುಕೊಂಡಿದ್ದ ಪೋರ್ಚುಗೀಸರು ಚನ್ನಮ್ಮಾಜಿಯು ಅಧಿಕಾರ ವಹಿಸಿಕೊಂಡಮೇಲೆ ಹೆಂಗಸೆಂಬ ಉದಾಸೀನದಿಂದ ಎರಡು ವ್ಯಾಪಾರಿ ಹಡಗುಗಳನ್ನು ಸ್ವಾಧೀನಪಡಿಸಿಕೊಂಡು ಅವುಗಳಲ್ಲಿದ್ದ ಸರಕನ್ನು ಮಾರಿಕೊಂಡರು. ಇವರ ವರ್ತನೆಯಿಂದ ಕುಪಿತಗೊಂಡ ಚನ್ನಮ್ಮ ಸಮಯ ಸಾಧಿಸಿ ಕರಾವಳಿ ತೀರದಲ್ಲಿ ಆಹಾರ ಸಂಗ್ರಹಣೆಗಾಗಿ ಹೋಗಿದ್ದ ಪೋರ್ಚುಗೀಸರ ಹಡಗುಗಳನ್ನು ವಶಪಡಿಸಿಕೊಂಡಳು. ಇದಕ್ಕೆ ಪ್ರತಿಯಾಗಿ ಪೋರ್ಚುಗೀಸರು ಯುದ್ಧದ ಬೆದರಿಕೆಯೊಡ್ಡಿದರೂ ಕದಲದ ಚನ್ನಮ್ಮಳಿಕೆ ಮಣಿದ ಪೋರ್ಚುಗೀಸರು ತಾವು ಹಿಡಿದ ಚನ್ನಮ್ಮಳ ಹಡಗುಗಳಿಗೆ ಪರಿಹಾರ ಧನವನ್ನು ಪಾವತಿಸಿ ತಮ್ಮ ಹಡಗುಗಳನ್ನು ಬಿಡಿಸಿಕೊಂಡರು. ಇದು ೧೬೭೪ರಲ್ಲಿ ಚನ್ನಮ್ಮ ಕೆಂಪುಜಲಸಂಧಿಗೆ ತೆರಳಿದ ಸಂದರ್ಭದಲ್ಲಿ ನಡೆದ ಘಟನೆಯಾಗಿದೆ.

ಪೋರ್ಚುಗೀಸರಿಂದ ಬೇಡಿಕೆ ಇದ್ದರೂ, ಅರಬ್ ವ್ಯಾಪಾರಗಾರರಿಗೆ ಅಕ್ಕಿ ರಫ್ತುಮಾಡಿದುದನ್ನು ಖಂಡಿಸಿದ ಪೋರ್ಚುಗೀಸರೊಂದಿಗೆ ಚೆನ್ನಮ್ಮಾಜಿಯು ಒಪ್ಪಂದ ಮಾಡಿಕೊಂಡು ತನ್ನ ಇತರ ವ್ಯಾಪಾರ ವ್ಯವಹಾರಗಳಿಗೆ ಅವರು ಮೂಗು ತೂರಿಸದ ಹಾಗೆ ದೂರವಿರಿಸಿದಳು.

ಕೆಳದಿಯ ಚೆನ್ನವೀರಮ್ಮಳ ಕಾಲದಲ್ಲಿಯೂ ಬಿರುಸಾಗಿ ಸಾಗಿದ್ದ ಸಮುದ್ರದಮೇಲಿನ ವ್ಯಾಪಾರವು ಬಹು ಆದಾಯಕರವಾಗಿತ್ತು. ವ್ಯವಸಾಯೋತ್ಪನ್ನ ವಸ್ತುಗಳಾದ ಹೊಗೆಸೊಪ್ಪು, ಕಾಳುಮೆಣಸು, ಭತ್ತ, ಅಕ್ಕಿ ಅಡಿಕೆ, ತೆಂಗು, ಸಾಂಬಾರ ಪದಾರ್ಥಗಳು ಮತ್ತು ಗೋಡಂಬಿಗಳಲ್ಲದೆ ಚಿನ್ನ, ರತ್ನಾಭರಣ, ದಂತ ಶ್ರೀಗಂಧ ಮೊದಲಾದ ಬಹು ಅಮೂಲ್ಯ ವಸ್ತುಗಳಿಗೂ ವಿದೇಶದಲ್ಲಿ ಬೇಡಿಕೆಗಳಿದ್ದು, ಕೆಳದಿಗೆ ಸೇರಿದ ಬಂದರಿನ ಮೂಲಕ ವ್ಯಾಪಾರ ವಹಿವಾಟುಗಳಿಗೆ ಅವಕಾಶ ಮಾಡಿಕೊಟ್ಟಿದ್ದ ಚನ್ನವೀರಮ್ಮಾಜಿಯು ಕಡಲ್ಗಳರು ಮೊದಲಾದ ದರೋಡೆಕೋರ ರಿಂದ ಹಾಗೂ ವಿದೇಶೀ ಶಕ್ತಿಗಳಿಂದ ರಕ್ಷಣೆ ನೀಡಲು ಬಸವಪ್ಪನಾಯಕನ ಕಾಲದ ಕೋಟೆಗಳನ್ನು ಭದ್ರಗೊಳಿಸಿದಳು, ಮಿರಿಂಜನಗಢದ ಕೋಟೆಯನ್ನು ಮರಾಠರಿಂದ ಬಿಡಿಸಿಕೊಂಡಳು.

ಚೆನ್ನವೀರಮ್ಮಾಜಿಯ ಕಾಲದಲ್ಲಿ ಪೋರ್ಚುಗೀಸರು ಅಡಿಕೆ, ತಂಬಾಕುಗಳೊಂದಿಗೆ ಚಿನ್ನಾಭರಣಗಳು, ಸೊರಬ ಸಾಗರ ಸಿರ್ಸಿಗಳಲ್ಲಿ ತಯಾರಾಗುತ್ತಿದ್ದ ಶ್ರೀಗಂಧದ ಕೆತ್ತನೆ ವಸ್ತುಗಳಿಗೆ ಬೇಡಿಕೆಯಿಡುತ್ತಿದ್ದರು. ಅವರ ಅಗತ್ಯಗಳನ್ನು ಪೂರೈಸಿ ಅವರಿಂದ ಯುದ್ಧ ಸಾಮಗ್ರಿಗಳನ್ನು ಕೊಳ್ಳುತ್ತಿದ್ದಳು. ಈ ಎಲ್ಲ ಸಾಮಗ್ರಿಗಳಿಗಿಂತಲೂ ಅಕ್ಕಿಯ ವ್ಯಾಪಾರವೇ ಪ್ರಧಾನ ವಾಗಿರುತ್ತಿತ್ತು. ಪೋರ್ಚುಗೀಸರೊಂದಿಗೆ ಯಾವುದೇ ವೈಮನಸ್ಯ ಉಂಟಾದರೂ ಚೆನ್ನವೀರಮ್ಮಾಜಿಯು ಅಕ್ಕಿ ಮಾರಾಟವನ್ನು ನಿಲ್ಲಿಸುವುದರ ಮೂಲಕ ನಿಯಂತ್ರಿಸುತ್ತಿದ್ದಳು.

ಇವಳ ಕಾಲದಲ್ಲಿ ಬ್ರಿಟೀಶರೊಂದಿಗಿನ ವ್ಯಾಪಾರವೂ ಆರಂಭವಾಗಿತ್ತು. ಇವಳು ಇಂಗ್ಲೀಷರಿಗೆ ಕಾರವಾರದಲ್ಲಿ ಕೋಠಿಯೊಂದನ್ನು ಕಟ್ಟಿಕೊಳ್ಳಲು ಅನುಮತಿ ನೀಡಿದ್ದಳು. ಇಂಗ್ಲೀಷ್ ವ್ಯಾಪಾರಿ ಕಂಪೆನಿಗೆ ಫರ್ಮಾನೊಂದನ್ನು ನೀಡಿ ಕೆಲವು ಪ್ರಮುಖ ವಸ್ತುಗಳಿಗೆ ಶೇಕಡಾ ಒಂದೂವರೆಯಷ್ಟು ತೆರಿಗೆಯನ್ನು ವಿಧಿಸಿದಳು. ೧೮೭೧ರಲ್ಲಿ ನಿರೂಪವೊಂದನ್ನು ಹೊರಡಿಸಿ ರಾಣಿಯು ತನ್ನ ರಾಜ್ಯದಲ್ಲಿ ಇಂಗ್ಲೀಷರು ಹಸು ಎತ್ತುಗಳನ್ನೂ ಕೊಲ್ಲಬಾರದೆಂದೂ, ಜನರನ್ನು ಹಿಂಸಿಸಬಾರದೆಂದೂ ಆಜ್ಞೆಮಾಡಿದ್ದಳು.

ಹೀಗೆ ಪ್ರಾಚೀನ ಕಾಲದಿಂದಲೂ ಕನ್ನಡ ನಾಡಿನಲ್ಲಿ ನಡೆಯುತ್ತಿದ್ದ ವ್ಯಾಪಾರ–ವಾಣಿಜ್ಯ ಸಂಬಂಧಿ ವ್ಯವಹಾರಗಳಿಗೆ ರಾಜ ಮನೆತನದ ಕೊಡುಗೆ ಇದ್ದು, ರಾಜ್ಯಾಡಳಿತ ನಡೆಸಿದ ರಾಣಿಯರೂ ಸಹ ತಮ್ಮದೇ ಆದ ಕೊಡುಗೆಗಳನ್ನು ನೀಡಿದ್ದಾರೆ. ಅವಶ್ಯಕ ನೀತಿ–ನಿಯಮಾವಳಿಗಳನ್ನು ರೂಪಿಸಿ ವ್ಯವಹಾರಕ್ಕೆ ಉತ್ತೇಜನ ನೀಡಿದ್ದಾರೆ ಅಲ್ಲದೆ ಅಗತ್ಯ ಬಿದ್ದಾಗ ಹೋರಾಟವನ್ನೂ ನಡೆಸಿದ್ದಾರೆ.

### *ತೆರಿಗೆ–ಕಂದಾಯ*

ರಾಜ್ಯದಲ್ಲಿ ವಿಧಿಸಲಾದ ವಿವಿಧ ರೂಪದ ತೆರಿಗೆಗಳು, ರಾಜ್ಯದ ಬೊಕ್ಕಸಕ್ಕೆ ಮುಖ್ಯವಾದ ಆದಾಯವಾಗಿರುತ್ತಿತ್ತು. ಭೂಕಂದಾಯ, ವ್ಯಾಪಾರೀ ಸರಕುಗಳ ಮೇಲಿನ ಕಂದಾಯ, ಮೆಣಸು, ಅಡಿಕೆ, ವಿಳ್ಳೆದೆಲೆ ಮೊದಲಾದ ವಾಣಿಜ್ಯ ಬೆಳೆಗಳ ಮೇಲಿನ ಕಂದಾಯ, ವಿವಿಧ ವೃತ್ತಿಗಳಿಗೆ ವಿಧಿಸಲಾಗುತ್ತಿದ್ದ ಕಂದಾಯಗಳಲ್ಲದೆ ಎಣ್ಣೆಯ ಗಾಣ, ಆಲೆಮನೆ ಮೊದಲಾದವುಗಳ ಮೇಲೆ ಸುಂಕ ವಿಧಿಸಲಾಗುತ್ತಿತ್ತು. ತಿಪ್ಪೆಯ ಮೇಲೆ ಸುಂಕ ವಿಧಿಸಲಾಗುತ್ತಿದ್ದ ದಾಖಲೆಗಳೂ ಇವೆ. ಹೀಗೆ ವಿಧಿಸಲಾಗುತ್ತಿದ್ದ ತೆರಿಗೆಗಳಿಗೆ ಕೆಲವೊಮ್ಮೆ ವಿನಾಯಿತಿ ತೋರಿದ ಉದಾಹರಣೆಗಳು ಕಂಡುಬರುತ್ತವೆ. ನೈಸರ್ಗಿಕ ಅನಾಹುತಗಳಲ್ಲಿ ರೈತರಿಗೆ ತೆರಿಗೆ ಮಾಫಿ ಇದ್ದ ವಿಚಾರಗಳು ತಿಳಿದು ಬರುತ್ತದೆ. ಬೆಟ್ಟ, ಹೊಳೆ ಉಕ್ಕಿ ಹರಿದ ನಷ್ಟ, ಹೊಯ್ಲಿಗೆ ಹಾದು ಬೆಟ್ಟ ಮಾಡಿದ ನಷ್ಟ, ಉಪ್ಪ ನೀರು ಹಾದ ನಷ್ಟ, ಗೋಡೆ ಜಾರಿದ ನಷ್ಟ, ಮೊದಲಾದ ಸಂದರ್ಭಗಳಲ್ಲಿ ತೆರಿಗೆ ವಿನಾಯಿತಿ ಇತ್ತು ಎಂಬುದನ್ನು ಶಾಸನಗಳು ಉಲ್ಲೇಖಿಸುತ್ತವೆ.

ಅರಸಿಯರು ತಮ್ಮ ಆಳ್ವಿಕೆಯ ಸಂದರ್ಭದಲ್ಲಿ ಕೆಲವು ಬಾರಿ ಸುಂಕ ವಿಧಿಸುವ ಹಾಗೂ ವಿನಾಯತಿ ತೋರುವ ವಿಚಾರಗಳಲ್ಲಿ ಸ್ವಾತಂತ್ರ್ಯ ವಹಿಸುತ್ತಿದ್ದರು. ದಾನ ಶಾಸನಗಳಲ್ಲಿ ತೆರಿಗೆ ವಿನಾಯಿತಿಯನ್ನೂ, ವ್ಯಾಪಾರ – ವ್ಯವಹಾರಗಳಲ್ಲಿ ತೆರಿಗೆ ವಿಧಿಸಿ ಶಾಸನ ಹಾಕಿಸಿರುವುದನ್ನು ಕಾಣುತ್ತೇವೆ.

### ದಾನ ಶಾಸನಗಳಲ್ಲಿನ ತೆರಿಗೆ ವಿಚಾರ

ಕದಂಬ ಅಕ್ಕಾದೇವಿ ಬಂಕಾಪುರದ ಬಳಿಯ ಮಠವೊಂದರಲ್ಲಿ ನಡೆಯುವ ವಿದ್ಯಾಭ್ಯಾಸಕ್ಕಾಗಿ ದಾನ ನೀಡಿದ ಸಂದರ್ಭದಲ್ಲಿ ಕಾಳಾಮುಖ ಸನ್ಯಾಸಿನಿ ಗಂಗೆಯಬ್ಬೆಯ ಕಾಲುತೊಳೆದು 'ತಮಗೆ ಸಲ್ಲುವ ಅಂದಿಗರ್ಚ ಕಾಣಿಕೆಯ ಎರಡು ಗದ್ಯಾಣದ **ತೆರಿಗೆಯನ್ನು** ದಾನ' ಕೊಟ್ಟಿರುವಳು ಎಂದು ಶಾಸನವು ಉಲ್ಲೇಖಿಸಿದೆ[೩೩]. ನೀತಿಮಾರ್ಗನ ರಾಣಿಯು ಧಾರ್ಮಿಕ ಕಾರ್ಯಕ್ಕಾಗಿ 'ಪತ್ತೊಂದಿ' ತೆರಿಗೆಯ ವರಮಾನವನ್ನು ದಾನಮಾಡಿದಳು[೩೪] ಎಂಬ ವಿಚಾರ ತಿಳಿದು ಬಂದರೆ ಚಾಗಿಯಬ್ಬೆ ಬಿತ್ತುವಟ್ಟವನ್ನು ನೀಡಿದ ವಿಷಯವೂ ತೆರಿಗೆಯ ವಿನಾಯತಿಯನ್ನು ಕುರಿತು ತಿಳಿಸುತ್ತದೆ[೩೫]. ಲಿಂಗಸುಗೂರಿನಲ್ಲಿ ಆಳ್ವಿಕೆ ನಡೆಸುತ್ತಿದ್ದ ಆರನೆಯ ವಿಕ್ರಮಾದಿತ್ಯನ ಅರಸಿ ಅಬ್ಬಲದೇವಿಯು ತನ್ನ ಆಡಳಿತ ಪ್ರದೇಶದಲ್ಲಿನ ಕಲಿದೇವದೇವರಿಗೆ ಧೂಪ, ದೀಪ ನೈವೇದ್ಯ ಅಂಗಭೋಗ ಮೊದಲಾದ ಸೇವೆಗಳಿಗೆ ದಾನ–ದತ್ತಿಗಳನ್ನು ನೀಡಿರುವುದಲ್ಲದೆ ಅವುಗಳ ಮೇಲಿನ ತೆರಿಗೆಗಳನ್ನು ಮಾನ್ಯಮಾಡಿದ್ದಾಳೆ.

ಮೈಸೂರು ಪುರಾತತ್ತ್ವ ವರದಿ ೧೯೧೬ ಸಂ.೧೧೬ ತಿಳಿಸುವಂತೆ ಕೆಳದಿಯ ಚನ್ನಮ್ಮಾಜಿಯು ಕ್ರಿ.ಶ.೧೬೯೧ರಲ್ಲಿ ಅವುಬಲರಾಯನಿಗೆ (ಅಹೋಬಲರಾಯನಿಗೆ) ಪತ್ರ ಬರೆದು ಮುಕ್ಕರನಾಡು ಸೀಮೆಯ ಕೆಲವು ಹಳ್ಳಿಗಳಲ್ಲಿ ಮಣಿಹಾಗಾರ ಎಂಬುವನು ಸುಂಕವನ್ನು ವಸೂಲಿ ಮಾಡುತ್ತಿದ್ದು, ಈ ಸುಂಕವು ನ್ಯಾಯವಾಗಿ ಶೃಂಗೇರಿ ಮಠದ ಆಸ್ತಿಯಾಗಿದ್ದು, ಅದಕ್ಕಾಗಿ ಇನ್ನು ಮುಂದೆ ಮಣಿಹಾಗಾರನು ಈ ರೀತಿ ಮಠದ ವಿಷಯದಲ್ಲಿ ಹಸ್ತಕ್ಷೇಪ ಮಾಡಬಾರದೆಂದು ತಿಳಿಸಿಲಾಗಿದೆ.

ದಾಸೋಹ ಪಗುದಿ, ಪಟ್ಟಿ ಮುಂತಾದ ತೆರಿಗೆಯು ಭತ್ತ, ರಾಗಿ ಅಡಿಕೆ, ತೆಂಗು, ಉಪ್ಪು ಮೆಣಸು, ಎಣ್ಣೆ, ತುಪ್ಪ, ಹುಣಸೆಹಣ್ಣು, ತಂಬಾಕು, ಬಿದರಿನ ವಸ್ತುಗಳು ಮುಂತಾದವುಗಳ ಮೇಲೆ ಹೇರಲಾಗುತ್ತಿತ್ತು. ಬಡವರಿಗೆ ಅನ್ನ ಹಾಕಿಸಲು ದಾಸೋಹವೆಂದು ವರಹ ಒಂದಕ್ಕೆ ಒಂದು ಆಣೆಯನ್ನು ಸುಂಕವನ್ನು ಚನ್ನಮ್ಮಾ ಹಾಕಿಸಿದ್ದಳು.

ಶಾಸನದಲ್ಲಿ ಅಡಿಕೆ, ಮೆಣಸು ಕೊಬ್ಬರಿ ಮೊದಲಾದವುಗಳನ್ನು ಗಡಸಿನ ಸರಕು ಎಂದು ಕರೆಯಲಾಗಿದೆ. ಕೆಳದಿಯ ಚನ್ನಮ್ಮಳ ಕಾಲದಲ್ಲಿ ಮಠಕ್ಕೆ ಸಂದಾಯವಾಗುವ ಇಂಥ ಕೆಲವು ಪದಾರ್ಥಗಳ ಮೇಲಿನ ಸುಂಕಗಳಿಗೆ ವಿನಾಯತಿ ತೋರಿದ್ದಾಳೆ. ಈ ಮೇಲೆ ನಮೂದಾಗಿರುವ ದಾಖಲೆಯಲ್ಲಿ ಚನ್ನಮ್ಮಳು ಮಠದ ಸೇವೆಗಾಗಿ ಬೇಕಾಗುವ ಪದಾರ್ಥಗಳನ್ನು ಸುಂಕರಹಿತವಾಗಿ ಕಳುಹಿಸುವಂತೆ ತೆರಿಗೆ ಅಧಿಕಾರಿಗಳಿಗೆ ಅದೇಶ ನೀಡಿರುವ ವಿಚಾರವನ್ನು, ಶೃಂಗೇರಿಯ ನರಸಿಂಹ ಭಾರತಿ ಸ್ವಾಮಿಗಳಿಗೆ ಬರೆದು ತಿಳಿಸಿದ್ದಾಳೆ[೩೬]. ಇದೇರೀತಿಯ ವಿನಾಯತಿ ನೀಡಿರುವುದನ್ನು ಕೌಲೇದುರ್ಗದ ಆಗುಂಬೆ ಮಹತ್ತಿನ ಮಠ, ಚೆನ್ನಾಪುರದ ರೇವಣಸಿದ್ಧದೇವರ ಮಠ, ಚಿಕ್ಕಜಂಬೂರು ವಿರಕ್ತಮಠ ಮೊದಲಾದ ಮಠ–ದೇಗುಲಗಳಿಗೂ ನೀಡಲಾಗಿರುವುದನ್ನು ಅರಸಿ ಚೆನ್ನಮ್ಮಳು ಹೊರಡಿಸಿರುವ ಶಾಸನಗಳು ಉಲ್ಲೇಖಿಸುತ್ತವೆ. ಇಲ್ಲಿನ ಕೆಲವು ನಿರೂಪಗಳಲ್ಲಿ 'ದುರ್ಗದ ಹೋಬಳಿ ಘಟ್ಟದ ಕೆಳಗಣ ಸುಂಕಠಾಣೆಗಳಲ್ಲೂ ಬರೆಸುವುದು', 'ಈ ಕಾಗದವ ಸೇನಬೋವನ ಕಡತಕ್ಕೆ ಬರೆಸಿ ತಿರುಗಿ ಇವನ ವಶಕ್ಕೆ ಕೊಡುವುದು' ಎಂಬ ಮೊದಲಾದ ಬರಹಗಳು ಲೆಕ್ಕ–ಪತ್ರಗಳ ದಾಖಲಾತಿಗಳಿಗೆ ಚೆನ್ನಮ್ಮಳು ನೀಡುತ್ತಿದ್ದ ಮಹತ್ವವನ್ನು ಕುರಿತು ತಿಳಿಸುತ್ತವೆ.

ಚೆನ್ನಮ್ಮಳ ಅಧಿಕಾರದಲ್ಲಿ ಒಂದು ಹೇರು/ಹೇರು ಹೊರುವ ಪ್ರಾಣಿಗೆ ವಿಧಿಸುತ್ತಿದ್ದ ತೆರಿಗೆಯನ್ನು 'ಮೂಲವೀಸೆ ತೆರಿಗೆ' ಎಂದು ಕರೆಯಲಾಗುತ್ತಿತ್ತು. ಈ ಹೇರೆತ್ತಿಗೆ ೧/೧೬ ವೀಸೆ ತೆರಿಗೆ, ಒಂದು ಲಕ್ಷ ಅಡಿಕೆಗೆ ೧/೪ ಹಣ ತೆರಿಗೆ, ಎಂದು ಗೊತ್ತುಪಡಿಸಲಾಗಿತ್ತು. ೧೭೬೪ರಲ್ಲಿ ರಾಣಿ ಚನ್ನಮ್ಮಾಜಿಯು ರುದ್ರಮುನಿ ದೇವರ ಮಠಕ್ಕೆ ಈ ತೆರಿಗೆಯ ವಿನಾಯಿತಿ ತೋರಿದ್ದಾಳೆ.

ದೇವಾಲಯಕ್ಕೆ ನೀಡಿದ ದಾನಗಳ ಮೇಲಿನ ತೆರೆಗೆಗಳಷ್ಟೇ ಅಲ್ಲದೆ ಕೆಲವು ವ್ಯಕ್ತಿಗಳಿಗೆ ನೀಡಿದ ದಾನದ ಮೇಲಿನ ತೆರಿಗೆಗಳಿಗೂ ವಿನಾಯಿತಿ ತೋರಿರುವುದನ್ನು ಗಮನಿಸಬಹುದು. ಬಾದಾಮಿ ಚಳುಕ್ಯ ವಿಕ್ರಮಾದಿತ್ಯನ ಅರಸಿ ಲೋಕಮಹಾದೇವಿಯು ತಾನು ನಿರ್ಮಿಸಿದ ದೇವಾಲಯದ ರೂವಾರಿಗೆ 'ಬಳ್ಳಿಗವರ್ತ್ತೆ'ಯನ್ನು ಮಾನ್ಯಮಾಡಿದ್ದಾಳೆ. ಬಳ್ಳಿಗವರ್ತ್ತೆ ಎಂಬುದು ತಾಂಬೂಲಕ್ಕೆ ವಿಧಿಸಲಾಗುತ್ತಿದ್ದ ಸುಂಕ ಅರಸಿಯು ಈ ಸುಂಕಕ್ಕೆ ವಿನಾಯಿತಿಯನ್ನು ಅವರಿಗೆ ನೀಡಿದ್ದಳು[೩೭].

ಕೆಲವೊಮ್ಮೆ ಸುಂಕಗಳನ್ನು ಜನೋಪಕಾರಿ ಕೆಲಸಕ್ಕೆ ವಿನಿಯೋಗಿಸುತ್ತಿದ್ದ ಉದಾಹರಣೆಗಳು ಕಂಡುಬರುತ್ತವೆ. ಹೊಯ್ಸಳ ವೀರಬಲ್ಲಾಳನ ಅರಸಿ ಉಮಾದೇವಿಯು ಅರಸಿಕೆರೆಯ ಸಮಸ್ತ ತಿಪ್ಪೆಸುಂಕ, ಆಲೆಮನೆ, ಎಣ್ಣೆ, ಮೆಣಸು, ಅರಿಸಿನ, ಅಡಕೆ, ಎಲೆಹೇರಿನ ಮೇಲಿನ ಸುಂಕವನ್ನು ಕೆರೆಯ ಕೋಡಿಯ ಧರ್ಮಕ್ಕೆಂದು (ನಿರ್ಮಾಣಕ್ಕೆಂದು) ಬಿಟ್ಟಿದ್ದಾಳೆ[೩೮]. ಕ್ರಿ.ಶ.೧೨೨೦ ರಲ್ಲಿ ಸೌಭಾಗ್ಯಪುರದ ಪ್ರಸಂನ ಕೇಶವ ದೇವರಿಗೆ ಬಿಟ್ಟಿದ್ದ ಹದಿನೈದು ವೃತ್ತಿಗಳು ನಷ್ಟವಾದ ಕಾರಣ ದೇವಾಲಯದ ಶ್ರೀಕಾರ್ಯ ನಡೆಯದಿದ್ದ ಸಂದರ್ಭದಲ್ಲಿ ಅಲ್ಲಿನ

ಮಹಾಜನರನ್ನು ಮುಂದಿಟ್ಟುಕೊಂಡು ನಷ್ಟಕ್ಕೆ ಪರಿಹಾರದ ರೂಪದಲ್ಲಿ ಹೊಸದಾಗಿ ವೃತ್ತಿಯನ್ನು ನೀಡಿ ಹಳೆಯ ತರಿಗೆಯನ್ನು ಮಾನ್ಯಮಾಡಿ ಹೊಸದಾಗಿ ಸಿದ್ಧಾಯ ನಿಗದಿ ಪಡಿಸಿದ್ದಾಳೆ. ಇದೇ ರೀತಿ ೧೨೨೭ರಲ್ಲಿ ಪುಷ್ಪಗಿರಿಯ ದೇವರ ಆಣೆಗನ ಹಳ್ಳಿ ಮತ್ತು ಕಿತ್ತನ ಕೆರೆಯ ವೃತ್ತಿಗಳು ನಷ್ಟಕ್ಕೆ ಒಳಗಾಗಿದ್ದಾಗ ಅಲ್ಲಿ ಹಿರಿಯ ಮಹಾಜನರಿಗೆ ವಹಿಸಿಕೊಟ್ಟು ಎಂಟು ವರ್ಷಗಳವರೆಗೆ ತೆರಿಗೆ ಮಾನ್ಯ ಮಾಡಿ ಆನಂತರ ಸಿದ್ಧಾಯ ನೀಡುವಂತೆ ಏರ್ಪಾಟು ಮಾಡಿದ್ದಾಳೆ. ಇವಳ ಈ ಸಾಧನೆಯನ್ನು ಹಾಸನ ಜಿಲ್ಲೆಯ ಶಾಸನ ಸಂಪುಟದ (ರೈಸ್ ಆವೃತ್ತಿ) ಶಾಸನಗಳು ತಿಳಿಸುತ್ತವೆ[೩೯].

ಕ್ರಿ.ಶ.೧೯೭೩ರ ಕೋನೇರಿಪುರ (ತೀರ್ಥಹಳ್ಳಿ ತಾ) ಶಾಸನವು ಚೆನ್ನಮ್ಮಾಜಿ ಕೊಳಲಾದ ವೆಂಕಪ್ಪಗೆ ಬರಸಿಕೊಟ್ಟ ಕ್ರಯದಾನದ ಈ ಶಾಸನದಲ್ಲಿ ಭತ್ತದ ಗದ್ದೆಗಳಿಗೆ ಹೊಳೆ ಹರಿದು ಆದ ನಷ್ಟಕ್ಕೆ ಕೆರೆ ಕಾಲುವೆ ಕಟ್ಟಿಸಿ ಸಸಿ ಬಾಳೆ ಹಾಕಿಸಿ ಹುಟ್ಟುವಳಿ ಮಾಡಿಸಿಕೊಟ್ಟ ಉಲ್ಲೇಖವಿದೆ.

ಹೀಗೆ ಪ್ರಜೆಗಳ ಹಿತವನ್ನು ಕಾಪಾಡಲು ತೆರಿಗೆಯಲ್ಲಿ ವಿನಾಯಿತಿ ತೋರಿರುವುದು, ತೆರಿಗೆಯ ಹಣವನ್ನು ಧಾರ್ಮಿಕ ಕಾರ್ಯಕ್ಕೆ ಸಂದಾಯವಾಗುವಂತೆ ಆದೇಶ ನೀಡುತ್ತಿದ್ದ ಉದಾಹರಣೆಗಳನ್ನು ಕಾಣಬಹುದು.

## ವ್ಯಾಪಾರದಲ್ಲಿ ತೆರಿಗೆ

ಕರ್ನಾಟಕದ ಅರಸಿಯರು ವ್ಯಾಪಾರಕ್ಕೆ ಹೆಚ್ಚಿನ ಮಹತ್ವ ನೀಡಿದ್ದರೆನ್ನುವುದನ್ನು ಈ ಹಿಂದೆ ಗಮನಿಸಲಾಗಿದೆ. ವ್ಯಾಪಾರವು ಲಾಭ ದೃಷ್ಟಿಯನ್ನು ಹೊಂದಿರುತ್ತಿತ್ತು. ವ್ಯಾಪಾರದ ಇಂತಿಷ್ಟು ಎಂದು ನಿಗದಿ ಗೊಳಿಸಲಾದ ಭಾಗವು ಸುಂಕದ ರೂಪದಲ್ಲಿ ರಾಜ್ಯದ ಬೊಕ್ಕಸಕ್ಕೆ ಸಂದಾಯವಾಗುತ್ತಿತ್ತು. ವ್ಯಾಪಾರದ ಮೇಲಿನ ಈ ಸುಂಕವು ದೇಶೀಯರಿಗೆ, ವಿದೇಶೀಯರಿಗೆ ವಿಭಿನ್ನವಾಗಿರುತ್ತಿತ್ತೆಂದು ತಿಳಿದು ಬರುತ್ತದೆ. ಕೆಳದಿಯ ಅರಸಿ ಚನ್ನವೀರಮ್ಮಾಜಿಯು ಇಂಗ್ಲೀಷರಿಗೆ ಕಾರವಾರದಲ್ಲಿ ಕೋಠಿಯೊಂದನ್ನು ಕಟ್ಟಿಕೊಳ್ಳಲು ಅನುಮತಿ ನೀಡಿದ್ದಳು. ಇಂಗ್ಲೀಷ್ ವ್ಯಾಪಾರಿ ಕಂಪೆನಿಗೆ ಫರ್ಮಾನೊಂದನ್ನು ನೀಡಿ ಕೆಲವು ಪ್ರಮುಖ ವಸ್ತುಗಳಿಗೆ ಶೇಕಡಾ ಒಂದೂವರೆಯಷ್ಟು ತೆರಿಗೆಯನ್ನು ವಿಧಿಸಿದಳು.

ತೆರಿಗೆಗಳಲ್ಲದೆ ಸರಕು ಸಾಗಣೆಯ ಮೇಲೂ ಸುಂಕವನ್ನು ವಿಧಿಸಲಾಗುತ್ತಿತ್ತು. ಸಂತೆಗೆ ಬರುವ ಸರಕುಗಳ ಮೇಲೆ 'ಹೊರ ಸುಂಕ' ತೋಟದ ಅಡಿಕೆಗೆ 'ಅಡಿಕೆಯ ಸುಂಕ' ಮತ್ತು ದೋಣಿಗಳಲ್ಲಿ ಸಾಗಿಸುವ ಸರಕುಗಳಿಗೆ 'ಹೊಳೆಯ ಹೊರಸುಂಕ'ಗಳನ್ನು ವಸೂಲು ಮಾಡಲಾಗುತ್ತಿತ್ತು[೪೦]. ಪ್ರಮುಖ ವ್ಯಾಪಾರ ಕೇಂದ್ರಗಳಲ್ಲಿ ಸುಂಕದ ಕಟ್ಟೆಗಳಿದ್ದವು. ತೆರಿಗೆಗಳನ್ನು ಕಟ್ಟು ನಿಟ್ಟಾಗಿ ವಸೂಲುಮಾಡುತ್ತಿದ್ದರು.

ವಿದೇಶಕ್ಕೆ ಮಾರುವ ವಸ್ತುಗಳ ಮೇಲೆಯೂ ತೆರಿಗೆ ವಿಧಿಸಲಾಗುತ್ತಿತ್ತು. ಹಡಗುಕಟ್ಟೆಯಲ್ಲಿ ಆಮದಾಗುವ ಮತ್ತು ರಫ್ತಾಗುವ ವಸ್ತುಗಳ ಮೇಲೆ ಕೆಳದಿ ರಾಜ್ಯವು ತೆರಿಗೆ ವಿಧಿಸುತ್ತಿತ್ತು. ರಾಣಿ ಚನ್ನವೀರಮ್ಮಾಜಿಯು ಇಂಗ್ಲೀಷ್ ವ್ಯಾಪಾರಿ ಕಂಪೆನಿಗೆ ನೀಡಿದ ಫರ್ಮಾನಿನಂತೆ ಕೆಲವು ಪ್ರಮುಖ ವಸ್ತುಗಳಿಗೆ ಶೇಕಡಾ ೧ ೧/೨ ರಷ್ಟು ತೆರಿಗೆ ವಿಧಿಸಿದ್ದಳು.

## ಯುದ್ಧ

ಅಧಿಕಾರದ ಚುಕ್ಕಾಣಿ ಹಿಡಿದ ರಾಣಿಯರು, ತಮ್ಮ ರಾಜ್ಯವನ್ನು ರಕ್ಷಿಸಲೂ ಮುಂದಾಗುತ್ತಿದ್ದರು. ಶತ್ರುಗಳಿಂದ ರಾಜ್ಯವನ್ನು ರಕ್ಷಿಸುವುದೂ ಅಧಿಕಾರವನ್ನು ವಹಿಸಿಕೊಂಡವರ ಕರ್ತವ್ಯವಾಗಿರುತ್ತಿತ್ತು. ಆದುದರಿಂದ ಯುದ್ಧ ವಿದ್ಯೆ ರಾಜಮನೆತನದವರು ಕಲಿಯಲೇ ಬೇಕಾದ ವಿದ್ಯೆಗಳಲ್ಲೊಂದಾಗಿರುತ್ತಿತ್ತು. ಕರ್ನಾಟಕದ ರಾಣಿಯರು ಆಡಳಿತ

ಹಾಗೂ ಯುದ್ಧ ಎರಡರಲ್ಲಿಯೂ ನೈಪುಣ್ಯತೆ ತೋರುತ್ತಿದ್ದರೆನ್ನುವುದಕ್ಕೆ ಹಲವಾರು ಉದಾಹರಣೆಗಳನ್ನು ಕಾಣಬಹುದು.

**ಪತಿಯೊಂದಿಗೆ ಯುದ್ಧದಲ್ಲಿ ಭಾಗವಹಿಸಿದ ಮಹಿಳೆಯರು**

ಪ್ರಾಚೀನ ಕಾಲದಿಂದಲೂ ಅರಸಿಯರು ತಮ್ಮ ಪತಿಯರೊಂದಿಗೆ ಯುದ್ಧರಂಗದಲ್ಲಿ ಭಾಗವಹಿಸುತ್ತಿದ್ದ ಉಲ್ಲೇಖಗಳು ದೊರಕುತ್ತವೆ. ಬಾದಾಮಿ ಚಳುಕ್ಯಅರಸ ಮೊದಲನೆಯ ವಿಕ್ರಮಾದಿತ್ಯನ ಮಡದಿ ಗಂಗಮಹಾದೇವಿ ಪತಿಯೊಂದಿಗೆ ಯುದ್ಧ ಭೂಮಿಯಲ್ಲಿ ದಾನನೀಡಿದ ಉಲ್ಲೇಖದಲ್ಲಿ ದೊರಕುತ್ತದೆ[೪೧]. ಮುಮ್ಮಡಿ ಗೋವಿಂದನ ರಾಣಿ ಗಾಮುಂಡಬ್ಬೆಯ ಹೆಸರು ರಾಜನ ಹೆಸರೊಂದಿಗೆ ತಾಮ್ರಪಟಗಳಲ್ಲಿ ಕಂಡುಬರುತ್ತದೆ. ಇವಳು ಯುದ್ಧಶಿಬಿರದಲ್ಲಿ ತಂಗಿದ್ದಾಗ ಪುತ್ರ ಶರ್ವ ಅಮೋಘವರ್ಷನನ್ನು ಪ್ರಸವಿಸಿದಳೆಂದು ತಿಳಿಸುತ್ತದೆ. ಈ ವಿವರಗಳಲ್ಲಿ ಮುಮ್ಮಡಿ ಗೋವಿಂದನು ಉತ್ತರಭಾರತದ ಮೇಲಿನ ದಂಡಯಾತ್ರೆಯ ಸಂದರ್ಭದಲ್ಲಿ ರಾಣಿಯನ್ನು ತನ್ನೊಂದಿಗೆ ಕರೆದೊಯ್ದಿದ್ದ ಎಂದು ತಿಳಿಯುತ್ತದೆ. ಈಕೆ ಪತಿಯೊಂದಿಗೆ ದಂಡಯಾತ್ರೆಯಲ್ಲಿ ಭಾಗವಹಿಸಿದಾಗಲೊಮ್ಮೆ 'ಕಂಚಿಯನಾಳ್ವ ದಂತಿಗನಮೇಗೆಳ್ದು ಕಪ್ಪಂಗೊಳಲ್ಬನ್ದಲ್ಲಿ' ರಾಮೇಶ್ವರ ತೀರ್ಥದ ಶಿವಧಾರಿ ಗೊರವನಿಗೆ ದತ್ತಿ ಬಿಟ್ಟ ವಿಚಾರವೊಂದು ಶಾಸನ ತಿಳಿಸುತ್ತದೆ.

ಚಾಲುಕ್ಯ ವಿಕ್ರಮಾದಿತ್ಯನ ಮಡದಿ ಜಾಕಲದೇವಿ "ಮದವದರರಾಯ ಮದಮರ್ದನ ಸಮಯದೊಳ್ ವಿಜಯಲಕ್ಷ್ಮೀ" ಎಂಬ ಹೊಗಳಿಕೆಗೆ ಪಾತ್ರಳಾಗಿದ್ದಾಳೆ[೪೨]. ಹೊಯ್ಸಳ ವಿಷ್ಣುವರ್ಧನನ ಮಡದಿ ಶಾಂತಲೆ "ರಣವ್ಯಾಪಾರದೊಳ್ ಖಡ್ಗದೇವತೆ" ದುರದೊಳ್ ವಿಷ್ಣುನೃಪಾಳಕಂಗೆ ವಿಜಯಶ್ರೀ ಎಂದು ಹೊಗಳಲ್ಪಟ್ಟಿದ್ದಾಳೆ[೪೩]. ವಿಷ್ಣುವರ್ಧನನ ಅರಸಿ ಬೊಮ್ಮಲದೇವಿಯೂ ಹಲವಾರು ಯುದ್ಧಗಳಲ್ಲಿ ಭಾಗವಹಿಸಿದ್ದಾಳೆ. ಯುದ್ಧವೀರಳಾದ ಇವಳು ಒಂದು ಅಶ್ವಶಾಲೆಯನ್ನು ಸ್ಥಾಪಿಸಿದ್ದಳು.

ವಿಜಯನಗರದ ರಾಣಿ ಗಂಗಾದೇವಿಯು ತನ್ನ ಪತಿಯೂ ಬುಕ್ಕರಾಯನ ಮಗನೂ ಆದ ಕಂಪಣರಾಯನೊಂದಿಗೆ ಯುದ್ಧವೊಂದರಲ್ಲಿ ಭಾಗವಹಿಸಿ ಅದರಿಂದ ಪ್ರೇರಣೆಗೊಂಡು 'ಮಧುರಾವಿಜಯಂ' ಎಂಬ ಕಾವ್ಯವನ್ನೇ ರಚಿಸಿದ್ದಾಳೆ ಈ ಕಾವ್ಯವನ್ನು 'ವೀರಕಂಪಣರಾಯ ಚರಿತೆ' ಎಂದೂ ಕರೆಯಲಾಗುತ್ತದೆ.

ಚಿನ್ನಾದೇವಿ ಹಾಗೂ ತಿರುಮಲದೇವಿಯರು ತಮ್ಮ ಪತಿ ಕೃಷ್ಣದೇವರಾಯನೊಂದಿಗೆ ದೇವಾಲಯಗಳಿಗೆ ಭೇಟಿಕೊಟ್ಟಂತೆ ಪತಿಯೊಂದಿಗೆ ರಣರಂಗಕ್ಕೂ ಪ್ರವೇಶಿಸುತ್ತಿದ್ದರೆಂದು ತಿಳಿದುಬರುತ್ತದೆ[೪೪]. ಕೃಷ್ಣದೇವರಾಯನು ಕ್ರಿ.ಶ.೧೫೧೫ರಲ್ಲಿ ಕೊಂಡವೀಡಿನ ಮೇಲೆ ಮುತ್ತಿಗೆ ಹಾಕಿದಾಗ ಅವನ ಇಬ್ಬರು ರಾಣಿಯರಾದ ಚಿನ್ನಾದೇವಿ ಮತ್ತು ತಿರುಮಲದೇವಿಯರು ಅವನೊಂದಿಗಿದ್ದರೆಂಬುದನ್ನು ತಿಳಿಸುತ್ತದೆ.

**ಸ್ವತಂತ್ರವಾಗಿ ಯುದ್ಧ ಮಾಡಿದ ರಾಣಿಯರು**

ಪತಿಯೊಂದಿಗೆ ಯುದ್ಧರಂಗದಲ್ಲಿ ಭಾಗವಹಿಸುತ್ತಿದ್ದ ಮಹಿಳೆಯರ ಸಾಹಸಕ್ಕಿಂತಲೂ ಸ್ವತಂತ್ರವಾಗಿ ಯುದ್ಧ ತೀರ್ಮಾನ ಕೈಗೊಂಡು, ರಣರಂಗದಲ್ಲಿ ಸೇನೆಯನ್ನು ಮುನ್ನಡೆಸಿದ ಅರಸಿಯರ ಸಾಹಸ ಹಿರಿದೆನಿಸುತ್ತದೆ. ಅಂತಹ ಹಲವಾರು ಅರಸಿಯರನ್ನು ಕರ್ನಾಟಕದ ಇತಿಹಾಸದಲ್ಲಿ ಕಾಣಬಹುದು. ಹಾನುಗಲ್ಲು ಕದಂಬ ಅರಸಿ ಅಕ್ಕಾದೇವಿಯು, ಗೋಕಾಕಿನ ಕೋಟೆ ಕಾಳಗದಲ್ಲಿ ಬಂಡಾಯವೆದ್ದ ಸಾಮಂತರನ್ನು ಮಣಿಸಿದ ವಿಚಾರ ಶಾಸನದಿಂದ ತಿಳಿದುಬರುತ್ತದೆ. ಅಂತೆಯೇ ಯುದ್ಧಪ್ರಿಯೆ ಎಂದು ಪ್ರಖ್ಯಾತಳಾಗಿದ್ದ ಅರಸಿ ಹೊಯ್ಸಳ ರಾಣಿ

ಉಮಾದೇವಿಯು ಸಾಮಂತ ಅರಸರು ದಂಗೆಯೆದ್ದಾಗ, ಅವರ ವಿರುದ್ಧ ಯುದ್ಧ ನಡೆಸಿದ ರಾಜ್ಯದ ಸುಸ್ಥಿತಿ ಕಾಪಾಡುತ್ತಿದ್ದಳು. ಇವಳು ಬೆಳಗುತ್ತಿಯ ಮೇಲೆ ಮೂರುಬಾರಿ ಆಕ್ರಮಣ ಮಾಡಿದ್ದಾಳೆ[೪೫].

ನಾಡಿನ ಸಂಪತ್ತುಗಳಲ್ಲಿ ಒಂದಾದ ಪಶುಸಂಪತ್ತನ್ನು ಅಪಹರಿಸಿ, ಯುದ್ಧಕ್ಕೆ ಆಹ್ವಾನ ನೀಡುವುದು ಅಂದಿನ ಕಾಲದ ಸಾಮಾನ್ಯ ಸಂಗತಿಯಾಗಿತ್ತು. ಇಂದಿಗೂ ಕಂಡುಬರುವ ತುರುಗೋಳು ಸ್ಮಾರಕ ಕಲ್ಲು ಇಂತಹ ಹಲವಾರು ಘಟನೆಗಳಿಗೆ ಸಾಕ್ಷಿಯಾಗಿವೆ. ಹೀಗೆ ತುರುಗೋಳು ನಡೆಸುವುದರ ಮೂಲಕ ಮಲೆತುನಿಂದ ಸಾಮಂತರನ್ನು ಮಣಿಸುವುದು ಒಂದು ತಂತ್ರವಾಗಿತ್ತು. ಅರಸಿಯರೂ ಕೂಡ ಇಂತಹ ತುರುಗೋಳನ್ನು ನಡೆಸಿದ್ದಾರೆ. ಈ ಮೇಲೆ ತಿಳಿಸಿರುವಂತೆ ಅರಸಿ ಉಮಾದೇವಿ ಹಲವಾರು ಬಾರಿ ಹಸುಗಳನ್ನು ಹಿಡಿದು ಯುದ್ಧವನ್ನು ನಡೆಸಿದ್ದಾಳೆ. ಇದೇ ರೀತಿ ಹೊಯ್ಸಳ ಅರಸಿ 'ಚೋಳಮಹಾದೇವಿ' ಪಾಳೆಗಾರರನ್ನು ಮಣಿಸಲು ಬೇವೂರಿನಲ್ಲಿ ತುರುಗೋಳ್ ನಡೆಸಿದ್ದಾಳೆ[೪೬]. ಸುಮಾರು ಇದೇ ಕಾಲದಲ್ಲಿದ್ದ ಮಹಾಮಂಡಳೇಶ್ವರ ಗುತ್ತಿ ಮಲ್ಲದೇವನ ಅರಸಿ ಪದುಮಲದೇವಿ ಕ್ರಿ.ಶ.೧೧೭೭ರಲ್ಲಿ ಸೋಯಿದೇವನನ್ನು ಎದುರಿಸಿ ಕುಪಟೂರನ್ನು ಸೂರೆಗೈದು ದನಗಳನ್ನು ಒಯ್ದಳೆಂದು ಶಾಸನವು ತಿಳಿಸುತ್ತದೆ[೪೭]. ಮಹಾಸಾಮಂತ ತೊರಗಲೆಯ ಸಾಮಂತನ ಅರಸಿ ಚಾಗಲದೇವಿ ಕೂಡ ನೀಲಗುಂದ ಗ್ರಾಮದ ಮೇಲೆ ದಾಳಿಯಿಟ್ಟು ಹೋರಾಡಿದ ವಿಚಾರವನ್ನು ಬಾದಾಮಿಯ ಶಾಸನ ತಿಳಿಸುತ್ತದೆ[೪೮]. ಹೊಯ್ಸಳ ವೀರಬಲ್ಲಾಳನ ಅರಸಿ ಬಮ್ಮಲದೇವಿಯು ಮಲೆದುನಿಂತ ಮಲೆಪರಕುಲವನ್ನು ಬೇರುಸಹಿತ ಕಿತ್ತು ಬಿಸುಟು, ಮತ್ತೆಂದೂ ಅದು ಚಿಗುರದಂತೆ ಮಾಡಿದ ಸಾಹಸಿ ಎಂದು ಅರಸಿಕೆರೆಯ ೯೬ನೆಯ ಸಂಖ್ಯೆಯ ಶಾಸನವು "ಮಲಮಲದು ಮಲೆದು ಮಲೆಪರ ಕುಲಮಂ ಬೇರ್ವೆರಸಿ ಕಿತ್ತು ಬಂಮಲೆ..." ಎಂದು ಕೊಂಡಾಡಿದೆ.

ಈ ಮೇಲಿನ ಘಟನೆಗಳಲ್ಲಿ ಅರಸಿಯರು ಪ್ರಭುತ್ವವನ್ನು ಸಾಧಿಸಲು ಅಥವಾ ಕೈಕೆಳಗಿನ ಸಾಮಂತರಸರು ಹದ್ದುಮೀರಿನಡೆದ ಸಂದರ್ಭದಲ್ಲಿ ಪರಿಸ್ಥಿತಿಯನ್ನು ನಿಯಂತ್ರಿಸಲು ಯುದ್ಧ ಕೈಗೊಂಡಿರುವುದನ್ನು ಕಾಣುತ್ತೇವೆ. ಮತ್ತೆ ಕೆಲವು ಸಂದರ್ಭಗಳಲ್ಲಿ ರಾಜ್ಯವನ್ನು ಉಳಿಸಿಕೊಳ್ಳಲು, ರಾಜ್ಯ ವಿಸ್ತರಿಸಲೆಂದು ಯುದ್ಧಗಳನ್ನು ನಡೆಸಿದ್ದಾರೆ.

ಕೆಳದಿಯ ಚೆನ್ನಮ್ಮ ಇಂತಹ ಹಲವಾರು ಯುದ್ಧಗಳಲ್ಲಿ ತೊಡಗಿದ್ದನ್ನು ಗಮನಿಸಬಹುದು. ಪತಿಯ ಮರಣಾನಂತರ, ಅಧಿಕಾರ ವಹಿಸಿಕೊಂಡ ಕೆಳದಿಯ ಅರಸು ಸೋಮಶೇಖರನ ರಾಣಿ ಚನ್ನಮ್ಮ, ಪತಿಯ ಮರಣಕ್ಕೆ ಕಾರಣರಾದ ರಾಜ್ಯದ ಒಳ ಹಾಗೂ ಹೊರ ಶತ್ರುಗಳನ್ನು ನಿಗ್ರಹಿಸಿದಳು. ಹೊನ್ನಾಳಿ, ಹುಲಿಕೇರಿ ಕೋಟೆಗಳನ್ನು ಯುದ್ಧದಲ್ಲಿ ಗೆದ್ದು, ಹುಲಿಕೆರೆ ಕೋಟೆಗೆ 'ಚೆನ್ನಗಿರಿ' ಎಂಬ ನಾಮಕರಣ ಮಾಡಿದಳು. ಸೋದೆ, ಬೀಳಗಿಗಳಿಂದ ಕಪ್ಪ ಕಾಣಿಕೆ ವಸೂಲಿ ಮಾಡಿ, ಮೈಸೂರರಸರ ವಿರುದ್ಧ ಸಮರ ಸಾರಿ ಮೈಸೂರಿಗೆ ಸೇರಿದ್ದ ಹಾಸನ, ಬಾಣಾವರ, ಬೇಲೂರು ಪ್ರಾಂತ್ಯಗಳನ್ನು ಹಿಂಪಡೆಯುತ್ತಾಳೆ. ಇವಳು ಶಿವಾಜಿಯ ಮಗ ರಾಜಾರಾಮನಿಗೆ ಆಶ್ರಯ ನೀಡಿ ಔರಂಗಜೇಬನ ಸೈನ್ಯವನ್ನು ಎದುರಿಸಿದ ಖ್ಯಾತಿ ಇತಿಹಾಸದಲ್ಲೇ ಅಚ್ಚಳಿಯದ ವಿಚಾರವಾಗಿದೆ.

ಕೆಳದಿಯ ಚೆನ್ನಮ್ಮನ ನಂತರ ಇದೇ ಮನೆತನದಲ್ಲಿ ಆಳ್ವಿಕೆ ನಡೆಸಿದ ಮತ್ತೋರ್ವ ರಾಣಿ ಚನ್ನವೀರಮ್ಮಳೂ ಸಹ ಯುದ್ಧ ಪ್ರವೀಣೆಯಾಗಿದ್ದಳು, ಕಡಲ್ಗಳರು ಮೊದಲಾದ ದರೋಡೆಕೋರರಿಂದ ಪಾರಾಗಲು ಸೂಕ್ತ ಮುಂಜಾಗ್ರತೆ ಕ್ರಮ ಕೈಗೊಂಡು, ಹಳೆಯ ಕೋಟೆಗಳನ್ನು ಭದ್ರ ಪಡಿಸುತ್ತಾಳೆ. ಕಣ್ಣಾನೂರಿನ ಸುಲ್ತಾನ ಆಲಿರಾಜನ ಧಾಳಿಯನ್ನು ತಡೆಯಲು ಒಮ್ಮೆ ವಿಫಲವಾದರೂ ಮುಂದೆ ವ್ಯಾಪಾರ–ವ್ಯವಹಾರಗಳಲ್ಲಿ ಅದಕ್ಕೆ ಪ್ರತಿಕಾರ ತೋರುತ್ತಾಳೆ. ಮರಾಠರಿಗೆ ಒಪ್ಪಂದದ ಪ್ರಕಾರ ಪೊಗದಿ ನೀಡಿ ಅವರ ದಾಳಿಯನ್ನು ತಪ್ಪಿಸಿಕೊಂಡಿದ್ದರೂ, ತಮ್ಮ ಅನುಮತಿ ಇಲ್ಲದೆ ದತ್ತುಸ್ವೀಕರಿಸಿದಳೆಂಬ ಕಾರಣ ನೀಡಿ ದಾಳಿಮಾಡಿದ ಮರಾಠರನ್ನು ವೀರಭದ್ರನಾಯಕನ ನೇತೃತ್ವದಲ್ಲಿ ಸೈನ್ಯವನ್ನು ಕಳುಹಿಸಿ ಚೆನ್ನವೀರಮ್ಮಳು ಹಿಮ್ಮೆಟ್ಟಿಸುತ್ತಾಳೆ[೪೯].

ಸಂಪದ್ಭರಿತವಾದ ಕೆಳದಿ ರಾಜ್ಯದಮೇಲೆ ಹೈದರಾಲಿ ಸೈನ್ಯ ಮುತ್ತಲು, ಕೆಲಕಾಲ ವೀರಾವೇಶದಿಂದ ಕಾದಾಡಿ ಸೈನ್ಯವನ್ನು ಹಿಮ್ಮೆಟ್ಟಿಸಿದರೂ, ಪದೇ ಪದೇ ರಾಜ್ಯಕ್ಕೆ ತೊಂದರೆ ಕೊಡುತ್ತಿದ್ದ ಮೈಸೂರಿನವರೊಂದಿಗೆ, ಪ್ರಜೆಗಳ ಹಿತದೃಷ್ಟಿಯಿಂದ ಸಂಧಾನಕ್ಕೆ ಮುಂದಾಗುತ್ತಾಳೆ, ಆದರೆ ಸಂಪೂರ್ಣ ರಾಜ್ಯವನ್ನೇ ಕೈವಶ ಮಾಡಿಕೊಳ್ಳಲು ಬಯಸಿದ ಹೈದರಾಲಿಯು, ಸಂಧಿಗಾಗಿ ಮಧುಗಿರಿಗೆ ತೆರಳಿದ ವೀರಮ್ಮಾಜಿಯನ್ನು ಅವಳ ಎರಡನೆಯ ಸಾಕುಮಗನೊಂದಿಗೆ ಮೋಸದಿಂದ ಬಂಧನದಲ್ಲಿ ಇಡುತ್ತಾನೆ. ಯುದ್ಧ ಪ್ರವೀಣೆಯಾದರೂ ಚನ್ನಮ್ಮಳಂತೆ ರಾಜಕೀಯ ತಂತ್ರ ಕರಗತ ಮಾಡಿಕೊಳ್ಳದೇ ಹೋದದ್ದು ಹಾಗೂ ಇವಳ ಹಿರಿಯ ದತ್ತುಪುತ್ರ ಅಕಾಲ ಮರಣಕ್ಕೆ ತುತ್ತಾದದ್ದು ಇವಳ ಕುರಿತು ಇಲ್ಲಸಲ್ಲದ ಅಪಖ್ಯಾತಿ ಹಬ್ಬಿ, ರಾಜ್ಯವನ್ನು ಕಳೆದುಕೊಳ್ಳುವಂತಾಗುತ್ತದೆ[೫೦]. ಮೊದಲಾದವು ಇವಳ ಯುದ್ಧದ ಕುರಿತಾದ ವಿವರಗಳನ್ನು ನೀಡುತ್ತವೆ.

ಕನ್ನಡ ನಾಡಿನ ವೀರವನಿತೆಯೆಂದೇ ಗುರುತಿಸಿಕೊಳ್ಳುವ ಬೆಳವಡಿ ಮಲ್ಲಮ್ಮಳು ಇತಿಹಾಸದಲ್ಲಿ ಶೌರ್ಯ-ಸಾಹಸಕ್ಕೆ ಹೆಸರಾದ ಛತ್ರಪತಿ ಶಿವಾಜಿಯನ್ನೇ ಮಣಿಸಿದ ಸಾಹಸಿ. ಮಲ್ಲಮ್ಮನ ಪತಿ ಬೆಳವಡಿಯ ಈಶಪ್ರಭು, ತನ್ನ ನಾಡಿನ ಹಸುಗಳನ್ನು ಅಪಹರಿಸಿದ ಶಿವಾಜಿಯ ಸೈನ್ಯದ ಎದುರು ಕಾದಾಡಿ ರಣರಂಗದಲ್ಲಿ ಮಡಿಯುತ್ತಾನೆ. ಪತಿಯ ಸಾವಿನ ನಂತರ ಧೃತಿಗೆಡದ ಮಲ್ಲಮ್ಮ ಕೆಚ್ಚೆದೆಯಿಂದ ರಣರಂಗದಲ್ಲಿ ಹೋರಾಟ ಮುಂದುವರೆಸುತ್ತಾಳೆ. ಕೆಲವೊಂದು ಮರಾಠ ದಾಖಲೆಯ ಪ್ರಕಾರ ಮಲ್ಲಮ್ಮಳು ೨೭ ದಿನಗಳ ಪರ್ಯಂತ ಯುದ್ಧ ಮಾಡಿ ಮರಾಠರ ಸೈನ್ಯವನ್ನು ಹಿಮ್ಮೆಟ್ಟಿಸುತ್ತಾಳೆ. ಮಲ್ಲಮ್ಮಳ ಸಾಹಸವನ್ನು ಕಂಡ ಶಿವಾಜಿ ಸ್ತ್ರೀ ಶಕ್ತಿಯ ಮುಂದೆ ತಲೆಬಾಗುತ್ತಾನೆ. ಮಲ್ಲಮ್ಮಳನ್ನು ತನ್ನ ಸಹೋದರಿಯಂತೆ ಕಾಣುವುದಾಗಿ ಭರವಸೆ ನೀಡಿ ಅವಳನ್ನು ಸನ್ಮಾನಿಸುತ್ತಾನೆ.

ಜದುನಾಥ ಸರಕಾರ ಎಂಬುವವನ 'ಶಿವಾಜಿ ಮತ್ತು ಶಿವಕಾಲಿನ', ರಣಜಿತ್ ದೇಸಾಯಿ ಅವರ 'ಶ್ರೀಮಾನ್ ಯೋಗಿ', ಪುರಂದರೆಯವರು ಬರೆದ ರಾಜಾ ಛತ್ರಪತಿ', ಚಿತ್ರಗುಪ್ತ ಬಖರ್, ಶೇಡಗಾವಕರ ಬಖರ್, ಮೊದಲಾದವುಗಳಲ್ಲಿ ಶಿವಾಜಿ-ಮಲ್ಲಮ್ಮರ ಯುದ್ಧ ಕುರಿತಾದ ಘಟನೆಗಳು ದಾಖಲಾಗಿವೆ. ಈ ಎಲ್ಲ ದಾಖಲೆಗಳು ಮರಾಠರು ೨೦ ದಿನಕ್ಕೂ ಮೀರಿ ಬೆಳವಡಿಯ ಸೈನಿಕರೊಂದಿಗೆ ಹೋರಾಡಿದ ವಿಚಾರವನ್ನು ತಿಳಿಸುತ್ತದೆ.

ಮಲ್ಲಮ್ಮ ತನ್ನ ರಾಜ್ಯದಲ್ಲಿ ಸ್ತ್ರೀ ಸೈನ್ಯವನ್ನು ಕಟ್ಟಿ ತರಬೇತು ನೀಡಿದ್ದ ವಿಚಾರ ಈ ಬಖೈರುಗಳಿಂದ ತಿಳಿದು ಬರುತ್ತದೆ. ಅಲ್ಲದೆ ಈ ಸೈನ್ಯದಲ್ಲಿ ಗೌರಮ್ಮ ಎಂಬುವವಳ ಸಾಹಸವೂ ದಾಖಲಾಗಿದೆ. ಯಾದವಾಡ, ವಕ್ಕುಂಡ, ದೊಡಬಾಡ, ಚಚಡಿ ಮೊದಲಾದೆಡೆಗಳಲ್ಲಿ ಶಿವಾಜಿ-ಮಲ್ಲಮ್ಮರ ಯುದ್ಧ ಘಟನೆಗಳ ಕುರಿತಾದ ಶಿಲ್ಪಗಳಿವೆ (ಪಾಟೀಲ.ಯ.ರು : ೨೦೦೬) ಇದರಲ್ಲಿ ಮಲ್ಲಮ್ಮನು ಕಟ್ಟಿದ ಸ್ತ್ರೀ ಸೈನ್ಯದ ಶಿಲ್ಪವನ್ನೂ ಕಾಣಬಹುದು. ಯಾದವಾಡದ ಶಿಲ್ಪದಲ್ಲಿ ಶಿವಾಜಿಯ ತೊಡೆಯಮೇಲೆ ಕುಳಿತಿರುವ ಮಗುವನ್ನು ಮಲ್ಲಮ್ಮಳ ಮಗ ನಾಗಭೂಷಣನೆಂದು ಗುರುತಿಸಲಾಗುತ್ತದೆ.

ಎಂಥಹ ಎದುರಾಳಿಯೇ ಆದರೂ ಧೃತಿಗೆಡದೆ ಎದುರಿಸುವ ಸಾಹಸ ತೋರಿದ ಕನ್ನಡ ನಾಡಿನ ಅರಸಿಯರು ವಿದೇಶಿಯರೊಂದಿಗೆ ನಡೆಸಿದ ಹೋರಾಟಗಳಿಗೂ ಹೆಸರುವಾಸಿಯಾಗಿದ್ದಾರೆ.

ಹದಿನಾರನೆಯ ಶತಮಾನದ ಚೌಟ ರಾಜಮನೆತನದ ಅಬ್ಬಕ್ಕದೇವಿಯು ಅಳಿಯಸಂತಾನ ಕಟ್ಟಿನಿಂದಾಗಿ ತವರುಮನೆಯಲ್ಲಿ ರಾಜ್ಯಾಡಳಿತ ಅಧಿಕಾರವನ್ನು ಪಡೆದು ಉಲ್ಲಾಳದಲ್ಲಿ ಆಳ್ವಿಕೆ ನಡೆಸುತ್ತಿದ್ದಳು. ಇವಳ ಅಧಿಕಾರದ ವ್ಯಾಪ್ತಿಗೆ ಸೇರಿದ ತೀರಪ್ರದೇಶಗಳಲ್ಲಿ ವ್ಯಾಪಾರ – ವ್ಯವಹಾರ ನಡೆಸುತ್ತಿದ್ದ ಪೋರ್ಚುಗೀಸರಿಗೆ ಕೋಟೆಯನ್ನು ಕಟ್ಟಿಕೊಳ್ಳಲು ಅನುಮತಿ ನೀಡಿದ್ದಳು. ಆದರೆ ಕ್ರಮೇಣ ಪೋರ್ಚುಗೀಸರು ಇವಳನ್ನು ನಿಯಂತ್ರಿಸಲು, ಇವಳ ರಾಜ್ಯವನ್ನೇ ಕಬಳಿಸಲು ಸಂಚು ನಡೆಸಿದಾಗ ಅವರೊಡನೆ ಧೀರತನದಿಂದ ಹೋರಾಡಿದಳು.

ಇವಳನ್ನು ಕೆಣಕಲೆಂದೇ ಪೋರ್ಚುಗೀಸರು ಇವಳ ಪ್ರಜೆಗಳನ್ನು ಹಿಂಸೆ ನೀಡಿ, ದೇವಾಲಯಗಳನ್ನು ಲೂಟಿಮಾಡಿ ಇವಳ ಹಡಗುಗಳಿಗೆ ಬೆಂಕಿ ಹಚ್ಚುತ್ತಾರೆ. ಇದನ್ನು ಸಹಿಸದ ಅಬ್ಬಕ್ಕ, ತಾನು ಅವರಿಗೆ ಕೋಟೆಯನ್ನು ಕಟ್ಟಿಕೊಳ್ಳಲು ಅನುಮತಿ ನೀಡಿದ ಪ್ರದೇಶಗಳನ್ನು ತೆರವುಗೊಳಿಸಲು ಆದೇಶ ನೀಡುತ್ತಾಳೆ. ಇದರಿಂದ ಆಕ್ರೋಶಗೊಂಡ ಪೋರ್ಚುಗೀಸರ ಸೈನ್ಯ ಕ್ರಿ.ಶ.೧೫೬೮ರಲ್ಲಿ ಉಲ್ಲಾಳವನ್ನು ಅತಿಕ್ರಮಿಸುತ್ತಾರೆ. ಪೋರ್ಚುಗೀಸ್ ಜನರಲ್ ಪಿಕ್ಸೊಟೊ ಎಂಬುವವನು ಆಂಟೋನಿ ನೊರೊಹ್ನನೊಡನೆ ಸೈನ್ಯವನ್ನು ಉಲ್ಲಾಳಕ್ಕೆ ನುಗ್ಗಿಸಿ ಇವಳ ಅರಮನೆಯನ್ನು ವಶಪಡಿಸಿಕೊಳ್ಳುತ್ತಾನೆ. ಆಗ ಅಬ್ಬಕ್ಕಳು ಮಸೀದಿಯೊಂದರಲ್ಲಿ ಅಡಗಿಕೊಂಡು, ಅಲ್ಲಿಂದಲೇ ಸಂಚು ನಡೆಸಿ ೨೦೦ ಜನ ಸೈನಿಕರನ್ನು ಕಲೆಹಾಕಿ, ವಿಜಯೋತ್ಸವವನ್ನಾಚರಿಸುತ್ತಿದ್ದವರ ಮೇಲೆ ಮುನ್ಸೂಚನೆ ನೀಡದೆ ಎರಗುತ್ತಾಳೆ. ಈ ಯುದ್ಧದಲ್ಲಿ ಜನರಲ್ ಪಿಕ್ಸೊಟೊ ಹಾಗೂ ನೂರಾರು ಪೋರ್ಚುಗೀಸ್ ಸೈನಿಕರು ಸಾವಿಗೀಡಾಗುತ್ತಾರೆ. ಇದಕ್ಕೆ ಪ್ರತಿಕಾರವಾಗಿ ಅಬ್ಬಕ್ಕಳ ವ್ಯಾಪಾರಿ ಹಡಗುಗಳನ್ನು ಹಿಡಿಯಲು ಸಂಚು ನಡೆಸಿದ ಪೋರ್ಚುಗೀಸರ ಕಣ್ಣಿಗೆ ಮಣ್ಣೆರಚಿ ಅವರ ಹಲವು ಹಡಗುಗಳನ್ನು ವಶಪಡಿಸಿಕೊಂಡು ಮತ್ತೆ ಕೆಲವನ್ನು ಸುಟ್ಟು ನಾಶಪಡಿಸುತ್ತಾಳೆ. ಪುನಃ ೧೫೬೯ರಲ್ಲಿ ಪೋರ್ಚುಗೀಸರು ಮಂಗಳೂರಿನ ಕೋಟೆಯನ್ನು ಇವಳಿಂದ ಕಸಿದುಕೊಂಡು ನೆಲಸಮ ಮಾಡಿದ್ದಲ್ಲದೆ, ಕುಂದಾಪುರ ಬಸ್ರೂರಿನ ಬಂದರನ್ನೂ ವಶಪಡಿಸಿಕೊಳ್ಳಲು ಮುಂದಾಗುತ್ತಾರೆ. ಆಗ ಇವರೀರ್ವರ ನಡುವೆ ಯುದ್ಧ ತೀವ್ರವಾಗುತ್ತದೆ. ಧೃತಿಗಡೆದ ಅಬ್ಬಕ್ಕ ಬಿಜಾಪುರದ ಸುಲ್ತಾನ ಹಾಗೂ ಕಲ್ಲಿಕೋಟೆಯ ಝಾಮೋರಿನ್ ಸಹಾಯವನ್ನು ಪಡೆದು ಪೋರ್ಚುಗೀಸರನ್ನು ಎದುರಿಸುತ್ತಾಳೆ.

ಇಟಲಿಯ ಪ್ರವಾಸಿ ಪಿಯತ್ರೊ ದಲ್ಲಾವೆಲ್ಲೆ 'ತನ್ನ ಸಂಚಾರದಲ್ಲಿ ಅರಬ್ ದೇಶದ ಖಲೀಫನಿಂದ ಪೋರ್ಚುಗೀಸರನ್ನೇ ಎದುರಿಸದ ಧೀರ ಮಹಿಳೆ ಅಬ್ಬಕ್ಕನ ವಿಚಾರ ತಿಳಿದುಕೊಂಡು ಕುತೂಹಲದಿಂದ ರಾಣಿ ಅಬ್ಬಕ್ಕಳನ್ನು ಭೇಟಿಯಾಗಲು ಭಾರತಕ್ಕೆ ಬಂದಿರುವುದಾಗಿ ತನ್ನ ಬರಹದಲ್ಲಿ ಹೇಳಿಕೊಂಡಿದ್ದಾನೆ.

ಸುಮಾರು ೪೦ ವರ್ಷಗಳಷ್ಟು ದೀರ್ಘಕಾಲ ಆಳ್ವಿಕೆ ನಡೆಸಿದ ಅಬ್ಬಕ್ಕ ಅಭಯರಾಣಿ (ನಿರ್ಭಯ ರಾಣಿ) ಎಂಬ ಬಿರುದಿಗೆ ಪಾತ್ರಳಾದವಳಾಗಿದ್ದಳು. ಅಬ್ಬಕ್ಕಳ ಕುರಿತಾಗಿ ಇಲ್ಲಿನ ಸ್ಥಳೀಯ ಬರಹಗಳು ಯಾವುದೇ ನಿಖರ ಮಾಹಿತಿಯನ್ನು ನೀಡುವಲ್ಲಿ ವಿಫಲವಾಗಿವೆ. ಇವಳ ಕುರಿತಾದ ಮಾಹಿತಿಗೆ ವಿದೇಶಿಯರ ಬರಹವನ್ನೇ ಆಶ್ರಯಿಸಬೇಕಾಗಿ ಬಂದಿದೆ. ಅಲ್ಲದೆ ವಿದೇಶಿಯರು ಈ ಮನೆತನದ ರಾಣಿಯರನ್ನೆಲ್ಲ ಅಬ್ಬಕ್ಕಳೆಂದೇ ಕರೆದಿದ್ದಾರೆ. ಹಾಗಾಗಿ ಹಿರಿಯ ಅಬ್ಬಕ್ಕದೇವಿ, ಕಿರಿಯ ಅಬ್ಬಕ್ಕದೇವಿ ಎಂದು ತಾಯಿ–ಮಗಳನ್ನು ಗುರುತಿಸುವುದು ಅನಿವಾರ್ಯವಾಗಿದೆ.

ಹದಿನಾರನೆಯ ಶತಮಾನದಲ್ಲಿ ಹೈವೆಕೊಂಕಣಗಳ ಮಹಾಮಂಡಳಾಧಿಪತಿ ಆಗಿದ್ದ ಸಾಳ್ವ ಮನೆತನದ ಚೆನ್ನಭೈರಾದೇವಿಯು ಉತ್ತಮ ಆಡಳಿತಗಾರ್ತಿಯಾಗಿದ್ದಂತೆ, ವ್ಯಾಪಾರ ಹಾಗೂ ಯುದ್ಧದಲ್ಲಿಯೂ ಚತುರೆಯಾಗಿದ್ದಳು. ಇವಳಿಗೂ ಮುನ್ನ ಆಳ್ವಿಕೆ ನಡೆಸುತ್ತಿದ್ದ ಇವಳ ಸೋದರಿ ಚೆನ್ನಾದೇವಿಯ ಕಾಲದಲ್ಲಿ ಇವಳು ಪೋರ್ಚುಗೀಸರಿಗೆ ಸಲ್ಲಿಸುತ್ತಿದ್ದ ಕಾಣಿಕೆಯನ್ನು ನಿಲ್ಲಿಸಿದಳೆಂದು ಮಂಡಲಾಧಿಕಾರಿ ಅಲ್ಫಾನ್ಸೋ ಡಿಸೋಜ ಇವಳ ವ್ಯಾಪಾರ ಕೇಂದ್ರವಾದ ಭಟ್ಕಳವನ್ನು ಸೂರೆಮಾಡಿ, ಸುಟ್ಟು ನಾಶಪಡಿಸಿದ್ದ. ಪೋರ್ಚುಗೀಸರ ದುಷ್ಟತನವನ್ನು ಕಂಡಿದ್ದ ಅರಸಿ ಚೆನ್ನಭೈರಾದೇವಿಯು, ಇವರನ್ನು ನಿಯಂತ್ರಣದಲ್ಲಿ ಇರಿಸಲು ವಿಜಾಪುರ ಮತ್ತು ಕಾಲಿಕತ್ತದ ಝಾಮೋರಿನನೊಡನೆ ಗುಪ್ತ ಒಪ್ಪಂದ ಮಾಡಿಕೊಂಡಿದ್ದಳು.

೧೫೭೦ರಲ್ಲಿ ಪೋರ್ಚುಗೀಸರ ಯುದ್ಧನೌಕೆ ಹೊನ್ನಾವರದಬಳಿಗೆ ಬರುವುದನ್ನು ತಿಳಿದಿದ್ದ ರಾಣಿಯು ಝಾಮೋರಿನ್ ಹಾಗೂ ವಿಜಾಪುರದ ಅರಸರೆಡೆಗೆ ಸಹಾಯ ಹಸ್ತ ಚಾಚಿದಳು. ಆದರೆ ಅವರ ಸಹಾಯ ದೊರಕುವುದು ತಡವಾದರೂ ತಾನೊಬ್ಬಳೇ ಧೈರ್ಯಗುಂದದೆ ನಾಲ್ಕು ದಿನಗಳಕಾಲ ನಿರಂತರ ಹೋರಾಟ ನಡೆಸಿದಳು. ಅವರಿಗೆ ಕೊಡಮಾಡಿದ ಅವರ ನಿವೇಶನಗಳೂ, ಫ್ಯಾಕ್ಟರಿಗಳೂ ನೆಲಸಮಮಾಡಿದಳು. ತಡವಾಗಿ

ಬಂದರೂ ಝಾಮೋರಿನ್ ಹಾಗೂ ವಿಜಾಪುರದ ಸೈನಿಕರು ಪೋರ್ಚುಗೀಸರನ್ನು ಪೂರ್ಣವಾಗಿ ಮಣ್ಣುಮುಕ್ಕಿಸಲು ನೆರವಾದರು. ಅಷ್ಟೇ ಅಲ್ಲದೆ ಪೋರ್ಚುಗೀಸರು ಬಸ್ರೂರನ್ನು ಮುತ್ತಿದಾಗ ಚೆನ್ನಭೈರಾದೇವಿಯು ಸೂರಾಲಿನ ತೋಳಹಾರ ಅರಸರ ಸಹಾಯಕ್ಕೆ ೩೦೦೦ ಸೈನಿಕರನ್ನು ಕಳಿಸಿದಳು.

ಪೋರ್ಚುಗೀಸರನ್ನು ನಿಯಂತ್ರಣದಲ್ಲಿರಿಸಿದ ಅರಸಿ ಚೆನ್ನಭೈರಾದೇವಿಗೆ ದೇಸೀ ಅರಸರೂ ತೊಂದರೆ ಕೊಡುತ್ತಿದ್ದರು. ನೆರೆಹೊರೆಯ ಅರಸುಗಳಾದ ಬಿಳಗಿಯ ರಂಗರಾಜ ಮತ್ತು ಕೆಳದಿಯ ವೆಂಕಟಪ್ಪನಾಯಕ ಹಲವಾರು ಬಾರಿ ಇವಳ ರಾಜ್ಯದ ಮೇಲೆ ಸಮರ ಸಾರಿದರು. ಬಿಳಗಿಯ ರಂಗರಾಜ ಎರಡುಬಾರಿ ಇವಳಿಂದ ಸೋತರೂ ತನ್ನ ಆಕ್ರಮಣಕಾರಿ ಚಟುವಟಿಕೆ ನಿಲ್ಲಿಸಲಿಲ್ಲ. ಬಿಳಗಿ–ಕೆಳದಿ ರಾಜ್ಯಗಳು ವೈವಾಹಿಕ ಸಂಬಂಧ ನಡೆಸುವುದರ ಮೂಲಕ ಒಂದಾಗಿ ಇವಳನ್ನು ಸೋಲಿಸಲು ಸಂಘಟಿತರಾದರು. ಸುಮಾರು ೫೦ ವರ್ಷಗಳ ಕಾಲ ಆಳ್ವಿಕೆ ನಡೆಸಿದ ಚೆನ್ನಭೈರಾದೇವಿಯು ತನ್ನ ಶಕ್ತಿ ಸಾಮರ್ಥ್ಯದಿಂದ ಶತ್ರುಗಳನ್ನು ನಿಗ್ರಹಿಸಿದರೂ ಕಡೆಯ ಕಾಲದಲ್ಲಿ ಕೆಳದಿಯ ವೆಂಕಟಪ್ಪನಾಯಕನ ಕೈದಿಯಾಗಿದ್ದಳೆಂದು ತಿಳಿದುಬರುತ್ತದೆ.

ಬ್ರಿಟಿಶರಿಗಿಂತಲೂ ಮುಂಚಿತವಾಗಿ ಭಾರತಕ್ಕೆ ಬಂದ ಪೋರ್ಚುಗೀಸರು ಇಡೀ ಭಾರತವನ್ನು ಆಕ್ರಮಿಸಬಹುದಿದ್ದ ಅಪಾಯದಿಂದ, ದೇಶವನ್ನು ರಕ್ಷಿಸಿದವರು ಕನ್ನಡನಾಡಿನ ಅರಸಿಯರು. ಪೋರ್ಚುಗೀಸರೊಂದಿಗೆ ಹೋರಾಡಿದ ಅರಸಿಯರಂತೆ ಬ್ರಿಟೀಶರೊಂದಿಗೆ ಸೆಣಸಾಡಿದ ಅರಸಿಯರೂ ಕನ್ನಡನಾಡಿನಲ್ಲಿ ಕಂಡುಬರುತ್ತಾರೆ. ಇವರಲ್ಲಿ ರಣರಂಗದಲ್ಲಿ ಮುಖಾಮುಖಿಯಾಗಿ ಸೆಣಸಾಡಿದ ಅರಸಿ ಕಿತ್ತೂರಿನ ಚೆನ್ನಮ್ಮ.

ಕಿತ್ತೂರು ಚೆನ್ನಮ್ಮ, ಸಣ್ಣ ಪ್ರಾಂತವನ್ನು ಪ್ರತಿನಿಧಿಸುತ್ತಿದ್ದವಳು. ಪತಿ ಹಾಗೂ ಆತನ ಹಿರಿಯ ಮಗನ ಮರಣಾನಂತರ ಚೆನ್ನಮ್ಮಳು ತನ್ನ ಮಲಮಗನ ದತ್ತು ಪುತ್ರನಿಗೆ ರಾಜ್ಯದ ಪಟ್ಟವನ್ನು ಕಟ್ಟಿ ಅವನ ಪರವಾಗಿ ಆಳ್ವಿಕೆ ನಡೆಸುತ್ತಿರುವ ಸಂದರ್ಭದಲ್ಲಿ, ಬ್ರಿಟೀಶರು ಇವಳ ರಾಜ್ಯವನ್ನು ಕಬಳಿಸುವ ಹುನ್ನಾರ ನಡೆಸುತ್ತಾರೆ. ಇವರ ವಿರುದ್ಧ ಎರಡು ಬಾರಿ ಯುದ್ಧ ನಡೆಸುತ್ತಾಳೆ. ಮೊದಲನೆಯ ಕಿತ್ತೂರು ಯುದ್ಧದಲ್ಲಿ ಬ್ರಿಟೀಶ್ ಅಧಿಕಾರಿ ಥ್ಯಾಕರೆಯನ್ನು ರಣರಂಗದಲ್ಲಿ ಕೊಂದು ಜಯಭೇರಿ ಬಾರಿಸಿದ ಚೆನ್ನಮ್ಮಳಿಗೆ, ಎರಡನೆಯ ಯುದ್ಧದಲ್ಲಿ ತನ್ನ ಕಡೆಯಲ್ಲಿದ್ದ ಹಿತಶತ್ರುಗಳ ಒಳಪಿತೂರಿ, ಯುದ್ಧಸಲಕರಣೆಗಳ ಕೊರತೆಯಿಂದ ಬ್ರಿಟೀಶರ ವಿರುದ್ಧ ಸೋಲುವ ಸಂದರ್ಭ ಬರುತ್ತದೆ. ಚೆನ್ನಮ್ಮಳು ತನ್ನ ಕಡೆಯ ದಿನಗಳನ್ನು ಬ್ರಿಟೀಶರ ಬಂಧಿಯಾಗಿ ಕಳೆದರೂ, ಸ್ವಾತಂತ್ರ್ಯದ ಕಿಚ್ಚನ್ನು ಜನರಲ್ಲಿ ಹಚ್ಚಿದ ಮಹಾ ಹೋರಾಟಗಾರ್ತಿ ಎನಿಸಿದ್ದಾಳೆ.

ಸಾಮಾನ್ಯ ಪಾಳೆಯಗಾರನನ್ನು ಮಣಿಸುವುದರಿಂದ ಹಿಡಿದು ದೇಶ–ವಿದೇಶದ ಪ್ರಬಲ ಶತ್ರುಗಳೊಂದಿಗೆ ಹೋರಾಟ ನಡೆಸಿದ ಕನ್ನಡ ನಾಡಿನ ಅರಸಿಯರ ಸಾಹಸದ ಈ ಸ್ಥೂಲ ನೋಟವು ಕರ್ನಾಟಕದ ವೀರಅರಸಿಯರ ಯಶೋಗಾಥೆಯನ್ನು ಪರಿಚಯಿಸುತ್ತದೆ.

## ಅರಸಿಯರ ಸಾಂಸ್ಕೃತಿಕ ಕೊಡುಗೆಗಳು

ನಮ್ಮ ನಾಡಿಗೆ ಹೆಮ್ಮೆ ತರುವಂತಹ ಹಲವಾರು ಸ್ಮಾರಕಗಳು ಪ್ರಾಚೀನರ ಕೊಡುಗೆಗಳಾಗಿವೆ. ಇಲ್ಲಿ ನಮ್ಮ ಪೂರ್ವಜರ ಅಭಿರುಚಿ, ಜ್ಞಾನ, ಧಾರ್ಮಿಕ ನಂಬಿಕೆಗಳು, ಆಚರಣೆಗಳು ಮೊದಲಾದವುಗಳನ್ನು ಗುರುತಿಸಬಹುದು. ಅರಸಿಯರೂ ಕೂಡ ಇಂತಹ ಕೊಡುಗೆಗಳನ್ನು ನೀಡಿರುವುದನ್ನು ಕಾಣಬಹುದು. ಇಲ್ಲಿ ಗುರುತಿಸಿರುವ ಅರಸಿಯರ ಕೊಡುಗೆಗಳು ಕೇವಲ ಉದಾಹರಣಾ ರೂಪದಲ್ಲಿದೆ. ಈ ಹಿಂದೆಯೇ ತಿಳಿಸಿರುವಂತೆ ಸಮಗ್ರ ಮಾಹಿತಿಯನ್ನು ಇಲ್ಲಿ ದಾಖಲಿಸಲಾಗಿಲ್ಲ. ಈ ವಿಭಾಗದಲ್ಲಿ ಅರಸಿಯರು ವಾಸ್ತುಶಿಲ್ಪಕ್ಕೆ ನೀಡಿರುವ ಪ್ರೋತ್ಸಾಹ,

ಸಂಗೀತ–ನೃತ್ಯ ಮೊದಲಾದ ಲಲಿತಕಲೆಗಳಿಗೆ ನೀಡಿರುವ ಪ್ರೋತ್ಸಾಹ, ವಿದ್ಯಾಭ್ಯಾಸಕ್ಕೆ ನೀಡಿದ ಮಹತ್ವ ಮೊದಲಾದ ವಿಚಾರಗಳನ್ನು ಕುರಿತು ಗಮನಿಸಲಾಗಿದೆ. ಮುಂದಿನ ಅಧ್ಯಾಯಗಳಲ್ಲಿ ಸಾಹಿತ್ಯಿಕ ಕೊಡುಗೆಯನ್ನು ಕುರಿತು ವಿಸ್ತೃತವಾಗಿ ಚರ್ಚೆ ಮಾಡಲಾಗುವುದರಿಂದ ಇಲ್ಲಿ ಆ ವಿಚಾರದ ಚರ್ಚೆ ನಡೆಸಿಲ್ಲ.

## ವಾಸ್ತುಶಿಲ್ಪಗಳಿಗೆ ನೀಡಿರುವ ಪ್ರೋತ್ಸಾಹ

ದೇವಾಲಯ ನಿರ್ಮಾಣವು ಕೇವಲ ಧಾರ್ಮಿಕ ಕಾರ್ಯದ ಭಾಗವಾಗಿರದೆ, ಕಲೆಯನ್ನು ಪೋಷಿಸುವ, ಸಂಸ್ಕೃತಿಯನ್ನು ಬಿಂಬಿಸುವ ಅಂಗವಾಗಿ ಬೆಳೆದು ಬಂದಿದೆ. ದೇವಾಲಯದ ಸೌಂದರ್ಯ ಹೆಚ್ಚಿಸುವ ಶಿಲೆಯ ಚಿತ್ತಾರಗಳು, ಗೋಪುರದ ಶೈಲಿಗಳು, ಕಂಬಗಳ ವಿನ್ಯಾಸಗಳಿಗೆ ಬಹಳಷ್ಟು ಒತ್ತುಕೊಟ್ಟು, ಶಿಲ್ಪಿಗಳನ್ನು ದೂರದೂರುಗಳಿಂದ ಕರೆಸಿ ನಿರ್ಮಿಸಿದ ಅನೇಕ ದೇವಾಲಯಗಳ ಕುರಿತಾಗಿ ಅಲ್ಲಿನ ಶಿಲಾಬರಹಗಳು ಮಾಹಿತಿ ನೀಡುತ್ತವೆ. ಇಂಥ ಕಲೆಗಳ ನಿರ್ಮಾಣದಲ್ಲಿ ಕರ್ನಾಟಕದ ಅರಸಿಯರೂ ಹಿಂದೆ ಬಿದ್ದಿಲ್ಲ. ದೇವಾಲಯದ ವಾಸ್ತುಶಿಲ್ಪಕ್ಕೆ ಇವರು ನೀಡಿರುವ ಕೊಡುಗೆ ಅಪಾರವಾಗಿದೆ.

ಕನ್ನಡನಾಡಿನಾದ್ಯಂತ ವಿವಿಧ ಮನೆತನದ ಅರಸಿಯರು ನಿರ್ಮಿಸಿರುವ ದೇವಾಲಯ, ಬಸದಿಗಳು ಅಪಾರ ಸಂಖ್ಯೆಯಲ್ಲಿ ದೊರಕುತ್ತದೆ. ಈ ಅಧ್ಯಾಯದ ಆರಂಭದಲ್ಲಿ ನೀಡಲಾಗಿರುವ ಪಟ್ಟಿಕೆಯಲ್ಲಿ, ಶಾಸನಗಳಲ್ಲಿ ಉಕ್ತವಾಗಿರುವ ಕೆಲವು ದೇವಾಲಯ ಹಾಗೂ ಬಸದಿಗಳನ್ನು ಹೆಸರಿಸಲಾಗಿದೆ. ಕಾಲದಿಂದ ಕಾಲಕ್ಕೆ ದೇವಾಲಯಗಳ ನಿರ್ಮಾಣದ ಶೈಲಿಯಲ್ಲಿ ಭಿನ್ನತೆ ಇರುವುದನ್ನು ತಜ್ಞರು ಗುರುತಿಸಿದ್ದಾರೆ. ವಿಭಿನ್ನ ಶೈಲಿಗಳನ್ನು ರಾಜಮನೆತನದ ಹೆಸರಿನೊಂದಿಗೆ ಗುರುತಿಸಲಾಗುತ್ತದೆ. ಉದಾಹರಣೆಗೆ ಕದಂಬ ಶೈಲಿ, ಹೊಯ್ಸಳ ಶೈಲಿ, ಗಂಗರ ಶೈಲಿ, ಹೀಗೆ ವಿಭಿನ್ನ ರಾಜಮನೆತನಗಳ ಕಾಲದಲ್ಲಿ ವಿಭಿನ್ನ ರೀತಿಯ ವಾಸ್ತು ಕಲೆಗಳನ್ನು ಪರಿಚಯಿಸಲಾಗಿದೆ. ಇದು ದೇವಾಲಯದ ರಚನೆ, ಕಂಬಗಳ ನಿರ್ಮಾಣ, ಶಿಖರದ ಶೈಲಿ ಎಲ್ಲದರಲ್ಲೂ ಭಿನ್ನತೆಯನ್ನು ತೋರುತ್ತದೆ. ಹೊಯ್ಸಳರ ಕಾಲದಲ್ಲಿ ನಕ್ಷತ್ರಾಕಾರದ ದೇವಾಲಯಗಳು, ಗಂಗರ ಕಾಲದಲ್ಲಿ ನಿರ್ಮಾಣವಾಗುತ್ತಿದ್ದ ದುಂಡಾಕಾರದ ಕಂಭಗಳು, ಕದಂಬರ ಶೈಲಿಯನ್ನು ಎತ್ತಿ ಹಿಡಿಯುವ ಚೌಕಾಕಾರದ ಶಿಖರ, ನೊಳಂಬರ ಕಾಲದ ಮಕರ ತೋರಣ ಇವುಗಳನ್ನು ಅರಸಿಯರು ನಿರ್ಮಿಸಿರುವ ದೇವಾಲಯ ಬಸದಿಗಳ ನಿರ್ಮಾಣದಲ್ಲಿಯೂ ಕಾಣಬಹುದಾಗಿದೆ. ಇವುಗಳಿಗೆ ಹೊರತಾಗಿಯೂ ಅರಸಿಯರು ನಿರ್ಮಿಸಿರುವ ದೇವಾಲಯದ ಕೆಲವು ವೈಶಿಷ್ಟ್ಯಗಳನ್ನೂ ಗುರುತಿಸಬಹುದು.

ವಿಜಯಾದಿತ್ಯನ ತಾಯಿ ವಿನಯವತಿಯು ೬೯೮–೯೯ರಲ್ಲಿ ನಿರ್ಮಿಸಿದ ಜಂಬುಲಿಂಗದೇವಾಲಯವು ತ್ರಿಕೂಟಾಚಲವೆಂದು ಪ್ರಸಿದ್ಧಿ ಪಡೆದಿದೆ. ಒಂದೇ ಜಗತಿಯಮೇಲೆ ಪ್ರತ್ಯೇಕ ಮೂರು ಗರ್ಭಗುಡಿಯಲ್ಲಿ ಬ್ರಹ್ಮ ವಿಷ್ಣು ಮಹೇಶ್ವರರನ್ನು ಪ್ರತಿಷ್ಠಾಪಿಸುವ ಈ ಪ್ರಕಾರದ ದೇವಾಲಯಗಳಲ್ಲಿ ಇದೇ ಮೊದಲಿನದೆಂದು ವಾಸ್ತುಶಿಲ್ಪಿಗಳು ಅಭಿಪ್ರಾಯ ಪಡುತ್ತಾರೆ[೫೧].

ಲೋಕಮಹಾದೇವಿಯು ಪತಿಯು ಮೂರನೆಯ ಬಾರಿ ಕಂಚೀಪಟ್ಟಣದ ಮೇಲೆ ದಿಗ್ವಿಜಯ ಗೈದುದರ ಸ್ಮರಣಾರ್ಥವಾಗಿ ಪಟ್ಟದಕಲ್ಲಿನಲ್ಲಿ ದೇವಾಲಯ ಕಟ್ಟಿಸಿದಳು. ಈಕೆಯ ಅಚ್ಚುಮೆಚ್ಚಿನ ಕಲಾಕೃತಿಯಾದ ಈ ಗುಡಿಗೆ ಲೋಕೇಶ್ವರನೆಂಬ ಹೆಸರು ರೂಢವಾಯಿತು. ಈಗ ಇದನ್ನು ವಿರೂಪಾಕ್ಷದೇವಾಲಯವೆಂದು ಗುರುತಿಸಲಾಗುತ್ತದೆ[೫೨].

ಬಾಣರಸ ವಿಜಯಾದಿತ್ಯನ (೭೭೨–೮೯೪) ಮಡದಿ ಮಾಣಿಕಬ್ಬೆ ಅಥವಾ ರತ್ನಾವಳಿಯು ನಂದಿಯಲ್ಲಿ ಭೋಗನಂದೀಶ್ವರ ದೇವಾಲಯ ನಿರ್ಮಿಸಿದ್ದಾಳೆ. ವಾಸ್ತು ಶಿಲ್ಪ ದೃಷ್ಟಿಯಿಂದ ಇದು ಗಮನಾರ್ಹವಾದುದಾಗಿದೆ. ಈ ದೇವಾಲಯದ ಉಬ್ಬುಶಿಲ್ಪ ವಿಶಿಷ್ಟವಾಗಿದೆ, ಗಂಗರ ಕಾಲದ ದೇವಾಲಯಗಳಲ್ಲಿ ಕಂಡುಬರುವಂತೆ

ರುದ್ರಕಾಂತ ಕಂಬಗಳ ಬಳಕೆ ಹೆಚ್ಚಾಗಿದೆ. "ನಂದಿಗ್ರಾಮದ ಆಸುಪಾಸಿನಲ್ಲೆಲ್ಲಿಯೂ ಆ ಕಾಲಕ್ಕೆ ಅಷ್ಟು ಪರಿಪೂರ್ಣತೆಯನ್ನು ಪಡೆದ ವಾಸ್ತು ರಚನೆಗಳು ತಲೆಯೆತ್ತಿರಲಿಲ್ಲ" ಎಂದು ಪಿ.ವಿ.ಕೃಷ್ಣಮೂರ್ತಿಯವರು ಅಭಿಪ್ರಾಯ ಪಡುತ್ತಾರೆ.[೫೩]

ಹೊಯ್ಸಳ ರಾಣಿ ಶಾಂತಲೆಯು ವಾಸ್ತು ಶಿಲ್ಪಕ್ಕೆ ನೀಡಿದ ಮಹತ್ವಕ್ಕೆ, ಇವಳು ನಿರ್ಮಿಸಿದ ಬಸದಿ ಹಾಗೂ ದೇವಾಲಯಗಳೇ ಸಾಕ್ಷಿಯಾಗಿವೆ. ಅಲ್ಲದೆ ಸ್ವತಃ ಈಕೆಯೆ ಕ್ರಿ.ಶ.೧೧೨೩ ರಲ್ಲಿ ಶ್ರವಣಬೆಳಗೊಳದಲ್ಲಿ ಸವತಿ ಗಂಧವಾರಣ ಬಸದಿ ಕಟ್ಟಿಸಿ, ಉದ್ಯಾನವನವನ್ನು ಮಾಡಿಸಿ ಭಕ್ತಜನರ ನಿತ್ಯ ಪೂಜೆಗೋಸ್ಕರ ಒಂದು ಹಳ್ಳಿಯನ್ನೇ ದತ್ತಿಯಾಗಿ ಬಿಟ್ಟುಕೊಟ್ಟಳಲ್ಲದೆ, ಈಶಪುರದಲ್ಲಿ ರಾಮೇಶ್ವರ ದೇವಾಲಯವನ್ನೂ, ಬೇಲೂರಿನ ಕಪ್ಪೆ ಚೆನ್ನಿಗರಾಯ ದೇವಾಲಯವನ್ನೂ ನಿರ್ಮಿಸಿದ್ದಾಳೆ.

ಹಾನುಗಲ್ಲು ಕದಂಬ ರಾಣಿ ಅಕ್ಕಾದೇವಿಯು ನಿರ್ಮಾಣ ಮಾಡಿರುವ ಹಲವು ದೇವಾಲಯಗಳಲ್ಲಿ ಸೂಡಿಯಲ್ಲಿ ಅಕ್ಕೇಶ್ವರ ದೇವಾಲಯ, ವಿಕ್ರಮಪುರದಲ್ಲಿ ಗುಣದಬೆಡಂಗಿ ಜಿನಾಲಯ ಮೊದಲಾದವು ಪ್ರಸಿದ್ಧವಾದುದಾಗಿದೆ. ಪ್ರಸಿದ್ಧ ಸೇನಾಧಿಕಾರಿ ಗಂಗರಾಜನ ಪತ್ನಿ ಅಕ್ಕಲೆ ಕ್ರಿ.ಶ೧೧೧೮ರಲ್ಲಿ ಶ್ರವಣಬೆಳಗೊಳದಲ್ಲಿ ಕಟ್ಟಿಸಿದ ಜಿನಾಲಯ ಇಂದಿಗೂ ಅಕ್ಕನ ಬಸದಿ ಎಂದೇ ಪ್ರಸಿದ್ಧಿ ಪಡೆದಿದೆ. ಅನ್ನ, ವಸತಿ, ಓಷಧಿ, ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡಿಕೊಡಲಾದ ಈ ಬಸದಿಯು ವಾಸ್ತು ಕಲೆಯಲ್ಲಿಯೂ ಶ್ರೇಷ್ಠ ಮಟ್ಟದ್ದಾಗಿದೆ. ಶಿಖರದಲ್ಲಿ ಮೂರು ತೀರ್ಥಂಕರರ ವಿಗ್ರಹವನ್ನೊಳಗೊಂಡಿರುವುದು ಈ ಬಸದಿಯ ವೈಶಿಷ್ಟ್ಯವಾಗಿದೆ. ಸುಂದರವಾದ ಶೈಲಿಯ ಬರಹವನ್ನಷ್ಟೇ ಅಲ್ಲದೆ ಇಲ್ಲಿನ ಶಾಸನವು ಸುಂದರ ಶಿಲ್ಪವನ್ನೂ ಒಳಗೊಂಡಿದೆ.

ಹತ್ತನೆಯ ಶತಮಾನದಲ್ಲಿ ಬಾಪ್ಪುರ ರಾಜಮನೆತನದ ನಾಗಿಯಕ್ಕ ಬಳ್ಳಿಗಾವೆಯಲ್ಲಿ ತಾರಾಭಗವತಿಯ ಮಂದಿರ ನಿರ್ಮಿಸಿದ್ದಾಳೆ. ಬೌದ್ಧರ ಅಧಿದೇವತೆಯಾದ ಈ ವಿಗ್ರಹ ಕಾನಿಷ್ಕನ ಕಾಲದ ಸಮ್ಮಿಶ್ರಣ ಕಲೆಯನ್ನು ಒಳಗೊಂಡು ಅಪ್ರತಿಮ ಕಲಾಕೃತಿ ಎನಿಸಿದೆ.

## ಸಂಗೀತ, ನೃತ್ಯ ಮೊದಲಾದ ಲಲಿತ ಕಲೆಗಳಿಗೆ ಅರಸಿಯರ ಕೊಡುಗೆ

ಶಾಸನಗಳು ಕೆಲವು ರಾಣಿಯರನ್ನು ಉತ್ತಮ ವಾಙ್ಮಿಗಳೆಂದೂ, ಚತುರೆಯರೆಂದು, ವಿದ್ಯಾವಿಳಾಸಿನಿಯರೆಂದೂ, ಮೊದಲಾಗಿ ಬಣ್ಣಿಸಿವೆ. ಆರನೆಯ ವಿಕ್ರಮಾದಿತ್ಯನ ರಾಣಿಯರು ಧರ್ಮ, ರಾಜಕೀಯ ಕಲೆಯನ್ನು ಕರಗತಗೊಳಿಸಿಕೊಂಡಂತೆ ಲಲಿತಕಲೆಯಲ್ಲಿಯೂ ಪ್ರಾವೀಣ್ಯತೆ ಪಡೆದಿದ್ದರು. ಚಂದಲದೇವಿ 'ಸಕಳಕಳಾಧರಿ', 'ನೃತ್ಯವಿದ್ಯಾಧರಿ', ಅಭಿನವಸರಸ್ವತಿ', 'ಕಲಿಕಾಲಸರಸ್ವತಿ', ಎಂದು ಮೊದಲಾಗಿ ಕರೆಯಲ್ಪಟ್ಟಿದ್ದರೆ, ಜಾಕಲದೇವಿಯನ್ನು 'ಕಲಿಕಾಲಪಾರ್ವತಿ', 'ಅಭಿನವ ಸರಸ್ವತಿ', ಎಂದು ಕರೆದಿದೆ. ಪದ್ಮಲದೇವಿಯೂ 'ಸಕಳಕಳಾಧರಿ', 'ಅಭಿನವ ಸರಸ್ವತಿ', ಎಂದು ಕರೆಯಲ್ಪಟ್ಟಿದ್ದಾಳೆ. ಕೇತಲದೇವಿಯನ್ನು 'ಅನೇಕದೇಶಭಾಷಾ ಸಂಗೀತ ವಿದ್ಯಾಧರಿ, 'ಸಕಳಕಳಾಧರಿ' ಎಂದು ಶಾಸನಗಳು ಕೊಂಡಾಡಿವೆ. ಇದೇ ರೀತಿ ಶಾಸನಗಳು ಕೊಂಡಾಡಿರುವ ಇತರ ರಾಣಿಯರೆಂದರೆ 'ವಾಗ್ದೇವಿಯರ ದೊರೆ' ಎನಿಸಿರುವ ಪಲ್ಲವ ದೀವಬ್ಬರಸಿ[೫೪], 'ಸಹಜಸರಸ್ವತಿ ವಿಳಾಸ ವಿದ್ಯಾಧರಿ' ಎಂದೆನಿಸಿರುವ ಮಹಾಸಾಮಂತ ಶೂಕ್ರಕಾಂಕನ ಮಡದಿ ಜಕ್ಕಿಸುಂದರಿ[೫೫], 'ಕಲಿಕಾಲ ಸರಸ್ವತಿ' ಎಂದು ಕರೆಯಲ್ಪಟ್ಟ ಚಾಲುಕ್ಯ ಜಗದೇಕಮಲ್ಲದೇವನ ಮಡದಿ ಸುಗ್ಗಲದೇವಿ[೫೬], 'ವಿಳಾಸ ವಿದ್ಯಾಧರಿ' ಎಂಬ ಬಣ್ಣನೆಗೊಳಗಾಗಿರುವ ಚಾಲುಕ್ಯ ತ್ರೈಲೋಕ್ಯಮಲ್ಲ ಸೋಮೇಶ್ವರನ ಮಡದಿ ಮೈಳಲದೇವಿ[೫೭], 'ಭಾರತೀ ಕರ್ಣಾವತಂಸೆ' ಎಂಬ ಬಿರುದಿಗೆ ಬಾಜನಳಾಗಿರುವ ಸೋವರಸ ದಂಡನಾಥನ ಮಡದಿ, 'ಶೃಂಗಾರ ವಿದ್ಯಾಧರಿ, ಸಕಳಕಳಾಧರಿ ಎಂದೆನಿಸಿದ್ದ ಚಾಲುಕ್ಯ ಭುವನೈಕಮಲ್ಲನ ಮಡದಿ ಕಂಚಲಮಹಾದೇವಿ[೫೮], 'ಅಭಿನವ ಸರಸ್ವತಿ, ವೀರನೊಳಂಬನ ಪತ್ನಿ ಮಾಳಲದೇವಿ 'ವಿದ್ಯಾಧರಿ' ಎಂದೆಲ್ಲ ಹೊಗಳಿಕೆಗೆ ಪಾತ್ರಳಾದ ಭುಮನೈಕಮಲ್ಲನ

ತಂಗಿ ಸುಗ್ಗಲದೇವಿ[೫೯], 'ಅತಿಚತುರೋಕ್ತಿಯೊಳೆ ಸರಸ್ವತಿಗಂ ಮಿಗಿಲು' ಎನಿಸಿದ ಕದಂಬ ಕುಲದ ರಾಣಿ ಮೇಚಲದೇವಿ ಮೊದಲಾದವರು ತಮ್ಮ ಸಂಗೀತ, ನೃತ್ಯ, ವಿದ್ವತ್ತು, ಪಾಂಡಿತ್ಯ ಮೊದಲಾದವುಗಳಿಂದ ಪ್ರಸಿದ್ಧರಾಗಿದ್ದರೆನ್ನುವುದನ್ನು ಅವರ ಈ ಬಿರುದಾವಳಿಗಳೇ ಸಾರುತ್ತವೆ.

ವಿಷ್ಣುವರ್ಧನನ ಅರಸಿ ಶಾಂತಲೆಯು ನಾಟ್ಯರಾಣಿ ಎಂಬ ಬಿರುದನ್ನು ಪಡೆದು, ಇಂದಿಗೂ ಜನಮನದಲ್ಲಿ ನಿಂತಿದ್ದಾಳೆ. ಇವಳ ಹಲವು ಬಿರುದುಗಳಲ್ಲಿ "ಗೀತವಾದ್ಯನ್ರಿತ್ಯ ಸೂತ್ರಧಾರೆಯುಂ" ಎಂಬುದು ಇವಳು ನರ್ತನವನ್ನು ಸಂಯೋಜಿಸುತ್ತಿದ್ದುದರ ಕುರಿತು ತಿಳಿಸುತ್ತದೆ.

ಗಂಗ ಪೆರ್ಮಾಡಿಯ ಪತ್ನಿ ಬಾಚಲದೇವಿ 'ನೃತ್ಯವಿದ್ಯಾಪ್ರಭಾವ ಪ್ರಭೂತನಿರ್ಮ್ಮಳಯಶೋವಿಭಾಸಿನಿ, ಸ್ಥಾನಪಾತ್ರಮುಖಮಣ್ಡನೆ, ಪ್ರತಿಪಕ್ಷಗಾಯಕಾಗಾನ ಮಾನ ಪರಿಖಂಡನೆ, ಚತುರ ವಿದ್ಯಾವಿನೋದೆ, ಎಂಬ ಹಲವು ವಿಶಿಷ್ಟ ಬಿರುದುಗಳನ್ನು ಪಡೆದುಕೊಂಡಿದ್ದಳು. ವೀರಪಾತ್ರಗಳನ್ನು ನೃತ್ಯಕೌಶಲದ ಮೂಲಕ ತೋರ್ಪಡಿಸುವುದು ಬಾಚಲದೇವಿಯ ಪ್ರಮುಖ ಕಲಾವಿದ್ಯೆಯಾಗಿತ್ತು. ತನ್ನ ಪತಿಯ ಯುದ್ಧ ಕೌಶಲ್ಯವನ್ನು, ಆತನು ವೈರಿಗಳನ್ನು ಸೋಲಿಸಿದ ಬಗೆಯನ್ನೂ, ಅವರಿಂದ ಮಾಡಿಸಿಕೊಂಡ ಪಾದಪೂಜೆಯ ಪ್ರಸಂಗಗಳನ್ನೂ ನಾಟ್ಯರೂಪದಲ್ಲಿ ಅಭಿನಯಿಸಿ ತೋರಿಸುವುದರಲ್ಲಿ ನಿಪುಣೆಯಾಗಿದ್ದ ಬಾಚಲದೇವಿಗೆ ಈಕೆಯ ಪತಿ 'ಪಾತ್ರಜಗದಳೆ' ಎಂಬ ಬಿರುದನ್ನು ನೀಡಿದ್ದ ಎನ್ನುವ ವಿಚಾರ ಶಿವಮೊಗ್ಗೆಯ ಶಾಸನದಿಂದ ತಿಳಿದುಬರುತ್ತದೆ[೬೦].

ಗಾಯನ-ನರ್ತನದಲ್ಲಿ ಪ್ರವೀಣೆಯರೆನಿಸಿದ್ದ ಅರಸಿಯರು ಕಲಾವಿದರನ್ನು ಪೋಷಿಸುತ್ತಿದ್ದ ವಿಚಾರವು ತಿಳಿದು ಬರುತ್ತದೆ. ಅಂದಿನ ಕಾಲದಲ್ಲಿ ವಿದ್ಯಾಭ್ಯಾಸ, ಪ್ರವಾಸಿಗರ ತಂಗುದಾಣ, ಅನ್ನಛತ್ರ ಎಲ್ಲವೂ ದೇವಾಲಯದ ಅಧೀನದಲ್ಲಿಯೇ ನಡೆಯುತ್ತಿದ್ದ ಪದ್ಧತಿಯಂತೆಯೇ ಗಾಯನ-ನರ್ತನ ಪ್ರದರ್ಶನಗಳೂ ದೇವರಿಗೆ ಅರ್ಪಿಸುವ ಒಂದು ಸೇವೆ ಎಂಬ ರೀತಿಯಲ್ಲಿಯೇ ನಡೆಯುತ್ತಿತ್ತು. ಅರಸಿಯರು ದೇವಾಲಯದಲ್ಲಿ ನಡೆಯುವ ಇಂತಹ ಸಂಗೀತ, ನರ್ತನಗಳನ್ನು ಪ್ರೋತ್ಸಾಹಿಸಿದ್ದಾರೆ. ಇಲ್ಲಿನ ಕಲಾವಿದರಿಗೆ ದತ್ತಿಯನ್ನು ಕೊಡುವುದರ ಮೂಲಕ ಅವರನ್ನು ಪೋಷಿಸಿರುವುದನ್ನೂ ಕಾಣುತ್ತೇವೆ.

ಒಂದನೇ ಸೋಮೇಶ್ವರನ ರಾಣಿ ಚಾಮಲದೇವಿಯು ಬಲ್ಲಟಗಿಯಲ್ಲಿ ಚಾಮೇಶ್ವರ ದೇವಾಲಯವನ್ನು ನಿರ್ಮಿಸಿ ನರ್ತನಸೇವೆ, ಸಂಗೀತಸೇವೆ ಮೊದಲಾದ ಸೇವೆಗಳಿಗೆ ದತ್ತಿ ನೀಡಿದ್ದಾಳೆ. ಗಂಗ ಬುಜಬ್ಬರಸಿಯು ಶಿರಹಟ್ಟಿಯ ಹೆಬ್ಬಾಳುವಿನ ದೇವಾಲಯದ ವಿವಿಧ ಕಲಾವಿದರಿಗೆ ಕೊಟ್ಟಿರುವ ದತ್ತಿಯ ವಿಚಾರವನ್ನು ಅಲ್ಲಿಯ ಶಾಸನವು ತಿಳಿಸುತ್ತದೆ. ಚಾಳುಕ್ಯ ಅಬ್ಬಲದೇವಿಯು ಲಿಂಗಸುಗೂರಿನಲ್ಲಿ ನಿರ್ಮಿಸಿರುವ ಕಲಿದೇವರ ದೇವಾಲಯದಲ್ಲಿನ ನಾಟ್ಯ ಸೇವೆನೀಡುವವರಿಗೆ ದತ್ತಿ ಕೊಟ್ಟಿರುವುದಲ್ಲದೆ ಅವರಿಗೆ ತೆರಿಗೆಯನ್ನೂ ಮಾನ್ಯಮಾಡಿದ್ದಾಳೆ. ವೀರಬಲ್ಲಾಳನ ರಾಣಿ ಬಮ್ಮಲದೇವಿಯ ಕಲಾಪೋಷಣೆಯನ್ನು ಅತ್ತಿಹಳ್ಳಿಯ ಅಮೃತೇಶ್ವರ ದೇವಾಲಯದ ಶಾಸನವು ಬಣ್ಣಿಸಿದೆ. ಚಾಲುಕ್ಯ ಅರಸಿ ಸುಗ್ಗಲದೇವಿಯು ದೇವಾಪುರದ ಮಾರಸಿಂಗೇಶ್ವರ ದೇವರ ರಂಗಭೋಗಕ್ಕೆ ನೀಡಿರುವ ದತ್ತಿಯು ಇವಳು ಅಲ್ಲಿನ ಕಲಾವಿದರ ಪೋಷಣೆಗೆ ನೀಡಿರುವುದೇ ಆಗಿದೆ.

## ವಿದ್ಯಾಭ್ಯಾಸಕ್ಕೆ ನೀಡಿದ ಮಹತ್ವ

ಸ್ವತಃ ವಿದ್ಯಾವತಿಯರಾಗಿದ್ದು, ಪಾಂಡಿತ್ಯವನ್ನು ಪಡೆದಿದ್ದ ರಾಜಮನೆತನದ ಮಹಿಳೆಯರು ಗ್ರಂಥಗಳನ್ನು ಪ್ರತಿ ಮಾಡಿಸಿ ಅಧ್ಯಯನಕ್ಕಾಗಿ ಬಳಸಿಕೊಳ್ಳುತ್ತಿದ್ದರು. ಇವರು ಅಧ್ಯಯನಕ್ಕೆ ಬಳಸಿಕೊಳ್ಳಲೆಂದು, ಪಾರಾಯಣ ಮಾಡಲೆಂದು ಲಿಪಿಮಾಡಿಸಿಕೊಂಡ ಕೆಲವು ಹಸ್ತಪ್ರತಿಗಳೂ ದೊರೆತು, ಅವರ ಶಾಸ್ತ್ರ ಪರಿಣತಿ ಹಾಗೂ

ಶಾಸ್ತ್ರದಾನಗಳ ಕುರಿತಾದ ಆಸಕ್ತಿಗಳನ್ನು ತಿಳಿಸಿವೆ. ಹೀಗೆ ವಿದ್ಯೆಯ ಮಹತ್ವವನ್ನರಿತ ರಾಣಿಯರು ಸ್ವತಃ ವಿದ್ಯಾಕೇಂದ್ರಗಳಿಗೆ ದತ್ತಿಯನ್ನಿತ್ತು ಪ್ರೋತ್ಸಾಹಿಸಿದ್ದಾರೆ.

ಹನ್ನೊಂದನೆಯ ಶತಮಾನದ ರಟ್ಟ ಅರಸ ಎರಡನೆಯ ಕಾರ್ತವೀರ್ಯನ ಪತ್ನಿ ಭಾಗಲದೇವಿಯು ರಾಜನೀತಿಗಳಲ್ಲಿ ಮಾರ್ಗದರ್ಶಿಯೂ ಆಗಿದ್ದಳು ಈಕೆಯು ಅಂಕರಸನು ಸವದತ್ತಿಯಲ್ಲಿ ಕಟ್ಟಿಸಿದ ಅಂಕೇಶ್ವರ ದೇವಾಲಯಕ್ಕೆ ಹಾಗೂ ಹೂಲಿಯ ಸೋಮೇಶ್ವರ ಮಠದ ಪಂಡಿತರಾದ ಜ್ಞಾನಪಂಡಿತರಿಗೆ ದಾನಮಾಡಿದಳೆನ್ನುವ ವಿಚಾರವನ್ನು ಕ್ರಿ.ಶ.೧೦೮೭ನೆಯ ಸವದತ್ತಿಯ ಶಾಸನವು ತಿಳಿಸುತ್ತದೆ[೬೧].

ಹಾನುಗಲ್ಲು ಕದಂಬ ಅಕ್ಕಾದೇವಿ ಕ್ರಿ.ಶ.೧೦೬೪ರ ಸುಮಾರಿನಲ್ಲಿ ಬಂಕಾಪುರದ ಬಳಿಯ ಮಠವೊಂದರಲ್ಲಿ ಐನೂರು ವಿದ್ಯಾರ್ಥಿಗಳಿಗೆ ಅನುಕೂಲವಾಗುವಂತಹ ವಿದ್ಯಾಕೇಂದ್ರವನ್ನು ನಿರ್ಮಿಸಿದ್ದಳು. ಇದಕ್ಕಾಗಿ ಐನೂರು ಮತ್ತರು ಭೂಮಿ, ಐವತ್ತು ಮನೆಗಳು, ಎರಡು ತೋಟಗಳನ್ನು ಈ ಪೆರೂರಿನ ಅಗ್ರಹಾರಕ್ಕೆ ದಾನವಾಗಿ ನೀಡಿ, ಶಾಸನ ಹಾಕಿಸಿದ್ದಾಳೆ. ಹೊಯ್ಸಳ ಎರಡನೆಯ ನರಸಿಂಹನ ಸೋದರಿ ಸೋವಲದೇವಿಯು ಆ ಕಾಲದ ಪ್ರಸಿದ್ಧ ವಿಶ್ವವಿದ್ಯಾಲಯವಾಗಿದ್ದ ವಲ್ಲಭಿಯನ್ನು ಹೋಲುವಂಥ ವಿದ್ಯಾಲಯವನ್ನು ನಿರ್ಮಿಸಬೇಕೆಂಬ ಬಯಕೆಯಿಂದ ಸೋಮನಾಥಪುರವನ್ನು ನಿರ್ಮಿಸಿ, ಇದನ್ನು ಕೇವಲ ಅಗ್ರಹಾರವಾಗಿಸದೆ ವಿದ್ಯಾಕೇಂದ್ರವನ್ನಾಗಿಸಿ ಹಲವಾರು ಜನರಿಗೆ ಆಶ್ರಯ ಸ್ಥಾನಗಳನ್ನು ಕಲ್ಪಿಸಿಕೊಟ್ಟಳೆನ್ನುವ ವಿಚಾರವನ್ನು ಶಾಸನವು ತಿಳಿಸುತ್ತದೆ. ಕದಂಬ ಮಲ್ಲಿದೇವನ ರಾಣಿ ಪದ್ಮಲದೇವಿ ಹುಲ್ಲುಂಗೂರಿನಲ್ಲಿ ಬ್ರಹ್ಮಪುರಿಯನ್ನು ನಿರ್ಮಿಸಿ ಯಾದವ ಸಿಂಘಣನಿಂದ ಅನುಮತಿಯನ್ನು ಪಡೆದು ಎಲ್ಲಾ ತೆರಿಗೆಗಳನ್ನು ಮುಕ್ತಗೊಳಿಸಿ ಮಹಾಜನರಿಗೆ ದಾನಮಾಡಿದ್ದಾಳೆ. ಜೊತೆಗೆ ಹುಲ್ಲುಂಗೂರನ್ನು ಪ್ರಸಿದ್ಧ ವಿದ್ಯಾಕೇಂದ್ರವನ್ನಾಗಿಸಿದ ಕೀರ್ತಿಯೂ ಇವಳಿಗೇ ಸಲ್ಲುತ್ತದೆ[೬೨]. ಚಾಲುಕ್ಯ ಒಂದನೆಯ ಸೋಮೇಶ್ವರನ ರಾಣಿ ಮೈಳಲದೇವಿಯು ಶ್ರೀಶೈಲದ ದೇವಸ್ಥಾನಕ್ಕೆ ದಾನ ನೀಡುವ ಸಂದರ್ಭದಲ್ಲಿ ಇಲ್ಲಿನ ತಪೋಧನರಿಗೆ ಹಾಗೂ ವಿದ್ಯಾಭ್ಯಾಸಕ್ಕಾಗಿಯೂ ದಾನ ನೀಡಿದ್ದಾಳೆ[೬೩].

ಕಟಗೇರಿ ಗ್ರಾಮದ ಕಡಕೆರೆ ಅಗ್ರಹಾರ ಪ್ರತಿಷ್ಠಿತ ವಿದ್ಯಾಕೇಂದ್ರವಾಗಿತ್ತು. ಕಟಗೆರೆ ತ್ರೈಪುರುಷ ಶಾಲೆಯ ೫೦೦ ಮಹಾಜನರ ಬಹುಮುಖ ಪ್ರತಿಭೆಯನ್ನು ಶಾಸನಗಳು ತಿಳಿಸುತ್ತವೆ. ಅದರಂತೆ ಕ್ರಿ.ಶ.೧೦೯೭ರಲ್ಲಿ ಇಲ್ಲಿನ ಮಹಾಜನರಿಗೆ ಆರನೆಯ ವಿಕ್ರಮಾದಿತ್ಯನ ರಾಣಿ **ಚಂದಲದೇವಿ** ಋಗ್ವೇದ ಖಂಡಿಕ ಮತ್ತು ಶಾಸ್ತ್ರ ಖಂಡಿಕಕ್ಕೆ ತಲಾ ೮ ಗದ್ಯಾಣದಂತೆ ೧೬ ಗದ್ಯಾಣ ನೀಡಿದ್ದಾಳೆ. ಖಂಡಿತ ಎಂದರೆ ಗ್ರಂಥವನ್ನು ಭಾಗವಾಗಿ ಅಧ್ಯಯನ ಮಾಡುವುದು ಎಂದರ್ಥ, ಶಾಸ್ತ್ರಗಳಲ್ಲಿ ಧರ್ಮಶಾಸ್ತ್ರ, ಅರ್ಥಶಾಸ್ತ್ರ, ಗಜಶಾಸ್ತ್ರ, ಹಯಶಾಸ್ತ್ರಗಳ ಅಧ್ಯಯನಕ್ಕೆ ಅವಕಾಶ ಕಲ್ಪಿಸಿದ್ದಾಳೆ.

ಹುಣಸಿಗೆ ಶಾಸನವು, ಜೋಗಣಬ್ಬರಸಿಯು ಆಲನಕೆರೆಯಲ್ಲಿ ಸಹಸ್ರಲಿಂಗದೇವರನ್ನು ಪ್ರತಿಷ್ಠಾಪಿಸಿ, ದೇವಾಲಯ ಹಾಗೂ ವಿದ್ಯಾಸತ್ರಕ್ಕೆ ಭೂಮಿಯನ್ನು ದತ್ತಿಬಿಟ್ಟಳೆಂಬ ಮಾಹಿತಿ ದೊರಕುತ್ತದೆ.

ಗುಲ್ಬರ್ಗಾಜಿಲ್ಲೆಯ ನಾಗಾಯಿ (ನಾಗಾವಾವಿ) ಸುಪ್ರಸಿದ್ಧ ಘಟಿಕಾಸ್ಥಾನ. ಅಲ್ಲಿ ತ್ರೈಪುರುಷದೇವರ ಶಾಲೆ ಘಟಿಕಾಸ್ಥಾನವಾಗಿತ್ತು. ಈ ಅಗ್ರಹಾರವನ್ನು ಕಾಳಿದಾಸ ದಂಡಾಧೀಶನ ಮಡದಿ ರೆಬ್ಬಣಬ್ಬೆ ತನ್ನ ಪತಿಯ ಜೊತೆಗೂಡಿ ಚತುರ್ವೇದ ಪಾರಂಗತರಾದ ೪೦೦ ವಿಪ್ರರಿಗೆ ಕೊಟ್ಟಿದ್ದಳು. ಅದು ೨೦೦ಜನ ವೇದಾಧ್ಯಾಯಿಗಳು, ೫೦ ಶಾಸ್ತ್ರಾಧ್ಯಾಯಿಗಳು, ೩ ಜನ ಉಪಾಧ್ಯಾಯರು, ಇಬ್ಬರು ಭಟ್ಟದರ್ಶನ, ನ್ಯಾಸ ಪ್ರಭಾಕರ ವ್ಯಾಖ್ಯಾತೃಗಳು ಇಬ್ಬರು ವೇದಮನೋದಿಸುವ ಉಪಾಧ್ಯಾಯರು, ೬ ಜನ ಶಾಲೆಯ ಸರಸ್ವತಿ ಭಂಡಾರಿಗರನ್ನು ಹೊಂದಿದ್ದ ಬೃಹತ್ ವಿದ್ಯಾಕೇಂದ್ರವಾಗಿತ್ತು. ಇಲ್ಲಿನ ೨೬೫ ಜನರ ಅಶನಾಚ್ಛಾದನಕ್ಕೆ ದೇವಾಲಯದ ಜೀರ್ಣೋದ್ಧಾರ ಖಣ್ಡ

ಸ್ಫುಟಿತ ನವಸುಧಾಕರ್ಮಕ್ಕೆ ಗಂಧಾಕ್ಷತೆ, ಧೂಪ, ಪುಷ್ಪ ದೀಪ ನೈವೇದ್ಯಗಳಿಗಾಗಿ ೧೦೦೦ ಮತ್ತರು ಭೂಮಿಯನ್ನು ರೆಬ್ಬಣಬ್ಬೆದೇವಿಯು ಪತಿ ಕಾಳಿದಾಸ ದಂಡಾಧೀಶ ನೊಂದಿಗೆ ದಾನ ನೀಡಿದ್ದಾಳೆ.

ಕ್ರಿ.ಶ.೧೧೬೭ರ ಶಾಸನದಲ್ಲಿ[೬೪] ಮಲ್ಲಿದೇವ ಅರಸನ ರಾಣಿ ಸೀತಾದೇವಿಯನ್ನು 'ಶತಸಹಸ್ರ ಫಲಭೋಗ ಭಾಮಿನಿ, ದ್ವಿತೀಯ ಲಕ್ಷ್ಮೀಸಮಾನೆ ಕಳಹಂಸಯಾನೆ, ಶ್ರವ್ಯ ಕಾವ್ಯ ದಿವ್ಯ ಗೀತವಾದ್ಯ ನೃತ್ಯಾದಿವಿದ್ಯಾಪ್ರವೀಣೆ, ರಕ್ಷಿತಾನೇಕಭೀತಜನಪ್ರಾಣೆ, ಎಂದು ಮೊದಲಾಗಿ ವರ್ಣಿಸಲಾಗಿದೆ. ಈ ಸೀತಾದೇವಿಯು ಹೆಂಜೇರಿನ ಮಹಾಘಟಿಕಾಸ್ಥಾನವೆನಿಸಿದ್ದ ಶ್ರೀ ನೊಣಂಬೇಶ್ವರ ದೇವಸ್ಥಾನಕ್ಕಾಗಿ ಅಲ್ಲಿಯ ಆಚಾರ್ಯ ರಾಜಗುರುಗಳಾದ ಶ್ರೀ ಶಿವದೇವರಿಗೆ ಆ ನೊಣಂಬೇಶ್ವರ ದೇವರ ಆವರಣದಲ್ಲಿ ಛತ್ರವನ್ನು ನಡೆಸಲು ದಾನ ನೀಡಿರುವಳಲ್ಲದೆ, ಅಲ್ಲಿಯ ಘಡಿಕಾಸ್ಥಾನದ ವಿದ್ಯಾರ್ಥಿಗಳಿಗೆ, ತಪೋಧನರಿಗೆ, ಪರಿಚಾರಕರಿಗೆ ಆಹಾರಕ್ಕಾಗಿ ದಾನ ನೀಡಿದ್ದಾಳೆ.

ಹತ್ತೊಂಬತ್ತನೆಯ ಶತಮಾನದಲ್ಲಿ ಮೈಸೂರಿನ ಚಾಮರಾಜೇಂದ್ರ ಒಡೆಯರ್‌ನ ಅರಸಿ ಕೆಂಪನಂಜಮ್ಮಣ್ಣಿ ವಾಣಿವಿಲಾಸ ಸನ್ನಿಧಾನ ಆಧುನಿಕ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಿರುವುದಲ್ಲದೆ, ವಿದ್ಯಾರ್ಥಿನಿಯರಿಗೆ ಪ್ರತ್ಯೇಕ ಶಾಲಾ–ಕಾಲೇಜುಗಳ ನಿರ್ಮಾಣ ಮಾಡಿಸಿ, ಸರ್ವರಿಗೂ ವಿದ್ಯಾಭ್ಯಾಸಕ್ಕೆ ಅನುವು ಮಾಡಿಕೊಟ್ಟಿರುವುದೂ ಮಹತ್ವದ ಸಾಧನೆಯೇ ಆಗಿದೆ.

ಪ್ರಾಚೀನ ಭಾರತದಲ್ಲಿ ವಿದ್ಯಾಪ್ರಸಾರಕ್ಕೆ ಗುರುಕುಲಗಳು, ಬ್ರಹ್ಮಪುರಿಗಳು, ಘಟಿಕಾ ಸ್ಥಾನಗಳು ಮತ್ತು ಅಗ್ರಹಾರಗಳು ಅಪಾರ ಕೊಡುಗೆಯನ್ನು ನೀಡಿವೆ. ದೇಶದ ಇಂತಹ ವಿದ್ಯಾಕೇಂದ್ರಗಳಿಗೆ ಜನರು ಹಾಗೂ ರಾಜಕುಲದವರು ಉದಾರವಾಗಿ ದಾನ, ದತ್ತಿ, ಉಂಬಳಿ ಉತ್ತಾರಗಳನ್ನು ನೀಡಿ ಅವು ಉಳಿದು ಬೆಳೆಯಲು ನೆರವಾಗಿದ್ದರು. ಈ ವಿದ್ಯಾಕೇಂದ್ರಗಳು ನಾಡಿನ ಇತಿಹಾಸವನ್ನು ಬಿಂಬಿಸುವಲ್ಲಿ ನಾಡಿನ ಸಾಂಸ್ಕೃತಿಕ ಪರಂಪರೆಯ ಕೊಂಡಿಗಳಂತಿದ್ದವು. ಅಗ್ರಹಾರಗಳಲ್ಲಿ ವಿದ್ಯಾಭ್ಯಾಸ ನಡೆಯುತ್ತಿದ್ದವಾದರೂ ಎಲ್ಲಾ ಅಗ್ರಹಾರಗಳೂ ವಿದ್ಯಾಕೇಂದ್ರಗಳಾಗಿರಲಿಲ್ಲ. "ಯಮನಿಯಮ, ಸ್ವಾಧ್ಯಾಯ, ಧ್ಯಾನ, ಧಾರಣ ಮೋನಾನುಷ್ಠಾನ ಜಪ ಸಮಾಧಿ ಶೀಳ ಗುಣಸಂಪನ್ನರು" ಎಂದು ವರ್ಣಿಸುವೆಡೆ ಸ್ವಾಧ್ಯಯಕ್ಕೆ ೪ ವೇದಗಳಿದ್ದರೂ ಹೆಚ್ಚಿನ ಮಹತ್ವ ಯೋಗಾಭ್ಯಾಸಕ್ಕೆ ನೀಡಿದ ವಿಚಾರ ತಿಳಿಸುತ್ತದೆ. ಚತುರ್ವೇದಿಗಳು, ಶ್ರೀ ಮಹಾಚತುರ್ವಿದ್ಯಾಸಮುದಾಯ, ಮೊದಲಾಗಿ ಮಹಾಜನರನ್ನು ಸ್ತುತಿಸುವುದು ಅಲ್ಲಿನ ಪಂಡಿತರು ನಾಲ್ಕೂ ವೇದಗಳಲ್ಲಿಯೂ ಪಾರಂಗತರಾಗಿದ್ದರೆಂದೂ, ಅಲ್ಲಿನ ವಿದ್ಯಾಕೇಂದ್ರಗಳು ನಾಲ್ಕುವೇದಗಳ ಅಧ್ಯಯನಕ್ಕೆ ಪ್ರಾಶಸ್ತ್ಯ ನೀಡಿದ್ದವೆಂದೂ ತಿಳಿದುಬರುತ್ತದೆ. ಇಂತಹ ಅಗ್ರಹಾರಗಳನ್ನು ಸ್ಥಾಪಿಸುವುದರ ಮೂಲಕ ವಿದ್ಯಾಕೇಂದ್ರಳನ್ನೇ ಸ್ಥಾಪಿಸಿದಂತಾಗಿ ವಿದ್ಯಾಪ್ರಸಾರ ಸುಗಮವಾಗಿ ನಡೆಯುತ್ತಿತ್ತು.

ವಿಷ್ಣುವರ್ಧನನ ಮಡದಿ ಬಮ್ಮಲದೇವಿಯು ಇವಳು ನೀರಗುಂದದಲ್ಲಿ ಒಂದು ಅಗ್ರಹಾರ ಸ್ಥಾಪಿಸಿದಳು. ಕದಂಬ ಶಿವಚಿತ್ತನ ಮಡದಿ ಕಮಲಾದೇವಿಯು ಪ್ರಸಿದ್ಧ ಕಮಲನಾರಾಯಣ ದೇವಾಲಯವನ್ನು ದೇಗಾಂವೆಯಲ್ಲಿ ಕಟ್ಟಿಸಿ, ಆ ಗ್ರಾಮವನ್ನು ಅಗ್ರಹಾರವಾಗಿ ಪರಿವರ್ತಿಸಿದಳೆಂದು ಇಲ್ಲಿಯ ಶಾಸನ ತಿಳಿಸುತ್ತದೆ. ಕ್ರಿ.ಶ.೧೨೨೦ರಲ್ಲಿ ಮೂರನೆಯ ನರಸಿಂಹನ ಕಾಲದಲ್ಲಿ ಹೇರಳಗಟ್ಟ ಶಾಸನ ತಿಳಿಸುವಂತೆ ಬೊಮ್ಮಲೆನಾಗತಿ ಬ್ರಹ್ಮಲಾಪುರ ಅಗ್ರಹಾರವನ್ನು ಸ್ಥಾಪಿಸಿದಳು. ದೀವಬ್ಬರಸಿಯು ಪೊಟಲ್ಲೋರ ಮಂಗಳ ಎಂಬ ಅಗ್ರಹಾರವನ್ನು ಆವನಿಯಲ್ಲಿ ನಿರ್ಮಿಸಿದಳು. ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಅರಸಿ ಮಲಯಮತಿಯು ಸಿಂದವಾಡಿ ನಾಡಿನ ಅಗ್ರಹಾರಕ್ಕೆ ದಾನ ನೀಡಿದ್ದಾಳೆ. ಆರನೆಯ ವಿಕ್ರಮಾದಿತ್ಯನ ಮತ್ತೋರ್ವ ಅಚಲಾದೇವಿಯು ದುತ್ತರಗಾವೆಯಲ್ಲಿ ಅಗ್ರಹಾರ ನಿರ್ಮಿಸಿ ದತ್ತಿಯನ್ನು ನೀಡಿದ್ದಾಳೆ. ಕದಂಬ ಅಕ್ಕಾದೇವಿಯು ಪೆರೂರು ಅಗ್ರಹಾರವನ್ನು, ವಿಕ್ರಮಪುರಿಯನ್ನೂ ನಿರ್ಮಿಸಿದ್ದಳು[೬೫].

ರಾಣಿ ಚನ್ನಮ್ಮಾಜಿ ತನ್ನ ಪತಿಯ ಹೆಸರಿನಲ್ಲಿ ಸೋಮಶೇಖರಪುರ ಅಗ್ರಹಾರವನ್ನು ನಿರ್ಮಿಸಿ, ಕೆಲವು ದಾನದತ್ತಿಗಳನ್ನು ನೀಡಿದ್ದಾಳೆ. ಯಲಹಂಕನಾಡ ಪ್ರಭುಗಳ ಪುಣ್ಯ ಸ್ತ್ರೀ ಮತ್ತು ನಾಟಕ ಶಾಲೆ ಸ್ತ್ರೀ ಕ್ರಮವಾಗಿ

ವೆಂಕಟ ಕೃಷ್ಣಸಾಗರ ಮತ್ತು ಶೃಂಗಾರ ಸಾಗರ ಅಗ್ರಹಾರವನ್ನು ನಿರ್ಮಾಣಮಾಡಿದುದನ್ನು ಶಾಸನಗಳು ಉಲ್ಲೇಖಿಸುತ್ತದೆ[೬೬]. ಮೈಸೂರಿನ ಶಾಸನವೊಂದು ತಿಳಿಸುವಂತೆ[೬೭] ಮೂರನೆಯ ಕೃಷ್ಣರಾಜನ ಎರಡನೆಯ ಧರ್ಮಪತ್ನಿ ಲಿಂಗಾಜಮ್ಮಣ್ಣಿಯವರು ಕೃಷ್ಣವಿಳಾಸದ ಲಿಂಗಾಂಬ ಅಗ್ರಹಾರ ನಿರ್ಮಿಸಿದ್ದಾಳೆ.

**ಅಧ್ಯಯನದ ಫಲಿತ**

ಕರ್ನಾಟಕದ ರಾಣಿಯರ ದಕ್ಷಆಡಳಿತ ನಿರ್ವಹಣೆಗೆ ಈ ಮೇಲಿನ ಕೆಲವು ಉದಾಹರಣೆಗಳು ಸಾಕ್ಷಿಯಾಗಿವೆ. ವಿವಿಧ ಕ್ಷೇತ್ರಗಳಲ್ಲಿನ ಅರಸಿಯರ ಕಾರ್ಯಗಳು ನಾಡಿಗೆ ಉತ್ತಮ ಕೊಡುಗೆಗಳಾಗಿವೆ. ಕೆಲವೊಂದು ಪರಿಮಿತಿಯಲ್ಲಿ ಗಮನಿಸಲಾದ ಈ ಅಲ್ಪವಿಚಾರವು ಇತಿಹಾಸದ ಪುಟಗಳಲ್ಲಿ ಅರಸಿಯರು ಮೂಡಿಸಿದ ಹೆಜ್ಜೆಯ ಸ್ಥೂಲ ಚಿತ್ರಣ ನೀಡಿದೆ. ಒಟ್ಟಾರೆಯಾಗಿ ಗಮನಿಸಲಾದ ಈ ಮಾಹಿತಿಗಳನ್ನು ಪ್ರಾಚೀನ ಹಾಗೂ ಮಧ್ಯಕಾಲೀನ ಎಂಬ ಎರಡು ಕಾಲಮಾನಗಳಲ್ಲಿ ನೋಡಬಹುದು. ಪ್ರಾಚೀನ ಕಾಲದಿಂದ ವಿಜಯನಗರದ ಪೂರ್ವಕಾಲವನ್ನು ಪ್ರಾಚೀನ ವಿಭಾಗದಲ್ಲಿಯೂ ವಿಜಯನಗರ ಅರಸರ ಕಾಲದಿಂದ ಮುಂದಿನ ಕಾಲಮಾನವನ್ನು ಮಧ್ಯಕಾಲೀನ ಎಂದು ವಿಭಾಗಿಸಿ ಗಮನಿಸಿಬಹುದು. ಈ ಎರಡು ಕಾಲಘಟ್ಟವು ಭಾರತದ ರಾಜಕೀಯ ಸ್ಥಿತ್ಯಂತರ ಪರಿಸ್ಥಿತಿಯನ್ನು ಸೂಚಿಸುತ್ತದೆ. ಮೊದಲನೆಯ ಕಾಲಘಟ್ಟದಲ್ಲಿ ದೇಶೀಯ ರಾಜರುಗಳ ಪರಸ್ಪರ ಹೋರಾಟ ಸಂಘರ್ಷಗಳು ಕಂಡುಬಂದರೆ, ಎರಡನೆಯ ಕಾಲಘಟ್ಟದಲ್ಲಿ ವಿದೇಶಿಯರ ದಾಳಿಯ ಸಂದರ್ಭಗಳು ಎದುರಾಗಿವೆ.

ಪ್ರಾಚೀನ ಕಾಲದ ಅರಸಿಯರು ತಮ್ಮ ಪತಿಯ ಸಹಕಾರದೊಂದಿಗೆ ಆಳ್ವಿಕೆ ನಡೆಸಿದ್ದಾರೆ. ಶಾಸನಗಳು ತಿಳಿಸುವಂತೆ 'ಸುಖ ಸಂಕಥಾ ವಿನೋದ'ದಲ್ಲಿ ತೊಡಗಿದ ಅರಸಿಯರು ಧಾರ್ಮಿಕ–ಸಾಂಸ್ಕೃತಿಕ ಕಾರ್ಯಗಳಲ್ಲಿ ಆಸಕ್ತಿವಹಿಸುತ್ತಿದ್ದುದು ಹೆಚ್ಚಾಗಿ ಕಂಡುಬರುತ್ತದೆ. ಆದರೆ, ಮಧ್ಯಕಾಲೀನ ಕರ್ನಾಟಕದ ರಾಣಿಯರ ಸಂದರ್ಭ ವಿಭಿನ್ನವಾಗಿ ತೋರುವುದು. ಪತಿಯ ಅಕಾಲಿಕ ಮರಣದಿಂದ ರಾಜ್ಯಾಡಳಿತ ಕೈಗೊಂಡ ಸಂದರ್ಭಗಳೇ ಹೆಚ್ಚಾಗಿ ತೋರುತ್ತದೆ. ಈ ಕಾಲದಲ್ಲಿ ಸಣ್ಣಪುಟ್ಟ ತುಂಡರಸರು, ಪಾಳೆಯಗಾರರ ಆಡಳಿತವೇ ಹೆಚ್ಚಾಗಿದ್ದು, ಈ ಮನೆತನದ ಮಹಿಳೆಯರು ಪ್ರಾಚೀನ ಅರಸಿಯರಿಗಿಂತ ಭಿನ್ನವೆನಿಸುವುದಕ್ಕೆ ಇಂತಹ ಹಲವಾರು ಕಾರಣಗಳನ್ನು ಗುರುತಿಸಬಹುದಾಗಿದೆ. ಪತಿಯ ಸಹಕಾರದಿಂದ ಪ್ರಾಚೀನ ಅರಸಿಯರು ವಿವಿಧ ಕ್ಷೇತ್ರಗಳಲ್ಲಿ ತಮ್ಮನ್ನು ಗುರುತಿಸಿಕೊಂಡಂತೆ, ತಮಗೆದುರಾದ ಹಲವಾರು ವಿಷಮ ಪರಿಸ್ಥಿತಿಯ ನಡುವೆಯೂ ಹಲವಾರು ಸಾಧನೆಗೈದ ಮಧ್ಯಕಾಲೀನ ಕರ್ನಾಟಕದ ಅರಸಿಯರು ಸಾಹಸಿಗಳೆನಿಸಿದ್ದಾರೆ. "ಈ ಕಾಲದ ಕರ್ನಾಟಕದ ಅರಸಿಯರಿಗೆ ದೊರೆತ ಅವಕಾಶ ಅದೇ ಕಾಲದ ಉತ್ತರ ಭಾರತದ ಯಾವ ರಾಣಿಯರಿಗೂ ದೊರೆತಿರಲಿಲ್ಲ"[೬೮].

ಕನ್ನಡ ಸಾಹಿತ್ಯವಲಯ ಹಾಗೂ ಸಾಮಾಜಿಕ ನೆಲೆಗಳಲ್ಲಿ ಹನ್ನೆರಡನೆಯ ಶತಮಾನದಲ್ಲಿ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಗುರುತಿಸಿಕೊಂಡಂತೆ ಇತರ ಕಾಲದಲ್ಲಿ ಮಹಿಳೆಯರು ಕಂಡು ಬರುವುದಿಲ್ಲ. ಈ ಅಧ್ಯಾಯದಲ್ಲಿ ಗಮನಿಸಿದಂತೆ ರಾಜಕೀಯ ಕ್ಷೇತ್ರದಲ್ಲಿಯೂ ಈ ಕಾಲಘಟ್ಟದಲ್ಲಿ ಮಹಿಳೆಯರು ಹೆಚ್ಚಾಗಿ ಗುರುತಿಸಿಕೊಂಡಿದ್ದಾರೆ. ಕಲ್ಯಾಣಿ ಚಾಲುಕ್ಯ ಅರಸಿಯರು, ಹೊಯ್ಸಳ ಅರಸಿಯರು ತಮ್ಮದೇ ಆದ ಆಳ್ವಿಕೆಯ ಪ್ರದೇಶಗಳನ್ನು ಹೊಂದಿದ್ದು, ದೇವಾಲಯ ನಿರ್ಮಾಣನಡೆಸಿ, ಅಂಗಭೋಗ–ರಂಗಭೋಗಗಳಿಗೆ ದತ್ತಿ ನೀಡುವುದರ ಮೂಲಕ ಸಂಗೀತ–ನರ್ತನಗಳಿಗೆ, ವಿದ್ಯಾಭ್ಯಾಸಕ್ಕೆ, ವಾಸ್ತುಶಿಲ್ಪಕ್ಕೆ ಪ್ರೋತ್ಸಾಹ ನೀಡಿದ್ದಾರೆ. ಕೆರೆ–ಅಗ್ರಹಾರಗಳ ನಿರ್ಮಾಣದಲ್ಲಿ ತೊಡಗಿ ಸಮಾಜಮುಖಿ ಕಾರ್ಯಗಳನ್ನು ನಡೆಸಿದ್ದಾರೆ. ಅಷ್ಟೇ ಅಲ್ಲದೆ ಹಲವಾರು ಸಂಖ್ಯೆಯಲ್ಲಿರುತ್ತಿದ್ದ ಅರಸಿಯರು, ರಾಜಧಾನಿಯಲ್ಲಿರದೆ ತಮ್ಮ ಆಳ್ವಿಕೆಗೆ ಒಳಪಟ್ಟ ಭತ್ತಗ್ರಾಮಗಳಲ್ಲಿ, ಅಗ್ರಹಾರಗಳಲ್ಲಿ ವಾಸವಾಗಿರುತ್ತಿದ್ದರು. ಜನಸಾಮಾನ್ಯರು ತೀರ ಹತ್ತಿರದಿಂದ ಅರಸುಮನೆತನದ ಮಹಿಳೆಯರನ್ನು ಗಮನಿಸಲು ಇದು ಅವಕಾಶ ಕಲ್ಪಿಸಿತು. ಇವರ ವಿದ್ಯಾಭ್ಯಾಸ, ಧಾರ್ಮಿಕ ಚಟುವಟಿಕೆ, ಸಾಮಾಜಿಕ ಕಳಕಳಿ ಹನ್ನೆರಡನೆಯ ಶತಮಾನದ ಮಹಿಳೆಯರ

ಮೇಲೆ ಉತ್ತಮ ಪ್ರಭಾವವನ್ನು ಬೀರಿರುವುದರಲ್ಲಿ ಆಶ್ಚರ್ಯವಿಲ್ಲ. ಸ್ವತಃ ಅರಸಿಯರೇ ಕಾರ್ಯವನ್ನು ಮುನ್ನಡೆಸುವ ಕ್ರಮ ಬಸವಣ್ಣನವರ **'ಕಾಯಕವೇ ಕೈಲಾಸ'** ತತ್ವಕ್ಕೆ ನಿದರ್ಶನವೆಂಬಂತಿದ್ದು, ಪ್ರಜೆಗಳಿಗೆ ಅನುಕರಣೀಯವೆನಿಸಿರುವ ಸಾಧ್ಯತೆಗಳನ್ನು ಅಲ್ಲಗಳೆಯುವಂತಿಲ್ಲ. ಅರಸಿಯರ ಜೀವನ, ಸಾಧನೆಗಳು ಸಾಮಾನ್ಯ ಜನತೆಗೆ ಆದರ್ಶವೆನಿಸುವಂತಿದ್ದು, ಇವರ ಧಾರ್ಮಿಕನಡೆ, ಸಮಾಜದ ಒಳತಿಗಾಗಿ ಕೈಗೊಂಡ ಕಾರ್ಯಗಳು ಪ್ರಜೆಗಳ ಮೇಲೆ ಬೀರಿರಬಹುದಾದ ಪ್ರಭಾವವನ್ನು ಕುರಿತು ವಿಶ್ಲೇಷಿಸುವ ಅಗತ್ಯವಿದೆ.

ಶಾಸನಗಳು ತಿಳಿಸುವಂತೆ ಈ ಕಾಲದಲ್ಲಿ ಹಲವಾರು ಕೆರೆ–ಕಾಲುವೆಗಳ ನಿರ್ಮಾಣ ನಡೆದಿದೆ. ಮಾನವನ ಮೂಲಭೂತ ಅಗತ್ಯವೆನಿಸಿದ ಅನ್ನ, ನೀರು, ಆಶ್ರಯಗಳಿಗೆ ಕೊರತೆ ಇಲ್ಲದಾದಾಗ ಸಾಂಸ್ಕೃತಿಕ ಚಟುವಟಿಕೆಗಳು, ಧಾರ್ಮಿಕ ಕಾರ್ಯಗಳು ಹೆಚ್ಚು ಸುಸೂತ್ರವಾಗಿ ನಡೆಯುವುದು ಸಹಜ. ಇಂತಹ ಅನುಕೂಲಕರ ವಾತಾವರಣ ಹನ್ನೆರಡನೆಯ ಶತಮಾನದಲ್ಲಿ ನಿರ್ಮಾಣವಾದದ್ದು, ಆ ಕಾಲದ ಸಾಮಾನ್ಯ ಜನರು ವಿಭಿನ್ನ ಕ್ಷೇತ್ರಗಳಲ್ಲಿ ತಮ್ಮನ್ನು ಗುರುತಿಸಿಕೊಳ್ಳಲು ಸಾಧ್ಯವಾಗಿದೆ. ಈ ಕಾಲದ ಸಾಮಾನ್ಯ ಮಹಿಳೆಯರು ಹೆಚ್ಚು ಮುಂಚೂಣಿಗೆ ಬರಲು ಇವೆಲ್ಲ ಪ್ರಮುಖ ಕಾರಣಗಳಾಗಿವೆ.

ಈ ಅಧ್ಯಾಯದಲ್ಲಿ ಕೆಲವು ಪರಿಮಿತಿಗಳ ಒಳಗೆ ಕರ್ನಾಟಕದ ರಾಣಿಯರ ಕೆಲವೇ ವಿಚಾರಗಳನ್ನು ಮಾತ್ರ ಗಮನಿಸಲಾಗಿದೆ. ಇಲ್ಲಿ ಚರ್ಚಿಸಲಾಗಿರುವ ವಿಚಾರವು ಕೇವಲ ಒಂದು ಅಧ್ಯಾಯಕ್ಕೆ ಮಾತ್ರ ಸೀಮಿತ ಗೊಳಿಸುವ ವಿಷಯವಾಗಿರದೆ ಇದರ ವ್ಯಾಪಕತೆ ಅಧಿಕವಾಗಿರುವ ಕಾರಣ ಕೆಲವೊಂದು ಮುಖ್ಯ ಅಂಶಗಳನ್ನು ಮಾತ್ರ ಚರ್ಚಿಸಲಾಗಿದೆ. ರಾಣಿಯರ ವಿಚಾರ ಕೇವಲ ಆಕರಗಳ ಪರಿಶೀಲನೆ, ದಾಖಲೀಕರಣಕ್ಕೆ ಮಾತ್ರ ಸೀಮಿತವಾಗದೆ, ವಿಸ್ತೃತವಾಗಿ ಚರ್ಚೆಗೆ ಒಳಗಾಗಬೇಕಾಗಿದೆ ಎನ್ನುವ ಸಂಗತಿಗಳನ್ನು ಈ ಅಧ್ಯಯನವು ನಿರೂಪಿಸಿದೆ.

ಶಾಂತಲೆ, ಕಿತ್ತೂರು ಚೆನ್ನಮ್ಮ, ಬೆಳವಡಿ ಮಲ್ಲಮ್ಮ ಮೊದಲಾದ ಕೆಲವೇ ಬೆರಳೆಣಿಕೆಯ ರಾಣಿಯರು ಮಾತ್ರ ಇತಿಹಾಸದ ಪಠ್ಯಗಳಲ್ಲಿ ಸ್ಥಾನ ಪಡೆದಿದ್ದಾರೆ. ಕೆಲವೊಂದು ಅಧ್ಯಯನದಲ್ಲಿ ಸಾಂದರ್ಭಿಕವಾಗಿ ಕೆಲವು ರಾಣಿಯರ ಕುರಿತಾದ ಅಧ್ಯಯನ ನಡೆದಿದೆಯಾದರೂ, ಪ್ರತಿಯೊಂದು ಕ್ಷೇತ್ರದಲ್ಲಿಯೂ ತಮ್ಮದೇ ಆದ ಕೊಡುಗೆಯನ್ನು ನೀಡಿರುವ ಅನೇಕರಾಣಿಯರ ಕುರಿತಾದ ಸಮಗ್ರ ಅಧ್ಯಯನ ನಡೆದು ಒಂದೆಡೆ ದಾಖಲಾಗಬೇಕಾದ ಅಗತ್ಯತೆಯನ್ನು ಈ ಅಧ್ಯಾಯ ತಿಳಿಸುತ್ತದೆ. ಇಲ್ಲಿ ತೆಗೆದುಕೊಂಡ ಪ್ರತಿಯೊಂದು ಉಪಶೀರ್ಷಿಕೆಗಳನ್ನೂ ಪ್ರತ್ಯೇಕವಾಗಿ ಅಧ್ಯಯನಕ್ಕೆ ಒಳಪಡಿಸುವ ಅಗತ್ಯವಿದೆ. ಪ್ರಸ್ತುತ ಸಂಪ್ರಬಂಧದ ಉದ್ದೇಶ ಸಾಹಿತ್ಯಿಕ ಕೊಡುಗೆಯನ್ನು ಗಮನಿಸುವುದಾದ್ದರಿಂದ ಈ ಎಲ್ಲ ವಿಚಾರಗಳನ್ನು ಸೂಕ್ಷ್ಮವಾಗಿ, ವಿಸ್ತೃತವಾಗಿ ಅಧ್ಯಯನಕ್ಕೆ ಒಳಪಡಿಸುವುದು ಔಚಿತ್ಯವೆನಿಸುವುದಿಲ್ಲವಾದ್ದರಿಂದ, ಕೆಲವು ಉದಾಹರಣೆಗಳ ಮೂಲಕ ಕರ್ನಾಟಕದ ಅರಸಿಯರ ಮಹತ್ಕಾರ್ಯಗಳನ್ನು, ವಿಶೇಷತೆಗಳನ್ನು ಗಮನಿಸಲಾಗಿದೆ.

**ಟಿಪ್ಪಣಿಗಳು ಹಾಗೂ ಆಕರಗ್ರಂಥಗಳು**

೧. E.C VII ಶಿವಮೊಗ್ಗ ೨೪೨ ಶಿಕಾರಿಪುರ

೨. Lakshminarayan Rao.N. 1954, '**Eminent Women of Karnataka**' QJMS, JULY Vol.XLV No.1

೩. ಕ.ವಿ.ವಿ.ಶಾ.ಸಂ. IX ಪಟ್ಟದಕಲ್ಲು ೧೦೧ ಬಾದಾಮಿ ತಾ (ಕ್ರಿ.ಶ.೧೧೬೨)

೪. ಕ.ವಿ.ವಿ.ಶಾ.ಸಂ IX ಹೊಸೂರು ೩೮೩, ಬಾದಾಮಿ ತಾ (ಕ್ರಿ.ಶ.೧೧೬೨)

೫. E.I. XXII, ಪು.೯೮, ನಂ.೧೭ ಕ್ರಿ.ಶ.೭೮೯

೬. E.I. XV ಪು.೭೮, ನಂ.೬, ಕ್ರಿ.ಶ.೧೦೫೦
೭. ಚೆನ್ನಕ್ಕ ಪಾವಟೆ, ೧೯೯೮, **ಹಾನಗಲ್ಲ ಕದಂಬರು**, ಚೆನ್ನಗಂಗಾ ಪ್ರಕಾಶನ, ಧಾರವಾಡ
೮. ಚಿದಾನಂದಮೂರ್ತಿ.ಎಂ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೨೦೧೧, ಸಪ್ನ ಬುಕ್‌ಹೌಸ್, ಬೆಂಗಳೂರು, ಪು.೩೮೧
೯. E.I XIII ನಂ. ೨೮ ನರೇಂದ್ರ, ಧಾರವಾಡ, ಕ್ರಿ.ಶ.೧೧೨೬
೧೦. E.I XV ನಂ ೧೧ ಹೊಟ್ಟೂರು (ತಾ) ಬಂಕಾಪುರ ಕ್ರಿ.ಶ.೧೦೬೪
೧೧. ಕ.ವಿ.ವಿ.ಶಾ. ಸಂix ಅರಸೀಬೀದಿ ೧೦೩ ಹುನಗುಂದ (ತಾ) ಕ್ರಿ.ಶ.೧೦೫೩
೧೨. ಇನ್‌ಸ್ಕ್ರಿಪ್ಷನ್ ಆಫ್ ಆಂಧ್ರಪ್ರದೇಶ್ ಪು.೫೨ & ೫೩
೧೩. ಟಿ.ಟಿ.ಡಿ ಶಾಸನ ೧೧೧ ಪು.೧೬೪–೧೬೭
೧೪. E.C XII ತುಮುಕೂರು, ೬೯ ಪಾವಗಡ
೧೫. ವಸಂತ ಮಾಧವ.ಕೆ.ಜಿ, ೧೯೮೬, **ಗೇರುಸೊಪ್ಪೆಯ ಸಾಳ್ವರು**, ಉತ್ತರ ಕನ್ನಡ ಜಿಲ್ಲೆ ದರ್ಶನ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ಪು.೪೬–೫೪
೧೬. E.C. V ಹಾಸನ ೩೨೧ ಅರಸಿಕೆರೆ
೧೭. E.C. ಶಿವಮೊಗ್ಗ VIII ನಗರ ೩೫
೧೮. E.C. X (ಪರಿ) ೩೬, ಅರಸೀಕೆರೆ
೧೯. E.I. XXIX ಪು ೨೦೩–೨೦೯
೨೦. SII IX(i) No.೧೭
೨೧. **ಕನ್ನಡ ವಿಷಯ ವಿಶ್ವಕೋಶ**, ೨೦೦೫, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಪು.೫೨
೨೨. E.C X ಕೋಲಾರ, ೧೦ ಬಾಗೇಪಲ್ಲಿ
೨೩. E.C X ಕೋಲಾರ, ೩೮ ಮುಳುಬಾಗಿಲು
೨೪. K.I. I–24 ಸಿರಸಂಗಿ (ತಾ) ಸೌಂದತ್ತಿ, (ಕ್ರಿ.ಶ.೧೧೪೮)
೨೫. E.C XI ದಾವಣಗೆರೆ, ೧೦೫ ಕುಂದವಾಡ (ಕ್ರಿ.ಶ.೧೨೧೮)
೨೬. SII ಸಂ XX, ಹಿರೇಬೇವನೂರು ತಾ ೧೭೫ (ಕ್ರಿ.ಶ.೧೧೯೦)
೨೭. SII ಸಂ VII, ೩೭೬ ಕೋಟಕೇರಿ (ತಾ) ಉಡುಪಿ (ಕ್ರಿ.ಶ.೧೧೫೫)
೨೭ಅ. ಶೆಟ್ಟಿ. ಎಸ್.ಡಿ, ***ಗೇರುಸೊಪ್ಪೆಯ ತಾಮ್ರಶಾಸನ***, ಮಂಜುವಾಣಿ, ಜೂನ್ ೧೯೮೯
೨೮. E.I XV ನಂ.೬ ಸೂಡಿ (ತಾ) ರೋಣ, (ಕ್ರಿ.ಶ.೧೦೫೦)
೨೯. ಕಮಲಾ ಹಂಪನಾ, ೨೦೧೧, **ಮಹಾಮಂಡಲೇಶ್ವರಿ ರಾಣಿ ಚೆನ್ನಭೈರಾದೇವಿ ಮತ್ತು ಇತರ ಕರಾವಳಿ ರಾಣಿಯರು**, ಸಪ್ನಬುಕ್ ಹೌಸ್, ಪು.೨೯
೩೦. ಶಿವಣ್ಣ ಕೆ.ಎಸ್(ಸಂ), ೧೯೯೭, **ಕರ್ನಾಟಕ ಚರಿತ್ರೆ** ೩, ಕನ್ನಡ ವಿವಿ, ಹಂಪಿ, ಪು.೨೨೯
೩೧. ಕಮಲಾಹಂಪನಾ ಪೂರ್ವೋಕ್ತ, ೨೦೧೧ ಪು.೨೮
೩೨. E.C. VII ಶಿವಮೊಗ್ಗ ಸಂ.೨೮
೩೩. E.I. XV ೧೧ ಹೊಟ್ಟೂರು (ತಾ) ಬಂಕಾಪುರ (ಕ್ರಿ.ಶ.೧೦೬೪)
೩೪. E.I. XIV ಹೆಮ್ಮಿಗೆ ಶಾಸನ, ಪು.೨೩೪
೩೫. M.A.R. ೧೯೧೧, ಪ್ಯಾರಾ ೭೭ ಪು.೩೮
೩೬. ಶಾಸ್ತ್ರೀ.ಎ.ಕೆ, ೨೦೦೩, **ಶೃಂಗೇರಿ ಮಠದ ಆಯ್ದ ಚಾರಿತ್ರಿಕ ದಾಖಲೆಗಳು**, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂ
೩೭. ಶಟ್ಟರ್.ಷ., ೨೦೧೪, **ಹಳಗನ್ನಡಲಿಪಿ, ಲಿಪಿಕಾರ, ಲಿಪಿ ವ್ಯವಸಾಯ**, ಅಭಿನವ, ಬೆಂಗಳೂರು
೩೮. E.C. ಸಂ X (ಪರಿ) ಶಾ.ಸಂ.೩೬, ಅರಸೀಕೆರೆ, (ಕ್ರಿ.ಶ.೧೧೯೦)
೩೯. E.C. V ಅರಸಿಕೆರೆಯ ಶಾಸನ ಸಂ.೩೬, ೮೬, ಬೇಲೂರು ೧೦೭, ೪೧೫

೪೦. E.C. VII ಶಿವಮೊಗ್ಗ ೩೦
೪೧. E.I. X ನಂ.೨೨ ಗದ್ವಾಲತಾಮ್ರಪಟ (ಕ್ರಿ.ಶ.೬೭೪)
೪೨. ದೇಸಾಯಿ.ಪಿ.ಬಿ(ಸಂ)., ೧೯೫೭, **ಜೈನಿಸಂ ಇನ್ ಸೌತ್ಇಂಡಿಯ,** ಜೈನಸಂಸ್ಕೃತಿ ಸಂರಕ್ಷಕ ಸಂಘ, ಸೊಲ್ಲಾಪುರ, ಪು.೨೩೬
೪೩. E.C. ಸಂ.V ಹಾಸನ ೧೧೬ ಗ್ರಾಮ (ಕ್ರಿ.ಶ.೧೧೨೨)
೪೪. ಎ.ಆರ್.ಎಸ್.ಐ.ಇ ೧೯೦೮–೯ ಪು.೧೭೮
೪೫. E.C. VII ಹೊನ್ನಾಳಿ ಸಂ೨೮, ೩೭,೩೮,೪೦
೪೬. E.C. V ಅರಸಿಕೆರೆ ೧೦೨ ಕಾಟಿಗೆರೆ (ಕ್ರಿ.ಶ.೧೧೮೩)
೪೭. E.C. VIII ಸೊ–೪೧೨ ಹಿರೇಮಾಗಡಿ (ಕ್ರಿ.ಶ.೧೧೭೭)
೪೮. SII ಸಂ XV, ೮೩ ನೀಲಗುಂದ (ತಾ) ಬಾದಾಮಿ (ಕ್ರಿ.ಶ.೧೧೦೬)
೪೯. ಶಾಮಶಾಸ್ತ್ರಿ.ಆರ್.(ಸಂ) ಲಿಂಗಣ್ಣ, ***ಕೆಳದಿನೃಪ ವಿಜಯಂ***, ಕನ್ನಡ ಅಧ್ಯಯನ ಸಂಸ್ಥೆ, ೧೯೭೩, ಮೈಸೂರು ವಿವಿ
೫೦. ಕಲುಬುರ್ಗಿ ಎಂ.ಎಂ.(ಸಂ), ***ವಸುಧಾರೆಗ್ರಾಮದ ಕೃಷಿಯತ್ತು ಸಾಗರದ ಕೃಷಿಯತ್ತು ಕರ್ನಾಟಕ ಕೃಷಿಯತ್ತುಗಳು***, ೧೯೯೪, ಕನ್ನಡ ವಿವಿ ಹಂಪಿ, ಪು.೧೨೨, ೧೨೩ ,೧೫೧
೫೧. ರತ್ನಕುಮಾರಿ.ಬೆಂ.ಶಾ, ***ಬಾಗಲಕೋಟೆ ಜಿಲ್ಲೆಗೆ ರಾಜವಂಶಗಳ ಕೊಡುಗೆ***, ಬಾಗಲಕೋಟೆ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ೨೦೧೧, ಮೈಸೂರು, ಪು.೩೭೩
೫೨. I.A. X ನಂ.೨೨ ಗದ್ವಾಲತಾಮ್ರಪಟ (ಕ್ರಿ.ಶ.೭೫೪)
೫೩. ಕೃಷ್ಣಮೂರ್ತಿ.ಪಿ.ವಿ., ***ಬಾಣರಸರ ಶಾಸನಗಳು***, ೨೦೦೯, ಸಿ.ವಿ.ಜಿ.ಪಬ್ಲಿಕೇಷನ್ಸ, ಬೆಂಗಳೂರು
೫೪. E.C. X, ಮುಳಬಾಗಿಲು, ೩೮ ಆವನಿ (ಕ್ರಿ.ಶ.೮೯೦)
೫೫. E.C. XI ಚಿತ್ರದುರ್ಗ, ೭೪ ಬೇವಿನಹಳ್ಳಿ (ಕ್ರಿ.ಶ.೯೬೮)
೫೬. SII ಸಂ XX ೨೩ ದೇವೂರು (ತಾ) ಸಿಂದಗಿ (ಕ್ರಿ.ಶ.೧೦೨೯)
೫೭. SII ಸಂ I-೧ ೮೩ ಬಾಗೇವಾಡಿ (ಕ್ರಿ.ಶ.೧೦೪೯)
೫೮. SII ಸಂ.IX-I, ೧೩೪ ನಂದಿಕೋಟಕೂರು (ತಾ) ಕರ್ನೂಲ (ಕ್ರಿ.ಶ.೧೦೬೯)
೫೯. SII ಸಂ XX, ೪೯, ಕಲಕೇರಿ (ತಾ) ಹಾನಗಲ್ಲ (ಕ್ರಿ.ಶ.೧೦೭೬)
೬೦. E.C. ಸಂ. VII ಶಿವಮೊಗ್ಗ ೯೭. ಆಲಹಳ್ಳಿ, (ಕ್ರಿ.ಶ.೧೧೧೩)
61. ಬಿ.ಬಿ.ಆರ್.ಎ.ಎಸ್ ಸಂ.೧೦ ಪು–೨೧೩ ; ಕೆಐ ಸಂ.೫ ಪು–೨೦೯
೬೨. KI. ಸಂ IV, ೫೪ ಹುಲಗೂರು, ತಾ. ಶಿಗ್ಗಾಂವ (ಕ್ರಿ.ಶ.೧೨೪೫)
೬೩. S.I.I. IX-i ೧೨೧ ನಂದಿಕೋಟಕೂರು (ತಾ) ಕರ್ನೂಲ (ಕ್ರಿ.ಶ.೧೦೫೭)
೬೪. E.C. XII ತುಮಕೂರು, ೨೩ ಶಿರಾ (ಹೇಮಾವತಿ)
೬೫. ಕವಿಶಾಸಂ– IX ಬಾದಾಮಿ ೧೬, (ಕ್ರಿ.ಶ.೧೦೨೧)
೬೬. E.C. XII ತುಮಕೂರು, ೧೩ & ೨೯ ಕುಣಿಗಲ್ಲು
೬೭. E.C. IV ಮೈಸೂರು ೨, (ಕ್ರಿ.ಶ.೧೮೨೧)
೬೮ ಮಜುಂದಾರ್.ಪಿ.ಬಿ., ***ಸೋಷಿಯೋ ಎಕನಾಮಿಕ್ ಹಿಸ್ಟರಿ ಆಫ್ ನಾರ್ತ್ ಇಂಡಿಯಾ*** ಪು.೧೩೯

# ಅಧ್ಯಾಯ – ೪

## ಐತಿಹಾಸಿಕ ಮತ್ತು ಇತರ ಕಾವ್ಯಗಳಲ್ಲಿ ಕರ್ನಾಟಕದ ಅರಸಿಯರು

ಈ ಹಿಂದಿನ ಅಧ್ಯಾಯದಲ್ಲಿ ಗಮನಿಸಿರುವಂತೆ ಕರ್ನಾಟಕದಲ್ಲಿ ವಿವಿಧ ರಾಜಮನೆತನಗಳಲ್ಲಿ ಅನೇಕ ಅರಸಿಯರು ಅಪಾರ ಸಾಧನೆಗೈದಿದ್ದಾರೆ. ಅವರ ಪ್ರಜಾಪರ ಕಾಳಜಿ, ಶೌರ್ಯ, ವ್ಯಾಪಾರ ಚತುರತೆ, ಧಾರ್ಮಿಕ ಕಾರ್ಯಗಳು, ನೂರಾರು ವರ್ಷಗಳ ಹಿಂದಿನ ಅವರ ಕಾರ್ಯ ಇಂದಿನವರೆಗೂ ಉಳಿದು ಬರುವಂತೆ ನಿರ್ಮಿಸಿರುವ ಸ್ಮಾರಕಗಳು, ಹಾಕಿಸಿರುವ ಶಾಸನಗಳು ಅವರ ಹಿರಿಮೆಯ ದ್ಯೋತಕವಾಗಿವೆ. ಅರಸಿಯರನ್ನು ಸ್ಮರಿಸಿಕೊಳ್ಳಲು ಇವಿಷ್ಟು ಮಾತ್ರವಲ್ಲದೆ, ಹಲವಾರು ಕಾವ್ಯಗಳು ಕರ್ನಾಟಕದ ಅರಸಿಯರ, ರಾಜಕುಮಾರಿಯರ ಕುರಿತಾಗಿ ರಚಿತವಾಗಿರುವುದನ್ನು ಕಾಣುತ್ತೇವೆ. ಕರ್ನಾಟಕದ ಅರಸರನ್ನು ಕುರಿತು ರಚಿಸಲಾದ ಪಂಪನ ವಿಕ್ರಮಾರ್ಜುನವಿಜಯ, ರನ್ನನ ಸಾಹಸಭೀಮವಿಜಯ, ಪೊನ್ನನ ಭುವನೈಕರಾಮಾಭ್ಯುದಯ ಮೊದಲಾದ ಕೃತಿಗಳಂತೆ ಅರಸಿಯರನ್ನು ಕಥಾನಾಯಕಿಗೆ ಸಮೀಕರಿಸಿ ಬರೆದ ಮಹಾಕಾವ್ಯಗಳು ರಚಿತವಾಗಿರದಿದ್ದರೂ, ರಾಣಿಯರನ್ನು ಚಿತ್ರಿಸಿರುವ, ಕಥಾನಾಯಕಿಯಾಗಿಸಿರುವ ಹಲವಾರು ಕೃತಿಗಳನ್ನು ಕಾಣಬಹುದು.

ಅರಸಿಯರ ಗುಣಗಳು, ನಡೆ, ಅವರ ಬದುಕಿನ ಸುತ್ತ ನಡೆದ ಘಟನೆಗಳು ಕಾವ್ಯರಚನೆಗೆ ವಸ್ತುವನ್ನೊದಗಿಸಿವೆ. ಅರಿಕೇಸರಿಯನ್ನು ಅರ್ಜುನನಿಗೆ ಹೋಲಿಸಿರುವಂತೆ, ಅನೇಕ ಅರಸಿಯರನ್ನು ಸೀತೆ, ಅನುಸೂಯ, ಸಾವಿತ್ರಿ, ರತಿ, ಮೊದಲಾದ ಪೌರಾಣಿಕ ಸ್ತ್ರೀಯರಿಗೆ ಹೋಲಿಸಿ ಪದ್ಯ ರಚಿಸಿರುವುದನ್ನು ಕಾಣುತ್ತೇವೆ. ಅಂದಿನ ಸಮಾಜದ ಮೌಲ್ಯಕ್ಕೆ ತಕ್ಕಂತೆ, ಅಂದಿನ ಜನರು ಗೌರವಿಸುತ್ತಿದ್ದ, ಪೂಜ್ಯಭಾವದಿಂದ ಕಾಣುತ್ತಿದ್ದ ಆದರ್ಶನಾರಿ ಎಂಬ ಕಲ್ಪನೆಗೆ ತಕ್ಕುದಾದ ರಾಣಿಯರ ಬದುಕನ್ನು ಅವರ ದೃಷ್ಟಿಯಲ್ಲಿ ಚಿತ್ರಿಸಿದ ಪರಿ ಅಂದಿನ ಸಾಹಿತ್ಯಗಳಲ್ಲಿ ಕಾಣಬಹುದಾಗಿದೆ. ಇವೆಲ್ಲ ದೀರ್ಘಕಾವ್ಯಗಳಲ್ಲದಿದ್ದರೂ, ಸಂದರ್ಭಕ್ಕೆ ಉಚಿತರೀತಿಯಲ್ಲಿ, ಅಗತ್ಯವೆನಿಸಿದ ವಿಚಾರಗಳನ್ನು, ಹೆಚ್ಚು ವೈಭವೀಕರಿಸದೆ ದಾಖಲಿಸಲಾಗಿದೆ.

ಕನ್ನಡದ ಅರಸಿಯರು ಕೆಲವು ಸಂಸ್ಕೃತ ಸಾಹಿತ್ಯಗಳಲ್ಲಿಯೂ ಉಲ್ಲೇಖಗೊಂಡಿದ್ದಾರೆ. ಇವರ ಬದುಕನ್ನು ಕಂಡರಿಸುವುದರಲ್ಲಿ ಶಾಸನ ಸಾಹಿತಿಗಳಂತೆ, ಜನಪದ ಸಾಹಿತಿಗಳೂ ಆಸಕ್ತಿವಹಿಸಿದ್ದರೆನ್ನುವುದನ್ನು ಗಮನಿಸಬಹುದು. ಕನ್ನಡ–ಸಂಸ್ಕೃತ, ಶಿಷ್ಟ–ಜನಪದ' ಸಾಹಿತ್ಯಗಳ ವಿಭಿನ್ನ ಪ್ರಾಕಾರಗಳಲ್ಲಿ ದೊರಕುವ ಅರಸಿಯರ ಕುರಿತಾದ ವಿಚಾರಗಳನ್ನು ಈ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ತಮ್ಮ ಸಾಧನೆ, ನೈಪುಣ್ಯ, ಜೀವನಶೈಲಿಯಿಂದ ಕಾವ್ಯಕ್ಕೆ ಪ್ರೇರಣೆಯಾಗಿ, ಕಾವ್ಯ ರಚನೆಗೆ ವಸ್ತುವನ್ನೊದಗಿಸಿರುವ ಕರ್ನಾಟಕದ ಅರಸಿಯರನ್ನು ಕಾವ್ಯಗಳಲ್ಲಿ ಗುರುತಿಸಿ, ಆ ಮೂಲಕ ಇತಿಹಾಸದ ಕೆಲವೊಂದು ಮಹತ್ವದ ಘಟನೆಗಳಲ್ಲಿ ಕರ್ನಾಟಕದ ಅರಸಿಯರ ಪಾತ್ರ ಹೇಗೆ ಚಿತ್ರಿತವಾಗಿದೆ ಎಂಬುದನ್ನು ವಿಶ್ಲೇಷಿಸಲಾಗಿದೆ.

ಶಿಷ್ಟಕಾವ್ಯಗಳಲ್ಲಿ ಧಾರ್ಮಿಕ, ಐತಿಹಾಸಿಕ, ಸಾಂಸ್ಕೃತಿಕ, ಪೌರಾಣಿಕ ವಿಚಾರಗಳನ್ನು ಕುರಿತಂತೆ ರಚಿಸಲಾಗಿರುವ ಕೆಲವೊಂದು ಕಾವ್ಯಗಳು ಸಾಂದರ್ಭಿಕವಾಗಿ ರಾಣಿಯರ ಬದುಕಿನ ಚಿತ್ರಣವನ್ನು ನೀಡುವುದು. ಆದರೆ ಹಲವು ಜನಪದ ಸಾಹಿತ್ಯಗಳು ಅರಸಿಯರ ಬದುಕಿನ ಸುತ್ತಲೇ ರಚಿತವಾಗಿ, ಅರಸಿಯರ ಜೀವನದ ಪ್ರಮುಖ ಘಟನೆಯೊಂದರ ವಿವರಣೆಯನ್ನು ನೀಡುತ್ತದೆ.

ಪ್ರಸಿದ್ಧ ವಚನ, ರಗಳೆ ಕಾವ್ಯಗಳು ಪ್ರಾಸ್ತಾವಿಕವಾಗಿ ಬಿಂಬಿಸುವ ಅರಸಿಯರ ಬದುಕಿನ ಘಟನೆಗಳು ಅರಸಿಯರು ವಹಿಸಿದ ಮಹತ್ವದ ಪಾತ್ರಗಳನ್ನು ಚರ್ಚೆಗೆ ಒಳಪಡಿಸಲಾಗಿದೆ. ಸಂಸ್ಕೃತ ಸಾಹಿತ್ಯದಲ್ಲಿ ಎಡೆಪಡೆದ ಕರ್ನಾಟಕದ ಮಹಿಳೆಯರ ವೈಶಿಷ್ಟ್ಯ ಹಾಗೂ ಅವರು ಸಾಹಿತ್ಯದಲ್ಲಿ ಬಿಂಬಿತರಾಗಿರುವ ಪರಿಯನ್ನು ವಿಶ್ಲೇಷಿಸಲಾಗಿದೆ. ಜನಪದ ಸಾಹಿತ್ಯ ಪ್ರಕಾರಗಳಲ್ಲಿ ಉಲ್ಲೇಖಿತವಾದ ಅರಸಿಯರ ಕುರಿತ ಮಾಹಿತಿಗಳನ್ನು ಅಧ್ಯಯನಕ್ಕೆ ಒಳಪಡಿಸಿ,

ಜನಪದರಿಗೆ ಅರಸಿಯರಲ್ಲಿ ಯಾರು ಮತ್ತು ಏಕೆ ಮುಖ್ಯರಾಗಿದ್ದಾರೆ ಎಂಬುದನ್ನು ಇಲ್ಲಿ ಗುರುತಿಸುವ ಪ್ರಯತ್ನ ಮಾಡಲಾಗಿದೆ.

## ಕನ್ನಡ ಕಾವ್ಯೋಲ್ಲೇಖದಲ್ಲಿನ ಕರ್ನಾಟಕ ಅರಸಿಯರು

ಸಾವಿರಾರು ವರ್ಷಗಳ ಇತಿಹಾಸವಿರುವ ಕನ್ನಡ ಸಾಹಿತ್ಯವು ಕೇವಲ ಧಾರ್ಮಿಕ ವಿಚಾರವನ್ನು ಮಾತ್ರ ಕುರಿತು ಹೇಳುವುದಿಲ್ಲ. ಸಾಹಿತ್ಯದಲ್ಲಿ ಆಗಮ–ಪೌರಾಣಿಕ ಗ್ರಂಥಗಳಲ್ಲದೆ ಐತಿಹಾಸಿಕ, ಸಾಮಾಜಿಕ, ಕಾಲ್ಪನಿಕ ಮತ್ತು ಲೌಕಿಕ ವಸ್ತುಗಳ ಆಧಾರಿತ ಕೃತಿಗಳೂ ರಚಿತವಾಗಿವೆ. ಧಾರ್ಮಿಕ ವಿಚಾರವನ್ನೇ ಹೇಳುವ ಕೃತಿಗಳೂ ಕೂಡ ಸಮಕಾಲೀನ ಸಾಮಾಜಿಕ, ರಾಜಕೀಯ ವಿಚಾರಗಳನ್ನು ಒಳಗೊಂಡಿರುತ್ತವೆ. ಪ್ರಸ್ತುತ ಅಧ್ಯಯನದಲ್ಲಿ ಈ ಎಲ್ಲ ವಿಚಾರಗಳ ಮೇಲೆ ರಚಿತವಾಗಿರುವ ಸಾಹಿತ್ಯಗಳು, ರಾಜಾಶ್ರಯದಲ್ಲಿ ರಚಿತವಾದ ಕಾವ್ಯಗಳೊಂದಿಗೆ, ಸ್ವತಂತ್ರ ಮನೋಭಾವದಿಂದ ಜನಸಾಮಾನ್ಯರ ನಡುವಿನ ಕವಿಗಳ ಕಾವ್ಯಗಳಲ್ಲಿ ಕಂಡುಬರುವ ಅರಸಿಯರ ಚಿತ್ರಣವನ್ನು ಗಮನಿಸಲಾಗಿದೆ.

### ಸುಗ್ಗಲದೇವಿ

ಚಾಲುಕ್ಯ ಅರಸಿ ಸುಗ್ಗಲದೇವಿಯು ಚಕ್ರವರ್ತಿ ಜಗದೇಕಮಲ್ಲ ಎರಡನೆಯ ಜಯಸಿಂಹನ ಪಿರಿಯರಸಿ. ಶಿವಭಕ್ತೆಯಾದ ಈಕೆಯನ್ನು ಅನೇಕ ಶಾಸನಗಳು ಹಾಗೂ ವೀರಶೈವ ಕಾವ್ಯ ಪುರಾಣಗಳು ಉಲ್ಲೇಖಿಸುತ್ತವೆ.

ಇವಳ ಶೈವಧರ್ಮ ನಿಷ್ಠೆಯನ್ನು ಕೆಲವು ಶಾಸನಗಳು ಚಿತ್ರಿಸಿವೆ. ಇವಳ ಉಲ್ಲೇಖವಿರುವ ಶಾಸನಗಳಲ್ಲಿ ಕೆಲವು ಇವಳು ನೀಡಿದ ದಾನಶಾಸನಗಳಾಗಿದ್ದರೆ, ಇವಳ ಕಾಲದ ನಂತರದಲ್ಲಿ ಕಂಡುಬರುವ ಶಾಸನಗಳಲ್ಲಿ ಇವಳೋರ್ವ ಆದರ್ಶ ಸತಿಯಾಗಿ, ಶಿವಶರಣೆಯಾಗಿ ಬಿಂಬಿತಳಾಗಿದ್ದಾಳೆ. ವೀರಶೈವ ಪುರಾಣಗಳಲ್ಲಿ ಇವಳು ತನ್ನ ಗುರು ದೇವರದಾಸಿಮಯ್ಯನ ಪವಾಡಸದೃಶ್ಯ ಘಟನೆಯೊಂದಕ್ಕೆ ಕಾರಣಳಾಗಿ, ಪಾಲ್ಕುರಿಕೆ ಸೋಮನಾಥನ 'ಬಸವ ಪುರಾಣಮು', ಷಡಕ್ಷರಿಯ 'ಬಸವರಾಜ ವಿಜಯ', ವಿರೂಪಾಕ್ಷ ಪಂಡಿತನ 'ಚೆನ್ನಬಸವ ಪುರಾಣ', ಭೀಮಕವಿಯ 'ಬಸವ ಪುರಾಣ' ಕೃತಿಗಳಲ್ಲಿ ಪರಮ ಶಿವಭಕ್ತೆಯಾಗಿ ಕಂಡುಬರುತ್ತಾಳೆ. ಈ ಕಾವ್ಯಗಳಲ್ಲಿನ ವಿಚಾರವನ್ನೇ ಸೂಕ್ಷ್ಮವಾಗಿ ಲಕ್ಕಣ ದಂಡೇಶನ 'ಶಿವತತ್ತ್ವ ಚಿಂತಾಮಣಿ', ಶಾಂತಲಿಂಗ ದೇಶಿಕನ 'ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ' ಮೊದಲಾದ ಕೃತಿಗಳಲ್ಲಿಯೂ ಕಾಣಬಹುದು.

ಈ ಎಲ್ಲ ಕೃತಿಗಳು ತಿಳಿಸುವಂತೆ ಜಿನಧರ್ಮಪರನಾದ ಅರಸು ಜಯಸಿಂಹ ಪೊಟ್ಟಳಕೆರೆಯ ದೊರೆ. ಈತನ ಮಡದಿ ಸುಗ್ಗಲಾದೇವಿ ಪರಮ ಶಿವಭಕ್ತೆ. ದೇವರ ದಾಸಿಮಯ್ಯ ಇವಳ ಗುರು. ಇವಳ ಶಿವಭಕ್ತಿಯನ್ನು ಕಂಡು ಸಹಿಸದ ಜಿನಮುನಿಗಳು ದೊರೆಗೆ ಆತನ ಅರಸಿಯ ವಿರುದ್ಧವೇ ದೂರು ನೀಡುತ್ತಾರೆ. ಸತಿಪತಿಯರಲ್ಲಿ ಧರ್ಮವಿಚಾರವಾಗಿ ವಾದ–ವಿವಾದಗಳು ನಡೆಯುತ್ತವೆ. ಕಡೆಗೆ ಅರಸನು ಜೈನಗುರುಗಳನ್ನೂ ಸತಿಯು ತನ್ನ ಗುರುವಾದ ದೇವರದಾಸಿಮಯ್ಯನನ್ನೂ ಆಸ್ಥಾನಕ್ಕೆ ಬರಮಾಡಿಕೊಳ್ಳುತ್ತಾರೆ. ಈ ಎರಡೂ ಪಂಗಡದ ಧರ್ಮಗುರುಗಳಲ್ಲಿ ವಾದ ನಡೆಯುತ್ತದೆ. ವಾದದಲ್ಲಿ ಸೋತುಹೋದ ಜೈನರು ಕುಂಭವೊಂದರಲ್ಲಿ ಉಗ್ರವಾದ ಸರ್ಪವೊಂದನ್ನಿರಿಸಿ, ಎಲ್ಲೆಡೆ ಶಿವನಿದ್ದಾನೆನ್ನುವುದಾದಲ್ಲಿ ಈ ಕುಂಭದಲ್ಲಿ ಶಿವನನ್ನು ತೋರಿಸು ಎಂದು ಸವಾಲು ಹಾಕುತ್ತಾರೆ. ದೇವರದಾಸಿಮಯ್ಯನು ತನ್ನ ದೈವ ರಾಮನಾಥನನ್ನೇ ಧ್ಯಾನಿಸುತ್ತಾ ಕುಂಭದೊಳಗೆ ಕೈ ಹಾಕಲು ಈತನ ಸ್ಪರ್ಶದಿಂದಾಗಿ ಆ ಘೋರ ಸರ್ಪವು ಲಿಂಗರೂಪವನ್ನು ತಾಳುತ್ತದೆ. ಸ್ಪಟಿಕ ಲಿಂಗವಾಗಿ ಬದಲಾದ ಸರ್ಪವನ್ನು ಕುಂಭದಿಂದ ಹೊರತೆಗೆದು ನೆರೆದ ಜನರಿಗೆ ಆಶ್ಚರ್ಯವಾಗುವಂತೆ ತೋರಿಸುತ್ತಾನೆ.ಈ ಪವಾಡದಿಂದ ರಾಜ ಜಯಸಿಂಹ ಹಾಗೂ ಅಲ್ಲಿ ನೆರೆದಿದ್ದವರೆಲ್ಲರೂ ಶಿವಲೀಲೆಗೆ ಮನಸೋತು ಶೈವಧರ್ಮೀಯರಾಗುತ್ತಾರೆ.

ಈ ಘಟನೆಯಲ್ಲಿ ಒಬ್ಬ ರಾಣಿಯಾಗಿ ಸುಗ್ಗಲೆ ತಾನು ನಂಬಿದ ಧರ್ಮಕ್ಕಾಗಿ ತನ್ನ ಪತಿಯ ವಿರುದ್ಧವೇ ವಾದ ಹೂಡುತ್ತಾಳೆ. ಶೈವಧರ್ಮೀಯರಿಗೆ ಆಶ್ರಯ ನೀಡಿ, ಶಿವಪಾರಮ್ಯತೆಯನ್ನು ಹರಡಲು ಚರ್ಚೆಗಳನ್ನು ಆಸ್ಥಾನದಲ್ಲಿ ಏರ್ಪಡಿಸುತ್ತಾಳೆ. ತನ್ನನ್ನು ಪರಿವರ್ತಿಸಲು ಬಂದ ಪತಿಯನ್ನೇ ಸಾತ್ವಿಕ ರೀತಿಯಲ್ಲಿ ಬದಲಾಯಿಸಿದ ಆದರ್ಶ ಸತಿಯೆನಿಸಿದ್ದಾಳೆ. ತನ್ನ ಭಕ್ತಿ–ಭಾವನೆಗೆ, ಧಾರ್ಮಿಕ ಚಟುವಟಿಕೆಗಳಿಗೆ ಭಂಗ ಉಂಟಾದಾಗ ಮೀರಾ, ಅಕ್ಕಮಹಾದೇವಿಯರಂತೆ ಅರಮನೆಯನ್ನು ತೊರೆದು ಹೊರಡದೆ, ಹೋರಾಟ ನಡೆಸಿ ತನಗೊದಗಿದ ಪರಿಸ್ಥಿತಿಯನ್ನು ಬದಲಾಯಿಸಿಕೊಂಡ ಛಲಗಾತಿಯಾಗಿ ಸುಗ್ಗಲದೇವಿ ಕಾಣುತ್ತಾಳೆ.

ಷಡಕ್ಷರಿಯ ‘ಬಸವರಾಜ ವಿಜಯ’ ಅಥವಾ ‘ವೃಷಭೇಂದ್ರ ವಿಜಯ’[೧] ೩೫ನೇ ಆಶ್ವಾಸದಲ್ಲಿ ವರ್ಣಿತವಾಗಿರುವ ಈ ಇದೇ ಘಟನೆಯನ್ನು ಚೆನ್ನಬಸವ ಪುರಾಣ[೨] ೫೦ನೇ ಸಂಧಿಯಲ್ಲಿಯೂ ಕಾಣಬಹುದು. ಶಿವಭಕ್ತೆಯಾದ ಅರಸಿ ಸುಗ್ಗಲೆಯ “ಗುರುವೆನಿಪ ದೇವರದಾಸನುಂ ಜಿನರಕೂಡೆ ವಾದಂ ಗೆಯ್ಯೆ ಪೆಟ್ಟಿಯೊಳು ತೊನೆವ ಘಟಸರ್ಪನಂ ಚಂದ್ರಕಾಂತದ ಲಿಂಗವನೆ ಮಾಡಿ ಗೆಲಿಸಿ...” ಎಂಬ ಸಾಲುಗಳು ಸುಗ್ಗಲೆಯ ಗುರು ದೇವರ ದಾಸಿಮಯ್ಯನು ಜೈನರೊಂದಿಗೆ ವಾದವನ್ನು ನಡೆಸಿ, ಅವರು ಪೆಟ್ಟಿಗೆಯಲ್ಲಿರಿಸಿದ್ದ ಘಟಸರ್ಪವನ್ನು ಶಿವಲಿಂಗವನ್ನಾಗಿ ಪರಿವರ್ತಿಸಿದ ಪವಾಡದ ವಿಚಾರವನ್ನು ತಿಳಿಸುತ್ತದೆ.

ಶಿವಭಕ್ತೆ ಸುಗ್ಗಲೆಯು “ಜೈನರಿಗಾಜ್ಞೆಯಂ ಮಾಡಿ ಜನಪತಿಯನಂದು ಶಿವಭಕ್ತನಂ ಮಾಡಿದಳ್ ಅದೇನೆಂಬೆನ್ ಅಚ್ಚರಿಯನು” ಎಂದು ರಾಣಿಯು, ಜೈನಮತೀಯನಾದ ತನ್ನ ಪತಿಯನ್ನು ಶಿವಭಕ್ತನನ್ನಾಗಿ ಮಾಡಿದ್ದಷ್ಟೇ ಅಲ್ಲದೆ, ಮಧ್ಯೆ ಪ್ರವೇಶಿಸದಂತೆ ಜೈನರಿಗೆ ಆಜ್ಞೆಯನ್ನೂ ಮಾಡಿದಳು.

ಇದೇ ಘಟನೆಯು ಬಸವ ಪುರಾಣದ ೨೩ನೆಯ ಸಂಧಿಯಲ್ಲಿ ಮಡಿವಾಳ ಮಾಚಯ್ಯ ದಾಸಿಮಯ್ಯನನ್ನು ಕುರಿತು ಬಸವೇಶ್ವರನಿಗೆ ಹೇಳಿದ ಕಥೆಯಲ್ಲಿಯೂ ಪ್ರಸ್ತಾಪವಾಗಿದೆ. ೫೧ನೆಯ ಸಂಧಿ ಹೊ(ಪೊ)ಟ್ಟಲಕೆರೆಯ ಅರಸನಾದ ದೇಸಿಂಗರಾಯನು ಜಿನಸಮಯಿಯಾಗಿದ್ದನು. ಆತನ ಹೆಂಡತಿ ಸುಗ್ಗಲದೇವಿ ಶಿವಭಕ್ತೆ. ಇಲ್ಲಿಯೂ ಕೂಡ ಸುಗ್ಗಲದೇವಿಯ ಬಿನ್ನಹದ ಮೇರೆಗೆ ಅವಳ ಗುರು ದಾಸಿಮಯ್ಯ ಅರಸನ ಆಸ್ಥಾನಕ್ಕೆ ಜೈನರೊಡನೆ ವಾದಿಸಲು ಬರುತ್ತಾನೆ. ದಾಸಿಮಯ್ಯನ ಎದುರು ಸೋತ ಜೈನರು “ಆವ ಮಾರ್ಗದೊಳಾದಡಾತನ ನಾವು ಕೆಡಿಸಿದಡಲ್ಲದಾಗದು” ಎಂದು ತಮ್ಮೊಳು ವಿಚಾರಿಸಿ, “ಪಾವಕಜ್ವಾಲಾ ಪ್ರಭಾವದ ಹಾವನೊಂದಂ ತರಿಸಿ ಘಟದೊಳಗಿರಿಸಿ ತುಡುಕಿಸುವ” ಎಂದು ಒಂದು ‘ಘನಭುಜಂಗಮನಿರಿಸಿ ಹೆರವಿಯೊಳು’, “ಇಲ್ಲುಂಟೆ ಶಿವಂ?” ಎಂದು ದಾಸಿಮಯ್ಯನನ್ನು ಕೇಳಲು ಆ ಕುಂಭದೊಳಗಿದ್ದ ‘ಘಟಸರ್ಪನಂ ನೋಡಿ’ ಅದರಲ್ಲಿ ‘ಕೈದುಡುಕಿ ಪಟು ದುರ್ಘಟ ಗರಳಧರನಂ ಪಿಡಿದು ತೆಗವಾ ಸಮಯದಲ್ಲಿ ಸ್ಫಟಿಕಲಿಂಗವೊಂದು’ ಕಾಣಿಸುತ್ತಲೆ ಆ ಶ್ರಾವಕರು ‘ಭಯವೊಂದಿಯ ಭಯವನೀವುದೆನುತಡಿಗಡಿಗೆ ಪೊಡಮಡಲು’ ದಾಸಿಮಯ್ಯನು ಆ ಅರಸನಿಗೂ ಆ ಜೈನರಿಗೂ ಶಿವದೀಕ್ಷೆಯನ್ನು ಕೊಡುತ್ತಾನೆ.

ಅರಸಿ ಸುಗ್ಗಲೆಯ ಶಿವಭಕ್ತಿಯನ್ನು ಕೆಲವು ಶಾಸನಗಳೂ ಹೊಗಳುತ್ತವೆ. ಇವಳು ದೇವೂರಿನ ಮಾರಸಿಂಗೇಶ್ವರ ದೇವಾಲಯಕ್ಕೆ ಹಾಗೂ ಅಲ್ಲಿನ ಪಾಶುಪತ ಯೋಗಾಚಾರ್ಯ ಬ್ರಹ್ಮರಾಸಿ ಪಂಡಿತದೇವರಿಗೆ ನೀಡಿರುವ ದಾನದ ವಿವರವನ್ನು ಸಿಂದಗಿಯ ಶಾಸನ[೩] ತಿಳಿಸುತ್ತದೆ.

ಬಸವಪೂರ್ವ ಯುಗದ ಶಿವಭಕ್ತೆಯಾಗಿ, ಶಿವಶರಣರ ಪೋಷಕಳಾಗಿ, ಪರಸಮಯಿಗಳ ವಿರುದ್ಧ ಸೆಣಸಾಡಿದ ದೇವರ ದಾಸಿಮಯ್ಯನ ಶಿಷ್ಯಳಾಗಿ, ತನ್ನಂತೆ ಪತಿಯನ್ನೂ ಶೈವಧರ್ಮಪರನನ್ನಾಗಿಸಿದ ಪ್ರಭಾವಿ ಅರಸಿ ಸುಗ್ಗಲೆ, ಧಾರ್ಮಿಕ ಕಾರಣದಿಂದಾಗಿ ಅನೇಕ ವೀರಶೈವ ಪುರಾಣದಲ್ಲಿ ಸ್ಥಾನ ಪಡೆದಿದ್ದಾಳೆ. ಪ್ರಸ್ತುತ ಸಂದರ್ಭದಲ್ಲಿ ಬಹಳ

ಚರ್ಚೆಗೆ ಒಳಗಾಗಿರುವ ದೇವರದಾಸಿಮಯ್ಯನ ಕಾಲ ನಿರ್ಣಯಕ್ಕೆ ಅರಸಿ ಸುಗ್ಗಲೆಯ ಕುರಿತಾದ ಕಾವ್ಯಗಳು ಆಧಾರ ಒದಗಿಸುವಲ್ಲಿ ಸಹಕಾರಿಯಾಗಿದೆ.

ದಾನಶಾಸನಗಳಲ್ಲಿ, ಧಾರ್ಮಿಕ ವಿಧಿಗಳಲ್ಲಿ ಹಲವಾರು ರಾಜಮನೆತನದ ರಾಣಿಯರು ರಾಜನನ್ನೂ ಮೀರಿಸುವಂತಹ ಕಾರ್ಯಗಳನ್ನು ಮಾಡಿರುವುದನ್ನು ಕಾಣುತ್ತೇವೆ. ಅನೇಕ ಶಾಸನಗಳಲ್ಲಿ ರಾಣಿಯರ ದಾನವನ್ನು ದೊರೆ ಅನುಮೋದಿಸಿರುವುದು, ಸೇನಾಪತಿ ಅಥವ ರಾಣಿಯ ಕೈಕೆಳಗಿನ ಅಧಿಕಾರಿಯ ದಾನಕ್ಕೆ ರಾಣಿ ಸಹಮತ ನೀಡಿರುವುದನ್ನೂ ಕಾಣುತ್ತೇವೆ. ಆದರೆ ಪತಿಯನ್ನು ಎದುರಿಸಿ, ಅವನು ಒಪ್ಪದಿರುವ, ತಾನು ನೆಚ್ಚಿರುವ ಧರ್ಮಕ್ಕೆ ನಿಷ್ಠಳಾಗಿ ನಡೆದುಕೊಂಡು ಕಾವ್ಯಗಳಲ್ಲಿ ಬಿಂಬಿತಳಾಗಿ, ತನ್ನ ನಂತರದ ಕಾಲದಲ್ಲಿಯೂ ಚಿರಸ್ಮರಣೆಯಾಗಿ ಶಾಸನಗಳಲ್ಲಿ ಕಂಡುಬಂದಿರುವ ಸುಗ್ಗಲಾದೇವಿ ಬಸವಪೂರ್ವ ಯುಗದಲ್ಲಿಯೇ ಶಿವಶರಣರಿಗೆ ಆಶ್ರಯ ನೀಡಿ ವಿಭಿನ್ನ ಸಾಲಿಗೆ ಸೇರುವ ಅರಸಿಯಾಗಿ ತೋರುತ್ತಾಳೆ.

ಸುಗ್ಗಲದೇವಿಯು ಪತಿಯ ಇಚ್ಛೆಗೆ ವಿರುದ್ಧವಾಗಿ ನಿಂತು, ಧಾರ್ಮಿಕ ಸ್ವಾತಂತ್ರಗಳಿಸುವಲ್ಲಿ ಅಕ್ಕಮಹಾದೇವಿಯ ನಿಲುವನ್ನೇ ತಳೆದಿರುವುದನ್ನು ಕಾಣುತ್ತೇವೆ. ಬಸವ ಪುರಾಣಮು ಕೃತಿಯಲ್ಲಿ "ಸತಿಗೊಂದು ಗತಿಯು ತಾ ಪತಿಗೊಂದು ಗತಿಯು ಯಾವ ಲೋಕದಲಾದರಿಹುದೇನು" ಎಂದು ಕೇಳಿದ ರಾಜನಿಗೆ "ಪುರುಷಗೆ ಸತಿಯಾದರೂ ಮಾರ್ಗವೊಂದೆ, ಗುರುಶಿಷ್ಯರಿಗೆ ಬೇರೆ ಮಾರ್ಗಗಳುಂಟೆ" ಎಂದು ಪ್ರತಿಯಾಗಿ ಕೇಳಿ "ಮದುವೆ ದಿನವೆನಗಿತ್ತ ಭಾಷೆಯನು ನೀನೆಯಾಲೋಚಿಸು ಹೆಚ್ಚಿನದೇಕೆ ? ಮಾಡಿಕೋ ಮತ್ತೊಬ್ಬ ಭಾರ್ಯೆಯ ನೀನು ಬಿಡು ನನ್ನ ಮೃಡನ ಬಿಟ್ಟೊಲ್ಲೆನು ನಾನು...." ಎಂಬ ವಾದವನ್ನು ಹೂಡುತ್ತಾಳೆ. 'ಪತಿಯೇ ಪರದೈವ' ವೆಂಬ ಸಂಪ್ರದಾಯಬದ್ಧವಾದ ವಿಚಾರವನ್ನು ಬದಿಗಿರಿಸಿ, ತಾನೊಲಿದ ಧರ್ಮಕ್ಕೆ ನಿಷ್ಠಳಾಗಿ ದಿಟ್ಟತನ ತೋರಿದ ಬಸವಪೂರ್ವ ಕಾಲದ ಮಹಿಳೆಯಾಗಿದ್ದಾಳೆ ಸುಗ್ಗಲೆ.

ಧರ್ಮನಿಷ್ಠೆಯನ್ನು ಮೆರೆದ ಸುಗ್ಗಲಾದೇವಿಯ ಆದರ್ಶವನ್ನು ಬಹಳವಾಗಿ ಮೆಚ್ಚಿರುವ ಸಂಗತಿಯನ್ನು ಇವಳ ಕಾಲಾನಂತರದಲ್ಲಿಯೂ ಕೆಲವು ಶಾಸನಗಳು ದೃಢಪಡಿಸುತ್ತವೆ. ಕ್ರಿ.ಶ.೧೧೮೨ರ ಶಾಸನವು ಹೊಯ್ಸಳ ಬಲ್ಲಾಳನ ಅರಸಿ ಕೇತಲದೇವಿಯನ್ನು ಹೊಗಳುವ ಸಂದರ್ಭದಲ್ಲಿ, ವಿಷ್ಣುವರ್ಧನನ ರಾಣಿಶಾಂತಲೆ ಹಾಗೂ ಚಾಲುಕ್ಯ ಅರಸಿಯಾದ ಈ ಸುಗ್ಗಲೆಯರೊಂದಿಗೆ "ಮೂವರರಸಿಯರು ಸೌಭಾಗ್ಯ ಭಾಗ್ಯಗಳಂ" ಪಡೆದವರೆಂದು ಹೊಗಳಿದೆ[೪].

ಇದೇರೀತಿ ಹಳೇಬೀಡಿನ ಶಾಸನದಲ್ಲಿಯೂ ಕೂಡ, ಕುವರಲಕ್ಷ್ಮನ ಹೆಂಡತಿ ಸುಗ್ಗಲೆಯನ್ನು ಬಣ್ಣಿಸುವಾಗ ಇಡೀ ಲೋಕವೇ ಹೊಗಳುವಂತೆ ದೊರೆ ಜಯಸಿಂಹನು ಸುಗ್ಗಲದೇವಿಗೆ ಭಾಷೆ ನೀಡಿದನೆಂದು ಸ್ಮರಿಸಲಾಗಿದೆ.

**ಜಯಸಿಂಹ ಕ್ಷಿತಿಪಾಳಕಂಗೆ ಜಗಮೆಲ್ಲಂ ಬಣ್ಣಿಸಲ್ ಪೂಣ್ದುಭಾ**
**ಷೆಯನಾ ಸುಗ್ಗಲದೇವಿ ಕೊಟ್ಟತೆಱದಿಂ ಬಲ್ಲಾಳ ಭೂಪೋತ್ತಮ**

ಸುಗ್ಗಲಾದೇವಿಯ ಪತಿ ಇಮ್ಮಡಿ ಜಯಸಿಂಹನಿಗೆ ಜಗದೇಕಮಲ್ಲನೆಂಬ ಬಿರುದಿತ್ತು. ಈತನು ಕ್ರಿ.ಶ. ೧೦೧೫–೧೦೪೨ರ ಅವಧಿಯಲ್ಲಿ ಪೊಟ್ಟಲಕೆರೆ (ಈಗಿನ ಹೈದರಾಬಾದ್ ಬಳಿಯ ಪೊಟ್ಲಚೆರು) ಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸುತ್ತಿದ್ದ ಕಲ್ಯಾಣಿ ಚಾಲುಕ್ಯ ಮನೆತನದ ಹೆಸರಾಂತ ಚಕ್ರವರ್ತಿ. ಇಮ್ಮಡಿ ಜಯಸಿಂಹನು ಜೈನಧರ್ಮದ ಆರಾಧಕನಾಗಿದ್ದನು ಎಂಬುದನ್ನು ಶ್ರವಣಬೆಳಗೊಳದ ಶಾಸನ ಹಾಗೂ ಕೆಲವು ಶಿಕಾರಿಪುರದ ಶಾಸನಗಳು ಸ್ಪಷ್ಟಪಡಿಸುತ್ತವೆ. ಆದರೆ ಈತನ ಹೆಚ್ಚಿನ ಸಂಖ್ಯೆಯ ಶಾಸನಗಳು ಶೈವಧರ್ಮಕ್ಕೆ ನಿಷ್ಠೆಯನ್ನು ವ್ಯಕ್ತಪಡಿಸಿರುವ ಹಿನ್ನೆಲೆಯಲ್ಲಿ ರಾಣಿ ಸುಗ್ಗಲಾದೇವಿಯ ಪ್ರಭಾವ ಈತನ ಮೇಲಾಗಿರುವುದನ್ನು ಗುರುತಿಸಬಹುದು.

"ರಾಜಮನೆತನದ ಹಿನ್ನೆಲೆಯಿಂದ ಬಂದು ಶಿವಭಕ್ತೆಯಾಗಿ, ಶೈವರಿಗೆ ಪ್ರೋತ್ಸಾಹ ನೀಡಿ, ಪತಿಯ ನಿಲುವನ್ನೂ ಬದಲಿಸಿ ಆತನ ಆದರವನ್ನೂಗಳಿಸಿ, ತನ್ನ ನಿಲುವನ್ನು ಸಮರ್ಥಿಸಿಕೊಂಡ ಮೊದಲ ಶಿವಶರಣೆ ಸುಗ್ಗಲಾದೇವಿ"[೪೮]. ಕಲ್ಯಾಣಿಚಾಲುಕ್ಯ ಅರಸಿ ಸುಗ್ಗಲಾದೇವಿಯ ಹೆಸರು ಧಾರ್ಮಿಕ ಸ್ವಾತಂತ್ರವನ್ನು ಪಡೆದ ಆದರ್ಶಮಹಿಳೆಯಾಗಿ ಇತಿಹಾಸ ಸಂಸ್ಕೃತಿ ಧಾರ್ಮಿಕ ಅಧ್ಯಯನದ ಸಂದರ್ಭದಲ್ಲಿ ಉಲ್ಲೇಖಾರ್ಹಳಾಗಿದ್ದಾಳೆ.

**ಲಕ್ಷ್ಮೀದೇವಿ:**

ರಾಣಿ ಲಕ್ಷ್ಮೀದೇವಿಯು ಕಲ್ಯಾಣಿ ಚಾಲುಕ್ಯರ ಪ್ರಸಿದ್ಧದೊರೆ ಆರನೆಯ ವಿಕ್ರಮಾದಿತ್ಯನ ಅರಸಿ. ಇವಳು ಕಲ್ಯಾಣದಿಂದಲೇ ದ್ರೋಣಪುರ(ಡೋಣಿ)ವನ್ನಾಳುತ್ತಿದ್ದಳು. ಅಲ್ಲದೆ ರಾಜ್ಯದಲ್ಲಿದ್ದ ೧೮ ಅಗ್ರಹಾರಗಳ, ನಿಟ್ಟಸಿಂಗಿ, ಧರ್ಮಪುರ (ಡಂಬಳ)ಗಳ ಆಡಳಿತಾಧಿಕಾರವನ್ನೂ ನಿರ್ವಹಿಸುತ್ತಿದ್ದಳು. ಇವಳ ಕುರಿತಾಗಿ ಸುಮಾರು ಎಂಟು ಶಾಸನಗಳು ಲಭ್ಯವಿದ್ದು, ಎರಡು ಶಾಸನಗಳು ಡೋಣೀ(ದ್ರೋಣಾಪುರದ)ಯ ಆಡಳಿತ ಕುರಿತಾಗಿ ತಿಳಿಸುವ ಶಾಸನವಾಗಿದೆ. ಇವಳು ಕಲ್ಯಾಣದ ನೆಲೆವೀಡಿನಿಂದಲೂ ಆಳ್ವಿಕೆ ನಡೆಸಿದ್ದಳೆಂದು ತಿಳಿದು ಬರುತ್ತದೆ. ಡೋಣಿಯ ಆಳ್ವಿಕೆ ಕೈಕೊಂಡ ನಾಲ್ಕು ವರ್ಷಗಳಲ್ಲಿ ಕಲ್ಯಾಣದ ಆಳ್ವಿಕೆಯ ಉಲ್ಲೇಖ ಸಿಗುತ್ತದೆ. ಕ್ರಿ.ಶ.೧೦೯೫ರ ಕಾಲದ ಶಾಸನವೊಂದು ಇವಳು 'ಪದಿನೆಂಟು ಅಗ್ರಹಾರಮುಮಂ ಧರ್ಮಪುರಮುಮಂ' ಆಳುತ್ತಿದ್ದಳೆಂದು ತಿಳಿಸುತ್ತದೆ. ಇವಳ ಆರಂಭ ಕಾಲದಿಂದ ದೊರಕಿರುವ ಶಾಸನಗಳನ್ನು ಕ್ರಮವಾಗಿ ಗಮನಿಸಿದಲ್ಲಿ, ಇವಳು ತನ್ನ ಆಡಳಿತ ಪ್ರದೇಶದ ವ್ಯಾಪ್ತಿಯನ್ನು ಹೆಚ್ಚಿಸಿಕೊಂಡು ಬಂದಿರುವುದನ್ನು ಕಾಣುತ್ತದೆ. ಇವಳು ಉತ್ತಮ ಆಡಳಿತಗಾರ್ತಿಯಾಗಿದ್ದಳೆನ್ನುವುದನ್ನು ಇದು ಸೂಚಿಸುತ್ತದೆ. ಲಕ್ಷ್ಮೀದೇವಿಯು ಪಟ್ಟಮಹಾದೇವಿ ಆಗಿದ್ದಳು ಎಂಬ ವಿಚಾರವು ಕ್ರಿ.ಶ.೧೧೦೪ರ ಭಂಡಾರ್ಕರ್ ದಾಖಲೆಗಳು ಮತ್ತು ರಾಮತೀರ್ಥದ ಶಾಸನಗಳಿಂದ ತಿಳಿದು ಬರುತ್ತದೆ.

ಕವಿ ಹರಿಹರನ 'ತೆಲುಗು ಜೊಮ್ಮಯ್ಯನ ರಗಳೆ'[೫]ಯಲ್ಲಿ ವಿಕ್ರಮಾದಿತ್ಯ ಹಾಗೂ ಇವನ ರಾಣಿ ಲಕ್ಷ್ಮೀದೇವಿಗೆ ಸಂಬಂಧಿಸಿದ ಒಂದು ಪ್ರಸಂಗ ಕಾವ್ಯವಸ್ತುವಾಗಿದೆ. ಇದೇ ವಿಚಾರ ಲಕ್ಕಣದಂಡೇಶನ **'ಶಿವತತ್ವ ಚಿಂತಾಮಣಿ'**ಯಲ್ಲಿಯೂ ಉಲ್ಲೇಖವಾಗಿದೆ. ಇಲ್ಲಿ ಲಕ್ಷ್ಮೀದೇವಿಯನ್ನು 'ಪಟ್ಟಮಹಾದೇವಿ ಮಹಾದೇವಿ' ಎಂದು ಕರೆಯಲಾದರೆ, ಹರಿಹರ 'ಲಕುಮಾದೇವಿ' ಎಂದು ಕರೆದಿದ್ದಾನೆ.

**ಹರಿಹರನ ರಗಳೆಯಲ್ಲಿ ಕಂಡುಬರುವ ಲಕ್ಷ್ಮೀದೇವಿಯ ವಿಚಾರ:** ವಿಷ್ಣುಪೂಜಕನಾದ ಪೆರ್ಮಾಡಿಯ ಮಡದಿ ಲಕುಮಾದೇವಿ 'ಪರಮಶಿವ ಲಿಂಗಾರ್ಚನಾನಿರತೆ' ಎನಿಸಿದ್ದಳು. ಒಂದುದಿನ ಜೊಮ್ಮಯ್ಯನು, 'ಪಿರಿಯ ಮಾಳಿಗೆಯೊಳಗೆ ಅರಸನಾ ವಿಷ್ಣುಮಂ ಪೂಜಿಸಲೆಂದು' ನಿಯೋಜಿಸಲ್ಪಟ್ಟ ಪುರಾಣಿಕನು ವಿಷ್ಣು ಸ್ತುತಿಮಾಡಿ ಶಿವನಿಂದೆ ಕೈಕೊಂಡನೆಂದು, ಕುಪಿತನಾಗಿ ಆ ಪುರಾಣಿಕನನ್ನು ಇರಿದು ಕೊಲ್ಲುತ್ತಾನೆ. ಶಿವನಿಂದೆ ಕೇಳಲಾಗದೆ ತಾನು ಮಾಡಿದ ಕಾರ್ಯವನ್ನು ಸಮರ್ಥಿಸಿಕೊಳ್ಳುತ್ತಾ, ಸಮಸ್ತ ಶಿವಭಕ್ತರಲ್ಲಿ ಅರಿಕೆ ಮಾಡಿ, ಎಂದಿನಂತೆ ಲಿಂಗಪೂಜೆಯಲ್ಲಿ ತಲ್ಲೀನನಾಗುತ್ತಾನೆ. ಮಾರನೆಯ ದಿನ ವಿಷ್ಣುಪೂಜೆಗೆ ಪುರಾಣಿಕ ಬರದಿರಲು ಆತಂಕಗೊಂಡ ರಾಜನು ವಿಚಾರಿಸಲಾಗಿ, ಬ್ರಾಹ್ಮಣನೊಬ್ಬನು ನಡೆದ ಸಂಗತಿಯನ್ನು ತಿಳಿಸುತ್ತಾನೆ. ಪುರಾಣಿಕನನ್ನು ಕೊಂದ ಜೊಮ್ಮಯ್ಯನನ್ನು ವಿಚಾರಣೆಗೆ ಬರಬೇಕೆಂದು ದೊರೆ ಕರೆಕಳುಹಿಸುತ್ತಾನೆ. ಆಗ ಅರಸಿ ಲಕುಮಾದೇವಿಯು ಸಂದರ್ಭವನ್ನರಿತು 'ಶಿವಭಕ್ತಂಗಳಿವಿಲ್ಲದ ಚಿಹ್ನಂ ಅಡ್ಡಮಾಗಲ್ ಅದು ಮುನ್ನೆಂದು ಪೊಡಮಡದ ಜೊಮ್ಮಣ್ಣನಿಂದು ಪೊಡೆಮಡೆ ತನಗೆ ಪೊಡಮಟ್ಟನೆಂದರಸಂ ಮನ್ನಿಸುವ'ನೆಂಬ ಬಗೆಯಿಂದ 'ತನ್ನ ಪ್ರಾಣಲಿಂಗಮಂ ಸಿಂಗರಿಸಿ ಮಾಣಿಕ್ಯದ ಸಿಂಹಾಸನವೆರಸರಸನರಿಯದಂತೆ' ಹಿಡಿದಳು. ಹೀಗೆ ದೊರೆ ಕರೆ ಕಳುಹಿಸಿದಾಗ, ಎಂದೂ ದೊರೆಗೆ ತಲೆಬಾಗದ ಶಿವಭಕ್ತ ಜೊನ್ನಮಯ್ಯ ಇಂದು ದೊರೆಗೆ ನಮಸ್ಕರಿಸಿದರೆ ಅವನು

ಮನ್ನಿಸಿ ಕಳಿಸುವನೆಂದು ಬಗೆದ ರಾಣಿ ಲಕ್ಷ್ಮೀದೇವಿ ದೊರೆಗೆ ತಿಳಿಯದಂತೆ ತನ್ನ ಶಿವಲಿಂಗವನ್ನು ಸಿಂಗರಿಸಿ ಸಿಂಹಾಸನದ ಬಳಿ ಇಟ್ಟಳು.

ಇತ್ತ ಸಭಾಭವನ ಪ್ರವೇಶ ಮಾಡಿದ ಜೊಮ್ಮಯ್ಯ 'ಮೇಲಂ ನೋಡಿ ತೊಳತೊಳಪ ಲಿಂಗಮಂ ಘಳಿಲನೆ ಕಂಡು ನಿಜಭಕ್ತಿಯ ಭರದಿಂ ಪೊಡಮಡಲ್ಕೈಯೆತ್ತುತ್ತೋಲ್ಲದೆ ನಿಂದು ಭುವಿಯ ಪಿಂದಿರಲೇಕೆ ಪೊಡಮಡಿಸಸಿಕೊಳಲ್ ಒಲಿವರೆ ಕೆಲಕ್ಕೆ ಬಿಜಯಂಗೈವುದು', ಎನ್ನುತ್ತಾ ಸಿಂಹಾಸನದ ಬಳಿ ಕಂಡ ಶಿವಲಿಂಗಕ್ಕೆ ಕೈಮುಗಿಯಲೆಂದು ಎತ್ತಿದ ಹಸ್ತವನ್ನು ಮತ್ತೊಂದು ದೆಸೆಗೆ ತಿರುಗಿಸಿದಾಗ 'ಶಿವಲಿಂಗಂ ಸಿಂಹಾಸನಮಂ ಬಿಟ್ಟು ಭಕ್ತನ ಕೆಯ್ಯೊಡನೆ ಸರ್ರನೆ ತಿರುಗಿ ಸರಿಸಕ್ಕೆ ಬಂದು ಕೆಲಸಾರ್ದು ಗಗನಾಸನಮಂ' ಕೈಕೊಂಡಿತು. ಜೊಮ್ಮಯ್ಯ ಭಕ್ತಿಭಾವದಿಂದ 'ದೇವ ದೇವ, ಸುಕುಮಾರಲಿಂಗ ಬಿಸಿಲುಗಾಳಿಯೊಳರ್ಪ್ಪರೆ ಸಜ್ಜೆಗೆ ಬಿಜಯಂಗೈವುದು' ಎಂದು ಬಿನ್ನವಿಸಿ ಲಿಂಗವನ್ನು ಸಜ್ಜೆಮನೆಗೆ ಬರಿಸಿಕೊಂಡು ತನ್ನ ಭಕ್ತಿಯ ಮಹತ್ವವನ್ನು ವ್ಯಕ್ತಪಡಿಸುತ್ತಾನೆ.

ಕಣ್ಣೆದುರಿಗೆ ಜೊಮ್ಮಯ್ಯನ ಭಕ್ತಿ ಶಕ್ತಿಯನ್ನು ಕಂಡ ವಿಕ್ರಮಾದಿತ್ಯ ಕಂಪಿತನಾಗುತ್ತಾನೆ. ಪುರಾಣಿಕರನ್ನು ಕೊಂದ ಬಗೆಗೆ ಜೊಮ್ಮಯ್ಯನನ್ನು ವಿಚಾರಿಸಲಾಗಿ ಜೊಮ್ಮಯ್ಯ ಶಿವನಿಂದೆಗಾಗಿ ಅವನನ್ನು ಕೊಂದುದಾಗಿಯೂ ಇದಕ್ಕೆ ಪ್ರತ್ಯಕ್ಷ 'ಆ ಪೆಣನಂ ಮುಸುಂಕಿಟ್ಟು ತೆಗೆಯಲ್ಪುಳುವಿನ ರಾಶಿಯಾಗದಿರ್ದೊಡೆ ನಾನು ಅಪರಾಧಿ', ಎಂದು ಸಾರಿದ. ಅದರಂತೆ ಹೆಣದ ಮುಸುಕು ತೆಗೆಯಲು ಹುಳುವಿನರಾಶಿಯನ್ನು ಕಂಡ ರಾಜ ಜೊಮ್ಮಯ್ಯನಲ್ಲಿ ಕ್ಷಮೆಬೇಡಿ 'ಇರ್ಚ್ಛಾಸಿರ ಪೊನ್‌ಗಳಂ' ಕಾಣ್ಕೆಯಾಗಿತ್ತನು.

ಲಕ್ಷ್ಮೀದೇವಿಯೂ ಪೊನ್ನಪೊಟ್ಟಣ ದಿವ್ಯವಸ್ತ್ರಗಳನ್ನು ಧಾರೆ ಎರೆದಳಲ್ಲದೆ, ವಿಕ್ರಮಾದಿತ್ಯನು ಕಲ್ಯಾಣಕ್ಕೆ ಒಂದು ಯೋಜನದ ಅಂತರದಲ್ಲಿ 'ಪನ್ನಿರ್ಚ್ಛಾಸಿರ ಪೊನ್ನನಿಕ್ಕುವ ಪಟ್ಟಣಮಂ ಶಿವಪುರಮಂ ಮಾಡಿ'ಕೊಟ್ಟನು.

ಇಲ್ಲಿ ಕಥೆ ಅಥವಾ ಪವಾಡಕ್ಕಿಂತ ರಾಣಿ ಲಕ್ಷ್ಮೀದೇವಿಯ ಶಿವಭಕ್ತಿ, ಗುರುವಿನ ಪರವಾದ ಪಕ್ಷಪಾತಿಗುಣ ಕಂಡುಬರುತ್ತದೆ. ಕಾವ್ಯದುದ್ದಕ್ಕೂ ಇವಳನ್ನು 'ಪರಮಶಿವಲಿಂಗಾರ್ಚನಾನಿರತೆ, ಶಿವಭಕ್ತೆ, ಜಂಗಮಸ್ನೇಹಿ ಎಂದು ಕರೆದಿರುವುದನ್ನು ಕಾಣಬಹುದು. ಲಕುಮಾದೇವಿಯ ಪ್ರಾಣಲಿಂಗ ಇಷ್ಟಲಿಂಗವೆಂದು ವ್ಯಕ್ತವಾಗುತ್ತದೆ.

ರಾಣಿ ಲಕ್ಷ್ಮೀದೇವಿಯ ಶಿವಭಕ್ತಿ, ಶಿವಶರಣರ ಪರವಾದ ಗುಣಗಳನ್ನು ಶಾಸನಗಳಲ್ಲಿಯೂ ಕಾಣಬಹುದು. ಇವಳು ಕಲ್ಯಾಣದಲ್ಲಿದ್ದಾಗ ಸೂಡಿಯ ಅಚಲೇಶ್ವರದ ಸೋಮೇಶ್ವರ ಪಂಡಿತ, ಅಲ್ಲಿಯ ತಪೋಧನರಿಗೆ ದಾನ ನೀಡಿರುವುದನ್ನು ಕ್ರಿ.ಶ.೧೦೮೪ರ ಶಾಸನ[೬] ತಿಳಿಸುತ್ತದೆ. ಅಲ್ಲದೆ ಇವಳ ತವರು ಮನೆಯವರೂ ಶೈವನಿಷ್ಠರಾಗಿದ್ದರೆನ್ನುವುದನ್ನು ಖೇಡಗಿಯ ಶಾಸನ ತಿಳಿಸುತ್ತದೆ. ಈ ಶಾಸನವು ಇವಳ ತಂದೆ–ತಾಯಿಗಳು ಕಂಕೇಶ್ವರದೇವರಿಗೆ ನೀಡಿದ ದಾನದ ವಿವರಗಳನ್ನು ನೀಡುತ್ತದೆ[೭].

ಶೈವಧರ್ಮನಿಷ್ಠೆಯನ್ನು ತೋರಿದ ಅರಸಿ ಲಕ್ಷ್ಮೀದೇವಿಯು ತನ್ನ ಆಡಳಿತದ ಅವಧಿಯಲ್ಲಿ ಬೌದ್ಧ, ಜೈನಧರ್ಮಗಳಿಗೂ ಅವಕಾಶ ಒದಗಿಸಿಕೊಟ್ಟಿದ್ದಳು. ಕ್ರಿ.ಶ.೧೦೯೫ರ ಡಂಬಳದ ಶಾಸನದ ಪ್ರಕಾರ ಇವಳು ಹದಿನೆಂಟು ಅಗ್ರಹಾರ ಧರ್ಮಪುರದ ಆಳಿಕೆ ಕೈಕೊಂಡ ಸಮಯದಲ್ಲಿ ಧರ್ಮಪೊಳಲದ ಹದಿನಾರುಜನ ಸೆಟ್ಟಿ ಮಹಾನಗರರು ಬೌದ್ಧವಿಹಾರ ಮತ್ತು ಲೊಕ್ಕಿಗುಂಡಿಯ ವಡ್ಡವ್ಯವಹಾರಿ ಸಂಗಮಯ್ಯಸೆಟ್ಟಿಯರು ಮಾಡಿಸಿದ ಶ್ರೀ ಭಗವತಿ ಆರ್ಯತಾರಾದೇವಿ ವಿಹಾರಕ್ಕೆ ಅಲ್ಲಿಯ ಬುದ್ಧದೇವರಿಗೆ ಪೂಜಾ, ಸತ್ಕಾರ್ಯ ನೈವೇದ್ಯ, ಭಿಕ್ಷುಗಳಿಗೆ ದಾನ ಬಿಟ್ಟುಕೊಟ್ಟಿರುವ ವಿಚಾರ ಕ್ರಿ.ಶ.೧೦೯೫ರ ಶಾಸನ ತಿಳಿಸುತ್ತದೆ[೮]. ಇವಳ ಕಾಲದಲ್ಲಿ ಬೌದ್ಧಧರ್ಮ ಜೀವಂತವಿದ್ದಿತೆನ್ನುವ ವಿಚಾರ ಸ್ಪಷ್ಟವಾಗುತ್ತದೆ. ಇವಳು ಕ್ರಿ.ಶ.೧೦೯೬ರಲ್ಲಿ ಸೋಕಸೆಟ್ಟಿ ಎಂಬುವವನು ಕಟ್ಟಿಸಿದ ಬಸದಿಗೆ ಭೂದಾನ ಮಾಡಿದ ವಿಚಾರ ಇವಳು ಜೈನಮತಕ್ಕೆ ನೀಡಿದ ಪ್ರೋತ್ಸಾಹಕ್ಕೆ ಸಾಕ್ಷಿಯಾಗಿದೆ

**ಯುವತೀಮುಖ ತಿಳಕಂ ಲೋ**
**ಳವಿಲೋಚನೆ ಸವತಿಗಂಧಹಸ್ತಿ ಮಹಾದಾ**
**ನವಿನೋದೆಯೆನಿಸಿ ನೆಗಳ್ದಳ್**
**ಭುವನದೊಳ್ ಪುರಾಣಲಕ್ಷ್ಮಿ ಲಕ್ಷ್ಮೀದೇವಿ॥**

ಕ್ರಿ.ಶ.೧೧೮೦ರ ಡೋಣಿಯ ಮತ್ತೊಂದು ಶಾಸನ ಲಕ್ಷ್ಮೀದೇವಿಯನ್ನು ಯುವತಿಯರಲ್ಲಿ ತಿಲಕಪ್ರಾಯಳಾದವಳು, ಸವತಿಯರನ್ನು ಪ್ರೀತಿಯಿಂದ ನಡೆಸಿಕೊಳ್ಳುವವಳು, ದಾನಮಾಡುವುದರಲ್ಲಿ ಆನಂದ ಕಾಣುವವಳು ಎಂದು ಸ್ತುತಿಸಿದೆ.

ಇಲ್ಲಿ ಲಕ್ಷ್ಮೀದೇವಿಯನ್ನು ಸವತಿಗಂಧಹಸ್ತಿ ಎಂದು ಸ್ತುತಿಸಿರುವಂತೆ, ಹಲವಾರು ಅರಸಿಯರನ್ನು ಸವತಿ ಗಂಧವಾರಣೆ ಮೊದಲಾದ ಬಿರುದುಗಳಿಂದ ಕರೆಯಲಾಗಿದೆ. ಸವತಿಮದಭಂಜನೆ, ಸವತಿಬೆನ್ನ ಚವಟಿಕೆ ಎಂಬುದೂ ಅರಸಿಯರಿಗಿರುತ್ತಿದ್ದ ಬಿರುದುಗಳು. ಈ ಕುರಿತಂತೆ ವಿದ್ವಾಂಸರಲ್ಲಿ ಕೆಲವು ಚರ್ಚೆಗಳು ನಡೆದಿವೆ. ಇಲ್ಲಿ ಉದಾಹರಣೆಯಾಗಿ ನೀಡಿರುವ ಕಡೆಯ ಎರಡು ಬಿರುದುಗಳು ಸವತಿಯರನ್ನು ನಿಯಂತ್ರಿಸುವವಳು ಎಂಬ ಅರ್ಥನೀಡಿದರೆ, ಸವತಿ ಗಂಧಹಸ್ತಿ, ಸವತಿ ಗಂಧವಾರಣೆ ಎಂಬುದು ಸವತಿಯರನ್ನು ಪ್ರೀತಿಯಿಂದ ನಡೆಸಿಕೊಳ್ಳುತ್ತಿದ್ದವಳೆಂಬ ಅರ್ಥಬರುತ್ತದೆ. ಹಸ್ತಿ ಅಥವಾ ವಾರಣ ಎಂದರೆ ಆನೆ ಎಂಬ ಅರ್ಥವಿದೆ. 'ಆನೆಯ ಗುಂಪಿನಲ್ಲಿ ಮರಿ ಆನೆಗಳನ್ನು ಎಲ್ಲ ಹಿರಿಯ ಆನೆಗಳೂ ಪ್ರೀತಿಯಿಂದ ನಡೆಸಿಕೊಳ್ಳುತ್ತವೆ. ಅದನ್ನು ರೂಪಕವಾಗಿ ಬಳಸಿ ಪ್ರೀತಿಯಿಂದ ಸಲಹುವುದಕ್ಕೆ ಇಂತಹ ಹೋಲಿಕೆಯನ್ನು ನೀಡಲಾಗುತ್ತಿತ್ತು"[೧೦] ಹೊಯ್ಸಳ ಅರಸಿ ಶಾಂತಲೆಯ ಹಲವಾರು ಬಿರುದುಗಳಲ್ಲಿ 'ಸವತಿಗಂಧವಾರಣೆ' ಎಂಬುದು ಅವಳ ನೆಚ್ಚಿನ ಬಿರುದಾಗಿತ್ತು. ಶ್ರವಣಬೆಳಗೊಳದಲ್ಲಿ ಅವಳು ಕಟ್ಟಿಸಿದ ಬಸದಿಗೆ ಸವತಿಗಂಧವಾರಣೆ ಬಸದಿ ಎಂಬ ಹೆಸರೇ ನೀಡಿರುವುದು ಇದು ಅವಳು ತೋರುತ್ತಿದ್ದ ವಾತ್ಸಲ್ಯ ಪ್ರೀತಿಯ ಪ್ರತೀಕವಾಗಿತ್ತೆನ್ನುವುದನ್ನು ಗಮನಿಸಬಹುದು.

**ಚಂದಲಾದೇವಿ/ಚಂದ್ರಿಕಾದೇವಿ:**

ಸೌದತ್ತಿಯ ರಟ್ಟವಂಶದ ಲಕ್ಷ್ಮೀದೇವನ ಮಡದಿ ಚಂದಲಾದೇವಿ. ಇವಳು ಕಾವ್ಯಗಳಲ್ಲಿ ಹಾಗೂ ಶಾಸನಗಳಲ್ಲಿ ಉಲ್ಲೇಖಿತಳಾಗಿದ್ದಾಳೆ.ಇವಳು ರಾಜ್ಯಾಡಳಿತದಲ್ಲಿ ಪತಿ ಲಕ್ಷ್ಮೀದೇವನಿಗೆ ಸಲಹೆಗಳನ್ನು ಕೊಡುತ್ತಿದ್ದಳು ಎಂಬುದನ್ನು ಶಾಸನಗಳು ತಿಳಿಸುತ್ತವೆ.

ಲಕ್ಷ್ಮೀದೇವನು ತನ್ನ ಆಸ್ಥಾನದಲ್ಲಿದ್ದ ಕವಿ ನೇಮಿಚಂದ್ರನಿಂದ 'ಲೀಲಾವತಿ ಪ್ರಬಂಧಂ' ಕೃತಿಯನ್ನು ಬರೆಯಿಸಿದ್ದಾನೆ. ಈ ಕಾವ್ಯದಲ್ಲಿ ನೇಮಿಚಂದ್ರನು ತನ್ನ ಪೋಷಕರಾದ ಲಕ್ಷ್ಮೀದೇವ ಹಾಗೂ ಚಂದಲದೇವಿಯರನ್ನು ಸ್ತುತಿಸಿದ್ದಾನೆ.

**ಧರೆಯಂ ರಕ್ಷಿಸುತ್ತಿರ್ಕೆ ಲಕ್ಕಬರಿಸಂ ಲಕ್ಷ್ಮೀಧರೋರ್ವಿಶ್ವರಂ**
**ಸಿರಿಯಂತಾತನತೋಳೊಳಿರ್ಕೆ ಸತತಂ ಶ್ರೀ ಚಂದ್ರಿಕಾದೇವಿ**
**ಸಾಸಿರಮಂ ಕಾವ್ಯಮನೊಲ್ದು ಪೇಟಿಗ್ಗೆ ಸುಖದಿಂ ಚಂದ್ರೋದಯಂ ಸಪ್ತಸಾ**
**ಗರಪರ್ಯಂತ ಧರಿತ್ರಿಯೊಳ್ ನೆಲಸುಗೀ ಕಾವ್ಯಂ ಶುಭಂ ಮಂಗಳಂ॥**[೧೧]

ಈ ಮೇಲಿನ ಪದ್ಯದಲ್ಲಿ ಕವಿಯು ಅನಂತಕಾಲದವರೆಗೂ ಧರೆಯನ್ನು ಲಕ್ಷ್ಮೀಧರ ಅರಸು ರಕ್ಷಿಸುತ್ತಿರಲು, ಐಶ್ವರ್ಯದಂತೆ ಅರಸಿ ಚಂದ್ರಿಕಾದೇವಿಯೂ ಆತನಿಗೊಲಿದು ಜೊತೆ ಇರುವಾಗ, ರಚಿಸಿದ ಈ ಕಾವ್ಯವು ಇವರ

ಕೀರ್ತಿಯನ್ನು ಹರಡುತ್ತಾ ಆ ಸೂರ್ಯಚಂದ್ರರಿರುವವರೆಗೂ ಸಪ್ತಸಾಗರದ ಮೇರೆದಾಟಿ ಭೂಮಿಯಲ್ಲಿ ವ್ಯಾಪಿಸಲಿ ಎಂಬ ಆಶಯ ವ್ಯಕ್ತಪಡಿಸಿದ್ದಾನೆ.

ಪಾರ್ಶ್ವಪಂಡಿತನೂ ಕೂಡ ತನ್ನ ಕಲ್ಲೊಳೆ ಶಾಸನದಲ್ಲಿ ಇವರನ್ನು ಸ್ತುತಿಸಿದ್ದಾನೆ[೧೨]. ಶಾಸನಗಳಲ್ಲಿ ಇವಳನ್ನು ಚಂದಲದೇವಿ, ಚಂದ್ರಿಕೆ, ಚಂದ್ರಿಕಾದೇವಿ ಮೊದಲಾಗಿ ಕರೆಯಲಾಗಿದೆ.

ಶಾಸನವು ಇವಳ ದೀನಪರತೆ, ದಾನಗುಣಗಳನ್ನು ಹೊಗಳಿದೆ. "ಶರಣಾಗತ ರಕ್ಷಾಮಣಿ ತರುಣೀನುತೆ ಸಕಳಗುಣ ಚಿಂತಾಮಣಿ ಭಾಸುರ ನಿಜಗೋತ್ರ ಶಿರೋಮಣಿ ವರಚಂದಲದೇವಿ ಪಟ್ಟದರಾಣಿಮೆನಿಕ್ಕುಂ" ಎನ್ನುತ್ತಾ ಪಟ್ಟದರಸಿಯಾದ ಚಂದಲದೇವಿಯ ಗುಣಸ್ವಭಾವವನ್ನು ಬಣ್ಣಿಸಿದೆ. ಅಷ್ಟೇ ಅಲ್ಲದೆ ಇವಳನ್ನು "ಭೂನುತ ಸಚ್ಚರಿತೆ ಚಂದ್ರಿಕಾದೇವಿ ಮಹಾದಾನೆ" ಎಂದು ಸ್ತುತಿಸಿರುವುದಲ್ಲದೆ "ಘಟಸರ್ಪವಿಜಯ" ಎಂದು ಇವಳು ದಿವ್ಯ ಮೆರೆಸಿದ ಸಂಗತಿಯನ್ನೂ ಹೊಗಳಿದೆ[೧೩]. ಸಾರ್ವಜನಿಕರೆದುರು ಘಟಸರ್ಪದಿವ್ಯ ಮಾಡಿ ಮೆರೆದ ಇವಳ ಈ ಪವಾಡವನ್ನು ಕಲ್ಲೊಳೆ ಶಾಸನವೂ "ಘಟೋದರ ಸುಸ್ಥಿತಸರ್ಪ ದರ್ಪಭಂಜನಿ" ಎಂದು ಕ್ರಿ.ಶ.೧೨೦೫ರ ಶಾಸನ ಉಲ್ಲೇಖಿಸಿದೆ[೧೪].

**ಪ್ರಣುತ ಶ್ರೀನಿಧಿ ಚಂದ್ರಿಕಾಪತಿಯ ಶೀಲಭ್ರತಮಂ ಕೂಡೆ ಧಾ**
**ರಿಣಿಯೊಳ್ ಬಣ್ಣಿಸಲ್ ಆರುಂ ಆರ್ತಪರೆ ಲಕ್ಷ್ಮೋರ್ವಿಶನಂ**
**ಕ್ಷತ್ರಿಯಾಗ್ರಣಿಯಂ ಶೀಲದೆ ಮೆಚ್ಚಿಸಲ್ ಫಣಿಪನಂ ಪೂಣ್ದೆತ್ತಿ ತಾಂ ತನ್ನಕೈ**
**ಗುಣಮಂ ಕಂಡುದರಿಂದವಂ ಪೊಗಳಲಾರ್ಪಂ ವಿಶ್ವಜಿಹ್ವಾಳಿಯಂ॥**[೧೫]

ಪಟ್ಟದರಸಿ ಚಂದ್ರಿಕಾದೇವಿಯನ್ನು ಹೊಗಳುವ ಬೆಳಗಾವಿಯ ಶಾಸನಪದ್ಯವು, ಪತಿವ್ರತೆ ಎನಿಸಿದ್ದ ಚಂದ್ರಿಕಾದೇವಿಯು ಶೀಲವ್ರತವನ್ನು ಕೈಗೊಂಡು, ಘಟಸರ್ಪವನ್ನು ಕೈಯಲ್ಲಿ ಹಿಡಿದೆತ್ತಿದ ಘಟನೆಯನ್ನು ಕುರಿತು ತಿಳಿಸಿದೆ. 'ಶೌರ್ಯಸಾಹಸಕ್ಕೆ ಹೆಸರಾದ ಚಂದ್ರಿಕಾದೇವಿಯ ಪತಿಯ ಶೀಲವ್ರತವನ್ನು ಹೊಗಳಲು ಈ ಭೂಮಂಡಲದಲ್ಲಿ ಯಾರಿಗೂ ಸಾಧ್ಯವಿಲ್ಲ' ಎಂಬ ಹೊಗಳಿಕೆಗೆ ಪಾತ್ರನಾದ ಲಕ್ಷ್ಮೀದೇವರಸನನ್ನು ಮೆಚ್ಚಿಸಲು, ಆತನಿಗೆ ತಕ್ಕ ಅರಸಿ ಎಂಬುದನ್ನು ಸಾಬೀತು ಪಡಿಸಲು ಅರಸಿಯು ಇಂತಹ ಸಾಹಸಕ್ಕೆ ಮುಂದಾದಳೆಂದು ಶಾಸನವು ಬಣ್ಣಿಸುತ್ತದೆ.

ಘಟಸರ್ಪವನ್ನು ಕೈಯಲ್ಲಿ ಹಿಡಿದು ಮಾಡುವ ದಿವ್ಯವು ಅಂದಿನ ಸಮಾಜದಲ್ಲಿ ಪ್ರಚಲಿತವಿದ್ದ, ಶೀಲವ್ರತವೆಂದು ಕರೆಯಲಾಗುತ್ತಿದ್ದ, ಘೋರತರ ವ್ರತವಾಗಿತ್ತೆಂದು ತಿಳಿದು ಬರುತ್ತದೆ. ಉತ್ತರ ಕರ್ನಾಟಕದ ಜನಪದ ನಾಟಕಗಳಲ್ಲಿ ಇದರ ಉಲ್ಲೇಖ ದೊರಕುತ್ತದೆ. ಮೇಲೆ ತಿಳಿಸಿರುವಂತೆ ಕವಿ ಕಂದರ್ಪನೆನಿಸಿದ ಬಾಳಚಂದ್ರ ಕವಿಯ ಬೆಳಗಾವಿ ಶಾಸನದಲ್ಲಷ್ಟೇ ಅಲ್ಲದೆ ಕಲ್ಲೊಳಿ ಶಾಸನ, ಕೊಲ್ಲಾಪುರದ ಶಾಸನಗಳೂ ಇವಳ ಘಟಸರ್ಪ ದಿವ್ಯವನ್ನು ಕುರಿತು ತಿಳಿಸುತ್ತವೆ. ಈ ಘಟನೆಯು ಹಲವಾರು ಶಾಸನಗಳಲ್ಲಿ ಉಕ್ತವಾಗಿ, ಅಂದಿನ ಪ್ರಮುಖ ವಿಚಾರವಾಗಿತ್ತೆನುವುದನ್ನು ತಿಳಿಸುತ್ತದೆ. ಇದು ಅರಸಿಯೋರ್ವಳು ಅಂದಿನ ಜನಮನದಲ್ಲಿ ಮಹತ್ವದ ಸ್ಥಾನವೊಂದನ್ನು ಪಡೆದಿದ್ದರ ಕುರುಹಾಗಿದೆ. ಅಂದಿನ ಕಾಲದ ಬಹುಮೌಲ್ಯವೆನಿಸಿದ ಪಾತಿವ್ರತ್ಯಕ್ಕೆ ಅರಸು ಮನೆತನದವರು ಕೊಡುತ್ತಿದ್ದ ಮಹತ್ವ ಇಲ್ಲಿ ಬಿಂಬಿತವಾಗಿದೆ.

**ಬರ್ಮಭೂಪಾಲನ ಅರಸಿ ಸುಗ್ಗಲದೇವಿ**

ಚಂದ್ರಿಕಾದೇವಿಯ ಕಾಲದಲ್ಲಿದ್ದ ಮತ್ತೋರ್ವ ರಾಣಿ ಸುಗ್ಗಲದೇವಿಯೂ ಕೂಡ ಇವಳಂತೆಯೇ ಘಟಸರ್ಪ ದಿವ್ಯವನ್ನು ಮಾಡಿರುವುದರ ಉಲ್ಲೇಖ ದೊರಕುತ್ತದೆ. ಅರಸಿ ಸುಗ್ಗಲದೇವಿಯು ಬರ್ಮಭೂಪಾಲನ ರಾಣಿ. ಇವಳನ್ನು ಕುರಿತು ತೋರಗಲ್ಲಿನ ಶಾಸನವು "ಪುಣ್ಯನಿಧಿ ಸುಗ್ಗಲದೇವಿ ಲಸಚ್ಚರಿತ್ರಭೂಷಿತೆ ಘಟಸರ್ಪವಂ ಹಿಡಿದು ಗೆಲ್ದಳಿಳಾತಳವ್ಯೆದೆ ಬಣ್ಣಿಸಲು"[೧೬] ಎಂದು ಇವಳು ಮಾಡಿದ ಶೀಲವ್ರತವನ್ನು ಕುರಿತು ಹೇಳಿದೆ.

ಪರಮ ಶಿವಭಕ್ತಳಾಗಿದ್ದ ಇವಳು ಪರಮ ಮಾಹೇಶ್ವರಿ ಎನಿಸಿಕೊಂಡವಳು. ತೊರಗಲ್ಲಿನಲ್ಲಿ ಅಂದು ಪ್ರಧಾನವಾಗಿದ್ದು ಕಾಳಾಮುಖಶೈವ ಸಂಪ್ರದಾಯ, ಶೈವಧರ್ಮಕ್ಕೆ ತನ್ನನ್ನೆ ಸಮರ್ಪಿಸಿಕೊಂಡ ಸುಗ್ಗಲೆ ಅದ್ವಿತೀಯಳು. ದಾನ ವಿರಾಜಿತೆಯೆನಿಸಿದ ಈಕೆ ಬರ್ಮದೇವರಸನೊಂದಿಗೆ ತೊರಗಲೆಯಲ್ಲಿ ಸುಗ್ಗಲೇಶ್ವರ ಪ್ರತಿಷ್ಠಾಪಿಸಿ ದೇವರ ಧೂಪ ದೀಪಕ್ಕೆ ಮತ್ತರು ೪೫೦ ಕಂಬ ಅಡಿಕೆ ಸೀಮೆಯನ್ನು ಬಿಟ್ಟುಕೊಟ್ಟಿರುವಳು.

ಪತಿಪತ್ನಿಯರಲ್ಲಿರುತ್ತಿದ್ದ ಪರಸ್ಪರ ನಿಷ್ಠೆಯನ್ನು, ಅವರ ಶುಚಿತ್ವವನ್ನೂ ಶಾಸನಗಳು ಪರನಾರಿ ಸಹೋದರ, ಪರಾಂಗನ ಪುತ್ರನೆಂದು ರಾಜನನ್ನು ಕುರಿತು ಹೇಳಿದರೆ. ರಾಣಿಯರ ಪಾತಿವ್ರತ್ಯವನ್ನು ಹೊಗಳಲು ಸೀತೆ, ಅನುಸೂಯ ಮೊದಲಾದ ಪುರಾಣದ ಸ್ತ್ರೀಯರೊಂದಿಗೆ ಹೋಲಿಸಿ ಗುಣಗಾನ ಮಾಡಲಾಗುತ್ತಿತ್ತು. ಆದರೆ ಈ ವಿಶೇಷ ಶಾಸನವು ರಾಣಿಯರು ತಮ್ಮ ಪಾತಿವ್ರತ್ಯವನ್ನು ಪ್ರಕಟಪಡಿಸಲು 'ಘಟಸರ್ಪ ಪವಾಡ'ದಂಥ ಪರೀಕ್ಷೆಗಳನ್ನು ಸಾಮೂಹಿಕವಾಗಿ ಎದುರಿಸಲು ಉತ್ಸಾಹಿತರಾಗಿರುತ್ತಿದ್ದರು ಎಂಬುದನ್ನು ತಿಳಿಸುತ್ತದೆ. ದಾನವಿನೋದೆಯೆನಿಸಿದ ಸುಗ್ಗಲದೇವಿಯು ಇಂಥ 'ಘಟಸರ್ಪ ಪವಾಡವನ್ನು ಮೆರೆದ ವಿಚಾರವನ್ನು ಈ ಮೇಲಿನ ಶಾಸನ ತಿಳಿಸುತ್ತದೆ.

ಈ ಬರ್ಮಭೂಪಾಲನ ಸರ್ವಾಂಗಲಕ್ಷ್ಮಿಯನ್ನು ಶಾಸನ ಕವಿಯು

**ಹರಿಯ ಸಿರಿ ಹರನ ಪಾರ್ವತಿ**
**ಸರಸಿಜ ಸಂಭವನ ವಾಣಿಯಂದದಿ ಮುದದಿಂ**
**ಧರೆಪೊಗಳೆ ನೆಗಳ್ದ ಪೆಂಪಿಂ**
**ಪರಮ ಪತಿವ್ರತೆ ಯೆನಿಸಿದೆ ಸುಗ್ಗಲದೇವಿ॥** ಎಂದು ಬಣ್ಣಿಸಿದ್ದಾನೆ.

"ಬಮ್ಮೀದೇವರಸರ ಕೈಯಲು ಸುಗ್ಗಲದೇವಿಯರಸಿ ಕೊಂಡು ಹಾಲಹೊಳೆಯ ಹೊಲದೊಳಗೆ ದೇವ ದೇವನೆನಿಪ್ಪ ಶ್ರೀ ಸುಗ್ಗಲೇಶ್ವರ ದೇವರ ಧೂಪ ದೀಪ ನೈವೇದ್ಯ ತಾಂಬೂಲಕ್ಕೆ ಬಿಟ್ಟ ದತ್ತಿಯ ಸೀಮೆ"ಯನ್ನು ಶಾಸನ ಸ್ಪಷ್ಟವಾಗಿ ಗುರುತಿಸಿದೆ. ದೇವರಿಗೆ ನಂದಾದೀಪಕ್ಕಾಗಿ ಮತ್ತರೆರಡು ಕಂಬ ನಾನೂರು ಐವತ್ತು ಕಲ್ಲು ಗಾಣದ ಮಾನೆಣ್ಣೆಯನ್ನು ಬಿಟ್ಟುಕೊಟ್ಟಿರುವಳು.

ರಾಣಿಯರ ಜೀವನ ಸಾಮಾನ್ಯ ಜನಜೀವನದ ಮೇಲೆ ಪ್ರಭಾವ ಬೀರುತ್ತಿತ್ತು. ಅಂತೆಯೇ ರಾಣಿಯರ ಪಾತಿವ್ರತ್ಯ ಆದರ್ಶವೆನಿಸುತ್ತಿತ್ತು. ಇವರ ಇಂಥ ಗುಣಗಳನ್ನು ಶಾಸನಗಳಲ್ಲಿ ಅತಿಶಯವಾಗಿ ಬಿಂಬಿಸಲಾಗುತ್ತಿತ್ತು ಅವುಗಳಲ್ಲಿ ಭರ್ಮಭೂಪಾಲನ ಮಡದಿ ಸುಗ್ಗಲದೇವಿಯ, ರಟ್ಟ ರಾಣಿ ಚಂದ್ರಿಕಾದೇವಿಯರ ವಿಚಾರವು ಜನಜನಿತವಾಗಿ ಶಾಸನಗಳೂ ಕೊಂಡಾಡುತ್ತಿವೆ.

**ಸಾವಿಯಬ್ಬೆ:**

ಸಾವಿಯಬ್ಬೆಯು ತನ್ನ ಶೌರ್ಯಕ್ಕೆ ಹೆಸರಾಗಿದ್ದಾಳೆ. ಇವಳ ವಿಚಾರದ ಮೇಲೆ ಬೆಳಕುಚೆಲ್ಲುವ ಶಾಸನ ಹಾಗೂ ಶಿಲ್ಪ ಶ್ರವಣಬೆಳಗೊಳದಲ್ಲಿದೆ. ಲೋಕವಿದ್ಯಾಧರ ಈಕೆಯ ಪತಿ. ಮಧುವರ ಹಾಗೂ ದೋಯಿಲಮ್ಮ ಎಂಬುವವರು ಇವಳ ಸಹೋದರರು. ಶ್ರವಣಬೆಳಗೊಳದ ಶಾಸನ[೧೭] ಸೋದರಿ ಸಾವಿಯಬ್ಬೆ ಯುದ್ಧದಲ್ಲಿ ಹೋರಾಡಿ ಮಡಿದ ವಿಷಯ ತಿಳಿಸುತ್ತದೆ. ಈಕೆ ಗಂಡನ ಸಾವಿನ ಸೇಡನ್ನು ತೀರಿಸಿಕೊಳ್ಳಲು, ಸ್ವತಃ ಕಾದಾಡಿ ಮಡಿದಿರಬೇಕೆಂದು ಶಾಸನತಜ್ಞರು ಅಭಿಪ್ರಾಯ ಪಡುತ್ತಾರೆ. ಸಾವಿಯಬ್ಬೆಯನ್ನು ಸ್ತುತಿಸುವ ಪದ್ಯಗಳು ಶಾಸನದಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ ಆದರೆ, ಅವಳು ಹೋರಾಡಿ ಸಾವನ್ನಪ್ಪಿದ ಪ್ರಸಂಗ ವಿವರಿಸುವ ಶಾಸನ ಭಾಗ ಬಹುತೇಕ ಒಡೆದುಹೋಗಿದೆ.  ಇಲ್ಲಿನ ಶಿಲ್ಪಗಳು ಇವಳು ಹೋರಾಟದಲ್ಲಿ ತೋರಿದ ಪರಾಕ್ರಮವನ್ನು ಕುರಿತು ತಿಳಿಸುತ್ತದೆ. ಮೊದಲ ಹಂತದ ಶಿಲ್ಪ ಕುದುರೆಯನ್ನೇರಿ ಕತ್ತಿ ಹಿಡಿದಿರುವ ಮಹಿಳೆ ಆನೆಯ ಮೇಲೆ ಕುಳಿತಿರುವ ಖಡ್ಗಧಾರಿಯನ್ನೆದುರಿಸುತ್ತಿರುವಂತಿದ್ದರೆ, ಶಿಲ್ಪದ ಕಡೆಯ ಹಂತ ಜೈನಮತದವಳಾದ ಈಕೆ ತೀರ್ಥಂಕರನ ಪಾದ ಸೇರಿದಳು ಎಂದು ತಿಳಿಸುತ್ತಿದೆ.

ಸಾವಿಯಬ್ಬೆಯ ಕುರಿತಾದ ಶಾಸನ ಈ ಪದ್ಯವನ್ನು ಕವಿ ರನ್ನ ರಚಿಸಿರುವನೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಇಲ್ಲಿನ ಪದ್ಯ ಮೊಲೆವೆತ್ತ ಸಾವಿಯಬ್ಬೆ.... ಮೀಸೆವೊತ್ತಣ್ಣ(ಜ್ಞ)ಳ್.. ಎಂಬ ಪದ್ಯವು ಗದಾಯುದ್ಧ ಹಾಗೂ ಅಜಿತನಾಥ ಪುರಾಣಗಳಲ್ಲಿ ಪುನರಾವರ್ತನೆಯಾಗಿದೆ. ಅಲ್ಲದೆ ಶ್ರಾವಕಧರ್ಮದೊಳ್ ದೊರೆಯೆನಲ್ ಪೆರರಿಲ್ಲೆನೆ ಸನ್ದರೇವತಿ... ಎಂಬ ಉತ್ಪಲಮಾಲಾ ವೃತ್ತದ ಪದ್ಯವೂ ಸಹ ಅಜಿತಪುರಾಣ (೧–೨೭) ದಲ್ಲಿ ಪುನಾರಚನೆಯಾಗಿದೆ.

ರನ್ನನ ಅಜಿತ ಪುರಾಣ ಕೃತಿ ರಚನೆಯು ಕ್ರಿ.ಶ.೯೯೩ರಲ್ಲಿಯೂ ಸಾಹಸಭೀಮ ವಿಜಯವನ್ನು ೧೦೦೫ ರಲ್ಲಿಯೂ ರಚಿಸಿದ್ದಾನೆಂದು ವಿದ್ವಾಂಸರು ನಿರ್ಣಯಿಸಿದ್ದಾರೆ. ಆದರೆ ಸಾವಿಯಬ್ಬೆಯ ಈ ಶಾಸನ ಈ ಎರಡೂ ಕೃತಿಗಳಿಗಿಂತಲೂ ಪೂರ್ವದಲ್ಲಿ ಕ್ರಿ.ಶ.೯೭೮ರಲ್ಲಿ ರಚಿಸಿದುದಾಗಿದೆ.

ಕಾಳಗದಲ್ಲಿ ಭಾಗವಹಿಸಿ ಬಗಿಯೂರಿನಲ್ಲಿ ಮಡಿದ ಸಾವಿಯಬ್ಬೆಯ ಪತಿ ಗಂಗವಂಶದವನು. ಹಾಗಾಗಿ ಇವಳನ್ನು ಕುರಿತಂತೆ ಗಂಗ ಮಾಂಡಳೀಕ ಚಾವುಂಡರಾಯನ ಆಶ್ರಯದಲ್ಲಿದ್ದ ರನ್ನನಿಂದ ಶ್ರವಣಬೆಳಗೊಳದಲ್ಲಿ ಈ ಶಾಸನವನ್ನು ಬರೆಯಿಸಲಾಗಿದೆ[೧೮].

ಸಾವಿಯಬ್ಬೆಯು, ರನ್ನ ಕವಿಯಿಂದ ಹೊಗಳಿಸಿಕೊಂಡ ವೀರಮಹಿಳೆ ಎಂಬ ಹಿರಿಮೆಗೆ ಪಾತ್ರಳಾಗುತ್ತಾಳೆ.

**ಕೆಳದಿ ಚೆನ್ನಮ್ಮ**

ಕೆಳದಿಯ ಅರಸು ಸೋಮಶೇಖರನ ರಾಣಿ ಚೆನ್ನಮ್ಮ, ಪತಿಯೊಂದಿಗೆ ಆಡಳಿತ ವ್ಯವಹಾರದಲ್ಲಿ ಪಾಲ್ಗೊಳ್ಳುತ್ತಿದ್ದಳು. ಪತಿಯ ಮರಣಾನಂತರ, ಸೂಕ್ತ ಉತ್ತರಾಧಿಕಾರಿ ಇಲ್ಲದ ಕಾರಣ ತಾನೇ ಅಧಿಕಾರ ವಹಿಸಿಕೊಂಡಳು. ಪತಿಯ ಮರಣಕ್ಕೆ ಕಾರಣರಾದ ರಾಜ್ಯದ ಒಳ ಹಾಗೂ ಹೊರ ಶತ್ರುಗಳನ್ನು ನಿಗ್ರಹಿಸಿದಳು. ತಾನು ಪಟ್ಟಕ್ಕೆ ಬಂದ ಮರುವರ್ಷವೇ ಕ್ರಿ.ಶ.೧೬೭೩ರಲ್ಲಿ ತನ್ನ ನಂತರ ರಾಜ್ಯಕ್ಕೆ ವಾರಸುದಾರರಿಲ್ಲದ ಕಾರಣ ಬಸವಪ್ಪನಾಯಕನನ್ನು ದತ್ತುತೆಗೆದು ಕೊಳ್ಳುತ್ತಾಳೆ. ಕೆಳದಿ ನೃಪವಿಜಯದಲ್ಲಿ ದಾಖಲಾಗಿರುವಂತೆ (ಶಾ.ಶ.೧೫೯೪–೧೬೨೦) ಸುಮಾರು ೨೪ ವರ್ಷಗಳ ಕಾಲ ರಾಜ್ಯಭಾರ ಮಾಡಿ ನಂತರ ಬಸವಪ್ಪನಾಯಕನಿಗೆ ಪಟ್ಟವನ್ನುಕಟ್ಟಿ, ಅವನಿಗೆ ಮಾಗದರ್ಶನ

ನೀಡುತ್ತಾಳೆ. ಇವಳ ಕಾಲದಲ್ಲಿ ಅನೇಕ ಯುದ್ಧಗಳು ನಡೆದವು. ಅವುಗಳಲ್ಲಿ ಮೊಗಲರ ಸೈನ್ಯವನ್ನು ಎದುರಿಸಿದ ಇವಳ ಸಾಹಸ ಶ್ಲಾಘನೀಯವಾದುದು.

ಕೆಳದಿ ನೃಪವಿಜಯದಲ್ಲಿ ಚೆನ್ನಮ್ಮ: ಲಿಂಕಣ್ಣಕವಿ ರಚಿಸಿರುವ ಕನ್ನಡದ ಪ್ರಸಿದ್ಧ ಐತಿಹಾಸಿಕ ಕಾವ್ಯ 'ಕೆಳದಿ ನೃಪವಿಜಯ'ದಲ್ಲಿ ಕೆಳದಿಯ ಸಿಂಹಾಸನವನ್ನೇರಿದ ಚೆನ್ನಮ್ಮಳ ಚರಿತ್ರೆಯೂ ಸಹ ಚಿತ್ರಿತವಾಗಿದೆ. ಇವಳ ಸಾಹಸ, ಯುದ್ಧ ನೈಪುಣ್ಯ, ಆಡಳಿತ ವೈಖರಿ ಮೊದಲಾದವನ್ನು ಕವಿ ಸೊಗಸಾಗಿ ಬಣ್ಣಿಸಿದ್ದಾನೆ.

**ನೆರೆ ರಾಜಧರ್ಮಮಾರ್ಗದ**
**ಪರಿಯಂ ಬಲ್ಲವನಿಪಾಲರೊಳ್ ಮಿಗಿಲೆನಿಪಾ**
**ತರುಣೀನಿಕರಶಿರೋಮಣಿ**
**ವರಚನ್ನಮ್ಮಾಜಿ ಕೆಳದಿಯಿಳೆಗರಸಾದಳ್ ॥**

ರಾಜಧರ್ಮವನ್ನು ಬಲ್ಲ ಅರಸರಿಗಿಂತಲೂ ಮಿಗಿಲೆನಿಸುವಂತೆ ಕೆಳದಿಗೆ ಅರಸಳಾದ ಪರಿಯನ್ನು ಹೊಗಳಿರುವ ಕವಿಯು ತನ್ನ ಹನ್ನೆರಡು ಆಶ್ವಾಸದ ಈ ಕೃತಿಯಲ್ಲಿ ನವಮಾಶ್ವಾಸವನ್ನು ಸಂಪೂರ್ಣವಾಗಿ ಚೆನ್ನಮ್ಮಳ ಆಳ್ವಿಕೆಯ ವರ್ಣನೆಗೆ ಮೀಸಲಿಟ್ಟಿದ್ದಾನೆ.

ಇನ್ನೂ ಹಲವಾರು ಕಾವ್ಯಗಳಲ್ಲಿ ಚೆನ್ನಮ್ಮಳ ಚಿತ್ರಣ ಕಂಡುಬರುತ್ತವೆ. ಅವುಗಳಲ್ಲಿ ಇವಳ ಪೋಷಣೆಯಲ್ಲಿ ಬೆಳೆದ, ಇವಳ ದತ್ತುಮಗ ಬಸವಪ್ಪ ನಾಯಕ ರಚಿಸಿದ 'ಶಿವತತ್ವ ರತ್ನಾಕರ' ಹಾಗೂ 'ಕರ್ನಾಟಕ ಕಾಳಿಕಾಕಾಂಡ' ಕೃತಿಗಳು ಚೆನ್ನಮ್ಮನ ಕುರಿತಾಗಿ ವಿಸ್ತೃತ ವಿವರಣೆ ನೀಡುತ್ತದೆ. ಕರ್ನಾಟಕ ಕಾಳಿಕಾ ಕಾಂಡ ಕೃತಿಯಲ್ಲಿನ ಕಥಾನಾಯಕಿ ಕಾಳಿಕಾದೇವಿಗೆ ರಾಣಿ ಚೆನ್ನಮ್ಮನನ್ನು ಸಮೀಕರಿಸಿ ರಚಿಸಲಾಗಿದೆ. ಈ ಕೃತಿಗಳನ್ನು ಅರಸಿಯರ ಪೋಷಣೆಯಲ್ಲಿ ರಚಿತವಾದ ಕಾವ್ಯಗಳು ಎಂಬ ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಾಗುತ್ತದೆ.

## ಬೂದಿಹಾಳು ಪಾಳೆಯದ ಚಿಕ್ಕಮ್ಮನಾಗತಿ

ಬೂದಿಹಾಳು ಕೋಟೆಯನ್ನಾಳಿದ ಪ್ರಸಿದ್ಧ ಪಾಳೆಯಪಟ್ಟಿನ ನಾಯಕತಿ ಚಿಕ್ಕಮ್ಮ ೧೫ನೆಯ ಶತಮಾನದಲ್ಲಿದ್ದವಳು. ಇವಳ ಪತಿ ಸಿರುಮ ಸುತ್ತಣ ಸೀಮೆಯನ್ನೆಲ್ಲಾ ವಶಪಡಿಸಿಕೊಂಡು ಸುಮಾರು ೨೫ ವರ್ಷ ಆಳ್ವಿಕೆ ನಡೆಸಿದ ನಾಯಕ. ಇವನಿಗೆ ಪ್ರಬಲ ವೈರಿಗಳಾಗಿದ್ದ ಹಿರಿಯೂರು, ಎಕ್ಕಟಿ, ಮೊದಲಾದ ನಾಯಕರ ಸಂಚಿನ ಮೇರೆಗೆ ವಿಜಯನಗರದ ಸಾಳುವ ನರಸಿಂಗ ತನ್ನ ಮಂತ್ರಿ ಈಶ್ವರನಾಯಕನೊಂದಿಗೆ ಬೂದಿಹಾಳು ಮುತ್ತಲು ಅಪಾರ ಸೈನ್ಯವನ್ನು ಕಳುಹಿಸುತ್ತಾನೆ. ಮಾರ್ಗದುದ್ದಕ್ಕೂ ಈ ಸೈನ್ಯ ಡೆಂಕಣಿಕೋಟೆ, ಕೋಳುಕೋಟೆ, ಮುಳವಾಗಿಲು, ಸಾವಂದಿಗೆ ಕಲ್ಲದುರ್ಗ, ನಿಡಗಲ್ಲು, ಮಿಡಿಗೇಸಿ ಮೊದಲಾದ ಕೋಟೆಗಳನ್ನು ವಶಪಡಿಸಿಕೊಂಡು ಬೂದಿಹಾಳಿನತ್ತ ನಡೆದು ದೇವಿಕೆರೆಯ ಬಳಿ ಬಿಡಾರ ಹೂಡುತ್ತದೆ. ಇದರಿಂದ ಕೊಂಚ ಕಂಗಾಲಾದ ಸಿರುಮನನ್ನು ಅವನ ಮಡದಿ ಚಿಕ್ಕಮ್ಮ ಸಮಾಧಾನಪಡಿಸಿ ಧೈರ್ಯ ತುಂಬುತ್ತಾಳೆ. ಚಿಕ್ಕಮ್ಮ ಎದುರಾಳಿ ಸೈನ್ಯವನ್ನು ಉಪಾಯದಿಂದ ಮಣಿಸಲು ಹವಣಿಸುತ್ತಾಳೆ. ಇವಳು ಪೂಜೆಯ ನೆಪದಲ್ಲಿ ತನ್ನ ಬಳಗವನ್ನು ಕರೆದುಕೊಂಡು ದೇವಿಕೆರೆಗೆ ವಿಷದಡಿಗೆ ಮಾಡಿಕೊಂಡು ತರುತ್ತಾಳೆ. ಅಲ್ಲಿ ವೈರಿಸೈನಿಕರನ್ನು ಕಂಡು ಹೆದರಿದಂತೆ ನಟಿಸಿ, ಅಡಿಗೆ ಬುಟ್ಟಿಗಳನ್ನು ಅಲ್ಲಿಯೇ ಬಿಟ್ಟು ಓಡಿ ಬರುತ್ತಾಳೆ. ವೈರಿ ಸೈನಿಕರು ವಿಷದಡಿಗೆಯನ್ನು ಉಂಡು ಅಲ್ಲಿಯೇ ಮಡಿದು ಬೀಳುತ್ತಾರೆ. ಹೀಗೆ ಮೊದಲನೆಯ ಬಾರಿ ತಮ್ಮ ಪ್ರದೇಶವನ್ನು ಮುತ್ತಿದ ವಿಜಯನಗರ ಸೈನ್ಯವನ್ನು ಹಿಮ್ಮೆಟ್ಟಿಸಲು ಚಿಕ್ಕಮ್ಮ ಕಾರಣಳಾಗುತ್ತಾಳೆ.

ಈ ಚಿಕ್ಕಮ್ಮನ ವಿಷಯ ತಿಳಿದ ನರಸಿಂಹರಾಯ ಕುಪಿತಗೊಂಡರೂ ಚಿಕ್ಕಮ್ಮನ ಸಾಹಸಕ್ಕೆ ಮೆಚ್ಚಿಕೊಳ್ಳುತ್ತಾನೆ. ಆದರೆ ಸಿರುಮನನ್ನೆದುರಿಸಿ ಅವನ ಕೋಟೆಯನ್ನು ವಶಪಡಿಸಿಕೊಳ್ಳಲೇಬೇಕೆಂದು ಪುನಃ ಭಾರಿ ಸೈನ್ಯವನ್ನು

ಕಳಿಸುತ್ತಾನೆ. ಸುಮಾರು ಒಂದು ತಿಂಗಳ ಕಾಲ ನಡೆದ ಯುದ್ಧದಲ್ಲಿ ಸಿರುಮನ ಮಕ್ಕಳೆಲ್ಲಾ ಆಹುತಿಯಾಗುತ್ತಾರೆ. ಕಡೆಗೆ ತನ್ನ ಪ್ರಾಣವನ್ನೊಪ್ಪಿಸಿದ ಸಿರುಮನೊಂದಿಗೆ ಚಿಕ್ಕಮ್ಮಕೂಡ ಕೊಂಡಕ್ಕೆ ಹಾರಿ ಮಹಾಸತಿಯೆನಿಸುತ್ತಾಳೆ.ಈ ವಿಚಾರಗಳು ಸಿರುಮನ ಕುರಿತಾದ ಕೃತಿಗಳಲ್ಲಿ ಸಿಗುತ್ತದೆ[೧೯].

## ರಾಣಿ ಮಲ್ಲಮ್ಮ

ಛತ್ರಪತಿ ಶಿವಾಜಿಯನ್ನೇ ಎದುರಿಸಿದ ಧೀರಮಹಿಳೆ ಎಂದೇ ಪ್ರಖ್ಯಾತಳಾದ ಬೆಳವಡಿಯ ಮಲ್ಲಮ್ಮ, ೧೭ನೆಯ ಶತಮಾನದಲ್ಲಿ ಪುಟ್ಟ ಪ್ರಾಂತ್ಯವೊಂದರ ನಾಯಕಿ. ಈಕೆಯ ಶೌರ್ಯ–ಸಾಹಸವನ್ನು ಕುರಿತಂತೆ ಅವಳ ಜೀವಿತಾವಧಿಯಲ್ಲಿಯೇ 'ಶಿವಾಜಿ–ಮಲ್ಲಮ್ಮಾಜಿ ಸಮರೋತ್ಸವ'ಎಂಬ ಕೃತಿಯೊಂದು ರಚಿತವಾಗಿ, ಕರವೀರಪುರದ (ಕೊಲ್ಲಾಪುರ) ಆಸ್ಥಾನದಲ್ಲಿ ಓದಲ್ಪಟ್ಟು, ಅಲ್ಲಿಯ ರಾಣಿ ತಾರಾಬಾಯಿ ಹಾಗೂ ಅಂದಿನ ಸಭಿಕರ ಪ್ರಶಂಸೆಗೆ ಒಳಗಾಗಿದೆ.

ಈ ಕೃತಿಯ ಲೇಖಕ ಶೇಷೋ ಶ್ರೀನಿವಾಸ ಮುತಾಲಿಕ, ದಿಟ್ಟತನದಿಂದ ಶಿವಾಜಿಯನ್ನೇ ಮಣಿಸಿದ ಮಲ್ಲಮ್ಮಳ ಸಾಹಸಮಯವಾದ ಕಥೆಯನ್ನು, ಶಿವಾಜಿಯ ಸೊಸೆ ತಾರಾಬಾಯಿಯ ಆಸ್ಥಾನದಲ್ಲಿ, ಶಿವಾಜಿಯ ಸರದಾರರ ಎದುರಿನಲ್ಲಿ, ಅವರು ಬಳಸುವ ಮರಾಠಿ (ಪ್ರಾಕೃತ) ಭಾಷೆಯಲ್ಲಿ ಓದಿದ್ದು ಮತ್ತೊಂದು ಮಹತ್ವದ ಸಂಗತಿಯಾಗಿದೆ.

ಶ್ರೀನಿವಾಸ ಮುತಾಲಿಕನು ಮಲ್ಲಮ್ಮನ ಬಾಲ್ಯ, ವಿದ್ಯಾಭ್ಯಾಸ ಹಾಗೂ ಅವಳ ತವರುಮನೆ ಸ್ವಾದಿ(ಸೋಂದೆ)ಯ ಮನೆತನ ಮೊದಲಾದವುಗಳ ವಿಚಾರಗಳನ್ನು ವಿವರಿಸಿರುವ ಪರಿ, ಈತ ಸ್ವಾದಿಯವನಾಗಿದ್ದು ಮಲ್ಲಮ್ಮನನ್ನು ಹತ್ತಿರದಿಂದ ಬಲ್ಲವನಾಗಿದ್ದಿರಬಹುದೆಂಬ ಸಂದೇಹ ಮೂಡಿಸುತ್ತದೆ.

ಈ ಕೃತಿಯಲ್ಲಿ ಕಂಡುಬರುವ ಯುದ್ಧದ ವರ್ಣನೆ, ಯುದ್ಧದ ಕಾರಣ, ಯುದ್ಧಾನಂತರ ಸನ್ನಿವೇಶಗಳು ಯಾವ ಉತ್ಪ್ರೇಕ್ಷೆಯೂ ಇಲ್ಲದೆ, ಸಹಜವಾಗಿ ತೋರಿಬಂದಿದೆ. ಅಲ್ಲದೆ ಮಲ್ಲಮ್ಮಳು ಹೋರಾಡಿದ ರೀತಿ, ಅವಳ ಉಡುಗೆ ತೊಡುಗೆಗಳ ವಿವರ, ಯುದ್ಧದಲ್ಲಿ ಭಾಗವಹಿಸಿದ ಎರಡು ಸಾವಿರ ಸ್ತ್ರೀ ಸೈನ್ಯ ಹಾಗೂ, ಮೂರುಸಾವಿರ ಸ್ತ್ರೀವೇಷಧಾರಿ ಪುರುಷ ಸೈನಿಕರ ವಿವರ ಮೊದಲಾದುವನ್ನು ಕಣ್ಣಾರೆ ಕಂಡಂತೆ ಬಣ್ಣಿಸಿರುವುದು, ಈ ಗ್ರಂಥಕರ್ಥ ಸ್ವತಃ ಯುದ್ಧವನ್ನು ಕಂಡಿರಬಹುದೆ? ಎನಿಸುತ್ತದೆ.

ಶೇಷೋ ಮುತಾಲಿಕನು ಇಲ್ಲಿ "ಔರಂಗಜೇಬ ಬಾದಶಹನು ಮಡಿದಮೇಲೆ, ತಾರಾಬಾಯಿ ಅರಸಿಯವರು ಮಲ್ಲಮ್ಮಾಜಿಯನ್ನು ಕರವೀರ ಸಂಸ್ಥಾನಕ್ಕೆ ಕರೆತರೆಸಿಕೊಂಡು ದೊಡ್ಡ ಸತ್ಕಾರವನ್ನು ಮಾಡಿ ಕಳಿಸಿಕೊಟ್ಟರು. ಆಗ ಮಲ್ಲಮ್ಮಾಜಿಯ ಕಡೆಯಿಂದ ಯಾವ ವೃತ್ತಾಂತವನ್ನು ತಾರಾಬಾಯಿ ರಾಣಿಯವರು ಕೇಳಿದ್ದರೋ ಆ ಪ್ರಕಾರ ನಾವು ಬರೆದೆವು." ಎಂದಿದ್ದಾನೆ. ಜೊತೆಗೆ ಮಲ್ಲಮ್ಮಳೊಡನೆ ಮಾತನಾಡುತ್ತಾ ತಾರಾಬಾಯಿಯು "ನಮ್ಮ ದೆಶೆಯು (ಸ್ಥಿತಿಯು) ಮಲ್ಲಮ್ಮಾಜಿಯ ದೆಶೆಯೂ ಒಂದೇ ಎಂದು ಮೇಲಿಂದ ಮೇಲೆ ಅನ್ನುತ್ತಿದ್ದರು"[೨೦] ಎಂಬ ಮೊದಲಾದ ತಾರಾಬಾಯಿ ಹಾಗೂ ಮಲ್ಲಮ್ಮಳ ಸಂಭಾಷಣೆಯ ವಿವರಣೆಗಳನ್ನು ನೀಡಿದ್ದಾನೆ. ಎರಡು ಸಂಸ್ಥಾನಗಳ ರಾಣಿಯರು ಕುಳಿತು ಮಾತನಾಡುವ ಸಂದರ್ಭದಲ್ಲಿ ಶೇಷೋ ಮುತಾಲಿಕನು ಅವರೊಟ್ಟಿಗಿದ್ದು ಕೇಳಿಸಿಕೊಂಡಿರಬೇಕಾದಲ್ಲಿ, ಈತನು ಮಲ್ಲಮ್ಮಳಿಗೆ ಬಹಳ ಆಪ್ತನಾಗಿದ್ದಿರಬೇಕು. ಇದಕ್ಕಿಂತ ಪ್ರಮುಖವಾದ ವಿಚಾರವೆಂದರೆ ತಾರಾಬಾಯಿಗಿಂತಲೂ ಮುನ್ನ ಅಧಿಕಾರವಹಿಸಿಕೊಂಡ ಶಿವಾಜಿಯ ಮಗ ಸಾಂಬಾಜಿಯು ಬೆಳವಡಿ ಸಂಸ್ಥಾನವನ್ನು ವಶಪಡಿಸಿಕೊಳ್ಳಬೇಕೆನ್ನುವ ಹುನ್ನಾರ ನಡೆಸಿದಾಗ, ಅವನ ಸಂಚನ್ನು ಅರಿತ

ತಾರಾಬಾಯಿಯು ಮಲ್ಲಮ್ಮಳಿಗೆ ಆ ವಿಚಾರವನ್ನು ತಿಳಿಸಿ ಎಚ್ಚರಿಸಿದಳು[೨೧] ಎಂಬ ವಿಚಾರವನ್ನು ಈತ ತಿಳಿಸಿದ್ದಾನೆ. ರಾಜಕೀಯ ಗೂಢಾಚಾರ ವಿಚಾರಗಳನ್ನು ಈತ ಅರಿತಿರಬೇಕಾದಲ್ಲಿ, ಇವನು ಮಲ್ಲಮ್ಮಳ ಆಡಳಿತದಲ್ಲಿ ಯಾವುದಾದರೂ ಹುದ್ದೆಯಲ್ಲಿದ್ದಿರಬಹುದೆಂಬ ಅನುಮಾನ ಮೂಡಿಸುತ್ತದೆ. ಮುತಾಲೀಕ್ ಎಂದರೆ ಕಾರ್ಯಭಾರಿ; ಆಡಳಿತದಲ್ಲಿ ನೇಮಕಗೊಂಡ ಉದ್ಯೋಗಿ ಎಂಬ ಅರ್ಥವಿದೆ.

ಈ ಕೃತಿಯ ರಚನೆಕಾರ ಶ್ರೀನಿವಾಸ ಮುತಾಲಿಕನು ತನ್ನ ಈ ಕೃತಿಗೆ ಕೊಲ್ಲಾಪುರದ ರಾಣಿ ತಾರಾಬಾಯಿಯಿಂದ ಬಹುಮಾನವನ್ನು ಪಡೆದುಕೊಂಡಿದ್ದಾನೆ. ಈ ಕಥೆಯಲ್ಲಿ ಪೂರ್ವಾರ್ಧ ಹಾಗೂ ಉತ್ತರಾರ್ಧ' ಎಂಬ ಎರಡು ವಿಭಾಗಗಳಿದ್ದು ಈ ಎರಡರಲ್ಲಿಯೂ ಮಲ್ಲಮ್ಮಳೇ ನಾಯಕಿ.

**'ಶಿವಾಜಿ–ಮಲ್ಲಮ್ಮಾಜಿ ಸಮರೋತ್ಸವ'ದ ಸಾರಾಂಶ:** ಸ್ವಾದಿಯ ಅರಸು ಮಧುಲಿಂಗನಾಯಕ ಮತ್ತು ಅವನ ಹೆಂಡತಿ ವೀರಮ್ಮಾಜಿಗೆ ಮಕ್ಕಳಿಲ್ಲವೆಂಬ ಚಿಂತೆಯಲ್ಲಿ ಹಲವಾರು ಪೂಜೆ, ವ್ರತಗಳನ್ನು ಮಾಡಿದರು. ಕಡೆಗೆ ಸೊಪ್ಪಿ ಸಿದ್ಧಬಸವ ಎಂಬ ಯೋಗಿಗಳ ಉಪದೇಶದಂತೆ ಕಾರ್ತಿಕದೇವರ ವ್ರತವನ್ನು ಮಾಡಲು, ಸ್ವಪ್ನದಲ್ಲಿ ಒಬ್ಬ ಪುತ್ರ ಹಾಗೂ ಪುತ್ರಿಯನ್ನು ಕರುಣಿಸಿರುವುದಾಗಿ ದೈವವು ನುಡಿಯಿತು ಎಂದು ಹೇಳುತ್ತಾ ಶೇಷೋ ಮುತಾಲಿಕನು ಮಲ್ಲಮ್ಮಾಜಿಯು ದೈವಾಂಶ ಸಂಭೂತೆ ಎಂಬಂತೆ ಚಿತ್ರಿಸಿದ್ದಾನೆ.

ಶಾ.ಶ.೧೫೮೨ರಲ್ಲಿ ಮಲ್ಲಮ್ಮಳು ಜನಿಸಿದಳೆಂದು ತಿಥಿ ಪಕ್ಷ ಸಂವತ್ಸರದ ವಿವರಣೆ ನೀಡಲಾಗಿದೆ. ಅರಸನು ಸದಾಶಿವನಾಯಕ ಹಾಗೂ ಮಲ್ಲಮ್ಮಾಜಿ ಇಬ್ಬರಿಗೂ ಸರಿಸಮನಾಗಿ ವಿದ್ಯಾಭ್ಯಾಸವನ್ನು ಮಾಡಿಸುತ್ತಾನೆ. ಇವರ ವಿದ್ಯಾಭ್ಯಾಸಕ್ಕಾಗಿ ಎರಡುನೂರು ಹುಡುಗರೂ ಎರಡುನೂರು ಹುಡುಗಿಯರೂ ಇದ್ದ ದೊಡ್ಡ ಪಾಠಶಾಲೆಯನ್ನು ನಿರ್ಮಿಸಿ ಅನುಕೂಲ ಕಲ್ಪಿಸುತ್ತಾನೆ. ಹತ್ತು ವರ್ಷಗಳಲ್ಲಿಯೇ ಕನ್ನಡ, ಮರಾಠಿ, ಸಂಸ್ಕೃತ ಹಾಗೂ ಉರ್ದು ಭಾಷೆಗಳಲ್ಲಿ ಪ್ರವೀಣರಾದರು. ಮಹಾಶೂರ ರಣವೀರ ಸಿಂಗನಿಂದ ಯುದ್ಧ ಶಿಕ್ಷಣ ಪಡೆದ ಇಬ್ಬರೂ ಕುದುರೆ ಸವಾರಿ, ಭಲ್ಲೆಯನ್ನು ಹೊಡೆಯುವುದು, ಮೊದಲಾದ ಯುದ್ಧವಿದ್ಯೆಗಳಲ್ಲಿಯೂ ಪಾರಂಗತರಾದರು. ಮಲ್ಲಮ್ಮಳು ಇದರೊಂದಿಗೆ ದೈನಂದಿಕ ಚಟುವಟಿಕೆಗಳಲ್ಲಿಯೂ ಸಾಮಾನ್ಯರಂತೆ ತೊಡಗಿಕೊಳ್ಳುತ್ತಿದ್ದುದು, ಧಾರ್ಮಿಕ ಆಸಕ್ತಿ, ಗುರುಪೂಜೆ ಮೊದಲಾದವುಗಳು ವರ್ಣಿತವಾಗಿವೆ.

ಮಲ್ಲಮ್ಮಳ ಸ್ವಯಂವರ ವಿಶಿಷ್ಟ ರೀತಿಯಲ್ಲಿ ನಡೆದುದನ್ನು ಬಣ್ಣಿಸಲಾಗಿದೆ. ಯಾವ ರಾಜಕುಮಾರ ತನ್ನ ವಯಸ್ಸಿನಷ್ಟು ಸಂಖ್ಯೆಯ ಹುಲಿಗಳನ್ನು ನಿರ್ದಿಷ್ಟ ಕಾಲದಲ್ಲಿ ಭೇಟಿಯಾಡಿ ತರುವನೋ ಆತನನ್ನು ತಾನು ವರಿಸುವುದಾಗಿ ಮಲ್ಲಮ್ಮಳು ಶರತ್ತು ವಿಧಿಸಿರುತ್ತಾಳೆ. ಮಲ್ಲಮ್ಮಾಜಿಯನ್ನು ವರಿಸಲು ಸ್ವಯಂವರಕ್ಕೆ ಕೆಳದಿ, ಕೊಡಗು, ಮೈಸೂರು, ಆನೆಗುಂದಿ, ಜಯಪುರ, ಉದಯಪುರ ಮೊದಲಾದ ರಾಜ್ಯಗಳ ರಾಜಕುಮಾರರು, ಶಿವಾಜಿಯ ಇಬ್ಬರು ಮಕ್ಕಳು ಗೊತ್ತುಪಡಿಸಿದ ವೇಳೆಯಲ್ಲಿ ಹುಲಿಗಳನ್ನು ಕೊಂದು ತಂದಿರುತ್ತಾರೆ. ಇವರೊಂದಿಗೆ ಸ್ವಯಂವರಕ್ಕೆ ಬಂದಿದ್ದ ಬೆಳವಡಿಯ ಈಶಪ್ರಭು ಈ ಎಲ್ಲರಿಗಿಂತಲೂ ಹಾಗೂ ತನ್ನ ವಯಸ್ಸಿಗಿಂತಲೂ ಹೆಚ್ಚಿಗೆ ಹುಲಿಯನ್ನು ಕೊಂದು ತಂದು, ಮಲ್ಲಮ್ಮಳನ್ನು ಸ್ವಯಂವರದಲ್ಲಿ ವರಿಸುತ್ತಾನೆ.

ಮಲ್ಲಮ್ಮಳ ಮತ್ತೊಂದು ಸಾಹಸ ವಿಚಾರ ಇಲ್ಲಿ ದಾಖಲಾಗಿದೆ. ಈಶಪ್ರಭುವಿನೊಡನೆ ಪ್ರಯಾಣದಲ್ಲಿದ್ದಾಗ ಒಮ್ಮೆ ಮೇಲೆರಗಿದ ಎರಡು ಹುಲಿಗಳನ್ನು ಮಲ್ಲಮ್ಮ ಏಕಾಂಗಿಯಾಗಿ ಕೊಂದುಹಾಕಿದ ರೋಮಾಂಚಕಾರಿ ಘಟನೆಯನ್ನು ಲೇಖಕ ಬಣ್ಣಿಸಿದ್ದಾನೆ. ಮುಂದೆ ತಿಂಗಳಾನುಗಟ್ಟಲೆ ಶಿವಾಜಿಯ ಸೈನ್ಯವನ್ನು ಎದುರಿಸಿದ ಧೀರತನ ಒಮ್ಮಿಂದೊಮ್ಮೆಗೇ ಬಂದದ್ದಲ್ಲ, ಈ ಕೆಚ್ಚು ಮಲ್ಲಮ್ಮಳಿಗೆ ರಕ್ತಗತವಾಗಿತ್ತೆನ್ನುವುದನ್ನೂ, ಮಲ್ಲಮ್ಮಳು ಸಾಹಸಪ್ರಿಯೆ ಎನ್ನುವುದನ್ನೂ ಇಂಥ ಪ್ರಕರಣಗಳು ತಿಳಿಸಿವೆ.

ಪೂರ್ವಾರ್ಧದಂತೆ ಉತ್ತರಾರ್ಧದಲ್ಲಿಯೂ ಮಲ್ಲಮ್ಮನೇ ನಾಯಕಿ. ಗ್ರಂಥಕರ್ತನು ಇದನ್ನು "ಶ್ರೀ ಛತ್ರಪತಿ ಶಿವಾಜಿ ಮಹಾರಾಜರ ಸಂಗಡ ಯುದ್ಧ ಮಾಡಿ ಜಯ ಸಂಪಾದನೆ ಮಾಡಿದ ವಿಷಯವನ್ನು ಯಥಾವತ್ ಬರೆಯುತ್ತೇನೆ" ಎಂದು ಆರಂಭಿಸಿದ್ದಾನೆ.

ತಾನು ಕೃತಿ ರಚನೆಗೆ ತೊಡಗಲು ಕಾರಣವಾದ ತಾರಾಬಾಯಿಯ ಘೋಷಣೆ, ಕೃತಿಗೆ ದೊರಕಿದ ಸನ್ಮಾನ ಮೊದಲಾದವುಗಳನ್ನು ತಿಳಿಸಿ. ಶಿವಾಜಿಯ ಪಟ್ಟಾಭಿಷೇಕ, ದಕ್ಷಿಣ ಭಾರತದ ಜೈತ್ರಯಾತ್ರೆ ಮೊದಲಾದವುಗಳನ್ನು ತಿಳಿಸಿದ್ದಾನೆ. ಮರಳಿ ತನ್ನೂರಿಗೆ ಬರುವಾಗ ಹಂಪಿಯಲ್ಲಿ ಬೀಡುಬಿಟ್ಟಿದ್ದ ಶಿವಾಜಿ ಮುಂದೆ ಕೊಪ್ಪಳ, ಯಾದವಾಡ, ಧಾರವಾಡ ಮೊದಲಾದ ಕೋಟೆಗಳನ್ನು ವಶಪಡಿಸಿಕೊಂಡು ಮುಂದೆ ಬರುತ್ತಾನೆ. ಬೆಳವಡಿ ಕೋಟೆಯ ಬಳಿ ಬೀಡು ಬಿಟ್ಟಿದ್ದ ಶಿವಾಜಿಯ ಸೈನಿಕರು ಸುತ್ತಮುತ್ತಲಿನ ಊರುಗಳಲ್ಲಿನ ಆಕಳು ಹಾಗೂ ಎಮ್ಮೆಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡು ಹೋಗುತ್ತಾರೆ (ಗೋಗ್ರಹಣ/ತುರುಗೋಳ್ ನಡೆಸುವುದು ಯುದ್ಧಕ್ಕೆ ಆಹ್ವಾನ ನೀಡುವುದರ ಸಂಕೇತವೇ ಆಗಿದೆ). ಈಶಪ್ರಭುವು ತನ್ನ ದಳವಾಯಿ ಸಿದ್ಧಗೌಂಡಾಪಾಟೀಲರನ್ನು ಆಕಳನ್ನು ಕರೆತರಲು, ಶಿವಾಜಿಯ ಜೊತೆ ಮಾತನಾಡಿ ಬರಲೆಂದು ಕಳುಹಿಸುತ್ತಾನೆ. ಆದರೆ ಶಿವಾಜಿಯು ಈತನನ್ನು ಭೇಟಿಯಾಗುವುದಿಲ್ಲ, ಬದಲಿಗೆ ಶಿವಾಜಿಯ ಸೈನಿಕರು ಈತನನ್ನು ಬಹಳವಾಗಿ ಪರಿಹಾಸ್ಯಮಾಡಿ, ಅಪಮಾನಗೊಳಿಸುತ್ತಾರೆ.ಇದರಿಂದ ಕ್ರೋಧಗೊಂಡ ಈಶಪ್ರಭುವು ಯುದ್ಧದಿಂದಲೇ ಇದಕ್ಕೆ ಉತ್ತರ ನೀಡುವುದಾಗಿ ಸೈನಿಕರನ್ನು ಸಜ್ಜುಗೊಳಿಸುತ್ತಾನೆ. ಆದರೆ ಇವನನ್ನು ತಡೆದ ಮಲ್ಲಮ್ಮ ತಾನೇ ಸ್ವತಃ ಸೈನ್ಯ ತೆಗೆದುಕೊಂಡು ಹೋಗಿ ಆಕಳನ್ನು ಬಿಡಿಸಿಕೊಂಡು ಬರುವುದಾಗಿ ಹೇಳಿ, ಮಲ್ಲಮ್ಮ ತನ್ನ ಸ್ತ್ರೀಸೈನ್ಯವನ್ನು ತೆಗೆದುಕೊಂಡು ಹೊರಡುತ್ತಾಳೆ. ಸ್ತ್ರೀಯರೆಂದು ಪರಿಹಾಸ್ಯ ಮಾಡಿದ ಸೈನಿಕರಿಗೆ ಆಯುಧದಿಂದಲೇ ತಕ್ಕ ಉತ್ತರವನ್ನು ನೀಡಿ, ಶಿವಾಜಿಯ ಸೈನಿಕರು ಊಹಿಸಲೂ ಸಾಧ್ಯವಾಗದ ರೀತಿಯಲ್ಲಿ ಸಾಹಸ ತೋರುತ್ತಾಳೆ. ಶಿವಾಜಿಯ ಕಡೆಯಲ್ಲಿದ್ದ ತಮ್ಮ ಆಕಳನ್ನು ಬಿಡಿಸಿಕೊಂಡು ಬರುವುದರೊಂದಿಗೆ ಅವರ ಬಳಿಯ ೪೦೦ ಎತ್ತುಗಳನ್ನೂ ಹೊಡೆದುಕೊಂಡು ಬರುತ್ತಾಳೆ. ಈ ವಿಜಯೋತ್ಸವವನ್ನು ಹಳ್ಳಿಹಳ್ಳಿಗಳಲ್ಲಿಯೂ ಆಚರಿಸಲು, ಶಿವಾಜಿ ಅಪಮಾನಗೊಂಡು ಬೆಳವಡಿಯನ್ನು ವಶಪಡಿಸಿಕೊಳ್ಳಲು ತನ್ನ ಸೈನಿಕರಿಗೆ ತಿಳಿಸುತ್ತಾನೆ. ಶಿವಾಜಿ ಕಡೆಯ ಸೈನಿಕರು ಬೆಳವಡಿ ಕೋಟೆಯ ಸುತ್ತಲೂ ಬೀಡುಬಿಡಲು, ಈಶಪ್ರಭು ಕೋಟೆಯ ಬಾಗಿಲನ್ನು ಭದ್ರಪಡಿಸಿ, ಸ್ವಾದಿಯ ಸದಾಶಿವನಾಯಕನಿಗೂ, ಹೂಲಿಮಠದ ಗುರುಮಹಾರಾಜರಿಗೂ ಸಹಾಯ ಕೋರಿ ಪತ್ರ ಬರೆಯುತ್ತಾನೆ. ಕೋಟೆಯ ಮೇಲಿಂದ ಮರಾಠ ಸೈನಿಕರಮೇಲೆ ಗುಂಡಿನ ಮಳೆಗರೆದು ಕೆಲಕಾಲ ನಿಯಂತ್ರಣದಲ್ಲಿರಿಸಿದನಾದರೂ, ದಿನಗಳುರುಳಿದಂತೆ ಕೋಟೆಯ ಒಳಗಿನ ಮದ್ದುಗುಂಡು ಹಾಗೂ ಆಹಾರ ಸಾಮಗ್ರಿಗಳು ಮುಗಿಯುತ್ತಾ ಬರುತ್ತದೆ. ಸ್ವಾದಿ ದೂರದ ಹಾದಿಯಿದ್ದುದರಿಂದ ಕೂಡಲೇ ಸಹಾಯ ಒದಗಿಬರುವುದಿಲ್ಲ. ಹೂಲಿ ಗುರುರಾಯರು ಎಲ್ಲ ಪಾಟೀಲರಿಗೂ ಸರದಾರರಿಗೂ ದೇಸಾಯಿಗಳಿಗೂ ಶಿವಾಜಿಯ ವಿರುದ್ಧ ಬೆಳವಡಿಗೆ ಸಹಾಯ ಮಾಡಲು ಆದೇಶ ನೀಡಿದರೂ, ಶಿವಾಜಿಗೆ ಹೆದರಿ ಅವರಾರೂ ಸಹಾಯಕ್ಕೆ ಬರುವುದಿಲ್ಲ. ಕೋಟೆಯ ಒಳಗಿನ ಆಹಾರ ಸಾಮಗ್ರಿಗಳು ಸಂಪೂರ್ಣವಾಗಿ ಬರಿದಾಗುತ್ತಾ ಬರಲು, ಬೇರೆ ದಾರಿಕಾಣದ ಈಶಪ್ರಭು ಕೋಟೆಯ ಬಾಗಿಲನ್ನು ತೆರೆದು ಮರಾಠೆ ಸೈನ್ಯವನ್ನೆದುರಿಸಲಾರಂಭಿಸುತ್ತಾನೆ. ಮಲ್ಲಮ್ಮ ಸಹ ಸೈನ್ಯವನ್ನು ತೆಗೆದುಕೊಂಡು ಮತ್ತೊಂದು ಭಾಗದಲ್ಲಿ ಯುದ್ಧಕ್ಕೆ ನಿಲ್ಲುತ್ತಾಳೆ. ಈ ಸಮರದಲ್ಲಿ ಮಲ್ಲಮ್ಮ ಮರಾಠೆ ಸೈನ್ಯವನ್ನು ಹಿಂದಿರುಗಿಸುವಲ್ಲಿ ಯಶಸ್ಸು ಕಂಡರೆ, ಈಶಪ್ರಭು ಮಾರಣಾಂತಿಕ ಗಾಯಗೊಂಡು, ಬೆಳವಾಡಿಗೆ ಮರಳಿ ಸಾವನ್ನಪ್ಪುತ್ತಾನೆ. ಮರಣ ಶಯ್ಯೆಯಲ್ಲಿದ್ದ ಪತಿಗೆ ನಾಡನ್ನು ರಕ್ಷಿಸುವುದಾಗಿ ಭಾಷೆ ನೀಡಿದ್ದ ಮಲ್ಲಮ್ಮ ಯುದ್ಧವನ್ನು ಮುಂದುವರಿಸುವ ಸಂಕಲ್ಪ ಮಾಡಿದಳು. ಹೂಲಿಯ ಗುರುರಾಯರ ಸಲಹೆಯ ಮೇರೆಗೆ ಬೆಳವಡಿಯ ಸಮೀಪದ ಲೋಕೂರಿನಲ್ಲಿ ದ್ಯಾಮವ್ವ ಹೆಸರಿನ ಜಗದಂಬೆಯ ದರ್ಶನಕ್ಕೆ ಬಂದ ಶಿವಾಜಿಯನ್ನು ಮಲ್ಲಮ್ಮಳು ತನ್ನ ಸ್ತ್ರೀ ಸೈನ್ಯದೊಡನೆ ಸುತ್ತುವರಿಯುತ್ತಾಳೆ. ಮಲ್ಲಮ್ಮಳಿಗೆ ಸಂಪೂರ್ಣ ಶರಣಾದ ಶಿವಾಜಿಯು ಮಲ್ಲಮ್ಮಳನ್ನು ಸಾಕ್ಷಾತ್ ಭವಾನಿಯೆಂಬಂತೆ ಸ್ತುತಿಸಿದನು, ಅವಳನ್ನು ತನ್ನ ತಾಯಿ ಜೀಜಾಬಾಯಿ ಎಂಬಂತೆಯೇ ಕಂಡು, ಅವಳ ಪತಿಯನ್ನು ಕೊಂದ ಸರದಾರನನ್ನು ಶಿಕ್ಷಿಸಿ ಅವಳ ವಶಕ್ಕೆ

ಬಿಡುವುದಾಗಿ ತಿಳಿಸಿ, ತಾನು ಮಾಡಿದ ಅಪರಾಧಕ್ಕೆ ಯಾವ ಶಿಕ್ಷೆ ನೀಡಿದರೂ ಪಾಲಿಸುತ್ತೇನೆಂದು ಕೋರಿಕೊಳ್ಳುತ್ತಾನೆ. ಕಾಲಿಗೆರಗಿದ ಶಿವಾಜಿಯನ್ನು ಮಲ್ಲಮ್ಮ ಉದಾರ ಮನಸ್ಸಿನಿಂದ ಕ್ಷಮಿಸುತ್ತಾಳೆ. ಯುದ್ಧವು ಇಲ್ಲಿ ಮುಕ್ತಾಯ ಗೊಂಡಿದ್ದರೂ ಬೆಳವಡಿಯ ರಣರಂಗದಲ್ಲಿನ ಸೈನಿಕರಿಗೆ ಸುದ್ದಿ ತಲುಪಿಸುವುದು ತಡವಾಗಿ ಅಲ್ಲಿ ಯುದ್ಧ ಆರಂಭವಾಗಿರುತ್ತದೆ. ಶಿವಾಜಿಯ ಎದುರು ಮಲ್ಲಮ್ಮಳ ವಿಜಯ ಸಾಧಿಸಿಯಾಗಿತ್ತಾದರೂ ಇಲ್ಲಿ ನಡೆಯುತ್ತಿದ್ದ ಯುದ್ಧದಿಂದಾಗಿ ಬೆಳವಡಿಗೆ ಮರಳುತ್ತಿದ್ದ ಮಲ್ಲಮ್ಮಳನ್ನು ಶಿವಾಜಿಯ ಸೈನಿಕರು ಮುತ್ತುತ್ತಾರೆ. ಆಗ ರಾಣಿಯು ಪ್ರತಿ ಧಾಳಿಯನ್ನು ನಡೆಸಿ ಧನಾಜಿ ಮೊದಲಾದ ಸರದಾರರನ್ನು ಕುದುರೆಯಿಂದ ಕೆಳಗುರುಳಿಸಿ ಘಾಸಿಗೊಳಿಸುತ್ತಾಳಾದರೂ ಮಲ್ಲಮ್ಮನ ಕಡೆಯ ಗೌರಮ್ಮ ಮೊದಲಾದವರು ಅಸುನೀಗುತ್ತಾರೆ. ಈ ಸಂದರ್ಭದಲ್ಲಿ ಶಿವಾಜಿಯ ಕಡೆಯಿಂದ ಶಾಂತಿ ಬಾವುಟವನ್ನು ಹಿಡಿದ ಕೆಲವು ಸೈನಿಕರು ಬಂದು ಯುದ್ಧವನ್ನು ನಿಲ್ಲಿಸುವ ಆದೇಶದೊಂದಿಗೆ ಮಲ್ಲಮ್ಮಳಿಗಾಗಿ ಪಲ್ಲಕ್ಕಿಯನ್ನೂ ತರುತ್ತಾರೆ. ಪುನಃ ಮಲ್ಲಮ್ಮಳ ಕ್ಷಮೆಕೋರಿದ ಶಿವಾಜಿ ಇವಳ ರಾಜ್ಯದಲ್ಲಿ ಇವಳನ್ನು ಸಂಸ್ಥಾಪಿಸಿ, ಬೇರಾವ ತೊಂದರೆ ಒದಗಿದರೂ ರಕ್ಷಣೆ ನೀಡುವುದಾಗಿ ಭರವಸೆ ನೀಡಿ ಹಿಂದಿರುಗುತ್ತಾನೆ. ಮುಂದೆ ರಾಜಧಾನಿಗೆ ಮರಳಿದ ಶಿವಾಜಿ ಒಂದೆರಡು ವರ್ಷಗಳಲ್ಲಿ ಕ್ರಿ.ಶ.೧೬೮೦ರ ರೌದ್ರನಾಮ ಸಂವತ್ಸರದಲ್ಲಿ ಅಸುನೀಗುತ್ತಾನೆ. ಮಲ್ಲಮ್ಮಾಜಿಯು ಕ್ರಿ.ಶ.೧೭೧೭ನೆಯ ಸಂವತ್ಸರದಲ್ಲಿ ಇಹಲೋಕಯಾತ್ರೆಯನ್ನು ಮುಗಿಸಿದಳೆಂಬಲ್ಲಿಗೆ ಕೃತಿಯು ಮುಕ್ತಾಯವಾಗುತ್ತದೆ.

**ಸ್ತ್ರೀ ಸೈನ್ಯ:** ಯುದ್ಧಕ್ಕೆ ಹೊರಟ ರಾಣಿಯ ಯುದ್ಧ ವೇಷವು ಇಲ್ಲಿ ಬಣ್ಣಿತವಾಗಿದೆ. "ಸೀರೆಯ ಅಂಚನ್ನು ಬಲಗಡೆಯ ಭುಜದ ಮೇಲಿಂದ ತಂದು ಸೊಂಟಕ್ಕೆ ಕಟ್ಟಿ, ಮೇಲೆ ಒಂದು ಟೊಂಕದ ಪಟ್ಟಿಯನ್ನು ಹಾಕಿದಳು. ಕಬ್ಬಿಣದ ಕವಚದ ಮೇಲೆ ಜರಿದ ಕುಪ್ಪುಸವನ್ನು ತೊಟ್ಟಳು. ತಲೆಯ ಮೇಲೆ ಶಿರಸ್ತ್ರಾಣವನ್ನು ಇಟ್ಟು ತನ್ನ ಪತಿದೇವನ ಕಿರೀಟವನ್ನು ಧರಿಸಿದಳು. ಕೈಯಲ್ಲಿ ಖಡ್ಗವನ್ನೂ ಹಾಗೂ ಭಲ್ಲೆಯನ್ನು ತೆಗೆದುಕೊಂಡಳು". ಹೀಗೆ ಶಿವಾಜಿಯ ಸೈನ್ಯವನ್ನೆದುರಿಸಲು ಎರಡುಸಾವಿರ ಸ್ತ್ರೀಸೈನ್ಯವನ್ನೂ, ಮೂರುಸಾವಿರ ಸ್ತ್ರೀವೇಷಧಾರಿ ಪುರುಷರ ಸೈನ್ಯವನ್ನು ತೆಗೆದುಕೊಂಡು ಹೊರಟ ಚಿತ್ರಣವನ್ನು ಶ್ರೀನಿವಾಸ ಮುತಾಲಿಕನು ನೀಡುತ್ತಾನೆ.

"ಹನ್ನೆರಡು ವರ್ಷಗಳ ವಯಸ್ಸಿನಲ್ಲಿಯೆ ಮಲ್ಲಮ್ಮಾಜಿ ಎಲ್ಲರಿಗಿಂತ ಮೇಧಾವಿ ಯೆನಿಸಿಕೊಂಡು ಕನ್ನಡ ಸಂಸ್ಕೃತದಲ್ಲಿ ಕವಿತೆಯನ್ನು ರಚಿಸುವ ಸಾಮರ್ಥ್ಯ ಹೊಂದಿದ್ದಳು" ಎಂದು ಹೇಳಿರುವ ಈ ಗ್ರಂಥಕರ್ತನ ಹೇಳಿಕೆಯು ಮಲ್ಲಮ್ಮಳು ಯಾವುದಾದರೂ ಕೃತಿಯನ್ನು ರಚಿಸಿರಬಹುದೇ ಎಂಬ ಅನುಮಾನ ಮೂಡಿಸುತ್ತದೆ. ಇದಕ್ಕೆ ಪೂರಕವಾಗಿ ಯ.ರು.ಪಾಟೀಲರು ಮಲ್ಲಮ್ಮಳು 'ರಟ್ಟಾನ್ವಯ ಚರಿತಾಮೃತ' ಎಂಬ ಸಂಸ್ಕೃತ ಕೃತಿಯನ್ನು ರಚಿಸಿದ್ದಾಳೆ ಎಂದು ತಿಳಿಸಿದ್ದಾರೆ[೨೨]. ಆದರೆ ಲಭ್ಯವಿಲ್ಲದ ಈ ಕೃತಿಯನ್ನು ಕುರಿತಾಗಿ ಬೇರಾವ ಕವಿಯೂ ಉಲ್ಲೇಖಿಸದಿರುವುದರಿಂದ ಇದರ ಕುರಿತಾಗಿಹೆಚ್ಚಿನ ಮಾಹಿತಿ ದೊರಕುವುದಿಲ್ಲ.

ಬೆಳಗಾವಿಯ ಸುತ್ತಮುತ್ತಲ ಪ್ರದೇಶದಲ್ಲಿ ಕಂಡುಬರುವ ಮಲ್ಲಮ್ಮನ ಚಿತ್ರವಿರುವ ಕೆಲವು ವೀರಗಲ್ಲುಗಳು, ಮಲ್ಲಮ್ಮಳ ಜೀವಿತಾವಧಿಯಲ್ಲಿ ಸ್ವತಃ ರಾಣಿ ತಾರಾಬಾಯಿಯೇ ಹಾಕಿಸಿದ ಸ್ಮಾರಕ ಕಲ್ಲುಗಳುಗಳಾಗಿವೆ ಎಂಬ ವಿಚಾರವನ್ನು ಈ ಗ್ರಂಥಕರ್ತ ತಿಳಿಸಿದ್ದಾನೆ.

ಶೇಷೋ ಶ್ರೀನಿವಾಸ ಮುತಾಲಿಕನು ರಚಿಸಿರುವ ಈ ಕೃತಿಯು, ಪ್ರಾಕೃತದಿಂದ ಅನುವಾದ ಮಾಡಲಾದ ಗದ್ಯಕೃತಿಯಾಗಿದ್ದರೂ, ಇದು ಬೆಳವಡಿಯ ಮಲ್ಲಮ್ಮನನ್ನು ಸಂಪೂರ್ಣವಾಗಿ ಪರಿಚಯಿಸುವ ಮಹತ್ವದ ಕೃತಿಯಾಗಿದೆ.

ಮಲ್ಲಮ್ಮಳನ್ನು ಕುರಿತು ರಚಿತವಾಗಿರುವ ವಿಭಿನ್ನ ಕೃತಿಗಳಲ್ಲಿ, ಕೆಲವು ಶಿವಾಜಿಯೊಡನೆ ನಡೆದ ಯುದ್ಧದಲ್ಲಿ ಈಕೆ ಗೆದ್ದಳೆಂದು ತಿಳಿಸಿದ್ರೆ, ಮತ್ತೆ ಕೆಲವು ಸೋತಳೆಂದೂ, ಇನ್ನೂ ಕೆಲವು ಯುದ್ಧವೇ ಜರುಗಲಿಲ್ಲವೆಂದು ತಿಳಿಸಿವೆ.

ಆದರೆ ಈ ಕೃತಿಯು ಸಮಗ್ರ ವಿಚಾರವನ್ನು ವಿಸ್ತಾರವಾಗಿ ತಿಳಿಸುತ್ತಾ ಮೊದಲ ಯುದ್ಧದಲ್ಲಿ ಮಲ್ಲಮ್ಮ ಗೆದ್ದರೂ, ನಂತರ ಪತಿಯನ್ನು ಕಳೆದುಕೊಳ್ಳುವಲ್ಲಿ ಸೋಲುತ್ತಾಳೆ, ಮುಂದೆ ಯುದ್ಧ ಮುಂದುವರೆಸಿದಾಗ ಗುರುಗಳ ಸಲಹೆಯ ಮೇರೆಗೆ ದೇವಾಲಯದ ಬಳಿ ಶಿವಾಜಿಯನ್ನು ಭೇಟಿಮಾಡಿದಾಗ, ಅವನಿಂದ ಭವಾನಿ ಸ್ವರೂಪಳೆಂದೂ, ತನ್ನ ತಾಯಿಯ ಪ್ರತಿರೂಪಳೆಂದು ಕರೆಸಿಕೊಂಡು ಗೌರವಕ್ಕೆ ಪಾತ್ರಳಾದ ವಿಚಾರ ಚಿತ್ರಿತವಾಗಿ ಹಲವಾರು ಗೊಂದಲಗಳನ್ನು ಬಗೆಹರಿಸುವಲ್ಲಿ ಈ ಕೃತಿಯು ಸಹಕಾರಿಯಾಗಿದೆ.

**ಅಬ್ಬಕ್ಕ**

ಈ ಮೇಲೆ ಉಲ್ಲೇಖಿಸಿರುವ ಅರಸಿಯರ ಕುರಿತಾದ ಕಾವ್ಯಗಳಿಗಿಂತ ಭಿನ್ನವಾದ ಪದ್ಯವೊಂದು ಚೌಟರಾಣಿ ಅಬ್ಬಕ್ಕಳ ಕುರಿತಾಗಿ ರಚಿತವಗಿರುವುದು ವಿಶೇಷ ವೆನಿಸುತ್ತದೆ. ಈ ಪದ್ಯವನ್ನು ರಚಿಸಿರುವವನು ವಿದೇಶಿ ಕವಿ. ಈತ ಇಟಲಿ ದೇಶದಿಂದ ಬಂದ ಪ್ರವಾಸಿ.

ಅಬ್ಬಕ್ಕಳ ಯಶೋಗಾಥೆಯನ್ನು ಕೇಳಿ ತಿಳಿದುಕೊಂಡು, ಅವಳನ್ನು ಭೇಟಿಯಾಗಲೇ ಬೇಕೆಂದು ಕರ್ನಾಟಕದ ಕರಾವಳಿ ತೀರಕ್ಕೆ ಬಂದ ಈತ, ಅರಸಿಯನ್ನು ಕಂಡ ಮೇಲೆ ತನಗಾದ ಆಶ್ಚರ್ಯ ಬಣ್ಣಿಸಿದ್ದಾನೆ. ಸಾಧಾರಣ ಸ್ತ್ರೀ ವೇಷಭೂಷಣಗಳಲ್ಲಿದ್ದ ಈಕೆಯನ್ನು, ಕೆಲಸಗಾರರ ನಡುವೆ ನಿಂತು ಸ್ವತಃ ಕಾರ್ಯ ವೀಕ್ಷಣೆ ನಡೆಸುತ್ತಿದ್ದುದನ್ನು ಕಂಡ. ಇವಳ ಕೆಲಸ–ಕಾರ್ಯ, ದಿನಚರಿಗಳನ್ನು ಕೇಳಿ ತಿಳಿದುಕೊಂಡ. ಐಶ್ವರ್ಯ, ಅಧಿಕಾರದಿಂದ ದರ್ಪ ತೋರಿ ಹೆಸರು ಮಾಡದೆ, ತನ್ನ ಕಾರ್ಯಸಾಧನೆ, ಸಾಹಸಗಳಿಗೆ ಹೆಸರುವಾಸಿಯಾಗಿದ್ದಾಳೆಂಬುದನ್ನು ಮನಗಂಡ.

ಉಲ್ಲಾಳದ ರಾಣಿಯ ಕಾರ್ಯ ವೈಖರಿಯನ್ನು ಕಂಡ ದೆಲ್ಲಾವೆಲ್ಲೆ “ನನಗೆ ಪರ್ಷಿಯಾದ ರಾಜ ಷಾ ಅಬ್ಬಾಸನ ನೆನಪಾಯಿತು. ಈ ರಾಣಿಯು ಷಾ ಅಬ್ಬಾಸನಂತಹ ಮನಸ್ಸಿನವಳೆಂದು ಭಾವಿಸಿದೆ. ಅವನಷ್ಟೇ ಚಟುವಟಿಕೆ ಹಾಗೂ ದಿಟ್ಟ ವರ್ತನೆಯನ್ನು ಈ ರಾಣಿ ಯುದ್ಧ ಹಾಗೂ ಮತ್ತಿತರ ಪ್ರಾಮುಖ್ಯ ವಿಚಾರಗಳಲ್ಲಿ ಎತ್ತಿ ತೋರಿಸಿದ್ದಾಳೆ. ರಾತ್ರಿ ಹೊತ್ತು ತನ್ನ ಪ್ರಜೆಗಳಿಗೆ ಭೇಟಿಯನ್ನಿತ್ತು, ಅವರ ಅಹವಾಲುಗಳನ್ನು ಕೇಳುವುದರಲ್ಲಿ ನಿರತಳಾಗಿರುತ್ತಾಳೆಂದು ತಿಳಿಯಿತು”[೨೩]

ಉಲ್ಲಾಳದ ರಾಣಿಯ ಕುರಿತಾಗಿ ಮೆಚ್ಚುಗೆಯ ಮಾತುಗಳನ್ನಾಡಿದ ಪ್ರವಾಸಿ ದೆಲ್ಲಾವೆಲ್ಲೆ ಕವನವನ್ನೂ ರಚಿಸಿದ್ದಾನೆ. ಈಕೆಯನ್ನು ಕುರಿತು ರಚಿಸಿರುವ ಕವನದ ಇಂಗ್ಲಿಷ್ ಭಾವಾನುವಾದವನ್ನು ಪ್ರವಾಸಿ ಕಂಡ ಇಂಡಿಯ ಕೃತಿ ರಚಿಸಿರುವ ನಾಗೇಗೌಡರು ಈ ರೀತಿ ನೀಡಿದ್ದಾರೆ:

You are black but comely,
and all India and the Orient now bow down before your courage,
O! famous great Queen of Ulala as victorious in war as in love;
Sallo King of Bangher, driven by you from his kingdom,
and likewise the neighbouring Potugese armies,
whose ruin was brought about by your justly kindled wrath but this hand, which with lethal weapons has often destroyed lances and countless soldiers,
weaponless also divides souls from bodies; but so sweetly,
that the captured and the conquered, to save their lives,
give themselves up as willing spoil to her who kills them.

ಪೋರ್ಚುಗೀಸರನ್ನು ದಿಟ್ಟತನದಿಂದ ಮಣಿಸಿದ ರಾಣಿ ಅಬ್ಬಕ್ಕಳ ವ್ಯಾಪಾರ, ಯುದ್ಧ ಕುರಿತಾದ ಕೆಲವು ಮಾಹಿತಿಗಳು ಪೋರ್ಚುಗೀಸರ ದಾಖಲೆಗಳಲ್ಲೂ ದೊರಕುತ್ತವೆ. ಚೌಟ ಅರಸು ಮನೆತನದಲ್ಲಿ ಇದೇ ಹೆಸರಿನ

ಹಲವಾರು ಅರಸಿಯರು ಆಳ್ವಿಕೆ ನಡೆಸಿದ್ದು, ಅಬ್ಬಕ್ಕಳ ಕುರಿತಾಗಿ ಅನೇಕ ಗೊಂದಲಗಳಿಗೆ ಕಾರಣವಾಗಿವೆ, ಇವಳ ಕುರಿತಾದ ಸ್ಪಷ್ಟಮಾಹಿತಿಗೆ ಇತಿಹಾಸಕಾರರು ದೆಲ್ಲಾವೆಲ್ಲೆಯ ಲೇಖನವನ್ನು ಮುಖ್ಯ ಆಕರವಾಗಿ ಅವಲಂಬಿಸಿದ್ದಾರೆ. ಚರಿತ್ರೆಯಲ್ಲಿ ಮರೆತುಹೋಗುತ್ತಿದ್ದ ಅರಸಿಯೋರ್ವಳ ವಿಚಾರ ಪ್ರವಾಸಿಯೊಬ್ಬನ ಲೇಖನದಿಂದ ಉಳಿದು ಬಂದಿದೆ.

## ಸಂಸ್ಕೃತ ಸಾಹಿತ್ಯದಲ್ಲಿನ ಕರ್ನಾಟಕದ ಅರಸಿಯರು

ಕರ್ನಾಟಕದ ಅರಸು ಮನೆತನದ ಪೋಷಣೆಯಲ್ಲಿ ಸಂಸ್ಕೃತ ಸಾಹಿತ್ಯವೂ ಹುಲುಸಾಗಿ ಬೆಳೆದು ಬಂದಿದೆ. ಅನೇಕ ಐತಿಹಾಸಿಕ ಮಹತ್ವವನ್ನು ಪಡೆದ ಸಂಸ್ಕೃತ ಕಾವ್ಯಗಳೂ ಕೂಡ ಕನ್ನಡದ ರಾಣಿಯರನ್ನು ವಿಶೇಷವಾಗಿ ಹಲವಾರು ರಾಜಕುಮಾರಿಯರನ್ನು ಕುರಿತು ತಿಳಿಸುತ್ತವೆ. ಇಲ್ಲಿನ ಕೆಲವೊಂದು ಪ್ರಕರಣಗಳು ಸುಂದರ ಕಾವ್ಯವಾಗಿ ಹೊರಹೊಮ್ಮಲು ಪ್ರೇರೇಪಿಸಿದೆ.

### ರಾಣಿ ಸುಶೀಲೆ

ಸಾಧಾರಣವಾಗಿ ರಾಜಮನೆತನಗಳಲ್ಲಿ ಹಿರಿಯ ಮಗನಿಗೆ ಪಟ್ಟಕಟ್ಟುವ ಪರಂಪರೆ ಬೆಳೆದುಬಂದಿರುವುದನ್ನು ಕಾಣುತ್ತೇವೆ. ಆದರೆ ಕರ್ನಾಟಕದ ಕರಾವಳಿಯ ಕೆಲವು ರಾಜಮನೆತನಗಳಲ್ಲಿ ಹೆಣ್ಣುಮಕ್ಕಳಿಗೇ ಅಧಿಕಾರ ನೀಡುವ ಸಂಪ್ರದಾಯ ವಿಶೇಷವೆನಿಸುತ್ತದೆ. ಇಂಥ ವಿಶೇಷ ಆಚರಣೆ ನಡೆಸಿಕೊಂಡು ಬಂದಿರುವ ಮನೆತನವಾದ ಕುಂಬಳೆ ಅರಸು ಮನೆತನದ ವಿಚಾರವನ್ನು ತಿಳಿಸುವ ೧೩ನೆಯ ಶತಮಾನದ ಸಂಸ್ಕೃತ ಕೃತಿ 'ವೇಲಾಪುರ ಮಹಾತ್ಮ್ಯ'. ಈ ಕೃತಿಯಲ್ಲಿ ಈ ಕುಂಬಳೆ ಅರಸುಮನೆತನದ ಮೊದಲ ರಾಣಿ ಸುಶೀಲೆಯ ಜೀವನ ಚರಿತ್ರೆ ಚಿತ್ರಿತವಾಗಿದೆ. ಉಪ್ಪಳ ಸಮೀಪದ ಐಲ ದುರ್ಗಾಪರಮೇಶ್ವರೀ ದೇವಸ್ಥಾನದ ವಿಚಾರವನ್ನು ತಿಳಿಸುವ ಈ ಕೃತಿಯಲ್ಲಿ ಕದಂಬದೊರೆ ಮಯೂರ ಶರ್ಮನ ಮಗ ಚಂದ್ರಾಂಗದ, ಮಗಳು ಸುಶೀಲೆಯ ವಿಚಾರ ಹಾಗೂ ಇವಳಿಂದ ಮುಂದುವರೆದ ಕುಂಬಳೆ ರಾಜಮನೆತನದ ವಿಚಾರವಿದೆ. ತೀರ್ಥಯಾತ್ರೆಗೆಂದು ತಂದೆಯೊಡನೆ ತೆರಳಿ ಹಿಂದಿರುಗುವಾಗ, ಕುಂಬಳೆ ಹೊಳೆಯ ದಡದಲ್ಲಿ ಅನಾರೋಗ್ಯಪೀಡಿತಳಾಗುತ್ತಾಳೆ. ಯಾರಿಗೂ ಗುಣಪಡಿಸಲಾಗದ ಇವಳ ಕಾಯಿಲೆಯನ್ನು ಬ್ರಾಹ್ಮಣನೊಬ್ಬನು ಗುಣಪಡಿಸುತ್ತಾನೆ. ದೊರೆಯು ಅವನಿಗೇ ತನ್ನ ಮಗಳನ್ನು ಕೊಟ್ಟು ಮದುವೆಮಾಡಿ ತುಳುನಾಡಿನ ಒಡೆತನವನ್ನು, ಮೂವತ್ತೆರಡು ಗ್ರಾಮಗಳನ್ನು ಕೊಡುತ್ತಾನೆ. ಆದರೆ ಅಧಿಕಾರ ಮಾತ್ರ ಹೆಣ್ಣುಮಗಳದೇ ಆಗಿರುತ್ತದೆ. ಅಲ್ಲದೆ ಮುಂದೆಯೂ ಕೂಡ ಈ ವಂಶದ ಮೊದಲನೆಯ ಮಗಳಿಗೆ ಅಧಿಕಾರ ದೊರೆಯುವುದು ಹಾಗೂ ಇವಳ ಮಗ ಸಿಂಹಾಸನವನ್ನೇರುವನು, ಇವನ ನಂತರ ಈತನ' ಮೊದಲನೆಯ ಮಗಳು ಅಧಿಕಾರ ಪಡೆಯುವಳು. ಹೀಗೆ ಈ ಮನೆತನದ ಸಂಪ್ರದಾಯ ನಡೆದುಕೊಂಡು ಬಂದಿದೆ. ಪ್ರಬಲ ರಾಜಮನೆತನವಾಗಿ ಕಾಣಿಸಿಕೊಂಡ ಸಂದರ್ಭದಲ್ಲಿಯೂ ಕೂಡ ಮನೆತನದ ಈ ಸಂಪ್ರದಾಯಕ್ಕೆ ಚ್ಯುತಿ ಬಂದಿಲ್ಲದಿರುವುದು ವಿಶೇಷ. ಕವಿಸಿಂಹನು ಪಯಸ್ವಿನೀ ನದಿಯ ತಟದಲ್ಲಿ ಪಾಂಡ್ಯನೊಡನೆ ನಡೆದ ಘೋರ ಯುದ್ಧದಲ್ಲಿ ಅವನನ್ನು ಸೋಲಿಸಿ ಸೆರೆಹಿಡಿದು ತಾಯ ಪಾದಕ್ಕೊಪ್ಪಿಸಿದ ಹಾಗೂ ರಾಣಿಯು ಅವನನ್ನು ಮನ್ನಿಸಿ ಕಳುಹಿಸಿಕೊಟ್ಟ ಉಲ್ಲೇಖಗಳು ಐತಿಹಾಸಿಹ ಘಟನೆಗಳಾಗಿವೆ, ಅಲ್ಲದೆ ಇದು ರಾಣಿಗಿದ್ದ ಅಧಿಕಾರವನ್ನು ಕುರಿತು ತಿಳಿಸುತ್ತದೆ.

ಕರ್ನಾಟಕದಲ್ಲಿ ಅಳಿಯಕಟ್ಟಿನ ಸಂಪ್ರದಾಯವನ್ನು ರೂಢಿಸಿಕೊಂಡ ಪ್ರಾಚೀನ ಉಲ್ಲೇಖ ದೊರಕುವುದು ಈ ಅರಸು ಮನೆತನದಲ್ಲಿಯೇ. ಬ್ರಿಟೀಶ್‌ರಿಂದ ಸ್ವಾತಂತ್ರ ಪಡೆಯುವವರೆಗೂ, ಕುಂಬಳೆ ಪ್ರದೇಶದ ಅಧಿಕಾರವನ್ನು

ನಡೆಸಿಕೊಂಡು ಬಂದ ಈ ಅರಸುಮನೆತನದಲ್ಲಿ ಇಂದಿಗೂ ಮನೆತನದ ಕಾರ್ಯಕ್ರಮವಾಗಿ ಹಿರಿಯ ಮಗಳಿಗೆ ಅಧಿಕಾರ ಹಸ್ತಾಂತರ ವಿಧಿ ನಡೆಯುತ್ತಲೇ ಬಂದಿದೆ.

ಅರಸಿಯೋರ್ವಳಿಗಾಗಿ ಹೊಸ ರಾಜಮನೆತನ ಸ್ಥಾಪಿತವಾದದ್ದಲ್ಲದೆ, ಮುಂದಿನ ಉತ್ತರಾಧಿಕಾರಿಯೂ ಹೆಣ್ಣುಮಗಳೇ ಆಗುವ ಸಂಪ್ರದಾಯವನ್ನು ಕುರಿತು ತಿಳಿಸುವ 'ವೇಲಾಪುರ ಮಹಾತ್ಮೆ' ಯು ಮಹತ್ವದ ಕೃತಿಯೆನಿಸಿದೆ. ಸಂಸ್ಕೃತ ಭಾಷೆಯಲ್ಲಿರುವ ಈ ಕೃತಿಯ ಕಥಾಭಾಗವು, ಕರಾವಳಿ ತೀರದಲ್ಲಿ ಆಡುಭಾಷೆಯಲ್ಲಿ, ಯಕ್ಷಗಾನ ಪ್ರಯೋಗಗಳಲ್ಲಿಯೂ ಜನಪ್ರಿಯವಾಗಿರುವುದನ್ನು ಕಾಣುತ್ತೇವೆ.

## ಮೃಣಾಳವತಿ

ಸಂಸ್ಕೃತಕವಿ ಮೇರುತುಂಗ (ಕ್ರಿ.ಶ.೧೩೦೬) ತನ್ನ ಕೃತಿ **'ಪ್ರಬಂಧಚಿಂತಾಮಣಿ'**ಯಲ್ಲಿ ಸಾಕಷ್ಟು ಐತಿಹಾಸಿಕ ವಿಚಾರಗಳನ್ನು ತಿಳಿಸಿದ್ದಾನೆ. ಶಕಪುರುಷ ವಿಕ್ರಮಾದಿತ್ಯ, ಶಾತವಾಹನರು, ಅನಿಲವಾಡದ ಚಾಲುಕ್ಯರು, ಭೋಜರಾಜ ಮತ್ತು ಮುಂಜರಾಜ, ವಘೇಲರಾಜರಾದ ಲವಣಪ್ರಸಾದ ಮತ್ತು ವೀರಧವಳ ಇವರ ಮಂತ್ರಿಗಳು, ಇದರೊಂದಿಗೆ ಬರುವ ಇತರ ಪ್ರಸ್ತಾವನೆಗಳಲ್ಲಿ ಭರ್ತೃಹರಿಯ ವಿಚಾರವೂ ಇದೆ.

ಈ ಪ್ರಕಾರವಾಗಿ ಅನೇಕ ಐತಿಹಾಸಿಕ ವ್ಯಕ್ತಿಗಳ ವಿಚಾರವನ್ನು ತಿಳಿಸುವ ಈ ಕೃತಿಯಲ್ಲಿ ೧೦ನೆಯ ಶತಮಾನದ ಪೂರ್ವಭಾಗದಲ್ಲಿದ್ದ ಮುಂಜ ಅಥವಾ ವಾಕ್ಪತಿ ರಾಜನು ಕಲ್ಯಾಣದ ಚಾಲುಕ್ಯ ಅರಸನಾದ ಎರಡನೆಯ ತೈಲಪನ ಮೇಲೆ ದಂಡೆತ್ತಿ ಬಂದು ಪರಾಜಿತನಾಗಿ ಕೈಸೆರೆ ಸಿಗುವ ಘಟನೆ ಕರ್ನಾಟಕಕ್ಕೆ ಸಂಬಂಧಿಸಿದ್ದಾಗಿದೆ. ಪರಮಾರ ಮುಂಜನು ಕಲ್ಯಾಣದ ಚಾಲುಕ್ಯರ ಮೇಲೆ ಅನೇಕಬಾರಿ ದಂಡೆತ್ತಿ ಬಂದದ್ದು, ಈತನ ಮಂತ್ರಿ ರುದ್ರಾದಿತ್ಯರೆಂಬುದು, ಇವರು ತೈಲಪನಿಗೆ ಸೋತಿರುವುದು ಶಾಸನಗಳಲ್ಲಿ ಸ್ಪಷ್ಟವಾಗಿ ತಿಳಿದುಬರುವ ವಿಚಾರವಾಗಿದೆ.

ಮುಂಜನು ಅನೇಕ ಮಹಾ ಕವಿಗಳಿಗೆ ಆಶ್ರಯ ನೀಡರುವುದಲ್ಲದೆ ಸ್ವತಃ 'ರತ್ನಮಾಲಿಕಾ' ಎಂಬ ಗ್ರಂಥವನ್ನು ರಚಿಸಿರುವ ಪರಮಾರ ಮುಂಜನು ಸಾಹಿತ್ಯ ಪ್ರೇಮಿಯೂ ಆಗಿದ್ದನು. ಸಾಹಿತ್ಯ ಪ್ರೇಮಿಯಂತೆ, ಸಾಹಸಪ್ರೇಮಿಯೂ ಆದ ಮುಂಜನು ಕಲ್ಯಾಣದ ಚಾಲುಕ್ಯದೊರೆ ತೈಲಪನ ರಾಜ್ಯದ ಮೇಲೆ ದಾಳಿಯಿಡಲು ನಿರ್ಧರಿಸುತ್ತಾನೆ. ಆದರೆ ತೈಲಪನು ಯುಕ್ತಿಯಿಂದ ಮುಂಜನನ್ನು ನೊಜೆಯ ಹುಲ್ಲಿನಿಂದ ಕೈಕಟ್ಟಿ ಸೆರೆಹಿಡಿಯುತ್ತಾನೆ.

ಸೆರೆಮನೆಯಲ್ಲಿದ್ದ ಮಾಳವ ದೊರೆ ಮುಂಜನನ್ನು ನೋಡಿಕೊಳ್ಳಲು ತೈಲಪನು ತನ್ನ ತಂಗಿ ಮೃಣಾಳವತಿಯನ್ನು ನೇಮಿಸುತ್ತಾನೆ. ಆದರೆ ಮುಂಜ ಹಾಗೂ ಮೃಣಾಳವತಿಯರಲ್ಲಿ ಪ್ರಣಯಾಂಕುರವಾಗುತ್ತದೆ. ಇತ್ತ ಮುಂಜನ ಮಂತ್ರಿಗಳು ಇವನನ್ನು ಬಿಡಿಸಿಕೊಂಡು ಹೋಗಲು ಅವನಿರುವ ತಾಣಕ್ಕೆ ನೆಲದಲ್ಲಿ ಸುರಂಗವನ್ನು ತೋಡಿ, ಅಲ್ಲಿಂದ ಪಾರಾಗಿ ಹೋಗಲು ಏರ್ಪಾಡುಮಾಡುತ್ತಾರೆ. ಮುಂಜನು ಈ ವಿಚಾರವನ್ನು ಮೃಣಾಳವತಿಯಲ್ಲಿ ತಿಳಿಸಿ, ಅವಳಿಗೂ ತನ್ನೊಂದಿಗೆ ಬರುವಂತೆ ಹೇಳುತ್ತಾನೆ. ಆದರೆ ಈ ವೇಳೆಗಾಗಲೇ ವಿಧವೆಯಾಗಿದ್ದ ಮೃಣಾಳವತಿಗೆ ಇವನೊಂದಿಗೆ ಹೋಗಲು ಮನಸ್ಸು ಬರುವುದಿಲ್ಲ. ಆದರೆ ಅವಳು ತನ್ನರಮನೆಗೆ ಹೋಗಿ ಆಭರಣದ ಪೆಟ್ಟಿಗೆ ತರುವುದಾಗಿ ನಂಬಿಸಿ, ಅಣ್ಣ ತೈಲಪನಲ್ಲಿ ಮುಂಜನು ತಪ್ಪಿಸಿಕೊಂಡು ಹೋಗಲಿರುವ ವಿಚಾರ ತಿಳಿಸುತ್ತಾಳೆ. ಮುಂಜನ ಈ ಕಾರ್ಯದಿಂದ ಕುಪಿತನಾದ ತೈಲಪನು ಅವನನ್ನು ಕ್ರೂರವಾಗಿ ದಂಡಿಸಿ ಕಡೆಗೆ ಶೂಲಕ್ಕೇರಿಸುತ್ತಾನೆ[೨೪].

ಕರ್ನಾಟಕರಾಜನಿಂದ ಶೂಲಾರೋಹಣಕ್ಕೊಳಗಾದ ಮುಂಜನ ಕುರಿತಾಗಿ ವಿಷಾದ ವ್ಯಕ್ತಪಡಿಸಿರುವ ಕವಿ, ಇತಿಹಾಸವನ್ನು ಕಾವ್ಯವಾಗಿಸುವತ್ತ ಹೆಚ್ಚು ಗಮನ ಹರಿಸಿಲ್ಲ. ಈ ಕೃತಿಯು ಔತ್ತರೇಯ ಕವಿಕೃತವಾಗಿದೆ. ಅವಂತಿಯ ದೊರೆ ಮುಂಜನನ್ನು ನಾಯಕನನ್ನಾಗಿಸಿದ ಈ ಕಾವ್ಯದಲ್ಲಿ ಕರ್ನಾಟಕದ ರಾಜಕುಮಾರಿ ಮೃಣಾಳವತಿ

ನಾಯಕಿಯ ಸ್ಥಾನದಲ್ಲಿ ಚಿತ್ರಿತಳಾಗಿಲ್ಲ. ಈ ಘಟನೆಯನ್ನು ದೇಸೀಯ ದೃಷ್ಟಿಯಲ್ಲಿ ನೋಡಿದಾಗ ಮೃಣಾಳವತಿ ತನ್ನ ರಾಜ್ಯಹಿತಕ್ಕಾಗಿ ತ್ಯಾಗ ಮಾಡಿದ ವಿಚಾರವೇ ಮುಖ್ಯಾಂಶವೆನಿಸುತ್ತದೆ. ಆರುಬಾರಿ ತನ್ನ ರಾಜ್ಯದಮೇಲೆ ದಂಡೆತ್ತಿ ಬಂದಿರುವ ಮುಂಜನನ್ನು ಕಡೆಗೂ ದೊರೆ ತೈಲಪ ಬಂಧಿಸಿರುತ್ತಾನೆ. ಅಲ್ಲದೆ ಅವನನ್ನು ರಾಜನಿಗೆ ಉಚಿತವಾದ ರೀತಿಯಲ್ಲಿಯೇ ನಡೆಸಿಕೊಂಡು ಅವನ ಮೇಲ್ವಿಚಾರಣೆಗೆಂದು ತನ್ನ ಸಹೋದರಿ ಮೃಣಾಳವತಿಯನ್ನು ನೇಮಿಸಿರುತ್ತಾನೆ. ಆದರೆ ಮುಂಜ ತಪ್ಪಿಸಿಕೊಂಡು ಹೋಗಲು ಪ್ರಯತ್ನಿಸುವುದನ್ನು ತನ್ನ ರಾಜ್ಯಕ್ಕೆ ಅಪಾಯವೆಂದು ಬಗೆದ ಮೃಣಾಳವತಿಗೆ ಅದನ್ನು ತನ್ನ ಅಣ್ಣನಿಗೆ ಹೇಳುವುದಲ್ಲದೆ ಬೇರೆ ದಾರಿ ಇರುವುದಿಲ್ಲ. ಇತಿಹಾಸದ ಈ ಘಟನೆಯನ್ನು ಒಂದು ಸುಂದರ ಕಾವ್ಯವನ್ನಾಗಿಸುವವರಿಗೆ ಮೃಣಾಳವತಿಯ ಜೀವನ ಒಳ್ಳೆಯ ವಸ್ತುವನ್ನು ಒದಗಿಸುತ್ತದೆ.

ಕೆ.ಎಮ್.ಮುನ್ಷಿ ಎನ್ನುವವರು ಈ ಕಥೆಯನ್ನಾಧರಿಸಿ ಸ್ವತಂತ್ರ ಪೂರ್ವದಲ್ಲಿಯೇ 'ಪೃಥ್ವೀವಲ್ಲಭ' ಎಂಬ ಹೆಸರಿನ ಕಾದಂಬರಿಯನ್ನು ರಚಿಸಿದ್ದು, ಕ್ರಿ.ಶ.೧೯೪೩ರಲ್ಲಿ ಸೊಹರಾಬ್ ಮೋದಿ ಎಂಬ ಪ್ರಸಿದ್ಧ ನಿರ್ದೇಶಕರು ಇದನ್ನು ಚಲನಚಿತ್ರವಾಗಿ ತಯಾರಿಸಿ ಬಿಡುಗಡೆ ಮಾಡಿದ್ದಾರೆ. ಆದರೆ ಇದರಲ್ಲಿ ತೈಲಪನನ್ನು ನಯವಂಚಕನಂತೆಯೂ, ಮೃಣಾಲಿನಿಯನ್ನು ಕಟುಕಹೃದಯದವಳಂತೆ ಚಿತ್ರಿಸಲಾಗಿದೆ. ಈ ಕಾದಂಬರಿ ಹಾಗೂ ಚಲನಚಿತ್ರದಲ್ಲಿ ಚಾಲುಕ್ಯ ಚಕ್ರವರ್ತಿಗೆ ಹಾಗೂ ಚಾಲುಕ್ಯ ಇತಿಹಾಸ ಪರಂರೆಗೆ ಕಳಂಕವೆಸಗಿದೆ ಎಂದೆನಿಸಿ ಅ.ನ.ಕೃ ನೇತೃತ್ವದಲ್ಲಿ ಪ್ರತಿಭಟನೆ ನಡೆಸಲಾಯಿತು. ಧಾರವಾಡದ ವಿದ್ಯಾವರ್ಧಕ ಸಂಘದ ನಿರ್ಣಯದ ಮೇರೆಗೆ ಶ್ರೀರಂಗರು, ಬೆಟಗೇರಿಯವರು, ಬಸವನಾಳರು ಮೊದಲಾದವರು ಸೇರಿ ಮುನ್ಶಿಯವರಿಗೆ ಕನ್ನಡಿಗರ ಕ್ಷಮೆಕೋರುವಂತೆಯೂ, ಚಲನಚಿತ್ರಕ್ಕೆ ತಡೆಹಿಡಿಯುವಂತೆಯೂ ಆಗ್ರಹಿಸಿ ಪತ್ರ ಬರೆದರು. ಆದರೆ ಅದಕ್ಕೆ ಉತ್ತರ ನೀಡದೆ, ಪತ್ರಿಕೆಯೊಂದಕ್ಕೆ ಲೇಖನ ಬರೆದು ಮೂರ್ಖ ಜನರಿಗೆ ಹಿಸ್ಟರಿ (ಇತಿಹಾಸ) ಹಾಗೂ ಹಿಸ್ಟಾರಿಕಲ್ ಫಿಕ್ಷನ್ (ಐತಿಹಾಸಿಕ ಕಾದಂಬರಿ) ಎಂದರೇನೆಂಬುದು ತಿಳಿದಿಲ್ಲ ಎಂದು ಬರೆದಿದ್ದಾರೆ. ಆದರೆ ಗಾಂಧೀಜಿಯವರು ಮುನ್ಶಿಯವರಿಗೆ ಪತ್ರಬರೆದು ತಮಗೆ ಈ ಕಾದಂಬರಿಯ ಯಾವ ಪಾತ್ರವೂ ಹಿಡಿಸಲಿಲ್ಲವೆಂದು ಬರೆದಿರುವ ಪತ್ರದ ಪ್ರತಿಯನ್ನು ಎನ್ಕೆಯವರು ತರಿಸಿಕೊಂಡು ಪ್ರಕಟಿಸಿರುವುದು ಕನ್ನಡಿಗರಿಗೆ ಕೊಂಚ ಸಮಾಧಾನವನ್ನು ನೀಡಿದೆ ಎಂದು ತಿಳಿಸಿದ್ದಾರೆ[೨೫]. ಮುಂದೆ ಇದರ ಕುರಿತಾಗಿ ಐತಿಹಾಸಿಕ ಅಧ್ಯಯನ ಕೈಗೊಂಡು ಸಿ.ಕೆ.ನಾಗರಾಜ ರಾವ್ ಅವರು ಕನ್ನಡದಲ್ಲಿ ಶ್ರೀಪೃಥ್ವೀವಲ್ಲಭ ಎಂಬ ಕಾದಂಬರಿಯನ್ನು ರಚಿಸಿದ್ದಾರೆ[೨೬].

**ಚಂದಲಾದೇವಿ**

ಕವಿ ಬಿಲ್ಹಣನ ವಿಕ್ರಮಾಂಕದೇವ ಚರಿತೆಯಲ್ಲಿ, ವಿಕ್ರಮಾದಿತ್ಯನು ಶಿಲಾಹಾರ ಮನೆತನದ ಚಂದ್ರಲೇಖೆಯನ್ನು ಸ್ವಯಂವರಪೂರ್ವಕವಾಗಿ ವರಿಸಿದನೆಂದು ತಿಳಿಸಿದ್ದಾನೆ. ಕವಿ ಬಿಲ್ಹಣನು ತಿಳಿಸಿರುವಂತೆ ಈಕೆಯ ಸೌಂದರ್ಯಕ್ಕೆ ಮನಸೋತು ದೇಶದ ನಾನಾ ಭಾಗಗಳಿಂದ ಪ್ರಸಿದ್ಧ ದೊರೆಗಳು ಸ್ವಯಂವರಕ್ಕೆ ಬಂದಿದ್ದರಂತೆ. ಅವರಲ್ಲಿ ಕಾಶ್ಮೀರದ ಹರ್ಷದೇವನೂ ಒಬ್ಬ. ಆದರೆ ಸ್ವಯಂವರದಲ್ಲಿ ಚಂದಲೆಯು ವಿಕ್ರಮಾದಿತ್ಯನನ್ನು ವರಿಸಿದಾಗ, ಬೇರೆ ರಾಜರುಗಳಿಗೆ ಅಸಮಾಧಾನವಾದರೂ ವಿಕ್ರಮಾದಿತ್ಯನ ಶೌರ್ಯಪರಾಕ್ರಮಗಳನ್ನು ತಿಳಿದಿದ್ದ ಅವರು ಇವನನ್ನು ವಿರೋಧಿಸಲು ಅಸಮರ್ಥರಾಗಿ ಸುಮ್ಮನೆ ಹಿಂದಿರುಗಿದರಂತೆ. ಈ ಕಾವ್ಯದಲ್ಲಿ ಚಂದ್ರಿಕಾ/ಚಂದ್ರಲೇಖೆಯನ್ನು, ಕವಿ ಬಿಲ್ಹಣ ಪ್ರಕಾರ ವರ್ಣಿಸಿದ್ದಾನೆ.

**ಇಯಂ ವಿಲಾಸದ್ರುಮ ದೋಹದ ಶ್ರೀಃ**
**ಇಯಂ ಸುಧಾಯೌವನ ದುಗ್ಧಸಿಂಧೋಃ**
**ಲಾವಣ್ಯ ಮಾಣಿಕ್ಯರುಚಿಚ್ಛಟೀಯಂ**
**ಇಯಂ ಮನಃ ಕಾರ್ಮಣ ಚೂರ್ಣ ಮುಷ್ಟಿಃ॥**

ಇವಳು ಸಿಂಗಾರದ ಬಳ್ಳಿ, ಸುರಿದ ಸೊಬಗಿನ ಸುಗ್ಗಿ, ಪ್ರಾಯದ ಪಾಲ್ಗಡಲಿನ ಅಮೃತ, ಲಾವಣ್ಯ ರತ್ನದ ಕಮನೀಯ ಕಾಂತಿ. ಮನವನ್ನು ಮರುಳು ಮಾಡುವ ಮೋಹಿನಿಯ ಮಾಟ ಎಂದು ವರ್ಣಿಸಲ್ಪಟ್ಟಿರುವ ಇವಳನ್ನು ಶಾಸನಗಳೂ ಕೂಡ ಬಣ್ಣಿಸಿವೆ:

**ಸ್ವಸ್ತ್ಯನವರತ ಪರಮಕಲ್ಯಾಣಾಭ್ಯುದಯ ಸಹಸ್ರಫಳಭೋಗ ಭಾಗಿನಿ**
**ದ್ವಿತೀಯ ಲಕ್ಷ್ಮೀ ಸಮಾನೆ ಕಲಹಂಸಯಾನೆ ರಾಯರ್ಝುಳಪ್ಪಕವ್ವಿರುಜ ಸಮಾಲಿಂ**
**ಗಿತ ಕಲ್ಪಲತೆ ಸಾಮಂತ ಸೀಮಂತೀನಿ ಪರಿವ್ರತ ದುಷ್ಟದರ್ಪಿಷ್ಟ ಸ**
**ವತಿ ಶಿರೋವಜ್ರಾಮುಷ್ಠಿ ಧೀನಾನಾಥ ಕಥಕ ವೈತಾಳಿಕ ಸುವರ್ಣವೃಷ್ಟಿ॥**

ಅರಸಿ ಲಕ್ಷ್ಮೀದೇವಿಯು ಅನಂತ ಫಲವನ್ನು (ಸುಖವನ್ನು) ಪಡೆದ, ಸಾಕ್ಷಾತ್ ಲಕ್ಷ್ಮಿಯ ಸಮಾನಳು, ಹಂಸನಡಿಗೆಯವಳು, ಕಲ್ಪಿಸಿದ್ದನ್ನು ನೀಡುವ ಕಲ್ಪವೃಕ್ಷದಂತವಳೂ, ಸಾಮಂತರಿಗೆ ಅನುಗ್ರಹಿಸುವವಳೂ, ದುಷ್ಟ ಆಲೋಚನೆಗಳಿಂದ ದರ್ಪಿಸುವ ಸವತಿಯರಿಗೆ ವಜ್ರಮುಷ್ಠಿಯಂತೆಯೂ, ದೀನ ಅನಾಥ ಮೊದಲಾದವರಿಗೆ ಚಿನ್ನದ ಮಳೆಗರೆವವಳೂ ಆಗಿದ್ದಾಳೆ ಎಂದು ಈ ಶಾಸನ ಪದ್ಯವು ಅರಸಿಯನ್ನು ಬಣ್ಣಿಸಿದೆ.

**ವಂದಿಚಿಂತಾಮಣಿ ಅಂತಃಪುರ ಚೂಡಾಮಣಿ ಮಲವಿದ್ಯಾಧರಿ**
**ಸರಳ ಕಳಾಧರಿರಾಯಮನೋಜರಾಜರತಿ ಅಡಬಳ ಸರಸ್ವತಿ**
**ನೃತ್ಯವಿದ್ಯಾಧರಿ ಸವತಿಗಜಕೇಸರಿ ಕಲಿಕಲಾ ಸರಸ್ವತಿ**
**ಶ್ರೀಮತ್ರಿಭುವನಮಲ್ಲ ವಿಶಾಲವಕ್ಷಸ್ಥಲ ನಿವಾಸಿನಿಯಿರಪ್ಪ ಶ್ರೀಮತ್ಪಿರಿಯರಸಿ ಚಂದಲದೇವಿ॥**[೨೭]

ವಂದಿಮಾಗದ ಹೊಗಳುಭಟರಿಗೆ ಚಿಂತಾಮಣಿಯಂತೆಯೂ, ಅಂತಃಪುರದ ಚೂಡಾಮಣಿಯಂತೆಯೂ, ಅಮಲ ವಿದ್ಯಾಧರಿ, ಸಕಲ ಕಲಾಧರಿ, ರಾಜನ ಮನೋವಲ್ಲಭೆ, ನೃತ್ಯವಿದ್ಯೆಯಲ್ಲಿ ಪರಿಣತಳೂ, ನೃತ್ಯವಿದ್ಯಾಪಾರಂಗತಳೂ, ಸವತಿ ಎನ್ನುವ ಆನೆಗೆ ಸಿಂಹದಂತೆಯೂ, ಕಲಿಯುಗದ ಸರಸ್ವತಿಯೂ ಆದ ಚಂದಲಾದೇವಿಯು ತ್ರಿಭುವನಮಲ್ಲ ವಿಕ್ರಮಾದಿತ್ಯನ ಹೃದಯನಿವಾಸಿನಿ ಎಂದು ವಿಶಿಷ್ಟವಾದ ಬಿರುದಾವಳಿಗಳಿಂದ ಚಾಲುಕ್ಯರಾಣಿ ಚಂದಲದೇವಿಯನ್ನು ಈ ಶಾಸನವು ಬಣ್ಣಿಸಿದೆ.

ಸಂಸ್ಕೃತ ಸಾಹಿತ್ಯದಲ್ಲಿನ ಕನ್ನಡ ಅರಸಿಯರ ವಿಚಾರಗಳು ಬಣ್ಣಿತವಾಗಿರುವುದಕ್ಕೆ ಈ ಮೇಲಿನ ಕೆಲವು ಉದಾಹರಣೆಗಳ ನೀಡಲಾಗಿದೆ.

ಇನ್ನೂ ಕೆಲವು ರಾಜಕುವರಿಯರ ವಿಚಾರಗಳನ್ನು ಪ್ರಸಿದ್ಧ ಕವಿಗಳ ಕಾವ್ಯಗಳಲ್ಲಿ ಗುರುತಿಸುವ ಪ್ರಯತ್ನವನ್ನು ನಮ್ಮ ವಿದ್ವಾಂಸರು ನಡೆಸಿದ್ದಾರೆ. ಅವರಲ್ಲಿ ಕನ್ನಡದ ಪ್ರಾಚೀನ ರಾಜಮನೆತನ ಎನಿಸಿದ ಕದಂಬರ ರಾಜಕುಮಾರಿಯನ್ನು ಪ್ರಸಿದ್ಧಕವಿ ಕಾಳಿದಾಸನ ಕಾವ್ಯದಲ್ಲಿನ ನಾಯಕಿ ಎಂದು ಹುಲ್ಲೂರು ಶ್ರೀನಿವಾಸ ಜೋಯಿಸರು ಪ್ರತಿಪಾದಿಸುತ್ತಾರೆ. ಕವಿ ಕಾಳಿದಾಸನ ವಿಕ್ರಮೋರ್ವಶೀಯದಲ್ಲಿನ ನಾಯಕಿಯನ್ನು ಧ್ರುವದೇವಿಗೂ, ನಾಯಕ ವಿಕ್ರಮನನ್ನು ಗುಪ್ತವಂಶದ ದೊರೆ ಚಂದ್ರಗುಪ್ತನಿಗೂ ಸಮೀಕರಿಸಲಾಗುತ್ತದೆ. ಅಲ್ಲದೆ ಧ್ರುವದೇವಿಯು ಕದಂಬದೊರೆ ಕಾಕುತ್ಸ್ಥವರ್ಮನ ಮಗಳೆಂದು ವಾದಿಸುವ ಕೆಲವು ಅಂಶಗಳನ್ನು ವಿದ್ವಾಂಸರು ಶೋಧಿಸಿದ್ದಾರೆ[೨೮]. ಈ ವಾದವು ನಿಜವಾದಲ್ಲಿ ಸಂಸ್ಕೃತ ಕಾವ್ಯವೊಂದರಲ್ಲಿ ಅದರಲ್ಲೂ ಕಾಳಿದಾಸನ ಕಾವ್ಯದ ನಾಯಕಿಯಾಗಿ ವಿಶಿಷ್ಟ ಸ್ಥಾನಪಡೆದ ರಾಣಿ ಕರ್ನಾಟಕದವಳಾಗುತ್ತಾಳೆ.

ಶಾಸನಗಳಲ್ಲಿ ಕದಂಬ ಹಾಗೂ ಗುಪ್ತವಂಶದ ದೊರೆಗಳಲ್ಲಿ ವೈವಾಹಿಕ ಸಂಬಂಧಗಳು ಏರ್ಪಟ್ಟಿದ್ದ ಕುರಿತಾಗಿ ಸೂಚನೆಗಳಿವೆ. (ತಾಳಗುಂದ ಶಾಸನ) ಆದರೆ, ಕಾಕುತ್ಸ್ಥವರ್ಮ ಹಾಗೂ ಚಂದ್ರಗುಪ್ತ ವಿಕ್ರಮಾದಿತ್ಯರು

ಸಮವಯಸ್ಕರಾಗುವುದರಿಂದ, ಇದು ಅಸಂಭವವಾಗಿ ತೋರುತ್ತದೆ. ಅಲ್ಲದೆ ಕಾಕುತ್ಥ್ಸವರ್ಮನ ಮಗಳನ್ನು ವರಿಸಿದವನು ಚಂದ್ರಗುಪ್ತನ ಮಗ ಕುಮಾರಗುಪ್ತ ಎಂಬ ವಾದವೂ ಇರುವುದರಿಂದ ಧ್ರುವದೇವಿಯೇ ಕರ್ನಾಟಕದ ರಾಜಕುಮಾರಿ ಎಂಬುದು ಖಚಿತ ವಾಗಿಹೇಳಲಾಗುವುದಿಲ್ಲ.

ಮತ್ತೊಬ್ಬ ಪ್ರಸಿದ್ಧ ಸಂಸ್ಕೃತ ಕವಿ ಬಿಲ್ಹಣನ ಕಾವ್ಯವೊಂದಕ್ಕೆ ಮೂಲ ಪ್ರೇರಣೆ ಕಲ್ಯಾಣದ ಚಾಲುಕ್ಯ ದೊರೆ ಆರನೆಯ ವಿಕ್ರಮಾದಿತ್ಯನ ಮಗಳೆಂದು ಹೇಳಲಾಗುತ್ತದೆ. ಬಿಲ್ಹಣನ 'ಚೋರಪಂಚಶಿಕಾ' ಎಂಬ ಕೃತಿಯು ರಾಜಕುಮಾರಿಯೋರ್ವಳ ಪ್ರೇಮಕಥೆಯ ಸುತ್ತಲು ರಚಿತವಾದ ಕಾವ್ಯ. ಇಲ್ಲಿ ಕವಿಯು ತನ್ನ ಪ್ರೇಯಸಿಯಂತೆ ಚಿತ್ರಿಸಿರುವ ರಾಜಕುಮಾರಿಯನ್ನು ಚಾಲುಕ್ಯ ವಿಕ್ರಮಾದಿತ್ಯನ ಮಗಳು ಎಂದು ಹೇಳಲಾಗುತ್ತದೆ[೨೯]. 'ವಿಕ್ರಮಾಂಕದೇವ ಚರಿತ' ಕೃತಿಯನ್ನು ರಚಿಸಿರುವ ಕವಿ ಬಿಲ್ಹಣನು ಕಲ್ಯಾಣಿ ಚಾಲುಕ್ಯ ವಿಕ್ರಮಾದಿತ್ಯನ ಆಸ್ಥಾನದಲ್ಲಿದ್ದನೆಂಬುದು ಖಚಿತವಾದರೂ, ಇವನ ಆಸ್ಥಾನಕ್ಕೆ ಬರುವ ಮುನ್ನ ಕನ್ಯಾಕುಬ್ಜ, ಧಾರಾ ರಾಜ್ಯಗಳಿಗೆ ಭೇಟಿ ಇತ್ತು ಮುಂದೆ ಕಲಚೂರಿ ರಾಜವಂಶದ ದೊರೆ ಕರ್ಣನ ಆಶ್ರಯದಲ್ಲಿಯೂ ಕೆಲಕಾಲ ಇದ್ದನೆಂಬ ವಿಚಾರ ತಿಳಿದು ಬರುತ್ತದೆ. ಅಲ್ಲದೆ 'ಚೋರಪಂಚಶಿಕಾ' ಕೃತಿಯಲ್ಲಿ ರಾಜಕುಮಾರಿಯ ಹೆಸರಾಗಲೀ, ಆಕೆಯ ತಂದೆಯ ಹೆಸರಾಗಲೀ ಸ್ಪಷ್ಟವಾಗಿ ತಿಳಿಸಿಲ್ಲದಿರುವುದು ಕೆಲವು ಗೊಂದಲಕ್ಕೆಡೆಮಾಡಿದೆ.

## ಜನಪದ ಸಾಹಿತ್ಯದಲ್ಲಿ ಕರ್ನಾಟಕದ ಅರಸಿಯರು

ಇತಿಹಾಸದಲ್ಲಿ ಘಟಿಸಿದ ಕೆಲವು ಮಹತ್ತರ ವಿಚಾರಗಳು ಜನರ ಮನಸ್ಸಿನಲ್ಲಿ ಅಚ್ಚಳಿಯದೆ ನಿಂತು, ಕಾವ್ಯ, ಕಥೆ, ನಾಟಕ ಮೊದಲಾದ ರೂಪವನ್ನು ಪಡೆದು ಮುಂದಿನ ತಲೆಮಾರಿಗೆ ಮೌಖಿಕವಾಗಿ ಹರಿದು ಬಂದಿದೆ.

ಜನಪದ ಸಾಹಿತ್ಯದಲ್ಲಿ ಇತಿಹಾಸದ' ಸಂಗತಿಗಳ ಖಚಿತವಾದ ದಾಖಲೆ ದೊರಕುವುದು ಅಪರೂಪ, ತೀರಾ ಪ್ರಾಚೀನವಾದ ಐತಿಹಾಸಿಕ ವಿಷಯಗಳು ಜನಪದ ಲೋಕದಲ್ಲಿ ಅನೇಕ ರೂಪಗಳನ್ನು ಪಡೆದುಕೊಂಡಿರುತ್ತದೆ. ಮಹತ್ವದ ಚಾರಿತ್ರಿಕ ಘಟನೆಯೊಂದು ಜನಪದ ಸಾಹಿತ್ಯದ ಉಗಮಕ್ಕೆ ಕಾರಣವಾಗಿದ್ದರೂ, ಅದರ ಬೆಳವಣಿಗೆಯಲ್ಲಿ ಅತಿಮಾನುಷ, ಅವಾಸ್ತವ ಅಂಶಗಳು ಸೇರ್ಪಡೆಗೊಂಡು ಮೂಲಘಟನೆ ಇಷ್ಟೇ ಎಂದು ಗುರುತಿಸುವುದು ಅಸಾಧ್ಯ ಎನ್ನುವ ಮಟ್ಟಕ್ಕೆ ಬೆಳೆದು ಬಂದಿರುತ್ತದೆ. ಅರ್ಧ ಚಾರಿತ್ರಿಕ ಅರ್ಧ ಕಾಲ್ಪನಿಕ ರೂಪದ ಇಂಥ ಜನಪದ ಗೀತೆ, ಕಥೆ, ಲಾವಣಿಗಳಿಗೆ ಅಡ್ಡಗಥೆಗಳು ಸೇರಿಕೊಂಡು ಕಲ್ಪನೆಯ ರೆಂಬೆಕೊಂಬೆಗಳು ಮೂಡಿರುತ್ತವೆ.

ಐತಿಹಾಸಿಕ ಲಾವಣಿ, ಜನಪದ ಐತಿಹ್ಯಗಳನ್ನು ಅಸಮಗ್ರ ಐತಿಹಾಸಿಕ ಘಟನೆಗಳು, ಅಸ್ಪಷ್ಟ ಐತಿಹಾಸಿಕ ಘಟನೆಗಳು, ಸಮಗ್ರ ಐತಿಹಾಸಿಕ ಘಟನೆಗಳು ಎಂದು ವಿಭಾಗಿಸಬಹುದು. ಇವುಗಳಲ್ಲಿ ಮರೆತು ಹೋಗಿರುವ, ಆರ್ಧಂಬರ್ಧ ನಿರೂಪಣೆ ಇರುವ ಸಾಹಿತ್ಯಗಳನ್ನು ಅಸಮಗ್ರ ಗುಂಪಿಗೂ, ಐತಿಹಾಸಿಕ ವಿಚಾರಗಳಿಗೆ ಕಾಲ್ಪನಿಕ ಘಟನೆಗಳು ಹೆಣೆಯಲ್ಪಟ್ಟಿರುವುದನ್ನು ಅಸ್ಪಷ್ಟ ಸಾಹಿತ್ಯದ ಗುಂಪಿಗೂ ಸೇರಿಸಿ, ಸಮಗ್ರ ವಿಚಾರವನ್ನು ಉಳಿಸಿಕೊಂಡು ಬಂದಿರುವುದನ್ನು ಪ್ರತ್ಯೇಕವಾಗಿ ಪರಿಗಣಿಸಬಹುದು.

ಜನಪದ ಸಾಹಿತ್ಯದಲ್ಲಿ ಪ್ರಸಿದ್ಧ ಚಕ್ರವರ್ತಿ, ದೊರೆಗಳ ವಿಚಾರ ಹೆಚ್ಚಾಗಿ ಕಂಡುಬರುವುದಿಲ್ಲ. ಜನಸಾಮಾನ್ಯರಿಂದ ದೂರವಾಗಿ, ನಗರಗಳಲ್ಲಿ, ವೈಭವೋಪೇತ ಅರಮನೆಗಳಲ್ಲಿ ವಾಸಿಸುತ್ತಾ ಜನಸಾಮಾನ್ಯರ ಸಂಪರ್ಕಕ್ಕೆ ಬಾರದೆ, ಅವರ ಖಾಸಗಿ ಹಾಗೂ ಸಾರ್ವತ್ರಿಕ ಬದುಕಿನ ಅನೇಕ ವಿವರಗಳು ಗ್ರಾಮೀಣ ಸಾಹಿತ್ಯ ರಚನಕಾರರ ಪ್ರತಿಭಾಸ್ಪರ್ಷಕ್ಕೆ ಸಿಲುಕದೆ ದೂರವಾದದ್ದೇ ಇದಕ್ಕೆ ಕಾರಣವಾಗಿರಬಹುದೆಂದು ಒಂದು ಅಭಿಪ್ರಾಯವಿದೆ. ಆದರೆ

ಜನಪದ ಲಾವಣಿಕಾರರು ತಾವು ಹತ್ತಿರದಿಂದ ಕಂಡ ಸಣ್ಣಪುಟ್ಟ ತುಂಡರಸರ, ಪಾಳೆಯಗಾರರ ಕುರಿತಾಗಿ ಚಿತ್ರಿಸಿರುವುದನ್ನು ಕಾಣುತ್ತೇವೆ.

**ಲಾವಣಿ:** ಕನ್ನಡದ ಒಂದು ವಿಶೇಷ ಸಾಹಿತ್ಯ ಪ್ರಕಾರ. ಇದು ಹಾಡುವ ಮಟ್ಟುಗಳು. ಲಾವಣಿಯೆಂದರೆ ಒಂದು ಕಥೆಯನ್ನು ಹೇಳುವ ಹಾಡು ಅಥವಾ ಹಾಡಿನಲ್ಲಿ ಹೇಳಲಾದ ಒಂದು ಕಥೆ. ಲಾವಣಿಗಳೆಲ್ಲ ಕ'ಥನಗೀತೆಗಳು. ಸಾಧಾರಣವಾಗಿ ಐತಿಹಾಸಿಕ ವಿಚಾರಗಳೇ ಲಾವಣಿಗಳಿಗೆ ವಸ್ತುಗಳಾಗಿರುತ್ತವೆಯಾದರೂ, ಪೌರಾಣಿಕ, ಸಾಮಾಜಿಕ ವಿಷಯಗಳೂ ಇಲ್ಲಿ ಕಂಡುಬರುತ್ತವೆ.

ಲಾವಣಿಯನ್ನು ಹಾಡುವಾಗ ಮೊದಲಿಗೆ ಉಪೋದ್ಘಾತ ಸ್ವರೂಪದ ಚಿಕ್ಕಹಾಡನ್ನೂ ಕೊನೆಗೊಂದು ಉಪಸಂಹಾರ ಸ್ವರೂಪದ ಹಾಡನ್ನೂ ಹೇಳುವುದು ವಾಡಿಕೆ. ಸೂಚನಾ ಪಲ್ಲವಿಯನ್ನು ಸಖಿ ಎಂದೂ ಕೊನೆಯದನ್ನು ಖ್ಯಾಲಿ ಎಂದೂ ಹೆಸರಿಸುತ್ತಾರೆ. ಪ್ರತಿ ಲಾವಣಿಯಲ್ಲಿಯೂ ಚೌಕ ಎಂಬ ವಿಭಾಗವನ್ನು ಕಲ್ಪಿಸಿ ಅದರಲ್ಲಿ ಕೆಲವು ನುಡಿಗಳು ಸೇರಿರಬೇಕೆಂಬುದು ನಿಯಮ. ಇಂಥ ನಾಲ್ಕಾರು ಚೌಕಗಳು ಸೇರಿ ಇಡಿ ಲಾವಣಿ ರೂಪುಗೊಂಡಿರುತ್ತವೆ. ಲಾವಣಿ ಹಾಡುವಾಗ ಸಾಮಾನ್ಯವಾಗಿ ಇಬ್ಬರು ಜೊತೆಯಾಗುತ್ತಾರೆ. ಅವರು ಎಡಗೈಯಲ್ಲಿ ಕೈತಾಳ, ಬಲಗೈಯಲ್ಲಿ ಡಪ್ಪು ಹಿಡಿದು ಗೆಜ್ಜೆ ಕಟ್ಟಿಕೊಂಡು ಹಾಡಲು ಸಿದ್ಧವಾಗುತ್ತಾರೆ. ಅವರ ಹಿಂದೆ ತಿಂತಿಣಿ ಎಂಬ ವಾದ್ಯವನ್ನು ಹಿಡಿದ ಸೂರಿನವ ನಿಂತಿರುತ್ತಾನೆ.

**ದುಂದುಮೆ:** ಇದೂ ಕೂಡ ಲಾವಣಿಯಂತೆ ಹಾಡಿನ ಮಟ್ಟು. ಉತ್ತರ ಕರ್ನಾಟಕದಲ್ಲಿ ವಿಶೇಷವಾಗಿ ಪ್ರಚಾರದಲ್ಲಿರುವ ಕಥನಕಾವ್ಯ ಪ್ರಕಾರ. ಈ ಕಾವ್ಯಗಳನ್ನು ಹಾಡುವಾಗ ದಿಮ್ಮು ಎಂಬ ಚರ್ಮವಾದ್ಯವನ್ನು ಬಳಸುತ್ತಾರೆ. ಆ ವಾದ್ಯದ ದುಮ್ ದಿಮ್ಮಿ ಎಂಬ ಶಬ್ದದಿಂದ ದುಮ್‌ದುಮೆ ಎಂದೇ ಈ ಪ್ರಕಾರವನ್ನು ಕರೆಯಲಾಗುತ್ತದೆ. ಹೀಗೆ ದಿಮ್ಮು ಬಳಸಿಕೊಂಡು ಹಾಡುವ ಕಾವ್ಯಗಳೇ ದುಂದುಮೆ ಎನಿಸಿವೆ. ಈ ವಾದ್ಯದ ನೆರವಿಲ್ಲದೆ ಹಾಡುವಂತಿಲ್ಲ ಹಾಗೆ ಹಾಡಿದರೆ ಅವು ಹೋಳಿಪದಗಳೆನಿಸುತ್ತವೆ. ದುಂದುಮೆ ಮತ್ತು ಹೋಳಿ ಪದಗಳಿಗಿರುವ ಮುಖ್ಯ ವ್ಯತ್ಯಾಸವೇ ಈ ವಾದ್ಯ. ಇನ್ನುಳಿದಂತೆ ಇವುಗಳ ಭಾಷೆ, ಶೈಲಿ, ರಚನೆ ತಂತ್ರ ಮುಂತಾದವುಗಳಲ್ಲಿ ಏಕರೀತಿ ಕಂಡುಬರುತ್ತದೆ.

ದುಂದುಮೆಗಳಲ್ಲಿ ವೀರರಸ ಪ್ರಧಾನವಾದರೂ ಉಳಿದ ರಸಗಳೂ ಉಂಟು. ದುಂದುಮೆಗಳನ್ನು ಕುರಿತು ಸುದೀರ್ಘವಾಗಿ ಅಧ್ಯಯನ ನಡೆಸಿರುವ ಬಿ.ಎಸ್.ಗದ್ದಗೀ ಮಠ ಅವರು ದುಂದುಮೆ ಹಾಗೂ ದುಂದುಭಿ ಎಂಬ ಎರಡು ಕಾವ್ಯ ಪ್ರಕಾರಗಳನ್ನು ಹೇಳುತ್ತಾರೆ. ಇವೆರಡನ್ನೂ ಅವರು ಬಾಜನಗಬ್ಬ ಎಂದಿದ್ದಾರೆ. ಅರಸರು ದಿಗ್ವಿಜಯಕ್ಕೆ ಹೊರಟಾಗ ದುಂದುಬಿ ಮೊಳಗಿಸಿ ಹಾಡಲಾಗುತ್ತಿದ್ದಂಥವು ದುಂದುಬಿಗಳು. ದುಂದುಮೆಗಳಿಗೆ ಕರಡೆ, ಸಂಬಾಳ, ಮದ್ದಲೆ ಮೊದಲಾದ ವಾದ್ಯಗಳನ್ನು ಬಳಸಿಕೊಂಡು ಹಾಡುತ್ತಿದ್ದರೆಂದು ತಿಳಿದು ಬಂದಿದೆ. ಈಗ ದಿಮ್ಮು ದಿಮ್ಮಡಿಗಳನ್ನು ಬಳಸುತ್ತಾರೆ.

ದುಂದುಮೆ ಪದಗಳು ಕಿತ್ತೂರು ಅರಸರ ಕಾಲದಲ್ಲಿ ಬಹು ವ್ಯಾಪಕವಾಗಿ ಬೆಳೆಯಿತು.[೩೦] ಇದರ ಲಕ್ಷಣಗಳೆಂದರೆ ಕಥೆ, ಸನ್ನಿವೇಶಗಳು ವರ್ಣನೆಗಳಿಂದ ಕೂಡಿರುತ್ತವೆ. ವರ್ಣನೆಗಳು ಸಂದರ್ಭೋಚಿತವಾಗಿರುತ್ತವೆಯೇ ಹೊರತು ದೀರ್ಘವಾಗಿರುವುದಿಲ್ಲ. ಕಥನಕ್ರಿಯೆ ತೀವ್ರಗತಿಯಲ್ಲಿ ಮುನ್ನಡೆಯುತ್ತದೆ. ವೀರರಸಕ್ಕೆ ಪ್ರಧಾನ್ಯವಿದ್ದರೂ ಉಳಿದ ರಸಗಳೂ ಬರಬಲ್ಲವು. ನೀತಿ ಪ್ರಸಾರ ಕಾರ್ಯವೂ ಇದರಲ್ಲಿ ಮತ್ತೊಂದು ಅಂಗ. ಓಟ, ರಭಸ, ಉತ್ಸಾಹವೇ ಇದರ ಜೀವಾಳ.

**ಅರಸಿಯರ ಸಾಹಸ ಬಣ್ಣಿಸುವ ಜನಪದ ಗೀತೆಗಳು**

**ಓಬವ್ವ ನಾಗತಿ:** ಚಿತ್ರದುರ್ಗದ ಪಾಳೆಗಾರ ವಂಶದ ಎರಡನೆಯ ಕಸ್ತೂರಿ ರಂಗಪ್ಪ ನಾಯಕ ಮಡದಿ ಓಬವ್ವ ನಾಗತಿಯು ಪತಿಯ ಅಕಾಲಿಕ ಸಾವಿನ ನಂತರ ಧೃತಿಗೆಡದೆ ರಾಜ್ಯವನ್ನು ಮುನ್ನಡೆಸಿದ ಛಲಗಾರ್ತಿ. ಅಪುತ್ರಕನಾದ ಕಸ್ತೂರಿ ರಂಗಪ್ಪನ ಮರಣದ ನಂತರ, ಚಿತ್ರದುರ್ಗದ ಪಾಳೆಯ ಪಟ್ಟಿನ ಉತ್ತರಾಧಿಕಾರಿಯೇ ಇಲ್ಲ ಎನ್ನುವ ಸಂದರ್ಭದಲ್ಲಿ, ಅರಾಜಕತ್ವ ತೋರಗೊಡದೆ, ತನಗೆ ವಿಧೇಯರಾಗಿ ನಡೆಯದವರನ್ನು ದೂರವಿರಿಸಿ, ತನ್ನ ಮನಸ್ಸಿಗೊಪ್ಪುವ ಬಾಲಕನನ್ನು ದತ್ತು ಸ್ವೀಕರಿಸಿ ರಾಜ್ಯ ಮುನ್ನಡೆಸಿದ ವೀರ ವನಿತೆ ಓಬವ್ವ ನಾಗತಿ.

ಓಬವ್ವ ನಾಗತಿಯ ಕುರಿತಾದ ಜನಪದ ಗೀತೆಯೊಂದು ಈಕೆಯ ಶೌರ್ಯವನ್ನು ಬಣ್ಣಿಸುತ್ತದೆ. ಸಿಂಹಾಸನಕ್ಕೇರಿದ ಚಿಕ್ಕಮೆದಕೇರಿ ಕೇವಲ ೧೨ ವಯಸ್ಸಿನವನಾಗಿದ್ದಾಗ, ರಾಯದುರ್ಗದ ದಳಪತಿಯು, ಚಿತ್ರದುರ್ಗವು ಓರ್ವ ಹೆಣ್ಣಿನ ಕೈಯಲ್ಲಿದೆ ಅದನ್ನು ಸುಲಭವಾಗಿ ಆಕ್ರಮಿಸಬಹುದೆಂಬ ಕಲ್ಪನೆಯಿಂದ ಊರ ಗಡಿಯಲ್ಲಿ ಮೇಯುತ್ತಿದ್ದ ದನಗಳನ್ನು ಅಪಹರಿಸುತ್ತಾನೆ.  ಗೋಗ್ರಹಣ ನಡೆಸಿ ಯುದ್ಧಕ್ಕೆ ಆಹ್ವಾನ ಕೊಟ್ಟ ಎದುರಾಳಿಯ ವಿರುದ್ಧ ಓಬವ್ವ ನಾಗತಿಯು ದಂಡುಗಟ್ಟಿಕೊಂಡು ಹೋಗಿ ಎರಗುತ್ತಾಳೆ. ಹೆಣ್ಣಿನ ಗಂಡುತನ ಕಂಡು ಬೆಚ್ಚಿದ ದಳಪತಿಯು ದನಗಳನ್ನು ಬಿಟ್ಟು ಓಡಿ ಹೋಗುತ್ತಾನೆ. ಆದರೆ ಓಬವ್ವ ಅಷ್ಟಕ್ಕೇ ಸುಮ್ಮನಿರದೆ ಅವನನ್ನು ನಾಡಿನ ಆಚೆಯ ತನಕ ಬೆನ್ನಟ್ಟಿ ಓಡಿಸುತ್ತಾಳೆ[೩೧].

**ಕೆಳದಿ ಚನ್ನಮ್ಮ**

ಕೆಳದಿಯನ್ನಾಳಿದ ಪ್ರಸಿದ್ಧ ಅರಸಿ ಚೆನ್ನಮ್ಮಳ ಕುರಿತಾದ ಹಲವಾರು ವಿಚಾರಗಳು ಶಿಷ್ಟಕಾವ್ಯಗಳಲ್ಲಿ ಬಣ್ಣಿತವಾಗಿದ್ದರೂ, ಯುದ್ಧದಲ್ಲಿ ಸಾಹಸ ತೋರಿದ ಇವಳ ಧೈರ್ಯ–ಸಾಹಸಗಳನ್ನು ಜನಪದ ಕವಿಗಳು ರೋಚಕವಾಗಿ ಬಹುಪರಿಯಿಂದ ಬಣ್ಣಿಸುತ್ತಾರೆ. ಹದಿನಾರನೆಯ ಶತಮಾನದಲ್ಲಿ ಮೊಗಲರನ್ನು ಎದುರಿಸಲು ಪ್ರಸಿದ್ಧ ದೊರೆಗಳೇ ಹಿಂದೇಟು ಹಾಕುತ್ತಿದ್ದ ಸಂದರ್ಭದಲ್ಲಿ, ಅರಸಿಯೋರ್ವಳು ಕೆಚ್ಚೆದೆಯಿಂದ ಮೊಗಲರ ಸೈನ್ಯವನ್ನು ಎದುರಿಸಿದ್ದು ಮಹತ್ವದ ವಿಚಾರವೇ ಆಗಿದೆ. ಚೆನ್ನಮ್ಮಳು ನಡೆಸಿದ ಈ ಯುದ್ಧ ಹಾಗೂ ಅದರ ಯಶಸ್ಸು ಜನಮನದಲ್ಲಿ ಅಚ್ಚಳಿಯದೆ ನಿಂತು ಚೆನ್ನಮ್ಮಳಿಗೆ ವಿಶೇಷ ಸ್ಥಾನ ತಂದುಕೊಟ್ಟಿರುವುದು ಇಂತಹ ಹೋರಾಟದ ಹಾಡುಗಳ ರಚನೆಗೆ ಕಾರಣವಾಗಿದೆ. ಇಂಥ ಸಾಹಸಮಯ ವಿಚಾರವನ್ನು ಜನಪದ ಕವಿಗಳು ಕಣ್ಣಿಗೆ ಕಟ್ಟುವಂತೆ ಬಣ್ಣಿಸುತ್ತಾರೆ. ಚನ್ನಮ್ಮಳ ಯುದ್ಧ ವಿಚಾರವನ್ನು ಬಣ್ಣಿಸುವ ಜನಪದ ಗೀತೆಯನ್ನು ಸಾ.ಶಿ.ಮರುಳಯ್ಯನವರು ಸಂಗ್ರಹಿಸಿದ್ದಾರೆ[೩೨].

ಜನಪದ ಕೃತಿಗಳು ಕೇವಲ ಚನ್ನಮ್ಮಳ ಸಾಹಸವನ್ನಷ್ಟೇ ಬಣ್ಣಿಸದೆ, ರಾಜಕೀಯ ವಿಚಾರದಲ್ಲಿ ಇವಳು ತೆಗೆದುಕೊಂಡ ಮಹತ್ವದ ತೀರ್ಮಾನ, ಇವಳ ಚಾಣಾಕ್ಷತನದ ಕುರಿತಾಗಿಯೂ ಕೆಲವು ವಿಚಾರಗಳನ್ನು ಬಣ್ಣಿಸುತ್ತವೆ. ಅವುಗಳಲ್ಲಿ ಒಂದು ಪ್ರಕರಣವು ಹೀಗಿದೆ –

ಪತಿ ಸೋಮಶೇಖರ ಅಕಾಲದಲ್ಲಿ ದುಷ್ಟರ ಕುತಂತ್ರದಿಂದ ಮಡಿದಾಗ, ಚೆನ್ನಮ್ಮಳಿಗೆ ಮಕ್ಕಳಿರುವುದಿಲ್ಲ. ಸಿಂಹಾಸನವು ಶತ್ರುಗಳ ಪಾಲಾಗುವುದನ್ನು ತಪ್ಪಿಸಲು ತಾನೇ ಸಿಂಹಾಸನವನ್ನೇರಿದರೂ, ಉತ್ತರಾಧಿಕಾರಿಯನ್ನು ನೇಮಿಸುವುದು ಇವಳ ಪ್ರಮುಖ ಜವಾಬ್ದಾರಿಯಾಗಿರುತ್ತದೆ. ಇಂತಹ ಸಂದರ್ಭದಲ್ಲಿ ದತ್ತು ತೆಗೆದುಕೊಳ್ಳಲು ನಿರ್ಧರಿಸುತ್ತಾಳೆ. ದತ್ತು ಸ್ವೀಕಾರಕ್ಕೆ ಮಗುವನ್ನು ಆರಿಸಿಕೊಳ್ಳಲು ರಾಜ್ಯಾಧಿಕಾರಕ್ಕೆ ಅರ್ಹತೆಯುಳ್ಳ ರಾಜಬಂಧುಗಳ ಮಕ್ಕಳನ್ನು ಅರಮನೆಗೆ ಕರೆಸಿಕೊಂಡು, ಅರಮನೆಯ ವಿಶಾಲವಾದ ಕೋಣೆಯೊಂದರಲ್ಲಿ ಮಕ್ಕಳು ಬಯಸುವ ನಾನಾ ಆಟಿಕೆಗಳು, ತಿಂಡಿ ಮೊದಲಾದ ವಸ್ತುಗಳನ್ನಿರಿಸಿ ಬರಮಾಡಿಕೊಂಡ ಮಕ್ಕಳಿಗೆ ತಮಗಿಷ್ಟವಾದುದನ್ನು ತೆಗೆದುಕೊಳ್ಳಲು ಏರ್ಪಾಡಾಗಿರುತ್ತದೆ. ಮಕ್ಕಳ ಮನಸ್ಸನ್ನು ಪರೀಕ್ಷಿಸುವ ಸಲುವಾಗಿ ಇರಿಸಲಾದ ಈ ಸಾಮಗ್ರಿಗಳಲ್ಲಿ

ಹತ್ತುವರ್ಷದ ಬಾಲಕನೊಬ್ಬನು ದೊರೆ ಶಿವಪ್ಪನಾಯಕನ ಚಿತ್ರಪಟ, ಒಂದು ವಚನಗ್ರಂಥ ಮತ್ತೊಂದು ಕತ್ತಿಯನ್ನು ಆರಿಸಿಕೊಳ್ಳುತ್ತಾನೆ. ಆಯ್ದುಕೊಂಡ ವಸ್ತುಗಳ ವಿಚಾರವಾಗಿ ಪ್ರಶ್ನಿಸಲು, ತಾನು ಈ ಪಟದಲ್ಲಿರುವ ಶಿವಪ್ಪನಾಯಕರಂತಾಗಬೇಕು, ಗ್ರಂಥಗಳನ್ನು ಓದಿ ಹೆಚ್ಚು ವಿದ್ಯೆ ಕಲಿಯಬೇಕು ಹಾಗೂ ಕತ್ತಿಯನ್ನು ಹಿಡಿದು ಶತ್ರುಗಳನ್ನು ನಿಗ್ರಹಿಸಬೇಕೆಂದು ತಿಳಿಸಿದ ಬಾಲಕ ರಾಣಿಯ ಮೆಚ್ಚುಗೆಗೆ ಪಾತ್ರನಾಗಿ, ಅವಳ ದತ್ತುಪುತ್ರನಾದನೆಂಬ ದಂತಕಥೆಯನ್ನು ಜನಪದರು ರಂಜಕವಾಗಿ ಬಣ್ಣಿಸಿದ್ದಾರೆ[೩೩]. ಸಿಂಹಾಸನದ ಮುಂದಿನ ವಾರಸುದಾರನನ್ನೂ ತಕ್ಕ ರೀತಿಯಲ್ಲಿ ಬೆಳೆಸಿ ಕೆಳದಿರಾಜ್ಯಾಭ್ಯುದಯಕ್ಕೆ ಉತ್ತಮ ಕಾಣಿಕೆಯನ್ನು ನೀಡಿರುವ ಚೆನ್ನಮ್ಮಳ ಆಯ್ಕೆಯ ಮಾನದಂಡವನ್ನು ಕೊಂಡಾಡುವಲ್ಲಿ ಜನಪದರು ಈ ಕತೆಯನ್ನು ಪ್ರಸಿದ್ಧ ಪಡಿಸಿದ್ದಾರೆ.

## ನಿಜಗಲ್ಲಿನ ರಾಣಿ ಗಿರಿಜವ್ವೆ

ಮೈಸೂರಿನ ರಾಜರಿಗೆ ಅಧೀನನಾಗಿ ಪಾಳೆಪಟ್ಟನ್ನು ನಡೆಸುತ್ತಿದ್ದ ನಿಜಗಲ್ಲಿನ ಪಾಳೆಯಗಾರ ರಾಮರಸ ನಾಯಕನಿಗೆ ಲಕುಮವ್ವೆ ಹಾಗೂ ಗಿರಿಜವ್ವೆ ಇಬ್ಬರು ಮಡದಿಯರು. ಲಕುಮವ್ವೆಗೆ ಮಕ್ಕಳಿರಲಿಲ್ಲ. ಹಾಗಾಗಿ ಎರಡನೆಯ ಮಡದಿ ಗಿರಿಜವ್ವೆಗಿದ್ದ ಒಬ್ಬ ಮಗನೇ ಉತ್ತರಾಧಿಕಾರಿಯಾಗಲಿದ್ದ. ಈ ನಡುವೆ ಮರಾಠೆಯ ಸೈನಿಕರು ಮೂರುಬಾರಿ ನಿಜಗಲ್ಲಿಗೆ ಮುತ್ತಿಗೆಹಾಕಿ ರಾಮರಸನಾಯಕನನ್ನು ಸೋಲಿಸಲಾರದೆ ಹಿಂದಿರುಗಿರುತ್ತಾರೆ. ಆದರೆ ನಾಲ್ಕನೆಯ ಬಾರಿ ಸದಾಶಿವರಾಯನ ಮುಂದಾಳತ್ವದಲ್ಲಿ ನಿಜಗಲ್ಲನ್ನು ಮುತ್ತಿದ ಮರಾಠೆಯವರೊಂದಿಗೆ ರಾಮರಸನಾಯಕನ ಎರಡನೆಯ ಮಡದಿ ಗಿರಿಜವ್ವೆಯ ತಮ್ಮ ಕಸ್ತೂರಿನಾಯಕ ಶಾಮೀಲಾಗುತ್ತಾನೆ. ಮುಂದೆ ತಾನು ಪಾಳೆಯ ಪಟ್ಟಿನ ನಾಯಕನಾಗಬೇಕೆಂಬ ದುರಾಸೆಯಿಂದ ಮರಾಠರೊಂದಿಗೆ ಒಪ್ಪಂದ ಮಾಡಿಕೊಂಡ ಕಸ್ತೂರಿನಾಯಕ, ತನ್ನ ಭಾವ ರಾಮರಸನಾಯಕನ ಸಾವಿಗೆ ಕಾರಣನಾಗುತ್ತಾನೆ. ನಿಜಗಲ್ಲು ಮರಾಠೆಯವರ ಪಾಲಾಗುತ್ತದೆ.

ನಿಜಗಲ್ಲಿನ ಉತ್ತರಾಧಿಕಾರಿಯಾಗಲು ಹವಣಿಸಿದ ತಮ್ಮನ ಕುತಂತ್ರ ಅರಿತ ಗಿರಿಜವ್ವೆ ತನ್ನ ಮಗನಿಗೆ ನಾಯಕ ಪಟ್ಟವನ್ನು ಉಳಿಸಲು ಹಾಗೂ ತನ್ನ ಪತಿಯ ಮರಣಕ್ಕೆ ಪ್ರತಿಕಾರ ತೆಗೆದುಕೊಳ್ಳಲು ಪಣತೊಡುತ್ತಾಳೆ. ಗಿರಿಜವ್ವೆ, ಮುಂದಿನ ನಿಜಗಲ್ಲಿನ ನಾಯಕನಾಗಲು ಸಜ್ಜಾಗಿರುವ ತನ್ನತಮ್ಮ ಕಸ್ತೂರಿ ನಾಯಕನೊಂದಿಗೆ ಮೆರವಣಿಗೆಯಲ್ಲಿ ಭಾಗವಹಿಸಿ, ಕೋಟೆಯಮೇಲೆ ಗೊತ್ತು ಮಾಡಿದ ಸ್ಥಳಕ್ಕೆ ಬಂದು ತನ್ನ ತಮ್ಮನಿಗೆ ಆರತಿ ಮಾಡುವ ನೆವದಿಂದ ಅವನನ್ನು ಬಲವಾಗಿ ಹಿಡಿದುಕೊಂಡು ಕೋಟೆಯ ಕಂದಕಕ್ಕೆ ಹಾರಿ ತನ್ನೊಂದಿಗೆ ಕಸ್ತೂರಿನಾಯಕನನ್ನೂ ಬಲಿತೆಗೆದುಕೊಳ್ಳುತ್ತಾಳೆ. ಈ ಪ್ರಕಾರವಾಗಿ ಗಿರಿಜವ್ವೆ ತನ್ನ ಮಗನಿಗೆ ನಾಯಕ ಪಟ್ಟವನ್ನು ಉಳಿಸಿ, ತನ್ನ ಪತಿಯ ಮರಣಕ್ಕೆ ಪ್ರತಿಕಾರ ತೆಗೆದುಕೊಳ್ಳುತ್ತಾಳೆ. ಜನಪದದ ಕಥೆಯೊಂದನ್ನು ಆಧರಿಸಿ ಮಾಸ್ತಿಯವರು ರಚಿಸಿರುವ ಈ ವಿಚಾರವು ಐತಿಹಾಸಿಕವಲ್ಲ ಎಂದು ಇತಿಹಾಸಕಾರರು ಅಭಿಪ್ರಾಯ ಪಡುತ್ತಾರೆ[೩೪].

## ಕಿತ್ತೂರು ಚೆನ್ನಮ್ಮ

ಕಿತ್ತೂರು ರಾಣಿ ಚೆನ್ನಮ್ಮಳ ಕುರಿತಾಗಿ ಶಿಷ್ಟಕಾವ್ಯಗಳು ರಚಿತವಾಗಿರುವುದಕ್ಕಿಂತ ಅಧಿಕವಾಗಿ ಜನಪದ ಕಾವ್ಯಗಳು ರಚಿತವಾಗಿವೆ. ಚೆನ್ನಮ್ಮನ ಕುರಿತಾದ ಗೀತೆಗಳು ಅವಳ ಜೀವಿತಾವಧಿಯ ಕಾಲದಿಂದ ಇಂದಿನವರೆಗೂ ವಿಭಿನ್ನ ಪ್ರಕಾರಗಳಲ್ಲಿ ದೊರಕುತ್ತಲೇ ಇವೆ. ಕುಮಾರರಾಮ, ಸಂಗೊಳ್ಳಿರಾಯಣ್ಣರಂತೆ ಚೆನ್ನಮ್ಮಳ ಯಶೋಗಾಥೆಯೂ ಕೂಡ ಜನಮನ್ನಣೆಯನ್ನು ಯಾವ ಮಟ್ಟದಲ್ಲಿ ಗಳಿಸಿತ್ತೆನ್ನುವುದಕ್ಕೆ ಇವಳ ಕುರಿತಾಗಿ ಸಿಗುವ ಅಸಂಖ್ಯಾತ ಗೀತೆಗಳೇ ಸಾಕ್ಷಿಯಾಗಿವೆ. ಇಲ್ಲಿ ವಿಭಿನ್ನ ನಿರೂಪಣೆಯೊಂದಿಗೆ ಪ್ರಸಿದ್ಧವಾದ ಕೆಲವು ಗೀತೆಗಳನ್ನು ಮಾತ್ರ ಪರಿಗಣಿಸಲಾಗಿದೆ.

**ಕರಿಯಾತಿ ಕಾಳಗ:** ಇದು ಚೆನ್ನಮ್ಮಳ ಕುರಿತಾಗಿ ರಚಿತವಾಗಿರುವ ಕೋಲು ಪದ. ಸಾಧಾರಣವಾಗಿ ಚೆನ್ನಮ್ಮಳ ಕುರಿತಾಗಿ ದೊರಕುವ ಗೀತೆಗಳು ಚೆನ್ನಮ್ಮ-ಬ್ರಿಟಿಶ್‌ರ ನಡುವೆ ನಡೆದ ಕಾಳಗವನ್ನು ವಿವರಿಸುತ್ತವೆ, ಆದರೆ ಈ ಗೀತೆಯು ಬೆಳವಡಿ ಸಂಸ್ಥಾನದೊಂದಿಗೆ ಚೆನ್ನಮ್ಮಳು ಕಾದಾಡಿದ ವಿಚಾರವನ್ನು ತಿಳಿಸುತ್ತದೆ.

ಕಿತ್ತೂರಿನ ನೆರೆಯ ಸಂಸ್ಥಾನವಾದ ಬೆಳವಡಿಯ ನಾಯಕರನ್ನು ಚೆನ್ನಮ್ಮಳ ಪತಿ ಮಲ್ಲಸರ್ಜನು ಮೋಸದಿಂದ ಕೊಂದು, ವಾರಸುದಾರರೇ ಇಲ್ಲದಂತೆ ಮಾಡಿರುತ್ತಾನೆ. ಮುಂದೆ, ಕಿತ್ತೂರಿನ ರಾಜಕೀಯ ಪರಿಸ್ಥಿತಿ ಸರಿಯಿಲ್ಲದ ಸಂದರ್ಭದಲ್ಲಿ ಬೆಳವಡಿ ಸಂಸ್ಥಾನದ ಮನೆತನಕ್ಕೆ ಸಂಬಂಧಪಟ್ಟ ಬೊಮ್ಮಪ್ಪ ದೇಸಾಯಿ ಎಂಬುವನು ಸೈನ್ಯ ಸಮೇತ ಕಿತ್ತೂರಿನ ಮೇಲೆ ದಂಡೆತ್ತಿ ಬರುತ್ತಾನೆ. ಈ ವೇಳೆಗೆ ರಾಜ್ಯಾಡಳಿತವನ್ನು ನೋಡಿಕೊಳ್ಳುತ್ತಿದ್ದ ಚೆನ್ನಮ್ಮ, ಎದುರಾಳಿಯ ದಂಗೆಯನ್ನು ಸದೆಬಡಿಯಲು ಕಿತ್ತೂರು ರಾಜ್ಯದ ಸೈನ್ಯಾಧಿಕಾರಿ ರಾಮಯ್ಯನ ಮುಖಂಡತ್ವದಲ್ಲಿ ಸೈನ್ಯವನ್ನು ಕಳಿಸುತ್ತಾಳೆ. ಆದರೆ ರಾಮಯ್ಯ ವೈರಿಗಳಿಗೆ ಸೆರೆಯಾಳಾಗುತ್ತಾನೆ. ಕಡೆಗೆ ಸ್ವತಃ ಚೆನ್ನಮ್ಮನೇ ಕಾಳಗಕ್ಕೆ ಹೊರಡುತ್ತಾಳೆ.

**ಸೆರೆಯ ಹಿಡಿದವರನ್ನು ತರಿದಾಳೊ ರುಂಡವ**
**ಭರದಿಂದ ಬಿಡಿಸಿ ತರತಾಳೊ**
**ಕರಿಸ್ಯಾಳೋ ಮಂದಿನ್ನ ಕೊರಿಸ್ಯಾಳೋ ಕಕಾಲು**
**ತ್ವರದಿಂದ ಕಿತ್ತೂರಕ ಸಾಗ್ಯಾಳೋ ॥**

ಕರಿಯಾತಿ ಗ್ರಾಮದ ಸಮೀಪ ಯುದ್ಧಮಾಡಿ ಎದುರಾಳಿಗಳನ್ನು ಹಿಮ್ಮೆಟ್ಟಿಸಿ, ರಾಮಸ್ವಾಮಿಯನ್ನೂ ಬಿಡಿಸಿಕೊಂಡು ಬರುತ್ತಾಳೆ. ಕರಿಯಾತಿ ಗ್ರಾಮದ ಬಳಿಯ ಯುದ್ಧವಾದ್ದರಿಂದ ಇದನ್ನು ಕರಿಯಾತಿ ಕಾಳಗವೆಂದು ಕರೆಯಲಾಗುತ್ತದೆ.

**ಕಿತ್ತೂರು ಮಿಂಚಿನ ಕಾಳಗ:** ಇದೊಂದು ಲಾವಣಿ. ಇದರಲ್ಲಿ ಬಣ್ಣಿಸಿರುವಂತೆ, ಚೆನ್ನಮ್ಮ ದತ್ತಕ ಮೊಮ್ಮಗನಿಗೆ ಪಟ್ಟ ಕಟ್ಟಿದ ಸುದ್ದಿ ತಿಳಿದ ಥ್ಯಾಕರೆ ಕಿತ್ತೂರಿನ ಮೇಲೆ ದಾಳಿ ಮಾಡುತ್ತಾನೆ. ಆದರೆ ವೀರಾವೇಶದಿಂದ ಹೋರಾಡಿದ ಚೆನ್ನಮ್ಮನ ಕಡೆಯವರು ವೈರಿಯ ಮೇಲೆರಗಿ ಥ್ಯಾಕರೆಯ ರುಂಡ ಚೆಂಡಾಡುತ್ತಾರೆ. ಇದರಿಂದ ರೊಚ್ಚಿಗೆದ್ದ ಮಂಡೇಲ ಸಾಹೇಬ ಕಂಪನಿಗೆ ಪತ್ರ ಬರೆದು ಹೆಚ್ಚಿನ ಸೈನ್ಯ ತರಿಸುತ್ತಾನೆ. ಚೆನ್ನಮ್ಮ ತನ್ನ ಸೈನಿಕರಿಗೆ ಉಡುಗೊರೆ ನೀಡಿ ಹುರಿದುಂಬಿಸುತ್ತಾಳೆ. ಆದರೆ ದೇಶದ್ರೋಹಿಗಳ ಸಂಚಿನಿಂದ ಚೆನ್ನಮ್ಮನ ಆಸೆ ಫಲಿಸುವುದಿಲ್ಲ ಅಕ್ಕ ಚೆನ್ನವ್ವ ಅತ್ತಂಥ ಕಣ್ಣೀರು ಚಿಕ್ಕ ಹೊಳೆಯಾಗಿ ಹರಿದವು ಎಂದು ಪದ್ಯ ಮುಗಿಯುತ್ತದೆ.

**ಚೆನ್ನಮ್ಮ ರಾಣಿ:** ಇದು ಚೆನ್ನಮ್ಮ ರಾಣಿಯು ಥ್ಯಾಕರೆಯೊಂದಿಗೆ ನಡೆಸಿದ ಯುದ್ಧದ ವಿಚಾರವನ್ನು ಬಣ್ಣಿಸಿ ಹಾಡುವ ಪದ.

**ಸಟ್ಟನ್ನ ಸರ್ವತ್ತು ನಟ್ಟಿರುಳು ರಾತರಿ**
**ಕಾಗೆ ಗುಬ್ಬೀಯ ಸುಳುವಿಲ್ಲ**
**ಚೆನ್ನವ್ವ ಮಂಚದ ಮ್ಯಾಲ ಸುಖನಿದ್ದಿ ಮಾಡೂತ**
**ಎಚ್ಚರೆಂಬೂದು ಮೊದಲಿಲ್ಲ**

ಇಂಥ ಗಾಢ ನಿದ್ದೆಯಲ್ಲಿರುವಾಗ ಅಗಲಿದ ಪತಿ ಮಲ್ಲಸರ್ಜ ಕನಸಿನಲ್ಲಿ ಬಂದು ಕಿತ್ತೂರನ್ನು ಉಳಿಸಿಕೊಳ್ಳಲು ಹೇಳಿದ ಮಾತಿಗೆ ಚೆನ್ನಮ್ಮಳು ಸಂಗೊಳ್ಳಿ ರಾಯಣ್ಣ, ಅಂಕಲಗಿ ಅಡಿವೆಪ್ಪ, ಮಡಿವಾಳ ಮಹದೇವಪ್ಪ, ಕಲ್ಮಠದ ಮಡಿವಾಳಸ್ವಾಮಿ, ತಳವಾರ ಫಕ್ಕೀರ, ಗೌಡರ ಬಸವಪ್ಪ, ಅಂಬಡಗಟ್ಟಿ ಗುರುಸಿದ್ದಪ್ಪ ಇವರಿಗೆಲ್ಲ ಯುದ್ಧಕ್ಕೆ ನೆರವಾಗಬೇಕೆಂದು ಪತ್ರ ಬರೆಯಿಸುತ್ತಾಳೆ.

ಯುದ್ಧದ ಸಿದ್ಧತೆ ಅಷ್ಟೇ ಅಲ್ಲದೆ, ಯುದ್ಧದ ವಿವರಣೆಯನ್ನೂ ಈ ಗೀತೆ ನೀಡುತ್ತದೆ. ಚೆನ್ನಮ್ಮಳು ಗಂಡುವೇಷ ಧರಿಸಿ, ಖಡ್ಗಹಿಡಿದು ಯುದ್ಧಕ್ಕೆ ಅಡಿ ಇಟ್ಟಳು. ಇಲ್ಲಿ ಇವಳ ಸಹಾಯಕ್ಕೆ ನಿಂತ ಹೆಗ್ಗೇರಿ, ವಕ್ಕುಂದ, ಹೂಲಿ, ಹೊಂಗಲ, ಕೋರಿಕೊಪ್ಪ, ನಾವಲಗಟ್ಟಿ, ಇಲಿಹಾಳ, ಮರಕಟ್ಟಿ, ಹುಣಸೀಕಟ್ಟಿ, ಮಣ್ಣೂರು, ಗರಗ ಮೊದಲಾದ ನಾಯಕರ ಹೆಸರುಗಳನ್ನು ಅವರ ಸಹಾಯಗಳ ವಿವರದೊಂದಿಗೆ ನೀಡಲಾಗಿದೆ. ಈ ಎಲ್ಲ ದಂಡು ಧಾರವಾಡದ ಮಾಳಕ್ಕೆ ಹೊರಟು ಥ್ಯಾಕರೆ ಸಾಹೇಬನ ದಂಡನ್ನು ಸುತ್ತುಕಟ್ಟಿ ಹೋರಾಡುತ್ತದೆ. ವೀರಾವೇಶದಿಂದ ಕಾದಾಡಿದ ಚೆನ್ನವ್ವ ಥ್ಯಾಕರೆ ಸಾಹೇಬನ ರುಂಡ ಕತ್ತರಿಸಿದ ಚೆನ್ನಮ್ಮ ಹಿಂದಕ್ಕೆ ಹೊರಳಿ ನೋಡಲಿಲ್ಲ, ಎಂಬ ವಿವರಣೆಯೊಂದಿಗೆ ಅವಳ ಕುದಿವ ಕೋಪವನ್ನು ಜನಪದ ಕವಿ ಬಣ್ಣಿಸಿದ್ದಾನೆ. ಇದರೊಂದಿಗೆ, ಸಾಹೇಬನ ಎಳೆಯ ಮಕ್ಕಳ ಮೇಲೆ ಕರುಣೆ ತೋರಿ ಜಕಾತಿ ಬಸವಲಿಂಗಪ್ಪನನ್ನು ಕರೆಯಿಸಿ 'ಈ ಮಕ್ಕಳನ್ನು ನಮ್ಮ ಮಕ್ಕಳಂತೆ ಸಲಹುದು' ಎಂದು ಅಪ್ಪಣೆ ನೀಡಿದಳೆಂಬ ವಿಚಾರ ಚೆನ್ನಮ್ಮನ ಹೆಂಗರುಳನ್ನೂ ಪರಿಚಯಿಸುತ್ತದೆ. ರೋಷ–ಮಮಕಾರ ಎರಡೂ ಗುಣಗಳ ಚೆನ್ನಮ್ಮಳ ಚಿತ್ರಣ ಇಲ್ಲಿ ಮೂಡಿ ಬಂದಿದೆ.

**ಚೆನ್ನಮ್ಮ ರಾಣಿಯ ಕೊನೆಯ ಕಾಳಗ:** ಇದು ಕಾಳಗದ ಬಣ್ಣನೆಯನ್ನು ಮಾಡುವ ಮತ್ತೊಂದು ಗೀತೆ. ಕೈಯಲ್ಲಿ ಖಡ್ಗ ಝಳಪಿಸುತ್ತಾ, ಚಂಡಿ, ಚೌರಿಯಂತೆ ಭೀಕರಳಾಗಿ ತೋರುವ ಚೆನ್ನಮ್ಮಳು ಥ್ಯಾಕರೆಯ ರುಂಡವನ್ನು ಯುದ್ಧರಂಗದಲ್ಲಿ ಚೆಂಡಾಡಿ ಅವನ ಅಧಿಕಾರಿಗಳಾದ ಸ್ಟೀವನ್‌ಸನ್, ಇಲಿಯಟ್‌ರನ್ನು ಸೆರೆಹಿಡಿಯುತ್ತಾಳೆ.

ಇದರಿಂದ ಕುಪಿತನಾದ ಅಧಿಕಾರಿ ಚಾಪ್ಲಿನ್, ಎಲ್ಲ ಕಡೆಯಿಂದ ತಮ್ಮ ಸೈನ್ಯವನ್ನು ಕಲೆಹಾಕಿ ದೊಡ್ಡ ದಂಡಿನೊಡನೆ ಲೆಫ್ಟಿನಂಟ್ಜನರಲ್ ಡೀಕನ್ ಎಂಬ ಅಧಿಕಾರಿಯ ಮುಂದಾಳತ್ವದಲ್ಲಿ ಕಿತ್ತೂರಿಗೆ ಮುತ್ತಿಗೆ ಹಾಕಲು ಆದೇಶಿಸುತ್ತಾನೆ. ಹೋರಾಟಕ್ಕೆ ಸಜ್ಜಾಗಲು ಚೆನ್ನಮ್ಮ ಮೊಗಲಾಯಿಗೆ ಪತ್ರಬರೆದು ನೆರವು ಕೋರುತ್ತಾಳೆ. ಇವಳ ಕೋರಿಕೆ ಮನ್ನಿಸಿದ ಚಂದೂಲಾಲನು ಹತ್ತುಸಾವಿರ ಪೌಜನ್ನು ತನ್ನ ತಮ್ಮನ ನೇತೃತ್ವದಲ್ಲಿ ಕಳಿಸುತ್ತಾನೆ. ಆಂಗ್ಲರು ಬಳ್ಳಾರಿಯಿಂದ ಕುಂಬಾರ ಅರಸನ ದಂಡು, ಮೈಸೂರಿನ ದಂಡನ್ನು ತರಿಸಿ ಕರ್ನಲ್ ಆಲ್ಬರ್ಟ್‌ನ ನೇತೃತ್ವದಲ್ಲಿ ಕಿತ್ತೂರಿಗೆ ಮುತ್ತಿಗೆ ಹಾಕುತ್ತಾರೆ.

ಚೆನ್ನಮ್ಮನ ಪಡೆ ಆಂಗ್ಲರ ಸೈನ್ಯವನ್ನು ಸೋಲಿಸಿ, ಪ್ರಮುಖರನ್ನು ಸೆರೆ ಹಿಡಿಯುತ್ತಾರೆ. ಚೆನ್ನಮ್ಮಳು ಸೆರೆ ಸಿಕ್ಕವರನ್ನು ಗೌರವದಿಂದ ನಡೆಸಿಕೊಳ್ಳುತ್ತಾಳೆ. ಕುತಂತ್ರ ಹೂಡಿದ ಆಂಗ್ಲರು ಕಿತ್ತೂರಿನ ಕರಣಿಕ ನರಸಿಂಗರಾಯನಿಗೆ ಲಂಚಕೊಟ್ಟು ಕೋಟೆ ಒಳಗಿನ ರಹಸ್ಯಗಳನ್ನು ಅರಿತುಕೊಳ್ಳುತ್ತಾರೆ. ಸಂಚುಹೂಡಿ ಗರಗದ ಹಳ್ಳದಿಂದ ಹೊರಟು ಕಿತ್ತೂರು ಸಮೀಪಕ್ಕೆ ಬಂದು ಕೆಮ್ಮಣ್ಣುಗುಂಡಿಯಲ್ಲಿ ಕಾದಾಟಕ್ಕಿಳಿಯುತ್ತಾರೆ. ಇವರ ಮೋಸಕ್ಕೆ ಕಿತ್ತೂರು ಪಡೆ ಸೋಲುಣಬೇಕಾಗುತ್ತದೆ. ಚೆನ್ನಮ್ಮಳು ಪತಿ ಮಲ್ಲಸರ್ಜ, ವೀರಪ್ಪದೇಸಾಯಿ ಶಿವಲಿಂಗರುದ್ರ ಸರ್ಜರನ್ನು ನೆನೆದು ಸೊಸೆಯಂದಿರನ್ನು ಮುಂದಿಟ್ಟುಕೊಂಡು ಕಣ್ಣೀರು ಹಾಕುತ್ತಾಳೆ.

**ಕಿತ್ತೂರು ರಾಣಿ ಚೆನ್ನಮ್ಮನ ಅಂತ್ಯ:**

ಈ ಗೀತೆಯು ಚೆನ್ನಮ್ಮಳು ಬ್ರಿಟಿಶ್‌ರೊಂದಿಗೆ ನಡೆಸಿದ ಎರಡನೆಯ ಯುದ್ಧದ ಚಿತ್ರಣವನ್ನು ನೀಡುತ್ತದೆ. ಕಿತ್ತೂರು ಸಂಸ್ಥಾನ ಎರಡನೆಯ ಯುದ್ಧದಲ್ಲಿ ಬ್ರಿಟಿಶರ ಸೈನ್ಯ ಹಿಮ್ಮೆಟ್ಟತೊಡಗಿತು. ಆಗ ಚೆನ್ನಮ್ಮನ ಕಡೆಯವರ ಒಳಪಿತೂರಿಯಿಂದ ಯುದ್ಧಕ್ಕೆ ಸಿದ್ಧಪಡಿಸಿಟ್ಟಿದ್ದ ಮದ್ದಿಗೆ ಎಣ್ಣೆ ಬೆರೆಸಿ ಮೋಸ ಮಾಡಲಾಯಿತು. ಸುಳಿವು ನೀಡದೆ ಬ್ರಿಟಿಶ್ ಸೈನ್ಯ ಕೆಮ್ಮಣ್ಣಿನ ಮರಡಿಗೆ ಮುಖಾಂತರ ಬಂದು ಕಿತ್ತೂರಿನ ಕೋಟೆಯನ್ನು ಭಗ್ನಗೊಳಿಸಿ, ಊರನ್ನು ಪ್ರವೇಶಿಸಿ ಲೂಟಿಮಾಡತೊಡಗಿತು. ಕಿತ್ತೂರನ್ನು ಕೈವಶ ಪಡಿಸಿಕೊಂಡ ಆಂಗ್ಲರು ಅರಮನೆಯತ್ತ ನಡೆದು ಬಂದರು. ಅರಮನೆಯಲ್ಲಿ ನಿಲ್ಲದ ಚೆನ್ನಮ್ಮ ಸೊಸೆಯಂದಿರಾದ ವೀರಮ್ಮ, ಜಾನಕಿಬಾಯಿಯರೊಂದಿಗೆ ಹೊಂಗಲಕ್ಕೆ ಹೋಗಿ ಸೆರೆಯಾಗುತ್ತಾಳೆ.

**ವೀರಮ್ಮ:**

ಕಿತ್ತೂರು ಚೆನ್ನಮ್ಮನ ಸೊಸೆ ವೀರಮ್ಮನ ಕುರಿತಾಗಿ ಕೂಡ ಜನಪದ ಗೀತೆಗಳು ರಚಿತವಾಗಿವೆ. ವೀರಮ್ಮ ಚೆನ್ನಮ್ಮನ ಹಾಗೆ ರಾಜ್ಯಭಾರ ಮಾಡಿದವಳಲ್ಲವಾದರೂ, ಚೆನ್ನಮ್ಮನಿಗೆ ಬೆಂಬಲವಾಗಿ ಇದ್ದವಳು. ಚೆನ್ನಮ್ಮನ ಮರಣಾನಂತರ ಬ್ರಿಟೀಶರ ವಿರುದ್ಧ ಹೋರಾಡಲು ಸಂಗೊಳ್ಳಿರಾಯಣ್ಣ ಮೊದಲಾದವರಿಗೆ ವೀರಮ್ಮ ಪ್ರೇರಣೆಯಾಗಿದ್ದಳು. ಕಿತ್ತೂರಿನ ಜನತೆಯಿಂದ ದೂರ ಇಡಲೆಂದು ಇವಳನ್ನು ಹೊಂಗಲದಿಂದ ಧಾರವಾಡಕ್ಕೆ ಸಾಗಿಸಲಾಯಿತು. ವೀರಮ್ಮನನ್ನು ಉಳಿಸಿಕೊಳ್ಳಲು ಸಂಗೊಳ್ಳಿರಾಯಣ್ಣ ಪ್ರಯತ್ನ ಪಡುತ್ತಾನಾದರೂ ಇವಳು ಜೀವಂತವಾಗಿ ಇರುವುದೇ ಆಪತ್ತು ಎಂದು ಬಗೆದ ಶತ್ರುಗಳು ವಿಷಪ್ರಾಶನ ಮಾಡಿಸಿ ಜೀವಕ್ಕೇ ಕುತ್ತು ತರುತ್ತಾರೆ. ವೀರಮ್ಮನ ಕುರಿತಾದ ಈ ಘಟನೆಗಳು 'ಕಿತ್ತೂರು ಚೆನ್ನವ್ವನ ಸೊಸಿ', 'ಈರವ್ವನ ದುರಂತ ಮರಣ' ಮೊದಲಾದ ಜನಪದ ಗೀತೆಗಳಲ್ಲಿ ಚಿತ್ರಿತವಾಗಿವೆ.

**ಕೊಡಗಿನ ಲಿಂಗರಾಜಮ್ಮ (ವೀರರಾಜಮ್ಮ)**

ಪಿರಿಯಾಪಟ್ಟಣದ ಕಾಳಗದ ಜೊತೆಯಲ್ಲಿ ಹಾಡುವ ಕಂಸಾಳೆ ಪದ. ಇದು ವಿಭಿನ್ನ ರೂಪಗಳಲ್ಲಿ ದೊರಕುತ್ತದೆ. ದೈವದ ಥಳಕು ಹಾಕಿ ಹೇಳುವ ಕಥೆಯಲ್ಲಿ ಸಂಪೂರ್ಣವಾಗಿ ಪುರಾಣದ ಲೇಪವಿರುವುದನ್ನು ಕಾಣುತ್ತೇವೆ.

ಅಸ್ಪಷ್ಟ ಐತಿಹಾಸಿಕ ಎಂಬ ವಿಭಾಗಕ್ಕೆ ಸೇರಿಸಬಹುದಾದ ಪದದಲ್ಲಿ ತಿಳಿಸಿರುವಂತೆ, ಕೊಡಗಿನ ದೊರೆಯು ತವರಿಗೆಂದು ಬಂದ ನೆರೆರಾಜ್ಯದ ಅರಸಿಯಾದ ತನ್ನ ತಂಗಿಯನ್ನು ಹೀನಾಯವಾಗಿ ಕಂಡು, ಕೂಡಿ ಹಾಕುತ್ತಾನೆ. ತನಗೆ ಒದಗಿದ ಯಾವುದೋ ಸಂಕಷ್ಟ ನಿವಾರಣೆಗಾಗಿ ಜೋಯಿಸರು ತಿಳಿಸುವಂತೆ, ಇವಳ ಮಗುವನ್ನು (ಭಿನ್ನ ಪಾಠದಲ್ಲಿ ಸಿಗುವಂತೆ ಇವಳ ಗಂಡನನ್ನು) ಬಲಿ ಕೊಡಲು ನಿರ್ಧರಿಸುತ್ತಾನೆ. ಅಣ್ಣನ ಸಂಚನ್ನು ಅರಿತ ತಂಗಿ, ತವರಿನಿಂದ ತಪ್ಪಿಸಿಕೊಂಡು ಬಂದು ಪತಿಗೆ ತಿಳಿಸುತ್ತಾಳೆ. ಆನಂತರ ಈ ಇಬ್ಬರ ನಡುವೆ ಯುದ್ಧ ನಡೆಯುತ್ತದೆ. ಯುದ್ಧದಲ್ಲಿ ವೀರಗಚ್ಚೆ ಹಾಕಿ ನಿಂತ ಲಿಂಗಮ್ಮ ಕೂಡ ಸೆಣಸಾಡಿ ಗೆಲುವನ್ನು ಸಾಧಿಸುತ್ತಾಳೆ. ಪೌರಾಣಿಕ ಲೇಪನವಿರುವ ಗೀತೆಯ ಅಂತ್ಯದಲ್ಲಿ ಮರಣಿಸಿದ ತನ್ನ ಮಗುವಿಗಾಗಿ, ದೈವಕ್ಕೆ ಮೊರೆಹೋಗಿ ಬದುಕಿಸಿಕೊಳ್ಳುತ್ತಾಳೆ.

ಕೊಡಗನ್ನು ಆಳಿದ ಹಾಲೇರಿ ವಂಶದ ವೀರಶೈವ ಅರಸರಲ್ಲಿ ಲಿಂಗರಾಜನ ನಂತರ ಇವನ ಮಗ ವೀರರಾಜೇಂದ್ರ (೧೮೨೦-೩೪) ಆಳ್ವಿಕೆಗೆ ಬರುತ್ತಾನೆ. ಇವನ ಸಹೋದರಿ ದೇವಮ್ಮಾಜಿ. ಇವಳನ್ನೇ ಲಿಂಗಮ್ಮ ಎಂದು ಜನಪದ ಗೀತೆಯಲ್ಲಿ ಕರೆದಿರಬಹುದು. ಇವಳ ಪತಿ ಚೆನ್ನಬಸಪ್ಪ. ಅನ್ಯ ಜಾತಿಯವನೆಂದು ಇವನೊಡನೆ ತಂಗಿಯ ವಿವಾಹ ನಡೆಸಲು ವೀರರಾಜೇಂದ್ರ ಒಪ್ಪದೇ ಇದ್ದಾಗ, ಇವನು ಲಿಂಗಾಯಿತ ಧರ್ಮಕ್ಕೆ ಮತಾಂತರವಾಗುತ್ತಾನೆ. ಮದುವೆ ಆದಮೇಲೆ ಕೂಡ ವೀರರಾಜೇಂದ್ರನಿಗೆ ಇವರ ಮೇಲೆ ಅಸಮಾಧಾನ ಇದ್ದೇ ಇರುತ್ತದೆ. ಇದನ್ನರಿತ ಇವರೀರ್ವರು ವೀರರಾಜೇಂದ್ರನಿಗೆ ತಿಳಿಯದಂತೆ ತಪ್ಪಿಸಿಕೊಂಡು ಬಂದು ಬ್ರಿಟಿಷರ ರಕ್ಷಣೆಯಲ್ಲಿ ಇರುತ್ತಾರೆ. ಕೊಡಗಿನಲ್ಲಿಯೇ ಬಿಟ್ಟುಬಂದ ಇವರ ಮಗುವನ್ನು ವೀರರಾಜೇಂದ್ರನ ಹಿರಿಯ ರಾಣಿ ಸಾಕಿಕೊಳ್ಳುತ್ತಾಳೆ.

ಈ ಪ್ರಕರಣಕ್ಕೆ ಭಿನ್ನ ರೂಪವನ್ನು ನೀಡಿ ನಾನಾ ರೂಪದಲ್ಲಿ ಕಂಸಾಳೆ ಪದವನ್ನು ಹೆಣೆಯಲಾಗಿದೆ[೩೪೯]. ಈ ಕಂಸಾಳೆಪದಗಳ'ಲ್ಲಿ ಲಿಂಗಮ್ಮ ತನ್ನ ಮಗುವನ್ನು ಬೆನ್ನಿಗೆ ಕಟ್ಟಿಕೊಂಡು ಅಣ್ಣನ ಸೈನ್ಯದ ವಿರುದ್ಧ ಯುದ್ಧ ಮಾಡುವ ವಿವರಣೆ ಇದೆ. ವೀರಗಚ್ಚೆಯನ್ನು ಹಾಕಿ, ಮಗುವಿಗಾಗಿ ಹೋರಾಡುವ ಪ್ರಸಂಗವೇ ಈ ಇಡೀ ಕಂಸಾಳೆಯಲ್ಲಿ ಮೇಳೈಸುವ ಘಟನೆಯಾಗಿ ಮೂಡಿ ಬಂದು, ತೊಟ್ಟಿಲನ್ನು ತೂಗುವ ಕೈ, ಕತ್ತಿಯನ್ನೂ ಝಳಪಿಸುತ್ತದೆ ಎಂಬ ಹೇಳಿಕೆಯೊಂದಿಗೆ ಇವಳ ಸಾಹಸಕ್ಕೆ ಒತ್ತುನೀಡಿರುವುದರಲ್ಲಿ ಇದೊಂದು ಮಹಿಳಾ ಪ್ರಧಾನ ಜನಪದ ಕಾವ್ಯವಾಗಿ ಮಹತ್ವ ಪಡೆದಿದೆ.

ನಿಂಗವ್ವ, ಲಿಂಗಮ್ಮ, ಲಿಂಗವ್ವನೆಂಬ ವಿಭಿನ್ನಹೆಸರುಗಳಿಂದ ಹಲವಾರು ಗೀತೆಗಳಲ್ಲಿ ಕಂಡುಬರುವ ಈ ಪ್ರಕರಣವು, ಕೊಡಗಿನ ಅರಸುಮನೆತನದ ಅಣ್ಣ–ತಂಗಿಯರ ನಡುವಿನ ಜಗಳ ಹಾಗೂ ತಂಗಿಯ ಮಗುವನ್ನು ತನ್ನ ಬಳಿಯಲ್ಲಿಯೇ ಇರಿಸಿಕೊಂಡ ದೊರೆಯ ವಿಚಾರ, ಇದಕ್ಕಾಗಿ ಬ್ರಿಟೀಶ್‌ರ ಮೊರೆಹೋದ ಲಿಂಗಮ್ಮನ ಪರಿಸ್ಥಿತಿ ಈ ಜನಪದ ಕಾವ್ಯಗಳಲ್ಲಿ ವಿಭಿನ್ನ ರೂಪ ತಳೆದಿರುವುದನ್ನು ಕಾಣಬಹುದು.

**ದೈವತ್ವಕ್ಕೇರಿದ ಅರಸಿಯರ ಮೇಲಿನ ಗೌರವ**

ನಮ್ಮ ನಾಡಿನಾದ್ಯಂತ ಕಂಡುಬರುವ ಮಾಸ್ತಿಕಲ್ಲುಗಳಿಗೆ ಹಲವೆಡೆ ಬಹಳ ಮಹತ್ವ ನೀಡಲಾಗಿದೆ. ಪತಿಯೊಡನೆ ಚಿತೆ ಏರಿ ಮಹಾಸತಿಯಾದವಳಿಗೆ ದೈವತ್ವ ನೀಡಿ ಮಾಸ್ತಿಯಮ್ಮ, ಮಾಸ್ತಮ್ಮನ ಗುಡಿ ಕಟ್ಟಲಾಗಿದೆ. ಇದೇ ರೀತಿ ವೀರಗಲ್ಲುಗಳನ್ನೂ ಪೂಜಿಸುವ ಪದ್ಧತಿ ಇದ್ದು, ಊರಿಗಾಗಿ ಪ್ರಾಣ ನೀಡಿದ ಒಡತಿಯನ್ನು ದೈವತ್ವಕ್ಕೇರಿಸಿ ಪೂಜಿಸುವಲ್ಲಿನ ವೈಶಿಷ್ಟ್ಯವನ್ನು ತುಮಕೂರು ಜಿಲ್ಲೆಯ ತುರುವೇಕೆರೆ ತಾಲ್ಲೂಕಿನ ದಂಡಿನ ಶಿವರದಲ್ಲಿ ಪೂಜೆಗೊಳ್ಳುವ ಹೊನ್ನಮ್ಮನ ಜಾತ್ರೆಯಲ್ಲಿ ಕಾಣುತ್ತೇವೆ.

ಇಲ್ಲಿ ಪೂಜೆಗೊಳ್ಳುವ ಹೊನ್ನಮ್ಮ ಶಿಷ್ಟರೂಪವನ್ನು ತಾಳಿ ಹೊನ್ನಾದೇವಿ ಆಗಿದ್ದಾಳೆ. ಇವಳ ಮೂಲ ಹೆಸರು ಪೊನ್ನಕ್ಕ ಎಂದು ತಿಳಿದುಬರುತ್ತದೆ[೩೫].

ಕ್ರಿ.ಶ.೯೬೫ (ಶಕವರ್ಷ ೮೮೮) ಕ್ಕೆ ಸೇರಿದ ಇಲ್ಲಿನ ವೀರಗಲ್ಲು ಶಾಸನದಲ್ಲಿ **'(ಹ)ನುಮ ಗಾವುಣ್ಡ ಎರೆನಲ್ಲೂರಿನ ಸಿರಿವುದರ ಅಳಿವಿನಲ್ಲಿದ್ದಾಗ (ಸೆಟ್ಟಿ)ಯ ಮಗಳು ಪೊನ್ನಕ್ಕ......'** ಎಂಬ ವಿಷಯ ದಾಖಲಾಗಿದೆ. ಊರಿನ ಗೌರವವನ್ನು ರಕ್ಷಿಸಲು ಹೋರಾಡಿ ವೀರ ಮರಣವನ್ನು ಸಾಧಿಸಿದ ಪೊನ್ನಕ್ಕನನ್ನು ಸ್ಥಳದ ಜನ ಮರೆಯದೆ, ಅವಳಿಗೆ ದೈವತ್ವವನ್ನು ನೀಡಿ ಪ್ರತಿ ವರ್ಷ ಜಾತ್ರೆಯ ನೆಪದಲ್ಲಿ ನೆನಪು ಮಾಡಿಕೊಳ್ಳುತ್ತಾರೆ. ಯುದ್ಧ ನಡೆದ ಸ್ಥಳವಾದ್ದರಿಂದ ಸಿರಿವುರವು ದಂಡಿನ ಜೊತೆಗೆ ಸೇರಿಕೊಂಡು ಊರಿನ ಹೆಸರು ದಂಡಿನ ಸಿರಿವುರವಾಗಿ, ನಂತರ ದಂಡಿನ ಶಿವರವಾಗಿ ಉಳಿದಿದೆ. ವೀರಗಲ್ಲು ಶಾಸನ ಇರುವ ಜಾಗದಲ್ಲಿ ಮುತ್ತಿನ ಅಮ್ಮನ ದೇವಸ್ಥಾನವೂ ಇದೆ. ಆ ಮುತ್ತಿನ ಅಮ್ಮನಿಗೂ ಪೊನ್ನಕ್ಕನಿಗೂ ಇರುವ ಸಂಬಂಧ ತಿಳಿಯುವುದಿಲ್ಲ. ಆದರೆ, ಶಾಸನದಲ್ಲಿ ಉಲ್ಲೇಖಿತಳಾಗಿರುವ ಪೊನ್ನಕ್ಕ ದಂಡಿನ ಶಿವರದಲ್ಲಿ ಈಗಲೂ ಹೊನ್ನಮ್ಮನಾಗಿ ಉಳಿದಿದ್ದಾಳೆ. ಇತಿಹಾಸದ ಒಬ್ಬ ವೀರಸ್ತ್ರೀ ಜಾನಪದ ದೇವತೆಯಾಗಿ ಪ್ರಸಿದ್ಧಿ ಪಡೆದಿದ್ದಾಳೆ.

**ಅಲಮೇಲಮ್ಮ**

ವಿಜಯನಗರದ ಸಾಮಂತ ಅರಸು ಶ್ರೀರಂಗರಾಯನ ಮಡದಿ ಅಲಮೇಲಮ್ಮನ ಕುರಿತಾಗಿ ಜನಪದ ಕಥೆಯೊಂದು ಜನಜನಿತವಾಗಿದೆ. ಶ್ರೀರಂಗಪಟ್ಟಣವನ್ನಾಳುತ್ತಿದ್ದ ವಿಜಯನಗರದ ಪ್ರತಿನಿಧಿ ಶ್ರೀರಂಗರಾಯ ಅನಾರೋಗ್ಯದಿಂದ ಮರಣಿಸಿದಾಗ, ಮೈಸೂರಿನ ದೊರೆ ರಾಜ ಒಡೆಯರ್ ಶ್ರೀರಂಗಪಟ್ಟಣವನ್ನು ವಶಪಡಿಸಿಕೊಳ್ಳುತ್ತಾನೆ. ರಾಜ್ಯದ ಅಧಿಕಾರವನ್ನು ವಹಿಸಿಕೊಂಡ ರಾಜ ಒಡೆಯರ್, ಪುತ್ರವಿಹೀನಳಾದ ಅಲಮೇಲಮ್ಮನ ಒಡವೆಗಳನ್ನು ರಾಜ್ಯದ ಬೊಕ್ಕಸಕ್ಕೆ (ಖಜಾನೆಗೆ) ಒಪ್ಪಿಸಬೇಕೆಂದು ಆದೇಶ ನೀಡುತ್ತಾನೆ. ಆದರೆ ರಾಜ್ಯಕ್ಕೂ ತನ್ನ ಖಾಸಗೀ ಒಡವೆಗಳಿಗೂ ಸಂಬಂಧವಿಲ್ಲವೆಂಬ ಧೋರಣೆಯಿಂದ ಅಲಮೇಲಮ್ಮಳು ದೊರೆಯ ಮಾತಿಗೆ ಒಪ್ಪದಿದ್ದಾಗ, ರಾಜನು ಬಲವಂತದಿಂದ ಕಸಿದುಕೊಳ್ಳಲು ಯತ್ನಿಸುತ್ತಾನೆ.

ಅವನಿಗೆ ಮಣಿಯದೆ, ಅಲಮೇಲಮ್ಮ ತಲಕಾಡಿಗೆ ಪ್ರಯಾಣಿಸುತ್ತಾಳೆ. ಆದರೆ ರಾಜ ಒಡೆಯನ ಸೈನಿಕರು ಅಲ್ಲಿಗೂ ಅವಳನ್ನು ಬೆಂಬತ್ತಿ ಹೋದಾಗ, ಮಾಲಂಗಿ ಮಡುವಿನ ಬಳಿ 'ತಲಕಾಡು ಮರಳಾಗಿ ಮಾಲಂಗಿ ಮಡುವಾಗಿ ಮೈಸೂರು ದೊರೆಗೆ ಮಕ್ಕಳಿಲ್ಲದೆ ಹೋಗಲಿ' ಎಂದು ಶಪಿಸಿ, ಆತ್ಮಾರ್ಪಣೆ ಮಾಡಿಕೊಳ್ಳುತ್ತಾಳೆ.

ಅಲಮೇಲಮ್ಮನ ಶಾಪಕ್ಕೆ ಹೆದರಿದ ಮೈಸೂರ ಅರಸರು ಅಲ್ಲಿಂದ ಮುಂದೆ ಅಲಮೇಲಮ್ಮನ ಚಿನ್ನದ ವಿಗ್ರಹವನ್ನು ಸ್ಥಾಪಿಸಿ ಪೂಜಿಸುವ ಪದ್ಧತಿ ನಡೆಸಿಕೊಂಡು ಬಂದಿದ್ದಾರೆ. ಇಂದಿಗೂ ವಿಶ್ವವಿಖ್ಯಾತ ದಸರಾ ಉತ್ಸವದಲ್ಲಿ ಅಲಮೇಲಮ್ಮನ ವಿಗ್ರಹಕ್ಕೆ ವಿಜೃಂಭಣೆಯಿಂದ ಪೂಜೆ ಸಲ್ಲಿಸಲಾಗುತ್ತದೆ. ಈ ವಿಚಾರ ಜನಪದ ಗೀತೆಗಳಲ್ಲಷ್ಟೇ ಅಲ್ಲದೆ, ಮೈಸೂರು ಅರಸರ ಕುರಿತಾಗಿ ರಚಿತವಾದ ಶಿಷ್ಟ ಕಾವ್ಯಗಳಲ್ಲಿಯೂ ಬಣ್ಣಿತವಾಗಿದೆ.

ತನ್ನ ಸ್ವಾತಂತ್ರಕ್ಕೆ ಧಕ್ಕೆಯುಂಟಾದಾಗ ದೊರೆಯನ್ನು ಎದುರಿಸುವಲ್ಲಿ ಅಲಮೇಲಮ್ಮ ತೋರಿದ ದಿಟ್ಟತನ ಪ್ರಶಂಸನೀಯವಾಗಿದೆ. ಈ ಪ್ರಕರಣದಲ್ಲಿ, ಅಪುತ್ರಕಳಾದ ವಿಧವೆ ಒಡವೆಯನ್ನು ಹೊಂದಿರಬಾರದೆಂಬ ಅಂದಿನ ಸಾಮಾಜಿಕ ಕಟ್ಟಳೆಯ ವಿರುದ್ಧ ತಿರುಗಿ ಬಿದ್ದ ವೀರ ಮಹಿಳೆಯಾಗಿ ಅಲಮೇಲಮ್ಮ ಕಾಣುತ್ತಾಳೆ. ಪತಿಯ ಮರಣಾನಂತರ ಒಡವೆಗಳನ್ನು ದೇವತಾ ಕಾರ್ಯಕ್ಕೆ ವಿನಿಯೋಗಿಸುತ್ತಿದ್ದ, ವಿನಿಯೋಗಿಸಲೇ ಬೇಕಿದ್ದ ಪರಿಸ್ಥಿತಿಯಲ್ಲಿನ ಅಂದಿನ ಹಲವಾರು ಅರಸಿಯರ, ನಾಯಕಿಯರ ಗುಂಪಿನ ನಡುವೆ ಅಲಮೇಲಮ್ಮ ವಿಭಿನ್ನವಾಗಿ ನಿಲ್ಲುತ್ತಾಳೆ.

ಅಲಮೇಲಮ್ಮನ ಶಾಪದ ವಿಚಾರವಾಗಿ ಸಾಕಷ್ಟು ವಿಮರ್ಶೆಗಳು, ಭೂ ಸಂಶೋಧನಾ ವರದಿಗಳ ಕುರಿತಂತೆ ಚರ್ಚೆಗಳು ನಡೆದಿವೆ. ಗಂಗರ, ಹೊಯ್ಸಳರ ಕಾಲದಲ್ಲಿ ಮರಳಿನಿಂದ ಆವೃತವಾಗಿರದ ತಲಕಾಡು, ಆನಂತರದ ಕಾಲದಲ್ಲಿ ಸಂಪೂರ್ಣವಾಗಿ ಮರಳಿನಿಂದ ಮುಚ್ಚಿಹೋದದ್ದಕ್ಕೆ ನಿಖರವಾದ ವೈಜ್ಞಾನಿಕ ಕಾರಣ ದೊರಕದೆ ಒಗಟಾಗಿಯೇ ಉಳಿದಿದೆ.

**ಬಸರಾಳಿನ ಪಾಳೇಗಾರ್ತಿ**

ಅಸಹಾಯಕ ಸ್ಥಿತಿಯಲ್ಲಿಯೂ ಅರಸಿಯರು ತೋರುತ್ತಿದ್ದ ಸಾಹಸಗಳನ್ನು ಇನ್ನೂ ಹಲವಾರು ಪ್ರಕರಣಗಳಲ್ಲಿ ಕಾಣುತ್ತೇವೆ. ಮಂಡ್ಯ ತಾಲ್ಲೂಕಿನ ದುದ್ದದ ಒಂದು ಜನಪದ ಕಥೆಯ ಪ್ರಕಾರ ಅಲ್ಲಿನ ಕೆರೆಯ ಬಳಿಯ ಸ್ಥಳವೊಂದನ್ನು ಹಿಂದೆ ದುದ್ದ ಹಾಗು ಬಸರಾಳಿನ ಪಾಳೇಗಾರರ ನಡುವೆ ಯುದ್ಧನಡೆದುದಕ್ಕೆ ಸಾಕ್ಷಿಯಾಗಿ ತೋರಿಸಲಾಗುತ್ತದೆ. ಈ ಎರಡೂ ಪಾಳೆಯ ಪಟ್ಟಿನ ನಡುವೆ ಶೀತಲ ಸಮರ ನಡೆಯುತ್ತಿದ್ದು, ಬಸರಾಳಿನ ಪಾಳೇಗಾರನನ್ನು ದುದ್ದದ ಪಾಳೆಯಗಾರ ಸಂಧಾನಕ್ಕೆಂದು ಕರೆಸಿ, ಬಂಧಿಸಿ, ಶಿರಚ್ಛೇದನ ಮಾಡುತ್ತಾನೆ. ಅಲ್ಲದೆ ಅವನೊಡನೆ ಬಂದಿದ್ದ ನಾಗತಿಯನ್ನು ಬಲಾತ್ಕಾರ ಮಾಡಲು ಮುಂದಾದ ದುದ್ದದ ಪಾಳೇಗಾರನನ್ನು ಎದುರಿಸಿದ ಬಸರಾಳಿನ ಪಾಳೇಗಾರ್ತಿ, ತನ್ನ ಪತಿಗೆ ಒದಗಿದ ಹೀನಸ್ಥಿತಿಗೆ ದುಃಖಿಸಿ, ದುದ್ದದ ಹೆಬ್ಬಾಗಿಲು ಬಳಿ ಆತ್ಮಾಹುತಿ ಮಾಡಿಕೊಳ್ಳುತ್ತಾಳೆ. ಅವಳು ಶಪಿಸಿದ ಕಾರಣ ದುದ್ಧ ಪಾಳೆಯ ಪಟ್ಟು ನಾಶವಾಯಿತು, ಕರುಗಲ್ಲಿಗಾಗಿ (ಕಾರಾಹುಣ್ಣಿಮೆಯ ದಿನ ಪೂಜಿಸುವ ಕಲ್ಲು) ದುದ್ದ ಮತ್ತು ಬಸರಾಳ ಪಾಳೇಪಟ್ಟುಗಳು ಹಾಳಾದವೆಂದು ಇಂದಿಗೂ ಜನಪದ ಹಾಡುಗಾರರು ಹೇಳುವರು[೩೬].

**ಆದರ್ಶ ಮೆರೆದ ಅರಸಿಯರು**

ರಾಜನು ಉತ್ತಮ ನಡತೆಯನ್ನು ಮೈಗೂಡಿಸಿಕೊಂಡು ಪ್ರಜೆಗಳಿಗೆ ಆದರ್ಶ ನಾಯಕನಂತಿರಬೆಕು. ದೊರೆಯಾದವನ ರೀತಿ–ನೀತಿಗಳನ್ನು ಪಾಲಿಸಬೇಕಾದ ಕಟ್ಟಳೆಗಳನ್ನು ಕುರಿತು ಸಂಹಿತೆಗಳು ಸಾರಿ ಹೇಳುತ್ತವೆ. ಇವನಿಗೆ ಸರಿಯಾದ ಮಾರ್ಗದರ್ಶನವನ್ನು ಮಾಡಲೆಂದು ಅರಮನೆಯಲ್ಲಿ ಗುರು–ಹಿರಿಯರಿರುತ್ತಿದ್ದರು. ಇಂತಹ ರಾಜ ತಪ್ಪುದಾರಿ ತುಳಿದಾಗ ಅರಸಿಯು ತನ್ನ ಕರ್ತವ್ಯವನ್ನು ಹೇಗೆ ಪಾಲಿಸಿದ ಪರಿಯನ್ನು ಜನಪದರು ಸ್ಮರಿಸಿಕೊಳ್ಳುತ್ತಾರೆ.

ಕೆಳದಿಯ ಹಿರಿಯ ವೆಂಕಪ್ಪನಾಯಕನ ಪತ್ನಿ **ಭದ್ರಾಂಬೆ**ಯನ್ನು ಕುರಿತು ಇಂತಹ ಪ್ರಸಂಗವೊಂದನ್ನು ಜನಪದರು ತಿಳಿಸುತ್ತಾರೆ. ಇವಳು ರಾಜ್ಯ ವ್ಯವಹಾರ, ಕಾರ್ಯ ಕಲಾಪಗಳಲ್ಲಿ ಭಾಗವಹಿಸಿ, ಆಡಳಿತದಲ್ಲಿ ಸಲಹೆ ಸೂಚನೆ

ನೀಡುತ್ತಾ ಪತಿ ವೆಂಕಟಪ್ಪ ನಾಯಕನಿಗೆ ಸಹಕಾರಿಯಾಗಿರುತ್ತಾಳೆ. ಅರಸು ಅನ್ಯಧರ್ಮೀಯ ಪರಹೆಂಗಸನ್ನು ಮೋಹಿಸಿ, ತಪ್ಪುದಾರಿ ತುಳಿದಾಗ ಭದ್ರಾಂಬೆಯು ಹೆಂಡತಿ ಎಂಬ ಸಂಬಂಧದಿಂದ ದೂರವಾಗುತ್ತಾಳೆ. ಆದರೆ ರಾಜಕೀಯ ವಿಚಾರಗಳಲ್ಲಿ ಮುಂಚಿನಂತೆಯೇ ಭಾಗವಹಿಸುತ್ತಿರುತ್ತಾಳೆ. ಈ ಘಟನೆಯಿಂದ ಮುಂದೆ ತನ್ನ ಜೀವಿತದ ಕಡೆಯವರೆಗೂ ತನ್ನ ಕಟ್ಟಳೆಯನ್ನು ಸರಿಸದೆಯೇ ರಾಜನಿಗೆ ತಾನು ಮಾಡಿದ್ದು ತಪ್ಪೆಂಬ ತಿಳುವಳಿಕೆ ಮೂಡಿಸಿ, ಮಾದರಿ ಅರಸಿ ಎನಿಸಿಕೊಂಡಿದ್ದಾಳೆ. ಜನಪದರ ಈ ಕಥೆಯು ಕ್ರಿ.ಶ.೧೬೨೩ರಲ್ಲಿ ಕೆಳದಿಯನ್ನು ಸಂದರ್ಶಿಸಿದ ಇಟಲಿಯ ಪ್ರವಾಸಿ ಪೆಯತ್ರೊದೆಲ್ಲವೆಲ್ಲೆಯ ಲೇಖನದಲ್ಲಿಯೂ ಕಾಣಬಹುದು.

**ಸೋಮಲದೇವಿ**

ಬೆಳ್ತಂಗಡಿ ತಾಲ್ಲೂಕಿನ ಸಮೀಪದ ಬೈಲಂಗಡಿಯ ಸಣ್ಣ ಪ್ರದೇಶದಲ್ಲಿ 'ಮೂಲರು' ಎಂಬ ಅರಸು ಮನೆತನದ ರಾಜಕುಮಾರಿ ಸೋಮಲದೇವಿ (ಶಂಕರದೇವಿ)ಯನ್ನು ಲಕ್ಷ್ಮಪ್ಪಬಂಗರಸ (ಕ್ರಿ.ಶ.೧೫೪೫–೧೫೫೬) ವಿವಾಹವಾಗುತ್ತಾನೆ. ಚೌಟ ಅಬ್ಬಕ್ಕ ಇವನ ಮತ್ತೋರ್ವ ಮಡದಿ.

ಅಳಿಯ ಸಂತಾನದ ಕ್ರಮದಂತೆ ಮದುವೆಯಾದ ನಂತರವೂ ಸೋಮಲದೇವಿಯು ಬೈಲಂಗಡಿಯಲ್ಲಿಯೇ ಆಳ್ವಿಕೆ ನಡೆಸುತ್ತಿರುತ್ತಾಳೆ. ಒಮ್ಮೆ ಪತಿಯೊಂದಿಗೆ ಅನಂತನಾಥ ನೋಂಪಿಯಲ್ಲಿ ಭಾಗವಹಿಸಲೆಂದು ಬಂಗರ ಅರಮನೆಗೆ ಬಂದ ಈಕೆಗೆ ಎಲ್ಲರ ಸಮ್ಮುಖದಲ್ಲಿ ಅಗೌರವ ಉಂಟಾಗುತ್ತದೆ. ಇದರಿಂದ ಕುಪಿತಗೊಂಡ ಸೋಮಲದೇವಿಯು ನೋಂಪಿಯನ್ನು ಅರ್ಧಕ್ಕೆ ನಿಲ್ಲಿಸಿ ಬೈಲಂಗಡಿಗೆ ಹೊರಟು ಹೋಗುತ್ತಾಳೆ.

ಇದರಿಂದ ಕುಪಿತನಾದ ಬಂಗರಾಜನು ಬೈಲಂಗಡಿಯ ಮೇಲೆ ಯುದ್ಧ ಸಾರುತ್ತಾನೆ. ಆದರೆ ಕಡೆ ಘಳಿಗೆಯಲ್ಲಿ, ಯುದ್ಧಕ್ಕೆ ಸಿದ್ಧಳಾಗಿಯೇ ಇದ್ದ ಸೋಮಲದೇವಿಯನ್ನು ಮುಖತಃ ಭೇಟಿಯಾಗಿ ಸಂಧಾನಕ್ಕೆ ಒಪ್ಪಿಸುವುದಾಗಿ ತೀರ್ಮಾನಿಸಿದ ಬಂಗರಾಜನು ಏಕಾಂಗಿಯಾಗಿ ಅವಳ ಅರಮನೆಯತ್ತ ಧಾವಿಸುತ್ತಾನೆ, ಸೈನಿಕರು ಇವನು ಯುದ್ಧಕ್ಕಾಗಿ ಬಂದನೆಂದು ಭಾವಿಸಿ ಅಸ್ತ್ರ ಪ್ರಯೋಗಿಸುತ್ತಾರೆ, ಯಾವುದೇ ಸೂಚನೆಯಿಲ್ಲದೆ ಇವನ ಮೇಲೆ ಹಾಯ್ದ ಸೈನಿಕರನ್ನು ತಡೆಯಲು ವಿಫಲನಾದ ಬಂಗರಸನು ಅವರ ಕತ್ತಿಗೆ ಬಲಿಯಾಗಿ ಅರಮನೆಯ ಮೆಟ್ಟಿಲಿನಿಂದ ಉರುಳಿ ಅಸುನೀಗುತ್ತಾನೆ. ಈ ವಾರ್ತೆ ತಿಳಿದ ಸೋಮಲದೇವಿ ತನ್ನ ಪತಿಯ ಸಾವಿಗೆ ತಾನೇ ಕಾರಣಳಾದಳೆಂಬ ದುಃಖದಿಂದ ಅದೇ ಕತ್ತಿಯಿಂದ ತಾನೂ ಸಹ ಇರಿದುಕೊಂಡು ಪ್ರಾಣಬಿಟ್ಟಳು. ಕೆಲವೊಂದು ಮೂಲದ ಪ್ರಕಾರ ಜಿನಾಲಯದಲ್ಲಿ ನಿರಶನ ವ್ರತ ಕೈಗೊಂಡು ಅಸುನೀಗಿದಳು ಎಂಬ ಪ್ರತೀತಿ ಇದೆ.

ಯುದ್ಧಾರಂಭಕ್ಕೂ ಮುನ್ನ ಅರಸಿಯು ಪಾರ್ಶ್ವನಾಥ ಜಿನಮಂದಿರ ನಿರ್ಮಿಸಿಕೊಂಡು, ಬಂಗರ ಅರಮನೆಯಲ್ಲಿ ಆರಂಭಿಸಿದ ನೋಂಪಿಯನ್ನು ಸಂಪೂರ್ಣ ಗೊಳಿಸಿರುತ್ತಾಳೆ. ತರಾತುರಿಯಲ್ಲಿ ಕಟ್ಟಿಸಿದ ಪಾರ್ಶ್ವನಾಥ ಬಸದಿಯನ್ನು ಕ್ರಿ.ಶ.೧೬೧೧ರಲ್ಲಿ ಬಂಗರಸನ ಸೋದರಳಿಯ ಕಾಮರಾಯ ತನ್ನ ಪ್ರಧಾನಿ ಈಶ್ವರಸೇನಬೋವನ ಮುಖಾಂತರ ದುರಸ್ಥಿಗೊಳಿಸಿ, ಇವರಿಬ್ಬರ ಸ್ಮಾರಕವಾಗಿ ಪುನರ್ನಿರ್ಮಿಸಿ, ಜಿನಾಲಯದ ಕಂಬದ ಮೇಲೆ ಶಾಸನವೊಂದನ್ನು ಹಾಕಿಸಿದ್ದಾನೆ.

ಒಂದು ರಾಜ್ಯದ ಅರಸಿಯಾಗಿ ತನ್ನ ಘನತೆಗೆ ಕುಂದು ಬರುವುದನ್ನು ಸಹಿಸದ ಅಭಿಮಾನಿ ಅರಸಿಯ ಈ ವಿಚಾರವು ಕೈಫಿಯತ್ತುಗಳಲ್ಲಿಯೂ ದಾಖಲಾಗಿದೆ.

ಜನಪದ ಸಾಹಿತ್ಯದಲ್ಲಿ ಇನ್ನೂ ಹಲವಾರು ಅರಸಿಯರನ್ನು ಗುರುತಿಸಬಹುದು. ಕೆಲವೊಂದು ಪ್ರಕರಣದಲ್ಲಿ ಸ್ಪಷ್ಟ ಘಟನೆಗಳು ತಿಳಿದು ಬರುವುದಿಲ್ಲ. ಐತಿಹಾಸಿಕ ವೆಂದು ಕರೆಯಲಾದರೂ, ಅವುಗಳು ನಿಖರವಾದ ವಿಚಾರವನ್ನು

ಹೊಂದಿರುವುದಿಲ್ಲ. ಅತಿಮಾನುಷ ವ್ಯಕ್ತಿ, ಅಲೌಕಿಕ ವಿಚಾರಗಳು ಅದರೊಂದಿಗೆ ಬೆರೆತುಹೋಗಿರುತ್ತದೆ. ಅಸ್ಪಷ್ಟ ಐತಿಹಾಸಿಕ ಕೃತಿಗಳಲ್ಲಿ ಐತಿಹ್ಯ ಮತ್ತು ಇತಿಹಾಸವನ್ನು ಬೇರ್ಪಡಿಸುವುದು ಕಷ್ಟವಾಗುತ್ತದೆ. ಹೊಯ್ಸಳ ರಾಜಕುಮಾರಿ ಜಗನ್ಮೋಹಿನಿಗೆ ಸಂಬಂಧಿಸಿದ ಕಥೆಯ ಆಧಾರಿತವೆಂದು ಹೇಳಲಾಗುವ ಪ್ರಸಿದ್ಧ ಜನಪದ ನಾಟಕ **'ಕರಿಭಂಟನ ಕಥೆ'** ಕರಿಭಂಟನ ಕಥೆಯಲ್ಲಿನ ನಾಯಕಿ ಹೊಯ್ಸಳ ಬಲ್ಲಾಳನ ಮಗಳು. ಹೊಯ್ಸಳ ಅರಸು ಮನೆತನದಲ್ಲಿ ಬಲ್ಲಾಳ ಹೆಸರಿನ ಮೂವರು ಪ್ರಸಿದ್ಧ ದೊರೆಗಳು ಆಳ್ವಿಕೆ ನಡೆಸಿದ್ದರು. ಅಲ್ಲದೆ ಈ ಕಥೆಯಲ್ಲಿ ಉಕ್ತವಾಗಿರುವ ದೋರಸಮುದ್ರ, ತೊಣ್ಣೂರು ಮೊದಲಾದ ಪ್ರದೇಶಗಳೂ ಕೂಡ ಹೊಯ್ಸಳ ಸಾಮ್ರಾಜ್ಯಕ್ಕೆ ಸೇರಿದ ಪ್ರಮುಖ ಊರುಗಳು. ಆದರೆ ಈ ಕಥೆಯಲ್ಲಿ ಬರುವ ರಾಕ್ಷಸಿ, ಅತಿಮಾನುಷ ವ್ಯಕ್ತಿತ್ವಗಳು ಹಾಗೂ ಇಲ್ಲಿನ ಘಟನೆಗಳು, ಇದೊಂದು ಸಂಪೂರ್ಣ ಕಾಲ್ಪನಿಕ ಕಥೆ ಎಂಬುದನ್ನು ತಿಳಿಸುತ್ತದೆ. ಈ ಕಥೆಯಲ್ಲಿ **"**ಇತಿಹಾಸ ಘಟನೆಗಳನ್ನು ಶೋಧಿಸುವುದು ಕಷ್ಟಕರವಾಗಿದೆ**"**[೩೭] ಈ ಕಥೆಯನ್ನು ಅಸ್ಪಷ್ಟ ಐತಿಹಾಸಿಕ ಕೃತಿಗಳ ಗುಂಪಿಗೆ ಸೇರಿಸಬಹುದು.

ತುಳುನಾಡಿನಲ್ಲಿಯೂ ಕೂಡ ಪಾಡ್ದನ, ವಿಶಿಷ್ಟ ಮನೆತನದ ಭೂತಾರಾಧನೆಯ ಹಿನ್ನೆಲೆಯಲ್ಲಿ ಕೆಲವು ಐತಿಹಾಸಿಕ ವ್ಯಕ್ತಿಗಳ ಹೆಸರು, ಐತಿಹಾಸಿಕ ಸ್ಥಳ, ಘಟನೆಗಳು ಅಸ್ಪಷ್ಟವಾಗಿ ದೊರಕುತ್ತವೆ. ಉದಾಹರಣೆಗೆ ಸುರಾಲು ಅರಸುಮನೆತನಕ್ಕೆ ಸಂಬಂಧಿಸಿದ ಭೂತಾರಾಧನೆಯ ಸನ್ನಿವೇಷದಲ್ಲಿ ಆ ಮನೆತನದ ಅರಸಿಯೋರ್ವಳ ವಿಚಾರ ತಿಳಿದುಬರುತ್ತದೆ. ಅಲ್ಲಿ ದೈವವೆಂದು ಬಗೆಯುವ ಕಪ್ಪಣ್ಣ ಸ್ವಾಮಿ ದೈವದ ವೃತ್ತಾಂತಕ್ಕೆ ಅರಸಿಯ ಕಥೆಯು ಥಳುಕು ಹಾಕಿಕೊಂಡಿದೆ.

ಸುರಾಲು ಮಾಗಣೆ ಜೈನ ಅರಸರ ಆರೋಗ್ಯ ಹದಗೆಟ್ಟಿರುವ ಸಂದರ್ಭದಲ್ಲಿ ರಾಣಿಯೇ ಎಲ್ಲ ಕಾರ್ಯಗಳನ್ನೂ ನಿರ್ವಹಿಸುತ್ತಿರುತ್ತಾಳೆ. ಒಂದು ದಿನ ಸುರಾಲಿನ ಮಹಾಲಿಂಗೇಶ್ವರ ದೇವರ ಸನ್ನಿಧಾನಕ್ಕೆ ಹೋಗಿ ತೀರ್ಥಪ್ರಸಾದ ತೆಗೆದುಕೊಂಡು ಸುರಾಲು ರಥಬೀದಿಯಲ್ಲಿ ಬರುವಾಗ, ಕಪ್ಪಣ್ಣ ನೆಂಬ ಬಡಬ್ರಾಹ್ಮಣನ ಪರಿಚಯವಾಗಿ, ರಾಣಿಯು ಅವನನ್ನು ಅರಮನೆಗೆ ಕರೆದೊಯ್ದು, ಉದ್ಯೋಗ ನೀಡಿ ಪೊರೆಯುತ್ತಾಳೆ.

ಈತನು ಅರಮನೆಗೆ ಸೇರಿದಮೇಲೆ ರಾಜನ ಆರೋಗ್ಯ ದಿನೇ ದಿನೇ ಸುಧಾರಿಸುತ್ತದೆ. ಅರಮನೆಯ ಬೊಕ್ಕಸ ತುಂಬುತ್ತದೆ. ಒಂದು ಬಾರಿ ಅಲ್ಲಿನ ಮಹಾಲಿಂಗೇಶ್ವರ ದೇವರ ಮೇಲೆ ಹಿರಿಯಡ್ಕ ಮೆಕ್ಕಿ ಕಟ್ಟೆಯ ದೇವರುಗಳು ಭೂತಗಳು ಯುದ್ಧಕ್ಕೆ ಬರುತ್ತವೆ. ಅವರನ್ನು ಎದುರಿಸಲು ಸಾಧ್ಯವಾಗದೆ ರಾಣಿ ಕಂಗಾಲಾಗುತ್ತಾಳೆ. ಆಗ ಕಪ್ಪಣ್ಣ ರಾಣಿಗೆ ಧೈರ್ಯದ ಮಾತುಗಳನ್ನು ಆಡಿ, ಅವಳ ಅನುಮತಿ ಪಡೆದು, ಯುದ್ಧದಲ್ಲಿ ಭಾಗವಹಿಸಿ ಜಯ ಸಾಧಿಸುತ್ತಾನೆ. ಅಸಮಾನ ಸಾಹಸಿ ಕಪ್ಪಣ್ಣ ದೈವಾಂಶ ಸಂಭೂನತೇ ಎಂದು ಬಗೆದ ರಾಣಿಯು ಅವನನ್ನು ಸನ್ಮಾನಿಸಿ ಪಲ್ಲಕ್ಕಿಯನ್ನು ಕಾಣಿಕೆಯಾಗಿ ನೀಡುತ್ತಾಳೆ. ಕಾಲಾನಂತರ ಆತ ದೈವವಾಗಿ ಸುರಾಲು ಅರಮನೆಯಲ್ಲಿ ನೆಲೆ ನಿಲ್ಲುತ್ತಾನೆ. ಆತನಿಗೆ ಕೊಕ್ಕರ್ಣೆಯಲ್ಲಿ ಆರಾಧನೆ ಇದೆ.

ಕಪ್ಪಣ್ಣ ಒಬ್ಬ ಯುದ್ಧವೀರನಿದ್ದು, ಸುರಾಲಿನ ಮೇಲೆ ವೈರಿಗಳು ಧಾಳಿ ಮಾಡಿದ ಸಂದರ್ಭದಲ್ಲಿ ರಾಣಿಯ ಪರವಾಗಿ ನಿಂತು ಕಾದಾಡಿ ಜಯ ತಂದು ಕೊಟ್ಟ ವೀರನಾಗಿರಬಹುದು. ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಬೆಳಗಾವಿ ಜಿಲ್ಲೆಯಿಂದ ತುಳು ನಾಡಿಗೆ ವೈಸರಾಯಿಯಾಗಿ ಬಂದು ಆಳ್ವಿಕೆ ವಹಿಸಿಕೊಂಡ ಸುರಾಳು ತೋಳಹಾರ ಮನೆತನದವರು ಕ್ರಿ.ಶ.೯೧೧ ರಿಂದ ೧೯ನೇ ಶತಮಾನದವರೆಗೂ ರಾಜ್ಯವಾಳಿದವರು[೩೮]. ಈ ಮನೆತನದಲ್ಲಿ ಹಲವಾರು ರಾಣಿಯರು ರಾಜ್ಯವಾಳಿದ ವಿಚಾರ ತಿಳಿದು ಬರುತ್ತದೆ.

**ಜಾಕಲ ಮಹಾದೇವಿ** (೧೨೪೬–೧೨೭೦) ಹಾಗೂ **ಕಾಳಲ ಮಹಾದೇವಿ** (೧೨೭೦–೧೨೮೧)ಯರು ಬಹಳ ಪ್ರಭಾವೀ ರಾಣಿಯರಾಗಿದ್ದರೆಂಬುವುದನ್ನು ಕೆಲವು ಶಾಸನಗಳು ತಿಳಿಸುತ್ತವೆ[೩೯]. ಮುಂದೆ ಕಾಳಲ ಮಹಾದೇವಿಯ ಮಗಳು **ಸಿದ್ದಲದೇವಿ** ಆಡಳಿತ ನಡೆಸಿದ್ದಾಳೆ. ಆದರೆ ಈ ಮೇಲಿನ ಘಟನೆ ನಡೆದ ಕಾಲವಾಗಲೀ, ರಾಣಿಯ ಹೆಸರಾಗಲಿ ತಿಳಿದು ಬರುವುದಿಲ್ಲವಾದ್ದರಿಂದ, ಇತಿಹಾಸದ ಘಟನೆಗಳಿಗೆ ಹೋಲಿಕೆ ಮಾಡುವುದು ಕಷ್ಟವಾಗುತ್ತದೆ.

**ಅಧ್ಯಯನದ ಫಲಿತ**

ಕರ್ನಾಟಕದ ಅರಸಿಯರ ಕುರಿತಾಗಿ ರಚಿತವಾಗಿರುವ ಈ ಮೇಲೆ ಗಮನಿಸಿದ ಕೆಲವು ಕೃತಿಗಳು ಅನೇಕ ಐತಿಹಾಸಿಕ ಘಟನೆಗಳನ್ನು ಒಳಗೊಂಡು ಇತಿಹಾಸದ ಪುನಾರಚನೆಗೆ ಮುಖ್ಯ ದಾಖಲೆಗಳೆನಿಸಿವೆ. ಅರಸಿಯರ ಬದುಕಿನ ರೋಚಕ ವಿವರಗಳನ್ನು ಶಿಷ್ಟಸಾಹಿತ್ಯ, ಜನಪದ ಸಾಹಿತ್ಯ, ಶಾಸನ ಸಾಹಿತ್ಯಗಳು ಬಣ್ಣಿಸುತ್ತಿವೆ. ಅರಸಿಯೋರ್ವಳ ಜೀವನದ ಘಟನೆಯನ್ನು, ಕಾವ್ಯಮಯವಾಗಿಸಬೇಕೆನಿಸುವಷ್ಟರ ಮಟ್ಟಿಗೆ ಕವಿಯ ಮನಸ್ಸನ್ನು ಪ್ರಭಾವಗೊಳಿಸಿರುವುದು ಇಲ್ಲಿನ ಕೆಲವು ಸಾಹಿತ್ಯಗಳಲ್ಲಿ ಕಾಣುತ್ತೇವೆ.

ಈ ಸಾಹಿತ್ಯಗಳಲ್ಲಿ ಅರಸಿಯರ ಬದುಕಿನ ಘಟನೆಗಳ ಚಿತ್ರಣವಷ್ಟೇ ಅಲ್ಲದೆ, ಇತಿಹಾಸದಲ್ಲಿ ಪ್ರಸಿದ್ಧರೆನಿಸಿರುವ ದೊರೆಗಳು ಅವರ ಮಡದಿಯರ ಕಥೆಯೊಂದಿಗೆ ವಿಭಿನ್ನ ದೃಷ್ಟಿಕೋನದಲ್ಲಿ ಚಿತ್ರಿತರಾಗಿರುವುದನ್ನೂ ಗಮನಿಸಬಹುದು. ಇತಿಹಾಸದಲ್ಲಿ ಬಹಳ ಪ್ರಸಿದ್ಧ ಚಕ್ರವರ್ತಿಗಳೆನಿಸಿದ ಚಾಲುಕ್ಯ ಜಯಸಿಂಹ, ಆರನೆಯ ವಿಕ್ರಮಾದಿತ್ಯರಿಗಿಂತಲೂ ಅವರ ಅರಸಿಯರಾದ ರಾಣಿ ಸುಗ್ಗಲದೇವಿ ಹಾಗೂ ರಾಣಿ ಲಕ್ಷ್ಮೀದೇವಿಯರೇ ಇಲ್ಲಿನ ಕೆಲವು ಕೃತಿಗಳಲ್ಲಿ ಪ್ರಮುಖ ಪಾತ್ರರಾಗಿದ್ದಾರೆ.  ಈ ಚಕ್ರವರ್ತಿಗಳ ಪ್ರಶಸ್ತಿಗಳನ್ನು ತಿಳಿಸುವ ಇತರ ಶಾಸನಗಳು, ಸಂಸ್ಕೃತ ಕಾವ್ಯಗಳು ಇವರ ಶೌರ್ಯ-ಸಾಹಸಗಳನ್ನು ವಿಜೃಂಬಿಸಿ ಬಣ್ಣಿಸಿದರೆ ಇಲ್ಲಿ ಗಮನಿಸಿರುವ ಸಾಹಿತ್ಯಗಳಲ್ಲಿ ತಮ್ಮ ರಾಣಿಯರ ಪ್ರಭಾವಕ್ಕೆ ಒಳಗಾಗುವ ಸಾಮಾನ್ಯರಂತೆ ತೋರುತ್ತಾರೆ.

ಅರಸರನ್ನು ಪ್ರಧಾನವಾಗಿಸಿ ರಚಿಸಲಾಗಿರುವ ಕಾವ್ಯಗಳಲ್ಲಿ, ಪೌರುಷ, ಶೌರ್ಯ ಶ್ರೇಷ್ಠತೆಗಳೇ ಮೆರೆದರೆ, ಅರಸಿಯರ ಬದುಕು ಜನ ಸಾಮಾನ್ಯರಿಗೆ ಹತ್ತಿರವೆನಿಸುವಂತೆ ತೋರುತ್ತಿದ್ದುದು ಇಲ್ಲಿ ಕಂಡುಬರುತ್ತದೆ. ಇತಿಹಾಸದಲ್ಲಿ ಶೌರ್ಯ-ಸಾಹಸಗಳಿಗೆ ಹೆಸರಾದ ದೊರೆಗಳು ಅವರ ಅರಸಿಯರಿಗೆ ಪ್ರಾಧಾನ್ಯತೆ ಇರುವಂತಹ ಕಾವ್ಯಗಳಲ್ಲಿ ವಿಭಿನ್ನ ದೃಷ್ಟಿಕೋನದಿಂದ ಚಿತ್ರಿತರಾಗಿರುವುದನ್ನು ಕಾಣುತ್ತೇವೆ.

ಈ ಅಧ್ಯಾಯದಲ್ಲಿ ಪ್ರಾಚೀನ ಕವಿಗಳು ಅರಸಿಯರ ಕುರಿತಾಗಿ ಕಾವ್ಯಗಳನ್ನು ರಚಿಸಲು ಅವರಿಗೆ ಮುಖ್ಯವೆನಿಸಿದ ಅರಸಿಯರ ಜೀವನದ ಘಟನೆ ಅಥವಾ ಸ್ವಭಾವಗಳನ್ನು ಈ ರೀತಿಯಾಗಿ ಗಮನಿಸಬಹುದು:

- ಅರಸಿಯರ ಧಾರ್ಮಿಕಗುಣ, ಧಾರ್ಮಿಕಕಾರ್ಯಗಳಿಗಾಗಿ ಇಟ್ಟ ದಿಟ್ಟ ಹೆಜ್ಜೆ.
- ಅರಸರ ಶೌರ್ಯವನ್ನು ಕೀರ್ತಿಸಲು ಪೂರಕವಾಗುವ ಅರಸಿಯರ ಗುಣಸ್ವಭಾವ
- ಯುದ್ಧಸಾಹಸಗಳಲ್ಲಿ ಮೆರೆದ ಅರಸಿಯರ ಶೌರ್ಯಗುಣ

ಕಲ್ಯಾಣದ ಚಾಲುಕ್ಯ ಅರಸಿಯರಾದ ಸುಗ್ಗಲಾದೇವಿ, ಲಕ್ಷ್ಮೀದೇವಿಯರು ಅರಮನೆಯ ಕವಿಗಳಿಂದ ಸ್ತುತಿಸಲ್ಪಟ್ಟಿಲ್ಲ. ಇವರು ಪಾಲ್ಕುರಿಕೆ ಸೋಮನಾಥ, ಷಡಕ್ಷರಿ, ಹರಿಹರ, ವಿರೂಪಾಕ್ಷ ಪಂಡಿತ, ಭೀಮಕವಿ, ಶಾಂತಲಿಂಗ ದೇಶಿಕ ಮೊದಲಾದ ಯಾವುದೇ ಆಸ್ಥಾನ ಕವಿಗಳಲ್ಲದವರ ಕಾವ್ಯಗಳಲ್ಲಿ ಚಿತ್ರಿತರಾದ ಅರಸಿಯರು.  ಈ ಕವಿಗಳು ಅರಸಿಯರ ಸಮಕಾಲೀನರಲ್ಲ ಈ ಅರಸಿಯರ ಕಾಲಕ್ಕೂ ಕವಿಗಳ ಕಾಲಕ್ಕೂ ಅಂತರವಿರುವುದನ್ನೂ ಗಮನಿಸಬಹುದು. ಇವರ ವಿವರಣೆಗಳಿರುವ ಕಾವ್ಯಗಳಲ್ಲಿ ಈ ಅರಸಿಯರು ಕಾವ್ಯದ ಪ್ರಧಾನ ನಾಯಕಿಯರಾಗಿಲ್ಲ. ಅರಸಿಯರು ಧಾರ್ಮಿಕ ಸನ್ನಿವೇಶಗಳಲ್ಲಿ ತಳೆದ ತೀರ್ಮಾನ, ಸ್ವಾತಂತ್ರ್ಯಗಳು ಅವರನ್ನು ಅವರ ಕಾಲಾನಂತರವೂ ಸ್ಮರಿಸುವಂತೆ ಮಾಡಿವೆ. ಅಂದಿನ ಬಹುಮುಖ್ಯ ಘಟನೆಗಳಿಗೆ ಸಾಕ್ಷಿಯಾಗಿ, ಕಾರಣರಾಗಿ ನಡೆದುಕೊಂಡ ಅವರ ಸ್ವಭಾವ, ನಡೆವಳಿಕೆಗಳು ಅವರು ಕಾವ್ಯಗಳಲ್ಲಿ ಚಿತ್ರಿತರಾಗಲು ಕಾರಣವಾಗಿದೆ.

ಅರಸಿಯರು ಆಸ್ಥಾನ ಕವಿಗಳ ಕಾವ್ಯದಲ್ಲಿ ಚಿತ್ರಿತವಾದಾಗ ಸೀತೆ, ಅರುಂಧತಿ ಮೊದಲಾದ ಹೋಲಿಕೆಗಳನ್ನು ಪಡೆದು ಪತಿವ್ರತಾ ಧರ್ಮ ಪಾಲಿಸಿ, ಅರಸನ ಕಾರ್ಯಗಳಿಗೆ ಸಹಕರಿಸುವ ಮಹಿಳೆಯರಂತೆ ಬಣ್ಣಿಸಲ್ಪಟ್ಟಿದ್ದಾರೆ. ಉದಾಹರಣೆಗೆ ರಟ್ಟಮನೆತನದ ಚಂದ್ರಿಕಾದೇವಿ, ಭರ್ಮಭೂಪಾಲನ ಅರಸಿ ಸುಗ್ಗಲಾದೇವಿ, ವಿಕ್ರಮಾದಿತ್ಯನ ಅರಸಿ ಚಂದ್ರಿಕಾದೇವಿಯರು ಶಾಸನಗಳಲ್ಲಿ ಹಾಗೂ ಕಾವ್ಯಗಳಲ್ಲಿ ಬಣ್ಣಿತವಾಗಿರುವ ಪರಿಯನ್ನು ಕಾಣಬಹುದು. ಆದರೆ ಇಲ್ಲಿ ಅರಸಿಯರ ಆದರ್ಶಗುಣಗಳನ್ನು ಸಾರುವುದೇ ಕವಿಯ ಉದ್ದೇಶ ಎನ್ನುವುದು ಸ್ಪಷ್ಟವಾಗಿ ತೋರುತ್ತದೆ.

ಕೆಲವು ಕಾವ್ಯಗಳು ಅರಸಿಯರ ಸಾಹಸವನ್ನು ಬಣ್ಣಿಸುವ ಪರಿಯನ್ನು ಗಮನಿಸಿದಾಗ ಶಿಷ್ಟಕಾವ್ಯವಿರಲಿ, ಜನಪದವಿರಲಿ ಮುಕ್ತಕಂಠದಿಂದ ಅರಸಿಯರ ಶೌರ್ಯವನ್ನು ಚಿತ್ರಿಸಿ ಶ್ಲಾಘಿಸಿರುವುದು ತೋರುತ್ತದೆ. ಸಾವಿಯಬ್ಬೆ, ಕೆಳದಿ ಚೆನ್ನಮ್ಮ, ಬೆಳವಡಿ ಮಲ್ಲಮ್ಮ, ಕಿತ್ತೂರು ಚೆನ್ನಮ್ಮ, ಚಿಕ್ಕಮ್ಮ ನಾಗತಿ ಇವರೆಲ್ಲಾ ಯುದ್ಧದಲ್ಲಿ, ರಾಜ್ಯಾಡಳಿತದಲ್ಲಿ ಚಾತುರ್ಯತೋರಿ ಕಾವ್ಯನಾಯಕಿಯರಾದ ಅರಸಿಯರಾಗಿದ್ದಾರೆ. ಅಂತೆಯೇ ಆದರ್ಶವನ್ನು ಪಾಲಿಸುವ ಸಲುವಾಗಿ ಅರಸಿಯರು ತಮ್ಮ ವೈಯಕ್ತಿಕ ಜೀವನವನ್ನು ಬದಿಗಿಟ್ಟು, ಬದುಕಿದ ಅರಸಿಯರ ವಿಚಾರವನ್ನು ಕೆಲವು ಜನಪದ ಸಾಹಿತ್ಯ ಬಣ್ಣಿಸಿವೆ.

ಕರ್ನಾಟಕದ ಅರಸಿಯರು ಅರಸರಷ್ಟೇ ಮಹತ್ವವನ್ನು ಪಡೆದವರಾಗಿದ್ದರು. ವಿಭಿನ್ನ ದೃಷ್ಟಿಕೋನಗಳಲ್ಲಿ ಭಿನ್ನ ಸಂದರ್ಭಗಳಲ್ಲಿ ಕಾವ್ಯಗಳಲ್ಲಿ ಬಿಂಬಿತರಾಗಿರುವ ಅರಸಿಯರ ವಿಚಾರವನ್ನು ಗಮನಿಸಿದಾಗ, ಕರ್ನಾಟಕದ ಅರಸಿಯರು ಆರಂಭಕಾಲದಿಂದಲೂ ತಮ್ಮದೇ ಆದ ವಿಶಿಷ್ಟವ್ಯಕ್ತಿತ್ವವನ್ನು ಹೊಂದಿದ ವಿಚಾರ ತಿಳಿದು ಬರುತ್ತದೆ. ಧಾರ್ಮಿಕ ಸ್ವಾತಂತ್ರಗಳಿಸಿದ ಅರಸಿ ಸುಗ್ಗಲೆ, ರಾಣಿ ಲಕ್ಷ್ಮಿದೇವಿಯರ ವಿಚಾರ, ಯುದ್ಧ-ಸಾಹಸ ಮೆರೆದ ಚೆನ್ನಮ್ಮ, ಬೂದಿಹಾಳು ಪಾಳೆಯಗಾರ್ತಿ ಚಿಕ್ಕಮ್ಮ, ಬೆಳವಡಿ ಮಲ್ಲಮ್ಮ, ಓಬವ್ವ ನಾಗತಿ ಆಡಳಿತ ವೈಖರಿಯಿಂದ ಪ್ರಶಂಸೆ ಪಡೆದ ಕೆಳದಿಯ ಚೆನ್ನಮ್ಮ, ಆಯಾಕಾಲದ ಮೌಲ್ಯವನ್ನು ಎತ್ತಿಹಿಡಿಯುವಲ್ಲಿ ಪ್ರಜೆಗಳಿಗೆ ಆದರ್ಶ ರಾಣಿಯೆನಿಸುವಲ್ಲಿ ರಟ್ಟ ಚಂದ್ರಿಕಾದೇವಿ, ಸುಗ್ಗಲೆ, ಸೌಂದರ್ಯದ ಪ್ರಶಂಸೆಗಾಗಿ ಚಂದಲಾದೇವಿ, ಅಳಿಯಸಂತಾನ ಪರಂಪರೆ ಸ್ಥಾಪನೆಗೆ ಕಾರಣಳಾದ ರಾಣಿ ಸುಶೀಲೆ, ರಾಜ್ಯದ ಹಿತಕ್ಕಾಗಿ ಪ್ರೀತಿಯನ್ನು ತ್ಯಾಗ ಮಾಡಿದ ಮೃಣಾಳವತಿ, ಪತಿಯ ಸಾವಿಗೆ ಪ್ರತಿಕಾರ ತೆಗೆದುಕೊಂಡ ಗಿರಿಜ, ಅಲಮೆಲಮ್ಮ, ಸ್ವಾಭಿಮಾನಿ ಸೋಮಲದೇವಿ ಮೊದಲಾದವರು ಕಾವ್ಯದ ಕೇಂದ್ರ ವ್ಯಕ್ತಿಗಳಾಗಿ ತೋರುತ್ತಾರೆ.

ಪ್ರಸಿದ್ಧ ಕವಿಗಳ ಕನ್ನಡ, ಸಂಸ್ಕೃತ ರಚನೆಗಳಷ್ಟೇ ಅಲ್ಲದೆ ಜನಪದ ಸಾಹಿತ್ಯಗಳಲ್ಲಿ ಬಣ್ಣಿತರಾಗಿದ್ದಾರೆ. ಅಬ್ಬಕ್ಕನಂತಹ ಅರಸಿ ವಿದೇಶಿಯರಿಂದ ಸ್ತುತಿಸಲ್ಪಟ್ಟ ಹೆಮ್ಮೆಯ ಅರಸಿಯರೆನಿಸದ್ದಾರೆ. ಇಂತಹ ಅರಸಿಯರ ವಿಭಿನ್ನ ಕತೆಗಳು ರೋಚಕವೆನಿಸುತ್ತವೆ. ಅರಸಿಯರೂ ಕೂಡ ಆಶ್ರಿತ ಕವಿಗಳಿಂದ ಸ್ತುತಿಸಲ್ಪಟ್ಟ ಯಾವುದೇ ಅರಸನಿಗಿಂತ ಕಡಿಮೆ ಎನಿಸುವುದಿಲ್ಲ.

**ಟಿಪ್ಪಣಿಗಳು ಹಾಗೂ ಆಕರಗ್ರಂಥಗಳು**

೧. ಹಿರೇಮಠ.ಆರ್.ಸಿ. (ಸಂ)., ೧೯೬೮, ಷಡಕ್ಷರದೇವ, **ಬಸವರಾಜವಿಜಯ**, ಧಾರವಾಡ,

೨. ಚಂದ್ರಶೇಖರ್.ಎಂ. (ಸಂ), ೧೯೭೯, ವಿರೂಪಾಕ್ಷ ಪಂಡಿತ, **ಚೆನ್ನಬಸವ ಪುರಾಣ**, ಕ.ಸಾ.ಪ., ಬೆಂಗಳೂರು

೩. SII XX ಶಾಸನ ಸಂ.೨೩ ದೇವೂರು, ಸಿಂದಗಿ

೪. MAR ೧೯೭೫, ೬೪ ಕಡೂರು ಕೆರೆಸಂತೆ

೪ಅ. ನಾಗಭೂಷಣ.ಸಿ, ೨೦೦೯, **ಕಲ್ಯಾಣ ಕರ್ನಾಟಕ ಸಾಹಿತ್ಯ-ಸಂಸ್ಕೃತಿ**, ಅವಿರತ ಪುಸ್ತಕ, ಬೆಂಗಳೂರು

೫. ಹಳಕಟ್ಟಿ.ಫ.ಗು.(ಸಂ) ೧೯೬೮, **ಹರಿಹರನ ರಗಳೆಗಳು** (ಸಮಗ್ರ ಸಂಪುಟ), ಸಮಾಜ ಪುಸ್ತಕಾಲಯ, ಧಾರವಾಡ,

೬. ಎ.ಇ. XV – ೬ ಸೂಡಿ (ತಾ) ರೋಣ

೭. SII XX, ೯೪ ಖೇಡಗಿ (ತಾ) ಇಂಡಿ

೮. I.A. X ಪು.೧೮೫ ಡಂಬಳ.ತಾ ಗದಗ

೯. SII xi-ii ೧೪೦ ಡೋಣಿ.ತಾ ಮುಂಡರಗಿ

೧೦. ಕೆ.ಆರ್.ಗಣೇಶ್ & ದೇವರಕೊಂಡಾರೆಡ್ಡಿ, ೧೪.೧೦.೨೦೧೬ 'ಅಕ್ಕರಗೊಟ್ಟಿ' ಕಾರ್ಯಕ್ರಮ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು

೧೧. ಜವರೇಗೌಡ.ದೇ & ವೆಂಕಟರಾಮಪ್ಪ.ಕೆ (ಸಂ), ೧೯೬೬, ನೇಮಿಚಂದ್ರ, **ಲೀಲಾವತಿ ಪ್ರಬಂಧಂ**, ಶಾರದಾಮಂದಿರ, ಮೈಸೂರು, ೧೪–೧೫೦

**೧೨.** ಜೆ.ಬಿ.ಬಿ.ಆರ್.ಎ.ಎಸ್. ೧೦ ಪು.೨೨೦

೧೩. ಆರ್.ಎನ್.ಕೆ.ಕೆ.೨೩ ರಾಯಭಾಗ ೧೧೨೭

೧೪. ಜೆ.ಬಿ.ಬಿ.ಆರ್.ಎಸ್ X ೫ ಕಲ್ಹೋಳಿ

೧೫. ಎ.ಇ. xiii ೩ ಬೆಳಗಾವಿ ಪು.೧೮

೧೬. ಹಳಕಟ್ಟಿ.ಫ.ಗು., **ಶಿವಾನುಭವ**, ಸಂ.೧೧, ೧೧೮೭

೧೭. E.C. ಸಂ.II ಶ್ರ.ಬೆ ೧೩೯

೧೮. ನಾಗರಾಜಯ್ಯ.ಹಂ.ಪ., ೧೯೯೬, **ದಾನಚಿಂತಾಮಣಿ ಅತ್ತಿಮಬ್ಬೆ**, ಐಬಿಎಚ್ ಪ್ರಕಾಶನ ಬೆಂಗಳೂರು ಪು.೮೩

೧೯. ಕಲಬುರ್ಗಿ.ಎಂ.ಎಂ.(ಸಂ)., ೨೦೧೧, **ಸಿರುಮನ ಚಾರಿತ್ರ್ಯ**, (ಸಿದ್ಧಕವಿಯ ಸಿರುಮಣ ನಾಯಕನ ಸಾಂಗತ್ಯ, ಮಲ್ಲಕವಿಯ ಗೊಲ್ಲಸಿರುಮನ ಚರಿತೆ, ರಾಮಕವಿಯ ಸಿರುಮನ ಚರಿತೆ) ಸ್ವಪ್ನ ಬುಕ್‌ಹೌಸ್, ಬೆಂಗಳೂರು

೨೦. ಶೇಷೋ ಶ್ರೀನಿವಾಸ(ಮೂಲ ಮರಾಠಿ), ಚಿಟ್ನಿಸ್.ಎನ್.ಕೆ (ಅನು), **ಶಿವಾಜಿ ಮಲ್ಲಮ್ಮಾಜಿ ಸಮರೋತ್ಸವ**, ವೀರಶೈವ ಅಧ್ಯಯನ ಸಂಸ್ಥೆ, ಗದಗ ೧೯೯೩, ಪು೨೯)

೨೧. ಪೂರ್ವೋಕ್ತ

೨೨. ಪಾಟೀಲ.ಯ.ರು., ೨೦೦೬, **ಬೆಳವಡಿ ಮಲ್ಲವ್ವ ಮಹಾರಾಣಿ ವಿಷಯ–ಇತಿಹಾಸ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಪು೭೩

೨೩. ನಾಗೇಗೌಡ.ಎಚ್.ಎಲ್., ೨೦೦೭, **ಪ್ರವಾಸಿ ಕಂಡ ಇಂಡಿಯಾ ಸಂಪುಟ ೪**, ಐ.ಬಿ.ಎಚ್. ಪ್ರಕಾಶನ, ಬೆಂಗಳುರು, ಪು.೨೬೪

೨೪. ಶ್ರೀನಿವಾಸ ಅಯ್ಯಂಗಾರ್.ಎಂ.ಎನ್., ೧೯೭೮, ಸಂಸ್ಕೃತ ಕವಿ ಚರಿತೆ, ಸಂಸ್ಕೃತ ಕವಿಚರಿತೆ ಪ್ರಕಾಶನ, ಬೆಂ, ಪು.೧೦೬

೨೫. ಎನ್ಕೆ, ೧೯೯೫, ಮುನ್ನುಡಿ, ಶ್ರೀಪೃಥ್ವೀವಲ್ಲಭ, ಶ್ರೀಕಾಂತ ಪ್ರಕಾಶನ, ಬೆಂಗಳೂರು, ಪು.೧೧

೨೬. ನಾಗರಾಜ ರಾವ್.ಸಿ.ಕೆ., ೧೯೯೫, **ಶ್ರೀಪೃಥ್ವೀವಲ್ಲಭ**, ಶ್ರೀಕಾಂತ ಪ್ರಕಾಶನ, ಬೆಂಗಳೂರು,

೨೭. ಹನುಮಾಕ್ಷಿ ಗೋಗಿ (ಸಂ)., ೧೯೯೬, **ಕಲ್ಬುರ್ಗಿ ಜಿಲ್ಲೆಯ ಶಾಸನಗಳು**, ೧೧೯೯ರ ಹುಣಸೀಹಡಗಲಿ ಶಾಸನ, ಶಿವಚಂದ್ರ ಪ್ರಕಾಶನ, ಹುಬ್ಬಳ್ಳಿ, ಪು.೨೨೯

**೨೮.** ಲಕ್ಷ್ಮಣ್ ತೆಲಗಾವಿ & ಎಂ.ವಿ.ಶ್ರೀನಿವಾಸ್ (ಸಂ), ೧೯೯೫, **ಹುಲ್ಲೂರು ಶೀನಿವಾಸ ಜೋಯಿಸರ ಸಂಶೋಧನ ಲೇಖನಗಳು**, ಹುಲ್ಲೂರು ಶೀನಿವಾಸ ಜೋಯಿಸ ಗ್ರಂಥ ಪ್ರಕಟಣ ಸಮಿತಿ, ಚಿತ್ರದುರ್ಗ, ಪು.೩೫

**೨೯.** ಚಂದ್ರಮೌಳಿ.ಎಸ್.ನಾಯ್ಕರ (ಸಂ)., ೨೦೧೨, **ಬಿಲ್ಹಣ ಮಹಾಕವಿ ಕೃತ ಚೋರಪಂಚಾಶಿಕಾ**, ಧಾರವಾಡ, ಪು.೧೫

**೩೦.** ಕನ್ನಡ ವಿಷಯ ವಿಶ್ವಕೋಶ ಸಂ.೨, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೯, ಪು.೧೬

**೩೧.** ಜ್ಯೋತ್ಸ್ನಾ ಕಾಮತ, ೨೦೦೮, **ಕೈಗನ್ನಡಿಯಲ್ಲಿ ಕನ್ನಡಿತಿ**, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ

**೩೨.** ಮರುಳಯ್ಯ.ಸಾ.ಶಿ., ೨೦೦೧, **ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ**, ಸಪ್ನಬುಕ್ ಹೌಸ್, ಬೆಂಗಳೂರು

**೩೩.** ಕುಮುದಿನಿ.ವೈ.ಎಂ. ೨೦೧೧, **ಕನ್ನಡದ ಸಂಭಾವ್ಯ ರಾಣಿಯರು**, ರವಿಪ್ರಕಾಶನ, ಬೆಂಗಳೂರು

**೩೪.** ಗೋಪಾಲ ರಾವ್.ಹೆಚ್.ಎಸ್., ೨೦೧೦, **ನಮ್ಮದಿದು ಇತಿಹಾಸ**, ಅಭಿನವ, ಬೆಂಗಳೂರು

**೩೪ಅ**. ಜಯಲಕ್ಷ್ಮಿ ಸೀತಾಪುರ, ಕನ್ನಡದಲ್ಲಿ ಐತಿಹಾಸಿಕ ಜನಪದ ಲಾವಣಿಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

**೩೪ಆ** ಲಿಂಗಯ್ಯ.ಡಿ (ಸಂ) ೧೯೭೯, **ಪಿರಿಯಾಪಟ್ಟಣದ ಜಗಳ**, ದಿನಕರ ಪ್ರಕಾಶನ, ಬೆಂಗಳೂರು

**೩೫.** ಗೋಪಾಲ ರಾವ್.ಹೆಚ್.ಎಸ್., ಪೂರ್ವೋಕ್ತ, ಪು.೬೨–೬೩

**೩೬.** ತೈಲೂರು ವೆಂಕಟಕೃಷ್ಣ, ೨೦೦೮, **ಮಂಡ್ಯಜಿಲ್ಲೆಯ ಸ್ಥಳನಾಮಗಳ ಅವಲೋಕನ,** ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ಪು.೨೮೮

**೩೭.** ಲಕ್ಷ್ಮಣ್ ತೆಲಗಾವಿ & ಎಂ.ವಿ.ಶ್ರೀನಿವಾಸ್(ಸಂ) ಪೂರ್ವೋಕ್ತ, ಪು.೩೧೯

೩೮. K.I.Vol.I Introduction, pp.8-9

೩೯. E.C.VI ಮೂಡಿಗೆರೆ ಸಂ. ೬೭,೭೦,೭೧,೭೨,೭೩ & ೭೫

೪೦.

# ಅಧ್ಯಾಯ – ೫

# ಪ್ರಾಚೀನ ಕರ್ನಾಟಕದ ಅರಸಿಯರ ಸಾಹಿತ್ಯ ಪೋಷಣೆ

ಸಾಹಿತ್ಯ ಚರಿತ್ರೆಗಳಲ್ಲಿ ಅಧ್ಯಯನಕ್ಕೆ ಅನುಕೂಲವಾಗುವಂತೆ, ಕನ್ನಡ ಸಾಹಿತ್ಯ ಬೆಳೆದು ಬಂದ ಪರಿಯನ್ನು ಅನೇಕ ಘಟ್ಟಗಳಲ್ಲಿ ಗುರುತಿಸಲಾಗಿದೆ. ಅರಸಿಯರ ಪೋಷಣೆಯಲ್ಲಿ ಬೆಳೆದು ಬಂದ ಸಾಹಿತ್ಯವನ್ನೂ ಪ್ರಾಚೀನ ಹಾಗೂ ಮಧ್ಯಕಾಲೀನ ಎಂಬ ಎರಡು ವಿಭಿನ್ನ ಘಟ್ಟಗಳಲ್ಲಿ ವಿಶ್ಲೇಷಿಸುವುದು ಅಗತ್ಯವಾಗಿದೆ. ಅರಸುಮನೆತನಗಳ ಅವಧಿಯಲ್ಲಿ ಹೇಳುವುದಾದರೆ ಹೊಯ್ಸಳ ಅರಸರ ಕಾಲದವರೆಗಿನ ಸಾಹಿತ್ಯವನ್ನು ಪ್ರಾಚೀನವೆಂದೂ, ವಿಜಯನಗರ ಹಾಗೂ ಆ ನಂತರದ ಕಾಲದ ಸಾಹಿತ್ಯವನ್ನು ಮಧ್ಯಕಾಲೀನ ಸಾಹಿತ್ಯವೆಂದು ಪ್ರಸ್ತುತ ಅಧ್ಯಯನದಲ್ಲಿ ಪರಿಗಣಿಸಲಾಗಿದೆ.

ಮಧ್ಯಕಾಲೀನ ಸಂದರ್ಭದಲ್ಲಾದ ರಾಜಕೀಯ ಸಂಘರ್ಷಗಳು, ಆನಂತರ ವಸಾಹತುಗಳ ಕಾಲದಲ್ಲಾದ ಸಾಮಾಜಿಕ, ಧಾರ್ಮಿಕ, ಬದಲಾವಣೆಗಳ ನಡುವೆಯೂ ಈವರೆಗೆ ಉಳಿದುಬಂದಿರುವ ಸಾಹಿತ್ಯ ಕೃತಿಗಳು, ಮಾಹಿತಿಗಳು ಅಂದಿನವರ ಅಪಾರ ಕೊಡುಗೆ, ಸಾಧನೆಗಳನ್ನು ಮನವರಿಕೆ ಮಾಡಿಸುತ್ತವೆ. ಕನ್ನಡನಾಡಿನಲ್ಲಿ ಬೆಳೆದು ಬಂದ ಸಾಹಿತ್ಯ ಪರಂಪರೆಗೆ ಈ ನಾಡಿನ ಅರಸಿಯರ ಪೋಷಣೆ ಹೇಗಿತ್ತು ಎನ್ನುವುದನ್ನು ಈ ಅಧ್ಯಾಯಗಳಲ್ಲಿ ಗಮನಿಸಲಾಗಿದೆ.

**ಅರಸಿಯರ ಪೋಷಣೆ, ಪ್ರೋತ್ಸಾಹ**

ಅರಸಿಯರ ಪೋಷಣೆಯಲ್ಲಿ ಸಾಹಿತಿಗಳು, ಕಲಾವಿದರು ಸನ್ಮಾನಗೊಳ್ಳುತ್ತಿದ್ದ ಪರಿಯನ್ನು ಶಾಸನಗಳು ಚಿತ್ರಿಸಿವೆ. ಸುಕವಿಜನ ವಿನೋದೆ, ಪಂಡಿತ–ಬುಧಜನ ಮಂಡಿತೆ, ವಿದ್ವಜ್ಜನಾಶ್ರಿತೆ ಮೊದಲಾದ ವಿಶೇಷಣಗಳನ್ನು ಧರಿಸಿದ ಅರಸಿಯರ ವಿಚಾರ ಶಾಸನಗಳಲ್ಲಿ ಉಕ್ತವಾಗಿವೆ. ಇವು ಕೇವಲ ಮುಖಸ್ತುತಿಯಾಗಿರದೆ, ಅರಸಿಯರು ಕವಿ–ಪಂಡಿತ, ಕಲಾಕೋವಿದರ ಪ್ರತಿಭೆಗಳನ್ನು ಗುರುತಿಸಿ, ಅವಕಾಶ ನೀಡಿ ಅವರಿಗೆ ಸೂಕ್ತ ಸನ್ಮಾನಗಳನ್ನು ಮಾಡಿದ್ದರೆಂಬುದಕ್ಕೆ ಹಲವಾರು ನಿದರ್ಶನಗಳು ದೊರಕುತ್ತವೆ. ಬಾದಾಮಿ ಚಳುಕ್ಯದೊರೆ ವಿಕ್ರಮಾದಿತ್ಯನ ರಾಣಿಯರಾದ ಲೋಕಮಹಾದೇವಿ ಹಾಗೂ ತ್ರೈಲೋಕ್ಯ ಮಹಾದೇವಿಯರು ತಾವು ನಿರ್ಮಿಸಿದ ದೇವಾಲಯದ ಶಿಲ್ಪಿಗಳಿಗೆ ಮಾಡಿದ ಸನ್ಮಾನಗಳನ್ನು ಕುರಿತು ಶಾಸನ ಹಾಕಿಸಿದ್ದಾರೆ. ಇಲ್ಲಿ 'ಪೆರ್ಜ್ಜೆಱಿಪು' ಎಂಬ ವಿಶೇಷ ಸನ್ಮಾನವನ್ನು ರಾಣಿಯರು ಮಾಡಿರುವ ವಿಚಾರ ತಿಳಿದು ಬರುತ್ತದೆ. ಇದನ್ನು ಷ.ಶೆಟ್ಟರ್ ಅವರು 'ಪೆರ್' ಎಂದರೆ ಹಿರಿಯ 'ಜರಿಪು' ಎಂದರೆ ಜರಿ ರುಮಾಲು, ಎಂಬ ಅರ್ಥವನ್ನು ನೀಡಿ 'ಜರಿಪೇಟ'ವನ್ನು ತೊಡಿಸುವ ಸನ್ಮಾನವಿರಬಹುದೆಂದು ಅಭಿಪ್ರಾಯ ಪಟ್ಟಿದ್ದಾರೆ[೧]. ಅಲ್ಲದೆ ಅವರಿಗೆ 'ಬಳ್ಳಿಗವರ್ತ್ತೆ ಇಲ್ಲ' ಎನ್ನುವ ಮತ್ತೊಂದು ವಿಚಾರವನ್ನು ಶಾಸನವು ತಿಳಿಸುತ್ತದೆ. ಬಳ್ಳಿಗವರ್ತ್ತೆ ಎಂಬುದು ತಾಂಬೂಲಕ್ಕೆ ವಿಧಿಸಲಾಗುತ್ತಿದ್ದ ಸುಂಕ. ಈ ಸುಂಕದ ವಿನಾಯಿತಿಯನ್ನೂ ಅರಸಿಯು ಅವರಿಗೆ ನೀಡಿದ್ದಳು. ಇಷ್ಟೇ ಅಲ್ಲದೆ ಈ ರೂವಾರಿಗಳಿಗೆ ಅನಿವಾರಿತಾಚಾರಿ, ತ್ರಿಭುವನಾಚಾರಿ ಎಂಬ ಬಿರುದುಗಳನ್ನೂ ನೀಡಿ ಸನ್ಮಾನಿಸಲಾಗಿದೆ. 'ಅನಿವಾರಿತ' ಎಂಬುದು ವಿಕ್ರಮಾದಿತ್ಯನ ಬಿರುದಾಗಿದ್ದು, ಪತಿಯ ಬಿರುದನ್ನು ತನ್ನ ನೆಚ್ಚಿನ ಕಲಾವಿದನಿಗೆ ರಾಣಿಯು ನೀಡಿರುವುದು ಅವಳ ಕಲಾಭಿಮಾನದ ಪರಾಕಾಷ್ಠೆಯನ್ನು ತಿಳಿಸುತ್ತದೆ. ಪತಿಯ ಬಿರುದುಗಳನ್ನು ತಾವು ಮೆಚ್ಚಿದ ಶ್ರೇಷ್ಠವ್ಯಕ್ತಿಗಳಿಗೆ ನೀಡುವುದು ವಿಶೇಷ ಸನ್ಮಾನಗಳಲ್ಲಿ ಒಂದಾಗಿತ್ತೆಂದು ತೋರುತ್ತದೆ. ನೊಳಂಬ ಅರಸಿಯೂ ಕೂಡ ಇಂತಹ

ಸನ್ಮಾನ ಮಾಡಿದ ಸಂದರ್ಭವನ್ನು ನೋಡಬಹುದು[೨]. ವೀರನೊಳಂಬಾಧಿರಾಜ ಪೊನ್ನೇರರಸನ ಧರ್ಮಮಹಾರಾಣಿಯು ಸಿಂಗಪೋತರಸನನ್ನು 'ಪೊನೇಜದೊಡ್ಡ'ರೆನ್ದು ಕರೆದು ಕಡಗಮಿಟ್ಟು ಸನ್ಮಾನಿಸಿದಳು. ಕಡಗವನ್ನಿಟ್ಟು ಸನ್ಮಾನಿಸುವುದೂ ಕೂಡ ಒಂದು ವಿಶೇಷ ಸನ್ಮಾನವಾಗಿತ್ತು. ಇದೇ ಅರಸಿಯು ಮುಖರಾಮರ್ ಎಂಬುವನಿಗೆ 'ಶ್ರೀಮುಖದೊಡ್ಡ'ನೆಂದು ಕರೆದು ಕಡಗಮಿಟ್ಟು ಸನ್ಮಾನಿಸಿರುವುದನ್ನೂ ಇದೇ ಶಾಸನವು ತಿಳಿಸುತ್ತದೆ. ಸನ್ಮಾನಮಾಡಿ ತೊಡಿಸುತ್ತಿದ್ದ ಕಡಗವನ್ನು ಕೆಲವೆಡೆ ತೊಡರ್ ಎಂದೂ ಕರೆಯಲಾಗಿದೆ.

ಹೀಗೆ ಸನ್ಮಾನಗಳನ್ನು, ಬಿರುದು ನೀಡುವುದು; ಸುಂಕ ವಿನಾಯಿತಿ ತೋರುವುದು, ಕಡಗ ತೊಡಿಸುವುದು, ನಗ–ನಾಣ್ಯ ಭೂಮಿ ವಾಹನ ಮೊದಲಾದವುಗಳನ್ನು ಕೊಡುವುದರ ಮೂಲಕ ನಡೆಸಲಾಗುತ್ತಿತ್ತು. ಗಂಗ ಮಾರಸಿಂಹನ ಅಜ್ಜಿ ಬುಜಬ್ಬರಸಿಯು ಕ್ರಿ.ಶ.೯೭೫ರಲ್ಲಿ ಧಾರವಾಡ ಜಿಲ್ಲೆಯ ಹೆಬ್ಬಾಳಿನಲ್ಲಿ ಒಂದು ದೇವಾಲಯವನ್ನು ಕಟ್ಟಿಸಿ, ಇಲ್ಲಿ ವಾದ್ಯಗಾರ (ಪಜೆಯೊಯ್ವಂ) ದೇಗುಲದ ಸೂಳೆಯರು, ಪಾತ್ರದವರು, ಕಹಳೆಯವನು, ಮುಂತಾದವರಿಗೆ ದತ್ತಿಗಳನ್ನು ಕೊಟ್ಟಿರುವುದಲ್ಲದೆ ಕಾಲಕಾಲಾಂತರದೊಳ್ ಇವರ ಸಂತತಿಗೆ ಸೇರುವಂತೆ ಪ್ರತಿಪಾಳಿಸುವುದು ಎಂಬ ಆಜ್ಞೆಯನ್ನೂ ಹೊರಡಿಸಿದ್ದಾಳೆ. ಇವಳು ನೀಡಿರುವ ದಾನದ ವಿವರಗಳನ್ನೂ, ಇವಳ ಆಜ್ಞೆಯನ್ನೂ ರಚಿಸಿದ ಶಾಸನ ಬರಹಗಾರ ಕಮ್ಮರ ಕೇತೋಜನಿಗೆ ಎರಡು ಮತ್ತರು ಭೂಮಿಯನ್ನು ನೀಡಿದ ವಿವರವನ್ನೂ ಈ ಶಾಸನ ನೀಡುತ್ತದೆ[೩].

ಅರಸಿಯರಿಂದ ಸನ್ಮಾನಿತರಾದ ಬರಹಗಾರರ ಕುರಿತಾದ ಇನ್ನೂ ಕೆಲವು ನಿದರ್ಶನಗಳನ್ನು ಕಾಣಬಹುದು. ೧೦ನೆಯ ಶತಮಾನದಲ್ಲಿ ಚಿತ್ರದುರ್ಗದ ಕೆಲವು ಪ್ರದೇಶಗಳನ್ನಾಳುತ್ತಿದ್ದ ರಾಷ್ಟ್ರಕೂಟರ ಸಾಮಂತ ಬದ್ದೆಗರಸನ ರಾಣಿ ಸುಗ್ಗಿಯಬ್ಬರಸಿಯು ಕ್ರಿ.ಶ.೯೨೯ರಲ್ಲಿ ತಾನು ನೀಡಿದ ದಾನದ ವಿಚಾರವನ್ನು ತಿಳಿಸುವ ತಾಮ್ರಶಾಸನವನ್ನು ಹೊರಡಿಸಿದ್ದಾಳೆ[೪]. ನಲವತ್ತೊಂದು ಸಾಲುಗಳ ಈ ಗದ್ಯ ಶಾಸನವನ್ನು ಚಾವಯ್ಯನೆಂಬುವವನಿಂದ ಬರೆಯಿಸಿದ್ದಾಳೆ. ಈ ಕಾಲದ ತಾಮ್ರಶಾಸನಗಳು ಸಾಧಾರಣವಾಗಿ ಸಂಸ್ಕೃತದಲ್ಲಿ ಬರೆಯಲ್ಪಟ್ಟು ದಾನ ನೀಡಿದ ಭೂಮಿಯ ಮೇರೆಯನ್ನು ಮಾತ್ರ ಕನ್ನಡದಲ್ಲಿ ಉಲ್ಲೇಖಿಸುವುದು ಕಂಡು ಬರುತ್ತದೆ. ಆದರೆ ಸುಗ್ಗಿಯಬ್ಬರಸಿಯ ಈ ತಾಮ್ರಶಾಸನವು ಹತ್ತನೆಯ ಶತಮಾನದಲ್ಲಿ ಅರಸಿಯೊಬ್ಬಳು ಕನ್ನಡದಲ್ಲಿ ಬರೆಯಿಸಿದ ತಾಮ್ರಪತ್ರ ಎಂಬ ವಿಶೇಷತೆಯನ್ನು ಪಡೆದಿದೆ[೫]. ಈ ಶಾಸನವನ್ನು ಬರೆದುದಕ್ಕಾಗಿ ಅರಸಿಯು ಚಾವಯ್ಯನಿಗೆ ಕೆರೆಯ ಮೊದಲ ಏರಿಯಲ್ಲಿ ೩೦ ಗುಳ ತೋಟವನ್ನು ಮತ್ತು ಮೂರು ಖಂಡುಗ ಗದ್ದೆಯನ್ನು ಕೊಟ್ಟು ಸನ್ಮಾನಿಸಿದ್ದಾಳೆ. ಇಂತಹ ಸನ್ಮಾನಗಳನ್ನು ಸಾಹಿತ್ಯಿಕ ಕೊಡುಗೆಗಳಾಗಿ ಕೊಡುತ್ತಿದ್ದ ಉದಾಹರಣೆಗಳನ್ನೂ ಕಾಣಬಹುದು. ಕಲ್ಯಾಣಿ ಚಾಲುಕ್ಯ ದೊರೆ ಸೋಮೇಶ್ವರನ ಅರಸಿ ರಾಯಚೂರಿನ ಮಾನ್ವಿ ಬಳಿಯ ಮಾಳಾಪುರದ ದೇಗುಲದಲ್ಲಿ ಗೀತ–ನೃತ್ಯ–ವಾದ್ಯದವರಿಗೆ ದಾನ ನೀಡಿರುವುದಲ್ಲದೆ ಈ ವಿಚಾರವನ್ನು ಶಾಸನರೂಪದಲ್ಲಿ ರಚಿಸಿದ ಕಸಿಗವೋಜ ಎಂಬುವವನಿಗೂ ದಾನ ನೀಡಿದ್ದಾಳೆ[೬].

**ಸಾಹಿತ್ಯರಚನೆಗೆ, ಕವಿಗಳಿಗೆ ಅರಸಿಯರ ಪ್ರೋತ್ಸಾಹ**

ಪ್ರಾಚೀನ ಕನ್ನಡ ಸಾಹಿತ್ಯದ ಅದೆಷ್ಟೋ ಕೃತಿಗಳು ಇಂದಿಗೆ ಅಲಭ್ಯವಾಗಿವೆ. ಕೇವಲ ಉಲ್ಲೇಖಗಳು ಮಾತ್ರ ದೊರಕುವ ಇಂಥ ಕೃತಿಗಳಲ್ಲಿ ಅರಸಿಯರ ಪ್ರೋತ್ಸಾಹದಿಂದ ರಚಿತವಾಗಿರುವ, ಅರಸಿಯರ ಕುರಿತಾದ ಮಾಹಿತಿ ನೀಡಬಲ್ಲ ಕೃತಿಗಳೂ ಸೇರಿವೆ. ಹನ್ನೆರಡನೆಯ ಶತಮಾನದಲ್ಲಿ ಗುತ್ತಲ ವಂಶದ ಅರಸಿ ವೀರ ವಿಕ್ರಮಾದಿತ್ಯನ ಸೊಸೆಯೂ ಇಮ್ಮಡಿ ಗುತ್ತನ ರಾಣಿ**ಪದ್ಮಲದೇವಿ**ಯು ಕವಿಗಳಿಗೆ ಆಶ್ರಯ ನೀಡಿದ್ದಳೆಂಬ ವಿಚಾರ ಶಾಸನದ ಉಲ್ಲೇಖದಿಂದ ತಿಳಿದುಬರುವುದಾದರೂ[೭] ಕೃತಿಯಾಗಲೀ, ಕವಿಯ ವಿಚಾರವಾಗಲೀ ತಿಳಿದುಬಂದಿಲ್ಲ.

ನಿಪ್ಪಾಣಿ ಪ್ರದೇಶದಲ್ಲಿ ಆಳ್ವಿಕೆ ನಡೆಸುತ್ತಿದ್ದ ಕಲ್ಯಾಣಿ ಚಾಲುಕ್ಯ ಅರಸಿ **ಸೋಮಲದೇವಿ**ಯು ಕ್ರಿ.ಶ.೧೦೩೭ರಲ್ಲಿ ಸರಸ್ವತಿ ವಿಗ್ರಹವನ್ನು ಪ್ರತಿಷ್ಠೆ ಮಾಡಿಸಿ ಆ ದೇವಾಲಯಕ್ಕೆ ದತ್ತಿ ಬಿಟ್ಟುಕೊಟ್ಟಿದ್ದಾಳೆ. ಈ ವಿಚಾರವನ್ನು ತಿಳಿಸುವ ಶಾಸನವು **ದುರ್ಗಸಿಂಹನನ್ನು** ಈಕೆಯ ಮನೆವೆರ್ಗಡೆ ಎಂದು ಕರೆದಿದೆ[೮].

ಸೋಮಲಾದೇವಿಯ ಪತಿ ಚಾಲುಕ್ಯ ಜಯಸಿಂಹನ ಸಂಧಿವಿಗ್ರಹಿ ಹಾಗೂ ಆಸ್ಥಾನ ಕವಿಯಾಗಿದ್ದ, ಕನ್ನಡದ ಪ್ರಸಿದ್ಧ ಕೃತಿ 'ಕರ್ನಾಟಕ ಪಂಚತಂತ್ರ'ವನ್ನು ರಚಿಸಿರುವ ಕವಿ ದುರ್ಗಸಿಂಹನೂ ಇದೇ ಕಾಲದವನಾಗಿದ್ದಾನೆ. "ಈ ಇಬ್ಬರೂ ಅಭಿನ್ನರು. ರಾಜನ ಆಸ್ಥಾನಕ್ಕೆ ಸೇರುವ ಮುನ್ನ ದುರ್ಗಸಿಂಹನು ರಾಣಿಯ ಮನೆವೆರ್ಗಡೆಯಾಗಿ ಕಾರ್ಯ ನಿರ್ವಹಿಸುತ್ತಿದ್ದು, ಈತನ ಸಾಮರ್ಥ್ಯವನ್ನರಿತ ದೊರೆ ಇವನನ್ನು ತನ್ನ ಆಸ್ಥಾನಕ್ಕೆ ಆಹ್ವಾನಿಸಿರುವ ಸಾಧ್ಯತೆಯಿದೆ" ಎಂದು ಹನುಮಾಕ್ಷಿ ಗೋಗಿಯವರು ಅಭಿಪ್ರಾಯ ಪಡುತ್ತಾರೆ[೯].

'ಕರ್ನಾಟಕ ಪಂಚತಂತ್ರ'ದ ರಚನೆಯ ಕಾಲ ಕ್ರಿ.ಶ.೧೦೩೩ ಎಂದು ತಿಳಿದು ಬರುತ್ತದೆ. ಇದೇ ಕಾಲದವಳಾದ ಅರಸಿ ಸೋವಲಾದೇವಿ ಹಾಗೂ ಪಂಚತಂತ್ರದ ಕರ್ತೃ ದುರ್ಗಸಿಂಹರು ಸಮಕಾಲೀನರೆನ್ನುವುದರಲ್ಲಿ ಅನುಮಾನವಿಲ್ಲ. ಆದರೆ ದುರ್ಗಸಿಂಹನು ಒಂದುಬಾರಿಯಾದರೂ ಅರಸಿಯನ್ನು ತನ್ನ ಕೃತಿಯಲ್ಲಿ ಸ್ಮರಿಸಿಲ್ಲ. ಸೋವಲದೇವಿಯ ಮನೆವೆರ್ಗಡೆಯೇ ಪಂಚತಂತ್ರದ ಕರ್ತೃ ಎನ್ನಲು ಮತ್ತಷ್ಟು ಆಧಾರಗಳ ಅಗತ್ಯವಿದೆ. ಅಂತೆಯೆ ಹನುಮಾಕ್ಷಿ ಗೋಗಿಯವರ ಅಭಿಪ್ರಾಯವನ್ನು ನಿರಾಕರಿಸಲೂ ಆಗದು. ಕವಿ ರನ್ನನು ಅನೇಕ ದೊರೆಗಳ ಪೋಷಣೆಯಲ್ಲಿ ಹಂತ ಹಂತವಾಗಿ ಬೆಳೆದಂತೆ, ದುರ್ಗಸಿಂಹನೂ 'ಪಂಚತಂತ್ರ' ಕೃತಿ ರಚನೆಗೂ ಮೊದಲು ಅರಸಿ ಸೋಮಲಾದೇವಿಯ ಪೋಷಣೆಯಲ್ಲಿದ್ದಿರುವ ಸಾಧ್ಯತೆ ಇದೆ.

ಕನ್ನಡದ ಪ್ರಾಚೀನ ಸಾಹಿತ್ಯವನ್ನು ಶಾಸನಗಳಲ್ಲಿ ಗುರುತಿಸುವಂತೆ, ಪ್ರಾಚೀನ ಕರ್ನಾಟಕದ ರಾಣಿಯರ ಸಾಹಿತ್ಯ ಪೋಷಣೆ (ಬರೆಯಿಸಿರುವ ಸಾಹಿತ್ಯ, ಪೋಷಿತ ಕವಿ)ಗಳನ್ನೂ ಶಾಸನಗಳಲ್ಲಿಯೇ ಗುರುತಿಸಬೇಕಾಗಿದೆ. "ಕೃತಿಗಳು ಲಭ್ಯವಿರುವ ಕವಿಗಳಿಗಿಂತ ಪ್ರತಿಭೆಯಲ್ಲಿ ದೊಡ್ಡವರಾದ ಅನೇಕ ಕವಿಗಳು ಕನ್ನಡ ಶಾಸನಗಳನ್ನುರಚಿಸಿದ್ದಾರೆ"[೧೦] ಇಂತಹ ಕವಿಗಳಿಗೆ ಪೋಷಣೆ ನೀಡಿ ಸಾಹಿತ್ಯ ರಚನೆಗೆ ಮುಂದಾದ ಕೆಲವು ಅರಸಿಯರನ್ನಿಲ್ಲಿ ಗಮನಿಸಬಹುದು.

ಈ ಅಧ್ಯಾಯದಲ್ಲಿ, ಕಾಲಾನುಕ್ರಮದಲ್ಲಿ ವಿಭಿನ್ನ ಮನೆತನದ ಹಾಗೂ ವಿಭಿನ್ನ ಕಾಲಕ್ಕೆ ಸೇರಿದ ಅರಸಿಯರ ಕೊಡುಗೆಗಳನ್ನು ಗಮನಿಸಲಾಗಿದೆ. ಶಾಸನಕವಿಗಳು ಹಾಗೂ ಅವರ ಕಾವ್ಯದಲ್ಲಿ ಬಿಂಬಿತರಾಗಿರುವ ಅವರ ಪೋಷಿತ ಅರಸಿಯರ ವಿಚಾರವನ್ನು ವಿವರಣಾತ್ಮಕವಾಗಿ ಗಮನಿಸಲಾಗಿದೆ.

### ಸತ್ತರ ವಂಶದ ಜಕ್ಕಿಯಬ್ಬೆ

ನಾಗರಖಂಡ ಎಪ್ಪತ್ತನ್ನು ಆಳಿದ (ಕ್ರಿ.ಶ.೯೧೨–೯೧೮) ಗಾವುಂಡಿ ಜಕ್ಕಿಯಬ್ಬೆಯು, ಸತ್ತರ ವಂಶದ ನಾಗಾರ್ಜುನನ ಮಡದಿ. ಸಾಂತರ ಒಂದು ಶಾಖೆಯೇ ಸತ್ತರವಂಶವೆಂಬ ಅಭಿಪ್ರಾಯವಿದೆ[೧೧]. ಇವಳು ದಾನ ನೀಡಿದ ವಿಚಾರದೊಂದಿಗೆ ಅವಳ ಆಳ್ವಿಕೆ, ಮಗಳಿಗೆ ನೀಡಿದ ಆಳ್ವಿಕೆಯ ಹಸ್ತಾಂತರ ಮೊದಲಾದ ವಿಚಾರವನ್ನು ತಿಳಿಸುವ ಶಾಸನವನ್ನು ಕವಿ ನಾಗವರ್ಮ ರಚಿಸಿದ್ದಾನೆ[೧೨].

ರಾಷ್ಟ್ರಕೂಟ ಕನ್ನರದೇವ (ಎರಡನೆಯ ಕೃಷ್ಣ)ನ ಕಾಲದಲ್ಲಿ ನಾಗರಖಂಡ ಎಪ್ಪತ್ತರ ಆಳ್ವಿಕೆ ನಡೆಸುತ್ತಿದ್ದ ನಾಗಾರ್ಜುನನು ಯುದ್ಧದಲ್ಲಿ ಮಡಿದಾಗ, ಅರಸನ ಆಣತಿಯಂತೆ ಆಡಳಿತದ ಚುಕ್ಕಾಣಿ ಹಿಡಿದ ಜಕ್ಕಿಯಬ್ಬೆಯು ಸಮಸ್ತ ಗಾವುಂಡರ ಕೋರಿಕೆಯಂತೆ ಆವುತಪುರವನ್ನು ಬಿಡಿಸಿಕೊಂಡು, ದೇವಾಲಯಕ್ಕೆ ದಾನ ನೀಡಿದ ವಿಚಾರವನ್ನೂ, ಇವಳು ಕೈಗೊಂಡ ವ್ರತದ ವಿಚಾರವನ್ನೂ ಕವಿ ನಾಗವರ್ಮನು ಈ ಶಾಸನದಲ್ಲಿ ಬಣ್ಣಿಸಿದ್ದಾನೆ.

**॥ಉತ್ತಮ ಪ್ರಭುಶಕ್ತಿಯುಕ್ತೆ ಜಿನೇನ್ದ್ರಶಾಸನಭಕ್ತೆ ಕಾನ್ತ್ಯಾತ್ತೆವಿಭ್ರಮೆ ಜಕ್ಕಿಯಬ್ಬೆ ಸಮನ್ತು ನಾಗರಖಣ್ಡಮೆ**
**ಪ್ಪತ್ತುಮಂ ವಧುವಾಗಿಯುಂ ನಿಜವೀರವಿಕ್ರಮ ಗರ್ಬ್ಬದಿಂ ಪೆತ್ತವಂ ಪ್ರತಿಪಾಲಿಸುತ್ತೊಸದಿಟ್ಟಳಿಟ್ಟವಸಾನದೊಳ್ ॥**

ನಾಗರಖಂಡ ಎಪ್ಪತ್ತಕ್ಕೆ ವಧುವಾಗಿ ಬಂದ (ನಾಗಾರ್ಜುನನ ಸತಿಯಾದ) ಜಕ್ಕಿಯಬ್ಬೆಯು ಉತ್ತಮ ಆಡಳಿತಗಾರ್ತಿಯೂ, ಜಿನಭಕ್ತೆಯೂ ಆಗಿ ತನ್ನ ಜೀವನದ ಕಡೆಯ ದಿನಗಳವರೆಗೂ ಆಳ್ವಿಕೆ ನಡೆಸುತ್ತಿದ್ದಳು.

ಜಕ್ಕಿಯಬ್ಬೆಯು ರೋಗದಿಂದ ಬಾಧಿತಳಾದಾಗ, ತನ್ನ ಮಗಳಿಗೆ ರಾಜ್ಯಾಧಿಕಾರದ ಜವಾಬ್ದಾರಿಯನ್ನು ನೀಡಿ ಮುಕ್ತಳಾಗಬಯಸಿದ್ದನ್ನು ಕವಿಯು "ತನುರುಜೆಯಂ ಪುದುಙ್ಗುಳಿಸೆ ಸಂಸ್ಕೃತಿ ಭೋಗಮಸಾರಮೆನ್ದು ನಿಚ್ಚಿನಿಸಿ ನಿಜಪ್ರಿಯಾತ್ಮಜೆಗೆಸನ್ತತಿಯಂ ಕರೆದಿತ್ತು" ಎಂದು ಆರಂಭವಾಗುವ ಪದ್ಯದಲ್ಲಿ ನಿರೂಪಿಸಿದ್ದಾನೆ. ಜಕ್ಕಿಯಬ್ಬೆಯು ಸಂಸಾರಭೋಗವು ನಿಸ್ಸಾರವೆನ್ನುವುದನ್ನು ಅರಿತು, ತನ್ನ ಇಳಿ ವಯಸ್ಸಿನಲ್ಲಿ ಮಗಳಿಗೆ ಜವಾಬ್ದಾರಿಯನ್ನು ಕೊಟ್ಟು ತಾನು ಜೀವನ್ಮುಕ್ತಿ ಪಡೆದ ವಿಚಾರವು ಸವಿಸ್ತಾರವಾಗಿ ಇಲ್ಲಿ ಬಣ್ಣಿತವಾಗಿದೆ.

**ಕವಿ ನಾಗವರ್ಮ್ಮ:** ಜಕ್ಕಿಯಬ್ಬೆಯ ಅಂತ್ಯಕಾಲದಲ್ಲಿ ಅಥವಾ ಅವಳ ಮಗಳ ಆಳ್ವಿಕೆಯ ಕಾಲದಲ್ಲಿ ರಚಿತವಾಗಿರುವ ಈ ಶಾಸನವನ್ನು ಬರೆದ ಕವಿ ತನ್ನನ್ನು "ಬರೆದೊಂ ನಾಗವರ್ಮ್ಮ" ಎಂದಷ್ಟೇ ಪರಿಚಯಿಸಿಕೊಂಡಿದ್ದಾನೆ. ಹತ್ತನೆಯ ಶತಮಾನದಲ್ಲಿ 'ಕರ್ಣಾಟಕ ಕಾದಂಬರಿ' ಕೃತಿ ರಚನಕಾರ ನಾಗವರ್ಮ ಇದೇ ಕಾಲದವನಾದರೂ ಇವರಿಬ್ಬರೂ ಒಬ್ಬನೇ ಎಂಬುದಕ್ಕೆ ಆಧಾರವಿಲ್ಲ.

೩೩ಸಾಲಿನ ಈ ಪುಟ್ಟ ಶಾಸನಪದ್ಯವು ಚಂಪೂ ಶೈಲಿಯಲ್ಲಿ ರಚಿತವಾಗಿದೆ. ಇಲ್ಲಿ ಎರಡು ಚಂಪಕಮಾಲಾವೃತ್ತ ಹಾಗೂ ಒಂದು ಮಲ್ಲಿಕಾಯುತಮಾಲಾವೃತ್ತದ ರಚನೆಗಳಿವೆ. ಜಕ್ಕಿಯಬ್ಬೆಯನ್ನು ಬಣ್ಣಿಸುವ ಪದ್ಯವೊಂದು ಕನ್ನಡದ ಕಾವ್ಯಗಳಲ್ಲಿ ಅಪರೂಪವಾಗಿ ಕಂಡುಬರುವ ಮಲ್ಲಿಕಾಯುತಮಾಲಾ ವೃತ್ತದಲ್ಲಿ ರಚಿತವಾಗಿದೆ. ನಾಲ್ಕುಸಾಲಿನ ಈ ವೃತ್ತದ ಪ್ರತಿ ಸಾಲಿನಲ್ಲಿನ ೧೮ ಅಕ್ಷರಗಳಲ್ಲಿ 'ರಸಜಜಭರ' ಮಾತ್ರಾಗಣಗಳು ಬರುವಂತೆ ರಚಿಸುವುದು ಮಲ್ಲಿಕಾಯುತಮಾಲಾವೃತ್ತದ ನಿಯಮವಾಗಿದೆ. "ರಂಸಜಂಜಭರಂ ಬರಲ್ ಮಲ್ಲಿಕಾಯುತಮಾಲೆಯಪ್ಪುದು"[೧೩] ಜಕ್ಕಿಯಬ್ಬೆಯ ಸಂಕ್ಷಿಪ್ತ ಪರಿಚಯ ನೀಡಿರುವ ಈ ಶಾಸನವು ಹತ್ತನೆಯ ಶತಮಾನದ ಕನ್ನಡ ಭಾಷೆಯನ್ನೂ ಕೆಲವೆಡೆ ಪೂರ್ವದ ಹಳಗನ್ನಡವೆಂದು ಗುರುತಿಸುವ ಮೋಹಸನ್ನೊಂ, ಮುದ್ದನ್ನಿಟಿಸಿದೊಂ, ಕೊಟ್ಟೊಳ್ ಮೊದಲಾದ ಶಬ್ದಪ್ರಯೋಗಗಳನ್ನು ಈ ಶಾಸನದಲ್ಲಿ ಗುರುತಿಸಬಹುದು.

## ಜಕ್ಕಿಯಬ್ಬೆ

ರಾಷ್ಟ್ರಕೂಟರ ಸಾಮಂತನಾದ ಮಂದಿಗನು ಕದಂಬಳಿಗೆ ಸಾವಿರವನ್ನು ಆಳ್ವಿಕೆ ನಡೆಸುತ್ತಿದ್ದ ಸಂದರ್ಭದಲ್ಲಿ ಈತನ ಅರಸಿ ಜಕ್ಕಿಯಬ್ಬೆಯು ಕಾಕಂಬಾಳ ಎಂಬಲ್ಲಿ ಬಸದಿಯೊಂದನ್ನು ನಿರ್ಮಿಸಿ, ದಾನ ನೀಡಿ ಶಾಸನವನ್ನು ಹಾಕಿಸಿದ್ದಾಳೆ[೧೪]. ಚಿತ್ರದುರ್ಗದ ತುರವನೂರಿನ ಬೇವಿನಹಳ್ಳಿ ಗ್ರಾಮದಲ್ಲಿನ ಶಾಸನವು ಸರಳ ಕಂದಪದ್ಯ ಹಾಗೂ ಎರಡು ವೃತ್ತಗಳಿಂದ ಕೂಡಿದ ಚಂಪೂ ಪ್ರಕಾರದ ಕಾವ್ಯವಾಗಿದೆ. ಈ ಶಾಸನವನ್ನು **ಸುಭಗ** ಎಂಬ ಕವಿಯು ರಚಿಸಿದ್ದಾನೆ.

ಶಾಸನವು ಜಕ್ಕಿಯಬ್ಬೆಯ ಪತಿ ಮಂದಿಗನನ್ನು ಪರಿಚಯಿಸಿ ಮುಂದಿನ ಎರಡು ಕಂದ ಪದ್ಯದಲ್ಲಿ ಅರಸಿಯನ್ನು ಕುರಿತು ಹೀಗೆ ಬಣ್ಣಿಸಿದೆ.

**ಆತನ ಸತಿ ಸಕಳ ಜಗ । ನ್ನೂತೆಗುಣವಂತೆ ಜಕ್ಕಿಸುನ್ದರಿ ನೆಗಟ್ಬಾ**
**ಖ್ಯಾತಿಯ ಕಾಕಂಬಾಟಿಗೊ । ಳ್ಮಾತೆಯೊಳೊಳ್ವೆಸೆಯೆ ಬಸದಿಯಂ ಮಾಡಿಸಿದಳ್ ॥**
**ಅನ್ತು ಸಮಸ್ತ ಗುಣಗಣಾಳಂ**
**ಕ್ರಿತೆ ಸಮ್ಯಕ್ತ ಧವಳೆ ಸುಜನವೆಡಂಗಿ ಸಹಜ ಸರ**
**ಸ್ವತಿ ವಿಳಾಸ ವಿದ್ಯಾದರಿ ಶ್ರೀ**
**ಮತ್ ಜಕ್ಕಿ ಸುಂನ್ದರಿಯರ್ಮ್ಮಾಡಿಸಿದ ಬಸದಿಗೆ ॥**

ಮಂದಿಗನ ಸತಿಯಾದ ಜಕ್ಕಿಸುಂದರಿಯು ಕಾಕಂಬಾಳದಲ್ಲಿ ಸುಂದರವಾದ ಬಸದಿಯನ್ನು ನಿರ್ಮಿಸಿದಳೆಂಬ ವಿಚಾರವನ್ನು ಈ ಮೊದಲನೆಯ ಕಂದಪದ್ಯ ತಿಳಿಸಿದೆ. ಮುಂದಿನ ಪದ್ಯದಲ್ಲಿ ಅರಸಿಯನ್ನು ಕವಿಯು ಗುಣಗಣಾಳಂಕ್ರಿತೆ, ಸಮ್ಯಕ್ತ ಧವಳೆ, ಸುಜನವೆಡಂಗಿ, ಸಹಜ ಸರಸ್ವತಿ, ವಿದ್ಯಾಧರಿ, ಸುಂದರಿ ಎಂದು ಕರೆದು ಅವಳ ಗುಣ, ವಿದ್ಯೆ, ಸೌಂದರ್ಯ, ಧಾರ್ಮಿಕ ಆಸಕ್ತಿಗಳನ್ನು ಬಣ್ಣಿಸಿದ್ದಾನೆ.

ಅರಸಿ ಜಕ್ಕಿಯಬ್ಬೆಯು ತಾನು ನಿರ್ಮಿಸಿದ ಬಸದಿಯನ್ನೂ ಅದರೊಂದಿಗೆ ಕೆಲವು ಭೂಮಿಯನ್ನೂ ರಾಮಚಂದ್ರ ಭಟ್ಟರ್‌ಗೆ ಸಕವರ್ಷ ೮೯೦ರ (ಕ್ರಿ.ಶ.೯೬೮) ಪ್ರಭವ ಸಂವತ್ಸರದ ಪುಷ್ಯ ಮಾಸದಲ್ಲಿ ನೀಡಿದ್ದಾಳೆ. ಈ ದಾನದ ವಿವರ ಅದಕ್ಕೆ ಹಾಕಿರುವ ಒಪ್ಪ, ಶಾಪಾಶಯ ಮೊದಲಾದವುಗಳನ್ನು ಕವಿಯು ಒಂದು ಕಂದ ಪದ್ಯ, ಎರಡು ಸಂಸ್ಕೃತ ಶ್ಲೋಕ ಹಾಗೂ ಗದ್ಯದಲ್ಲಿ ವಿವರಿಸಿದ್ದಾನೆ.

**ಕವಿ ಸುಭಗ:** ಈ ಶಾಸನದ ಕಡೆಯ ಒಂದು ಸಾಲಿನಲ್ಲಿ 'ಶ್ರೀ ಕುಮಾರ ಕೀರ್ತ್ತಿದೇವರ ಗುಡ್ಡಂ ಸುಬಗಂ ಬರೆದಂ' ಎಂದು ಕವಿಯು ತನ್ನ ಹೆಸರನ್ನು ನಮೂದಿಸಿದ್ದಾನೆ. ಈತ ತನ್ನನ್ನು ಕೀರ್ತ್ತಿದೇವರ ಗುಡ್ಡಂ ಎಂದು ಕರೆದುಕೊಂಡಿರುವುದು ಇವನು ಜೈನ ಮತಾನುಯಾಯಿ ಹಾಗೂ ಕೀರ್ತ್ತಿದೇವರ ಶಿಷ್ಯನಾಗಿದ್ದ ಎನ್ನುವುದು ತಿಳಿದು ಬರುತ್ತದೆ. ಶಾಸನದಲ್ಲಿ ಕಾಲವನ್ನು ನಮೂದಿಸಿರುವುದರಿಂದ ಈತನು ೧೦ನೆಯ ಶತಮಾನದಲ್ಲಿದ್ದವನು. ಇವಿಷ್ಟನ್ನುಳಿದು ಕವಿಯ ಮತ್ಯಾವ ವಿಚಾರವೂ ತಿಳಿದು ಬರುವುದಿಲ್ಲ.

### ಕಂಚಿಕಬ್ಬೆ

ಬೆಳಗಾವಿ ಜಿಲ್ಲೆಯ ಸವದತ್ತಿ ತಾಲ್ಲೂಕಿನ ಸೊಗಲದ ಕ್ರಿ.ಶ.ಸು.೯೮೦ಕ್ಕೆ ಸೇರಿದ ಶಾಸನವು[೧೫] ಬೆಳವಾಡಿಯ ಪ್ರದೇಶವನ್ನು ಪಾಲಿಸುತ್ತಿದ್ದ ಕರಿಯ ಕೇತಿಮಯ್ಯನ ಅರಸಿ ಕಂಚಿಕಬ್ಬೆಯು ದಾನ ನೀಡಿರುವ ವಿಚಾರವನ್ನು ತಿಳಿಸುತ್ತದೆ. ಕಂಚಿಕಬ್ಬೆಯ ಈ ಶಾಸನವನ್ನು ಕಮಲಾದಿತ್ಯನೆಂಬ ಕವಿಯು ರಚಿಸಿದ್ದಾನೆ.

ಕವಿಯು ಕಂಚಿಕಬ್ಬೆಯನ್ನು ಗಂಗರಾಶಿಯ ಗುಡ್ಡಿ (ಶಿಷ್ಯೆ) ಎಂದು ಕರೆದಿರುವುದರಿಂದ ಗಂಗರಾಶಿಯು ಕಂಚಿಕಬ್ಬೆಯ ಗುರುವಾಗಿದ್ದನೆಂದು ತಿಳಿದುಬರುತ್ತದೆ. ಕಂಚಿಕಬ್ಬೆಯು ಪರಹಿತಗುಣಚರಿತೆ, ಮಾತಾರತ್ನ ಎಂದು ಹೊಗಳಲ್ಪಟ್ಟಿದ್ದಾಳೆ.

ಕಂಚಿಕಬ್ಬೆಯ ವರ್ಣನೆ: ಕಂಚಿಕಬ್ಬೆಯು, ಕಪಟ ಮೊದಲಾದ ದುರ್ಗುಣಗಳಿಲ್ಲದ ನಿರ್ಮಲ ಮನಸ್ಸುಳ್ಳವಳೂ, ದಯೆ–ದಾನ–ಧರ್ಮ ಗುಣವನ್ನೂ ಹೊಂದಿದವಳೂ, ಗುರು–ದೈವಗಳ ಮೇಲೆ ಅಪಾರ ಭಕ್ತಿಯನ್ನು ಹೊಂದಿದವಳೆಂದು ಸಮಸ್ತ ಧರೆಯ ಜನರು ಹೊಗಳುತ್ತಿದ್ದಾರೆ ಎಂದು ಕವಿ ಕಮಲಾದಿತ್ಯನು ಬಣ್ಣಿಸಿರುವ ಚಂಪಕಮಾಲಾ ವೃತ್ತದ ಪದ್ಯ ಈ ಪ್ರಕಾರವಾಗಿದೆ

**ಹರಚರಣಾಬ್ಜಭೃಂಗಿ ಕಪಟೋದಯವರ್ಜ್ಜಿತ ನಿರ್ಮ್ಮಲಾಂಗಿ ಭಾ**
**ಸುರತರ ಮೂರ್ತ್ತಿ ನಿರ್ಮ್ಮಳಿನಕೀರ್ತ್ತಿ ದಯಾಪರೆ ದಾನಧರ್ಮ್ಮತ**
**ತ್ಪರಗುಣಯುಕ್ತೆ ದೇವಗುರುಭಕ್ತೆ ಸುಗೋತ್ರಪವಿತ್ರೆಯೆಂದು ವಿ**
**ಸ್ತರದೊಳೆ ಕೀರ್ತ್ತಿಕುಂ ವಸುಧೆ ಸಂತಸದಿಂದಮೆ ಕಂಚಿಕಬ್ಬೆಯ ॥**

**ಮಾರಾಜನ ಬೆಳವಾಡಿಯ**
**ಚಾರುಗುಣಂ ಕರಿಯ ಕೇತಿಮಯ್ಯನವಳು ವಿ**
**ಸ್ತಾರಗುಣಾಂಬುಧಿ ಧರ್ಮ್ಮದ**
**ಮೇರುವನಾ ಕಂಚಿಕಬ್ಬೆಯಂ ಪೊಗಳದರಾರ್ ॥ ಕಂ॥**

ಬೆಳವಾಡಿಯ ಪ್ರದೇಶವನ್ನು ಪಾಲಿಸುತ್ತಿದ್ದ ಕರಿಯ ಕೇತಿಮಯ್ಯನ ಅರಸಿ ಕಂಚಿಕಬ್ಬೆಯು ಗುಣದಲ್ಲಿ ವಿಸ್ತಾರವಾದ ಸಾಗರ, ಧರ್ಮದಲ್ಲಿ ಮೇರು ಪರ್ವತ, ಇಂತಹ ಕಂಚಿಕಬ್ಬೆಯನ್ನು ಹೊಗಳದವರು ಯಾರು ಎಂದು ಈ ಮೇಲಿನ ಪದ್ಯದಲ್ಲಿ ಹೊಗಳಿರುವ ಕವಿಯು ಇವಳ ಗೋತ್ರ, ಪರಹಿತಗುಣಗಳ ಪರಿಚಯವನ್ನು ಮತ್ತೊಂದು ಪದ್ಯದಲ್ಲಿ ಈ ಪ್ರಕಾರವಾಗಿ ತಿಳಿಸಿದ್ದಾನೆ.

**ಪರಹಿತಗುಣಚರಿತದ ಧನ**
**ಗರಗೋತ್ರದ ಕಂಚಿಯಬ್ಬೆ ಮಾತಾರತ್ನಂ**
**ಧರೆಗೆಸೆವ ದಾನಧರ್ಮದ**
**ಪರಿಣತಿಕೆಯೆ ಪಿರಿದು ಪರಮಮಾಹೇಶ್ವರಿಯೆ ॥ಕಂ**

ಸಾಧಾರಣವಾಗಿ ಶಾಸನವು ಪ್ರಾರ್ಥನಾ ಪದ್ಯದ ನಂತರ ಚಕ್ರವರ್ತಿಯನ್ನು ಸ್ತುತಿಸಿ, ಆ ನಂತರ ಅವನ ಕೈಕೆಳಗಿನ ದೊರೆ, ಸಾಮಂತ, ಪ್ರಾಂತಾಧಿಕಾರಿಯನ್ನು ಹೊಗಳಿ ಶಾಸನವನ್ನು ಹಾಕಿಸಿರುವ ಉದ್ದೇಶವನ್ನು ತಿಳಿಸುತ್ತದೆ. ಆದರೆ ಸೋಗಲದ ಈ ಶಾಸನದಲ್ಲಿ ಪ್ರಾರ್ಥನಾ ಪದ್ಯದ ನಂತರ ಕ್ಷೇತ್ರಪುರಾಣದ ವಿವರಣೆಯ ನಂತರ ಅರಸಿ ಕಂಚಿಕಬ್ಬೆಯ ಬಣ್ಣನೆ ಇದೆ. ಇದಾದ ನಂತರ ಅಂದಿನ ಚಕ್ರವರ್ತಿ ಕಲ್ಯಾಣಿ ಚಾಲುಕ್ಯ ತೈಲಪನನ್ನೂ, ಅವನ ಅಧೀನದಲ್ಲಿ ಆಳ್ವಿಕೆ ನಡೆಸುತ್ತಿದ್ದ ರಟ್ಟದೊರೆ ಕಾರ್ತವೀರ್ಯನನ್ನು ಸ್ತುತಿಸಿದೆ. ರಟ್ಟ ಕಾರ್ತವೀರ್ಯನ ಕೈಕೆಳಗೆ ಬೆಳವಾಡಿ ಪ್ರಾಂತ್ಯವನ್ನು ಪಾಲಿಸುತ್ತಿದ್ದ ಕರಿಯ ಕೇತಿಮಯ್ಯನನ್ನು ಕೇವಲ ಹೆಸರಿಸಿ ಈತನ ಅರಸಿ ಕಂಚಿಕಬ್ಬೆಯನ್ನು ಮಾತ್ರ ಕವಿ ಕೊಂಡಾಡಿರುವುದು ವಿಶೇಷವೆನಿಸುತ್ತದೆ.

"ಸ್ವಸ್ತಿ ಶಕವರ್ಷ ೯೦೨ನೆಯ ವಿಕ್ರಮ ಸಂವತ್ಸರದ ಆಷಾಡದಮವಾಸ್ಯೆ ಆದಿವಾರ ಸುರ್ಯಗ್ರಹಣ ನಿಮಿತ್ತದೊಳ್..... ಧನಗರ ಕಂಚಿಯಬ್ಬೆ" ಯು ಸೋಗಲದ ದೇವಸ್ಥಾನಕ್ಕೆ ನೀಡಿರುವ ದಾನದ ವಿವರವನ್ನು ತಿಳಿಸುವ ಈ ಶಾಸನವು ಒಂದು ಪುಟ್ಟ ಕಾವ್ಯದಂತಿದೆ. ಇದು ಕೇವಲ ದತ್ತಿ ಬಿಟ್ಟ ವಿಚಾರ ಮಾತ್ರ ತಿಳಿಸದೆ ಈ ಕ್ಷೇತ್ರ ಪುರಾಣವನ್ನೂ ಕಾವ್ಯರೂಪದಲ್ಲಿ ತಿಳಿಸುತ್ತದೆ.

ತ್ರೇತಾಯುಗದ ಕೊನೆಯಲ್ಲಿ ರಾವಣನ ನಚ್ಚಿನವರಾದ ಮಾಲಿ ಸುಮಾಲಿ ಎಂಬ ದೈತ್ಯರು ಇಲ್ಲಿ ದೇವರನ್ನು ಪ್ರತಿಷ್ಠಾಪಿಸಿ, ಸೋಲು (ಸೊಗಲ)–೩೦ನ್ನು ದೇವರಿಗೆ ದತ್ತಿಕೊಟ್ಟರೆಂದೂ ಅವರಿಂದಲೇ ದೇವರಿಗೆ 'ಸುವರ್ಣ ಮಹಾಕ್ಷಿದೇವ' ಎಂದೂ, ಊರಿಗೆ 'ಸುಮಾಲಿ' ಎಂದೂ ಹೆಸರಾಯಿತೆಂಬ ಸ್ಥಳಪುರಾಣದ ಕಥೆಯ ಉಲ್ಲೇಖ ಇಲ್ಲಿ ಬಂದಿದೆ. ಇಲ್ಲಿಯ ತಪೋವನ ವರ್ಣನೆ ಮನೋಹರವಾಗಿದೆ. 'ಪುಗಲ್' ಎಂಬ (ಪಾಪಿ ಮೊದಲಾದವರನ್ನು ಒಳಕ್ಕೆ ಬರಬೇಡಿ) ಕೋಗಿಲೆಯ ಕುಕಿಲಿನ ವರ್ಣನೆ ಆದಿಪಂಪನು ಮಾಡಿದ ವರ್ಣನೆಯನ್ನು ನೆನಪಿಸುತ್ತದೆ. ಹುಲಿಗಳು ಧರ್ಮಶ್ರವಣವನ್ನು ಎವೆ ಮಿಟುಕಿಸದೆಯೆ ಆಲಿಸುತ್ತಿವೆ ಎಂಬ ಬಣ್ಣನೆಯಿಂದ ಆ ಕ್ಷೇತ್ರದ ಮಹಿಮೆಯನ್ನು ಕವಿ ಉತ್ಪ್ರೇಕ್ಷೆಯಿಂದ ಕೊಂಡಾಡಿದ್ದಾನೆ.

ಕಂಚಿಕಬ್ಬೆಯ ದಾನಗುಣವನ್ನು ವಿಶೇಷವಾಗಿ ಕೊಂಡಾಡಿರುವ ಈ ಶಾಸನದಲ್ಲಿ 'ನಾಯಿಯ ಮಾಂಸವನ್ನು ಹೆಂಡದೊಡನೆ ತಲೆಬುರುಡೆಯಲ್ಲಿ ಬೇಯಿಸಿ ತಿನ್ನುವವರು ನೀಚರಲ್ಲ, ದತ್ತಾಪಹಾರ ಮಾಡುವವರು ನೀಚರು' ಎಂದು ಚಾಂಡಾಲೆ ಇಂದ್ರನಿಗೆ ತಿಳಿಹೇಳುವ ವಿಭಿನ್ನ ನಿರೂಪಣೆಯ ಶಾಪಾಶಯ ಈ ಶಾಸನ ಪದ್ಯದಲ್ಲಿ ಉತ್ತಮವಾಗಿ ಮೂಡಿಬಂದಿದೆ.

**ಮೇಳಿಸಿ ನಾಯಡಗಂ ಚಾಂ**
**ಡಾಳೆ ಕಪಾಳದೊಳೆ ಕಳ್ಳನೆಱೆದಡುತಂ ತ**
**ತ್ಕಾಳದೆ ಕೆಪ್ಪಿಂ ಮುಚ್ಚಿ ಸ**
**ಮಾಳೋಕದೊಳಿಂದ್ರನಾಕೆಯಂ ಬೆಸಗೊಣ್ಡಂ**

**ದೇವಸ್ವಂ ಬ್ರಹ್ಮಸ್ವಮ**
**ನಾವು...ನ್ದ ಪಾತಕನ ಪಾದರಜಂ**
**ಭಾವಿಸಲಭೋಜ್ಯಮೆನಲಾ**
**ದೇವಸ್ವಮನಳಿವನಿಂ ನಿಕೃಷ್ಟರುಮೊಳರೇ**

**ಕವಿ ಕಮಲಾದಿತ್ಯ:** ಈ ಶಾಸನ ಕಾವ್ಯವನ್ನು ರಚಿಸಿದವನು 'ಕವಿ ಕಮಲಾದಿತ್ಯ' ತನ್ನನ್ನು ಶಾಸನದಲ್ಲಿ ಈ ರೀತಿ ಪರಿಚಯಿಸಿಕೊಂಡಿದ್ದಾನೆ.

**ಭುವನಂ ವನನಿಧಿ ಸುರಗಿರಿ**
**ದಿವಕುಳಮಿನಚಂದ್ರರುಳ್ಳಿನಂ ಧರ್ಮ್ಮಮಿದು**
**ಧ್ರುವಮಾಗಿ ನಡೆಗೆ ಶಾಸನ**
**ಕವಿಕಮಳಾದಿತ್ಯ ರಚಿತಕಾವ್ಯಾದೇಶಂ॥**

ಈತ ತನ್ನನ್ನು 'ಕವಿತೇಶಮತ ಪ್ರಭಂಜನ' ಎಂದು ಕರೆದುಕೊಂಡಿದ್ದಾನೆ. ಇದು ಇವನಿಗಿದ್ದ ಬಿರುದಿರಬಹುದು. ಇದನ್ನು ಕುರಿತು ಮೇವುಂಡಿ ಮಲ್ಲಾರಿಯವರು "ಈತ ತನ್ನ ಸಮಕಾಲೀನ ಕವಿಯಾಗಿದ್ದಿರಬಹುದಾದ 'ಕವಿತೇಶ' ಎಂಬುವವನ ಮದಭಂಜಿಸಿ, ಹತಪ್ರಭವನಾಗಿ ಮಾಡಿ ಈ ಬಿರುದನ್ನು ಪಡೆದಿರಬಹುದು" ಎಂದು ಅಭಿಪ್ರಾಯ ಪಟ್ಟಿದ್ದಾರೆ[೧೬]. ಈ ಕವಿಯ ಇತರ ಕಾವ್ಯಗಳಾವುವೂ ದೊರೆತಿಲ್ಲ. ಕರ್ಣಾಟಕ ಕವಿಚರಿತೆಯಲ್ಲಿಯೂ ಕೂಡ ಈತನನ್ನು ಸೋಗಲದ ಸುವರ್ಣಾಕ್ಷಿ ದೇವಾಲಯದ ಶಾಸನ ರಚಿಸಿದ ಕವಿಯೆಂದಷ್ಟೇ ಪರಿಚಯಿಸಲಾಗಿದೆ[೧೭].

ಈ ಶಾಸನ ಪದ್ಯದಲ್ಲಿಯೇ ತನ್ನ ಪ್ರೌಢ ಕವಿತಾ ಸಾಮರ್ಥ್ಯವನ್ನು ತೋರಿರುವ ಈತ ಯಾವುದೇ ಪ್ರಸಿದ್ಧ ದೊರೆಯ ಆಸ್ಥಾನ ಕವಿಯಾಗಿದ್ದಂತೆ ತಿಳಿದುಬರುವುದಿಲ್ಲ. ಈ ವಿಚಾರವಾಗಿ ಗೋವಿಂದ ಪೈ ಅವರು "ಸೊಗಲದ ಶಾಸನದಲ್ಲಿ ಕಂಚಿಯಬ್ಬೆ.... ಶಾಸನವು ಆಗ್ಗೆ ಆ ನಾಡೊಡೆಯನಾಗಿದ್ದ... ರಟ್ಟ ಕಾರ್ತವೀರ್ಯನ ಹಾಗೂ ಅವನ ಅಧಿರಾಜನಾದ ಚಕ್ರವರ್ತಿ ಚಾಳುಕ್ಯ ತೈಲಪನ ಹೆಸರುಗಳನ್ನು ವಾಡಿಕೆಯ ಮೇರೆಗೆ ಹೇಳಿದೆಯಲ್ಲದೆ ... ಶಾಸನವು ಮೊದಲನೆಯ ಕಾರ್ತವೀರ್ಯನ ಸ್ವೀಯ ಶಾಸನವಲ್ಲ.... ಆದ ಕಾರಣ ಪ್ರೌಢಕವಿತಾಬದ್ಧವಾದ ಆ ಕನ್ನಡ ಶಾಸನವನ್ನು ರಚಿಸಿದ ಕವಿ ಕಮಲಾದಿತ್ಯನು ಸೊಗಲದತ್ತಣ ಯಾವೊಬ್ಬ ಹೆಸರುವಾಸಿಯಾದ ಕವಿಯಾಗಿರಬಹುದಲ್ಲದೆ, ಮೊದಲನೆಯ ಕಾರ್ತವೀರ್ಯನ ಆಸ್ಥಾನಕವಿಯಲ್ಲ"[೧೮] ಎಂದಿದ್ದಾರೆ. ರಾಜಮನ್ನಣೆಗಳಿಸದ, ಆಸ್ಥಾನ ಕವಿಯಲ್ಲದ ಕಮಲಾದಿತ್ಯನು ಸ್ಥಳೀಯ ಮಾಂಡಳೀಕನ ಅರಸಿಯೋರ್ವಳಿಂದ ನಿಯೋಜಿತನಾಗಿ, ಶಾಸನವನ್ನು ರಚಿಸಿ ತನ್ನ ಪ್ರೌಢಕವಿತಾ ಪ್ರದರ್ಶನಕ್ಕೆ ಅವಕಾಶ ಪಡೆದು ಪ್ರಾಚೀನ ಕನ್ನಡ ಕವಿಗಳ ಸಾಲಿನಲ್ಲಿ ನಿಂತಿದ್ದಾನೆ.

## ಅತ್ತಿಮಬ್ಬೆ

ದಾನಚಿಂತಾಮಣಿ, ಕವಿವರಕಾಮಧೇನು ಎಂಬ ಬಿರುದನ್ನು ಹೊಂದಿದ್ದ ಅತ್ತಿಮಬ್ಬೆಯು ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಬೀಳುವೃತ್ತಿಯಿಂದ ಆಳ್ವಿಕೆ ನಡೆಸುತ್ತಿದ್ದ ಮನೆತನಕ್ಕೆ ಸೇರಿದವಳಾಗಿದ್ದಾಳೆ. ಧಾರ್ಮಿಕ ಕಾರ್ಯ, ದಾನ–ದತ್ತಿ ನೀಡುವುದರಲ್ಲಿ ಕೊಡುಗೈ ಎನಿಸಿದ್ದಷ್ಟೇ ಅಲ್ಲದೆ ಯುದ್ಧಸಾಹಸಗಳಲ್ಲಿ, ಸೈನ್ಯವನ್ನು ಮುನ್ನಡೆಸುವಲ್ಲಿ ಸಹ ಇವಳ ಕಾರ್ಯ ವೈಖರಿ ಅಮೋಘವಾದುದೆನಿಸಿದೆ. ಈ ಎಲ್ಲಕ್ಕಿಂತ ಮುಖ್ಯವೆನಿಸುವ ವಿಚಾರವೆಂದರೆ, ಇವಳು ಪ್ರಾಚೀನ ಕನ್ನಡದ ತ್ರಿರತ್ನಗಳಲ್ಲೊಬ್ಬನಾದ ರನ್ನ ಕವಿಗೆ ಆಶ್ರಯ ನೀಡಿದವಳೂ ಹಾಗೂ 'ಅಜಿತನಾಥ ಪುರಾಣ' ಮಹಾಕಾವ್ಯ ರಚನೆಗೆ ಕಾರಣಳಾದವಳೂ ಆಗಿದ್ದಾಳೆ.

ಅತ್ತಿಮಬ್ಬೆಯು ಕ್ರಿ.ಶ.೯೫೦–೧೦೧೮ರವರೆಗೆ ಸುಮಾರು ೬೮ ವರ್ಷ ಬದುಕಿದ್ದಳೆಂದು ಹಂಪನಾ ಅವರು ವಿವಿಧ ಶಾಸನಗಳ ಆಧಾರದಿಂದ ತೋರಿಸಿದ್ದಾರೆ[೧೯]. ಇವಳ ಈ ಅವಧಿಯಲ್ಲಿ ಚಾಳುಕ್ಯ ಚಕ್ರವರ್ತಿಗಳಾದ ತೈಲಪ (೯೭೩–೯೭), ಇಱಿವಬೆಡಂಗ ಸತ್ಯಾಶ್ರಯ (೯೯೭–೧೦೦೮) ದಶವರ್ಮ, ಐದನೆಯ ವಿಕ್ರಮಾದಿತ್ಯ (೧೦೦೮–೧೦೧೪), ವಸುಧೈಕಮಲ್ಲ ಅಯ್ಯಣದೇವ ೨ (೧೦೧೪–೧೫), ಜಗದೇಕಮಲ್ಲ ಜಯಸಿಂಹ (೧೦೧೬–೧೦೪೨) ಇಷ್ಟೂಜನ ಚಕ್ರವರ್ತಿಗಳ ಗೌರವಕ್ಕೂ ಪಾತ್ರಳಾಗಿದ್ದಳು.

ಅತ್ತಿಮಬ್ಬೆ ಕಟ್ಟಿಸಿದ ಲಕ್ಕುಂಡಿಯ ಬ್ರಹ್ಮಜಿನಾಲಯಕ್ಕೆ ಕ್ರಿ.ಶ.೧೦೦೭–೦೮ರಲ್ಲಿ ಇರಿವ ಬೆಡಂಗ ಸತ್ಯಾಶ್ರಯ ಆಹವಮಲ್ಲನು ಚಕ್ರವರ್ತಿ ದತ್ತಿಯನ್ನು ನೀಡಿರುವುದಲ್ಲದೆ, ಸುವರ್ಣ ಕಳಶವನ್ನು ನೀಡಿದ್ದಾನೆ ಎಂಬ ವಿಚಾರವನ್ನು ಶಾಸನವು "ಸಕಳ ಗೂರ್ಜ್ಜರ ವಿಜಯಾನನ್ತರಂ ಶ್ರೀಮದಾಹವಮಲ್ಲದೇವಂಗೆ ಬಿನ್ನಪಂಗೆಯ್ದು ಚಕ್ರವರ್ತ್ತಿ ಪ್ರಖ್ಯಾತಮಪ್ಪ ಶಾಸನಮಂ ಪೊನ್ನ ಕಳಸಂ ಬೆರಸು ಪಡೆದಳು" ಎಂದು ತಿಳಿಸಿದೆ. ರನ್ನನು ತನ್ನ ಕಾವ್ಯದಲ್ಲಿ ಅತ್ತಿಮಬ್ಬೆಯನ್ನು ಕುರಿತು ತಿಳಿಸುತ್ತಾ, ಚಕ್ರವರ್ತಿ ತೈಲಪನಿಗೆ ಅತ್ತಿಮಬ್ಬೆಯು ತಾಯಿಯಂತಿದ್ದಳು ಎಂದಿದ್ದಾನೆ (ಅಜಿತ ಪು.೧–೫೧,೫೬,೫೮).

**ಕಾವ್ಯ ಹಾಗು ಶಾಸನ ತಿಳಿಸುವ ಅತ್ತಿಮಬ್ಬೆಯ ವಿಚಾರ :** ಅತ್ತಿಮಬ್ಬೆಗೆ ದಾನಚಿಂತಾಮಣಿ ಎಂಬ ಬಿರುದಿನೊಂದಿಗೆ ಘಟಾಂತಿಕೆ, ಗುಣದಂಕಕಾರ್ತಿ, ಜಿನಧರ್ಮ ಪತಾಕೆ, ಕವಿವರ ಕಾಮಧೇನು ಮೊದಲಾದ ಬಿರುದುಗಳೂ ಪ್ರಖ್ಯಾತವಾಗಿದ್ದವು. ಈ ಅನೇಕ ಬಿರುದಾವಳಿಗಳನ್ನೂ, ಇವಳ ಪವಾಡ ಸದೃಶ ಜೀವನವನ್ನು ಬೇರೆಲ್ಲ ಶಾಸನಗಳಿಗಿಂತಲೂ ಲಕ್ಕುಂಡಿಯ ಶಾಸನ ಅತಿಶಯವಾಗಿ ಬಣ್ಣಿಸಿದೆ. ಲಕ್ಕುಂಡಿಯ ಶಾಸನ ಒಂದು ಪುಟ್ಟ ಕಾವ್ಯದಂತಿದೆ. ರನ್ನನೇ ರಚಿಸಿರುವನೆಂದು ವಿದ್ವಾಂಸರು ಅಂತರ್ಸಾಕ್ಷಿಗಳಿಂದ ದೃಢಪಡಿಸಿದ್ದಾರೆ. ಈ ಶಾಸನವು ಎರಡು ಪ್ರತಿಗಳಲ್ಲಿ ಶಿಲೆಯಲ್ಲಿ ದೊರಕುವುದೊಂದು ವಿಶೇಷ. ಮೂಲ ಪಾಠವಿರುವ ಶಾಸನವು ತ್ರುಟಿತವಾದ ಕಾರಣ ಮತ್ತೊಂದು ಶಿಲೆಯ ಮೇಲೆ ಬಾಹುಬಲಿ ಎಂಬುವವನು ಅದರ ನಕಲನ್ನು ರಚಿಸಿ ಅದರೊಂದಿಗೆ ಮತ್ತಷ್ಟು ವಿಚಾರವನ್ನು ತಿಳಿಸಿ, ತನ್ನ ಶಾಸನವು ಪ್ರಾಚೀನ ಶಾಸನ ಪಾಠದ ನಕಲೆಂಬುದನ್ನೂ ತಿಳಿಸಿದ್ದಾನೆ.

ಕವಿ ರನ್ನನೇ ರಚಿಸಿದ್ದಾನೆಂದು ಚರ್ಚಿಸಲಾಗುವ ಲಕ್ಕುಂಡಿ ಶಾಸನವು ಅತ್ತಿಮಬ್ಬೆಯ ಗುಣಗಾನ ಮಾಡುವುದಲ್ಲದೆ, ಅವಳ ಪವಾಡ ಸದೃಶ ಜೀವನದ ಚಿತ್ರಣವನ್ನು ನೀಡಿದೆ. ಪುರಾಣ ಪ್ರಸಿದ್ಧರಾದ ಮರುದೇವಿ, ವಿಜಯಸೇನೆ, ಸುಷೇಣೆ, ಶಿವದೇವಿ, ಸುಶೀಲೆ, ರುಕ್ಮಿಣಿ, ಸತ್ಯಭಾಮೆ, ರೋಹಿಣಿ, ಅರುಂಧತಿಯರು ಮಾತ್ರ ಅತ್ತಿಮಬ್ಬೆಗೆ ಸಮಾನರು. ಗುಣದ ಅಂಕಕಾರ್ತಿಯಾದ ಅವಳಿಗೆ ಉಳಿದ ಹೆಣ್ಣುಗಳು ಸಮಾನರಾಗುತ್ತಾರೆಯೇ ಎಂದು ಕವಿ ಉದ್ಗರಿಸಿದ್ದಾನೆ.

ಶಾಸನವು ಅತ್ತಿಮಬ್ಬೆಯ ಮಹಾಪ್ರಭಾವವನ್ನೂ ಪವಾಡ ಸದೃಶ ಜೀವನವನ್ನು ನಿರೂಪಿಸಿದೆ. ರನ್ನನು ಅತ್ತಿಮಬ್ಬೆಯನ್ನು ಅಜಿತಪುರಾಣದಲ್ಲಿ ರೋಹಿಣಿ ಯಕ್ಷಿಗೆ ಹೋಲಿಸಿದ್ದಾನೆ (೧–೧೪). ಅದೇರೀತಿ ಲಕ್ಕುಂಡಿ ಶಾಸನದಲ್ಲಿಯೂ[೨೦] ರೋಹಿಣಿ ಶಾಸನದೇವಿಗೆ ಹೋಲಿಕೆ ಮಾಡಲಾಗಿದೆ. ಜೈನ ಪುರಾಣದಲ್ಲಿ ರೋಹಿಣಿಯು ಎರಡನೆಯ ತೀರ್ಥಂಕರ ಅಜಿತನಾಥನ ಯಕ್ಷಿ. ಅತ್ತಿಮಬ್ಬೆಯು ಅಜಿತನಾಥ ತೀರ್ಥಂಕರನ ಭಕ್ತೆಯಾಗಿದ್ದು, ರನ್ನನಿಂದ ಅಜಿತನಾಥ ಪುರಾಣವನ್ನು ಬರೆಸಿದ್ದಾಳೆ.

ಅತ್ತಿಮಬ್ಬೆಯ ಕಾಲಾನಂತರದಲ್ಲಿದ್ದ ಕವಿ ಬ್ರಹ್ಮಶಿವ ಕೂಡ ತನ್ನ ಕಾವ್ಯದಲ್ಲಿ ಅತ್ತಿಮಬ್ಬೆಯ ಕುರಿತಾಗಿ ತಿಳಿಸಿದ್ದಾನೆ.

**ಕಾವ್ಯರಚನೆಗೆ ಪ್ರೋತ್ಸಾಹ:** ಅತ್ತಿಮಬ್ಬೆಯು ಕವಿಗಳಿಗೆ, ಪಂಡಿತರಿಗೆ ಆಶ್ರಯ ನೀಡಿ ಕವಿವರಕಾಮಧೇನು, ಬುಧಜನವಂದಿತೆ ಎಂಬ ಅಭಿದಾನಗಳನ್ನು ಪಡೆದಿದ್ದಳು. ರನ್ನಕವಿಯು ಚಾಲುಕ್ಯರ ಆಶ್ರಯಕ್ಕೆ ಬರುವ ಮೊದಲು ಚಾವುಂಡರಾಯನ ಆಶ್ರಯದಲ್ಲಿದ್ದು, ಆನಂತರ ಅತ್ತಿಮಬ್ಬೆಯ ಪೋಷಣೆಯಲ್ಲಿ ಬೆಳೆದಂಥ ಕವಿ. 'ಸಾಹಸ ಭೀಮ

ವಿಜಯಂ' ದಂಥ ಮೇರು ಕೃತಿಯನ್ನು ರನ್ನನು ಚಾಲುಕ್ಯ ಚಕ್ರವರ್ತಿಗಳ ಆಶ್ರಯಕ್ಕೆ ಬಂದ ನಂತರ ರಚಿಸಿದ್ದಾನೆ. ಚಾಲುಕ್ಯರ ಆಶ್ರಯಕ್ಕೆ ರನ್ನನನ್ನು ಕರೆದೊಯ್ದುದೇ ಅತ್ತಿಮಬ್ಬೆ. ರನ್ನನ ಮಹತ್ಕೃತಿಯಾದ 'ಸಾಹಸಭೀಮ ವಿಜಯಂ' ಕೃತಿಗೆ ಪರೋಕ್ಷವಾಗಿ ಅತ್ತಿಮಬ್ಬೆ ಕಾರಣಳಾದರೆ, ಈತನ ಮತ್ತೊಂದು ಮೇರು ಕೃತಿ 'ಅಜಿತ ತೀರ್ಥಂಕರ ಪುರಾಣಂ' ಕೃತಿಯನ್ನು ನೇರವಾಗಿ ಅತ್ತಿಮಬ್ಬೆಯೇ ರನ್ನನಿಂದ ಬರೆಯಿಸಿದ್ದಾಳೆ. ಇದನ್ನು ಸ್ವಯಂ ರನ್ನನೇ ಅತ್ತಿಮಬ್ಬೆಯು "ಕವಿರತ್ನನಿಂದಿದಂ ಪೇಟೆಸಿದಳ್" ಎನ್ನುತ್ತಾ ತನ್ನ ಕೃತಿ ಅಜಿತನಾಥನ ಪುರಾಣವನ್ನು "ಆಶ್ರಿತ ಚಿಂತಾಮಣಿಗತ್ತಿಮಬ್ಬೆಗಟ್ತಿಯೆ ಪೇಟಿಸ್ವೆ" ಎಂದು ಆರಂಭಿಸಿದ್ದಾನೆ.

ಕವಿ ರನ್ನನು ತನ್ನ ಕಾವ್ಯರಚನೆಗೆ ಮೂಲ ಕಾರಣಳಾದ ಅತ್ತಿಮಬ್ಬೆಯ ಸಂಕ್ಷೇಪ ಜೀವನ ಚರಿತ್ರೆಯನ್ನು ತಿಳಿಸಿದ್ದಾನೆ. ಅತ್ತಿಮಬ್ಬೆಯ ಗುಣಗಾನ ಮಾಡಿ, ಅವಳ ತವರುಮನೆ ಹಾಗೂ ಮಾವನಮನೆಯನ್ನು ಪರಿಚಯಿಸಿದ್ದಾನೆ. ಅವಳ ತಂದೆ-ಚಿಕ್ಕಪ್ಪ ಕೂಡ ಕವಿಗಳಿಗೆ ಪಂಡಿತರಿಗೆ ಆಶ್ರಯ ನೀಡಿದವರು. ಇವರು ಪೊನ್ನನಿಂದ ಶಾಂತಿಪುರಾಣ ಬರೆಯಿಸಿದ ಹಾಗೆ ಅತ್ತಿಮಬ್ಬೆಯು ತನ್ನಿಂದ ಈ ಕೃತಿಯನ್ನು ಬರೆಯಿಸಿದ್ದಾಳೆ ಎಂದು ಈ ರೀತಿ ತಿಳಿಸಿದ್ದಾನೆ:

**ಪೊನ್ನಿಗನಿಂ ಮಲ್ಲಪನುಂ**
**ಪೊನ್ನನುಮರ್ತಿಯೆ ಪುರಾಣ ಚೂಡಾಮಣಿಯಂ**
**ಮುನ್ನಂ ಪೇಟೆಸಿದಂತೆ ಗು**
**ಣೋನ್ನತ ಕವಿರತ್ನನಿಂದಿದಂ ಪೇಟೆಸಿದಳ್॥**

ಅತ್ತಿಮಬ್ಬೆಯ ತಂದೆ ಮಲ್ಲಪಯ್ಯನನ್ನು ಪೊನ್ನನು 'ಬುಧಜನ ವೃಂದಾರಕನನ್ ಈ ಪೊನ್' ಎಂದು ಹೊಗಳಿದ್ದಾನೆ (ಶಾಂತಿನಾಥ ಪುರಾಣ (೧೨-೬೨). ಇದನ್ನೇ ಅನುಸರಿಸುವಂತೆ ರನ್ನನು ಅತ್ತಿಮಬ್ಬೆಯನ್ನು 'ಬುಧಜನ ಪ್ರೀಣನಾಗ್ರೇಸರಗ್ರಾಮಣಿ' ಎಂದೂ ಅವರ ಮನೆಯನ್ನು 'ಪಂಡಿತ ಮಂಡಳಿಗೆ ತವರ್ಮನೆ' ಯಾಗಿತ್ತೆಂದೂ ಬಣ್ಣಿಸಿದ್ದಾನೆ (೧೨-೪೫, ೧-೨೮). ವಿದ್ವಾಂಸರಿಗೆ ಆನಂದವನ್ನು (ಪ್ರೀಣನ) ಉಂಟು ಮಾಡುವ ಅತಿ ಶ್ರೇಷ್ಟರಲ್ಲಿ (ಅಗ್ರೇಸರ) ಅತ್ತಿಮಬ್ಬೆಯು ಪ್ರಧಾನಳಾಗಿದ್ದಳು. ಹೀಗೆ ಅತ್ತಿಮಬ್ಬೆಯು ಅಂದಿನ ಕವಿವರರಿಗೆ ಕಾಮಧೇನುವಾಗಿದ್ದಳು, ಮತ್ತು ಬುಧಜನವಂದಿತೆಯಾಗಿದ್ದಳು (ಅಜಿತಪು: ೧-೫೪).

ಅತ್ತಿಮಬ್ಬೆಯ ಅಪ್ಪ ಚಿಕ್ಕಪ್ಪಂದಿರು ಪೊನ್ನಕವಿಯಿಂದ ಬರೆಯಿಸಿದ ಶಾಂತಿಪುರಾಣವನ್ನು ಅತ್ತಿಮಬ್ಬೆಯು ಒಂದು ಸಾವಿರ ಪ್ರತಿಗಳನ್ನಾಗಿ ಲಿಪಿಮಾಡಿಸಿ ಶಾಸ್ತ್ರದಾನ ಮಾಡಿದಳು.

ರನ್ನನು ಇಜೆವಬೆಡಂಗ ಸತ್ಯಾಶ್ರಯನನ್ನು ತಗುಳ್ಚಿ ರಚಿಸಿದ ಗದಾಯುದ್ಧವನ್ನು ಕ್ರಿ.ಶ.೯೮೨ರಲ್ಲಿ ಹಾಗೂ ಅಜಿತನಾಥ ಪುರಾಣವನ್ನು ಕ್ರಿ.ಶ.೯೯೩ರಲ್ಲಿ ರಚಿಸಿದ್ದಾನೆ. ಅಜಿತನಾಥ ಪುರಾಣವನ್ನು ರಚಿಸುವ ವೇಳೆಗಾಗಲೇ ರನ್ನನು ಚಾಲುಕ್ಯ ಚಕ್ರವರ್ತಿ ಇಜೆವಬೆಡಂಗ ಸತ್ಯಾಶ್ರಯನ ಆಸ್ಥಾನ ಕವಿಯಾಗಿದ್ದನು. ಆಸ್ಥಾನಕವಿಯಾಗಿದ್ದೂ, ತನ್ನ ಕೃತಿಯನ್ನು ದೊರೆಯ ಮಂತ್ರಿಯಾಗಿದ್ದ ಪಡೆವಳ ತೈಲನ ತಾಯಿ ಅತ್ತಿಮಬ್ಬೆಗೆ ಸಮರ್ಪಿಸಿ, ಕಾವ್ಯದಲ್ಲಿ ಮಿಗಿಲಾಗಿ ಅವಳ ಪ್ರಶಂಸೆಯನ್ನು ಮಾಡಿರುವುದು ಅತ್ತಿಮಬ್ಬೆಗೆ ರನ್ನನು ನೀಡಿದ ಸ್ಥಾನ ಹಾಗು ಅಂದಿನ ಸಮಾಜದಲ್ಲಿ ಅವಳಿಗಿದ್ದ ಪ್ರತಿಷ್ಠೆಯನ್ನು ತಿಳಿಸುತ್ತದೆ.

**ಅಜಿತನಾಥಪುರಾಣ**

ರನ್ನಕವಿ ವಿರಚಿತ 'ಅಜಿತ ತೀರ್ಥಂಕರ ಪುರಾಣತಿಲಕಂ' ಕೃತಿಯಲ್ಲಿ ಕವಿ ರನ್ನನು "ಆಶ್ರಿತ ಚಿಂತಾಮಣಿಗತ್ತಿಮಬ್ಬೆಗಟ್ತಿಯೆ ಪೇಟಿಸ್ವೆ" ಎನ್ನುತ್ತಾ ತನ್ನ ಆಶ್ರಯದಾತಳು ಅತ್ತಿಮಬ್ಬೆ ಎಂಬುದನ್ನು ಸ್ಪಷ್ಟವಾಗಿ

ತಿಳಿಸಿದ್ದಾನೆ. ಅಲ್ಲದೆ ಅಂತ್ಯದಲ್ಲಿ "ಶ್ರೀ ದಾನಚಿಂತಾಮಣಿ ವಿನಿರ್ಮಾಪಿತ" ಎಂದು ತನ್ನ ಕೃತಿಯನ್ನು ಅವಳಿಗೆ ಅರ್ಪಿಸಿದ್ದಾನೆ. ಇಷ್ಟೇ ಅಲ್ಲದೆ ರನ್ನನು ತನ್ನ ಆಶ್ರಿತದಾತೆಗೆ ಕೃತಜ್ಞತೆ ಸಮರ್ಪಿಸುತ್ತಾ "ನೆಗಟ್ದಿವರಿರ್ವರ ಪೆಸರ್ಗಂ ನೆಗಟ್ದುವು ತನ್ನೆರಡು ಮುದ್ದುಕೃತಿಗಳ್ ರಾಯಂ ಮಗನತ್ತಿಮಬ್ಬೆ ಮಗಳೆನೆ" ತನ್ನ ಮಗನಿಗೆ ರಾಯ ಹಾಗೂ ಮಗಳಿಗೆ ಅತ್ತಿಮಬ್ಬೆ ಎಂಬ ಹೆಸರಿಟ್ಟಿದ್ದಾನೆ.

ಚಾರಿತ್ರಿಕ ವ್ಯಕ್ತಿಗಳನ್ನು ಗುಣಾತ್ಮಕ ನೆಲೆಯಲ್ಲಿ ವರ್ಣಿಸುವ ಸಂದರ್ಭಗಳು ಬಂದಾಗಲೆಲ್ಲಾ ಪ್ರಸಿದ್ಧಪುರಾಣ ಪಾತ್ರಗಳಿಗೆ ಹೋಲಿಸಿ ಹೇಳುವುದು ವಾಡಿಕೆ. ಆದರೆ ಅತ್ತಿಮಬ್ಬೆಯ ನಂತರದ ಕಾಲದಲ್ಲಿ ಈ ಲೋಕರೂಢಿಯು ಅತ್ತಿಮಬ್ಬೆಯೊಂದಿಗೆ ಹೋಲಿಸುವ ಪರಿಪಾಟವೊಂದು ಪ್ರಾರಂಭವಾಯಿತು. ಇಂಥ ನೂತನ ಶಕೆಯೊಂದನ್ನು ಅತ್ತಿಮಬ್ಬೆಯಿಂದ ಆರಂಭವಾಯಿತು. ಜಿನಭಕ್ತಿಗಾಗಲಿ, ಪತಿಭಕ್ತಿಗಾಗಲಿ, ದಾನಕ್ಕಾಗಲಿ, ಜಿನಗೃಹ ನಿರ್ಮಾಣಕ್ಕಾಗಲಿ, ಶೀಲ–ಗುಣ ಸಂಪನ್ನತೆಗಾಗಲಿ, ಶುದ್ಧಚಾರತ್ರೆಗಾಗಲಿ, ಸವತಿಮದ ಭಂಜನೆಗಾಗಲಿ ಅತ್ತಿಮಬ್ಬೆಯದೇ ಹೋಲಿಕೆ ನೀಡಿರುವುದನ್ನು ಕಾಣುತ್ತೇವೆ.

ಅತ್ತಿಮಬ್ಬೆಗೆ ದಾನಚಿಂತಾಮಣಿ, ಘಟಾಂತಕಿ ಬಿರುದಾವಳಿಗಳನ್ನಿತ್ತ ಚಾಳುಕ್ಯ ಚಕ್ರವರ್ತಿ ಮನೆತನದವರೇ ಅದನ್ನು ಮತ್ತಷ್ಟು ಬಳಸಿ ತಮ್ಮ ರಾಣಿಯರಿಗೇ ಅನ್ವಯಿಸಿ ಜನಪ್ರಿಯಗೊಳಿಸಿರುವುದನ್ನು ಇತರ ಶಾಸನಗಳಲ್ಲಿ ಕಾಣಬಹುದು. ಅತ್ತಿಮಬ್ಬೆಗೆ ರಾಣಿಯರನ್ನು ಹೋಲಿಸಿ ಹೇಳುವುದೇ ಮುಂದಿನ ರಾಣಿಯರ ಘನತೆಯನ್ನೂ, ಸುಗುಣಗಳನ್ನೂ ತಿಳಿಸುವ ಪ್ರಶಸ್ತಿಯಂತಾಯಿತು.

ಸಾಂತರ ಬಾಚಲದೇವಿಯನ್ನು 'ನೂತ್ನಾತ್ತಿಮಬ್ಬೆ, ಅಭಿನವ ಅತ್ತಿಮಬ್ಬೆ' ಎಂದೂ, ಏಚಬ್ಬೆಯನ್ನು "ದಾನಮನೇಚಬ್ಬೆಯತ್ತಿಮಬ್ಬರಸೆಯ ವೋಲ್" ಎಂದೂ "ಘಟಾನ್ತಕಿಯೆಂಬುದು ಗೊಜ್ಜಿಯಕ್ಕನಂ" ಎಂದೂ ಕರೆದಿರುವ ಶಾಸನಗಳು, ತ್ರೈಲೋಕ್ಯ ಮಲ್ಲನ ರಾಣಿ ಮೈಳಲಾದೇವಿ, ಹರಿಗನರ್ಧಾಂಗಿ ಲಚ್ಚಲದೇವಿ, ವಿಕ್ರಮಾದಿತ್ಯನ ಅರಸಿ ಲಕ್ಷ್ಮೀದೇವಿ, ಬಾಚಲದೇವಿ, ಅಮಾತ್ಯ ಬೇತನ ಸತಿ, ವಿಷ್ಣುವರ್ಧನನ ರಾಣಿ ಶಾಂತಲದೇವಿ, ಸಿಂಗಿಮಯ್ಯನ ವಧು ಶ್ರೀಯಾದೇವಿ, ಮಹದೇವ ಮಂತ್ರಿಯರಸಿ ಮೊದಲಾದವರನ್ನು ದಾನಚಿನ್ತಾಮಣಿ, ಸವತಿಮದ ಭಂಜನಿ ಎಂದು ಕರೆದು ಅತ್ತಿಮಬ್ಬೆಗೆ ಹೋಲಿಸಿರುವ ಕೆಲವು ಉದಾಹರಣೆಗಳನ್ನು ಕಾಣಬಹುದು.

ಸಾಮಂತ ಮನೆತನದವಳಾದ ಅತ್ತಿಮಬ್ಬೆಯು ಸಮಾಜದಲ್ಲಿ ಪಡೆದಿದ್ದ ಸ್ಥಾನಮಾನ, ಗೌರವ, ಊರಜನತೆಗೆ ನೀಡಿದ ಕೊಡುಗೆ, ಕವಿಗಳ ಪೋಷಣೆ, ಸೈನ್ಯದೊಂದಿಗಿನ ಇವಳ ಒಡನಾಟ ಇವೇ ಮೊದಲಾದ ವಿಚಾರವನ್ನು ಕುರಿತಂತೆ ಶಾಸನ, ಕಾವ್ಯಗಳಲ್ಲಿನ ಉಲ್ಲೇಖಗಳು ಇವಳನ್ನು ಸಾಮ್ರಾಜ್ಞಿ ಎಂಬಂತೆ ಬಿಂಬಿಸಿವೆ. ಕವಿಗಳಿಗೆ ಕಾಮಧೇನುವಿನಂತಿದ್ದ ಅತ್ತಿಮಬ್ಬೆಯು ಕನ್ನಡನಾಡಿಗೆ, ಕನ್ನಡ ಸಾಹಿತ್ಯಕ್ಕೆ ವರದಾನ, ಅನರ್ಘ್ಯ ಚಿಂತಾಮಣಿ ಎನಿಸಿದ್ದರಲ್ಲಿ ಅತಿಶಯೋಕ್ತಿಯಿಲ್ಲ.

**ದೀವಳಾಂಬೆ**

ಕದಂಬ ರಾಜಕುಮಾರಿಯಾದ ದೀವಬ್ಬರಸಿಯು ನೊಳಂಬ ಪೊಳಲ್ಚೋರನನ್ನು ವರಿಸಿದ್ದಳು. ಇವಳನ್ನು ದೀವಲಾಂಬೆಯೆಂದೂ ಶಾಸನಗಳು ಉಲ್ಲೇಖಿಸಿವೆ.

ದೀವಬ್ಬರಸಿಯು ಕೋಲಾರದ ಬಳಿಯ ಆವನಿಯಲ್ಲಿ ದೇವಾಲಯ, ಕೊಳ, ಅಗ್ರಹಾರವನ್ನು ನಿರ್ಮಿಸಿ ತನ್ನ ಹೆಸರಿನಲ್ಲಿ ದೀವಬ್ಬೆ ಸಮುದ್ರವೆಂಬ ಕೆರೆಯನ್ನು ಕಟ್ಟಿಸಿ, ತಾನು ಮಾಡಿದ ಈ ಕಾರ್ಯಗಳನ್ನು ತಿಳಿಸುವ ಶಾಸನವೊಂದನ್ನು ಕವಿ ನಾಮಯ್ಯ ಕೈಯಲ್ಲಿ ಬರೆಯಿಸಿದ್ದಾಳೆ[೨೧].

ಪದ್ಯ ರೂಪದಲ್ಲಿ ರಚಿತವಾಗಿರುವ ಈ ದೀವಬ್ಬರಸಿಯ ಶಾಸನವು ತನ್ನ ಕಾವ್ಯಗುಣದಿಂದ ಮನಸೆಳೆಯುತ್ತದೆ. ಇಲ್ಲಿಯ ತಟಾಕ ವರ್ಣನೆಯು ಸುಂದರವಾಗಿ ಮೂಡಿಬಂದಿದೆ.

**ದೀವಬ್ಬರಸಿಯ ವರ್ಣನೆ**

**ಶ್ರೀವಧುಧರೆ ಪೊಳಲ್ಚೋ**
**ರಾವನಿಪಂಗಗ್ರಮಹಿಷಿ ಭುವನಾಂಬಿಕೆ ವಾಕ್**
**ದೇವಿಯರ ದೊರೆಯರೆನಿಸಿದ**
**ದೀವಬ್ಬರಸಿಯರ ದೊರೆಗೆಟ್ಟಿರ್ಪೆಱರೊಳರೇ ॥**

ಪೊಳಲ್ಚೋರ ದೊರೆಯ ಪಟ್ಟದರಾಣಿಯೆಂದು ದೀವಬ್ಬರಸಿಯನ್ನು ಪರಿಚಯಿಸಿರುವ ಕವಿಯು ಇವಳನ್ನು ಭುವನಾಂಬಿಕೆ ಎಂದು ಕರೆದು ಭೂದೇವಿಗೂ, ವಾಗ್ದೇವಿ ಎಂದು ಕರೆದು ಸರಸ್ವತೀದೇವಿಗೂ ಹೋಲಿಸಿ ಈಕೆಗೆ ಸರಿಸಮಾನರು ಯಾರೂ ಇಲ್ಲವೆಂದು ಹೊಗಳಿದ್ದಾನೆ.

**ಅತಿಶಯಮಾಗೆ ತಮ್ಮಪೆಸರೊಳ್ನೆಱೆ ತತ್ಪತಿನಾಮದಿಂ ಯಶೋ**
**ರ್ಜ್ಜಿತಮೆನಿಪಗ್ರಹಾರಮ ವಿನಾಶಿ ನಮಸ್ಯಮೆ ಮಾಡಿ ರಾಜ್ಯದೊಳ್**
**ಸ್ಸುತನನುಕೂಳನಾಗಿ ಬೆಸಕೆಯ್ಯೆ ಗುಣೋನ್ನತಿಯೊಪ್ಪಿನಿಂದರು**
**ನ್ಧತಿ ದೊರೆ ದೀವಳಬ್ಬರಸಿಯರ್ಜ್ಜಗತೀತಳಕೇಂ ಪವಿತ್ರರೋ ॥**

ನಾಶವಾಗದೆ ಬಹುಕಾಲ ಉಳಿಯುವಂತಹ, ಅತಿಶಯವೆನಿಸುವಂತೆ ಅಗ್ರಹಾರವನ್ನೂ ಪತಿಯ ಹೆಸರಿನಲ್ಲಿ ನಿರ್ಮಿಸಿರುವ ದೀವಬ್ಬರಸಿಗೆ ರಾಜ್ಯದಲ್ಲಿ ತನ್ನ ಆಣತಿ ಆದೇಶಗಳನ್ನು ಅನುಸರಿಸುವ ತನ್ನ ಕಿರಿಯಮಗನ ಸಹಕಾರವಿತ್ತೆನ್ನುವುದನ್ನು "ಸುತನನುಕೂಲನಾಗಿ ಬೆಸಕೆಯ್ಯೆ" ಎಂಬ ಇಲ್ಲಿನ ಹೇಳಿಕೆಯಲ್ಲಿ ಗಮನಿಸಬಹುದು. ಉತ್ತಮ ಗುಣದಿಂದ ಕೂಡಿ, ಅರುಂಧತಿಗೆ ಸಮಾನಳೆನಿಸಿರುವ ದೀವಬ್ಬರಸಿಯು ಈ ಜಗತ್ತಿನಲ್ಲಿ ಅದೆಷ್ಟು ಪವಿತ್ರಳು ಎಂದು ಬಣ್ಣಿಸಿರುವ ಕವಿಯು ಇವಳು ಅರುಂಧತಿಗೆ ಹೋಲಿಸಬಹುದಾದ ಉತ್ತಮ ಗುಣವನ್ನೂ ಹೊಂದಿರುವುದರಿಂದಲೇ ಇಂತಹ ಸತ್ಕಾರ್ಯವನ್ನು ಮಾಡಿದಳೆಂಬುದನ್ನು ತಿಳಿಸಿದ್ದಾನೆ.

**ನೆಟ್ಟನೆ ಕದಂಬ ವಂಶಂ**
**ಪುಟ್ಟಿದ ಮನೆ ಪಲ್ಲವೇನ್ದ್ರನಿಜೆವನೊಟಿಂಬಂ**
**ಪುಟ್ಟಿದ ಮಗನಿಗೆ ಮುಗಿಲಂ**
**ಮುಟ್ಟಿಪುದುಂ ಪೆಂಪು ದೀವಳಬ್ಬರಿಸಿಯರಾ ॥**

ನೊಳಂಬಪಲ್ಲವ ದೊರೆಯನ್ನು ವರಿಸಿದ, ಕದಂಬ ರಾಜಕುಮಾರಿ ದಿವಳಬ್ಬೆಯು ಪತಿಯ ಮರಣಾನಂತರ ಸಿಂಹಾಸನವನ್ನೇರಿದ ತನ್ನ ಮಗ ಇರಿವ ನೊಳಂಬನ ಕೀರ್ತಿಯು ಆಕಾಶವನ್ನು ಮುಟ್ಟುವಂತೆ, ಪ್ರಖ್ಯಾತಿ ಪಡೆಯುವಂತೆ ಅವನ ಆಳ್ವಿಕೆಯಲ್ಲಿ ಸಹಕರಿಸಿ, ಕೀರ್ತಿಗೆ ಭಾಜನಳಾಗಿದ್ದಾಳೆ.

**ಸ್ವಸ್ತಿ ಶ್ರೀಮದನೇಕ ದಿವ್ಯಗುಣ ಸೌಂದರ್ಯಾಲಯಾ ಸಾಯತಾ**
**ಭೂಲೋಕಾಗ್ರ್ಯ ಕದಂಬ ವಂಶ ತಿಲಕಾ ಸದ್ಭಿಸ್ಸದಾವನ್ದಿತಾ**
**ಶ್ರೀಮದ್ರಾಜ ಮನೋಜ ಭೂಪ ಮಹಿಷೀ ದೀವಾಂಬಿಕಾ ವಿಶ್ರುತಾ**
**ಪೂತಾನೂತ ಪತಿವ್ರತಾ ಸ್ತುತಗುಣಾ ದೇದಿಪ್ಯಮಾನಾಂಜನಿ॥**

ಮೇಲಿನ ಪದ್ಯವು ಕದಂಬ ವಂಶಕ್ಕೆ ತಿಲಕಪ್ರಾಯಳಂತಿರುವ ದೀವಳಬ್ಬರಸಿಯು ರೂಪ ಹಾಗೂ ದಿವ್ಯಗುಣಗಳಿಂದಾಗಿ ಭೂಲೋಕದ ಅಗ್ರಸ್ಥಾನವನ್ನು ಪಡೆದು ಸದಾ ಆರಾಧಿಸಲ್ಪಡುವ (ವಂದಿತಳಾಗಿ) ಅರಸಿಯಾಗಿದ್ದಾಳೆ. ಶ್ರೇಷ್ಠ ಸುಮಂಗಲಿಯರಿಂದ ಸದಾ ಹೊಗಳಲ್ಪಟ್ಟು ಉಜ್ವಲವಾಗಿ ಬೆಳಗುತ್ತಿದ್ದಾಳೆ ಎಂದು ಬಣ್ಣಿಸಿದೆ. ಹಿಂದಿನ ಪದ್ಯದಲ್ಲಿ ನೊಳಂಬಪಲ್ಲವ ಕುಲದ ಕೀರ್ತಿಯನ್ನು ಉತ್ತುಂಗಕ್ಕೇರಿಸಿದವಳೆಂದು ಬಣ್ಣಿಸಲ್ಪಟ್ಟ ದೀವಳಬ್ಬೆಯು ಇಲ್ಲಿ ತಾನು ಹುಟ್ಟಿದ ರಾಜಮನೆತನವಾದ ಕದಂಬ ಕುಲಕ್ಕೂ ಕೀರ್ತಿ ತಂದಿರುವ ರಾಜಕುಮಾರಿ ಎಂಬ ಹೊಗಳಿಕೆಗೆ ಪಾತ್ರಳಾಗಿದ್ದಾಳೆ.

ಅರಸಿಯನ್ನು ಬಣ್ಣಿಸಿರುವ ಮತ್ತೊಂದು ಸಂಸ್ಕೃತ ಪದ್ಯವನ್ನೂ ಕಾಣಬಹುದು

**ಸದ್ವಿತೀರ್ಣ್ಣನ....... ಶಶಿಃಕತಿಮನೋಹಾರಿಣೀ**
**ಸನ್ಮಾರ್ಗ್ಗಾರ್ಗ್ಗಳ ಭೇದಿನೀ ನಿರುಪಮಾ ಸತ್ಪಾತ್ರ ದಾನಾನ್ವಿತ**
**ಸತ್ಕಾದಂಬ ಮಹಾನ್ವಯೇ ಸಮಭವದ್ದೇವೀಹ ದೀವಾಂಬಿಕಾ**
**ಕಿನ್ಧಾತ್ರೀ ಮಕುಟಾಗ್ರ ಮಣ್ಣನ ಮಣೀಃ ಕಿಂ ಕಾಮದೇ ... ॥**

ಇಲ್ಲಿ ದೀವಾಂಬಿಕೆ ಎಂದು ಕರೆಯಲ್ಪಟ್ಟಿರುವ ರಾಣಿಯ ದಾನ ಗುಣವಿಶೇಷತೆಯನ್ನು ಕಾಣಬಹುದು. ಸತ್ಪಾತ್ರರಿಗೆ ದಾನ ನೀಡುವ ಇವಳ ನ್ಯಾಯಪರ ಗುಣವನ್ನು ಎತ್ತಿ ಹಿಡಿದು, ಭೂಮಂಡಲದ ಕಿರೀಟದ ಉತ್ತುಂಗ ಭಾಗವನ್ನೇರಿದ ರತ್ನವೆಂದು ಕವಿಯು ಹೊಗಳಿದ್ದಾನೆ.

ದೀವಳಬ್ಬೆಯನ್ನು ಬಣ್ಣಿಸಿರುವ ಎಲ್ಲ ಪದ್ಯಗಳಲ್ಲಿಯೂ ಇವಳು ಕದಂಬ ಹಾಗೂ ನೊಳಂಬ ಉಭಯಕುಲಕ್ಕೂ ಕೀರ್ತಿತಂದವಳೆನ್ನುವುದಕ್ಕೇ ಕವಿಯು ಹೆಚ್ಚು ಒತ್ತು ನೀಡಿರುವುದನ್ನು ಗಮನಿಸಬಹುದು. ಇವಳು ತವರುಮನೆಗೆ ನೀಡಿದ ಸಹಕಾರ, ಅಲ್ಲಿ ಗಳಿಸಿರುವ ಸತ್ಕೀರ್ತಿ, ಅವರೊಂದಿಗಿನ ಉತ್ತಮ ಬಾಂಧವ್ಯವು, ಮಗನ ರಾಜ್ಯಾಡಳಿತ ಕಾಲದಲ್ಲಿಯೂ ತವರು ಮನೆಯ ಕೀರ್ತಿಯೊಂದಿಗೆ ಇವಳನ್ನು ಗುರುತಿಸುವಂತಾಗಿದೆ.

ತನ್ನ ಮಗ ನೊಳಿಪಯ್ಯನ ಆಳ್ವಿಕೆಯ ಕಾಲದಲ್ಲಿ ದೀವಳಾಂಬೆಯು ನೊಟಂಬ ಗತಿಸಿದ ಮಗ (ಮಲಮಗ) ಮಹೇಂದ್ರನ ಪರೋಕ್ಷ ವಿನಯದಲ್ಲಿ ಮಾಡಿಸಿದ ತಟಾಕ ಹಾಗು ಮುಕುಂದ ಭವನದ ಉಲ್ಲೇಖವನ್ನು ಕವಿಯು ಈ ಕೆಳಗಿನ ಚಂಪಕಮಾಲಾ ವೃತ್ತದ ಪದ್ಯದಲ್ಲಿ ತಿಳಿಸಿದ್ದಾನೆ. ಇಲ್ಲಿ ರಾಜ್ಯಮನೀಕ್ಷಿಸುವ ಎಂಬ ಮಾತು ಆಡಳಿತದಲ್ಲಿ ಸಲಹೆ–ಸೂಚನೆ ನೀಡುತ್ತಾ ಭಾಗಿಯಾಗಿದ್ದಳೆನ್ನುವುದನ್ನು ಸೂಚಿಸುತ್ತದೆ. ಹಿಂದಿನ ಪದ್ಯದಲ್ಲಿಯೂ ಮಗನ ಹಿರಿಮೆಯನ್ನು ಹೆಚ್ಚಿಸುವುದರಲ್ಲಿ ಗಮನ ಹರಿಸಿದ ಇವಳ ಗುಣವನ್ನು ಕವಿ ಹೊಗಳಿರುವುದನ್ನು ಕಾಣಬಹುದು.

**ಮನುಚರಿತಂ ಮ್ಮಹೇನ್ದ್ರ ನೃಪನಿನ್ದೆ ಪರೋಕ್ಷದೊಳಾ ಮಹಾತ್ಮ್ಯನಾ**
**ಜನನಿ ಮಹೇನ್ದ್ರನಾಮದೆ ಕೊಳಂ ನಿಜನಾಮದೊಳಿನ್ತಟಾಕಮೀ**
**ಶನ ಭವನಮ್ಮುಕುನ್ದ ಭವನಂಗಳನಿಂಬಿನಿ ಮಾಡಿಧರ್ಮ್ಮವ**
**ರ್ದ್ಧನದೆ ಕನೀಯ ನನ್ದನನ ರಾಜ್ಯಮನೀಕ್ಷಿಸುಗಾವಕಾಲಮುಂ॥**

**ಕೃತ್ವಾ ದೇವಾಯತನಂ ಮಹೇಶ್ವರಾರ್ಪ್ಪಣಂ ಅನಂತ ಪಾಪ ವಿನಾಶಾ**
**ಘಂಟಾ ದೀಪಾಂಬಿಕಯಾ ನೊಟಂಬ ನಾರಾಯಣೇಶ್ವರಾಯ ಸುದತ್ತಾ॥**
**ಸ್ವಸ್ತಿ ಸಮಧಿಗತಪಞ್ಚ ಮಹಾಶಬ್ದಪಲ್ಲವಾನ್ವಯ ಶ್ರೀಪೃಥ್ವೀವಲ್ಲಭಪಲ್ಲವಕುಲತಿಲಕಂ**
**ಪಲ್ಲವಾಭರಣನಾಹವದುರ್ಗನಹಿತರಜವನಮೋಘ ವಾಕ್ಯನ್ನೊಟಂಬನಾರಾಯಣ**
**ಶ್ರೀವೀರಮಹೇನ್ದ್ರ ನೊಟಂಬಾಧಿರಾಜನ ಪರೋಕ್ಷದೊಳ್ ದೀವಬ್ಬರಸಿಯಪ್ಪೊಱರ**
**ಮಂಗಲದೊಳ್ದೀವಬ್ಬೆ ಸಮುದ್ರವಂ ಕಟ್ಟಿಸಿಯಲ್ಲಿ ವಿಷ್ಣುಗ್ರಿಹಮಮ್ಮಾಡಿಸಿಯಾವನ್ಯದೊಳ್ನೊಟಂಬ**
**ನಾರಾಯಣೇಶ್ವರ ಮಮ್ಮಾಡಿಸಿ ಯೀದೇವರ್ಗ್ಗೆಳ ನಗರಮಂ ಸರ್ಬ್ಬಬಾಧಾ ಪರಿಹಾರಮಾಗಿ ಕೊಟ್ಟರ್**

ದೀವಬ್ಬರಸಿಯು ಮಹೇಂದ್ರನ ಪರೋಕ್ಷಾರ್ಥವಾಗಿ ಆವನ್ಯದ (ಆವನಿಯ)ಲ್ಲಿ ನೊಳಂಬನಾರಾಯಣೇಶ್ವರ ದೇವಾಲಯವನ್ನೂ, ಮಹೇಂದ್ರ ಕೊಳವನ್ನೂ, ಪತಿಯ ಹೆಸರಿನಲ್ಲಿ ಪೊಱಲ್ಚೋರ ಮಂಗಲವೆಂಬ ಅಗ್ರಹಾರವನ್ನೂ ಅಲ್ಲಿ ತನ್ನ ಹೆಸರಿನಲ್ಲಿ ದೀವಬ್ಬೆ ಸಮುದ್ರವನ್ನೂ ಕಟ್ಟಿಸಿ, ಅಲ್ಲಿ ವಿಷ್ಣುಗೃಹವನ್ನೂ ಮಾಡಿಸಿದಳು.

**ಶಾಸನ ಕವಿ:** ಈ ಸುಂದರವಾದ ಚಂಪೂ ಪ್ರಕಾರದ ಶಾಸನ ಪದ್ಯವನ್ನು ರಚಿಸಿರುವ ಕವಿಯ ಕುರಿತಾಗಿ ಯಾವ ಮಾಹಿತಿಯೂ ಲಭಿಸುವುದಿಲ್ಲ. ಶಾಸನದ ಕಡೆಯ ಭಾಗದಲ್ಲಿ **ಬರೆದನ್ನಾಮಯ್ಯಂ** ಎಂಬ ಒಂದೇ ಪದದಲ್ಲಿ ತಿಳಿಸಿರುವ ಹೆಸರು ಶಾಸನ ರಚಿಸಿರುವ ಕವಿಯದಾಗಿದೆ ಎಂದು ಡಾ.ಎಂ.ಎಂ.ಕಲಬುರ್ಗಿ ಅವರು ಅಭಿಪ್ರಾಯ ಪಡುತ್ತಾರೆ[೨೨]. ಆದರೆ, ನಾಮಯ್ಯ ಕವಿಯಲ್ಲ ಕಂಡರಣೆಕಾರ (ಲಿಪಿಕಾರ) ಎಂದು ಡಾ.ಕೆ.ಆರ್.ಗಣೇಶ್ ಅವರು ಅಭಿಪ್ರಾಯ ಪಡುತ್ತಾರೆ[೨೩].

ಸಾಧಾರಣವಾಗಿ, ತಾಳೆಯಗರಿಯ ಮೇಲೆ ಕವಿಗಳು ರಚಿಸಿದ ಶಾಸನಪದ್ಯವನ್ನು ಕಲ್ಲಿನ ಮೇಲೆ ಬರೆಯುವಾತ 'ಬರೆದವ' ಎಂದು ತನ್ನನ್ನು ಗುರುತಿಸಿಕೊಳ್ಳುತ್ತಾನೆ. ಈತ ಕಲ್ಲಿನಮೇಲೆ ಬರೆದದ್ದನ್ನು ಹಾಗೇ ಕೇತ್ತುವವನು ಓಜ ಅಥವಾ ಶಿಲ್ಪಿ. ಕೆಲವೊಂದು ಶಾಸನಗಳಲ್ಲಿ ಶಾಸನದ ಕಂಡರಣೆಕಾರ, ಓಜ ತಮ್ಮ ಹೆಸರನ್ನೂ ಹೇಳಿಕೊಂಡಿರುತ್ತಾರೆ. ದೀವಳಬ್ಬೆಯ ಈ ಶಾಸನದಲ್ಲಿ ಬರೆದನ್ನಾಮಯ್ಯ ಎಂಬ ಹೆಸರು ಶಾಸನ ರಚಿಸಿದವನೋ ಅಥವಾ ಕಲ್ಲಿನ ಮೇಲೆ ಬರೆದವನೋ ಸ್ಪಷ್ಟವಾಗುವುದಿಲ್ಲ. ಆದರೆ, ಅರಸಿಕೆರೆಯ ಕೆಲವು ಶಾಸನಗಳನ್ನು ರಚಿಸಿದ ಕವಿ ತ್ರಿವಿಕ್ರಮ ಪಂಡಿತ **"**ಬರೆದಂ ತ್ರಿವಿಕ್ರಮಾಂಕನೀ ಶಾಸನಮಂ**"** ಎಂದು ತನ್ನ ಹೆಸರನ್ನು ಹೇಳಿಕೊಂಡಿದ್ದಾನೆ. ಇಂಗಳಿಗೆಯ ಶಾಸನ ಕವಿಯೂ ಕೂಡ ತನ್ನನ್ನು 'ವಾಗ್ವಧೂನನ್ದನಂ ಜಿನಪಾದಾಂಭೋಜಭೃಂಗಂ ನಾಗಾರ್ಜುನಪಣ್ಡಿತಂ ಬರೆದಂ' ಎಂಬ ಒಂದೇ ಸಾಲಿನಲ್ಲಿ 'ಬರೆದಂ' ಎಂದೇ ತಿಳಿಸಿದ್ದಾನೆ. ಇಂತಹ ಉದಾಹರಣೆಗಳನ್ನು ಗಮನಿಸಿದಾಗ ಪ್ರಸ್ತುತ ಶಾಸನದಲ್ಲಿ ಉಲ್ಲೇಖಿಸಿರುವ ನಾಮಯ್ಯ ಕವಿಯಾಗಿರುವ ಸಾಧ್ಯತೆ ಇದೆ. ಈ ಸುಂದರ ಪದ್ಯ ರಚಿಸಿರುವ ಕವಿ ಯಾರೇ ಆದರೂ ಪ್ರಶಂಸೆಗೆ ಅರ್ಹನಾಗಿದ್ದಾನೆ. ಈತನು **"**ಈ ಶಾಸನದಲ್ಲಿ ಮಾಡಿರುವ ತಟಾಕದ ವರ್ಣನೆ ಮುಂದಣ ಕಾವ್ಯಗಳಲ್ಲಿಯ ತಟಾಕ ವರ್ಣನೆಗೆ ಮಾದರಿ ಎನಿಸಿದೆ**"**[೨೪].

**ಮೋಚಬ್ಬರಸಿ**

ಹತ್ತನೆಯ ಶತಮಾನದ ಕಾಸರಗೋಡಿನ ರಾಣಿ ಮೋಚಬ್ಬರಸಿಯ ಉದಾರತೆಯನ್ನು ಸಾರುವ ತಳಂಗೆರೆಯ ಶಾಸನ[೨೫], ಮೋಚಬ್ಬರಸಿಯ ಪ್ರಕೃತಿ ಪ್ರೇಮ, ಕ್ಷಮಾದಾನ, ಜನಹಿತ ಗುಣಗಳನ್ನು ಬಣ್ಣಿಸುತ್ತದೆ.

ದೊರೆ ಜಯಸಿಂಹ ಮೋಚಬ್ಬರಸಿಗೆ 'ಕನ್ಯಾದಾನವಾಗಿ' ಭೂಮಿಯನ್ನು ಕೊಡಲು ಬಯಸಿದಾಗ, ಯಾರಿಗೂ ಬೇಡವಾದ ಊರಾಚೆಯ ಕಲ್ಲಿನ ಕಾಡಾಗಿದ್ದ ಬೆಟ್ಟಪ್ರದೇಶವನ್ನು ಬೇಡಿ ಪಡೆಯುತ್ತಾಳೆ. ಈ ಪ್ರದೇಶವನ್ನು ಸಮತಟ್ಟುಗೊಳಿಸಿ ಹೆಂಚಿನಮನೆಗಳು, ತೋಟವನ್ನು ಮಾಡಿಸುತ್ತಾಳೆ, ಪ್ರವಾಹವನ್ನು ಸೆರೆಯಿಟ್ಟು, ಕೆರೆಗಳನ್ನು ನಿರ್ಮಿಸಿ ನೀರಾವರಿವ್ಯವಸ್ಥೆ ಮಾಡುತ್ತಾಳೆ. ಅತ್ಯಂತ ಶ್ರಮವಹಿಸಿ ಆ ಬರಡು ನೆಲವನ್ನು ಸುಕ್ಷೇತ್ರವನ್ನಾಗಿಸುತ್ತಾಳೆ. ವಿಶೇಷವಾದ ಸತ್ಕಾರಕ್ಕಾಗಿ ನಿರ್ಮಿಸಲಾದ ಈ ಸ್ಥಳದಲ್ಲಿ ಎಂಥ ತಪ್ಪು ಮಾಡಿ ಬಂದವರಿಗೂ, ಕೊಲೆಗಡುಕರಿಗೂ ಮೂರುದಿನದ 'ಸರ್ವಪರಿಹಾರಂ ಕಾದು ಕಳಿಸುವುದು' ಮೋಚಬ್ಬರಸಿಯ ಆದೇಶವಾಗಿತ್ತು. ಈ ಮೂಲಕ ಅಪರಾಧಿಗಳ ಮನಃ ಪರಿವರ್ತನೆ ಮಾಡುವ ಸದುದ್ದೇಶವನ್ನು ಇಲ್ಲಿ ಕಾಣಬಹುದು. "೧೦ನೆಯ ಶತಮಾನದಲ್ಲಿ ಪಾತಕಿಗಳಿಗೂ ಒಂದು ತಾತ್ಕಾಲಿಕ ಅಭಯಾಶ್ರಮ ಮಾಡಿದ ಶ್ರೇಯ ಮೋಚಬ್ಬೆಗೆ ಸಲ್ಲುತ್ತದೆ"[೨೬].

ಶಾಸನವು ಇಲ್ಲಿ ಆಳ್ವಿಕೆ ನಡೆಸುತ್ತಿದ್ದ ದೊರೆ ಜಯಸಿಂಹನನ್ನು ಉಲ್ಲೇಖಿಸುತ್ತದೆಯಾದರೂ, ಅವನ ಹಾಗೂ ಮೋಚಬ್ಬರಸಿಯ ಸಂಬಂಧದ ಕುರಿತು ಯಾವ ವಿಚಾರವನ್ನೂ ತಿಳಿಸುವುದಿಲ್ಲ. ದೊರೆ ಜಯಸಿಂಹ ಹಾಗೂ ಮೋಚಬ್ಬರಸಿಯರ ಸಂಬಂಧ ಕುರಿತಾಗಿ ಸಾಕಷ್ಟು ಚರ್ಚೆಗಳು ನಡೆದಿವೆ. ಇಲ್ಲಿ ಮೋಚಬ್ಬೆಯನ್ನು ಅರಸಿ ಎಂದು ಕರೆದಿರುವುದರಿಂದ ಇವಳು ಜಯಸಿಂಹನ ರಾಣಿ ಎಂದು ಭಾವಿಸಬಹುದಾದರೆ, ಕನ್ಯಾದಾನಂಗೊಟ್ಟ ಭೂಮಿಯ ವಿಚಾರ ಇರುವುದರಿಂದ ಇವಳು ಮಗಳು ಅಥವಾ ಸಹೋದರಿ ಇರಬೇಕೆಂಬ ಅನುಮಾನವೂ ಬರುತ್ತದೆ.

ಆದರೆ ಮೋಚಬ್ಬರಸಿಯು ಜಯಸಿಂಹನ ಮಡದಿ, ಈಕೆಯು ಬಲ್ಲಾಳ ವಂಶದ ರಾಜಕುಮಾರಿಯಾಗಿದ್ದು, ಮಗಳ ಜೊತೆಯಲ್ಲಿ ಅವಳ ತಂದೆತಾಯಾಯಿಯರೂ ಮಂಗಳೂರು ಕಡೆಯಿಂದ ಕುಂಬಳೆಸೀಮೆಗೆ ಬಂದು ನೆಲೆಸಿದರೆಂದೂ, ಜಯಸಿಂಹನು ಅವರಿಗೆ ತಕ್ಕ ವಸತಿ ಭೂಮಿಯನ್ನು ಒದಗಿಸಿಕೊಟ್ಟನೆಂದೂ ಆ ಭಾಗದಲ್ಲಿ ಜನಜನಿತವಾದ  ಕಥೆಯೊಂದರಲ್ಲಿ ಹೇಳಲಾಗುತ್ತದೆ. ಅವರು ತಮ್ಮ ಹುಟ್ಟೂರಿನಿಂದ ಕುಂಬಳೆ ಸೀಮೆಗೆ ಬರುವಾಗ ಅವರು ಆರಾಧಿಸುತ್ತಿದ್ದ ಧೂಮಾವತಿ ದೈವದ ಭಂಡಾರವನ್ನು ಸಹ ಜೊತೆಗೆ ತಂದರೆಂದೂ, ಈಗಲೂ ಪಡ್ಡೈದೂಮಾವತಿ ಎಂಬ ಹೆಸರಿನಿಂದ ಆ ದೈವವು ಕುಂಬಳೆ ಸೀಮೆಯಲ್ಲಿ ಆರಾಧಿಸಲ್ಪಡುತ್ತದೆಂದೂ ಐತಿಹ್ಯಗಳಿವೆ[೨೭].

ಮೋಚಬ್ಬರಸಿಯ ಹಿನ್ನೆಲೆಗಿಂತಲೂ ಈ ಶಾಸನದಲ್ಲಿ ತಿಳಿದುಬರುವ ಅವಳ ಮನೋಭಾವ, ಪ್ರಕೃತಿ ಪ್ರೇಮ, ಪ್ರಜಾಪರಕಾಳಜಿ ಹೆಚ್ಚು ಗಮನ ಸೆಳೆಯುತ್ತದೆ. ಹೆಣ್ಣುಮಕ್ಕಳಿಗೆ ಆಸ್ತಿಯ ಹಕ್ಕು ಹಸ್ತಾಂತರವಾಗಬೇಕೆಂಬ ಅರಸಿ ಮಾಡಿದ ನಿಯಮ. ಈ ಶಾಸನದಲ್ಲಿ ಕಂಡುಬರುವ ಮತ್ತೊಂದು ವಿಶೇಷವಾಗಿದೆ. ಹೆಣ್ಣುಮಕ್ಕಳಿಲ್ಲದೆ ಹೋದರೆ ಮಾತ್ರ ಮೊದಲನೆಯ ಗಂಡುಮಗನಿಗೆ ಆ ಅಧಿಕಾರ ದೊರಕುವುದೆಂದು ತಿಳಿಸಲಾಗಿದೆ.

ರಾಣಿಯ ಮನೋಭಾವವನ್ನು ಅಧ್ಯಯನ ಮಾಡಲು ಈ ಶಾಸನವು ಉತ್ತಮ ಆಕರವನ್ನು ಒದಗಿಸುತ್ತದೆ. ಬರಡು ಭೂಮಿಯನ್ನು ಸುಂದರ ಉದ್ಯಾನವನವನ್ನಾಗಿ ಮಾರ್ಪಡಿಸಿದ ಅವಳ ಕೆಚ್ಚು, ಸಾಧನೆಗಳು ಪ್ರಶಂಸನೀಯ ಹಾಗೂ ಅನುಕರಣೀಯ.

ಶಾಸನವು ಕನ್ನಡ ಗದ್ಯ ಮತ್ತು ಪದ್ಯ ಮಿಶ್ರಿತ ಚಂಪೂಪ್ರಕಾರದಲ್ಲಿದೆ. ಕಾಲದ ಉಲ್ಲೇಖವಿಲ್ಲದಿದ್ದರೂ ಲಿಪಿಶಾಸ್ತ್ರ ದೃಷ್ಟಿಯಿಂದ ಈ ಶಾಸನವು ೧೦–೧೧ನೆಯ ಶತಮಾನದ ಸಂಧಿಕಾಲದ್ದೆಂದು ಪಂಡಿತರು ಖಚಿತವಾಗಿ ಹೇಳಿದ್ದಾರೆ.

ಕನ್ಯಾದಾನವನ್ನಾಗಿ ಭೂಮಿಯನ್ನು ಕೊಡಬಂದ ಜಯಸಿಂಹನಿಗೆ 'ಮೋಚಬ್ಬರಸಿ ಸನ್ತೋಸಂಬಟ್ಟಿನ್ತೆನ್ದಡೆ .... "ಆರುಂ ಮನ್ನಿಸದೂರಂ ಗುಣಸಂಪನ್ನ ಸಮನ್ತೀವುದೆನಗೆ ಕನ್ಯಾದಾನಂ॥ ಅಕ್ಕುಮೆಂದು" ಮೋಚಬ್ಬರಸಿಯು ಸಂತೋಷಗೊಂಡು ಕನ್ಯಾದಾನವನ್ನು ನೀಡುವುದಾದಲ್ಲಿ ಯಾರಿಗೂ ಬೇಡದ (ಬಂಜರು ಭೂಮಿ) ಊರನ್ನು ನನಗೆ ನೀಡು ಎಂದು ಕೇಳಿ ಪಡೆಯುತ್ತಾಳೆ.

**ಊರಕಡೆಯ ತೊಱೆಯ ತಡಿಯ ಕರಿಕಲ್ಲ ಮೋಱದಿಂ ಪು**
**ತ್ತೂರ ಪೊಲೆಯರಿಪ್ಪ ಕೇರಿಯೊವಟ ನೀರ ಭೂಮಿಯಂ**
**ಸಾರ ಭೂರುಹಂಗಳೋಳಿಯೊಳಗೆ ನಱೆದ ಕಱೆಯನಂ**
**ಭೋರುಹಾಕ್ಷಿ ತನ್ನ ಧನದಿನೊಪ್ಪೆ ಮಾಡಿಸಿಟ್ಟುದಂ ॥ಉತ್ಸಾಹಂ॥**

ಪುತ್ತೂರ ಹೊಲೆಯರ ಕೇರಿಗೆ ತಾಗಿದಂತಿದ್ದ ಯಾವ ಕೆಲಸಕ್ಕೂ ಬಾರದ ಚೌಳು ಭೂಮಿಯನ್ನು ಪಡೆದುಕೊಂಡು, ಆ ಭೂಮಿಯೊಳಗೆ ಅವಳು ತನ್ನದೇ ಹಣವನ್ನು ಖರ್ಚುಮಾಡಿ ನೀರು ನೆರೆದ ಕೆರೆಯೊಂದನ್ನು ಕಟ್ಟಿಸಿದಳು.

ಈ ಮೇಲಿನ ಪದ್ಯ ಕನ್ನಡ ಛಂದಸ್ಸುಗಳ ಕ್ಷೇತ್ರದಲ್ಲಿ ಅನುಪಮವಾದುದು. ಈ ಪದ್ಯವನ್ನು ರಚಿಸುವಲ್ಲಿ ಬಳಸಲಾಗಿರುವ ವಿಶಿಷ್ಟ ಉತ್ಸಾಹ ವೃತ್ತವು ಕನ್ನಡ ಸಾಹಿತ್ಯ ಕೃತಿಗಳಲ್ಲಾಗಲಿ, ಬೇರಾವ ಕನ್ನಡ ಶಾಸನದಲ್ಲಾಗಲಿ ಕಾಣಸಿಗುವುದಿಲ್ಲ. ಏಳೇಳು ಬ್ರಹ್ಮಗಣಗಳು ಮತ್ತು ಒಂದು ಗುರು ಅಕ್ಷರದಿಂದ ಕೂಡಿದ ನಾಲ್ಕುಸಾಲುಗಳ ಪದ್ಯ. "ಪದ್ಯದ ಉತ್ತಮ ತರಂಗ ಧಾಟಿಯು, ಛಂದಸ್ಸಿನ ಓಟವು ತಳಂಗೆರೆ ಶಾಸನದ ಅನಾಮಿಕ ಕವಿಯ ಪ್ರತಿಭೆಗೆ ಸಾಕ್ಷಿಯಾಗಿದೆ"[೨೮].

**॥ಇನ್ತಾರುಮೊಲ್ಲದ ಕಲ್ಕಾಡಬೆಟ್ಟಂ ಸವತಳಂ ಮಾಡಿ ಯೋಡಿಲ ಮನೆಯುಮಂ ನನ್ದನವನವುಮಂ ಮಾಡಿಸಿ, ಕೆಱೆಯಂ ಕಟ್ಟಿಸಿ, ತೊಱೆಯ ಸೆಱೆಯಿಟ್ಟೊವಟ ನೆಲನಂ ಪಿರಿದುಮಾಯಾಸದಿಂ ಸುಕ್ಷೇತ್ರಂ ಮಾಡಿಸಿದುದದು ಮುನ್ನಮೂಡೆಯಿಕ್ಕುವೊವಟುಪ್ಪು ನೆಲದಾ ಭೂಮಿಯ ನೊಳಕೊಣ್ಡು ಗಟಿನಗಟೆಸಿ, ಆಸನ್ನಚಾವುಗಾಮಿಗಳಜೆಯೆ"** ಈ ಗದ್ಯಭಾಗವು ಮೋಚಬ್ಬರಸಿಯು ಯಾರಿಗೂ ಬೇಕಿರದ ಆ ಕಲ್ಲುಕಾಡ ಬೆಟ್ಟವನ್ನು ಸಮತಟ್ಟಾಗಿಮಾಡಿ, ಓಡಿನ (ಹೆಂಚಿನ) ಮನೆ ಹಾಗೂ ನಂದನವನಗಳನ್ನು ನಿರ್ಮಿಸಿ, ಕೆರೆಯನ್ನು ಕಟ್ಟಿಸಿ, ಹತ್ತಿರ ಹರಿಯುತ್ತಿದ್ದ ತೊರೆ‍ಯ ನೀರನ್ನು ಅಣೆಕಟ್ಟಿನಲ್ಲಿ ಸೆರೆಹಿಡಿದು, ಅತಿಪರಿಶ್ರಮದಿಂದ ಹಾಳು ಚೌಳುನೆಲವನ್ನು ಫಲವತ್ತಾಗಿ ಮಾಡಿದಳು ಎಂಬ ವಿವರಣೆ ನೀಡುತ್ತದೆ.

**ಆರಾದೊಡಕ್ಕೆ ಧಾತ್ರೀ**
**ಭಾರಮನಾರಾನ್ತೊರಾನ್ತರ ಕಯ್ಯಾನ್ತಾ**
**ಬೀರರನಿರದಾಂ ಬೇಡಿದೆ**
**ನೋರಂತಿರೆ ಕಾವುದೀ ವ್ಯವಸ್ಥೆಯಿನೂರಂ ॥ ಕಂ॥**

**ವಚನ॥ ಅದೆನ್ತೆನ್ದೊಡೆ ಅರಸಾಳ್ಗಳೂರಂ ಪೊಕ್ಕನ್ದು ಪುಲ್ಲಡಕ್ಕನೆತ್ತುವೊಡಮೇನಾನುವಂ ಬಿಡದೊಡಂ ಕೊಲೆಗೆ ಸಾಲ್ವರೆನ್ತಪ್ಪ ದ್ರೋಹಂಗೆಯ್ದು ಬನ್ದೂರಂ ಪೊಕ್ಕೊಡವನಂ ಮೂಱುದಿವಸಂ ಸರ್ವ್ವಪರಿಹಾರಂ ಕಾದು ಕಟೆಪುವುದು. ಊರ್ಮ್ಮೆಜೋಗವ್ವೆಯ ವಂಶದೊಳ್ಪೆಣ್ಗೂಸುಗಳಲ್ಲದೆ ಗಣ್ಡುಗೂಸುಗಳ ವಂಶಕ್ಕಡಿಹಾರಮಲ್ಲದೆ ಸಲ್ಲದು. ಪೆಣ್ಗೂಸುಗಳಿಲ್ಲದೊಡೆ ಗಣ್ಡುಮಕ್ಕಳ್ಗೆ ಸಲ್ಕುಂ.**

ಇಲ್ಲಿ ಮೂರು ನಿಯಮಗಳನ್ನು ರೂಪಿಸಿರುವುದನ್ನು ಕಾಣಬಹುದು ೧. ಅರಸನ ಆಳುಗಳು ಯಾರಾದರೂ ಆ ಕನ್ಯಾದಾನದ ಗ್ರಾಮವನ್ನು ಪ್ರವೇಶಿಸಿ ಅಲ್ಲಿಯ ಹುಲ್ಲು ರಾಶಿಗಳನ್ನು ಕೊಂಡೊಯ್ದವರಾದರೆ, ಇನ್ನಾವುದೇ

ವಸ್ತುವನ್ನು ಬಲಪ್ರಯೋಗದಿಂದ ವಶಪಡಿಸಿಕೊಳ್ಳುವರೇ ಆದರೆ, ಅವರನ್ನು ಮರಣದಡನೆಗೆ ಗುರಿಪಡಿಸಬೇಕು. ೨. ಯಾವುದೇ ರೀತಿಯ ದ್ರೋಹಕಾರ್ಯವನ್ನೆಸಗಿದ ಯಾವನಾದರೂ ಮನುಷ್ಯ ಜೀವಭಯದಿಂದ ಆ ಗ್ರಾಮವನ್ನು ಮರೆಹೊಕ್ಕನಾದರೆ ಅವನನ್ನು ಮೂರುದಿನಗಳ ಕಾಲ ಸಕಲ ವಿಧವಾದ ಆಪತ್ತುಗಳಿಂದಲೂ ಕಾಪಾಡಿ ಅನಂತರ ಗ್ರಾಮದಿಂದ ಹೊರಕ್ಕೆ ಕಳುಹಿಸಿಕೊಡಬೇಕು. ೩. ಮೇಲಿನ ಕನ್ಯಾದಾನವನ್ನು ಭೋಗಿಸುವ ಹಕ್ಕು ಜೋಗವ್ವೆಯ ಹೆಣ್ಣುಸಂತಾನದವರಿಗೇ ಸೇರಿದ್ದು. ಹೆಣ್ಣು ಸಂತಾನವಿಲ್ಲದೇ ಹೋದಲ್ಲಿ ಗಂಡು ಸಂತಾನದವರು ಅದನ್ನು ಅನುಭವಿಸತಕ್ಕದ್ದು.

ಈ ಶಾಸನವು ತಿಳಿಸುವಂತೆ ಮೋಚಬ್ಬರಸಿಯು ವಿಶೇಷ ಆದರ್ಶಗುಣವನ್ನುಳ್ಳ ಅರಸಿಯಾಗಿ ಕಂಡುಬರುತ್ತಾಳೆ. ಬರಡು ನೆಲವನ್ನು ಹಸನುಗೊಳಿಸಿ, ಯೋಗ್ಯ ಭೂಮಿಯನ್ನಾಗಿಸಿದ್ದಲ್ಲದೆ, ಪರಿಶ್ರಮದಿಂದ ಪರಿವರ್ತಿಸಿದ ಆ ಭೂಮಿಯನ್ನು ಹಾಳಾಗಲು ಬಿಡದಂತೆ ರಕ್ಷಿಸಲು ರೂಪಿಸಿದ ನಿಯಮಾವಳಿಗಳೂ ವಿಶಿಷ್ಟವಾಗಿದೆ. ಅಲ್ಲಿನ ಹುಲ್ಲನ್ನು ಸಹ ಯಾರೂ ಅಪಹರಿಸಬಾರದೆಂದು ಕೋರಿರುವ, ಅಪಹರಿಸಿದವರಿಗೆ ಮರಣದಂಡನೆಯಂಥ ಕ್ರೂರ ಶಿಕ್ಷೆಯಾಗಬೇಕೆಂದು ಕೋರಿರುವ ಮೋಚಬ್ಬರಸಿಗೆ ಅದರ ಬಗೆಗಿದ್ದ ಕಾಳಜಿಯನ್ನು ತಿಳಿಸುತ್ತದೆ. ಅವಳು ಕೇವಲ ಬಂಜರು ನೆಲವನ್ನಷ್ಟೇ ಪರಿವರ್ತಿಸುವ ಮನೋಭಾವದವಳಾಗಿರದೆ, ತನ್ನ ನೆಲದೊಳಗೆ "ಎನ್ತಪ್ಪ ದ್ರೋಹಂಗೆಯ್ದು ಬನ್ದೊರಂ ಪೊಕ್ಕೊಡವನಂ ಮೂಱುದಿವಸಂ ಸರ್ವ್ವಪರಿಹಾರಂ ಕಾದು ಕಟಿಪುವುದು" ಎಂತಹ ದ್ರೋಹಿಗೂ ಕೂಡ ಮೂರುದಿವಸನ ಆತಿಥ್ಯ ನೀಡಿ ಕಳಿಸಬೇಕೆಂಬ ಇವಳ ನಿಯಮವು, ಪಾಪಿಗಳ ಮನಸ್ಸನ್ನೂ ಪರಿವರ್ತಿಸುವ ಚಿಂತನೆ ನೆಡಸಿದ ಇವಳ ಗುಣವನ್ನು ಪರಿಚಯಿಸುತ್ತದೆ.

ಮೋಚಬ್ಬರಸಿಯ ಮೂರನೆಯ ನಿಯಮದಂತೆ ಇವಳ ಈ ಭೂಮಿಯು ಮುಂದೆ ಜೋಗವ್ವೆಯ ಹೆಣ್ಣುಸಂತಾನದವರಿಗೇ ಸೇರಿದ್ದು. ಹೆಣ್ಣು ಸಂತಾನವಿಲ್ಲದೇ ಹೋದಲ್ಲಿ ಗಂಡು ಸಂತಾನದವರು ಅದನ್ನು ಅನುಭವಿಸತಕ್ಕದ್ದು. ಇಲ್ಲಿ ಉಕ್ತವಾಗಿರುವ ಜೋಗವ್ವೆಯು ಯಾರೆಂಬುದು ಶಾಸನದಿಂದ ತಿಳಿದು ಬರುವುದಿಲ್ಲ. ಅವಳು ಬಹುಶಃ ಮೋಚಬ್ಬರಸಿಯ ತಾಯಿಯಿದ್ದಿರಬಹುದು.

**ಜೋಗಬ್ಬರಸಿ**

ಜೋಗಬ್ಬೆ ಅಥವಾ ಜೋಗಲದೇವಿಯು ಬನವಾಸಿ ಪನ್ನೀರ್ಚ್ಛಾಸಿರವನ್ನು ಪಾಲಿಸುತ್ತಿದ್ದ ಕುಂದರಾಜನ ಅರಸಿ. ಇವಳು ಇಂದಿನ ಹಾವೇರಿ ಜಿಲ್ಲೆಗೆ ಸೇರಿದ ಕಲ್ಲಿಹಾಳದ ಅಜ್ಜಡಿಯಲ್ಲಿ ಆಳ್ವಿಕೆ ನಡೆಸುತ್ತಿದ್ದಳು[೨೯]. ಜೋಗಬ್ಬರಸಿಯು ತನ್ನ ಆಳ್ವಿಕೆಯ ಊರಾದ ಅಜ್ಜಡಿಯಲ್ಲಿನ ಸಹದೇವೇಶ್ವರ ದೇವಸ್ಥಾನಕ್ಕೆ ಕ್ರಿ.ಶ.೧೦೮೯ರಲ್ಲಿ ಭೂಮಿಯನ್ನು ದಾನಮಾಡಿ, ಆ ವಿವರ ತಿಳಿಸುವ ಸಲುವಾಗಿ ಶಾಸನವನ್ನು ಹಾಕಿಸಿದ್ದಾಳೆ. ಚಂಪೂ ಶೈಲಿಯಲ್ಲಿ ರಚಿತವಾದ ಈ ಶಾಸನದಲ್ಲಿ "ಶ್ರೀ ಕಂದರ್ಪನ ಕಾವ್ಯಂ" ಎಂಬ ಉಲ್ಲೇಖವಿದೆ.

**ಕುಂದನ ಕುಲಲನೆ ಜಗ**
**ದ್ವಂದಿತೆ ಜೋಗಬ್ಬೆ ರೂಪವತಿ ಗುಣವತಿ ಪೂ**
**ರ್ಣೇಂದುಮುಖಿ ಸಂದ ಬರ್ಮನ**
**ನಂದನೆ ವಿಭುರಾಜಮಲ್ಲನ(ನು)ಸುತೆ ನೆಗಳ್ದಳ್ ॥**

ಜೋಗಬ್ಬೆಯನ್ನು ಕುರಿತು ರಚಿಸಲಾಗಿರುವ ಕಂದಪದ್ಯವೊಂದು ಅವಳ ರೂಪ, ಗುಣವನ್ನು ಬಣ್ಣಿಸಿ, ಇವಳು ಬರ್ಮನ ನಂದನೆ ಹಾಗೂ ಪ್ರಭು ರಾಜಮಲ್ಲನ ಅನುಸುತೆ (ಸಹೋದರಿ) ಎಂದು ಇವಳ ತಂದೆ ಹಾಗೂ ಸಹೋದರನನ್ನು ಉಲ್ಲೇಖಿಸಿದೆ.

**ನೆಟ್ಟನೆ ರೂಪವಿಭ್ರಮಕೆ ದಾನದ ಧರ್ಮದ ರೂಢಿಗುಂತೆ ಬಾ**
**ಯ್ವಿಟ್ಟು ನಿರಂತರಂ ಪದೆವ ಕಾಂತೆಯರಾ ವಧುಕೊಟ್ಟ ದಾನಮಂ**
**ಕೊಟ್ಟರೊ ಪುಟ್ಟುವಂದೊಡನೆ ಪುಟ್ಟಿದರೊ ಸತಿ ಪಟ್ಟ ತೊಟ್ಟಿಲೊಳ್**
**ಪಟ್ಟರೊ ನೋನ್ತರೋ ನೆಗಟ್ಟಿ ಜೋಗಲ ದೇವಿಯ ನೋಂತ ನೋಂಪಿಯಂ॥**

ಅರಸಿ ಜೋಗಲ ದೇವಿಯ ರೂಪು, ದಾನಗುಣವನ್ನು ಹೊಗಳಿದ ಕವಿಯು, ಅವಳು ನೀಡುವ ದಾನವನ್ನು ಪಡೆವ ಕಾಂತೆಯರು ಏನು ಪುಣ್ಯ ಮಾಡಿದ್ದರೋ ಜೋಗಲದೇವಿಯು ಮಾಡಿದ ವ್ರತವನ್ನೇ, ಪೂಜೆಯನ್ನೇ ಮಾಡಿದರೋ ಎನ್ನುತ್ತಾ ಜೋಗಲದೇವಿಯ ಪುಣ್ಯವನ್ನು, ಅವಳಿಂದ ಪ್ರಭಾವಿತರಾದವರ ಮೂಲಕ ಬಣ್ಣಿಸಿದ್ದಾನೆ.

ಸಹೋದರ ರಾಚಮಲ್ಲನ ಹಾಗೂ ಅಜ್ಜಡಿಯ ಸೆಟ್ಟಿವಾಳ ಸಹದೇವರ ಕೋರಿಕೆಯ ಮೇರೆಗೆ ಈಕೆಯು ಸಹದೇವೇಶ್ವರ ದೇವಾಲಯಕ್ಕೆ ಶರ್ಕ.೯೪೧ (ಕ್ರಿ.ಶ.೧೦೧೯) ಉತ್ತರಾಯನ ಸಂಕ್ರಮಣದಂದು ದಾನ ನೀಡಿದ್ದಾಳೆ[೩೦]. ಹಾವೇರಿಯ ಕಳ್ಳಹಾಳಿನಲ್ಲಿನ ದುರ್ಗಾ ಪರಮೇಶ್ವರಿ ದೇವಸ್ಥಾನದ ಬಳಿಯಿರುವ ಈ ಶಾಸನವು ಕ್ರಿ.ಶ.೧೦೧೯ರ ಕಾಲಕ್ಕೆ ಸೇರುತ್ತದೆ.

**ಕವಿ ಕಂದರ್ಪ:** ಶಾಸನದ ಫಲಶೃತಿಯನ್ನು ಹೇಳುವಾಗ 'ಶ್ರೀ ಕಂದರ್ಪನ ಕಾವ್ಯಂ' ಎಂದು ಉಲ್ಲೇಖಿಸಿರುವುದರಿಂದ ಈ ಕೃತಿಕಾರನ ಹೆಸರು ಕಂದರ್ಪ ಎಂದು ತಿಳಿದು ಬರುತ್ತದೆ. ಇವನು ಶಾಸನವು ತಿಳಿಸುವ ಕಾಲವಾದ ಕ್ರಿ.ಶ.೧೦೧೯ರಲ್ಲಿ ಇದ್ದವನು. ಇದೇ ಕಾಲದಲ್ಲಿದ್ದ 'ಮನಸಿಜ' ಎಂಬ ಕವಿಯನ್ನು ಶ್ರೀಧರಾಚಾರ, ದುರ್ಗಸಿಂಹ ಮೊದಲಾದ ಕವಿಗಳು ಉಲ್ಲೇಖಿಸಿದ್ದಾರೆ. ಈಶ್ವರಕವಿಯು ತನ್ನ ಕವಿಜಿಹ್ವಾಬಂಧನದಲ್ಲಿ 'ಚಿತ್ತಜ' ಎಂಬ ಕವಿಯೊಬ್ಬನನ್ನು ಹೆಸರಿಸಿರುವುದನ್ನು ಕವಿಚರಿತೆಕಾರರು ಚಿತ್ತಜ, ಮನಸಿಜರಿಬ್ಬರೂ ಒಬ್ಬನೇ ಇರಬಹುದೆಂದು ತಿಳಿಸಿರುವರಲ್ಲದೆ[೩೧] ಕರ್ಣಾಟಕ ಕವಿಚರಿತೆಯ ಮೊದಲನೆಯ ಸಂಪುಟದ ಅನುಬಂಧದಲ್ಲಿ ಕವಿ ಮನಸಿಜನೇ ಕಂದರ್ಪನೆಂಬ ಹೆಸರಿನಿಂದ ಬರೆದಿರಬಹುದೆಂಬ ಅನುಮಾನವನ್ನೂ ವ್ಯಕ್ತಪಡಿಸಿದ್ದಾರೆ.

## ಕದಂಬ ಮಾಳಲದೇವಿ

ಹಾನುಗಲ್ಲು ಕದಂಬ ವಂಶದ ಕೀರ್ತಿವರ್ಮನ ಪಟ್ಟಮಹಾದೇವಿ ಮಾಳಲದೇವಿಯು ಸೊರಬ ತಾಲ್ಲೂಕಿನ ಕುಪ್ಪಟೂರಿನಲ್ಲಿ ಕ್ರಿ.ಶ.೧೦೭೫ರಲ್ಲಿ ಮಕರ ತೋರಣ, ಮಾನಗಂಬಗಳೊಂದಿಗೆ ಪಾರ್ಶ್ವನಾಥ ಚೈತ್ಯಾಲಯ ನಿರ್ಮಿಸಿದ್ದಾಳೆ. ಬ್ರಹ್ಮಜಿನಾಲಯ ಎಂದು ಕರೆಯಲಾದ ಈ ಜಿನಾಲಯದ ಪೂಜಾದಿಗಳಿಗಾಗಿ ಎಡೆನಾಡಿಗೆ ಸೇರಿದ ಸಿಡ್ಡಣಿ ಎಂಬ ಗ್ರಾಮವನ್ನು ತನ್ನ ಪತಿಯಿಂದ ಪಡೆದುಕೊಂಡು ದತ್ತಿಯಾಗಿ ನೀಡಿದ್ದಾಳೆ. ಈ ಕುರಿತಾದ ವಿವರವನ್ನು ತಿಳಿಸಿರುವ ಶಾಸನ ಪದ್ಯವು ಚಂಪೂ ಶೈಲಿಯಲ್ಲಿ ರಚಿತವಾಗಿದೆ. ಶಾಸನವು ಬಹಳಷ್ಟು ತ್ರುಟಿತವಾಗಿದ್ದು ಕೆಲವು ಪದ್ಯಭಾಗಗಳು ನಷ್ಟವಾಗಿವೆ[೩೨].

ಈ ಶಾಸನಪದ್ಯದಲ್ಲಿ ಮಾಳಲದೇವಿಯನ್ನು ಎರಡು ಕಂದಪದ್ಯ ಹಾಗೂ ಎರಡು ವೃತ್ತಗಳಲ್ಲಿ ಕವಿಯು ಬಣ್ಣಿಸಿದ್ದಾನೆ.

ವ ॥ಆ ಕೀರ್ತಿ ದೇವನ ಅಗ್ರಮಮಹಿಷಿ ॥

**ಪರಿವಾರ ಸುರಭಿ ಜಿನಮತ । ಶರಧಿ ಸುಧಾಕಿರಣ ಲೇಖೆ ಸುಚರಿ (ತ) (ದಿವ್ಯಾ)**
**ಭರಣೆಯೆನೆ ನೆಗಳ್ದ ನೃಪ ಸುಂ । ದರಿ ಮಾಳಲ ದೇವಿಯೆಣೆಗೆ ರಾಣಿಯರೆಣೆಯೇ ॥**

**ಪುರು ಜಿನಪತಿ ಕುಲದೈವಮ್**
**ಗುರು ಬೆಟ್ಟದ . . . . ಮುನಿ ಕೀರ್ತಿ ನೃಪೇ**
**ಶ್ವರನಾತ್ಮ ಕಾಂತನೆನೆ ಬಾ**
**ಪ್ಪುರೆ ಮಾಳಲ ದೇವಿ ರಾಣಿಯೆಣೆ ಯಾರ್ಸ್ವತಿಯರ್ ॥**

ಬಂಧು-ಬಾಂಧವರಿಗೆ ನಚ್ಚಿನ ಜನತೆಗೆ ಕಾಮಧೇನುವಿನಂತಿರುವ, ಉತ್ತಮ ಚರಿತ್ರೆಯೂ ದಿವ್ಯಾಭರಣೆಯೂ, ಸೌಂದರ್ಯವತಿಯೂ ಆದ ರಾಜಮನೆತನದ ಮಾಳಲದೇವಿಗೆ ಮತ್ಯಾವ ರಾಣಿಯರೂ ಸಾಟಿ ಇರಲು ಸಾಧ್ಯವಿಲ್ಲವೆಂದು ಬಣ್ಣಿಸಿರುವ ಕವಿಯು ರಾಜಮನೆತನದ ಪರಮ ಜಿನನು ಕುಲದೈವವಾಗಿರಲು, ಜೊತೆಗೆ ಶ್ರೇಷ್ಠರಾದ ಗುರು, ಕೀರ್ತಿಪಡೆದ ನೃಪನನ್ನು ಪತಿಯನ್ನಾಗಿ ಪಡೆದ ಮಾಳಲದೇವಿಗೆ ಯಾರು ಸಮಾನರು ಎಂದಿದ್ದಾನೆ. ಅಲ್ಲದೆ ಇವಳನ್ನು ಪರಿವಾರ ಸುರಭಿ ಎಂದು ಕರೆದು ರಾಜಮನೆತನದ ಈಕೆಯು ಗುಣವನ್ನು ತಿಳಿಸಿದ್ದಾನೆ.

**ಸಿರಿ ಗಿರಿಜಾತೆ ಸೀತೆ ರತಿ ಭಾ(ರತಿ) ರುಕ್ಮಿಣಿ ದೇವಿ ರೂಪ ಸೌಂ**
**ದರತೆಗೆ ಪೆರ್ಮೆ ಗುಧ್ಧ . . ತಕ್ಕಧಿಕಂ ಸೊಬಗಿಂಗೆ ಸತ್ಕಳಾ**
**ಕರತೆಗಣಮ್ ಜಿನೇಂದ್ರ ಪದಭಕ್ತಿಗೆ ಪಾಸ ಟಿವ . . . .**
**ಸರಿ ಕಲಿ ಕೀರ್ತಿದೇವನ ಕುಲಾಂಗನೆ ಮಾಳಲದೇವಿ ರಾಣಿಯೊಳ್ ॥**

ಲಕ್ಷ್ಮಿ, ಪಾರ್ವತಿ, ಸೀತೆ, ರತಿ, ಭಾರತಿ, ರುಕ್ಮಿಣಿದೇವಿಯರ ರೂಪ, ಸೌಂದರ್ಯ, ಔನ್ನತ್ಯವನ್ನು ಹೊಂದಿರುವುದಲ್ಲದೆ ಸತ್ಕಳಾವಲ್ಲಭೆಯೂ ಆಗಿರುವ ಕೀರ್ತಿದೇವನ ರಾಣಿ ಮಾಳಲದೇವಿಯು ಜಿನಪದಭಕ್ತೆ ಯಾಗಿರುವುದನ್ನು ಈ ಚಂಪಕಮಾಲಾ ವೃತ್ತದಲ್ಲಿ ಕವಿಯು ಬಣ್ಣಿಸಿದ್ದಾನೆ.

**ಮಿಳಿರ್ವ ಪತಾಕೆಗಳ್ ಮಕರ ತೋರಣ ಮಂಡಲಿ ಮಾನಗಂಭ (ಮ)ಂ ಅ**
**ಗ್ಗಳಿಸಿರೆ . . . . . ದ ಚೈತ್ಯ ಗೃಹಾವಳಿ ಲೆಕ್ಕಿಪಂಗೆ ಸಂ**
**ಗಳಿಪಡೆ ಲಕ್ಕೆಗಂ ಮಿಗಿಲಶೇಷ ಜನಮ್ ತಣಿವಂತು ಕೊಳ್ವ ಪೂ**
**ಮಳೆಯೊಳೆ ನೋಂಪ ನೋಂಪಿ ಶತಕೋಟಿಯೆ ಮಾಳ ಲ(ದೇವಿ) . . ಯಾ ॥**

ಮಾಳಲಾದೇವಿಯು ನಿರ್ಮಿಸಿರುವ ಚೈತ್ಯಾಲಯವು ಹಾರಾಡುವ ಪತಾಕೆಗಳು – ಮಕರತೋರಣಗಳಿಂದ ಆಲಂಕೃತಗೊಂಡು, ಮುಂಭಾಗದಲ್ಲಿ ಮಾನಸ್ಥಂಭವನ್ನು ಹೊಂದಿದ್ದು, ಎಲ್ಲರಿಂದಲೂ ಮೆಚ್ಚುಗೆ ಗಳಿಸಿದೆ ಎಂಬ ವಿವರಣೆ ನೀಡುವ ಕವಿಯು ಈ ಜಿನಾಲಯದ ವಿಸ್ತೀರ್ಣವನ್ನು ಕುರಿತು ಒಮ್ಮೆಲೆ ಲಕ್ಷಕ್ಕೂ ಅಧಿಕ ಸಂಖ್ಯೆಯಲ್ಲಿ ಜನರಿಗೆ ಆಶ್ರಯ ನೀಡುವಷ್ಟು ಹಿರಿದಾಗಿದೆ ಎಂದು ಬಣ್ಣಿಸಿದ್ದಾನೆ. ಸಾಮಾನ್ಯ ಮಾನವರಿಗೆ ನಿರ್ಮಿಸಲು ಅಸಾಧ್ಯವಾದುದನ್ನು ಮಾಳಲದೇವಿ ಸಾಧಿಸಿದ್ದಾಳೆ ಎಂಬುದನ್ನು, ಮಾಳಲದೇವಿಯು ಶತಕೋಟಿ ಪುಷ್ಪಗಳಿಂದ ವ್ರತವನ್ನು ಮಾಡಿ ಇಂತಹ ಜಿನಾಲಯವನ್ನು ಕಟ್ಟಿಸಿದ್ದಾಳೆ ಎಂಬ ಉದ್ಗಾರವನ್ನು ತೆಗೆದಿದ್ದಾನೆ. ಕವಿಯು, ಹಾನುಗಲ್ಲು ಕದಂಬರ ಶೌರ್ಯಗುಣ, ಮಾಳಲದೇವಿಯ ಪತಿಯ ಸಾಹಸಗಳನ್ನು ಬಣ್ಣಿಸಿ, ಸುಂದರವಾದ ನಗರ ಬಣ್ಣನೆಯನ್ನು ಮಾಡಿದ್ದಾನೆ. ನಗರವರ್ಣನೆ ಕುರಿತಾದ ಒಂದು ಪದ್ಯ ಈ ಪ್ರಕಾರವಾಗಿದೆ.

**ಬೆಳೆದ ಸುಗಂಧಿಶಾಲಿವನದಿಂದೊಳಗೊಪ್ಪುವ ನಾರಿಕೇಳ ಕಾ**
**ದಳ ನವಪೂಗ ನಾಗಲತಿಕಾವನದಿಂ ಪಸರಿಪ ಪರಿಮಳದಿಂ**
**ವಳಯಿತಮಾಗಿ ವಿಪ್ರ ಸುರ ಚಿತ್ರನಿಕೇತನಮಾಲೆಯಿಂದೆ ಕ**
**ಣ್ಗೊಳಿಪುದು ಕಪ್ಪಟೂರ್ ಸಕಳವಿದ್ಯೆಗೆ ತಾನೆನೆ ಜನ್ಮಭೂತಳಂ ॥**

ಕಣ್ಣೋಳಿಸುವ ಕುಪ್ಪಟೂರಿನ ಸುಂದರ ನೋಟದ ವರ್ಣನೆ ನೀಡಿರುವ ಕವಿಯು ಅಲ್ಲಿನ ವನ, ವನದಲ್ಲಿನ ಫಲಭರಿತ ಗಿಡ–ಮರಗಳು, ಅವುಗಳ ಪರಿಮಳ, ಸಕಲವಿದ್ಯಾ ಪಾರಂಗತರಾದ ಅಲ್ಲಿನ ಜನ ಎಲ್ಲವನ್ನೂ ಕವಿಯು ಈ ಒಂದು ವೃತ್ತದಲ್ಲಿ ತಿಳಿಸಿದ್ದಾನೆ.

**ಕವಿ ಬಮ್ಮರ ಹರಿಯಣ್ಣ:** ಕವಿಯು ಈ ಶಾಸನದ ಕಡೆಯಲ್ಲಿ **"ಬಮ್ಮರ ಹರಿಯಣ್ಣ ಹೇೞ್ದ ಶಾಸನ"** ನೆಂದು ತನ್ನನ್ನು ಹೆಸರಿಸಿಕೊಂಡಿದ್ದಾನೆ. ಗದ್ಯ ಪದ್ಯ ಸಂಮಿಶ್ರವಾದ ಚಂಪೂ ಪ್ರಕಾರದಲ್ಲಿ ನಿರೂಪಣೆ ನೀಡಿರುವ ಈ ಶಾಸನದಲ್ಲಿ ಕಂದ ಪದ್ಯ, ಉತ್ಪಲಮಾಲೆ, ಮತ್ತೇಭವಿಕ್ರೀಡಿತ, ಚಂಪಕಮಾಲೆ, ಶಾರ್ದೂಲವಿಕ್ರೀಡಿತ, ಇಂದ್ರವಜ್ರ ಹಾಗೂ ಶಾಲಿನೀ ವೃತ್ತಗಳೊಂದಿಗೆ ಸಂಸ್ಕೃತ ಶ್ಲೋಕಗಳನ್ನೂ ಸೇರಿಸಿ ಕವಿಯು ತನ್ನ ಉಭಯಭಾಷಾ ಪಾಂಡಿತ್ಯ ತೋರಿದ್ದಾನೆ. ಈ ಶಾಸನದಲ್ಲಿ ಬರುವ ಕುಪ್ಪಟೂರಿನ ವರ್ಣನೆಯು ಮುಂದಿನ ಕೆಲವು ಕನ್ನಡ ಕಾವ್ಯಗಳಲ್ಲಿನ ನಗರ ವರ್ಣನೆಯ ಪದ್ಯಗಳಿಗೆ ಪ್ರೇರಣೆಯನ್ನೊದಗಿಸಿದೆ.

### ಚಾಲುಕ್ಯ ಜಾಕಲದೇವಿ

ಚಾಲುಕ್ಯ ಅರಸಿ ಜಾಕಲದೇವಿಯು ಅಜಿಲ್ ಮುನ್ನೂರರೊಳಗಿನ ಇಂಗುಣಿಗೆಯಲ್ಲಿ ಆಳ್ವಿಕೆ ನಡೆಸುತ್ತಿದ್ದಳು. ಅರಸಿಯು ಕ್ರಿ.ಶ.೧೦೯೪ರಲ್ಲಿ ಇಂಗಳಿಗೆಯಲ್ಲಿ ಬಸದಿಯನ್ನು ನಿರ್ಮಿಸಿದ ವಿಷಯವನ್ನು ಚಂಪೂ ಶೈಲಿಯ ಶಾಸನ ಪದ್ಯವೊಂದು ನಿರೂಪಿಸಿದೆ[೩೩].

ಕಲುಬುರ್ಗಿ ಜಿಲ್ಲೆಯ ವಾಡಿ ಬಳಿಯ ಇಂಗಳಗಿಯಲ್ಲಿ ಜಾಕಲದೇವಿಯಿಂದ ನಿರ್ಮಿತವಾದ ಜಿನಾಲಯವು ಇಂದಿಗೆ ನಾಶವಾಗಿದ್ದರೂ, ಸುಸ್ಥಿತಿಯಲ್ಲಿರುವ ಇವಳು ಹಾಕಿಸಿದ ಶಾಸನವು ಜಾಕಲದೇವಿಯ ಧರ್ಮ ಕಾರ್ಯಗಳನ್ನೂ, ಗುಣವಿಶೇಷಗಳನ್ನು ಬಣ್ಣಿಸಿದೆ[೩೪].

ಸಾಧಾರಣವಾಗಿ ಚಕ್ರವರ್ತಿಗಳ, ಮಹಾರಾಜರ ಶಾಸನಗಳಲ್ಲಿ ಅವರ ಜಯ ಪ್ರಶಸ್ತಿಯನ್ನು ಹಾಡಿ ಹೊಗಳುವುದನ್ನು ಕಾಣುತ್ತೇವೆ. ಅದೇ ಧಾಟಿಯಲ್ಲಿ ಈ ಶಾಸನ ಕವಿಯು ಜಾಕಲದೇವಿಯ ಪ್ರಶಸ್ತಿಯನ್ನು ರಚಿಸಿರುವುದು ಈ ಶಾಸನದ ವಿಶೇಷವಾಗಿದೆ. ಜಾಕಲದೇವಿಯನ್ನು – **ಸಮಸ್ತಾನ್ತಃಪುರ ನಿತಂಬಿನೀ, ಕದಂಬಚೂಡಾಮಣಿ, ಚತುರ್ವ್ವಿಧದಾನ ಚಿನ್ತಾಮಣಿ, ರಂಭಾವಿಳಾಸೋಪಹಸಿತಸನ್ಮೂರ್ತ್ತಿ, ದಿಗ್ವಿಜಯವಿಳಸಿತೋಜ್ವಳಕೀರ್ತಿ, ಕಲಿಕಾಲಪಾರ್ವ್ವತಿ, ಅಭಿನವಸರಸ್ವತಿ, ರಾಯಚೇತೋವಶೀಕರಣ, ವಿದ್ಯಾಧರಿ, ಸಕಳಕಳಾಧರಿ, ಸೀತಾದ್ಯನೇಕ ಮಹಾಸತೀಜನ ಪತಿಬ್ರತಾಚಾರ ಶೀಳೋದಾರ ವರ್ಣನಕಥಾಪ್ರಸಂಗ, ಜಿನಗನ್ಧೋದಕ ಪವಿತ್ರೀಕೃತೋತ್ತಮಾಂಗೆ, ಶ್ರೀಮದರ್ಹತ್ ಪರಮೇಶ್ವರ ಚಾರುಚರಣಾರ್ಚ್ಚನವಿನೋದೆ, ಮೃಗಮದಾಮೋದೆ, ಸಹಜಬೆಡಂಗಿ, ತಿಕ್ಕಣನಣುಂಗಿ, ಶ್ರೀಮತ್ರಿಭುವನಮಲ್ಲದೇವ ವಿಶಾಳವಕ್ಷಸ್ಥಳ ನಿವಾಸಿನಿಯರಪ್ಪ ಶ್ರೀಮಜ್ಜಾಕಳದೇವಿಯರ್ ಅಜಿಲ್ಮೂನೂಱಱೊಳಗಣಿಂಗಣಿಗೆಯಂ ತ್ರಿಭೋಗಾಭ್ಯನ್ತರ ಸಿದ್ಧಿಯಿಂದಾಳುತ್ತಮಿರೆ** ಎಂದು ಕವಿಯು ಬಣ್ಣಿಸಿದ್ದಾನೆ.

ಅರಸಿ ಜಾಕಳದೇವಿಯ ಸೌಂದರ್ಯ, ಸ್ಫೂರ್ತಿಯುತ ಹಸನ್ಮುಖ, ರಾಜಮನೆತನಕ್ಕೆ ತಕ್ಕುದಾದ ತೇಜಸ್ಸು, ವಿದ್ಯಾಸಂಪನ್ನೆಯಾಗಿ ಪಡೆದ ಅಭಿನವ ಸರಸ್ವತಿ, ವಿದ್ಯಾಧರಿ, ಸಕಳಕಳಾಧರಿ ಎಂಬ ಮೊದಲಾದ ಬಿರುದು, ಶಕ್ತಿಗೆ ಹೆಸರಾದ ಪಾರ್ವತಿ, ವಿದ್ಯೆಗೆ ಅಧಿದೇವತೆಯಾದ ಸರಸ್ವತಿಯನ್ನು ಹೋಲಿಸಿರುವುದಲ್ಲದೆ ಇವಳ ಪತಿವ್ರತಾಗುಣವನ್ನು ಬಣ್ಣಿಸುತ್ತಾ, ಸೀತೆ ಮೊದಲಾದ ಅನೇಕ ಮಹಾಸತೀಜನರ ಪತಿವ್ರತಾಚಾರವನ್ನು ಪಾಲಿಸಿ **'ಶೀಳೋದಾರವರ್ಣನ ಕಥಾಪ್ರಸಂಗ'ಕ್ಕೆ** ಕಾರಣಳಾದವಳು ಎನ್ನುತ್ತಾ ಕವಿಯು ಜಾಕಲೆಯು ಮಾಡಿದ ಯಾವುದೋ ವ್ರತದ ಘಟನೆಯನ್ನು ಸೂಚ್ಯವಾಗಿ ತಿಳಿಸಿದ್ದಾನೆ. ಬಹುಶಃ ಇವಳು ಮಾಡಿದ ಯಾವುದೋ ವ್ರತವು ಸಾರ್ವಜನಿಕರಿಂದ ಹೊಗಳಲ್ಪಟ್ಟಿರಬಹುದು. ಈ ಗುಣಗಳೊಂದಿಗೆ ಕವಿಯು ಇವಳ ದಾನಗುಣ, ಜಿನಭಕ್ತಿಗಳನ್ನು ಕುರಿತು ಬಣ್ಣಿಸಿದ್ದಾನೆ. ಅರಸಿ ಜಾಕಲಾದೇವಿಯ ರೂಪ, ಗುಣ ಸ್ವಭಾವಗಳೊಂದಿಗೆ ಕದಂಬಚೂಡಾಮಣಿ,

ತಿಕ್ಕಣನಣುಗಿ ಎಂದು ಕರೆದು ಜಾಕಲದೇವಿಯು ಕದಂಬ ಕುಲಕ್ಕೆ ಸೇರಿದ ತಿಕ್ಕಣನೆಂಬುವವನ ಮಗಳೆನ್ನುವುದನ್ನೂ ಕವಿ ಉಲ್ಲೇಖಿಸಿದ್ದಾನೆ.

ರಾಜ್ಯ ಪರಿಪಾಲಿಸುವಲ್ಲಿ ಜಾಕಲೆಯ ಮಹತ್ವವನ್ನು ಕುರಿತು "..ಜಿನಶಾಸನ ಪರಿಪಾಳನಸಮಯದೊಳ್ ಶಾಸನ ಲಕ್ಷ್ಮಿಯುಂ ಚಾಳುಕ್ಯ ಚಕ್ರೇಶ್ವರನ ದಿಗ್ವಿಜಯ ಸಮಯದೊಳ್ ಕೀರ್ತಿಲಕ್ಷ್ಮಿಯುಂ ಮದವದರಿರಾಯ ಮದ ಮರ್ಧನ ಸಮಯದೊಳ್ ವಿಜಯ ಲಕ್ಷ್ಮಿಯುಂ ಎನಿಸಿ ನೆಗರ್ತೆಗಂ ಪೊಗರ್ತೆಗಂ ನೆಲೆಯಾಗಿ ವರ್ತಿಸುತ್ತಂ.." ಎನ್ನುತ್ತಾ ಜಿನವ್ರತವನ್ನು ಪಾಲಿಸುವಾಗ ಶಾಸನ ಲಕ್ಷ್ಮಿಯಂತೆಯೂ, ಪತಿಯ ದಿಗ್ವಿಜಯ ಸಮಯದಲ್ಲಿ ಕೀರ್ತಿಲಕ್ಷ್ಮಿಯಂತೆಯೂ, ಶತ್ರುಗಳ ಮದವನ್ನು ಭಂಜಿಸುವ ಸಮಯದಲ್ಲಿ ವಿಜಯ ಲಕ್ಷ್ಮಿಯೂಎನಿಸಿ ಸದಾ ಸಂಭ್ರಮ, ಉತ್ಸಾಹದಿಂದಿರುವ ಇವಳ ಗುಣವನ್ನು ಇಲ್ಲಿ ತಿಳಿಸಲಾಗಿದೆ.

ಕವಿಯು, ಈ ಕೆಳಗಿನ ಪದ್ಯದಲ್ಲಿ ಜಾಕಲದೇವಿಯನ್ನು ಸೀತೆಯಂತೆ ಸುಚರಿತೆ, ಪಾರ್ವತಿಯಂತೆ ಪತಿಯ ಅರ್ಧಾಂಗಿಯಾಗಿ, ಭೂದೇವಿಯ ಕ್ಷಮಾಗುಣ, ರಂಭೆಯ ಸೌಂದರ್ಯ, ಕಾಮಧೇನುವಿನ ದಾನಗುಣಗಳನ್ನು ಹೊಂದಿರುವ ಜಾಕಲದೇವಿಯು ಕಾಮನ ಬಾಣ ಭೂಮಿಯಲ್ಲಿ ಹುಟ್ಟಿಬಂದ ಹಾಗಿದ್ದಾಳೆ ಎಂದು ಬಣ್ಣಿಸಿದ್ದಾನೆ.

**ಜನಕಜೆಯಂತೆ ಸಜ್ಜನಜನಸ್ತುತೆ ಪಾರ್ವ್ವತಿಯಂತೆ ಜೀವಿತೇ**
**ಶನೊಳವಿಕಳ್ಪಭಾವೆ ಧರೆಯಂತೆ ಧೃತಕ್ಷಮೆ ರಂಭೆಯಂತೆ ರೂ**
**ಪಿನ ನೆಲೆ ಪೆಂಪುವೆತ್ತಮರ ಧೇನುವಿನಂತನಿಮಿತ್ತ ದಾನಿ ಕಾ**
**ಮನಸರಲಂತಿರೈಯ್ದೆ ಪರಿಭಾವಿಸೆ ಜಾಕಲದೇವಿ ಧಾತ್ರಿಯೊಳ್ ॥**

ಮುಂದಿನ ಪದ್ಯದಲ್ಲಿ ಕವಿಯು, ಅರಸಿಗೆ ಸಂಬಂಧಿಸಿದ ಎರಡು ಪ್ರಸಂಗಗಳನ್ನು ತಿಳಿಸಿದ್ದಾನೆ.

**ಬ್ರತಮಂ ಚಾಳುಕ್ಯ ಕ್ಷಿತಿ**
**ಪತಿ ಕಿಡಿಸುವೆನೆಂದು ಪೂಣ್ದಡಂ ಕಿಡಿಸದಡಂ**
**ಪ್ರತಿಪಾಳಿಸಿದೊಂದು ಮಹೋ**
**ನ್ನತಿ ಜಾಕಲದೇವಿಗೆಕ್ಕ ಲಾವಣಮಲ್ತೆ ॥**

ಜಾಕಲದೇವಿಯು ಆಚರಿಸುತ್ತಿರುವ ವ್ರತವನ್ನು ಭಂಗಪಡಿಸುವೆನೆಂದು ಪಣತೊಟ್ಟ ಚಕ್ರವರ್ತಿಯು ಹಾಗೆ ಮಾಡಲಾರದೆ ಸೋತನೆಂಬ ಸ್ವಾರಸ್ಯಕರವಾದ ಪ್ರಸಂಗವನ್ನು ಬಣ್ಣಿಸುತ್ತಾ ಅರಸಿಯ ದೃಢತೆಯನ್ನು ಕುರಿತು ತಿಳಿಸಿದ್ದಾನೆ. ಕವಿಯು ತಿಳಿಸಿರುವ ಮತ್ತೊಂದು ಪ್ರಸಂಗವೆಂದರೆ:– ಒಮ್ಮೆ ಓಲಗದಲ್ಲಿದ್ದ ಇವಳ ಪತಿ ವಿಕ್ರಮಾದಿತ್ಯನಿಗೆ, ಶ್ರೇಷ್ಠಿಯೊಬ್ಬ ಒಂದು ಸುಂದರ ಜಿನಪ್ರತಿಮೆಯನ್ನು ತಂದು ಕೊಡುತ್ತಾನೆ. ಆ ಸುಂದರ ಪ್ರತಿಮೆಯನ್ನು ಜಿನಧರ್ಮಪಾರಾಯಣೆಯಾದ ತನ್ನ ಮೆಚ್ಚಿನ ರಾಣಿ ಜಾಕಲೆಗೆ 'ನಿನ್ನಾಳಿಕೆಯ ಊರೊಳಗೆ ಪ್ರತಿಷ್ಠಿಸು' ಎಂದು ಹೇಳುತ್ತಾನೆ. ಈ ಎರಡೂ ಪ್ರಸಂಗಗಳನ್ನು ಪೂರಕವಾಗಿ ನೋಡುವುದಾದರೆ ಜಿನವ್ರತವನ್ನು ಭಂಗಪಡಿಸಲಾಗದ ದೊರೆಯು ತನಗೆ ದೊರಕಿದ ರತ್ನಖಚಿತವಾದ ಜಿನಬಿಂಬವನ್ನು ರಾಣಿಗೆ ಕೊಟ್ಟು ಅದನ್ನು ಅವಳ ಆಳ್ವಿಕೆಯ ಊರಿನಲ್ಲಿಯೇ ಪ್ರತಿಷ್ಠಾಪಿಸಲು ತಿಳಿಸಿದ್ದು, ಅವಳ ಗೆಲುವಿಗೆ ನೀಡಿದ ಬಹುಮಾನ ದಂತೆಯೂ, ಜಿನವ್ರತಾನಿಷ್ಠೆಯಾದ ಜಾಕಲೆಗೆ ಚೈತ್ಯಾಲಯವನ್ನು ನಿರ್ಮಿಸಲು ನೀಡಿದ ಸವಾಲಿನಂತೆಯೂ ತೋರುವುದು. ಅದನ್ನು ವಿಜೃಂಭಣೆಯಿಂದ ನೆರವೇರಿಸಿದ ಜಾಕಲೆಗೆ, ಆ ಜಿನಬಿಂಬದ ಪ್ರತಿಷ್ಠಾಪನಾ ವಿಚಾರವನ್ನು ದಾಖಲಿಸುವುದೇ ಪ್ರಸ್ತುತ ಶಾಸನವನ್ನು ಹಾಕಿಸಲು ಮುಖ್ಯ ಕಾರಣವಾಗಿದೆ.

**ಜಿನಬಿಂಬಂ ಪ್ರತಿಬಿಂಬಮಿಲ್ಲೆನಿಪ ಚೆಲ್ವಂ ತಾಳ್ದಿತೀದೇಯ್ವಮಂ। ನಿನಗೆಂತುಂ ಕುಲದೆಯ್ವಮೀ ಪ್ರತಿಮೆಯಂ ನಿಂನಾಳ್ಕೆಯೂರೊಳ್ವಿನೇ**
**ಯನಿಕಾಯಂ ಬಗೆಗೊಳ್ವಿನಂ ನಿಲಿಸೆನಲ್ಚಾಳುಕ್ಯ ಚಕ್ರೇಶ ಶಾ । ಸನದಿಂ ತಜ್ಜಿನಬಿಂಬಮಂ ನಿಲಿಸಿದಳ್ತಂನೊಳ್ಪು ನಿಲ್ವನ್ನೆಗಂ॥**

ಅರಸಿ ಜಾಕಲೆಯ ಕುಲದೈವವಾದ ಆ ಅಪ್ರತಿಮ ಬಿಂಬವೆನಿಸಿದ ಜಿನವಿಗ್ರಹವನ್ನು, 'ನೀನು ಆಳುವ ಊರಿನಲ್ಲಿಯೇ ಸಜ್ಜನರ ಸಂಘವು ಮೆಚ್ಚುವಂತೆ ಪ್ರತಿಷ್ಠಾಪಿಸು' ಎಂದ ದೊರೆಯ ವಾಕ್ಯಕ್ಕೆ ಪ್ರತಿಯಾಗಿ ತನ್ನ ಕೀರ್ತಿ ಶಾಶ್ವತವಾಗಿ ನಿಲ್ಲುವಂತೆ ಜಿನಬಿಂಬವನ್ನು ನಿಲ್ಲಿಸಿದಳು (ಪ್ರತಿಷ್ಠಾಪಿಸಿದಳು) ಎಂಬ ಈ ವಿಚಾರವನ್ನು ಕವಿಯು ಈ ಮೇಲಿನ ಪದ್ಯದಲ್ಲಿ ತಿಳಿಸಿದ್ದಾನೆ.

**ಎಸೆವಿನೆಗಂ ಸಮನ್ತು ಮಹುಮಾಣಿಜಿನೇಶ್ವರ ಬಿಂಬಮಂ ಪ್ರತಿ**
**ಷ್ಠಿಸಿದೆನಿದತ್ಯಪೂರ್ವ್ವಮೆನೆ ತಜ್ಜಿನಗೇಹಮನರ್ತ್ತಿಯಿಂದೆ ಮಾ**
**ಡಿಸಿದೆನದಕ್ಕೆ ತಕ್ಕ ತಳವೃತ್ತಿಯುಮಂ ಸಮಕಟ್ಟಿದೆಂ ಪ್ರಸಾ**
**ದಿಸಿ ಮನಮೊಲ್ದು ಕಯ್ಕೊಳುವುದೂರ್ಜ್ಜಿತಮಾಗಿರೆ ಮಾಳ್ಪುದಿಂತಿದಂ ॥**

ಕವಿಯು ಅರಸಿಯ ಬಿನ್ನಪದ ಹಾಗೂ ಆಣತಿಯ ನುಡಿಗಳನ್ನು ನೇರವಾಗಿ ಪದ್ಯರೂಪದಲ್ಲಿ ತಿಳಿಸಿದ್ದಾನೆ. ಜಾಕಲದೇವಿಯು, ತನ್ನ ನಾಡಿಗೇ ಶೋಭೆಯೆನಿಸುವಂತಹ ಜಿನಾಲಯವನ್ನು ನಿರ್ಮಿಸಿ, ಅದಕ್ಕೆ ತಳವೃತ್ತಿಯನ್ನು ವ್ಯವಸ್ಥೆ ಮಾಡಿ, ಅದನ್ನು ತನ್ನ ಗುರುಗಳಾದ ಇಂದ್ರಸೇನ ಭಟ್ಟಾರಕರ್ಗೆ ನೀಡಿದ್ದಾಳೆ. ಇವಳು ದತ್ತಿಯಾಗಿ ನೀಡಿದ ಭೂಮಿಯ ವಿವರಣೆಯನ್ನು ವಿವರವಾಗಿ ಗದ್ಯದಲ್ಲಿ ನೀಡಲಾಗಿದೆ.

**ಕವಿ ನಾಗಾರ್ಜುನ:** ಈ ಶಾಸನ ಪದ್ಯದ ಕಡೆಯ ಸಾಲಿನ, 'ವಾಗ್ವಧೂನನ್ದನಂ ಜಿನಪಾದಾಂಭೋಜಭೃಂಗಂ ನಾಗಾರ್ಜುನಪಣ್ಡಿತಂ ಬರೆದಂ' ಎಂಬ ಒಂದೇ ಸಾಲಿನಲ್ಲಿ ಕವಿ ತನ್ನ ಹೆಸರನ್ನು ಮಾತ್ರ ತಿಳಿಸಿದ್ದಾನೆ. ಇದರಿಂದ ಈ ಶಾಸನವನ್ನು ಬರೆದಿರುವ ಕವಿಯ ಹೆಸರು ನಾಗಾರ್ಜುನ ಪಂಡಿತ ನೆಂದೂ, ಈತನಿಗೆ 'ವಾಗ್ವಧೂನಂದನ' ಎಂಬ ಬಿರುದು ಇತ್ತೆಂಬುದೂ ತಿಳಿದು ಬರುತ್ತದೆ. ಕವಿಗೆ ಈ ಬಿರುದು ರಾಜಾಶ್ರಯದಲ್ಲಿ ದೊರಕಿರಬಹುದು. ಆದರೆ ಈತ ರಚಿಸಿರುವ ಮತ್ತಾವ ಕಾವ್ಯವೂ ದೊರೆತಿಲ್ಲ.

ಕ್ರಿ.ಶ.೧೧೨೫ರಲ್ಲಿ ರಚಿತವಾಗಿರುವ ಮತ್ತೊಂದು ಶಾಸನದಲ್ಲಿ[೩೪] ನಾಗಾರ್ಜುನ ಪಂಡಿತ ವಿರಚಿತವೆಂಬ ಉಲ್ಲೇಖವಿರುವುದನ್ನು ಗುರುತಿಸಿರುವ ಕವಿಚರಿತೆಕಾರರು ಈ ಎರಡೂ ಶಾಸನಗಳು ಏಕವ್ಯಕ್ತಿ ಕೃತವೆಂದು ಅಭಿಪ್ರಾಯ ಪಡುತ್ತಾರಾದರೂ[೩೫] ಆ ಶಾಸನದಲ್ಲಿ 'ವಾಗ್ವಧೂನಂದನ'ಎಂಬ ತನ್ನ ಬಿರುದನ್ನು ತಿಳಿಸಿಲ್ಲವಾದ್ದರಿಂದ ಇದೇ ಹೆಸರಿನ ಬೇರೊಬ್ಬ ಕವಿ ಇರಬಹುದೋ, ಎಂಬ ಅನುಮಾನವನ್ನೂ ವ್ಯಕ್ತಪಡಿಸಿದ್ದಾರೆ.

## ರಾಣಿ ಶಾಂತಲಾದೇವಿ

ಹೊಯ್ಸಳ ರಾಜವಂಶದ ಪ್ರಸಿದ್ಧ ಅರಸಿ ಶಾಂತಲದೇವಿಯ ವಿಚಾರ ಹಲವಾರು ಶಾಸನಗಳಲ್ಲಿ ಉಕ್ತವಾಗಿದೆ. ಶಾಂತಲೆಯು ಬಸದಿ, ದೇವಾಲಯಗಳನ್ನು ನಿರ್ಮಿಸಿರುವುದಲ್ಲದೆ ತನ್ನ ಹೆಸರಿನ ಶಾಂತಿಗ್ರಾಮವನ್ನೂ ನಿರ್ಮಿಸಿದ್ದಾಳೆ. ಈ ವಿಚಾರಗಳನ್ನು ತಿಳಿಸುವ ಶಾಸನಗಳು ಶಾಂತಲೆಯ ಬಣ್ಣನೆಯನ್ನು ನೀಡುತ್ತವೆ.

**ಧುರದೊಳ್ ವಿಷ್ಣುನೃಪಾಳಕಂಗೆ ವಿಜಯಶ್ರೀವಕ್ಷದೊಳ್ ಸಂತತಂ**
**ಪರಮಾನಂದದಿನೋತು ನಿಲ್ವ ವಿಪುಳಶ್ರೀ ತೇಜದುದ್ದಾನಿಯಂ**
**ವರದಿಗ್ಭಿತ್ತಿಯನೆಯ್ದಿಸಲ್ನಱೆವ ಕೀರ್ತಿಶ್ರೀಯೆನುತ್ತಿರ್ಪುದೀ**
**ಧರೆಯೊಳ್ ಶಾಂತಲದೇವಿಯಂ ನೆಱೆಯೆ ಬಣ್ಣಿಪ್ಪಾತನೇವಣ್ಣಿಪಂ॥**[೩೬]

ಚಂಪೂ ಶೈಲಿಯಲ್ಲಿ ರಚಿತವಾಗಿರುವ ಶ್ರವಣಬೆಳಗೊಳದ ಕ್ರಿ.ಶ.೧೧೨೩ರ ಶಾಸನವು, ಶಾಂತಲದೇವಿಯು ಶ್ರವಣ ಬೆಳಗೊಳದಲ್ಲಿ ಸವತಿಗಂಧವಾರಣ ಬಸ್ತಿಯನ್ನು ಕಟ್ಟಿಸಿ, ನಿತ್ಯ ಪೂಜೆಗೋಸ್ಕರ ಒಂದು ಹಳ್ಳಿಯನ್ನೇ ದತ್ತಿಯಾಗಿ ಬಿಟ್ಟುಕೊಟ್ಟಳೆಂಬ ವಿಚಾರವನ್ನೊಳಗೊಂಡಿದೆ. ಈ ಶಾಸನದಲ್ಲಿರುವ ಮೇಲಿನ ಪದ್ಯವು, ಶಾಂತಲೆಯು ಯುದ್ಧದಲ್ಲಿ

ವಿಜಯಲಕ್ಷ್ಮಿ, ಕೀರ್ತಿಲಕ್ಷ್ಮಿಯಾಗಿ, ವಿಷ್ಣುವರ್ಧನನ ಎಲ್ಲ ಯಶಸ್ಸಿಗೂ ಕಾರಣಳಾದವಳು ಎಂದು ಬಣ್ಣಿಸಿದೆ. ಮತ್ತೇಭವಿಕ್ರೀಡಿತ ವೃತ್ತದಲ್ಲಿ ರಚಿತವಾಗಿರುವ ಮತ್ತೊಂದು ಪದ್ಯವು ಅರಸಿಯನ್ನು ಖಡ್ಗದೇವತೆ, ಭೂಮಿದೇವತೆ, ಪುಣ್ಯದೇವತೆ, ವಾಗ್ದೇವತೆ, ಮಂತ್ರದೇವತೆ ಎಂದು ಈ ಪ್ರಕಾರವಾಗಿ ಬಣ್ಣಿಸಿದೆ.

**ಸತತಂ ನೋಟಕ್ಕೊಡೆ ಲಕ್ಷ್ಮಿ ದೇವತೆ ರಣವ್ಯಾಪಾರದೊಳ್ ಖಟ್ಗದೇ**
**ವತೆ ಬಿಣ್ಪಿಂದಮೆ ಭೂಮಿದೇವತೆ ಜನಕ್ಕೆಲ್ಲಂದದಿಂ ಪುಣ್ಯದೇ**
**ವತೆ ವಾಗ್ದೇವತೆ ವಿದ್ಯೆಯೊಳ್ ಸಕಲಕಾರ್ಯೋದ್ಯೋಗದೊಳ್ ಮಂತ್ರದೇ**
**ವತೆ ನಾಥಂಗೆನೆ ಶಾಂತಿದೇವಿಯನದಿನ್ನೇವಣ್ಣಿಪಂ ಬಣ್ಣಿಪಂ॥**

ಅರಸಿ ಶಾಂತಲೆಯ ದಾನ ಗುಣವನ್ನು ಶಾಸನಕವಿಯು ಕಂದ ಪದ್ಯದಲ್ಲಿ ಈ ರೀತಿಯಾಗಿ ಹೊಗಳಿದ್ದಾನೆ.

**॥ ಶಾಂತಲದೇವಿಯ ಗುಣಮಂ**
**ಶಾಂತಲದೇವಿಯ ಸಮಸ್ತ ದಾನೋನ್ನತಿಯಂ**
**ಶಾಂತಲದೇವಿಯ ಶೀಳಮ**
**ಚಿಂತ್ಯಂಭುವನಯ್ಕದಾನಚಿಂತಾಮಣಿಯಂ ।**

**ಪತಿಯ ಕಳಂಕಮನಾತ್ಮ**
**ದ್ಯುತಿಯಿಂದಪಹರಿಸಳೆಂದು ಸಲೆ ರೋಹಿಣಿಯಂ**
**ಪತಿಹಿತೆ ಶಾಂತಲದೇವಿಯ**
**ಸಿತಕೀರ್ತಿಜ್ಯೋತ್ಸ್ನೆಸಂತತಂ ನಗುತಿರ್ಕುಂ ॥**[೩೭]

ಪತಿಯ ಹಿತವನ್ನೇ ಬಯಸುವ ಶಾಂತಲೆಯ ಶುಭ್ರವಾದ ಕೀರ್ತಿ ಎಂಬ ಬೆಳದಿಂಗಳು, ಚಂದ್ರನ ಮಡದಿಯಾದ ರೋಹಿಣಿಯನ್ನು, ಪತಿಯ ಕಳಂಕವನ್ನು (ಕಲೆಯನ್ನು) ಪರಿಹಾರಮಾಡಲು ಸಾಧ್ಯವಾಗುತ್ತಿಲ್ಲವೆಂದು ಎಂದು ಅಪಹಾಸ್ಯ ಮಾಡುತ್ತಿದೆ ಎಂದು ಕವಿಯು ಉತ್ಪ್ರೇಕ್ಷೆಯಿಂದ ಬಣ್ಣಿಸಿದ್ದಾನೆ.

ಶ್ರವಣಬೆಳಗೊಳ, ಹಾಸನ ಹಾಗೂ ಬೇಲೂರಿನ ಶಾಸನಗಳಲ್ಲಿನ ಶಾಂತಲೆಯ ಪ್ರಶಸ್ತಿಯು, ಅವಳ ವ್ಯಕ್ತಿತ್ವವನ್ನು ಪರಿಚಯಿಸುತ್ತದೆ. ವಿಷ್ಣುವರ್ಧನನ ಪಿರಿಯರಸಿ ಪಟ್ಟದರಾಣಿಯಾಗಿದ್ದ ಇವಳನ್ನು ಶ್ರೀಮದ್ವಿಷ್ಣುವರ್ದ್ಧನ ಹೊಯ್ಸಳ ಮಹೀಪಾಳ ಪಾದಾಬ್ಜಭಕ್ತೆ, ವಿಷ್ಣುವರ್ಧನ ಮನೋರಾಗಸಾಗರಾಭಿವರ್ದ್ಧನ ಚಂದ್ರಲೇಖೆ, ಪತಿವಿನಯಾವಿದಿತಾರುಂಧತಿ, ಅಭಿನವಾರುನ್ಧತಿ, ಎಂದು ಮೊದಲಾಗಿ ಕರೆದ, "ಅಭಿನವರುಗ್ಮಿಣೀದೇವಿಯುಂ, ಪತಿಹಿತಸತ್ಯಭಾಮೆ" ಎಂದು ಪುರಾಣದ ಸ್ತ್ರೀಯರಿಗೆ ಹೋಲಿಸಲಾಗಿದೆ. "ಸಕಳ ಸಮಯ ರಕ್ಷಾಮಣಿ, ಮುನಿಜನವಿನೇಯ ಜನವಿನೀತೆ, ಸಮ್ಯಕ್ತಚೂಡಾಮಣಿ, ಚತುಸ್ಸಮಯಸಮುದ್ಧರಕರಣಕಾರಣೆ, ನಿಜಕುಳಾಭ್ಯುದಯ ದೀಪಕೆ, ಜಿನಸಮಯ ಸಮುದಿತ ಪ್ರಾಕಾರೆ.." ಎಂದು ಮೊದಲಾಗಿ ಇವಳ ಧಾರ್ಮಿಕತತ್ಪರತೆಯನ್ನೂ ಬಣ್ಣಿಸಿವೆ.

ಇವಳ ದಾನಗುಣವನ್ನು ಕುರಿತು "ಮಹಾರಾಭಯ ಭೈಷಜ್ಯಶಾಸ್ತ್ರದಾನವಿನೋದೆ, ಸಕಳವಂದಿತ ಜನಚಿಂತಾಮಣಿ, ಅನೂನದಾನಾಭಿಮಾನಾವಳಂಬೆ" ಎಂದು ಬಣ್ಣಿಸಿರುವ ಶಾಸನ ಪದ್ಯವು, ಜೈನಧರ್ಮಾನುಯಾಯಿಯಾಗಿದ್ದ ಶಾಂತಲೆಯು ಶಾಸ್ತ್ರದಾನದ ಸಲುವಾಗಿ ಹಲವಾರು ಕೃತಿಗಳನ್ನು ಲಿಪಿ ಮಾಡಿಸಿ ದಾನ ನೀಡಿರುವುದರ ಕುರಿತು ಬೆಳಕು ಚೆಲ್ಲುತ್ತದೆ.

"ಮನೋಜರಾಜ ವಿಜಯಪತಾಕೆ, ಕಳಾಪಕಮನೀಯನೇತ್ರೆ, ಶ್ಯಾಮಳ ಕೋಮಳ ಭ್ರೂವಿಡಂಬಜಿತ ಶಚಿ, ಅಗಣ್ಯ ಲಾವಣ್ಯ ಸಂಪನ್ನೆ, ಕದಂಬಲಂಬಾಳ ಕಾಲಂಬಿಚರಣ ನಖ ಕಿರಣ ಕಳಾಪೆಯುಂ" ಎಂದು ಇವಳ ರೂಪ–ಲಾವಣ್ಯವನ್ನೂ "ಪಂಚಲಕಾರ ಪಂಚರತ್ನಯುಕ್ತೆ, ವಿನಯವಿನಮದ್ವಿಳಾಸಿನೀ, ದಯಾರಸಾಮೃತಾಪೂರ್ಣವದನ

ವಿಧುಬಿಂಬೆಯುಂ" ಮ್ರಿದುಮಧುರವಚನಪ್ರಸನ್ನೆ.. ಸವತಿಗಂಧಹಸ್ತಿ, ಮುದ್ವಿತ್ತ ಸವತಿ ಗಂಧವಾರಣೆ" ಎಂದು ಹೊಗಳಿ ಇವಳ ಗುಣವನ್ನೂ ಬಣ್ಣಿಸಿದೆ. ಅಂತೆಯೆ ಇವಳ ಪತಿವ್ರತಾಶೀಲ ಗುಣಗಳನ್ನು ಕುರಿತು "ಪತಿಬ್ರತಾಪ್ರಭಾವಪ್ರಸಿದ್ಧಶೀತೆಯುಂ, ಪುಣ್ಯಬ್ರತಾಚರಣವಿಮಳೆಯು...... ಯಶಃ ಪ್ರಸರಪಾಣ್ದುರಿತದಿಕ್ಪಾಳ ಚೂಡಾಮಣಿಯು" ಎಂದು ಬಣ್ಣಿಸಿವೆ.

ಶಾಂತಲೆಯನ್ನು "ಬಲಿಪುರವರಕ್ಷೀರವಾರಾಶಿ ಜನಿತ.. ವಿಮಳೆ" ಎಂದು ಕರೆದು ಇವಳು ಜನಿಸಿದ ಊರನ್ನೂ, "ಶ್ರೀಮದ್ಧರ್ಮ್ಮೇಶ್ವರ ದೇವಲಬ್ಧವರಪ್ರಸಾದೆ, ಈಶಪುರರಚಿತ ರಾಮೇಶ್ವರ ಪ್ರಾಸಾದೆ, ನಗರಾಜನಂದನ ಪದಾರವಿಂದವಂದನವರ್ದ್ಧಿತಾ ನಂದೆಯುಂ" ಎಂದು ಕರೆದು ಜೈನಧರ್ಮಿಯಳಾದ ಇವಳ ತವರುಮನೆಯಲ್ಲಿನ ಶೈವಧರ್ಮದ ಪ್ರಭಾವವನ್ನೂ ತಿಳಿಸುತ್ತದೆ.

ಮುಖ್ಯವಾಗಿ ಶಾಸನಗಳು ಇವಳ ಕಲಾಪ್ರೌಢಿಮೆಯನ್ನು ಕುರಿತು "ಸಂಗೀತವಿದ್ಯಾಸರಸ್ವತಿಯುಂ, ಭರತಾಗಮಭವನನಿಹಿತ ಮಹನೀಯಮತಿ ಪ್ರದೀಪೆಯುಂ, ಸದರ್ತ್ಥ ಸರಸ ಸಮಯೋಜಿತ ವಚನ ಮಧುರ ಸಸ್ಯಂದಿ ವದನಾರವಿಂದೆಯುಂ, ವಿಚಿತ್ರನರ್ತ್ತನ ಪ್ರವರ್ತ್ತನಪಾತ್ರ ಶಿಖಾಮಣಿಯುಂ, ಸಂಗೀತಸಂಗತ ಸರಸ್ವತಿಯುಂ" ಎಂದು ಮೊದಲಾಗಿ ಹೊಗಳಿ ಇವಳ ಸಂಗೀತ ನೃತ್ಯದ ಪಾಂಡಿತ್ಯವನ್ನು ಪರಿಚಯಿಸಿದೆ ಇದರೊಂದಿಗೆ ಇವಳು ಗಾಯನ ಹಾಗೂ ನೃತ್ಯದ ಸಂಯೋಜಕಿಯಾಗಿ ಹಲವರ ಪ್ರದರ್ಶನಕ್ಕೆ ಅವಕಾಶ ನೀಡುತ್ತಿದ್ದಳೆನ್ನುವಂತೆ ಇವಳನ್ನು "ಗೀತವಾದ್ಯನ್ರಿತ್ಯ ಸೂತ್ರಧಾರೆಯುಂ" ಎಂದು ಹೊಗಳಿರುವುದು ವಿಶೇಷವೆನಿಸುತ್ತದೆ. ಇವಳನ್ನು ವಿವೇಕಯ್ಕಬ್ರಿಹಸ್ಪತಿಯುಂ, ಪ್ರತ್ಯುತ್ಪನ್ನವಾಚಸ್ಪತಿಯುಂ ಎಂದು ಕರೆದಿರುವುದು ಉತ್ತಮ ವಾಗ್ಮಿಯೂ ಆಗಿದ್ದಳೆಂದು ತಿಳಿಸುತ್ತದೆ.

ಶಾಂತಲೆಯ ರೂಪ, ಗುಣ ಸ್ವಭಾವ, ಕಲೆ, ಅಭಿರುಚಿ, ಪಾಂಡಿತ್ಯ, ಶೌರ್ಯವನ್ನು ಬಣ್ಣಿಸಿ ಶಾಂತಲೆಯ ಸುಂದರ ಚಿತ್ರಣ ಕಟ್ಟಿಕೊಟ್ಟಿರುವ ಶಾಸನ ಕವಿಯು ಕಳೆದ ಶತಮಾನದಲ್ಲಿ ಶಾಂತಲೆಯ ಕುರಿತಾಗಿ ಬಂದಿರುವ ಅನೇಕ ಕತೆ–ಕಾದಂಬರಿಗಳ ರಚನೆಗೆ ಆಕರ ವಸ್ತುವನ್ನೊದಗಿಸಿ ಕೊಟ್ಟಿದ್ದಾನೆ.

ಈ ಶಾಸನಗಳನ್ನು ರಚಿಸಿದ ಕವಿಗಳು ಎಲ್ಲಿಯೂ ತಮ್ಮನ್ನು ಹೆಸರಿಸಿಕೊಂಡಿಲ್ಲ. ಆದರೆ ಶಾಂತಲೆಯು ಹಾಕಿಸಿರಬಹುದಾದ ಶ್ರವಣಬೆಳಗೊಳ, ಹಾಸನದ ಶಾಂತಿಗ್ರಾಮ ಹಾಗೂ ಬೇಲೂರಿನ ಈ ಶಾಸನಗಳ ರಚನೆಕಾರ ಒಬ್ಬನೇ ಇರಬಹುದೆಂದು ಇಲ್ಲಿನ ಪದ್ಯ ಹಾಗೂ ಪದಬಳಕೆಯ ಪುನರಾವರ್ತನೆಯಿಂದ ತಿಳಿದುಬರುತ್ತದೆ. "ಸ್ವಸ್ತ್ಯನವರತ ಪರಮ ಕಲ್ಯಾಣಾಭ್ಯುದಯ ಸಹಸ್ರ ಫಳಭೋಗಭಾಗಿನೀ ದ್ವಿತೀಯ ಲಕ್ಷ್ಮೀಸಮಾನೆ.." ಎಂದು ಆರಂಭವಾಗುವ ಶಾಂತಲೆಯ ಪ್ರಶಸ್ತಿಯು ಈ ಮೂರೂ ಶಾಸನಗಳಲ್ಲಿಯೂ ಒಂದೇ ರೂಪದಲ್ಲಿ ಕಂಡುಬರುತ್ತದೆ.

**ಬೆಸನಂ ಪತಿಹಿತದಲ್ಲಿಯೆ**
**ಬೆಸನಂ ದ್ವಿಜದೇವಪೂಜೆಯಲ್ಲಿಯೆ ನೆಗಟ್ದಾ**
**ಬೆಸನಂ ನೋಂಪಿಗಳಲ್ಲಿಯೆ**
**ಬೆಸನಂಗಳ್ ಶಾಂತಿದೇವಿಯೊಳ್ ಪೆಱವೊಳವೇ॥**[೩೮]

ಶಾಂತಲೆಗೆ ಪತಿಯಹಿತದಲ್ಲಿ, ಗುರು–ದೈವ ಪೂಜೆಗಳಲ್ಲಿ, ವ್ರತಗಳಲ್ಲಿ ಇರುವ ಕಾಳಜಿಯನ್ನು ಕುರಿತು ತಿಳಿಸುವ ಈ ಮೇಲಿನ ಕಂದಪದ್ಯವು ಶ್ರವಣಬೆಳಗೊಳ ಹಾಗೂ ಬೇಲೂರು ಎರಡೂ ಶಾಸನದಲ್ಲಿ ಯಾವುದೇ ವ್ಯತ್ಯಾಸವಿಲ್ಲದೆ ಒಂದೇ ರೀತಿಯಲ್ಲಿ ರಚಿತವಾಗಿರುವುದು ಈ ಶಾಸನಪದ್ಯಗಳು ಏಕ ಕವಿ ಕೃತವೆಂದು ತೋರುತ್ತದೆ.

ಈ ಶಾಸನಕವಿಯು ಪಂಪನ ವಿಕ್ರಮಾರ್ಜುನ ವಿಜಯದಿಂದ ಪ್ರಭಾವಿತನಾಗಿರುವುದಕ್ಕೆ ಈ ಒಂದು ನಿದರ್ಶನವನ್ನು ಕಾಣಬಹುದು.

**ಆ ನೆಗಟ್ದವಿಷ್ಣು ನೃಪನ ಮ**
**ನೋ ನಯನ ಪ್ರಿಯೆ ಚಳಾಳಿನೀಲಾಳಕಿ ಚಂ**
**ದ್ರಾನನೆ ಕಾಮನ ರತಿಯೊಳ್**
**ತಾನೆಣೆ ತೊಣೆ ಸರಿ ಸಮಾನೆ ಶಾಂತಲದೇವಿ ॥**

ಶಾಂತಲೆಯ ಸೌಂದರ್ಯವನ್ನು ಬಣ್ಣಿಸಿರುವ ಈ ಪದ್ಯವು ಪಂಪನ ವಿಕ್ರಮಾರ್ಜುನ ವಿಜಯದ ಪದ್ಯವೊಂದರಲ್ಲಿ ಅರಿಕೇಸರಿಯ ತಾಯಿ ಜಾಕವ್ವೆಯ ಕುಲ, ಶೀಲವನ್ನು ಕುರಿತು ಬಣ್ಣಿಸುವ ಪದ್ಯದ ಅನುಕರಣೆಯಂತಿದೆ ಎಂಬುದನ್ನು ಆರ್.ನರಸಿಂಹಾಚಾರ್ಯರು ಶಾಸನಪದ್ಯಮಂಜರಿಯಲ್ಲಿ ಗುರುತಿಸಿದ್ದಾರೆ.

**ಆ ನರಸಿಂಹ ಮಹೀಶ ಮ**
**ನೋ ನಯನ ಪ್ರಿಯೆ ವಿಳೋಳ ನೀಳಾಳಕೆ ಚಂ**
**ದ್ರಾನನೆ ಜಾಕವ್ವೆ ದಲಾ**
**ಜಾನಕಿಗಗ್ಗಳಮೆ ಕುಲದೊಳಂ ಶೀಲದೊಳಂ ॥ (ಪಂಪಭಾರತದ (೧.೩೯))**

ಶಾಸನಗಳು ಇವಳ ವ್ಯಕ್ತಿತ್ವವನ್ನು ಚಿತ್ರಿಸಿರುವುದಲ್ಲದೆ, ಶಿಲ್ಪದಲ್ಲಿಯೂ ಶಾಂತಲೆಯನ್ನು ಕಂಡರಿಸಲಾಗಿದೆ. ಬೇಲೂರಿನ ಚೆನ್ನಕೇಶವ ದೇವಾಲಯದ ಮುಂದಿನ ಭಕ್ತಶಿಲ್ಪಗಳು ಈಕೆ ಹಾಗೂ ಇವಳ ಪತಿ ವಿಷ್ಣುವರ್ಧನರೆಂದು ಹೇಳಲಾಗುತ್ತದೆ. ಅಲ್ಲದೆ ಒಡ್ಡೋಲಗದಲ್ಲಿ ಕುಳಿತಿರುವ ಇವಳ ಶಿಲ್ಪವನ್ನೂ ಈ ದೇವಾಲಯದ ಭಿತ್ತಿಯಲ್ಲಿ ಕಾಣಬಹುದು.

**ರಾಣಿ ಕಮಲಾದೇವಿ**

ಕಿತ್ತೂರಿನ ಸಮೀಪದ ದೇಗಾಂವಿಯ ಕಮಲನಾರಾಯಣ ದೇವಾಲಯದಲ್ಲಿ ದೊರಕಿರುವ ಕ್ರಿ.ಶ.೧೧೭೪ರ ಶಾಸನವು ಉಲ್ಲೇಖಿಸುವಂತೆ ಈ ದೇವಾಲಯವು ಕದಂಬ ವಂಶದ ಶಿವಚಿತ್ತ ಪೆರ್ಮಾಡಿದೇವನ ಹಿರಿಯ ರಾಣಿ ಕಮಲಾದೇವಿಯ ಆದೇಶದ ಮೇರೆಗೆ ಕಟ್ಟಲ್ಪಟ್ಟಿತು. ಈ ರಾಣಿಯ ತಂದೆಯು ಸೂರ್ಯವಂಶದ ರಾಜನಾದ ಕಾಮ ತಾಯಿ ಚಟ್ಟಲದೇವಿ. ಈ ಶಾಸನವು ರಾಣಿ ಕಮಲಾದೇವಿಯ ನಿರೂಪಣೆಯ ಮೇರೆಗೆ ಅಗ್ರಹಾರವನ್ನಾಗಿ ಪರಿವರ್ತಿಸಿ ದಾನನೀಡಲಾದ ಭೂವಿವರಗಳನ್ನೂ ತಿಳಿಸಿದೆ. ೧೧೭೪ರ ವೇಳೆಗೆ ಸಂಪೂರ್ಣವಾಗಿ ಕಟ್ಟಲಾಗಿದ್ದ ಈ ದೇವಾಲಯದ ರೂವಾರಿಗಳಾರೆಂಬುದನ್ನು ಶಾಸನ ಕವಿ ತಿಳಿಸಿದ್ದಾನೆ. ವಿಶೇಷವೆಂದರೆ ಈ ರೂವಾರಿ ತಿಪ್ಪಣ್ಣೋಜನೇ ಈ ಶಾಸನವನ್ನು ಬರೆದ ಕವಿಯಾಗಿದ್ದಾನೆ[೩೯].

ಕವಿಯು ತನ್ನನ್ನು ಕುರಿತು

**ಭರತಾಗಮಶಾಸ್ತ್ರಕಳಾ। ಪರಿಣತಿಯೊಳ್ ವರ್ಣಕವಿತೆಯೊಳ್ ದಾನಗುಣೋ**
**ತ್ಕರದೊಳ್ ಸರಿಯಾರ್ ವಂಕೇ । ಶ್ವರದೇವರ ತಿಪ್ಪಣ್ಣೋಜನೊಳ್ ಭೂತಲದೊಳ್॥**

ಕವಿ ತಿಪ್ಪಣ್ಣೋಜನು ಹೂವಿನಬಾಗೆಯವನು, ಈತನ ತಂದೆ ಹೊಲ್ಲೋಜ. ಈ **ತಿಪ್ಪಣ್ಣೋಜ** ಮಗ ಬಾಗೋಜ. ಇವನೂ ಸಹ ತನ್ನ ತಂದೆಗೆ ದೇವಾಲಯದ ಮಂಟಪವನ್ನು ಕಳಸ ಸಹಿತ ನಿರ್ಮಾಣ ಮಾಡಲು ಸಹಕರಿಸಿದ್ದಾನೆ. ಇವರಲ್ಲದೆ ಹರಿಗೆಯ, ಹರಿಪೋಜ, ಕರಿಯ, ಬೋಗ್ಗಯ್ಯ ಮತ್ತು ನಾಗಯ್ಯ ಇವರು ಇಲ್ಲಿನ

ಕಂಬ ಮತ್ತಿತರ ಶಿಲ್ಪಗಳ ರೂವಾರಿಗಳು. ತಿಪ್ಪೋಜನು ತಾನು ಕಾವ್ಯಕಲೆ, ಶಿಲ್ಪಕಲೆಗಳಲ್ಲಷ್ಟೇ ಅಲ್ಲದೆ ಭರತನ ನಾಟ್ಯಶಾಸ್ತ್ರದಲ್ಲಿಯೂ ಪರಿಣತನಾಗಿದ್ದೆನೆಂದು ತಿಳಿಸಿದ್ದಾನೆ. ಜೊತೆಗೆ ಇವನು ಬಂಕೇಶ್ವರನ ಕಡುಭಕ್ತನೂ, ದಾನಿಯೂ ಆಗಿದ್ದು ಈತನಿಗೆ ದೇಸಿಯ ಬಗೆಕಾರ, ಬಲ್ಲವರ ಬೆಲ್ಲ, ಯಾಚಕೋದ್ಧಾರ ಎಂಬ ಬಿರುದುಗಳಿದ್ದವೆಂದು ತಿಳಿಸಿದ್ದಾನೆ.

ಅನೇಕ ಕಲೆಗಳಲ್ಲಿ ಪರಿಣತನಾಗಿದ್ದ ತಿಪ್ಪೋಜನಿಗೆ ರಾಣಿ ಕಮಲಾದೇವಿ ದೇವಾಲಯದ ಸಮಸ್ತ ಉಸ್ತುವಾರಿಯ ಹೊಣೆ ಇತ್ತು, ಆತನ ಅದ್ಭುತ ಕಾರ್ಯ ಇಂದಿನವರೆಗೂ ಉಳಿದು ಬರಲು ಕಾರಣಳಾಗಿದ್ದಾಳೆ.

## ಹರಿಯಬ್ಬರಸಿ

ಹರಿಯಬ್ಬರಸಿಯು ಕುಣಿಂಗಲು ನಾಡು ಎಂಟುನೂರರ ಅಧಿಪತಿ ಮಹಾಸಾಮಂತ ಸಿಂಗರಸನರಾಣಿ. ಇವಳು ವಿಷ್ಣುವರ್ಧನ ಹಾಗೂ ಶಾಂತಲೆಯರ ಮಗಳು[೪೦]. ಹರಿಯಬ್ಬರಸಿಯು ಜೈನಧರ್ಮೀಯಳಾದರೆ ಅವಳ ಪತಿ ಸಿಂಘರಸನು ಶೈವಭಕ್ತನಾಗಿದ್ದ.

ಸಿಂಘರಸನ ಶೈವನಿಷ್ಠೆಯು ಅರಸಿಕೆರೆಯ ಇತರ ಶಾಸನಗಳಲ್ಲಿ[೪೧] ತಿಳಿದು ಬರುವಂತೆಯೇ ಹಂತಿಯೂರಿನ ಶಾಸನವು ಜೈನ ಮುನಿ 'ವಿಮುಕ್ತ ಸಿದ್ಧಾಂತದೇವರ ಗುಡ್ಡಿ(ಶಿಷ್ಯೆ) ಹರಿಯಬ್ಬರಸಿ' ಎಂದು ಇವಳನ್ನು ಕರೆದು, ಹರಿಯಬ್ಬೆಯು ಜೈನ ಧಾರ್ಮಿಕ ಕೈಂಕರ್ಯಗಳಲ್ಲಿ ತೊಡಗಿಕೊಂಡಿದ್ದುದನ್ನು ತಿಳಿಸುತ್ತದೆ. ವಿಭಿನ್ನ ಧರ್ಮಗಳನ್ನನುಸರಿಸುತ್ತಿದ್ದರೂ ಈ ಸತಿ–ಪತಿಗಳು ಅನ್ಯೋನ್ಯದಿಂದಿದ್ದರು.

"ಪರಬಳದಾನವ ಸಂಹಾರಾರುಣ ಜಳ ಲಿಪ್ತಖರ್ಗ್ಗನುನ್ನತ ತೇಜಂ ವರ ವಿಬುಧ ವಿಭವಂ ಹರಿಕಾನ್ತಾ ಕಾನ್ತನೆಸೆದಪಂ ವಿಭುಸಿಂಗ" ನೆಂದು ಈ ಶಾಸನವು ಶತ್ರುಗಳ ಅರುಣ ಜಲ (ರಕ್ತ)ತುಂಬಿದ ಖಡ್ಗದ ತೇಜಸ್ಸಿನಿಂದ ಹರಿಕಾನ್ತಾ ಕಾನ್ತನ ಯಶಸ್ಸನ್ನೂ ಹರಿಕಾಂತೆಯ (ಲಕ್ಷ್ಮಿ) ಸಂಪತ್ತನ್ನೂ ಹೊಂದಿದ್ದನೆಂದು ಹರಿಯಬ್ಬೆಯ ಕಾಂತ ವೀರಸಿಂಘರಸನನ್ನು ಪರಿಚಯಿಸುತ್ತದೆ.

ಹರಿಯಬ್ಬರಸಿಯು ಚಿಕ್ಕಮಗಳೂರಿನ ಹಂತಿಯೂರಿ (ಹಂತೂರು)ನಲ್ಲಿ ನಿರ್ಮಾಣಮಾಡಿದ ಚೈತ್ಯಾಲಯ, ಅದಕ್ಕೆ ನೀಡಿದ ದತ್ತಿ, ಜೈನಮುನಿ ಸಿದ್ಧಾಂತದೇವರ ವಿಚಾರ ಮೊದಲಾದವುಗಳ ಕುರಿತಾಗಿ ಶಾಸನವನ್ನು ಹಾಕಿಸಿದ್ದಾಳೆ (E.C.ಸಂ.VI ಮೂಡಿಗೆರೆ ೨೨). ಈ ಶಾಸನವನ್ನು ಕವಿ **ಮಲ್ಲಿನಾಥ**ನು ಚಂಪೂ ಶೈಲಿಯಲ್ಲಿ ರಚಿಸಿದ್ದಾನೆ.

ಕವಿ ಮಲ್ಲಿನಾಥನು **ಹರಿಯಬ್ಬರ**ಸಿಯನ್ನು "ಸರಸ್ವತಿಯಂತೆ ಸತ್ಕಳಾನ್ವಿತೆ, ಸೀತೆಯಂತೆ ವಿನೀತೆ, ಸುಸೀಮಾ ದೇವಿಯಂತೆ ಸುಶೀಲೆ, ರುಕ್ಮಿಣಿಯಂತೆ ಗುಣಾಗ್ರಣಿ.., ಜನಮನ ಪುಳಕೆಯುಂ, ಚಾತುರ್ವರ್ಣ ವರ್ಣಿತಾಗಣ್ಯ ಪುಣ್ಯಜನ ಶಿಖಾಮಣಿಯುಂ, ಸಮ್ಯಕ್ತ್ವ ಚೂಡಾಮಣಿಯುಂ ಎನಿಸಿ" ಶೋಭಿಸುತ್ತಿದ್ದಳು ಎಂದು ಬಣ್ಣಿಸಿ, ಜೈನಧರ್ಮದಲ್ಲಿನ ಚತುರ್ವಿಧ ದಾನವೆನಿಸಿದ ಆಹಾರ, ಅಭಯ, ಔಷಧ, ಶಾಸ್ತ್ರದಾನಗಳನ್ನು ಕೈಕೊಂಡ ಹರಿಯಬ್ಬರಸಿಯ ಪರಹಿತಗುಣಾಸಕ್ತಿಯನ್ನು ಈ ಕೆಳಗಿನ ಪದ್ಯದಲ್ಲಿ ಬಣ್ಣಿಸಿದ್ದಾನೆ.

**ಧರೆಯೊಳನನ್ತ ದಿವ್ಯಯತಿಸನ್ತತಿಗನ್ನಮನಾದ ಭೀತಿಯಿಂ**
**ಬರೆ ಪಲರಂಜದಿರೆಂಬ ಭಯ ವಾಕ್ಯಮನಾತುರರಾಗಿ ಬೇರ್ಪ್ಪವ**
**ರ್ಗಿರದೆ ಶರೀರ ರಕ್ಷಣಮನೋದಲು ಶಾಸ್ತ್ರಮನ್ ಈವ ಪೆಂಪಿನಿಂ**
**ಹರಿಯವೆ ತಾಳ್ದಿದಳ್ ಪರಹಿತೋಕ್ತ ಚತುರ್ವ್ವಿಧ ದಾನಶಕ್ತಿಯಂ ॥**

ಪರಹಿತಬಯಸುವ ನಿರ್ಮಲಗುಣದಿಂದ ಇಳೆಯಲ್ಲಿ ಯಶಸ್ಸನ್ನು ಗಳಿಸಿದ್ದ ಹರಿಯಬ್ಬೆಯ ಸರಿಸಮಾನವಾಗಿ ಹರಿಯ ಕಾನ್ತೆಯಾದ ಲಕ್ಷ್ಮಿಯೂ ಬಾರಳು ಎನ್ನುತ್ತಾ ಲಕ್ಷ್ಮಿಗಿಂತಲೂ ಮಿಗಿಲಾದ ಹರಿಯಬ್ಬೆಯನ್ನು ಈ ಕೆಳಗಿನ ಕಂದಪದ್ಯದಲ್ಲಿ ಕವಿಯು ಬಣ್ಣಿಸಿದ್ದಾನೆ.

**ಹರಿಕಾನ್ತೆಯುಮೀ ಕಾನ್ತೆಯ**
**ದೊರೆಗೆ ವರಲು ಕೋಟಿಳೆಂಬ ನಿಮ್ಮದದ ಗುಣೋ**
**ತ್ಕರಮನೊಳಕೊಣ್ಡು ಹರಿಯಬೆ**
**ಪರಹಿತದಿಂ ಧರೆಯೊಳ್ನೆದೆ ಜಸಮಂ ತಳೆದಳ್॥**

ಸಮ್ಯಕ್ತ್ವ ಚೂಡಾಮಣಿಯೆನಿಸಿದ ಹರಿಯಬ್ಬೆಯು ಹನ್ತಿಯೂರಿನಲ್ಲಿ ಅನೇಕ ರತ್ನಖಚಿತ ರುಚಿರಮಣಿ ಕಳಶ... ಗಳಿಂದೊಳಗೊಂಡ ಉತ್ತುಂಗ ಚೈತ್ಯಾಲಯವನ್ನು ಮಾಡಿಸಿ ದಾನ-ದತ್ತಿಗಳನ್ನು ನೀಡಿರುವುದನ್ನು ವಿವರವಾಗಿ ಈ ಚಂಪೂ ಪದ್ಯದಲ್ಲಿ ಕವಿಯು ನಿರೂಪಿಸಿದ್ದಾನೆ[೪೨].

**ಕವಿ ಮಲ್ಲಿನಾಥ :** "ಶ್ರೀಮನ್ಮಲ್ಲಿನಾಥಂ ಬಿರುದ ಲೇಖಕ ಮದನಮಹೇಶ್ವರಂ ಬರೆದಂ । ನಾಗರಾದಿನಾಗರಿಕದ್ರಾವಿಳ ಸಮುದ್ಧರಣನಪ್ಪ ಮಾಣಿ ಮೋಜನಮಗಂ" ಎಂದು ತನ್ನನ್ನು ಪರಿಚಯಿಸಿಕೊಂಡಿರುವ ರೀತಿಯಿಂದ ಈ ಶಾಸನಕವಿ ಮಲ್ಲಿನಾಥನಿಗೆ ಮದನ ಮಹದೇಶ್ವರ ಎಂಬ ಬಿರುದು ಇದ್ದಂತೆ ತಿಳಿದು ಬರುತ್ತದೆ. ಶ್ರವಣ ಬೆಳಗೊಳದಲ್ಲಿ ಮಲಧಾರಿ ದೇವರು ಎಂಬ ಮುನಿ ಸಲ್ಲೇಖನ ದೀಕ್ಷೆಯ ಮೂಲಕ ಸಮಾಧಿ ಮರಣ ಪಡೆದದ್ದನ್ನು ಸುದೀರ್ಘವಾಗಿ ವರ್ಣಿಸುವ ಸಂಸ್ಕೃತ ಶಾಸನವನ್ನು ರಚಿಸಿರುವ ಮಲ್ಲಿನಾಥ ಕವಿ ಇವನೇ ಎಂದು ಬಿ.ರಾಜಶೇಖರಪ್ಪ ಅವರು ಅಭಿಪ್ರಾಯ ಪಡುತ್ತಾರೆ[೪೩]. ಅಲ್ಲಿ ತನ್ನನ್ನು ಮಲಧಾರಿ ದೇವರ ಶಿಷ್ಯನೆಂದು ಕರೆದುಕೊಂಡಿದ್ದಾನೆ ಅಲ್ಲದೆ ತನ್ನ 'ಮದನಮಹದೇಶ್ವರ'ನೆಂಬ ಬಿರುದನ್ನೂ ಹೇಳಿಕೊಂಡಿದ್ದಾನೆ.

'ಅನಲ್ಪಕಲ್ಪಲತಾಶಾಖಾನೀಕದಂತ ನೂನದಾನಜನಿತ ಜನಮನಪುಳಕೆಯುಂ, ಭಗವದರ್ಹತ್ಪರಮೇಶ್ವರ ಚರಣನಖ ಮಯೂಖಲೇಖಾವಿಳಸಿತ ಲಲಾಟಪಳಕೆಯುಂ, ಚಾತುರ್ವರ್ಣವರ್ಣಿತಾಗಣಯ ಪುಣ್ಯಜನಶಿಖಾಮಣಿಯುಂ, ಸಮ್ಯಕ್ತ್ವಚೂಡಾಮಣಿಯುಮೆನಿಸಿ' ಎಂದು ಹರಿಯಬ್ಬೆಯನ್ನು ಬಣ್ಣಿಸಿರುವ ಈ ಶಾಸನಪದ್ಯದ ಸಾಲುಗಳು ಸಂಸ್ಕೃತ ಭೂಯಿಷ್ಟವಾಗಿರುವುದನ್ನು ಕಾಣಬಹುದು. ಕವಿಯ ಉಭಯ ಭಾಷಾ ಪಾಂಡಿತ್ಯವೂ ಈ ಶಾಸನದಲ್ಲಿ ಕಂಡುಬರುತ್ತದೆ.

## ರಾಣಿ ಉಮಾದೇವಿ

ಹೊಯ್ಸಳ ಬಲ್ಲಾಳನ ರಾಣಿ ಉಮಾದೇವಿಯು ಅರಸನೊಂದಿಗೆ ರಾಜಧಾನಿಯಲ್ಲಿ ಆಳ್ವಿಕೆ ನಡೆಸುತ್ತಿದ್ದಳಲ್ಲದೆ, ಅರಸಿಕೆರೆಯ ಸುತ್ತಮುತ್ತಲ ಪ್ರದೇಶ ಇವಳ ನೇರ ಆಳ್ವಿಕೆಗೆ ಒಳಪಟ್ಟಿತ್ತು. ಸಾಹಸಿಯೂ ಯುದ್ಧಪ್ರಿಯಳೂ ಆದ ಇವಳು, ದೇವಾಲಯ ನಿರ್ಮಾಣ, ಅವುಗಳಿಗೆ ನೀಡಿದ ದತ್ತಿ, ತೆರಿಗೆ ವಿನಾಯಿತಿ, ಕೆರೆ ನಿರ್ಮಾಣ ಮೊದಲಾದ ವಿಚಾರಗಳನ್ನು ತಿಳಿಸುವ ಶಾಸನಗಳನ್ನು ಹಾಕಿಸಿದ್ದಾಳೆ.

ಇಷ್ಟಲ್ಲದೆ ಇವಳು ಹಲವಾರು ಯುದ್ಧಗಳಲ್ಲಿಯೂ ಭಾಗವಹಿಸಿದ್ದಾಳೆ. ಬೆಳಗುತ್ತಿಯ ಮೇಲೆ ಮೂರುಬಾರಿ ಧಾಳಿನಡೆಸಿ ಸಾಮಂತರ ಅಧಿಕಾರವನ್ನು ನಿಯಂತ್ರಿಸಿರುವುದನ್ನು ಶಾಸನಗಳು ಉಲ್ಲೇಖಿಸುತ್ತವೆ[೪೪].

**ಕವಿ ತ್ರಿವಿಕ್ರಮ ಪಂಡಿತ:** ಅರಸಿ ಉಮಾದೇವಿಯ ಕುರಿತಾದ ಕೆಲವು ಶಾಸನಗಳನ್ನು ಕವಿ ತ್ರಿವಿಕ್ರಮ ಪಂಡಿತನೆಂಬುವವನು ರಚಿಸಿದ್ದಾನೆ[೪೫]. ಕರ್ಣಾಟಕ ಕವಿಚರಿತೆಯ ಮೊದಲನೆಯ ಸಂಪುಟದಲ್ಲಿ ಉಕ್ತನಾಗಿರುವ

ಈತನಿಗೆ, "ಈ ಶಾಸನಗಳ ಬಂಧವನ್ನು ನೋಡಿದರೆ ಈತನು ಒಳ್ಳೆಯ ಕವಿಯೆಂಬುದರಲ್ಲಿ ಆವ ಸಂಶಯವೂ ಇಲ್ಲ" ಎಂಬ ಪ್ರಶಂಸೆ ಸಂದಿದೆ[೪೬].

ಕವಿ ತ್ರಿವಿಕ್ರಮ ಪಂಡಿತನು ಉಮಾದೇವಿಯನ್ನು ಸ್ತುತಿಸಿರುವ ಕೆಲವು ಪದ್ಯಗಳು ಹಲವಾರು ಶಾಸನಗಳಲ್ಲಿ ಪುನರುಲ್ಲೇಖವಾಗಿದೆ.

**ಲಲನಾನಿರ್ಮಿತ ಕೌಶಲಂ ಪಲವು ಕಾಲಕ್ಕಬ್ಜಜಂಗಿಂದು ಸತ್**
**ಫಲವಾಯ್ತುತ್ತಮ ರೂಪೆಯಂ ವಿಮಳೆಯಂ ಬಲ್ಲಾಳವಿಶ್ವಂಭರೇ**
**ಶ ಲಸತ್ಕಾಮಿನಿಯಂ ಬುಧಾಳಿಗನಿಶಂ ಕೂರ್ತ್ತಿ ವುಮಾದೇವಿಯಂ**
**ಲಲನಾ ರತ್ನಮನುದ್ಧ ಕೀರ್ತಿಯುತೆಯಂ ಪೆತ್ತುತ್ತಮ ಪ್ರೌಢಿಯಿಂ॥**[೪೭]

ಹಲವು ಕಾಲದ ಕೌಶಲ ಫಲದಿಂದ ಬ್ರಹ್ಮನಿಗೆ ಉಮಾದೇವಿಯಂತಹ ಲಲನೆಯನ್ನು ಸೃಷ್ಟಿಸಲು ಸಾಧ್ಯವಾಯಿತು ಎಂದು ಇಲ್ಲಿ ಕವಿಯು, ಅತಿಶಯೋಕ್ತಿಯಿಂದ ಬಣ್ಣಿಸಿದ್ದಾನೆ. ಉಮಾದೇವಿಯನ್ನು ಕುರಿತು ಮತ್ತೇಭವಿಕ್ರೀಡಿತ ವೃತ್ತದಲ್ಲಿ ರಚಿಸಲಾಗಿರುವ ಇದೇ ಪದ್ಯವು ಅರಸೀಕೆರೆಯ (E.C.ಸಂ.V) ೯೦, ೯೩, ೨೦೫ ಸಂಖ್ಯೆಯ ಶಾಸನಗಳಲ್ಲಿಯೂ ಕಂಡುಬರುತ್ತದೆ.

**ಕುಮುದದಳನಯನೆ ಕೋಮಳೆ**
**ಕುಮುದಾನನೆಯೆನಿಸಿ ನೆಗಳ್ದುಮಾದೇವಿಗೆ ವಿ**
**ಕ್ರಮ ಸೋಮವಂಶ ಬಲ್ಲಾ**
**ಳ ಮಹೀಶಂ ಕೂರ್ಪನೆಂಬುದದು ತಕ್ಕುದೆ ದಲ್॥ (ಅರಸಿಕೆರೆ ೯೩)**

ಉಮಾದೇವಿಯ ನಯನ, ಮೊಗವನ್ನು ನೈದಿಲೆಗೆ ಹೋಲಿಸಿ, ಚಂದ್ರೋದಯವಾದಮೇಲೆ ನೈದಿಲೆ ಅರಳುವುದೆಂಬ ಕವಿಸಮಯದ ವರ್ಣನೆಗೆ ಅನುಗುಣವಾಗಿ ಇವಳಿಗೆ ಚಂದ್ರವಂಶದ ದೊರೆಯಾದ ಬಲ್ಲಾಳನೇ ಪ್ರಿಯಕರನೆಂಬುದು ತಕ್ಕುದಾಗಿದೆ ಎಂದು ಕವಿ ಬಣ್ಣಿಸಿದ್ದಾನೆ. ಇದೇ ಪದ್ಯವು "ಕಮನೀಯ ಚಕೋರೇಕ್ಷಣೆ" ಎಂಬ ಮೊದಲನೆಯ ಸಾಲಿನ ಬದಲಾವಣೆಯೊಂದಿಗೆ ಮತ್ತೊಂದು ಶಾಸನದಲ್ಲಿ ಕಂಡು ಬರುತ್ತದೆ.

ಕವಿಯು ತನ್ನನ್ನು ಕುರಿತು ಅರಸಿಕೆರೆಯ ೨೨ನೆಯ ಶಾಸನದ ಕಂದಪದ್ಯದಲ್ಲಿ ಈ ರೀತಿಯಾಗಿ ತಿಳಿಸಿದ್ದಾನೆ.

**ಬುಧನಿಧಿ ವಿವೇಕನಿಧಿ ಗುಣ**
**ನಿಧಿಯಾದಿತ್ಯಾನುಜಂ ತದಂತೇವಾಸಂ।**
**ಬುಧನಿಧಿ ವಿವೇಕನಿಧಿ ಗುಣ**
**ನಿಧಿ ಬರೆದಂ ತ್ರಿವಿಕ್ರಮಾಂಕನೀ ಶಾನಸಮಂ** ॥ ಎಂದು ತಿಳಿಸಿದ್ದಾನೆ.

ಕ್ರಿ.ಶ.೧೧೯೪ರಲ್ಲಿ ಅರಸಿಕೆರೆಯ ೧೧೮ನೆಯ ಶಾಸನವನ್ನು ರಚಿಸಿದ ಹರಿಹರಸೂರಿಯು ತನ್ನ ಪದ್ಯವೊಂದರಲ್ಲಿ ಈ ತ್ರಿವಿಕ್ರಮಪಂಡಿತನನ್ನು ಸ್ಮರಿಸಿದ್ದಾನೆ.

**ಹರಿಹರಸೂರಿ ಸೀಗುರಿಯ ಕಾಮನ ತಮ್ಮನುಮೇಶದತ್ತವಾ।**
**ಗ್ವಿರಚಿಸಿದಂ ತ್ರಿವಿಕ್ರಮ ಕವೀಶ್ವರನೂರ್ಜಿತವಾಣಿ ತಿರ್ದಿ ತಾಂ ಬರೆದಂ॥**
ತನ್ನ ಕೃತಿಯನ್ನು ತ್ರಿವಿಕ್ರಮ ಕವೀಶ್ವರನು ತಿದ್ದಿಕೊಟ್ಟನೆಂದು ಶಾಸನಕವಿ ಹರಿಹರಸೂರಿಯು ಸ್ಮರಿಸಿರುವ ಈ ಉಲ್ಲೇಖವು ಕವಿತ್ರಿವಿಕ್ರಮನು ಪ್ರೌಢಿಮೆ-ಪಾಂಡಿತ್ಯಗಳನ್ನೂ, ಆತನು ಗಳಿಸಿದ್ದ ಪ್ರಸಿದ್ಧಿಯನ್ನೂ ಕುರಿತು ತಿಳಿಸುತ್ತದೆ.

**ಕವಿ ಮಾದಯ್ಯ:** ಕಣಿಕಟ್ಟೆಯಲ್ಲಿನ ಉಮಾದೇವಿಯ ಶಾಸನವನ್ನು ಮಾದಯ್ಯನೆಂಬುವವನು ರಚಿಸಿದ್ದಾನೆ. ವೃತ್ತಿಯಲ್ಲಿ ಈತ ಸೇನಬೋವನಾಗಿದ್ದನೆಂದೂ, ಜೊತೆಗೆ ದೇವಾಲಯದ ಸ್ಥಾನಪತಿಯೂ ಆಗಿದ್ದನೆಂದು ತಿಳಿದು ಬರುತ್ತದೆ[೪೮].

**ಬಲ್ಲಾಳನ ಬಲಭುಜದೊಳು**
**ಬಲ್ಲಿದಳಾ ವೀರಲಕ್ಷ್ಮಿನೆಲಸುವ ತೆಱದಿಂ**
**ಬಲ್ಲಾಳನ ವಾಮಾಂಗದ**
**ವಲ್ಲಭೆ ಉಮಾದೇವಿಯೀ ಧಾತ್ರಿಯೊಳು ಪೆಸರುವಡೆದಳು॥ (ಎಕ ೫ ಅರಸಿಕೆರೆ ೪೦ ಕಣಿಕಟ್ಟೆ(೧೨೦೯))**

ವೀರಲಕ್ಷ್ಮಿಗೆ ಸಮಾನಳಾಗಿ ಪ್ರಖ್ಯಾತೆಯಾಗಿರುವಳೆಂದು ಉಮಾದೇವಿಯನ್ನು ಈ ಕಂದಪದ್ಯದಲ್ಲಿ ಸ್ತುತಿಸಿದ್ದಾನೆ. ಶೌರ್ಯಕ್ಕೆ ಹೆಸರಾದ ವೀರಬಲ್ಲಾಳನಿಗೆ ಬಲಭುಜದಲ್ಲಿ ನೆಲೆಸಿದ ವೀರಲಕ್ಷ್ಮಿಯು ಹೆಸರು ತಂದು ಕೊಟ್ಟಿರುವಂತೆಯೇ, ಎಡಭಾಗದಲ್ಲಿ ನೆಲೆಸಿದ ಉಮಾದೇವಿಯೂ ಲೋಕದಲ್ಲಿ ಕೀರ್ತಿಗಳಿಸಿದ್ದಾಳೆ.

ಅರಸಿ ಉಮಾದೇವಿಯು ಶಾಸನ ಪದ್ಯಗಳಲ್ಲಲ್ಲದೆ, ಮಹಾಕಾವ್ಯವೊಂದರಲ್ಲಿ ಸ್ತುತಿಸಲ್ಪಟ್ಟಿದ್ದಾಳೆ. ಬಲ್ಲಾಳನಿಗೆ ಅಷ್ಟಮಹಿಷಿಯರಿದ್ದರೂ, ಈತನ ಆಸ್ಥಾನ ಕವಿ ರುದ್ರಭಟ್ಟನು ತನ್ನ 'ಜಗನ್ನಾಥ ವಿಜಯ'ದಲ್ಲಿ 'ಉಮಾಕಾಮಿನೀಜೀವಿತೇಶಂ' ಎಂದು ಅರಸಿ ಉಮಾದೇವಿಯನ್ನು ಮಾತ್ರ ಸ್ಮರಿಸಿರುವುದು ಈಕೆಯ ವಿಖ್ಯಾತಿಯನ್ನು ತಿಳಿಸುತ್ತದೆ.

**ರಾಣಿ ಬೈಚಲಾದೇವಿ** (ಕ್ರಿ.ಶ.೧೨೧೭)

ಮಗರೆ ಮುನ್ನೂರರ ಪ್ರದೇಶದಲ್ಲಿ ಆಳ್ವಿಕೆ ನಡೆಸುತ್ತಿದ್ದ ಹೊಯ್ಸಳರಾಣಿ **ಬೈಚಲದೇವಿ**ಯು ವೀರಬಲ್ಲಾಳನ ಅರಸಿ. ಇವಳು ತನ್ನ ತಾಯಿ ಮಾದಿಯಕ್ಕನಿಗೆ ತೋರುವ ಗೌರವಸೂಚಕವಾಗಿ ಕಡೂರು ತಾಲ್ಲೂಕಿನ ಕೇಸಿಯ ಹಳ್ಳಿಗೆ ಪ್ರಸನ್ನ ಮಾಧವಪುರವೆಂದು ಪ್ರತಿನಾಮಧೇಯವನ್ನಿಟ್ಟು, ಆ ಮಾದಾಪುರ (ಮಾಧವಪುರ) ಗ್ರಾಮದಲ್ಲಿ ಮಾಧವ ದೇವಸ್ಥಾನವನ್ನು ನಿರ್ಮಿಸಿ, ಪ್ರಸನ್ನ ಮಾಧವದೇವರ ಅಮೃತಪಡಿ ಹಾಗೂ ಇತರ ಸೇವೆಗಳಿಗಾಗಿ ದಾನವನ್ನು ನೀಡಿದ್ದಾಳೆ. ಅರಸಿಯು ಈ ವಿಚಾರವನ್ನು ತಿಳಿಸಲು ಹಾಕಿಸಿರುವ ಶಾಸನವನ್ನು ಕವಿ **ನಾಗದೇವ** ನಿಂದ ಬರೆಯಿಸಿದ್ದಾಳೆ.

**ಬೈಚಲಾದೇವಿಯ ವರ್ಣನೆ:** "ವೀರಬಲ್ಲಾಳನ ನಚ್ಚಿನಗ್ರಮಹಿಶೀ ಪದಮಂ ಪಡೆದಳು ವಿನೀಳ ಭ್ರಿಂಗಾಳ ಪೂರ್ಣಚಂದ್ರಮುಖಿ ಬೈಚಲದೇವಿ.." ಎಂದು ಅರಸಿ ಬೈಚಲಾದೇವಿಯನ್ನು ನುತಿಸಿರುವ ಕವಿಯು, ಮತ್ತೇಭವಿಕ್ರೀಡಿತ ವೃತ್ತದಲ್ಲಿ ರಚಿಸಿರುವ ಈ ಕೆಳಗಿನ ಪದ್ಯದಲ್ಲಿ ರತಿ–ಪುಷ್ಪಶರ (ಮನ್ಮಥ), ಗಿರಿಜಾ–ಶಿವ, ಲಕ್ಷ್ಮಿ–ವಿಷ್ಣುವಿನ ಹಾಗೆ ಅನ್ಯೋನ್ಯರಾಗಿರುವ ಬೈಚಲಾದೇವಿ ಹಾಗೂ ಬಲ್ಲಾಳರನ್ನು, ಅವರ ಸೌಭಾಗ್ಯ ಸಂಪತ್ತನ್ನು ಏನೆಂದು ಹೊಗಳುವುದೋ ಎಂಬ ಉದ್ಗಾರದಿಂದ ಬಣ್ಣಿಸಿದ್ದಾನೆ.

**ರತಿಯಂ ಬೈಚಲದೇವಿ ಪುಷ್ಪಿಶರನಂ ಬಲ್ಲಾಳನಾ ಭೂಮಿಭ್ರಿತ್**
**ಸುತೆಯಂ ಬೈಚಲದೇವಿ ಚಂದ್ರಧರನಂ ಬಲ್ಲಾಳನಂಭೋರುಹಿ**
**ಸ್ತಿತೆಯಂ ಬೈಚಲದೇವಿ ಚಕ್ರಧರನಂ ಬಲ್ಲಾಳನಂನ್ಯೋನ್ಯ ಸಂ**
**ಗತಿಯಿಂ ಪೋಲರೆನಲ್ಕದೇ ವೊಗಳ್ವುದೊ ಸೌಭಾಗ್ಯಸಂಪತ್ತಿಯಂ ॥**

ತನ್ನ ತಾಯಿಯ ಹೆಸರಿನಲ್ಲಿ ಪ್ರಸನ್ನ ಮಾಧವ ದೇವಾಲಯವನ್ನು ಮಾಡಿಸಿದ ಅರಸಿಯ ವಿಚಾರವನ್ನು ಚಂಪಕಮಾಲಾ ವೃತ್ತದ ಪದ್ಯವೊಂದರಲ್ಲಿ ಕವಿಯು ಈ ರೀತಿ ಹೇಳಿದ್ದಾನೆ.

**ಸುವಿದಿತ ಮಾದಿಯಕ್ಕನ ತನೂಭವೆ ಬೈಚಲದೇವಿ ಸಂದ ಮಾ**
**ಧವಪುರದೊಳ್ ನಿಜಾಂಬಿಕೆಯ ನಾಮದಿನ್ ಎತ್ತಿಸಿದಳ್ ಪ್ರಸಂನ ಮಾ**
**ಧವಗೃಹಮಂ ಸಮುಂನತ ವಿಳಾಸ ವಿಡಂಬಿತ ಹೇಮ ಭೂಧರಾ**
**ಪ್ರವರಮನ್ ಉದ್ಘ ಶೃಂಗ ಹಸಿತಾಖಿಲ ದಿಬ್ಯ ವಿಮಾನ ಶೋಭಮಂ ॥**

**ಕ್ಷೀರಾಂಭೋ ನಿಧಿಯಂ ತಟಾಕ ನಿಕರಂ ಕಳ್ಪಾಂಘ್ರಿಪೋದ್ಯಾನವಂ**
**ಚಾರೂದ್ಯಾನವನಂ ಮುನಿಪ್ರಕರಮಂ ವಿಪ್ರಬ್ರಜಂ ಲಕ್ಷ್ಮಿಯಂ**
**ಪೌರಸ್ತ್ರೀ ನಿವಹಂ ಕುಳಾದ್ರಿ ಕುಳಮಂ ಪ್ರಾಸಾದ ಸಂದೋಹ ವಿ**
**ಸ್ತಾರಂ ಪೋಲ್ತಿಗೆ ಸಂದ ಮಾಧವಪುರಂ ಸಂತಂ ಬಸಂತಂ ಕರಂ ॥**

ಕೆರೆ–ತಟಾಕಗಳಿಂದ, ಕಲ್ಪವೃಕ್ಷಗಳಿಂದ ಶೋಭಿತವಾದ ನೆಲ, ಸುಂದರವನ, ಮುನಿಜನ, ಪ್ರಸಿದ್ಧ ಮನೆತನದವರು, ಮಹಲುಗಳಿಂದ ತುಂಬಿದ ಕೇಸಿಹಳ್ಳಿ ಅಥವಾ ಮಾಧವಪುರವನ್ನು ಬಣ್ಣಿಸಿರುವ ಈ ಪದ್ಯವು 'ಪೌರಸ್ತ್ರೀ ನಿವಹಂ' ಎಂಬ ಮಾತಿನಿಂದ ನಾಗರೀಕ ಸ್ತ್ರೀಯರ ಸಮೂಹವನ್ನು ಕುರಿತು ಹೇಳಿದೆ. ನಗರವರ್ಣನೆಯಲ್ಲಿ ಸ್ತ್ರೀಯರ ಇರುವಿಕೆಯನ್ನು ವಾರಾಂಗನೆಯರು, ನರ್ತಕಿಯರ ಗುಂಪಿನಿಂದ ಗುರುತಿಸುವ ಇತರ ಪದ್ಯಗಳಿಗಿಂತ ಈ ಪದವು ಭಿನ್ನವಾಗಿರುವುದನ್ನು ಗಮನಿಸಬಹುದು.

ಇತಿಹಾಸ–ಪುರಾಣಗಳಲ್ಲಿ ಮಾತೃಭಕ್ತಿ ಪಾರಾಯಣರಾದ ಪುರುಷರನ್ನು ಕಾಣುವಂತೆ, ಮಹಿಳೆಯರನ್ನು ಕಾಣುವುದು ಅಪರೂಪ. ಇಂಥ ಅಪರೂಪದ ಪ್ರಕರಣ ಇಲ್ಲಿ ದಾಖಲಾಗಿದೆ. ತಾಯಿಯ ಮೇಲಿನ ಗೌರವದಿಂದಾಗಿ ಅವಳ ಹೆಸರನ್ನು ಹಳ್ಳಿಯೊಂದಕ್ಕೆ ಇರಿಸಿದ ಅರಸಿ ಬೈಚಲಾದೇವಿಯ ವಿಚಾರದೊಂದಿಗೆ ದೇವಾಲಯದ ನಿರ್ಮಾಣ, ಪ್ರಸನ್ನ ಮಾಧವ ದೇವರನ್ನು ಪ್ರತಿಷ್ಠಾಪಿಸಿದ ದಿನ, ನೀಡಿದ ದಾನ–ದತ್ತಿಗಳು, ನಗರ ವರ್ಣನೆ, ಹೊಯ್ಸಳ ವಂಶದ ವಿವರವನ್ನು ಒಳಗೊಂಡ ಈ ಶಾಸನ ಪದ್ಯವು ಪುಟ್ಟ ಚಂಪೂಕಾವ್ಯವಾಗಿದೆ.

**ಕವಿ ನಾಗದೇವ:** ಈ ಶಾಸನಕವಿ ತನ್ನ ಕುರಿತಾದ ವಿಚಾರವನ್ನು ಒಂದು ಸ್ರಗ್ದರಾವೃತ್ತ ಛಂದಸ್ಸಿನ ಪದ್ಯದಲ್ಲಿ ರಚಿಸಿದ್ದಾನೆ.

**ಶ್ರೀಮಚ್ಚಾಮವ್ವೆಗಂ ವಿಶ್ರೂತವಿಮಳಯಶಂ ನಾಗದೇವಂಗವಾದ**
**ಭೂರ್ಮಿತ್ರರ್ಪುತ್ರರಾರೆಂದಡೆ ಕವಿತಿಳಕಂ ನಾಗದೇವಂ ಗಭೀರೋ**
**ದ್ದಾಮಂ ಶ್ರೀಸೋಮನಾಥಂ ಜನವಿನುತವಚೋವಲ್ಲಭಂ ಮಲ್ಲನೆಂದಂ**
**ತೀ ಮೂವರ್ಗೋತ್ರ ಚಿಂತಾಮಣಿಗಳನುಪಮ ಗೌಪಮಾಂಕಪ್ರಗೋತ್ರರ್॥**[೪೯]

'ಕವಿತಿಳಕಂ' ಎಂಬ ಬಿರುದನ್ನು ಪಡೆದಿದ್ದ ಕವಿ ನಾಗದೇವನ ತಂದೆಯ ಹೆಸರೂ ಕೂಡ ನಾಗದೇವನೆಂದು ಇಲ್ಲಿ ಉಕ್ತವಾಗಿದೆ, ತಾಯಿ ಚಾಮವ್ವೆ. ಸೋಮನಾಥ ಮತ್ತು ಮಲ್ಲ ಎಂಬುವವರು ಈತನ ಇಬ್ಬರು ಸಹೋದರರು. ಇವರದು ಗೌತಮಗೋತ್ರವೆಂದು ಈ ಮೇಲಿನ ಪದ್ಯದಲ್ಲಿ ತಿಳಿಸಿದ್ದಾನೆ.

ಈ ಶಾಸನವನ್ನು ರಚಿಸುವ ವೇಳೆಗೆ 'ಕವಿತಿಳಕಂ' ಎಂಬ ಬಿರುದಿಗೆ ಭಾಜನನಾಗಿರುವ ಕವಿಯು ಇನ್ನೂ ಕೆಲವು ಕಾವ್ಯಗಳನ್ನು ರಚಿಸಿದ್ದಾನೆನ್ನುವುದು ಸ್ಪಷ್ಟವಾಗುವುದಾದರೂ, ಈತನು ರಚಿಸಿರುವ ಯಾವ ಕಾವ್ಯವೂ ದೊರೆತಿಲ್ಲ. ಬೈಚಲದೇವಿಯು ಹಾಕಿಸಿರುವ ಈ ಶಾಸನದಿಂದ ಕವಿ ಕುರಿತಾದ ಅಲ್ಪ ವಿಚಾರ ತಿಳಿದು ಬಂದಿದೆ.

**ಸಾಹಿತ್ಯ ಕೃತಿಗಳ (ಹಸ್ತಪ್ರತಿ) ಲಿಪಿಕರಣಕ್ಕೆ ಅರಸಿಯರ ಕೊಡುಗೆ**

ಸಾವಿರಾರು ವರ್ಷಗಳ ಶಾಸನಗಳು ಇಂದಿಗೂ ಉಪಲಬ್ದವಾಗಿ ನಮಗೆ ಅನೇಕ ಮಾಹಿತಿಗಳನ್ನು ಒದಗಿಸಿಕೊಟ್ಟಿರುವಂತೆ, ನೂರಾರು ವರ್ಷಗಳಿಂದ ಉಳಿದುಬಂದಿರುವ ತಾಳೆಗರಿಗಳೂ ಸಹ ನಮಗೆ ಅನೇಕ ಮಹತ್ವದ ಸಂಗತಿಗಳನ್ನು ಕೊಟ್ಟಿವೆ. ಕಾವ್ಯ ರಚನೆಗೆ ನೀಡಿರುವ ಪ್ರೋತ್ಸಾಹದಷ್ಟೇ ಮಹತ್ವ ಆ ಕಾವ್ಯವನ್ನು ಮುಂದಿನ ಪೀಳಿಗೆಗಾಗಿ ಉಳಿಸಿಕೊಂಡು ಬರುವ ಕಾರ್ಯಕ್ಕೂ ಇದೆ. ರಚಿತವಾದ ಕಾವ್ಯಗಳ ಪ್ರತಿಗಳನ್ನು ಮಾಡಿಸುವ ಇಂತಹ ಮಹತ್ವದ ಕಾರ್ಯಗಳೂ ಸಹ ಅರಸಿಯರಿಂದ ನಡೆದಿದೆ. ಜೈನ ಧರ್ಮವನ್ನು ಅನುಸರಿಸಿರುವ ರಾಜಮನೆತನದವರು ಇಂಥ ಕಾರ್ಯವನ್ನು ಹೆಚ್ಚಾಗಿ ನಡೆಸಿದ್ದಾರೆ. ಜೈನಧರ್ಮದಲ್ಲಿ ಆಹಾರ, ಅಭಯ, ಭೈಷಜ ಶಾಸ್ತ್ರದಾನಗಳನ್ನು ಚತುರ್ವಿಧ ದಾನವೆಂದು ಕರೆಯುವರು. ಗೃಹಸ್ಥರಾದ ಜೈನರು ಪಾಲಿಸುವ ಕೆಲವು ಧರ್ಮಗಳಲ್ಲಿ ಇವು ಸೇರಿವೆ. ಅನೇಕ ಸಂದರ್ಭಗಳಲ್ಲಿ ಇವರು ಮಾಡುವ ಸತ್ಕಾರ್ಯಗಳೊಂದಿಗೆ ಗ್ರಂಥಗಳನ್ನು ಪ್ರತಿಮಾಡಿಸಿ ದಾನ ನೀಡುವ ಈ ಸಂಪ್ರದಾಯವು ಇಂದಿಗೆ ಅನೇಕ ಕೃತಿಗಳು ಉಳಿದುಬರಲು ಕಾರಣವಾಗಿದೆ.

ಹೊಯ್ಸಳ ವಿಷ್ಣುವರ್ಧನನ ರಾಣಿ ಶಾಂತಲೆಯನ್ನು ಶ್ರವಣ ಬೆಳಗೊಳದ ೧೭೬ನೆಯ ಸಂಖ್ಯೆಯ ಶಾಸನವು **'ಶಾಸ್ತ್ರದಾನ ವಿನೋದೆ'** ಎಂದು ಬಣ್ಣಿಸಿದೆ. ಇದು ಈಕೆಯು ಹಲವು ಕಾವ್ಯಗಳನ್ನು ಪ್ರತಿಮಾಡಿಸಿ ಹಂಚಿರುವ ವಿಚಾರವನ್ನು ತಿಳಿಸುತ್ತದೆ. ಇವಳಂತೆ ಇವಳ ಮಗಳು ಹರಿಯಬ್ಬರಸಿ (ಹರಿಯಲದೇವಿ) ಕೂಡ ಗ್ರಂಥಗಳನ್ನು ಪ್ರತಿಮಾಡಿಸಿ ಹಂಚಿರುವ ವಿಚಾರ ತಿಳಿದುಬರುತ್ತದೆ.

ಚಂದಲದೇವಿ (ಗಂಗಮಹಾದೇವಿ) ಹಾಗೂ ಬಾಚಲದೇವಿಯರು ಉತ್ತರಕಾಲೀನ ಮಂಡಲಿಯ ಗಂಗರಾಜ ಬುಜಬಲಗಂಗನ ರಾಣಿಯರು. ಕಿರಿಯರಸಿ ಬಾಚಲದೇವಿಯು ತುಂಗಾನದಿ ದಂಡೆಯ ಬನ್ನಿಕೆರೆಯಲ್ಲಿ ಪಾರ್ಶ್ವನಾಥ ಚೈತ್ಯಾಲಯವನ್ನು ನಿರ್ಮಿಸಿದ್ದಳು. ಇವಳು ನಿರ್ಮಿಸಿದ ಈ ಜಿನಾಲಯದಲ್ಲಿ ಪಿರಿಯರಸಿ ಚಂದಲದೇವಿಯ ತಾಯಿ ರವಿದೇವಿಯಕ್ಕ ಶ್ರುತ ಪಂಚಮಿನೋಂಪಿಯನ್ನು ಆಚರಿಸಿ ಅದರ ಉದ್ಯಾಪನೆಯಂದು ಮುನಿ ಮಾಘನಂದಿ ಸಿದ್ಧಾಂತ ದೇವರಿಗೆ ಸಮರ್ಪಿಸಲು ಷಟ್-ಖಂಡ ಆಗಮ ಸಿದ್ಧಾಂತ ಗ್ರಂಥಕ್ಕೆ ಬರೆದ ಅಪೂರ್ವ ಟೀಕಾ ಗ್ರಂಥವಾದ ದವಲ ಗ್ರಂಥವನ್ನು ಪ್ರತಿ ಮಾಡಿಸಿ ಸಮರ್ಪಿಸಿದಳು.

ಆರನೆಯ ವಿಕ್ರಮಾದಿತ್ಯನ ಪಿರಿಯರಸಿ ಪಟ್ಟಮಹಾದೇವಿ ಚಂದಲದೇವಿಯ ಸಾಮಂತ ಪ್ರಭುವಾಗಿದ್ದ ಚೌಧುರೆ ರಕ್ಕಸಯ್ಯನ ಮಗ ಶಾಂತಿವರ್ಮನ ಮಡದಿ ಮಲ್ಲಿಕಬ್ಬೆಯೂ ಶ್ರುತಪಂಚಮಿ ನೋಂಪಿಯನ್ನು ಆಚರಿಸಿ ಮಹಾಧವಲಗ್ರಂಥವನ್ನು ಪ್ರತಿ ಮಾಡಿಸಿ ಮಾಘನಂದಿ ಸಿದ್ಧಾಂತ ದೇವರಿಗೆ ಸಮರ್ಪಿಸಿದಳು.

ಈ ಕಾರ್ಯಕ್ಕಾಗಿ ರವಿಯಕ್ಕ ಹಾಗೂ ಮಲ್ಲಿಕಬ್ಬೆಯರು ಜಿನ್ನಪಯ್ಯ ಮತ್ತು ಉದಯಾದಿತ್ಯರೆಂಬ ಲಿಪಿಕಾರರನ್ನು ಕೊಪ್ಪಳದಿಂದ ಬರಮಾಡಿಕೊಂಡು, ಅವರಿಗೆ ಆಶ್ರಯವಿತ್ತು ಅವರಿಂದ ಈ ಮಹಾನ್ ಗ್ರಂಥಗಳನ್ನು ಪ್ರತಿ ಮಾಡಿಸಿಕೊಂಡರು. ಧವಲಾದ ಪ್ರತಿಕಾರನಾದ ಜಿನ್ನಪ್ಪಯ್ಯ ಈ ಕೃತಿಯಲ್ಲಿ ತನ್ನ ವಿಚಾರವಾಗಿ ಒಂದು ವೃತ್ತ ಹಾಗೂ ಎರಡು ಕಂದಪದ್ಯಗಳನ್ನು ರಚಿಸಿದ್ದಾನೆ. ಈ ಪ್ರತಿಕಾರರು ಅಸಾಮಾನ್ಯರು, ಕವಿಗಳು ಪ್ರೌಢ ವಿದ್ವಾಂಸರೂ, ಭಾಷಾಮರ್ಯಾದೆಯನ್ನೂ ಅಕ್ಷರ ಸೌಷ್ಠವವನ್ನೂ ಆಗಮ ಪರಂಪರೆಯನ್ನೂ ಬಲ್ಲವರಾಗಿದ್ದು, ಕನ್ನಡ ಸಂಸ್ಕೃತ, ಪ್ರಾಕೃತ ಭಾಷೆಗಳಲ್ಲಿ ಸಮದಂಡಿಯಾದ ಪ್ರಭುತ್ವ ಪಡೆದಿದ್ದರು. ಮಿಗಿಲಾಗಿ ಚಿತ್ರಕಲೆಯಲ್ಲೂ ಪರಿಶ್ರಮ ಉಳ್ಳವರಾಗಿದ್ದು ತಮ್ಮ ಕಲಾ ನೈಪುಣ್ಯವನ್ನು ತಾಡೆಯೋಲೆಗಳ ಮೇಲೆ ಸುಂದರವಾಗಿ ಮೂಡಿಸಿದ್ದಾರೆ. ಉದಯಾದಿತ್ಯನು ಮಹಾಧವಲದ ಕಡೆಯಲ್ಲಿನ ಪ್ರಶಸ್ತಿ ಪದ್ಯಗಳಲ್ಲಿ ಮಲ್ಲಿಕಬ್ಬೆಯ ಉದಾರತೆಯನ್ನು ಕೊಂಡಾಡಿದ್ದಾನೆ.

ಜೈನಧರ್ಮದ ಷಟ್‌ಖಂಡಾಗಮಕ್ಕೆ ಕೊಂಡಕುಂದ, ಶ್ಯಾಮಕುಂದ, ತುಂಬಲೂರ, ಸಮಂತಭದ್ರ ಮತ್ತು ಬಪ್ಪದೇವರೆಂಬ ಆಚಾರ್ಯರು ಬರೆದಿರುವ ಟೀಕಾಗ್ರಂಥಗಳು ಈ ವರೆಗೆ ಉಳಿದು ಬಂದಿಲ್ಲ. ಈಗ ಸಿಕ್ಕಿರುವ ಏಕೈಕ ಟೀಕಾಗ್ರಂಥವೇ ಧವಲ. ೭೨ ಸಾವಿರ ಶ್ಲೋಕಗಳುಳ್ಳ ಈ ಗ್ರಂಥವನ್ನು ಕ್ರಿ.ಶ.೮೧೬ರಲ್ಲಿ ರಚಿಸಲಾಗಿತ್ತು. ಆನಂತರ ಇದರ ಪ್ರತಿಗಳು ಶ್ರವಣಬೆಳಗೊಳ, ಕೊಪ್ಪಳ, ಬಂಕಾಪುರ ಮೊದಲಾದ ಪ್ರಮುಖ ಶ್ರುತ ಭಂಡಾರ ಸೇರಿದವು. ಶ್ರವಣಬೆಳಗೊಳದ ಪ್ರತಿಯನ್ನಾಧರಿಸಿ ಪ್ರಸ್ತುತ ದೊರಕಿರುವ ಏಕೈಕ ಪ್ರತಿಯನ್ನು ರವಿಯಕ್ಕ ಲಿಪಿ ಮಾಡಿಸಿದಳು. ಆದರೆ ಕಾಲಾಂತರದಲ್ಲಿ ಶ್ರವಣಬೆಳಗೊಳದ ಪ್ರತಿಯೂ ನಾಶವಾಗಿ ರವಿಯಕ್ಕ ಪ್ರತಿಮಾಡಿಸಿರುವ ಏಕೈಕ ಗ್ರಂಥ ಮಾತ್ರ ಉಳಿದು ಬಂದಿದೆ. ಸಾವಿರದ ಮುನ್ನೂರು ವರ್ಷಗಳ ಹಿಂದಿನ ಆಗಮ ಗ್ರಂಥ ಇವಳಿಂದ ಇಂದಿನವರಿಗೆ ಲಭಿಸುವಂತಾಗಿದೆ.

ಧವಲಾ, ಜಯಧವಲಾ ಮತ್ತು ಮಹಾಧವಲಾ ಗ್ರಂಥಗಳನ್ನು ಧವಲತ್ರಯ ಎಂದು ಕರೆಯಲಾಗಿದೆ. ಇವು ಜೈನಧರ್ಮದ ಶ್ರೇಷ್ಠ ಕೃತಿಗಳಾಗಿ ಭಾರತಾದ್ಯಂತ ಪ್ರಸಿದ್ಧವಾಗಿದೆ. ಕರ್ನಾಟಕದ ವಿಪುಲ ಜೈನಸಾಹಿತ್ಯ ರಾಶಿಗೆ ಮುಕುಟಪ್ರಾಯವಾಗಿದೆ ಎಂದರೂ ಉತ್ಪ್ರೇಕ್ಷೆಯಲ್ಲ. ಜಯಧವಲಾ ಟೀಕಾ ಕೃತಿಯು ವೀರಸೇನಾಚಾರ್ಯರು ಮತ್ತು ಜಿನಸೇನಾಚಾರ್ಯರಿಂದ ಬರೆಯಲ್ಪಟ್ಟಿದೆ. ಇವರಿಬ್ಬರೂ ರಾಷ್ಟ್ರಕೂಟ ಚಕ್ರವರ್ತಿಗಳಾದ ಜಗತ್ತುಂಗ ಮತ್ತು ಅಮೋಘವರ್ಷರ ಕಾಲದಲ್ಲಿದ್ದವರು. ಇಂದು ಧವಲಾ, ಜಯಧವಲಾ ಮತ್ತು ಮಹಾಧವಲಾಗಳ ಕವಿಯ ಸ್ವಹಸ್ತ ಮೂಲಪ್ರತಿಗಳು ಲಭ್ಯವಿಲ್ಲ. ಈಗ ಲಭ್ಯವಿರುವುದು ಮೂಲಗ್ರಂಥಗಳಿಂದ ನಕಲು ಮಾಡಿಸಿದ ಪ್ರತಿಗಳಾಗಿವೆ. ಈ ಪ್ರತಿಗಳು ಇಂದು ಉಳಿದು ಬಂದಿರುವುದಕ್ಕೆ ಅಂದಿನ ರಾಜಮನೆತನದ ಮಹಿಳೆಯರ ಧಾರ್ಮಿಕ ಮನೋಭಾವವೇ ಕಾರಣವಾಗಿದೆ[೫೦].

ನಗರಿಯ **ಮಲ್ಲಿರಾಯ ಅರಸಿನ ಪಟ್ಟಮಹಾದೇವಿ ಲಲಿತಾದೇವಿಯವರು** ತಮಗೆ ಕೇವಲಜ್ಞಾನ ಕಾರಣವಾಗಿ ಅಯ್ಯಗಳ ಶಿಷ್ಯರು ಗುಂಮಣ್ಣಗಳಿಗೆ ಬರೆಸಿಕೊಟ್ಟ ಕ್ರಿಯಾವ್ಯಾಖ್ಯಾನ ಗ್ರಂಥಕ್ಕೆ ಮಂಗಲ ಮಹಾಶ್ರೀ" ಎಂದು ಸು.೧೧೦೦ರಲ್ಲಿ ರಚಿತವಾಗಿದ್ದ ಪ್ರಾಕೃತ ಗ್ರಂಥ ಪ್ರಭಾಚಂದ್ರರ ಕ್ರಿಯಾವ್ಯಾಖ್ಯಾ ಎಂಬ ಟೀಕು ಗ್ರಂಥವನ್ನು ಪ್ರತಿಮಾಡುವಾಗ ಲಿಪಿಕಾರ ತಿಳಿಸಿದ್ದಾನೆ. ಇಲ್ಲಿ ಉಲ್ಲೇಖವಾಗಿರುವ ಮಲ್ಲಿರಾಯ ಗೋರುಸೊಪ್ಪೆಯನ್ನು ಕ್ರಿ.ಶ.೧೪೭೧–೮೦ರ ಅವಧಿಯಲ್ಲಿ ಆಳ್ವಿಕೆ ನಡೆಸುತ್ತಿದ್ದವನು. ಈತನ ರಾಣಿ ಲಲಿತಾದೇವಿ ಈ ಗ್ರಂಥವನ್ನು ಪ್ರತಿಮಾಡಿಸಿ ಗುಮ್ಮಣ್ಣಗಳಿಗೆ ಶಾಸ್ತ್ರದಾನ ಮಾಡಿದ್ದಾಳೆ.

ಪ್ರಸ್ತುತ ಅಧ್ಯಯನದಲ್ಲಿ ಗಮನಿಸಿದಂತೆ ಸಾಹಿತ್ಯಕ್ಕೆ ಅರಸಿಯರು ನೀಡಿರುವ ಕೊಡುಗೆ ಬಹಳ ವಿಶಿಷ್ಟವೂ, ವ್ಯಾಪಕವೂ ಆಗಿದೆ. ಅರಸಿಯರು ಹೊರಡಿಸಿರುವ ಶಾಸನವು ವೈವಿಧ್ಯಮಯವಾಗಿದ್ದು, ಅವುಗಳಲ್ಲಿ ಹೆಚ್ಚಿನವು ದಾನ ಶಾಸನಗಳೇ ಆಗಿದ್ದರೂ, ವಿಷಯ ನಿರೂಪಣೆ, ಸಂದರ್ಭ, ಆ ದಾನಕ್ಕೆ ವಿಧಿಸಿದ ನಿಯಮಗಳಲ್ಲಿ ಅಂದಿನ ಅರಸಿಯರ ಮನೋಭಾವ ಪ್ರಕಟವಾಗಿವೆ. "ಗ್ರಂಥಸ್ಥ ಕಾವ್ಯಗಳ ರಚನೆಕಾರರು ಸ್ವಯಂ ಪ್ರೇರಿತರಾಗಿ ಕಾವ್ಯ ರಚಿಸಿರುವ ಉದಾಹರಣೆಗಳಿದ್ದರೂ ಶಾಸನಗಳನ್ನು ರಚಿಸಿದ ಕವಿಗಳೆಲ್ಲಾ ಆಸ್ಥಾನದಲ್ಲಿ ಆಶ್ರಯ ಪಡೆದವರೇ ಆಗಿರುತ್ತಿದ್ದರು"[೫೧]. ಇಲ್ಲಿ ಅರಸಿಯರೇ ಹೊರಡಿಸಿರುವ ಶಾಸನಗಳನ್ನು ಗಮನಿಸಲಾಗಿದ್ದು, ಇಲ್ಲಿ ಗುರುತಿಸಲಾಗಿರುವ ಶಾಸನಕವಿಗಳು ಅರಸಿಯರ ಪೋಷಣೆಯಲ್ಲಿ ಶಾಸನ ಪದ್ಯಗಳನ್ನು ರಚಿಸಿದವರಾಗಿದ್ದಾರೆ.

ಶಾಸನಗಳು ತಮ್ಮ ಕಾಲದ ರಾಜಕೀಯ ಮತ್ತು ಸಾಂಸ್ಕೃತಿಕ ವಿಚಾರಗಳಮೇಲೆ ಬೆಳಕು ಬೀರುವುದಷ್ಟೇ ಅಲ್ಲ, ಕಾವ್ಯಾಂಶಗಳನ್ನೊಳಗೊಂಡ ಅವುಗಳ ರಚನೆಗೆ ಮೂಲ ಪ್ರೇರಣೆ, ಪ್ರಭಾವ ಪೋಷಣೆಗಳ ವಿಚಾರವನ್ನೂ ತಿಳಿಸುತ್ತವೆ.

ಸಾಹಿತ್ಯಪೋಷಣೆಯಷ್ಟೇ ಅಲ್ಲದೆ ವಿದ್ಯಾಭ್ಯಾಸಕ್ಕೂ ಅರಸಿಯರು ವಿಶೇಷ ಕಾಳಜಿ ವಹಿಸಿದ್ದನ್ನು ಗಮನಿಸಬಹುದು.

ಈ ಅಧ್ಯಯನದಲ್ಲಿ ಉಲ್ಲೇಖಿಸಿರುವ ಶಾಸನ ಕವಿಗಳಾದ ನಾಗದೇವ, ನಾಗವರ್ಮ, ಸುಭಗ, ಕಮಲಾದಿತ್ಯ, ಕಂದರ್ಪ, ಮಲ್ಲಿನಾಥ, ಬಮ್ಮರಹರಿಯಣ್ಣ, ನಾಗಾರ್ಜುನ ಪಂಡಿತ ಮೊದಲಾದವರ ಉಲ್ಲೇಖ ಕೇವಲ ಶಾಸನಗಳಲ್ಲಿ ಮಾತ್ರ ದೊರಕುತ್ತದೆ. ಇವರಲ್ಲಿ ಅನೇಕರ ಶಾಸನ ಪದ್ಯಗಳ ಬಂಧ ಇವರ ಕವಿತಾ ಸಾಮರ್ಥ್ಯವನ್ನು ಕುರಿತು ತಿಳಿಸುತ್ತವೆ. ಇದು, ಇವರು ಶಾಸನ ಪದ್ಯಗಳನ್ನು ಹೊರತು ಗ್ರಂಥಗಳನ್ನು ರಚಿಸಿರುವ ಸಾಧ್ಯತೆಗಳಿರುವ ಸುಳಿವನ್ನು ತಿಳುಹಿದರೂ ಇವರುಗಳು ರಚಿಸಿರಬಹುದಾದ ಗ್ರಂಥಗಳು ದೊರಕದೆ ಇವರು ಕೇವಲ ಶಾಸನಕವಿಗಳೆಂದೇ ಗುರುತಿಸಲ್ಪಟ್ಟಿದ್ದಾರೆ.

"ಶಾಸನ ಕ್ಷೇತ್ರ ನಮಗೆ ದ್ವಿತೀಯ ವರ್ಗದ ಸಾಮಾನ್ಯ ಶಕ್ತಿಯ ಕವಿಗಳನ್ನು ಕಾಣಿಸಬಲ್ಲದೇ ಹೊರತು ಮಹಾಕವಿಗಳನ್ನಲ್ಲ. ಈ ಶಾಸನ ಕವಿಗಳಲ್ಲಿ ಸಾಮಾನ್ಯವಾಗಿ ಪ್ರತಿಭೆಗಿಂತ ಪಾಂಡಿತ್ಯ ಹಾಗೂ ಅನುಕರಣ ಪ್ರವೃತ್ತಿ ಅಧಿಕವಾಗಿರುತ್ತದೆ"[೫೨] ಎಂಬ ಹಾ.ಮಾ.ನಾಯಕರ ಹೇಳಿಕೆಯನ್ನು ಈ ಮೇಲಿನ ಕೆಲವು ಶಾಸನ ಪದ್ಯಗಳು ಪ್ರಶ್ನಿಸುವಂತಿದೆ. ಪ್ರಾಚೀನ ಕನ್ನಡದ ಪ್ರಸಿದ್ಧ ಕವಿಗಳಾದ ರನ್ನ, ಪೊನ್ನ, ಜನ್ನ ಮೊದಲಾದವರು ಶಾಸನಪದ್ಯಗಳನ್ನು ರಚಿಸಿದ್ದಾರೆ.

ಚೋಳರ ವಿರುದ್ಧ ಮೂರನೆಯ ಕೃಷ್ಣನ ಗೆಲುವನ್ನು ಸಾರುವ ಆತಕೂರು ಶಾಸನವನ್ನೂ ಹಾಗೂ ಜುರಾಪ್ರಶಸ್ತಿ ಶಾಸನವನ್ನೂ ಈತನ ಆಸ್ಥಾನಕವಿಯಾಗಿದ್ದ ಪೊನ್ನ ರಚಿಸಿರುವನೆಂದು ಗುರುತಿಸಲಾಗಿದೆ[೫೩].

ಜನ್ನನೂ ಕೂಡ ತನ್ನೆರಡು ಮಹಾಕಾವ್ಯಗಳ ರಚನೆಗೂ ಮೊದಲು ಕ್ರಿ.ಶ.೧೧೯೦ರ ಚನ್ನರಾಯಪಟ್ಟಣದ ೧೭೬ನೆಯ ಸಂಖ್ಯೆಯ ಶಾಸನವನ್ನೂ, ೧೧೯೨ರಲ್ಲಿ ತರೀಕೆರೆಯ ೪೫ನೆಯ ಶಾಸನವನ್ನೂ ರಚಿಸಿದ್ದಾನೆ. ಹೊಯ್ಸಳ ವೀರಬಲ್ಲಾಳನ ಆಸ್ಥಾನಕವಿಯಾಗಿದ್ದ ಇವನು ಕ್ರಿ.ಶ.೧೨೦೯ರಲ್ಲಿ ಅನಂತನಾಥಪುರಾಣವನ್ನೂ, ಬಲ್ಲಾಳನ ಮಗ ವೀರನರಸಿಂಹನ ಕಾಲದಲ್ಲಿ ಕ್ರಿ.ಶ.೧೨೩೦ರಲ್ಲಿ ಯಶೋಧರ ಚರಿತಯನ್ನೂ ಬರೆದಿದ್ದಾನೆ. ಇವನು ಮಹಾಕವಿಯಾಗಿ ರೂಪುಗೊಳ್ಳುವ ಮುನ್ನ ಶಾಸನಕವಿಯಾಗಿದ್ದನೆನ್ನುವುದನ್ನು ಇಲ್ಲಿ ಗಮನಿಸಬಹುದು.

ಪಾರ್ಶ್ವನಾಥ ಪುರಾಣ ರಚಿಸಿರುವ ಪಾರ್ಶ್ವಪಂಡಿತನು ಸೌದತ್ತಿಯ ರಟ್ಟರ ಆಸ್ಥಾನ ಕವಿ. ಈತನು ಕ್ರಿ.ಶ.೧೨೦೫ರ ಕಲ್ಹೊಳೆಯಲ್ಲಿ ಶಾಸನವನ್ನು ರಚಿಸಿದ್ದಾನೆ[೫೪]. ಜನ್ನನ ಪ್ರಶಂಸೆಗೊಳಗಾದ ಬಾಳಚಂದ್ರಕವಿ ಕಂದರ್ಪ ಕ್ರಿ.ಶ.೧೨೦೪ರ ಬೆಳಗಾವಿಯ ಶಾಸನವನ್ನು ರಚಿಸಿದ್ದಾನೆ[೫೫]. ಹೀಗೆ ಕನ್ನಡದ ಅನೇಕ ಸುಪ್ರಸಿದ್ಧ ಕವಿಗಳು ಶಾಸನವನ್ನು ರಚಿಸಿದ್ದಾರೆ, ಶಾಸನ ಪದ್ಯ ರಚಕರನ್ನು ಎರಡನೆಯ ದರ್ಜೆಯ ಕವಿಗಳು ಎಂದು ಹೀಗಳೆಯುವಂತಿಲ್ಲ. ಕರ್ನಾಟಕದ ಅರಸಿಯರು ಬರೆಯಿಸಿರುವ ಅನೇಕ ಶಾಸನ ಪದ್ಯಗಳೂ ಕೂಡ ಉತ್ಕೃಷ್ಟ ಕಾವ್ಯಗುಣಗಳನ್ನು ಹೊಂದಿದ್ದು, ಅದರ ಕರ್ತೃಗಳು ಉತ್ತಮ ಕವಿತಾ ಶಕ್ತಿಯನ್ನು ಹೊಂದಿದವರಾಗಿದ್ದರು.

**ಅಧ್ಯಯನದ ಫಲಿತ**

ಈ ಅಧ್ಯಾಯದಲ್ಲಿ ಕರ್ನಾಟಕದ ಪ್ರಾಚೀನ ಅರಸಿಯರು ಕವಿಗಳಿಗೆ ಆಶ್ರಯ, ಪ್ರೋತ್ಸಾಹ ನೀಡುವುದರ ಮೂಲಕ ಸಾಹಿತ್ಯ ರಚನೆಗೆ ಕಾರಣರಾದ ಹಿನ್ನೆಲೆಯಲ್ಲಿ ಸಾಹಿತ್ಯಕ್ಕೆ ಅವರು ನೀಡಿರುವ ಕೊಡುಗೆಯನ್ನು ಗುರುತಿಸುವ ಪ್ರಯತ್ನ ನಡೆಸಲಾಗಿದೆ. ಇಲ್ಲಿ ಅರಸಿಯರು ಸಾಹಿತ್ಯ ರಚನೆಗಷ್ಟೇ ಅಲ್ಲದೆ ಪ್ರಾಚೀನ ಕಾವ್ಯಗಳ ಲಿಪೀಕರಣಕ್ಕೂ ಕಾರಣರಾಗಿರುವುದನ್ನು ಗಮನಿಸುತ್ತೇವೆ.

ಗ್ರಂಥಸ್ಥಕಾವ್ಯಗಳು ಉಪಲಬ್ದವಿಲ್ಲದ ಕಾರಣ, ಇಲ್ಲಿನ ಕವಿಗಳ ವೈಯಕ್ತಿಕ ವಿಚಾರವಾಗಲೀ, ಕಾವ್ಯ ರಚನಾ ಚಾತುರ್ಯವನ್ನಾಗಲೀ ಶಾಸನಪದ್ಯಗಳಿಂದಲೇ ಗುರುತಿಸಲಾಗಿದೆ. ರನ್ನಕವಿಗೆ ಆಶ್ರಯ ನೀಡಿದ ಅತ್ತಿಮಬ್ಬೆಯ

ಉದಹರಣೆಯೊಂದನ್ನುಳಿದು ಮಿಕ್ಕೆಲ್ಲ ಅರಸಿಯರ ಸಾಹಿತಿಗಳ ಪೋಷಣೆ ಗಮನಿಸಿ, ವಿಶ್ಲೇಷಿಸಲು ಶಾಸನವೇ ಮೂಲ ಆಧಾರವಾಗಿದೆ.

ಈ ಮೇಲಿನ ಕೆಲವು ಉದಾಹರಣೆಗಳಲ್ಲಿ ಕಂಡುಬರುವಂತೆ ಅನೇಕ ಶಾಸನಕವಿಗಳು ತಮ್ಮ ವಿಚಾರವನ್ನು ಶಾಸನದ ಕಡೆಯಲ್ಲಿ ತಿಳಿಸಿದ್ದಾರೆ. ಕೆಲವು ಕವಿಗಳು ಯಾವ ವಿವರಣೆಯನ್ನೂ ನೀಡದೆ ಕೇವಲ ಹೆಸರನ್ನು ಮಾತ್ರ ಒಂದು ಸಾಲಿನಲ್ಲಿ ತಿಳಿಸಿದ್ದಾರೆ. ಕವಿ ನಾಗದೇವನು ಒಂದು ವೃತ್ತದಲ್ಲಿ ತನ್ನ ವಿಚಾರವನ್ನು ತಿಳಿಸಿದರೆ, ಕವಿ ತಿಪ್ಪಣ್ಣೋಜ, ತ್ರಿವಿಕ್ರಮ, ಕಮಲಾದಿತ್ಯ, ಮಲ್ಲಿನಾಥರು ಒಂದೊಂದು ಕಂದಪದ್ಯದಲ್ಲಿ ತಮ್ಮ ವಿಚಾರವನ್ನು ತಿಳಿಸಿದ್ದಾರೆ. ಕವಿ ನಾಗಾರ್ಜುನ ತನ್ನ ಬಿರುದಿನೊಂದಿಗೆ ಹೆಸರನ್ನು ಉಲ್ಲೇಖಿಸಿದ್ದರೆ, ಕವಿ ಕಂದರ್ಪ, ನಾಮಯ್ಯ, ನಾಗವರ್ಮ ಮೊದಲಾದವರು ಕೇವಲ ಒಂದೊಂದು ಪದದಲ್ಲಿ ತಮ್ಮ ಹೆಸರುಗಳನ್ನು ಉಲ್ಲೇಖಿಸಿದ್ದಾರೆ. ಆದರೆ ಹೆಸರನ್ನೇ ತಿಳಿಸದ ಅನೇಕ ಶಾಸನ ಪದ್ಯಗಳು ದೊರಕುತ್ತವೆ. ಕಾವ್ಯ ದೃಷ್ಟಿಯಿಂದ ಅಂತಹ ಒಂದೆರಡು ಶಾಸನಗಳನ್ನೂ ಇಲ್ಲಿ ಗಮನಿಸಲಾಗಿದೆ. ಹೊಯ್ಸಳ ರಾಣಿ ಶಾಂತಲೆಯ ಕೆಲವು ಪ್ರಸಿದ್ಧ ಶಾಸನಗಳಂತೆಯೇ ವಿಶಿಷ್ಟ ವಸ್ತುವನ್ನು ಹೊಂದಿರುವ ಮೋಚಬ್ಬರಸಿಯ ಶಾಸನವೂ ವಿಶೇಷ ಕಾವ್ಯಬಂಧಗಳಿಂದ ರಚಿತವಾದ ಶಾಸನ ಪದ್ಯವಾಗಿರುವುದನ್ನು ಇಲ್ಲಿ ಗಮನಿಸಲಾಗಿದೆ.

ಕೆಲವು ಕವಿಗಳು ತಮ್ಮ ಸ್ವವಿಚಾರಗಳನ್ನು ಚುಟುಕುಗೊಳಿಸಿದ್ದರೂ, ತಾವು ಹೇಳಲಿರುವ ಅರಸಿಯ ಸಾಧನೆಯನ್ನಾಗಲಿ, ತಮಗೆ ಆಶ್ರಯವಿತ್ತ ಅರಸಿಯರ ಗುಣಗಾನ ವರ್ಣನೆಗಳನ್ನಾಗಲೀ ಪುಟ್ಟ ಶಾಸನ ಪದ್ಯಗಳಲ್ಲಿಯೇ ಸಮರ್ಥವಾಗಿ ರಚಿಸಿ ತಮ್ಮ ಕಾವ್ಯನೈಪುಣ್ಯ, ಭಾಷಾ ಪಾಂಡಿತ್ಯಗಳನ್ನು ಮೆರೆದಿದ್ದಾರೆ.

ಕರ್ನಾಟಕದ ಅರಸಿಯರು ಮಾಡಿಸಿದ ಚೈತ್ಯಾಲಯ, ದೇವಾಲಯ, ತಟಾಕಗಳು ಕಾಲಾಂತರದಲ್ಲಿ ಅಳಿವಿನ ಅಂಚಿಗೆ ಬಂದಿದ್ದರೂ, ಅದರೊಂದಿಗೆ ಹಾಕಿಸಿದ ಶಿಲಾಶಾಸನಗಳು ಉಳಿದು ಬಂದು ಅವರ ಹೆಸರನ್ನು ಶಾಶ್ವತವಾಗಿಸಿವೆ. ಇದರೊಂದಿಗೆ ಶಾಸನ ಕವಿಗಳಿಗೆ ಅವಕಾಶವಿತ್ತು ಬರೆಯಿಸಿದ ಪದ್ಯಗಳು ಅರಸಿಯರ ಸಾಹಿತ್ಯ ಪ್ರೇಮವನ್ನೂ, ಕವಿಗಳಿಗಿತ್ತ ಮನ್ನಣೆ–ಪ್ರೋತ್ಸಾಹಗಳನ್ನೂ ಕುರಿತು ತಿಳಿಸುತ್ತವೆ. ಹಸ್ತಪ್ರತಿಯೊಂದಿಗೆ ಮರೆಯಾಗಿರುವ ಹಲವಾರು ಸಂಗತಿಗಳು ಇಂಥ ಶಾಸನಗಳಿಂದಾದರೂ ಬೆಳಕಿಗೆ ಬರುವಂತಾಗಿದೆ.

**ಟಿಪ್ಪಣಿಗಳು ಹಾಗೂ ಆಕರಗ್ರಂಥಗಳು**


೧. ಶೆಟ್ಟರ್.ಷ, ೨೦೧೪, ***ಹಳಗನ್ನಡಲಿಪಿ, ಲಿಪಿಕಾರ, ಲಿಪಿ ವ್ಯವಸಾಯ***, ಅಭಿನವ, ಬೆಂಗಳೂರು,

೨. Sii ix(i) no.೧೭

೩. E.I IV ಸಂಖ್ಯೆ, ೫೦, ಪು.೩೫೧

೪. SII ಸಂ XVII ಪು.೪೭–೪೯ ಕುಂಬಳೂರು ತಾಮ್ರಪಟ

೫. ಶೆಟ್ಟರ್.ಷ, ಪೂರ್ವೋಕ್ತ

೬. ಕ.ವಿ.ಶಾ.ಸಂ–೭ ರಾಯಚೂರು ಮಾನ್ವಿ ೮೮

೭. ಲಕ್ಷ್ಮಣ್ ತೆಲಗಾವಿ & ಎಂ.ವಿ.ಶ್ರೀನಿವಾಸ್ (ಸಂ), ೧೯೯೫, ***ಹುಲ್ಲೂರು ಶೀನಿವಾಸ ಜೋಯಿಸರ ಸಂಶೋಧನ ಲೇಖನಗಳು***, ಹುಲ್ಲೂರು ಶೀನಿವಾಸ ಜೋಯಿಸ ಗ್ರಂಥ ಪ್ರಕಟಣ ಸಮಿತಿ, ಚಿತ್ರದುರ್ಗ, ಪು.೪೫೧

೮. ಹನುಮಾಕ್ಷಿ ಗೋಗಿ(ಸಂ) ***ಕಲಬುರ್ಗಿ ಜಿಲ್ಲೆಯ ಶಾಸನಗಳು***, ಶಾಸನ ಸಂಖ್ಯೆ ೩೧, ನಿಪ್ಪಾಣಿ (ಕ್ರಿ.ಶ.೧೦೩೭)

೯. ಹನುಮಾಕ್ಷಿ ಗೋಗಿ, ***ಗುಲ್ಬರ್ಗಾ ಜಿಲ್ಲೆಯ ಶಾಸನ ಕವಿಗಳು*** 'ಶಾಸನಕವಿಗಳು' ವಿಚಾರ ಸಂಕಿರಣ ಕರ್ನಾಟಕ ಇತಿಹಾಸ ಅಕಾದೆಮಿ, ಪ್ರೊ.ಎಂ.ವಿ.ಸೀ ಸಭಾಂಗಣ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ , ಬೆಂಗಳೂರು. ದಿನಾಂಕ:೨೯.೧೨.೨೦೧೩

೧೦. ಗಣೇಶ್.ಕೆ.ಆರ್, ***ಆಂಧ್ರಪ್ರದೇಶದ ಕನ್ನಡ ಶಾಸನಗಳು – ಒಂದು ಅಧ್ಯಯನ***, ಕಸಾಪ ೧೯೯೬, ಪು.೨೩೪

೧೧. ಭೋಜರಾಜಪಾಟೀಲ, ***ನಾಗರಖಂಡ-೭೦ ಒಂದು ಅಧ್ಯಯನ***, ಆನಂದಪುರಂ, ೧೯೯೫, ಪು.೪೪

೧೨. E.C. VI ಶಿಕಾರಿಪುರ, ಬಂದಳಿಕೆ ೨೧೯

೧೩. ***ಕನ್ನಡ ಕೈಪಿಡಿ***, ಸಂಪುಟ-೧, ಮೈಸೂರು ವಿಶ್ವವಿದ್ಯಾನಿಲಯ, ೨೦೧೦, ಪು.೮೬

೧೪. E.C. XI ಚಿತ್ರದುರ್ಗ, ಬೇವಿನಹಳ್ಳಿ-೭೪

೧೫. E.I XVI ಸಂ.೧, ಪು.೩

೧೬. ಮೇವುಂಡಿ ಮಲ್ಲಾರಿ, ***ಕನ್ನಡನಾಡಿನ ಕೆಲವು ಶಾಸನ ಕವಿಗಳು***, ೧೯೭೪ ದ್ವಿ.ಮು, ಪು.೨೮

೧೭. ನರಸಿಂಹಾಚಾರ್.ಆರ್., ೨೦೧೧, ಕರ್ಣಾಟಕ ಕವಿಚರಿತೆ ಸಂ-೧, ಕಸಾಪ, ಬೆಂಗಳೂರು ಪುಟ ೫೬

೧೮. ಹೆರಂಜೆ ಕೃಷ್ಣ ಭಟ್ಟ & ಮುರಳೀಧರ ಉಪಾಧ್ಯ ಹಿರಿಯಡಕ (ಸಂ), ೧೯೯೫, ***ಗೋವಿಂದ ಪೈ ಸಂಶೋಧನ ಸಂಪುಟ***, ಉಡುಪಿ, ಪು.೧೯೮

೧೯. ಹಂಪ.ನಾ, ದಾನಚಿಂತಾಮಣಿ, ೧೯೯೬, ***ದಾನಚಿಂತಾಮಣಿ ಅತ್ತಿಮಬ್ಬೆ***, ಐಬಿಎಚ್ ಪ್ರಕಾಶನ, ಬೆಂಗಳೂರು

೨೦. B.K.I – 1 ಭಾಗ-೧, ಸಂಖ್ಯೆ ೫೨

೨೧. E.C. X ಮುಳಬಾಗಿಲು ೩೭, (ಕ್ರಿ.ಶ. ೯೮೨)

೨೨. ಕಲಬುರ್ಗಿ.ಎಂ.ಎಂ., ೧೯೭೩, ***ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ***, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪು.೧೪೪

೨೩. ಗಣೇಶ್.ಕೆ.ಆರ್, ವಿಶೇಷ ಉಪನ್ಯಾಸ, ಹಳಗನ್ನಡ ಕಾವ್ಯಾಭ್ಯಾಸ ಶಿಬಿರ, ಬಿ.ಎಂ.ಶ್ರೀ ಪ್ರತಿಷ್ಠಾನ, ಬೆಂಗಳೂರು

೨೪. ಕಲಬುರ್ಗಿ.ಎಂ.ಎಂ., ಪೂರ್ವೋಕ್ತ, ಪು.೧೪೫

೨೫. E.I xxix ಪು.೨೦೩-೨೦೯

೨೬. ಜ್ಯೋತ್ಸ್ನಾ ಕಾಮತ, ೨೦೦೮, **ಕೈಗನ್ನಡಿಯಲ್ಲಿ ಕನ್ನಡಿತಿ,** ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ, ಪು.೨೧

೨೭. ಲಕ್ಷ್ಮೀ.ಜಿ.ಪ್ರಸಾದ್, ಭೂತಗಳ ಅದ್ಭುತ ಜಗತ್ತು – ಸಾವಿರದೊಂದು ಗುರಿಯೆಡೆಗೆ, ತುಳುನಾಡ ದೈವಗಳು, ೨೧೯

೨೮. ರಮೇಶ.ಕೊ.ವ್ಯಾ., ೧೯೯೦, ***ಜಯಸಿಂಹನ ತಳಂಗೆರೆ ಶಿಲಾಶಾಸನ***, ಗಡಿನಾಡಿನ ಕಿಡಿ, ಕಾಸರಗೋಡು,

೨೯. A.R.S.I.E. 1932-33. No.124

೩೦. Srinivasa Ritti, Some Women Administrators of Medieval Karnataka, Quarterly Journal of the Mythic Society, (QJMS) Vol.XLVIII - 1957-58, pg.52

೩೧. ನರಸಿಂಹಾಚಾರ್.ಆರ್., ೨೦೧೧, ಕರ್ಣಾಟಕ ಕವಿಚರಿತೆ ಸಂ-೧, ಕಸಾಪ, ಬೆಂಗಳೂರು, ಪು.೮೦

೩೨. E.C. VIII ಸೊರಬ ೧೬೪

೩೩. Desai.P.B. Jainism in South India & Some Jain Epigraphs, Pg.229

೩೪. SII ಸಂ XI ಭಾಗ-೨ ಸಂಖ್ಯೆ.೧೭೭

೩೫. ನರಸಿಂಹಾಚಾರ್.ಆರ್., ಕರ್ಣಾಟಕ ಕವಿಚರಿತೆ ಸಂ-೧, ಕಸಾಪ, ಬೆಂಗಳೂರು ೨೦೧೧ ಅನುಬಂಧ-೧ ಪು.೧೦

೩೬. E.C. II ಶ್ರವಣಬೆಳ್ಗೊಳ ೧೬೨

೩೭. E.C. V ಹಾಸನ ೧೧೬, ಗ್ರಾಮ ಕ್ರಿ.ಶ.೧೧೨೨

೩೮. E.C. V ಹಾಸನ ೧೬, ಬೇಲೂರು ಕ್ರಿ.ಶ.೧೧೨೦

೩೯. ಜೆ.ಬಿ.ಬಿ.ಆರ್.ಎ.ಎಸ್. ಸಂ.೯, ಪು. ೨೯೪

೪೦. E.C. XI (ಪರಿ), ಚಿ.ಮ ಶಾ.ಸಂ ೧೮ ಮೂಡಿಗೆರೆ, ಕ್ರಿ.ಶ.೧೧೨೯

೪೧. E.C. XI (ಪರಿ) ಅ.ಕೆ ೮೫, ಕಣಕಟ್ಟೆ, ಕ್ರಿ.ಶ.೧೧೩೨

೪೨. E.C. VI ಮೂಡಿಗೆರೆ ಶಾ.ಸಂ.೨೨ ಹಂತಿಯೂರು

೪೩. ಚಿಕ್ಕಮಗಳೂರು ಜಿಲ್ಲೆಯ ಶಾಸನ ಕವಿಗಳು, ಚಿಕ್ಕಮಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು ೨೦೦೩

೪೪. E.C. VII ಹೊನ್ನಾಳಿ ನಂ೨೮, ೩೭, ೩೮, ೪೦

೪೫. E.C. V ಅರಸಿಕೆರೆ ೯೦, ೯೩ & ೨೦೫

೪೬. ನರಸಿಂಹಾಚಾರ್.ಆರ್., ಪೂರ್ವೋಕ್ತ, ಪು. ೩೨೪, ೫೨೮

೪೭. E.C. V ಅರಸಿಕೆರೆ ೯೦ (ಕ್ರಿ.ಶ.೧೧೮೯)

೪೮. E.C. V ಅರಸಿಕೆರೆ ೪೦ ಕಣಿಕಟ್ಟೆ (೧೨೦೯)

೪೯. E.C. VI. ಕಡೂರು ೧೨೯ (ಕ್ರಿ.ಶ.೧೨೧೭)

೫೦. ಭಾರತಿ.ಬಿ.ಆರ್, ೨೦೧೨, ***ಸಂಸ್ಕೃತ ಭಾಷೆ ಸಾಹಿತ್ಯಕ್ಕೆ ರಾಷ್ಟ್ರಕೂಟರ ಕೊಡುಗೆ***, ಸಂಸ್ಕೃತ ಭಾಷೆ–ಸಾಹಿತ್ಯಕ್ಕೆ ಕರ್ನಾಟಕದ ರಾಜಮನೆತನಗಳ ಕೊಡುಗೆ, ಶ್ರೀಜಯರಾಮ ಸೇವಾ ಮಂಡಳಿ, ಬೆಂಗಳೂರು

೫೧. ಗಣೇಶ್.ಕೆ.ಆರ್, ವಿಶೇಷ ಉಪನ್ಯಾಸ, ಹಳಗನ್ನಡ ಕಾವ್ಯಾಭ್ಯಾಸ ಶಿಬಿರ, ಬಿ.ಎಂ.ಶ್ರೀ ಪ್ರತಿಷ್ಠಾನ, ಬೆಂಗಳೂರು

೫೨. ಕನ್ನಡ ಸಾಹಿತ್ಯ ಚರಿತ್ರೆ ಸಂ.೨ ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ಪು.೪೫೮

೫೩. ವೆಂಕಟಾಚಲಶಾಸ್ತ್ರಿ.ಟಿ.ವಿ., ಪ್ರಾಕ್ತನ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ., ೧೯೮೬, ಪು.೯೫

೫೪. ಜೆ.ಬಿ.ಬಿ.ಆರ್.ಎಸ್ x ಕಲ್ಲೋಳಿ

೫೫. E.I xiii ೩ ಬೆಳಗಾವ ಪು.೧೮, ೨೮

# ಅಧ್ಯಾಯ – ೬

## ಮಧ್ಯಕಾಲೀನ ಕರ್ನಾಟಕದ ಅರಸಿಯರ ಸಾಹಿತ್ಯ ಪೋಷಣೆ

ಪ್ರಾಚೀನ ಅರಸಿಯರಿಗಿಂತ ಮಧ್ಯಕಾಲೀನ ಅರಸಿಯರ ಕಾಲಕ್ಕೆ ರಾಜಕೀಯ ಸ್ಥಿತಿ–ಗತಿಗಳು ಬಹಳ ಭಿನ್ನವಾಗಿದ್ದವು. ಬಹುತೇಕ ಪ್ರಾಚೀನ ಕಾಲದ ಅರಸಿಯರು ಅರಸರ ಅಧೀನದಲ್ಲಿ ಆಳ್ವಿಕೆ ನಡೆಸುತ್ತಿದ್ದರು. ಮಧ್ಯಕಾಲೀನ ಕರ್ನಾಟಕದ ಬಹುತೇಕ ಅರಸಿಯರು ಪತಿಯ ಮರಣಾನಂತರ, ಕಿರಿಯವಯಸ್ಸಿನ ಮಗನ ಪರವಾಗಿ ಆಳ್ವಿಕೆ ನಡೆಸಿದವರು. ಚಕ್ರಾಧಿಪತಿಗಳ ಸಹಕಾರ, ನೆರವುಗಳಿಲ್ಲದೆಯೇ ರಾಜ್ಯಾಡಳಿತ ನಡೆಸಿದ ಹಿರಿಮೆ ಅವರದು. ಆದರೂ ಕಲೆ–ಸಾಹಿತ್ಯ ಪೋಷಣೆಗೆ ಪ್ರಾಚೀನ ಅರಸಿಯರಿಗಿಂತ ಕಡಿಮೆಯೆನಿಸದ ಕೊಡುಗೆಯನ್ನಿತ್ತಿದ್ದಾರೆ. ಈ ಅವಧಿಯಲ್ಲಿ ಕಾವ್ಯಮಯವಾದ ಶಾಸನಗಳು ಹೆಚ್ಚಾಗಿ ಸಿಗುವುದಿಲ್ಲ. ಈ ಅರಸಿಯರು ಸಾಹಿತ್ಯಕ್ಕೆ ನೀಡಿದ ಪ್ರೋತ್ಸಾಹ ಗ್ರಂಥಸ್ಥ ಕಾವ್ಯಗಳಲ್ಲಿ ಹೆಚ್ಚಾಗಿ ಗುರುತಿಸ ಬಹುದಾಗಿದೆ. ಈ ಅವಧಿಯಲ್ಲಿ ಅರಸಿಯರು ಕಾವ್ಯ ರಚನೆಯ ಜೊತೆಗೆ ಪ್ರಾಚೀನ ಕೃತಿಗಳ ಲಿಪೀಕರಣದ ಕಡೆಗೂ ಗಮನ ಹರಿಸಿದ್ದಾರೆ.

ಈ ಅಧ್ಯಾಯದಲ್ಲಿ ಒಂದು ರಾಜಮನೆತನಕ್ಕೆ ಸೇರಿದ ಎಲ್ಲ ಅರಸಿಯರ ಕೊಡುಗೆಗಳನ್ನು ಒಟ್ಟಿಗೆ ಅಧ್ಯಯನ ಮಾಡಲಾಗಿದೆ. ಹಾಗಾಗಿ ಒಂದರ ನಂತರ ಮತ್ತೊಂದು ಅರಸುಮನೆತನಗಳನ್ನು ಸಾಹಿತ್ಯ ಪೋಷಣೆಗೆ ಕೊಡುಗೆ ನೀಡಿದ ಅರಸಿಯರ ಮಾಹಿತಿಗಳೊಂದಿಗೆ ವಿಶ್ಲೇಷಿಸಲು ಅನುಕೂಲವಾಗಿದೆ.

### ಸಾಳ್ವಮನೆತನದ ರಾಣಿಯರು

ನಗಿರೆ, ಹಾಡುವಳ್ಳಿ (ಸಂಗೀತಪುರ), ಭಟ್ಕಳ, ಗೇರುಸೊಪ್ಪೆ, ಬಾರ್ಕೂರು ಮೊದಲಾದ ಪ್ರದೇಶಗಳಲ್ಲಿ ಆಳ್ವಿಕೆ ನಡೆಸುತ್ತಿದ್ದ ಸಾಳ್ವ ಮನೆತನದ ಅರಸರು, ಹೊಯ್ಸಳರ ಅವನತಿಯ ಕಾಲದಲ್ಲಿ ತಮ್ಮದೇ ಆದ ಸ್ವತಂತ್ರ ರಾಜ್ಯ ಸ್ಥಾಪನೆ ಮಾಡಿ, ವಿಜಯನಗರದ ಅರಸರ ಕಾಲದಲ್ಲಿ ಮಹಾಮಂಡಳೇಶ್ವರರೆನಿಸಿಕೊಂಡಿದ್ದರು. ಈ ಮನೆತನದಲ್ಲಿ ಅನೇಕ ಅರಸಿಯರು ಆಳ್ವಿಕೆ ನಡೆಸಿದ್ದಾರೆ. ಪದುಮಲದೇವಿ, ಭೈರಾದೇವಿ, ಚೆನ್ನಾದೇವಿ, ಚೆನ್ನಭೈರಾದೇವಿ ಮೊದಲಾದವರು ಪ್ರಸಿದ್ಧ ರಾಣಿಯರಾಗಿದ್ದಾರೆ.

### ಭೈರಾದೇವಿ

ಹದಿನಾಲ್ಕನೆಯ ಶತಮಾನದ ಉತ್ತರಾರ್ಧದಲ್ಲಿ ಗೇರುಸೊಪ್ಪೆಯಲ್ಲಿ ಆಳ್ವಿಕೆ ನಡೆಸುತ್ತಿದ್ದ ಸಾಳ್ವಮನೆತನದ ಅರಸಿ ಭೈರಾದೇವಿಯು ಬ್ರಹ್ಮಸೂರಿ ಎಂಬ ಪಂಡಿತನಿಂದ ವೈದ್ಯಗ್ರಂಥವೊಂದನ್ನು ಬರೆಯಿಸಿದ್ದಾಳೆ.

ಬ್ರಹ್ಮಸೂರಿ ಹಾಗೂ ಭೈರಾದೇವಿಯರು ವಿಭಿನ್ನ ವೈದ್ಯಸಂಪ್ರದಾಯಗಳನ್ನು ಕುರಿತು ಚರ್ಚಿಸಿದ್ದಾರೆ[1]. ಈ ರಾಜಮನೆತನದವರು ಜೈನಧರ್ಮಾವಲಂಬಿಗಳಾಗಿದ್ದು, ಧಾರ್ಮಿಕ ಸಂಪ್ರದಾಯವಾದ ಅಹಿಂಸಾ ತತ್ತ್ವಕ್ಕೆ ಬೆಲೆ ಕೊಟ್ಟ ಅರಸಿಯು ಹಲವಾರು ವೈದ್ಯ ಸಂಪ್ರದಾಯದಲ್ಲಿ ಬಳಸಲಾಗುತ್ತಿದ್ದ ಮದ್ಯ–ಮಾಂಸಗಳ ಬಳಕೆಯನ್ನು ಬಿಟ್ಟು ಶುದ್ಧ ಸಾತ್ವಿಕ ರೀತಿಯ ವೈದ್ಯ ವಿಚಾರಗಳನ್ನು ಕುರಿತು ಗ್ರಂಥ ರಚಿಸುವಂತೆ ಬ್ರಹ್ಮಸೂರಿಯಲ್ಲಿ ಕೋರಿಯನ್ನಿಡುತ್ತಾಳೆ. ರಾಣಿಗೆ ಬ್ರಹ್ಮಸೂರಿಯು ವೈದ್ಯಸಂಪ್ರದಾಯದ ಬಗ್ಗೆ ತನ್ನ ಅಭಿಮತವನ್ನು ಈ ಪ್ರಕಾರವಾಗಿ ತಿಳಿಸುತ್ತಾನೆ :

**ಬಾಹಟಂ ಕೋಹಟಂ ಚೈವ ಚರಕಂ ನರಕಂ ತಥಾ**
**ಸಿದ್ಧಾಸಾರಂ ಅಸಾರಂವಾ ಸಾರಂ ಕಲ್ಯಾಣಕಾರಕಂ ॥**

ಈತನ ಪ್ರಕಾರ ಹಿಂದಿನ ಬಾಹಟ, ಚರಕ, ಸಿದ್ಧಸಾರ ಮೊದಲಾದ ಎಲ್ಲ ವೈದ್ಯಗ್ರಂಥಗಳಿಗಿಂತಲೂ ಪೂಜ್ಯಪಾದರ ಕಲ್ಯಾಣಕಾರಕವೇ ಉತ್ತಮವಾದ ವೈದ್ಯಗ್ರಂಥವಾಗಿದೆ. ಏಕೆಂದರೆ ಇದು ಅಹಿಂಸಾ ಪ್ರಧಾನವಾದ ಜೈನವೈದ್ಯದ ಪ್ರಕಾರ. ಸು.ಕ್ರಿ.ಶ.೧೧೭೫ರಲ್ಲಿದ್ದ ಜಗದ್ಧಳ ಸೋಮನಾಥನು ಪೂಜ್ಯಪಾದರ ಕಲ್ಯಾಣಕಾರಕವನ್ನು ಕನ್ನಡದಲ್ಲಿ 'ಕರ್ಣಾಟಕ ಕಲ್ಯಾಣಕಾರಕ' ಎಂಬ ಹೆಸರಿನಿಂದ ರಚಿಸಿದ್ದಾನೆ. ಇದರಲ್ಲಿ ಮಧು, ಮದ್ಯ, ಮಾಂಸಗಳನ್ನು ಬಳಸದ ಔಷಧಪದ್ಧತಿಯನ್ನು ಹೇಳಲಾಗಿದೆ. ಹೀಗೆ ತನ್ನ ಮೆಚ್ಚುಗೆಯನ್ನು ವ್ಯಕ್ತಪಡಿಸಿದ ಬ್ರಹ್ಮಸೂರಿಗೆ, ತಾನು ಅರಸಿಯ ಆಶ್ರಯದಲ್ಲಿ ರಚಿಸಿದ ವೈದ್ಯಗ್ರಂಥಕ್ಕೆ ಪೂಜ್ಯಪಾದರ ಕೃತಿಯೇ ಆಧಾರಗ್ರಂಥವಾಗಿದೆ.

ದೇವಚಂದ್ರನ ರಾಜಾವಳಿ ಕೃತಿಯು ಉಲ್ಲೇಖಿಸುವ ಬ್ರಹ್ಮಸೂರಿಯ ಈ 'ವೈದ್ಯ ಗ್ರಂಥ' ವನ್ನು ಬ್ರಹ್ಮಸೂರಿಯ ಮೊಮ್ಮಗನಾದ ಪದ್ಮರಸ ಕೂಡ ತನ್ನ 'ಶೃಂಗಾರ ಕಥೆ' ಗ್ರಂಥದಲ್ಲಿ ಉಲ್ಲೇಖಿಸಿದ್ದಾನೆ. 'ರಾಜಪೂಜಿತನಾಗಿದ್ದ ತನ್ನ ತಾತ ಬ್ರಹ್ಮಸೂರಿಪಂಡಿತ ತರ್ಕಶಾಸ್ತ್ರ ಪಂಡಿತನಾಗಿದ್ದ ಹಾಗೂ 'ಜೈನಸಂಹಿತ' ಗ್ರಂಥದ ಕರ್ತೃ'ವೆಂದು ತಿಳಿಸಿದ್ದಾನೆ[೨].

**ಕವಿ ಬ್ರಹ್ಮಸೂರಿ:** ರಾಜಾವಳಿ ಕಥಾಸಾರದಲ್ಲಿ ದೇವಚಂದ್ರನು ಭೈರಾದೇವಿಯ ಪೋಷಣೆಯಲ್ಲಿದ್ದ ಬ್ರಹ್ಮಸೂರಿಯ ವಿಚಾರವನ್ನು ಉಲ್ಲೇಖಿಸಿದ್ದಾನೆ. ಉಮ್ಮತ್ತೂರಿನ ಸೂರಿಪಂಡಿತನು ಭಲ್ಲಾತಕೀಪುರಕ್ಕೆ (ಗೇರುಸೊಪ್ಪೆ) ಬಂದು ಬಂಧುಗಳ ಮನೆಯಲ್ಲಿದ್ದುಕೊಂಡು ವಿದ್ಯಾಭ್ಯಾಸ ಮುಂದುವರೆಸುವ ಸಂದರ್ಭದಲ್ಲಿ ರಾಜನರಮನೆಯವರು ಈತನನ್ನು ಕರೆಯಿಸಿಕೊಂಡು "ಈ ಹಿಂದೆ ಅರಸಿ ಭೈರಾದೇವಿಯವರು ನಿಮ್ಮ ವಂಶಜರಿಂದ ಅನೇಕ ವೈದ್ಯವನ್ನು ಗ್ರಂಥಗಳನ್ನು ಬರೆಯಿಸಿದ್ದರು, ನೀವೂ ಸಹ ವೈದ್ಯಶಾಸ್ತ್ರವನ್ನೇ ಕಲಿಯಬೇಕು" ಎಂದು ತಿಳಿಸಲು, ಸೂರಿ ಪಂಡಿತನು ತನಗೆ ವೈದ್ಯಶಾಸ್ತ್ರದ ಮೇಲಿರುವ ಆಸಕ್ತಿಯನ್ನು ತಿಳಿಸಿ, ರಾಜಾಶ್ರಯ ಪಡೆಯುತ್ತಾನೆ[೩]. ಈ ಸಂದರ್ಭದಲ್ಲಿ ಸೂರಿಪಂಡಿತನ ಪೂರ್ವಜನಾದ ಬ್ರಹ್ಮಸೂರಿಯು ಭೈರಾದೇವಿಯೊಡನೆ ವೈದ್ಯಸಂಪ್ರದಾಯದ ಕುರಿತಾಗಿ ತನ್ನ ಅಭಿಮತವನ್ನು ತಿಳಿಸಿರುವ ವಿಚಾರ ಹಾಗೂ ಅವಳ ಕೋರಿಕೆಯ ಮೇರೆಗೆ ಗ್ರಂಥವನ್ನು ರಚಿಸಿರುವ ವಿಚಾರ 'ರಾಜಾವಳಿ' ಗ್ರಂಥದಲ್ಲಿ ಉಕ್ತವಾಗಿದೆ[೪]. ಬ್ರಹ್ಮಸೂರಿಯು ಪ್ರಸಿದ್ಧ ಕವಿ ಹಸ್ತಿಮಲ್ಲನ ವಂಶದವನು. ಇವನು ಕೆಲಕಾಲ ಹೊಯ್ಸಳರ ಆಸ್ಥಾನದಲ್ಲಿದ್ದ ವಿಚಾರ ತಿಳಿದು ಬರುತ್ತದೆ[೫]. ಬಹುಶಃ ಹೊಯ್ಸಳರ ರಾಜ್ಯ ಪತನಾನಂತರ ಆಶ್ರಯವನ್ನರಸಿ ಸಾಳ್ವ ಭೈರಾದೇವಿಯಲ್ಲಿಗೆ ತನ್ನ ಇಳಿವಯಸ್ಸಿನಲ್ಲಿ ಬಂದಿದ್ದಾನೆಂದು ತೋರುತ್ತದೆ.

ಸಾಳ್ವಮನೆತನದ ಅರಸಿ ಭೈರಾದೇವಿಯು ತನ್ನ ಪತಿ ಸಾಳುವೇಂದ್ರ (ಹೈವಭೂಪ)ನ ಮರಣಾನಂತರ ಅಧಿಕಾರ ವಹಿಸಿಕೊಂಡಳು. ಇವಳು ಹದಿನಾಲ್ಕನೆಯ ಶತಮಾನದ ಉತ್ತರಾರ್ಧದಲ್ಲಿ ಆಳ್ವಿಕೆ ನಡೆಸಿದವಳು. ಬ್ರಹ್ಮಸೂರಿಯಿಂದ ಅಹಿಂಸಾ ತತ್ವಕ್ಕೆ ಒಗ್ಗುವಂತಹ ವೈದ್ಯಗ್ರಂಥವನ್ನು ಬರೆಯಿಸಿರುವ ಇವಳ ಅಭಿಲಾಶೆಯ ಹಿಂದಿನ ಧಾರ್ಮಿಕ ಮನೋಭಾವ ಕಾಣಬಹುದು. ಕ್ರಿ.ಶ.೧೪೦೮ರ ಕಾಲದ, ಇವಳಿಗೆ ಸಂಬಂಧಿಸಿದ ಶಾಸನವೊಂದು ಭಟ್ಕಳದ ಪಾರ್ಶ್ವನಾಥ ಬಸದಿಯಲ್ಲಿ ದೊರೆತಿದೆ. ಈ ಶಾಸನವು ಈಕೆ ತನ್ನ ಕಡೆಯ ದಿನಗಳಲ್ಲಿ ಕೈಗೊಂಡ ಸಲ್ಲೇಖನದ ಕುರಿತಾಗಿ ತಿಳಿಸುತ್ತದೆ. ಭೈರಾದೇವಿ ಹಾಗೂ ಅವಳ ಮಗ ಮಲ್ಲಿರಾಯ ಒಂದೆರಡು ದಿನಗಳ ಅಂತರದಲ್ಲಿ ಸಮಾಧಿಮರಣ ಹೊಂದಿದರೆಂದು ಇದರಿಂದ ತಿಳಿದುಬರುತ್ತದೆ[೬]. ಮಲ್ಲಿರಾಯನ ಅಕಾಲಿಕ ಮರಣದಿಂದಾಗಿ ಪಟ್ಟಕ್ಕೆ ಬಂದ ಆತನ ಸೋದರ ಸಂಗೀರಾಯ, ತಾಯಿ ಭೈರಾದೇವಿಯ ಸ್ಮರಣಾರ್ಥ ಪಟ್ಟಣದ ಪರಿಜನರ ಸಮುದಾಯವೆಂಬ ಸಭೆ ಕರೆದು ಎಲ್ಲರ ಒಮ್ಮತದಿಂದ ನಿಸಿದಿಕಲ್ಲನ್ನು ನೆಡಿಸಿದನೆಂಬ ವಿಚಾರ ಈ ಶಾಸನದಲ್ಲಿದೆ.

## ಚೆನ್ನಭೈರಾದೇವಿ

ಪೋರ್ಚುಗೀಸರಿಂದ **‘ಕಾಳುಮೆಣಸಿನ ರಾಣಿ’** ಎಂದು ಕರೆಸಿಕೊಳ್ಳುತ್ತಿದ್ದ ಚೆನ್ನ ಭೈರಾದೇವಿಯು ಸಾಳ್ವ ಅರಸುಮನೆತನದ ಪ್ರಸಿದ್ಧ ಅರಸಿ. ಇವಳು ದಕ್ಷ ಆಡಳಿತ, ವ್ಯಾಪಾರ, ಯುದ್ಧಗಳಲ್ಲಿ ಪ್ರೌಢತೆ ಮೆರೆದಂತೆ, ದೇವಾಲಯ–ಬಸದಿಗಳನ್ನು ನಿರ್ಮಿಸಿ ಧರ್ಮಸಾಮರಸ್ಯವನ್ನೂ ತೋರಿದ್ದಾಳೆ. ಇವಳ ಕಾಲದಲ್ಲಿ ಮಠದ ವ್ಯವಹಾರದಲ್ಲಿ ತೋರಿದ ಬಿಕ್ಕಟ್ಟನ್ನು ಸರಿಪಡಿಸಿದ ಕುರಿತಾಗಿ ಶಾಸನ ವಿವರಣೆ ನೀಡುತ್ತದೆ. ಇವಳು ಸಾಹಿತ್ಯ ಕಲೆಗಳಿಗೂ ಪ್ರೋತ್ಸಾಹ ನೀಡಿ, ಹಲವಾರು ಕವಿಗಳಿಗೆ ಆಶ್ರಯವಿತ್ತಿದ್ದಳು. ಸಾಳ್ವ, ವಾದಿ ವಿದ್ಯಾನಂದ, ವರ್ಧಮಾನ ಮೊದಲಾದ ಕವಿಗಳು ಇವಳ ಆಶ್ರಯದಲ್ಲಿದ್ದರು.

ಶಾಸನವೊಂದು ಇವಳನ್ನು **“ವಿದ್ವದ್ರಾಜಕವೀಂದ್ರ ಸಂಸ್ತುತಗುಣಾ** ಸರ್ವಾವನೀವಲ್ಲಭೈಃ ಪೂಜ್ಯಾ ರಾಜತಿ ಚೆನ್ನಭೈರವಮಹಾದೇವೀ ಯಶೋಭೂಷಿತಾ**”**[೭] ಎಂದು ಸ್ತುತಿಸಿದೆ. ಇಲ್ಲಿ ರಾಣಿ ಚೆನ್ನಭೈರಾದೇವಿಯನ್ನು ‘ವಿದ್ವದ್ರಾಜ ಕವೀಂದ್ರ ಸಂಸ್ತುತಗುಣಾ’ ಎಂದು ಕರೆದಿರುವುದು, ಇವಳ ಆಸ್ಥಾನದಲ್ಲಿದ್ದಿರಬಹುದಾದ ವಿದ್ವಾಂಸರು ಹಾಗೂ ಕವಿಗಳನ್ನು ಸೂಚಿಸುತ್ತದೆ. ಮತ್ತೊಂದು ಶಾಸನವು[೮] ಇವಳ ಆಸ್ಥಾನದಲ್ಲಿದ್ದ ವೀರಯೋಧರು ಹಾಗೂ ಪಂಡಿತರನ್ನು ಕುರಿತು ತಿಳಿಸುತ್ತಾ, **ವಿದ್ವತ್ಕವೀಂದ್ರ ದ್ರುಮಃ** ಎಂಬ ಬಿರುದನ್ನು ಗಳಿಸಿದ್ದ ವೀರಣ್ಣನಾಯಕನನ್ನು ಉಲ್ಲೇಖಿಸಿದೆ. ಇಂತಹ ಹಲವಾರು ಉಲ್ಲೇಖಗಳು ಅರಸಿ ಚೆನ್ನಭೈರಾದೇವಿಯ ಕಾಲದಲ್ಲಿ ಕವಿಗಳಿಗೆ ಉತ್ತಮ ಪೋಷಣೆ ದೊರಕುತ್ತಿತ್ತೆನ್ನುವುದನ್ನು ತಿಳಿಸುತ್ತದೆ. ಪದ್ಮರಸ ಎಂಬ ಕವಿಯೂ ಇವಳ ಆಳ್ವಿಕೆಯ ಕಾಲದಲ್ಲಿಯೇ **‘ಶೃಂಗಾರಕಥ’** ಎಂಬ ಕೃತಿಯನ್ನು ೧೫೫೯ರಲ್ಲಿ ರಚಿಸಿದ್ದಾನೆ[೯].

ಇವಳ ಕೆಲವು ಶಾಸನಗಳನ್ನು ರಚಿಸಿರುವ ವರ್ಧಮಾನ ಕವಿಯು ಕನ್ನಡ ಹಾಗೂ ಸಂಸ್ಕೃತ ಭಾಷೆಯಲ್ಲಿ ಪಾಂಡಿತ್ಯ ಪಡೆದವನಾಗಿದ್ದನು. ಇವಳನ್ನು ಕೀರ್ತಿಸುವ ಒಂದು ಪದ್ಯವು **“ಚೆನ್ನಭೈರವದೇವ್ಯಾಃ … ಸಂಗ್ರಾಮಾಗತ ವೀರವೈರಿವನಿತಾ ದಾನ ಕ್ಷಮೋಭಾಸ್ವದ್ವಿಕ್ರಮಕೀರ್ತಿ ಭೂಷಿತ ಧರಾಚಕ್ರೋ ಜಯತ್ಯನ್ವಹಂ”**[೧೦] ಚೆನ್ನಭೈರವಮಹಾದೇವಿಯು ಶೌರ್ಯ, ಯಶಸ್ಸಿನಿಂದಲೂ ದಾನ, ಕ್ಷಮಾಗುಣ– ದಿಂದಲೂ ಭೂಷಿತಳಾಗಿದ್ದಾಳೆಂದು ಬಣ್ಣಿಸಿದೆ.

ಇದೇ ಶಾಸನ ಕವಿಯು ತನ್ನ ಕೃತಿ ‘ವಿದ್ಯಾನಂದಸ್ತುತಿ’ ಯಲ್ಲಿ, ಆ ಕಾಲದ ಪ್ರಸಿದ್ಧ ಕವಿ ಹಾಗೂ ಯತಿಯಾಗಿದ್ದ ಅಭಿನವ ವಾದಿವಿದ್ಯಾನಂದನು ಈಕೆಯ ಆಸ್ಥಾನದಲ್ಲಿದ್ದುದನ್ನು ತಿಳಿಸುತ್ತಾನೆ. **“ನಗಿರೀ ರಾಜ್ಯದ ರಾಜರ ಮಿಗಿಲೆನಿಸುವ ಸಭೆಗಳಲ್ಲಿ ವಿಬುಧವ್ರಾತಕ್ಕಗಣಿತ ವಾಕ್ಕಾಮೃತಮಂ ಸೊಗಸಿಂದೀಟಿಸಿದೆ ವಾದಿವಿದ್ಯಾನಂದಾ”** ಎಂಬ ಈ ಸಾಲಿನಲ್ಲಿ ಚೆನ್ನಭೈರಾದೇವಿಯ ನಗಿರೆ ರಾಜ್ಯದಲ್ಲಿ ಆಶ್ರಯ ಪಡೆದಿದ್ದ ವಿದ್ವಜ್ಜನರನ್ನೂ, ವಾದಿವಿದ್ಯಾನಂದರನ್ನೂ ಉಲ್ಲೇಖಿಸಿದೆ. ಅಭಿನವ ವಾದಿವಿದ್ಯಾನಂದರು ವಿದ್ವಾಂಸ, ಕವಿ ಅಷ್ಟೇ ಅಲ್ಲದೆ ಮುನಿಯೂ ಆಗಿದ್ದುದರಿಂದ ತನ್ನ ಕಾಲದ ಅನೇಕ ರಾಜರುಗಳಿಂದ ಪೂಜಿತರಾಗಿದ್ದಾರೆ. ಅಂತೆಯೇ ಇವರನ್ನು **“**ನಗಿರೆ ರಾಜ್ಯದ ಚೆನ್ನಭೈರಾದೇವಿಯ ಪ್ರೇಮದ ಗುರು**”** ಕರೆಯಲಾಗಿದೆ[೧೧]. ರಾಣಿ ಭೈರಾದೇವಿಯು ಅಭಿನವ ವಾದಿವಿದ್ಯಾನಂದರಿಗೆ ಆಶ್ರಯ ನೀಡಿದ್ದಷ್ಟೇ ಅಲ್ಲದೆ, ಅವರ **‘ಕಾವ್ಯಸಾರ’** ಗ್ರಂಥದ ಪ್ರತಿಯನ್ನು ಅವರಿಂದಲೇ ಪಡೆದಿದ್ದಾಳೆ (ಸ್ವತಃ ವಾದಿವಿದ್ಯಾನಂದರೇ ಪ್ರತಿಮಾಡಿಸಿ ಕೊಟ್ಟಿದ್ದಾರೆ) ಎಂಬ ವಿಚಾರವೂ ಹಸ್ತಪ್ರತಿಗಳಿಂದ ತಿಳಿದು ಬರುತ್ತದೆ[೧೨].

ಚೆನ್ನಭೈರಾದೇವಿಯು ವಿದ್ವಜ್ಜನರ ಹಾಗೂ ಕವಿಗಳ ಪೋಷಕಳಾಗಿದ್ದಷ್ಟೇ ಅಲ್ಲದೆ, ಇವಳ ಕಾಲದಲ್ಲಿ ಹಸ್ತಪ್ರತಿಗಳು ಲಿಪಿಗೊಳ್ಳುವ ಕೆಲಸವು ಅಧಿಕವಾಗಿ ನಡೆಯಿತು[೧೩]. ಚಾಮರಾಜನಗರದ ಕಾಮಗೆರೆ, ಉಮ್ಮತ್ತೂರು ಮೊದಲಾದ ಕಡೆಗಳಲ್ಲಿಂದ ಭೈರಾದೇವಿಯ ಈ ಕ್ಷೇಮಪುರಕ್ಕೆ ಲಿಪಿಕಾರರು ಬಂದರುತ್ತಿದ್ದರು ಎನ್ನುವುದು, ಹಸ್ತಪ್ರತಿಯ ಪುಷ್ಪಿಕೆಗಳಲ್ಲಿ ಲಿಪಿಕಾರರು ತಮ್ಮ ವಿವರ ತಿಳಿಸಿರುವಲ್ಲಿಂದ ತಿಳಿದು ಬರುತ್ತದೆ.

ಇವಳ ಕಾಲದಲ್ಲಿ ನಿರ್ಮಾಣವಾದ ಬಸದಿಗಳ ವಿಚಾರ ತಿಳಿಸುವ ಶಾಸನಗಳಲ್ಲಿ ಉಕ್ತಳಾಗಿರುವ ಅರಸಿ ಚೆನ್ನಭೈರಾದೇವಿಯು ಹಲವಾರು ದಾನಶಾಸನ, ವೀರಗಲ್ಲುಗಳನ್ನು ಹಾಕಿಸಿದ್ದಾಳೆ[೧೪], ಇಲ್ಲಿನ ಹಲವು ಶಾಸನಗಳಲ್ಲಿ ಇವಳ ನ್ಯಾಯ ತೀರ್ಮಾನ, ತೆರಿಗೆ ನೀತಿಗಳನ್ನೂ ಕಾಣಬಹುದು.

**ಕದಿರೇ ರಾಯರ ಪೂರ್ವವೃತ್ತಾಂತ** ಹಾಗೂ **ಪೂರ್ವರಾಯರ ವೃತ್ತಾಂತ** ಎಂಬ ಎರಡು ಕೃತಿಗಳು ರಾಣಿ ಚೆನ್ನಭೈರಾದೇವಿಯ ಕುರಿತಾದ ಕೆಲವು ವಿಚಾರಗಳನ್ನು ತಿಳಿಸುತ್ತವೆ. ಕೈಫಿಯತ್ತಿನ ಮಾದರಿಯಲ್ಲಿ ರಚಿತವಾಗಿರುವ, ಕರ್ತೃವಿಚಾರ ತಿಳಿಯದ ಈ ಎರಡು ಕೃತಿಗಳನ್ನು ವೈ.ಸಿ.ಭಾನುಮತಿಯವರು ಕುವೆಂಪು ಅಧ್ಯಯನ ಸಂಸ್ಥೆಯ ಕೆ.ಎ.೧೨೬ನೇ ಸಂಖ್ಯೆಯ ಕಾಗದದ ಪ್ರತಿಯಿಂದ ಸಂಪಾದಿಸಿದ್ದಾರೆ[೧೫]. ಕದಿರೇರಾಯರ ಪೂರ್ವವೃತ್ತಾಂತ ಕೃತಿಯು ತಿಳಿಸುವಂತೆ, ಸಾಳುವ ಕೃಷ್ಣದೇವರಸರಿಗೆ ಗಂಡು ಸಂತಾನ ಇಲ್ಲದ ಕಾರಣ ಹಿರೇ ಭೈರಾದೇವಿಗೆ ಪಟ್ಟಕಟ್ಟಲಾಗುತ್ತದೆ, ಈಕೆಯ ಬಳಿಕ ಇಮ್ಮಡಿ ಭೈರಾದೇವಿ ಉತ್ತರಾಧಿಕಾರಿಣಿ ಆಗುತ್ತಾಳೆ. ಆನಂತರ ಕುಂಟಭೈರಾದೇವಿ, ಚಿಕ್ಕಭೈರಾದೇವಿಯರು ಕ್ರಮವಾಗಿ ಆಳ್ವಿಕೆ ನಡೆಸಿದರು ಎಂದು ಇಲ್ಲಿ ತಿಳಿಸಿದೆ. ಈ ಪುಟ್ಟ ಕೃತಿಯಲ್ಲಿ ಚಿಕ್ಕ ಭೈರಾದೇವಿಯ ವಿಚಾರ ವಿಸ್ತೃತವಾಗಿದೆ, ಇಲ್ಲಿ ತಿಳಿಸಿರುವಂತೆ ಈಕೆ ರಾಜ್ಯವಾಳುವಾಗ ಬಂಕಾಪುರದ ಗಾಣಿಗ ಲಿಂಗಣ್ಣಶಟ್ಟಿ ವಸ್ತ್ರದ ವ್ಯಾಪಾರಿಯಾಗಿ ಬಂದವನು ಈಕೆಯ ನಿಕಟವರ್ತಿಯಾಗಿ ತನ್ನ ಪತ್ನಿಯರ ಸಹಿತ ಆಡಳಿತದಲ್ಲಿಯೂ ಹಸ್ತಕ್ಷೇಪಮಾಡುತ್ತಾನೆ. ಈತ 'ಲಿಂಗಣ್ಣ ವಡೇರು' ಎನಿಸಿಕೊಂಡದ್ದನ್ನು ಕೃತಿಯು ರೋಚಕವಾಗಿ ಬಣ್ಣಿಸಿದೆ. ಅನಂತರ ವೆಂಕಟಪ್ಪನಾಯಕರು ಇಕ್ಕೇರಿಯಿಂದ ಬಂದು ರಾಣಿಯನ್ನು ನಿಯಂತ್ರಣದಲ್ಲಿರಿಸುತ್ತಾನೆ ಅಲ್ಲದೆ ಗೇರುಸೊಪ್ಪೆಯ ಆಡಳಿತವನ್ನು ಈರಾದೇವಿ ಮತ್ತು ಲಕ್ಷ್ಮಾದೇವಿ ಎಂಬುವವರಿಗೆ ವಹಿಸಿದ ಎಂಬ ಹೊಸ ವಿಚಾರವನ್ನು ಈ ಕೃತಿ ತಿಳಿಸುತ್ತದೆ. ಹದೆನೆಂಟನೆಯ ಶತಮಾನದಲ್ಲಿ ಸೂರಿ ಪಂಡಿತ ಭಲ್ಲಾತಕೀಪುರಕ್ಕೆ ಬಂದಾಗ ಅರಮನೆಯವರು ಅವನನ್ನು ಕರೆದು 'ನಿಮ್ಮ ಪೂರ್ವಜರು ನಮ್ಮ ಅರಮನೆಯ ಆಶ್ರಯದಲ್ಲಿದ್ದರು' ಎಂಬ ವಿಚಾರ ತಿಳಿಸಿ ಅವನನ್ನು ಆದರಿಸಿದರು ಎಂದು ದೇವಚಂದ್ರ ರಾಜಾವಳಿ ಕಥಸಾರದಲ್ಲಿ ಹೇಳಿದ್ದಾನೆ. (ಆಶ್ವಾಸ ೧೧) ವೆಂಕಟಪ್ಪ ನಾಯಕ ಭೈರಾದೇವಿಯನ್ನು ಬಂಧಿಸಿದ ನಂತರವೂ ಇಲ್ಲಿ ಸಾಳ್ವ ರಾಜಮನೆತನದವರು ಆಳ್ವಿಕೆ ನಡೆಸುತ್ತಿದ್ದರೆಂಬ ವಿಚಾರಕ್ಕೆ ಇದು ಪುಷ್ಟಿ ನೀಡುತ್ತದೆ.

**ಪೂರ್ವರಾಯರ ವೃತ್ತಾಂತ**ದಲ್ಲಿಯೂ ಈ ಮೇಲೆ ತಿಳಿಸಿರುವ ಕೆಲವು ಸಂಗತಿಗಳು ಪ್ರಸ್ತಾಪಗೊಂಡಿವೆ. ಕದಿರೆಯ ಮಲ್ಲೋಜಿನಾಯಕ ಮತ್ತು ರಾಮನಾಯಕ ದೇಸಾಯಿ ಮುಂತಾದವರು ಪುಂಡತನ ಮಾಡಿದ್ದರಿಂದ ಆ ವಲಯ ಅಶಾಂತಿಯ ಬೀಡಾಗಿತ್ತು. ಇದರಿಂದ ಗೋರುಸೊಪ್ಪೆಯ ಭೈರಾದೇವಿಯು ಲಕ್ಷ್ಮೀದೇವಿಯವರಲ್ಲಿ ಬಿನ್ನವಿಸಿಕೊಂಡಾಗ ಅವರು ಕೆರವಡಿ ಕೋಟೆ ಆಳ್ವೇರಿಗಳನ್ನು ಭದ್ರಪಡಿಸಲು ವ್ಯವಸ್ಥೆ ಮಾಡಿದರು. ಭೈರಾದೇವಿ ಮತ್ತು ಲಿಂಗಣ್ಣನ ಸಂಬಂಧದ ಬಗ್ಗೆ ಇಲ್ಲಿಯೂ ಪ್ರಸ್ತಾಪಿಸಲಾಗಿದೆ. ವಿಷಯ ಬಹಿರಂಗವಾದಾಗ ಹೆದರಿದ ಲಿಂಗಣ್ಣ ತನ್ನ ಹೆಂಡತಿಯರೊಡನೆ ಕೊರಳು ಕತ್ತರಿಸಿಕೊಂಡು ಸಾವಿಗೆ ಶರಣಾಗುತ್ತಾನೆ.

ಸಾಳ್ವಮನೆತನದ ಅರಸಿಯರು ಧಾರ್ಮಿಕ ಭಾವನೆಗಳಿಗೆ ಹೆಚ್ಚು ಒತ್ತು ನೀಡಿರುವುದನ್ನು ಕಾಣುತ್ತೇವೆ. ಈ ಮನೆತನದ ಸಾಂತಲೆ, ಭೈರಾದೇವಿ ಮೊದಲಾದ ಅರಸಿಯರ ನಿಸಿದಿಸ್ಮಾರಕಗಳು, ಈ ಅರಸಿಯರು ನಿರ್ಮಿಸಿದ ಬಸದಿ, ನೀಡಿರುವ ದಾನ–ದತ್ತಿಗಳು, ಇವರು ಮಾಡಿದ ನೋಂಪಿ ಹಾಗೂ ಇದರ ಅಂಗವಾಗಿ ನೀಡಿರುವ ಶಾಸ್ತ್ರದಾನಕ್ಕಾಗಿ ಹಲವಾರು ಕೃತಿಗಳನ್ನು ಲಿಪಿಮಾಡಿಸಿರುವುದು ಇವರ ಧಾರ್ಮಿಕ ಶ್ರದ್ಧೆಯನ್ನು ತೋರುತ್ತದೆ. ಭೈರಾದೇವಿಯರ ಮಗ ಮಲ್ಲಿರಾಯ ಅರಸನ ಪಟ್ಟಮಹಾದೇವಿ **ಲಲಿತಾದೇವಿಯವರು** ಪ್ರಭಾಚಂದ್ರರಿಂದ ಸು.೧೧೦೦ರಲ್ಲಿ ರಚಿತವಾಗಿದ್ದ ಕ್ರಿಯಾವ್ಯಾಖ್ಯಾ ಟೀಕು ಎಂಬ ಪ್ರಾಕೃತ ಗ್ರಂಥವನ್ನು ಹದಿನೈದನೆಯ ಶತಮಾನದಲ್ಲಿ ಶಾಸ್ತ್ರದಾನಕ್ಕಾಗಿ ಪ್ರತಿಮಾಡಿಸಿದ್ದಾಳೆ.

## ಮೂಲ್ಕಿ ಅರಸುಮನೆತನದ ರಾಣಿ ಚನ್ನಾಂಬಿಕೆ

ಕರಾವಳಿ ತೀರದ ಮೂಲ್ಕಿ ಸುತ್ತಮುತ್ತಲಿನ ಪ್ರದೇಶವನ್ನು ಸಾವಂತ ಮನೆತನದವರು ಆಳ್ವಿಕೆ ನಡೆಸುತ್ತಿದ್ದರು. ಹದಿನೇಳನೆಯ ಶತಮಾನದಲ್ಲಿ (ಕ್ರಿ.ಶ.೧೬೮೦) ಈ ಮನೆತನದ ಪಟ್ಟವನ್ನೇರಿದವಳು ರಾಣಿ ಚನ್ನಾಂಬಿಕೆ(ಚನ್ನಮ್ಮ). ಇವಳ ಕುರಿತಾದ ಕೆಲವು ವಿಚಾರಗಳನ್ನು ಒಂದೆರಡು ಶಾಸನಗಳು ಹಾಗೂ ವಿದೇಶಿಯರ ಬರಹಗಳು ತಿಳಿಸುತ್ತವೆ. ಮತ್ತೆ ಕೆಲವು ವಿಚಾರ ಇವಳ ಆಶ್ರಿತ  ಕವಿ ಪದ್ಮನಾಭನು ರಚಿಸಿರುವ ಕಾವ್ಯದಿಂದ ದೊರಕುತ್ತದೆ[೧೫೮].

ಕವಿ ಪದ್ಮನಾಭನು ಚನ್ನಾಂಬಿಕೆಯ ಆಸ್ಥಾನದ ಕವಿಯಾಗಿದ್ದು, 'ಜಿನದತ್ತರಾಯಚರಿತೆ' ಎಂಬ ಕೃತಿಯನ್ನು ರಚಿಸಿದ್ದಾನೆ. ಕವಿಯು ತನ್ನ ಕೃತಿಯನ್ನು 'ಪದ್ಮಾವತಿ ಚರಿತ್ರೆ' ಎಂದೂ 'ಅಮ್ಮನವರ ಚರಿತ್ರೆ' ಎಂದೂ ಕರೆದಿದ್ದಾನೆ. ಇದು ಪದ್ಮಾವತಿ ಯಕ್ಷಿ ಹಾಗೂ ಹೊಂಬುಜ ಕ್ಷೇತ್ರಮಹಿಮೆ ಕುರಿತಾದ ವಸ್ತುವನ್ನು ಹೊಂದಿರುವ ಕೃತಿಯಾಗಿದೆ. ರಾಣಿ ಚನ್ನಾಂಬಿಕೆಯು ಪದ್ಮಾವತಿ ಯಕ್ಷಿಯ ಅನನ್ಯ ಭಕ್ತೆಯಾಗಿದ್ದು, ಇವಳ ಕೋರಿಕೆಯ ಮೇರೆಗೆ ಕವಿಯು ಈ ಕೃತಿಯನ್ನು ರಚಿಸಿದ್ದಾನೆ. ಪೌರಾಣಿಕ ಕೃತಿಯಾದರೂ, ಅರಸಿ ಚನ್ನಾಂಬಿಕೆಯ ಮನೆತನದ ಹಲವು ಐತಿಹಾಸಿಕ ವಿಚಾರಗಳು ಈ ಕೃತಿಯಲ್ಲಿ ಉಲ್ಲೇಖಿತವಾಗಿವೆ.

**ಕವಿ ಪದ್ಮನಾಭ:** ಅರಸಿ ಚನ್ನಾಂಬಿಕೆಯು ಈ ಹಿಂದೆ ತನ್ನ ಸಹೋದರ ತಿರುಮಲ ಸಾವಂತನ ಆಳ್ವಿಕೆಯಲ್ಲಿ ಕೋಶಾಧ್ಯಕ್ಷನಾಗಿದ್ದ ಪದ್ಮನಾಭನ ಕವಿತಾ ಶಕ್ತಿಯನ್ನು ಮನಗಂಡು ಆತನಿಂದ ಕಾವ್ಯವನ್ನು ಬರೆಯಿಸಿದ್ದಾಳೆ. ಈ ವಿಚಾರವನ್ನು ಸ್ವತಃ ಕವಿಯೇ ಹೇಳಿಕೊಂಡಿದ್ದಾನೆ. ಈ ಕಾವ್ಯದ ಕೊನೆಯ ಸಂಧಿಯಲ್ಲಿ ಕಥಾಂಶವು ಸಾಕಷ್ಟು ಇರುವುದಾದರೂ, ಹಿಂದಿನ ಕಥಾಭಾಗವನ್ನು ವರ್ಣಿಸಿದಂತೆ ಸವಿಸ್ತಾರವಾಗಿ ಹೇಳದೆ, ಅವಸರದಲ್ಲಿ ಮುಗಿಸಿಬಿಟ್ಟಿರುವುದರಿಂದ ಕೃತಿಯನ್ನು ರಚಿಸುವ ವೇಳೆಗೆ ಇವನು ಅಪರವಯಸ್ಸಿನವನಾಗಿರಬಹುದೆಂದು ಈ ಕೃತಿಯ ಸಂಪಾದಕರು ಅಭಿಪ್ರಾಯ ಪಡುತ್ತಾರೆ. ಕವಿ ಪದ್ಮನಾಭನು ತನ್ನ ಕುರಿತಾದ ಯಾವುದೇ ವಯಕ್ತಿಕ ವಿವರಗಳನ್ನು ಕಾವ್ಯದಲ್ಲಿ ಹೇಳಿಲ್ಲ.

**ಧರೆಗತಿ ಸೇವ್ಯವೆನಿಪ ಕಾರಸ್ಕರ । ಪುರದ ಭವ್ಯರವನು ಪಾಲಿಸುವ ॥**
**ವರವರ್ಧಮಾನಸ್ವಾಮಿಯ ಕೃಪೆಯಿಂದಲಿ । ಬರೆದೆ ನಾನೀ ಸತ್ಕೃತಿಯ ॥**

ಎನ್ನುತ್ತಾ ಕವಿಯು ಕಾರಸ್ಕರಪುರದ ದೇವರನ್ನು ಸ್ಮರಿಸಿಕೊಂಡಿರುವುದರಿಂದ ಈತನು ಮೂಲಿಕೆಯ ಅರಸರ ಅಧೀನದಲ್ಲಿಯೇ ಇದ್ದ ಕಾರಸ್ಕಾರ ಪುರದವನಾಗಿರಬಹುದೆಂದು ತಿಳಿಯಬಹುದು.

ಕವಿಯು ತಾನು **"ಭಾವವರಿತವನಲ್ಲ ಕಾವ್ಯವೋದಿದವನಲ್ಲ। ಆವುದು ಪ್ರಾಸೆಂಬುದರಿಯೆ.. ಛಂದಸ್ಸು ಅಭಿಧಾನ ಕಾವ್ಯ ಮುಂತಾದವರಂದವನರಿತವನಲ್ಲ"** ಎಂಬ ವಿನೀತ ಭಾವವನ್ನು ವ್ಯಕ್ತಪಡಿಸಿದ್ದಾನೆ.

**ಛಂದಸ್ಸಲಂಕಾರಗಳು ಮುಂತಾದುದ। ರಂದವನರಿತವನಲ್ಲ**
**ಅಂದದಿ ನಿಮ್ಮ ಮಕ್ಕಳ ತಿದ್ದುವಂತೆನ್ನ । ಚಂದದಿ ತಿದ್ದಿ ಲಾಲಿಪುದು ॥**

**ಜಾತಿವೈರವ ಬಿಟ್ಟು ರೀತಿ ಮತ್ಸರ ಬಿಟ್ಟು । ಪಾತಕ ಪರಿವುದಿದೆಂದು**
**ಪ್ರೀತಿಯಿಂದಲಿ ಕೇಳ್ವುದು ಪುಣ್ಯಕಥೆಯನು । ಮಾತಿನತ್ತಲು ನೋಡಬೇಡಿ ॥**

ಆದರೆ ಕವಿಯು ತಕ್ಕಮಟ್ಟಿಗೆ ಕಾವ್ಯಗಳನ್ನು ಓದಿಕೊಂಡಿದ್ದಾನೆಂದೂ, ಕಾವ್ಯ ಸಂಪ್ರದಾಯದ ಪರಿಚಯ ಹೊಂದಿದ್ದವನೆಂಬುದೂ ಅವನ ಕಾವ್ಯವನ್ನು ಓದಿದವರಿಗೆ ಮನವರಿಕೆಯಾಗುತ್ತದೆ. ಕವಿಯೇ ಹೇಳಿರುವಂತೆ **"**ಬೆಲ್ಲ ಮುರಿದರೇನು ಸೀತಪ್ಪಲರಿಯದು**"** ಎಂಬಂತೆ ಕೆಲವೆಡೆಗಳಲ್ಲಿ ಪ್ರಾಸ ತಪ್ಪಿದರೂ ಕಾವ್ಯಕ್ಕೆ ಭಂಗವಿಲ್ಲ.

**ಅರಸಿ ಚನ್ನಮ್ಮ (ಚನಾಂಬಿಕೆ):** ಕಾವ್ಯವು ಅರಸಿ ಚನ್ನಮ್ಮನ ಹಾಗೂ ಅವಳ ಮನೆತನವನ್ನು ಕುರಿತಂತೆ ಕೆಲವು ವಿಚಾರಗಳನ್ನು ತಿಳಿಸುತ್ತದೆ. ತುಳುನಾಡಿನ ಮೂಲ್ಕಿಯ ಸಾವಂತ ರಾಜಮನೆತನದವರು, ಇಲ್ಲಿನ ಬಹುತೇಕ ರಾಜಮನೆತನಗಳ ಪದ್ಧತಿಯಂತೆ ಅಳಿಯಸಂತಾನ ಕಟ್ಟಿನವರಾಗಿದ್ದರು.

**ಸಾಮಂತರಾಯನನುಜೆ ಸೊಬಗಿನಸೋನೆ । ಕೋಮಲೆಯರ ತಲೆರನ್ನೆ**
**ಸೋಮವದನೆ ದೇವಪೂಜೆಯೆಂದೆಂಬಾ । ನಾಮದಿಂದೊಪ್ಪಿರುತಿಹಳು॥**

**ಸತ್ಯವಂತನು ಪಶ್ಚಿಮ ವೇಣುಪುರಪತಿ । ಯುತ್ತಮ ಮಾಲಿಂಗ ನೃಪತಿ ।**
**ಮತ್ತಾಜವ್ವನ ದೇವಮ್ಮಗೆ ಪತಿಯಾಗಿ । ಅತ್ಯಂತ ಲೀಲೆಯೊಳಿಹರು॥**

ಅರಸಿ ಚನ್ನಾಂಬಿಕೆಯ ತಾಯಿ ದೇವಮ್ಮಾಜಿ, ತಂದೆ ವೇಣುಪುರದ ನೃಪತಿ ಮಾಲಿಂಗ. ಅಳಿಯ ಸಂತಾನ ಪರಂಪರೆಯಂತೆ, ಮದುವೆಯಾದಮೇಲೆ ದೇವಮ್ಮಾಜಿ ಮೂಲಿಕೆಯಲ್ಲಿಯೇ ಇದ್ದುದರಿಂದ, ಚನ್ನಮ್ಮಾಜಿಯ ವಿದ್ಯಾಭ್ಯಾಸಕ್ಕೆ ತಕ್ಕ ಏರ್ಪಾಡನ್ನು ಅವಳ ಮಾವ ದುಗ್ಗಣ ಸಾವಂತ ಮೂಲ್ಕಿಯಲ್ಲಿಯೇ ಮಾಡುತ್ತಾನೆ.

**ಕಿನ್ನಿಗ ಸಾಮಂತನನುಜ ತಿರುಮಲರಾಯ । ಮನ್ನೆಯಕಿನ್ನಿರಿಯಾತ**
**ಚೆನ್ನಿಗಸಂಕರನೃಪನನಂತರದೊಳು । ಚನ್ನಾಂಬಿಕೆ ಜನಿಸಿದಳು ॥**

ಪಶ್ಚಿಮ ವೇಣುಪುರದ ನೃಪತಿ ಮಾಲಿಂಗ ಹಾಗೂ ಮೂಲ್ಕಿಯ ರಾಜಕುಮಾರಿ ದೇವಮ್ಮಾಜಿಯ ಮಗಳಾದ ಚನ್ನಮ್ಮ, ಇಬ್ಬರು ಗಂಡುಮಕ್ಕಳ ನಂತರ ಜನಿಸಿದ ಹಿರಿಯ ಮಗಳು.

**ತಿರುಮಲಸಾಮಂತರಾಯನ ನಂತರದೊಳು ಸರಸಿಜಮುಖಿ ಚನ್ನಮ್ಮಾಜಿ ।**
**ಧರೆಯ ಪಾಲಿಸಿದಳು ನರಲೋಕ ಸುರಲೋಕ । ಮೊರೆಯುತ ಪೊಗಳುವಂದದೊಳು ॥**

**ಹರಿಮಧ್ಯದ ನೀರೆ ಹಸುರುವರ್ಣಾಕಾರೆ । ಕರಿಗಮನದ ಶೃಂಗಾರೆ**
**ಪರಮದಯಾಪರೆ ಪುಣ್ಯಜನಾದರೆ । ಗರುವೆ ಚನ್ನಮ್ಮದೇವಮ್ಮ**

ಮೂಲ್ಕಿಯ ರಾಜಮನೆತನವು ಅಳಿಯಸಂತಾನ ಪರಂಪರೆಯನ್ನು ಹೊಂದಿದ್ದರಿಂದ, ದೇವಮ್ಮಾಜಿಯ ಮಗ (ಚನ್ನಮ್ಮಳ ಅಣ್ಣ) ತಿರುಮಲಸಾಮಂತರಾಯ ಯುವರಾಜ ಪದವಿಯನ್ನು ಪಡೆದಿರುತ್ತಾನೆ. ಕಾವ್ಯವು ತಿಳಿಸಿರುವಂತೆ ತಿರುಮಲ ಸಾಮಂತನ ನಂತರ ಚನ್ನಮ್ಮಾಜಿ ಆಳ್ವಿಕೆ ನಡೆಸಿದಳು.

ಈ ಕಾವ್ಯದಲ್ಲಿ ಚನ್ನಮ್ಮನನ್ನು ಹಲವಾರು ಬಾರಿ 'ಚನ್ನಮ್ಮದೇವಮ್ಮ' ಎಂದು ಕರೆದಿರುವುದು ವಿಶೇಷವೆನಿಸುತ್ತದೆ. ಸಾಧಾರಣವಾಗಿ ಮಕ್ಕಳನ್ನು ತಂದೆಯ ಹೆಸರಿನೊಂದಿಗೆ ಉಲ್ಲೇಖಿಸುವ ಪರಂಪರೆಯನ್ನು ಕಾಣುತ್ತೇವೆ. ಆದರೆ ಇಲ್ಲಿ ತಾಯಿಯ ಹೆಸರಿನೊಂದಿಗೆ ಗುರುತಿಸುವುದನ್ನು ಅನೇಕಬಾರಿ ಕಾಣುತ್ತೇವೆ.

ಅರಸಿ ಚನ್ನಮ್ಮಳನ್ನು ಹಲವಾರು ಪದ್ಯಗಳಲ್ಲಿ ಬಣ್ಣಿಸಿರುವ ಕವಿಯು ಇವಳ ಪತಿ ಸಂಕರಸನನ್ನು ಹಾಗೂ ಮಗ ಚಿಕ್ಕರಾಯರ ಬಣ್ಣನೆಯನ್ನು ಒಂದು ಪದ್ಯದಲ್ಲಿ ಸೀಮಿತಗೊಳಿಸಿದ್ದಾನೆ. ಅರಸನ ಪ್ರಾಧಾನ್ಯತೆ ಇರುವ ಇತರ ಐತಿಹಾಸಿಕ ಕಾವ್ಯಗಳಿಗೆ ತದ್ವಿರುದ್ಧವಾದ ಕ್ರಮವನ್ನು ಇಲ್ಲಿ ಕಾಣುತ್ತೇವೆ. ಇದು ಇಲ್ಲಿನ ಅರಸಿಯ ಪ್ರಾಧಾನ್ಯತೆಯನ್ನು ಸೂಚಿಸುತ್ತಿದೆ.

**ಚನ್ನಮ್ಮದೇವಮ್ಮನ ಪತಿ ಬಲುಗುಣ । ರನ್ನನೆನಿಪ ಸಂಕರಸ**
**ಚೆನ್ನಿಗರರಸ ಚದುರರ ಚಿಂತಾಮಣಿ । ಹೊನ್ನ ಬಣ್ಣದ ದಿವ್ಯಕಾಯ ॥**

**ವನಜಾಕ್ಷಿ ಚನ್ನಮ್ಮ ದೇವಮ್ಮನದೊಂದು । ಜಿನಭಕ್ತಿಯನು ಕಡುಮೆಚ್ಚಿ ।**
**ಘನಕೃಪೆಯಿಂದ ಪದ್ಮಾವತಿ ದೇವಿ ತಾ । ನನುದಿನ ಬಿಡದೆ ರಕ್ಷಿಪಳು ॥**

**ವೀರಜಿನೇಶನ ಕಾರುಣ್ಯದಿಂದಲಿ । ವಾರಿಜಾನನೆ ಚನ್ನಾಂಬೆ ।**
**ಸಾರಿ ನಂಬಿದ ಭವ್ಯಜನರ ರಕ್ಷಿಸುತಲಿ । ಧಾರಿಣಿಯನು ಪಾಲಿಸುವಳು ॥**

ಕಾವ್ಯದಲ್ಲಿ **"ದೇವ ಪೂಂಜೆ"** (೧–೫೬) ಎಂದು ಕರೆಯಲ್ಪಟ್ಟ ರಾಣಿ ಚನ್ನಾಂಬಿಕೆಯು ಪದ್ಮಾವತೀ ಯಕ್ಷಿಯ ಪರಮಭಕ್ತೆ. ಇದೇ ಕಾರಣಕ್ಕೆ ಇವಳು ತನ್ನ ಆಸ್ಥಾನದಲ್ಲಿದ್ದ ಕವಿ ಪದ್ಮನಾಭನಿಂದ ಈ ಪದ್ಮಾವತಿ ಚರಿತ್ರೆ ಕೃತಿಯನ್ನು ರಚಿಸುವಂತೆ ಕೋರಿದ್ದಾಳೆ. ಸಾವಂತರ ಆಸ್ಥಾನದಲ್ಲಿ ಇನ್ನೂ ಹಲವು ಕವಿಗಳಿಗೆ ಪ್ರೋತ್ಸಾಹವಿತ್ತೆಂಬ ವಿಚಾರ ತಿಳಿದು ಬರುತ್ತದೆ. ಅರಸಿಯ ಕಾಲದಲ್ಲಿ ಮೂಲ್ಕಿಯ ಬಳಿಯಿರುವ ಪಡುಪಣಂಬೂರು ಜೈನಶಾಸ್ತ್ರ ಅಧ್ಯಯನ ಕೇಂದ್ರವಾಗಿತ್ತೆಂಬುದಕ್ಕೆ ಈ ಕಾವ್ಯದಲ್ಲಿ ಕೆಲವು ಆಧಾರಗಳು ದೊರಕುತ್ತವೆ. (ಪ್ರಥಮಸಂಧಿ ೫೦–೫೧, ಪು.೫)

ಚನ್ನಾಂಬಿಕೆಯನ್ನು ಕುರಿತಂತೆ ಇನ್ನೂ ಕೆಲವು ವಿಚಾರಗಳು ಶಾಸನ ಹಾಗೂ ಮತ್ತಿತರ ಆಕರಗಳಿಂದಲೂ ತಿಳಿದುಬರುತ್ತದೆ. ಚನ್ನಾಂಬಿಕೆಯು ಕೇವಲ ಪದ್ಮಾವತಿಯ ಭಕ್ತೆಯಷ್ಟೇ ಅಲ್ಲದೆ, ಒಂದು ನಾಡಿನ ರಾಣಿಯಾಗಿ ಧರ್ಮ ಸಮನ್ವತೆ ಕಾಯ್ದುಕೊಂಡಿದ್ದಾಳೆ. ಬಸದಿಗಳಿಗಷ್ಟೇ ಅಲ್ಲದೆ ದೇವಾಲಯಗಳಿಗೂ ದಾನ ನೀಡಿದ್ದಾಳೆ. ಕೆ.ಜಿ.ವಸಂತ ಮಾಧವರು ಗುರುತಿಸಿರುವ ಶಾ.ಶ.೧೫೩೨ರ ಶಾಸನ ತಿಳಿಸುವಂತೆ ಇವಳು ಕೊಡೆತ್ತೂರಿನ ಕಾಂತೇಶ್ವರ ದೇವರ ಒಕ್ಕಲಿಗೆ ಈ ದೇವಾಲಯಕೊಡುವ ಗೇಣಿಯನ್ನು ನಿರ್ಧರಿಸುತ್ತಾಳೆ. ಈ ಶಾಸನದಲ್ಲಿ ವ್ಯಕ್ತವಾಗಿರುವ ವೈಷ್ಣವ, ಜೈನ ಮತ್ತು ಶೈವ ಸಂಪ್ರದಾಯದ ಸಮನ್ವಯವನ್ನು ಕಾಣಬಹುದು.

ಇವಳು ತನ್ನ ನಾಡಿನ ರೇವುಪಟ್ಟಣವಾದ ಕಾರ್ನಾಟಿನ ಮುಖಾಂತರ ಸಮುದ್ರವ್ಯಾಪಾರ ನಡೆಸಿ ವಿದೇಶಿಯರಲ್ಲಿ ಕಾರ್ನಾಟುರಾಣಿ ಎಂದೇ ಕರೆಯಲ್ಪಡುತ್ತಿದ್ದಳು. ಇಟಲಿಯ ಪ್ರವಾಸಿ ಪಿಯತ್ರೊ ದೆಲ್ಲಾವೆಲ್ಲೆಯ ಹೇಳಿಕೆಯ ಪ್ರಕಾರ ಚನ್ನಾಂಬಿಕೆಯು ಪೋರ್ಚುಗೀಸರೊಂದಿಗೆ ವ್ಯಾಪಾರ ಸಂಬಂಧವನ್ನಿರಿಸಿಕೊಂಡಿದ್ದಳಲ್ಲದೆ, ಉಲ್ಲಾಳದ ರಾಣಿ ಹಾಗೂ ಕೆಳದಿ ಅರಸರೊಂದಿಗೆ ವಿರೋಧವನ್ನು ಕಟ್ಟಿಕೊಂಡಿದ್ದಳು. ಗಡಿ ಪ್ರದೇಶದ ರಾಜರೊಂದಿಗೆ ಆಗಾಗ ಯುದ್ಧಗಳಾಗುತ್ತಿದ್ದುದು ಸಾಧಾರಣವಾಗಿತ್ತು[೧೬]. ಈ ಪ್ರವಾಸಿಗ ಉಲ್ಲಾಳದ ರಾಣಿಯನ್ನು ಭೇಟಿ ಮಾಡಿದ ನಂತರ **"**ಕರ್ನಾಟಿ ರಾಣಿಯನ್ನು (Queen of Carnate) ನೋಡಬೇಕೆಂದು ನಿರ್ಧರಿಸಿದೆ, ಎಂದು ಹೇಳಿ ಇವಳನ್ನು ಭೇಟಿಯಾದ ವಿಚಾರ ತಿಳಿಸಿದ್ದಾನೆ.

ಅಂತೋನಿಯೊ ಬೊಕೆರಾ ಎಂಬುವವನು ಕ್ರಿ.ಶ.೧೬೧೫ ರಿಂದ ೧೬೩೮ರ ವರೆಗೆ ಪೋರ್ಚುಗೀಸರ ಸರ್ಕಾರದ ಗೋವೆಯ ಪತ್ರಾಗಾರನಾಗಿ ಸೇವೆ ಸಲ್ಲಿಸಿದವನು. ಈತನು ಬರೆದ 'Decade 13 Da Historia Da India' ಎಂಬ ಗ್ರಂಥದಲ್ಲಿ ಕಾರ್ನಾಡಿನ ರಾಣಿ, ಬಂಗರಸ, ಪೋರ್ತುಗೀಸ ಮತ್ತು ಕೆಳದಿ ವೆಂಕಟಪ್ಪನಾಯಕ ಇವರುಗಳ ರಾಜಕೀಯ ಸಂಬಂಧ ಮತ್ತು ಕ್ರಿ.ಶ.೧೬೧೮ರಲ್ಲಿ ನಡೆದ ಘರ್ಷಣೆಗಳ ವಿವರವಿದೆ. ಇವಳು ಬಂಗರಸ ಹಾಗೂ ಪೋರ್ಚುಗೀಸರೊಂದಿಗೆ ಸೇರಿಕೊಂಡು ಕೆಳದಿಯ ವೆಂಕಟಪ್ಪ ಹಾಗೂ ಚೌಟ ಅಬ್ಬಕ್ಕಳೊಂದಿಗೆ ಸೆಣಸಾಡಬೇಕಿದ್ದ ಪರಿಸ್ಥಿತಿ ಎದುರಾಗುತ್ತಿತ್ತು[೧೭ & ೧೮].

**ಕೃತಿ:** ಮೂಲ್ಕಿ ಪ್ರದೇಶದ ಸುಂದರ ವರ್ಣನೆಯನ್ನೂ, ಸ್ಥಳ ಪುರಾಣವನ್ನೂ ನೀಡುವ ಈ ಕಾವ್ಯವು ೧೨ ಸಂಧಿ, ೧೬೭೧ ಸಾಂಗತ್ಯ ಪದ್ಯದಿಂದ ಕೂಡಿದೆ. ಈ ಕೃತಿಯ ಸಂಪಾದಕರು ತಿಳಿಸಿರುವಂತೆ ಇಲ್ಲಿ ಪದ್ಮಾವತಿ ಚರಿತೆ ಎಂಬ ಹೆಸರಿನಲ್ಲಿ ಚರಿತೆಯು ಚರಿತ್ರೆ ಎಂಬ ಅರ್ಥದಲ್ಲಿಲ್ಲ. ಸಾಂಗತ್ಯವೆಂಬ ಛಂದೋ ಬಂಧಕ್ಕೆ ಚರಿತೆ ಎಂಬ ಹೆಸರು ಒಂದು ಕಾಲದಲ್ಲಿ ರೂಢಗತವಾಗಿತ್ತು.

**ಕಾವ್ಯದ ಕಥಾಭಾಗ:** ಉತ್ತರ ಮಧುರೆಯ ದೊರೆ ಸಹಕಾರರಾಜೇಂದ್ರ, ಆತನ ಪಟ್ಟದರಸಿ ಶ್ರೀಯಲದೇವಿಯರು ಜಿನಭಕ್ತರಾಗಿದ್ದರು. ದೊರೆಯು, ಪದ್ಮಿನಿ ಬೇಡತಿಯೊಬ್ಬಳ ಸೌಂದರ್ಯಕ್ಕೆ ಮನಸೋತು, ಮುಂದೆ ಅವಳ ಮಗನಿಗೇ

ಪಟ್ಟ ಕಟ್ಟುವುದಾಗಿ ಭಾಷೆ ಕೊಟ್ಟು ಪ್ರತ್ಯೇಕ ಗೃಹವನ್ನು ನಿರ್ಮಿಸಿ ಆ ಶಬರಿಯೊಂದಿಗೆ ಇರುತ್ತಿದ್ದನು. ಅವಳಿಗೊಬ್ಬ ಮಗನು ಜನಿಸಲು ಮಾರಿದತ್ತನೆಂಬ ಹೆಸರನ್ನಿಟ್ಟರು. ಆ ಬೇಡತಿಯ ಸಹವಾಸದಿಂದ ದೊರೆಯು ಮಾಂಸಾಹಾರಿಯಾಗಿದ್ದಲ್ಲದೆ, ನರಮಾಂಸವನ್ನೂ ಭಕ್ಷಿಸತೊಡಗಿದನು. ಅಡುಗೆಯ ಭಟನ ಬಳಿಗೆ ದೊರೆಯು ಯಾರ ಕೈಯಲ್ಲಿ ನಿಂಬೆಯಹಣ್ಣನ್ನು ಕೊಟ್ಟು ಕಳಿಸುವನೊ ಆ ವ್ಯಕ್ತಿಯನ್ನು ಕೊಂದು, ಅವನ ಮಾಂಸದಿಂದ ಅಂದಿನ ಪಾಕವನ್ನು ಅಡಿಗೆಯವನು ಸಿದ್ಧಪಡಿಸುತ್ತಿದ್ದನು.

**ಬಕಪಕ್ಷಿಯಂದದಿ ಸುಮ್ಮನೆ ಕುಳಿತಿವ । ಸಕಲರ ಕೊಂದು ಭಕ್ಷಿಸುವ।**
**ಬಕನಾಮನಿವನೆಂದು ಸಕಲರುಲಿಯುತಿರೆ । ಅಕಲಂಕಚರಿತೆ ಕೇಳಿದಳು॥**

ಒಂದು ದಿನ "ಪಟ್ಟದಾನೆಯನೇರಿ ಚತ್ರಚಾಮರಗೂಡಿ ಪಟ್ಟಣದೊಳು" ಬರುವ ಜಿನದತ್ತನನ್ನು ಕಂಡ ಬೇಡತಿಯು ಮನದಲ್ಲಿ "ಅವನ ಕೊಂದಲ್ಲದೆ ಉಳುಹಿಲ್ಲ" ವೆಂಬ ದುಷ್ಟ ಯೋಚನೆ ನಡೆಸಿದಳು. ದೊರೆಯೊಂದಿಗೆ ವಿಪರೀತವಾಗಿ ಹೋರಾಡಿ, ಕೆಟ್ಟ ಹಟ ಮಾಡಿದಳು. ಕಡೆಗೂ ಅವಳಿಗೆ ಸೋತ ದೊರೆಯು 'ಮಗನನ್ನು ಕೊಲ್ಲುವ ಉಪಾಯವೇನೆಂದು' ಅವಳೊಡನೆ ಚಿಂತಿಸಿದನು. ಅದಕ್ಕೆ ಬೇಡತಿಯು "ನೀವು ನಂಬಿಸಿಯವನ ಹಸ್ತದೊಳು ನಿಂಬೆಹಣ್ಣನು ಕೊಟ್ಟುಸೂಪಕನೆಡೆಗಟ್ಟಿ ಹಂಬಲಿಸದೆ ಹತಿಸುವನು" ಎನ್ನುತ್ತಾ ಅವನಕೈಯಲ್ಲಿ ನಿಂಬೇಹಣ್ಣನ್ನು ಕೊಟ್ಟು ಅಡುಗೆಯವನ ಬಳಿಗೆ ಕಳಿಸಲು ಸೂಚಿಸಿದಳು. ಅತಿ ಪಾಪಿ ಸತಿಯ ಮೋಹವ ಬಿಡಲಾರದೆ ಮಗನನು ಕೊಲ್ಲಲು ನಿಶ್ಚಯಿಸಿ "ಈ ಹಣ್ಣ ಬಾಣಸಿಗನ ಕೈಗೆ । ಗಮ್ಮನೆ ಕೊಟ್ಟು ಬಾ ಯೆನಲು" ಸಂತೋಷದಿಂದ ಹೊರಟ ಜಿನದತ್ತರಾಯನಿಗೆ ದಾರಿಯಲ್ಲಿ ಮಾರಿದತ್ತನು ಎದುರಾಗಿ, ಆ ನಿಂಬೆಯ ಹಣ್ಣನ್ನು ತಾನೇ ತೆಗೆದುಕೊಂಡು ಹೋಗುತ್ತಾನೆ. ಬಾಣಸಿಗನು ಅವನನ್ನು ಕೊಂದು ಅಡಿಗೆ ತಯಾರಿಸುತ್ತಾನೆ. ವಿಷಯ ತಿಳಿದ ಬೇಡತಿಯು ಕ್ರೋಧದಿಂದ ಆರ್ಭಟಿಸಿ ಕೂಡಲೇ ಜಿನದತ್ತರಾಯನನ್ನು ಕೊಲ್ಲಲು ಆಜ್ಞಾಪಿಸುತ್ತಾಳೆ.

ಈ ವಿಚಾರವನ್ನು ತಿಳಿದ ಶ್ರೀಯಲದೇವಿ ಬಹಳವಾಗಿ ಹೆದರಿ, ಗುರುವಿನ ಬಳಿಗೆ ಬಂದು ತನ್ನ ಮಗನ ಪ್ರಾಣ ಉಳಿಸಲು ಪ್ರಾರ್ಥಿಸಿಕೊಳ್ಳುತ್ತಾಳೆ. ಹಾಗೂ ಗುರುಗಳು ಹೇಳಿದಂತೆ ಮನೆದೇವತೆ ಪದ್ಮಾವತಿಯ ಪ್ರತಿಮೆಯನ್ನು ಅವನ ಕೈಯಲ್ಲಿ ಕೊಟ್ಟು ಹಯಶಾಲೆಯಲ್ಲಿದ್ದ ಕನಕವರ್ಣದ ಕುದುರೆಯನ್ನು ಹತ್ತಿಸಿ ದಕ್ಷಿಣಾಭಿಮುಖವಾಗಿ ಕಳುಹಿಸುತ್ತಾಳೆ. ಶತ್ರುಗಳು ಬೆಂಬತ್ತಿ ಬಂದಾಗ ಅವರಿಗೆ ಆ ಯಕ್ಷಿಯ ಪ್ರತಿಮೆಯನ್ನು ತೋರಿಸಿದರೆ ಅವರೆಲ್ಲ ಹೆದರಿ ಓಡಿಹೋಗುವರೆಂದು ತಿಳಿಸಿದ ಗುರುವಿನ ನುಡಿಯಂತೆ, ತನ್ನನ್ನು ಮುತ್ತಲು ಬಂದ ಶತ್ರುಗಳನ್ನು ಪ್ರತಿಮೆ ತೋರಿಸಿ ಒಂದು ಯೋಜನದಷ್ಟು ಹಿಂದಕ್ಕೆ ಅಟ್ಟುತ್ತಾ ಅವರಿಂದ ಪಾರಾಗಿ ಮುಂದೆ ನಡೆದನು. ಕಡೆಗೆ ಆ ಸೈನಿಕರು ಜಿನದತ್ತನಿಗೆ ಶರಣಾಗಿ ಊರಿಗೆ ಹಿಂದಿರುಗಲೊಲ್ಲದೆ ಅವನೊಡನೆಯೆ ಇರುತ್ತಾರೆ.

ಜಿನದತ್ತನು ತನಗೆ ವಶವಾದ ಸೈನ್ಯದೊಡನೆ ಸಿಂಹರಥನೆಂಬುವ ಸ್ಥಳೀಯ ಅರಸನನ್ನೂ ಸೋಲಿಸಿ, ಮುಂದುವರೆಯುತ್ತಾನೆ. ಅಡವಿಯಲ್ಲಿ ಸಂಚರಿಸುತ್ತಾ ಒಮ್ಮೆ ಬಾಯಾರಿ ನೀರನ್ನರಸಿ ಬರಲು, ಒಂದು ಕೊಳವನ್ನು ಕಂಡು ಅದರ ಬಳಿಯಿದ್ದ ಲೊಕ್ಕಿಯ ಮರಕ್ಕೆ ಕೈಯಲ್ಲಿದ್ದ ಪ್ರತಿಮೆಯನ್ನು ತೂಗುಹಾಕಿ ನೀರು ಕುಡಿದು ನೆರಳಲ್ಲಿ ಮಲಗಿದನು. ಆಗ ಅವನಿಗೆ ಕನಸಾಯಿತು, ನಾನು ಇನ್ನು ಬರಲೊಲ್ಲೆ ಇಲ್ಲಿಯೇ ನೆಲೆಸುತ್ತೇನೆ ಎಂದು ಆ ಯಕ್ಷಿಯ ಪ್ರತಿಮೆ ನುಡಿದಂತಾಯ್ತು. ಕೂಡಲೆ ಎದ್ದು ಆ ಪ್ರತಿಮೆಯನ್ನು ತೆಗೆದುಕೊಳ್ಳಲು ಪ್ರಯತ್ನಿಸಿದರೆ ಅದು ಬಾರದೆ ಅಲ್ಲಿಯೇ ನಿಂತಿತು. ಕಡೆಗೆ ಆ ದೇವಿ ಸೂಚಿಸಿದಂತೆ ಆ ಕಾಡನ್ನು ನಾಡಾಗಿ ಪರಿವರ್ತಿಸಲು ತೊಡಗಿದನು. ಆ ಪ್ರತಿಮೆಗೆ ಸೋಕಿಸಿದ ಲೋಹವೆಲ್ಲಾ ಬಂಗಾರವಾಗಿ, ದೇವಿಯು ಇವನಿಗೆ ರಾಜ್ಯ ಕಟ್ಟಲು ಸಹಾಯ ಮಾಡಿದಳು. ಮೊದಲು ಆ ಸ್ಥಳದಲ್ಲಿ ಜಿನಗೇಹ ದೇಹಾರಗಳನ್ನು ನಿರ್ಮಿಸಿ ಅನಂತರ ಪುರವನ್ನು ಕಟ್ಟಿ ಅದಕ್ಕೆ ಪೊಂಬುಚ್ಚವೆಂದು ಹೆಸರಿಟ್ಟನು.

ಧಾರ್ಮಿಕ ವಸ್ತುವನ್ನು ಹೊಂದಿದ್ದರೂ ಈ ಕಾವ್ಯವು ಐತಿಹಾಸಿಕವಾದ ಹಲವಾರು ಮಹತ್ವದ ಸಂಗತಿಗಳನ್ನು ಸಾರುತ್ತದೆ. ಜಿನದತ್ತರಾಯನ ಚರಿತ್ರೆಯನ್ನು ತಿಳಿಸುವ ಈ ಕಾವ್ಯವು ಅಲ್ಲಲ್ಲಿ ಮೂಲಿಕೆಯ ಭೌಗೋಳಿಕ ಸ್ವರೂಪ, ಸಾಮಂತರಸರ ವಂಶಾವಳಿ, ಅನುಸರಿಸಲಾಗುತ್ತಿದ್ದ ಜೈನಧರ್ಮದ ವಿಚಾರಗಳು, ಸಾಮಾಜಿಕ ರೂಢಿ ನಿಯಮಗಳು ಮೊದಲಾದ ಮಾಹಿತಿ ನೀಡಿದೆ.

ಈ ಕೃತಿಯ ಹಸ್ತಪ್ರತಿಯು ಕರಾವಳಿ ತೀರಪ್ರದೇಶದಲ್ಲಿ ಹೆಚ್ಚಾಗಿ ದೊರಕುತ್ತದೆ. ಆ ಕಾಲದಲ್ಲಿ 'ಪದ್ಮಾವತಿ ಚರಿತೆ'ಯ ಕೃತಿ ಬಹುಶಃ ಇದೊಂದೇ ಇದ್ದುದರಿಂದ, ಮನೆಮನೆಗಳಲ್ಲಿ ಪಾರಾಯಣ ಮಾಡಲು ಈ ಕೃತಿಯನ್ನು ಹೆಚ್ಚಿನ ಸಂಖ್ಯೆಯಲ್ಲಿ ಲಿಪಿಮಾಡಿಕೊಳ್ಳಲು ಕಾರಣವಾಗಿದೆ ಎಂದು ಈ ಕೃತಿಯ ಸಂಪಾದಕರು ಅಭಿಪ್ರಾಯ ಪಡುತ್ತಾರೆ. ಈ ಕೃತಿಯು ಹಾಡುವ ಮಟ್ಟಿನ ಸಾಂಗತ್ಯದಲ್ಲಿ ರಚನೆಯಾಗಿರುವುದು ಇದರ ಜನಪ್ರಿಯತೆಗೆ ಕಾರಣವಾಗಿದೆ. ಇಂತಹ ಜನಮನ್ನಣೆಗಳಿಸುವ ಧಾರ್ಮಿಕ, ಐತಿಹಾಸಿಕ ಮಹತ್ವ ಉಳ್ಳ ಈ ಕೃತಿಯ ರಚನೆಗೆ ಪ್ರೇರಣೆ ನೀಡಿ, ಕವಿಯ ಪೋಷಕಳಾದ ರಾಣಿ ಚೆನ್ನಾಂಬಿಕೆಯ ಹೆಸರು ಕೃತಿಯ ಮುಖಾಂತರ ದೀರ್ಘಕಾಲ ಉಳಿಯುವಂತಾಯಿತು.

## ಕೆಳದಿ ಸಂಸ್ಥಾನದ ಅರಸಿಯರು

ಕೆಳದಿ ಸಂಸ್ಥಾನವು, ವಿಜಯನಗರ ಸಾಮ್ರಾಜ್ಯದ ಆಳ್ವಿಕೆಯ ಕಾಲದಲ್ಲಿ ಸ್ಥಾಪನೆಯಾಗಿ, ವಿಜಯನಗರೋತ್ತರ ಕಾಲದಲ್ಲಿಯೂ ಮುಂದುವರಿದು ಪಶ್ಚಿಮ ಕರಾವಳಿಯಲ್ಲಿ ಗೋವೆಯಿಂದ ದಕ್ಷಿಣದ ಕೇರಳದ ವರೆಗೆ ಹಬ್ಬಿದ ವಿಶಾಲವಾದ ರಾಜ್ಯ ಇದಾಗಿತ್ತು. ಇಕ್ಕೇರಿ, ಕೆಳದಿ ಬಿದನೂರು, ಭುವನಗಿರಿಗಳನ್ನು ಕ್ರಮವಾಗಿ ತಮ್ಮ ರಾಜಧಾನಿಗಳನ್ನಾಗಿಸಿಕೊಂಡು ಸುಮಾರು ೨೭೫ ವರ್ಷ ಈ ಮನೆತನದ ನಾಯಕರು ಆಳ್ವಿಕೆ ನಡೆಸಿದರು. ಕೆಳದಿ ಅರಸು ಮನೆತನದಲ್ಲಿ ಹಲವಾರು ರಾಣಿಯರೂ ಪ್ರಮುಖರಾಗಿದ್ದಾರೆ, ಇವರಲ್ಲಿ ಕೆಳದಿಯ ಚನ್ನಮ್ಮ ಹಾಗೂ ವೀರಮ್ಮಾಜಿಗಳು ಸ್ವತಂತ್ರವಾಗಿ ಆಳ್ವಿಕೆ ನಡೆಸಿದವರು. ಈ ಮನೆತನದ ಕೆಲವು ರಾಣಿಯರು ಧಾರ್ಮಿಕ, ಸಾಮಾಜಿಕ ತಾಣಗಳಲ್ಲಿ ತಮ್ಮ ಕೊಡುಗೆಯನ್ನು ನೀಡಿದ್ದಾರೆ.

### ಬಸವರಾಜೇಂದ್ರನ ಅರಸಿ ಚನ್ನಮ್ಮ

ಕ್ರಿ.ಶ.೧೬೯೭–೧೭೧೫ರಲ್ಲಿ ಕೆಳದಿಯನ್ನಾಳಿದ ಬಸವಪ್ಪನಾಯಕ ಅಥವಾ ಬಸವರಾಜೇಂದ್ರನ ಅರಸಿ ಚನ್ನಮ್ಮ. ಇವಳು ಕೆಳದಿಯ ಪ್ರಸಿದ್ಧ ಅರಸಿ ಚೆನ್ನಮ್ಮಾಜಿಯ ಸೊಸೆ. ಈಕೆಯು ಕೆಳದಿಯ ಕವಯತ್ರಿ ಗಂಗಾದೇವಿಯಿಂದ ಕಾವ್ಯವನ್ನು ಬರೆಯಿಸಿದ್ದಾಳೆ.

ಗಂಗಾದೇವಿ ಎಂಬ ಕವಯತ್ರಿಯು ಕೆಳದಿಯ ಪ್ರಸಿದ್ಧರಾಣಿ ಚನ್ನಮ್ಮಾಜಿಯ ಮಗ ಬಸವಪ್ಪನಾಯಕನ ಆಳ್ವಿಕೆಯ ಕಾಲದಲ್ಲಿದ್ದವಳು. ಈಕೆಯು ಕೆಳದಿ ಅರಸರ ರಾಜಗುರು ಚೆನ್ನವೀರ ಶಿವಾಚಾರ್ಯರ ಪತ್ನಿ. ಈಕೆಯು ಕಾವ್ಯ ರಚನೆಗೆ ತೊಡಗಿದ್ದರೂ ಬೆಳಕಿಗೆ ಬಾರದ ಕವಯತ್ರಿಯಾಗಿದ್ದಾಳೆ. ಇವಳು ರಚಿಸಿರುವ ಒಂದು ಕೃತಿ ಮಾತ್ರ ಈ ವರೆಗೆ ಲಭಿಸಿದೆ. ಲಭ್ಯವಿರುವ ಇವಳ ಏಕೈಕ ಕೃತಿ ಕೆಳದಿ 'ರಾಜ್ಯಾಭ್ಯುದಯಮ್' ಕೂಡ ಅಪೂರ್ಣವಾಗಿದೆ. ಕೃತಿ ರಚನೆಯೇ ಅಪೂರ್ಣವೋ ಅಥವಾ ದೊರಕಿರುವುದು ಮಾತ್ರ ಅಪೂರ್ಣವಾಗಿಯೋ ತಿಳಿದು ಬಂದಿಲ್ಲ. ಆದರೆ ಕವಯತ್ರಿಯು ತನಗೆ ಕರ್ಣಾಟಕ ಕವಿಪರಮೇಶ್ವರಿ, ವಿದ್ವತ್ಸಭಾಸರಸ್ವತಿ, ಮೊದಲಾದ ಬಿರುದುಗಳಿದ್ದುದನ್ನು ತಿಳಿಸಿದ್ದಾಳೆ, ಈ ಬಿರುದುಗಳು ಈಕೆ ಇನ್ನು ಯಾವುದಾದರೂ ಕೃತಿ ರಚಿಸಿದ್ದಿರಬೇಕೆಂಬ ಸಂಶಯಕ್ಕೀಡುಮಾಡುತ್ತದೆ. ಆದರೆ ಕೆಳದಿ ರಾಜ್ಯಾಭ್ಯುದಯವನ್ನು ಬಿಟ್ಟು ಮತ್ತಾವ ಕೃತಿಯೂ ದೊರಕಿಲ್ಲ. ಅಲ್ಲದೆ ಬೇರಾವ ಕವಿಯೂ ಇವಳನ್ನಾಗಲೀ ಇವಳ ಕಾವ್ಯವನ್ನಾಗಲೀ ಕುರಿತು ಉಲ್ಲೇಖಿಸಿಲ್ಲ[೧೯].

ಕೆಳದಿಯ ಬಸವರಾಜೇಂದ್ರ ಅರಸು ತಮ್ಮ ಗುರುಗಳಾದ ಚನ್ನವೀರಸ್ವಾಮಿಗೆ ಕೊಟ್ಟ ಭೂದಾನ ತಾಮ್ರ ಶಾಸನದಲ್ಲಿ ಗುರುವನ್ನು ಕುರಿತು **"ಸ್ಕಂದಗೊತ್ರ ಸಮುತ್ಪನ್ನಃ ಶಿವಸಿದ್ಧಾಂತ ಕೋವಿದ:"** **"ಗಂಗಾದೇವೀ**ತಿ ಯಸ್ಯಾಸ್ತಿ ಭಾತಿ ವಿದ್ಯಾವತೀ ಸತೀ ತಯಾ ವಿನೀತಯಾ ಯುಕ್ತೋ ಧರ್ಮಾಚಾರ ಪರಾಯಣ**"** ಎಂದು ಸ್ತುತಿಸುವಲ್ಲಿ ವಿದ್ಯಾವತಿ ಯೆನಿಸಿದ ಗಂಗಾದೇವಿಯನ್ನು ಉಲ್ಲೇಖಿಸಿರುವುದಲ್ಲದೆ, ಹುಲಿಕೆರೆ ಮಠಕ್ಕೆ ಕೊಟ್ಟ ದಾನಶಾಸನದಲ್ಲಿ ಅರಸು ಬಸವರಾಜೇಂದ್ರನು, ಗುರುಪತ್ನಿಯಾದ ಕವಯತ್ರಿ ಗಂಗಾಂಬಿಕೆಯನ್ನು ಪಾರ್ವತಿಗೆ ಹೋಲಿಸಿ ಸ್ತುತಿಸಿದ್ದಾನೆ.

**ಗಂಗಾದೇವಿ**: ಕವಯತ್ರಿ ಗಂಗಾದೇವಿಯು ಈ ಮೇಲೆ ತಿಳಿಸಿರುವಂತೆ ಕೆಳದಿ ಅರಸರ ರಾಜಗುರು ಚೆನ್ನವೀರ ಶಿವಾಚಾರ್ಯರ ಪತ್ನಿ. ಕೃತಿಯಲ್ಲಿ ತನ್ನ ತಂದೆ-ತಾಯಿಯರನ್ನು ಸ್ಮರಿಸಿದ್ದಾಳೆ. ತಾಯಿ ಗೌರೀದೇವಿ, ತಂದೆ ಶಿವಪ್ಪ. ಇವರಿಗೆ ತಾನೊಬ್ಬಳೇ ಮಗಳೆಂತಲೂ, ತನ್ನ ತಾಯಿಯೇ ತನಗೆ ಗುರುವೆಂತಲೂ ಅಂತಹ 'ಖ್ಯಾತವಿದ್ಯಾದಾತೆಯುಂ ನಿಜಮಾತೆಯುಂ ತಾನಾದ ದೇವಿಗೆ' ಅತ್ಯಂತ ಪ್ರೀತಿಯಿಂದ ತನ್ನ ನವಕಾವ್ಯಕುಸುಮವನ್ನು ಅರ್ಪಿಸುವುದಾಗಿಯೂ ಹೇಳಿಕೊಂಡಿದ್ದಾಳೆ.

ತನ್ನನ್ನು **"**ಇಳೆಯೊಳಿದನೊರೆದವಳದಾರೆನೆ ಕೆಳದಿ ರಾಜಾನ್ವಯದ ನಿಜಗುರು ಕೆಳದಿ ವರಮಠ ಚೆನ್ನವೀರಾಚಾರ್ಯನರ್ಧಾಂಗಿ**"** ಎಂದು ಪರಿಚಯಿಸಿಕೊಂಡಿದ್ದಾಳೆ. ಅಲ್ಲದೆ ಸೋಪಾನದ ಕಡೆಯಲ್ಲಿ **"**ಇದು ವೇದಾಗಮ ಸಾಧಿತ ಶ್ರೀಮದ್ವೀರಶೈವ ಷಟಸ್ಥಲೈಕಮೇವಾದ್ವಿತೀಯ ಪರಶಿವ ಬ್ರಹ್ಮ ಪಾದಾರವಿಂದ ಮದುಕರಿ ಶ್ರೀಮತ್ ಕೆಳದೀರಾಯ ರಾಜಗುರು ಶ್ರೀ ಚೆನ್ನವೀರ ಶಿವಾಚಾರ್ಯ ಪುಣ್ಯವಲ್ಲಭೆ ಕವಿ ಪರಮೇಶ್ವರಿ ಗಂಗಾದೇವಿ ವಿರಚಿತಮಪ್ಪ ಕೆಳದಿ ರಾಜ್ಯಾಭ್ಯುದಯ ಪ್ರಬಂಧದೊಳ್... ಎಂದು ಮುಗಿಸಿದ್ದಾಳೆ.

ಗಂಗಾದೇವಿಯು ಕೆಳದಿಯ ಅರಸು ಬಸವರಾಜನ ಕಾಲದಲ್ಲಿದ್ದಳೆಂಬುದು ಸ್ಪಷ್ಟವಾಗಿರುವುದರಿಂದ, ಈಕೆಯ ಕಾಲವು ಬಸವಪ್ಪನಾಯಕನ ಆಳ್ವಿಕೆಯ ಕಾಲವಾದ ಕ್ರಿ.ಶ.೧೬೯೮ – ೧೭೧೪ರ ಸುಮಾರಿನಲ್ಲಿಯೇ ಎಂದು ತಿಳಿಯಬಹುದು.

**ಕೃತಿಗೆ ಪ್ರೇರಣೆ ಹಾಗು ಆಕರ** : ತಾನು ಕೃತಿ ರಚಿಸಲು ಕಾರಣವನ್ನು ಸ್ವತ ಗಂಗಾದೇವಿಯೇ ತಿಳಿಸಿದ್ದಾಳೆ. ಒಂದುದಿನ ಕೆಳದಿ ಬಸವರಾಜೇಂದ್ರನು ತನ್ನರಸಿ ಚನ್ನಮ್ಮ ಹಾಗೂ ಪುತ್ರರನ್ನೊಡಗೂಡಿ ಕೆಳದಿ ಮಹಾಮಠಕ್ಕೆ ಗುರುಸಂದರ್ಶನಾರ್ಥವಾಗಿ ಬರುತ್ತಾನೆ. ಗುರುಪೂಜೆ ಮುಗಿಸಿ, ಶ್ರೀಮಠದ ಶಿವಪ್ರಸಾದವನ್ನು ಸ್ವೀಕರಿಸಿ ಕೆಲಕಾಲ ರಾಜಗುರುಗಳೊಂದಿಗೆ ಸಂಭಾಷಿಸುತ್ತಿರುವಾಗ, ರಾಣಿಯಾದ ಚೆನ್ನಮ್ಮಳು 'ಗುರುವರನೊಡತಿಯಡಿದಾವರೆಯೊಳ್, ವಿದ್ಯಾವಿಭವೆ ಕೆಳದೀ ರಾಜಕೃತಿಯಂ ವಿರಚಿಪುದು ನೀವು' ಎಂದು ಬೇಡಿಕೊಳ್ಳುತ್ತಾಳೆ. ಬಸವರಾಜನೂ ಸಹ ಮಂದ ಹರ್ಷದಿಂದ 'ಹಿಂದಣವರೀ ಕೃತಿಯನಾರುಂ ಪೇಳ್ದರಿಲ್ಲ ದಿಟ ಇಂದದಕ್ಕಂ ರಾಣಿ ಪ್ರಾರ್ಥಿಸುತೆಂದಳ್' ಎನ್ನುತ್ತಾ ತನ್ನ ರಾಣಿಯ ಮನೋಭಿಲಾಶೆಯನ್ನು ಈಡೇರಿಸುವಂತೆ ಪ್ರಾರ್ಥಿಸಿಕೊಳ್ಳುತ್ತಾನೆ. ಪತ್ನಿಯ ಆಸೆಯಂತೆ ಕಾವ್ಯವನ್ನು ರಚಿಸುವಂತೆ ಕೇಳಿದ ದೊರೆ ಬಸವರಾಜನ ಮಾತನ್ನು ಕೇಳಿದ ಗಂಗಾದೇವಿಯ ಪತಿ ಚೆನ್ನವೀರಸ್ವಾಮಿಯವರೂ ಸಹ ತಮ್ಮ ಪತ್ನಿಗೆ 'ನೀನಿವರೆಂದ ಕೃತಿಯಂ ವಿರಚಿಸುವುದುಚಿತ' ಎನ್ನುತ್ತಾ ಮಕ್ಕಳ ಸಂತೋಷವೇ ತಾಯಿಗೆ ತೃಪ್ತಿ ಎಂಬ ಮಾತಿಂದ ಗಂಗಾದೇವಿ ರಚನೆಗೆ ತೊಡಗಿದಳಂತೆ.

ತನ್ನ ಈ ಕೃತಿಗೆ ಆಕರ ಬಸವದೇವರಾಜನೇ ಒದಗಿಸಿದ ವಿಚಾರವನ್ನು **"**ನೆಲನಾಳ್ದ ತಮ್ಮ ಪೂರ್ವದ ಕುಲ ಕಥೆಯಂ ಬಸವರಾಜನೆನಗಿತ್ತಂ**"** ಎಂದು ದ್ವಿತೀಯ ಸೋಪಾನದ ಆರಂಭದಲ್ಲಿ ತಿಳಿಸಿದ್ದಾಳೆ. ಬಸವರಾಜ ರಚಿಸಿರುವ ಶಿವತತ್ವ ರತ್ನಾಕರ ಹಾಗೂ ಗಂಗಾದೇವಿಯ ಈ ಕೃತಿಯಲ್ಲಿ ಕೆಲವೊಂದು ಸಾಮ್ಯತೆಗಳನ್ನು ಗುರುತಿಸಬಹುದು.

**ಕಾವ್ಯಕ್ಕೆ ಪ್ರೋತ್ಸಾಹ ನೀಡಿದ ರಾಣಿ:**

ಬಸವರಾಜೇಂದ್ರನ ರಾಣಿ ಚನ್ನಮ್ಮಳು ತನ್ನನ್ನು ಕೃತಿರಚಿಸಲು ಯಾವ ರೀತಿಯಲ್ಲಿ ಬಿನ್ನಹ ಗೈಯ್ದಳು ಎಂದು ತಿಳಿಸಿರುವಲ್ಲಿಯೇ ರಾಣಿಯ ಸ್ವಭಾವದ ಪರಿಚಯವನ್ನು ಕವಯತ್ರಿಯು ತಿಳಿಸಿಕೊಟ್ಟಿದ್ದಾಳೆ. ರಾಣಿಯನ್ನು 'ಒಡತಿಯಹ ಮಹರಾಣಿ ಮನ್ನಣೆವಡೆದ ಚೆನ್ನಮ್ಮಾಜಿ' ಎಂದು ಕರೆದಿರುವ ಕವಯತ್ರಿಯು ಆಕೆಯ ಸರಳ ಗುಣ ಹಾಗೂ ಸೌಜನ್ಯತೆಯನ್ನು ಉಲ್ಲೇಖಿಸಿದ್ದಾಳೆ. ಕಾವ್ಯ ರಚನೆಯ ಹಂಬಲ ವ್ಯಕ್ತಪಡಿಸಿದ ಸತಿಯ ಮನದಿಚ್ಛೆಗೆ ಬೆಂಬಲ ನೀಡಿದ' ದೊರೆ ಬಸವರಾಜೇಂದ್ರ ಸ್ವತಃ ಕವಿಯಾಗಿದ್ದು, ವಿಶ್ವಕೋಶದ ಮಾದರಿಯಲ್ಲಿ ರಚಿಸಿದ ಈತನ 'ಶಿವತತ್ವ ರತ್ನಾಕರ' ಸಂಸ್ಕೃತದ ಅದ್ವಿತೀಯ ಗ್ರಂಥವೆನಿಸಿದೆ. ಅಲ್ಲದೆ ಇವನು ರಚಿಸಿರುವ 'ಕಾಳಿಕಾ ಕಾಂಡ' ಕಾವ್ಯವು ಕನ್ನಡದಲ್ಲಿ ರಚಿತವಾದ ಅತಿ ದೀರ್ಘವಾದ ವಾರ್ಧಕಷಟ್ಪದಿ ಕಾವ್ಯವೆಂಬ ಮನ್ನಣೆಗೆ ಪಾತ್ರವಾಗಿದೆ. ಈತ ತನ್ನ ಆಸ್ಥಾನದಲ್ಲಿ ಅನೇಕ ಕವಿಗಳಿಗೆ ಆಶ್ರಯ ನೀಡಿದ್ದನು. ಇವನ ಅರಸಿಯೂ ಕಾವ್ಯ ರಚಿಸಲು ಗಂಗಾದೇವಿಗೆ ಪ್ರೋತ್ಸಾಹ ನೀಡುವುದರ ಮೂಲಕ ಪತಿಗೆ ತಕ್ಕ ಸತಿಯೆನಿಸಿದ್ದಾಳೆ.

ಈ ಅಪೂರ್ಣವಾದ ಕೃತಿಯಲ್ಲಿ ರಾಣಿಯನ್ನು ಕುರಿತಾದ ಹೆಚ್ಚಿನ ವಿಚಾರಗಳು ದೊರೆತಿಲ್ಲ. ಆದರೆ ಲಿಂಗಣ್ಣಕವಿ ವಿರಚಿತ 'ಕೆಳದಿನೃಪ ವಿಜಯಂ' ಕೃತಿಯ ದಶಮಾಶ್ವಾಸದಲ್ಲಿ[20] ಇವಳು ಕುಟರಹಳ್ಳಿ ಚನ್ನವೀರವೊಡೆಯರ ಮಗ ಬಸವಪ್ಪ ಹಾಗೂ ಆತನ ಪತ್ನಿ ಪುಟ್ಟವ್ವನ ಮಗಳೆಂದು ತಿಳಿದು ಬರುತ್ತದೆ. ಬಸವಪ್ಪನಾಯಕ ಕೆಳದಿಯ ರಾಜನಾಗಿ ವೇಣುಪುರದಲ್ಲಿ ಪಟ್ಟಾಭಿಷೇಕಗೊಂಡ ನಂತರ ಅದೇ ಈಶ್ವರ ಸಂವತ್ಸರದ ಮಾಘಮಾಸದಲ್ಲಿ ಇವಳನ್ನು ವರಿಸಿದ. ವಿಕ್ರಮನಾಮ ಸಂವತ್ಸರದಲ್ಲಿ ಇವಳು ವೀರಭದ್ರನಾಯಕನ ತಾಯಿಯಾದಳು. ಬಸವರಾಜೇಂದ್ರನ ಅರಸಿ ಚನ್ನಮ್ಮಳು ಅಧಿಕಾರದ ಚುಕ್ಕಾಣಿ ಹಿಡಿದು ರಾಜ್ಯವಾಳದಿದ್ದರೂ ಗಂಗಾದೇವಿಯಂಥ ಕವಯತ್ರಿಯನ್ನು ಕನ್ನಡ ಕಾವ್ಯ ಪ್ರಪಂಚಕ್ಕೆ ಪರಿಚಯಿಸಿದ ಅರಸಿಯಾದಳು.

ಕೃತಿಯ ಪರಿಚಯ: ಈ ಕೃತಿಯಲ್ಲಿ ಅಧ್ಯಾಯಗಳನ್ನು ಸೋಪಾನವೆಂದು ಕರೆಯಲಾಗಿದೆ. ಮೊದಲ ಸೋಪಾನ ಭಾಮಿನಿ ಷಟ್ಪದಿಯಲ್ಲಿ ರಚಿತವಾಗಿದೆ. ಆರಂಭದಲ್ಲಿ ಶಿವಸ್ತುತಿ, ಗೌರೀಸ್ತುತಿ, ಷಣ್ಮುಖಸ್ತುತಿ, ವಿಶ್ವೇಶ್ವರ, ನಂದಿ, ಭೃಂಗಿ ಹಾಗೂ ವೀರಶೈವ ಪಂಚಾಚಾರ್ಯರುಗಳ ಸ್ತುತಿ ಮಾಡಲಾಗಿದೆ, ಮುಂದಿನ ಪದ್ಯದಲ್ಲಿ ವೀರಶೈವ ಭಾಷ್ಯಕಾರರಾದ ಶಿವಮತಾಂಭುದಿ ಪೂರ್ಣಚಂದ್ರರಾದ ಶ್ರೀಪತಿ ಹಾಗೂ ನೀಲಕಂಠಶಿವಾಚಾರ್ಯರ ಮೊದಲಾದವರಿಗೆ ನಮಿಸಿ, ಬಸವೇಶ್ವರರಿಗೆ ವಂದಿಸಿ, ಚೆನ್ನ ಕನ್ನಡಜಾಣ ಹರಿಹರದೇವನಿಗೆ ನಮಸ್ಕರಿಸಿ, ರಾಘವಾಂಕಾದಿಗಳ ಕಾವ್ಯಶಕ್ತಿ ತನಗೆ ಬರಲೆಂದು ಬೇಡಿ, ನಿಜಗುಣ ಶಿವಯೋಗಿಗಳನ್ನು ಭಕ್ತಿಯಿಂದ ಪ್ರಾರ್ಥಿಸಿ ಕಥೆಗೆ ನಾಂದಿ ಹಾಡಿದ್ದಾಳೆ.

ಮೊದಲನೆಯ ಸೋಪಾನ ಇಷ್ಟದೇವತಾಸ್ತುತಿ, ಕವಿಪ್ರಸ್ತಾಪಕ್ಕೆ ಮೀಸಲಿಟ್ಟರೆ ಎರಡನೆಯ ಸೋಪಾನದಿಂದ ಕೆಳದಿ ಅರಸರ ಚರಿತ್ರೆ ಆರಂಭಗೊಂಡಿದೆ. ಎರಡನೆಯ ಸೋಪಾನ ಗದ್ಯದಲ್ಲಿದೆ. ಆದರೆ ಆರಂಭದಲ್ಲಿ ಒಂದು ಕಂದ ಪದ್ಯವಿದೆ.

ಕೆಳದಿ ನಾಡಿನ ಮೇರೆಯನ್ನು 'ಕೊಡಚಾದ್ರಿಯಿಂ ಬನವಸೆ ಪರ್ಯಂತಮಿರ್ಪಾ ಒಳನಾಂಡಿಂಗೆ ಮಲ್ಲದೇಶಮೆಂಬ ಸಲ್ಲಲಿತ ನಾಮಂ ಸಂದುದು' ತಿಳಿಸುತ್ತಾ, ಈ ನಾಡಿಗೆ ಮಲ್ಲದೇಶವೆಂಬ ಹೆಸರಿದ್ದುದನ್ನು ತಿಳಿಸಿದ್ದಾಳೆ.

ನಾಡಿನ ವಣ್ಣನೆ: "ಬನಸಿರಿ ಚೆಲುವಿಂಗೆ ನಿಲವಿಂಗೆ ನೆಲಯೆನಿಪ್ಪಾ ಸಲ್ಲಲಿತಮಾದ ಮಲ್ಲದೇಶದೊಳೆಲ್ಲಿ ನೋಡಿದೊಡಂ ಎತ್ತರ ಬಿತ್ತರಂಗಳ ಸೊಂಪಿಂ ರವಿಶಶಿ ಮಂಡಳಮಂ ಸ್ಪರ್ಧಿಪ ಘನೋತ್ತುಂಗ ಗಿರಿ ಕಾನನ ಶ್ರೇಣಿಗಳ ಲೋಕೇಶನಾಕಾಶ ಭಿತ್ತಿಯೊಳ್ ಬಣ್ಣಿಸಿದ ಚೆಲ್ವು ಚಿತ್ತಾರ ದಂತಿರ್ಕಡೆಯೊಳ್ ರಮ್ಯಮಾಗಿರಲ್..." "ವಿಭವ ಪ್ರಭಾವಂ ಬೆತ್ತ ನಾಡಿನ ಕಾಡುಕಣಿವೆ ಸರುವು ಘಟ್ಟಂಗಳೊಳ್ ಬೀಳುತೇಳುತ ಸುತ್ತಿ ಸುಳಿದು ಇಳಿದು

ಹೊಳೆದು ಜುಳುಜುಳು ಸಳಸಳ ಕಳಕಳನಾದಮಂ ಪಸರಿಸುತ್ತಂ ಪರಿವ ಮೆರೆವ ವರದಾ ನದಿ" "ಇವುಗಳ ನಡುವಣ ಸರವು ದಾಣಂಗಳೊಳ್.." ಇರುವ ಕೆಳದಿ ನಾಡನ್ನು ಬಣ್ಣಿಸಿದ್ದಾಳೆ.

ಕರ್ಣಾಟಕದಲ್ಲಿರುವ ಮಲ್ಲದೇಶ ಅದರಲ್ಲಿರುವ ಕೆಳದಿಪುರ ಬಸವಪ್ಪ ಮತ್ತು ಬಸವಾಂಬೆಯರ ದಾಂಪತ್ಯ, ಪತಿ ತೀರಿಕೊಂಡದ್ದರಿಂದ ದುಃಖಿತೆಯಾದ ಬಸವಾಂಬೆಯನ್ನು ಹೊರಗುಡಿಗೆಯ ಪಟ್ಟದ ರುದ್ರಮುನಿಸ್ವಾಮಿಗಳು ತಮ್ಮ 'ಪುಣ್ಯಸತಿ' ರುದ್ರಾಂಬೆಯ ಸಮೇತರಾಗಿ ಬಂದು ಸಾಂತ್ವನಗೊಳಿಸುತ್ತಾರೆ. ಚೌಡಪ್ಪ ಭದ್ರಪ್ಪರೆಂಬ ಅವಳ ಇಬ್ಬರು ಪುತ್ರರೂ ಜಗತ್ತಿನಲ್ಲಿ 'ಜಸವಡೆದಪ್ಪುದು, ತಪ್ಪದು' ಎಂದು ಭವಿಷ್ಯ ನುಡಿದ ಮೇಲೆ ಸಮಾಧಾನಿಯಾದ ಬಸವಾಂಬೆಯು ತನ್ನ ಎರಡೂ ಮಕ್ಕಳುಗಳ ಕೂಡೆ ಗುರುವಿಗೆ ನಮಸ್ಕರಿಸಲು ಗುರು ಆಶೀರ್ವದಿಸುತ್ತಾನೆ. 'ಇತ್ತಲ್ ಬಸವಾಂಬೆಯನುದಿನಂ ಮನೆಗೆಲಸಮಂ ಸಾಗಿಸುತ್ತುಂ ಮಠದಯ್ಯನವರಿಂ ಮಕ್ಕಳ್ಗಳನೋದಿಸುತ್ತುಂ ಶಿವಾಚಾರ ಸಂಪನ್ನೆ, ಸಚ್ಚಾರಿತ್ರದಿನಚ್ಚಳಿಯದೆ ನಿಚ್ಚಂ ನಡೆವುತ್ತ ಮಿಂತು ಕೆಲವುಂ ಬರಿಸಂ ಪೋಗೆವೋಗೆ' ಎಂಬಲ್ಲಿಗೆ ಕೃತಿ ನಿಂತಿದೆ. ಇದೊಂದು ಅಪೂರ್ಣ ಐತಿಹಾಸಿಕ ಕಾವ್ಯ.

ಗಂಗಾದೇವಿಯು ತನ್ನ ಸಂಕೋಚ ಮಿಶ್ರಿತ ವಿನೀತ ಭಾವವನ್ನು "ಕನ್ನಡದ ಕಬ್ಬಂಗಳೆನಿತೋ ಉನ್ನತಿಯೊಳನುಪಮತೆ ಪಡೆದಿರೆ ಇನ್ನಿವಳ ನವಕೃತಿಯು ಮನ್ನಣೆವಡೆವುದೇನವರೊಳ್। ಎನ್ನದಿರಿ ಕವಿಕೀರ್ತಿ ಕಾಮಿತವೆನ್ನ ಹವಣಿಕೆಯಲ್ಲವಿದು ಸಂಪನ್ನ ಕೆಳದೀ ರಾಜಚರಿತಮಪೂರ್ವಮೆಂದೊರೆವೆಂ॥ ಎಂದು ವ್ಯಕ್ತಪಡಿಸಿದ್ದಾಳೆ.

**ಸ್ವೇಷ್ಟವಹ ಹೆಣ್ಣಿಂಗೆ ಮಣ್ಣಿಗೆ**
**ಕಷ್ಟಪಟ್ಟುರು ಕಾದುಮಡಿದ**
**ಭ್ರಷ್ಟ ಭವಿಗಳ ಪೊಗಳ್ದ ಕೃತಿ ತಾನಲ್ಲವೀಕೃತಿಯು।**
**ಸೃಷ್ಟಿಯೊಳಗಿಹ ಸಕಲ ಧರ್ಮ ಪ್ರ**
**ತಿ ಷ್ಠೆಗಾಗಿಯೆ ನಾಡಪೊರೆವ ವ**
**ರಿಷ್ಠ ಅವರತಿ ಶೀಲ ಕೆಳದೀ ರಾಜರಾಚರಿತೆ॥**

ಹೀಗೆ ಶ್ರೇಷ್ಠ ಕೆಳದ ರಾಜರಾಜಚರಿತೆಯನ್ನು ಕುರಿತು ಹೇಳಿರುವ ತನ್ನ ಕೃತಿಯು ಮತಿಹೀನರಿಗಲ್ಲ ಎಂದಿದ್ದಾಳೆ.

**ಕೃತಿಯು ಮತಿಹೀನಂಗೆ ಪೊಲ್ಲಂ**
**ಸತಿಯು ರತಿಹೀನಂಗೆ ಸಲ್ಲಂ**
**ಸ್ಥಿತರುಮಪ್ಪೊಡೆ ತಜ್ಞರವರೀರ್ಷ್ಯೆಯೊಳೆ ಬಾಳ್ವರಹ।**
**ಕೃತಿ ಸತಿಗೆ ಗತಿಯೆಂತೆನಲ್ ಕೇಳ್**
**ನುತ ವಿಮತ್ಸರನೊರ್ವನೆಲ್ಲಿಯೊ**
**ಕ್ಷಿತಿಯೊಳಿಹನಾ ರಸಿಕನೇ ಕೃತಿಸತಿಗೆ ಗತಿಯು ಕಣಾ॥**

ಕವಯಿತ್ರಿ ಗಂಗಾದೇವಿಯು ತನ್ನ ಕೃತಿಯ ಶ್ರೇಷ್ಠತೆಯನ್ನು ಹೇಳುತ್ತಾ, ತನ್ನ ಕಾವ್ಯಕ್ಕೆ ಅಷ್ಟಾದಶವರ್ಣನೆಯ ಅವಶ್ಯಕತೆ ಇಲ್ಲವೆಂದು "ದೊರೆವಡೆದ ಪದಿನೆಂಟು ಬಣ್ಣನೆ ಗಿರವನೀಯದೆ ವಿಮಲ ಕಥೆಯನೆ ಬರೆಯಲಾಂ ಮನದಂದು ಕೃತಿಯಿದನೆಸಗತೊಡಗಿದೆನು।" ಹದಿನೆಂಟು ವರ್ಣನೆಗಳಿಗೆ ಅವಕಾಶಕೊಡದೆ ತನ್ನ ಕೃತಿಯಲ್ಲಿ ಕೇವಲ ಪವಿತ್ರವಾದ ಕೆಳದೀ ರಾಜರ ಕಥೆಯನ್ನು ಬರೆಯಲು ತೀರ್ಮಾನಿಸಿದಳಂತೆ. ಇವಳ ಪ್ರಕಾರ "ಸರಸ ಸುಂದರ ಸತ್ಯಕಥೆಗೇತಕ್ಕೆ ವರ್ಣನೆ" (೧–೩೧)

ನವರಸದ ಫಲವನ್ನು ವಿದ್ವಜ್ಜನರಿಗೆ ಉಣಬಡಿಸುವ ಕಾವ್ಯವೆಂಬ ವೃಕ್ಷವು ಪ್ರತಿಭೆಯೆಂಬ ಬೀಜದಿಂದ ಮೊಳೆತು ಬೆಳೆಯುವುದು. ಇದಕ್ಕೆ ಭವ್ಯಭಾಷೆ ಯೆಂಬ ಹದವಾದ ನೆಲೆ, ಸುಸಂಸ್ಕೃತಿಯ ಮಳೆನೀರು ಅಗತ್ಯವೆನ್ನುತ್ತಾ,

ಭೂಮಿ, ಮಳೆ, ದಿವ್ಯ ಬೀಜ ಒಂದು ಮರಕ್ಕೆ ಹೇಗೆ ಅವಶ್ಯಕವೋ ಕಾವ್ಯಕ್ಕೆ ಭಾಷೆ, ಸಂಸ್ಕೃತಿ, ಪ್ರತಿಭೆಯ ಅತ್ಯಗತ್ಯವನ್ನು ಸೊಗಸಾಗಿ ತಿಳಿಸಿದ್ದಾಳೆ.

**ಭವ್ಯಭಾಷಾ ಭೂಮಿಯೊಳ್ ಸಂ**
**ಭಾವ್ಯಶೀಲ ಸುವೃಷ್ಟಿಗರೆಯಲು**
**ದಿವ್ಯ ಪ್ರತಿಭಾಬೀಜವದರಿಂ ಮೊಳೆತು ಸಸಿಯಾಗಿ**
**ಕಾವ್ಯ ಕಲ್ಪದ್ರುಮಮದೆನಿಪುದು**
**ನವ್ಯನವರಸ ಫಲಮನೀವುದು**
**ಭಾವ್ಯ ವಿಬುಧರ್ಗೆಂದುವುಂ ತಾಂ ಸೇವ್ಯಮಾಗಿಹುದು॥**

ಕಾವ್ಯಪ್ರತಿಭೆ ಎಂಥದೆಂದು ತಿಳಿಸುತ್ತಾ ಕಥೆಗೆ ಒಪ್ಪುವಂಥ ವಸ್ತುಚಿತ್ರ ಹೆಣೆಯುವ ಜಾಣ್ಮೆ, ಅರ್ಥೋಚಿತ ಶಬ್ದಗಳ ಪ್ರಯೋಗ, ರಸ ಅಲಂಕಾರಾದಿಗಳಿಂದ ಕೂಡಿದ ಭಾವಾಭಿವ್ಯಕ್ತಿ ಇವೆಲ್ಲ ಕೂಡಿರುವುದೇ ಪ್ರತಿಭೆ ಎಂದು ತಿಳಿಸಿದ್ದಾಳೆ.

**ಕಥನಕೊಪ್ಪುವ ವಸ್ತುಚಿತ್ರೋ**
**ಚಿತ ಸುಶಬ್ಧಾರ್ಥಂಗಳಂ ಕವಿ**
**ಮತ ರಸಾಲಂಕಾರ ಭಾವಾದಿಗಳನಾಕ್ಷಣಕೆ ।**
**ಕಥಿಸುವನೊಳು ಮಿಂಚಿನಂತುರೆ**
**ಪ್ರತಿಫಲಿಸಿ ಭಾಸಿಸುವುದಾವುದೊ**
**ಪ್ರತಿಭೆಯದು ಕವಿಜನರ ಕಾಮಿತವೀವ ಸುರತರುವು॥**

ಭಾಮಿನಿಯು ಆಕೆಗೆ ಸಿದ್ಧಿಸಿಲ್ಲ ಎಂದು ವಿಮರ್ಶಿಸಿರುವ ಸಾ.ಶಿ.ಮ ಅವರು "ಗದ್ಯವು ಮಾತ್ರ ಸೊಗಸಾದ ಪ್ರೌಢವಾದ ಶೈಲಿಯಲ್ಲಿ ರಚಿತವಾಗಿದೆ" ಎಂಬ ಮೆಚ್ಚುಗೆ ಸೂಸಿದ್ದಾರೆ (ಪು.೪೫೨)

ಕಾವ್ಯದಲ್ಲಿ "ಆನೆಯಾ ಘನರೂಪ ಕಾಣುತೆ ಹೀನ ಶ್ವಾನವು ಬೊಗುಳೆ ಬಳಲ್ವುದು ಆನೆಗದರಿಂದಾದ ಹಾನೆಯದೇನು" ; "ಪುರದ ಗೌಡನು ಮಾಡದುದನವ ನುರುವ ಕಂಬಳಿ ಮಾಳ್ಪುದೇ" ಎಂಬ ಮೊದಲಾದ ನಾಣ್ನುಡಿಗಳನ್ನು ಕಾಣಬಹುದಲ್ಲದೆ, ಸಾಧಾರಣವಾಗಿ ಮನೆಯ ಹೆಂಗಸರು ಹಳಿವಂತೆ "ಹಾಳ್ ವಿಧಿಗೆ ದಯೆಯಿಲ್ಲ ದಾಕ್ಷಿಣ್ಯಮಿಲ್ಲ" ಎಂಬ ಆಡುಮಾತಿನ ಬಳಕೆಯಿದೆ. ಬಸವಾಂಬೆಗೆ ರುದ್ರಮುನಿಸ್ವಾಮಿಗಳು ಧೈರ್ಯಗೊಟ್ಟಮೇಲೆ "ಹಿಮವುಡುಗಿದ ಕಮಲದಂತೆ, ತಮವಡಗಿದ ನಯನದಂತೆ, ನೇಸರ್ ತೊಲಂಗಿದ ನಕ್ಷತ್ರದಂತೆ, ರಾಹುವೋಸರಿಸಿದ ರೋಹಿಣೀ ಪ್ರಿಯನಂತೆ" ಪ್ರಸನ್ನವದನಳಾದಳು ಎಂಬ ಮೊದಲಾದ ಸಾಲಿನಲ್ಲಿ ಬಳಕೆಯಾದ ಅಲಂಕಾರ ಸೊಗಸಾಗಿದೆ.

'ಕೆಳದಿ ರಾಜಾಭ್ಯುದಯಮೆಂಬೀ ಲಲಿತ ನಾಮಂ, ಕೃತಿಪತಿ ಕೆಳದಿ ರಾಜಕುಲಾಬ್ಜರವಿ ರಾಮೇಶ ಲಿಂಗಕಣಾ, ಇಳೆಯೊಳಿದನೊರೆದವಳದಾರೆನೆ' ಕೆಳದಿ ರಾಜಾನ್ವಯದ ನಿಜಗುರು ಕೆಳದಿ ವರ ಮಠದ ಚೆನ್ನವಿರಾಚಾರ್ಯನರ್ಧಾಂಗಿ' ಎಂದಿದ್ದಾಳೆ.

ಈ ಕೃತಿಯನ್ನು ಕುರಿತು ಇದರ ಸಂಪಾದಕರಾದ ಸಾ.ಶಿ.ಮರುಳಯ್ಯನವರು "ಕೆಳದಿ ರಾಜಾಭ್ಯುದಯಮ್ ಒಂದು ಐತಿಹಾಸಿಕ ಗ್ರಂಥ. ಅಪೂರ್ಣಗ್ರಂಥವಾಗಿದ್ದರೂ, ಕೃತಿಕಾರ್ತಿಯ ಬಗ್ಗೆ ಸಂದೇಹವಿದ್ದರೂ, ಪ್ರಕಟವಾದ ಕೃತಿಯ ಬಗೆಗೆ ತಿರಸ್ಕಾರ ತೋರುವಂತಿಲ್ಲ. ಏಕೆಂದರೆ ಸಿಕ್ಕಿರುವ ಸ್ವಲ್ಪವೇ ಭಾಗದಲ್ಲಿ ಉತ್ತಮ ಕಾವ್ಯಗುಣಗಳು ಮೆರೆದಿವೆ" (ಪು.೪೫೧) ಎಂದಿದ್ದಾರೆ.

ಕೃತಿಯ ಆರಂಭದ ಕೆಲವು ಪದ್ಯಗಳೂ ಲುಪ್ತವಾಗಿರಬಹುದು. ಸಾಧಾರಣವಾಗಿ ಕನ್ನಡದ ಕಾವ್ಯಗಳೆಲ್ಲ 'ಶ್ರೀ' ಯಿಂದ ಆರಂಭ ವಾಗುವಂತೆ ಈ ಕೃತಿಯು ಆರಂಭವಾಗಿಲ್ಲ. ಅಲ್ಲದೆ ಆರಂಭದಲ್ಲಿ ಕಂಡುಬರುವ ಗಣಪತಿಯ ಸ್ತುತಿಯೂ ಇಲ್ಲ. ಶಿವ, ಗೌರಿ, ಷಣ್ಮುಖ, ವಿಶ್ವೇಶ, ಭೃಂಗಿ, ಗುರುಪರಂಪರೆಯನ್ನು ಸ್ತುತಿಸಿರುವ ಕವಯತ್ರಿಯು ಗಣಪತಿಯನ್ನು ಸ್ತುತಿಸದಿರಳು.

ಗಂಗಾದೇವಿಯ ಈ ಕೃತಿಯನ್ನು ಮತ್ತಾವ ಕವಿಯು ಉಲ್ಲೇಖಿಸಿಲ್ಲ ವೆಂಬುದೆ ಇದರ ಪ್ರಾಚೀನತೆಯ ಕುರಿತದ ಅನುಮಾನಕ್ಕೆ ಕಾರಣವಾಗಿದೆ[೨೧]. ಈ ಕೃತಿಯನ್ನು ಇತರರು ಉಲ್ಲೇಖಿಸಿಲ್ಲವೆಂಬುದು ಮಾನದಂಡವಾಗಲಾರದು. ಇತ್ತೀಚೆಗೆ ದೊರೆತ ಕೆಳದಿಯ ಅರಸು ಬಸವಪ್ಪನಾಯಕನ ಕೃತಿ 'ಕಾಳಿಕಾ ಕಾಂಡ' ಕಾವ್ಯವನ್ನು ಕುರಿತಾಗಿಯೂ ಮಿಕ್ಕಾವ ಕೆಳದಿ ಅರಸರ ಕಾಲದ ಕೃತಿಗಳೂ ಉಲ್ಲೇಖಿಸಿಲ್ಲ. ಅಲ್ಲದೆ ಸಾಹಿತ್ಯ ಚರಿತ್ರೆಗಳಲ್ಲಿಯೂ ಇದರ ಪ್ರಸ್ತಾಪವಿಲ್ಲ. ೨೦೦೧ರಲ್ಲಿ ಮುದ್ರಣಗೊಂಡಿರುವ ಸಾ.ಶಿ.ಮ ಅವರ ಪಿಹೆಚ್.ಡಿ ಕೃತಿ 'ಕೆಳದಿಯ ಅರಸರು ಮತ್ತು ಕನ್ನಡ ಸಾಹಿತ್ಯ' ಸಂದರ್ಭದಲ್ಲಿಯು ಕೂಡ 'ಕಾಳಿಕಾ ಕಾಂಡ' ಬೆಳಕಿಗೆ ಬಂದಿರಲಿಲ್ಲ. ಹೊಸ ಸಂಶೋಧನೆಗಳಿಂದ ಲಭಿಸುವ ಮಾಹಿತಿಗಳನ್ನು ಸಾಹಿತ್ಯ ಚರಿತ್ರೆ ಹಾಗೂ ಆ ಸಂಬಂಧಿತ ಮತ್ತಿತರ ಕೃತಿಗಳಲ್ಲಿ ಉಲ್ಲೇಖಿಸುವ ಮೂಲಕವಷ್ಟೇ ಪ್ರಸಿದ್ಧಿಗೆ ತರಲು ಸಾಧ್ಯ.

ಗಂಗಾದೇವಿಯ ಈ ಕೃತಿಯು ಅಪೂರ್ಣಗೊಳ್ಳಲು ಅನೇಕ ಕಾರಣಗಳನ್ನು ಊಹಿಸಬಹುದು. ಬಸವಪ್ಪನಾಯಕ ಹಾಗೂ ಅವನ ಪತ್ನಿಯ ಅಪೇಕ್ಷೆಯನ್ನು 'ಮಕ್ಕಳ ಸಂತೋಷ' ಎಂದು ಹೇಳಿರುವುದರಿಂದ ಈಕೆ ಬಸವಪ್ಪನಾಯಕನ ತಾಯಿ ಚನ್ನಮ್ಮಾಜಿಯ ಪ್ರಾಯದವಳಿದ್ದಿರಬೇಕು. ಈ ಕಾವ್ಯ ರಚನೆಗೆ ತೊಗಡುವಾಗಲೇ ಇಳಿವಯಸ್ಸಿನವಳಿದ್ದು, ಅರ್ಧದಲ್ಲಿ ಮರಣಸಂಭವಿಸಿದ್ದು ಕಾವ್ಯ ಅಪೂರ್ಣವಾಗಿಯೇ ಉಳಿದಿರಬಹುದು. ದೊರೆತಿರುವ ಏಕೈಕ ಪ್ರತಿಯು ಕಾಗದದ ಪ್ರತಿಯಾಗಿರುವುದರಿಂದ ಇದು ಕವಯಿತ್ರಿಯ ಸ್ವಹಸ್ತಾಕ್ಷರದ ಕೃತಿಯಲ್ಲ. ಇದರ ಮೂಲ ಕೃತಿಯನ್ನು ಲಿಪಿಕಾರ ಸಂಪೂರ್ಣವಾಗಿ ಪ್ರತಿಮಾಡದೆ ಅರ್ಧದಲ್ಲಿಯೇ ನಿಲ್ಲಿಸಿರಬಹುದು. ಆದರೆ ಇವಳ ಉಲ್ಲೇಖವು ಮಠಕ್ಕೆ ಸಂಬಂಧಿಸಿದ ದಾನಪತ್ರ, ಶಾಸನದಲ್ಲಿ ದೊರಕುವುದರಿಂದ ಹಾಗೂ ಇವಳು ಕೆಳದಿಯ ಅರಸು ಬಸವರಾಜೇಂದ್ರನ ರಾಜಗುರುವಿನ ಪತ್ನಿ ಎಂಬುದು ಸ್ಪಷ್ಟವಾಗಿರುವುದು ಹಾಗೂ ಅಪೂರ್ಣವಾದರೂ ದೊರಕಿರುವ ಇವಳ ಕೃತಿಯಲ್ಲಿನ ಇವಳ ಕೆಲವು ವಿಚಾರಗಳು, ಈಕೆಯು ಕೆಳದಿ ಅರಸರಕಾಲದ ಅಪೂರ್ವ ಕವಯತ್ರಿ ಎಂಬುದನ್ನು ತಿಳಿಸುತ್ತದೆ.

ಗಂಗಾದೇವಿಯ ಈ ಅಪೂರ್ಣವಾದ ಕೃತಿಯು ಮುಂದೊಂದುದಿನ ಸಮಗ್ರವಾಗಿ ದೊರೆತು ಪ್ರಕಟವಾದಲ್ಲಿ ಕೆಳದಿಯ ಇತಿಹಾಸ ಹಾಗೂ ಕವಯತ್ರಿ ಗಂಗಾದೇವಿಯ ಕುರಿತಂತೆ ಮತ್ತಷ್ಟು ಹೊಸ ವಿಚಾರಗಳು ದೊರಕುವ ಸಾಧ್ಯತೆ ಇದೆ.

### ಕೆಳದಿ ಚೆನ್ನಮ್ಮಳ ಕಾಲದ ಸಾಹಿತ್ಯ

ಕೆಳದಿಯ ಹಿರಿಯ ಸೋಮಶೇಖರ ನಾಯಕನ ಮಡದಿ ಚೆನ್ನಮ್ಮ. ಶಾ.ಶ ೧೫೯೪ರಿಂದ ಶಾ.ಶ೧೬೨೦ರ ವರೆಗೆ (ಕ್ರಿ.ಶ.೧೬೭೨-೧೬೯೭) ಕೆಳದಿಯನ್ನು ಸಾಂಪ್ರದಾಯಿಕವಾಗಿ ಪಟ್ಟಾಭಿಷಿಕ್ತಳಾಗಿ ಆಳ್ವಿಕೆ ನಡೆಸಿದ ರಾಣಿ.

ಆಡಳಿತ, ವ್ಯಾಪಾರ, ಯುದ್ಧ ಎಲ್ಲ ಕ್ಷೇತ್ರದಲ್ಲಿಯೂ ಚಾತುರ್ಯ ಮೆರೆದು ದಕ್ಷ ಆಡಳಿತಗಾರ್ತಿಯಾದ ರಾಣಿ ಚೆನ್ನಮ್ಮ ವಿದ್ವಾಂಸರು ಹಾಗೂ ಕವಿಗಳ ಪೋಷಣೆಗೂ ಹೆಸರುವಾಸಿಯಾಗಿದ್ದಳು. ಬುಧಜನಾಶ್ರಿತ ರಾಣಿಯ ಕೀರ್ತಿಯು ಅನ್ಯರಾಜ್ಯಗಳಲ್ಲಿಯೂ ಹಬ್ಬಿತ್ತು. ಗೋಲ್ಕೊಂಡದ ನವಾಬರ ಆಸ್ಥಾನದಲ್ಲಿದ್ದ **ಪೆದ್ದೂರ ಲಿಂಗಪ್ಪನು** ರಾಣಿ ಚನ್ನಮ್ಮಾಜಿಯ ಕೀರ್ತಿಯನ್ನು ಕೇಳಿ ಗೋಲ್ಕೊಂಡವನ್ನು ತ್ಯಜಿಸಿ, ಆಶ್ರಯಬೇಡಿ ಕೆಳದಿ ರಾಜ್ಯಕ್ಕೆ ಬರುತ್ತಾನೆ. ಈ ಪ್ರಕರಣವನ್ನು ಕೆಳದಿ ನೃಪವಿಜಯವು ದಾಖಲಿಸಿದೆ. **"**ಪೆದೂರ ಲಿಂಗಪ್ಪಂ ಬಿಗಡಿಸಿ ಬಂದಿರಲಾತನಂ

ಬಸವಾಪಟ್ಟಣದೊಳಿಟ್ಟು ಸಂತಸಂ ಬಡಿಸಿ" (ನಮಮಾಶ್ವಾಸ) ಎಂದು ತಿಳಿಸುತ್ತಾ ಕವಿಯು, ಆಶ್ರಯ ಬೇಡಿ ಬಂದಾತನನ್ನು ರಾಣಿಯು ಬಹು ಪ್ರಸನ್ನತೆಯಿಂದ ಬರಮಾಡಿಕೊಂಡು ಬಸವಾಪಟ್ಟಣದಲ್ಲಿ ನೆಲೆಗೊಳಿಸಿದಳೆಂದು ವಿವರಣೆ ನೀಡಿದ್ದಾನೆ.

'ಶುಕಸಪ್ತತಿ' ಕೃತಿಯನ್ನು ರಚಿಸಿರುವ **ಶರಜಾನಾಗಪ್ಪಯ್ಯ** ಕೂಡ ಅರಸಿ ಚೆನ್ನಮ್ಮಳ ಕಾಲದಲ್ಲಿ ಅಧಿಕಾರಿಯಾಗಿದ್ದವನು. ಕೆಳದಿ ನೃಪವಿಜಯದಲ್ಲಿ ಚೆನ್ನಮ್ಮಳ ಕಾಲದಲ್ಲಿದ್ದವರ ಪಟ್ಟಿಯನ್ನು ನೀಡಲಾಗಿದೆ[೨೨]. ಅದರಲ್ಲಿ ಶರಜಾನಾಗಪ್ಪಯ್ಯನ ಹೆಸರು ಉಕ್ತವಾಗಿದೆ. ಅಲ್ಲದೆ ಕೆಳದಿ ನೃಪವಿಜಯ ತಿಳಿಸುವಂತೆ "ಉಭಯ ಸಂಸ್ಥಾನಗಳ್ಗಮನ್ಯೋನ್ಯ ವಿರೋಧಂ ಪುಟ್ಟಿ ವರ್ತಿಸದಂತು ನಿಯೋಗಿ ಶರಜಾನಾಗಪ್ಪಯ್ಯನ ಮುಖದೊಳ್ ಕ್ರಿಯಾಪೂರ್ವಕಮಾಗಿ ಭಾಷಾಪತ್ರಿಕೆಯಂ ರಚಿಯಿಸಿ ನಿರ್ವೈರಮಮಂ ನಿಮಿರ್ಚಿಸಿದನ್" (ಪು೧೫೧) ಎಂದು ತಿಳಿಸಿರುವಂತೆ ಶರಜಾನಾಗಪಯ್ಯನು ಅರಮನೆಯ ನಿರೂಪ ಮೊದಲಾದ ರಚನೆಗಳಲ್ಲಿ ಸಹಾಯಕನಾಗಲು ನಿಯೋಜಿತನಾಗಿದ್ದವನು. ಈತನು ಚೆನ್ನಮ್ಮಳ ಮಗ ಬಸವಭೂಪಾಲನ ಆಳ್ವಿಕೆಯ ಕಾಲದಲ್ಲಿ 'ಶುಕಸಪ್ತತಿ' ಎಂಬ ಷಟ್ಪದಿಕಾವ್ಯವನ್ನು ರಚಿಸಿದ್ದಾನೆ.

ಸಾಹಿತ್ಯ ಕ್ಷೇತ್ರಕ್ಕೆ ಕೆಳದಿ ಚೆನ್ನಮ್ಮಳ ಅಮೂಲ್ಯ ಕೊಡುಗೆ ಎಂದರೆ ಅವಳ ಸಾಕುಮಗ ಬಸವಪ್ಪನಾಯಕ. ಇವನು ಕನ್ನಡ–ಸಂಸ್ಕೃತ ಎರಡೂ ಭಾಷೆಯಲ್ಲಿ ಪಂಡಿತನಾಗಿದ್ದು, ಸಾಹಿತ್ಯ ರಚಿಸಿದ್ದಾನೆ. ಶಿವತತ್ವ ರತ್ನಾಕರ, ಸುಭಾಷಿತ ಸುರದ್ರುಮ ಎಂಬ ಸಂಸ್ಕೃತ ಕೃತಿಗಳೊಂದಿಗೆ, ಸೂಕ್ತಿ ಸುಧಾಕರ, ಕರ್ನಾಟಕ ಕಾಳಿಕಾಕಾಂಡ ವೆಂಬ ಕನ್ನಡ ಕೃತಿಗಳನ್ನೂ ರಚಿಸಿದ್ದಾನೆ.

ಬಸವಪ್ಪನಾಯಕನ 'ಕರ್ನಾಟಕ ಕಾಳಿಕಾ ಕಾಂಡ' ಕೃತಿಯು ಪುರಾಣದಲ್ಲಿ ಉಕ್ತವಾಗಿರುವ ಕಾಳಿಕಾದೇವಿಯ ಕಥೆಯನ್ನು ವಸ್ತುವನ್ನಾಗಿರಿಸಿಕೊಂಡಿದ್ದರೂ ರಾಣಿ ಚೆನ್ನಮ್ಮಳನ್ನು ಕಾಳಿಕಾದೇವಿಗೆ ಸಮೀಕರಿಸಿ ರಚಿತವಾಗಿರುವ ವಿಶಿಷ್ಟವಾದ ಕಾವ್ಯವಾಗಿದೆ. ಇದರೊಂದಿಗೆ ಈತನೇ ರಚಿಸಿರುವ 'ಶಿವತತ್ವ ರತ್ನಾಕರ' ಕೃತಿಯಲ್ಲಿಯೂ ಕೂಡ ಚೆನ್ನಮ್ಮಳನ್ನು ಕುರಿತಾಗಿ ಕೆಲವು ಅಪೂರ್ವ ಮಾಹಿತಿಯನ್ನು ತಿಳಿಸಿಕೊಟ್ಟಿದ್ದಾನೆ.

**ಕವಿ ಬಸವಪ್ಪನಾಯಕ :** ಕವಿ ಬಸವಪ್ಪನಾಯಕ ಕೆಲವೆಡೆ ಬಸವಭೂಪ, ಬಸವರಾಜೇಂದ್ರ, ಬಸವರಾಜ ಎಂದೂ ಉಲ್ಲೇಖಿತನಾಗಿದ್ದಾನೆ. ಇವನು ಅರಸಿ ಚೆನ್ನಮ್ಮಳ ದತ್ತು ಪುತ್ರ. ಇವನು ತನ್ನ ಕೃತಿಯಲ್ಲಿ "ಅಸ್ಮಾಕಂ ಸರ್ವವಿದ್ಯಾಸು ಕಾರಯಂತಾ ಪರಿಶ್ರಮಮ್" ಎನ್ನುತ್ತಾ ತನಗೆ ಎಲ್ಲಾ ವಿದ್ಯೆಗಳಲ್ಲಿಯೂ ಪರಿಣತೆಯನ್ನು ಕೊಡಿಸಿದಳೆಂದು ಚೆನ್ನಮ್ಮನನ್ನು ಕೃತಜ್ಞತೆಯಿಂದ ಸ್ಮರಿಸಿದ್ದಾನೆ.

ದಕ್ಷ ನಾಯಕ ಹಾಗೂ ವಿದ್ವತ್ಪೂರ್ವಕವಾದ ಹಲವಾರು ಕೃತಿಗಳನ್ನು ರಚಿಸಿರುವ ಬಸವಪ್ಪನಾಯಕನಿಗೆ ಸ್ಫೂರ್ತಿ ಹಾಗೂ ಮಾರ್ಗದರ್ಶಿ ಆತನ ಸಾಕುತಾಯಿ ಕೆಳದಿಯ ರಾಣಿ ಚೆನ್ನಮ್ಮ. ಈ ವಿಚಾರವನ್ನು ಸ್ವತಃ ಬಸವಪ್ಪನಾಯಕನೇ ಶಿವತತ್ತ್ವರತ್ನಾಕರದ ಎಂಟನೆಯ ಕಲ್ಲೋಲದಲ್ಲಿ ಈ ರೀತಿಯಾಗಿ ತಿಳಿಸಿದ್ದಾನೆ. "**ಉಕ್ತಂ ತ್ವಂ ನಾನ್ಯಥಾ ಬ್ರೂಯಾಃ ಕ್ವಾಪಿ ರೌರ್ಯಂ ನ ಸಂತ್ಯಜ। ಮಾ ಮುಂಚ ಮಧುರಾಲಾಪಂ ನ ಬ್ರೂಯಾದ್ ಧೃದಯಂ ಕಶೇ॥ ಅಮಾರ್ಗೇ ನಪದಂ ಕುರ್ಯಾಃ ಸ್ನೇಷು ಭೇದಂ ನ ಕಾರಯ। ಪಾಪಂ ವಿಮುಂಚ ಸುಕೃತಂ ಕುರುಂ ಶಂಭೋಃ ಪದಂ ಭಜ॥...**" ಇದರ ಕನ್ನಡಾನುವಾದ ಹೀಗಿದೆ "ನುಡಿದದ್ದನ್ನು ಬದಲಿಸದಿರು, ಎಂದಿಗೂ ಎಲ್ಲಿಯೂ ಕರ್ತವ್ಯಚ್ಯುತನಾಗದಿರು. ಸರ್ವರೂ ಮಧುರವಾಗಿ ಮಾತನಾಡುವಂತೆ ಎಚ್ಚರವಹಿಸು, ದುಷ್ಟರಿಗೆ ನಿನ್ನ ಹೃದ್ಗತವನ್ನು ತೋರದಿರು. ದುರ್ಮಾರ್ಗ ಹಿಡಿಯದಿರು, ಸ್ವಜನರಲ್ಲಿ ಭೇದವೆಣಿಸದಿರು, ಪಾಪಕಾರ್ಯ ಮಾಡದಿರು, ಸತ್ಕಾರ್ಯಗಳನ್ನು ಮಾಡು, ಸದಾ ಶಂಭುವಿನ ಪಾದಗಳನ್ನು ಧ್ಯಾನಿಸು, ಸಕಲಜೀವಿಗಳಲ್ಲಿ ದಯೆತೋರು. ಆಶ್ರಯ ಬಯಸಿ ಬಂದವರಿಗೆ ರಕ್ಷಣೆ ನೀಡು. ಪರರನ್ನು ನಿಂದಿಸದಿರು, ಪ್ರಪಂಚದಲ್ಲಿ ಆತ್ಮ ಸಂಯಮ ಇಲ್ಲದೆ ನಡೆಯದಿರು, ಕಾಮಾದಿ ದೋಷಗಳನ್ನು ಜಯಿಸು ಮತ್ತು ಹುಟ್ಟುಸಾವುಗಳಿಂದ ಮುಕ್ತಿ ಪಡೆ, ವಿಪತ್ಕಾಲದಲ್ಲಿ ಕೂಡ ಧೃತಿಗೆಡದಿರು, ಸಿರಿತನ

ಬಂದಾಗ ಸೊಕ್ಕದಿರು, ತತ್ವವನ್ನು ಕುರಿತು ಚಿಂತಿಸು, ಅದ್ವೈತ ತತ್ವದ ತಿರುಳನ್ನು ತಿಳಿದುಕೊ, ಸುಸಂಧಿಯನ್ನು ಕಳೆದುಕೊಳ್ಳದಿರು, ವೇದಜ್ಞರನ್ನು ಸನ್ಮಾನಿಸು, ಜೀವನವನ್ನು ಕನಸೆಂದು ತಿಳಿ, ನಾನು ಯಾರು? ಎಂಬ ಪ್ರಶ್ನೆಯನ್ನು ವಿವೇಚಿಸು, ನೀನು ನಗೆಗೀಡಾಗದಂತೆ ನಗು, ಉತ್ತಮವಾಗಿ ಮಾತನಾಡು, ಜನಸ್ತುತಿ ಮಾಡುವ ಹಾಗೆ ನಡೆ, ಪುನರ್ಜನ್ಮತಾವಾದ ಮಾರ್ಗವನ್ನು ಅನುಸರಿಸು, ಶಿವನನ್ನು ವಿವಿಧ ರೀತಿಯಲ್ಲಿ ಪೂಜಿಸು ಮತ್ತು ಅನಂತ ಆನಂದವನ್ನು ಅನುಭವಿಸು" ಎಂದು ಹಲವು ಬಗೆಯಲ್ಲಿ ತಾಯಿ ಚೆನ್ನಮ್ಮಳು ಉಪದೇಶಿಸಿದಂತೆ ಧರ್ಮ ಪಾಲಿಸಿದ್ದನೆಂದು ಹೇಳಿಕೊಂಡಿದ್ದಾನೆ.

**ಶಿವತತ್ತ್ವರತ್ನಾಕರ:** ವಿಶ್ವಕೋಶದ ಮಾದರಿಯಲ್ಲಿ ರಚಿತವಾದ ಈ ಕೃತಿಯು, ಸಾಮಾನ್ಯ ಲೌಕಿಕದ ಸಂಗತಿಯಿಂದ ಹಿಡಿದು ಅಧ್ಯಾತ್ಮ, ಆಗಮ ವಿಚಾರದವರೆಗೂ ಎಲ್ಲ ಮಾಹಿತಿಯನ್ನೂ ಒಳಕೊಂಡಿದೆ. ಇಲ್ಲಿನ ಅಧ್ಯಾಯಗಳನ್ನು ಕಲ್ಲೋಲಗಳೆಂದೂ, ಅಧ್ಯಾಯದ ಕಿರು ಘಟಕಗಳನ್ನು ತರಂಗಗಳೆಂದೂ ಕವಿ ಬಸವಪ್ಪನಾಯಕ ಹೆಸರಿಸಿದ್ದಾನೆ. ಈ ಕೃತಿಯು ಒಟ್ಟು ೯ ಕಲ್ಲೋಲ, ೧೦೮ ತರಂಗಗಳಲ್ಲಿ ಸುಮಾರು ೧೩೦೦೦ ಶ್ಲೋಕಗಳಿಂದ ರಚಿತವಾಗಿರುವ ಬೃಹದ್ಗ್ರಂಥ. ಇದರಲ್ಲಿ ಐತಿಹಾಸಿಕ ವಿಚಾರವೂ ಸೇರಿದ್ದು ೮ನೆಯ ಕಲ್ಲೋಲದ ಐದನೆಯ ತರಂಗದಿಂದ ಎಂಟನೆಯ ತರಂಗದವರೆಗೂ ರಾಣಿ ಚೆನ್ನಮ್ಮಳ ಕುರಿತಾದ ವಿವರಗಳು ರಚಿತವಾಗಿದೆ.

**ಮೂಕಾಂಬಿಕಾಂಶಸಂಭೂತಾಂ ಚನ್ನಾಂಬಾಖ್ಯಾಂ ಮನೋಹರಾಮ್ ।**
**ಭೂಷಿತಾ ಸಾ ದ್ವಿತೀಯೇದ ರಾಜ್ಯಶ್ರೀಃ ಹೃದ್ಯತಾಮಗಾಗತ್ ।** ಮೂಕಾಂಬಿಕೆಯ ಅಂಶದಿಂದ ಹುಟ್ಟಿದ, ಮನೋಹರಿಯಾದ ಚೆನ್ನಾಂಬೆಯು ದ್ವಿತೀಯ ರಾಜ್ಯಲಕ್ಷ್ಮಿಯಂತೆಯೇ ಶೋಭಿಸಿದಳು.

ಶಿವತತ್ತ್ವ ರತ್ನಾಕರದ ಎಂಟನೆಯ ಕಲ್ಲೋಲದ ಎಂಟನೆಯ ತರಂಗದಲ್ಲಿ ಚೆನ್ನಮ್ಮಳ ವಿವಾಹ, ಪತಿ ಸೋಮಶೇಖರನಿಂದ ರಾಜಕೀಯ ವಿಚಾರಗಳ ಕುರಿತಾದ ಹಿತವಚನ, ಚೆನ್ನಮ್ಮಳು ಅಧಿಕಾರ ವಹಿಸಿಕೊಂಡದ್ದು, ಶತ್ರುಗಳನ್ನೂ, ಉದ್ಧಿತರಾದ ಸಾಮಂತರನ್ನು ನಿಗ್ರಹಿಸಿ ತನ್ನ ಆಡಳಿತದ ಅಧೀನಕ್ಕೆ ಒಳಪಡಿಸಿಕೊಂಡದ್ದು ಇವೇ ಮೊದಲಾದ ವಿಚಾರಗಳು ಬಣ್ಣಿತವಾಗಿವೆ. ಮುಂದೆ ಸುಮಾರು ಹತ್ತುಶ್ಲೋಕಗಳಲ್ಲಿ ಶಿವಾಜಿಯ ಮಗ ರಾಮರಾಜನಿಗೆ ಚೆನ್ನಮ್ಮಳು ಆಶ್ರಯ ನೀಡಿದ ವಿಚಾರ ಹಾಗೂ ಈ ಕಾರಣಕ್ಕಾಗಿ ಔರಂಗಜೇಬನ ಸೈನ್ಯವನ್ನು ಎದುರಿಸಿದ ಸಂದರ್ಭದ ವಿವರಣೆ ಇದೆ. ಮುಂದಿನ ಹತ್ತು ಶ್ಲೋಕಗಳಲ್ಲಿ ಚೆನ್ನಮ್ಮಳ ದಾನ ಹಾಗೂ ಧಾರ್ಮಿಕ ಕಾರ್ಯಗಳ ಕುರಿತಾದ ವರದಿಯನ್ನು ಕವಿ ನೀಡಿದ್ದಾನೆ. ಇದರೊಂದಿಗೆ ತನ್ನನ್ನು ಸಲಹಿದ ವಿಚಾರ ಹಾಗೂ "ವಿವಾಹಮಂಗಲಮಪಿ ಸವೈಭವಮಕಾರಯತ್" ಎನ್ನುತ್ತಾ ತನ್ನ ವಿವಾಹವನ್ನೂ ವೈಭವದಿಂದ ಮಾಡಿಸಿ ವಿವರವನ್ನೂ ನೀಡಿದ್ದಾನೆ.

**ಕರ್ನಾಟಕ ಕಾಳಿಕಾಕಾಂಡ:** ಕನ್ನಡದ ಆದಿಕವಿ ಪಂಪನು ತನ್ನ ಆಶ್ರಯದಾತ ಅರಸ ಅರಿಕೇಸರಿಯನ್ನು ಕಾವ್ಯ ನಾಯಕನಿಗೆ ಸಮೀಕರಿಸಿ, ಪುರಾಣವೊಂದರ ನಾಯಕನಂತೆ ಚಿತ್ರಿಸಿರುವಂತೆ ಕರ್ನಾಟಕದ ರಾಣಿಯರಾರೂ ನಾಯಕಿಯ ಪಾತ್ರದಲ್ಲಿ ಕಾವ್ಯವೊಂದರಲ್ಲಿ ಬಿಂಬಿತರಾಗಿಲ್ಲ ಎನ್ನುವ ಕೊರತೆಯನ್ನು ಈ ಕಾವ್ಯ ನೀಗಿಸಿದೆ. 'ಕಾಳಿಕಾ ಕಾಂಡ' ಎಂಬ ಈ ಕಾವ್ಯದ ಶೀರ್ಷಿಕೆ ತಿಳಿಸುವಂತೆ ಇದು ಸ್ತ್ರೀ ಪ್ರಧಾನ ಕಾವ್ಯ. ಇಲ್ಲಿ ಪ್ರಧಾನ ಪಾತ್ರ ಕಾಳಿಕೆಯನ್ನು ಚೆನ್ನಮ್ಮಳಿಗೆ ಕವಿಯು ಹೋಲಿಸಿ, ನಾಯಕಿಯ ಪಟ್ಟವನ್ನು ನೀಡಿದ್ದಾನೆ[೨೩].

ಸೋಮಶೇಖರನು ಶಿವನ ಅವತಾರವೆಂದೂ, ಚನ್ನಮ್ಮಳು ಕಾಳಿ (ಪಾರ್ವತಿ)ಯ ಅವತಾರ ವೆಂದೂ, ಸಮೀಕರಿಸಿ ರಚಿಸಲಾದ ಈ ಕಾವ್ಯದಲ್ಲಿ ತನ್ನದೂ ಪಾತ್ರವಿದೆ, ಇಲ್ಲಿ ತನ್ನನ್ನು ಬಸವನ ಅವತಾರವೆಂಬಂತೆ ಚಿತ್ರಿಸಿಕೊಂಡಿದ್ದಾನೆ.

ಈ ಕೃತಿಯ ಪ್ರತಿಸಂಧಿಯ ಅಂತ್ಯದಲ್ಲಿ "ಸರಸಕವಿ ಕಿಳದಿ ಬಸವಂ ರಚಿಸಿದ ಸ್ಕಾಂಧ ಸನತ್ಕುಮಾರ ಸಂಹಿತೆಯೊಳಮಾದರ ಕಾಳಿಕಾಕಾಂಡದುತ್ತರದೊಳ್" ಎನ್ನುತ್ತಾ ಸಂಧಿಯ ಸಂಖ್ಯೆಯನ್ನು ನಿರ್ದೇಶಿಸಿದ್ದಾನೆ. ಪ್ರತಿ ಸಂಧಿಯ ಆರಂಭದಲ್ಲಿ ಸೂಚನಾ ಪದ್ಯವನ್ನೂ ಆನಂತರ ಒಂದು ಪದ್ಯದಲ್ಲಿ ಕಾಳಿಕಾದೇವಿಯ ಸ್ತೋತ್ರವನ್ನೂ

ಮಾಡಿದ್ದಾನೆ. ಈತನ ಸಂಸ್ಕೃತ ಪಾಂಡಿತ್ಯ ಕಾವ್ಯದುದ್ದಕ್ಕೂ ಮೈಳೈಸಿರುವಂತೆಯೇ ಬರೀ ಲಘು ಮಾತ್ರೆಗಳನ್ನೇ ಬಳಸಿ ಕನ್ನಡ ಪದಗಳಿಂದ ಸ್ತೋತ್ರಪದ್ಯ ರಚಿಸಬಲ್ಲನೆಂಬುದನ್ನೂ ಕವಿ ಕೆಲವೆಡೆ ತೋರಿಸಿದ್ದಾನೆ.

ವಾರ್ಧಕ ಷಟ್ಪದಿಯಲ್ಲಿ ರಚಿತವಾಗಿರುವ ಈ ಕೃತಿಯು, ಉಪಲಬ್ಧವಿರುವ ವಾ.ಷಟ್ಪದಿ ಗ್ರಂಥಗಳಲ್ಲೆಲ್ಲಾ ಹಿರಿದು ಸು.೧೭೩ ಅಧ್ಯಾಯಗಳಲ್ಲಿ ಸು.೭೧೫೦ ಪದ್ಯಗಳಿವೆ. ಈ ಅಪ್ರಕಟಿತ ಕೃತಿಯನ್ನು ದೇವರಕೊಂಡಾ ರೆಡ್ಡಿ ಅವರು ಏಕೈಕ ಹಸ್ತಪ್ರತಿಯಿಂದ ಸಂಪಾದಿಸುತ್ತಿದ್ದಾರೆ.

ಕರ್ನಾಟಕ ಕಾಳಿಕಾಕಾಂಡವೆಂಬ ಹೆಸರು ಇದು ಸಂಸ್ಕೃತ ಕಾವ್ಯವೊಂದರ ಅನುವಾದ ಎಂಬುದನ್ನು ತಿಳಿಸುತ್ತದೆ. ಉದಾಹರಣೆಗೆ ಕರ್ನಾಟಕ ರಘುವಂಶ, ಕರ್ನಾಟಕ ಪಂಚತಂತ್ರ, ಕರ್ನಾಟಕ ಕಾದಂಬರಿ ಮೊದಲಾದವು ಸಂಸ್ಕೃತಗ್ರಂಥಗಳ ಕನ್ನಡ ಅನುವಾದವಾಗಿವೆ. ಆದರೆ ಈ ಕೃತಿಯು ಸಂಪೂರ್ಣವಾಗಿ ಸಂಸ್ಕೃತದ ಅನುವಾದವಾಗಿರದೆ, ಕವಿಯ ಸಮಕಾಲೀನ ಇತಿಹಾಸವನ್ನೂ ಒಳಕೊಂಡಿದೆ. ಈ ಕಾವ್ಯದಲ್ಲಿ ಬರುವ ರಾಕ್ಷಸರು ಪುರಾಣಕಾಲದ ರಾಕ್ಷಸರಾಗಿಲ್ಲ, ಅವರು ಚನ್ನಮ್ಮನೊಡನೆ ಹೋರಾಡಿದ ಶತ್ರುಗಳು. ಸೋಮಶೇಖರನಾಯಕನನ್ನು ಈಶ್ವರನಿಗೂ, ಚನ್ನಮ್ಮಳನ್ನು ಪಾರ್ವತಿ ಅರ್ಥಾತ್ ಕಾಳಿಕಾದೇವಿಗೂ ತಗುಳ್ಚಿ ಕಾವ್ಯ ರಚಿಸಿದ್ದಾನೆ. ಕಾವ್ಯದ ವರ್ಣನೆಗಳಲ್ಲಿ, ಯುದ್ಧವಿವರಣೆಗಳಲ್ಲಿ, ಉಲ್ಲೇಖವಾಗಿರುವ ಆಯುಧಗಳು ಹಾಗೂ ಅವುಗಳ ಬಳಕೆಯ ರೀತಿ ಎಲ್ಲವೂ ಕವಿಯ ಸಮಕಾಲೀನವೇ ಆಗಿದೆ.

ಈ ಕೃತಿಯಲ್ಲಿ ಐತಿಹಾಸಿಕ ಅಂಶಗಳನ್ನು ಪುರಾಣದ ಅಂಶಗಳಿಂದ ಸ್ಪಷ್ಟವಾಗಿ ಬೇರ್ಪಡಿಸಿ ಹೇಳುವುದು ಕಷ್ಟವಾಗಿ ತೋರುತ್ತದೆ ಎನ್ನುವುದು ಇದರ ಸಂಪಾದಕರ ಅಭಿಮತ.

**"ಸೋಮಶೇಖರನ ಮಾನಿನಿಯ ಕಾಳಿಕಾದೇವಿಯಂಶದ ಕೆಳದಿಚೆನ್ನಾಜಿ ॥ (೪೭–೩೫) ಚೆನ್ನಾಜಿಯಾಗಿ ಕೆದಿಯರನಾಳಲ್ಪೋಪ ಬಿನ್ನಣವೋ॥ (೩೭–೩೪) "..ಯೊಕಾಳಿಕಾ ಭವಾನಿಯೆ ನಂದಿಯಂವೆರಸಿ ಜನಿಸಿಬಂದೂ। ಮಿರುಪ ಚೆನ್ನಮ್ಮಾಜಿ ಬಸವರಸನೆಂಬ ಬಂಧುರನಾಮದಿಂದೆಮ್ಮ ಸಿಂಹಾಸನವನೇಜಿ ತುರುಕರಂ ಕೊಲ್ವಳೆಂದುಸಿರೋ..." (೭೬–೩೪) ; "ದೇವದೇವ ಸೋಮಶೇಖರನ ರಾಣಿಯೀ ಕೆಳದಿ ಚೆನ್ನಮ್ಮಾಜಿಯಂ"** (೭೮–೩೭) ಹೀಗೆ ಚನ್ನಮ್ಮಾಜಿಯನ್ನು ಕಾರಣ ಸ್ತ್ರೀಯೆಂಬಂತೆ ಚಿತ್ರಿಸಿದ್ದಾನೆ[೨೪].

ಬಸವರಾಜನೇ ರಚಿಸಿರುವ ಶಿವತತ್ತ್ವ ರತ್ನಾಕರದಲ್ಲಿಯೂ ಮೂಕಾಂಬಿಕೆಯ ಅಂಶದಿಂದ ಹುಟ್ಟಿದ ಚೆನ್ನಾಂಬಿಕೆ (ಚೆನ್ನಮ್ಮ) ಯು ಕಾರಣೀಪುರುಷಳು ಎಂದು ತಿಳಿಸಿದ್ದಾನೆ. ಕಾಳಿಕಾ ಕಾಂಡದ ಸಂಕ್ಷಿಪ್ತ ಭಾಗದಂತೆ ಇಲ್ಲಿನ (೮–೮–೧೫–೨೨) ಕೆಲವು ಶ್ಲೋಕಗಳು ಚೆನ್ನಮ್ಮಳ ಪತಿ ಸೋಮಶೇಖರನು, ಚೆನ್ನಮ್ಮಳಿಗೆ "ಶಿವನ ಕೃಪೆಯಿಂದ, ಮೂಕಾಂಬಿಕೆಯು ರಾಕ್ಷಸರನ್ನು ಸಂಹರಿಸಿದಂತೆಯೇ, ನೀನು ಈ ರಾಜ್ಯಕ್ಕೆ ಬಂದು ನೆಲೆಸಿರುವ ಮ್ಲೇಚ್ಛರನ್ನು ಸೋಲಿಸಿ ಲೋಕಕ್ಕೆ ಅಭಯವನ್ನುಂಟುಮಾಡು" ಎಂದು ಹೇಳುತ್ತಾನೆ. ಎಲ್ಲೆಲ್ಲಿ ಶಿವ–ಪಾರ್ವತಿಯರ ಉಲ್ಲೇಖವಿದೆಯೋ ಅಲ್ಲೆಲ್ಲಾ ಸೋಮಶೇಖರನಾಯಕ–ಚನ್ನಮ್ಮರನ್ನು ಹೆಸರಿಸಿದ್ದಾನೆ.

**ಕಾವ್ಯ ವಸ್ತು :** ಇದು ಸ್ಕಾಂದ ಪುರಾಣದಲ್ಲಿ ಉಕ್ತವಾಗಿರುವ ಕಾಳಿಕಾದೇವಿಯ ಕಥಾವಸ್ತುವನ್ನು ಹೊಂದಿದೆ. ಇಲ್ಲಿ ಕಾಳಿಕಾದೇವಿಯು ದುಷ್ಟಶಕ್ತಿ ಅಸುರರನ್ನು ವಧೆಮಾಡಲೆಂದೇ ಅವತರಿಸುತ್ತಾಳೆ.

ಚೆನ್ನಮ್ಮಳ ಆಳ್ವಿಕೆಯ ಕಾಲದಲ್ಲಿ ರಚಿತವಾದ ಕಾಳಿಕಾಕಾಂಡವು ಕಾಳಿಯು ದುಷ್ಟಶಕ್ತಿ ಅಸುರರನ್ನು ವಧೆಮಾಡಿದ ಪುರಾಣದ ಕಥಾವಸ್ತುವನ್ನು ಹೊಂದಿದ್ದರೂ, ಇವಳ ಕಾಲದ ಯುದ್ಧದ ವಿವರಣೆಯನ್ನು ನೀಡುವಂತಿದೆ. ಇದರ ಸನ್ನಿವೇಶಗಳನ್ನು ಐತಿಹಾಸಿಕ ವಿಚಾರಗಳೊಂದಿಗೆ ಹೋಲಿಸಿ ನೋಡಬಹುದಾಗಿದೆ.

ಈ ರಾಕ್ಷಸರ ಆಗಮನದಿಂದ ದೇಶದ ಮೇಲೆ ಅನೇಕ ಪರಿಣಾಮಗಳಾಗುತ್ತವೆ. "... ಯವನಾರಭಕರ ಲಿಪಿಯನುರ್ವಿಯೊಳ್ಪರಪಿ ಗೀರ್ವಾಣ ಶಾಸ್ತ್ರಂಗಳ ಧಿಕ್ಕರಿಸಿ ಸುಟ್ಟು ಬಿಸುಟೂ॥ (೬೦–೭೦) ದೇವತಾಮೂರ್ತಿ

ಪ್ರತಿಷ್ಠಾಪನಂಗಳಂ ಡಾವರಿಸಿ ಕಿಳ್ತೊಡೆದು ಶೂನ್ಯಾಲಯಂಗಳಂ ಕಾವಿಸಿ ಪಕೀರರಂ ನೆಲೆಗೊಳಿಸತುಂ ಮನೋಧನಂಗಳನರ್ಚಿಸೀ ದೇವದೇವಂ ಕುದಂ ಕರ್ತಾರನಲ್ಲ ನೆಂಬೋವಿದ" (೬೦–೮) "ಅಶ್ವಮಹಮೆಂಬಮರ ಭಾಷೆಯ ಬಿಟ್ಟು ಅಸುರರಾಡುವಾ ತುಮೆಹಮೆ ಪಸರಿಸುತೆ..... (೧೨–೧೨) "... ವೇದಾಗಮ ಪುರಾಣ ಪಾಠವುಂ ನಿರ್ಮೂಲವಾಗಿ ಗೀರ್ವಾಣ ಭಾಷೆಯೇ ಹೋಗಿ ಹಮೆತುಮೆಯೆನಿಪ ಭಾಷೆಯೇ.." (೭–೫೮) "..ಎಲ್ಲಿಯುಂ ದೇವ ವಿಗ್ರಹ ಪೂಜೆಯಳಿದು ಶೂನ್ಯಪರ್ಟಿತೂ (೭–೬೦)

ಹೀಗೆ ತಮಗಾಗದುದನ್ನು ನಾಶ ಮಾಡುತ್ತಾ, ಶಿವನ ಮೇಲೆ ಯುದ್ಧಮಾಡಲು ರಾಕ್ಷಸ ರಾಜ ತನ್ನ ರಾಜ್ಯದ ಎಲ್ಲ ಸೇನಾನಾಯಕರನ್ನು ಕರೆಸುತ್ತಾನೆ. ಇಂಥ ರಾಕ್ಷಸರನ್ನು ನಾಶಪಡೆಸಲೆಂದೇ ಚನ್ನಮ್ಮಾಜಿ ಮತ್ತು ಬಸವರಾಜ ಜನಿಸಿರುವುದು (೭೬–೩೪)

ಮುಸಲ್ಮಾನರಬಗ್ಗೆ ಅಂದಿನಕಾಲದ ಜನರಲ್ಲಿ ಕೆಲವು ನಂಬಿಕೆಗಳಿದ್ದವು. ಅವುಗಳಲ್ಲಿ ಸುಂದರ ಸ್ತ್ರೀಯರನ್ನು ಕಂಡರೆ ಬಿಡುವವರಲ್ಲ, ಧರ್ಮದ ಕಾರ್ಯಗಳಲ್ಲಿ ತೊಡಗಿರುವವರನ್ನು ಕೊಲ್ಲುತ್ತಾರೆ (೮೯–೫೬) ಅಲ್ಲದೆ ಅವರು, ಮುಕುಳಿ ದಿಮ್ಮಿ ಕಳಚುವ ಹಾಗೆ ಬಡೆಯುತ್ತಿದ್ದರು (೫೦–೨೩) ಶಿವಗಣಗಳನ್ನು (ಚನ್ನಮ್ಮಳ ಕಡೆಯ ಸೈನಿಕರನ್ನು) ಕಾಪರಿರಾ (ಕಾಫೀರರು) ಎಂದೂ, ಹಿಂದೂ ಜಂಗಮರ ಪೋರರಿರ, (೯೫–೨), ಸತತವುಂ ಹುಳಿಬೋನಮಂ ತಿಂಬ ಜಂಗಮರ ಜಟ್ಟಿಗರಿರಾ (೮೯–೯) ಎಂದು ಕರೆಯುತ್ತಿದ್ದುದನ್ನು ಕಾವ್ಯವು ತಿಳಿಸುತ್ತದೆ.

**ಇತಿಹಾಸ:** ಬಿಜಾಪುರದ ಆದಿಲ್‌ಶಾಹಿ ಅರಸರ ಒಳಸಂಚಿನಿಂದಲೇ ಸೋಮಶೇಖರನಾಯಕ ಕೊಲೆಯಾದನೆಂದು ಕೆಳದಿ ನೃಪವಿಜಯ ಮೊದಲಾದ ಕಾವ್ಯಗಳಿಂದ ತಿಳಿದುಬರುತ್ತದೆ. ಅಧಿಕಾರ ವಹಿಸಿಕೊಂಡ ಮೇಲೆ ಚೆನ್ನಮ್ಮ ಇವರ ಹಾವಳಿಯನ್ನು ತಡೆದು, ತನ್ನ ರಾಜ್ಯದ ಗಡಿಯಾಚೆಗೆ ಹಿಮ್ಮೆಟ್ಟಿಸಿದಳಲ್ಲದೆ, ಹೊನ್ನಾಳಿ, ತವನಿಧಿ ಕೋಟೆಗಳನ್ನು ವಶಪಡಿಸಿಕೊಂಡಳು. ಶಿವಾಜಿಯ ಮಗ ರಾಜಾರಾಮನನ್ನು ಮೊಗಲರು ಬೆನ್ನಟ್ಟಿ ಬಂದಾಗ ಚೆನ್ನಮ್ಮ ಅವನಿಗೆ ಆಶ್ರಯ ಕೊಟ್ಟು, ಅವನನ್ನು ಸುರಕ್ಷಿತವಾಗಿ ಜಿಂಜಿಯನ್ನು ತಲುಪಲು ಸಹಾಯಮಾಡಿ ಮೊಗ'ಲರ ಸೈನ್ಯವನ್ನೆದುರು ಹಾಕಿಕೊಂಡಳು. ರಾಜಾರಾಮನಿಗೆ ಸಹಾಯ ಮಾಡಿದುದರ ಪರಿಣಾಮವಾಗಿ ಔರಂಗಜೇಬನ ಕಡೆಯ ಅಬ್ದುಲ್‌ಖಾನನು ದೊಡ್ಡ ಸೈನ್ಯದೊಂದಿಗೆ ಬಿದನೂರಿಗೆ ಲಗ್ಗೆ ಹಾಕಿದರು. ಆದರೆ ಇದರ ಮುನ್ಸೂಚನೆಯನ್ನರಿತಿದ್ದ ಚನ್ನಮ್ಮ ಬಿದನೂರನ್ನು ಬಿಟ್ಟ ಭುವನಗಿರಿಯ ಮಾರ್ಗದಲ್ಲಿ ಅಪರಿಮಿತ ಕಾಲಾಳುಗಳನ್ನು ಸೇರಿಸಿ ಕೋಟೆಯನ್ನು ರಕ್ಷಿಸಿ ಶತ್ರುಪಡೆಯನ್ನು ಹಿಮ್ಮೆಟ್ಟಿಸುವಲ್ಲಿ ಯಶಸ್ವಿಯಾದಳು. ಬಯಲುಸೀಮೆಯ ಯುದ್ಧಗಳಲ್ಲಿ ಪರಿಣಿತರಾಗಿದ್ದ ಮೊಘಲರ ಸೈನ್ಯ ಘಟ್ಟ ಪ್ರದೇಶದ ಕಣಿವೆ, ಕಂದಕಗಳಲ್ಲಿ ಸಿಲುಕಿಹಾಕಿಕೊಂಡು ಹೋರಾಡಲು ಸಾಧ್ಯವಾಗದೆ ಸೋಲನ್ನನುಭವಿಸಿದರು. ರಾಜಾರಾಮನನ್ನು ಮೊಗಲರಿಂದ ಪಾರುಮಾಡಿದ ಘಟನೆಯು ಲಿಂಗಣ್ಣ ಕವಿ ವಿರಚಿತ ಕೆಳದಿನೃಪ ವಿಜಯಂ ಹಾಗೂ ಈ ಕಾಳಿಕಾಕಾಂಡದ ಕರ್ತೃ ಬಸವಪ್ಪನಾಯಕನ ಪ್ರಸಿದ್ಧ ಕೃತಿ ಶಿವತತ್ವರತ್ನಾಕರದಲ್ಲಿಯೂ ಬಣ್ಣಿತವಾಗಿವೆ.

**ವರ್ಣನೆ:** ಈ ಕೃತಿಯಲ್ಲಿ ಯುದ್ಧ ವರ್ಣನೆಯು ಪುರಾಣದ ಯುದ್ಧವರ್ಣನೆಗಿಂತಲೂ ಸಮಕಾಲೀನ ಯುದ್ಧದ ಚಿತ್ರಣವೇ ರಂಜಿಸಿದೆ. ಕವಿಯು ತನ್ನ ಕಾಲದಲ್ಲಿ ನಡೆಯುತ್ತಿದ್ದ ಕೋಟೆ ಕಾಳಗದ ವಿವರಣೆಯನ್ನು ಕಣ್ಣಿಗೆ ಕಟ್ಟುವಂತೆ ಬಣ್ಣಿಸಿದ್ದಾನೆ. ಯುದ್ಧಾರಂಭ ಹಾಗೂ ಅಂತ್ಯಗಳಲ್ಲಿ ಮೊಳಗುತ್ತಿದ್ದ ಕಹಳೆ, ಯುದ್ಧಕ್ಕೆ ಬಳಸುತ್ತಿದ್ದ ಆಯುಧಗಳು, ಸೈನಿಕರು ನಾಯಕರ ಆಜ್ಞೆಯ ಮೇರೆಗೆ ಕೈಗೊಳ್ಳುತ್ತಿದ್ದ ಕಾರ್ಯಗಳು. ಯುದ್ಧಾರಂಭದಲ್ಲಿ ಫಿರಂಗಿಗಳ ಆರ್ಭಟ, ಸಮಕಾಲೀನ ಯುದ್ಧದ ಸ್ಪಷ್ಟಚಿತ್ರಣ ನೀಡುತ್ತದೆ.

ಯುದ್ಧದ ಈ ವಿವರಣೆ ರಾಮರಾಯನಿಗೆ ಆಶ್ರಯನೀಡಿ ಚನ್ನಮ್ಮಳು ಮೊಗ'ಲರನ್ನು ಎದುರಿಸಿದ ಸಂದರ್ಭದಂತೆ ತೋರುತ್ತದೆ. ಅಲ್ಲದೆ "..ಯವನರಿತ ದಿತಿಯ ಮಕ್ಕಳಿರ.. ತುರುಷ್ಕರಿರ.. ನಿಮಗಂಜುವರೆ.. ಮುಸಲಮಾನರ ಕೂಡೆ.. ನೆಪ್ಪುಗಾಣದೆ ಬಂದು ಸಿಲುಕಿಗೊಡೆ ಮುಮ್ಮಾಯಮಂ ಮಾಡಿಕೊಂಡು .." ಇವೇ ಮೊದಲಾದ

ಸಾಲುಗಳಲ್ಲಿ ಇದು ಸ್ಪಷ್ಟವಾಗುತ್ತದೆ. ಇಲ್ಲಿನ ರಾಕ್ಷಸರನ್ನು "ಖುರಾಶನರುಮರಬಿಗಳುಂ ... ಹಬ್ಬಿಸಿಗಳುಂ ಗರೀಬ, ಪಟಾಣ, ಮೊಗಲ, ಖನರು, ಗೋಡಾಮುಖ, ಎಂಗಲೇಚರು ಘನಿಬರು, ಖಾನರು, ಪರಂಗಿಗಳು, ಶೇಖು, ಖೀಲ್ಲ ಭಾಶಮುಖಿ, ಪಾರ್ಶ್ವಮುಖ, ಸಮಂತಭದ್ರ, ದೌಲತಾಬಾದಿಚರರು, ಮುಸ್ತಾಪ, ಸುರತಾಳ" ಮೊದಲಾಗಿ ಕರೆಯಲಾಗಿದೆ.

ಕಾಳಿಕಾಕಾಂಡದಲ್ಲಿನ ಅಂಧಕಾಸುರನು ಚನ್ನಮ್ಮನನ್ನು ಪದಚ್ಯುತಿಗೊಳಿಸಲು ಪ್ರಯತಿಸಿದ ಅಂಧಕ ವೆಂಕಟಯ್ಯನಿರಬಹುದು.

ಈ ಪ್ರಕಾರವಾಗಿ ಕಾವ್ಯ–ಇತಿಹಾಸ ಎರಡನ್ನೂ ಮಿಶ್ರಣ ಮಾಡಿ ರಚಿಸಿದ ಕೃತಿ ಕೆಳದಿ ಹಿರಿಯ ಬಸವರಾಜ ಕೃತ 'ಕರ್ನಾಟಕ ಕಾಳಿಕಾ ಕಾಂಡ' ಚನ್ನಮ್ಮನನ್ನು ಶಿವನ ಪತ್ನಿ ಕಾಳಿಯೆಂದೂ, ಸೋಮಶೇಖರ ನಾಯಕನನ್ನು ಈಶ್ವರನೆಂದೂ ಸಬುನೀಸ ಕೃಷ್ಣಪ್ಪನನ್ನು ವಿಷ್ಣುವೆಂದೂ, ಹಿರಿಯ ಬಸಪ್ಪ ನಾಯಕನನ್ನು ಬಸವನೆಂದೂ, ಮುಸಲ್ಮಾನರು ರಾಕ್ಷಸರೆಂದೂ ಅಬೇಧ ಕಲ್ಪನೆ ಮಾಡಿ ಕಾವ್ಯ ರಚಿಸಿರುತ್ತಾನೆ. ಕೃತಿ ಅಚ್ಚಾಗಿ ಹೊರಬಂದಮೇಲೆ, ಈ ಸಂಪೂರ್ಣ ಕೃತಿಯಿಂದ ಇತಿಹಾಸದ ಮತ್ತಷ್ಟು ವಿಚಾರ ಬೆಳಕಿಗೆ ಬರಲಿದೆ.

## ಸಾಹಿತ್ಯ ರಚನೆಗೆ ಮೈಸೂರು ಅರಸಿಯರ ಪ್ರೋತ್ಸಾಹ

ಮೈಸೂರು ಅರಸು ಮನೆತನದ ಆಶ್ರಯದಲ್ಲಿ ಸಂಗೀತ, ಸಾಹಿತ್ಯಕ್ಕೆ ಸಾಕಷ್ಟು ಪ್ರೋತ್ಸಾಹ ದೊರೆತು, ಸಾಹಿತ್ಯ ಕೃಷಿಯು ಹುಲುಸಾಗಿ ಬೆಳೆದು ಬಂದಿದೆ. ಈ ಪ್ರೋತ್ಸಾಹದಲ್ಲಿ ಅರಸಿಯರ ಪಾತ್ರವೂ ಇದೆ. ಮೈಸೂರಿನ ಅರಸಿಯರು ವಿದ್ಯಾವಂತೆಯರಾಗಿದ್ದು, ಅಗತ್ಯವಿದ್ದಾಗ ಸಮರ್ಥರೀತಿಯಲ್ಲಿ ರಾಜ್ಯ ನಡೆಸುವುದಕ್ಕೂ ಸೈ ಎನಿಸಿದ್ದರು. ಸಣ್ಣವಯಸ್ಸಿನಲ್ಲಿಯೇ ಮದುವೆಯಾಗಿದ್ದರೂ ಮದುವೆಯ ನಂತರ ವಿದ್ಯಾಭ್ಯಾಸಕ್ಕೆ ಅವಕಾಶ ಇರುತ್ತಿತ್ತೆನ್ನುವುದು ಚಿಕ್ಕದೇವರಾಯನ ರಾಣಿ ದೇವಾಜಮ್ಮನ ಕುರಿತು ತಿಳಿದುಬರುವ ಮಾಹಿತಿಯಿಂದ ವೇದ್ಯವಾಗುತ್ತದೆ. ಅಲ್ಲದೆ ಜ್ಞಾನಾರ್ಜನೆಗಾಗಿ, ಸಾಹಿತ್ಯ ಓದುವ ಹವ್ಯಾಸದಿಂದಾಗಿ ಅನೇಕ ಕೃತಿಗಳನ್ನು ಪ್ರತಿಮಾಡಿಸಿಕೊಂಡಿದ್ದ ವಿಚಾರಗಳೂ ಹಸ್ತಪ್ರತಿಗಳಿಂದ ತಿಳಿದು ಬರುತ್ತದೆ.

ಕೇವಲ ಸಾಹಿತ್ಯವನ್ನು ಪ್ರತಿಮಾಡಿಸಿಕೊಂಡು ಓದುವುದಷ್ಟೇ ಅಲ್ಲದೆ, ಹೊಸ ಸಾಹಿತ್ಯ ಸೃಷ್ಟಿಗೂ ಮೈಸೂರಿನ ಅರಸಿಯರು ಕಾರಣಕರ್ತರಾಗಿದ್ದಾರೆ ಎನ್ನುವ ವಿಚಾರವೂ ಕುತೂಹಲ ಹುಟ್ಟಿಸುತ್ತದೆ. ಈ ನಿಟ್ಟಿನಲ್ಲಿ ಅಮೃತಾಜಮ್ಮಣ್ಣಿ, ದೇವಾಜಮ್ಮಣ್ಣಿ, ದೇವೀರಾಂಬೆಯರ ಕೊಡುಗೆ ಅಪಾರವಾದದ್ದು.

### ರಾಣಿ ಅಮೃತಾಂಬೆ

ಮೈಸೂರಿನ ಪ್ರಸಿದ್ಧ ಅರಸು ಚಿಕ್ಕದೇವರಾಜನ (ಕ್ರಿ.ಶ.೧೬೭೨–೧೭೦೪) ತಾಯಿ ಅಮೃತಾಂಬೆಯು ಮೂಲತಃ ಯಳಂದೂರಿನವಳು. ಮಹಾರಾಜನನ್ನು ವರಿಸಿ, ಶ್ರೀರಂಗಪಟ್ಟಣಕ್ಕೆ ಬಂದ ಮೇಲೆ ಈಕೆಯು ತನ್ನ ತವರುಮನೆಯ ಗುರುವಾಗಿದ್ದ ಆರಾಧ್ಯರ ಪುತ್ರ ಷಡಕ್ಷರಿಯನ್ನು ಯಳಂದೂರಿನಿಂದ ಬರಮಾಡಿಕೊಂಡು ಆತನಿಂದ ರಾಜಶೇಖರ ವಿಲಾಸವನ್ನು ಬರೆಯಿಸಿದ್ದಾಳೆ. ತನ್ನ ಕೋರಿಕೆಯ ಮೇರೆಗೆ ಕಾವ್ಯ ರಚಿಸಿದ ಷಡಕ್ಷರಿಗೆ ಗೌರವಾದರಗಳನ್ನು ನೀಡಿರುವ ವಿಚಾರ ದಾಖಲಾಗಿದೆ.

ಅಮೃತಾಂಬೆಯು, ತನ್ನ ತವರುಮನೆಯ ಗುರುವಾಗಿದ್ದ ಆರಾಧ್ಯರ ಪುತ್ರ ಷಡಕ್ಷರಿಗೆ ಬಾಲ್ಯದಲ್ಲಿ ಉಚಿತವಾದ ವಿದ್ಯಾಭ್ಯಾಸಕ್ಕೆ ಅನುಕೂಲ ಕಲ್ಪಿಸಿ, ಆನಂತರ ತನ್ನ ಆಹ್ವಾನದ ಮೇರೆಗೆ ಅರಮನೆಗೆ ಬಂದ ಷಡಕ್ಷರಿಯಿಂದ, ಕೆಲಕಾಲ ತನ್ನ ಮಗ ಚಿಕ್ಕದೇವರಾಯನಿಗೆ ವಿದ್ಯಾಭ್ಯಾಸವನ್ನೂ ಮಾಡಿಸಿದ್ದಾಳೆ, ಮುಂದೆ ಯಳಂದೂರಿನಲ್ಲಿ

ಮಠವನ್ನು ಕಟ್ಟಿಸಿಕೊಟ್ಟು ಕೆಲವು ದತ್ತಿಗಳನ್ನೂ ಕೊಟ್ಟಿದ್ದಾಳೆ. (ಹಿರೇಮಠ.ಆರ್.ಸಿ. & ಎಂ.ಎಸ್.ಸುಂಕಾಪುರ: ೧೯೬೨) ಈ ವಿಚಾರ ಕವಿ ದೇವಚಂದ್ರನ ರಾಜಾವಳಿ ಕಥಾಸಾರ ಹಾಗೂ 'ಶ್ರೀಮನ್ಮಹಾರಾಜರ ವಂಶಾವಳಿ' ಕೃತಿಗಳಲ್ಲಿಯೂ ಉಕ್ತವಾಗಿದೆ.

ಚಿಕ್ಕದೇವರಾಯನ ಆಳ್ವಿಕೆಗೂ ಮುನ್ನವೇ ರಚಿಸಲಾದ ರಾಜಶೇಖರ ವಿಲಾಸದ ರಚನಾ ಕಾಲವನ್ನು ಕುರಿತು ಚರ್ಚಿಸಿರುವ ಗೋವಿಂದ ಪೈ ಅವರು ರಾಣಿ ಅಮೃತಾಂಬೆಯು ಈ ಕೃತಿರಚನಾ ಕಾಲದಲ್ಲಿ ೩೦–೩೫ ವರ್ಷ ಪ್ರಾಯದವಳಾಗಿದ್ದಳೆಂದು ಅಭಿಪ್ರಾಯಪಡುತ್ತಾರೆ[೨೫].

ದೇವಚಂದ್ರ ತನ್ನ ರಾಜಾವಳೀಕಥೆಯಲ್ಲಿ ಮೈಸೂರಿನ ಅರಸು ಚಿಕ್ಕದೇವರಾಯನ ತಾಯಿಯಾದ ಯಳಂದೂರು ಅಮೃತಾಂಬೆ ತನ್ನ ತವರುಮನೆಗೆ ಗುರುವಾಗಿದ್ದ ಆರಾಧ್ಯರ ಪುತ್ರನಾದ ಷಡಕ್ಷರಿಯನ್ನು ಅರಮನೆಗೆ ಕರಿಸಿಕೊಂಡು 'ಲೀಲಾವತಿ, ಕಾದಂಬರಿ ಮೊದಲಾದ ಅನೇಕ ವಸ್ತುಕ ಕಾವ್ಯದೊಳ್ ನಿಪುಣನೆನಿಸಿ ಕವಿಯಾದುದರಿಂ ರಾಜಶೇಖರಮೆಂದು ಪೊಸತೊಂದು ಕೃತಿಯಂ ಮಾಡಿ ಮೆಚ್ಚಿಸಿ ಕೆಲಕೆಲವು ಮಠಂಗಳಂ ಮಾನ್ಯಮಂ ಬಿಡಿಸಿ... " (ಏಕಾದಶಾಧಿಕಾರ, ಪು.೨೮೫) ಎಂದು ತಿಳಿಸಿರುವಲ್ಲಿ, ವಸ್ತುಕ ಕಾವ್ಯಗಳಲ್ಲಿ ನಿಪುಣನಾಗಿ 'ಕವಿಶೇಖರ'ನೆನಿಸಿದ್ದ ಕವಿ ಷಡಕ್ಷರಿಯಿಂದ ಅರಸಿಯು ರಾಜಶೇಖರ ವಿಲಾಸವೆಂಬ ಹೊಸತೊಂದು ಕಾವ್ಯವನ್ನು ಬರೆಯಿಸಿ, ಅದಕ್ಕಾಗಿ ರಾಣಿಯು ಕವಿ ಷಡಕ್ಷರಿಗೆ ಯಳಂದೂರಿನಲ್ಲಿ ಮಠವನ್ನು ಕಟ್ಟಿಸಿ ಕೊಟ್ಟು ಮಾನ್ಯಬಿಟ್ಟು ಸನ್ಮಾನಿಸಿದ್ದಾಳೆ[೨೬].

'ಅರಸಿಯು ಷಡಕ್ಷರಿಯಿಂದ ರಾಜಶೇಖರ ವಿಳಾಸವೆಂಬ ಹೊಸತೊಂದು ಕಾವ್ಯವನ್ನು ಮಾಡಿಸಿದಳು' ಎಂಬ ಇಲ್ಲಿನ ಹೇಳಿಕೆಯಿಂದ ರಾಜಶೇಖರ ವಿಳಾಸ ಕೃತಿಯು ಅರಸಿಯ ಕೋರಿಕೆಯ ಮೇಲೆ ರಚಿತವಾಯಿತು ಎಂಬುದು ಸ್ಪಷ್ಟವಾಗುತ್ತದೆ. ಇದಲ್ಲದೆ ದೇವಚಂದ್ರನು ಹೇಳಿರುವಂತೆ ಷಡಕ್ಷರಿಯು "ಲೀಲಾವತಿ ಕಾದಂಬರಿ ಮೊದಲಾದ ವಸ್ತುಕ ಕಾವ್ಯಗಳಲ್ಲಿ ನಿಪುಣನಾಗಿ ಕವಿಶೇಖರನೆನಿಸಿದ್ದ" ಎಂಬ ಈ ಹೇಳಿಕೆಯು ಷಡಕ್ಷರಿಯು ರಾಜಶೇಖರ ವಿಳಾಸದ ರಚನೆಗೂ ಮುನ್ನ ಕೆಲವು ವಸ್ತುಕ ಕಾವ್ಯಗಳನ್ನೂ ರಚಿಸಿದ್ದಾನೆ ಅಲ್ಲದೆ 'ಕವಿಶೇಖರ' ಎಂಬ ಬಿರುದನ್ನೂ ಕೂಡ ಗಳಿಸಿದ್ದ ಎಂಬ ವಿಚಾರವನ್ನು ಸ್ಪಷ್ಟವಾಗಿ ತಿಳಿಸುತ್ತದೆ.

ಇಲ್ಲಿಯವರೆಗೂ ತಿಳಿದಿರುವಂತೆ ರಾಜಶೇಖರವಿಲಾಸವೇ ಷಡಕ್ಷರಿಯ ಮೊದಲ ಕೃತಿಯಾಗಿದೆ[೨೭]. "ನೆರೆದೇಕಾದಶ ವರ್ಷದ ಹರೆಯದೊಳಭವ ಪ್ರಸಾದಬಲದಿಂ ಕವಿತಾತರುಣಿ ಷಡಕ್ಷರಿದೇವನ ನೆರವಿಲ್ಲದೆ ವರಿಯಿಸಿರ್ದಳ್.." ಎನ್ನುತ್ತಾ ತಾನು ಹನ್ನೊಂದು ವರ್ಷ ವಯಸ್ಸಿನಿಂದಲೇ ಕವಿತೆ ರಚಿಸುವ ಸಾಮರ್ಥ್ಯವನ್ನು ಹೊಂದಿದ್ದೆನೆಂದೂ ತಿಳಿಸಿರುವ ಷಡಕ್ಷರಿಯ ಹೇಳಿಕೆಯಲ್ಲಿ ರಾಜಶೇಖರ ವಿಳಾಸ ಮಹಾಕಾವ್ಯದ ರಚನೆಗೂ ಮುನ್ನ ಈತ ಕೆಲವೊಂದು ರಚನೆಯಲ್ಲಿ ತೊಡಗಿದ್ದನೆನ್ನುವುದನ್ನು ಸ್ವತಃ ಷಡಕ್ಷರಿಯೇ ತಿಳಿಸಿದ್ದಾನೆ. ರಾಜಶೇಖರ ವಿಳಾಸಕ್ಕೂ ಮುನ್ನ ವಸ್ತುಕ ಕಾವ್ಯದಲ್ಲಿ ಪರಿಣಿತನಾಗಿದ್ದನೆನ್ನುವ ದೇವಚಂದ್ರನ ಹೇಳಿಕೆ ಇದು ಪುಷ್ಟಿ ದೊರಕಿಸುತ್ತದೆ.

ದೇವಚಂದ್ರನು "ಲೀಲಾವತಿ, ಕಾದಂಬರಿ ಮೊದಲಾದ ವಸ್ತುಕ ಕಾವ್ಯಗಳಲ್ಲಿ ನಿಪುಣನಾಗಿ.." ಎಂದು ಹೇಳಿರುವುದರಿಂದ ಎಳೆಯ ವಯಸ್ಸಿಯ ಷಡಕ್ಷರಿಯ ಸಾಹಿತ್ಯ ರಚನಾ ಸಾಮರ್ಥ್ಯವನ್ನರಿತ ಅಮೃತಾಜಮ್ಮಣ್ಣಿ ಅಂತಃಪುರದವರ ಕೋರಿಕೆಯ ಮೇರೆಗೆ, ಆತನಿಂದ ಸಂಸ್ಕೃತ ಕೃತಿಗಳ ಗದ್ಯಾನುವಾದ (ವಸ್ತುಕ ಕಾವ್ಯ) ಮಾಡಿಸಿರುವ ಸಾಧ್ಯತೆ ಇಲ್ಲಿ ಎದ್ದು ಕಾಣುತ್ತದೆ. "ಗದ್ಯಕಥೆಗಳನ್ನು 'ವಸ್ತುಕ ಕಾವ್ಯ' ಎನ್ನಲಾಗುತ್ತಿತ್ತು" [೨೮].

ಮುಂದೆ ಅಮೃತಾಂಬೆಯ ಮೊಮ್ಮಗಳು (ಚಿಕ್ಕದೇವರಾಯನ ಮಗಳು) ಚಿಕ್ಕ ಅಮೃತಾಜಮ್ಮಣ್ಣಿಯು ಚನ್ನರಾಜಯ್ಯನವರ ಮಗ ಮರ್ಯೆಯ ಎನ್ನುವ ಲಿಪಿಕಾರನಿಂದ 'ಕಾದಂಬರಿಯ ಕನ್ನಡ ಗದ್ಯಾನುವಾದ ಕೃತಿಯನ್ನು ಪ್ರತಿಮಾಡಿಸಿಕೊಂಡಳೆಂಬ ವಿಚಾರ ತಿಳಿದು ಬರುತ್ತದೆ[೨೯]. ಬಹುಶಃ ಇವಳು ಪ್ರತಿ ಮಾಡಿಸಿಕೊಂಡ ಕೃತಿ ಇದೇ ಇರಬಹುದು.

ಮದ್ರಾಸ್ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ ಲೈಬ್ರರಿಯಲ್ಲಿ ದೊರಕಿದ 'ವಚನ ಕಾದಂಬರಿ' (ಮತ್ತೊಂದು ಹೆಸರು ಕಾದಂಬರಿ ವ್ಯಾಖ್ಯಾನ) ಎಂಬ ಗದ್ಯ ಕೃತಿಯನ್ನು ಪೂರ್ವಕಾದಂಬರಿಯ ಕೊನೆಯವರೆಗೆ ಎಂದರೆ ಕಥಾನಾಯಕ ಚಂದ್ರಾಪೀಡನು ಕಾದಂಬರಿ ಮಹಾಶ್ವೇತೆಯರ ಅನುಮತಿ ಪಡೆದು ತಂದೆಯ ಆಜ್ಞಾನುಸಾರ ತನ್ನ ರಾಜಧಾನಿಗೆ ಸೇರಿದನು ಎನ್ನುವವರೆಗಿನ ಭಾಗವನ್ನು ರಾಮಾನುಜಯ್ಯಂಗಾರರು ೧೯೦೧ರಲ್ಲಿ ಪ್ರಕಟಿಸಿದ್ದಾರೆ. ರಚನಕಾರರ ಹೆಸರು ತಿಳಿದು ಬಂದಿಲ್ಲ ಎಂದು ಈ ಮುದ್ರಣದ ಮುನ್ನುಡಿಯಲ್ಲಿ ತಿಳಿಸಿರುವ ಈ ಕೃತಿಯೇ ಅಂತಃಪುರದವರ ಕೋರಿಕೆಯ ಮೇರೆಗೆ ಅಮೃತಾಂಬೆ ಷಡಕ್ಷರಿಯಿಂದ ಬರೆಯಿಸಿರುವ ವಸ್ತುಕ ಕಾವ್ಯವೆನಿಸಿದ 'ಕಾದಂಬರಿ' ಕೃತಿ ಆಗಿರುವ ಸಾಧ್ಯತೆ ಇದೆ. ಅರಸಿಯ ಕೋರಿಕೆಯ ಮೇರೆಗೆ ಷಡಕ್ಷರಿ ರಚಿಸಿರಬಹುದಾದ ಈ ಗದ್ಯ ಕೃತಿಗಳ ಕುರಿತಾಗಿ ಅಧ್ಯಯನ ನಡೆಯುವ ಅವಶ್ಯಕತೆ ಇದೆ.

ಷಡಕ್ಷರಿಯನ್ನು ಹದಿನಾಡಿನ ದೊರೆ ಮುದ್ದರಾಜನ ಕುಲಗುರು ಎಂದು ಕೆಲವು ಕಾವ್ಯಗಳಲ್ಲಿ ಉಲ್ಲೇಖಿಸಲಾಗಿದೆ. ಮುದ್ದರಾಜನು ತನ್ನ ಮಡದಿಯ ಅಪೇಕ್ಷೆಯಂತೆ ದನುಗೂರಿನಲ್ಲಿದ್ದ ಷಡಕ್ಷರಿಯನ್ನು ಯಳಂದೂರಿಗೆ ಕರೆಯಿಸಿಕೊಂಡು ಮಠ ಕಟ್ಟಿಸಿಕೊಟ್ಟನೆಂಬ ವಿಚಾರ ಪ್ರಸ್ತಾಪವಾಗಿದೆ[೩೦]. ಆದರೆ, ರಾಜಶೇಖರವಿಲಾಸ ರಚಿತವಾದದ್ದು ಕ್ರಿ.ಶ.೧೬೫೫ಕ್ಕೂ ಮೊದಲೆಂದು ಕಾಲ ನಿರ್ಧಾರವಾಗಿದೆ. ಈ ಸಂದರ್ಭದಲ್ಲಿ ಮುದ್ದರಾಜ ಇನ್ನೂ ಅಧಿಕಾರಕ್ಕೆ ಬಂದಿರಲಿಲ್ಲ. ಹಾಗಾಗಿ ಮುದ್ದರಾಜನು ಕವಿ ಷಡಕ್ಷರಿಗೆ ಆಶ್ರಯ ನೀಡುವ ಮುನ್ನವೇ ರಾಣಿ ಅಮೃತಾಜಮ್ಮಣ್ಣಿ ಷಡಕ್ಷರಿಯಿಂದ ಕಾವ್ಯ ರಚನೆ ಮಾಡಿಸಿ, ಆತನಿಗೆ ಮಾನ್ಯತೆಗಳನ್ನು ನೀಡಿದ್ದಾಳೆ. ಈ ಮಾತಿಗೆ ಪುಷ್ಟಿ ನೀಡುವ ಮತ್ತೊಂದು ವಿಚಾರವು ಕಾವ್ಯದಿಂದ ವೇದ್ಯವಾಗುತ್ತದೆ.

ರಾಜಶೇಖರ ವಿಲಾಸದಲ್ಲಿ ತನ್ನನ್ನು 'ಇಳಾಪತಿ ಪೂಜಿತ ಪಾದಪಂಕಜ'ನೆಂದು (೧.೭೨) ಕರೆದುಕೊಂಡಿದ್ದಾನೆ. ಅಲ್ಲದೆ "ಕೃತಿಕಾದಂಬಿನಿರಸಮಂ ಕ್ಷಿತಿಪಸಭಾಕ್ಷಿತಿಗೆ ಸುರಿಪ ಸಮಯದೆ" ಎಂಬ ಸಾಲು (೧.೩೭) ಈ ಕೃತಿಯನ್ನು ಅರಸನ ಆಸ್ಥಾನದಲ್ಲಿ ಓದಿರುವಂತೆ ತಿಳಿಸುತ್ತದೆ. ಇದು ಷಡಕ್ಷರಿ ಮುದ್ದರಾಜನಿಗಿಂತಲೂ ಮೊದಲು ಬೇರಾವುದೋ ರಾಜನ ಆಶ್ರಯದಲ್ಲಿದ್ದನೆನ್ನುವುದನ್ನು ಸ್ಪಷ್ಟವಾಗಿ ತಿಳಿಸುತ್ತದೆ. ಇಲ್ಲಿ ತಿಳಿಸಿರುವ ಇಳಾಪತಿ, ಕ್ಷಿತಿಪ ಮೈಸೂರರಸನೇ ಆಗಿದ್ದಾನೆ[೩೧].

ರಾಣಿ ಅಮೃತಾಂಬೆ ರಾಜಶೇಖರ ವಿಲಾಸ ಕಾವ್ಯವನ್ನು ರಚಿಸಲು ಪ್ರೇರೇಪಿಸಿ, ರಚಿತವಾದ ಆ ಕೃತಿಯನ್ನು ಮೆಚ್ಚಿ ಕವಿ ಷಡಕ್ಷರಿದೇವನಿಗೆ ಯಳಂದೂರಿನಲ್ಲಿ ಮಠವನ್ನು ಕಟ್ಟಿಸಿ ಕೊಟ್ಟು ಮಾನ್ಯಬಿಟ್ಟಿದ್ದಾಳೆ. ಆನಂತರದ ಕಾಲದಲ್ಲಿ ಹದಿನಾಡಿನ ದೊರೆಯಾದ ಮುದ್ದರಾಜನು ಈತನನ್ನು ಗುರುಗಳ ಸ್ಥಾನದಲ್ಲಿ ಗೌರವಿಸಿ ತಾನೂ ಕೆಲವು ಮಾನ್ಯಗಳನ್ನು ನೀಡಿರಬಹುದು.

ಈ ಹಿಂದಿನ ವಿದ್ವಾಂಸರು ತಿಳಿಸಿರುವಂತೆ ಕವಿ ಷಡಕ್ಷರಿ ರಚಿಸಿರುವ ರಾಜಶೇಖರ ವಿಳಾಸ ಕೃತಿ ರಚನೆಗೆ ಅರಸಿ ಅಮೃತಾಂಬೆಯ ಕೋರಿಕೆಯೇ ಮುಖ್ಯ ಕಾರಣ ಎನ್ನುವುದು ಸ್ಪಷ್ಟವಾಗಿದೆ. ಅಲ್ಲದೆ ಕೆಂಪುನಾರಾಯಣನ ಮುದ್ರಾಮಂಜೂಷಕ್ಕು ಪೂರ್ವದಲ್ಲಿಯೇ ಷಡಕ್ಷರಿ ಕವಿಯಿಂದ ಗದ್ಯಕೃತಿಗಳು ರಚಿತವಾಗಿವೆ ಹಾಗೂ ಈ ಕೃತಿಗಳ ರಚನೆಗೂ ಅರಸಿ ಅಮೃತಾಂಬೆಯೇ ಕಾರಣಳಾಗಿದ್ದಾಳೆ ಎನ್ನುವುದು ಈ ಅಧ್ಯಯನದಿಂದ ಹೊರಬಂದ ಹೊಸ ವಿಚಾರವಾಗಿದೆ.

**ದೇವಾಜಮ್ಮಣ್ಣಿ**

ದೇವಾಜಮ್ಮಣ್ಣಿಯು ಕ್ರಿ.ಶ.೧೬೭೨-೧೭೦೪ರಲ್ಲಿ ಆಳ್ವಿಕೆ ನಡೆಸಿದ ಮೈಸೂರು ರಾಜಮನೆತನದ ಚಿಕ್ಕದೇವರಾಜ ಒಡೆಯರ ಪಟ್ಟದರಸಿ. ದೇವಾಜಮ್ಮಣ್ಣಿಯೂ ಸಹ ಚಿಕ್ಕದೇವರಾಯನ ತಾಯಿ ಅಮೃತಾಜಮ್ಮಣ್ಣಿಯ ಊರಾದ ಎಳಂದೂರಿನಿಂದ ವಧುವಾಗಿ ಅರಮನೆಗೆ ಬಂದವಳು. ಮಲಯೂರು ದೇವಚಂದ್ರನು ತನ್ನ ರಾಜಾವಳಿ ಕೃತಿಯಲ್ಲಿ (ದ್ವಾದಶಾಧಿಕಾರ) ಇವಳು ಚಿಕ್ಕದೇವರಾಯನ ಸೋದರಮಾವನ ಮಗಳೆಂದು ತಿಳಿಸಿದ್ದಾನೆ. ತಕ್ಕಮಟ್ಟಿಗೆ ವಿದ್ಯಾಭ್ಯಾಸ ಹೊಂದಿದ್ದ ದೇವಾಜಮ್ಮಣ್ಣಿ ಪತಿಯೊಂದಿಗೆ ಓಲಗದಲ್ಲಿ ಕೂರುತ್ತಿದ್ದ ವಿಚಾರ ಕಾವ್ಯದಲ್ಲಿ ಉಲ್ಲೇಖವಾಗಿದೆ. ದೇವಾಜಮ್ಮಳು ನೇರವಾಗಿ ಸಿಂಹಾಸನವನ್ನೇರದಿದ್ದರೂ, ಪತಿ ಚಿಕ್ಕದೇವರಾಜ ಒಡೆಯರ ನಂತರ ತನ್ನ ಮಗ ಇಮ್ಮಡಿ ಕಂಠೀರವ ನರಸರಾಜ ಒಡೆಯನನ್ನು ಪಟ್ಟಕ್ಕೆ ತಂದಳು. ಹುಟ್ಟು ಮೂಕ ಮತ್ತು ಕಿವುಡನಾಗಿದ್ದ ತನ್ನ ಮಗನ ಬೆಂಗಾವಲಿಗೆ ನಿಂತು, ಪ್ರಧಾನಿಯಾಗಿದ್ದ ತಿರುಮಲಯ್ಯಂಗಾರ್ಯರ ಸಹಾಯದಿಂದ ರಾಜ್ಯಾಡಳಿತದಲ್ಲಿ ಪ್ರಧಾನ ಪಾತ್ರವಹಿಸಿದ ದಿಟ್ಟ ರಾಣಿಯಾಗಿದ್ದಳು.

ದೇವಾಜಮ್ಮಣ್ಣಿಯನ್ನು ಹೊನ್ನಮ್ಮ ತನ್ನ 'ಹದಿಬದೆಯ ಧರ್ಮ' ಕೃತಿಯಲ್ಲಿ ಈ ರೀತಿಯಾಗಿ ಬಣ್ಣಿಸಿದ್ದಾಳೆ.

**ಚಿಕ್ಕದೇವರಾಜ ಚಂದ್ರಮನ ಪಟ್ಟದ ರಾಣಿ**
**ಸಕಲ ಸದ್ಗುಣ ಸಂಪನ್ನೆ**
**ಅಕಲುಷೆಯೆಳವಂದೂರ ದೇವಮ್ಮನು**
**ಸಕಲ ಸಂಪದದೊಡನಿಹಳು** (೧-೧೪)

**ಕಾವ್ಯರಚನೆಗೆ ರಾಣಿಯ ಪ್ರೋತ್ಸಾಹ:** ಚಿಕ್ಕದೇವರಾಯನು ಓಲಗದಲ್ಲಿ ಒಮ್ಮೆ ತನ್ನ ರಾಣಿ ದೇವಾಜಮ್ಮಣ್ಣಿಯನ್ನು ಕುರಿತು, ಹೊನ್ನಮ್ಮಳು ಕಾವ್ಯ ನಾಟಕ ರಚನಾ ಸಾಮರ್ಥ್ಯವನ್ನು ಹೊಂದಿರುವಳೆಂದು ಗುರು ಸಿಂಗಾರಾರ್ಯನು ಆಡಿದ ಮೆಚ್ಚುಗೆಯ ಮಾತನ್ನು ತಿಳಿಸುತ್ತಾ, ಹೊನ್ನಮ್ಮಳಿಂದ 'ಕವಿತೆಯೊಂದನು ಪೇಳಿಸಿಂದು' ರಾಣಿಯಲ್ಲಿ ಹೇಳುತ್ತಾನೆ, ರಾಯನ ನುಡಿಕೇಳುತ್ತಲೇ ಹೊನ್ನಮ್ಮ ಹಿಂದಡಿಯಿಡಲು (ಪಿಂದೆಗೆದಿರೆ), ದೇವಾಜಮ್ಮಣ್ಣಿಯು ಅವಳನ್ನು 'ಕಂದ ಬಾರೆನ್ನ ಕಟ್ಟಾಣಿ ಪೆಣ್ಮಣಿಯೆ ಬಾರೆಂದು' ಮುಂದಕ್ಕೆ ಕರೆದು, ಕರವಿಡಿದು ತನ್ನೊತ್ತಿಗೆ ಬರೆಸಿ ಅವಳನ್ನು ಪ್ರೀತಿ ವಾತ್ಸಲ್ಯದಿಂದ ಕಂಡು ಕವಿತೆ ರಚಿಸುವಂತೆ ಸವಿನುಡಿಯಿಂದ ತಿಳಿಯ ಹೇಳುತ್ತಾಳೆ.

ರಾಣಿಯು ಆಜ್ಞೆ ಮಾಡಲಿಲ್ಲ, ಬಲವಂತದಿಂದ ಹೇಳಲಿಲ್ಲ ಬದಲಿಗೆ "ಹೊನ್ನಿ ಬಾ ಹೊನ್ನಕ್ಕ ಬಾರೆಂದು ಕರವಿಡಿದೆನ್ನ ತನ್ನೊತ್ತಿಗೆ ಬರಿಸಿ, ಎನ್ನೊಳು ನೆವಮಿನಿತಿಲ್ಲದೆರಕಗೂಡಿ ಮನ್ನಿಸಿ ನುಡಿದಳು" ಪ್ರೀತಿ, ವಾತ್ಸಲ್ಯ ತುಂಬಿದ ನುಡಿಯಲ್ಲಿ ಅವಳಿಗೆ ಹೀಗೆ ಹೇಳುತ್ತಾಳೆ "ಕಲಿತ ಬಿಜ್ಜೆಯ ಬಲ್ಲರಿಗೆ ಕೇಳಿಪುದೈಸೆ ಫಲವಿದನರಿತು.." ಕಲಿತ ವಿದ್ಯೆಯನ್ನು ವ್ಯರ್ಥಮಾಡಿಕೊಳ್ಳದೆ, ನಾಲ್ಕುಜನರು ಅರಿತುಕೊಳ್ಳುವಂತೆ ವಿನಿಯೋಗಿಸು ಎಂಬ ಬುದ್ಧಿಮಾತನ್ನು ಹೇಳಿದ್ದಲ್ಲದೆ "ನೀನಿಂದು ಅಲಸದೆ, ನಾಣ್ಚದಂಜದೆ, ಅಳುಕದೆ ಪೇಳು ಕಬ್ಬದೊಳ್ಪುಗಳ" ಎಂದು ಧೈರ್ಯ ತುಂಬುತ್ತಾಳೆ. (೧-೨೮, ೨೯)

ಇಲ್ಲಿ ದೊರೆಯಾಗಲೀ, ಗುರುವಾಗಲಿ ನೇರವಾಗಿ ಹೊನ್ನಮ್ಮಳಲ್ಲಿ ಕಾವ್ಯ ರಚಿಸುವಂತೆ ಕೇಳುವುದಿಲ್ಲ. ರಾಣಿಯ ಮಾತಿಂದ ಧೈರ್ಯಗೊಂಡ ಹೊನ್ನಮ್ಮ, ಅವಳ ಮಾತಿಗೆ ಬೆಲೆಗೊಟ್ಟು ಧೈರ್ಯ ತಂದುಕೊಂಡು, ತಾನು ಪದ್ಯ ರಚಿಸುವುದಾಗಿ "ಇಂತು ನುಡಿದ ರಾಣಿಯ ನುಡಿಗೇಳಿ ಓರಂತೆ ಚಿತ್ತವ ಬಲಿವಿಡಿದು ಸಂತಸಮಿಗೆ ಸಭೆಯೊಳು ರಾಯಗೆ ಮಾರಾಂತು ಭಿನ್ನವಿಸಿದೆನ್" (೧-೩೦) ದೊರೆಯಲ್ಲಿ ನಿವೇದಿಸಿಕೊಂಡಿದ್ದಾಳೆ.

ಪಟ್ಟದರಸಿ ದೇವಾಜಮ್ಮಳು ಚಿಕ್ಕದೇವರಾಯನನ್ನು ವರಿಸಿ ಯಳಂದೂರಿನಿಂದ ಶ್ರೀರಂಗಪಟ್ಟಣದ ಅರಮನೆಗೆ ಬಂದವೇಳೆಯಲ್ಲಿ ಊಳಿಗದವಳಾಗಿ ಅವಳೊಡನೆಯೇ ಸಂಚಿ ಹೊನ್ನಮ್ಮಳು ಅರಮನೆ ಸೇರಿದ್ದಾಳೆ. ಚಿಕ್ಕ

ಪ್ರಾಯದ ದೇವಾಜಮ್ಮಳು ಮದುವೆಯಾದ ನಂತರ ತನ್ನ ವಿದ್ಯಾಭ್ಯಾಸ ಮುಂದುವರೆಸುವ ಸಲುವಾಗಿ ಗುರು ಸಿಂಗಾರಾರ್ಯನಲ್ಲಿ ವಿದ್ಯೆ ಕಲಿಯುವಾಗಲೂ ದೇವಾಜಮ್ಮಳೊಡನೆ ಸಂಚಿಯ ಹೊನ್ನಮ್ಮಳೂ ಸಹ ಜೊತೆಗಿರುತ್ತಿದ್ದು, ಅವಳಿಗೂ ವಿದ್ಯೆ ಕಲಿಯಲು ಅವಕಾಶ ದೊರಕಿದೆ. ಈ ಯಾವ ವಿಚಾರಗಳೂ ನೇರವಾಗಿ ಕಾವ್ಯದಲ್ಲಿ ಪ್ರಸ್ತಾಪವಾಗಿರದಿದ್ದರೂ ಇದರ ಸೂಚನೆ ಕೆಲವೊಂದು ಸಾಲುಗಳಲ್ಲಿ ವ್ಯಕ್ತವಾಗಿದೆ.

ಹೊನ್ನಮ್ಮ ತನ್ನ ಕಾವ್ಯದಲ್ಲಿ ತಿಳಿಸಿರುವಂತೆ (ಹದಿಬದೆಯ ಧರ್ಮ, ೧-೧೬) ಚಿಕ್ಕದೇವರಾಜನ ಓಲಗದಲ್ಲಿ "ಪಾಡುವ ಕುಣಿವ ಬಾಜಿಪ ವಾತಾಡುವ ಪರಿಹಾಸಗೈವ ಗಾಡಿಕಾತಿಯರು ಗಣನೆಯಿಲ್ಲದೆ ಜೋಡು ಗೂಡಿರುವರು ಕೂರ್ಮೆಯೊಳು", ಅಷ್ಟೇ ಅಲ್ಲದೆ "ಚತುಷಷ್ಠಿ ಕಲೆಗಳು ಪೆಣ್ಬರಿಜಾಂತು.... ಸರಸವಿದ್ಯಾ ಸಿದ್ಧಾಂತವೇದಿನಿಯರೊಪ್ಪಿಹರು", ಎನ್ನುತ್ತಾ ದೊರೆಯ ಆಸ್ಥಾನದಲ್ಲಿ ೬೪ ಕಲೆಯಲ್ಲಿ ಪರಿಣತಿ ಪಡೆದಿದ್ದ ಮಹಿಳಾಬಳಗವಿದ್ದುದ'ನ್ನು ಕುರಿತು ತಿಳಿಸಿದ್ದಾಳೆ. ಅಷ್ಟೇ ಅಲ್ಲದೆ "ಪಲರಾಣಿಯರೂಳಿಗದ ಪೆಣ್ಗಳುಮಿಕ್ಕೆಲದೊಳು" ಓಲಗದಲ್ಲಿ ನಿಂತಿದ್ದರೂ, ಇವರಾರಿಗೂ ದೊರಕದ ಅವಕಾಶ ಸಂಚಿ ಹೊನ್ನಮ್ಮಳಿಗೆ ಮಾತ್ರ ದೊರಕಿರುವುದಕ್ಕೆ ಕಾರಣ, ದೇವಾಜಮ್ಮಣ್ಣಿಯ ಪ್ರೋತ್ಸಾಹವೇ ಆಗಿದೆ.

**ಕವಯತ್ರಿ ಹೊನ್ನಮ್ಮ:** ಹದಿನೇಳನೆಯ ಶತಮಾನದಲ್ಲಿ ಕಂಡುಬರುವ ಕೆಲವೇ ಕವಯಿತ್ರಿಯರಲ್ಲಿ ಪ್ರಮುಖಳಾದವಳು ಸಂಚಿಯ ಹೊನ್ನಮ್ಮ. ಮೊಟ್ಟಮೊದಲಿಗೆ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಸ್ಥಾನ ಪಡೆದವಳು ಇವಳೇ ಎಂಬುದನ್ನು ಇದೇ ಪ್ರಬಂಧದ ಎರಡನೆಯ ಅಧ್ಯಾಯದಲ್ಲಿ ತಿಳಿಸಲಾಗಿದೆ. 'ಹದಿಬದೆಯ ಧರ್ಮ'ವು ಹೊನ್ನಮ್ಮಳು ರಚಿಸಿರುವ ಏಕೈಕ ಕೃತಿಯಾಗಿದೆ. ಇದರಲ್ಲಿ ತನ್ನ ಕುರಿತಾದ ಒಂದೆರಡು ವಿಚಾರಗಳನ್ನು ತಿಳಿಸಿದ್ದಾಳೆ. 'ಆನಾವಳೆನ್ನ ಮುನ್ನಿರವಾವುದು' (೧-೩೮) ಎಂಬ ಸಾಲು ಈ ಹಿಂದಿನ ಇವಳ ಸ್ಥಿತಿ ಉತ್ತಮವಾದುದಾಗಿರಲಿಲ್ಲ ಎಂಬುದನ್ನು ತಿಳಿಸುತ್ತದೆ. ಅಲ್ಲದೆ ಇವಳು ಎಳೆಯ ವಯಸ್ಸಿನಿಂದಲೂ ಊಳಿಗದಲ್ಲಿಯೇ ಬೆಳೆದಳೆಂಬುದನ್ನು 'ಪಾದದೂಳಿಗದೊಳು ಬೆಳೆದ ಬಾಲಕಿ' (೧-೪೫) ಎಂಬ ಮಾತಿನಿಂದ ವ್ಯಕ್ತಪಡಿಸಿದ್ದಾಳೆ. ಕಿರಿಯ ಪ್ರಾಯದಿಂದಲೂ ದೇವಾಜಮ್ಮಣ್ಣಿಯ ಪರಿಚಾರಕಿಯಾಗಿದ್ದ ಹೊನ್ನಮ್ಮ ಇವಳ ಮದುವೆಯಾದಮೇಲೆಯೂ ಅವಳ ಗಂಡನ ಮನೆಗೂ ಹಿಂಬಾಲಿಸಿ ಬಂದು, ಅಲ್ಲಿಯೂ ಪರಿಚಾರಿಕೆಯನ್ನು ಮುಂದುವರೆಸಿದ್ದಾಳೆ. ಆದರೆ ಇವಳ ಒಡೆಯರಾದ ದೇವಾಜಮ್ಮಣ್ಣಿ ರಾಜದಂಪತಿಗಳು, ಇವಳ ಆಸಕ್ತಿಯನ್ನು ಗಮನಿಸಿ, ವಿದ್ಯಾಭ್ಯಾಸವನ್ನು ನೀಡಿದುದಲ್ಲದೆ, ಕಾವ್ಯ ರಚನೆಗೆ ಪ್ರೋತ್ಸಾಹವನ್ನೂ ನೀಡಿ, ಹೊನ್ನಮ್ಮಳೇ ಹೇಳಿರುವಂತೆ 'ಕರ್ಬೊನ್ನು ಚೆಂಬೊನ್ನಾದಂತೆ' ಇವಳ ಜೀವನ ಉತ್ತಮಗೊಳ್ಳಲು ಕಾರಣರಾಗಿದ್ದಾರೆ.

ಇವಳಿಗೆ ವಿದ್ಯೆ ಕಲಿಸಿದ ಗುರುವಿನ ಪ್ರಭಾವವನ್ನೂ ಹೊನ್ನಮ್ಮನ ಕಾವ್ಯದಲ್ಲಿ ಗುರುತಿಸಬಹುದು. ಗುರುವಿನ ಪ್ರಭಾವದಿಂದ ಹೊನ್ನಮ್ಮ ಶ್ರೀವೈಷ್ಣವ ಧರ್ಮಾನುಯಾಯಿಯಾಗಿದ್ದಳು ಎಂಬುದು ಇವಳ ಕಾವ್ಯದಿಂದ ಸ್ಪಷ್ಟವಾಗಿ ತಿಳಿಯುತ್ತದೆ. ಹೊನ್ನಮ್ಮ ಸಾಮಾನ್ಯ ಊಳಿಗದ ಹೆಣ್ಣಾಗಿರದೆ, ತನಗೆ ದೊರೆದ ಅವಕಾಶವನ್ನು ವ್ಯರ್ಥವಾಗಿಸದೆ ವಿದ್ಯೆ ಕಲಿಯುವಲ್ಲಿ ಶ್ರದ್ಧೆ ತೋರಿ ಗುರುವಿನಿಂದ ಪ್ರಶಂಸೆ ಪಡೆದಿದ್ದಾಳೆ. ಇವಳು "ಕಾವ್ಯಾಲಂಕಾರ ನಾಟಕ ಪವಣಿಗೆ (ರಚನೆ)ಗಳಲ್ಲಿ ಪರಿಣತೆ" ಗಳಿಸಿದ್ದಳೆಂಬ ವಿಚಾರವನ್ನು(೧-೨೫) ಇವಳ ಗುರು ಆಳಸಿಂಗಾರಾರ್ಯನು ಅರಸನಲ್ಲಿ ತಿಳಿಸಿ ಈಕೆಯನ್ನು "ಸರಸಸಾಹಿತ್ಯದ ವರದೇವತೆ" ಎಂದು ಪರಿಪರಿಯಾಗಿ ಹೊಗಳಿದ್ದಾನೆ (೧-೨೩). ಸ್ವತಃ ಗುರುವೇ ಶಿಷ್ಯೆಯ ಪ್ರಶಂಸೆ ಮಾಡಿದುದನು ಕಂಡು ದೊರೆಯು "ಓದುಗಲಿಸುವರೊಲಿದು ಪೊಗಳಿದೊಡಾ ವೋದುಗಲಿವರೋದುಗಳು ಮೇದಿನಿಯೊಳು ಮೇಲೆನಿಪುವು" ಎಂಬ ಲೋಕೋಕ್ತಿಯನ್ನು ನುಡಿಯುತ್ತಾನೆ (೧-೨೪)

ಹೊನ್ನಮ್ಮಳು ರಾಜನ ಉಪಪತ್ನಿಯರಲ್ಲೊಬ್ಬಳಾಗಿದ್ದಳೆಂಬ ಸೂಚನೆ ಕಾವ್ಯದ ಹಲವೆಡೆಗಳಲ್ಲಿ ಕಂಡುಬರುತ್ತದೆ. "ನಿನ್ನಾಣತಿಗೇಳಿ ನಿನ್ನ ಬಳಿಗೆ ಸಂದು ನಿನ್ನೂಳಿಗಗಳನೆಸಗಿ ನಿನ್ನವಳೆನಿಸಿ ನಿನ್ನೆಡೆ ವಿಡದಿರ್ಪೆನ್" (೧-೩೭);

"ಸುತ್ತಣ ದೇಶದರಸಿಯರ ಬೈತಲೆಗುತ್ತಮ ಭೂಷಣವೆನಿಪ ಮುತ್ತಿನ ಸರವೆನ್ನ ರನ್ನವಾವುಗೆಗಳ ಸುತ್ತ ಲಂಬಣಮಾದುದಿಂದು" (೧–೪೨) ಎಂಬ ಮೊದಲಾದ ಕಾವ್ಯದ ಸಾಲುಗಳನ್ನು ಗಮನಿಸಬಹುದು.

ಸಂಚಿ ಹೊನ್ನಮ್ಮಳು ತನ್ನ ಬಂಧುಗಳ ಕುರಿತಾಗಿ "ಒಲಿದು ತನ್ನೊಡವುಟ್ಟು ಸೊಸೆ ಮಗಳೆಂದೆಂಬ ಪಲರು ಮುನ್ನಿನ ಬಾಂಧವರು ಕುಲದೇವತೆಯೆಂದು ಕೂರ್ತು ತಂತಮ್ಮಿಷ್ಟ ಫಲವ ಪಡೆವರೆನ್ನಿಂದ" (೧–೪೧) ಎಂದು ಹೇಳಿಕೊಂಡಿದ್ದಾಳೆ. ಇವಳು ಅರಮನೆಯಲ್ಲಿರುವುದರಿಂದ ತಾವು ಸಹಾಯ ಕೋರಿ ಪಡೆದಿದ್ದಾರೆ, ಆದರೆ ಉತ್ತಮ ಬಾಂಧವ್ಯ ಪ್ರೀತಿ ಆದರಗಳು ಅವರಿಂದ ಇವಳಿಗೆ ದೊರೆತಿಲ್ಲ.

ರಾಣಿ ದೇವಾಜಮ್ಮಣ್ಣಿಯು ಇವಳನ್ನು "ಕಂದ ಕಟ್ಟಾಣಿ ಪೆಣ್ಮಣಿ" ಎಂದು ಕರೆದು ಅಕ್ಕರೆಯ ಮಾತನಾಡಿದಳು ಎಂದು ಇವಳು ಕಾವ್ಯದಲ್ಲಿ ತಿಳಿಸಿದ್ದಾಳೆ. ಹೊನ್ನಮ್ಮಳನ್ನು ಉದ್ದೇಶಿಸಿ 'ಕಂದ ಕಟ್ಟಾಣಿ' ಎಂದು ಕರೆಯಬೇಕಿದ್ದಲ್ಲಿ ಇವಳು ರಾಣಿಯ ಸಮವಯಸ್ಕಳಾಗಿರಲು ಸಾಧ್ಯವಿಲ್ಲ, ಇವಳು ರಾಣಿಗಿಂತಲೂ ಸಾಕಷ್ಟು ಕಿರಿ ಪ್ರಾಯದವಳಿದ್ದಿರಬೇಕು.

**ಕಾವ್ಯ:** ಹೊನ್ನಮ್ಮಳ ಹದಿಬದೆಯಧರ್ಮ ೪೭೯ ಸಾಂಗತ್ಯ ಪದ್ಯಗಳಿಂದ ಕೂಡಿದ್ದು ಒಂಬತ್ತು ಸಂಧಿಗಳಲ್ಲಿ ವರ್ಣಿತವಾಗಿದೆ. ಮೊದಲನೆಯ ಸಂಧಿಯಲ್ಲಿ ಮೈಸೂರು ದೊರೆಗಳ ಚರಿತ್ರೆ, ಅವರಿಗಿದ್ದ ದೈವಬಲ, ತನ್ನ ಒಡತಿ ಮತ್ತು ರಾಜನ ಪಟ್ಟದರಸಿ ಎಳಂದೂರು ದೇವಮ್ಮಳ ಗುಣಗಾನ, ತನ್ನ ಕಾವ್ಯಕ್ಕೆ ದೇವಮ್ಮಳು ನೀಡಿದ ಪ್ರೋತ್ಸಾಹ ಹಾಗೂ ತನ್ನ ನಿಷ್ಟೆಗಳನ್ನು ಕುರಿತು ಹೇಳಿದ್ದಾಳೆ. ಎರಡನೆಯ ಸಂಧಿಯಲ್ಲಿ ಪತಿವ್ರತೆಯ ಶ್ರೇಷ್ಠತೆಯನ್ನು ವಿವರಿಸಿದ್ದಾಳೆ. ಇದಕ್ಕೆ ದೃಷ್ಟಾಂತವಾಗಿ ಪುರಾಣ ಪುಣ್ಯಕಥೆಗಳಿಂದ ನಿದರ್ಶನಗಳನ್ನು ನೀಡಿದ್ದಾಳೆ. ಮೂರನೆಯ ಸಂಧಿಯಲ್ಲಿ ಪತಿಯ ಶುಶ್ರೂಶೆಯ ಬಗೆಗಳು, ಹೇಳಿದ್ದಾಳೆ. ನಾಲ್ಕನೆಯ ಸಂಧಿಯಲ್ಲಿ ಹಿರಿಯರು, ಬಂದು–ಬಾಂಧವರೊಂದಿಗಿನ ವರ್ತನೆ, ಐದನೆಯ ಸಂಧಿಯಲ್ಲಿ ಹೆಣ್ಣನ್ನು ಹೇಗೆ ಕಾಣಬೇಕೆಂಬ ವಿಚಾರವನ್ನು ತಿಳಿಸಿದ್ದಾಳೆ ಆರನೆಯ ಸಂಧಿಯಲ್ಲಿ ಪುರುಷರು ತಿಳಿದುಕೊಳ್ಳಬೇಕಾದ ಪತಿಧರ್ಮವನ್ನು ತಿಳಿಸಿದ್ದಾಳೆ, ಏಳನೆಯ ಸಂಧಿಯಲ್ಲಿ ಪತಿಯು ದೂರದೂರಿನಲ್ಲಿರುವ ಸಂದರ್ಭದಲ್ಲಿ ಸಾಧ್ವಿಯು ನಡೆದುಕೊಳ್ಳ ಬೇಕಾದ ವಿಧಾನವನ್ನು ತಿಳಿಸಿದ್ದಾಳೆ. ಎಂಟನೆಯ ಸಂಧಿಯಲ್ಲಿ ಪತಿವ್ರತೆಯರ ದಿನಚರಿಯನ್ನು ತಿಳಿಸಿದ್ದಾಳೆ. ಒಂಬತ್ತನೆಯ ಸಂಧಿಯಲ್ಲಿ ಅಹಿಂಸಾ ಪ್ರವೃತ್ತಿ, ವಿಷ್ಣುವಿನ ಆರಾಧನೆ, ನಿಷ್ಕಾಮಕರ್ಮ ಮೊದಲಾದ ವಿಚಾರಗಳನ್ನು ತಿಳಿಸಿ, ವಿದ್ಯಾಗುರುವನ್ನು ಸ್ಮರಣೆ ಮಾಡಿ ಪತಿವ್ರತೆಯರ ಮಹಿಮೆ ಆಚಂದ್ರಾರ್ಕವಾಗಿರಲಿ, ಪ್ರಭು ಚಿಕ್ಕದೇವರಾಯರ ಧರ್ಮ ಪರಿಪಾಲನೆಯಲ್ಲಿ ದೇಶ ಸುಭಿಕ್ಷವಾಗಿರಲಿ, ಕನ್ನಡಿಗರು ಘನವಂತರಾಗಲಿ ಎಂದು ಮಂಗಳ ಹಾಡಿದ್ದಾಳೆ.

ಹದಿನೇಳನೆಯ ಶತಮಾನದ ಸಾಮಾಜಿಕ ಸ್ಥಿತಿಗತಿಗಳಿಗನುಗುಣವಾಗಿ ರಚಿಸಿರುವ ಈ ಕೃತಿಯನ್ನು ಇಪ್ಪತ್ತೊಂದನೆಯ ಶತಮಾನದಲ್ಲಿ ನಿಂತು ಪ್ರತಿ ವಾಕ್ಯವನ್ನು ಪ್ರಸ್ತುತ ಸ್ಥಿತಿಯಲ್ಲಿ ತೂಗಿನೋಡುವುದು ಉಚಿತವೆನಿಸುವುದಿಲ್ಲ. 'ಹದಿಬದೆಯ ಧರ್ಮ'ವು ಒಂದು ಪ್ರಸಂಗ ಅಥವಾ ಕತೆಯ ವರ್ಣನೆಯಲ್ಲ, ಒಬ್ಬ ಮಹಿಳೆಯ ಕುರಿತಾದ ವಿಚಾರವಲ್ಲ ಇದು ಒಂದು ಸಮಾಜದ ಪತಿ–ಪತ್ನಿಯರಿಗೆ ಕಿವಿಮಾತು, ಇಲ್ಲಿನ ಕೆಲ ವಿಚಾರಗಳು ಸಾರ್ವತ್ರಿಕ–ಸಾರ್ವಕಾಲಿಕವಾಗಿವೆ.

**ದೇವೀರಾಂಬೆ**

ದೇವೀರಾಂಬೆಯು ಹದಿನೆಂಟನೆಯ ಶತಮಾನದಲ್ಲಿದ್ದ ಮೈಸೂರಿನ ಅರಸಿ. ಮೈಸೂರು ದೊರೆ ಚಾಮರಾಜೇಂದ್ರನೃಪನ ರಾಣಿ ಹಾಗೂ ಮಹಿಸೂರು ರತ್ನಸಿಂಹಾಸನಾರೂಢ ಕೃಷ್ಣರಾಜೇಂದ್ರ ಮಹಾಪ್ರಭುವಿನ ಮಹಾಮಾತೋಶ್ರೀ. ಇವಳು 'ರಾಜಾವಳಿ ಕಥೆ'ಯನ್ನು ರಚಿಸಿದ ಕವಿ ದೇವಚಂದ್ರನನ್ನು ಆದರಿಸಿ, ಅಪೂರ್ಣವಾಗಿದ್ದ 'ರಾಜಾವಳಿ ಕಥೆ' ಗ್ರಂಥವನ್ನು ಸಂಪೂರ್ಣಗೊಳಿಸಲು ಪ್ರೇರಣೆ ನೀಡಿದವಳು. ಕವಿಯು

ಇವಳನ್ನು ಮಹಾಮಾತೂಶ್ರೀ ಎಂದು ಸಂಬೋಧಿಸಿದ್ದಾನೆ. ಇವಳು "ರಾಜಾವಳಿಕಥೆಯಂ ಚೆನ್ನಾಗಿ ಪರಾಂಬರಿಸಿ ಯದುಕುಲಾಗ್ರಗಣ್ಯರಪ್ಪ ಈ ಮಹಿಸೂರ ರಾಜಪರಮೇಶ್ವರರುಗಳ ವಂಶ ಪರಂಪರೆಯಂ ಆಮೂಲವಾಗಿ ಎಡೆಬಿಡದೆ ಸಹಜವಾಗಿ ಬರೆದು ಒಪ್ಪಿಸುವುದೆಂದು" ಹೇಳಿ ದೇವಚಂದ್ರನು ರಚಿಸಿದ ರಾಜಾವಳಿಕಥೆಯನ್ನು ಒಮ್ಮೆ ಓದಿ (ಓದಿಸಿ ಕೇಳಿ) ಅದರಲ್ಲಿ ಮೈಸೂರು ಅರಸರ ವಂಶಾವಳಿಯನ್ನು ಸೇರಿಸಿ, ತಂದು ಒಪ್ಪಿಸಲು ಸೂಚಿಸಿದಳು.

ತನ್ನ ಕೃತಿಗೆ ಮನ್ನಣೆಯಿತ್ತು, ತನ್ನನ್ನು ಪೋಷಿಸಿದ ದೇವೀರಾಂಬೆಯನ್ನು ಕುರಿತು ದೇವಚಂದ್ರನು ಈ ರೀತಿಯಾಗಿ ಬಣ್ಣಿಸಿದ್ದಾನೆ.

**ಚಾಮರಾಜೇಂದ್ರನೃಪಸತಿ ಭಾಮಿನಿಯರಿಗಧಿಕ ಸುಗುಣೆ ಜ್ಞಾನಾಭರಣೆ**
**ಸೋಮೆ ಸದ್ಧರ್ಮವಾರ್ಧಿಗೆಈ ಮಹಿಸೂರೀಶನಂಬೆ ದೇವೀರಾಂಬೇ॥**

**ರೂಪ: ಅತಿಶಯ ರೂಪಲಿ ರತಿ ಭಾರತಿ ವಿದ್ಯದಿ ಸೊಬಗಿನಿಂದ ರೋಹಿಣಿಯೆನಿಸಿದ**
**ಪತಿಭಕ್ತೆ ಸಜ್ಜನಸ್ತುತೆ ಮತಿಮಾನ್ವಿತೆಲೋಕದಾಂಬೆ ದೇವೀರಾಂಬೆ॥**

**ಗುಣ: ಆಚಾರ ಶೀಲ ನಿರ್ಮಲ ಶ್ರೀ ಚೆಲುವಿಕೆ ಸತ್ಯವಾಣಿ ಸದ್ಗುಣಮಣಿಯುಂ**
**ಯಾಚಕಜನಚಿಂತಾಮಣಿ ಭೂಚಕ್ರದಿ ಕೀರ್ತಿಬಿಂಬೆ ದೇವೀರಾಂಬೇ॥**

**ವಿದ್ಯೆ: ಆವೊಂ ಪೊಗಳುವನಪ್ರತಿ ದೇವೀರಾಂಬಿಕೆಯ ಕುಶಲಮತಿ ಅತಿಶಯಮಂ**
**ಸಾವದ್ಯವುಳಿದಂ ತತ್ವದ ಭಾವವ ಶಾಸ್ತ್ರದೊಳೆ ತಿಳಿದು ನಿಶ್ಚಯವಾಂತಳ್॥**

**ಕ್ಷಮೆ: ರೂಪಿಗೆ ಗುಣಮಾಭರಣಂ ರೂಪು ಗುಣಂಗಳಿಗೆ ಜ್ಞಾನ ತಾನಾಭರಣಂ**
**ರೂಪು ಗುಣ ಜ್ಞಾನ ಮೂರಕೆ ತಾ ಪಿರಿದಾಭರಣ ಕ್ಷಮೆಯು ನೆಲೆಗೊಂಡಿಪ್ಪವು॥**

ಈ ರೂಪ ಗುಣ ವಿದ್ಯೆ ಮೂರಕ್ಕೂ ಹಿರಿದಾದ ಕ್ಷಮೆಯು ಇವಳಲ್ಲಿ ನೆಲೆಗೊಂಡಿದೆ ಎಂದು ಬಣ್ಣಿಸಿದ ಪರಿ ಸೊಗಸಾಗಿದೆ.

**ಕರ್ಮೋಪಶಮದಿ ಸುಮತಿಯು ನಿರ್ಮಲಮಾಗುದಿಸೆ ನಯದಿ ತತ್ವಾರ್ಥಂಗಳ**
**ವೊರ್ಮೊದಲೊಳೆ ತಿಳಿದು ನೆರೆ ಸದ್ಧರ್ಮವ ಪಿಡಿವಧಿಕ ಬುದ್ಧಿ ತಾ ನೆಲೆಗೊಂಡುದು**

**ತಾರಾ ಮಂಡೋದರಿ ಸೀತಾ ರೇವತಿ ಸುಪ್ರಭಾ ಯಶಸ್ವಿ ಸುನಂದಾ**
**ನಾರಿಯರ ಗುಣಮೆ ತಾ ದೇವೀರಾಂಬೆಯ ದೇಹದೊಳಗೆ ನೆಲೆಯಾಗಿರ್ಪುದು॥** ಎಂಬ ಪದ್ಯದಲ್ಲಿ ಸುಪ್ರಭಾ, ಯಶಸ್ವಿ, ಸುನಂದಾ ಮೊದಲಾದ ಜೈನ ಪುರಾಣ ಸ್ತ್ರೀಯರಿಗೂ ದೇವೀರಾಂಬೆಯನ್ನು ಹೋಲಿಸಿದ್ದಾನೆ.

**ಶ್ರೀಯಂ ವಿತರಣದೊಳ್ ವಾಕ್**
**ಶ್ರೀಯಂ ಸೌಜನ್ಯವೃತ್ತಿಯೊಳ್ ದಿಗ್ವಿಜಯ**
**ಶ್ರೀಯಂ ಭುಜಬಲದೊಳ್ ಸ್ವ**
**ಶ್ರೀಯಂ ಸಮಂತಾಳ್ದ ಕೃಷ್ಣರಾಜನರೇಂದ್ರಂ**

ತಾನು ರಚಿಸಿರುವ ಕಾವ್ಯವು ದೊರೆಯಿಂದ ಮಾನ್ಯತೆ ಪಡೆಯಲಿಲ್ಲವೆಂದು ಅಳುಕಿದ್ದ ದೇವಚಂದ್ರನು, ದೇವೀರಾಂಬೆಯ ಕೃಪೆ ದೊರೆತದ್ದಕ್ಕೆ ಸಂತಸಪಟ್ಟು ಅವಳನ್ನು ನಾನಾ ಪರಿಯಲ್ಲಿ ಸ್ತುತಿಸಿ, ಅವಳ ಕುರಿತಾದ ಪದ್ಯ ರಚಿಸಿರುವುದನ್ನಿಲ್ಲಿ ಕಾಣುತ್ತೇವೆ.

**ಕವಿ ದೇವಚಂದ್ರ :** ಕೃತಿಯಲ್ಲಿ ಸ್ವತಃ ಕವಿಯೇ ತನ್ನ ಕುರಿತಾಗಿ ತಿಳಿಸಿರುವ ಕೆಲವು ವಿಚಾರಗಳನ್ನು ಗಮನಿಸಬಹುದು, ಈತನ ಊರು ಚಾಮರಾಜನಗರ ಜಿಲ್ಲೆಯ ಮಲೆಯೂರು. ಈತನ ತಾತ ದೇವಚಂದ್ರ, ತಂದೆ ದೇವಯ್ಯ, ತಾಯಿ ಕುಸುಮಾಜಮ್ಮ, ಇವರ ಮೂವರು ಮಕ್ಕಳೂ ಅನೇಕ ಶಾಸ್ತ್ರಾವಲೋಕನದಿಂ ಲೌಕಿಕ ಪಾರಮಾರ್ಥಿಕಮಂ ತತ್ವ ನೀತಿ ವೈದ್ಯ ಜ್ಯೋತಿಷ ಮಂತ್ರವಾದಾದಿ ವಿದ್ಯಂಗಳನ್ನು ಕಲಿತಿದ್ದರು. ಇವರಲ್ಲಿ ಕಡೆಯವನಾದ ದೇವಚಂದ್ರನು ಪುಟ್ಟಿ ಪದಿನಾಲ್ಕು ವರ್ಷಾರಭ್ಯದಿ ಕರಣಿಕಾಗ್ರಗಣ್ಯನೆನಿಸಿ ಕವಿ ಗಮಕಿ ವಾಗ್ಮಿತ್ವದಿಂ ಸಜ್ಜನನೆನಿಸಿ ಬಾಳಿದವನು (ಪು.೩೧೪). ಇವನು ಹೇಳುವ ಪ್ರಕಾರ ಇವನು ಹುಟ್ಟಿದ್ದು ಕ್ರಿ.ಶ.೧೭೭೦ರಲ್ಲಿ. ಕವಿಯು ತನ್ನನ್ನು ತ್ರಿದಶೇಂದು, ವಿಬುಧೇಂದು ಎಂದು ಮೊದಲಾಗಿ ಕರೆದುಕೊಂಡಿದ್ದಾನೆ.

"ರಾಜಾವಲಿ ಕಥೆಯನ್ನು ಸಂಗ್ರಹಿಸಿ ಹನ್ನೊಂದಧ್ಯಾಯವನ್ನು ಮಹಾರಾಜಾಧಿರಾಜ ಮಹಿಸೂರ ಕೃಷ್ಣರಾಜ ಒಡೆಯರ್ಗೆ ಒಪ್ಪಿಸಲು ಮೂರು ನಾಲ್ಕು ವರುಷದಿಂ ಕೂಡಿಬರಲಿಲ್ಲಾ. ಆದರೆ ಪ್ಲವಸಂವತ್ಸರದ ಆಶ್ವೀಜದೊಳು ಮಹಾಮಾತುಶ್ರೀ ದೇವೀರಾಂಬಿಕೆಯವರು ಮೊದಲಿಂ ಕಡೆಯವರೆಗೆ ಪರಾಂಬರಿಸಿದರು" ಎಂಬ ವಿಚಾರವನ್ನು ಸ್ವತಃ ದೇವಚಂದ್ರನೇ ತಿಳಿಸಿದ್ದಾನೆ.

'ತಾನು ಪಂಡಿತನಾಗಿದ್ದೂ, ಅರಮನೆಯ ಪೂಜಾಕಾರ್ಯಗಳಿಗೆ ಬರುತ್ತಿದ್ದೂ, ತನ್ನ ಕೃತಿಯನ್ನು ಮಹಾರಾಜರಿಗೆ ಒಪ್ಪಿಸಲಿಕ್ಕೆ ಆಗಿರಲಿಲ್ಲ' ಎಂಬುದು ದೇವಚಂದ್ರನ ಅಳಲಾಗಿತ್ತು. ಹಾಗಾಗಿ ಅವನು ರಾಜಮಾತೆ ದೇವೀರಾಂಬೆಯನ್ನು ಭೇಟಿಯಾಗಿ ಬಿನ್ನವಿಸಿಕೊಂಡೆನೆಂದು ತನ್ನ ಕೃತಿಯಲ್ಲಿ ತಿಳಿಸಿದ್ದಾನೆ.

ಸಕಲ ಸದ್ಗುಣಾಭರಣೆ ಲೋಕಮಾತೆ ಸಮ್ಯಕ್ತ್ವಚೂಡಾಮಣಿಯಪ್ಪ ದೇವೀರಾಂಬಿಕೆಯು ಈ ಸತ್ಯವಾಕ್ಯಮಾದ ರಾಜಾವಲಿ ಕಥಾಸಾರಮೆಲ್ಲಮಂ ಮೊದಲಿಂ ಕಡೆವರಂ ಚೆನ್ನಾಗಿ ಲಾಲಿಸಿ ಸಂತೋಷಂ ತಾಳ್ದು ಕಥಕಂಗೆ (ದೇವಚಂದ್ರನಿಗೆ) ಅತಿಶಯಮಾದ ವಸ್ತ್ರ ತಾಂಬೂಲಾದಿಗಳನ್ನಿತ್ತು ಮನ್ನಿಸಿ ಈ ಮಹಿಸೂರ ಮಹಾಪರಮೇಶ್ವರರುಗಳ ಅನ್ವಯ ಪರಂಪರೆಯುಮಿದರೊಳಿರ್ದುದಂ ತೆಗೆದು ಆ ವಂಶದಾಮೂಲ ಪರಂಪರೆಯಂ ವ್ಯಕ್ತಮಪ್ಪಂತು ಸಂಕ್ಷೇಪದಿಂ ಬೇರೆ ಬರೆದು ಒಪ್ಪಿಸುವುದೆಂದು ನಿರೂಪಿಸಲಾ ಪರಂಪರೆಯಂ ನಾಮಮಾತ್ರದಿಂ ಬರೆದೊಪ್ಪಿಸಿದೆ" (ದ್ವಾದಶಾಧಿಕಾರಂ). ಹೀಗೆ ದೇವಚಂದ್ರನು ಮೊದಲು ರಚಿಸಿದ ಕೃತಿಯನ್ನು ದೇವೀರಾಂಬೆಯು ಪರಾಂಬರಿಸಿ, ದೇವಚಂದ್ರನನ್ನು ಸತ್ಕರಿಸಿದಳಲ್ಲದೆ ಮೈಸೂರ ಚರಿತ್ರೆಯನ್ನು ರಚಿಸಬೇಕೆಂದು ಆದೇಶಿಸುತ್ತಾಳೆ. ಅದರಂತೆ ಪುನಃ ದೇವಚಂದ್ರನು ಮತ್ತೆರಡು ಅಧಿಕಾರಗಳನ್ನು ಬರೆದು ಇದರೊಂದಿಗೆ ಸೇರಿಸಿ ತರುತ್ತಾನೆ.

ದೇವಚಂದ್ರನು "ಈ ಕರ್ನಾಟ ದೇಶದೊಳು ನಡೆದ ಪ್ರಪಂಚುಗಳನೆಲ್ಲಾ ಕ್ರೋಡೀಕರಿಸಿ ಬರೆದು ನಾವು ಇದ್ದಲ್ಲಿಗೆ ತೆಗೆದುಕೊಂಡು ತಿಂಗಳು ಒಳಗೆ ಬಂದರೆ ಭಾರಿ ಸಂಬಳವನ್ನು ಮಾಡಿಸಿಕೊಡುತ್ತೇವೆ (ಪು.೩೧೬) ಎಂದು ಹೇಳಿದ ಮೆಕೆಂಜಿ ಈ ಕೃತಿಯನ್ನು ಆರಂಭಿಸಲು ಕಾರಣವಾದರೆ, ಈ ಕೃತಿಯನ್ನು ಸಂಪೂರ್ಣ ಗೊಳಿಸಲು, ಅರಸಿ ದೇವೀರಾಂಬೆಯೇ ಕಾರಣವೆಂಬುದನ್ನೂ ಸ್ಪಷ್ಟವಾಗಿ ತಿಳಿಸಿದ್ದಾನೆ.

**ರಾಜಾವಳಿ:** ಗದ್ಯರೂಪದ ಈ ಕೃತಿಯಲ್ಲಿ ವಿಷಯ ನಿರೂಪಣೆಗೆ ಪೂರಕವಾಗಿ ಸಂಸ್ಕೃತ ಶ್ಲೋಕಗಳನ್ನೂ, ಪ್ರಾಕೃತ ಗಾಹೆಗಳನ್ನು, ಕೆಲವು ಕನ್ನಡ ಪದ್ಯಗಳನ್ನೂ ಬಳಸಿಕೊಂಡಿದ್ದಾನೆ. ತನ್ನ ಈ ಕೃತಿಯನ್ನು ಆರಂಭದಲ್ಲಿ ರಾಜಾವಳಿ ಕಥಾವತಾರ' (ಪು.೩) ಎಂದೂ ಕಡೆಯಲ್ಲಿ ರಾಜಾವಲಿ ಕಥಾಸಾರ' ಎಂದೂ ಮತ್ತೆ ಕೆಲವೆಡೆ ರಾಜಾವಳಿ ಕಥೆ' ಎಂದೂ ಕರೆದಿದ್ದಾನೆ.

**ಹಳಗನ್ನಡ ಬೆಳುಗನ್ನಡ**
**ವಳಗನ್ನಡ ವಚ್ಚಗನ್ನಡಂಗಬ್ಬದೊಳುಂ**
**ತಿಳಿದೆಲ್ಲ ಮಿಶ್ರಮಾಗಿಯು**

**ಮಿಳೆಗರವಂದದೊಳೆ ಪೇಳ್ದೆ ರಾಜಾವಲಿಯಂ॥** ಎಂದು ಕವಿ ತನ್ನ ಕಾವ್ಯವು ಮಿಶ್ರ ಭಾಷೆಯಿಂದ ರಚಿತವಾಗಿದೆ ಎಂದು ತಿಳಿಸಿದ್ದಾನೆ.

ಇತಿಹಾಸ, ಪುರಾಣ, ಸಾಹಿತ್ಯ ಎಲ್ಲವನ್ನೂ ಒಳಗೊಂಡಿರುವ ಈ ಕೃತಿಯನ್ನು ಒಟ್ಟು ಹದಿಮೂರು ಅಧಿಕಾರಗಳಲ್ಲಿ (ಅಧ್ಯಾಯ) ರಚಿಸಲಾಗಿದೆ. ಕರ್ನಲ್ ಮೆಕೆಂಝಿಯ ಕೋರಿಕೆಯಂತೆ ದೇವಚಂದ್ರನು ಈ ಕೃತಿಯನ್ನು ರಚಿಸಲು ಆರಂಭಿಸಿದ್ದಾನೆ. ಆದರೆ ಅತ್ಯಲ್ಪಕಾಲದಲ್ಲಿ ಮೆಕೆಂಝಿಯು ಮೈಸೂರಿನಿಂದ ನಿರ್ಗಮಿಸಿದ್ದಾನೆ. ಆನಂತರ ಮೈಸೂರು ಅರಸರ ಪೋಷಣೆ ದೊರಕೀತೆಂಬ ಆಸೆಯಿಂದ ಹಲವು ವರ್ಷಗಳಕಾಲ ಪ್ರಯತ್ನಿಸಿ, ದೊರೆಯನ್ನು ಸಂಧಿಸಲು ಆತನಿಗೆ ಸಾಧ್ಯವಾಗಿಲ್ಲ. ಕಡೆಗೆ ರಾಜಮಾತೆ ದೇವೀರಾಂಬೆಯನ್ನು ಭೇಟಿಮಾಡಿ ತನ್ನನ್ನು ಪರಿಚಯಿಸಿಕೊಂಡು, ತನ್ನ ಅಪೂರ್ಣ ಕೃತಿಯನ್ನು ಅವಳಿಗೆ ಒಪ್ಪಿಸಿದ್ದಾನೆ. ಆನಂತರ ಮೈಸೂರು ಅರಸಿ ದೇವೀರಾಂಬೆಯ ಅಜ್ಞಾನುಸಾರ ಮೈಸೂರರಸರ ವಿಚಾರವನ್ನೊಳಗೊಂಡಂತೆ ಮತ್ತೆರಡು ಅಧಿಕಾರವನ್ನೂ ರಚಿಸಿರುವುದಾಗಿ ಕವಿ ತಿಳಿಸಿದ್ದಾನೆ.

ಈ ಕೃತಿಯಲ್ಲಿನ ಹಲವಾರು ಐತಿಹಾಸಿಕ ಅಂಶಗಳು ಇತಿಹಾಸಕಾರರಿಗೆ ಉತ್ತಮ ಮಾಹಿತಿ ನೀಡಿವೆ, ಆದರೆ ಇದರೊಂದಿಗೆ ಐತಿಹ್ಯಗಳೂ ಹೇರಳವಾಗಿ ಸೇರಿಕೊಂಡಿವೆ. ವಿಷಯ ನಿರೂಪಣೆಗೆ ನೀಡಿರುವ ಹಲವಾರು ಜನಪದ ಧಾಟಿಯ ಕಥೆಗಳು ಉತ್ತಮವಾಗಿವೆ. ದುರ್ಬುದ್ಧಿಯ ಮಗ, ಅವಿವೇಕಿ ಗೌಡ, ಪರರ ಕಷ್ಟ ತಿಳಿಯಲಾರದ ಸುಖಿಗಳು, ಅನ್ಯೋನ್ಯ ಪ್ರೇಮಿಗಳು, ಹೆಂಗಸರ ನೀಚ ಸ್ವಭಾವವನ್ನು ನಿರೂಪಿಸುವ ಜಾರ ಸ್ತ್ರೀ ಕಥೆ, ಹೀಗೆ ಅನೇಕ ಕಥೆಗಳ ಉದಾಹರಣೆ ಇದೆ. ಸಂದರ್ಭಕ್ಕೆ ತಕ್ಕಂತೆ ಪಡೆನುಡಿಗಳ ಬಳಕೆ ದೇಸಿ ಸೊಗಡನ್ನು ನೀಡಿದ್ದಾನೆ.

ಕವಿ ದೇವಚಂದ್ರನು ತಾನು ರಚಿಸಿರುವ ಹಲವು ಕೃತಿಗಳ ಪಟ್ಟಿ ನೀಡಿದ್ದಾನೆ. ಆದರೆ ಅವುಗಳಲ್ಲಿ ಹಲವಾರು ಕೃತಿಗಳು ಇಂದಿಗೆ ಅಲಭ್ಯವಾಗಿದೆ. ಬಹುಶಃ ರಾಜಾವಳಿ ಕಥಾಸಾರ ಕೃತಿಯು ಉಳಿದು ಬಂದಿರುವುದಕ್ಕೆ ದೇವೀರಾಂಬೆಯ ಕೃಪೆಯು ಕವಿಗೆ ದೊರೆತಿದ್ದುದೇ ಕಾರಣವಾಗಿದೆ.

**ಗೌರಮ್ಮಣ್ಣಿ**

ಗೌರಮ್ಮಣ್ಣಿಯು ಮೈಸೂರಿನ ರಾಜ ಕೃಷ್ಣರಾಜೇಂದ್ರನ ರಾಣಿ. ಇತಿಹಾಸದಲ್ಲಿ ಮೊದಲನೆ ಕೃಷ್ಣರಾಜ ಅಥವಾ ದೊಡ್ಡ ಕೃಷ್ಣರಾಜಒಡೆಯರ್ ಎಂದು ಕರೆಯಲಾಗುವ ಕೃಷ್ಣರಾಜೇಂದ್ರ ಕ್ರಿ.ಶ.೧೭೧೩ರಲ್ಲಿ ಪಟ್ಟಕ್ಕೆ ಪಟ್ಟಕ್ಕೆ ಬಂದು ಸುಮಾರು ೧೮ ವರ್ಷಗಳ ಕಾಲ ಆಳ್ವಿಕೆ ನಡೆಸಿದ ಅರಸ. ಈ ಆಧಾರದಿಂದ ಗೌರಮ್ಮಣ್ಣಿಯೂ ಕೂಡ ಹದಿನೆಂಟನೆಯ ಶತಮಾನದ ಪೂರ್ವಾರ್ಧದವಳೆಂದು ಗುರುತಿಸಬಹುದು.

ಗೌರಮ್ಮಣ್ಣಿಯು ಕಾವ್ಯ-ನಾಟಕಗಳನ್ನು ಅಧ್ಯಯನ ಮಾಡಿದವಳಾಗಿದ್ದಳು. ಇವಳು ಕೆಲವು ಕೃತಿಗಳನ್ನು ಪ್ರತಿಮಾಡಿಸಿಕೊಂಡಿರುವುದಕ್ಕೆ ಹಸ್ತಪ್ರತಿ ಪುಷ್ಪಿಕೆಗಳಲ್ಲಿ ಆಧಾರ ದೊರಕುತ್ತದೆ. 'ದಿವಿಯ ಮಹಾಸೂರಿ ಪ್ರಬಂಧ'ದ ಹಸ್ತಪ್ರತಿಯಲ್ಲಿ "ಅರಸಿ ಚೆಲುವ ಗೌರಮ್ಮಣ್ಣಿಂದಾಜ್ಞೆವೆತ್ತೀ ವರದಿವಿಯ ಮಹಾಸೂರಿ ಪ್ರಬಂಧಂ ವಿರೋಧಿಕರ ಬರಿಸದ ರಾಧಾಮಾಸದೊಳ್ ಗ್ರಂಥಮೆಲ್ಲಂ ಬರೆದುದು ಶ್ರೀ ತತಿ ಮೈಂಗಾರರಿಂ" ಎಂಬ ಉಲ್ಲೇಖ ಕಂಡು ಬರುತ್ತದೆ[೩]. ಇಲ್ಲಿ ತಿಳಿಸಿರುವಂತೆ ಅರಸಿ ಗೌರಮ್ಮಣ್ಣಿಯು 'ದಿವಿಯ ಮಹಾಸೂರಿ' ಪ್ರಬಂಧದ ಪ್ರತಿಯನ್ನು ಆಜ್ಞೆನೀಡಿ ಬರೆಯಿಸಿದ್ದಾಳೆ.

ಗೌರಮ್ಮಣ್ಣಿಯು ಕೇವಲ ಕಾವ್ಯಗಳನ್ನು ಪ್ರತಿಮಾಡಿಸಿಕೊಂಡು ಅಧ್ಯಯನ ಮಾಡುತ್ತಿದ್ದುದಷ್ಟೇ ಅಲ್ಲದೆ, ಕವಿಗೆ ಆಶ್ರಯ ನೀಡಿ ಕಾವ್ಯರಚನೆಗೆ ಕಾರಣಳಾದವಳಾಗಿದ್ದಾಳೆ. ೧೮ನೆಯ ಶತಮಾನದಲ್ಲಿದ್ದ ಕೇಶವ ಎಂಬ ಕವಿ

ಪಟ್ಟದರಸಿ ಗೌರಮ್ಮಣ್ಣಿಯನ್ನು ಕುರಿತಂತೆ ಕಾವ್ಯವೊಂದನ್ನು ರಚಿಸಿ, ಇವಳನ್ನು ಕುರಿತ ಕೆಲವು ಹಾಡುಗಳನ್ನೂ ರಚಿಸಿದ್ದಾನೆ.

ಅರಸಿಯೋರ್ವಳನ್ನು ಕುರಿತಂತೆ ಈ ಪ್ರಕಾರವಾದ ಕೃತಿಯೊಂದು ರಚಿತ'ವಾಗಿರುವುದು ವಿಶೇಷವೆನಿಸಿದೆ. ಅರಸಿ ಗೌರಮ್ಮಣ್ಣಿಯ ರೂಪ, ಸ್ವಭಾವ, ದಿನಚರಿಗಳನ್ನು ಮೂರು ಸಂಧಿಗಳಲ್ಲಿ ಸುಮಾರು ೧೪೪ ಪದ್ಯಗಳಲ್ಲಿ ಬಣ್ಣಿಸಿರುವ ಈ ಕೃತಿಯನ್ನು ಕವಿಯು 'ಗೌರಮ್ಮಣ್ಣಿಯವರ ಚರಿತ್ರೆ' ಎಂದು ಹೆಸರಿಸಿದ್ದಾನೆ. ಜಿ.ಜೆ.ಮಂಜುನಾಥನ್ ಅವರ ಸಂಪಾದನೆಯಲ್ಲಿ ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಯಿಂದ ಈ ಕೃತಿಯು ಪ್ರಕಟವಾಗಿದೆ[೩೩]. ಈ ಕೃತಿಯ ಹಸ್ತಪ್ರತಿಯು ಸಾಕಷ್ಟು ತ್ರುಟಿತವಾಗಿದ್ದು ಮೊದಲನೆಯ ಸಂಧಿಯ ೪೬ನೆಯ ಪದ್ಯದ ನಂತರ ಕೆಲವು ಪದ್ಯಗಳು ಹಾಗೂ ಎರಡನೆಯ ಸಂಧಿಯ ಆರಂಭಧ ೪೧ ಪದ್ಯಗಳು ಲುಪ್ತವಾಗಿವೆ.

ಕೃತಿಯು, ಅರಸಿ ಗೌರಮ್ಮಣ್ಣಿಯನ್ನು ಯಾವುದೇ ಪೌರಾಣಿಕ ವ್ಯಕ್ತಿಗೂ ಹೋಲಿಸಿ ರಚನೆಯಾಗಿರದೆ, ನೇರವಾಗಿ ಗೌರಮ್ಮಣ್ಣಿಯ ಸೌಂದರ್ಯದ ಬಣ್ಣನೆ ನೀಡಿದೆ. ಆರಂಭದ ೭ ಪದ್ಯಗಳು ದೇವತಾ ಸ್ತುತಿಗೆ ಮೀಸಲಾಗಿವೆ. ಉಳಿದ ಪದ್ಯಗಳು ಅರಸಿಯ ದಾನಗುಣ, ದೈವಭಕ್ತಿ, ದೈನಂದಿನ ಬದುಕು, ಅರಸನೊಂದಿಗಿನ ಸರಸ, ವಿಲಾಸ, ವೈಭವ, ಸೌಂದರ್ಯ, ಅಲಂಕಾರ ವಿಶೇಷವಾಗಿ ಅರಸಿಯ ಸ್ವಭಾವ ಹಾಗೂ ವಿದ್ಯೆಯನ್ನು ಕುರಿತು ಬಣ್ಣಿಸಲಾಗಿದೆ.

**ಸರಸಸಂಗೀತ ಸಾಹಿತ್ಯಕೋವಿದ ವಿದ್ಯಾ**
**ಶರಧಿ ಶ್ರೀಕೃಷ್ಣಭೂಮಿಪನ**
**ತರುಣಿ ಗೌರಮ್ಮನ... (೩–೧೬)**

**ಸರಸಸಂಗೀತ ವೀಣಾವಾದ್ಯ ಮೊದಲಾದ**
**ಪರಿಪರಿಗಾನ ವಿದ್ಯದಲಿ**
**ನೆರೆಜಾಣೆ ಶಾಸ್ತ್ರ ಕವಿತ್ವ ಸಾಹಿತ್ಯದಿ**
**ತರುಣಿ ಗೌರಮ್ಮಗೆ... (೩–೩೨)**

**ಸುರನಾರಿಯರು ಸಮವಲ್ಲ ಗೌರಮ್ಮಗೆ**
**ಭರತಶಾಸ್ತ್ರದೊಳು ನಿಪುಣೆ**
**ಪರಿಪರಿ ಪುಸ್ತಕದೋದುಗಾರಿಕೆಯಲ್ಲಿ**
**ಧರೆಯೊಳಾರು ಸಾಟಿಯುಂಟೆ (೩–೩೪)**

**ಚದುರಂಗ ಪಗಡೆ ದಾಯಗಳಾಡುವುದರಲ್ಲಿ**
**ಸುದತಿಗೆ ಸಮವಿಲ್ಲವೆಂದು**
**ಹೃದಯದಿ ಕಡುಮೆಚ್ಚಿ ಶ್ರೀಕೃಷ್ಣರಾಯನು**
**ಮುದದಿಂದಲೊಲಿದು ಕೈವಿಡಿದ (೩–೪೧)**

**ಎನಿತು ದಿನದ ತಪಸಿನ ಫಲವಿರ್ಪುದೊ**
**ತನಗೆಂದು ಬಹಳ ಸಂತಸದಿ**
**ದಿನನ ಸಮದ ಕೃಷ್ಣರಾಯನೊಲಿದನೆಂದು**
**ವನಿತೆ ಗೌರಮ್ಮನೊಪ್ಪಿದಳೂ॥**

**"ಅರುಣೋದಯದೊಳೆದ್ದು ದೇವಾದಿದೇವರ**
**ಸ್ಮರಣೆಯ ಮಾಡಿ ಭಕ್ತಿಯಲಿ॥** ಎಂಬ ಮೊದಲಾದ ಅರಸಿಯ ಕುರಿತಾದ ಪದ್ಯಗಳನ್ನು ಕಾಣಬಹುದು.

ಈ ಕೃತಿಯೊಂದಿಗೆ ಗೌರಮ್ಮಣ್ಣಿಯ ಕುರಿತಾದ ಆರು ಹಾಡುಗಳು ರಚಿತವಾಗಿವೆ. ಇವುಗಳಿಗೆ ರಾಗ ಹಾಗೂ ತಾಳದ ನಿರ್ದೇಶನವಿದೆ. ಇವು ಕ್ರಮವಾಗಿ ಕಲ್ಯಾಣಿರಾಗ ಝುಂಪೇತಾಳ, ಸಾವೇರಿ ರಾಗ ಅಟ್ಟತಾಳ, ತೋಡಿ ರಾಗ

ಆದಿತಾಳ, ಶ್ರೀರಾಗ, ಕಾಂಬೋಧಿ ರಾಗ ಝುಂಪೆತಾಳಗಳಲ್ಲಿ ರಚಿತವಾಗಿವೆ. ಇಲ್ಲಿಯೂ ಕೂಡ ಅರಸಿಯ ರೂಪು, ಲಾವಣ್ಯ, ವೈಭವ, ವಿದ್ಯೆ, ಗುಣಗಳನ್ನು ಹೊಗಳಲಾಗಿದೆ.

ಕವಿಯು, ಅರಸಿಯ ದಾನಗುಣವನ್ನು ಈ ಸಾಂಗತ್ಯ ಕೃತಿಯಲ್ಲಿ ಹಾಡಿ ಹೊಗಳಿರುವನಲ್ಲದೆ, ಬಿಡಿ ಕೀರ್ತನೆಗಳಲ್ಲಿಯೂ ಇವಳು ಹಲವರನ್ನು ಪೋಷಿಸಿದವಳೆಂದು ಹಲವಾರು ಬಗೆಯಲ್ಲಿ ಈ ರೀತಿ ತಿಳಿಸಿದ್ದಾನೆ:

**ಕವಿ ಕೇಶವ :** ಸಾಂಗತ್ಯದಲ್ಲಿ ರಚಿತವಾಗಿರುವ ಈ ಕೃತಿಯನ್ನು ರಚಿಸಿದ ಕವಿ ಕೇಶವ ತನ್ನ ಹೆಸರನ್ನು 'ಶ್ರೀ ವೇಲಾಪುರಿವಾಸಂ ಶ್ರೀವನಿತಾಧೀಶ ಸೌಮ್ಯ ಕೇಶವರಾಯ' ಎಂದು ಹೇಳಿಕೊಂಡಿದ್ದಾನೆ. ಅರಸಿಯನ್ನು ಕುರಿತು ರಚಿಸಿರುವ ಕೀರ್ತನೆಯೊಂದರಲ್ಲಿ ತನ್ನನ್ನು ಶ್ರೀವೈಷ್ಣವ ವಿದ್ವಾಂಸನೆಂದು ಕರೆದುಕೊಂಡಿದ್ದಾನೆ. ಅಲ್ಲದೆ ವೈಕುಂಠದಾಸರ ಮೊಮ್ಮಗನೆಂದು ಪರಿಚಯಿಸಿಕೊಂಡಿದ್ದಾನೆ.

ಹದಿನೆಂಟನೆಯ ಶತಮಾನದ ಕೇಶವನೆಂಬ ಕವಿಯನ್ನು ಕವಿಚರಿತೆಕಾರರು ಕರ್ಣಾಟಕ ಕವಿಚರಿತೆಯ ಮೂರನೆಯ ಸಂಪುಟದಲ್ಲಿ ಉಲ್ಲೇಖಿಸಿದ್ದಾರೆ[೩೪]. ಇಲ್ಲಿ ಈ ಕವಿಯು ರಚಿಸಿರುವ 'ತಿರುವೇಂಗಡಾಚಾರ್ಯ ಶತಕ ಎಂಬ ಶತಕಪಂಚಕ ಕೃತಿಯನ್ನು ಪರಿಚಯಿಸುತ್ತಾ ಈತನ ಕಾಲವನ್ನು ಕ್ರಿ.ಶ.೧೭೫೦ ಎಂದು ತಿಳಿಸಿದ್ದಾರೆ, ಅರಸಿ ಗೌರಮ್ಮಣ್ಣಿಯ ಕಾಲವೂ ಇದೇ ಆಗಿದೆ. ಅಲ್ಲದೆ ಕವಿಚರಿತೆಕಾರರು ತಿಳಿಸಿರುವ ಕೇಶವ ಕವಿಯು ಕೂಡ ಮೇಲುಕೋಟೆಯವನಾದ್ದರಿಂದ ಗೌರಮ್ಮಣ್ಣಿ ಚರಿತೆಯನ್ನು ರಚಿಸಿರುವ ಕವಿ ಇವನೇ ಆಗಿದ್ದಾನೆ. ಕವಿಯು ತನ್ನನ್ನು 'ಆದಿಕೇಶವ ಪಾದಪದ್ಮಮಧುಕರ' ಎಂದು ಕರೆದುಕೊಂಡಿದ್ದಾನೆ.

ರಾಣಿಯೋರ್ವಳನ್ನು ಕುರಿತಾಗಿ ರಚಿಸಿರುವ ಅಪರೂಪದ ಕೃತಿ ಇದಾಗಿದೆ. ರಾಣಿ ಗೌರಮ್ಮಣ್ಣಿಯು ಸಾಹಿತ್ಯಕ್ಕೆ ಪ್ರೋತ್ಸಾಹ ನೀಡಿ, ಕೃತಿರಚನೆಗೆ ಪ್ರೇರಣೆಯಾಗಿರುವುದಲ್ಲದೆ ಅವಳ ಬಣ್ಣನೆ ಹಾಗೂ ದೈನಂದಿಕ ವಿಚಾರವೇ ಕಾವ್ಯದ ವಸ್ತುವಾಗಿದೆ. ರಾಜನನ್ನು ನಾಯಕನ್ನಾಗಿಸಿ ಕಾವ್ಯ ರಚಿಸಿರುವುದರ ಉದಾಹರಣೆಗಳು ಸಾಕಷ್ಟು ದೊರಕುತ್ತವೆ. ಆದರೆ ರಾಣಿಯೋರ್ವಳನ್ನು ಕುರಿತಾಗಿ ರಚಿತವಾಗಿರುವ ಕಾವ್ಯ ಬಹಳ ಅಪರೂಪವಾಗಿದೆ. ಶಾಸನ ಸಾಹಿತ್ಯಗಳಲ್ಲಿ ಒಂದೆರಡು ವೃತ್ತ ಅಥವಾ ಕಂದಪದ್ಯಗಳಲ್ಲಿ ಅರಸಿಯರನ್ನು ವರ್ಣಿಸಿರುವುದು ಕಂಡುಬರುತ್ತದೆ. ಆದರೆ ಇಷ್ಟು ಸುದೀರ್ಘವಾದ ಕೃತಿ ಅರಸಿಯ ಬಣ್ಣನೆಗಾಗಿಯೇ ರಚಿತವಾಗಿರುವುದು ಇದೊಂದೆ ಕಾವ್ಯ ಎನ್ನಬಹುದು.

**ಚೆಲುವಾಜಮ್ಮಣ್ಣಿ ಹಾಗೂ ದೇವಾಜಮ್ಮಣ್ಣಿ**

ಚೆಲುವಾಜಮ್ಮಣ್ಣಿ ಹಾಗೂ ಸೀತಾವಿಲಾಸದ ದೇವಾಜಮ್ಮಣ್ಣಿಯರು ಕ್ರಿ.ಶ.೧೭೯೯ ರಿಂದ ಕ್ರಿ.ಶ.೧೮೬೮ರ ಕಾಲಾವಧಿಯಲ್ಲಿ ಆಳ್ವಿಕೆ ನಡೆಸಿದ ಮುಮ್ಮಡಿ ಕೃಷ್ಣರಾಜ ಒಡೆಯರ ಅರಸಿಯರು. ಮುಮ್ಮಡಿಯವರ ಕಾಲದಲ್ಲಿ ಸಾಹಿತ್ಯ ಕೃಷಿ ಬಲು ಹುಲುಸಾಗಿ ಬೆಳೆದು ಬಂದಿದೆ. ಇದು ರಾಜಕೀಯ, ಸಾಮಾಜಿಕ, ಔದ್ಯೋಗಿಕ, ವಿದ್ಯಾಕ್ಷೇತ್ರ ಮೊದಲಾದ ರಂಗಗಳಲ್ಲಿ ಬದಲಾವಣೆಗೆ ತೆರೆದುಕೊಳ್ಳುತ್ತಿದ್ದಂತ ಸಂಧಿಕಾಲ. ಈ ಸಮಯದಲ್ಲಿ ಭಾಗವತ ಕೃಷ್ಣಸ್ವಾಮಿಯು ೧೮೬೯ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ ಮಹಿಷಿಯರಾದ ರಮಾವಿಲಾಸದ ಚೆಲುವಾಜಮ್ಮಣ್ಣಿ, ಸೀತಾವಿಲಾಸದ ದೇವಾಜಮ್ಮಣ್ಣಿಯವರ ಆಜ್ಞಾನುಸಾರ 'ವಾಸಿಷ್ಠರಾಮಾಯಣ ಟೀಕೆ'ಯನ್ನು ಬರೆದಿರುವುದಾಗಿ ತಿಳಿಸಿದ್ದಾರೆ[೩೫].

ಕುಮಾರವ್ಯಾಸನು "ತಿಣುಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ ತಿಂತಿಣಿಯ ರಘುವರ ಚರಿತೆಯಲಿ ಕಾಲಿಡಲು ತೆರಪಿಲ್ಲ" ಎಂದು ಕನ್ನಡದಲ್ಲಿ ಈಗಾಗಲೇ ಸಾಕಷ್ಟು ರಾಮಾಯಣ ಕೃತಿಗಳಿವೆ ಎಂದು ಹೇಳಿರುವ ಗ್ರಂಥಗಳ ಸಾಲಿಗೆ ಈ ವಾಸಿಷ್ಠರಾಮಾಯಣ ಟೀಕೆಯು ಮತ್ತೊಂದು ಸೇರ್ಪಡೆಯಾಗಿದೆ. ಆದರೂ

ನಿರೂಪಣೆ, ಕಥಾಶೈಲಿ ಮೊದಲಾದ ತಂತ್ರಗಾರಿಕೆಯಿಂದ ಒಂದೇ ವಸ್ತುವನ್ನು ಹೊಂದಿದ ವಿಭಿನ್ನ ಕೃತಿಗಳು ತಮ್ಮದೇ ಆದ ಮಹತ್ವವನ್ನು ಹೊಂದಿರುವಂತೆ ಈ ಕೃತಿಯೂ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿರುತ್ತದೆ. ಎಲ್ಲಕ್ಕಿಂದ ಮುಖ್ಯವಾಗಿ ಅರಸಿಯರ ಆದೇಶದಂತೆ, ಅವರ ಪೋಷಿತ ಕವಿಯಿಂದ ರಚಿತವಾಗಿರುವುದು ಪ್ರಸ್ತುತ ಮುಖ್ಯವಾದ ಸಂಗತಿ ಎನಿಸಿದೆ.

**ಹಸ್ತಪ್ರತಿಗಳು:** ಕೃತಿಗಳನ್ನು ಬರೆಸುವುದಷ್ಟೇ ಅಲ್ಲದೆ, ಈಗಾಗಲೇ ರಚಿತವಾದ ಕೃತಿಗಳನ್ನು ಪ್ರತಿಮಾಡಿಸುವ ಕೆಲಸವನ್ನೂ ಅರಸಿಯರು ಮಾಡುತ್ತಿದ್ದರೆಂಬುದು ಈ ಹಿಂದೆಯೇ ಕಂಡಿದ್ದೇವೆ. ಜೈನ ಧರ್ಮೀಯ ಅರಸಿಯರು ಇಂಥ ಕೃತಿಗಳನ್ನು ಪ್ರತಿಮಾಡಿಸಿ ಶಾಸ್ತ್ರದಾನ ಮಾಡಿದರೆ, ಜೈನೇತರರು ತಮ್ಮ ಅಭ್ಯಾಸಕ್ಕಾಗಿ ಪ್ರತಿಮಾಡಿಸಿಕೊಳ್ಳುತ್ತಿದ್ದರು. ಅಂಥದ್ದೊಂದು ಕೃತಿ ದಿವ್ಯಸೂರಿಚರಿತೆ. ಇದರ ಒಂದು ಹಸ್ತಪ್ರತಿಯಲ್ಲಿ **'ಚಿಕ್ಕದೇವರಾಯನ** ಮಹಿಷಿಯಾದ **ಗೌರಮ್ಮಣ್ಣಿಯ** ಆಜ್ಞಾನುಸಾರ ತಿಮ್ಮಯ್ಯಂಗಾರ್ಯನಿಂದ ವಿರೋಧಿ ಕೃತುವರ್ಷದಲ್ಲಿ ಪ್ರತಿಮಾಡಲ್ಪಟ್ಟಿತೆಂದು' ತಿಳಿಸಿದೆ. ಇವಳು ಈ ಹಿಂದೆ ಹೇಳಿದ ಕೃಷ್ಣರಾಜೇಂದ್ರನ ಅರಸಿ ಗೌರಮ್ಮಣ್ಣಿಗಿಂತ ಭಿನ್ನವಾದವಳು. ಇವಳು ಪ್ರಸಿದ್ಧ ಅರಸು ಚಿಕ್ಕದೇವರಾಯನ ಕಿರಿಯರಸಿ.

ಇದೇ ಪ್ರಕಾರ ಅರಸು ಚಿಕ್ಕದೇವರಾಯನ ಮಗಳು ಅಮೃತಾಜಮ್ಮಣ್ಣಿಯು ಅಧ್ಯಯನಕ್ಕೆಂದು ಕೆಲವು ಕೃತಿಗಳನ್ನು ಪ್ರತಿಮಾಡಿಸಿಕೊಂಡಿರುವ ವಿಚಾರವೂ ತಿಳಿದು ಬರುತ್ತದೆ.

ಚಿಕ್ಕ ಅಮೃತಾಜಮ್ಮಣ್ಣಿ ಎಂದು ಕರೆಯಲ್ಪಟ್ಟಿರುವ ಇವಳು ಚನ್ನರಾಜಯ್ಯನವರ ಮಗ ಮರ್ರೈಯ ಎಂಬುವ ಲಿಪಿಕಾರನಿಂದ ಬಾಣಭಟ್ಟನ ಸಂಸ್ಕೃತ 'ಕಾದಂಬರಿ'ಯ ಕನ್ನಡ ಗದ್ಯನುವಾದ ಕೃತಿಯನ್ನೂ, ಭಾಮಿನಿ ಷಟ್ಪದಿಯಲ್ಲಿನ ಭಾಗವತದ ಒಂದು ಭಾಗ 'ಗಜೇಂದ್ರ ಮೋಕ್ಷ'ವನ್ನೂ ಪ್ರತಿ ಮಾಡಿಸಿಕೊಂಡಿದ್ದಾಳೆ[೩೬].

ಎಸ್.ಜಿ.ನರಸಿಂಹಾಚಾರ್ ಮತ್ತು ಮಂ.ಆ.ರಾಮಾನುಜ ಅಯ್ಯಂಗಾರ್ ಅವರು ಕರ್ಣಾಟಕ ಕಾವ್ಯಕಲಾನಿಧಿ ಮಾಲೆಯ ಮೂರನೆಯ ಕೃತಿಯಾಗಿ ೧೯೦೧ರಲ್ಲಿ ಮೈಸೂರಿನಿಂದ ಪ್ರಕಟಿಸಿದ 'ಕನ್ನಡ ವಚನ ಕಾದಂಬರಿ' ಇದೇ ಆಗಿದೆ (೧೯೨೩ ರಲ್ಲಿ ದ್ವಿತೀಯ ಮುದ್ರಣ ಪ್ರಕಟವಾಗಿದೆ). ಕನ್ನಡ ಗದ್ಯ ಕಾದಂಬರಿಯ ರಚನೆಯ ಕಾಲವನ್ನು ಇಲ್ಲಿ ಹೇಳಿಲ್ಲ. ಇದು ಅನುವಾದಿತ ಕೃತಿಯಾದರೂ ಮುದ್ರಾರಾಕ್ಷಸನಿಗಿಂತಲೂ ಪೂರ್ವದ ಗದ್ಯ ಕೃತಿಯಾಗಿದೆ ಎನ್ನುವುದನ್ನು ಯಾರೂ ಗಮನಿಸಿಲ್ಲ. ಪ್ರಾಚೀನ ಸಾಹಿತ್ಯದಲ್ಲಿ ಗದ್ಯಕೃತಿಗಳೇ ಕಡಿಮೆ ಎಂಬ ಹೇಳಿಕೆ ಇರುವಾಗ ರಾಜಕುಮಾರಿಯೋರ್ವಳ ಸಾಹಿತ್ಯ ಪ್ರೇಮದಿಂದ ಇಂಥ ಒಂದು ಕೃತಿಯು ಇಂದಿಗೆ ಉಳಿದು ಬಂದಿರುವುದು ಗಮನಾರ್ಹವೂ ಉಲ್ಲೇಖಾರ್ಹವೂ ಆಗಿದೆ.

ಅಮೃತಾಜಮ್ಮಣ್ಣಿಯು ಕಾದಂಬರಿಯ ಗದ್ಯಾನುವಾದ, ಗಜೇಂದ್ರಮೋಕ್ಷ ಕೃತಿಗಳಲ್ಲದೆ, ರಾಮನ ಸಾಂಗತ್ಯ ಹಾಗೂ ಅಪ್ರತಿಮವೀರಚರಿತೆ ಕೃತಿಗಳನ್ನೂ ಲಿಪಿಮಾಡಿಸಿಕೊಂಡಿದ್ದಾಳೆ ಎಂದು ಇನ್ನೂ ಕೆಲವು ಹಸ್ತಪ್ರತಿಗಳ ಪುಷ್ಪಿಕೆಗಳಿಂದ ತಿಳಿದು ಬರುತ್ತದೆ[೩೭]. ಮದ್ರಾಸಿನ ಗೌರ್ನಮೆಂಟ್ ಓರಿಯಂಟಲ್ ಮ್ಯಾನುಸ್ಕ್ರಿಪ್ಟ್ಸ್ ಲೈಬ್ರರಿಯ ಭಂಡಾರದಲ್ಲಿ ರಾಜಕುಮಾರಿ ಅಮೃತಾಜಮ್ಮಣ್ಣಿಗೆ ಬರೆದಿರುವ ಬಿನ್ನಹ ಪತ್ರ ಒಂದು ದೊರೆತಿದೆ. ಈ ಪತ್ರದಲ್ಲಿ ಅಪ್ರತಿಮ (ವೀರ ಚರಿತೆ) ಹಾಗೂ ಕನ್ನಡ ಕಾದಂಬರಿಯನ್ನು ಲಿಪಿಮಾಡಿಕೊಟ್ಟದ್ದಕ್ಕಾಗಿ ತನಗೆ ಈ ವರೆಗೆ ಸಂದಾಯವಾದ ಹಣ ಹಾಗೂ ಬಾಕಿ ಇರುವ ಹಣದ ಕುರಿತಾಗಿ ಲಿಪಿಕಾರನೊಬ್ಬ ಬಿನ್ನಹ ಮಾಡಿಕೊಂಡಿದ್ದಾನೆ[೩೮].

ಅಂತಃಪುರದ ಮಹಿಳೆಯರು ಕಾವ್ಯಾಭ್ಯಾಸ ನಡೆಸುತ್ತಿದ್ದುದು ಹಾಗೂ ಪ್ರಾಚೀನ ಕೃತಿಗಳನ್ನು ಪ್ರತಿಮಾಡಿಸಿಕೊಳ್ಳುತ್ತಿದ್ದ ಹಲವಾರು ಪ್ರಕರಣಗಳು ಹಸ್ತಪ್ರತಿ ಪುಷ್ಪಿಕೆಗಳಿಂದ ತಿಳಿದುಬರುತ್ತದೆ. ಈ ಮೇಲೆ ಉಲ್ಲೇಖಿಸಿರುವ ಅಮೃತಾಜಮ್ಮಣಿಗೆ ಬರೆದ ಬಿನ್ನಹ ಪತ್ರದಲ್ಲಿ ಲಿಪಿಕಾರ "ವರದಮ್ಮನವರ ಕೂಡೆಹೇಳಿಯಿದ್ದೇನೆ" ಎಂದು ತಿಳಿಸಿದ್ದಾನೆ. ಬಹುಶಃ ಈಕೆ ಮೇಲ್ವಿಚಾರಕಿ ಇರಬಹುದು. ಲಿಪಿಕಾರರಿಂದ ಪ್ರತಿಮಾಡಿಸುವ, ಅದನ್ನು

ನೋಡಿಕೊಳ್ಳುವ ವ್ಯವಸ್ಥೆ ಹಾಗು ಅದರ ಮೇಲ್ವಿಚಾರಕರು ಮೊದಲಾದ ವಿಚಾರಗಳ ಮೇಲೂ ಹಸ್ತಪ್ರತಿಯ ಪುಷ್ಪಿಕೆಯ ಕೆಲವು ಮಾಹಿತಿಗಳು ಬೆಳಕು ಚೆಲ್ಲುತ್ತವೆ.

**ಮುದ್ರಣ:** ೧೯ನೆಯ ಶತಮಾನದ ಅಂತ್ಯದಲ್ಲಿದ್ದ ಮೈಸೂರಿನ ಅರಸಿ ವಾಣಿವಿಲಾಸ ಸನ್ನಿಧಾನ – **ಕೆಂಪುನಂಜಮ್ಮಣ್ಣಿ**ಯವರು ಅಪ್ರಾಪ್ತವಯಸ್ಕ ಮಗ ನಾಲ್ವಡಿ ಕೃಷ್ಣರಾಜ ಒಡೆಯರ್‌ನ ಪರವಾಗಿ ೧೮೯೫–೧೯೦೧ರ ವರೆಗೂ ಆಡಳಿತ ನಡೆಸಿ, ಇಂದಿಗೂ ಸ್ಮರಿಸಿಕೊಳ್ಳುವಂತಹ ಹಲವಾರು ಸಮಾಜೋಪಯೋಗಿ ಕೆಲಸಗಳನ್ನು ನಡೆಸಿದವಳು. ಮಹಿಳೆಯರಿಗಾಗಿ ಪ್ರತ್ಯೇಕ ಶಾಲಾ–ಕಾಲೇಜು (ಮಹಾರಾಣಿ ಕಾಲೇಜು, ಮೈಸೂರು ಹಾಗೂ ಬೆಂಗಳೂರು) ವಿದ್ಯಾರ್ಥಿ ವಸತಿಗೃಹ ನಿರ್ಮಾಣ, ಚಿತ್ರದುರ್ಗದ ಬಳಿ ವಾಣಿವಿಲಾಸ ಸಾಗರ ಅಣೆಕಟ್ಟು, ವಿಶ್ವದ ಪ್ರಸಿದ್ಧ ವಿಜ್ಞಾನ ಸಂಸ್ಥೆಗಳಲ್ಲೊಂದಾದ ಬೆಂಗಳೂರಿನ ಟಾಟಾ ಇನ್ಸ್ಟಿಟ್ಯೂಟ್ ಸ್ಥಾಪನೆಗೆ ಧನಸಹಾಯ, ಆಸ್ಪತ್ರೆ, ಭೀಕರ ಸಾಂಕ್ರಾಮಿಕ ರೋಗ ಪ್ಲೇಗ್ ನಿವಾರಣೆಗೆ ಹಲವಾರು ಚಟುವಟಿಕೆ, ನಗರ ಪ್ರದೇಶಗಳಲ್ಲಿ ಹೊಸ ಬಡಾವಣೆಗಳ ನಿರ್ಮಾಣ, ಬೀರೂರು–ಶಿವಮೊಗ್ಗಗಳ ನಡುವೆ ರೈಲು ಸಂಚಾರಕ್ಕೆ ಅನುವು, ಕಾವೇರಿ ವಿದ್ಯುಚ್ಛಕ್ತಿ ಯೋಜನೆ, ಬೆಂಗಳೂರಿನ ವಿಕ್ಟೋರಿಯಾ ಆಸ್ಪತ್ರೆ ನಿರ್ಮಾಣ, ಇವುಗಳೊಂದಿಗೆ ಕೆಲವೊಂದು ಕಾವ್ಯಗಳ ಮುದ್ರಣಕ್ಕೆ ಕಾರಣರಾಗಿ ಆ ಮೂಲಕ ಸಾಹಿತ್ಯ ಪೋಷಣೆ ನಡೆಸಿದವರು. ಇವರ ಆಜ್ಞಾನುಸಾರ ಮುದ್ರಣಕಂಡ ಕೆಲವು ಗ್ರಂಥಗಳಲ್ಲಿ ಮೈಸೂರಿನ ಅರಸಿ ಚೆಲುವಾಂಬೆಯ ಕೃತಿಗಳೂ ಸೇರಿದ್ದು ಇದರ ಮುನ್ನುಡಿಯಲ್ಲಿ ವಾಣಿವಿಲಾಸದ ಮಹಾರಾಣಿಯವರನ್ನು ಮಹಾಮಾತೃಶ್ರೀ ಮಹಾರಾಜ್ಞಿ ಎಂದು ಕರೆದು ಅವರ ಆಜ್ಞಾನುಸಾರ ಅರಮನೆಯ ವಿದ್ವಾಂಸರಾದ ಜಯರಾಯಾಚಾರ್ಯ ಎಂಬುವವರು ಚೆಲುವಾಂಬೆಯ ಕೃತಿ ವರನಂದಿಕಲ್ಯಾಣ ಮತ್ತು ವೆಂಕಟಾಚಲ ಮಹಾತ್ಯಂ ಲಾಲಿಪದ ಕೃತಿಗಳನ್ನು ಪರಿಷ್ಕರಿಸಿ ಗ್ರಾಜುಯೇಟ್ಸ ಪ್ರೆಸ್‌ನಲ್ಲಿ ಅಚ್ಚು ಹಾಕಿಸಲಾಯಿತು ಎಂದು ತಿಳಿಸಿದೆ. ಶಾ.ಶ.೧೮೨೨ರಲ್ಲಿ ನಡೆದ ಈ ಮುದ್ರಣದ ಮುನ್ನುಡಿಯಲ್ಲಿ ಮಹಾರಣಿಯವರನ್ನು ಕುರಿತು

**ಶ್ರುತಿಗಗನಗಗನಭೂತೋ**
**ನ್ಮಿತ ಕಲ್ಯಾಷಾಢ ಕೃಷ್ಣ ಹರಿವಾಸರದೊಳ್**
**ಕೃತಿಯಿದು ಮಹಾರಾಣಿಯರಾ**
**ಣತಿಯಿಂದಾದತ್ತು ಮುದ್ರಿತಂ ವಿಶ್ರುತಮುಂ॥**

ಎಂದು ಈ ಕೃತಿ ಮುದ್ರಣಕ್ಕೆ ಕಾರಣರಾದ ಮಹಾರಾಣಿಯವರನ್ನು ಕುರಿತು ಶ್ರೀಜಯರಾಯಾಚಾರ್ಯರೆಂಬ ವಿದ್ವಾಂಸರು ಕಂದಪದ್ಯವನ್ನು ರಚಿಸಿದ್ದಾರೆ.

**ಕಿತ್ತೂರಿನ ರಾಣಿ ಚೆನ್ನಮ್ಮ – ಕಿತ್ತೂರಿನ ಆಸ್ಥಾನ ಕವಿಗಳು**

ಸುಮಾರು ೧೬ನೆಯ ಶತಮಾನದಲ್ಲಿ ಸ್ಥಾಪಿತವಾದ ಕಿತ್ತೂರು ಸಂಸ್ಥಾನವು ಮೊದಲು ವಿಜಾಪುರದ ಸುಲ್ತಾನರು, ಆನಂತರ ಮರಾಠರು, ಸವಣೂರಿನ ನವಾಬರು, ಹೈದರಾಲಿ ಮತ್ತು ಟಿಪ್ಪು ಮೊದಲಾದವರ ಒಡೆತನವನ್ನು ಒಪ್ಪಿಕೊಂಡು ಕೆಲಕಾಲ ಅಧೀನದಲ್ಲಿ, ಕೆಲಕಾಲ ಸ್ವತಂತ್ರವಾಗಿ ಆಳ್ವಿಕೆ ನಡೆಸಿತು.

ಈ ಮನೆತನದ ಪ್ರಸಿದ್ಧರಾಣಿ ಚೆನ್ನಮ್ಮ. ಕಾಕತಿಯ ದೇಸಾಯಿ ಧೂಳಪ್ಪ ಗೌಡರ ಮಗಳು ಚೆನ್ನಮ್ಮ ಜನಿಸಿದ್ದು ಕ್ರಿ.ಶ.೧೭೭೮ರಲ್ಲಿ. ಕಿತ್ತೂರು ಚೆನ್ನಮ್ಮ ಪತಿಯ ಅನುಪಸ್ಥಿತಿಯಲ್ಲಿ (ಮೊದಲು ಟಿಪ್ಪುವಿನ ಆನಂತರ ಮರಾಠರ ಬಂಧಿಯಾಗಿದ್ದ ಸಂದರ್ಭದಲ್ಲಿ) ಆಳ್ವಿಕೆ ನಡೆಸುತ್ತಿದ್ದು, ಪತಿಯ ಮರಣಾನಂತರ ಮಲಮಗ ರುದ್ರಸರ್ಜನ ಆಳ್ವಿಕೆಯಲ್ಲಿಯೂ ಸಲಹಾಗಾರ್ತಿಯಾಗಿದ್ದು, ಅವನ ಮರಣಾನಂತರ ಅವನ ದತ್ತುಮಗನ ಪರವಾಗಿ ಕೆಲವು ತಿಂಗಳು ನೇರ ಆಳ್ವಿಕೆ ನಡೆಸಿದ್ದಾಳೆ. ಅಪಾರ ಸಂಖ್ಯೆಯಲ್ಲಿ ರಚಿತವಾಗಿರುವ ಇವಳ ಕುರಿತಾದ ಸಾಹಿತ್ಯ ಇವಳ ಜನಪ್ರಿಯತೆಯನ್ನು ಸಾರುತ್ತದೆ. ಇವುಗಳಲ್ಲಿ ಅನೇಕ ಕೃತಿಗಳು ಇವಳ ಜೀವಿತಾವಧಿಯಲ್ಲಿಯೇ ರಚಿತವಾಗಿವೆ.

ಕೆಲವು ಅನಾಮಧೇಯ ಕವಿಗಳಿಂದ ರಚಿತವಾಗಿದ್ದರೆ, ಮತ್ತೆ ಕೆಲವು ಪ್ರಸಿದ್ಧ ಕವಿಗಳ ರಚನೆಗಳಾಗಿವೆ. ಕಿತ್ತೂರಿನ ಆಸ್ಥಾನದಲ್ಲಿ ಅನೇಕ ಕವಿಗಳಿದ್ದುದನ್ನು ಗುರುತಿಸಬಹುದು.

ಕಿತ್ತೂರು ಸಂಸ್ಥಾನದ ಕವಿಗಳಲ್ಲಿ ರುದ್ರಕವಿ, ಅಮೃತೇಶ, ಜವಳಿ ಚನ್ನಬಸವ, ಕೊಳ್ಳಿ ರಂಗಾಚಾರ್ಯ, ವೆಂಗಿ ಚನ್ನಬಸಪ್ಪ, ಮಾಗಡಿ (ಮಾಗುಂಡಿ)ಬಸವ, ದೇವರ ಶೀಗಿಹಳಿ, ರುದ್ರಗೌಡ ಬೆಡಗೇರಿ, ಶಿವಲಿಂಗ ಶಾಸ್ತ್ರಿ, ಚೌಬಾರಿ ಅಡಿವೆಪ್ಪ, ಹೊಂಗಲದ ಬಸವ ಮುಂತಾದ ಕವಿ, ವಿದ್ವಾಂಸರಿದ್ದರೆಂದು ತಿಳಿದುಬರುತ್ತದೆ. ಇವರಲ್ಲಿ ಕರಬಸಪ್ಪ ಎಂಬಾತ ವಚನಸಾರ ವೇದಾಂತ ಪಂಡಿತನೆನಿಸಿದ್ದ. "ಕಿತ್ತೂರಿನ ಆಸ್ಥಾನದಲ್ಲಿ ೨೨ ಜನ ಕವಿಗಳಿದ್ದರೆಂದು ದಾಖಲೆಯೊಂದು ತಿಳಿಸುತ್ತದೆ"[೩೯]

ಈ ಕವಿಗಳು ರಚಿಸಿರುವ ಲಾವಣಿ ದುಂದುಭಿ, ದುಂದುಮೆ, ಹೋಳಿಪದ, ಚೌಪದಿ ಮೊದಲಾದ ಪ್ರಕಾರದ ಸಾಹಿತ್ಯ ಕಾಣಬಹುದು. ಚೆನ್ನಮ್ಮ ಒಂದು ಸಣ್ಣ ಪ್ರಾಂತ್ಯದ ರಾಣಿಯಾಗಿದ್ದು, ಅವಳು ಸ್ವತಂತ್ರವಾಗಿ ಆಳ್ವಿಕೆ ನಡೆಸಿದ್ದು ಕೆಲವೇ ತಿಂಗಳಾಗಿದ್ದರೂ, ಇತಿಹಾಸದಲ್ಲಿ ಅವಳ ಹೆಸರು ಚಿರಸ್ಥಾಯಿಯಾಗಿ ಉಳಿಯಲು, ಬ್ರಿಟಿಶರೊಂದಿಗೆ ಇವಳ ಹೋರಾಟದ ವೀರ ಕಥೆಯನ್ನು ಮನಮುಟ್ಟುವಂತೆ ವಿಧವಿಧವಾಗಿ ಬಣ್ಣಿಸಿರುವ ಈ ಕವಿಗಳ ಕೃತಿಗಳೇ ಕಾರಣವಾಗಿದೆ ಎನ್ನಬಹುದು.

**ಕಿತ್ತೂರಿನ ಕವಿಗಳು**

**ರುದ್ರಕವಿ** ಮುಧೋಳದ ಲೋಕಾಪುರದವನು. ಈತ ಹುಟ್ಟುಕವಿಯಾಗಿದ್ದ. ಕಿತ್ತೂರು ಮಲ್ಲಸರ್ಜನ ಲಾವಣಿ, ಸೂಳೆ–ಸರ್ಜರ ಪ್ರಣಯ ಕೃತಿಗಳನ್ನೂ ಈತ ಬರೆದಿದ್ದಾನೆ.

ಕಿತ್ತೂರು ಮಲ್ಲಸರ್ಜನ ಲಾವಣಿಯು ೯೩ ಪದ್ಯಗಳನ್ನೊಳಗೊಂಡಿದೆ. ಮಲ್ಲಸರ್ಜನ ಜೀವನದ ವಿಚಾರಗಳನ್ನು ೫೫ ಚೌಕಗಳ ಲಾವಣಿಯಲ್ಲಿ ವರ್ಣಿಸಲಾಗಿದೆ. ಲಾವಣಿಯ ಮುಂದಿನ ಭಾಗದಲ್ಲಿ ಚೆನ್ನಮ್ಮನ ವೃತ್ತಾಂತ ವರ್ಣಿಸಲಾಗಿದೆ.

ಮಲ್ಲಸರ್ಜನ ಮರಣಾ ನಂತರ ೭ ವರ್ಷಗಳಲ್ಲಿ ಅವನ ಮೂವರೂ ಮಕ್ಕಳೂ ಅವನನ್ನೇ ಹಿಂಬಾಲಿಸುತ್ತಾರೆ. ವಾರಸುದಾರರಿಲ್ಲದ ಈ ಸಂದರ್ಭದಲ್ಲಿ ಚೆನ್ನಮ್ಮ ರಾಜ್ಯಭಾರ ನಡೆಸುತ್ತಾಳೆ. ಈ ನಡುವೆ ಅತ್ತೆ ಸೊಸೆಯರಲ್ಲಿ ಮನಸ್ತಾಪ ಆರಂಭವಾಗುತ್ತದೆ. ಬ್ರಿಟೀಶರು ಅಪುತ್ರಕ ರಾಜ್ಯವನ್ನು ನುಂಗುವ ಹೊಂಚುಹಾಕುತ್ತಾರೆ. "ರಾಜ್ಯವನ್ನು ನಾವು ಆಳುತ್ತೇವೆ, ಅರಸು ಮನೆತನದವರು ಉಂಬಳಿ ಪಡೆದು ಸುಖವಾಗಿರುವುದು" ಎಂದು ಹೇಳಿದ ಬ್ರಿಟೀಶರ ಮಾತನ್ನು ಸರದಾರರೊಂದಿಗೆ ಸಮಾಲೋಚನೆಯ ಮೇರೆಗೆ ತಿರಸ್ಕರಿಸಿದ ಪರಿಣಾಮ ಯುದ್ಧವನ್ನು ಎದುರಿಸುತ್ತಾಳೆ. ಕಿತ್ತೂರನ್ನು ಮುತ್ತಿ ಕೋಟೆಯನ್ನು ನಾಶಪಡಿಸಿ ಅರಮನೆಯನ್ನು ಪ್ರವೇಶಿಸಿದ ಆಂಗ್ಲರ ಸೇನೆ ಅತ್ತೆ ಚೆನ್ನಮ್ಮ, ಸೊಸೆ ವೀರಮ್ಮನನ್ನು ಬಂಧಿಸಿ ಸೆರೆಮನೆಯಲ್ಲಿಡುತ್ತಾರೆ. ಆರು ತಿಂಗಳವರೆಗೆ ಅರಮನೆಯ ಅಪಾರ ಸಂಪತ್ತನ್ನು ಬೆಳಗಾವಿಗೆ ಸಾಗಿಸುತ್ತಾರೆ ಎಂಬ ವಿವರಣೆಯನ್ನು ರುದ್ರಕವಿಯು ನೀಡಿದ್ದಾನೆ.

**ಮುನಿಪುರದ ನೀಲಕಂಠಾರ್ಯ**. ಈತನನ್ನು ಸಣ್ಣಾಟಗಳ ಜನಕನೆಂದು ಕರೆಯಲಾಗಿದೆ. ಈತನಿಗೆ ಸಣ್ಣಾಟ ಕಲಿಸಿದ ಗುರು ಬೈಲವಾಡದ ರಾಯಪ್ಪ. ಜಾನಪದ ಸಾಹಿತ್ಯದ ರುಚಿ ಹುಟ್ಟಿಸಿ ಕವನ ಕಟ್ಟಲು ಪ್ರೇರಣೆ ನೀಡಿದವರು ಗಂದಿಗವಾಡದ ಭಟ್ಟರು. ಸಂಸ್ಥಾನಕ್ಕೆ ಸಂಬಂಧಿ 'ಮಲ್ಲೇಂದ್ರ ಪೂಜಾವಿಲಾಸ, ಮಲ್ಲೇಂದ್ರ ಪೂಜಾವಿಲಾಸ ತಾರಾವಳಿ, ಮಲ್ಲೇಂದ್ರ ವಿಜಯ ಹಾಗೂ ಗಣೇಶೋತ್ಸವ ಎಂಬ ಐದು ದೊಡ್ಡಕಾವ್ಯಗಳಲ್ಲದೆ ಸುಮಾರು ೧೫೦ ಕವನಗಳನ್ನು ರಚಿಸಿದ್ದಾನೆ. ಇವನ ಹೆಸರಿನಲ್ಲಿ ೩೫ ಸಣ್ಣಾಟಗಳು ನೂರಾರು ಡೊಳ್ಳಿನ ಹಾಡು, ಮಹದೇವಿಯಕ್ಕ ಶ್ವೇತರಾಜ, ದಾಸಾರ್ಯರಾಜನ ಚರಿತೆ, ಪಂಚಾಕ್ಷರಿ ಮಹಾತ್ಮೆ, ಶ್ರೀನಿವಾಸ ದೇವಸೇನ, ಚೂಡಾಲಿ, ವೀರಸಂಗಮಾರ್ಯ, ತಿಲಕಾಂಬೆ, ಗುರುಭಕ್ತಭಂಡಾರಿ, ನಿಜಗುಣಶಿವಯೋಗಿ, ಧರ್ಮಸಾಮ್ರಾಜ್ಯ, ಸೌಂದರನಂಬಿ

ಮೌನೇಶ್ವರ ಚರಿತೆ, ಭಕ್ತ ಧ್ರುವಚರಿತೆ, ತಿರಕಾಂಬೆ ಚರಿತೆ, ಮೇದಾರ ಕೇತಯ್ಯ ಮೊದಲಾದವು ಜನಪ್ರಿಯ ಕೃತಿಗಳಾಗಿವೆ. ಕಿತ್ತೂರು ಸಂಸ್ಥನ ಸುಖ ಶಾಂತಿ ಸಮೃದ್ಧಿಯಿಂದ ಇದ್ದಂತ ಸಂದರ್ಭದಲ್ಲಿ ಶಾಶ.೧೭೩೬ (ಸಪ್ತಾದಶ ಶತದ ಮೇಲೆ ಮೂವತ್ತಾರನೆಯ ಭಾವದ) ಮಧುಕಾಲ ಸ್ಥಿತದ ದಶಮಿ ಶನಿವಾರ ಶುಭ ಮಹೂರ್ತದಲ್ಲಿ ೧೫೦ ಕಿತ್ತೂರು ಸಂಸ್ಥಾನದ ಹಾಡುಗಳನ್ನು ಈತ ರಚಿಸಿದುದಾಗಿ ತಿಳಿಸಿದ್ದಾನೆ[೮೦].

ಮಲ್ಲೇಂದ್ರ ಭಕ್ತಿ ತರಂಗಿಣಿ ಕೃತಿಯಲ್ಲಿ ಕಿತ್ತೂರು ಸಂಸ್ಥಾನದ ಧಾರ್ಮಿಕ ಆಚರಣೆಗಳನ್ನು ಕುರಿತು ೩೧೪ ಪದ್ಯಗಳಲ್ಲಿ ರಚಿಸಿದ್ದಾನೆ. ಮಲ್ಲೇಂದ್ರ ಪೂಜಾವಿಲಾಸ, ೧೬೫ ಪರಿವರ್ಧಿನಿ ಷಟ್ಪದಿಯಲ್ಲಿ ರಚಿತವಾದ ಈ ಕೃತಿ ಕೂಡ ಧಾರ್ಮಿಕ ವಿಧಿಗಳನ್ನು ಕುರಿತು ಹೇಳುತ್ತದೆ. ಮಲ್ಲೇಂದ್ರ ಪೂಜಾವಿಲಾಸ ತಾರಾವಳಿಯೂ ಗುರುಪೂಜೆ, ಜಂಗಮರಪೂಜಾ ವಿವರಗಳನ್ನು ನೀಡುತ್ತದೆ. ಮಲ್ಲೇಂದ್ರ ಮಾನಸೋಲ್ಲಾಸ ಕೃತಿಯು ಅರಮನೆಯ ವಿಚಾರಗಳನ್ನೂ, ರಾಜಮನೆತನದ ಧಾರ್ಮಿಕ ವಿಧಿಗಳನ್ನೂ, ಪುರಾಣದ ಶೈಲಿಯಲ್ಲಿ ನಿರೂಪಿತವಾಗಿರುವ ಕಿತ್ತೂರು ಸಂಸ್ಥಾನದ ಪೂರ್ವೇತಿಹಾಸದ ವಿಚಾರಗಳನ್ನು ತಿಳಿಸುತ್ತದೆ.

ಮಲ್ಲೇಂದ್ರ ವಿಜಯ ಕೃತಿಯು ಐತಿಹಾಸಿಕ ವಿಚಾರಗಳನ್ನು ತಿಳಿಸುತ್ತದೆ. ಟಿಪ್ಪು ಸುಲ್ತಾನನು ಮಲ್ಲಸರ್ಜನನ್ನು ಸೆರೆಹಿಡಿದು ಶ್ರೀರಂಗಪಟ್ಟಣದಲ್ಲಿ ಬಂಧಿಸಿಡುತ್ತಾನೆ. ಸೆರೆಯಿಂದ ಮಡಿವಾಳಪ್ಪನೆಂಬುವನೊಡನೆ ಹೊರಬರುತ್ತಾನೆ. ಈ ಸಂದರ್ಭದಲ್ಲಿ ಅರಸಿಯರು ಕೈಗೊಂಡ ಕಾರ್ಯ, ಅವರ ವ್ರತ–ಪೂಜಾದಿಗಳ ವಿವರಣೆಯೂ ಇಲ್ಲಿದೆ.

ಇದೇ ವಿಚಾರವನ್ನು ಮುನಿಪುರದ ನೀಲಕಂಠಾಚಾರ್ಯ ರಚಿಸಿರುವ ಗಣೇಶೋತ್ಸವ ಕಾವ್ಯದಲ್ಲಿಯೂ ಕಾಣುತ್ತೇವೆ. ಗಣೇಶೋತ್ಸವದ ವೈಭವವನ್ನು ವರ್ಣಿಸುವ ಈ ಕೃತಿಯು ಟಿಪ್ಪುವನ್ನು ಒಂದುಬಾರಿ ಹಿಮ್ಮೆಟ್ಟಿಸಿದರೂ ೧೭೮೫ರಲ್ಲಿ ಮತ್ತೊಮ್ಮೆ ಮುತ್ತಿಗೆ ಹಾಕಿದ ಟಿಪ್ಪು ಮಲ್ಲಸರ್ಜನನ್ನು ಸೆರೆಹಿಡಿದು ಕೊಪ್ಪಳದುರ್ಗಕ್ಕೆ ಒಯ್ದು ಬಂಧಿಸುತ್ತಾನೆ. ಅಲ್ಲಿದ್ದವರಿಗೆಲ್ಲಾ ಪ್ರತಿದಿವಸ ಅಚ್ಚೇರು ರಾಗಿಗೆ ಅಚ್ಚೇರು ಬೂದಿ ಸೇರಿಸಿ ಊಟ ಹಾಕಿಸುತ್ತಾನೆ. ಒಂದು ದಿನ ಮಧ್ಯಾಹ್ನ ಅಲ್ಲಿದ್ದ ನಾಲ್ಕಾರು ಪಹರೆಯವರನ್ನು ಕೊಂದು ಮಡಿವಾಳಪ್ಪನೊಂದಿಗೆ ಮಲ್ಲಸರ್ಜ ತಪ್ಪಿಸಿಕೊಂಡು ನದಿ ದಾಟಿ ಕೊಯಿಮತ್ತೂರು, ಶ್ರೀಶೈಲ, ಬಬಲೇಶ್ವರ ಮಾರ್ಗವಾಗಿ ಬಯಲುಹೊಂಗಲ ಕಿತ್ತೂರಿಗೆ ಬರುತ್ತಾನೆ.

ಕಿತ್ತೂರು ಅರಸರ ಕೋಲುಪದದಲ್ಲಿಯೂ ಮಡಿವಾಳಪ್ಪನೆಂಬ ನೆಚ್ಚಿನ ಬಂಟನ ಸಹಾಯದಿಂದ ಟಿಪ್ಪುವಿನ ಸೆರೆಯಲ್ಲಿದ್ದ ಮಲ್ಲಸರ್ಜ ಪಾರಾಗಿ ಬಂದ ವಿಚಾರವನ್ನೇ ವಿವರಿಸಲಾಗಿದೆ.

"ಒಡೆಯಳ ಚೆನ್ನವ್ವ ನಿನ್ನ.." ಎಂದು ಆರಂಭವಾಗುವ ಹಾಡಿನ ಸಾಲುಗಳು ಮಲ್ಲಸರ್ಜನ ಜೀವಿತಾವಧಿಯಲ್ಲಿಯೇ ಚೆನ್ನವ್ವನನ್ನು ಒಡೆಯಳೆಂದು ಕರೆದಿರುವುದನ್ನು ಕಾಣಬಹುದು.

**ಲೋಕೇಶ** ನೆಂಬ ಕವಿಯು ತನ್ನನ್ನು ಭೂನಾಥಕವಿ ಎಂದು ಕರೆದುಕೊಂಡಿರುವನು. ಈತ ಹಲವಾರು ಲಾವಣಿ, ದುಂದುಮೆಗಳನ್ನು ರಚಿಸಿದ್ದಾನೆ. ಅರಮನೆಯೊಂದಿಗೆ ಆತ್ಮೀಯ ನಿಕಟ ಸಂಬಂಧ ಹೊಂದಿದ್ದನೆಂಬುದು ಈತನ ಕೃತಿಗಳಿಂದ ತಿಳಿಯುತ್ತದೆ.

**(ಮಾಗುಂಡಿ) ಮಾಗಡಿ ಬಸವ:** ಈತ ೪೬ ಚೌಪದಗಳಿಂದ ಕೂಡಿದ ದುಂದುಮೆಯನ್ನು ರಚಿಸಿದ್ದಾನೆ. ಈತನ **'**ಕಿತ್ತೂರು ಕದನಗೀತೆ'ಯು ಕಿತ್ತೂರು ಕಾಳಗದ ಹೋಳಿ ಪದವೆಂದು ಖ್ಯಾತಿಗೊಂಡಿದೆ. ಕಿತ್ತೂರು ಕಾಳಗದ ಸಮಗ್ರ ಇತಿಹಾಸ ಇಲ್ಲಿ ರಚಿತವಾಗಿದೆ.

ಈ ಕದನಗೀತೆಯ ಪ್ರಕಾರ ಕಿತ್ತೂರು ರಾಜ್ಯ ನಮ್ಮದೆಂದು ನಿನ್ನ ಗಂಡ ಓಲೆ ಬರೆದು ಕೊಟ್ಟಿರುವನೆಂದು ಥ್ಯಾಕರೆ ಚೆನ್ನಮ್ಮನಿಗೆ ಹೇಳಿದ ಕೂಡಲೆ ಚೆನ್ನಮ್ಮ **"**ಇವನನ್ನು ಹೊರಗೆ ನೂಕಿರಿ**"** ಎಂದು ಹೇಳಿ ಅಗಸಿ ಬಾಗಿಲು ಹಾಕಿಸಿದ

ಬಳಿಕ ಯುದ್ಧ ಜರುಗಿತು. ಆ ಯುದ್ಧದಲ್ಲಿ ಥ್ಯಾಕರೆ ಮಡಿದ. ಈ ಸುದ್ದಿ ವಿಲಾಯತಿಗೆ ಮುಟ್ಟಿತು. ಇದನ್ನು ತಿಳಿದ ರಾಣಿ ಚೆನ್ನಮ್ಮ

**ಮುಚ್ಚಗ್ಯಾವಿಯ ಚಣ್ಣಾ ಮುಂಗೈಯ್ಯ ಸರಪಳಿ**
**ಬಿಚ್ಚಗತ್ತಿ ಸಾರವರಿಯವರು ಮಾ**
**ಹೆಚ್ಚಿನ ಮುಂಡಾಸ ಮೇಲೆ ಉಮ್ಮೆಗಂ**
**ಹೆಚ್ಚಿನ ಬಂಟರ ಕರಸಿ ಹೇಳಿದಳಾಗ॥**

ತನ್ನ ವೀರ ಬಂಟರಿಗೆ ಬಗೆಬಗೆಯ ಉಡುಗೊರೆ ಇತ್ತು ಸನ್ಮಾನಿಸಿದಳು. ಈ ವೇಳೆ ಹತ್ತು ಸಾವಿರ ದಂಡು ಒಟ್ಟುಗೂಡಿತು.

ಜಾರ್ಜ್ ಮಂಡೇಲ್ ಸಾಹೇಬರ ನೇತೃತ್ವದಲ್ಲಿ ಮಂಗಳವಾರ ಸಂಜೆ ಕಿತ್ತೂರಿಗೆ ಮುತ್ತಿಗೆ ಹಾಕಿತು. ಕಿತ್ತೂರು ಸೈನ್ಯದ ಆಟಾಟೋಪ ಪರಾಕ್ರಮದ ಎದುರು ಆಂಗ್ಲಸೈನ್ಯ ಮುಂದು ಓಟಕಿತ್ತಿತು. ಜಾರ್ಜ್ ಮಂಡೇಲ ಸಾಹೇಬ ಗಾಯಗೊಂಡನು. ಚೆನ್ನಮ್ಮನನ್ನು ಎದುರಿಸಿ ಗಾಯಗೊಂಡ ಜಾರ್ಜ್ ಮಂಡೇಲನನ್ನು ಜಾನಮಂಡೇಲ ಎಂದು ಕಿತ್ತೂರು ಪ್ರಜೆಗಳು ಕರೆದಿರುವರು. ಜಾರ್ಜ್ ಮಂಡೇಲ ಗಾಯಗೊಂಡ ಸುದ್ದಿ ಧಾರವಾಡಕ್ಕೆ ತಲುಪಲು ಮೈಸೂರು ದಂಡಿನೊಡನೆ ಚಾಪ್ಲಿನ್ ಸಾಹೇಬ ಕೋಟೆಗೆ ಮುತ್ತಿಗೆ ಹಾಕಿದ. ಕೋಟೆಯನ್ನು ಕೆಡವಿ ಕಿತ್ತೂರು ಮೇಲೆ ವಿಜಯ ಸಾಧಿಸಿದ. ಕಿತ್ತೂರಿನ ವೀರ ಗಜವೀರನ ಶೌರ್ಯಕ್ಕೆ ತತ್ತರಿಸಿದ. ಚಾಪ್ಲೆನ್ ತನ್ನ ಎಲ್ಲ ಬಲವನ್ನು ಒಗ್ಗೂಡಿಸಿ ಮೇಲುಗೈಯಾಗಿ ಅರಮನೆ ಪ್ರವೇಶಿಸಿದ. ರಾಣಿ ಚೆನ್ನಮ್ಮಳಿಂದ ರಾಜ್ಯವನ್ನು ಬರೆಯಿಸಿಕೊಂಡು ಹೊಂಗಲಕ್ಕೆ ಅವಳನ್ನು ಸಾಗಿಸಿದ ವರೆಗಿನ ಚಿತ್ರಣ ಈ ಗೀತೆಯಲ್ಲಿ ದಾಖಲಾಗಿದೆ.

ಚೆನ್ನಮ್ಮನ ಜೀವನವನ್ನು ತೀರ ಹತ್ತಿರದಿಂದ ಬಲ್ಲ ಕವಿಯು ರಚಿಸಿರುವ ಈ ಕೃತಿಯು ಸಾಕಷ್ಟು ವಿಮರ್ಶೆಗೆ ಒಳಪಟ್ಟು, ೧೮೨೪ರಲ್ಲಿಯೇ 'ಬಾಂಬೆ ಕೋರಿಯಾ' ಎಂಬ ಸಾಪ್ತಾಹಿಕ ವರ್ತಮಾನ ಪತ್ರಿಕೆಯಲ್ಲಿ ಈ ಕೃತಿಯಲ್ಲಿನ ಐತಿಹಾಸಿಕ ಸತ್ಯಾಂಶ ಬಹುವಿದ್ವಾಂಸರಿಂದ ಒಪ್ಪಿತವಾಗಿದೆ.

ಕವಿ ತನ್ನ ಕುರಿತಾದ ಕೆಲವು ವಿಚಾರಗಳನ್ನು ಕೃತಿಯಲ್ಲಿ ತಿಳಿಸಿದ್ದಾನೆ.

**ಕುಸುಮಬಾಣನಮೇಲೆ ಪೆಸರಿನ ಗ್ರಾಮದಿ**
**ವಶವಾದ ಮಾಗುಂಡಿ ಬಸವನು ಮಾ**
**ವಸುಧೆಯೊಳು ತಾನು ಕುಶಲದಿ ಪಾಡುತ**
**ಉಸುರಿದ ಕವಿತೆ ಹಸನಾಗಿ ಕೇಳಿರಿ॥**

ಈ ಪದ್ಯದಲ್ಲಿ ಕವಿಯು ತನ್ನ ಊರಿಯ ಹೆಸರನ್ನು ಚಮತ್ಕಾರಯುತವಾಗಿ ತಿಳಿಸಿದ್ದಾನೆ. ಕುಸುಮಬಾಣ ಎಂದರೆ ಮನ್ಮಥ. ಈ ಹೆಸರಿನ ಗ್ರಾಮ ಎಂದರೆ ಮದನಭಾವಿ ತನ್ನ ಊರೆಂದು ತಿಳಿಸಿದ್ದಾನೆ.

**ಹೆಬ್ಬಳ್ಳಿ ಪುಂಡ ಬಸವ:** ಇವನು ಕಿತ್ತೂರಿಗೆ ಮುತ್ತಿಗೆ ಎಂಬ ಪದವನ್ನು ಬರೆದಿದ್ದಾನೆ. ತನ್ನ ಪದದಲ್ಲಿ 'ಪದ ಬರೆದವನು ಹೆಬ್ಬಳ್ಳಿ ಪುಂಡ ಬಸವ' ಎಂದು ಹೇಳಿಕೊಂಡಿದ್ದಾನೆ. ಇದರಲ್ಲಿ ಥ್ಯಾಕರೆ ಮರಣದ ನಂತರ ನಡೆದ ಎರಡನೆಯ ಯುದ್ಧವನ್ನು ಬಣ್ಣಿಸಿದ್ದಾನೆ. 'ಕಂಡು ಕವಿ ಮಾಡಿದ ವಿಸ್ತಾರ' ಎಂದು ಹೇಳಿರುವಂತೆ ಸವಸ್ತಾರವಾಗಿ ಬಣ್ಣಿಸಿ ಹೇಳಿದ್ದಾನೆ. ಕಿತ್ತೂರು ರಾಣಿ ಚೆನ್ನಮ್ಮಳು ಸರದಾರನ ತಲೆ ಹೊಡಿಸಿ ನೆತ್ತರ ಕಾವಲಿ ಹರಿಯಿಸಿದಳು. ಕರ್ನಲ್ ಹಲ್ಲು ಮಸೆಯುತ್ತಿದ್ದ. ಎರಡನೆಯ ಬಾರಿ ಮಾದನಭಾವಿ ಹತ್ತಿರ ಕಾಳಗ ಏರ್ಪಟ್ಟಿತು. ಚೆನ್ನಮ್ಮ ಅವರಾದಿಯಿಂದ ಈರಪ್ಪನ ಕರೆಸಿದಳು. ನಿಪ್ಪಾಣಿಗೆ ಪತ್ರ ಬರಿಸಿದಳು. ಒಕ್ಕುಂದ, ಬಳ್ಳೋಡಿ, ದೇಮಟ್ಟಿ, ಎಡಾಳ

ಸಾಣಿಕೊಪ್ಪ, ನಾವಲಗಟ್ಟಿ, ತಪಗುಂದ, ಕಾದರೊಳ್ಳಿ, ಕರ್ಚಗಟ್ಟಿ, ಹಣ್ಣಿಕೋರಿ, ಬನ್ನಿಕೊಪ್ಪಿ, ಅಂಬಡಗಟ್ಟಿ, ದೇಮಟ್ಟಿ, ಖೋದಾನಪುರ, ನಂದಿಹಳ್ಳಿ, ಬೆಳ್ಳಿಗಟ್ಟಿ, ಕರಿಯಾತಿ ಗ್ರಾಮಗಳ ದಂಡು ಬರಬೇಕೆಂದು ತಿಳಿಸಿದಳು. ಚೆನ್ನಮ್ಮನ ಕರೆಯನ್ನು ಮನ್ನಿಸಿ ಹತ್ತು ಸಾವಿರ ದಂಡು ಸಿದ್ಧವಾಯಿತು. ಕಾಮನಮಡ್ಡಿ ತೆಗೆದುಕೊಂಡು ಯುದ್ಧ ಮುಂದುವರೆಸಿದಳು. ಎಂಬ ಮೊದಲಾದ ವಿಚಾರಗಳು ಈ ಕಾವ್ಯದಿಂದ ತಿಳಿದುಬರುತ್ತದೆ.

'ಕಿತ್ತೂರು ಚೆನ್ನವ್ವನ ಸೊಸಿ' ಎಂಬ ಈತನ ಮತ್ತೊಂದು ಕೃತಿಯಲ್ಲಿ ಒಂಬತ್ತು ನುಡಿಗಳಲ್ಲಿ ಕಿತ್ತೂರು ಚೆನ್ನಮ್ಮನ ಸೊಸೆ ವೀರಮ್ಮನ ದುರಂತ ಮರಣದ ಮನಕಲಕುವ ಪ್ರಸಂಗದ ಚಿತ್ರಣವಿದೆ.

**ನೇಸರಗಿ ಚೌಬಾರಿ ಅಡೆವೆಪ್ಪ ಗೌಡ:** ಈತ ಕಿತ್ತೂರಿನ ಇತಿಹಾಸದಲ್ಲಿ ಬಹಳ ರೋಚಕವೂ, ಸಾಹಸಮಯವೂ, ಚೆನ್ನಮ್ಮಳ ವೀರಾವೇಶವನ್ನು ಬಣ್ಣಿಸುವ ಕಿತ್ತೂರಿನ ಯುದ್ಧದ ವಿವರವನ್ನೊಳಗೊಂಡ ವಿಚಾರಗಳನ್ನು 'ಕಿತ್ತೂರಿನ ಕೊನೆಯ ಕಾಳಗ' ಎಂಬ ಹೆಸರಿನಿಂದ ರಚಿಸಿದ್ದಾನೆ.

**ಕರಿಯಾತಿ ಕಾಳಗ:** ಇದೊಂದು ಕೋಲು ಪದ. ಅರಾಜಕತ್ವದ ಸಮಯದಲ್ಲಿ ನೆರೆಯ ಬೆಳವಡಿ ಸಂಸ್ಥಾನದ ಮನೆತನಕ್ಕೆ ಸಂಬಂಧ ಪಟ್ಟ ಬೊಮ್ಮಪ್ಪ ದೇಸಾಯಿ ಎಂಬುವನು ಸೈನ್ಯ ಸಮೇತ ಮತ್ತೆ ಮತ್ತೆ ಕಿತ್ತೂರ ಮೇಲ ದಂಡೆತ್ತಿ ಬರುತ್ತಾನೆ.

ಈ ದಂಗೆಯನ್ನು ಸದೆಬಡಿಯಲು ಚೆನ್ನಮ್ಮ ಕಿತ್ತೂರು ರಾಜ್ಯದ ಸೈನ್ಯಾಧಿಕಾರಿ ರಾಮಯ್ಯ ಎಂಬುವವರ ಮುಖಂಡತ್ವದಲ್ಲಿ ಸೈನ್ಯವನ್ನ ಕಳಿಸುತ್ತಾಳೆ. ಆದರೆ ರಾಮಯ್ಯ ವೈರಿಗಳಿಗೆ ಸೆರೆಯಾಳಾಗುತ್ತಾನೆ. ಕಡೆಗೆ ಸ್ವತಃ ಚೆನ್ನಮ್ಮನೇ ಅವರನ್ನು ಎದುರಿಸಲು ಹೊರಡುತ್ತಾಳೆ. ಕರಿಯಾತಿ ಗ್ರಾಮದ ಸಮೀಪ ಯುದ್ಧಮಾಡಿ ಎದುರಾಳಿಗಳನ್ನು ಹಿಮ್ಮೆಟ್ಟಿಸಿ, ರಾಮಸ್ವಾಮಿಯನ್ನೂ ಬಿಡಿಸಿಕೊಂಡು ಬರುತ್ತಾಳೆ. ಕರಿಯಾತಿ ಗ್ರಾಮದಬಳಿಯ ಯುದ್ಧವಾದ್ದರಿಂದ ಇದನ್ನುಕರಿಯಾತಿ ಕಾಳಗವೆಂದು ಕರೆಯಲಾಗುತ್ತದೆ.

**ಸೆರೆಯ ಹಿಡಿದವರನ್ನು ತರಿದಾಳೊ ರುಂಡವ**
**ಭರದಿಂದ ಬಿಡಿಸಿ ತರತಾಳೊ**
**ಕರಿಸ್ಯಾಳೋ ಮಂದಿನ್ನ ಕೊರಿಸ್ಯಾಳೋ ಕಕಾಲು**
**ತ್ವರದಿಂದ ಕಿತ್ತೂರಕ ಸಾಗ್ಯಾಳೋ ॥**

ಚೆನ್ನಮ್ಮ ಕೇವಲ ಬ್ರಿಟಿಶ್‌ರ ಮೇಲೆ ಮಾತ್ರ ಯುದ್ಧ ಮಾಡಿಲಿಲ್ಲ. ಈ ಹಿಂದೆಯೂ ಯುದ್ಧದಲ್ಲಿ ಭಾಗವಹಿಸಿದ್ದಳು ಎನ್ನುವುದಕ್ಕೆ ಇದೊಂದು ಆಧಾರವಾಗಿದೆ.

**ಬಂಗ ಅರಸುಮನೆತನದ ರಾಣಿ ಚಂದ್ರಮತಿ**

ಸುಮಾರು ಹದಿಮೂರನೆಯ ಶತಮಾನದಿಂದ ಕರ್ನಾಟಕದ ಕರಾವಳಿ ಪ್ರದೇಶಗಳಲ್ಲಿ ಆಳ್ವಿಕೆ ನಡೆಸುತ್ತಿರುವ ಬಂಗ ಅರಸರು ಅನೇಕ ಕವಿಗಳನ್ನೂ, ಪಂಡಿತರನ್ನೂ ಪೋಷಿಸಿದವರು. ಧರಣೇಂದ್ರ ಎಂಬ ಕವಿಯು ತಾನು ರಾಣಿ ಚಂದ್ರಮತಿಯ ಕೋರಿಕೆಯ ಮೇಲೆ ಗ್ರಂಥ ರಚಿಸಿರುವುದಾಗಿ ತಿಳಿಸಿದ್ದಾನೆ.

ಕವಿ: ಕವಿ ಧರಣಿಗ ಅಥವಾ ಧರಣೇಂದ್ರನು ಪದುಮಣ್ಣನ ಮಗ, ಈ ಕೃತಿಯನ್ನು ನಂದಾವರದ ಅರಮನೆಯ ರಾಣಿ ಚಂದ್ರಮತಿಯ ಕೋರಿಕೆಯ ಅನುಸಾರ ಕೆಲವು ಕೃತಿಗಳನ್ನು ರಚಿಸಿರುವುದಾಗಿ ತಿಳಿಸಿದ್ದಾನೆ[೪೧]. ಈತನ ಕೃತಿಗಳು: ಸ್ತುತಿ ಸಂಗ್ರಹ, ಪದ್ಮಾವತಿ ಶೋಭಾನೆ ೨೫ ಪದ್ಯಗಳು , ಶ್ರೀ ಶಾಂತಿನಾಥ ಶೋಭಾನೆ ೧೨೫ ಗೀತೆಗಳು, ಸುವ್ವಾಲಿ ಪದಗಳು' ೩೩ ಹಾಡುಗಳು, ನೇಮೀಶ್ವರನ ತೊಟ್ಟಿಲ ಪದ ೪೦ ಜೋಗುಳದ ಹಾಡುಗಳು.

ಈ ಕೃತಿಗಳ ಹೆಸರೇ ಸೂಚಿಸುವಂತೆ ಇದು ಧಾರ್ಮಿಕ ಕೃತಿಗಳು. ಇನ್ನೂ ಹಸ್ತಪ್ರತಿಯಲ್ಲಿಯೆ ಇರುವ ಈ ಕೃತಿಗಳು ಸಂಪಾದನೆಗೊಂಡು ಪ್ರಕಟವಾಗಬೇಕಾಗಿದೆ.

## ಅಲಭ್ಯ ಕೃತಿಗಳು

ಅರಸಿಯರ ಪೋಷಣೆಯಲ್ಲಿದ್ದ ಕವಿಗಳು ರಚಿಸಿರುವ ಇನ್ನೂ ಹಲವಾರು ಕೃತಿಗಳು ಇಂದಿಗೆ ಅಲಭ್ಯವಾಗಿವೆ. ಇಪ್ಪತ್ತನೆಯ ಶತಮಾನದ ಆರಂಭದ ಕಾಲದಲ್ಲಿ ಕಾಗದ ಅಥವಾ ತಾಳೆಗರಿಯ ಹಸ್ತಪ್ರತಿಯ ರೂಪದಲ್ಲಿದ್ದ ಈ ಕೆಲವು ಕೃತಿಗಳ ಕುರಿತಾದ ಕಿರುಪರಿಚಯ ಕರ್ಣಾಟಕ ಕವಿಚರಿತ್ರೆ ಹಾಗು ಇತರೆಡೆಗಳಲ್ಲಿ ಉಲ್ಲೇಖವಾಗಿವೆ. ಪ್ರಕಟಣೆ ಕಾಣದೆ, ಕಣ್ಮರೆಯಾಗಿರುವ ಇಂತಹ ಹಸ್ತಪ್ರತಿಗಳಲ್ಲಿದ್ದ ಕಾವ್ಯಗಳ ಲಭ್ಯಮಾಹಿತಿಯಲ್ಲಿ ಕೆಲವು ಅರಸಿಯರ ವಿಚಾರ ದೊರಕುತ್ತದೆ.

### ಚೌಟರಾಣಿ ಅಬ್ಬಕ್ಕದೇವಿ

ಸುಮಾರು ಹನ್ನೆರಡನೆಯ ಶತಮಾನದಿಂದ ಹದಿನೆಂಟನೆಯ ಶತಮಾನದವರೆಗೂ ತುಳುನಾಡಿನ ಹಲವು ಭಾಗಗಳಲ್ಲಿ ಆಳ್ವಿಕೆ ನಡೆಸಿದ ಚೌಟ ಅರಸು ಮನೆತನದಲ್ಲಿ ಅಬ್ಬಕ್ಕದೇವಿ ಹೆಸರಿನ ಮೂವರು ರಾಣಿಯರು ವಿಭಿನ್ನ ಶತಮಾನಗಳಲ್ಲಿ ಕಂಡುಬರುತ್ತಾರೆ. ಅವರಲ್ಲಿ ಕ್ರಿ.ಶ.೧೨೮೩–೧೩೧೬ರ ವರೆಗೂ ಆಳ್ವಿಕೆ ನಡೆಸಿದ ಮೊದಲನೆಯ ಅಬ್ಬಕ್ಕ ಪ್ರಾಚೀನಳು. ಮುಂದೆ ಕ್ರಿ.ಶ.೧೫೪೪ರಿಂದ ೧೫೮೨ರ ವರೆಗಿನ ಕಾಲದಲ್ಲಿ ಆಳ್ವಿಕೆ ನಡೆಸಿದ ಎರಡನೆಯ ಅಬ್ಬಕ್ಕದೇವಿ ಬಹಳ ಪ್ರಭಾವಿ ರಾಣಿಯಾಗಿದ್ದು ಪೋರ್ಚುಗೀಸರನ್ನೆದುರಿಸಿದ ದಿಟ್ಟ ಅರಸಿ ಎಂಬ ಖ್ಯಾತಿಯಿಂದ ದೇಶ ವಿದೇಶಗಳಲ್ಲಿ ಪ್ರಸಿದ್ಧಳಾದವಳು. ಮೂರನೆಯ ಅಬ್ಬಕ್ಕದೇವಿಯು ಕ್ರಿ.ಶ.೧೬೨೬ ರಿಂದ ೧೬೪೯ರ ವರೆಗೂ ಆಳ್ವಿಕೆ ನಡೆಸಿದವಳು.

ಈ ಮನೆತನದ ಅರಸರು ಕೆಲವು ಕವಿಗಳಿಗೆ ಆಶ್ರಯ ನೀಡಿರುವುದು ತಿಳಿದು ಬರುತ್ತದೆ. **'ಲೋಭದತ್ತ ಚರಿತೆ', 'ಸುದರುಸನ ಚರಿತೆ'** ಕೃತಿಗಳನ್ನು ರಚಿಸಿದ ಹದಿನೈದನೆಯ ಶತಮಾನದ 'ನೇಮರಸ" ಎಂಬ ಕವಿಯು ತಾನು ಚೌಟರ ಧರ್ಮಸಾಮ್ರಾಜ್ಯದಲ್ಲಿದ್ದವನೆಂದು ತನ್ನ ಕೃತಿಯಲ್ಲಿ ತಿಳಿಸಿದ್ದಾನೆ. ಅಬ್ಬಕ್ಕದೇವಿಯ ಆಸ್ಥಾನದಲ್ಲಿ ಇದ್ದಿರಬಹುದಾದ ಕವಿ ಪಟ್ಟಾಭಿರಾಮನು ತನ್ನ ಕೃತಿಯಲ್ಲಿ ಅಬ್ಬಕ್ಕದೇವಿಯನ್ನು ಸ್ಮರಿಸಿದ್ದಾನೆ. ಕವಿಯ ಕಾಲದ ಗಣನೆಯಿಂದ ಈ ಅಬ್ಬಕ್ಕ ರಾಣಿಯು ಮೇಲೆ ತಿಳಿಸಿದ ಕ್ರಿ.ಶ.೧೬೨೬ ರಿಂದ ೧೬೪೯ರಲ್ಲಿ ಆಳ್ವಿಕೆ ನಡೆಸಿದವಳಾಗಿದ್ದಾಳೆ. ಕವಿಚರಿತೆಕಾರರು ಕವಿ ಪಟ್ಟಾಭಿರಾಮನ ಕೃತಿಯಲ್ಲಿ ಅಬ್ಬಕ್ಕದೇವಿಯ ಕುರಿತಾದ ಉಲ್ಲೇಖವನ್ನು ದಾಖಲಿಸಿದ್ದಾರೆ.

**ಕವಿ ಪಟ್ಟಾಭಿರಾಮ:** ಅಬ್ಬಕ್ಕದೇವಿಯ ಮಂತ್ರಿ ಕೋದಂಡರಾಮನ ಇಬ್ಬರು ಮಕ್ಕಳು ಪಟ್ಟಾಭಿರಾಮ ಹಾಗು ರಾಮಕವೀಂದ್ರರೆಂಬುವರು ಪ್ರಸಿದ್ಧ ಕವಿಗಳಾಗಿದ್ದರು[೪೨]. ಕವಿ ಪಟ್ಟಾಭಿರಾಮ ತನ್ನ ಕೃತಿ **ರತ್ನಶೇಖರ ಚರಿತ್ರೆಯ** ಆಶ್ವಾಸಾಂತ್ಯದಲ್ಲಿ "ಸಕಲ **ಸುಕವಿಜನಮನೋವನವಸಂತ** ವಿವಿಧಭಾಷಾ ವಿಶೇಷ ಪ್ರಬಂಧಬಂಧುರ **ವಾಙ್ಮಾಧುರ್ಯ**ಧುರೀಣನಪ್ಪ **ರಾಮ ಕವಿಸಹಭವ** ಪಟ್ಟಾಭಿರಾಮವಿರಚಿತ ರತ್ನಶೇಖರೋಪಾಖ್ಯಾನ ಮಹಾಪುರಾಣಚರಿತದೊಳ್" ಎಂದು ಹೇಳಿರುವಲ್ಲಿ ತನಗೆ 'ಸಕಲ ಸುಕವಿಜನಮನೋವನವಸಂತ' ನೆಂಬ ಬಿರುದು ಇದ್ದುದನ್ನೂ, ತಾನು ವಿವಿಧಭಾಷೆಯಲ್ಲಿ ಪಡೆದಿದ್ದ ಪಾಂಡಿತ್ಯವನ್ನೂ, ತಾನು ರಾಮಕವಿ ಎಂಬುವವನ ಅನುಜನೆಂದೂ ತಿಳಿಸಿದ್ದಾನೆ. ಅಲ್ಲದೆ ಇವನಿಗೆ ಕವಿಕುಲರನ್ನ ಎಂಬ ಬಿರುದೂ ಇತ್ತೆಂದು ಈ ಕಾವ್ಯದಲ್ಲಿ ತಿಳಿಸಿದ್ದಾನೆ.

ಈ ಕೃತಿಯಲ್ಲಿ ತಿಳಿಸಿರುವಂತೆ ಈತನ ತಾಯಿ ಸೋಮಾಂಬೆ, ತಂದೆ ಕೋದಂಡರಾಮ. ಈತನ ತಂದೆ ಕೋದಂಡರಾಮ ಚೌಟರ ಅರಮನೆಯಲ್ಲಿ ಮಂತ್ರಿಯಾಗಿದ್ದ. ಕವಿ ತನ್ನ ಕೃತಿಯಲ್ಲಿ ತಮ್ಮ ರಾಮಕವೀಂದ್ರನನ್ನು 'ಧೀಮಣಿ, ಸಕಲ ಕಲಾಭಿಜ್ಞಮಣಿ' ಎಂದೂ 'ಸಾರ್ವಭೌಮ ಹಾಗೂ ವಾಗ್ವೈಭವ' ಎಂದೂ ವರ್ಣಿಸಿದ್ದಾನೆ. ಅಣ್ಣತಮ್ಮಂದಿರಿಬ್ಬರೂ ಮಹಾನ್ ಕವಿಪುಂಗವರಾಗಿದ್ದರೆಂದು ತಿಳಿದುಬರುತ್ತದೆ ಆದರೆ ರಾಮಕವೀಂದ್ರನ ಯಾವ ಕೃತಿಗಳು ದೊರೆತಿಲ್ಲ. ಅಲ್ಲದೆ ಕವಿ ಪಟ್ಟಾಭಿರಾಮನೂ ಸಹ 'ರತ್ನಶೇಖರ ಚರಿತ್ರೆ' ಅಲ್ಲದೆ ಇತರ ಕೃತಿಗಳನ್ನು ರಚಿಸಿರುವುದಾಗಿ ತಿಳಿದು ಬಂದರೂ, ಈ ಕೃತಿಯನ್ನುಳಿದು ಬೇರೆ ಯಾವ ಗ್ರಂಥವೂ ದೊರೆತಿಲ್ಲ.

**ಕವಿಯ ಕಾಲ:** ಕವಿ ಪಟ್ಟಾಭಿರಾಮನು ತನ್ನ ಕೃತಿಯಲ್ಲಿ ಪ್ರಭಾಚಂದ್ರ ಮುನಿಯನ್ನು ಸ್ಮರಿಸಿದ್ದಾನೆ. 'ರಾಮಚಂದ್ರ ಚರಿತ್ರೆ' ಎಂಬ ಕೃತಿಯನ್ನು ರಚಿಸಿರುವ ಕವಿ ಪದ್ಮನಾಭ'ಕೂಡ ತಾನು ಪ್ರಭಾಚಂದ್ರ ಮುನಿಯ ಶಿಷ್ಯನೆಂದು ತಿಳಿಸಿರುವುದರಿಂದ ಈತ ಪಟ್ಟಾಭಿರಾಮನ ಸಮಕಾಲೀನನೆಂಬುದು ತಿಳಿದುಬರುತ್ತದೆ. ಕವಿ ಪದ್ಮನಾಭನ ಕಾಲದ ಆಧಾರದಿಂದ ಪಟ್ಟಾಭಿರಾಮ ಕೂಡ ಕ್ರಿ.ಶ.೧೭೪೦ರ ಆಸುಪಾಸಿನಲ್ಲಿದ್ದವನೆನ್ನುವುದು ಖಚಿತವಾಗುತ್ತದೆ. ಅಲ್ಲದೆ ಪಟ್ಟಾಭಿರಾಮನು ಕಾವ್ಯದಲ್ಲಿ ಉಲ್ಲೇಖಿಸಿರುವ ಅಬ್ಬಕ್ಕನನ್ನು ಚಿಕ್ಕರಾಯ ಚೌಟರಾಜನ ವಂಶಜೆ ಎಂದಿದ್ದಾನೆ. ಉಲ್ಲಾಳದಲ್ಲಿ ಚಿಕ್ಕರಾಯ ಚೌಟ ಕ್ರಿ.ಶ.೧೬೮೭ ರಿಂದ ೧೭೧೫ವರೆಗೂ ಆಳ್ವಿಕೆ ನಡೆಸಿದ ರಾಜ. ಇವನ ನಂತರ ಸುಮಾರು ೧೧ ವರ್ಷಗಳ ಕಾಲ ಪದುಮಲದೇವಿ ಆಳ್ವಿಕೆ ನಡೆಸಿದ್ದಾಳೆ. ಆನಂತರ ಕವಿಯು ಉಲ್ಲೇಖಿಸಿರುವ ರಾಣಿ ಅಬ್ಬಕ್ಕದೇವಿಯು ಕ್ರಿ.ಶ.೧೭೨೬ ರಿಂದ ೧೭೪೯ರ ವರೆಗೂ ಆಳ್ವಿಕೆ ನಡೆಸಿದವಳಾದ್ದರಿಂದ ಕವಿಯ ಕಾಲವೂ ಇದೇ ಸುಮಾರೆಂದು ತಿಳಿಯಬಹುದು. ಕವಿಚರಿತೆಕಾರರೂ ಸಹ ಈತನ ಕಾಲವನ್ನು ಕ್ರಿ.ಶ.೧೭೨೫ ಎಂದೇ ಸೂಚಿಸಿದ್ದಾರೆ[೪೩].

ಈ ಕಾವ್ಯ ರಚನೆಗೂ ಮುನ್ನ ಕವಿ ಪಟ್ಟಾಭಿರಾಮನಿಗಿದ್ದ ಬಿರುದು, ಹಾಗೂ ಈತನ ತಮ್ಮನ ಕಾವ್ಯ ಹಾಗೂ ಆತನ ಬಿರುದುಗಳು ಇವರು ಪಂಡಿತ ಮನೆತನದವರೆನ್ನುವುದೂ, ರಾಜಮನೆತನದಿಂದ ಬಿರುದಾವಳಿಗಳನ್ನೂ, ಪ್ರತಿಷ್ಠೆ ಗೌರವಗಳನ್ನು ಪಡೆದ ಕವಿಗಳೆನ್ನುವುದು ವೇದ್ಯವಾಗುತ್ತದೆ. ಅಲ್ಲದೆ ಕವಿ ಪಟ್ಟಾಭಿರಾಮನ ತಂದೆ ಕೋದಂಡರಾಮ ಚೌಟರ ಅರಮನೆಯಲ್ಲಿ ಮಂತ್ರಿಯಾಗಿದ್ದ ವಿಚಾರ ಅಬ್ಬಕ್ಕರಾಣಿ ಈತನ ಪೋಷಕಳಾಗಿದ್ದಳೆನ್ನುವುದಕ್ಕೆ ಪುಷ್ಟಿ ನೀಡುತ್ತದೆ.

ರತ್ನಶೇಖರನೆಂಬ ರಾಜನು ಪುಷ್ಪಾಂಜಲಿಯ ನೋಂಪಿಯನ್ನ ಆಚರಿಸಿ ಮುಕ್ತಿಯನ್ನು ಪಡೆದ ಜೈನ ಧಾರ್ಮಿಕ ವಸ್ತುವನ್ನು ಹೊಂದಿರುವ ಈ ಕಾವ್ಯವು ೫ ಆಶ್ವಾಸಗಳು ಹಾಗೂ ೧೫ ಸಂಧಿಗಳಲ್ಲಿ ಕೃತಿ ರಚಿತವಾಗಿದೆ. ಧಾರ್ಮಿಕ ಕಾವ್ಯವಾದರೂ ಇದನ್ನು ತಾನು "ಸರಸಾಲಂಕಾರಭಾವಗಳಿಂ" ರಚಿಸಿದ್ದೇನೆಂದು ಕವಿ ಹೇಳಿಕೊಂಡಿದ್ದಾನೆ.

ಕವಿಚರಿತೆಯ ರಚನೆಯ ಕಾಲದಲ್ಲಿ ಲಭ್ಯವಿದ್ದ ಈ ಕೃತಿಯು ಉಪೇಕ್ಷೆಗೆ ಒಳಗಾಗಿ, ಇಂದಿಗೆ ಅಲಭ್ಯ ಕೃತಿಯಾಗಿದೆ. ಕವಿಯ ಬಿರುದಾವಳಿಗಳನ್ನು ಗಮನಿಸಿದರೆ ಈತ ಇನ್ನೂ ಹಲವು ಕಾವ್ಯಗಳನ್ನು ರಚಿಸಿದ್ದಾನೆಂದು ತೋರುವುದಲ್ಲದೆ, ಈತನ ಸಹೋದರ ರಾಮಕವಿಯೂ ಕೂಡ ಕಾವ್ಯಗಳನ್ನು ರಚಿಸಿರುವುದು ಖಚಿತವಾಗುತ್ತದೆ. ಆದರೆ ದುರದೃಷ್ಟದಿಂದಾಗಿ ಇವರ ಯಾವ ಕಾವ್ಯವೂ ಲಭ್ಯವಿಲ್ಲದೆ ಹೋಗಿದೆ.

**ಕಾವ್ಯದ ವಸ್ತು:** ಇದೊಂದು ಜೈನ ಪುರಾಣ ಗ್ರಂಥವಾದ್ದರಿಂದ, ಈ ಕೃತಿಯಲ್ಲಿ ಪ್ರಭಾಚಂದ್ರನ ಅನುಜ್ಞೆಯಿಂದ "ಸರಸಾಲಂಕಾರಭಾವಗಳಿಂ" ಈ ಗ್ರಂಥವನ್ನು ರಚಿಸಿದಂತೆ ಕವಿ ಹೇಳಿದ್ದಾನೆ. ಅಲ್ಲದೆ ಗ್ರಂಥಾರಂಭದಲ್ಲಿ ವೀರಜಿನಸ್ತುತಿ, ಪಾರ್ಶ್ವನಾಥ, ಸಿದ್ಧಾದಿಗಳು, ಗಣಧರರು, ಕೊಂಡಕುಂದ, ಅಕಲಂಕ, ಪದ್ಮಾವತಿಯಕ್ಷಿಯರ ಸ್ತುತಿಯಿದೆ. ಅನಂತರ ಪೂರ್ವಕವಿಗಳನ್ನು ಸ್ಮರಿಸಿದ್ದಾನೆ.ಆದಿಕವಿ ಪಂಪನನ್ನು ಕುರಿತು "ಭೂತಲದೊಳಗಾದಿನಾಥನ

ಚರಿತವ ಖ್ಯಾತಿಯಿಂದಲಿ ವಿರಚಿಸಿದ ಚಾತುರ್ಯಶಾಲಿಯೆಂದೆನಿಸಿದ ಪಂಪನ ರೀತಿಯ ಕೊಂಡಾಡುವೆನು" ಎಂದಿದ್ದಾನೆ.

**ಘನತರಚಂದ್ರನಾಥನ ಚರಿತ್ರವನು ಘನವಾಗಿ ರಚಿಸಿದಗ್ಗಳನ**
**ವಿನುತಕವಿತ್ವದ ಗೌರವದೇಟಿಕ್ಗೆಯ ಮನವೊಲಿದಾಂ ಪೊಗಟುವೆನು॥**

**ಶೃಂಗಾರಕವಿರಾಜಪುಂಗವನೆನಿಸಿ ಬೆಡಂಗಾಂತ ನೇಮಿಚಂದ್ರಮನ**
**ತುಂಗವಿಖ್ಯಾತಪ್ರಸಂಗಗಜಾಂಕುಶರಿಂಗೆ ನಾಂ ಕೈವಾರಿಸುವೆ ॥**

**ತ್ರಿಜಗನ್ನುತಿವೆತ್ತ ಭುಜಗಾಧಿಪತಿಯಂತೆ ನಿಜವಾಗ್ವಿಳಾಸಿಗಳಾದ**
**ಸುಜನಮನೋಜನ ಗಜಗನ ಪ್ರಚುರಶ್ರೀ ವಿಜಯನ ನಾ ಪೊಗಟುವೆನು** ॥ ಎನ್ನುತ್ತಾ ಅಗ್ಗಳ, ನೇಮಿಚಂದ್ರ, ಗಜಾಂಕುಶ, ಸುಜನಮನೋಜ ಮೊದಲಾದ ಕೆಲವು ಪೂರ್ವಕವಿಗಳನ್ನು ಕವಿ ಪಟ್ಟಾಭಿರಾಮನ ಸ್ಮರಿಸಿದ್ದಾನೆ.

ಈ ಜೈನ ಧಾರ್ಮಿಕ ಗ್ರಂಥವನ್ನು ಸಾಂಗತ್ಯದಲ್ಲಿ ರಚಿಸಲಾಗಿದೆ. ೫ ಆಶ್ವಾಸಗಳು ಹಾಗೂ ೧೫ ಸಂಧಿಗಳಲ್ಲಿ ಕೃತಿ ರಚಿತವಾಗಿದೆ.

**ಮಂಗಳಕರಪುರಾಣಂಗಳ ಕಥೆಗಳ**
**ಪಿಂಗದೆ ಧರೆಗೆ ಬಿತ್ತರಿಸಿ**
**ಕಂಗೊಳಿಸುವ ಕವಿಪರಮೇಷ್ಠಿ ಮುಖ್ಯವೀ**
**ರಾಂಗಮುನಿಗಳಿಗೆಱರುವೆ॥**

ಕವಿ ತನ್ನನ್ನು 'ಭಾವಜ್ಞ ಪ್ರಚಂಡ ಛಂದೋವಿದ' ಎಂದು ಕರೆದು ಕೊಂಡಿರುವುದಲ್ಲದೆ 'ಮೃದು ಕವಿತಾವಿಶಾರದ' ಎಂದೂ ಹೇಳಿಕೊಂಡಿದ್ದಾನೆ. ಜೊತೆಗೆ ತಾನು 'ವಿವಿಧ ಭಾಷಾವಿಶೇಷ ಪ್ರಬಂಧ ಬಂಧುರ ವಾಙ್ಮಧುರಧುರೀಣ' ಎಂದು ಹೇಳಿಕೊಂಡಿರುವುದರಿಂದ ಕನ್ನಡವಲ್ಲದೆ ಸಂಸ್ಕೃತದಲ್ಲಿಯೂ ಗ್ರಂಥ ರಚಿಸಿದಂತೆ ತೋರುತ್ತದೆ. 'ಸಕಲ ಸುಕವಿಜನ ಮನವನೋವಸಂತ' ಎಂಬುದೂ ಈತನ ಬಿರುದು. ಇಷ್ಟೊಂದು ಬಿರುದುಗಳನ್ನು ಧರಿಸಿರುವ ಈ ಕವಿಯ ಇತರ ಕೃತಿಗಳು ಹಾಗೂ ಇವನ ತಮ್ಮ ರಾಮಕವೀಂದ್ರನ ಕೃತಿಗಳು ಲಭ್ಯವಾದಲ್ಲಿ ಇವರ' ಕಾಲದ ಮತ್ತಷ್ಟು ವಿಚಾರಗಳನ್ನು ಅರಿಯಲು ಸಹಕಾರಿಯಾಗಬಹುದು.

ರಾಣಿ ಅಬ್ಬಕ್ಕಳ ವಿಚಾರಗಳನ್ನು ವಿದೇಶಿ ಬರಹಗಾರರ ಕೃತಿಯಿಂದಲೇ ತಿಳಿದುಕೊಳ್ಳಬೇಕಾಗಿರುವುದೊಂದು ದುರಂತ.ಅಲ್ಲದೆ ಈ ಕೆಲವು ಕೃತಿಗಳು ಹಾಗು ದೊರೆತಿರುವ ಕೆಲವು ಕೈಫಿಯತ್ತುಗಳು ಅಬ್ಬಕ್ಕಳ ಕುರಿತಾಗಿ ಹಲವು ಗೊಂದಲಗಳನ್ನು ಉಂಟುಮಾಡಿವೆ. ಅಬ್ಬಕ್ಕಳ ಸಮಕಾಲೀನರಾದ ಈ ಕವಿಗಳ ಕೃತಿಗಳು ದೊರಕಿದಲ್ಲಿ ಅಬ್ಬಕ್ಕಳ ಕುರಿತಾಗಿ ಇರುವ ಅನೇಕ ಅನುಮಾನಗಳನ್ನು ಪರಿಹರಿಸಲು ಸಹಾಯಕವಾಗಬಹುದು.

**ಚೌಟ ರಾಣಿ ಚನ್ನಮ್ಮ – ಕವಿ ಸುರಾಲ**

ಪುತ್ತಿಗೆಯಿಂದ ಆಳ್ವಿಕೆ ನಡೆಸುತ್ತಿದ್ದ ಚೌಟವಂಶದ ಚಂದ್ರಶೇಖರ ಚಿಕ್ಕರಾಯಚೌಟನ ರಾಣಿ ಚೆನ್ನಮ್ಮದೇವಿ ಸುರಾಲ ಎಂಬ ಕವಿಯಿಂದ 'ಪದ್ಮಾವತೀ ಚರಿತೆ'ಯನ್ನು ಬರೆಸಿದಳೆಂದು ತಿಳಿದು ಬರುತ್ತದೆ.

ಈ ಕೃತಿಯು ಅಪ್ರಕಟಿತವಾಗಿದ್ದು ಕವಿಯ ವಿಚಾರವಾಗಲೀ, ರಾಣಿ ಚೆನ್ನಮ್ಮದೇವಿಯ ವಿಚಾರವಾಗಲೀ ತಿಳಿದುಬರುವುದಿಲ್ಲ. ಕವಿಚರಿತೆಯ ಮೂರನೆಯ ಸಂಪುಟದಲ್ಲಿ ಈ ಕುರಿತಾಗಿ ಮಾಹಿತಿ ದೊರಕುತ್ತದೆಯಾದರೂ,

ಈ ಕೃತಿಯನ್ನು ಕವಿಚರಿತೆಕಾರರು ನೇರವಾಗಿ ನೋಡಿಲ್ಲ, ರೈಸ್‌ರು ಬರೆದಿರುವ ಕೆಲವೊಂದು ವಿಚಾರವನ್ನು ಇಲ್ಲಿ ಉಲ್ಲೇಖಿಸಿರುವುದಾಗಿ ತಿಳಿಸಿದ್ದಾರೆ[೪೪].

ಕವಿ ಹಾಗೂ ಕೃತಿಯ ಕಾಲವನ್ನು ಕ್ರಿ.ಶ.೧೭೬೧ ಎಂದು ಕವಿಚರಿತೆಯಲ್ಲಿ ಹೇಳಿದೆ. ಕವಿಯನ್ನು ಕುರಿತು ಜೈನಕವಿ ಎಂದಷ್ಟೇ ತಿಳಿಸಿದ್ದಾರೆ. ಸಾಂಗತ್ಯದಲ್ಲಿ ಬರೆಯಲಾದ ಈ ಕೃತಿಯು ೧೨ ಸಂಧಿ ಹಾಗೂ ೧೬೭೧ ಪದ್ಯಗಳಿಂದ ರಚಿತವಾಗಿದೆ. "ಪುತ್ತಿಕಾಪುರದ ಚಂದ್ರಶೇಖರ ಚಿಕ್ಕರಾಯಚೌಟನ ರಾಣಿವಾಸದ ಚೆನ್ನಮ್ಮದೇವಿಯ ಇಷ್ಟಾನುಸಾರವಾಗಿ" ಬರೆದೆನೆಂದು ಹೇಳಿರುವ ವಿಚಾರವಲ್ಲದೆ, ಈ ಕೃತಿಯ ಮತ್ಯಾವ ವಿಚಾರವಾಗಲೀ, ಪದ್ಯವಾಗಲೀ ಉಲ್ಲೇಖಗೊಂಡಿಲ್ಲ.

ಪುತ್ತಿಗೆಯಲ್ಲಿ ಆಳಿದ ಚೌಟ ಅರಸರ ಕುರಿತಾಗಿ ಹೆಚ್ಚು ಅಧ್ಯಯನ ನಡೆದಿಲ್ಲ. ಆರ್.ನರಸಿಂಹಾಚಾರ್ಯರಿಗೂ ಪೂರ್ವದಲ್ಲಿ ರೈಸರಿಗೆ ದೊರೆತಿದ್ದ ಸುರಾಲ ಕವಿಯ 'ಪದ್ಮಾವತೀ ಚರಿತೆ' ಕೃತಿ ಲಭ್ಯವಾದಲ್ಲಿ, ಈ ಮನೆತನದ ಚೆನ್ನಮ್ಮ ರಾಣಿಯ ಕುರಿತಾದ ಮಾಹಿತಿ ದೊರಕುವ ಸಾಧ್ಯತೆಯಿದೆ.

**ಹಸ್ತಪ್ರತಿ ಲಿಪೀಕರಣ:** ಕವಿಯ ಮೂಲ ಹಸ್ತಪ್ರತಿಗಳು ಇಂದಿನವರೆಗೂ ಉಳಿದು ಬರಲು ಸಾಧ್ಯವಿಲ್ಲ. ಮುದ್ರಣ ಕಲೆ ಗೊತ್ತಿರದ ಕಾಲದಲ್ಲಿ ಜನರಿಗೆ ಸಾಹಿತ್ಯ ತಲಪಿಸುವ, ಹಾಗೂ ಮುಂದಿನ ಪೀಳಿಗೆಗೆ ಕಾಪಾಡುವ ಸಲುವಾಗಿ ಮೂಲ ಕೃತಿಗಳನ್ನು ನಕಲು ಮಾಡಿಸಲಾಗುತ್ತಿತ್ತು. ಅರಸಿಯರೂ ಇಂತಹ ಕೆಲಸವನ್ನು ನಡೆಯಿಸಿ, ಆ ಮೂಲಕ ಸಾಹಿತ್ಯ ಸೇವೆಯನ್ನು ನಡೆಸಿದ್ದಾರೆ. ಮೈಸೂರಿನ ಅರಸಿಯರು, ಸಾಳ್ವ ಮನೆತನದ ಅರಸಿಯರು ನಡೆಸಿರುವ ಇಂತಹ ಕಾರ್ಯಗಳನ್ನು ಈ ಹಿಂದೆ ಉಲ್ಲೇಖಿಸಲಾಗಿದೆ. ಅಂತೆಯೇ ಪ್ರಾಚೀನ ಕಾಲದ ಅರಸಿಯರು ಲಿಪೀಕರಣಕ್ಕೆ ನೀಡಿರುವ ಕಾಣಿಕೆಯನ್ನು ಹಿಂದಿನ ಅಧ್ಯಾಯದಲ್ಲಿ ಗುರುತಿಸಲಾಗಿದೆ. ಸಾಹಿತ್ಯ ಕೃತಿಗಳನ್ನು ಉಳಿಸುವಂತಹ ಇಂತಹ ಕಾರ್ಯ ನಡೆಸಿರುವ ಇನ್ನೂ ಕೆಲವು ಅರಸಿಯರನ್ನು ಕಾಣಬಹುದು.

ಚಿಕ್ಕನಾಯಕನ ಹಳ್ಳಿಯ ನಾಗತಿ ಚೆನ್ನಾಜಮ್ಮ ಎನ್ನುವವಳು ಸರ್ವಜ್ಞನ ವಚನಗಳನ್ನು ಪ್ರತಿಮಾಡಿಸಿರುವ ವಿಚಾರ ತಿಳಿದುಬರುತ್ತದೆ[೪೫]. "ಚಿಗನಾಯಕನಗಳ್ಳಿ ಲಿಂಗಪ್ಪನು **ಮಹಾರಾಜೇಶ್ರೀ ಚೆನ್ನಾಜಮ್ಮ**ನವರಿಗೆ ಪಾರಮಾರ್ಥಿಕವಾಗಿ ಬರೆದು ಒಪ್ಪಿಸಿದಂಥಾ..." ಕೃತಿ ಎಂದು ಇಲ್ಲಿ ತಿಳಿಸಲಾಗಿದೆ. ಮಹಾರಾಜೇಶ್ರೀ ಚೆನ್ನಾಜಮ್ಮನವರು ಚಿಗನಾಯಕನಹಳ್ಳಿ ಲಿಂಗಪ್ಪನಿಂದ ತ್ರಿಪದಿರೂಪದ ಪಾರಮಾರ್ಥಿಕ ಪುಸ್ತಕ (ಸರ್ವಜ್ಞನ ವಚನಗಳು)ವನ್ನು ಬರೆಯಿಸಿರುವುದು ಎಂಬ ಉಲ್ಲೇಖವು ಇವಳು ಲಿಂಗಪ್ಪನೆಂಬ ಲಿಪಿಕಾರನಲ್ಲಿ ಹೇಳಿ ಬರೆಯಿಸಿರುವ ಪ್ರತಿ ಇದೆಂದು ತಿಳಿದುಬರುತ್ತದೆ. ಇದೇ ಪ್ರಕಾರ ವಿಜಯನಗರದ ಸಾಮಂತ ಮಹಾನಾಡ ಪ್ರಭು ಇಮ್ಮಡಿ **ಚಿಕ್ಕಭೂಪಾಲನ ಮಡದಿ ಚೆನ್ನಾಜಮ್ಮ 'ಪಾರಮಾರ್ಥಿಕ ಪುಸ್ತಕ'** ವನ್ನು ಯಜ್ಞನಾರಾಯಣ ದೀಕ್ಷಿತರ ಮಗ ವಿಶ್ವನಾಥನಿಂದ ಪ್ರತಿಮಾಡಿಸಿದ್ದಾಳೆ.

ಚಿಕ್ಕಬಳ್ಳಾಪುರ ಸಂಸ್ಥಾನದ ಆವತಿ ಗೌಡರ ಕೊನೆಯ ಸಂತತಿ ಅನಂತರಾಮಸ್ವಾಮಿಯ ಮಗಳಾದ ಪುಟ್ಟಪಾರ್ವತಿ ಅಮ್ಮಣ್ಣಿ ಕ್ರಿ.ಶ.೧೮೯೫ರಲ್ಲಿ 'ನಂದಿಮಹಾತ್ಮ್ಯ' ಎಂಬ ಗ್ರಂಥವನ್ನು ತೆಲುಗು ಲಿಪಿಯಲ್ಲಿ ಅಚ್ಚುಮಾಡಿಸಿ ಪ್ರಕಟಿಸಿದ್ದಾಳೆ. ಈ ಕೃತಿಯ ಪೀಠಿಕೆಯಲ್ಲಿ ಇವರ ಪೂರ್ವಜರ ಕುರಿತಾದ ವಿಶೇಷ ಮಾಹಿತಿಗಳು ಉಕ್ತವಾಗಿವೆ. ಯಲಹಂಕ ನಾಳ್ಪ್ರಭುಗಳು ಮೂಲತಃ ಆವತಿ ನಾಡಪ್ರಭು ವಂಶದವರೇ ಆಗಿದ್ದು, ಮುಂದೆ ಇವರನ್ನು ಅವರ ದಾಯಾದಿಗಳಾದ ಇವರನ್ನು ಆವತಿ ನಾಡಪ್ರಭುವೆಂದು ಗುರುತಿಸದೆ ಕೇವಲ ಯಲಹಂಕ ನಾಳ್ಪ್ರಭು ಎಂದೇ ಹೆಸರಿಸಲಾಯಿತು.

ಹಿಂದೆ ರಾಜಮನೆತನದ ಮಹಿಳೆಯರು ಲಿಪಿಕಾರರಿಂದ ಪ್ರತಿಗಳನ್ನು ಮಾಡಿಸುತ್ತಿದ್ದರು, ಪಾಶ್ಚಾತ್ಯರ ಪ್ರಭಾವದಿಂದ ಮುದ್ರಣ ಕಲೆ ಭಾರತಕ್ಕೆ ಬಂದ ನಂತರವೂ ಸಾಹಿತ್ಯ ಪೋಷಣೆ ನಡೆದಿರುವುದಕ್ಕೆ ಈ ಮೇಲಿನ

ಉದಾಹರಣೆಗಳೊಂದಿಗೆ ಈ ಹಿಂದೆ ತಿಳಿಸಿರುವಂತೆ ವಾಣಿವಿಲಾಸ ಸನ್ನಿಧಾನದ ಕೆಂಪುನಂಜಮ್ಮಣ್ಣಿಯವರೂ ಕೆಲವು ಗ್ರಂಥಗಳು ಮುದ್ರಣಗೊಳ್ಳಲು ಕಾರಣರಾಗಿರುವವರೆನ್ನುವ ವಿಚಾರವನ್ನು ಗಮನಿಸಬಹುದು.

**ಅಧ್ಯಯನದ ಫಲಿತ**

ಪ್ರಾಚೀನ ಕಾಲದ ಅರಸಿಯರಿಗಿಂತ ಮಧ್ಯಕಾಲೀನ ಅರಸಿಯರು, ರಾಜಕೀಯ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಭಿನ್ನವಾಗಿ ತೋರುವುದಷ್ಟೇ ಅಲ್ಲದೆ ಸಾಹಿತ್ಯಿಕ ಕೊಡುಗೆ ನೀಡುವಲ್ಲಿಯೂ ಭಿನ್ನವಾಗಿ ಕಂಡುಬರುತ್ತಾರೆ. ಪ್ರಾಚೀನ ಕಾಲದ ಅರಸಿಯರ ಸಾಹಿತ್ಯ ಪೊಷಣೆಯನ್ನು ಶಾಸನಗಳ ಆಧಾರದಲ್ಲಿಯೇ ಗಮನಿಸಬೇಕಿದೆ, ಆದರೆ ಮಧ್ಯಕಾಲೀನ ಅರಸಿಯರು ಪ್ರೋತ್ಸಾಹ ನೀಡಿ ಬರೆಯಿಸಿರುವ ಕಾವ್ಯಗಳು ಗ್ರಂಥಸ್ಥಕಾವ್ಯಗಳಾಗಿವೆ.

ಇಲ್ಲಿ ವೈವಿಧ್ಯಮಯವಾದ ವಿಚಾರಗಳ ಮೇಲೆ ರಚನೆಯಾದ ಕೃತಿಗಳು ದೊರಕುತ್ತವೆ. ವೈದ್ಯ, ಐತಿಹಾಸಿಕ, ಧಾರ್ಮಿಕ ವಿಚಾರಗಳಲ್ಲಿ ಜೈನ, ವೈದಿಕ ಪೌರಾಣಿಕಗ್ರಂಥಗಳು, ಪತಿಧರ್ಮಗಳಲ್ಲದೆ ವಸ್ತುಕ, ವರ್ಣಕ ಕಾವ್ಯಗಳನ್ನೂ ಗಮನಿಸಬಹುದು.

ಈ ಅಧ್ಯಾಯದಲ್ಲಿ ಹಲವಾರು ಹೊಸ ವಿಚಾರಗಳನ್ನು ಗುರುತಿಸಲಾಗಿದೆ. ಒಂದೇ ಅರಸುಮನೆತನದ ಹಲವಾರು ಅರಸಿಯರು ಸಾಹಿತ್ಯ ರಚನೆಗೆ ಕಾರಣರಾಗಿರುವುದನ್ನು ಒಂದೆಡೆ ಗಮನಿಸಲಾಗಿದೆ. ಸಾಳ್ವ ಅರಸಿಯರು, ಮೂಲ್ಕಿ ಮನೆತನದ ಅರಸಿ, ಕೆಳದಿ ಅರಸಿಯರು, ಮೈಸೂರಿನ ಅರಸಿಯರು, ಕಿತ್ತೂರಿನ ರಾಣಿ, ಬಂಗ ಅರಸಿ, ಚೌಟ ಅರಸಿಯರು ಮೊದಲಾದ ಅರಸುಮನೆತನದವರ ಸಾಹಿತ್ಯ ಪೋಷಣೆಯನ್ನು ಪ್ರತ್ಯೇಕವಾಗಿ ಗುರುತಿಸಲಾಗಿದೆ. ಜೊತೆಗೆ ಹಸ್ತಪ್ರತಿ ಲಿಪಿಕರಣಕ್ಕೆ ಹಾಗೂ ಗ್ರಂಥ ಮುದ್ರಣಕ್ಕೆ ಕಾರಣರಾದ ಆಧುನಿಕ ಕಾಲದ ಅರಸಿಯರ ಕೊಡುಗೆಗಳನ್ನೂ ಗುರುತಿಸಲಾಗಿದೆ.

ಹಲವಾರು ವಿಚಾರಗಳ ಮೇಲೆ ಹಿಂದಿನ ವಿದ್ವಾಂಸರು ಬೆಳಕು ಚೆಲ್ಲಿರುವವರಾದರೂ, ಮುಂದಿನ ಸಾಹಿತ್ಯ ಚರಿತ್ರೆಗಳು ಒಳಗೊಳ್ಳದ ಕೆಲವು ವಿಚಾರಗಳನ್ನು ಇಲ್ಲಿ ಗಮನಿಸಿದೆ. ರಾಣಿ ಅಮೃತಾಂಬೆಯು ಷಡಕ್ಷರಿಗೆ ರಾಜಾಶ್ರಯವಿತ್ತು, ಆತನ ಮೊದಲ ಕೃತಿ ರಚನೆಗೆ ಕಾರಣಳಾದ ಸಂದರ್ಭವನ್ನು ಈ ಹಿಂದಿನ ಕೆಲವು ವಿದ್ವಾಂಸರು ಗಮನಿಸಿದ್ದಾರೆ. ಆದರೆ ಷಡಕ್ಷರಿ ಅದಕ್ಕೂ ಪೂರ್ವದಲ್ಲಿ ರಚಿಸಿರುವ ಗದ್ಯಕೃತಿಯನ್ನು ಮೊಟ್ಟಮೊದಲ ಬಾರಿಗೆ ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

ಈ ಅಧ್ಯಾಯದಲ್ಲಿ, ಚರ್ಚೆಗೆ ಒಳಗಾಗದ ಕೆಲವು ಸಾಹಿತ್ಯಗಳ ಮೇಲೆ ಬೆಳಕುಚೆಲ್ಲುವ ಪ್ರಯತ್ನ ನಡೆಸಲಾಗಿದೆ. ಕೆಳದಿ ಅರಸಿಯ ಪ್ರೇರಣೆಯ ಮೇರೆಗೆ ಕಾವ್ಯ ರಚಿಸಿರುವ ಗಂಗಾದೇವಿ ಎಂಬ ಕವಯತ್ರಿಯ ಕುರಿತಾದ ವಿಚಾರವೂ ಹೆಚ್ಚು ಚರ್ಚೆಗೆ ಒಳಗಾಗದೆ ನಿರ್ಲಕ್ಷಮಾಡಲ್ಪಟ್ಟಿದೆ. ಮಧ್ಯಕಾಲೀನ ಸಂದರ್ಭಗಳಲ್ಲಿ ಮಹಿಳಾ ಸಾಹಿತಿಗಳ ಸಂಖ್ಯೆ ಕಡಿಮೆಯಾಗಿದೆ ಎಂಬ ವಿಚಾರವು ಸಾಹಿತ್ಯ ಚರಿತ್ರೆಗಳಲ್ಲಿ ಕಂಡುಬರುತ್ತದೆ. ಆದರೆ ಮಹಿಳೆಯರ ಕಾವ್ಯಗಳನ್ನು ಒಂದೆಡೆ ಗಮನಿ, ಚರ್ಚೆಗೆ ಗುರಿಪಡಿಸುವ ಅಗತ್ಯವಿದೆ ಎನ್ನುವ ವಿಚಾರವನ್ನು ಈ ಅಧ್ಯಯನವು ತಿಳಿಸುತ್ತದೆ. ಅದೇ ರೀತಿ ಕಿತ್ತೂರಿನ ಆಸ್ಥಾನದಲ್ಲಿ ೨೨ ಕವಿಗಳು ಆಶ್ರಯ ಪಡೆದಿದ್ದು, ಹಲವಾರು ಉತ್ತಮ ಕೃತಿಗಳು ಹೊರಬರಲು ಕಾರಣವಾಗಿದೆ. ಈ ಕೃತಿಗಳ ಮೇಲೆ ಹೆಚ್ಚು ಚರ್ಚೆಗಳು, ಸಂವಾದಗಳು ನಡೆಯದೆ ಬೆಳಕಿಗೆ ಬಾರದೆ ಹೋಗಿವೆ. ಹೀಗೆ ಗಮನ ಹರಿಸದ ಹಲವಾರು ಕೃತಿಗಳನ್ನು ಕುರಿತು ಈ ಅಧ್ಯಾಯದಲ್ಲಿ ಗಮನಿಸಲಾಗಿದೆ.

ವಿಭಿನ್ನ ಮನೆತನಕ್ಕೆ ಸೇರಿದ ಕರ್ನಾಟಕದ ಪ್ರಾಚೀನ, ಮಧ್ಯಕಾಲೀನ ಅರಸಿಯರು ಎಲ್ಲ ಪ್ರಕಾರದ ಸಾಹಿತ್ಯಕ್ಕೂ ಪ್ರೋತ್ಸಾಹ ನೀಡಿ, ಸಾಹಿತ್ಯ ಕ್ಷೇತ್ರಕ್ಕೆ ಉತ್ತಮ ಕೊಡುಗೆಯನ್ನು ನೀಡಿದ್ದಾರೆ ಎನ್ನುವುದನ್ನು ಈ ಅಧ್ಯಯವು ನಿರೂಪಿಸಿದೆ.

**ಆಕರ ಗ್ರಂಥಗಳು ಹಾಗೂ ಟಿಪ್ಪಣಿಗಳು**

೧. ಹರೀಶ್.ಜಿ.ಬಿ., ೨೦೧೧, ***ದೇವಚಂದ್ರ ಕನ್ನಡ ಭಾಷೆ ಮತ್ತು ಸಂಸ್ಕೃತಿ,*** ತುಮಕೂರು ವಿಶ್ವವಿದ್ಯಾನಿಲಯ, ಪು.೧೨೫

೨. ನರಸಿಂಹಾಚಾರ್.ಆರ್., ೨೦೧೧, ***ಕರ್ಣಾಟಕ ಕವಿಚರಿತೆ,*** ಸಂ–೨, ಕ.ಸಾ.ಪ., ಬೆಂಗಳೂರು ಪು.೨೬೮

೩. ಸಣ್ಣಯ್ಯ.ಬಿ.ಎಸ.(ಸಂ), ೧೯೮೮, ***ದೇವಚಂದ್ರ, ರಾಜಾವಳಿ ಕಥಾಸಾರ,*** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿವಿ ಪು.೨೭೫

೪. ಹರೀಶ್.ಜಿ.ಬಿ., ೨೦೧೧, ***ದೇವಚಂದ್ರ ಕನ್ನಡ ಭಾಷೆ ಮತ್ತು ಸಂಸ್ಕೃತಿ,*** ತುಮಕೂರು ವಿಶ್ವವಿದ್ಯಾನಿಲಯ, ಪು.೧೨೫

೫. ವಿಘ್ನರಾಜ ಎಸ್.ಆರ್., ೨೦೦೮, ***ಕರ್ನಾಟಕದ ಸಂಸ್ಕೃತ ಜೈನಕವಿಗಳು,*** ಕಸಾಪ, ಬೆಂಗಳೂರು, ಪು.೧೭೫

೬. ಶೈಲ.ಯು, ೨೦೦೪, ***ತುಳುನಾಡಿನ ನಿಸಿದಿ ಸ್ಮಾರಕಗಳು,*** ತುಳುನಾಡಿನ ಶಾಸನಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ ಪು.೫೯

೭. KI III part 1, No.17

೮ KI III part 1, No.16

೯. ನರಸಿಂಹಾಚಾರ್.ಆರ್., ಪೂರ್ವೋಕ್ತ ಪು.೨೬೬–೨೬೮

೧೦. KI III part 1, No.16

೧೧. ಉಮಾನಾಥ ಶಣೈ.ವೈ, ೨೦೦೩, ***ಮೂಡುಬಿದಿರೆಲೇಖಕರ ಕೊಡುಗೆ,*** ಕಸಾಪ, ಬೆಂಗಳೂರು, ಪು.೧೮

೧೨. ನರಸಿಂಹಾಚಾರ್.ಆರ್., ಪೂರ್ವೋಕ್ತ, ಪು.೧೭೮

೧೩. ಭಾನುಮತಿ.ವೈ.ಸಿ., ೨೦೦೯, ***ಸಂಸ್ಕೃತ ಹಸ್ತಪ್ರತಿಗಳು ಮತ್ತು ಕನ್ನಡ ಲಿಪಿಕಾರರು,*** ಗ್ರಂಥಸಂಪಾದನೆ ಎಳೆಗಳು, ಮೈಸೂರು

೧೪. ನರಸಿಂಹಮೂರ್ತಿ.ಪಿ.ಎನ್., ೨೦೦೭, ಕುಂದನಾಡಿನ ಶಾಸನಗಳು, ಕನ್ನಡ ಸಾಹಿತ್ಯ ಸಮ್ಮೇಳನ, ಉಡುಪಿ

೧೫. ಭಾನುಮತಿ.ವೈ.ಸಿ. ೨೦೧೧, ಅರಸರ ಚರಿತ್ರೆಗಳು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು

೧೫ಅ. ಪುಟ್ಟಸ್ವಾಮಿ.ಡಿ.(ಸಂ) ೧೯೫೦, ಪದ್ಮನಾಭ, ***ಪದ್ಮಾವತಿ ಮಹಾತ್ಮ್ಯಾ ಅಥವಾ ಜಿನದತ್ತರಾಯ ಚರಿತ್ರೆ,*** ವೀರಭವನ, ಮಂಗಳೂರು

೧೬. ನಾಗೇಗೌಡ.ಎಚ್.ಎಲ್, ೨೦೦೭, ***ಪ್ರವಾಸಿ ಕಂಡ ಇಂಡಿಯಾ,*** ಐಬಿಎಚ್ ಪ್ರಕಾಶನ, ಬೆಂಗಳೂರು, ಪು.೨೫೫

೧೭. ಶಾಸ್ತ್ರಿ.ಬಿ.ಎಸ್., ೧೯೬೯, *The Portuguese in Kanara* ಅಪ್ರಕಟಿತ ಪಿ.ಹೆಚ್.ಡಿ ಪ್ರಬಂಧ ಬೊಂಬಾಯಿ ವಿಶ್ವವಿದ್ಯಾಲಯ

೧೮. ಮುದ್ದು ಮೂಡುಬೆಳ್ಳೆ, ೨೦೧೧, ***ಮೂಲ್ಕಿಯ ಸಾವಂತ ಅರಸರು ಐತಿಹಾಸಿಕ ಸಾಂಸ್ಕೃತಿಕ ನೋಟ,*** ಮೂಲ್ಕಿ ಸೀಮೆ ಅರಮನೆ ಅಭಿವೃದ್ಧಿ ಸಮಿತಿ, ಪಡುಪಣಂಬೂರು

೧೯. ಮರುಳಯ್ಯ.ಸಾ.ಶಿ., ೨೦೦೧, ***ಸಾಶಿಮ.ಸಂಶೋಧನೆ,*** ಸಪ್ನ ಬುಕ್‌ಹೌಸ್, ಬೆಂಗಳೂರು

೨೦. ಶಾಮಶಾಸ್ತ್ರಿ.ಆರ್(ಸಂ), ೧೯೭೩, ಲಿಂಗಣ್ಣ, ***ಕೆಳದಿನೃಪ ವಿಜಯಂ,*** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿವಿ,

೨೧. ಮರುಳಯ್ಯ.ಸಾ.ಶಿ., ಪೂರ್ವೋಕ್ತ, ಪು.೩೯೧

೨೨. ಶಾಮಶಾಸ್ತ್ರಿ.ಆರ್(ಸಂ) ಪೂರ್ವೋಕ್ತ, ಪು. ೧೪೭

೨೩. ದೇವರ ಕೊಂಡಾರೆಡ್ಡಿ, ೨೦೦೧, ***ಕೆಳದಿ ಬಸವರಾಜ ವಿರಚಿತ ಕರ್ನಾಟಕ ಕಾಳಿಕಾಕಾಂಡದಲ್ಲಿನ ಐತಿಹಾಸಿಕ ಅಂಶಗಳು,*** ಗೌರವ, ಜಿ.ಎಸ್.ಎಸ್.ಅಭಿನಂದನಾ ಗ್ರಂಥ, ಅಂಕಣ, ಮಲ್ಲೇಶ್ವರಂ, ಬೆಂಗಳೂರು, ಪು.೧೮೬

೨೪. ದೇವರ ಕೊಂಡಾರೆಡ್ಡಿ, ೧೯೮೪, ***ಕೆಳದಿ ಬಸವರಾಜ ವಿರಚಿತ ಕಾಳಿಕಾಕಾಂಡದ ಪ್ರಾರ್ಥನಾ ಪದ್ಯಗಳು,*** ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಸಂ.೬೯, ಸಂಚಿಕೆ ೨

೨೫. ಹೆರಂಜೆ ಕೃಷ್ಣ ಭಟ್ಟ & ಮುರಳೀಧರ ಉಪಾಧ್ಯ ಹಿರಿಯಡಕ, ೧೯೯೫, ***ಗೋವಿಂದ ಪೈ ಸಂಶೋಧನ ಸಂಪುಟ,*** ಉಡುಪಿ, ಪು.೪೧೮

೨೬. ನರಸಿಂಹಾಚಾರ್.ಆರ್., ಪೂರ್ವೋಕ್ತ, ಪು.೪೦೩

೨೭. ಹೆರಂಜೆ ಕೃಷ್ಣ ಭಟ್ಟ & ಮುರಳೀಧರ ಉಪಾಧ್ಯ ಹಿರಿಯಡಕ, ಪೂರ್ವೋಕ್ತ, ಪು.೪೧೫

೨೮. ಕಲಬುರ್ಗಿ.ಎಂ.ಎಂ. ೧೯೭೩, ***ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ,*** ಕರ್ನಾಟಕ ವಿವಿ ಧಾರವಾಡ, ಪು.೫೧

೨೯. ***ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ,*** ಸಂ.೫ ಕ್ರ.ಸಂ.೩೩೨, ಮೈಸೂರು ವಿವಿ, ಮೈಸೂರು

೩೦. ನರಸಿಂಹಾಚಾರ್.ಆರ್., ಪೂರ್ವೋಕ್ತ, ಪು.೪೪೨

೩೧. ಹೆರಂಜೆ ಕೃಷ್ಣಭಟ್ಟ, ಮುರಳೀಧರ ಉಪಾಧ್ಯ ಹಿರಿಯಡಕ, ಪೂರ್ವೋಕ್ತ, ಪು.೪೧೯

೩೨. ಹಸ್ತಪ್ರತಿ ಸೂಚಿ, ಓರಿಯಂಟಲ್ ಮಾನ್ಯುಸ್ಕ್ರಿಪ್ಟ್ ಲೈಬ್ರರಿ, Vol. VI ಕ್ರಮ ಸಂಖ್ಯೆ. ೧೧೩೮ ಮದ್ರಾಸು

೩೩. ಮಂಜುನಾಥ್.ಜಿ.ಜೆ., ೨೦೦೭, ***ರಾಣಿ ಗೌರಮ್ಮನ ಚರಿತೆ ; ರಾಣಿ ಗೌರಮ್ಮನ ಮೇಲಿನ ಬಿಡಿ ಪದಗಳು,*** ಮೈಸೂರು

ಒಡೆಯರ ಆಕರ ಸಾಹಿತ್ಯ, ಪತ್ರಾಗಾರ ಇಲಾಖೆ, ಬೆಂಗಳೂರು

೩೪. ನರಸಿಂಹಾಚಾರ್.ಆರ್., ಪೂರ್ವೋಕ್ತ, ಸಂಪುಟ–೩, ೨೦೦೫, ಪು.೭೧

೩೫. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ, ಪೂರ್ವೋಕ್ತ

೩೬. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ, ಪೂರ್ವೋಕ್ತ, ಸಂ.೫ ಕ್ರ.ಸಂ.೩೩೨

೩೭. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ, ಪೂರ್ವೋಕ್ತ, ಓಲೆ ಪ್ರತಿ ಸಂಖ್ಯೆ– ಕೆ ೮೩೮, ೧–೭೪ ಪತ್ರಗಳು

೩೮. ಕಾರ್ತಿಕ್.ಎಸ್., ೨೦೧೬, ***ಹಸ್ತಪ್ರತಿ ಪುಷ್ಪಿಕೆಯಲ್ಲಿನ ಕಂಠೀರಾಯ ಗದ್ಯಾಣದ ಉಲ್ಲೇಖ ಮತ್ತು ಹಸ್ತಪ್ರತಿಯ ಕಾಲ: ಸಂಕ್ಷಿಪ್ತ ವಿಶ್ಲೇಷಣೆ,*** ಸಂಶೋಧನ ಸಂಭಾವನೆ, ಮಂಗಳೂರು ವಿವಿ., ಪು.೧೩೮

೩೯. ತಲ್ಲೂರು ರಾಯನಗೌಡರು, ೧೯೪೬, ***ಕಿತ್ತೂರು ಕದನಗೀತೆ,*** ಕಿತ್ತೂರುರಾಣಿ ಚೆನ್ನಮ್ಮ ಇತಿಹಾಸಮಂಡಲ, ಬೈಲಹೊಂಗಲ

೪೦. ಚೆನ್ನಕ್ಕ ಪಾವಟೆ, ***ಕಿತ್ತೂರು ಕಥನ,*** ಚೆನ್ನಗಂಗಾ ಪ್ರಕಾಶನ, ಧಾರವಾಡ, ೨೦೦೨

೪೧. ಉಮಾನಾಥ ಶಣೈ, ***ಬಂಗರಸರ ಕಾಲದ ಸಾಹಿತ್ಯ,*** ತುಳುಕರ್ನಾಟಕದ ಅರಸುಮನೆತನಗಳು, ಕನ್ನಡ ವಿವಿ, ಹಂಪಿ. ೨೦೦೦

೪೨. ಉಮಾನಾಥ ಶಣೈ.ವೈ, ***ಮೂಡುಬಿದಿರೆ ಲೇಖಕರ ಕೊಡುಗೆ,*** ಕನ್ನಡ ಸಾಹಿತ್ಯ ಪರಿಷತ್ತು, ಬೆಂ. ೨೦೦೩

೪೩. ನರಸಿಂಹಾಚಾರ್.ಆರ್., ಪೂರ್ವೋಕ್ತ, ಸಂಪುಟ – ೩

೪೪. ನರಸಿಂಹಾಚಾರ್.ಆರ್., ಪೂರ್ವೋಕ್ತ, ಸಂಪುಟ – ೩, ಪು.೧೧೨

೪೫. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ, ಪೂರ್ವೋಕ್ತ, ಸಂ.೯, ಕ್ರ.ಸಂ.೭೬

# ಅಧ್ಯಾಯ – ೭

## ಕರ್ನಾಟಕದ ಅರಸಿಯರು ರಚಿಸಿರುವ ಕನ್ನಡ ಸಾಹಿತ್ಯ

ಕನ್ನಡದ ಅರಸಿಯರು ಸಾಹಿತ್ಯ ರಚನೆಗೆ ಪ್ರೋತ್ಸಾಹ ನೀಡುತ್ತಿದ್ದುದಷ್ಟೇ ಅಲ್ಲದೆ ಕೆಲವರು ಸ್ವತಃ ಕಾವ್ಯರಚನಾ ಸಾಮರ್ಥ್ಯವನ್ನೂ ಹೊಂದಿದ್ದರು. ಶಾಸನಗಳು ಕೆಲವು ರಾಣಿಯರನ್ನು ಉತ್ತಮ ವಾಙ್ಮಿಗಳೆಂದೂ, ಚತುರೆಯರೆಂದು, ವಿದ್ಯಾವಿಳಾಸಿನಿಯರೆಂದೂ, ಮೊದಲಾಗಿ ಬಣ್ಣಿಸಿವೆ. ಪಲ್ಲವ ದೀವಬ್ಬರಸಿ 'ವಾಗ್ದೇವಿಯರ ದೊರೆ'[೧], ಮಹಾಸಾಮಂತ ಶೂಕ್ರಕಾಂಕನ ಮಡದಿ ಜಕ್ಕಿಸುಂದರಿ 'ಸಹಜಸರಸ್ವತಿ ವಿಳಾಸ ವಿದ್ಯಾಧರಿ'[೨], ಚಾಲುಕ್ಯ ಜಗದೇಕಮಲ್ಲದೇವನ ಮಡದಿ ಸುಗ್ಗಲದೇವಿ 'ಕಲಿಕಾಲ ಸರಸ್ವತಿ'[೩], ಚಾಲುಕ್ಯ ತ್ರೈಲೋಕ್ಯಮಲ್ಲ ಸೋಮೇಶ್ವರನ ಮಡದಿ ಮೈಳಲದೇವಿ 'ವಿಳಾಸ ವಿದ್ಯಾಧರಿ' (SII ಸಂ.I-I, ೮೩ ಬಾಗೇವಾಡಿ), ಸೋವರಸ ದಂಡನಾಥನ ಮಡದಿ 'ಭಾರತೀ ಕರ್ಣಾವತಂಸೆ', ಚಾಲುಕ್ಯ ಭುವನೈಕಮಲ್ಲನ ಮಡದಿ ಕಂಚಲಮಹಾದೇವಿ 'ಶೃಂಗಾರ ವಿದ್ಯಾಧರಿ', 'ಸಕಳಕಳಾಧರಿ'[೪], ಭುಮನೈಕಮಲ್ಲದ ತಂಗಿ ಸುಗ್ಗಲದೇವಿ 'ಅಭಿನವ ಸರಸ್ವತಿ', ವೀರನೊಳಂಬನ ಪತ್ನಿ ಮಾಳಲದೇವಿ 'ವಿದ್ಯಾಧರಿ'[೫], ಕದಂಬ ಕುಲದ ರಾಣಿ ಮೇಚಲದೇವಿ 'ಅತಿಚತುರೋಕ್ತಿಯೊಳೆ ಸರಸ್ವತಿಗಂ ಮಿಗಿಲು'[೬] ಮಲ್ಲಿದೇವ ಅರಸನ ರಾಣಿ ಸೀತಾದೇವಿಯನ್ನು 'ಶ್ರವ್ಯಕಾವ್ಯದಿವ್ಯ ಗೀತವಾದ್ಯ ನೃತ್ಯಾದಿವಿದ್ಯಾಪ್ರವೀಣೆ'[೭] ಎಂದು ಮೊದಲಾಗಿ ಬಣ್ಣಿಸಿರುವುದು ಅರಸಿಯರ ವಿದ್ಯಾಪ್ರಾವಿಣ್ಯತೆಯನ್ನು ಕುರಿತು ಹೇಳಿರುವ ಕೆಲವು ಉದಾಹರಣೆಗಳಾಗಿವೆ. ಈ ಬಿರುದಾವಳಿಗಳು ಕೇವಲ ಮುಖಸ್ತುತಿಯಾಗಿರದೆ ಅವರ ವಿದ್ವತ್ತಿಗೆ, ಕಾರ್ಯಸಾಧನೆಗೆ ಸಂದ ಪ್ರಶಸ್ತಿಗಳಾಗಿದ್ದವು ಎನ್ನುವುದನ್ನು ಈ ಹಿಂದಿನ ಅಧ್ಯಾಯಗಳಲ್ಲಿ ಗಮನಿಸಿದ್ದೇವೆ. ನ್ಯಾಯ ತೀರ್ಮಾನಗಳಲ್ಲಾಗಲೀ, ವಿದ್ವತ್ಸಭೆಯಲ್ಲಿಯಾಗಲೀ ತಮ್ಮ ಚಾತುರ್ಯತೆಯನ್ನು ಮೆರೆಯುತ್ತಿದ್ದ ಅರಸಿಯರು, ಅರಸರಿಗೆ ಸರಿಸಮಾನವಾದ ವಿದ್ಯಾಭ್ಯಾಸವನ್ನೂ ಪಡೆದಿರುತ್ತಿದ್ದರು.

ವಿದ್ಯಾಭ್ಯಾಸಗಳು ಗುರುಕುಲ ಪದ್ಧತಿಯಲ್ಲಿ, ಘಟಿಕಾಸ್ಥಾನಗಳಲ್ಲಿ ನಡೆಯುತ್ತಿದ್ದರೂ, ಅದು ಪುರುಷರಿಗೆ ಮಾತ್ರ ಸೀಮಿತವಾಗಿದ್ದು, ಸ್ತ್ರೀ ಶಿಕ್ಷಣ ಹೆಚ್ಚಾಗಿ ಮನೆಯಲ್ಲಿಯೇ ನಡೆಯುತ್ತಿತ್ತೆಂದು ಹೇಳಬಹುದು. ಪಂಪನ ಆದಿ ಪುರಾಣದಲ್ಲಿ ತ್ರಿಲೋಕ ಗುರುವಾದ ಆದಿನಾಥನು ತನ್ನ ಹೆಣ್ಣುಮಕ್ಕಳಾದ ಬ್ರಾಹ್ಮಿ ಮತ್ತು ಸೌಂದರಿಯರಿಗೆ ಸಿದ್ಧಂ ನಮಃ ಎಂಬ ಮುಖ್ಯ ಅಕ್ಷರಗಳನ್ನು ಬರೆದು ತಿಳಿಸಿ ಆನಂತರ ಕ್ರಮವಾಗಿ ಅವರಿಬ್ಬರಿಗೆ ಲಿಪಿ ಮತ್ತು ಗಣಿತ (ಲೆಕ್ಕ) ವನ್ನು ಹೇಳಿಕೊಟ್ಟನೆಂಬ ವಿವರಣೆ ಇದೆ[೮]. ಸುಮಾರು ಹನ್ನೆರಡನೆಯ ಶತಮಾನದ ಅಂತ್ಯದಲ್ಲಿದ್ದ ಅರ್ಹದ್ದಾಸ ಒಬ್ಬ ಸಾಮಂತರಾಜನಾಗಿದ್ದು ರಟ್ಟಮತ ಎಂಬ ಕೃತಿ ರಚನೆ ಮಾಡಿದ್ದಾನೆ[೯]. ತನ್ನ ಕೃತಿಯಲ್ಲಿ "ನೆಗಟ್ದಿಭಯಾಂಬುಧಿ ನಿಜಸುತೆಗೆ ಚಂದ್ರಲೇಖೆಗೆ ಪೇಟ್ದಿಪಂ ಕನ್ನಡದಿಂ" ಎನ್ನುತ್ತಾ ಮಳೆಯ ಕುರಿತಾದ ಭವಿಷ್ಯವನ್ನು ತಿಳಿಸುವ ಈ ಜ್ಯೋತಿಷ್ಯ ಕೃತಿಯನ್ನು ಮಗಳಿಗೆ ಬೋಧಿಸುತ್ತಲೇ ನಿರೂಪಿಸಿದ್ದಾನೆ. ಶಿಕಾರಿ ಪುರದ ಶಾಸನವೊಂದು ತಿಳಿಸುವಂತೆ ಹರಿಯಲೆ ಎಂಬುವವಳು ತಂದೆಯಂತೆ ಕುಸ್ತಿ ಪಟುವಾಗಿದ್ದು, ತನ್ನ ತಂದೆಯನ್ನು ಮೋಸದಿಂದ ಕೊಂದವರ ವಿರುದ್ಧ ಸೇಡು ತೀರಿಸಿಕೊಳ್ಳುತ್ತಾಳೆ. ಇವಳು ರಾಜಮನೆತನದವಳಲ್ಲವಾದರೂ, ತಂದೆಯ ವಿದ್ಯೆಯನ್ನು ಹೆಣ್ಣುಮಕ್ಕಳೂ ಕಲಿಯುತ್ತಿದ್ದ ವಾಡಿಕೆ ಅಂದಿನ ದಿನಗಳಲ್ಲಿತ್ತೆನ್ನುವುದಕ್ಕೆ ಉತ್ತಮ ಉದಾಹರಣೆಯಾಗಿದೆ. ಪುತ್ರಿಯರಿಗಾಗಿ ತಂದೆಯರು ಹಸ್ತಪ್ರತಿ ಲೇಖನ ಕಾರ್ಯ ಮಾಡಿಸಿದ ಅನೇಕ ಉದಾಹರಣೆಗಳು ದೊರಕುತ್ತವೆ. ಜಿನಚಂದ್ರನು ತನ್ನ ಪುತ್ರಿತ್ರಯಂಗಳನೋದಿಸಲೆಂದು ಅಮರೇಂದ್ರ ವಂದಿತ ಶ್ರೀ ಸುಕುಮಾರನ ಚಾರುಚರಿತವನ್ನು ಪ್ರತಿಮಾಡಿದ್ದಾನೆ[೧೦].

ಸ್ವತಃ ತಂದೆ ವಿದ್ಯಾಭ್ಯಾಸ ಹೇಳಿಕೊಡುತ್ತಿದ್ದುದಲ್ಲದೆ, ಅರಮನೆಯಲ್ಲಿ ವಿದ್ಯಾಭ್ಯಾಸಕ್ಕಾಗಿ ವಿದ್ವಾಂಸರನ್ನು ನೇಮಿಸುತ್ತಿದ್ದ ಕುರಿತಾಗಿ ಕೆಲವು ವಿಚಾರಗಳು ತಿಳಿದು ಬರುತ್ತದೆ. ಚಾಲುಕ್ಯ ವಿಕ್ರಮಾದಿತ್ಯ ತನ್ನ ಮಗಳು

ಚಂಪಾವತಿ (ಲೀಲಾವತಿ) ಯ ವಿದ್ಯಾಭ್ಯಾಸಕ್ಕಾಗಿ ಕಾಶ್ಮೀರ ಮೂಲದ ವಿದ್ವಾಂಸ ಹಾಗು ಕವಿಯಾಗಿದ್ದ ಬಿಲ್ಹಣನನ್ನು ನೇಮಿಸಿದ್ದನೆಂದು ಬಿಲ್ಹಣನ ಸಂಸ್ಕೃತ ಕಾವ್ಯ "ಚೋರ ಪಂಚಶಿಖಾ" ಕೃತಿಯಿಂದ ತಿಳಿದು ಬರುತ್ತದೆ. ಮಹಿಳೆಯರಿಗೆ ಗುರುಮುಖೇನ ವಿದ್ಯಾಭ್ಯಾಸ ನಡೆಯುತ್ತಿದ್ದುದಕ್ಕೆ ಇನ್ನೂ ಕೆಲವು ಉದಾಹರಣೆಗಳನ್ನು ಕಾಣಬಹುದು. ಬಸವಣ್ಣನ ಅಕ್ಕ ನಾಗಮ್ಮ ಜಾತವೇದಸ್ವಾಮಿಯಲ್ಲಿ ಸಕಲ ವಿದ್ಯೆಗಳನ್ನೂ ಅಭ್ಯಾಸಮಾಡಿ, ಚೆನ್ನಬಸವಣ್ಣನಂತಹ ಮಹಾಪುರುಷನಿಗೆ ತಾಯಿಯಾಗಿ, ಅನುಭವ ಮಂಟಪದ ಒಂದು ಆಧಾರಸ್ಥಂಭವಾದವಳು. ಕವಿ ಜನ್ನನ ಪತ್ನಿ ಲಕುಮಾದೇವಿಗೆ ಬಾಳಚಂದ್ರ ಗುರುವಾಗಿದ್ದನೆಂದು ಜನ್ನನ ಅನಂತನಾಥಪುರಾಣ ಹಾಗೂ ಪಾರ್ಶ್ವಕವಿಯ ಹೇಳಿಕೆಗಳಿಂದ ತಿಳಿಯುತ್ತದೆ. ವಿಜಯನಗರದ ಅರಸಿ, ಬುಕ್ಕರಾಯನ ಸೊಸೆ ಗಂಗಾದೇವಿಯು ಸಂಸ್ಕೃತದಲ್ಲಿ ಕಾವ್ಯ ರಚಿಸುವ ಪರಿಣತಿ ಪಡೆದಿದ್ದಳು ಅಲ್ಲದೆ ಈಕೆ ವಿಶ್ವನಾಥ ಎಂಬ ತನ್ನ ಗುರುವನ್ನು ಸ್ತುತಿಸಿದ್ದಾಳೆ[೧೧]. ಮೈಸೂರು ಅರಸಿ ದೇವಮ್ಮ ಮದುವೆಯಾಗಿ ಬಂದ ಮೇಲೆ ಅಳಸಿಂಗಾರಾರ್ಯನಲ್ಲಿ ವಿದ್ಯಾಭ್ಯಾಸ ಮಾಡಿದ್ದಾಳಲ್ಲದೆ, ಇವಳ ಊಳಿಗದವಳಾಗಿದ್ದ ಸಂಚಿಯ ಹೊನ್ನಮ್ಮ ಕೂಡ ಅಳಸಿಂಗಾರಾರ್ಯನಲ್ಲಿ ವಿದ್ಯಾಭ್ಯಾಸ ಪಡೆದುಕೊಂಡವಳೇ ಆಗಿದ್ದಾಳೆ[೧೨].

ಜೈನಧರ್ಮೀಯರು ಪ್ರಾಚೀನ ಕಾಲದಲ್ಲಿ ಸ್ತ್ರೀಯರ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿದವರಾಗಿದ್ದಾರೆ. ನಿಸಿದಿ ಶಾಸನಗಳಲ್ಲಿ ವ್ರತಧಾರಿಯ ಸನಿಹದಲ್ಲಿ ಆರಾಧನಾ ಗ್ರಂಥಗಳಂಥ ಜೈನ ಶಾಸ್ತ್ರಗ್ರಂಥಗಳನ್ನು ಇಟ್ಟುಕೊಂಡಿರುವ ಶಿಲ್ಪಗಳು ಇರುವುದನ್ನು ಗಮನಿಸಬಹುದು. ನಾಗಾರ್ಜುನಯ್ಯ ಮತ್ತು ದಿಂಬಿಕಬ್ಬೆಯರ ಮಗಳಾದ ಸರ್ವಶಾಸ್ತ್ರ ಪ್ರಸಿದ್ಧೆಯಾದ ಸಾವಿನಿರ್ಮ್ಮಡಿಯು ಈಕೆ ಸಕಲಶಾಸ್ತ್ರ ಪಾರಂಗತಳಾಗಿದ್ದಳು, ಶಿಲ್ಪದಲ್ಲಿ ಇವಳು 'ಹರಸಿದ್ಧಿ' ಎಂಬ ಬರವಣಿಗೆಯನ್ನೊಳಗೊಂಡ ತಾಳೆಗರಿ ಹಿಡಿದಂತೆ ಕಂಡರಿಸಲಾಗಿದೆ. ಬೋಧನ ಭಂಗಿಯಲ್ಲಿ ಆಸೀನಳಾದ ಈಕೆಯ ಎಡಭಾಗದಲ್ಲಿ ವ್ಯಾಸಪೀಠವಿದೆ. ಎಡಗೈಯಲ್ಲಿ ಓಲೆಗರಿ ಗ್ರಂಥ ಹಿಡಿದಿದ್ದಾಳೆ.

ಅರಮನೆಯ ಮಹಡಿಯಲ್ಲಿ ಸ್ತ್ರೀಯರ ಶಿಕ್ಷಣಕ್ಕಾಗಿಯೇ 'ನಾಗವಾಸ' 'ಕನ್ನೆ ಮಾಡ'ವನ್ನು ರಚಿಸಲಾಗುತ್ತಿತ್ತು ಹಾಗೂ ಅಲ್ಲಿ ರಾಜಕುಮಾರಿಯರಿಗೂ ಪರಿವಾರದ ಇತರ ಹುಡುಗಿಯರಿಗೂ "ಕುಶಲಶಾಸ್ತ್ರ ವಿದ್ಯಾನಿಕವನ್ನು ಕಲಿಸಿ.." ಪರಿಣತೆಯರಾಗುವ ಅವಕಾಶಗಳನ್ನು ಒದಗಿಸಲಾಗುತ್ತಿತ್ತು ಎಂಬ ವಿವರಣೆ ಚಾಮರಸನ ಪ್ರಭುಲಿಂಗಲೀಲೆಯಲ್ಲಿ ದೊರಕುತ್ತದೆ. ಚೆಲುವಾಂಬೆಯ ಕೃತಿ 'ವರನಂದಿ ಕಲ್ಯಾಣ'ದಲ್ಲಿ ರಾಜಕುಮಾರಿ ವರನಂದಿಗೆ ಅವಳ ತಂದೆ ವಿದ್ಯಾಭ್ಯಾಸಕ್ಕಾಗಿ ಮಾಡುವ ಏರ್ಪಾಟು ಅಂದಿನ ಅರಮನೆಯ ವಿದ್ಯಾಭ್ಯಾಸದ ಚಿತ್ರಣವೇ ಆಗಿದೆ. ರಾಜಮನೆತನದ ಮಹಿಳೆಯರು ಗ್ರಂಥಗಳನ್ನು ಪ್ರತಿ ಮಾಡಿಸಿ ಅಧ್ಯಯನಕ್ಕಾಗಿ ಬಳಸಿಕೊಳ್ಳುತ್ತಿದ್ದರು. ಬೆಳವಡಿ ಮಲ್ಲಮ್ಮನ ತಂದೆ ಇವಳಿಗೆ ವಿದ್ಯಾಭ್ಯಾಸ ಒದಗಿಸಿದ ವಿಚಾರ ಇವಳ ಕಾಲದಲ್ಲಿಯೇ ರಚಿತವಾಗಿರುವ ಕೃತಿ 'ಬೆಳವಡಿ ಮಲ್ಲಮ್ಮ ಸಮರೋತ್ಸವ' ದಲ್ಲಿ ವಿವರವಾಗಿ ದೊರಕುತ್ತದೆ.

ವಿದ್ಯಾವತಿಯರಾಗಿರುತ್ತಿದ್ದ ಅರಸಿಯರು ಕಾವ್ಯರಚನೆಯಲ್ಲಿಯೂ ತೊಡಗಿದ್ದರು. ಅರಸಿಯರು ರಚಿಸಿದ ವಿಭಿನ್ನ ಪ್ರಕಾರದ ಕೃತಿಗಳನ್ನು ಇಲ್ಲಿ ಗಮನಿಸಬಹುದು. ಅರಸಿಯರು ರಚಿಸಿರುವ ಕೃತಿಗಳನ್ನು ಕನ್ನಡ ಸಾಹಿತ್ಯ ಹಾಗೂ ಸಂಸ್ಕೃತ ಸಾಹಿತ್ಯ ಎಂದು ವಿಭಾಗಿಸಿ ವಿಭಿನ್ನ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ.

ಕನ್ನಡ ಸಾಹಿತ್ಯದಲ್ಲಿ ಚಂಪು, ವಚನ, ಸಾಂಗತ್ಯ, ಷಟ್ಪದಿ ಮೊದಲಾದ ಪ್ರಕಾರಗಳು ಕಂಡುಬರುತ್ತವೆ. ಈ ಎಲ್ಲ ಪ್ರಕಾರಗಳಲ್ಲಿಯೂ ಅರಸಿಯರು ಕಾವ್ಯ ರಚಿಸಿರುವುದನ್ನು ಕಾಣಬಹುದು. ಸಾಳ್ವ ಮನೆತನದ ನಾಗಲಾಂಬೆಯು ಚಂಪೂ ಪ್ರಕಾರದಲ್ಲಿ ಕಾವ್ಯ ರಚಿಸಿದ್ದರೆ, ಚೆಲುವಾಂಬೆ ಸಾಂಗತ್ಯದಲ್ಲಿ, ಗದ್ಯದಲ್ಲಿ, ಕೀರ್ತನೆ ಪ್ರಕಾರದಲ್ಲಿ ಕೃತಿಗಳನ್ನು ರಚಿಸಿದ್ದಾಳೆ. ಇವಳಂತೆ ಸುರಪುರ ಅರಸಿ ರಂಗಮ್ಮ ಕೀರ್ತನೆ ಪ್ರಕಾರದಲ್ಲಿ ಕೃತಿಗಳನ್ನು ರಚಿಸಿದ್ದಾಳೆ.

## ವಚನಸಾಹಿತ್ಯ

ಕರ್ನಾಟಕದಲ್ಲಿನ ವಚನ ಚಳುವಳಿಯ ಸಂದರ್ಭವು ಸಾಮಾಜಿಕ, ಧಾರ್ಮಿಕ, ಭಾಷಿಕ ಮೊದಲಾದ ವಲಯದಲ್ಲಿ ಹೊಸ ಅಲೆಯನ್ನು ಸೃಷ್ಟಿಸಿದ ಸಂಕ್ರಮಣಕಾಲ. ಇದರ ಪ್ರಭಾವ ರಾಜಕೀಯ ಕ್ಷೇತ್ರದಲ್ಲಿಯೂ ಕಂಡುಬರುತ್ತದೆಯಾದರೂ ರಾಜಾಶ್ರಯವನ್ನು ಬಯಸದ, 'ಕಾಯಕವೇ ಕೈಲಾಸ'ವೆನ್ನುವ ದುಡಿಯುವ ಶ್ರಮಿಕ ವರ್ಗದಿಂದಲೇ ವಚನ ಸಾಹಿತ್ಯ ಬೆಳೆದು ಬಂದದ್ದು ಗಮನಾರ್ಹ. ಸಾಮಾಜಿಕ ವಲಯದಲ್ಲಿ ಎಲ್ಲ ವರ್ಗ, ಪಂಗಡದವರಿಗೂ ಮುಕ್ತವಾತಾವರಣ ಏರ್ಪಟ್ಟಿದ್ದ ಈ ಕಾಲದಲ್ಲಿ ಅನೇಕ ಮಹಿಳೆಯರೂ ವಚನಸಾಹಿತ್ಯ ರಚನೆಗೆ ತೊಡಗಿದ್ದು ಕಂಡುಬರುತ್ತದೆ. ಈ ಕೆಲವು ಮಹಿಳೆಯರಿಗೆ ರಾಜಮನೆತನದ ಸಂಬಂಧವಿರುವುದನ್ನು ಇಲ್ಲಿ ಗುರುತಿಸಬಹುದು. ಇವರಲ್ಲಿ ಅಕ್ಕಮಹಾದೇವಿ, ಬಸವಣ್ಣನ ಮಡದಿ ನಾಗಲಾಂಬೆ, ಗಂಗಾಂಬಿಕೆ, ಚೋಳ ರಾಜಕುಮಾರಿಯರೆನ್ನಲಾದ ರೇಣುಕಾಚಾರ್ಯರ ಮಡದಿಯರು ಮೊದಲಾದವರನ್ನು ಹೆಸರಿಸಬಹುದು. ಆದರೆ ಇವರು ರಾಜಮನೆತನದಲ್ಲಿ ಹುಟ್ಟಿ ಬೆಳೆದರೂ, ರಾಜಭೋಗಜೀವನದಿಂದ ದೂರವಾಗಿ ಸಾಮಾನ್ಯರಂತೆ ಜೀವನ ನಡೆಸಿದವರು.

### ಅಕ್ಕಮಹಾದೇವಿ:

ಕನ್ನಡಸಾಹಿತ್ಯದಲ್ಲಿನ ಪ್ರಥಮ ಕವಿಯತ್ರಿ ಎಂಬ ಕೀರ್ತಿಗೆ ಭಾಜನಳಾದ ಅಕ್ಕಮಹಾದೇವಿಯು ಹಲವಾರು ವಚನಗಳನ್ನು ರಚಿಸಿದ್ದಾಳಲ್ಲದೆ ಯೋಗಾಂಗ ತ್ರಿವಿಧಿ, ಸೃಷ್ಟಿಯವಚನ, ಮಂತ್ರಗೋಪ್ಯಗಳೆಂಬ ಲಘುಕೃತಿಗಳನ್ನು ಬರೆದಿದ್ದಾಳೆ[೧೩]. ಅಕ್ಕಮಹಾದೇವಿಯ ಕುರಿತಾಗಿ ಹಲವಾರು ಕಾವ್ಯಗಳೇ ರಚಿತವಾಗಿವೆ. ಆದರೂ, ಇವಳ ಲೌಕಿಕ ಜೀವನಚರಿತ್ರೆಯ ಸ್ಪಷ್ಟ ಚಿತ್ರಣ ಸಿಗುವುದಿಲ್ಲ. ವೈರಾಗ್ಯವನ್ನು ತಾಳಿ ಸರ್ವಸಂಗ ಪರಿತ್ಯಾಗಿಯಾಗಿ, ಆಧ್ಯಾತ್ಮಸಾಧನೆಯಲ್ಲಿ ತೊಡಗಿದ ಈಕೆ, ಕಾರಣಾಂತರಗಳಿಂದ ಕೌಶಿಕನೆಂಬ ಅರಸನನ್ನು ಮದುವೆಯಾಗಿರುತ್ತಾಳೆ. ಇವಳ ಜೀವನ ಚರಿತ್ರೆಯನ್ನು ಚಿತ್ರಿಸಿವ ಹರಿಹರನ ಮಹಾದೇವಿಯಕ್ಕನ ರಗಳೆ ಕೃತಿಯಲ್ಲಿ ಇವಳ ಪತಿಯನ್ನು 'ಕೌಶಿಕನೆನಿಪ್ಪ ಮನ್ನೆಯ.. ದೇಶದೊಳಗೊಪ್ಪುವುಡುತಡಿಯೆಂಬ ಪಟ್ಟಣದ" ಅರಸು ಎಂದು ಪರಿಚಯಿಸಿದ್ದಾನೆ. ಇವಳನ್ನು ಕುರಿತು ರಚಿತವಾಗಿರುವ ಇತರ ಕಾವ್ಯಗಳಲ್ಲಿಯೂ ನೃಪ, ಅರಸು, ಪೊಡವೀಶ, ಇತ್ಯಾದಿಯಾಗಿ ಕರೆದಿರುವುದರಿಂದ ಕೌಶಿಕನು ಉಡುತಡಿ ಪ್ರದೇಶದ ಸಾಮಂತ ದೊರೆಯಾಗಿದ್ದನೆನ್ನುವುದು ಸ್ಪಷ್ಟವಾಗುತ್ತದೆ.

ಹನ್ನೆರಡನೆಯ ಶತಮಾನದ ತಾಳಗುಂದ, ಬಳ್ಳಿಗಾವೆ ಮತ್ತು ಹರಿಹರ ಶಾಸನಗಳ ಆಧಾರದಿಂದ ತಿಳಿಸಿರುವಂತೆ ಹನ್ನೆರಡನೆಯ ಶತಮಾನದ ಉತ್ತರಾರ್ಧದಲ್ಲಿ ಚಾಲುಕ್ಯ ಅರಸನ ಒಡೆತನದಲ್ಲಿದ್ದ ಬನವಾಸೆ ೧೨೦೦ ಪ್ರದೇಶಕ್ಕೆ ಚಾಲುಕ್ಯ ಸಾಮಂತ ಕಸಪಯ್ಯನಾಯಕನು ಸ್ಥಾನಿಕ ಆಡಳಿತಾಧಿಕಾರಿಯಾಗಿದ್ದನು. ಇವನ ಆಳ್ವಿಕೆಯ ಕಾಲದ ಬಳ್ಳಿಗಾವೆ ೧೧೬೨ರ ಶಾಸನ ಇವನನ್ನು ಶಿವಭಕ್ತನೆಂದು ಹೊಗಳಿದ್ದರೂ, ಕ್ರಿ.ಶ.೧೧೭೨ರ ಹರಸೂರ್ ಶಾಸನದಲ್ಲಿ ಕಸಪಯ್ಯನನ್ನು ದುರ್ಮಂತ್ರಿಯೆಂದು ಹೇಳಲಾಗಿದೆ. ದುರಾಡಳಿತದ ಕಾರಣವಾಗಿ ಬಿಜ್ಜಳನಿಂದ ಅಧಿಕಾರ ಚ್ಯುತನಾಗಿ, ನಂತರ ಪ್ರತೀಕಾರವಾಗಿ ಮೊಮ್ಮಗ ಕರ್ಣನನ್ನು ಬೆಂಬಲಿಸಿ, ರಾಜ್ಯಾಪಹಾರದ ಪ್ರಯತ್ನ ಮಾಡಿದಂತೆ ಹರಸೂರ್ ಶಾಸನದಿಂದ ತಿಳಿದುಬರುತ್ತದೆ. ಹೀಗೆ ಅಕ್ಕನ ಜೀವಿತಾವಧಿಯಲ್ಲಿ ಉಡುತಡಿಯ ಆಡಳಿತಾಧಿಕಾರಿಯಾಗಿದ್ದ ಕಸಪಯ್ಯನೇ ಕೌಶಿಕನಾಗಿರುವ ಸಾಧ್ಯತೆಯಿರಬಹುದೆಂದು ಡಾ.ಎಂ.ಚಿದಾನಂದಮೂರ್ತಿ ಅವರು ಅಭಿಪ್ರಾಯ ಪಡುತ್ತಾರೆ. ವಿವಾಹಸಂಬಂಧಿ ಘಟನೆಯ ತರುವಾಯ ಕಲ್ಯಾಣಕ್ಕೆ ಹೋದ ಮಹಾದೇವಿ ಬಿಜ್ಜಳನಿಗೆ ಕಸಪಯ್ಯನ ದುರ್ವ್ಯವಹಾರದ ಬಗೆಗೆ ದೂರು ಕೊಟ್ಟಿರಬೇಕೆಂದೂ, ಕಸಪಯ್ಯನು ಅಧಿಕಾರ ಚುತನಾಗಲೂ ಇದೂ ಒಂದು ಪ್ರಭಲ ಕಾರಣವಾಗಿರುವ ಸಾಧ್ಯತೆಯಿರಬಹುದೆಂದು ತಿಳಿಸಿದ್ದಾರೆ. ಅಕ್ಕಮಹಾದೇವಿಯ ಜನ್ಮಸ್ಥಳವೆಂದು ನಂಬಲಾಗಿರುವ ಇಂದಿನ ಉಡುಗಣಿ ಪ್ರದೇಶದಲ್ಲಿರುವ ಹಾಳುಕೋಟೆಯ

ಅವಶೇಷವನ್ನು ಅಲ್ಲಿಯ ಜನರು ಕೌಶಿಕನ ಕೋಟೆ ಎಂದು ಕರೆಯುತ್ತಿರುವುದು ಕೌಶಿಕನ ಐತಿಹಾಸಿಕತೆಯ ಶೋಧನದಲ್ಲಿ ಒಂದು ಪ್ರಮುಖ ಸಂಗತಿಯಾಗಿದೆ.

೧೩-೧೬ನೆಯ ಶತಮಾನದ ಕಾಲದಲ್ಲಿ ಮಹಾದೇವಿಯನ್ನು ಕುರಿತು ಮೂರು ಸ್ವತಂತ್ರ ಕಾವ್ಯ ಪುರಾಣ ಕನ್ನಡದಲ್ಲಿ ರಚಿತವಾಗಿವೆ, ಅಲ್ಲದೆ ಈ ಅವಧಿಯ ವೀರಶೈವ ಕಾವ್ಯ, ಪುರಾಣ ಹಾಗೂ ಶೂನ್ಯಸಂಪಾದನೆಗಳಲ್ಲಿ ಮಹಾದೇವಿಯಕ್ಕನ ವೃತ್ತಾಂತವನ್ನು ಸಾಂದರ್ಭಿಕವಾಗಿ ಪ್ರಸ್ತಾಪಿಸಲಾಗಿದೆ. ಪ್ರಭುದೇವ, ಬಸವಣ್ಣ, ಚೆನ್ನಬಸವಣ್ಣ, ಸಿದ್ಧರಾಮ, ಮಡಿವಾಳಮಾಚಯ್ಯ ಮೊದಲಾದ ಇವಳ ಸಮಕಾಲೀನ ಶರಣರ ವಚನಗಳಲ್ಲಿರುವ ಮಹಾದೇವಿಯಕ್ಕನ ಅನುಭಾವಿ ವ್ಯಕ್ತಿತ್ವದ ಪ್ರಸ್ತಾಪಗಳನ್ನೂ ಇಲ್ಲಿ ಗಮನಿಸಬಹುದು. ಕೇವಲ ಕನ್ನಡ ಸಾಹಿತ್ಯವಲ್ಲದೆ ತೆಲುಗು ಸಾಹಿತ್ಯದಲ್ಲಿಯೂ ಇವಳ ವ್ಯಕ್ತಿತ್ವ, ಜೀವನ ವೃತ್ತಾಂತಗಳನ್ನು ಕುರಿತ ರಚನೆಗಳಿವೆ. ಪಾಲ್ಕುರಿಕೆ ಸೋಮನಾಥನ 'ಪಂಡಿತಾರಾಧ್ಯ ಚರಿತ್ರೆ' ಕವಿಬಾಲಾಪಾಪಾಂಬಾ ರಚಿಸಿರುವ 'ಮಹಾದೇವಿ ಬೋಧೋಲ್ಲಾಸ' ಅಕ್ಕನನ್ನು ಕುರಿತ ಸ್ವತಂತ್ರ ತೆಲುಗುಕಾವ್ಯವಾಗಿದೆ. ಈ ಕೃತಿಗಳೆಲ್ಲ ಅಕ್ಕಮಹಾದೇವಿಗಿದ್ದ ಜನಪ್ರಿಯತೆ, ಜನತೆಯ ಮೇಲಾದ ಇವಳ ಜೀವನದ ಹಾಗೂ ವಚನದ ಪ್ರಭಾವವನ್ನು ಕುರಿತು ತಿಳಿಸುತ್ತದೆ. ಇವಳು ಸಾಮಾನ್ಯ ಜನರ ನಡುವೆ ಇದ್ದ ಅಸಾಮಾನ್ಯ ಮಹಿಳೆಯಾಗಿದ್ದಳು.

ಅಕ್ಕಮಹಾದೇವಿಯು ಅರಸು ಕೌಶಿಕನ ಬಲವಂತಕ್ಕೆ ಕಟ್ಟುಬಿದ್ದು ಆತನನ್ನು ವರಿಸಬೇಕಾಗಿ ಬಂದಾಗ, ಕೆಲವು ಶರತ್ತುಗಳನ್ನು ಒಡ್ಡಿ ಮದುವೆಗೆ ಸಮ್ಮತಿ ನೀಡಿರುತ್ತಾಳೆ. ಅವಳ ಧಾರ್ಮಿಕ ಸ್ವಾತಂತ್ರಕ್ಕೆ ಅಡ್ಡಿ ಬರುವುದಿಲ್ಲವೆಂದು ಅವಳ ಶರತ್ತುಗಳಿಗೆ ಒಪ್ಪಿ ಮದುವೆಯಾಗಿದ್ದ ಅರಸು ಆರಂಭದಲ್ಲಿ ಅವಳ ಯಾವ ಕಾರ್ಯಗಳಿಗೂ ಅಡ್ಡಿಪಡಿಸಿರಲಿಲ್ಲ ಎಂಬುದು ಈ ಕಾವ್ಯಗಳಲ್ಲಿ ಬಣ್ಣಿತವಾಗಿವೆ. ಅಲ್ಲದೆ ಇವಳು ಮದುವೆಯಾದನಂತರ ಕೆಲಕಾಲ ರಾಜ್ಯಭಾರವನ್ನು ನಡೆಸುತ್ತಿದ್ದಳೆಂದು ಚೆನ್ನಬಸವಾಂಕನು ತನ್ನ 'ಮಹದೇವಿಯಕ್ಕನ ಪುರಾಣ'ದಲ್ಲಿ ತಿಳಿಸಿದ್ದಾನೆ. ಒಬ್ಬ ಅರಸಿಯಾಗಿ ತನಗೆ ದೊರಕಬೇಕಿದ್ದ ಅಧಿಕಾರವನ್ನು ಇವಳು ಪಡೆದಿದ್ದಳು. ಭಂಡಾರವನ್ನು ಬಳಸಿಕೊಳ್ಳುವ ಅಧಿಕಾರವನ್ನು ಹೊಂದಿದ್ದ ಇವಳು ಯಥೇಚ್ಛವಾಗಿ ದಾನ-ಧರ್ಮಮಾಡುತ್ತಿದ್ದ ವಿವರಣೆಗಳು ಕಾವ್ಯಗಳಲ್ಲಿ ಬಂದಿದೆ[೧೪].

ತನ್ನ ಸ್ವಾತಂತ್ರಕ್ಕೆ ಅಡ್ಡಿಪಡಿಸಬಾರದೆಂದೂ, ಹಾಗೆ ಮಾಡಿದರೆ ಮೂರು ತಪ್ಪುಗಳವರೆಗೆ ಸಹಿಸುವುದಾಗಿ ತಿಳಿಸಿದ್ದ ಮಹಾದೇವಿಯು, ಪತಿ ಕೌಶಿಕನು ಮೂರನೆಯ ತಪ್ಪನ್ನು ಎಸಗಿದ ನಂತರ ಅರಮನೆಯನ್ನು ತೊರೆದು, ಸರ್ವಸ್ವವನ್ನೂ ಬಿಟ್ಟು ಕೇಶಾಂಬರಧಾರಿಯಾಗಿ ಶ್ರೀಶೈಲದ ಕಡೆಗೆ ಹೊರಡುತ್ತಾಳೆ. ಮಾರ್ಗದಲ್ಲಿ ಕಲ್ಯಾಣಕ್ಕೆ ಬಂದು ಕೆಲಕಾಲ ಇರುತ್ತಾಳೆಂಬ ವಿಚಾರವನ್ನು ಕಾವ್ಯಗಳು ತಿಳಿಸುತ್ತವೆ.

ಅಕ್ಕಮಹಾದೇವಿಯ ಕುರಿತಾಗಿ ರಚಿತವಾಗಿರುವ ಕಾವ್ಯಗಳು ತಿಳಿಸುವ ಅವಳ ಜೀವನದ ಘಟನೆಗಳನ್ನು ಅವಳ ವಚನಗಳಲ್ಲಿ ಹುಡುಕುವ ಪ್ರಯತ್ನ ನಡೆಸಲಾಗಿದೆ. ಇವಳ ಕೆಲವೊಂದು ವಚನಗಳು ಕೆಲಮಟ್ಟಿಗೆ ಸಾದೃಶ್ಯವನ್ನೂ ಕಲ್ಪಿಸುತ್ತವೆ. ಅರಸಿಯಾಗಿದ್ದ ಅಕ್ಕಮ್ಮನಿಗೆ ವೀರಪಡೆಗಳ ಪ್ರಭಾವವೂ ಇದ್ದೀತೆನ್ನುವುದರ ಸುಳಿವನ್ನು ಅವಳ ವಚನಗಳು ನೀಡುತ್ತವೆ.

**ಮುಂಗೈಯಲ್ಲಿ ವೀರಗಂಕಣವಿಕ್ಕಿ**
**ಮುಂಗಾಲಲ್ಲಿ ತೊಡರು ಬಾವುಲಿ ಕಟ್ಟಿದೆ**
**ಗಂಡುಡಿಗೆಯನುಟ್ಟೆನೆಂಬ ಮಾತಿನ ಬಿರಿದ ನುಂಗಿದನು**
**ಚೆನ್ನಮಲ್ಲಿಕಾರ್ಜುನಾ ನಿಮ್ಮಾಣೆಗೆ ಊಣಯವ ತಂದೆನಾದಡೆ**
**ನಿಮ್ಮ ತೊತ್ತಿನ ಮಗಳಲ್ಲಯ್ಯ**

ಇಲ್ಲಿ ವೀರ ಯೋಧನ ಪ್ರತಿಮೆಯನ್ನು ತಂದು ಹೋರಾಟದ ಬದುಕಿನ ಕುರಿತಾಗಿ ಹೇಳುತ್ತಿದ್ದರೂ, ಇದೊಂದು ಹೆಣ್ಣಿನ ಚಿತ್ರ. ಗಂಡುಡಿಗೆಯನ್ನುಟ್ಟಿಹೆ ಎನ್ನುತ್ತಾ ತನ್ನ ಛಲವನ್ನು ಹೊರಹಾಕಿದ್ದಾಳೆ. ಇಂತಹ ಹೋರಾಟದ

ಚಿತ್ರಣದಲ್ಲಿಯೂ ಅಲೌಕಿಕ ಭಾವವನ್ನು ತಂದು ಚೆನ್ನಮಲ್ಲಿಕಾರ್ಜುನನ ಆಣಗಿ ಮೀರದೆ ಅವನಿಗೆ ತೊತ್ತಾಗಿದ್ದೇನೆ ಎಂದಿದ್ದಾಳೆ.

ಗುರುವನ್ನು ಕುರಿತು ತಿಳಿಸುವ ಇವಳ ಹಲವಾರು ವಚನಗಳು ಇವಳು ಸೂಕ್ತ ಗುರುವಿನಿಂದ ವಿದ್ಯಾಭ್ಯಾಸ, ಆಧ್ಯಾತ್ಮದ ಮಾರ್ಗವನ್ನು ಪಡೆದಿದ್ದಳೆನ್ನುವುದನ್ನು ತಿಳಿಸುತ್ತವೆ.

**ಗುರುವಿನ ಕರುಣದಿಂದ ಲಿಂಗಜಂಗಮವ ಕಂಡೆ**
**ಗುರುವಿನ ಕರುಣದಿಂದ ಪಾದೋದಕ ಪ್ರಸಾದವಕಂಡೆ**
**ಗುರುವಿನ ಕರುಣದಿಂದ ಸಜ್ಜನ ಸದ್ಭಕ್ತರ ಗೋಷ್ಠಿಯ ಕಂಡೆ**
**ಚೆನ್ನಮಲ್ಲಿಕಾರ್ಜುನಯ್ಯ, ನಾಹುಟ್ಟಿನೊಡನೆ ವಿಭೂತಿಯ ಪಟ್ಟವ ಕಟ್ಟಿ,**
**ಸದ್ಗುರುಸ್ವಾಮಿ ಲಿಂಗಸ್ವಾಯತವ ಮಾಡಿದನಾಗಿ ಧನ್ಯಳಾದೆನು ॥**

ಅಕ್ಕಮಹಾದೇವಿಯ ವಚನಗಳನ್ನು ಅವುಗಳ ಭಾವಾಭಿವ್ಯಕ್ತಿಗೆ ಅನುಗುಣವಾಗಿ ಸಂಸಾರ ನಿರಾಕರಣೆ, ಆಧ್ಯಾತ್ಮ ಸಾಧನೆ, ಶರಣಸತಿ–ಲಿಂಗಪತಿ ಭಾವ, ಸಾಮಾಜಿಕ ವಿಡಂಬನೆ ಮೊದಲಾದ ಬಗೆಗಳಾಗಿ ವಿಭಾಗಿಸಿ ನೋಡಬಹುದು. ಇಂತಹ ಕೆಲವೊಂದು ವಚನಗಳು ಇವಳ ಜೀವನದ ಘಟನೆಗಳ ದೃಶ್ಯಗಳನ್ನು ಕಟ್ಟಿಕೊಡುತ್ತವೆ.

**ಹುಟ್ಟಿದೆ ಶ್ರೀ ಗುರುವಿನ ಹಸ್ತದಲ್ಲಿ**
**ಬೆಳೆದೆನು ಅಸಂಖ್ಯಾತರ ಕುರಣದಲ್ಲಿ**
**ಸುಜ್ಞಾನವೆಂಬ ತುಪ್ಪ**
**ಪರಮಾರ್ಥವೆಂಬ ಸಕ್ಕರೆಯನಿಕ್ಕಿದಿರಿ ನೋಡಾ**
**ಇಂತಪ್ಪ ತ್ರಿವಿಧಾಮೃತವ ದಣಿಯಲೆರೆದು ಸಲಹಿದಿರಿ**
**ಎನ್ನ ವಿವಾಹವ ಮಾಡಿದಿರಿ**
**ಸಯವಪ್ಪ ಗಂಡಂಗೆ ಕೊಟ್ಟಿರಿ**
**ಕೊಟ್ಟ ಮನೆಗೆ ಕಳುಹಲೆಂದು ಅಸಂಖ್ಯಾತರೆಲ್ಲರು ನೆರೆದು ಬಂದಿರಿ**
**ಬಸವಣ್ಣ, ಮೆಚ್ಚಲು ಒಗೆತನವ ಮಾಡುವೆ**
**ಚೆನ್ನಮಲ್ಲಿಕಾರ್ಜುನನ ಕೈವಿಡಿದು**
**ನಿಮ್ಮ ಮಂಡೆಗೆ ಹೂವ ತಹೆನಲ್ಲದೆ ಹುಲ್ಲತಾರೆನು**
**ಅವಧರಿಸಿ ನಿಮ್ಮಡಿಗಳೆಲ್ಲರು**
**ಮರಳಿ ಬಿಜಯಂಗೈವುದು ಶರಣುಶರಣಾರ್ಥಿ**

ಇದು ಕಲ್ಯಾಣದ ಮಹಾಮನೆಯನ್ನು ತೊರೆದು ಶ್ರೀಶೈಲಕ್ಕೆ ಹೊರಟಾಗ, ಅವಳ ಬೀಳ್ಕೊಡುಗೆಯ ದೃಶ್ಯವನ್ನು ತಂದುಕೊಡುತ್ತದೆ.

ಇವಳ ವಚನಗಳಲ್ಲಿ ಸಾಹಿತ್ಯಿಕ ಗುಣಗಳನ್ನು ಗಮನಿಸಬಹುದು. ರೂಪಕ, ಉಪಮೆ, ದೃಷ್ಟಾಂತ ಮೊದಲಾದ ಅಲಂಕಾರಗಳನ್ನು ಹೇರಳವಾಗಿ ಬಳಸಿಕೊಂಡಿದ್ದಾಳೆ. ಇವಳ ಚಿತ್ರಕ ಶಕ್ತಿ ರೂಪಕಗಳಾಗಿ, ಸಣ್ಣ ಸಣ್ಣ ಉಪಮೆಗಳು ಒಂದೊಂದು ಸ್ವತಂತ್ರ ಅನುಭವವನ್ನು ಕಟ್ಟಿಕೊಡುವ ಪರಿಯನ್ನು ಕಾಣಬಹುದು. ಕಾವ್ಯಮಯವಾದ, ವಾಸ್ತವದ ವಿವರಣೆಗಳಿಂದ, ತತ್ವ ಚಿಂತನೆಗಳಿಂದ ಕೂಡಿರುವ ವಚನಗಳಂತೆ, ಬೆಡಗಿನ ವಚನಗಳನ್ನೂ ಇವಳ ರಚನೆಗಳಲ್ಲಿ ಕಾಣಬಹುದು. ಅಲ್ಲಿ ಅಮೂರ್ತವಾದ ಅನುಭಾವದ ವಿಷಯಗಳನ್ನು ಸಂಕೇತ, ಪ್ರತಿಮೆಗಳ ಮೂಲಕ ಚಿತ್ರಿಸಿದ್ದಾಳೆ.

**ಜಲದ ಮಂಟಪದ ಮೇಲೆ ಉರಿಯ ಚಪ್ಪರವನಿಕ್ಕಿ**
**ಆಲಿಕಲ್ಲ ಹಸೆಯವಾಸಿ ಭಾಸಿಗವ ಕಟ್ಟಿ**

**ಕಾಲಿಲ್ಲದ ಹೆಂಡತಿಗೆ ತಲೆಯಿಲ್ಲದ ಗಂಡ ಬಂದು ಮದುವೆಯಾದನು**
**ಎಂದೆಂದೂ ಬಿಡದೆ ಬಾಳುವೆಗೆ ಕೊಟಟರೆನ್ನ**
**ಚೆನ್ನಮಲ್ಲಿಕಾರ್ಜುನ ಗಂಡಗೆನ್ನ ಮದುವೆಯ................**

ವಿದ್ಯೆ, ಧೈರ್ಯ, ಛಲ, ಸ್ವಾಭಿಮಾನವನ್ನು ಮೈಗೂಡಿಸಿಕೊಂಡಿದ್ದ ಅಕ್ಕಮಹಾದೇವಿಯು ಆಧ್ಯಾತ್ಮವಲಯದಲ್ಲಿ ಉತ್ತುಂಗಕ್ಕೇರಿದವಳು. ಪುರುಷರಿಗೆ ಮಾತ್ರ ಸೀಮಿತವೆನಿಸಿದ್ದ ವಲಯಕ್ಕೆ ದಿಟ್ಟತನದಿಂದ ಕಾಲಿರಿಸಿ, ಮುಂದೆ ಹಲವಾರು ಮಹಿಳೆಯರಿಗೆ ಆದರ್ಶವೆನಿಸಿದಳು. ಸಾಂಪ್ರದಾಯಿಕ ಸಮಾಜಒಪ್ಪಿತ ವಿವಾಹದ ನಿಯಮಗಳನ್ನು ಧಿಕ್ಕರಿಸಿ, ವಿವಾಹಬಂಧನದಲ್ಲಿ ಸ್ವಾತಂತ್ರ್ಯಕ್ಕೆ ಚ್ಯುತಿಬಂದಾಗ ದಿಟ್ಟತನದಿಂದ ಪ್ರತಿಭಟಿಸಿ ಬಂಧನವನ್ನೇ ಕಿತ್ತು ಹೊರಬಂದದ್ದು ಇವಳ ಸಾಧನೆಯಾಗಿದೆ. ಸಾಮಾಜಿಕ ವ್ಯವಸ್ಥೆಯನ್ನಷ್ಟೇ ಅಲ್ಲದೆ ರಾಜಪ್ರಭುತ್ವವನ್ನೂ ಧಿಕ್ಕರಿಸಿನಿಂತು ಜೀವನಪೂರ್ತಿ ಆಧ್ಯಾತ್ಮ ಸಾಧನೆಯಲ್ಲಿ ತೊಡಗಿಸಿಕೊಳ್ಳಲು ತನ್ನದೇ ಮಾರ್ಗವನ್ನು ಅರಸಿ ಹೊರಡುತ್ತಾಳೆ.

ಅಕ್ಕಮಹಾದೇವಿಗೂ ಪೂರ್ವದಲ್ಲಿ ಕೆಲವು ವಚನಕಾರ್ತಿಯರು ಕಂಡುಬಂದರೂ ಸತ್ವ ಮತ್ತು ಸಂಖ್ಯೆಯ ದೃಷ್ಟಿಯಿಂದ ಈಕೆಯ ವಚನಗಳಿಗೆ ಅಗ್ರಸ್ಥಾನ ನೀಡಲಾಗಿದೆ. ಈಕೆಯ ವಚನಗಳು ಚೆನ್ನಮಲ್ಲಿಕಾರ್ಜುನ, ಶ್ರೀಶೈಲಮಲ್ಲಿಕಾರ್ಜುನ, ಶ್ರೀಗಿರಿಮಲ್ಲಿಕಾರ್ಜುನ, ವಿವಿಧ ಅಂಕಿತಗಳಲ್ಲಿ ಕಂಡುಬರುತ್ತವೆ. ಇವಳ ಕಾವ್ಯದಲ್ಲಿ ವೇದನೆ–ನಿವೇದನೆಗಳು ಪ್ರತಿಪಾದಿತವಾಗಿವೆ. ತೀನಂಶ್ರೀ ಅವರು ಹೇಳುವಂತೆ "ಅವಳ ವಚನಗಳ ಬಹುಭಾಗ ರಸಾರ್ದ್ರವದಿಂದ ಕೂಡಿದೆ. ಉಪಮಾನ, ಚಿತ್ರಕಲ್ಪನೆಗಳಿಂದ ಮನೋಹರವಾಗಿವೆ"

ಅಕ್ಕನೆಂದೇ ಪ್ರಸಿದ್ಧಿಯಾಗಿದ್ದ ಇವಳು ಅರಸನೊಬ್ಬನ 'ಮಹಾದೇವಿ' ಆಗಿದ್ದಳೆಂಬುದರ ಕುರುಹಾಗಿ ಅಕ್ಕಮಹಾದೇವಿ ಎಂಬುದೇ ಇವಳ ನಾಮಧೇಯವಾಯಿತು. ಅರಸನೊಬ್ಬನ ಮಡದಿಯಾಗಿ, ಸಾಮಾನ್ಯ ಜನತೆಯಿಂದಾದಿಯಾಗಿ ಸಾಹಿತ್ಯ–ಧಾರ್ಮಿಕ ಎಲ್ಲ ವಲಯದಲ್ಲೂ ಶತಶತಮಾನಗಳ ಕಾಲ ಪ್ರಭಾವ ಬೀರಿದ ಅನಭಿಷಿಕ್ತ ಸಾಮ್ರಾಜ್ಞಿಯಾದವಳು ಅಕ್ಕಮಹಾದೇವಿ. ಮಹಾದೇವಿಯಕ್ಕನ ನೂರಾರು ವಚನಗಳು ಆಕೆಯ ಆತ್ಮಾಭಿವ್ಯಕ್ತಿಯ ಫಲಿತವಾಗಿದ್ದರೂ ಕನ್ನಡ ಸಾಹಿತ್ಯಕ್ಕೆ ಬಹುಮೌಲ್ಯಯುತ ಕೊಡುಗೆಯಾಗಿದೆ.

**ನೀಲಾಂಬಿಕೆ**

ಅಕ್ಕಮಹಾದೇವಿಯ ನಂತರ ಅತಿ ಹೆಚ್ಚು ವಚನಗಳ ಕರ್ತೃ ಎನಿಸಿದ ಕವಯತ್ರಿ ನೀಲಾಂಬಿಕೆ ಕೂಡ ಅರಸು ಮನೆತನದ ಮಹಿಳೆಯೇ ಆಗಿದ್ದಾಳೆ. ಬಸವಣ್ಣನ ಇಬ್ಬರು ಮಡದಿಯರಲ್ಲಿ ಗಂಗಾಂಬಿಕೆ ಒಬ್ಬಳಾದರೆ ಮತ್ತೊಬ್ಬಳು ಈ ನೀಲಾಂಬಿಕೆ. ಇವಳು ಕಳಚೂರಿ ರಾಜಮನೆತನದ ಬಿಜ್ಜಳನ ಕಿರಿಯ ಸೋದರಿ. ಬಿಜ್ಜಳನು "ತನ್ನನುಜೆ ಕಿರಿಯಾತರುಣಿ ನೀಲಾಂಬಿಕೆಯನೊಲಿದಿತ್ತು ಬಸವಗಂ ಹಿರಿದು ವಿಭವದಿಂ ಮದುವೆಯಂ ಮಾಡಿ" ಎಂದು ಶಿವತತ್ವ ಚಿಂತಾಮಣಿಯಲ್ಲಿ ಸಂಧಿ ೩೧–೬೭ರಲ್ಲಿ ತಿಳಿಸಲಾಗಿದೆ. ಆದರೆ ಇವಳು ಬಿಜ್ಜಳನ ಸ್ವಂತ ಸಹೋದರಿಯಾಗಿರಲಿಲ್ಲ ಎನ್ನುವುದು ತಿಳಿದುಬರುತ್ತದೆ. ಇವಳ ತಂದೆ ಸಿದ್ಧರಸ ಮಂತ್ರಿ. ಆದರೆ ಇವಳು ಬಿಜ್ಜಳನ ಸಾಕುತಂಗಿಯಾಗಿದ್ದಾಳೆ. ಕವಿ ಸಿದ್ಧನಂಜೇಶ ತನ್ನ 'ಗುರುರಾಜಚಾರಿತ್ರ'ದಲ್ಲಿ ಈ ಕುರಿತ ವಿವರಣೆ ನೀಡಿದ್ದಾನೆ. ಬಿಜ್ಜಳನ ತಂದೆ ಪೆರ್ಮಾಡಿ ವೀರಮರಣವನ್ನಪ್ಪಿದಾಗ ಬಿಜ್ಜಳನ ತಾಯಿ ಚವಲಾದೇವಿ ಗಂಡನೊಡನೆ ಸತಿಹೋಗಲು ನಿರ್ಧರಿಸಿ ತನ್ನ ಕಿರಿಯ ಮಗ ಕರ್ಣದೇವನ ಪಾಲನೆಯನ್ನು ಸಿದ್ಧರಸ ಪದ್ಮಗಂಧಿಯರಿಗೆ ಒಪ್ಪಿಸುತ್ತಾಳೆ. ಇವರು ಬಿಜ್ಜಳನ ಸಹೋದರನಾದ ಕರ್ಣದೇವನನ್ನು ತಮ್ಮ ಮಗಳು ನೀಲಲೋಚನೆ (ನೀಲಾಂಬಿಕೆ) ಯೊಂದಿಗೆ ಸಾಕಿಸಲಹುತ್ತಾರೆ. ಈ ಕಾರಣದಿಂದ ನೀಲಾಂಬಿಕೆ ಬಿಜ್ಜಳನ ಕಿರಿಯ ಸಹೋದರಿಯಾಗಿ ಬೆಳೆಯುತ್ತಾಳೆ.

ನೀಲಾಂಬಿಕೆಯು ಬಹುಜನ ಶರಣರ ಗೌರವಾದರಗಳಿಗೆ ಪಾತ್ರಳಾಗಿದ್ದಾಳೆ. ಇವಳನ್ನು ಕುರಿತು 'ನೀಲಮ್ಮನ ಸ್ತೋತ್ರ', 'ನೀಲಾಂಬಿಕಾ ಪಂಚವಿಂಶತಿ', 'ನೀಲಮ್ಮನ ತ್ರಿವಿಧಿ'ಗಳು ರಚಿತವಾಗಿವೆ. ಸ್ವತಃ ಕವಯತ್ರಿಯಾದ ಇವಳು ಸುಮಾರು ೨೮೮ ವಚನಗಳನ್ನು ರಚಿಸಿದ್ದಾಳೆ ಅಲ್ಲದೆ 'ಕಾಲಜ್ಞಾನ', 'ಪ್ರಸಾದ ಸಂಪಾದನೆ' ಎಂಬ ಕೃತಿಗಳನ್ನೂ ರಚಿಸಿದ್ದಾಳೆ[೧೫].

ರಾಜಮನೆತನದಲ್ಲಿ ಬೆಳದವಳಾದ್ದರಿಂದ ಉತ್ತಮ ವಿದ್ಯಾಭ್ಯಾಸವನ್ನು ಹೊಂದಿದ್ದಳೆಂಬುದನ್ನು ಇವಳು ರಚಿಸಿರುವ ಕೃತಿಗಳಿಂದ ತಿಳಿದುಬರುತ್ತದೆ. ಇವಳ ರಚನೆಗಳಲ್ಲಿ ಷಟ್ಪದಿ, ಆದಿಪ್ರಾಸ ಛಂದೋಬಂಧಗಳಿರುವುದು ಇವಳ ಶಾಸ್ತ್ರಜ್ಞಾನವನ್ನು ತಿಳಿಸುತ್ತದೆ. ನಿರ್ದಿಷ್ಟ ರಾಗಸೂಚನೆಗಳಿರುವ ಇವಳ ಸ್ವರವಚನಗಳು ಇವಳ ಸಂಗೀತ ಜ್ಞಾನವನ್ನು ತಿಳಿಸುತ್ತದೆ. ಇವಳು ಅಕ್ಕಮಹಾದೇವಿಯ ಹಾಗೆ ವೈರಾಗ್ಯ ಜೀವನವನ್ನು ನಡೆಸದೆ, ಸಂಸಾರಿಯಾಗಿ ಜೀವನವನ್ನು ನಡಿಸಿದವಳು. ಇವಳಿಗೆ ಬಾಲಸಂಗಯ್ಯನೆಂಬ ಮಗನಿದ್ದುದನ್ನೂ ಕಾವ್ಯಗಳು ತಿಳಿಸುತ್ತವೆ. ಸಾಮಾಜಿಕಸುಧಾರಣೆ, ಧಾರ್ಮಿಕ ಜಾಗ್ರತೆಯ ಮಹಾಮಣಿಹವನ್ನು ಹೊತ್ತ ಬಸವಣ್ಣನಿಗೆ ಹಿನ್ನೆಲೆ ಮುನ್ನೆಲೆಯಾಗಿ ಸಹಧರ್ಮಿಣಿಯಾಗಿ ಹೆಜ್ಜೆಹಾಕಿದ ಈಕೆ, ಕಲ್ಯಾಣಕ್ರಾಂತಿಯ ಸಂದರ್ಭದಲ್ಲಿ ತಂಗಡಿಗಿಯಲ್ಲಿ ಐಕ್ಯಳಾದಳೆಂದು ಪ್ರತೀತಿಯಿದೆ. ರಾಜಮನೆತನದ ಸಂಬಂಧವಿದ್ದು, ಅರಮನೆಯಲ್ಲಿ ಬೆಳೆದವಳಾದರೂ, ಶಿವಶರಣೆಯಾಗಿ ಸಾಮಾನ್ಯರಂತೆ ಜೀವನವನ್ನು ನಡೆಸಿ ಆದರ್ಶನಾರಿ ಎನಿಸಿದ್ದಾಳೆ.

ಕೂಡಲಸಂಗಮ ಕ್ಷೇತ್ರಕ್ಕೆ ಬಂದು ಐಕ್ಯವಾಗಬೇಕೆಂದು ಬಸವಣ್ಣ ಹಡಪದ ಅಪ್ಪಣ್ಣನ ಮೂಲಕ ಹೇಳಿಹಳುಹಿಸಿದಾಗ ನೀಲಾಂಬಿಕೆ ಉತ್ತರದ ರೂಪದಲ್ಲಿ ಹೇಳಿದ ವಚನವೊಂದು ಅವಳ ಆಧ್ಯಾತ್ಮದ ಎತ್ತರವನ್ನು ತೋರಿಸುತ್ತದೆ.

**ನಾನಾರ ಸಾರುವೆನೆಂದು ಚಿಂತಿಸಲೇಕಯ್ಯ?**
**ನಾನಾರ ಹೊಂದುವುನೆಂದು ಭ್ರಮೆಪಡಲೇಕಯ್ಯ?**
**ನಾನಾರ ಇರವನರಿಯೆನೆಂದು ಪ್ರಳಾಪಿಸಲೇಕಯ್ಯ?**
**ಪರಿಣಾಮಮೂರ್ತಿ ಬಸವನ ರೂಪು ಕರಸ್ಥಲದಲ್ಲಿ ಬೆಳಗಿದ ಬಳಿಕ ಸಂಗಯ್ಯನ ಹಂಗು ನಮಗೇತಕೆ ಅಪ್ಪಣ್ಣಾ?**

ಇವಳು ಕೆಲವು ವಚನಗಳನ್ನು ರಚಿಸಿದ್ದಾಳಲ್ಲದೆ ಕಾಲಜ್ಞಾನವನ್ನೂ ರಚಿಸಿದ್ದಾಳೆ. ಇವಳ ವಚನಗಳಲ್ಲಿ ಆಧ್ಯಾತ್ಮದ ಸಾಧನೆ, ಬೋಧನೆಗಳನ್ನು ಕಾಣಬಹುದು. ಇವಳ ರಚನೆಗಳು ಈಕೆಯ ಆಳವಾದ ಅರಿವು, ವೈಚಾರಿಕತೆಗಳನ್ನು ಪರಿಚಯಿಸುತ್ತವೆ.

**ಶಾಂಭವಿ:** ಶಾಂಭವೀಲಿಂಗ ಅಂಕಿತದಲ್ಲಿ ಕೆಲವು ವಚನಗಳನ್ನು ರಚಿಸಿರುವ ಈಕೆ ಸಿಂಹವಿಕ್ರಮ ಚೋಳನ ಮಗಳು. ಇವಳ ಶಿವಯೋಗದ ಔನ್ನತ್ಯವನ್ನು ಪ್ರಭುದೇವ ಮತ್ತು ಸಿದ್ಧರಾಮ ಶಿವಯೋಗಿಗಳು ಮೆಚ್ಚಿ ಕೊಂಡಾಡಿದ ಪ್ರಸಂಗವು ಮುಕ್ತಿ ಕಂಠಾಭರಣದಲ್ಲಿದೆ. ಈಕೆಯ ತಂದೆ ಸಿಂಹವಿಕ್ರಮ ಚೋಳನು ಸಾಮಂತ ಅರಸನಾಗಿರಬೇಕೆಂದು ಗುರುತಿಸಲಾಗುತ್ತದೆ. ಅರಮನೆಯಲ್ಲಿ ಬೆಳೆದ ಶಾಂಭವಿಯು ವೀರಶೈವಾಚಾರ್ಯರೆನಿಸಿದ ರೇವಣಸಿದ್ದೇಶ್ವರರನ್ನು ಮದುವೆಯಾಗಿ, ಶಿವಶರಣೆಯಾಗಿ ತನ್ನ ಭಕ್ತಿಭಾವಗಳನ್ನು ವಚನದ ಮೂಲಕ ವ್ಯಕ್ತಗೊಳಿಸಿದ್ದಾಳೆ.

**ಸೌಂದರೀ ದೇವಿ:** ಇವಳು ರಾಜೇಂದ್ರ ಚೋಳನ ಮಗಳು. 'ಶ್ರೀಗುರು ಸೋಮಲಿಂಗ' ಅಂಕಿತದಲ್ಲಿರುವ ಈಕೆಯ ವಚನಗಳು ದೊರೆತಿವೆ. ಸೌಂದರೀದೇವಿ, ಶಾಂಭವಿಯರೊಂದಿಗೆ ವೇದಕಂಚುಕಿ, ಆಗಮಮೋಹಿನಿಯರು ನಾಲ್ವರು ರಾಜಕುಮಾರಿಯರು ವೀರಶೈವಾಚಾರ್ಯರೆನಿಸಿದ ರೇವಣ ಸಿದ್ದೇಶ್ವರರ ಧರ್ಮಪತ್ನಿಯರೆನ್ನುವ ವಿವರ ಮುಕ್ತಿ ಕಂಠಾಭರಣದಲ್ಲಿ ದೊರಕುತ್ತದೆ. ಚಾರಿತ್ರೆಕಾರರು ಇವರ ಕುರಿತಾದ ಹೆಚ್ಚಿನ ವಿಚಾರ ಹೊರಹಾಕುವತ್ತ ಗಮನಹರಿಸದೆ, ಇವರ ಕುರಿತಾದ ಉಲ್ಲೇಖಗಳನ್ನು ಸಂಶಯಾಸ್ಪದವಾಗಿ ಕಾಣುವಂತಾಗಿದೆ.

**ಪಾಳೆಗಾರ ವಂಶದ ಕವಯತ್ರಿ:** ಹಾಗಲವಾಡಿ ಮನೆತನದಲ್ಲಿ ಕ್ರಿ.ಶ.೧೭೨೦–೪೦ರವರೆಗೆ ಆಳ್ವಿಕೆ ನಡೆಸಿದ ಇಮ್ಮಡಿ ಮುದ್ದೀರಪ್ಪನಾಯಕನು ಧರ್ಮಸಹಿಷ್ಣುವೂ ವಿದ್ಯಾವಂತನೂ ಆಗಿದ್ದು 'ರಾಜರ್ಷಿ'ಎಂಬ ಬಿರುದನ್ನು ಸಹ ಪಡೆದಿದ್ದನು. ಇವನ ವಂಶದಲ್ಲಿ ಕಂಡುಬರುವ ಇತರ ಕವಿಗಳಂತೆ ಈತನೂ ಸಾಹಿತ್ಯ ರಚನೆ ಮಾಡಿದ್ದಾನೆ ಅಲ್ಲದೆ ಇವನ ಮಗಳು ಸಹ ಅನೇಕ ಸ್ವರವಚನಗಳನ್ನು ರಚಿಸಿದ್ದಾಳೆ.

ಈಕೆ ಹಲವಾರು ಸ್ವರವಚನಗಳನ್ನು ರಚಿಸಿದ್ದು, ವಿಭಿನ್ನ ಅಂಕಿತಗಳಲ್ಲಿ ಇವಳ ವಚನಗಳು ದೊರಕುತ್ತವೆ. ಗುರುಸಂಗಮೇಶ್ವರ ಲಿಂಗವೇ ಎಂಬ ಅಂಕಿತದಲ್ಲಿನ ಇವಳ ವಚನಗಳನ್ನು ಸಿ.ನಾಗಭೂಷಣ ಅವರು ಗುರುತಿಸಿದ್ದಾರೆ[೧೬]. 'ಗುರುಹುಚ್ಚಾರ್ಯ' ಎಂಬ ಅಂಕಿತದಲ್ಲಿ ಇವಳು ರಚಿಸಿರುವ ಮತ್ತೊಂದು ವಚನವು ಶಿವಾನುಭವದಲ್ಲಿ ಉಲ್ಲೇಖವಾಗಿದೆ, ಅಲ್ಲದೆ 'ಗರಿ' ಎಂಬ ಹಸ್ತಪ್ರತಿಯಲ್ಲಿ 'ಗುರುಧೀರ ಹುಚ್ಚಾರ್ಯ' ಎಂಬ ಅಂಕಿತದಲ್ಲಿನ ಇವಳ ಸ್ವರವಚನವೊಂದು ದೊರೆತಿದೆ[೧೭]. ಹೀಗೆ ಇವಳು ಮೂರು ವಿಭಿನ್ನ ಅಂಕಿತಗಳಲ್ಲಿ ಸ್ವರವಚನವನ್ನು ರಚಿಸಿದ್ದಾಳೆಂದು ತಿಳಿದುಬರುವುದಾದರೂ, ಇವಳ ವಚನಗಳು ಪ್ರಕಟವಾಗಿಲ್ಲ. ಅಲ್ಲದೆ ಇಲ್ಲಿ ಇವಳನ್ನು ಇಮ್ಮಡಿ ಮುದಿಯಪ್ಪನಾಯಕನ ಮಗಳೆಂದೇ ಗುರುತಿಸಲಾಗಿದೆ, ಇವಳ ಕುರಿತಾದ ಬೇರಾವ ವಿಚಾರವೂ ತಿಳಿದುಬರುವುದಿಲ್ಲ.

ಅರಸು ಮನೆತನದ ಮಹಿಳೆಯರಲ್ಲದೆ, ಅರಸುಮನೆತನದೊಂದಿಗೆ ಸಂಪರ್ಕ ಹೊಂದಿದ ಅಧಿಕಾರಿವರ್ಗದವರು, ಶ್ರೀಮಂತ ಮನೆತನದ ಹಲವಾರು ಮಹಿಳೆಯರು ಹನ್ನೆರಡನೆಯ ಶತಮಾನದಲ್ಲಿ ವಚನಕಾರ್ತಿಯರಾಗಿ ಕೆಲವು ವಚನಗಳನ್ನು ರಚಿಸಿರುವುದನ್ನು ಕಾಣುತ್ತೇವೆ. ಸಮಾಜದ ಮೇಲೆ ಇವರಿಂದ ಆದ ಪರಿಣಾಮ, ಇವರ ಪ್ರಭಾವಗಳನ್ನು ಗಮನದಲ್ಲಿರಿಸಿಕೊಂಡು ಇಂತಹ ಕೆಲವು ಮಹಿಳೆಯರನ್ನು ಇಲ್ಲಿ ಗುರುತಿಸಲಾಗಿದೆ. ಅವರಲ್ಲಿ ಬಸವಣ್ಣನ ಹಿರಿಯ ಪತ್ನಿ **ಗಂಗಾಂಬಿಕೆ** ಪ್ರಮುಖಳಾದವಳು. ಇವಳು ಮಂತ್ರಿ ಬಲದೇವನ ಮಗಳು ಎಂದು ತಿಳಿದುಬರುತ್ತದೆ. ಅರಸು ಮನೆತನದವಳಲ್ಲದಿದ್ದರೂ, ಅರಮನೆಯ ಒಡನಾಡಿಯಾಗಿದ್ದು, ಸಮಾಜದ ಗಣ್ಯವ್ಯಕ್ತಿ ಎಂಬ ಸ್ಥಾನಕ್ಕೆ ಪಾತ್ರನಾದ ಮನೆತನದಲ್ಲಿ ಸಹಜವಾಗಿ ಉತ್ತಮ ವಿದ್ಯಾಭ್ಯಾಸ, ಶ್ರೀಮಂತಿಕೆಯ ಲೌಕಿಕ ಬದುಕನ್ನು ಹೊಂದಿದ್ದ ಗಂಗಾಂಬಿಕೆ ಬಸವಣ್ಣನನ್ನು ವರಿಸಿ ಶಿವಶರಣೆಯಾಗಿ, ಕೆಲವು ವಚನಗಳನ್ನು ರಚಿಸಿದ್ದಾಳೆ.

ಹರಿಹರನ ಬಸವರಾಜದೇವರ ರಗಳೆ, ಭೀಮಕವಿಯ ಬಸವಪುರಾಣ, ಸಿಂಗಿರಾಜನ ಸಿಂಗಿರಾಜಪುರಾಣ, ಸಿದ್ಧನಂಜೇಶನ ಗುರುರಾಜಚಾರಿತ್ರ, ಷಡಕ್ಷರದೇವನ ಬಸವರಾಜವಿಜಯ, ಶಾಂತಲಿಂಗದೇಶಿಕನ ಭೈರವೇಶ್ವರಕಾವ್ಯದ ಕಥಾಮಣಿಸೂತ್ರರತ್ನಾಕರ ಮುಖಬೋಳು ಸಿದ್ಧಲಿಂಗನ ಷಟ್‌ಸ್ಥಲತಿಲಕ, ಚೆನ್ನಪ್ಪಕವಿಯ ಶರಣಲೀಲಾಮೃತ ಮೊದಲಾದ ಕೃತಿಗಳಲ್ಲಿ ಈಕೆಗೆ ಸಂಬಂಧಿಸಿದ ಕೆಲವು ಸಂಗತಿಗಳು ಉಕ್ತವಾಗಿವೆ. ಹರಿಹರ 'ಸತ್ಕುಲ ಸಾದೃಶ್ಯಮಪ್ಪ ಸುಶೀಲೆ' ಎಂದು ಇವಳನ್ನು ಬಣ್ಣಿಸಿದ್ದಾನೆ. ಭೀಮಕವಿಯು ಇವಳ ಧೃತಿ, ಸಿರಿಪ್ರಭೆ, ಜಾಣ್ಮೆ ರೂಪು, ಉನ್ನತಿ, ಪತಿವ್ರತಾಚರಣೆ, ಪವಿತ್ರತೆ, ತೇಜಗಳೆಲ್ಲ ದೇವಕುಲ ಸ್ತ್ರೀಯರಿಗಿಂತ ನೂರುಮಡಿ ಮಿಗಿಲಾಗಿದ್ದವು ಎಂದು ವರ್ಣಿಸಿದ್ದಾನೆ. ಕಲ್ಯಾಣಕ್ರಾಂತಿಯ ನಂತರ ಬಸವಣ್ಣ ಕೂಡಲಸಂಗಮದತ್ತ ಸಾಗಲು, ಈಕೆ ಶರಣಸಮೂಹದ ಜೊತೆ ಬೆರೆತು, ಚೆನ್ನಬಸವಣ್ಣ, ಅಕ್ಕನಾಗಮ್ಮರೊಂದಿಗೆ ಉಳುವೆಯತ್ತ ನಡೆದು, ಕಾದ್ರೊಳ್ಳಿ ಎಂಬ ಗ್ರಾಮದಲ್ಲಿ ಲಿಂಗೈಕ್ಯಳಾದಳೆಂದು ತಿಳಿದುಬರುತ್ತದೆ. ಹುಬ್ಬಳ್ಳಿಯ ಸಮೀಪ ಮಲಪ್ರಭಾನದಿ ಎಡದಂಡೆಯ ಮೇಲೆ ಈಕೆಯ ಸಮಾಧಿ ಕಂಡುಬರುತ್ತದೆ. ಇವಳಿಗೆ ಸಿದ್ಧರಸನೆಂಬ ಮಗನಿದ್ದನೆಂದು ತಿಳಿದುಬರುತ್ತದೆ. ಮಗುವನ್ನು ಕಳೆದುಕೊಂಡು ಕೊರಗುವ ವೇದನೆ ಇವಳ ಕೆಲವು ವಚನಗಳಲ್ಲಿ ನಿರೂಪಿತವಾಗಿದೆ. ಇವಳು 'ಗಂಗಾಪ್ರಿಯ ಕೂಡಲಸಂಗ' ಎಂಬ ಅಂಕಿತದಲ್ಲಿ ಕೆಲವು ವಚನಗಳನ್ನು ರಚಿಸಿದ್ದಾಳೆ.

ಗಂಗಾಂಬಿಕೆಯಂತೆ ಸಮಾಜದ ಶ್ರೀಮಂತವರ್ಗದವಳಾಗಿ ಅನುಭವಮಂಟಪದ ಸದಸ್ಯೆಯಾಗಿ, ಸಮಾಜದ ಸಾಮಾನ್ಯವರ್ಗಕ್ಕೆ ಅನುಕರಣೀಯಳೆನಿಸಿದ ಮತ್ತೋರ್ವ ವಚನಕಾರ್ತಿ **ರಾಯಮ್ಮ**. ಈ ಕಾಲದಲ್ಲಿ ರಾಯಮ್ಮನ ಹೆಸರಿನ ಇಬ್ಬರು ವಚನಕಾರ್ತಿಯರು ಕಂಡುಬರುತ್ತಾರೆ. ಅವರಲ್ಲಿ ಒಬ್ಬಳು ಅಮುಗೆರಾಯಮ್ಮ, ಮತ್ತೊಬ್ಬಳು

ರಾಯಸದ ಮಂಚಣ್ಣಗಳ ಪುಣ್ಯಸ್ತ್ರೀ ರಾಯಮ್ಮ. ರಾಯಸದ ಮಂಚಣ್ಣ ಅರಮನೆಯ ನಿಕಟ ಸಂಪರ್ಕವನ್ನಿಟ್ಟುಕೊಂಡವನಾಗಿರುತ್ತಾನೆ. ಅರಮನೆಯ ಸಚಿವನಾಗಿದ್ದ ಈತ, ಬಸವಣ್ಣನ ಪತ್ರವ್ಯವಹಾರವನ್ನು ನೋಡಿಕೊಳ್ಳುವ ಆಪ್ತಕಾರ್ಯದರ್ಶಿಯಾಗಿರುತ್ತಾನೆ. ಶ್ರೀಮಂತ ಕುಟುಂಬದ ರಾಯಮ್ಮ ಪತಿಯೊಡನೆ ಶರಣರ ಸಂಪರ್ಕಕ್ಕೆ ಬಂದು ಅನುಭವಮಂಟಪದ ಸದಸ್ಯೆಯಾಗಿ ಭಾಗವಹಿಸಿ, ವಚನಗಳನ್ನು ರಚಿಸಿದ್ದಾಳೆ. ಇವಳು ರಚಿಸಿರುವ ವಚನಗಳು ಅಮುಗೆ ರಾಯಮ್ಮನ ಹೆಸರಿನಡಿಯಲ್ಲಿ ಸೇರಿಹೋಗಿರುವುದನ್ನು ಕೆಲವು ವಚನಸಂಪಾದಕರು ಗುರುತಿಸಿದ್ದಾರೆ[೧೮].

ಕರ್ನಾಟಕದ ಅರಸಿಯರ ಸಾಹಿತ್ಯ ಕೃಶಿಗೆ ಕರ್ನಾಟಕದವರಲ್ಲದ ಅರಸು ಮನೆತನದ ಮಹಿಳೆಯರ ಕೊಡುಗೆಯು ಸೇರಿದೆ. ಹೊರನಾಡಿನಿಂದ ಕರ್ನಾಟಕ್ಕೆ ಬಂದು ಕನ್ನಡದಲ್ಲಿ ವಚನ ರಚಿಸಿದವರಲ್ಲಿ **ಬೊಂತಾದೇವಿ** ಹಾಗೂ **ಮೋಳಿಗೆ ಮಹದೇವಿ** ಇಬ್ಬರು ವಿಶೇಷ ಸ್ಥಾನವನ್ನು ಪಡೆದವರಾಗಿದ್ದಾರೆ. ಬೊಂತಾದೇವಿಯು ಕಾಶ್ಮೀರ ದೇಶದ ಮಾಂಡವ್ಯಪುರದ ಅರಸನ ಮಗಳು ಎಂದು ತಿಳಿದುಬರುತ್ತದೆ. ಚಿಕ್ಕಂದಿನಲ್ಲಿಯೇ ಶಿವಭಕ್ತಿ, ವೈರಾಗ್ಯಗಳು ಇವಳಲ್ಲಿ ಮನೆಮಾಡಿ ರಾಜ್ಯ-ಸುಖಭೋಗಗಳನ್ನು ತೊರೆಯುವಂತೆ ಮಾಡಿತು. ಕಲ್ಯಾಣದ ಶಿವಭಕ್ತರ ವಿಚಾರ ತಿಳಿದು ಸರ್ವಸ್ವವನ್ನೂ ಪರಿತ್ಯಾಗಮಾಡಿ ನಿರ್ವಾಣಳಾಗಿ ಕಲ್ಯಾಣದತ್ತಾ ಬರುತ್ತಿರುವಾಗ ಶಿವನು ಇವಳನ್ನು ಪರೀಕ್ಷಿಸಿ, ಇವಳಿಗೆ ಬೊಂತೆಯನ್ನು ಹೊದ್ದುಕೊಂಡು ಹೋಗಲು ತಿಳಿಸುತ್ತಾನೆ. ಇದರಿಂದ ಇವಳನ್ನು ಬೊಂತಾದೇವಿ ಎಂದು ಗುರುತಿಸಲಾಗುತ್ತದೆ. ಕಲ್ಯಾಣಕ್ಕೆ ಬಂದು ಕೊನೆಯವರೆಗೂ ಶಿವಶರಣರೊಂದಿಗಿದ್ದು, 'ಬಿಡಾಡಿ' ಅಂಕಿತದಲ್ಲಿ ಕೆಲವು ವಚನಗಳನ್ನು ರಚಿಸಿದ್ದಾಳೆ. ಸೋಮನಾಥಪುರಾಣ, ಭೈರವೇಶ್ವರಕಾವ್ಯದ ಕಥಾಮಣಿ ಸೂತ್ರರತ್ನಾಕರ, ಚೆನ್ನಬಸವಪುರಾಣ ಮೊದಲಾದ ಕಾವ್ಯಗಳಲ್ಲಿ ಇವಳ ವಿಚಾರ ಉಕ್ತವಾಗಿದೆ.

ಬೊಂತಾದೇವಿಯಂತೆ ಮೋಳಿಗೆ ಮಹಾದೇವಿಯೂ ಕೂಡ ಕಾಶ್ಮೀರದಿಂದ ಬಂದವಳು. ಅರಸಿಯಾಗಿದ್ದ ಇವಳು ವೈರಾಗ್ಯತಾಳಿ, ಸಾಮಾನ್ಯರಂತೆ ಜೀವನ ನಡೆಸಿ ಪತಿ ಮೋಳಿಗೆಮಾರಯ್ಯನೊಡನೆ ಕಲ್ಯಾಣಕ್ಕೆ ಬಂದಿರುತ್ತಾಳೆ. ಬಸವಣ್ಣನು ಈ ದಂಪತಿಗಳನ್ನು ಪರೀಕ್ಷಿಸಿ ಇವರ ದಾಸೋಹನಿಷ್ಠೆ, ನಿರಪೇಕ್ಷ ಭಾವವನ್ನು ಕಂಡು ಗೌರವದಿಂದ ಇರಿಸಿಕೊಳ್ಳುತ್ತಾನೆ. ಮೋಳಿಗೆ ಮಹಾದೇವಿಯು 'ಎನ್ನಯ್ಯ ಪ್ರಿಯ ನಿಃಕಳಂಕ ಮಲ್ಲಿಕಾರ್ಜುನ' ಎಂಬ ಅಂಕಿತದಲ್ಲಿ ರಚಿಸಿರುವ ಸುಮಾರು ೬೯ ವಚನಗಳು ದೊರಕಿವೆ[೧೯]. ಇವಳನ್ನು ಉಲ್ಲೇಖಿಸಿರುವ ಇತರ ವಚನಕಾರರು 'ರಾಣಿ ಮಹಾದೇವಿ' ಎಂದೇ ಸಂಬೋಧಿಸಿದ್ದಾರೆ. ಅರಮನೆಯನ್ನು ತೊರೆದು ಬಂದಿದ್ದರೂ ಇವಳು ರಾಣಿಯೆಂದೇ ಗುರುತಿಸಿಕೊಳ್ಳುತ್ತಿದ್ದಳು. ಇವಳ ಕೆಲವೊಂದು ವಚನಗಳು ತನ್ನ ಪತಿಗೆ ಆಧ್ಯಾತ್ಮದ ಸ್ವರೂಪವನ್ನು ವಿವರಿಸಿರುವ ಪರಿಯನ್ನು ತಿಳಿಸುತ್ತದೆ. ಇವಳು ಜ್ಞಾನಿಯಾದರೂ ಸೌಜನ್ಯಯುತವಾದ ನಡವಳಿಕೆ ಇವಳ ವಚನಗಳಲ್ಲಿ ವೇದ್ಯವಾಗುತ್ತದೆ.

> **ಪೂಜಿಸಿ ಕಂಡಿಹೆನೆಂದೊಡೆ ಪೂಜೆಗೆ ತನ್ನಯ ಮೂರ್ತಿ ನೀನು**
> **ನೆನಹಿನಲ್ಲಿ ಆತುರಿಸಿ ಕಂಡಿಹೆನೆಂದೊಡೆ ಆ ನೆನಹಿಂಗೆ ಆತ್ಮಸ್ವರೂಪ ನೀನು**
> **ಎಲ್ಲ ಎಡೆಯಲ್ಲಿ ಭಿನ್ನವ ಮಾಡಿ ಕಂಡಿಹೆನೆಂದೊಡೆ ಅಣೋರಣೀಯಾ಼ನ್ ಮಹತೋ ಮಹೀಯ ನೀನು**
> **ಸತ್ಯವೆಲ್ಲಿದ್ದಿತ್ತು ಅಲ್ಲಿ ತಪ್ಪದಿಪ್ಪೆ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನು ವಿಶ್ವಾಸವೆಲ್ಲಿಪ್ಪುದಲ್ಲಿ ತಪ್ಪದಿಪ್ಪನು॥**
>
> **ಸಂಸಾರ ಸಾಗರದಿಂದುದಿಸಿದ ಸುಖವೆ ದುಃಖವೆಂದರಿಯದೆ ಆ ಸುಖವನೆ ಮೆಚ್ಚಿ ಭವದುಃಖವೆಂಬ ಕ್ರೂರ ಜನ್ಮಚಕ್ರಕ್ಕೀಡಾಗಿ ಅಲ್ಲಿ ತನ್ನ ಮಱೆದು ತನಗಿಲ್ಲದ ಭ್ರಮೆಯ ತನ್ನದೆಂದು ಅಂತಪ್ಪ ಘೋರದೊಳಗೋಲಾಡುತಿಪ್ಪ ಮುಟುಗಾಡುತಿಪ್ಪ ಅಜ್ಞಾನಿ ಜೀವಿಗಳು ನಿಮ್ಮ ನ್ನೆತ್ತ ಬಲ್ಲರಯ್ಯ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ ॥**

ಕನ್ನಡ ಸಾಹಿತ್ಯಕ್ಕೆ ವಿಶೇಷ ಸ್ಥಾನವನ್ನು ತಂದುಕೊಟ್ಟಿರುವ ವಚನ ಸಾಹಿತ್ಯ ಪ್ರಕಾರಕ್ಕೆ ರಾಜಮನೆತನದ ಮಹಿಳೆಯರ ಕೊಡುಗೆ ಇದೆ ಎನ್ನುವುದನ್ನು ಈ ಮೇಲಿನ ಕೆಲವು ವಿಚಾರಗಳು ಸ್ಪಷ್ಟಪಡಿಸುತ್ತವೆ. ಅನುಕೂಲ

ಪರಿಸ್ಥಿತಿಯಲ್ಲಿ ಬೆಳೆದ ಈ ಮಹಿಳೆಯರು ಉತ್ತಮ ವಿದ್ಯಾಭ್ಯಾಸವನ್ನು ಹೊಂದಿದವರಾಗಿದ್ದರು. ಉತ್ತಮ ಸಂಸ್ಕಾರವನ್ನು ಹೊಂದಿದ್ದ ಈ ಮಹಿಳೆಯರು ಪುರುಷ ಪ್ರಧಾನ ಸಮಾಜದಲ್ಲಿ ತಮ್ಮನ್ನು ವಿಶಿಷ್ಟ ರೀತಿಯಿಂದ ಗುರುತಿಸಿಕೊಳ್ಳುವ ಯತ್ನವನ್ನು ಮಾಡಿದ್ದಾರೆ. ಸರ್ವರಿಗೂ ಮುಕ್ತ ಪ್ರವೇಶವಿದ್ದ ಅನುಭವಮಂಟಪವನ್ನು ಪ್ರವೇಶಿಸಿ ಸಾಮಾನ್ಯ ಮಹಿಳೆಯರಿಗೆ ಅನುಕರಣೀಯರೆನಿಸಿವರು.

ಈ ವಚನಕಾರ್ತಿಯರು ಅರಸುಮನೆತನದವರಾದರೂ ಸಾಮಾನ್ಯರಂತಿದ್ದು, ಸಾಮಾನ್ಯ ಜನತೆಯನ್ನು ಕಡಿಮೆ ಅಂತರದಿಂದ ಬಲ್ಲವರಾಗಿದ್ದರು. ಹಾಗಾಗಿ ಇವರ ವಚನಗಳಲ್ಲಿ ಜನಪರ ಆಶಯಗಳು, ಸಾಮಾಜಿಕ ಕಳಕಳಿಗಳು ಹೆಚ್ಚಾಗಿ ಕಂಡುಬಂದು, ಒಂದು ಕಾಲಘಟ್ಟದ ವಿಚಾರಗಳನ್ನು ವಿವಿಧ ಆಯಾಮಗಳಲ್ಲಿ ತೋರಿಸಿಕೊಡುತ್ತವೆ.

**ಸಾಳ್ವ ಅರಸಿ ನಾಗಲದೇವಿ (ಚಂಪು ಪ್ರಕಾರ)**

ನಾಗಲದೇವಿಯು ಗೇರುಸೊಪ್ಪೆಯ ಸಾಳ್ವಮನೆತನದ ಭೈರವರಸನ ರಾಣಿ. ಹದಿನೈದನೆಯ ಶತಮಾನದಲ್ಲಿ ಚಂಪು ಪ್ರಕಾರದಲ್ಲಿ ಕಾವ್ಯ ರಚಿಸಿದ ಏಕೈಕ ಕನ್ನಡ ಕವಯತ್ರಿ. ಅರಸಿ ನಾಗಲದೇವಿಯು ಮೂಡಬಿದಿರೆಯ ತ್ರಿಭುವನ ಚೂಡಾಮಣಿ ಬಸದಿಯ ಮುಂದಿನ ಮಾನಸ್ತಂಭ ಹಾಗೂ ಮುಖಮಂಟಪಗಳನ್ನು ಮಾಡಿಸಿದಳೆಂಬ ವಿಷಯವನ್ನು ಮೂಡಬಿದಿರೆಯ ಶಾಸನಗಳು ತಿಳಿಸುತ್ತವೆ[೨೦]. ಈ ಶಾಸನಗಳಿಂದ ಇವಳ ಕೆಲವು ವೈಯಕ್ತಿಕ ವಿಚಾರಗಳು ತಿಳಿದು ಬರುತ್ತವೆ.

ಇವಳು ತಿಳುವಳ್ಳಿ ಪುರವರಾಧೀಶನಾದ ತಾಯಪ್ಪರಸನ ಸಹೋದರಿ ಬೊಮ್ಮರಸಿಯ ಮಗಳು. ಹಾಗೂ ಕ್ರಿ.ಶ.೧೪೩೧–೬೨ರ ವರೆಗೆ ನಗಿರೆನಾಡನ್ನು ಆಳಿದ ಸಾಳ್ವ ದೊರೆ ಭೈರವರಾಯನ (ಭೈರವೇಂದ್ರ) ಅರಸಿ.

'ಸಾಳ್ವಭಾರತ' ರಚಿಸಿದ ಕವಿ ಸಾಳ್ವನು ತನ್ನ ಕೃತಿಯಲ್ಲಿ ನಾಗಲದೇವಿಯನ್ನು ಈ ಪ್ರಕಾರವಾಗಿ ಸ್ತುತಿಸಿದ್ದಾನೆ.

**ಖ್ಯಾತೆ ಪಟ್ಟದರಾಣಿಯಭಿನವ**
**ಸೀತೆಯೆನಿಸಿದ ನಾಗಲಾಂಬಿಕೆ**
**ಯಾತನೂಭವ ನವಮನೋಭವ ಸಂಗನೃಪವೆರಸೆ**
**ಪ್ರೀತಿಯಿಂ ಪಲಕಾಲವಾ ರಘು**
**ಜಾತನೆನೆ ಧರ್ಮಾರ್ಥ ಕಾಮವ**
**ನೋತು ಸಾಧಿಸಿ ಭೈರವೇಶ್ವರನರಸುಗೆಯದನದಾ॥ (ಸಾಳ್ವಭಾರತ)**

ಮೂಡುಬಿದಿರೆಯ ಶಾಸನವು ನಾಗಲದೇವಿಯನ್ನು ಕುರಿತು ಈ ರೀತಿಯಾಗಿ ಹೊಗಳಿದೆ:

**ದ್ವಿಗುಣಂ ಭಾರತಿಯಿಂದ ಸತ್ಕಳೆಯೊಳಂ ಸೌಭಾಗ್ಯದಿಂ ಗೌರಿಯಿಂ**
**ತ್ರಿಗುಣಂ ಸಚ್ಚರಿತಕ್ಕೆ ರೇವತಿಯೊಳಂ ಚಾತುರ್ಗುಣಂ ದೇವಪೂ**
**ಜೆಗಮಿಂದ್ರಾಣಿಗೆ ತಾನದೈವಡಿ ಮಿಗಿಲ್ಸತ್ಪಾತ್ರದಾನಕ್ಕಮಾ**
**ವಗ ಸಾದೃಶ್ಯರ ಕಾಣೆ ನಾನಿಳೆಯೊಳಂ ಶ್ರೀ ನಾಗಲದೇವಿಗಂ**

ಪುರಾಣದ ಭಾರತಿ, ಗೌರಿ, ರೇವತಿ, ಇಂದ್ರಾಣಿಯರಿಗೆ ಹೋಲಿಸಿ ನಾಗಲದೇವಿಗೆ ಸಾದೃಶ್ಯರಾದವರನ್ನು ಹೋಲಿಕೆಯಾಗುವವರನ್ನು ಈ ಭೂಮಿಯಮೇಲೆ ಮತ್ತ್ಯಾರನ್ನೂ ಕಾಣಲು ಸಾಧ್ಯವಿಲ್ಲವೆಂದು ಹೊಗಳಿದೆ.

ಮೂಡುಬಿದಿರೆಯ ಬಸದಿಯಲ್ಲಿ ನಾಗಲದೇವಿಯು ಮಾಡಿಸಿದ ಧರ್ಮಕಾರ್ಯವನ್ನು ಕುರಿತು ಶಾಸನವು ಈ ರೀತಿಯಾಗಿ ತಿಳಿಸಿದೆ **ಭೈರವಾಧೀಶ್ವರನ ಪಟ್ಟದರಸಿ ನಾಗಲದೇವಿ ಮಾಡಿಸಿದ ಧರ್ಮಮೆಂತೆಂದೊಡೆ ॥ ಭೂನಾಥಾಧಿಕ**

**ಭೈರವಾಧಿಪ ಮಹಾದೇವೀ ಪದಪ್ರಾಪ್ತಿಯುಂ ಜ್ಞಾನಂ ನಾಗಲದೇವಿಯೊಳ್ನೆಲಸಿರಲ್ಸೌಭಾಗ್ಯಮುಂ ಭಾಗ್ಯಮುಂ ದಾನೇಜ್ಞಾವಿಧಿಶೀಲೆ ಶೀಲವತಿ ಯಂತೊಪ್ಪಿಪ್ಪಳಾರಾಜ್ಞೆ ತಾಂ ಮಾನಸ್ತಂಭಮನೊಲ್ದು ಮಾಡಿಸಿದಳೀ ಶ್ರೀ ಚೈತ್ಯಗೇಹಾಗ್ರದೊಳ್ ॥**

ವಿದ್ಯೆ–ಐಶ್ವರ್ಯ ಎರಡನ್ನೂ ಹೊಂದಿದ್ದ ಅರಸಿಯು, ಜಿನಾಲಯದ ಮುಂದಿನ ಮಾನಸ್ತಂಭವನ್ನು ಮಾಡಿಸಿದಳೆಂದು ಹೊಗಳುತ್ತಾ ಶಾಸ'ನದ ಈ ಸಾಲು ನಾಗಲದೇವಿಯಲ್ಲಿ ಜ್ಞಾನವೂ ಸೌಭಾಗ್ಯವೂ ನೆಲೆಸಿದೆಯೆಂದು ಕೀರ್ತಿಸಿದೆ.

**ಮಾನಾನೂನಮದೆಭ್ರಮಭ್ರಪಥಮಂ ಮೀಜೆತ್ತಿದಯ್ಯಯ್ಯ ತದ್ಧಾನುಸ್ಥಾನಮೆನೆಯ್ದಿ ದತ್ತ ಮದುಚಲ್ಯೋಹೋಯೆನಲ್ತತ್ಪರಿ ಜ್ಞಾನರ್ನ್ನಾಗಲದೇವಿ ಮಾಡಿಸಿದಳತ್ಯಾಶ್ಚರ್ಯ್ಯಮಪ್ಪಂದದಿಂ ಮಾನಸ್ತಂಭಮನೆಂದಡೇ ವೊಗಳ್ವನಾಪುಣ್ಯಾಂಗನಾ ಪುಣ್ಯಮಂ**

**ಮನಸಿಜ ಜಯದೊಳ್ನಿಲಿಸಿದ ಜಿನನ ಜಯಸ್ತಂಭದಂತೆ ಜಿನಸನ್ನಿಧಿಯೊಳ್ ಘನತರಮಾನಸ್ತಂಭಂ ಜನನುತ ನಾಗರಸಿಯಿಂದೆ ಕಾರಿತಮೆಸೆಗುಂ ॥**

ಮನ್ಮಥನು ಜಯದಿಂದ ಜಿನನ ಮುಂದೆ ಜಯಸ್ತಂಭವನ್ನು ನಿಲ್ಲಿಸಿದಂತೆ ಜಿನಸನ್ನಿಧಿಯಲ್ಲಿ ನಾಗರಸಿಯು ಘನತರವಾದ ಮಾನಸ್ತಂಭವನ್ನು ನಿಲ್ಲಿಸಿದಳು ಎಂದು ಬಣ್ಣಿಸಿರುವ ಈ ಸಾಲು ಜನನುತೆ ನಾಗರಸಿ ಎಂದು ತನ್ನ ಪ್ರಜೆಗಳ ಮನವನ್ನು ಗೆದ್ದ ಅರಸಿಯ ಕೀರ್ತಿಯನ್ನು ತಿಳಿಸಿದೆ.

**ಕಾವ್ಯವಸ್ತು:** ನಾಗಲಾಂಬೆ ರಚಿಸಿರುವ 'ಷೋಡಶಭಾವನೆಯ ನೋಂಪು' ಚಂಪೂ ಪ್ರಕಾರದ ಕೃತಿಯಾಗಿದೆ. ಪಂಪನ ಆದಿಪುರಾಣ, ರನ್ನನ ಅಜಿತ ತೀರ್ಥಂಕರ ಪುರಾಣ ಮೊದಲಾದ ಕಾವ್ಯಗಳಲ್ಲಿಯೂ ಜೈನಾಗಮಶಾಸ್ತ್ರಗ್ರಂಥಗಳಲ್ಲಿಯೂ ಪ್ರಾಸ್ತಾವಿಕವಾಗಿ ಬಂದಿರುವ ಷೋಡಷಭಾವನೆಯ ನೋಂಪನ್ನು ಕುರಿತಂತೆ ನಾಗಲದೇವಿಯು ಪ್ರತ್ಯೇಕವಾದ ಪುಟ್ಟ ಕಾವ್ಯವನ್ನಾಗಿ ರಚಿಸಿದ್ದಾಳೆ. ತೀರ್ಥಂಕರ ನಾಮಕರ್ಮ ಉದಯವಾಗಲು ಕಾರಣವಾದ ಈ ೧೬ ಭಾವನೆಗಳ ಸಂಬಂಧ ವ್ರತಕಥೆಗಳು ಪ್ರಾಕೃತ, ಸಂಸ್ಕೃತ ಕನ್ನಡ ಭಾಷೆಗಳಲ್ಲಿ ರಚಿತವಾಗಿವೆ. ಹೀಗೆ ರಚಿತವಾಗಿರುವ ಹಲವಾರು ನೋಪಿಯ ಕಥೆಗಳಲ್ಲಿ **"ಷೋಡಶಭಾವನೆ ಕಾವ್ಯ ಉತ್ಕೃಷ್ಟವಾಗಿದೆ"**[೨೧]

ಜೀವಂಧರ ತೀರ್ಥಂಕರರ ಹಿಂದಿನ ಭವಾವಳಿ ಹಾಗೂ ತೀರ್ಥಂಕರ ಭವದ ಪಂಚಕಲ್ಯಾಣಗಳ ವಿಚಾರವನ್ನೊಳಗೊಂಡ ಈ ಕಾವ್ಯವು ಬಹಳ ಸಂಕ್ಷಿಪ್ತವಾಗಿ ರಚಿತವಾಗಿದೆ. ಎಲ್ಲಿಯೂ ಬೇಸರ ತರಿಸದ ರೀತಿಯಲ್ಲಿ ಕಥೆ ಓಡುತ್ತಾ ಸಾಗಿದೆ. ಕೆಲವೊಮ್ಮೆ ಕಥೆ ಹೇಳುವುದಷ್ಟೇ ಕವಯತ್ರಿಗೆ ಮುಖ್ಯವಾಗಿದೆ ಎನಿಸುತ್ತದೆ. ವರ್ಣನೆಗಳ ಕಡೆಗೆ ಹೆಚ್ಚು ಗಮನ ಹರಿಸಿಲ್ಲದಿರುವುದು ಇವಳ ಧಾರ್ಮಿಕ ಮನೋಭಾವನೆ ಕಾರಣವಿರಬಹುದು.

ಕವಯತ್ರಿಯು ಈ ಕಾವ್ಯವನ್ನು ಯಾವುದೇ ರೀತಿಯಲ್ಲಿ ವಿಂಗಡಿಸಿಲ್ಲ. ಇಲ್ಲಿ ಸರ್ಗ, ಅಧ್ಯಾಯ ಯಾವುದೇ ರೀತಿಯ ಪರಿಚ್ಛೇದಗಳಿಲ್ಲ. ಆದರೆ ಕಾವ್ಯದ ವಸ್ತುವನ್ನಾದರಿಸಿ ಸಂಪಾದಕರಾದ ಕಮಲಾ ಹಂಪನಾ ಅವರು ಇದನ್ನು ನಾಲ್ಕು ಭಾಗಗಳನ್ನಾಗಿ ವಿಂಗಡಿಸಿದ್ದಾರೆ. ಮೊದಲ ಭಾಗದಲ್ಲಿ ಜೀವಂಧರ ತೀರ್ಥಂಕರರ ಹಿಂದಿನ ಭವಾವಳಿ, ಆ ಒಂದು ಭವದಲ್ಲಿ ಮಾಡಿದ ಹೀನಕಾರ್ಯದ ಪಾಪ ಫಲವನ್ನನುಭವಿಸುವ ಮುಂದಿನ ಹೀನ ಜನ್ಮಗಳು ಹಾಗೂ ಚಾರಣಮುನಿಗಳ ಹಿತೋಪದೇಶಗಳ ವಿಚಾರವನ್ನು ಕಾಣಬಹುದು.

ಎರಡನೆಯ ಭಾಗದಲ್ಲಿ ಮಾಡಿದ ಪಾಪಕರ್ಮಗಳನ್ನನುಭವಿಸುವ ಭವದಲ್ಲಿ ಪಶ್ಚಾತಾಪದ ಭಾವನೆಗಳು ಹಾಗೂ ಪ್ರಾಯಶ್ಚಿತ್ತದ ಮಾರ್ಗಗಳ ವಿಚಾರವಿದೆ. ಇಲ್ಲಿ 'ಷೋಡಶಭಾವನೆ' ನೋಂಪಿಯ ಆಚರಣೆ, ವಿಧಿ–ವಿಧಾನಗಳನ್ನು ಕವಯತ್ರಿಯು ವಿವರವಾಗಿ ತಿಳಿಸಿಕೊಟ್ಟಿದ್ದಾಳೆ.

ಮೂರನೆಯ ಭಾಗದಲ್ಲಿ ಚಂಡಕುಮಾರಿಯು 'ಷೋಡಶಭಾವನೆ'ಯ ನೋಂಪಿಯ ಆಚರಣೆಯಿಂದ ಪಾಪಕರ್ಮ ಕಳೆದುಕೊಳ್ಳುವ ಪರಿಯನ್ನು ತಿಳಿಸಿದೆ. ಪಾಪಕಾಳಿಕೆಯಿಂದ ಹೊರಬಂದು, ಮಹರ್ಧಿಕ ದೇವನಾಗಿ ಹುಟ್ಟಿ, ಸ್ವರ್ಗವಾಸದಲ್ಲಿ ವೈಭವೋಪೇತ ಸಂಸಾರಸುಖವನ್ನು ಭವಿಸುವ ವಿವರಗಳಿವೆ.

ನಾಲ್ಕನೆಯ ಹಾಗೂ ಕಡೆಯ ಭಾಗದಲ್ಲಿ ತೀರ್ಥಂಕರತ್ವ ಪಡೆಯುವ ಕಟ್ಟಕಡೆಯ ಭವದ ವಿಚಾರವನ್ನು ಕಾಣಬಹುದು. ಇಲ್ಲಿ ಪಂಚಕಲ್ಯಾಣದ ವಿವರಣೆಗಳು ಸೊಗಸಾಗಿ ಮೂಡಿಬಂದಿವೆ.

ವರ್ಣನೆಗೆ ಸಾಕಷ್ಟು ಅವಕಾಶಗಳಿದ್ದರೂ, ಕವಯತ್ರಿಯು ಇದನ್ನೊಂದು ವಸ್ತುಕಕಾವ್ಯವನ್ನಾಗಿಸಿದ್ದಾಳೆ. ಕಾವ್ಯವನ್ನೋದಿದವರಿಗೆ "ಇವಳು ವಿಸ್ತಾರಪ್ರಿಯಳಲ್ಲ" ಎಂಬ ಕಮಲಾಹಂಪನಾ ಅವರ ಮಾತು ಮನವರಿಕೆಯಾಗುತ್ತದೆ. "ಪುಟಗಟ್ಟಲೆ ವರ್ಣಿಸಬಹುದಾದ ಅನೇಕ ಗಣನೀಯ ವಿವರ್ಗಳನ್ನೆಲ್ಲ ಪುಟ್ಟ ಕಥೆಯಲ್ಲಿ ಹಾಸುಹೊಕ್ಕಾಗಿ ನೆಯ್ದಿರುವ ಕವಯತ್ರಿಯ ಸಂಗ್ರಹಕಲೆ ಪರಿಭಾವನಾರ್ಹವಾದುದಾಗಿದೆ."[೨೨]

ನಾಗಲಾದೇವಿಯು ತನ್ನ ಕೃತಿಯಲ್ಲಿ ಜೀವಂಧರ ತೀರ್ಥಂಕರನ ಹಿಂದಿನ ನಾಲ್ಕು ಭವಗಳ ಭವಾವಳಿಗಳಲ್ಲಿ ಮೂರನ್ನು ಮಾತ್ರ ನಿರೂಪಿಸಿ, ಶ್ರೀಪಾಲ ಭವದ ವಿಚಾರವನ್ನು ಕೈಬಿಟ್ಟಿದ್ದಾಳೆ.

**ವರ್ಣನೆ:** ಪಂಚಕಲ್ಯಾಣಗಳ ವರ್ಣನೆಯಲ್ಲಿ ಪಂಪನ ಪ್ರಭಾವವನ್ನು ಗುರುತಿಸಬಹುದು. ಪಂಪನ ಆದಿಪುರಾಣದಲ್ಲಿ ಶಚಿದೇವಿಯು ಸೂಕ್ಷ್ಮ ಶರೀರೆಯಾಗಿ ಮರುದೇವಿಯ ಪ್ರಸೂತಿ ಗೃಹವನ್ನು ಹೊಕ್ಕು ಮಾಯಾ ಶಿಶುವನ್ನು ಅವಳ ಪಕ್ಕದಲ್ಲಿರಿಸಿ ಜಿನನಾಗಲಿರುವ ಶಿಶುವನ್ನು ಕೈಗೆತ್ತಿಕೊಂಡ ವರ್ಣನೆ ಯಥಾವತ್ತಾಗಿ ನಾಗಲದೇವಿಯು ತಂದಿದ್ದಾಳೆ. ಈ ಸಂದರ್ಭದಲ್ಲಿನ ಪಂಪನ ಪದ್ಯವೊಂದು:

**ಪಡೆಯಲ್ಕಾಗದ ನಿಧಿಯಂ । ಬಡವಂ ಪಡೆವಂತೆ ಕಮಳದಳಕರತಳದಿಂ**
**ಪಿಡಿದೆತ್ತಿಕೊಂಡ ಸಂತಸ । ದೊಡಮೆಯನಾಂ ಪೊಗಟಲಱಿಯೆನಿಂದ್ರಾಂಗನೆಯಾ ॥**

ಎಂಬ ಕಂದಪದ್ಯವನ್ನು ನಾಗಲದೇವಿಯು ಬಳಸಿಕೊಂಡಿದ್ದಾಳೆ. ಶಚಿದೇವಿಯು ಮಗುವನ್ನು ತಂದು ದೇವೇಂದ್ರನ ಕೈಯೊಳಿಟ್ಟಾಗ "ಸಹಸ್ರ ಲೋಚನನಾದಂ...." ಎಂಬ ಬಣ್ಣನೆಯೂ ಪಂಪನದೇ ಆಗಿದೆ.

ಜನ್ಮಾಭಿಷೇಕದಲ್ಲಿ ಇಂದ್ರನ ಐರಾವತವು "ತಾನುಮಾಸನ್ಯ ಭವ್ಯನಪ್ಪುದರಿಂದ ತ್ರಿಲೋಕಸ್ವಾಮಿಯ ಸೇವೆಯಂ ಮಾಳ್ಪ ಸುಕೃತದಿಂದ... ನಲಿವುದು" ಐರಾವತದ ದಂತದಮೇಲೆ ಸಾವಿರಾರು ದಿವಿಜಸ್ತ್ರೀಯರು ಆನಂದದಿಂದ ನರ್ತನಮಾಡುವ ವಿವರಣೆಗಳಲ್ಲೆಲ್ಲಾ ಪಂಪನ ಪಡಿಯಚ್ಚನ್ನು ಕಾಣಬಹುದು.

ಕವಯತ್ರಿಯು ಶಬ್ದಾಡಂಬರಗಳಿಲ್ಲದ ಸರಳ ಭಾಷೆಯನ್ನು ಬಳಸಿದ್ದಾಳೆ. ಗದ್ಯದಲ್ಲಿರಬೇಕಾದ ಕೆಲವು ಅಲಂಕಾರಗಳನ್ನು ಸಮಯೋಚಿತವಾಗಿ ತಂದಿದ್ದಾಳೆ. "ಜರೆಯೆಂಬ ರಕ್ಕಸಿ ಜವ್ವನಮಂ ತಿನ್ನಳನ್ನೆವರಂ", "ಮೃತ್ಯು ವ್ಯಾಘ್ರಂ ಪ್ರಾಣಮನಪಹರಿಸದಂದು" ಎಂಬ ಉಪಮೆಯನ್ನು ರೂಪಕಗಳನ್ನೂ ಇಲ್ಲಿ ಕಾಣಬಹುದು

ಇವಳ ಕಾವ್ಯಮಯ ಗದ್ಯದ ಶೈಲಿಗೆ ಈ ಕೆಲವೊಂದು ಸಾಲುಗಳನ್ನು ಗಮನಿಸಬಹುದು "ಪದ್ಮಾಕರಮೆಂತು ಜಲಮಿಲ್ಲದೆ ಕಮಲಂಗಳಂ ಪಡೆಯದಂತು ಗುರುವಿಲ್ಲದೆ ಭವ್ಯಾತ್ಮನಪ್ಪ ಶಿಷ್ಯನೊಪ್ಪಲರಿಯಂ" – ನೀರಿಲ್ಲದೆ ಕಮಲದ ಹೂಗಳನ್ನು ಪಡೆಯಲು ಹೇಗೆ ಸಾಧ್ಯವಿಲ್ಲವೋ ಹಾಗೇ ಗುರುವಿಲ್ಲದೆ ಭವ್ಯಾತ್ಮನಾದ ಶಿಷ್ಯನಾಗಲು ಸಾಧ್ಯವಿಲ್ಲ.

"ಚಂದ್ರನಿಲ್ಲದ ರಾತ್ರಿಯೆಂತು ಸೂರ್ಯನಿಲ್ಲದ ದಿವಸಮೆಂತು ಮತ್ತಂ ಪುಣ್ಯದಿಂ ಪೃಥ್ವೀಪತಿಯೆಂತು ಶೀಲದಿಂ ಪ್ರಮದಾಜನಮೆಂತು ಗುರುವಿಂದಲ್ಲದೆ ಶಿಷ್ಯನೊಪ್ಪಲರಿಯನು"

ನಾಗಲದೇವಿಯು ಈ ಕೃತಿಯನ್ನು ಚಂಪೂ ಶೈಲಿಯಲ್ಲಿ ರಚಿಸಿರುವಳಾದರೂ, ಇದರಲ್ಲಿ ಗದ್ಯವೇ ಹೇರಳವಾಗಿದೆ. ಆರಂಭದಲ್ಲಿ ಜಿನ ಹಾಗೂ ಸರಸ್ವತಿಯರನ್ನು ಎರಡು ಕಂದಪದ್ಯಗಳಲ್ಲಿ ಸ್ತುತಿಸಿದ್ದಾಳೆ. ಪಂಚಕಲ್ಯಾಣವನ್ನು ವಿವರಿಸುವ ಪದ್ಯವನ್ನು ವೃತ್ತದಲ್ಲಿ ರಚಿಸಿರುವ ಕಯವತ್ರಿಯು ಇಡೀ ಕಾವ್ಯದಲ್ಲಿ ಒಟ್ಟು ೧೧ ಕಂದಪದ್ಯಗಳನ್ನಷ್ಟೇ

ತಂದಿದ್ದಾಳೆ. ಇವಳ ಪದ್ಯರಚನೆಯನ್ನು ಗಮನಿಸಿದರೆ ಇವಳ ಕವಿತಾ ಸಾಮರ್ಥ್ಯದ ಅರಿವು ಉಂಟಾಗುತ್ತದೆ. ಆದರೆ ಕಾವ್ಯದಲ್ಲಿ ಷೋಡಶಭಾವನಾ ನೋಂಪಿನ ವಿವರಣೆಗಳನ್ನು ತಿಳಿಸುವಲ್ಲಿ, ಮಂತ್ರಗಳ ಪ್ರಾಮುಖ್ಯತೆಯನ್ನು ಮನದಟ್ಟು ಮಾಡಿಸುವಲ್ಲಿ ಕವಯತ್ರಿಗೆ ಗದ್ಯವೇ ಸೂಕ್ತವೆಂದೆನಿಸಿರಬಹುದು.

ಅಂತ್ಯದ ಐದು ಕಂದಪದ್ಯಗಳನ್ನು ನಾಗಲದೇವಿಯು ರಚಿಸಿದಂತೆ ತೋರುವುದಿಲ್ಲ. ಇಲ್ಲಿ "ನಾಗಲದೇವಿ ಮಹಾವಿನೆಯಾನ್ವಿತೆ ಷೋಡಶಾಖ್ಯ ಕಾರಣ ವಿಧೇಯಂ" ಎಂಬ ಸಾಲುಗಳು ಹಾಗೂ "ಭವ್ಯರ ಮನದಾಜ್ಞಾನತಮೋ ಹರಣಮನಾಗಿಸಿದಳೇಂ ವಿದಗ್ಧೆಯೊ ಜಗದೊಳ್" ಎಂಬ ಸಾಲುಗಳಲ್ಲಿ, ಈ ಕಾವ್ಯವನ್ನು ಪರಿಶೀಲಿಸಿದವರಾರೋ ಇದರ ಕುರಿತಾದ ತಮ್ಮ ಅಭಿಪ್ರಾಯವನ್ನಿಲ್ಲಿ ಹೇಳಿರಬಹುದು ಎನಿಸುವಂತಿದೆ.

ಹಂಪಿ ಕನ್ನಡ ವಿಶ್ವವಿದ್ಯಾಲಯ ಪ್ರಕಟಣೆಯಲ್ಲಿ ಹೊರಬಂದ 'ನೋಂಪಿಯ ಕಥೆಗಳು' ಕೃತಿಯಲ್ಲಿ ನಾಗಲದೇವಿ ವಿರಚಿತ 'ಷೋಡಶಭಾವನಾ ಕಾವ್ಯ'ವನ್ನು ಮೊತ್ತಮೊದಲಿಗೆ ೨೦೦೧ರಲ್ಲಿ ಹಂಪ.ನಾ ಅವರು ಸಂಪಾದಿಸಿ ಹೊರತಂದರು. ಶ್ರವಣಬೆಳಗೊಳದ ಜೈನಧ್ಯಯನ ಸಂಸ್ಥೆಯಿಂದ ೨೦೦೪ರಲ್ಲಿ ಈ ಕಾವ್ಯವು ಕಮಲಾ ಹಂಪನಾ ಅವರಿಂದ ಸಂಪಾದನೆಗೊಂಡು ಮರುಮುದ್ರಣಗೊಂಡು ಹೊರಬಂತು.

ಧಾರ್ಮಿಕ ವಿಚಾರಗಳನ್ನು ಕಥೆಯ ಮುಖಾಂತರ ವಿರಚಿಸಿ, ಸರಳ ಭಾಷೆಯಲ್ಲಿ ಸಾಮಾನ್ಯರಿಗೂ ಅರ್ಥವಾಗುವಂತೆ ತಿಳಿಸಿರುವ ನಾಗಲದೇವಿಯು ಸಾಕಷ್ಟು ಗ್ರಂಥಗಳನ್ನು ಅಧ್ಯಯನ ಮಾಡಿದ್ದಳೆಂದು ಈ ಕೃತಿಯಲ್ಲಿ ತಿಳಿದು ಬರುತ್ತದೆ. ಅಲ್ಲದೆ ಪಂಪ ಮೊದಲಾದ ಮಹಾಕವಿಗಳ ಪ್ರಭಾವ ಇಲ್ಲಿ ಗುರುತಿಸಬಹುದು.

ಕಾವ್ಯದ ಶೈಲಿ ಉನ್ನತ ಮಟ್ಟದ್ದಾಗಿರದಿದ್ದರೂ, "ಪರಸುಖಭಾಷಾಮಯಮಂ ಸುರಚಿರ ಕರ್ನಾಟ ಭಾಷೆಯಿಂ ವಿರಚಿಸಿ" ಎಂಬ ಕಾವ್ಯದ ಸಾಲು ನಾಗಲದೇವಿಯ ಕನ್ನಡ ಭಾಷಾ ಪ್ರೇಮವನ್ನು, ಇವಳ ಧಾರ್ಮಿಕ ಮನೋಭಾವದ ಆಶಯವನ್ನು ಎತ್ತಿ ಹಿಡಿಯುತ್ತದೆ.

**ಜಕ್ಕಲಾಂಬೆ (ಸಂಪ್ರಬಂಧ)**

ಹೊಯ್ಸಳರ ಸಾಮಂತರಾಗಿ ಶಿಕಾರಿಪುರದ ಚಿಕ್ಕ ಮಾಗಡಿಯಲ್ಲಿ ಆಳ್ವಿಕೆ ನಡೆಸುತ್ತಿದ್ದ ಮನೆತನದಲ್ಲಿನ ಜಕ್ಕಲಾಂಬೆಯು ಹದಿಮೂರನೆಯ ಶತಮಾನದ ಆರಂಭದ ಕಾಲದಲ್ಲಿದ್ದವಳು. ಇವಳು 'ಗುಣಾಂಕಮಾಲೆ ಚರಿತೆ' ಎಂಬ ಕೃತಿಯನ್ನು ರಚಿಸಿರುವುದಾಗಿ ತಿಳಿದು ಬರುತ್ತದೆ.

ಇವಳ ಜೀವನದ ಕಡೆಯ ದಿನಗಳನ್ನು ಶಿಕಾರಿ ಪುರದ ಶಾಸನವೊಂದು ಕಾವ್ಯಮಯವಾಗಿ ಬಣ್ಣಿಸಿದೆ[೨೩]. ಈ ಶಾಸನವು ವೀರಬಲ್ಲಾಳನ ೨೩ನೆಯ ವರ್ಷದ ಆಳ್ವಿಕೆಯ ಕಾಲದ ಆಂಗೀರಸ ಸಂವತ್ಸರದಲ್ಲಿ ರಚಿತವಾದುದಾಗಿ ಕಾಲ ನಮೂದಿಸಿದೆ. ಹನ್ನೆರಡನೆಯ ಶತಮಾನದ ಉತ್ತರಾರ್ಧ ಹಾಗೂ ೧೩ನೆಯ ಶತಮಾನದ ಆದಿ ಭಾಗದಲ್ಲಿ ಆಳ್ವಿಕೆ ನಡೆಸಿದ ಹೊಯ್ಸಳ ವೀರಬಲ್ಲಾಳನ ಆಳ್ವಿಕೆಯಲ್ಲಿ ಕ್ರಿ.ಶ.೧೨೧೨ರಲ್ಲಿ ಆಂಗೀರಸ ಸಂವತ್ಸರ ಬರುವುದಾದ್ದರಿಂದ ಜಕ್ಕಲಾಂಬೆಯ ಈ ಶಾಸನದ ಕಾಲ ಇದೇ ಆಗಿದೆ.

ಜಕ್ಕಲಾಂಬೆಯು ಬರೆದಿರುವ ಕೃತಿ 'ಚರಿತ್ರ ಗುಣಾಂಕ ಮಾಲೆ'ಯು ಉಪಲಬ್ಧವಿಲ್ಲ. ಆದರೆ ಈ ಕೃತಿಯ ಕುರಿತಾದ ಕೆಲವೊಂದು ಮಾಹಿತಿ ಶಾಸನದಿಂದ ತಿಳಿದು ಬರುತ್ತದೆ.

**ಪರಿಕಿಸಿ ಸದ್ಬುಧರ್ ಪೊಗಳೆ ತನ್ನ ಚರಿತ್ರ ಗುಣಾಂಕ ಮಾಲೆಯಂ**
**ವಿರಚಿಸಿ ಸುಪ್ರಬನ್ಧಮೆನೆ ದಿಕ್ಕುಳ ಭಿತ್ತಿ ಗಳೊಳ್ತೆರಳ್ಚಿ ಮುಂ**
**ಬರೆದುದನೀಗಳಾ ದಿವಿಜಲೋಕದೊಳೊಪ್ಪುವ ಲೇಖಜಾಳದೊ**
**ಳ್ಬರೆಯಿದೆನೆನ್ದು ಜಕ್ಕಲೆ ಮಹಾಸತಿಯೇ ಜಿದಳಲ್ತೆ ಸಗ್ಗಮಂ ॥**

ಇವಳ ಈ ಕಾವ್ಯವನ್ನು ವಿದ್ವಾಂಸರು ಪರಾಮರ್ಶಿಸಿ ಹೊಗಳಿದರೆಂದು ಶಾಸನ ಕವಿಯ ಈ ಮೇಲಿನ ಪದ್ಯದಿಂದ ತಿಳಿದು ಬರುತ್ತದೆ. ಅಲ್ಲದೆ ಇವಳ ಕಾವ್ಯವನ್ನಿಲ್ಲಿ ಸಂಪ್ರಬಂಧವೆಂದು ಕರೆಯಲಾಗಿದೆ. ಪ್ರಬಂಧ ಎಂಬುದು ಆಧ್ಯಾತ್ಮಕ್ಕೆ ಸಂಬಂಧಿಸಿದ ಗ್ರಂಥವಾಗಿದೆ ಅಲ್ಲದೆ "ಸಂಗೀತಕ್ಕೆ ಅಳವಟ್ಟ ಆಧ್ಯಾತ್ಮಿಕ ವಿಚಾರವನ್ನು ಸಂಪ್ರಬಂಧ ಎಂದು ಕರೆಯಲಾಗುತ್ತದೆ"[೨೪] ಎಂಬ ಅರ್ಥದಲ್ಲಿ ನೋಡಿದಾಗ ಜಕ್ಕಲೆಯು ಸಂಗೀತ–ಸಾಹಿತ್ಯಗಳನ್ನು ಬಲ್ಲವಳಾಗಿದ್ದಳೆನ್ನುವುದು ತಿಳಿದು ಬರುತ್ತದೆ. ಇವಳ ಈ ಕೃತಿಯು ಬಹು ಪ್ರಖ್ಯಾತಿ ಪಡೆದಿತ್ತೆನ್ನುವುದು ಶಾಸನದ ಈ ಉಲ್ಲೇಖಗಳಿಂದ ತಿಳಿದು ಬರುತ್ತದೆ.

ಇಂತಹ ಕೃತಿಯನ್ನು ರಚಿಸಿದ ಇವಳ ಜೀವನವೇ ದೇವಲೋಕದ ಲೇಖನಿಯಿಂದ ಬರೆಯ ಬೇಕಾದ ಕಾವ್ಯವಾಯಿತೆಂದು ಇವಳ ಅಂತ್ಯಕಾಲದ ಸಾಧನೆಯನ್ನು ಶಾಸನಕವಿ ಇಲ್ಲಿ ಹೊಗಳಿದ್ದಾನೆ.

ಕಮಲಾ ಹಂಪನಾ ಅವರು ಜಕ್ಕಲಾಂಬೆಯ ಕೃತಿ ಷಟ್ಪದಿ ಛಂದಸ್ಸಿನಲ್ಲಿ ಇರಬಹುದೆಂದು ಊಹಿಸಿದ್ದಾರೆ[೨೫]. ಆದರೆ ಈ ಕುರಿತ ಮಾಹಿತಿಯು ಇವಳ ಕುರಿತಾದ ಏಕೈಕ ಆಕರ ವೆನ್ನಲಾದ ಶಾಸನದಲ್ಲಿ ದೊರಕುವುದಿಲ್ಲ.

ಜಕ್ಕಲಾಂಬೆಯ ಸಂಬಂಧಿಕರನ್ನು ಶಾಸನವು ಈ ರೀತಿಯಾಗಿ ಪರಿಚಯಿಸಿದೆ

**ವನಿತಾಭೂಷಣೆ ಸಚ್ಚರಿತ್ರವತಿ ತಾಯ್ಲಚ್ಚವ್ವೆ ಸಾಮನ್ತ ಮ**
**ಣ್ಡನ ಮುದ್ದಂಜನಕಂ ವಿನೂತ ಚರತಂ ಕಾನ್ತಂ ಸುತತ್ವೋಪದೇ**
**ಶನನಾ ಶ್ರೀಮದನನ್ತಕೀರ್ತಿ ಮುನಿಪಂ ಪೂಜ್ಯಂ ಜಿನಸ್ವಾಮಿಯೆ**
**ನ್ದೆನೆ ಜಕ್ಕ (ಬ್ಬೆಯ) ವಂಶ ಶೀಲ . . ಸಮ್ಯಕ್ತ್ವಂ ಜಗತ್ಪಾವನ ॥**

ಸಚ್ಚರಿತ್ರವತಿ ಎನಿಸಿದ ಇವಳ ತಾಯಿ ಲಚ್ಚವ್ವೆ, ಸಾಮಂತ ಮಂಡಣಮುದ್ದ ಇವಳ ತಂದೆ. ಇವಳ ಪತಿಯನ್ನು ಕುರಿತಾಗಿ ಕಾಂತ 'ವಿನೂತ ಚರತಂ' ಎಂದಷ್ಟೇ ಪರಿಚಯಿಸಿರುವ ಶಾಸನವು ಹೆಚ್ಚಿನ ವಿಚಾರವನ್ನು ತಿಳಿಸಿಲ್ಲ. ಶ್ರೀಮದನಂತ ಕೀರ್ತಿ ಇವಳಿಗೆ ತತ್ವ ಉಪದೇಶಿಸದ ಗುರುವೆಂದು ಇಲ್ಲಿ ತಿಳಿಸಿದೆ. ಮಲ್ಲವ್ವೆ ಎಂಬುವ ಈಕೆಯ ತಂಗಿಯೂ ಕೂಡ ಅಕ್ಕನ ದಾರಿ ತುಳಿದ ಸಮಾಧಿ ಮರಣ ಪಡೆದಳು ಎಂಬ ಉಲ್ಲೇಖ ದೊರಕುತ್ತದಾದರೂ[೨೬] ಮಲ್ಲೆಗವುಂಡಿಯ ಸಮಾಧಿ ಮರಣ ತಿಳಿಸುವ ಶಿಕಾರಿ ಪುರದ ೨೦೨ ನೆಯ ಶಾಸನವಾಗಲಿ, ಜಕ್ಕಲಾಂಬೆಯ ವಿಚಾರ ತಿಳಿಸುವ ೧೯೬ನೆಯ ಸಂಖ್ಯೆಯ ಶಾಸನವಾಗಲಿ ಇವರಿಬ್ಬರನ್ನು ಸಹೋದರಿಯರೆಂದು ತಿಳಿಸಿಲ್ಲ. ಅಲ್ಲದೆ ಮಲ್ಲೆಗಾವುಂಡಿಯ ಶಾಸನದ ಕಾಲವನ್ನು ವೀರಬಲ್ಲಾಳದೇವರ ವರುಷದ ೨೧ನೆಯ ಪ್ರಜಾಪತಿ ಸಂವತ್ಸರ ಎಂದು ಕಾಲ ತಿಳಿಸಿದೆ. ಇದು ಬಲ್ಲಾಳದೇವನ ಕಾಲದ ೨೩ನೆಯ ಆಳ್ವಿಕೆ ಎಂದು ತಿಳಿಸಿರುವ ಜಕ್ಕಲಾಂಬೆಯ ಸಮಾಧಿ ಮರಣಕ್ಕೂ ಪೂರ್ವದಲ್ಲಿ ನಡೆದುದಾಗಿದೆ.

ಜಕ್ಕಲಾಂಬೆಯ ಗುಣವನ್ನು ಕವಿಯು **"ದಾನಾನ್ವಿತೇತಿ ಗುಣರತ್ನ ವಿಭೂಷಿತೇತಿ ಶಾನ್ತೇತಿ ಸರ್ವ್ವಜನತಾ ಸುದಯಾಪರೇತಿ ಜೈನಾಗಮೋಕ್ತ ಚರಿತಾನುಗತೇತಿ ಭವ್ಯಾಃಕೀನಸ್ತುವನ್ತಿ ಭುವಿಜಕ್ಕಲಯೋಷಿತಂನ್ತೇ॥** – ಇಲ್ಲಿ ದಾನ ನಿರತೆಯಾದ ಇವಳನ್ನು ಗುಣರತ್ನ ವಿಭೂಷಿತೆ ಎಂದು ಕರೆದಿರುವ ಕವಿಯು ಜೈನಧರ್ಮ ನಿಷ್ಠಳಾದ ಇವಳ ಶಾಂತ ಸ್ವಭಾವ, ಎಲ್ಲ ಜನರಲ್ಲಿಯೂ ದಯೆಯನ್ನು ಹೊಂದಿದಗುಣಗಳನ್ನು ಹೊಗಳಿದ್ದಾನೆ. ಈ ಶಾಸನವು ಜಕ್ಕಲಾಂಬೆಯ ಸಮಾಧಿಮರಣವನ್ನು ಸವಿಸ್ತಾರವಾಗಿ ಬಣ್ಣಿಸಿದೆ. **"ಶುದ್ಧ ಧ್ಯಾನ ವಿಶೋಧಿ ಬೋಧಿತ ಮನಜ್ಪೂರ್ವ್ವಂಸಮಾಧಿ ಕ್ರಮೈಸ್ಸಾಶ್ಚರ್ಯ್ಯಂತ್ಯಜತಿ ಸ್ವದೇಹಮಣುವ ಚ್ಛ್ರೀಜಕ್ಕಲಾಂಬಾಸತೀ ॥**

**ತಳರ್ದಿರದೇಕ ಪಾರ್ಶ್ವನಿಯಮ ಸ್ಥಿತಿ ದೃಷ್ಟಿ ಸುನಾಸಿಕಾಗ್ರದಿಂ**
**ಕಳಿವೆಡೆ ಬಲ್ಪು ಬಳ್ಕಿರದೆ ಮೆಯ್ಮಿಡುಕಾಡದೆ ಜೈನ ಭಕ್ತಿ ಸಂ**
**ಚಳಿಸದೆ ಮಾಣದುಚ್ಚರಿಸಿ ಪಂಚ ಪದಂಗಳನಾತ್ಮ ತತ್ವದೊಳ್**
**ನೆಲಸಿದ ಸತ್ಸಮಾಧಿ ಬಿಧಿ ಜಕ್ಕಲೆ ನಾರಿಗೆ ದೀಕ್ಷಲಾವಣಂ॥**

ಒಂದೇ ಪಾರ್ಶ್ವದ ಸಮಸ್ಥಿತಿಯಲ್ಲಿ ನಿಂತು, ದೃಷ್ಟಿಯನ್ನು ನಾಸಿಗಾಗ್ರ (ಮೂಗಿನ ತುದಿ) ದಿಂದ ಕದಲಿಸದೆ, ಸಾಮರ್ಥ್ಯ ಕುಗ್ಗಿದರೂ ದೇಹ ಮಿಸುಕಾಡದೆ, ಜಿನಭಕ್ತಿ ಚಂಚಲಗೊಳ್ಳದೆ, ಪಂಚಪದಗಳನ್ನು ಬಿಡದೆ ಉಚ್ಚರಿಸುತ್ತಾ (ಪಂಚನಮಸ್ಕಾರವನ್ನು ನಿಲ್ಲಿಸದೆ) ಆತ್ಮ ತತ್ವದಲ್ಲಿ ನೆಲಸಿದ ಸಮಾಧಿ ವಿಧಿಯು ಜಕ್ಕಲೆ ನಾರಿಗೆ ದೀಕ್ಷೆಯ ಲಾವಣ್ಯ ನೀಡಿತು ಎಂಬ ಕವಿಯ ಬಣ್ಣನೆಯು ಇವಳ ಏಕಾಗ್ರತೆ, ಛಲ, ಸಾಧನೆಯನ್ನು ಕುರಿತು ತಿಳಿಸುತ್ತದೆ. ಸಾಮಂತ ಅರಸು ಮನೆತನದ ಮಹಿಳೆಯೊಬ್ಬಳು ವೈರಾಗ್ಯಪರಳಾಗಿ ಸಮಾಧಿ, ಮೋಕ್ಷಸಾಧನೆಗಳನ್ನು ಸಾಧಿಸಿದ ಚಿತ್ರಣವನ್ನಿಲ್ಲಿ ಕಾಣಬಹುದು.

ಕಮಲಾಹಂಪನಾ ಅವರು 'ಶ್ರೀಮತಿ' ಎಂಬುದು ಜಕ್ಕಲಾಂಬೆಯ ಕಾವ್ಯನಾಮ ಎಂದು ತಿಳಿಸಿದ್ದಾರೆ[೨೭]. ಆದರೆ ಈ ಶಾಸನದಲ್ಲಿ, ಶಾಸನಕವಿಯು ಇವಳನ್ನು ಜಕ್ಕಲಾಂಬೆ, ಜಕ್ಕವ್ವೆ, ಜಕ್ಕಲೆ, ಜಕ್ಕಲಾಂಬಿಕೆ, ಜಕ್ಕಲಾಂಬಾಸತಿ, ಎಂದು ಮೊದಲಾಗಿ ಕರೆದಿರುವನಲ್ಲದೆ ಪತಿವ್ರತಾ ಜಕ್ಕಲಾಂಬೆ ಎಂಬ ವಿಶೇಷಣವನ್ನೂ ಸೇರಿಸಿ ಕರೆದಿದ್ದಾನೆ. ಇದೇ ಪ್ರಕಾರ ಶ್ರೀಮತಿ ಜಕ್ಕಲಾಂಬೆ ಎಂದೂ ಇವಳನ್ನು ಒಂದು ಬಾರಿ ಉಲ್ಲೇಖಿಸಿದ್ದಾನೆ. ಆದ್ದರಿಂದ ಶ್ರೀಮತಿ ಎಂಬುದು ಇವಳ ಕಾವ್ಯನಾಮವಾಗಿರಲಾರದು.

ಕವಿ ರಾಘವಾಂಕನ ಪೂರ್ವದಲ್ಲಿದ್ದ 'ಶ್ರೀಮತಿ' ಎಂಬ ಜೈನಧರ್ಮಿಯಳ ಉಲ್ಲೇಖವೊಂದು ದೊರಕುತ್ತದೆ. ರಾಘವಾಂಕ ತನ್ನ ಸೋಮನಾಥ ಚರಿತೆಯಲ್ಲಿ ಇವಳನ್ನು ಉಲ್ಲೇಖಿಸಿದ್ದಾನೆ. ಇಲ್ಲಿ ಕವಿಯು ಕೆಲವು ಜೈನರನ್ನು ಹೆಸರಿಸಿ ಅವರನ್ನು ವೀರಶೈವರು ಯಾವರೀತಿಯಲ್ಲಿ ಹಿಂಸಿಸಿರಬಹುದೆಂಬ ಚಿತ್ರಣವನ್ನು ನೀಡಿದ್ದಾನೆ.

**ನೇಮಿಯಂ ಕೆಡುಕುತ್ತಿ ಮಲಧಾರಿಗಳ ನಿಱಿದು**
**ಹೇಮಚಂದ್ರನನೊರಸಿ ಮಾಘನಂದಿಯ ಕೊಂದು**
**ಶ್ರೀಮತಿಗಳಂ ಪಿಡಿದು ತ್ರೈವಿದ್ಯರಂ ತಱಿದು ತಾರ ಕುಂಡೆಯ ಹಾಯಿಸಿ**
**ಭೂಮಿಗೊರಗಿಸಿ ವರ್ಧಮಾನರಂ ಶ್ರುತಿಕೀರ್ತಿ**
**ನಾಮಮಂ ಕೊಡೆದು ಪಾರಿಸಮಾನನೆಂದು ಕಾ**
**ಯ್ದ ಮೂಲಸಂಘ ಜಾಪುಲಿ ಸಂಘವೆಂಬುಭಯ ಸಂಘಮಂ ಭಂಗಿಸಿದನು॥**

ಈ ಪದ್ಯವು, ನೇಮಿಯನ್ನು ಕೆಡಹಿ, ಮಲಧಾರಿಗಳನ್ನು ಇರಿದು, ಹೇಮಚಂದ್ರ, ಮಾಘನಂದಿ, ತ್ರೈವಿದ್ಯರು, ವರ್ಧಮಾನ, ಶ್ರುತಿಕೀರ್ತಿಯರನ್ನು ಕೊಂದದ್ದಲ್ಲದೆ, ಮೂಲಸಂಘ – ಜಾಪುಲಿ ಸಂಘಗಳನ್ನು ಭಂಗಿಸಿದ ವಿಚಾರವನ್ನು ತಿಳಿಸಿದೆಯಲ್ಲದೆ, ಶ್ರೀಮತಿಯನ್ನೂ ಹಿಂಸಿಸಿದ ವಿಚಾರವೂ ಇಲ್ಲಿ ತಿಳಿದು ಬರುತ್ತದೆ.

ಇಲ್ಲಿ ತಿಳಿಸಿರುವ ಶ್ರೀಮತಿಯೇ ಜಕ್ಕಲಾಂಬೆ ಎಂದು ಕಮಲಾ ಹಂಪನಾ ಅವರು ಅಭಿಪ್ರಾಯಪಟ್ಟಿದ್ದಾರೆ. ಇದಕ್ಕೆ ಇರುವ ಆಧಾರ ಶಾಸನದಲ್ಲಿ ಒಂದು ಬಾರಿ ಇವಳನ್ನು ಶ್ರೀಮತಿ ಎಂದು ಕರೆದಿರುವುದೇ ಆಗಿದೆ. ಅಲ್ಲದೆ ಪತ್ನಿಗಾದ ಅಪಮಾನವನ್ನು ತಡೆಯಲು ಹೋಗಿ ಇವಳ ಪತಿ ಹತನಾಗಿರಬಹುದೆಂದು ಇವರು ಊಹಿಸಿದ್ದಾರೆ. ಆದರೆ ಶಾಸನವು ಇಂತಹ ಯಾವುದೇ ಅನುಮಾನವನ್ನು ಹುಟ್ಟಿಸುವಂತಹ ವಿಚಾರವನ್ನು ತಿಳಿಸಿಲ್ಲ.

ಶ್ರೀಮತಿ ಎಂಬ ಕವಯತ್ರಿ ಇದ್ದುದಕ್ಕೆ ೧೫ನೆಯ ಶತಮಾನದ ಕವಿ ನೇಮರಸನ ಲೋಭದತ್ತ ಚರಿತೆಯಲ್ಲಿ ಮತ್ತೊಂದು ಉಲ್ಲೇಖವೂ ದೊರಕುತ್ತದೆ.

**ಶ್ರೀಮತಿಯನು ಹಂಪನ ನಾಗಚಂದ್ರನ**

**ನೇಮಿಯನಗ್ಗಳಯಯ್ಯನನು**
**ರಾಮಶೀಯದ ಪೊನ್ನ ರನ್ನ ಜನ್ನರನೆನೆನೆ**
**ದೀ ಮಹಾಕೃತಿಯನು ಪೇಳುವೆನಾ ॥**

ಇಲ್ಲಿ ಕವಿಯು ಹಂಪ, ನಾಗಚಂದ್ರ, ನೇಮಿ, ಅಗ್ಗಳ ಮೊದಲಾದವರೊಂದಿಗೆ ಶ್ರೀಮತಿಯನ್ನು ಹೆಸರಿಸಿರುವುದರಿಂದ ಇವಳೂ ಕೂಡ ಕಾವ್ಯವನ್ನು ರಚಿಸಿರುವಳೆಂದು ತಿಳಿದು ಬರುತ್ತದೆ. ಆದರೆ ಕಮಲಾ ಹಂಪನಾ ಅವರನ್ನುಳಿದು ಶ್ರೀಮತಿಯನ್ನು ಈ ವರೆಗೆ ಯಾವುದೇ ಸಾಹಿತ್ಯ ಚರಿತೆಕಾರರು ಹೆಸರಿಸಿಲ್ಲ.

ಶ್ರೀಮತಿಯ ಕುರಿತಂತೆ ಮತ್ತೊಂದು ಉಲ್ಲೇಖ ದೊರಕುತ್ತದೆ. ಶ್ರುತಕೀರ್ತಿ ರಚಿಸಿರುವ 'ವಿಜಯಕುಮಾರಿ ಚರಿತೆ'ಯಲ್ಲಿ ವೀರಶೈವ ಧರ್ಮಿಯ ಸೋದರಮಾವ ಮಹದೇವಸೆಟ್ಟಿಯ ಮಗನನ್ನು ಮದುವೆಯಾಗಲು ನಿರಾಕರಿಸಿದ ವಿಜಯಕುಮಾರಿಯನ್ನು ಮದುವೆಗೆ ಬಹಳವಾಗಿ ಒತ್ತಾಯಿಸುತ್ತಾರೆ. ಬೇಸತ್ತ ಇವಳು ಕಡೆಗೆ ಜಿನೇಂದ್ರಸಾಕ್ಷಿಯಲ್ಲಿ ಬ್ರಹ್ಮಚರ್ಯವ್ರತ ಸ್ವೀಕರಿಸಿದೆನೆಂದು ಘೋಷಿಸಿ ಚೈತನ್ಯಮಂದಿರಕ್ಕೆ ತೆರಳಿ ಜಿನದೀಕ್ಷೆಯನ್ನು ಪಡೆಯುತ್ತಾಳೆ. ಇವಳ ಹಟಕ್ಕೆ ಮಣಿದ ತಂದೆತಾಯಿಗಳು ಜಿನಾಲಯಕ್ಕೆ ಬಂದು ಸ್ನಾನವಮಾಡಿಸಿ ಗಂಧೋದಕ ತಳೆಯುತ್ತಾರೆ. ದೀಕ್ಷಾಗ್ರಂಥಗಳನ್ನು ಓದುವ ಮುಮುಕ್ಷುಗಳು ಆಕೆಗೆ ದೀಕ್ಷೆ ನೀಡಿ **'ಶ್ರೀಮತಿ'** ಯೆಂದು ಹೆಸರಿಡುತ್ತಾರೆ. ವಿಜಯಕುಮಾರಿ ಶ್ರೀಮತಿಯಾಗಿ ಭೂಮಿಯಲ್ಲಿ ಸಂಚರಿಸಿ ಪಾತಕಗಳನ್ನು ಪರಿಹರಿಸಿ ಸಲ್ಲೇಖನ ವಿಧಿಗಳನ್ನು ತಳೆದಳು. ಎಂಬ ವಿಚಾರ ಈ ಕೃತಿಯಲ್ಲಿ ದೊರಕುತ್ತದೆ.

ಜೈನಧರ್ಮೀಯ ತಂದೆ–ತಾಯಿಯರೊಂದಿಗೆ, ಮುಂದೆ ಶ್ರೀಮತಿ ಎಂಬ ಹೆಸರನ್ನು ಪಡೆದ ವಿಜಯಕುಮಾರಿಯು ಕೂಡ ಜೈನಧರ್ಮದಲ್ಲಿ ನಿಷ್ಠೆಯನ್ನು ಹೊಂದಿದವಳಾಗಿರುತ್ತಾಳೆ. ಅಲ್ಲದೆ ಇವಳಿಗೆ ವೀರಶೈವ ಧರ್ಮದ ಮೇಲಿದ್ದ ಅಸಮಾಧಾನವನ್ನೂ ಕೂಡ ಕವಿ ಚಿತ್ರಿಸಿದ್ದಾನೆ. ಇವಳು ಬಸವಣ್ಣ–ಬಿಜ್ಜಳರ ಸಮಕಾಲೀನಳಾಗಿರುವಂತೆ ಈ ಕಾವ್ಯದಲ್ಲಿ ಚಿತ್ರಿಸಲಾಗಿದೆ. ವೀರಶೈವರೊಂದಿಗೆ ವಾದಕ್ಕಿಳಿಯುವ ವಿಜಯಕುಮಾರಿ (ಶ್ರೀಮತಿ)ಯ ಕೆಲವು ಪ್ರಸಂಗಗಳನ್ನು ಕವಿಯು ಕಾವ್ಯದಲ್ಲಿ ಬಣ್ಣಿಸಿದ್ದಾನೆ.

ಕವಿ ರಾಘವಾಂಕ ಉಲ್ಲೇಖಿಸಿರುವ ಶ್ರೀಮತಿಯು ಈ ವಿಜಯಕುಮಾರಿಯೇ ಆಗಿರುತ್ತಾಳೆ. ಶ್ರೀಮತಿ ಎಂಬ ನಾಮಧೇಯವನ್ನು ಹೊಂದಿದ ವಿಜಯಕುಮಾರಿಯು ಐತಿಹಾಸಿಕ ವ್ಯಕ್ತಿಯಾಗಿದ್ದಳೆಂದು ಈ ಕೃತಿಯ ಸಂಪಾದಕರಾದ ಭಾನುಮತಿಯವರು ಅಭಿಪ್ರಾಯ ಪಟ್ಟಿದ್ದಾರೆ. "ವಿಜಯಕುಮಾರಿ ಚಾರಿತ್ರಿಕ ವ್ಯಕ್ತಿಯಾಗಿರುವ ಸಾಧ್ಯತೆಯಿದೆ.. ಆಕೆಯ ಕಾಲವನ್ನು ೧೨ನೆಯ ಶತಮಾನವೆಂದು ಊಹಿಸಬಹುದು"[೨೮]. ಶ್ರೀಮತಿ ಎಂದು ಪ್ರತಿನಾಮ ಪಡೆದ ವಿಜಯಕುಮಾರಿಯ ಚರಿತೆಯ ಕುರಿತಾದ ನಾಲ್ಕು ಕಾವ್ಯಗಳು ಕನ್ನಡದಲ್ಲಿ ದೊರಕುತ್ತದೆ. ಈ ಕೃತಿಗಳೆಲ್ಲಾ ಹದಿನೈದನೆಯ ಶತಮಾನದ ನಂತರ ರಚಿತವಾದವು[೨೯].

ಶಾಸನ ಕವಿಯು ತಿಳಿಸಿರುವಂತೆ ಮಿಥ್ಯಾಜೀವನದಿಂದ ವಿರಕ್ತಿ ಹೊಂದಿದ ಜಕ್ಕಲಾಂಬೆಯು ಜಿನೋಪದೇಶವನ್ನು ಕೇಳಿ ಆತ್ಮಸಾಧನೆಗಾಗಿ ಸಮಾಧಿಮರಣವನ್ನು ಸ್ವೀಕರಿಸಿದಳೆ ಹೊರತು ವೀರಶೈವರೊಂದಿಗೆ ಸಂಘರ್ಷಕ್ಕಿಳಿದು ಬೇಸತ್ತು ಸಮಾಧಿ ಮರಣವನ್ನು ಸ್ವೀಕರಿಸಿದಳೆಂದು ತೋರುವುದಿಲ್ಲ. ಇಂತಹ ವೈರಾಗ್ಯಪರಳಾದ ಜಕ್ಕಲಾಂಬೆಯ ಕೃತಿಯು ದೊರಕಿದಲ್ಲಿ ಇವಳ ಕುರಿತಾದ ಹೆಚ್ಚಿನ ಮಾಹಿತಿಯು ತಿಳಿದು ಬರುತ್ತದೆ.

ಲೋಭದತ್ತ ಚರಿತೆಯಲ್ಲಿ ಉಕ್ತಳಾಗಿರುವ 'ಶ್ರೀಮತಿ' ಎಂಬ ಕವಯತ್ರಿಯ ಕುರಿತಾದ ವಿಚಾರ ಹಾಗೂ ಇವಳು ರಚಿಸಿರಬಹುದಾದ ಕೃತಿಗಳ ವಿಚಾರದ ಕುರಿತಾಗಿ ಹೆಚ್ಚಿನ ಸಂಶೋಧನೆ ನಡೆಯುವ ಅಗತ್ಯವಿದೆ.

**ಮೈಸೂರಿನ ಅರಸಿ ಚೆಲುವಾಂಬೆ (ಸಾಂಗತ್ಯ, ಚೌಪದಿ, ಗದ್ಯ)**

ಮೈಸೂರಿನ ಅರಸಿ ಚೆಲುವಾಂಬೆಯು ೧೭೧೪–೧೭೩೨ರವರೆಗೆ ಆಳ್ವಿಕೆ ನಡೆಸಿದ ಮೈಸೂರು ಅರಸು ದೊಡ್ಡ ಕೃಷ್ಣರಾಜ ಒಡೆಯರ್‌ನ (೧೭೧೩–೩೧)ಕಿರಿಯ ರಾಣಿ. ಹಾಗೂ ಕಳಲೆ ಕಾಂತನೃಪ (ಕಳಲೆ ಕಾಂತಯ್ಯ)ನ ಮಗಳು. ಹಲವಾರು ಕೃತಿಗಳನ್ನು ರಚಿಸಿರುವ ಚೆಲುವಾಂಬೆಯು ತನ್ನ ವೈಯಕ್ತಿಕ ವಿಚಾರಗಳನ್ನು ಕುರಿತಾಗಿ ಹೆಚ್ಚಿನ ಮಾಹಿತಿಗಳನ್ನು ತಿಳಿಸಿಲ್ಲ. ಇವಳ ರಚನೆಗಳಿಂದ ಇವಳ ವಿದ್ವತ್ತು, ಕನ್ನಡ–ಸಂಸ್ಕೃತ ಭಾಷೆಗಳ ಮೇಲಿನ ಪ್ರೌಢತ್ವ ತಿಳಿದುಬರುತ್ತದೆ. ಚೆಲುವಾಂಬೆಯು ತನ್ನ ಕೃತಿ 'ವರನಂದಿ ಕಲ್ಯಾಣ'ದಲ್ಲಿ[೩೦] **"ಜನಪತಿಯೆನಿಸುವಪ್ರತಿಮಕೃಷ್ಣೇಂದ್ರನ ವನಿತೆ ಚೆಲ್ವಾಂಬೆ ಈ ಕೃತಿಯ ಅನುಗೊಳಿಸಿದಳ್..."** (೧–೨), **"ಕಳಲೆಕಾಂತನೃಪನಣುಗಿ ಚೆಲುವಾಂಬೆ ಪೇಳ್ದೀ ಕೃತಿ"** (೭–೧೪೪) ಎಂದು ತನ್ನ ಹೆಸರನ್ನು ಉಲ್ಲೇಖಿಸಿದ್ದಾಳೆ. ಇದೇ ಪ್ರಕಾರ 'ತುಲಾಕಾವೇರಿ ಮಹಾತ್ಮಂ' ಕೃತಿಯ ಆರಂಭದಲ್ಲಿ ತನ್ನನ್ನು ಕುರಿತು "ಕೃಷ್ಣರಾಜೇಂದ್ರನ ಧರ್ಮಕಾಂತೆಯಾಗಿ... ಆಶ್ರಿತ ಮನೋರಥವಿತರಣದಲ್ಲಿ ಮಹಾಲಕ್ಷ್ಮಿಯಾಗಿ, ಸೇನಾಧ್ಯಕ್ಷ ಕಳಲೆ ದೊಡ್ಡಮಹಾರಾಜನಿಗೆ ಪೌತ್ರಿಯಾಗಿ, ಕಾಂತಮಹಾರಾಜನಿಗೆ ಪುತ್ರಿಯಾಗಿರುವ ಚೆಲುವಾಂಬಿಕೆ" ಎಂದು ಇವಳು ತನ್ನ ತಂದೆ ಹಾಗೂ ತಾತನ ಹೆಸರನ್ನು ತಿಳಿಸಿದ್ದಾಳೆ. ಇವಳು ರಚಿಸಿರುವ ಮಂಗಳಾರತಿ ಪದಕ್ಕೆ ರಾಗ, ತಾಳಗಳನ್ನು ನಿರ್ದೇಶಿಸಿರುವುದು, ಇವಳಿಗಿದ್ದ ಸಂಗೀತ ಜ್ಞಾನವನ್ನು ತಿಳಿಸುತ್ತದೆ.

ಚೆಲುವಾಂಬೆಯು ವರನಂದೀ ಕಲ್ಯಾಣ, ವೆಂಕಟಾಚಲಮಹಾತ್ಮ್ಯಂ ಲಾಲಿಪದ, ಅಲುಮೇಲುಮಂಗೆ ಲಾಲಿಪದ, ಮಂಗಳಾರತಿಪದ, ಕೃಷ್ಣಕರ್ಣಾಮೃತಟೀಕೆ, ತುಲಾಕಾವೇರಿ ಮಹಾತ್ಮ್ಯಂ ಎಂಬ ಆರು ಕೃತಿಗಳನ್ನು ರಚಿಸಿದ್ದಾಳೆ. ಇವಳ ಕೃತಿಗಳೆಲ್ಲಾ ಪೌರಾಣಿಕ ವಸ್ತುವನ್ನೇ ಹೊಂದಿವೆ. ಅಲ್ಲದೆ ಇವುಗಳಲ್ಲಿ ಶ್ರೀವೈಷ್ಣವ ಧರ್ಮದ ಪ್ರಭಾವವಿರುವುದು ಕಂಡುಬರುತ್ತದೆ. "ಇವಳ ಎಲ್ಲ ಕೃತಿಗಳೂ ಭಕ್ತರಸಪ್ರಧಾನವಾಗಿಯೇ ಇವೆ! ಶ್ರೀವೈಷ್ಣವ ಪರಭಕ್ತ ಕೃತಿಗಳಲ್ಲಿ ಎದ್ದು ಕಾಣುತ್ತದೆ. ಕೃತಿಯಲ್ಲಿ ಶೃಂಗಾರರಸ ಬಂದರೂ ಭಕ್ತಿಯ ಹಿನ್ನೆಲೆಯಲ್ಲಿಯೇ ಮೂಡಿದೆ"[೩೧]

**ವರನಂದೀ ಕಲ್ಯಾಣ** ಕೃತಿಯು ಚೆಲುವಾಂಬೆ ರಚಿಸಿರುವ ಮೊದಲ ಕೃತಿ ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಇದು ಏಳು ಸಂಧಿ ೮೮೧ ಪದ್ಯಗಳ ಸಾಂಗತ್ಯ ಕೃತಿ. ಕಾವ್ಯಾರಂಭದಲ್ಲಿ ವೆಂಕಟೇಶ, ಲಕ್ಷ್ಮಿ, ಹಾಗೂ ಗುರುಗಳಿಗೆ ವಂದಿಸಿ, ಸಜ್ಜನರು ಸಂತಸದಿಂದ ಕೇಳಬೇಕೆಂದು ಬಿನ್ನವಿಸಿಕೊಂಡಿದ್ದಾಳೆ. ಈ ಕೃತಿಯಲ್ಲಿ ವರನಂದಿಯೇ ನಾಯಕಿ, ಚೆಲುವರಾಯನೇ ನಾಯಕ.

ಈ ಕೃತಿಯನ್ನು "ಯದುಗಿರಿಯೊಡೆಯನ ಚಾರಿತ್ರ್ಯ"ವೆಂದು ಕರೆದು ತನ್ನರಸನ ಕೋರಿಕೆಯ ಮೇರೆಗೆ ತಾನು ಈ ಕತೆಯನ್ನು ಹೇಳಲು ತೊಡಗಿದೆನೆಂದು ತಿಳಿಸಿ (೧–೩) ತನ್ನ ಕಾವ್ಯಕಥೆಯನ್ನು ಪ್ರಾರಂಭಿಸಿದ್ದಾಳೆ.

**ಉನ್ನತಿವಡೆದಚ್ಚಕನ್ನಡದಿನಿವಾತ**
**ಚೆನ್ನತೆಗೊಳಿಸಿ ವರ್ಣಕದಿ**
**ಬನ್ನಣೆಗಳವಟ್ಟ ವರನಂದೀ ದೇವಿಯ**
**ಸನ್ನುತಚರಿತವ ಪೇಳ್ವೆ – ಎಂದು**

ಕವಯತ್ರಿಯು ತಾನೇ ಹೇಳಿರುವಂತೆ ಈ ವರ್ಣಕ ಕಾವ್ಯವನ್ನು ಇನಿವಾತಿನಲ್ಲಿಯೇ ರಚಿಸಿದ್ದಾಳೆ. ಅಲ್ಲದೆ, ಸರಳ ಭಾಷೆಯಲ್ಲಿ ಪ್ರೌಢ ಕಾವ್ಯವನ್ನು ರಚಿಸುವ ಜಾಣ್ಮೆ ತೋರಿದ್ದಾಳೆ. ಧೀರ್ಘಸಮಾಸ ಪದಗಳಾಗಲೀ, ಪದಗುಚ್ಛಗಳಾಗಲೀ ಇವಳ ಕಾವ್ಯದಲ್ಲಿ ತೊಡಕಾಗಿ ಸಿಗುವುದಿಲ್ಲ. ಇವಳು ಸಂಸ್ಕೃತವನ್ನು ಚೆನ್ನಾಗಿ ಬಲ್ಲವಳಾದರೂ ಅನಗತ್ಯವಾಗಿ ಸಂಸ್ಕೃತ ಪದಗಳನ್ನು ಕಾವ್ಯದಲ್ಲಿ ತಂದಿಲ್ಲ. ಆಸ್ಥಾನದಲ್ಲಿ ಪಂಡಿತರ ನಡುವೆ ಇದ್ದರೂ, ಪಾಂಡಿತ್ಯ ಮೆರೆಯುವ ಚಪಲ ಕಾವ್ಯದಲ್ಲಿ ಕಂಡುಬರುವುದಿಲ್ಲ. ತಿಳಿಗನ್ನಡದಲ್ಲಿ ಸಾಮಾನ್ಯರಿಗೂ ಅರ್ಥವಾಗುವಂತಹ ಸರಳ

ಭಾಷೆಯಲ್ಲಿ ಕಾವ್ಯ ರಚಿಸಿರುವ ಚೆಲುವಾಂಬೆ ತನ್ನ ಕನ್ನಡ ಭಾಷಾ ಪ್ರೇಮವನ್ನು ಕಾವ್ಯದಲ್ಲಿ ಹಲವೆಡೆ ಹೊರಸೂಸಿದ್ದಾಳೆ. ಅಚ್ಚಗನ್ನಡದಿನಿವಾತಿನೊಂದಿಗೆ ಸಂಸ್ಕೃತದ ಪ್ರೌಢಪದಗಳು, ತದ್ಭವಗಳು, ಫೌಜು, ಸಲ್ಲಾಮು ಮೊದಲಾದ ಕೆಲವು ಅರಬ್ಬೀ ಶಬ್ದಗಳನ್ನೂ ಬಳಸಿಕೊಂಡಿದ್ದಾಳೆ.

ಕಾವ್ಯದ ನಡುವೆ ಸಂಭಾಷಣೆಗಳನ್ನು ಜಾಣ್ಮೆಯಿಂದ ಹೆಣೆದಿರುವುದಕ್ಕೆ ಕೆಲವು ಉದಾಹರಣೆಗಳನ್ನು ಗಮನಿಸಬಹುದು: “ಎನ್ನಮ್ಮ ಕೇಳು ನಿನ್ನಯ ಮನ ಬರ್ಪಂತೆ ಚಿನ್ನತೆವಡೆದ ಬೊಂಬೆಗಳ ಇನ್ನು ಬೇಕಾದುದ ತಂದೀವೆ” ; ಮಗಳನ್ನು ಕರೆದು “ಚೆನ್ನಿಗ ಚೆಲುವನ ತಂದಿರ್ಪೆ ನೋಡೆಂದು” ಬೊಂಬೆಯನ್ನು ಕೈಗಿತ್ತನು ; ರಾಮಾನುಜರ ಕನಸಿನಲ್ಲಿ ಬಂದ ಚೆಲುವರಾಯ “ಯದುಗಿರಿಯೊಳು ಸೂರೆಗೈದೆನ್ನ ಸೆರೆಗೈದರು ದಿಲ್ಲಿಯೊಳಗೆ॥ ತರಬರದೊಳು ವೈಷ್ಣವರನು ನೆರವಿಗೊಂಡಿರದ್ಯೆತಂದೊಡನೆನ್ನ ಕರೆದೊಯ್ಯು ....” ಎಂದು ನುಡಿಯುತ್ತಾನೆ. ಚೆಲುವರಾಯನನ್ನು ಹುಡುಕಿಕೊಂಡು ಬಂದ ರಾಮಾನುಜರಿಗೆ ಅರಸನು “ಪಿರಿಯರೆ ನಿಮ್ಮದೇವರು ನಮ್ಮ ಕಣ್ಗೆ ಗೋಚರಿಸಲೊಲ್ಲ ನೀವೆ ಪೇಳುವುದು” ಎಂದೆನಲು ; “ನಿಮ್ಮ ತನುಜೆಯ ಸಜ್ಜೆವನೆಯೊಳು ಮಿನಿಗುವ ರನ್ನಮಂಚದ ಮೇಲೆ ಮಲಗಿರ್ಪರ್”ಎನೆ.. ಹೀಗೆ ಕಾವ್ಯದುದ್ದಕ್ಕೂ ನಾಟಕೀಯ ಸಂಭಾಷಣೆಗಳನ್ನು ಕಾಣಬಹುದು.

ಇವಳ ಕಾವ್ಯದಲ್ಲಿನ ಮತ್ತೊಂದು ಗುಣವೆಂದರೆ ಸಂಕ್ಷಿಪ್ತತೆ. ನಾಲ್ಕಾರು ಪದ್ಯಗಳಲ್ಲಿ ಹೇಳಬಹುದಾದುದನ್ನು ಇವಳು ಒಂದೆರಡು ಸಾಲು ಅಥವಾ ಒಂದು ಪದ್ಯದ ಮಿತಿಯಲ್ಲಿ ಹೇಳಿ ಮುಗಿಸುತ್ತಾಳೆ.

“ವರನಂದೀ ಕಲ್ಯಾಣವು ಸುಖಾಂತವಾಗಿಯೇ ಇದೆ! ರೂಢಿಗತ’ವಾದ ಬೀಬಿ ನಾಚ್ಚಿಯಾರಳ ಕಥೆಯಂತೆ ದುಃಖಾಂತವಾಗಿಲ್ಲ. ಚೆಲುವರಾಯನನ್ನು ಮೋಹಿಸಿದ ಬೀಬಿ ನಾಚ್ಚಿಯಾರ್ ಮೇಲುಕೋಟೆಗೆ ಬಂದವಳೇ ದೇವರಲ್ಲಿ ಐಕ್ಯಹೊಂದುತ್ತಾಳೆ”.

ಕಾವ್ಯ ಪ್ರತಿಪಾದಿಸುವ ರಸಭಾವಗಳು: ಕಾವ್ಯದಲ್ಲಿ ಸಂದರ್ಭಕ್ಕೆ ತಕ್ಕಂತೆ ವಿಭಿನ್ನ ಭಾವಗಳನ್ನು ಹೊಮ್ಮಿಸುವಲ್ಲಿ ಕವಯತ್ರಿಯು ನಾನಾ ರಸಗಳನ್ನು ತಂದಿದ್ದಾಳೆ. ರಾಮಾನುಜರು ಹತ್ತು ಅವತಾರಗಳ ಸ್ತುತಿಗೈದು, ಚೆಲುವರಾಯನನ್ನು ಹೊರಗೆ ಬರಬೇಕೆಂದು ಬೇಡಿಕೊಂಡರು....... ಇತ್ತ ಭಕ್ತರ ಮೊರೆಯನ್ನು ಕೇಳಬೇಕೋ ! ಅತ್ತ ವರನಂದಿಯ ವಿರಹದುಃಖವನ್ನು ನೋಡಬೇಕೋ! ಚೆಲುವರಾಯನಿಗೆ ತಿಳಿಯದಾಯ್ತು.. ಕರುಣೆ, ಶೋಕಗಳು ಸಮ್ಮಿಶ್ರಭಾವ ನಯವಾಗಿ ಇಲ್ಲಿ ಚಿತ್ರಿತವಾಗಿದೆ.

ಕಾವ್ಯದಲ್ಲಿ ಭಕ್ತಿಯೇ ಮೇಳೈಸಿದ್ದರೂ ಯಥೋಚಿತ ಶೃಂಗಾರರಸವನ್ನೂ ತಂದಿದ್ದಾಳೆ. ಚೆಲುವರಾಯನನ್ನು ಬಿಟ್ಟಿರಲಾರದ ವರನಂದಿಯ ವಿಪ್ರಲಂಬ ಶೃಂಗಾರ ಸೊಗಸಾಗಿ ಮೂಡಿಬಂದಿದೆ. “ನಿಟ್ಟುಸಿರುಡುವಳು, ಕಂಬನಿಗರೆವಳು ನಿಟ್ಟಿಸುವಳು ಕೆಲಬಲನ ಇಟ್ಟಿದಿರೊಳು ಕಂಡಂತಾಗಲಲ್ಲೆ ಮುದವಟ್ಟು.....”ಕಂಬನಿ ಮಿಡಿಯುವ ವರನಂದಿಯು ವಿರಹದುಃಖಾತಿರೇಕದಿಂದ ಕಾಮನನ್ನೇ ಶಪಿಸುವಳು:

**ಕುಸುಮ ಬಾಣಗಳೆಂದು ನಿನ್ನ ಶರಗಳಿಗೆ ಪೆಸರಿಟ್ಟವರಾರೋ ತಿಳಿಯೆ।**
**ಮಸೆದು ಕಿತ್ತಡಿಸಿ ನುಂಗುವ ಮಾರಿಯ ಬಾಯ ಬಿಸದ ದಾಡೆಯೊಲು ತೋರುವವು (೫–೨೫)**

**ಕುಸುಮವೆಂದಳಿಗಳು ಮುಸುಕಲು ಗರಿ ಸೀದು ಮಸಿಯಂತೆ ಕರುಕುವಡೆದವು**
**ಬಿಸದ ಗುಳಿಗೆಗಿಂತೊಳುವೆಸರಿಟ್ಟು ಮಾನಿಸರ ಕೊಲ್ಲುವನಂಕತನು** (೫–೨೬)ಎಂದು ನಿಂದಿಸುತ್ತಾಳೆ. ಯುದ್ಧದಲ್ಲಿ ಶೂರರಾದವರು ತಮ್ಮ ಶತ್ರು ಹಲ್ಲುಕಚ್ಚಿದರೆ ಮರಯೇರಿದರೆ ಅವರನ್ನು ಕೊಲ್ಲದೆ ಕಾಯುತ್ತಾರೆ. ಅವರು ಹೆಣ್ಣುಗಳ ಮೇಲೆ ಎಂದಿಗೂ ಕೈ ಮಾಡುವುದಿಲ್ಲ. ಆದರೆ ಈ ಮದನನು ಹೆಂಗೊಲೆಗೆಂದೇ ಪುಟ್ಟಿದನು ಎಂದು ಜರಿಯುತ್ತಾಳೆ.

**ನಿಟ್ಟುಸಿರಿಡುವಳು ಕಂಬನಿಗರೆವಳು ನಿಟ್ಟಿಸುವಳು ಕೆಲಬಲನ**
**ಇಟ್ಟೆದಿರೊಳು ಕಂಢಂತಾಗಳತಿ ಮುದವಟ್ಟು ಮೇಲುದ ನೇರಿಟ್ಟು॥ (೫–೩೩)**

**ಸಡಿಲಿಸಿದ ನಿರಿಯನು ಸವನಿಸಿ ಜಾರಿದ ನಿಡಿಗುರುಲನು ನೇವರಿಸಿ**
**ಕಡುವೇಗದಿಂದೆಳ್ದು ಚೆಂಬೊನ್ನಪಾವುಗೆ ಪಿಡಿದು ಕಾಣದೆ ತಡಕುವಳು (೫–೩೪)**

ಸುರತಾಳನು ದಿಗ್ವಿಜಯಕ್ಕೆ ಹೊರಟಾಗಿನ ವರ್ಣನೆ ಅತಿಶಯೋಕ್ತಿಯಿಂದ ಕೂಡಿದರೂ ವೀರರಸದ ಚಿತ್ರಣ ರೂಪಿಸಿದೆ

**ಶರಧಿಯನೊರೆಯನು ಕೆದರುತೆಣ್ದೆಸೆಗಳಿಗೆ ಪರಿವತರಂಗಗಳೆನಲು ।**
**ಸುರಿವ ಜೊಲ್ಲುಗಳಿಂ ತುರಂಗಮಗಳ ಫೌಜು ಧರೆಯನೆಲ್ಲ ಮುಸುಕಿದವು ॥**
**ಪಡೆಯನು ಹೊರಲಾರದೆ ಭೂತಳವಾಗ ಕಡುವೇಗದಿಂದಾಗಸಕೆ ।**
**ಬಿಡದಡರುವದನೆ ಕೆಂಧೂಳ್ಮುಸುಗಲು ಪಡೆದರು ಕಣ್ಗೆ ಕೌತುಕವ ॥**

ಮಗಳನ್ನು ಕಳಿಸುವಾಗ ಪಾದಶಹ "ತಂದೆ–ತಾಯಿಗಳು ಯತಿರಾಜರಿಂನೆಂದು ಭಾವಿಸು ಕಂದ ನೀನು। ಕಂದರ್ಪ ಜನಕನು ಪೊರೆವನು ಸೊಗವಾಳ್ದು ಮಂದಭಾಗ್ಯರು ಪೋದಪೆವು।" ಎಂಬ ಮಾತು, "ಚೆನ್ನಿಗ ಚೆಲುವರಾಯನೊಳು ಮನ್ನಣೆವಡೆದು ಚಂದ್ರಾರ್ಕತಾರೆಗಳುನ್ನಗಮಂ ಸೊಗವಾಳು. ಅತ್ತೆಮಾವಂದಿರ ಭಾವಮೈದುನರೊಲವೆತ್ತು ಲಜ್ಜಾಭಾರದಿಂದ ಪೊತ್ತಿನೊಳಗೆ ನಿಲ್ಲದುತ್ತರವನು ಕುಡದುತ್ತಮಳೆನಿಸಿಕೊಳ್ಳಮ್ಮ" ಎಂದು ಮಗಳಿಗೆ ಉಪದೇಶ ಮಾಡುವ ತಾಯಿ, ಅಳಿಯನನ್ನು ಕುರಿತು "ಶ್ರೀಯುವತಿಗೆ ಸರಿಯಾಗಿ ಕಾಂಬುದು ಜೀಯ, ನಿನ್ನನೇ ನಂಬಿಹಳು" ಎಂದು ಕಂಬನಿದುಂಬಿ ಹೇಳುವ ಅತ್ತೆಯ ನುಡಿ, ಕಣ್ಣೀರು ಸುರಿಸುತ್ತಾ ಮಗಳನ್ನು ಕಳಿಸಿ ಕೊಟ್ಟ ಸಂದರ್ಭವು ಹೆಣ್ಣುಮಕ್ಕಳನ್ನು ಮದುವೆ ಮಾಡಿ ಕಳಿಸಿ ಕೊಡುವ ತಂದೆ–ತಾಯಿಯರ ದುಃಖದ ನೈಜ ಚಿತ್ರಣವನ್ನು ಕಣ್ಮುಂದೆ ತರಿಸುವುದು.

ಇವರ ಒಲವಿನೊಸಗೆಯನ್ನು ಕಂಡು ದೇವತೆಗಳು "ವರನಂದಿಯ ಪೂರ್ವದ ಕಥೆಯೇನೆಂದು ಅಜನನ್ನು ಬೆಸಗೊಂಡರು. ಅಜನು ಆ ಕಥೆಯನ್ನು ಹೇಳಿದನು.

ಅಲಂಕಾರ, ಉಪಮಾದಿಗಳು ಕಾವ್ಯದಲ್ಲಿ ಸಹಜಸುಂದರವಾಗಿ ಬಂದಿದೆ. ಗಂಡುಮಕ್ಕಳಿದ್ದರೂ ಹೆಣ್ಣುಮಗುವಿಲ್ಲ ಎನ್ನುವ ಕೊರತೆಯನ್ನು ಬಣ್ಣಿಸುವಾಗ:

**ನಳಿನಿಯಿಲ್ಲದ ತಣ್ಗೊಳದಂತೆ ಪೆಣ್ ದುಂಬಿ ಬಳಸದ ಪೂದೋಂಟದಂತೆ।**
**ತಳಪಾಂಸವಿಲ್ಲದ ಕಮಳದಂತೆ ಮಿಗೆ ಕಂಗೊಳಿಸದು ಸುತೆಯಿಲ್ಲದಿರಲು ॥**

ವರನಂದಿಯ ಜನನ ಸಂದರ್ಭದಲ್ಲಿ ನೀಡಿದ ಉಪಮೆ

**ಕೆಸರೊಳು ತಾವರೆ ಶುಕ್ತಿಯೊಳಗೆ ಮುತ್ತು ಮಿಸುಗುತೆ ಪುಟ್ಟುವ ತೆರದಿ।**
**ಎಸೆವ ಪೆಣ್ಮಣಿಯುದರದೊಳು ಜನಿಸಿದಳು ಮಿಸುನಿವಣ್ಣದ ಬಾಲಕಿಯು॥**

**ನೋಡುವ ನೈದಿಲೆಗಳೋ ಕಂಗಳೋ ಮಾತಾಡುವ ಮುಕುರವೋ ಮೊಗವೋ।**
**ಪಾಡುತಿರುವ ಪೊಂಬಂಣದ ಶಂಖವೋ ಗಾಡಿಕಾತಿಯ ನುಣ್ಗೊರಲೋ॥** (೧–೬೯) ಎಂದು ವರನಂದಿಯ ಕಣ್ಣು, ಮುಖ, ಧ್ವನಿಗಳನ್ನು ಬಣ್ಣಿಸಿ

**ನಡೆವೆಳಮಿಂಚೋ ಪೊಂಚೆಳೆಮೆಯ್ಯೊ ಬಿಡದುಸುರಿಡುವ ಸಂಪಿಗೆಯೊ ನಾಸಿಕವೋ।**
**ಕಡುಸವಿಯೇರಿ ಮಿಡುಕುತಿರ್ಪ ಪವಳವೊ ಬೆಡಗಿಯ ಚೆಂಬಣ್ಣದುಟಿಯೋ॥** (೧–೭೦) ಎಂದಿದ್ದಾಳೆ ಕವಯತ್ರಿ.

ಶಬ್ದಾಲಂಕಾರ

**ಇಂದಿರಾಮಂದಿರಾಯತವಕ್ಷ ಪಾದಾರವಿಂದ ಮಿಲಿಂದಾಯಮಾನ।**
**ವಂದಾರುಮಂದಾರ ವೃಷಭಧರಾಧರಮಂದಿರ ಮತಿಯ ಕೊಡೆನಗೆ ॥**
**ಪರಿಪೂರ್ಣಕಾಮ ನಿರ್ಜಿತದನುಜಸ್ತೋಮ ಸುರುಚಿರಮುಖಜಿತಸೋಮ।**
**ವರಶೇಷಭೂಧರಧಾಮ ಸನ್ಮತಿಯನು ಕರುಣಿಸು ಸುಗುಣಾಭಿರಾಮ॥**

ವಿರಹವೇದನೆಯಿಂದ ನೊಂದ ವರನಂದಿಯ ಸ್ಥಿತಿಯನ್ನು **"**ಮೊಗವೆಲ್ಲ ಬಾಡಿತು ಮೈ ಕಂದಿತು ಪಗಲಿನ ನೈದಿಲೆಯಂತೆ**"** ಎಂದು ಬಣ್ಣಿಸಿದ್ದಾಳೆ.

**ಚೆಂದಳಿರಿನಂದವಸುನಿಂದಿಸುತ್ತಿರುವ ಪೊಂದಾವರೆಗಳ ಚೆಲ್ವನು ನೀಳ್ಕರಿಸುವ।**
**ಪೊಂದಿದಂದುಗೆ ಗೆಜ್ಜೆಯಿಂದ ದನಿಗುಡುವ ಇಂದಿರೆಯ ಮೆಲ್ಲಡಿಯ ಪೊಗಳಿದರು ॥** – ಎಂಬಲ್ಲಿ ಶಬ್ದಾಲಂಕಾರ, ಅರ್ಥಾಲಂಕಾರಗಳೆರಡೂ ಜೊತೆಗೂಡಿವೆ.

ಚೆಲುವಾಂಬೆಯ ಈ ಕಾವ್ಯವು ಅವಳೇ ಹೇಳಿರುವಂತೆ ಸರಸಕಾವ್ಯ; ಅವಳ ಕಾವ್ಯದಿಂದ ಅವಳ ಪಾಂಡಿತ್ಯ, ಸಹೃದಯತೆ, ಸಾಹಿತ್ಯರಸಿಕತೆಗಳು ವ್ಯಕ್ತವಾಗುತ್ತವೆ; ಅವಳ ಕಾವ್ಯಗಳಿಂದ ಕನ್ನಡ ಸಾಹಿತ್ಯಸಿರಿ ಹೆಚ್ಚಿದೆ ಎಂಬ ಸರೋಜಿನಿ ಮಹಿಷಿ ಅವರ ಮಾತಿನಲ್ಲಿ ಅತ್ಯುಕ್ತಿಯಿಲ್ಲ.

**ಕಥಾವಸ್ತು:** ದಿಲ್ಲಿಯ ಪಾದಶಾಹನ ಮಗಳಾಗಿ ಹುಟ್ಟಿದ ವರನಂದಿಯು, ದಿಗ್ವಿಜಯದ ವೇಳೆಯಲ್ಲಿ ತನ್ನ ತಂದೆಯು ಯದುಗಿರಿಯಿಂದ (ಮೇಲುಕೋಟೆ) ಕೊಂಡೊಯ್ದ ಚೆಲುವನಾರಾಯಣನ ವಿಗ್ರಹವನ್ನು ತನ್ನರಮನೆಯಲ್ಲಿ ಇರಿಸಿಕೊಳ್ಳುತ್ತಾಳೆ. ತನ್ನ ಸಖಿಯರಿಂದ ಆತನನ್ನು ಪೂಜಿಸುವ ವಿಧಾನ ಕಲಿತು, ಅವನನ್ನು ಒಲಿಸಿಕೊಳ್ಳುತ್ತಾಳೆ. ದೇವತೆಗಳ ಸಮ್ಮುಖದಲ್ಲಿ ಮದುವೆಯೂ ಆಗುತ್ತದೆ. ಕೆಲದಿನಗಳ ನಂತರ ಚೆಲುವನಾರಾಯಣ ಮರಳಿ ಹೋಗಬೇಕೆಂದು ಚಿಂತಿಸಿ, ರಾಮಾನುಜರ ಕನಸಿನಲ್ಲಿ ಕಾಣಿಸಿಕೊಂಡು ಕರೆದೊಯ್ಯುವಂತೆ ಹೇಳುತ್ತಾನೆ. ಹಲವರನ್ನೊಡಗೊಂಡು ದಿಳ್ಳಿಗೆ ಬಂದ ರಾಮಾನುಜರನ್ನು ಪಾದಶಹನು ಸ್ವಾಗತಿಸಿ, ಅವರ ಸೂಚನೆಯ ಮೇರೆಗೆ ಚೆಲುವನಾರಾಯಣನನ್ನು ಕಳಿಸಿಕೊಡಬೇಕೆಂದು ಮಗಳನ್ನು ಕೇಳುತ್ತಾನೆ. ತನ್ನನ್ನು ಕಳಿಸಲು ನಿರಾಕರಿಸಿದ ವರನಂದಿಯನ್ನು ನಾರಾಯಣನೇ ಸಮಾಧಾನ ಪಡಿಸಿ, ತಂದೆಯನ್ನೊಪ್ಪಿಸಿ ಅವಳೂ ಯದುಗಿರಿಗೆ ಬರಬಹುದೆಂದು ಸೂಚಿಸಿ ಹೊರಡುತ್ತಾನೆ.

ಚೆಲುವನಾರಾಯಣನನ್ನು ಕಳುಹಿಸಿ, ವೇದನೆ ಪಡುವ ಮಗಳನ್ನು ಸಂತೈಸಲಾರದೆ ತಂದೆ ದುಃಖಿಸುತ್ತಾನೆ. ದೈವ ಸಂಕಲ್ಪದಂತೆ ಈಗಾಗಲೇ ಇವರಿಬ್ಬರಿಗೆ ಮದುವೆಯಾಗಿರುವುದನ್ನು ಅರಿತು, ತನ್ನ ಮಗಳನ್ನು ರಾಮಾನುಜರ ಬಳಿಗೆ ಕರೆತರುತ್ತಾನೆ. ರಾಮಾನುಜರು ವರನಂದಿಯನ್ನು ಚೆಲುವರಾಯನ ಒಡ್ಡೋಲಗಕ್ಕೆ ಕರೆತಂದು ಇಬ್ಬರಿಂದಲೂ ತಿರುಮಾಲೆಗಳನ್ನು ಹಾಕಿಸಲು, ದಿವ್ಯಾಸನಗಳಲ್ಲಿ ಕುಳಿತ ಇವರಿಗೆ ಸುಮಂಗಲೆಯರು ಆರತಿ ಎತ್ತುತ್ತಾರೆ. ಸುರತಾಳನು ಅಳಿಯನಿಗೆ ನಾನಾ ಬಳುವಳಿಯನ್ನು ಕೊಟ್ಟು ಹಿಂದಿರುಗುತ್ತಾನೆ. ಯದುಗಿರಿಯಲ್ಲಿ ಇವರೀರ್ವರನ್ನು ಪಲ್ಲಕ್ಕಿಯಲ್ಲಿ ಕೂರಿಸಿ ಮೆರವಣಿಗೆ ಮಾಡಲಾಗುತ್ತದೆ. ಶ್ರೀದೇವಿಯು ತಂಗಿ ಬಾರೆಂದು ಕರೆದುಕೊಂಡು ಹೋಗಿ ಸಿಂಗರಿಸುತ್ತಾಳೆ. ಚೆಲುವರಾಯನು **"**ಉರದೊಳಗೆ ಸಿರಿಯೆಂತು ನೆಲಸಿರ್ಪಳಂತೆನ್ನ ಸಿರಿಯಡಿಗಳ ಮಧ್ಯದೊಳು ನಿರುತಮಾಗಿರ್ದು ಭಕ್ತರ ಪೊರೆ**"** ಎಂದು ಅವಳನ್ನು ಕುಳ್ಳರಿಸುತ್ತಾನೆ.

ದ್ವಾಪರಯುಗದ ಸತ್ಯಭಾಮೆಯೇ ವರನಂದಿಯಾಗಿ ಜನಿಸಿಬಂದಳಲ್ಲದೆ, ಸತ್ರಾಜಿತನೇ ಸುರತಾಳನಾಗಿ ಜನ್ಮವೆತ್ತಿದನು ಎಂಬ ಹಿಂದಿನ ಜನ್ಮದ ವೃತ್ತಾಂತವೂ ಇಲ್ಲಿದೆ. ಇದರೊಂದಿಗೆ ಯದುಗಿರಿ ಕ್ಷೇತ್ರ ಮಹಿಮೆ ಹಾಗೂ ಅಲ್ಲಿನ ತೀರ್ಥಗಳ ಮಹಿಮೆಯನ್ನೂ ಕವಯತ್ರಿಯು ತಿಳಿಸಿದ್ದಾಳೆ.

**"ಯದುಗಿರಿ ನಿಳಯದ ನೆಲೆಗೈವ ನಿರುಪಮಗೆ ॥ ಸುರತಾಳನು ಕೊಂಡೊಯ್ದು ತನ್ನೂರೊಳು ಸೆರೆಗೈಯ್ಯಲವನ ಕುವರಿಯೆನಿಪ ವರನಂದಿಯೊಡಗೂಡಿ ರಾಮಾನುಜಾಚಾರ್ಯರಿಂ ತಿರುನಾರಾಯಣಪುರಿಗೈತಂದಗೆ ಮಂಗಳಂ । ... ಚೆಲ್ವಾಜಮ್ಮನು ಪೇಳ್ದ ಸರಸ ಕವಿತೆ ಕೇಳ್ದು ಸಲಹುವಗೇ ಮಂಗಳಂ ॥**

ಈ ಎಲ್ಲ ಕಾವ್ಯಗುಣಗಳಿಂದಲೇ ಹದಿನೆಂಟನೆಯ ಶತಮಾನದ ಪ್ರಮುಖ ಕವಯತ್ರಿ ಎನಿಸಿದ ಚೆಲುವಾಂಬೆಯ ಕೃತಿಗಳಲ್ಲಿ 'ವರನಂದೀ ಕಲ್ಯಾಣ'ಕ್ಕೆ ಪ್ರಥಮ ಸ್ಥಾನ ಎನ್ನಬಹುದು. ಕಾವ್ಯ ಚಿಕ್ಕದಾದರೂ, ಕಾವ್ಯಸತ್ವದ ದೃಷ್ಟಿಯಿಂದ ಇದೊಂದು ಅಪೂರ್ವ ಕಾವ್ಯವೆನಿಸಿದೆ. ಈ ಕೃತಿಯು ಹಲವಾರು ದೃಷ್ಟಿಯಿಂದ ಮಹತ್ವದ್ದೆನಿಸಿದೆ. ಮಹಿಳೆಯೋರ್ವಳು ರಚಿಸಿರುವ ದೀರ್ಘಕಾವ್ಯವೆನಿಸಿದೆ. ಸಂಪ್ರದಾಯವನ್ನನುಸರಿಸಿ ರಚಿಸಲಾಗಿದ್ದರೂ ಇದರಲ್ಲಿ ನವೀನತೆ ಮೇಳೈಸಿದೆ. "ವರನಂದಿಯ ಬಾಲಕ್ರೀಡೆ, ವಿರಹ ಮತ್ತು ಶೃಂಗಾರ, ಮದುವೆ ಮುಂತಾದ ಸಂದರ್ಭಗಳಲ್ಲಿ ಚೆಲುವಾಂಬೆಯ ಕಾವ್ಯಪ್ರೌಢಿಮೆಯನ್ನು ಕಾಣಬಹುದು" (ಮಂಜಪ್ಪಶೆಟ್ಟಿ : 1984)

ಶ್ರೀವೈಷ್ಣವ ಮತಪ್ರವರ್ತಕರಾದ ರಾಮಾನುಜರೇ ವೆಂಕಟೇಶನನ್ನು ಯದುಗಿರಿಗೆ ತಂದವರು ಎಂಬ ಐತಿಹಾಸಿಕ ವಾಸ್ತವಾಂಶ, ಕಾವ್ಯಮಯವಾಗಿ ವ್ಯಕ್ತವಾಗಿದೆ. ಹೊಯ್ಸಳ ವಿಷ್ಣುವರ್ಧನನ ಸಹಾಯ, ಪ್ರೋತ್ಸಾಹಗಳಿಂದ ರಾಮಾನುಜರು ಮೇಲುಕೋಟೆ (ಯದುಗಿರಿ)ಯಲ್ಲಿ 'ತಿರುನಾರಾಯಣಪೆರುಮಾಳ್' ದೇವಾಲಯವನ್ನು ಕಟ್ಟಿಸಿದ್ದು ಇತಿಹಾಸಪ್ರಸಿದ್ಧವಾದ ಮಾತು (ಡಾ.ಟಿ.ಎಂ.ಪಿ.ಮಹಾದೇವನ್: ಸಂತರಚರಿತೆ, ಪು.೭೭) ಅದನ್ನೇ ಕಾವ್ಯದಲ್ಲಿ ಕವಯಿತ್ರಿ ಬಳಸಿಕೊಂಡಿದ್ದಾಳೆ. ದೇಸಿ ಛಂದಸ್ಸಿನ ಸಾಂಗತ್ಯವನ್ನೇ ಬಳಸಿಕೊಂಡು ಹಾಡುಗಬ್ಬವನ್ನು ಭಕ್ತಿರಸ ಪ್ರಧಾನವಾಗಿ ರಚಿಸಿದ್ದು ಈ ಕಾಲದ ವೈಶಿಷ್ಟ್ಯ ಚೆಲುವಾಂಬೆ ತನ್ನ ಕಾಲದ ಪ್ರಸಿದ್ಧ ಹಾಡಿನ ಮಟ್ಟನ್ನು ಪರಿಣಾಮಕಾರಿಯಾಗಿ ಬಳಸಿಕೊಂಡಿದ್ದಾಳೆ. (ಸರೋಜಿನಿ ಮಹಿಷಿ:೧೯೬೫) ಇವಳ ಮತ್ತೊಂದು ಕೃತಿ **ಅಮ್ಮನವರ ಲಾಲಿಪದದಲ್ಲಿ** ಸೌಕುಮಾರ್ಯದ ವರ್ಣನೆ ಸುಕುಮಾರ ಸುಲಲಿತ ಪದಗಳಿಂದಲೇ ಮೂಡಿಬಂದಿದೆ. ಸಂದರ್ಭಕ್ಕೆ ತಕ್ಕ ಭಾವ ಕಾವ್ಯದಲ್ಲಿ ತರುವ ಚಾತುರ್ಯತೆ ಇವಳಿಗೆ ಸಿದ್ಧಿಸಿದೆ.

**ವೆಂಕಟಾಚಲ ಮಹಾತ್ಮ್ಯಂ ಲಾಲಿಪದ**: ಚೆಲುವಾಂಬೆಯ ಎರಡನೆಯ ಕೃತಿಯಾದ ವೆಂಕಟಾಚಲ ಮಹಾತ್ಮ್ಯಂ ಲಾಲಿಪದವು ಸುಂದರವಾದ ನೀಳ್ಗವಿತೆ. ವೆಂಕಟಗಿರಿ ಮತ್ತು ವಂಕಟೇಶನ ಮಹಿಮೆ ಜೊತೆಗೆ ವಿಷ್ಣುವಿನ ಹತ್ತು ಅವತಾರಗಳು ಇಲ್ಲಿ ವರ್ಣಿತವಾಗಿದೆ. ವೆಂಕಟಗಿರಿಯ ಮಹಿಮೆ, ಅಲ್ಲಿಯ ಸ್ಥಳಪುರಾಣ, ಹತ್ತಾರು ತೀರ್ಥಗಳ ಮಹಿಮೆಯನ್ನು ಸಂಕ್ಷಿಪ್ತವಾಗಿ ಮತ್ತು ಸ್ವಾರಸ್ಯಪೂರ್ಣವಾಗಿ ವರ್ಣಿಸಿದ್ದಾಳೆ. ಮಾತ್ರಾಗಳ ಚೌಪದಿಯಲ್ಲಿ ರಚಿತವಾಗಿರುವ ಈ ಕೃತಿಯಲ್ಲಿ ಒಟ್ಟು ೨೦೩ ಲಾಲಿಪದಗಳಿವೆ.

ವೃಷಭಗಿರಿಯಲ್ಲಿ ನೆಲೆಸಿರುವ ವೆಂಕಟೇಶನನ್ನು ಗಿರಿಯೆಂಬ ತೊಟ್ಟಿಲಲ್ಲಿ ಮಲಗಿರುವ ಶಿಶುವೆಂದು ಭಾವಿಸಿ ಲಾಲಿ ಹಾಡುವ ಮೂಲಕ ವೆಂಕಟಗಿರಿಯ ಮಹಿಮೆಯನ್ನು ಬಣ್ಣಿಸಿದ್ದಾಳೆ:

**ಶ್ರೀವಾಸುದೇವ ನಿನ್ನನ್ನು ತೊಟ್ಟಿಲೊಳಗೆ**
**ಭಾವಿಸುತೆ ಶಿಶುವೆಂದು ಮಲಗಿರುವೆ ಮೊಳಗೆ**
**ದೇವದುಂದುಭಿನೃತ್ಯವಚ್ಚರಿಯರೆಸಗೆ**
**ದೇವಸುದತಿಯರು ತಂದಾರತಿಯ ಬೆಳಗೆ॥**

ವೆಂಕಟೇಶನ ಮಹಿಮೆಯನ್ನು ತಿಳಿಸುವ ಈ ಕೃತಿಯಲ್ಲಿ ಸಂಧಿ, ಆಶ್ವಾಸಗಳೆಂಬ ವಿಭಾಗಗಳಿಲ್ಲ. ಕಾವ್ಯಾರಂಭದಲ್ಲಿ ಜೋಜೋ ಎಂದು ಆರಂಭವಾಗುವ ಪಲ್ಲವಿ ಇದೆ. ನಂತರದ ಪದ್ಯಗಳು ಕ್ರಮವಾಗಿ ಒಂದು ಪದ್ಯ ಜೋ ಜೋ ಎಂದು ಕೊನೆಯಾದರೆ, ಮುಂದಿನದು ಲಾಲಿ ಎಂದು ಕೊನೆಯಾಗುತ್ತದೆ.

ಪೂರ್ವದಲ್ಲಿ ಸ್ವಯಂ ನಾರಾಯಣನೇ ಭೂದೇವಿಗೆ ತಿಳಿಸಿದ ಕಥೆಯನ್ನು ನಾರದರು ಭೃಗುಮುನಿಗೆ ಹೇಳಿದಂತೆ ಇಲ್ಲಿ ಕಥೆ ನಿರೂಪಿತವಾಗಿದೆ. ನಾರದನು ಭೃಗುಮುನಿಗೆ ಹೇಳಿದ ವೆಂಕಟಗಿರಿಯ ಮಹಿಮೆಯನ್ನು ತಾನು

ಕನ್ನಡದಲ್ಲಿ ಹೇಳುತ್ತಿರುವುದಾಗಿ ಚೆಲುವಾಂಬೆಯು, ತಿಳಿಸಿದ್ದಾಳೆ. ಈ ಕೃತಿಯನ್ನು ಸಂಪ್ರದಾಯದಂತೆ ಕುಲದೈವ, ಗುರು–ಹಿರಿಯರಾರ ಸ್ತುತಿಯೂ ಇಲ್ಲದೆ ನೇರವಾಗಿ ಆರಂಭಿಸಿದ್ದಾಳೆ.

"ನಾನಾಪುರಾಣೋಕ್ತವಾದ ಕಥೆಗಳನು ಆನಂದದಿಂ ಪೇಳ್ವೆ ತಚ್ಚರಿತ್ರವನು" ಎಂದು ಸ್ವಯಂ ಕವಯತ್ರಿಯೇ ತನ್ನ ಈ ಕೃತಿಗೆ ಅನೇಕ ಪುರಾಣಗಳು ಆಕರವಾಗಿವೆ ಎಂಬುದನ್ನು ತಿಳಿಸಿದ್ದಾಳೆ.

ವೆಂಕಟೇಶ್ವರನು ನೆಲೆಸಿರುವ ಪರ್ವತಕ್ಕೆ ಶೇಷಾದ್ರಿ, ವೃಷಭಾದ್ರಿ, ನಾರಾಯಣಾದ್ರಿ, ಅಂಜನಾದ್ರಿ, ವೇಂಕಟಗಿರಿ, ವರಾಹಕ್ಷೇತ್ರ, ಗರುಡಾದ್ರಿ ಮೊದಲಾದ ಹೆಸರುಗಳು ಬರಲು ಕಾರಣವಾದ ಪುರಾಣಗಳನ್ನೂ, ವೆಂಕಟೇಶ್ವರನ ಮಹಿಮೆಗಳನ್ನೂ, ಈ ಗಿರಿಯ ತಪ್ಪಲಲ್ಲಿರುವ ತೀರ್ಥಗಳ ಮಹಿಮೆಯನ್ನೂ, ಸ್ವಯಂವರದಲ್ಲಿ ಅಲಮೇರ್ಲುಮಂಗೆಯನ್ನು ವರಿಸಿದ ವಿಷ್ಣುವಿನ ಕಥೆ, ವೇದಾವತಿಯು ಮುಂದಿನ ಜನ್ಮದಲ್ಲಿ ಪದ್ಮಾವತಿಯಾಗಿ ವೆಂಕಟೇಶ್ವರನನ್ನು ವರಿಸಿದ ಕಥೆಗಳನ್ನು ಈ ೨೦೩ ಚೌಪದಗಳಲ್ಲಿ ಚೆಲುವಾಂಬೆಯು ಬಣ್ಣಿಸಿದ್ದಾಳೆ.

**ಪಸೆಯೊಳಗೆ ಕುಳ್ಳಿರ್ದ ಕುಸುಮನೇತ್ರನನು**
**ವಸುಮತೀಶ್ವರನೆನಿಸುವಾಕಾಶನೃಪನು**
**ಒಸಗೆ ಮಿಗೆ ಕಣ್ಗೊಳಿಸಿ ತನ್ನ ತನುಜೆಯನು**
**ಪೊಸವಿಭವದಿಂ ಧಾರೆಯೆರೆದು ಪೆರ್ಚಿದನು – ಜೋ ಜೋ (೧೨೦)**

**ನೆಲದಾಣ್ಮ ಕೃಷ್ಣರಾಜೇಂದ್ರನರ್ಧಾಂಗಿ**
**ಚೆಲುವಾಂಬೆ ತನ್ನೆಡೆಗೆ ಹರಿಯೈದಲಾಗಿ**
**ಪಲವಗೆಯ ದಿವ್ಯೋತ್ಸವಂಗಳನುವಾಗಿ**
**ಸೆಲೆ ವಿರಚಿಸುತ್ತಿಹಳು ಭಕ್ತಿಪರಳಾಗಿ – ಜೋ ಜೋ (೨೦೦)**

**ಶ್ರೀ ಕಾಂತನೃಪನುದರವಾರ್ಧಿಯೊಳು ಬಂದು**
**ಶ್ರೀ ಕೃಷ್ಣರಾಜೇಂದ್ರನರ್ಧಾಂಗಿಯೆಂದು**
**ಲೋಕವಿಶ್ರುತೆಯಾದ ಚೆಲ್ವಾಂಬೆಗಿಂದು**
**ಬೇಕಾದಭೀಷ್ಟಗಳ ಕೊಡು ದಯಾಸಿಂಧು – ಜೋ ಜೋ (೨೦೨)**

"ಪರಮಾತ್ಮನನ್ನು ತೊಟ್ಟಿಲೊಳಿಟ್ಟು ತೂಗಬೇಕೆನ್ನುವ ಕವಯಿತ್ರಿಗೆ ಬ್ರಹ್ಮಾಂಡವೇ ಮಂಟಪ, ವೃಷಭಾದ್ರಿಯೇ ತೊಟ್ಟಿಲು ಎಂಬ ರೂಪಕ ಕವಯತ್ರಿಯ ಕಲ್ಪನಾಶಕ್ತಯ ದ್ಯೋತಕವಾಗಿದೆ" (ಸರೋಜಿನಿ ಮಹಿಷಿ: ೧೯೬೫) ಬ್ರಹ್ಮಾಂಡಮಂಟಪದೊಳೆಸೆವ ಫಣಿರಾಜನೆನಿಪ ನರಫಣಿಯ ಕಟ್ಟಿರುವ ಅಣಿಯರದ ವೃಷಭಾದ್ರಿಯ ತೊಟ್ಟಿಲೊಳು ಮೆರೆವ ಗುಣಿ ನಿನ್ನ ತೂಗುವರು– ಪೌರಾಣಿಕ ಚೌಕಟ್ಟಿನೊಳಗೆತನ್ನ ಕವಿತಾ ಪ್ರೌಢಿಮೆಯನ್ನು ತೋರಿದ್ದಾಳೆ. ಬ್ರಹ್ಮಾಂಡವನ್ನೇ ಮಂಟಪವೆಂದು, ಶ್ರೀನಿವಾಸನುನೆಲೆಸಿರುವ ಗಿರಿಯನ್ನು ತೊಟ್ಟಿಲೆಂದು ಭಾವಿಸಿಕೊಳ್ಳುವಂತಹ ಇವಳ ಕಲ್ಪನೆಯ ಹಿಂದೆ ದಾಸಸಾಹಿತ್ಯದ ಪ್ರಭಾವ ಇರುವುದನ್ನು ಗಮನಿಸಬಹುದು. ಇದೇ ಪ್ರಕಾರದ ಪದ್ಯಗಳ ಅಮ್ಮನವರ ಲಾಲಿಪದದಲ್ಲಿಯೂ ಗಮನಿಸಬಹುದು.

**ಅಮ್ಮನವರ ಲಾಲಿಪದ:** ತಿರುಪತಿಯ ವೆಂಕಟರಮಣಸ್ವಾಮಿಯ ಮಡದಿಯಾದ ಲಕ್ಷ್ಮೀದೇವಿಯನ್ನು ಅಲಮೇಲಮ್ಮ ಎಂದು ಸ್ತುತಿಸಲಾಗಿದೆ. ಹಾಗಾಗಿ ಇದನ್ನು ಅಲಮೇರ್ಲುಮಂಗೆ ಲಾಲಿಪದ ಎಂದೂ ಕರೆಯಲಾಗಿದೆ. ಅಲಮೇರ್ಲುಮಂಗೆಯನ್ನು ಅಡಿಯಿಂದ ಮುಡಿಯವರೆಗೆ ಸುಂದರವಾಗಿ ವರ್ಣಿಸಿದ್ದಾಳೆ. ಈ ಕೃತಿಯಲ್ಲಿ ಶಕ್ತಿಯ ವರ್ಣನೆಯೇ ಹೆಚ್ಚಾಗಿದೆ. ಮಾತ್ರಾ ಚೌಪದಿರಲ್ಲಿ ರಚಿತವಾದ ಈ ಕೃತಿಯಲ್ಲಿ ಒಟ್ಟು ೩೫ ಚೌಪದಿಗಳಿವೆ.

**ನಳನಳಿಪ ಸಿರಿಯೊಡಲ ಸಿರಿವೆಳಗೆನಿಸುವ**
**ತಿಳಿಗೊಳದೊಳಗಲದಿರುವೆಣೆವಕ್ಕಿಯಿರವ**

**ತಳೆದಿರುವ ಬಟ್ಟಜವ್ವನದ ಸೊಬಗೆಸೆವ**
**ನಳಿನಲೋಚನೆಯು ಸೋಲಿಪಳು ಕಣ್ಮನವ – ಲಾಲಿ (೧೭)**

**ಕುಸುಮಮಯ ಕಾರ್ಮುಕನ ಮಸೆದಲಗಿವೆನಿಪ**
**ಪೊಸಮಾಂದಳಿರ್ಗಳನು ತುಂಬಿ ಕಣ್ಗೊಳಿಪ**
**ಎಸೆವ ಪೊಂದಾವರೆಗಳನುರೆ ನೀಳ್ಕರಿಪ**
**ಮಿಸುಪ ಹಸ್ತಗಳನೇವಣ್ಣಿಪೆವು ಪೊಳಪ – ಜೋ ಜೋ (೨೨)**

ಈ ರಚನೆಯಲ್ಲಿ ಭಕ್ತಿಯೇ ಮೇಳೈಸಿದ್ದರೂ, ಕವಯತ್ರಿ ಚೆಲುವಾಂಬೆಯು ವರ್ಣನೆಯಲ್ಲಿ ಅಲಂಕಾರಗಳನ್ನು ತಂದು ಕಾವ್ಯಮಯವನ್ನಾಗಿಸಿದ್ದಾಳೆ.

**ಛಂದಸ್ಸು :** ಈ ಎರಡೂ ಕೃತಿಗಳನ್ನು ಚೆಲುವಾಂಬೆಯು ಚೌಪದಿಯಲ್ಲಿ ರಚಿಸಿದ್ದಾಳೆ. ಮಾತ್ರಾಚೌಪದಿಯ ಛಂದಸ್ಸಿಗೆ ಒಳಪಡುವ ಈ ಪದ್ಯಗಳು ನಾಲ್ಕುಸಾಲುಗಳು, ಪ್ರತಿ ಸಾಲಿನಲ್ಲಿಯೂ ೫+೫+೫+೩ ಎಂಬ ಗಣವಿನ್ಯಾಸದ ಒಟ್ಟು ನಾಲ್ಕು ಗಣಗಳಿಂದ ಕೂಡಿವೆ. 'ಛಂದೋಂಬುದಿ'ಯ ಕೆಲವು ಪ್ರತಿಗಳಲ್ಲಿ ಮಾತ್ರಾಚೌಪದಿಯ ಲಕ್ಷಣಗಳು ತಿಳಿದು ಬಂದಿವೆಯಾದರೂ, ವಿದ್ವಾಂಸರು ಇದನ್ನು ಪ್ರಕ್ಷಿಪ್ತವೆಂದೂ, ನಾಗವರ್ಮನ ಈ ಕಾಲದಲ್ಲಿ ಇದು ಪ್ರಚಲಿತವಾಗಿರಲಿಲ್ಲದ ಕಾರಣ ಆತ ಉಲ್ಲೇಖಿಸಿಲ್ಲವೆಂದು ತಿಳಿಸಿದ್ದಾರೆ.

ಪ್ರಕ್ಷಿಪ್ತ ಪಾಠದಲ್ಲಿ ತಿಳಿದುಬರುವ ಚೌಪದಿಯ ಲಕ್ಷಣ ಈ ಪ್ರಕಾರವಾಗಿದೆ

**ಎಸೆವ ಚೌಪದಿಗೆ ಪದಿನೆಂಟು ಮಾತ್ರೆಗಳು**
**ಸಸಿನೆ ಯತಿ ಯೆಂಟಱೊಳು ಪಸರಿಸುತಲಿರಲು**
**ಹಸನಾಗಿ ನಾಲ್ಕು ಪದಸಮನಾಗಿ ಬರಲು**
**ಬಿಸಜಾಕ್ಷಿ ಪ್ರಾಸು ತಿಳಿ ಮೊದಲು ಕಡೆಯಿರಲು॥**

ಇಲ್ಲಿ ತಿಳಿಸಿರುವಂತೆ ಮಾತ್ರಾಗಣಬಂಧದ ಈ ನಾಲ್ಕೂ ಸಮಪಾದ ಹೊಂದಿರುವ ಪದ್ಯದ ಪ್ರತಿಪಾದದಲ್ಲಿ ೧೮ ಮಾತ್ರೆಗಳಿರುತ್ತವೆ. ಪ್ರತಿಪಾದದ ೮ನೆಯ ಮಾತ್ರೆಯ ನಂತರ ಯತಿ ಬರುತ್ತದೆ. ಆದಿ–ಅಂತ್ಯ ಎರಡೂ ಪ್ರಾಸಗಳು ಬರುತ್ತವೆ. ಈ ಚೌಪದಿಯ ಪ್ರತಿಪಾದದಲ್ಲಿ ೩ ಪಂಚಮಾತ್ರಾಗಣ + ೧ ತ್ರಿಮಾತ್ರಾಗಣ ಬರುತ್ತವೆ.

"ಈ ಮಾತ್ರಾಚೌಪದಿಯ ಉಗಮದ ಬಗ್ಗೆ ಭಿನ್ನಾಭಿಪ್ರಾಯಗಳಿದ್ದರೂ ಅಂಶಗಣ ಬಂಧವಾದ ಛಂದೋವಸಂತವೇ ಮುಂದೆ ಮಾತ್ರಾಗಣಕ್ಕೆ ತಿರುಗಿ ಚೌಪದಿಯಾಗಿದೆ"[೩೨].

ಕನ್ನಡದಲ್ಲಿ ಈ ಚೌಪದಿಯಲ್ಲಿ ಬಿಡಿಪದ್ಯಗಳು ರಚನೆಯಾಗಿದ್ದರೂ, ದೊಡ್ಡಕೃತಿಯೊಂದು ರಚನೆಯಾಗಿಲ್ಲ. ಚೆಲುವಾಂಬೆಯ 'ವೆಂಕಟಾಚಲಮಹಾತ್ಮ್ಯಂ ಲಾಲಿಪದ'ವೇ ವಿಸ್ತೃತವಾದುದೆಂದು ಹೇಳಬಹುದು. ಅಮ್ಮನವರೂ ವೆಂಕಟೇಶನ ಜೊತೆಗೆ ಯದುಗಿರಿಗೆ ಬಂದು ನೆಲೆಸಿದ ಕಥೆ ಲಾಲಿಪದದಲ್ಲಿ ಬರುತ್ತದೆ. ಕೃತಿಯ ಕಡೆಯ ಪದ್ಯದಲ್ಲಿ "ವಿರಚಿಸಿದವಳು ಚೆಲ್ವಮಾಂಬೆ ಕವನವನು" ಎಂದು ತನ್ನ ಅಂಕಿತವನ್ನು ಹಾಕಿದ್ದಾಳೆ.

**ಮಂಗಳಾರತಿ ಪದ:** ಚೆಲುವಾಂಬೆಯು ಇಲ್ಲಿ ಕೇವಲ ಐದು ಪದ್ಯಗಳಲ್ಲಿ ಮೇಲುಕೋಟೆಯ ಚೆಲುವನಾರಾಯಣ ಸ್ವಾಮಿಯ ಸ್ತುತಿರೂಪದ ಪದವನ್ನು ರಚಿಸಿದ್ದಾಳೆ. ವರನಂದೀ ಕಲ್ಯಾಣದಲ್ಲಿನ ಚೆಲುವನಾರಾಯಣನ ಕಥೆಯನ್ನು ಇಲ್ಲಿ ಬಹಳ ಚುಟುಕಾಗಿ ವರ್ಣಿಸಿದ್ದಾಳೆ. ಪಲ್ಲವಿ ಹಾಗೂ ಚರಣಗಳನ್ನೊಳಗೊಂಡ ಈ ರಚನೆಯು ಹಾಡಿನ ಮಟ್ಟಿನಲ್ಲಿ ರಚಿಸಿರುವುದೊಂದು ವಿಶೇಷ. "ಚೆಲ್ವಾಜಮ್ಮನು ಪೇಳ್ದ ಸರಸಕವಿತೆಗೇಳ್ದು ಸಲುವಗೆ" ಎಂದು ಕೊನೆಯಾಗುವ ಈ ಮಂಗಳಾರತಿ ಪದಕ್ಕೆ ರಾಗ ಹಾಗೂ ತಾಳವನ್ನೂ ಕವಯತ್ರಿಯೇ ನಿರ್ದೇಶಿಸಿದ್ದಾಳೆ.

**ಕೃಷ್ಣ ಕರ್ಣಾಮೃತವ್ಯಾಖ್ಯೆ:**

ಅರಸಿ ಚೆಲುವಾಂಬೆಯ ಮತ್ತೊಂದು ಕೃತಿ 'ಕೃಷ್ಣಕರ್ಣಾಮೃತವಾಖ್ಯೆ'. ಗ್ರಂಥದ ಹೆಸರೇ ಸೂಚಿಸುವಂತೆ ಇದೊಂದು ಸ್ವತಂತ್ರ ಕೃತಿಯಾಗಿರದೆ, ಸಂಸ್ಕೃತಿ ಕೃತಿಯೊಂದಕ್ಕೆ ರಚಿಸಲಾದ ಟೀಕಾಗ್ರಂಥವಾಗಿದೆ. ಅಪ್ರಕಟಿತವಾದ ಈ ಕೃತಿಯ ಕುರಿತಾಗಿ ಹೆಚ್ಚಿನ ಮಾಹಿತಿಯು ದೊರಕುವುದಿಲ್ಲ.

೧೯೮೪ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಿಂದ, 'ಚಲುವಾಂಬೆಯ ಕೃತಿಗಳು' ಒಂದೆಡೆ ಪ್ರಕಟಗೊಂಡವು, ಆದರೆ 'ಕೃಷ್ಣಕರ್ಣಾಮೃತವಾಖ್ಯೆ'ಯ ಹಸ್ತಪ್ರತಿಯು ಅನಪಲಬ್ದವಾದ ಕಾರಣ ಇಲ್ಲಿ ಸೇರಿಲ್ಲವೆಂದು ಇದರ ಸಂಪಾದಕರು ಮುನ್ನುಡಿಯಲ್ಲಿ ತಿಳಿಸಿದ್ದಾರೆ. ಕವಿಚರಿತೆಯಲ್ಲಿಯೂ ಈ ಕೃತಿಯ ಕುರಿತಾದ ಉಲ್ಲೇಖ ದೊರಕುವುದಿಲ್ಲ.

ಸರೋಜಿನಿ ಮಹಿಷಿಯವರು 'ಕರ್ನಾಟಕದ ಕವಯಿತ್ರಿಯರು' ಕುರಿತಾಗಿ ನಡೆಸಿದ ಸಂಶೋಧನೆಯ ಸಂದರ್ಭದಲ್ಲಿ, ಮೈಸೂರು ಪ್ರಾಚ್ಯ ಸಂಶೋಧನ ಸಂಸ್ಥೆಯಲ್ಲಿ ೨೪೮ ಪುಟಗಳ ಈ ಓಲೆ ಕೃತಿಯನ್ನು ನೋಡಿರುವುದಾಗಿ ತಿಳಿಸಿದ್ದಾರೆ[೩೩]. ಆದರೆ  ಇವರು ನೋಡುವ ವೇಳೆಗಾಗಲೇ ಕೃತಿಯು ಬಹುತೇಕ ನಷ್ಟವಾಗಿದ್ದು, "ತಮಗೆ ದೊರೆತ ಪ್ರತಿಯು ಸಮಗ್ರವಾಗಿಲ್ಲ" ಎಂದು ಉಲ್ಲೇಖಿಸಿದ್ದಾರೆ.

ಈ ಗ್ರಂಥದಲ್ಲಿ ಚೆಲುವಾಂಬೆಯು, ಸಂಸ್ಕೃತದಲ್ಲಿನ ಕೃಷ್ಣ ಕರ್ಣಾಮೃತಕ್ಕೆ ಶಬ್ದಶಃ ಕನ್ನಡ ಟೀಕೆಯನ್ನು ರಚಿಸಿದ್ದಾಳೆ ಎನ್ನಲಾಗಿದೆ. ಸರೋಜಿನಿ ಮಹಿಷಿ ಅವರು "ಈ ಕೃತಿಯಲ್ಲಿ ಚೆಲುವಾಂಬೆಯ ಕನ್ನಡ ಸಂಸ್ಕೃತ ದ್ವಿಭಾಷಾಪಾಂಡಿತ್ಯ ವ್ಯಕ್ತವಾಗಿದೆ" ಎಂದು ಶ್ಲಾಘಿಸಿದ್ದಾರೆ[೩೪].

**ಶ್ರೀಕೃಷ್ಣಕ್ಷಿತಿಮಂಡಲೇಶ್ವರ ದಯಾಮೂರ್ತ್ಯಾ ರಮಾವಲ್ಲಭ ।**
**ನ್ಯಸ್ತಸ್ವಾಂತಭುವಾ ಕಲಾಕಮಲಿನೀ ಬಾಲಾತಪಶ್ರೀಮುಷಾ ॥**
**ಶ್ರೀ ಚೆಲ್ವಾಂಬಿಕಯಾ ಮುದಾ ಪರಮಯಾ ಶ್ರೀಕೃಷ್ಣ ಕರ್ಣಾಮೃತ**
**ವ್ಯಾಖ್ಯಾರಂಜಿತ ಸರ್ವಲೋಕಹೃದಯಾ ಕಾರ್ಣಾಟಿಕಾ (ಕ್ರಿಯ) ಕೀರ್ಯತೆ ॥**

ಕೃಷ್ಣರಾಜನ ಕೃಪೆಯಿಂದ ಸುಂದರೆ ಚೆಲ್ವಾಂಬಿಕೆ ಹರುಷದಿಂದ 'ಕೃಷ್ಣ ಕರ್ಣಾಮೃತಕ್ಕೆ ವ್ಯಾಖ್ಯೆಯನ್ನು ಬರೆದ ವಿಷಯ ಈ ಪದ್ಯದಿಂದ ಗೊತ್ತಾಗುತ್ತದೆ. ವ್ಯಾಖ್ಯಾರಂಭದಲ್ಲಿ ಚೆಲ್ವಾಂಬಿಕೆ ತನ್ನ ವಿಷಯವನ್ನು ಹೇಳಿಕೊಂಡು ಗುರುಗಳಿಗೆ ವಂದಿಸಿ ಮುಂದುವರಿಯುತ್ತಾಳೆ.

ದೊರೆತಿರುವ ಈ ಕೃತಿಯ ಅಸಮಗ್ರ ಓಲೆಗರಿಯ ಕೊನೆಯ ಭಾಗದಲ್ಲಿ ಈಶಾನದೇವನ ಚರಣಾಭರಣಗಳ ವರ್ಣನೆ ಕಂಡುಬರುತ್ತದೆ. 'ವ್ಯಾಖ್ಯೆ'ಯೆಂದು ಇದನ್ನು ಕರೆದಿದ್ದರೂ, ವ್ಯಾಖ್ಯೆಯಲ್ಲಿರಬೇಕಾದ ಲಕ್ಷಣ ಇದರಲ್ಲಿಲ್ಲ. ಇದು ಟೀಕೆಮಾತ್ರ' ಎಂದು "ಕೈಬರಹದ ಗ್ರಂಥಗಳ ವರ್ಣನಾತ್ಮಕ ಪಟ್ಟಿ"ಯಲ್ಲಿ ಹೇಳಲಾಗಿದೆ[೩೫].

**ತುಲಾ ಕಾವೇರೀ ಮಹಾತ್ಮ್ಯಂ:** ಇದೊಂದು ಗದ್ಯ ಗ್ರಂಥ. ಇದು ಆಗ್ನೇಯ ಪುರಾಣದಲ್ಲಿ ಉಕ್ತವಾಗಿರುವ ತುಲಾಕಾವೇರಿ ಮಹಾತ್ಮ್ಯಕ್ಕೆ ಬರೆದ ಕನ್ನಡ ವ್ಯಾಖ್ಯಾನವಾಗಿದೆ. ಈ ಗ್ರಂಥಕ್ಕೆ 'ಚೆಲುವಾಂಬಿಕಾ ವಾಣೀ ವಿಲಾಸ' ಎಂಬ ಮತ್ತೊಂದು ಹೆಸರೂ ಇದೆ. ಮೂವತ್ತು ಅಧ್ಯಾಯಗಳಲ್ಲಿ ರಚಿತವಾಗಿರುವ ಈ ಕೃತಿಯಲ್ಲಿ, ಗ್ರಂಥದ ಶೀರ್ಷಿಕೆಯೇ ಸೂಚಿಸುವಂತೆ ಕಾವೇರಿ ನದಿಯ ಮಹತ್ತ್ವ ವಿಶೇಷವಾಗಿ ವರ್ಣಿತವಾಗಿದೆ.

ಈ ಕೃತಿಯ ಅಂತ್ಯದಲ್ಲಿ ದೊರಕಿರುವ ಪದ್ಯವೊಂದು ತಿಳಿಸುವಂತೆ "ಮೌದ್ಗಲ ಗೋತ್ರದ ವೆಂಕಟಾರ್ಯನ ಮಗ ಶ್ರೀನಿವಾಸ ಎಂಬುವನು ಈ ಟೀಕೆಯನ್ನು ಬರದಂತೆ ತೋರುತ್ತದೆ" ಎಂದು ಕವಿಚರಿತೆಕಾರರು ಅಭಿಪ್ರಾಯ ಪಡುತ್ತಾರೆ[೩೬].

**ಮೌದ್ಗಲ್ಯಾನ್ವಯ ದುಗ್ಧ ಸಿಂಧು ರಜನೀಕಾಂತೇನ ಪುಣ್ಯಾತ್ಮನಾ**
**ಶ್ರೀ ವಾಸಾಖ್ಯ ವಿಪಶ್ಚಿತಾಜನಿಜುಷಾ ಶ್ರೀ ವೆಂಕಟಾರ್ಯಾದ್ಭುವಿ**
**ವ್ಯಾಖ್ಯಾನಂ ಚ ತುಲಾಕವೇರನೃಪಜಾ ಲೀಲಾ ಮಹಿಮ್ನಃ ಕೃತಂ**
**ಕರ್ನಾಟೋಕ್ತಿ ಮಯಂ ಪರಂ ವಿಜಯತಾಮಾಸೇತು ಹೇಮಾಚಲಂ**

ಈ ಮೇಲಿನ ಪದ್ಯದಿಂದ, ಚೆಲುವಾಂಬೆಯ ಅಂಕಿತದಲ್ಲಿ ಶ್ರೀನಿವಾಸನೆಂಬುವವನು ಈ ಕೃತಿಯನ್ನು ಬರೆದಂತೆ ತೋರುತ್ತದೆ ಎಂದು ಈ ಕೃತಿಯ ಸಂಪಾದಕರಾದ ಎಂ.ಪಿ.ಮಂಜಪ್ಪಶೆಟ್ಟಿಯವರು ಅಭಿಪ್ರಾಯ ಪಡುತ್ತಾರೆ[೩೭].

ಈ ಕಾವ್ಯದ ಆದಿಯಲ್ಲಿ ಮೈಸೂರಿನ ಅರಸ, ಚೆಲುವಾಂಬೆಯ ಪತಿ, ಕೃಷ್ಣರಾಜನನ್ನು ಸ್ತುತಿಸಿ, ಚೆಲುವಾಂಬೆಯ್ನನು ಕುರಿತು "ಆತನ ಧರ್ಮಕಾಂತೆಯಾಗಿ ಪತಿದೇವತಾ ವ್ರತದಲ್ಲಿ ವಿದೇಹರಾಜನಂದಿನಿಯಾಗಿ, ಭಕ್ತಿಯಲ್ಲಿ ಶಬರಿಯಾಗಿ, ಪಾವನಚರಿತ್ರದಲ್ಲಿ ಭಾಗೀರಥಿಯಾಗಿ, ಆಶ್ರಿತಮನೋರಥವಿತರಣದಲ್ಲಿ ಮಹಾಲಕ್ಷ್ಮಿಯಾಗಿ, ಸೇನಾಧ್ಯಕ್ಷ ಕಳಲೆ ದೊಡ್ಡಮಹಾರಾಜನಿಗೆ ಪೌತ್ರಿಯಾಗಿ, ಕಾಂತಮಹಾರಾಜನಿಗೆ ಪುತ್ರಿಯಾಗಿರುವ ಚೆಲುವಾಂಬಿಕೆಯು ಕರ್ನಾಟಕ ಭಾಷೆಯಿಂದ ವಿರಚಿಸುವ ಆಗ್ನೇಯಪುರಾಣೋಕ್ತವಾದ ತುಲಾಕಾವೇರಿ ಮಹಾತ್ಮ್ಯದ ಅರ್ಥಕ್ಕೆ ಮಂಗಳಮಹಾಶ್ರೀ" ಎಂದು ಕೃತಿ ಆರಂಭವಾಗಿದೆ. ಅಲ್ಲದೆ ಮುಂದಿನ ಪ್ರತೀ ಅಧ್ಯಾಯಗಳು "ಚೆಲುವಾಂಬಿಕೆಯಿಂದ ಕರ್ನಾಟಭಾಷಾ ರೂಪವಾಗಿ ವಿರಚಿತವಾದ ಚೆಲುವಾಂಬಿಕಾ ವಾಣೀವಿಲಾಸವೆಂಬ ಆಗ್ನೇಯಪುರಾಣೋಕ್ತ ತುಲಾಕಾವೇರಿ ಮಹಾತ್ಮ್ಯದಲ್ಲಿ......" ಎಂದು ಮುಕ್ತಾಯವಾಗುತ್ತದೆ. ಈ ಕೃತಿಯ ಎಲ್ಲ ಅಧ್ಯಾಯಾಂತ್ಯಗಳಲ್ಲಿ 'ಚೆಲುವಾಂಬಿಕೆಯಿಂದ ವಿರಚಿತವಾದ' ಎಂಬ ಸ್ಪಷ್ಟ ಉಲ್ಲೇಖಗಳಿವೆ.

'ತುಲಾ ಕಾವೇರೀ ಮಹಾತ್ಮ್ಯಂ' ಕೃತಿಯು ಪೂರ್ಣವಾಗಿ ಗದ್ಯ ರೂಪವಾಗಿದ್ದು, ಆದಿಯಲ್ಲಿ ಮಾತ್ರ ಒಂದು ಸ್ರಗ್ಧರಾವೃತ್ತದ ಪದ್ಯವಿದೆ. ಪ್ರತಿಯೊಂದು ಅಧ್ಯಾಯದ ಅಂತ್ಯದಲ್ಲಿಯೂ ಚೆಲುವಾಂಬೆಯ ಇತಿವೃತ್ತವನ್ನು ಹೇಳಿದೆ. ಗ್ರಂಥದಲ್ಲಿ ಪುನುರುಕ್ತಿಗಳು ವಿಶೇಷವಾಗಿದ್ದು ಭಾಷೆ ಸರಳವಾಗಿದೆ.

**ಕಥಾವಸ್ತು:** ಅಗಸ್ತ್ಯರಿಂದ ಹರಿಶ್ಚಂದ್ರನಿಗೆ ಹೇಳಲಾದ ತುಲಾಕಾವೇರಿ ಮಾಹತ್ಮ್ಯೆಯನ್ನು ಧರ್ಮವರ್ಮನೆಂಬ ಚೋಳರಾಜನಿಗೆ ಆತನ ಗುರು ದಾಲ್ಭ್ಯಮಹಾ ಋಷಿಯು ಹೇಳಿದಂತೆ ಇಲ್ಲಿನ ಕಥೆಗಳು ನಿರೂಪಿತವಾಗಿವೆ. ಕಾವೇರಿ ತೀರ್ಥದ ಮಹಿಮೆಯನ್ನು ಪ್ರಚುರಪಡಿಸುವುದೇ ಈ ಕೃತಿಯ ಉದ್ದೇಶ. ಸಕಲ ಜೀವಜಂತುಗಳೂ, ಎಲ್ಲಾವರ್ಗದವರಿಗೂ ಸುಖಸಂಪದವೂ, ಮೋಕ್ಷಪ್ರದವೂ ಆಗಿ ಕಾವೇರಿಯು ಲೋಕೋದ್ಧಾರ ಗೈಯುತ್ತಿರುವ ವಿಚಾರ ಈ ಕೃತಿಯಲ್ಲಿದೆ. ಜೊತೆಗೆ ಅಗಸ್ತ್ಯರನ್ನು ಮದುವೆಯಾದ ಕವೇರರಾಜನ ಮಗಳು ಕಾವೇರಿಯು ನದಿಯಾಗಿ ಹರಿದ ಕಥೆಯೂ ಇಲ್ಲಿ ಬಣ್ಣಿತವಾಗಿದೆ.

ಕೃತಿಯ ವೈಶಿಷ್ಟ್ಯ: ಈ ಕೃತಿಯ ಗದ್ಯದ ಭಾಷೆಯು ತುಂಬಾ ಸರಳವಾಗಿದೆ. ದೀರ್ಘ ಸಮಾಸಪದ, ಅಲಂಕಾರಗಳಾವುವೂ ಇಲ್ಲಿ ಕಂಡುಬರುವುದಿಲ್ಲ. ಚಲುವಾಂಬೆಯ ಉಳಿದ ಕೃತಿಗಳಲ್ಲಿ ಕಂಡುಬರುವ ನಡುಗನ್ನಡ ಭಾಷಾವೈಶಿಷ್ಟ್ಯ ಈ ಗದ್ಯ ಕೃತಿಯಲ್ಲಿ ಕಾಣಸಿಗುವುದಿಲ್ಲ. ಇಲ್ಲಿನ ಕತೆಯು ಸ್ಪಷ್ಟ, ಸರಳ ನಿರೂಪಣೆಯಿಂದ ಕೂಡಿದೆ. ಬಹುಶಃ ಮೂವತ್ತು ಅಧ್ಯಾಯಗಳಷ್ಟು ದೀರ್ಘ ವಸ್ತುವನ್ನು ಆರಿಸಿಕೊಂಡಿರುವ ಕಾರಣ ಚಲುವಾಂಬೆಯು ವ್ಯಾಖ್ಯಾನವನ್ನು ಚುಟುಕಾಗಿಯೂ, ವೇಗವಾಗಿಯೂ ನಿರೂಪಿಸಿದ್ದಾಳೆ.

ಕಾವೇರೀ ಮಹಾತ್ಮೆಯ ಕುರಿತಾದ ಇನ್ನೂ ಹಲವಾರು ಗ್ರಂಥಗಳು ಕನ್ನಡದಲ್ಲಿ ರಚಿತವಾಗಿವೆಯಾದರೂ, ಈ ಎಲ್ಲ ಗ್ರಂಥಗಳಿಗಿಂತಲೂ ಚೆಲುವಾಂಬೆ ರಚಿಸಿರುವ ಈ 'ತುಲಾಕಾವೇರೀ ಮಹಾತ್ಮ್ಯಂ' ಕೃತಿಯೇ ಪ್ರಾಚೀನವಾದುದಾಗಿದೆ.

೧೭ನೆಯ ಶತಮಾನದಲ್ಲಿ ಪ್ರಚುರವಾಗಿದ್ದ ಶ್ರೀವೈಷ್ಣವಪರ ಭಕ್ತಿಯ ಪ್ರಭಾವ ಚೆಲುವಾಂಬೆಯ ಎಲ್ಲ ಕೃತಿಗಳಲ್ಲಿಯೂ ಕಂಡುಬರುತ್ತದೆ. ಸರಳತೆ ಇವಳ ಕಾವ್ಯದ ಮುಖ್ಯ ಲಕ್ಷಣ. ಪದಗುಚ್ಛಗಳಾಗಲೀ ದೀರ್ಘಸಮಾಸಪದಗಳಾಗಲೀ ಸಂಸ್ಕೃತ ಭೂಯಿಷ್ಠತೆಯಾಗಲೀ ಇವಳ ಕಾವ್ಯಗಳಲ್ಲಿ ಕಾಣುವುದಿಲ್ಲ. ಇವಳು ರಾಣಿಯಾಗಿದ್ದು, ಘನ ಪಂಡಿತರ ನಡುವೆಯಿದ್ದೂ, ತಿಳಿಗನ್ನಡದಲ್ಲಿ ಸಾಮಾನ್ಯರಿಗೂ ಅರ್ಥವಾಗುವ ರೀತಿಯಲ್ಲಿ ಕಾವ್ಯಗಳನ್ನು ರಚಿಸಿರುವುದು ಇವಳ ಅಗ್ಗಳಿಕೆ.

ಇವಳ ಕಾವ್ಯಗಳಲ್ಲಿ ಕಾಣುವ ಮತ್ತೊಂದು ಗುಣ ಅಂಶವೆಂದರೆ ಸಂಕ್ಷಿಪ್ತತೆ. ಸಾಮಾನ್ಯ ಕವಿಯೊಬ್ಬ ನಾಲ್ಕಾರು ಪದ್ಯಗಳಲ್ಲಿ ಹೇಳಬಹುದಾದುದನ್ನು ಇವಳು ಒಂದೆರಡು ಪಾದಗಳಲ್ಲಿ ಹೆಚ್ಚೆಂದರೆ ಒಂದು ಪದ್ಯಗಳಲ್ಲಿ ಹೇಳಿ ಮುಗಿಸಿಬಿಡುತ್ತಾಳೆ.

ಮೈಸೂರು ರಾಜವಂಶದ ಕೆಲವು ಸಂಪ್ರದಾಯಗಳು, ಅರಮನೆಯ ರೀತಿ ರಿವಾಜುಗಳನ್ನು ತಿಳಿದುಕೊಳ್ಳುವುದಕ್ಕೂ ಇವಳ ಕಾವ್ಯಗಳು ಸಹಾಯಕವಾಗಿವೆ. ರಾಜರ ಅಲಂಕಾರಗಳು, ಅವರ ಧರಿಸುತ್ತಿದ್ದ ಉಡುಗೆ ತೊಡುಗೆಗಳು, ಅವರು ಮಕ್ಕಳನ್ನು ಬೆಳೆಸುತತಿದ್ದ ರೀತಿ, ಅವರ ಆಟಪಾಠಗಳು, ಮದುವೆಯ ಸಂಪ್ರದಾಯಗಳು ಮುಂತಾದವುಗಳ ಸಂಕ್ಷಿಪ್ತ ವಿವರಗಳು ಇಲ್ಲಿ ದೊರೆಯುತ್ತವೆ. ಒಟ್ಟಿನಲ್ಲಿ ಚೆಲುವಾಂಬೆಯು ಹದಿನೆಂಟನೆಯ ಶತಮಾನದ ಕನ್ನಡದ ಹೆಮ್ಮೆಯ ಕವಯಿತ್ರಿ. ಇವಳು ದೀರ್ಘಕಾವ್ಯವನ್ನು ರಚಿಸಿರುವ ಹೆಗ್ಗಳಿಕೆಗೆ ಪಾತ್ರಳಾಗಿದ್ದಾಳೆ. ರಾಣಿಯೊಬ್ಬಳು ಇಂಥ ಕಾವ್ಯಗಳನ್ನು ರಚಿಸಿರುವುದು ವಿಶೇಷವಾಗಿದೆ. ಕನ್ನಡ ಸಾಹಿತ್ಯದಲ್ಲಿ ವಿಶೇಷ ಸ್ಥಾನಕ್ಕೆ ಅರ್ಹಳಾದ ಕವಿಯತ್ರಿಯಾಗಿದ್ದಾಳೆ.

**ಸುರಪುರದ ರಾಣಿ ರಂಗಮ್ಮ** (ಕೀರ್ತನೆ)

ಸುರಪುರದ ಮುಮ್ಮಡಿ ವೆಂಕಟಪ್ಪ ನಾಯಕ ಕ್ರಿ.ಶ.೧೮೧೮–೧೮೭೭ ವರೆಗೂ ಈ ಮನೆತನದಲ್ಲಿ ಆಳ್ವಿಕೆ ನಡೆಸಿದ ಅರಸ. ಈತನ ಪಟ್ಟದರಸಿ ರಾಣಿರಂಗಮ್ಮ. ಸುರಪುರದ ಬಳಿಯ ರಂಗಂಪೇಟೆಯು ಕ್ರಿ.ಶ.೧೮೨೨ರಲ್ಲಿ ಇವಳ ಹೆಸರಿನಿಂದಲೇ ಸ್ಥಾಪಿತವಾದುದು. ಇವಳಿಗೆ ಲಕ್ಷ್ಮಿ ಅಥವಾ ಲಕ್ಷ್ಮಮ್ಮಾ ಎಂಬ ಮತ್ತೊಂದು ಹೆಸರೂ ಇದ್ದಂತೆ ತೋರುವುದು.

ತೆಲುಗು ಹಾಗೂ ಕನ್ನಡಭಾಷೆಗಳಲ್ಲಿ ಪ್ರೌಡತ್ವವನ್ನು ಹೊಂದಿದ್ದ ರಾಣಿ ರಂಗಮ್ಮ ಈ ಎರಡೂ ಭಾಷೆಗಳಲ್ಲಿ ಕೀರ್ತನೆಗಳನ್ನು ರಚಿಸಿದ್ದಾಳೆ. ಶೀಲರಂಗಾಂಬ ಎಂಬುದು ಇವಳ ಅಂಕಿತ. ಆದರೆ ಇವಳಿಗೆ ಅಂಕಿತವನ್ನು ನೀಡಿದ ಗುರುಗಳ ಕುರಿತಾಗಲೀ, ಇವಳ ವಿದ್ಯಾಭ್ಯಾಸದ ವಿಚಾರವಾಗಲೀ ತಿಳಿದುಬರುವುದಿಲ್ಲ. ಇವಳ ತವರುಮನೆ ರತ್ನಗಿರಿ ಎಂದು ತಿಳಿದು ಬರುವುದರಿಂದ, ಇವಳ ಬಾಲ್ಯ ವಿದ್ಯಾಭ್ಯಾಸಗಳು ಇಲ್ಲಿಯೇ ನಡೆದಿರಬಹುದು. ಸುರಪುರದ ಅರಸರು ಪೂಜಿಸುವ ವೇಣುಗೋಪಾಲಸ್ವಾಮಿ ದೇವಸ್ಥಾನದಲ್ಲಿ ಶ್ರೀವೈಷ್ಣವ ಪಂಥದ ಪ್ರಕಾರ ಪೂಜಾದಿಗಳು ವಂಶಪಾರಂಪರ್ಯವಾಗಿ ಇಂದಿಗೂ ನಡೆದುಕೊಂಡು ಬಂದಿರುವುದರಿಂದ, ಸುರುಪುರದ ಅರಸು ಮನೆತನದವರಮೇಲೆ ಶ್ರೀವೈಷ್ಣವ ಧರ್ಮದ ಪ್ರಭಾವವನ್ನು ಗುರುತಿಸಬಹುದು. ಇದೇ ಮನೆತನದವಳಾದ ಅರಸಿ ರಂಗಮ್ಮಳ ಮೇಲೆಯೂ ಶ್ರೀವೈಷ್ಣವ ಪ್ರಭಾವ ವಿರುವುದನ್ನು ಅವಳ ಕೀರ್ತನೆಗಳಲ್ಲಿ ಗುರುತಿಸಬಹುದಾಗಿದೆ.

ಸುರಪುರ ಸಂಸ್ಥಾನದ ಬಹುತೇಕ ಅರಸರು ಸಾಹಿತ್ಯ ಪೋಷಣೆಯಲ್ಲಿ ಮುಂದಾಗಿದ್ದರಲ್ಲದೆ ಕೆಲವರು ಸ್ವತಃ ಕವಿಗಳೂ ಆಗಿದ್ದರು. ಅಂತೆಯೇ ಅರಸಿ ರಂಗಮ್ಮನ ಪತಿ ಮುಮ್ಮಡಿ ವೆಂಕಟಪ್ಪ ನಾಯಕ ಕೂಡ ಸಾಹಿತ್ಯಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡುವ ಸಲುವಾಗಿ ವಿಶೇಷ ಸ್ಪರ್ಧೆಯೊಂದನ್ನು ಏರ್ಪಡಿಸಿದ್ದ ಕುರಿತಾಗಿ ಕೈಫಿಯತ್ತಿನಲ್ಲಿ ಮಾಹಿತಿ ದೊರಕುತ್ತದೆ. ಈ ಸಭೆಯಲ್ಲಿ ಪಾಲ್ಗೊಳ್ಳಲು ತಂಜಾವೂರು ಮೊದಲಾದ ಸ್ಥಳಗಳಿಂದ ಪ್ರಸಿದ್ಧ

ವಿದ್ವಾಂಸರು ಬಂದಿದ್ದರು, ಅಲ್ಲದೆ ಹರಪ್ಪನ ಹಳ್ಳಿಯ ಪಾಳೆಯಗಾರನು ಸುರಪುರ ಸಂಸ್ಥಾನದ ವಿದ್ವಾಂಸರುಗಳನ್ನು ಮಣಿಸಲೆಂದು ಬೇರೆಡೆಗಳಿಂದ ಪಂಡಿತರುಗಳನ್ನು ಕರೆದುಕೊಂಡು ಬಂದಿದ್ದು ವಿಶೇಷವಾಗಿ ವರ್ಣಿತವಾಗಿದೆ. ಸಿದ್ಧನ ತೋಟದಲ್ಲಿ ಮೂರು ತಿಂಗಳುಗಳ ಕಾಲ ನಡೆದ ಈ ಸ್ಪರ್ಧೆಯಲ್ಲಿ ಸುರಪುರದ ವಿದ್ವಾಂಸರು ಪ್ರಶಸ್ತಿಗಳನ್ನು ಗೆದ್ದು, ತಮ್ಮನಾಡಿಗೆ ಗೌರವ ತಂದುಕೊಟ್ಟಿದ್ದಾರೆ[೩೮]. ಈ ಪ್ರಕರಣವು ಸುರಪುರ ಸಂಸ್ಥಾನ ಸಾಹಿತ್ಯ ಹಾಗೂ ಸಾಂಸ್ಕೃತಿಕ ವಲಯಕ್ಕೆ ನೀಡುತ್ತಿದ್ದ ಪ್ರೋತ್ಸಾಹದ ವಿಚಾರವನ್ನು ತಿಳಿಸುತ್ತದೆ. ಅಲ್ಲದೆ ಈ ಘಟನೆಯು ಅರಸಿ ರಂಗಮ್ಮನ ಕಾಲದಲ್ಲಿ ನಡೆದುದಾಗಿದೆ. ಈ ಕಾರ್ಯಕ್ಕಾಗಿ ಮೂರು ಲಕ್ಷ ಹಣ ಖರ್ಚಾಯಿತೆಂದು ಅರಮನೆಯ ಲೆಕ್ಕಪತ್ರದಿಂದ ತಿಳಿದು ಬರುತ್ತದೆ.

ಅರಸಿ ರಂಗಮ್ಮಳು ತಿರುಪತಿಯ ವೆಂಕಟರಮಣನ ಅನನ್ಯಯ ಭಕ್ತೆ. ತಿರುಪತಿ ತಿಮ್ಮಪ್ಪ ಈ ಮನೆತನದವರ ಕನಸಿನಲ್ಲಿ ಕಾಣಿಸಿಕೊಂಡು ನೀವು ನನ್ನ ದರ್ಶನಕ್ಕೆ ತಿರುಪತಿಗೆ ಬರುವುದು ಬೇಡ ನಾನೇ ನಿಮ್ಮ ಸಂಸ್ಥಾನದಲ್ಲಿ ನೆಲೆ ನಿಲ್ಲುವೆ ಎಂದುಹೇಳಿ, ಸುರಪುರದ ಬಳಿಯ ವಾಗಣಗೆರೆ ಕೋಟೆಯಲ್ಲಿರುವ ಕಲ್ಲಿನ ಗವಿಯಲ್ಲಿ ವೇಣುಗೋಪಾಲಸ್ವಾಮಿಯಾಗಿ ನೆಲೆನಿಂತನೆಂಬ ಐತಿಹ್ಯವಿದೆ. ಸುರಪುರದಲ್ಲಿ ನೆಲೆಗೊಂಡಿರುವ ಸತ್ಯಭಾಮಾ ರುಕ್ಮಿಣಿ ಸಹಿತ ಶ್ರೀ ವೇಣುಗೋಪಾಲಸ್ವಾಮಿಯು ತಿರುಪತಿ ತಿಮ್ಮಪ್ಪನ ಬಾಲ್ಯಾವತಾರ ಎಂಬುದು ಇಲ್ಲಿನವರ ನಂಬಿಕೆ. ಇದನ್ನು ರಂಗಮ್ಮಳ ಕೀರ್ತನೆಗಳಲ್ಲಿ ಕಾಣಬಹುದು.

ಅರಸಿ ರಂಗಮ್ಮನ ಕಾಲದಲ್ಲಿ ಈ ಮನೆತನದವರು, ಮೂರು ವರ್ಷಕ್ಕೊಮ್ಮೆ ರೇಷ್ಮೆಯ ನವಾರ (ಮಂಚಕ್ಕೆ ಉಪಯೋಗಿಸುವ ಪಟ್ಟಿ) ವನ್ನು ತಿರುಪತಿಗೆ ಕಳಿಸುವ ಸಂಪ್ರದಾಯ ನಡೆಸುತ್ತಿದ್ದು, ಇಂದಿಗೂ ಮುಂದುವರೆಸಲಾಗುತ್ತಿದೆ. ತಿರುಪತಿಯಲ್ಲಿ ನಡೆಯುವ ಬ್ರಹ್ಮರಥೋತ್ಸವದಲ್ಲಿ ಸುರಪುರದ ಅರಮನೆಯಿಂದ ಉಡಿಯಕ್ಕಿ ಬಾಗಿನವನ್ನು ಕೊಟ್ಟು ಪ್ರಥಮ ಪೂಜೆಯನ್ನು ಈ ಮನೆತನದ ಪ್ರತಿನಿಧಿಗಳು ನಡೆಸಿದ ನಂತರವೇ ಕಲ್ಯಾಣೋತ್ಸವಕ್ಕೆ ಚಾಲನೆ ದೊರಕುತ್ತದೆ. ಇಂದಿಗೂ ನಡೆದುಕೊಂಡು ಬಂದಿರುವ ಈ ಪದ್ಧತಿಯ ನಂತರ, ಸುರಪುರದ ಆರತಿ ಎಂಬ ದೊಡ್ಡ ಘೋಷಣೆಯೊಂದಿಗೆ ಮಂಗಳಾರತಿ ಮಾಡಲಾಗುತ್ತದೆ[೩೯].

**ರಂಗಮ್ಮನ ರಚನೆಗಳು**

**ಶ್ರೀ ಸುರಪುರೀಶ ಶ್ರೀಶ ಪೋಷಿಸು**
**ಶ್ರೀ ಸುರಪುರೀಶ**

**ಕುಂಜರಪಾಲನೆ ಕಂಜವಿಲೋಚನ**
**ಕುಂಜಿತ ಸದ್ಗುಣ ಕುಂಜ ವಿಜಯನು ॥೧॥**

**ಗೋವರ್ಧನಧರ ಗೋವರ್ಧನನುತ**
**ಗೋಧರ ಗೋಧರ ಗೋಪ ಗೋಪಿಸುತ ॥೨॥**

**ಶೀಲರಂಗಾಂಬ ಬಾಲಕೃಷ್ಣೇಂದ್ರ**
**ಬಾಲಗೋಪಾಲ ಕರುಣಾ ಪಾಲನು ॥೩॥**
**ಮಂಗಲವೆನ್ನಿರೆ ಮಾಧವಗೀಗ ಶೃಂಗಾರದಿ ಶ್ರೀ**
**ಅಂಗಜಪಿತಗೆ ಅಂಬುಜಾಕ್ಷಗೆ ಸಂಭ್ರಮದಿಂದಲಿ**

**ಯದುಕುಲ ತಿಲಕಗೆ, ಮಥುರಾನಾಥಗೆ**
**ಮಾವನ ವೈರಿಗೆ, ಶ್ರೀ ರಘುರಾಮಗೆ**

ಕೃಷ್ಣನ ಬಾಲ ಲೀಲೆಗಳನ್ನು ಬಣ್ಣಿಸುವ, ಆತನ ಮಹಿಮೆಯನ್ನು ಹೊಗಳುವ ಕೀರ್ತನೆಗಳು, ಮಂಗಳಾರತಿ ಪದ, ಇವಳ ರಚನೆಗಳಲ್ಲಿ ಹೆಚ್ಚಾಗಿ ಕಾಣಬಹುದು. ಇವಳ ಕೃತಿಗಳೆಲ್ಲಾ ಭಕ್ತಿಪ್ರಧಾನ ಕೀರ್ತನೆಗಳೇ ಆಗಿವೆ.

ದೊರಕಿರುವ ಇವಳ ಕೃತಿಗಳೆಲ್ಲಾ ವೆಂಕಟೇಶ್ವರ, ಕೃಷ್ಣ, ಗೋಪಾಲನ ಕುರಿತಾದ ವಿಷ್ಣುಸ್ತುತಿಗಳೇ ಆಗಿವೆ. ಇವಳು ಅಂಕಿತವನ್ನು ಪಡೆದು ಕೀರ್ತನೆಗಳನ್ನು ರಚಿಸಿರುವುದರಿಂದ ಇವಳ ಕೀರ್ತನೆಗಳನ್ನು ಹರಿದಾಸ ಸಾಹಿತ್ಯಕ್ಕೆ ಸೇರಿಸಬಹುದಾಗಿದೆ. ಇವಳ ತೆಲುಗು ರಚನೆಗಳಲ್ಲಿಯೂ ರಂಗಮಾಂಬ ಎಂಬ ಇವಳ ಅಂಕಿತವನ್ನು ಗಮನಿಸಬಹುದು.

**ಮಂಗಳಮನಿ ಪಾಡರೆ ಅಂಗನುಲಾರ**
**ರಂಗುಗನು ಸುರಪುರ ಮುನೇಲಿನ**
**ಕುರಂಗ ಲೋಚನುಡೈನ ಮನಶ್ರೀ**
**ರಂಗಮಾಂಬನು ಬ್ರೋಚು ಗರುಡ**
**ತುರಂಗುಡೌ ಗೋಪಾಲ ಸ್ವಾಮಿಕಿ**

**ಕರಿರಾಜ ವರದುನಕು, ಕರುಣಾ ಸಾಗರುಡನ ಬಿರುದನಕು**
**ಸರಸ ಕೌಲಿಕ ಕಂಠಿ ಚಾಮರ ಮುಲಿಚ್ಚಿನ ರಂಗಮಾಂಬನು**
**ತಿರುಪತೀ ಕುಂಡಗುಚು ಬ್ರೋಚಿನ, ಮುರಲಿಧರುನ ಕುದುದಿತಕ**
**ಹರುನಕು ಮಂಗಳ ಮನಿ**

ಸುರಪುರ ಸಂಸ್ಥಾನದ ಅರಸರಿಗೆ ಗೋಸಲ ವಂಶದವರೆಂದು ಕರೆಯುವ ರೂಢಿಯಿದೆ. ಗೋವುಗಳನ್ನು ಸಲಹುತ್ತಿದ್ದುದರಿಂದ ಇವರಿಗೆ ಈ ಹೆಸರು ಬಂದಿದೆ ಯೆಂಬುದು ಇವರ ಕುರಿತಾದ ಕೈಫಿಯತ್ತುಗಳಿಂದ ತಿಳಿದು ಬರುತ್ತದೆ ಇದನ್ನು ರಂಗಮ್ಮನ ಕೀರ್ತನೆಗಳಲ್ಲಿಯೂ ಕಾಣಬಹುದು

**ಗೋಸಲವಂಶಾಧೀಶರ ಪಾಲಿಪ**
**ಶ್ರೀಸುರಪುರದೊಳ್ ವೇಣುಗೋಪಾಲಗೆ..**

ದಾಸಸಾಹಿತ್ಯದ ಇತರ ಕೀರ್ತನೆಗಳಂತೆ ಸರಳ ಭಾಷೆ ಇವಳ ಕೀರ್ತನೆಗಳಲ್ಲಿಯೂ ಕಂಡುಬರುತ್ತವೆ. ಜೊತೆಗೆ ಇವಳ ಸಂಸ್ಕೃತ ಪಾಂಡಿತ್ಯ ಪ್ರಕಟಿಸುವ ಕೀರ್ತನೆಗಳು ಇವಳ ಭಾಷಾ ಪ್ರಾವೀಣ್ಯವನ್ನು ತಿಳಿಸುತ್ತವೆ. "ನಂದಗೋಪಸುತಾಯ ನವನೀತ ಚೋರಾಯ" ಎಂದು ಆರಂಭವಾಗುವ ಮಂಗಳಾರತಿ ಪದವು ಸಂಪೂರ್ಣ ಸಂಸ್ಕೃತದಲ್ಲಿಯೇ ರಚಿತವಾಗಿರುವುದನ್ನಿಲ್ಲಿ ಗಮನಿಸಬಹುದು.

**ಭವಕಾಯ ಪ್ರಹತ ನತ ವಿಪದಾಯ**
**ಪಲ್ಲವೀರಾಜಾಯ ವಾಮನಾಯ**
**ಮಲ್ಲ ವಿಧ್ವಂಸಾಯ, ಮರ್ದಿತ ಕಂಸಾಯ**
**ಸಲ್ಲಲಿತ ಹೃದಯಾಯ ಮಂಗಲಂ – ನಿತ್ಯ ಶುಭಮಂಗಲಂ॥**

**ಗರುಡ ತುರಂಗಾಯ ಕರುಣಾಂತರಂಗಾಯ**
**ದ್ರುಪದಪುತ್ರಿ ಮಾನ ರಕ್ಷಕಾಯ**
**ನೀರದ ನಿಭಾಂಗಾಯ ನಿಹತ ಸಾರಂಗಾಯ**
**ಸೂರಿಜನ ಸಂಗಾಯ ಮಂಗಲಂ ನಿತ್ಯ ಶುಭಮಂಗಲಂ ॥**

ಹೀಗೆ ಕನ್ನಡ, ತೆಲುಗು, ಸಂಸ್ಕೃತ ಭಾಷೆಗಳಲ್ಲಿ ಪಾಂಡಿತ್ಯ ಪಡೆದು ಕೀರ್ತನೆಗಳನ್ನು ರಚಿಸಿ, ಸಾಹಿತ್ಯಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡಿರುವ ಅರಸಿ ರಂಗಮ್ಮಳ ಕೀರ್ತನೆಗಳು ಸಮಗ್ರವಾಗಿ ಸಂಗ್ರಹಗೊಂಡು ಒಂದೆಡೆ ಪ್ರಕಟವಾಗುವ ಕಾರ್ಯ ನಡೆಯಬೇಕಿದೆ.

ಪ್ರಸಿದ್ಧ ಸಂಸ್ಥಾನ ಒಂದರ ಅರಸಿಯಾಗಿದ್ದು, ಹಲವಾರು ಪ್ರೌಢ ರಚನೆಗಳನ್ನು ಮಾಡಿರುವ ಈ ಕವಯತ್ರಿಯ ಕುರಿತಾದ ವಿಚಾರ ಈ ವರೆಗಿನ ಯಾವುದೇ ಸಾಹಿತ್ಯ ಚರಿತ್ರೆಗಳಲ್ಲಿ ಉಲ್ಲೇಖ ವಿಲ್ಲದಿರುವುದು ಆಶ್ಚರ್ಯ

ಮೂಡಿಸುತ್ತದೆ. ಜೊತೆಗೆ ಈ ವರೆಗೂ ಹಲವಾರು ಕೀರ್ತನ ಸಂಪುಟಗಳು ಪ್ರಕಟವಾಗಿವೆಯಾದರೂ, ಇವಳ ರಚನೆಯೊಂದೂ ಇದರಲ್ಲಿ ಸೇರ್ಪಡೆಯಾಗದಿರುವುದು ಈ ಕವಯತ್ರಿಗೆಸಗಿದ ಅಪಚಾರವಾಗಿದೆ.

**ಅಧ್ಯಯನದ ಫಲಿತ**

ಕನ್ನಡ ಸಾಹಿತ್ಯಕ್ಕೆ ಅರಸಿಯರ ಕೊಡುಗೆಯನ್ನು ಒಟ್ಟಾಗಿ ಗಮನಿಸಿದಾಗ, ಅರಸಿಯರು ರಚಿಸಿರುವ ಸಾಹಿತ್ಯ ಸಂಖ್ಯೆಯಲ್ಲಿ ಬಹಳ ಕಡಿಮೆ ಎನಿಸುತ್ತದೆ. ಆದರೆ, ಕನ್ನಡದ ಎಲ್ಲ ಪ್ರಕಾರಗಳಲ್ಲಿಯೂ ಇವರ ರಚನೆಗಳು ಕಂಡುಬರುತ್ತವೆ. ಅಲ್ಲದೆ ಎಲ್ಲ ಕಾಲದಲ್ಲಿಯೂ ಅರಸಿಯರ ಸಾಹಿತ್ಯಿಕ ಕೊಡುಗೆ ಕಂಡುಬರುತ್ತವೆ. ವಚನ, ಚಂಪು, ಸಾಂಗತ್ಯ, ಚೌಪದಿ, ಗದ್ಯ, ಕೀರ್ತನೆ ಈ ಎಲ್ಲ ಪ್ರಕಾರಗಳಲ್ಲಿಯೂ, ಜೈನ, ವೀರಶೈವ, ವೈಷ್ಣವ ಧರ್ಮದ ಧಾರ್ಮಿಕ ಆಶಯ ಹೊಂದಿರುವ ಕೃತಿಗಳನ್ನು ಅರಸಿಯರು ರಚಿಸಿದ್ದಾರೆ. ಆಶ್ಚರ್ಯವೆಂದರೆ ಈ ಎಲ್ಲ ಕೃತಿಗಳೂ ಭಕ್ತಿಗೆ ಪ್ರಾಧಾನ್ಯತೆ ನೀಡಿರುವ ಕೃತಿಗಳಾಗಿವೆ. ಅರಸಿಯರಿಗಿರುತ್ತಿದ್ದ ಸಾಹಿತ್ಯಿಕ ಜ್ಞಾನ, ಭಾಷಾ ಪ್ರೌಢಿಮೆ, ವಿದ್ಯಾಭ್ಯಾಸ, ಧಾರ್ಮಿಕ ಸ್ವಾತಂತ್ರ, ಮೊದಲಾದವುಗಳನ್ನು ಅರಸಿಯರು ರಚಿಸಿರುವ ಸಾಹಿತ್ಯ ಕೃತಿಗಳಲ್ಲಿ ಗುರುತಿಸಬಹುದು. ಜೊತೆಗೆ ಅಂದಿನ ಸಾಮಾಜಿಕ ಸ್ಥಿತಿಗತಿಗಳ ಮೇಲೆ ಈ ಕೃತಿಗಳು ಬೆಳಕು ಚೆಲ್ಲುತ್ತವೆ.

ಈ ಅಧ್ಯಾಯದಲ್ಲಿ ಸಾಹಿತ್ಯ ಚರಿತ್ರೆಗಳಲ್ಲಿ ಉಕ್ತವಾಗಿರದ ಜಕ್ಕಲಾಂಬೆ ಹಾಗೂ ಸುರಪುರದ ರಾಣಿ ರಂಗಾಂಬೆಯ ಕುರಿತಾದ ಮಾಹಿತಿಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಜಕ್ಕಲಾಂಬೆಯ ಕುರಿತಾದ ಮಾಹಿತಿಗೆ ಏಕೈಕ ಆಕರವೆನಿಸಿದ ಶಿಕಾರಿಪುರದ ಶಾಸನವನ್ನು ಅಧ್ಯಯನಕ್ಕೆ ಬಳಸಿಕೊಂಡು ಅಲ್ಲಿ ಜಕ್ಕಲಾಂಬೆಯ ಕುರಿತಾದ ಮಾಹಿತಿಗಳನ್ನು ವಿಶ್ಲೇಷಿಸಲಾಗಿದೆ. ಈ ವರೆಗೂ ಅಜ್ಞಾತ ಕವಯತ್ರಿಯಾಗಿದ್ದ 'ಶ್ರೀಮತಿ'ಯ ಜೀವನದ ಮೇಲೆ ಬೆಳಕು ಚೆಲ್ಲುವ ಕಾರ್ಯ ಈ ಅಧ್ಯಯನದಲ್ಲಿ ನಡೆದಿದೆ. ಶ್ರೀಮತಿಯನ್ನು ಹೆಸರಿಸಿರುವ ಜಯಚಂದ್ರ ಹಾಗೂ ಕಮಲಾ ಹಂಪನಾ ಅವರು ಭಾವಿಸಿರುವಂತೆ ಜಕ್ಕಲಾಂಬೆ ಹಾಗೂ ಶ್ರೀಮತಿಯರು ಒಬ್ಬಳೇ ಆಗಿರದೆ ಈ ಇಬ್ಬರೂ ಭಿನ್ನರೆನ್ನುವ ವಿಚಾರ ಹಾಗೂ ಶ್ರೀಮತಿಯ ಕುರಿತಾದ ಸಮಗ್ರ ವಿಚಾರವು 'ವಿಜಯಕುಮಾರಿ ಚರಿತೆ' ಕಾವ್ಯದಲ್ಲಿ ಉಕ್ತವಾಗಿರುವುದರ ಕುರಿತಾಗಿ ಈ ಅಧ್ಯಯನದಲ್ಲಿ ಮೊದಲಬಾರಿಗೆ ಪ್ರತಿಪಾದಿಸಲಾಗಿದೆ.

ಸಾಹಿತ್ಯ ಚರಿತ್ರೆಗಳಲ್ಲಿ ಹೆಸರಿಸದ ಅರಸಿ ರಂಗಮ್ಮಳ ಕುರಿತಾದ ಲಭ್ಯಮಾಹಿತಿಗಳನ್ನು ದಾಖಲಿಸುವ ಪ್ರಯತ್ನ ಇಲ್ಲಿ ನಡೆಸಲಾಗಿದೆ ಜೊತೆಗೆ ಅರಸಿ ರಚಿಸಿರುವ ಕೆಲವು ಕೀರ್ತನೆಗಳನ್ನು ಸಂಗ್ರಹಿಸುವ ಕಾರ್ಯವನ್ನೂ ನಡೆಸಲಾಗಿದೆ.

**ಆಕರ ಗ್ರಂಥಗಳು ಹಾಗೂ ಟಿಪ್ಪಣಿಗಳು**


೧. E.C ಸಂ.X ಮುಳಬಾಗಿಲು, ೩೮

೨. E.C. ಸಂ XI. ಬೇವಿನಹಳ್ಳಿ ೭೪

೩. SII ಸಂ.XX, ೨೩ ದೇವೂರು (ತಾ) ಸಿಂದಗಿ

೪. SII ಸಂ IX-I, ೧೩೪ ನಂದಿಕೋಟಕೂರು

೫. SII ಸಂ XX, ೪೯, ಹಾನಗಲ್ಲ

೬. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೩೨೧ ಕಾಟಿಕೆರೆ (ಕ್ರಿ.ಶ.೧೧೦೦)

೭. E.C. ಸಂ.xii ನಂ ೨೩ ಶಿರಾ

೮. ನರಸಿಂಹಶಾಸ್ತ್ರಿ.ಕೆ.ಎಲ್., ೧೯೮೦, ***ಆದಿಪುರಾಣಂ: ಗದ್ಯಾನುವಾದ***, ಕಸಾಪ, ಬೆಂಗಳೂರು

೯. ನರಸಿಂಹಾಚಾರ್.ಆರ್., ೨೦೧೧, ***ಕರ್ನಾಟಕ ಕವಿಚರಿತೆ*** ಸಂಪುಟ–೧, ಕಸಾಪ, ಬೆಂಗಳೂರು, ಪು.೪೬೫

೧೦. ***ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ,*** ಸಂ.೪, ಮೈಸೂರು ವಿವಿ, ಮೈಸೂರು
೧೧. ಕುಶಾಲಪ್ಪ ಗೌಡ.ಕೆ (ಅನು)., ೨೦೧೧, ***ಮಧುರಾವಿಜಯಂ*** ಕನ್ನಡ ವಿಶ್ವವಿದ್ಯಾಲಯ, ಹಂಪಿ
೧೨. ಚಂಪಾಬಾಯಿ.ಡಿ.(ಸಂ), ೧೯೯೯, ಸಂಚಿಹೊನ್ನಮ್ಮ, ***ಹದಿಬದೆಯಧರ್ಮ,*** ಪ್ರಸಾರಾಂಗ, ಮೈಸೂರು ವಿವಿ.
೧೩. ವೀರಣ್ಣ ರಾಜೂರ (ಸಂ), ೧೯೯೩, ಪ್ರಸ್ತಾವನೆ, ***ಶಿವಶರಣೆಯರ ವಚನಸಂಪುಟ,*** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ಪು.೧೫
೧೪. ದೇವೀರಪ್ಪ.ಎಚ್ (ಸಂ) ೧೯೭೩, ***ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ,*** ಶಿವಕುಮಾರ ಪ್ರಕಾಶನ, ಬೆಂಗಳೂರು
೧೫. ***ಕನ್ನಡ ಸಾಹಿತ್ಯ ಚರಿತ್ರೆ***–೪, ೧೯೭೭, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಪು ೬೫೪
೧೬. ನಾಗಭೂಷಣ.ಸಿ, ೧೯೯೯, ***ಕನ್ನಡ ಸಾಹಿತ್ಯ ಸಂಸ್ಕೃತಿ ಶೋಧನೆ,*** ಸಂಡೂರು, ಪು.೨೩೦
೧೭. ಶ್ಯಾಮಲ.ಸಿ.ಆರ್., ೨೦೦೮, ***ಪೂರ್ವಕರ್ನಾಟಕದ ಪಾಳೆಯಗಾರರು ಒಂದು ಅಧ್ಯಯನ,*** ಕಸಾಪ, ಬೆಂ ಪು.೨೧೩
೧೮. ವೀರಣ್ಣ ರಾಜೂರ (ಸಂ), ೧೯೯೩, ಶಿವಶರಣೆಯರ ವಚನಸಂಪುಟ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂ
೧೯. ವೀರಣ್ಣ ರಾಜೂರ, ಪೂರ್ವೋಕ್ತ
೨೦. SII Vol VII No 202
೨೧. ಕಮಲಾ ಹಂಪನಾ, ೨೦೦೮, ***ನಾಗಲದೇವಿ,*** ಕನ್ನಡ ಸಾಹಿತ್ಯ ಚರಿತ್ರೆ, ಮೈಸೂರು ವಿಶ್ವವಿದ್ಯಾನಿಲಯ, ಪು.೩೩೩
೨೨. ಕಮಲಾ ಹಂಪನಾ, ೨೦೦೪, ಮುನ್ನುಡಿ–***ಷೋಡಶಭಾವನಾ ಕಾವ್ಯ,*** ಜೈನ ಅಧ್ಯಯನ ಸಂಸ್ಥೆ, ಶ್ರವಣಬೆಳಗೊಳ,
೨೩. E.C. ಸಂ VII ಶಿಕಾರಿಪುರ ೧೯೬
೨೪. ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
೨೫. ಕಮಲಾ ಹಂಪನಾ, ೨೦೦೩, ***ಬೊಗಸೆ (ಮಹಿಳೆ ಸುತ್ತ–ಮುತ್ತ),*** ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು. ಪು.೯೨
೨೬. ಭೋಜರಾಜ ಪಾಟೀಲ, ೨೦೦೧, ***ಬಂದಳಿಕೆಯ ಅರಸರು,*** ಮಲೆಕರ್ನಾಟಕದ ಅರಸುಮನೆತನಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೯೧
೨೭. ಕಮಲಾ ಹಂಪನಾ, ಪೂರ್ವೋಕ್ತ
೨೮. ಭಾನುಮತಿ.ವೈ.ಸಿ., ೧೯೮೧, ***ವಿಜಯಕುಮಾರಿ ಚರಿತೆ,*** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿವಿ, ಪು.೪೨
೨೯. ಸಣ್ಣಯ್ಯ.ಬಿ.ಎಸ್., ೨೦೦೨, ***ಪ್ರಾಚೀನ ಕನ್ನಡ ಗ್ರಂಥ ಸಂಪಾದನೆ,*** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು
೩೦. ಮಂಜಪ್ಪಶೆಟ್ಟಿ, (ಸಂ) ೧೯೮೪, ***ಚೆಲುವಾಂಬೆ ಕೃತಿಗಳು,*** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿವಿ. ಮೈಸೂರು.
೩೧. ಸರೋಜಿನಿ ಮಹಿಷಿ, ೧೯೬೫, ***ಕರ್ನಾಟಕದ ಕವಯಿತ್ರಿಯರು,*** ಕ.ಸ.ಸಾಹಿತ್ಯಸಂಘ, ಧಾರವಾಡ, ಪು.೨೧೭
೩೨. ಮಂಜಪ್ಪಶೆಟ್ಟಿ.ಎಂ.ಪಿ., ೧೯೯೨, ***ಕನ್ನಡ ಛಂದಸ್ಸಿನ ಚರಿತ್ರೆ,*** ಕನ್ನಡ ಅಧ್ಯಯನ ಸಂಸ್ಥೆ, ಸಂಪುಟ ೧, ಪು.೬೨೭
೩೩. ಸರೋಜಿನಿ ಮಹಿಷಿ, ಪೂರ್ವೋಕ್ತ, ಪು.೨೨೪
೩೪. ಸರೋಜಿನಿ ಮಹಿಷಿ ಪೂರ್ವೋಕ್ತ, ಪು.೨೨೪
೩೫. A Descriptive Catalogue of the Kanarese Manuscripts In the Government Oriental Manuscripts Library, Madras, Vol-4 1946, pg.948-949
೩೬. ನರಸಿಂಹಾಚಾರ್.ಆರ್., ಪೂರ್ವೋಕ್ತ, ಸಂಪುಟ–೩, ಪು.೨೫
೩೭. ಮಂಜಪ್ಪಶೆಟ್ಟಿ, ಪೂರ್ವೋಕ್ತ, ಪು.೪೩
೩೮. ಕಪಟರಾಳ ಕೃಷ್ಣರಾಯರು, ೨೦೦೯, ***ಸುರಪುರ ಸಂಸ್ಥಾನದ ಇತಿಹಾಸ,*** ಅನಂತ ಪ್ರಕಾಶನ, ಪು.೧೫೦
೩೯. ಅಮರೇಶ ಯತಗಲ್, ***ಸುರಪುರ ಸಂಸ್ಥಾನದ ರಾಣಿಯರು,*** ಇತಿಹಾಸ ದರ್ಶನ ಸಂ.೨೬, ಪು.೩೩೨

# ಅಧ್ಯಾಯ – ೮

## ಕರ್ನಾಟಕದ ಅರಸಿಯರು ರಚಿಸಿರುವ ಸಂಸ್ಕೃತ ಸಾಹಿತ್ಯ

ಕನ್ನಡದ ಪ್ರಾಚೀನಕವಿಗಳೆಲ್ಲ ಉಭಯಭಾಷಾ ಪಂಡಿತರಾಗಿರುತ್ತಿದ್ದರು. ತಮ್ಮ ಪಾಂಡಿತ್ಯವನ್ನು ತೋರಿಸಿಕೊಳ್ಳಲು ಕಾವ್ಯಗಳಲ್ಲಿ ಸಮಾಸಭೂಯಿಷ್ಠ ಪದಗಳನ್ನು ಬಳಸಿ, ಸಂಸ್ಕೃತ ಪದಗಳಿಂದ ಕೂಡಿದ ವೃತ್ತಗಳನ್ನು ತಮ್ಮ ಕನ್ನಡ ಕಾವ್ಯಗಳಲ್ಲಿ ಅಲ್ಲಲ್ಲಿ ತಂದಿರುವುದನ್ನು ಕಾಣುತ್ತೇವೆ. ದೇಸಿಯಷ್ಟೇ ಸುಲಲಿತವಾಗಿ ಮಾರ್ಗವನ್ನೂ ಬಳಸಿರುವ ಕನ್ನಡ ಕವಿಗಳ ಕವಿತಾ ಸಾಮರ್ಥ್ಯವನ್ನು ಆದಿಕವಿ ಪಂಪನ ಕಾಲದಿಂದಲೂ ಗುರುತಿಸುತ್ತೇವೆ. ಅಂದಿನ ವಿದ್ಯಾಭ್ಯಾಸ ಪದ್ಧತಿಯಲ್ಲಿಯೂ ಕೂಡ ಸಂಸ್ಕೃತಭಾಷೆಗೆ ಹೆಚ್ಚಿನ ಪ್ರಾಮುಖ್ಯತೆ ಇತ್ತೆನ್ನುವುದಕ್ಕೆ ಘಟಿಕಾಸ್ಥಾನಗಳಲ್ಲಿನ ಶಾಸನಗಳು ಆಧಾರ ಒದಗಿಸುತ್ತವೆ.

ಕರ್ನಾಟಕದ ಅರಸಿಯರು ಕೂಡ ಬಹುಭಾಷಾ ವಿದ್ವಾಂಸರಾಗಿದ್ದರು. ಕನ್ನಡದಲ್ಲಿ ಇವರ ರಚನೆಗಳಿರುವಂತೆ, ಕನ್ನಡದ ಅರಸಿಯರು ಸಂಸ್ಕೃತದಲ್ಲಿಯೂ ಕೆಲವು ರಚನೆಗಳನ್ನು ಮಾಡಿದ್ದಾರೆ. ವಿದ್ವಾಂಸರಿಂದ ಹೊಗಳಿಕೆ, ಮೆಚ್ಚುಗೆ ಪಡೆದಂತಹ ಕೃತಿಗಳನ್ನು ರಚಿಸಿರುವ ಕರ್ನಾಟಕದ ಅರಸಿಯರು ಉನ್ನತ ಮಟ್ಟದ ವಿದ್ಯಾಭ್ಯಾಸವನ್ನು ಹೊಂದಿರುತ್ತಿದ್ದರೆಂಬುದನ್ನು ಹಿಂದಿನ ಅಧ್ಯಾಯದಲ್ಲಿ ಗಮನಿಸಲಾಗಿದೆ. ಅರಸಿಯರ ಸಂಸ್ಕೃತ ಸಾಹಿತ್ಯ ರಚನೆಗಳು ಕ್ರಿ.ಶ.೭ನೆಯ ಶತಮಾನದಿಂದಲೇ ಕಂಡುಬರುತ್ತವೆ. ಮುಕ್ತಕಗಳು, ನಾಟಕ, ಐತಿಹಾಸಿಕ ಕಾವ್ಯ ಮೊದಲಾದ ಪ್ರಕಾರಗಳಲ್ಲಿ ಅರಸಿಯರು ತಮ್ಮ ಕೊಡುಗೆಗಳನ್ನು ನೀಡಿರುವುದನ್ನಿಲ್ಲಿ ಗಮನಿಸಬಹುದು. ಲಭ್ಯವಿರುವ ಅರಸಿಯರ ಕೃತಿಗಳಲ್ಲಿ ಸಂಸ್ಕೃತ ರಚನೆಗಳೆ ಪ್ರಾಚೀನವೆನಿಸಿವೆ. ಹತ್ತನೆಯ ಶತಮಾನದ ಪ್ರಸಿದ್ಧ ಕವಿ ಹಾಗೂ ಲಾಕ್ಷಣಿಕ ರಾಜಶೇಖರ ಕನ್ನಡಿಗರ ಉಚ್ಚರಣೆ ತೇಂಕಾರದಿಂದ ಕೂಡಿರುತ್ತದೆ ಎಂದು ವಿಮರ್ಶಾತ್ಮಕವಾಗಿ ಹೇಳಿದ್ದಾನೆ. ಈ ಕಾಲದ ಕನ್ನಡಿಗರ ಪಾಂಡಿತ್ಯ ದೇಶದಲ್ಲಿಯೇ ಪ್ರಸಿದ್ಧವಾಗಿತ್ತೆನ್ನುವುದನ್ನು ಗಮನಿಸಬಹುದು. ಅಲ್ಲದೆ ವಿಜ್ಜಿಕಾ ಅಥವಾ ವಿಜಯಭಟ್ಟಾರಿಕಾ ಎಂಬ ಅರಸಿ ರಾಜಶೇಖರನಿಂದ ಹೊಗಳಿಕೆಗೆ ಪಾತ್ರಳಾದ ಕನ್ನಡತಿಯಾಗಿದ್ದಾಳೆ. ಎಂಟನೆಯ ಶತಮಾನದಲ್ಲಿದ್ದ ವಿಜ್ಜಿಕಾಳನ್ನು ಹತ್ತನೆಯ ಶತಮಾನದ ಉತ್ತರ ಭಾರತದ ಪ್ರಸಿದ್ಧ ಲಾಕ್ಷಣಿಕನಿಂದ ಸ್ತುತಿಸಲ್ಪಟ್ಟಿರುವುದು, ವಿಜ್ಜಿಕಾಳ ಸಾಹಿತ್ಯ ಹಾಗೂ ಕೀರ್ತಿ ಈ ಕಾಲದಲ್ಲಿ ಹೇಗೆ ಪಸರಿಸಿತ್ತೆನ್ನುವುದನ್ನು ತಿಳಿಸುತ್ತದೆ.

ವಿಜ್ಜಿಕಾಳಂತೆಯೇ ಇವಳ ನಂತರದ ಕಾಲದಲ್ಲಿದ್ದ ಎಂಟನೆಯ ಶತಮಾನದ ರಾಷ್ಟ್ರಕೂಟ ಅರಸಿ ಶೀಲಭಟ್ಟಾರಿಕೆಯನ್ನು ಲಾಕ್ಷಣಿಕ ಜಲ್ಹಣ ಬಾಣನಿಗೆ ಹೋಲಿಸಿದ್ದಾನೆ. ಸಂಸ್ಕೃತದಲ್ಲಿ ಪದ್ಯಗಳನ್ನು ರಚಿಸಿದ ಕನ್ನಡದ ಕವಯತ್ರಿಯರು ಕಾಳಿದಾಸ, ಬಾಣರ ಸಾಲಿನಲ್ಲಿ ನಿಲ್ಲಬಲ್ಲರೆಂಬ ಪ್ರಶಂಸೆಯನ್ನು ಪಡೆದು, ಹತ್ತನೆಯ ಶತಮಾನಕ್ಕೂ ಪೂರ್ವದಲ್ಲಿಯೇ ಕನ್ನಡನಾಡಿನ ಕೀರ್ತಿಯನ್ನು ಭಾರತದಾದ್ಯಂತ ಹರಡಿದ ವಿಷಯ ಹೆಮ್ಮೆ ಎನಿಸದಿರದು.

ಪ್ರಾಚೀನ ಭಾರತದಲ್ಲಿ ಸಂಸ್ಕೃತ ಕವಿಯತ್ರಿಯರು ಬೆರಳೆಣಿಕೆಯಷ್ಟು ಕಂಡುಬರುತ್ತಾರೆ. ಅವರಲ್ಲಿ ಕರ್ನಾಟಕದಲ್ಲಿನ ಮಹಿಳೆಯರೇ ಹೆಚ್ಚು ಗುರುತಿಸಲ್ಪಟ್ಟಿರುವುದೊಂದು ನಮ್ಮ ನಾಡಿನ ಹೆಗ್ಗಳಿಕೆಯಾಗಿದೆ. ಕನ್ನಡನಾಡಿನ ಅರಸಿಯರು ಎಲ್ಲ ಪ್ರಕಾರಗಳಲ್ಲಿಯೂ ಸಾಹಿತ್ಯವನ್ನು ರಚಿಸಿರುವುದೊಂದು ವಿಶೇಷವೆನಿಸುತ್ತದೆ. ಸಂಸ್ಕೃತ ಮುಕ್ತಕಗಳು, ನಾಟಕ, ಐತಿಹಾಸಿಕ ಕಾವ್ಯ, ಚಂಪೂ ಕಾವ್ಯ, ಅಷ್ಟಕ, ಪಂಚಕ ಹೀಗೆ ನಾನಾ ಪ್ರಕಾರಗಳನ್ನು ಇವರ ಕಾವ್ಯಗಳಲ್ಲಿ ಗುರುತಿಸಬಹುದು.

ಈ ಅಧ್ಯಾಯದಲ್ಲಿ ಅರಸಿಯರು ರಚಿಸಿರುವ ಸಾಹಿತ್ಯಗಳನ್ನು ಮುಕ್ತಕಗಳು, ನಾಟಕ, ಕಾವ್ಯ ಎಂಬ ಪ್ರಕಾರದ ಅಡಿಯಲ್ಲಿ ವಿಭಾಗಿಸಿಕೊಂಡು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅರಸಿ ವಿಜ್ಜಿಕಾಳ ರಚನೆಯಲ್ಲಿ ಮುಕ್ತಕಗಳು

ಹಾಗೂ ನಾಟಕ ಎರಡೂ ಪ್ರಕಾರಗಳೂ ಕಂಡುಬರುತ್ತದೆ. ಕವಯತ್ರಿ ಒಬ್ಬಳೇ ಆದರೂ ಇವಳ ಕೃತಿಗಳನ್ನು ಪ್ರತ್ಯೇಕವಾಗಿ ವಿಭಿನ್ನ ಪ್ರಕಾರದ ವಿಭಾಗಗಳಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

## ಸಂಸ್ಕೃತ ಮುಕ್ತಕಗಳು

ಸಂಸ್ಕೃತದಲ್ಲಿ ಗೀತಕಾವ್ಯವು ಮುಕ್ತಕ ಮತ್ತು ಪ್ರಬಂಧ ಎರಡೂ ಪ್ರಕಾರಗಳಿಂದ ಉಪಲಬ್ಧವಾಗುತ್ತದೆ. ವರ್ಣ್ಯ ವಿಷಯಕ ವೈಚಿತ್ರ್ಯದಿಂದ ಗೀತಕಾವ್ಯಗಳು ಕಾವ್ಯ(ಮುಕ್ತಕ)ದ ಅನೇಕ ಪ್ರಕಾರಗಳನ್ನು ಸಂಸ್ಕೃತ ಸಾಹಿತ್ಯದಲ್ಲಿ ನೋಡಬಹುದಾಗಿದೆ. **"ಸೌಂದರ್ಯದ ಬಾಹ್ಯ ಉಪಕರಣಗಳಿಂದ ಮುಕ್ತವಾಗಿ ಸ್ವಯಂ ರಸಪೇಶಲವಾಗುವುದು ಮುಕ್ತದ ಮುಖ್ಯ ಲಕ್ಷಣ"**[1]. ಸಂಸ್ಕೃತ ಸಾಹಿತ್ಯದಲ್ಲಿ ಹೆಚ್ಚಾಗಿ ಕಂಡುಬರುವುದು ಶೃಂಗಾರಮಯವಾದ ಮುಕ್ತಕಗಳು. ಇವುಗಳಲ್ಲಿ ಪ್ರಕೃತಿ ಮತ್ತು ಶೃಂಗಾರದ ಎರಡೂ ಚಿತ್ರಣಗಳನ್ನೂ ಗುರುತಿಸಬಹುದು. ಪ್ರಕೃತಿ ವರ್ಣನೆಯಲ್ಲಿ ಸೂರ್ಯೋದಯ, ಮಳೆ, ಚಂದ್ರೋದಯ, ಪರ್ವತ, ನದಿ ಮೊದಲಾದವುಗಳ ಬಣ್ಣನೆ ಕಂಡುಬಂದರೆ, ಶೃಂಗಾರ ಮುಕ್ತಕಗಳಲ್ಲಿ ಶೃಂಗಾರಿಕ ಸ್ಥಿತಿಗಳ ಹಾಗೂ ಭಾವಗಳ ಸೂಕ್ಷ್ಮ ಚಿತ್ರಣವಿರುತ್ತದೆ. ಶೃಂಗಾರದ ಭಿನ್ನ ಅವಸ್ಥೆಯ ಮಾರ್ಮಿಕ ಚಿತ್ರಣವು ಈ ಕಾವ್ಯದ ಮಹತಿ ವಿಶೇಷತೆಯಾಗಿರುತ್ತದೆ.

ಗೀತಕಾವ್ಯದ ಅನ್ಯ ಪ್ರಕಾರಗಳಲ್ಲಿ ಸ್ತೋತ್ರ ಮತ್ತು ಧಾರ್ಮಿಕ ಮುಕ್ತಕಗಳೂ ದೊರೆಯುತ್ತವೆ. ಇವುಗಳಲ್ಲಿ ದೇವತೆಗಳ ಕಾರ್ಯಗಳ, ಶಕ್ತಿಗಳ ಮತ್ತ ಕರುಣಾದಿಗಳ ಚಿತ್ರಣವಿರುತ್ತದೆ. ಗೀತಿ ಮುಕ್ತಕಗಳಲ್ಲಿ ಸದಾಚಾರ, ರಾಜನೀತಿ, ಪಾರಂಪರಿಕ ವ್ಯವಹಾರ, ಧರ್ಮ ಮತ್ತು ದರ್ಶನಾದಿಗಳ ಮೇಲೆ ಉಪದೇಶಾತ್ಮಕ ವಾಕ್ಯಗಳಿರುತ್ತವೆ.

ಕರ್ನಾಟಕದ ಅರಸಿಯರು ರಚಿಸಿರುವ ಮುಕ್ತಕಗಳು ಇಲ್ಲಿ ಸೂಚಿಸಿರುವ ಮೊದಲನೆಯ ಪ್ರಕಾರದ ಮುಕ್ತಕಗಳಾಗಿವೆ. ಇವುಗಳಲ್ಲಿ ಪ್ರಕೃತಿ ಮತ್ತು ಶೃಂಗಾರದ ಎರಡೂ ಚಿತ್ರಣಗಳು ಚಿತ್ರಿತವಾಗಿರುವುದನ್ನು ಕಾಣುತ್ತೇವೆ.

### ವಿಜ್ಜಿಕಾ, (ವಿಜಯಭಟ್ಟಾರಿಕಾ)

ಬಾದಾಮಿ ಚಲುಕ್ಯ ಅರಸಿ ವಿಜಯಭಟ್ಟಾರಿಕಾ ಸಂಸ್ಕೃತ ಸಾಹಿತ್ಯಕ್ಕೆ ಮಹತ್ವದ ಕೊಡುಗೆಯನ್ನು ನೀಡಿ, ಅದ್ವಿತೀಯ ಸಂಸ್ಕೃತ ಕವಯತ್ರಿ ಎನಿಸಿದ್ದಾಳೆ. ಹತ್ತನೆಯ ಶತಮಾನದ ಪೂರ್ವದಲ್ಲಿದ್ದ ಕೆಲವೇ ಕವಯತ್ರಿಯರಲ್ಲಿ ಪ್ರಮುಖಸ್ಥಾನಗಳಿಸಿದ ಇವಳು ಪ್ರಸಿದ್ಧ ಪ್ರಾಚೀನ ಕವಿ, ವಿದ್ವಾಂಸರುಗಳಿಂದ ಪ್ರಶಂಸೆಗಳಿಸಿದ್ದಾಳೆ. ಸಂಸ್ಕೃತದಲ್ಲಿ ಹಲವಾರು ಮುಕ್ತಕಗಳನ್ನು ರಚಿಸಿರುವುದಲ್ಲದೆ 'ಕೌಮುದೀ ಮಹೋತ್ಸವ' ಎಂಬ ನಾಟಕವನ್ನೂ ರಚಿಸಿದ್ದಾಳೆ.

ಇವಳ ರಚನಾಶೈಲಿ, ಪ್ರೌಡಿಮೆಗಳನ್ನು ಹೊಗಳಿರುವ ಹತ್ತನೆಯ ಶತಮಾನದ ರಾಜಶೇಖರನು ಇವಳ ವೈದರ್ಭೀರೀತಿಯನ್ನು ಕಾಳಿದಾಸನ ಶೈಲಿಗೆ ಹೋಲಿಸಿದ್ದಾನೆ.

**ಸರಸ್ವತೀ ವ ಕರ್ಣಾಟೀ ವಿಜಯಾಂಕಾ ಜಯತ್ಯಸೌ**
**ಯಾ ವೈದರ್ಭಗಿರಾವಾಸಮ್ ಕಾಳಿದಾಸಾದನಂತರಮ್ ॥**[2]

ಕಾಳಿದಾಸನ ನಂತರ ವೈದರ್ಭಿ ಶೈಲಿಯನ್ನು ಯಶಸ್ವಿಯಾಗಿ ರೂಢಿಸಿಕೊಂಡ ಕವಯತ್ರಿ ಎಂಬ ಹೆಗ್ಗಳಿಕೆಗೆ ಪಾತ್ರಳಾದವಳು. ಕಾಳಿದಾಸನ ನಂತರದ ಸ್ಥಾನವನ್ನು ಮಹಿಳೆಯೋರ್ವಳು ಪಡೆದುಕೊಂಡು ಮುಕ್ತಕಂಠದಿಂದ ಹೊಗಳಿಸಿಕೊಂಡಿರುವುದು ಇವಳ ವಿದ್ವತ್ತು, ಕಾವ್ಯರಚನಾ ಸಾಮರ್ಥ್ಯವನ್ನು ಕುರಿತು ಹೇಳುತ್ತದೆ.

ಇವಳನ್ನು ವಿಜಯಾ, ವಿಜ್ಜಿಕಾ, ವಿಜಯಭಟ್ಟಾರಿಕಾ, ವಿದ್ಯಾ, ಎಂಬ ವಿವಿಧ ಹೆಸರಿನಿಂದ ಕರೆಯಲಾಗಿದೆ. ಪ್ರಾಚೀನ ಸುಭಾಷಿತ ಸಂಗ್ರಹಕಾರರು ವಿಜ್ಜಿಕಾ ಎಂದು ಉಲ್ಲೇಖಿಸಿದರೆ, ರಾಜಶೇಖರನು ಈಕೆಯ ಹೆಸರನ್ನು 'ವಿಜಯಾ'

ಎಂದು ಬಳಸಿದ್ದಾನೆ. ವಿಜ್ಜಿಕಾ ಎಂಬುದನ್ನು ಸಂಸ್ಕೃತಕ್ಕೆ ರೂಪಾಂತರಿಸಿರುವುದು ಈ ಬದಲಾವಣೆಗೆ ಕಾರಣವೆಂದು ಪ್ರೊ.ಕಾಣೆಯವರು ಅಭಿಪ್ರಾಯಪಡುತ್ತಾರೆ[೩]. ಆದರೆ, ಸದುಕ್ತಿ ಕರ್ಣಾಮೃತದಲ್ಲಿ ಶ್ರೀಧರದಾಸನು ಇವಳನ್ನು ವಿದ್ಯಾ ಎಂದು ಕರೆದಿರುವುದನ್ನು ಡಾ.ರಾಘವನ್ ಅವರು ಸಂಸ್ಕೃತ ಕವಿ–ಕಾವ್ಯ ದರ್ಶನದಲ್ಲಿ, ಪ್ರಾಕೃತ ಪದವಾದ 'ವಿಜ್ಜಿಕಾ'ಎಂಬುದರ ಸಂಸ್ಕೃತರೂಪ ವಿದ್ಯಾ ಎಂಬುದಾಗಿರುವುದರಿಂದ ಶ್ರೀಧರದಾಸನು ಈ ಹೆಸರನ್ನು ಬಳಸಿರಬಹುದು ಎಂದು ಅಭಿಪ್ರಾಯ ಪಟ್ಟಿದ್ದಾರೆ. ಅಲ್ಲದೆ ಇವಳ ಶ್ರೇಷ್ಠಕಾವ್ಯ ಪ್ರತಿಭೆಯನ್ನು ಸೂಚಿಸುವುದು ಕೂಡ ವಿದ್ಯಾ ಎಂದು ಸಂಬೋಧಿಸುವುದಕ್ಕೆ ಕಾರಣವಾಗಿದೆ ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಇಲ್ಲಿ ಕವಯತ್ರಿಯ ಹೆಸರು ಭಿನ್ನವಾಗಿ ಗುರುತಿಸಿರುವುದು ಪ್ರಾದೇಶಿಕ ಭಿನ್ನತೆಯಿಂದ ಎಂಬುದು ಗಮನಾರ್ಹ. ಏನೇ ಆದರು ಪ್ರಶಂಸೆ ಸಂದಿರುವುದು ಮಾತ್ರ ವಿಜ್ಜಿಕಾಳ ಕೃತಿಗೆ ಮಾತ್ರವೇ.

**ಕಾಲ – ದೇಶ**

ವಿಜ್ಜಿಕಾ ಎಂದೇ ಪ್ರಸಿದ್ಧಳಾದ ವಿಜಯಭಟ್ಟಾರಿಕೆಯು ಕರ್ನಾಟಕದ ಅರಸು ಮನೆತನದವಳು ಎಂಬುದು ನಿರ್ವಿವಾದವಾಗಿದೆ. ಇವಳನ್ನು ಉಲ್ಲೇಖಿಸಿರುವ ರಾಜಶೇಖರ ಕಾರ್ನಾಟೀ ವಿಜಯಾ ಎಂದು ಕರೆದಿದ್ದಾನೆ[೪] ಅಲ್ಲದೆ, ಸ್ವತಃ ಈಕೆಯೇ ತನ್ನನ್ನು ಕರ್ನಾಟರಾಜಪ್ರಿಯಾ ಎಂದು ಕರೆದುಕೊಂಡಿದ್ದಾಳೆ.

ಇವಳ ಪದ್ಯಗಳನ್ನು ಹಲವಾರು ಲಾಕ್ಷಣಿಕರು, ಸುಭಾಷಿತ ಸಂಗ್ರಹಕಾರರು ತಮ್ಮ ಗ್ರಂಥಗಳಲ್ಲಿ ಉದಾಹರಿಸಿದ್ದಾರೆ. ಅವರಲ್ಲಿ ಪ್ರಾಚೀನನೆನಿಸಿದ ಮುಕುಲಭಟ್ಟನ ಕಾಲ ಕ್ರಿ.ಶ.೭೧೦–೭೫೦ ಎಂದು ನಿರ್ಧರಿಸಿರುವುದರಿಂದ ವಿಜ್ಜಿಕಾ ಈತನಿಗಿಂತಲೂ ಪೂರ್ವದಲ್ಲಿದ್ದಳೆನ್ನುವುದು ದೃಢಪಡುತ್ತದೆ. ದಂಡಿಯ ಪದ್ಯಕ್ಕೆ ಈಕೆ ಸವಾಲೆಸೆಯುವಂತೆ ಪದ್ಯಗಳನ್ನು ರಚಿಸಿರುವುದರಿಂದ ದಂಡಿಗಿಂತ ಈಚಿನವಳು ಅಥವಾ ದಂಡಿಯ ಕಿರಿಯ ಸಮಕಾಲೀನಳೆಂದು ತರ್ಕಿಸಬಹುದು.

ಬಾದಾಮಿ ಚಲುಕ್ಯ ಅರಸಿಯಾದ ಇವಳು ಎರಡು ತಾಮ್ರಪಟಗಳನ್ನು ಹೊರಡಿಸಿದ್ದು, ಅವುಗಳಲ್ಲಿ ಒಂದಾದ ನೇರೂರು ತಾಮ್ರಪಟವು ಕಾಲನಮೂದಿತ ಶಾಸನವಾಗಿದೆ. ಅದರಲ್ಲಿ ನಮೂದಾಗಿರುವ ಶಕವರ್ಷವು ಕ್ರಿ.ಶ.೬೫೯ಕ್ಕೆ ಸಮವಾಗುವುದರಿಂದ, ಇವಳ ಕಾಲವು ೭ನೆಯ ಶತಮಾನ ಎಂಬ ಖಚಿತ ತೀರ್ಮಾನಕ್ಕೆ ಬರಲು ಸಾಧ್ಯವಾಗಿದೆ.

**ರಾಜ್ಯಾಡಳಿತ:** ಇಮ್ಮಡಿ ಪುಲಿಕೇಶಿಯ ಮಗ ಚಂದ್ರಾದಿತ್ಯನ ಮಡದಿಯಾದ **ವಿಜಯ ಭಟ್ಟಾರಿಕೆ**ಯು ತನ್ನ ಪತಿಯ ಆಳ್ವಿಕೆಯಲ್ಲಿಯೇ ರಾಜ್ಯಾಡಳಿತ ನಿರ್ವಹಿಸುತ್ತಿದ್ದಳೆಂದು ತಿಳಿದು ಬರುತ್ತದೆ. ಈಕೆಯು ತನ್ನ ಪತಿಯ ಮರಣಾನಂತರ, ಆತನ ತಮ್ಮ ವಿಕ್ರಮಾದಿತ್ಯನ ಆಳ್ವಿಕೆಯಲ್ಲಿಯೂ ಈಗಿನ ಸಾವಂತವಾಡಿ ಪ್ರದೇಶವನ್ನು ಮಾಂಡಳಿಕಳಾಗಿ ರಾಜ್ಯಭಾರ ನಡೆಸಿರುವ ವಿಚಾರ ಶಾಸನಗಳಿಂದ ಸ್ಪಷ್ಟವಾಗಿದೆ.

ವಿಜಯಭಟ್ಟಾರಿಕೆಯು, ವೈಶಾಖ ಶುದ್ಧ ದ್ವಾದಶಿಯ ದಿನದಲ್ಲಿ ವತ್ಸಗೋತ್ರದ ಬ್ರಾಹ್ಮಣನಿಗೆ ವಾಕುಲಕಚ್ಚಕ್ಷೇತ್ರದ ಕೊಚ್ಚೂರಕ (ಕೋಚ್ರೆ – ರತ್ನಾಗಿರಿ ಜಿಲ್ಲೆ) ಎಂಬ ಗ್ರಾಮವನ್ನು ದಾನವಾಗಿ ಕೊಟ್ಟಿರುವುದನ್ನು ತಿಳಿಸುವ ಶಾಸನವೊಂದು ಚಂದ್ರಾದಿತ್ಯನ ಕಾಲಕ್ಕೆ ಸೇರಿದುದಾಗಿದೆ. ಇದರಲ್ಲಿ ವಿಕ್ರಮಾದಿತ್ಯನ ಶೌರ್ಯ ಸಾಹಸಗಳನ್ನು ಹೇಳಿದ ಮೇಲೆ ಅವನ ಅಣ್ಣನಾದ ಮಹಾರಾಜಾಧಿರಾಜ ಚಂದ್ರಾದಿತ್ಯನ ಹೆಂಡತಿ ವಿಜಯ ಮಹಾದೇವಿಯೆಂದು ಬರೆಯಲಾಗಿದೆ.

ಪತಿಯ ಮರಣಾನಂತರ ಸ್ವತಂತ್ರ ಆಳ್ವಿಕೆ ನಡೆಸಿದ್ದಳೆನ್ನುವುದನ್ನು ತಿಳಿಸುವ[೫] ತಾಮ್ರಪಟದಲ್ಲಿ "ಸ್ವರಾಜ್ಯ ಪಂಚಮ ಸಂವತ್ಸರ" ಎಂದು ಇವಳ ಆಡಳಿತವನ್ನು ಕುರಿತು ಹೇಳಿದೆ. ಈ ತಾಮ್ರಶಾಸನವು ನೇರೂರು (ಸಾವಂತವಾಡಿ ಸಂಸ್ಥಾನ) ವಿಜಯಭಟ್ಟಾರಿಕೆ ಸ್ವರಾಜ್ಯ ಐದನೆಯ ವರ್ಷದ ಆಶ್ವಯುಜ, ಶುದ್ಧ ಬಿದಿಗೆ ವಿಷುವದಲ್ಲಿ ಆಯಸ್ವಾಮಿ

ದೀಕ್ಷಿತನಿಗೆ ತರಕಾಗ್ರಾಹಾರ ಗ್ರಾಮದಲ್ಲಿ ಭೂಮಿಯನ್ನು ಕೊಟ್ಟಂತೆ ಹೇಳಿದೆ. ಇದು ಸೆಪ್ಟೆಂಬರ್ ೨೩, ಕ್ರಿ.ಶ.೬೫೯ಕ್ಕೆ ಸರಿಹೊಂದುತ್ತದೆ. ಈ ನೇರೂರು, ಕೋಚ್ರೇಂ ತಾಮ್ರಶಾಸನಗಳು ವಿಜಯಭಟ್ಟಾರಿಕೆಯ ಆಳ್ವಿಕೆಯನ್ನು ಕುರಿತು ತಿಳಿಸುತ್ತದೆ[೬].

ಈ ಕೋಚ್ರೆ ತಾಮ್ರ ಶಾಸನದಲ್ಲಿ "ಚಂದ್ರಾದಿತ್ಯ ಪ್ರಿಥಿವೀವಲ್ಲಭ ಮಹಾರಾಜಾಧಿರಾಜಸ್ಯ ಪ್ರಿಯಮಹಿಷಿ ಕಲಿಕಾಲ ಪ್ರತಿಪಕ್ಷ ಭೂತಾ ಶ್ರೀವಿಜಯ ಮಹಾದೇವಿ ಬೊಡ್ಡಿ ಪೊದ್ದಿ ಸರ್ವಾನಾ ಜ್ಞಾಪಯತಿ"[೭] ಎಂದು ಹೇಳಿರುವುದರಿಂದ ಈತನ 'ಪ್ರಿಯ ಮಹಿಷಿಯಾಗಿದ್ದ ವಿಜಯ ಭಟ್ಟಾರಿಕೆಯು ಬೊಡ್ಡಿ ಪೊದ್ದಿ ವಂಶದವಳಾಗಿರಬೇಕು. 'ಬೊಡ್ಡಿ' ಪೊದ್ದಿ'ಗಳು ಆ ಕಾಲದ ಸೂಳೆಯರ ಕುಲನಾಮಗಳಾಗಿರುವುದರಿಂದ ವಿಜಯಭಟ್ಟಾರಿಕೆಯು ವೇಶ್ಯೆ ವಂಶದವಳಾಗಿರುವ ಸಾಧ್ಯತೆಗಳಿವೆ[೮]. ಅಂದಿನ ಸಮಾಜದಲ್ಲಿ ವೇಶ್ಯೆಯರಿಗಿದ್ದ ಸ್ಥಾನಮಾನಗಳು, ರಾಜಮನ್ನಣೆಗಳು ಹಿರಿದಾಗಿದ್ದು, ಇವರು ವಿದ್ಯಾವಂತೆಯರಾಗಿರುತ್ತಿದ್ದರಲ್ಲದೆ, ಸಮಾಜಮುಖಿ ಕೆಲಸಗಳನ್ನು ನಿರ್ವಹಿಸುತ್ತಿದ್ದುದಕ್ಕೆ ಹಲವಾರು ನಿದರ್ಶನಗಳು ದೊರಕುತ್ತದೆ. ಅಲ್ಲದೆ ಬಾದಾಮಿ ಚಲುಕ್ಯರ ಮನೆತನದ ದೊರೆ ವಿಜಯಾದಿತ್ಯನ ಅರಸಿ ವಿನಾಪೋಟಿ ಎಂಬುವವಳೂ ಕೂಡ ವೇಶ್ಯಾ ಕುಲದವಳಾಗಿದ್ದಾಳೆ ಎನ್ನುವುದನ್ನು ಸ್ಮರಿಸಬಹುದು. ಅಂದಿನ ಅರಸು ಮನೆತನದವರು ವೇಶ್ಯಾಕುಲದವರೊಡನೆ ವೈವಾಹಿಕ ಸಂಬಂಧಗಳನ್ನು ನಡೆಸುತ್ತಿದ್ದರು.

ವಿಜ್ಜಿಕಾ, ತನ್ನನ್ನು 'ನೀಲೋತ್ಪಲದಂಶ್ಯಾಮಾಂ ವಿಜ್ಜಿಕಾಂ' ಎಂದು ಕರೆದುಕೊಂಡಿದ್ದಾಳೆ. ತನ್ನದು ಕಪ್ಪುಬಣ್ಣದವಳೆಂದು ಹೇಳಿಕೊಳ್ಳಲು ಅಂಜದ ವಿಜ್ಜಿಕಾ, ತಾನು ಶಾಮಲವರ್ಣದ ಸರಸ್ವತಿ ಎಂದು ಹೇಳುವ ದಿಟ್ಟತನ ತೋರಿದ್ದಾಳೆ. ಹೀಗೆ ಸ್ವತಃ ಕವಯತ್ರಿಯೇ ತನ್ನ ವ್ಯಕ್ತಿತ್ವವನ್ನು ತಿಳಿಸಿದ್ದಾಳೆ.

**ಮಾಧುರ್ಯವ್ಯಂಜಕೈರ್ವರ್ಣೈಃ ರಚನಾ ಲಲಿತಾತ್ಮಿಕಾ।**
**ನಾತಿಧೀರ್ಘಸಮಾಸಾ ಚ ವೈದರ್ಭೀ ರೀತಿರಿಷ್ಯತೇ ॥** ಎಂಬುದು ವೈದರ್ಭಿರೀತಿಯ ಲಕ್ಷಣವಾಗಿದೆ, ಇಂತಹ ಲಲಿತವಾದ ರಚನಾಬಂಧ ಹಾಗೂ ಮಾಧೂರ್ಯದಿಂದ ಕೂಡಿದ ವೈದರ್ಭಿರೀತಿಯಲ್ಲಿ ಸಿದ್ಧಹಸ್ತಳಾಗಿದ್ದಳೆಂಬುದು ವಿಜ್ಜಿಕೆಯ ಹಿರಿಮೆಯಾಗಿತ್ತು. ಇವಳಿಗೆ ತನ್ನ ಪಾಂಡಿತ್ಯವನ್ನು ಕುರಿತಂತೆ ಅಪಾರ ಹೆಮ್ಮೆ, ಆತ್ಮವಿಶ್ವಾಸ ವಿದ್ದುದರಿಂದಲೇ ತನ್ನನ್ನು ಸರಸ್ವತಿಗೆ ಹೋಲಿಸಿಕೊಂಡಿದ್ದಾಳೆ.

**ಚತುರ್ಮುಖಮುಖಾಂಭೋಜವನ ಹಂಸವಧೂರ್ಮಮ।**
**ಮಾನಸೇ ರಮತಾಂ ನಿತ್ಯಾಂ ಸರ್ವಶುಕ್ಲಾ ಸರಸ್ವತೀ॥** ಎಂಬ ಕಾವ್ಯಾದರ್ಶದಲ್ಲಿನ ದಂಡಿಯ ಪ್ರಥಮ ಶ್ಲೋಕಕ್ಕೆ
ವಿಜಯಭಟ್ಟಾರಿಕೆಯು ಈ ರೀತಿ ಉತ್ತರಿಸಿದ್ದಾಳೆ –

**ನೀಲೋತ್ಪಲದಲಶ್ಯಾಮಾಂ ವಿಜ್ಜಿಕಾಂ ಮಾಮಜಾನತಾ।**
**ವೃಥೈವ ದಂಡಿನಾ ಪ್ರೋಕ್ತಾ ಸರ್ವಶುಕ್ಲಾ ಸರಸ್ವತೀ ॥** ಶ್ಯಾಮಲವರ್ಣದ ವಿಜ್ಜಿಕೆಯನ್ನರಿಯದೆಯೇ, ದಂಡಿಯು ಸರಸ್ವತಿಯು ಗೌರವರ್ಣದವಳೆಂದು ಸುಮ್ಮನೆ ವರ್ಣಿಸಿದ್ದಾನೆ. ತಾನೇ ಸರಸ್ವತಿಯ ಅವತಾರವೆಂಬ ಸ್ವಪ್ರಶಂಸೆ! ಮಾಡಿಕೊಂಡಿರುವ ಇವಳ ಧೈರ್ಯವನ್ನೂ ವಿದ್ವಾಂಸರು ಮೆಚ್ಚಿದ್ದಾರೆ. ಇದು ಅತಿಶಯೋಕ್ತಿಯಲ್ಲ ಎನ್ನುವುದು ಮುಂದಿನ ಕೆಲವು ಶಾಸ್ತ್ರಕಾರರೂ, ಲಾಕ್ಷಣಿಕರೂ ಇವಳನ್ನು ಹೊಗಳಿರುವ ಶ್ಲೋಕಗಳಿಂದ ತಿಳಿದುಬರುತ್ತದೆ.

ವಿಜ್ಜಿಕಾಳ ಮತ್ತೊಂದು ಪದ್ಯ ಈ ಪ್ರಕಾರವಾಗಿದೆ.

**ಏಕೋಽಭೂತ್ ನಲಿನಾತ್ ತತಶ್ಚ ಪುನಿನಾತ್ ವಲ್ಮೀಕತಶ್ಚಾಪರಃ**
**ತೇ ಸರ್ವೆ ಭವಂತಿ ಕವಯಸ್ತೇಭ್ಯೋ ನಮಸ್ಕುರ್ಮಹೆ ॥**
**ಅರ್ವಾಂಚೋ ಯದಿ ಗದ್ಯಪದ್ಯರಚನೈಶ್ಚೇತಶ್ಚಮತ್ಕುರ್ವತೆ ।**
**ತೇಷಾಂ ಮೂರ್ಧ್ನಿ ದದಾಮಿ ವಾಮಚರಣಂ ಕರ್ಣಾಟರಾಜಪ್ರಿಯಾ ॥**

**"**ಕಮಲದಿಂದ ಹುಟ್ಟಿದ ಬ್ರಹ್ಮ, ಮಳಲಿನಿಂದ ಹುಟ್ಟಿದ ವ್ಯಾಸ, ಹುತ್ತದಿಂದ ಹುಟ್ಟಿದ ವಾಲ್ಮೀಕಿ ಇವರೇ ಕವಿಗಳು**!** ಅವರಿಗೆ ನಮ್ಮ ವಂದನೆ; ಉಳಿದವರು ಗದ್ಯ-ಪದ್ಯ ರಚನಾ ಚಾತುರ್ಯವನ್ನು ತೋರಿಸಹೋದರೆ ಕರ್ಣಾಟಕರಾಜಪ್ರಿಯೆಯಾದ ನಾನು ಅವರ ತಲೆಯ ಮೇಲೆ ಎಡಗಾಲನ್ನಿರಿಸುತ್ತೇನೆ**"** ಎಂಬ ಈ ಮಾತು ನಿಂದೆಯಂತೆ ಕಂಡರೂ ಅನ್ವಯಭೇದದಿಂದ ವರ್ಣನೆಯೂ ಆಗಿದೆ. 'ತೇಷಾಮ್ ಮೂರ್ಧ್ನಿ' ಎಂಬಲ್ಲಿ ತೇಷಾಮ್ ವಾಮಚರಣಂ ಮೂರ್ಧ್ನಿ ದದಾಮಿ ಎಂದು ಅನ್ವಯ ಮಾಡಿಕೊಂಡರೆ, ಈಗಿನವರಾರಾದರೂ ಗದ್ಯಪದ್ಯವನ್ನು ರಚಿಸುವ ಚಾತುರ್ಯವನ್ನು ತೋರಿಸಿದರೆ ಅವರ ಎಡಗಾಲನ್ನು ಕರ್ನಾಟಕ ರಾಜಪ್ರಿಯೆ ನಾನು ತಲೆಯಮೇಲಿಟ್ಟುಕೊಳ್ಳುವೆ – ಎಂದರ್ಥವಾಗುವುದು[೯].

ವಿಜ್ಜಿಕಾಳ ಈ ಹೇಳಿಕೆಯೂ ಕೂಡ ದಂಡಿಯನ್ನೇ ಕುರಿತದ್ದು ಎಂಬುದು ಹಲವರ ಅಭಿಮತ. ದಂಡಿಯು ಇವಳ ಹಿರಿಯ ಸಮಕಾಲೀನನಾಗಿದ್ದಾನೆ. ದಾಕ್ಷಿಣಾತ್ಯನೇ ಆಗಿದ್ದ ದಂಡಿಯು, ಇವಳ ಕಾಲದಲ್ಲಿ ಬಾದಾಮಿ ಚಳುಕ್ಯರ ರಾಜಕೀಯ ಶತ್ರುಗಳೆನಿಸಿದ್ದ ಪಲ್ಲವ ದೊರೆ ನರಸಿಂಹವರ್ಮನ ಆಶ್ರಯದಲ್ಲಿ ಆಸ್ಥಾನ ಕವಿಯಾಗಿದ್ದ. ಇವಳು ತನ್ನ ಶ್ಲೋಕದಲ್ಲಿ ಹೇಳಿರುವಂತೆ ಇವಳಿಗೆ ಅರ್ವಾಚೀನನೇ ಆಗಿದ್ದಾನೆ. ಅಲ್ಲದೆ ಗದ್ಯ-ಪದ್ಯಗಳಲ್ಲಿ ಬರೆದವನೂ ಆತನೇ ಆಗಿದ್ದಾನೆ. ಜೊತೆಗೆ ದಂಡಿಯು ತನ್ನನ್ನು ವ್ಯಾಸ-ವಾಲ್ಮೀಕಿಗಳ ಸಾಲಿನಲ್ಲಿ ಹೊಗಳಿಕೊಂಡ ಪದ್ಯವೊಂದು ಈ ರೀತಿಯಾಗಿದೆ

**ಜಾತೇ ಜಗತಿ ವಾಲ್ಮೀಕೌ ಶಬ್ದಃ ಕವಿರಿತಿ ಸ್ಮೃತಃ**
**ಕವೀ ಇತಿ ತತೋ ವ್ಯಾಸೇ ಕವಯಶ್ಚೇತಿ ದಂಡಿನಿ॥**

ಕರ್ನಾಟಕದ ಅರಸಿಯಾಗಿ, ದಂಡಿಗೆ ಸವಾಲೆಸೆಯುವಂತಹ ಪದ್ಯಗಳನ್ನು ರಚಿಸುವ ದಿಟ್ಟತನವನ್ನೂ, ಪಾಂಡಿತ್ಯ-ಸ್ವಶಕ್ತಿಯ ಕುರಿತಾದ ಆತ್ಮವಿಶ್ವಾಸವನ್ನೂ ಗಾಂಭೀರ್ಯ, ದಾರ್ಷ್ಟ್ಯದಿಂದ ಪ್ರಕಟಿಸಿದ್ದಾಳೆ. ಅಲ್ಲದೆ ಶ್ಲೇಷೆಯನ್ನು ತರುವ ಮೂಲಕ ಚಮತ್ಕಾರಯುತವಾದ ರಚನೆ ಮಾಡಿದ್ದಾಳೆ.

### ವಿಜ್ಜಿಕಾಳ ಮುಕ್ತಕಗಳು

ವಿಜ್ಜಿಕಾಳು ಹಲವಾರು ಬಿಡಿ ಮುಕ್ತಕಗಳನ್ನು ರಚಿಸಿದ್ದು, ಅವು ಅಲಂಕಾರವಿನ್ಯಾಸದಿಂದಲೂ, ಅರ್ಥವತ್ತಾಗಿರುವುದರಿಂದಲೂ ಬಹಳ ಆಕರ್ಷಕವಾಗಿವೆ. ಮಮ್ಮಟ, ಭೋಜ, ವಿಶ್ವನಾಥ, ಧನಂಜಯ ಮೊದಲಾದ ಪ್ರಸಿದ್ಧ ಮೀಮಾಂಸಕರು ಇವಳ ಪದ್ಯಗಳನ್ನು ತಮ್ಮ ಗ್ರಂಥಗಳಲ್ಲಿ ಉದಾಹರಣೆಯಾಗಿ ನೀಡಿದ್ದಾರೆ.

ಅಲಂಕಾರಿಕರಲ್ಲದೆ ಸುಭಾಷಿತ ಸಂಕಲನಕಾರರಾದ ೧೦ನೆಯ ಶತಮಾನದ ವಲ್ಲಭದೇವ[೧೦] ೧೪ನೆಯ ಶತಮಾನದ ಶಾರ್ಙ್ಗದೇವ[೧೧], ೧೨ನೆಯ ಶತಮಾನದ ಶ್ರೀಧರದಾಸ ಮುಂತಾದವರು ತಮ್ಮ ಗ್ರಂಥಗಳಲ್ಲಿ ಈಕೆಯ ಮುಕ್ತಕಗಳನ್ನು ಸಂಗ್ರಹಿಸಿದ್ದಾರೆ.

ವಿಜಯಭಟ್ಟಾರಿಕ ೨೯ ಮುಕ್ತಕಗಳನ್ನು ರಚಿಸಿದ್ದಾಳೆನ್ನುವುದನ್ನು ಚೌದರಿ.ಜೆ.ಬಿ ಅವರು ತಮ್ಮ 'ಸಂಸ್ಕೃತ್ ಪೊಯಟಸ್' ಕೃತಿಯಲ್ಲಿ ತಿಳಿಸಿದ್ದಾರೆಂದು ಪಿ.ವಿ.ಕಾಣೆಯವರು ಉಲ್ಲೇಖಿಸಿದ್ದಾರೆ[೧೨]. ಆದರೆ ಎಲ್ಲ ಮುಕ್ತಕಗಳು ಒಂದೆಡೆ ಪ್ರಕಟವಾಗಿರದೆ, ಹಲವು ಮುಕ್ತಕಗಳು ಇಂದಿಗೆ ಅಲಭ್ಯವಾಗಿವೆ.

ಇವಳು ರಚಿಸಿರುವ ಕೆಲವು ಮುಕ್ತಕಗಳು ಇವಳ ಕಾವ್ಯಶಕ್ತಿ, ಸ್ವಾಭಿಮಾನ, ಸ್ವಪ್ರಶಂಸೆ, ವಿಡಂಬನೆ ಮತ್ತು ಜನಪದದ ಜೀವನದ ಬಗೆಗಿದ್ದ ಸೂಕ್ಷ್ಮ ವಿಚಾರಗಳನ್ನು ಅಭಿವ್ಯಕ್ತ ಗೊಳಿಸುತ್ತವೆ. ಇಷ್ಟಲ್ಲದೆ ಕೆಲವು ಮುಕ್ತಕಗಳು ಒಂದೊಂದು ಪ್ರತಿಮಾಚಿತ್ರವನ್ನೇ ನೀಡುತ್ತದೆ. ಸೂರ್ಯೋದಯ, ಕಾಮನಬಿಲ್ಲಿನ ವರ್ಣನೆ, ಪುಷ್ಪವರ್ಣನೆಗಳಷ್ಟೇ

ಅಲ್ಲದೆ ಸೂಚ್ಯವಾಗಿ ಪ್ರೇಯಸಿಯ ಮನದ ಭಾವನೆಯನ್ನು ತಿಳಿಸುವ ಚಾತುರ್ಯತೆ ಇವಳ ಮುಕ್ತಕಗಳಲ್ಲಿ ಕಾಣಬಹುದು. ಇವಳ ಮುಕ್ತಕಗಳು ಆಧ್ಯಾತ್ಮದ ವಿಚಾರಗಳನ್ನೂ ಸಾರುತ್ತವೆ.

**ಸೂರ್ಯೋದಯದ ವರ್ಣನೆ**

**ಉನ್ನಿದ್ರಕೋಕನದರೇಣು ಪಿಶಂಗಿತಾಂಗಾಃ**
**ಗಾಯಂತಿ ಮಂಜು ಮಧುಪಾ ಗೃಹದೀರ್ಘಿಕಾಸು ।**
**ಏತಚ್ಚಕಾಸ್ತಿ ಚ ರವೇರ್ನವಬಂಧು ಜೀವ**
**ಪುಷ್ಪಚ್ಛದಾಭಮುದಯಾಚಲ ಚುಂಬಿಬಿಂಬಮ್॥**[೧೩]

"ಮನೆಯಂಗಳದ ಬಾವಿಯಲ್ಲಿ ಅರಳಿದ ಕನ್ನೈದಿಲೆಯ ಪರಾಗದಿಂದ ಹೊಂಬಣ್ಣಕ್ಕೆ ತಿರುಗಿರುವ ದುಂಬಿಗಳ ಮಧುರ ಗಾಯನ ಮಾಡುತ್ತಿವೆ. ಪೂರ್ವಾಚಲವನ್ನು ಸ್ಪರ್ಷಿಸಿರುವ ಈ ರವಿಬಿಂಬವು ಹೊಸದಾದ ದಾಸವಾಳದ ಹೂವಿನಂತೆ ಹೊಳೆಯುತ್ತಿದೆ". ಸೂರ್ಯೋದಯದ ಸುಂದರವರ್ಣನೆಯನ್ನು ಈ ಪದ್ಯ ನೀಡುತ್ತಿದೆ. ಉದಯಕಾಲದ ನಸುಕಿನ ಚಿತ್ರಣ ನೀಡಲು ಕವಯತ್ರಿಯು ರಾತ್ರಿ ವೇಳೆಯಲ್ಲಿ ಅರಳುವ ನೈದಿಲೆಯನ್ನಿಲ್ಲಿ ತಂದಿದ್ದಾಳೆ.

**ಪುಷ್ಪವರ್ಣನೆ :** ಪ್ರಕೃತಿವರ್ಣನೆಯ ಇವಳ ಮುಕ್ತಕಗಳಲ್ಲಿ ಪುಷ್ಪವರ್ಣನೆಯೂ ಒಂದು. ಇವಳು ಇಲ್ಲಿ ಮುತ್ತುಗದ ಹೂವನ್ನು ಬಣ್ಣಿಸುತ್ತಿದ್ದಾಳೆ. ಚಂದ್ರನ ಕಲೆಯೊಂದಿಗೆ ಸ್ಪರ್ಧಿಸುತ್ತಿರುವಂತೆ ಕಿಂಶುಕದ (ಮುತ್ತುಗದ) ಕೇಸರ ಕಾಣಿಸುತ್ತಿದೆ ಎಂದು ಉಪಮಾಲಂಕಾರದಲ್ಲಿ ಈ ಪದ್ಯ ರಚಿತವಾಗಿದೆ.

**ಕಿಂಶುಕ ಕಲಿಕಾಂತರ್ಗತಂ ಇಂದುಕಲಾಸ್ಪರ್ಧಿ ಕೇಸರಂ ಭಾತಿ।**
**ರಕ್ತನಿಚೋಲಕವಿಹಿತಂ ಧನುರಿವ ಜಾತಮುದ್ರಿತಂ ವಿತನೋಃ॥**

ಧನುಸ್ಸಿನ ಆಕಾರ ಹೊಂದಿರುವ ಮುತ್ತುಗದ ಮೊಗ್ಗು ಬೆಳ್ಳಗಿರುತ್ತದೆ. ಅರೆಬಿರಿದ ಮೊಗ್ಗಿನೊಳಗಿನ ಕೇಸರವು ಕೆಂಪಾಗಿರುತ್ತದೆ. ಇದನ್ನು ಕವಯತ್ರಿಯು ಚಂದ್ರಕಲೆಯೊಡನೆ ಸ್ಪರ್ಧಿಸುತ್ತಿರುವಂತಿದೆ ಎಂದು ಹೋಲಿಸಿದ್ದಾಳೆ. ಸಾಧಾರಣ ಹೂವನ್ನು ಅಸಾಧಾರಣವಾಗಿ ಬಣ್ಣಿಸುವ ಇವಳ ಕವಿಹೃದಯವನ್ನಿಲ್ಲಿ ಕಾಣಬಹುದು.

**ಅಸ್ಥಿರಮನೇಕರಾಗಮ್ ಗುಣರಹಿತಮ್ ನಿತ್ಯವಕ್ರ ದುಷ್ಪ್ರಾಪಮ್।**
**ಪ್ರಾವೃಷಿ ಸುರೇಂದ್ರ ಚಾಪಮ್ ವಿಭಾವ್ಯತೇ ಯುವತಿಚಿತ್ತಮಿವ ॥**

ಈ ಮೇಲಿನ ಪದ್ಯದಲ್ಲಿ ಯುವತಿಯರ ಮನಸ್ಸನ್ನು ಕಾಮನಬಿಲ್ಲಿಗೆ ಹೋಲಿಸಿದ್ದಾಳೆ. ಅಲ್ಲದೆ ಅಸ್ಥಿರವೂ, ಗುಣರಹಿತವೂ, ವಕ್ರಾಕಾರವನ್ನು ಹೊಂದಿರುವ ಹಾಗೂ ಅನೇಕ ಬಣ್ಣಗಳಿಂದ ಕೂಡಿರುವ ಕಾಮನಬಿಲ್ಲನ್ನು ವಿಭಿನ್ನ ರೀತಿಯಲ್ಲಿ ಬಣ್ಣಿಸಿದ್ದಾಳೆ.

ವಿಜ್ಜಿಕಾಳ ಪದ್ಯಗಳು ಕೇವಲ ಪ್ರಕೃತಿಸೌಂದರ್ಯ, ಜೀವನಸೌಂದರ್ಯಗಳ ಕುರಿತಾಗಿರದೆ, ಆಧ್ಯಾತ್ಮವನ್ನೂ ಬೋಧಿಸುತ್ತವೆ. ಈ ಕೆಳಗಿನ ಮುಕ್ತಕದಲ್ಲಿ ರೂಪಕ, ಉಪಮಾಲಂಕಾರಗಳ ಮೂಲಕ ಮಾನವರು ವಿಧಿಯ ಕೈಗೆ ಸಿಕ್ಕಿದ ಗೊಂಬೆಗಳು ಎಂಬ ವಿಚಾರವನ್ನು ಸಖಿಯೋರ್ವಳಲ್ಲಿ ಹೇಳಿಕೊಳ್ಳುತ್ತಿರುವ ರೀತಿ ವಿಶೇಷವಾಗಿದೆ.

**ಪ್ರಿಯಸಖಿ ವಿಪದ್ದಂಡಪ್ರಾಂತಪ್ರಪಾತಪರಂಪರಾ**
**ಪರಿಚಯಚಲೇ ಚಿಂತಾಚಕ್ರೇ ನಿಧಾಯ ವಿಧಿಃ ಖಲಃ ।**
**ಮೃದುಮಿವ ಬಲಾತ್ಪಿಂಡೀಕೃತ್ಯ ಪ್ರಗಲ್ಭಕುಲಾಲವದ್**
**ಭ್ರಮಯತಿ ಮನೋ ನೋ ಜಾನೀಮಃ ಕಿಮತ್ರ ವಿಧಾಸ್ಯತಿ ॥**

ಪ್ರಿಯಗೆಳತಿ, ವಿಪತ್ತೆಂಬ ದಂಡದ ತುದಿಯಿಂದ ಹೊಡೆಯಲ್ಪಟ್ಟು, ಚಿಂತೆಯೆಂಬ ಚಕ್ರದಮೇಲೆ ನನ್ನ ಮನಸ್ಸನ್ನು ಮಣ್ಣಿನ ಮುದ್ದೆಯಂತೆ ಇಟ್ಟು, ಕ್ರೂರವಾದ ವಿಧಿಯು ಪ್ರೌಢನಾದ ಕುಂಬಾರನಂತೆ ತಿರುಗಿಸುತ್ತಿದೆ. ಅದು ಮುಂದೆ ಏನು ಮಾಡಬೇಕೆಂದಿರುವುದೋ ಯಾರಿಗೆ ಗೊತ್ತು !

ಮತ್ತೊಂದು ಪದ್ಯದಲ್ಲಿ ತತ್ವನಿಷ್ಠರಾಗಿ ವಿಪತ್ತಿಗೆ ಅಂಜದ ಧೀರರ ಸ್ವಭಾವವನ್ನು ವ್ಯತಿರೇಕಾಲಂಕಾರದಲ್ಲಿ ವರ್ಣಿಸಿದ್ದಾಳೆ.

**ವಿರಮ ವಿಫಲಾಯಾಸಾದಸ್ಮಾದ್ದುರಧ್ಯವಸಾಯತೋ**
**ವಿಪದಿ ಮಹತಾಂ ಧೈರ್ಯಭ್ರಂಶಂ ಯದೀಕ್ಷಿತುಮೀಹಸೇ ।**
**ಅಯಿ ಜಡವಿಧೇ ಕಲ್ಪಾಪಾಯವ್ಯಪೇತನಿಜಕ್ರಮಾಃ**
**ಕುಲಶಿಖರಿಣಃ ಕ್ಷುದ್ರಾ ನೈತೇ ನ ವಾ ಜಲರಾಶಯಃ ॥**

ಜಡವಿಧಿಯೇ, ವಿಪತ್ತಿನಲ್ಲಿ ಶ್ರೇಷ್ಠವ್ಯಕ್ತಿಗಳ ಧೈರ್ಯನಾಶವನ್ನು ನೀನು ನೋಡಬಯಸುವಿಯಾದರೆ, ಅಂತಹ ವಿಫಲವಾದ ಆಯಾಸವುಳ್ಳ ನಿನ್ನ ಕೆಟ್ಟ ಪ್ರಯತ್ನವನ್ನು ನಿಲ್ಲಿಸು; ಏಕೆಂದರೆ ಇವರು ಪ್ರಳಯಕಾಲದಲ್ಲಿ ತಮ್ಮ ಸ್ಥಾನವನ್ನು ಪಲ್ಲಟಗೊಳಿಸಿಕೊಳ್ಳುವ ಕ್ಷುದ್ರವಾದ ಕುಲಪರ್ವತಗಳಂತೆಯೂ ಅಲ್ಲ ಅಥವಾ ಬತ್ತಿಹೋಗುವ ಜಲರಾಶಿಯೂ ಅಲ್ಲ. ಬೆಟ್ಟಗಳಾದರೂ ಕದಲಿಯಾವು, ಕಡಲು ಕೂಡ ಬತ್ತಬಹುದು ಆದರೆ ಶ್ರೇಷ್ಠವ್ಯಕ್ತಿಗಳು ಕಷ್ಟಗಳಿಗಾಗಿ ಅಂಜಿ ತಮ್ಮ ತತ್ವ ನಿಷ್ಠೆಯನ್ನು ಬಿಡುವುದಿಲ್ಲ ಎಂಬ ವಿಚಾರವನ್ನು ಸುಂದರವಾಗಿ ಹೆಣೆದಿದ್ದಾಳೆ.

**ಕೇನಾಪಿ ಚಂಪಕತರೋ ಬತ ರೋಪಿತೋಽಸಿ ಕುಗ್ರಾಮಪಾಮರ ಜನಾಂತಿಕ ವಾಟಿಕಾಯಾಮ್।**
**ಯತ್ರ ಪ್ರರೂಢನವಶಾಕ ವಿವೃದ್ಧ ಲೋಭಾದ್ಗೋಭಗ್ನವಾಟಘಟನೋಚಿತಪಲ್ಲವೋಽಸಿ ॥**

ಯೋಗ್ಯತಾವಂತನಾದ ಕವಿ ಅಥವಾ ವಿದ್ವಾಂಸರು ಯೋಗ್ಯತೆಯನ್ನರಿಯದವನ ಆಶ್ರಯದಲ್ಲಿದ್ದು ನಿರ್ಲಕ್ಷಿಸಲ್ಪಟ್ಟಿರುವರು ಎಂಬ ಅಂಶವನ್ನು "ಸಂಪಿಗೆ ಮರವೆ, ಈ ಹಾಳು ಕೊಂಪೆಯಲ್ಲಿನ ಮೂರ್ಖನ ಮನೆಯಂಗಳದಲ್ಲಿ ನಿನ್ನನ್ನು ಯಾರೋ ನೆಟ್ಟಿದ್ದಾರಲ್ಲ! ಇಲ್ಲಿ ಬೆಳೆಯುತ್ತಿರುವ ಗಿಡಗಂಟಿಗಳ ಮೇಲೆಯೇ ಲೋಭವು ಹೆಚ್ಚಾಗಿ, ಬೇಲಿಯಂತೆ ಬಳಸುತ್ತಾ, ಅಲಕ್ಷಿಸಲ್ಪಟ್ಟ ನಿನ್ನ ಎಲೆಗಳೆಲ್ಲ ಹಾಳು ತೋಟಗಳಲ್ಲಿದ್ದಂತಾಗಿವೆ". ಎಂಬ ಚಂಪಕಾನ್ಯೋಕ್ತಿಯಲ್ಲಿ ಅರ್ಥವತ್ತಾಗಿ ಚಿತ್ರಿಸಿರುವಳು. ಕವಿಯ ಪ್ರತಿಭೆಯು ಅರಳಲು ಯೋಗ್ಯ ಪರಿಸರವು ಅತ್ಯಂತ ಮುಖ್ಯವೆಂಬುದು ಇಲ್ಲಿಯ ಧ್ವನಿಯಾಗಿದೆ.

ಸಂಸ್ಕೃತ ಶಾಸ್ತ್ರಗ್ರಂಥಗಳಲ್ಲಿ ವಿಜ್ಜಿಕಾ ರಚನೆಗಳ ಉಲ್ಲೇಖ ಹಾಗೂ ಉದಾಹೃತ ಮುಕ್ತಕಗಳು

ಇವಳ ಮುಕ್ತಕಗಳು ಕಾವ್ಯಾಂಶಗಳ ದೃಷ್ಟಿಯಿಂದ ಅತ್ಯಾಕರ್ಷಕವಾಗಿವೆ. ಆದ್ದರಿಂದಲೇ ಸಂಸ್ಕೃತ ವಾಙ್ಮಯದ ಅಲಂಕಾರಿಕರು ಅವನ್ನು ತಮ್ಮ ಗ್ರಂಥಗಳಲ್ಲಿ ಉಲ್ಲೇಖಿಸಿದ್ದಾರೆ. ಮುಮ್ಮಟ, ಧನಂಜಯರಂತಹ ಲಾಕ್ಷಣಿಕರು ತಾವು ಪ್ರತಿಪಾದಿಸುವ ಅಲಂಕಾರ ಧ್ವನಿಗಳಿಗೆ ಇವಳ ಪದ್ಯಗಳನ್ನು ಉದಾಹರಣೆಯಾಗಿ ನೀಡಿದ್ದಾರೆ. ತೀನಂಶ್ರೀ ಅವರೂ ಕೂಡ ತಮ್ಮ ಮೇರುಗ್ರಂಥ ಭಾರತೀಯ ಮೀಮಾಂಸೆ ಕೃತಿಯಲ್ಲಿ ಇವಳ ಪದ್ಯವನ್ನು ಉದಾಹರಣೆಯಾಗಿ ಬಳಸಿದ್ದಾರೆ.

**ಧನ್ಯಾಸಿ ಯಾ ಕಥಯಸಿ ಪ್ರಿಯಸಂಗಮೇಽಪಿ**
**ವಿಸ್ರಬ್ಧಚಾಟುಕಶತಾನಿ ರತಾಂತರೇಷು ।**
**ನೀವಿಂ ಪ್ರತಿ ಪ್ರಣಿಹಿತೇ ತು ಕರೇ ಪ್ರಿಯೇಣ**
**ಸಖ್ಯಃ ಶಪಾಮಿ ಯದಿ ಕಿಂಚಿದಪಿ ಸ್ಮರಾಮಿ ॥**

ವಿಜ್ಜಿಕಾಳ ಈ ಶ್ಲೋಕವು ಮಮ್ಮಟನ ಕಾವ್ಯಪ್ರಕಾಶದ ನಾಲ್ಕನೆಯ ಉಲ್ಲಾಸದಲ್ಲಿ (ಅಧ್ಯಾಯ–೪, ಕಾರಿಕೆ–೩೯ ರ ಉದಾಹರಣೆ) ಅರ್ಥಮೂಲಕ ವಸ್ತು ಪ್ರತಿಪಾದ್ಯ ಅಲಂಕಾರ ಧ್ವನಿಗೆ ಉದಾಹರಣೆಯಾಗಿ ಕೊಟ್ಟಿದೆ[೧೪] ಅಲ್ಲದೆ ಕವೀಂದ್ರವಚನ ಸಮುಚ್ಚಯದ ೨೯೮ನೆಯ ಶ್ಲೋಕವಾಗಿ ಸಂಗ್ರಹಗೊಂಡಿದೆ.

ಮಮ್ಮಟನ ಕಾವ್ಯಪ್ರಕಾಶದ ನಾಲ್ಕನೆಯ ಉಲ್ಲಾಸದಲ್ಲಿ ಧ್ವನಿಯ ಭೇದಗಳ ನೀಡಲಾಗಿದೆ. ಇದರಲ್ಲಿ ಎರಡನ್ನು ಹೋಲಿಸುವಾಗ ಒಂದಕ್ಕಿಂತ ಇನ್ನೊಂದು ಹೆಚ್ಚು ಎಂದು ಚಮತ್ಕಾರಯುತವಾಗಿ ವರ್ಣಿಸುವಾಗ ವ್ಯತಿರೇಕ ಹುಟ್ಟುತ್ತದೆ ಎಂಬ ವಿಚಾರಕ್ಕೆ ವಿಜ್ಜಿಕಾಳ ಈ ಮುಕ್ತಕವನ್ನು ಉದಾಹರಣೆಯನ್ನಾಗಿ ನೀಡಲಾಗಿದೆ. ನೀನು ಅಧನ್ಯೆ, ನಾನು ನಿಜವಾಗಿಯೂ ಧನ್ಯೆ ಎಂಬ ವ್ಯತಿರೇಕಾಲಂಕಾರವನ್ನು ಇಲ್ಲಿ ಕಾಣಬಹುದು.

ಕೆ.ಕೃಷ್ಣಮೂರ್ತಿಯವರು ವಿಜ್ಜಿಕಾಳ ಈ ಮೇಲಿನ ಮುಕ್ತಕವನ್ನು ಕನ್ನಡದಲ್ಲಿ ಈ ರೀತಿ ಅನುವಾದ ಮಾಡಿದ್ದಾರೆ :

**ರತದೊಳ್ ಪ್ರಿಯನೊಡನಾಡಿದ**
**ಸವಿವಾತಂ ನುಡಿವೆ ಧನ್ಯೆನೀನಹೆ ನಿರುತಂ**
**ಕೈ ನೀಡರೆ ನೀವಿಗವಂ**
**ನಾನೊಂದಂ ಸಖಿಯರಾಣೆ ನೆನೆಯಲ್ಕಾರೆಂ**[೧೫]

**ಅಭಿಸಾರಿಕೆ**

**ದೃಷ್ಟಿಂ ಹೇ ಪ್ರತಿವೇಶಿನಿ ಕ್ಷಣಮಿಹಾಪ್ಯಸ್ಮಿನ್ಗೃಹೇ ದಾಸ್ಯಸಿ**
**ಪ್ರಾಯೇಣಾಸ್ಯ ಶಿಶೋಃ ಪಿತಾ ನ ವಿರಸಾಃ ಕೌಪೀರಪಃ ಪಾಸ್ಯತಿ ।**
**ಏಕಾಕಿನ್ಯಪಿ ಯಾಮಿ ತದ್ವರಮಿತಃ ಸ್ರೋತಸ್ತಮಾಲಾಕುಲಂ**
**ನೀರಂಧ್ರಾಸ್ತನುಮಾಲಿಖಂತು ಜರಠಚ್ಛೇದಾನಲಗ್ರಂಥಯಃ ॥**[೧೬]

"ನೆರೆಮನೆಯವಳೇ ನಮ್ಮ ಮನೆಯಕಡೆಗೆ ತುಸು ನೋಡಿಕೊಂಡಿರು. ಈ ನನ್ನ ಮಗುವಿನ ತಂದೆ ಬಾವಿಯ ಉಪ್ಪು ನೀರನ್ನು ಕುಡಿಯುವುದಿಲ್ಲ. ತಮಾಲ ವೃಕ್ಷಗಳ ಅಡಿಯಲ್ಲಿ ಹರಿಯುವ ಝರಿಯ ನೀರು ಉತ್ತಮವಾಗಿದೆ. ಆದುದರಿಂದ ಒಬ್ಬಂಟಿಗಳಾದರೂ ಚಿಂತೆಯಿಲ್ಲ ಅಲ್ಲಿಗೆ ಹೋಗುವೆನು. ಅಲ್ಲಿ ದಟ್ಟವಾಗಿ ಬೆಳೆದಿರುವ ಮುಳ್ಳು ಕಂಟಿಗಳು ಮೈಯನ್ನು ಪರಚಿದರೂ ಪರಚಲಿ" ಎಂಬ ವಾಚ್ಯಾರ್ಥವಿರುವ ಈ ಮುಕ್ತಕವು ತನ್ನ ಪತಿಯಲ್ಲದೆ ಬೇರೊಬ್ಬನನ್ನು ಒಲಿದು ಅವನಲ್ಲಿಗೆ ಹೋಗುವಾಗ ಮಾನಿನಿಯೊಬ್ಬಳು ಜಾಣ್ಮೆಯಿಂದ ನೀರು ತರುವ ನೆಪಹೇಳಿ, ಮುಂದೆ ಬರಬಹುದಾದ ಸಂಶಯಗಳನ್ನು ಮೊದಲೇ ಚಾತುರ್ಯದಿಂದ ನಿವಾರಿಸಿದ್ದಾಳೆ.

ಧನಂಜಯ ವಿರಚಿತ ದಶರೂಪಕದಲ್ಲಿ ಇವಳ ಮತ್ತೊಂದು ಮುಕ್ತಕ ಉದಾಹೃತವಾಗಿದೆ. ಧನಂಜಯನ ದಶರೂಪಕಕ್ಕೆ ಧನಂಜಯನ ತಮ್ಮನಾದ ಧನಿಕನು ಬರೆದಿರುವ ವ್ಯಾಖ್ಯಾನದಲ್ಲಿ ದೊರಕುತ್ತದೆ. ದನಂಜಯನ ಕೃತಿಯಲ್ಲಲ್ಲದೆ, ಮುಕುಲಭಟ್ಟನ 'ಅಭಿಧಾವೃತ್ತಿ ಮಾತೃಕೆ'ಯಲ್ಲಿ ಹಾಗೂ ಮಮ್ಮಟ ಶಬ್ದವ್ಯಾಪಾರವನ್ನು ವಿಚಾರಮಾಡುವ ಪ್ರಸಂಗದಲ್ಲಿ ಉದಾಹೃತವಾಗಿದೆ ಅಲ್ಲದೆ 'ಕವೀಂದ್ರವಚನ ಸಮುಚ್ಚಯ'ವೆಂಬ ಸಂಗ್ರಹದಲ್ಲಿನ ೫೦೦ನೆಯ ಶ್ಲೋಕವಾಗಿ ವಿಜ್ಜಿಕೆಯ ಈ ಮುಕ್ತಕ ಸಂಗ್ರಹ ಗೊಂಡಿದೆ.

ಧನಂಜಯನು ಅನ್ಯಾಭೇದಗಳನ್ನು ತಿಳಿಸುತ್ತಾ, ವಿವಾಹಿತಳಾದ ಅನ್ಯಸ್ತ್ರೀಯಳ ಪ್ರೇಮವನ್ನು ಪ್ರಧಾನ ಅಥವಾ ಸಹಾಯಕ ರಸಗಳಲ್ಲಿ ಒಮ್ಮೆಯೂ ತರಬಾರದೆಂಬ ನಿಯಮವನ್ನು ತಿಳಿಸುತ್ತಾ, ಚಮತ್ಕಾರಯುತವಾಗಿ ಹೇಳಲು ಅವಕಾಶವಿದೆ ಎಂಬುದಕ್ಕೆ ಇದನ್ನು ಉದಾಹರಣೆಯಾಗಿ ನೀಡಿದ್ದಾನೆ.

## ಸಹೃದಯ

ಕೇವಲ ರಸವತ್ತಾದ ಪದಗಳಲ್ಲಿ ಸ್ಫುರಿಸುತ್ತಿರುವ ಕವಿಯ ಅಭಿಪ್ರಾಯವು, ಶಬ್ದಕ್ಕೆ ನಿಲುಕದ್ದು; ಅದರಿಂದುಂಟಾಗುವ ಆನಂದವನ್ನು ತಮ್ಮ ತನುವಿನ ರೋಮಾಂಚನದಿಂದಲೇ ತಿಳಿಯಪಡಿಸಬಲ್ಲ ರಸಿಕ ಶ್ರೇಷ್ಠರಿಗೆ, ಇಗೋ ನನ್ನ ನಮನ.

**ಕವೇರಭಿಪ್ರಾಯಮಶಬ್ದಗೋಚರಂ ।**
**ಸ್ಫುರಂತಮಾರ್ದ್ರೇಷು ಪದೇಷು ಕೇವಲಮ್ ॥**
**ವರದ್ಭಿರಂಗೈಃ ಕೃತರೋಮವಿಕ್ರಿಯೈ**
**ರ್ಜನಸ್ಯ ತೂಷ್ಣೀಂ ಭವತೋಯಮಂಜಲಿಃ ॥**

ತೀನಂಶ್ರೀ ಅವರು ತಮ್ಮ ಭಾರತೀಯ ಕಾವ್ಯ ಮೀಮಾಂಸೆ ಕೃತಿಯಲ್ಲಿ ಸಹೃದಯ ವಿಚಾರವನ್ನು ಚರ್ಚಿಸುವಾಗ ವಿಜ್ಜಿಕಾಳ ಈ ಮುಕ್ತಕವನ್ನು ಉದಾಹರಿಸಿದ್ದಾರೆ. ಕೆಲವರು ಮೆಚ್ಚುಗೆಯನ್ನು "ಭಲಾ, ಭೇಷ್, ಆಹಾ!" ಎಂಬ ಉದ್ಗಾರಗಳಿಂದ ತಿಳಿಸಿದರೆ ಮತ್ತೆ ಕೆಲವರು ಅಪ್ರಯತ್ನವಾಗಿ ಮೈಯಲ್ಲಿ ಹುರಿಗೊಂಡ ಪುಳಕದಿಂದ, ಅರಳಿದ ಕಣ್ಣುಗಳಿಂದ ಮೌನವಾಗಿಯೇ ವ್ಯಕ್ತಪಡಿಸುತ್ತಾರೆ. ಈ ಎರಡನೆ ರೀತಿಯ ಸಹೃದಯರ ಕುರಿತಾಗಿ ತಿಳಿಸುವಾಗ ವಿಜ್ಜಿಕಾಳ ಈ ಮುಕ್ತಕವನ್ನು ಉದಾಹರಣೆಯಾಗಿ ನೀಡಿರುವುದಲ್ಲದೆ, ತಮ್ಮ ಬಿಡಿಮುತ್ತು ಕೃತಿಯಲ್ಲಿ ಇದರ ಕನ್ನಡ ಅನುವಾದವನ್ನು ಪದ್ಯರೂಪದಲ್ಲಿ ನೀಡಿದ್ದಾರೆ.

**ನುಡಿಗೆ ನಿಲುಕದ ಕವಿಯ ಬಗೆಯ ಭಾವವನು**
**ದ್ರವಿಸುತಿಹ ಪದಗಳಲಿ ತನಿ ಮಿಂಚುವುದನು**
**ಪುಳಕನೆಸೆದಂಗಗಳು ಮಾರ್ನುಡಿಯುತಿರಲು**
**ಮೌನವನು ತಳೆವನಿಗೆ ಕರವನಿದೋ ಮುಗಿವೆ!**[೧೭]

ಮಹಾಕವಿಯು ತನ್ನ ಭಾವನೆಗಳನ್ನು ಅಭಿಧೇಯದ (ವಾಚ್ಯಾರ್ಥದ) ಮೂಲಕ ಪ್ರಕಟಿಸದೆ, ವ್ಯಂಜನಾವೃತ್ತಿಯಿಂದಲೇ ಪ್ರಕಟಿಸುತ್ತಾರೆ. ಶಬ್ದಗಳ ಮೂಲಕ ಅಭಿಪ್ರಾಯಗಳು ಅಭಿವ್ಯಕ್ತವಾಗುವುದಿಲ್ಲ; ಆದರೆ, ರಸಯುಕ್ತವಾದ ಮನೋಹರವಾದ ಪದಗಳ ಮುಖೇನ ಭಾವನೆಗಳು ಅಭಿವ್ಯಕ್ತವಾಗುತ್ತದೆ. ಇಂತಹ ಮಹಾಕವಿಯ ಗೂಢವಾದ ವ್ಯಂಜನಾವೃತ್ತಿಯಿಂದ ದ್ಯೋತಿತವಾದ ಅಭಿಪ್ರಾಯಗಳನ್ನು ತಿಳಿದುಕೊಂಡು, ಯಾವ ರಸಿಕನು ಶಬ್ದದ ಮೂಲಕ ಕಾವ್ಯಾನಂದದ ಸೂಚನೆಯನ್ನೂ ಕೊಡದಿದ್ದರೂ, ಹೃದಯದ ಆನಂದ ಲಹರಿಯ ಕಾರಣದಿಂದ ರೋಮಾಂಚಿತನಾಗುತ್ತಾನೋ, ಅವನೇ ಸತ್ಯವಾಗಿಯೂ ರಸಿಕ. ಅಂತಹ ಸಹೃದಯ ಶಿರೋಮಣಿಗೆ ನಾನು ನಮಸ್ಕಾರ ಮಾಡುತ್ತೇನೆ.

"ಈ ಶ್ಲೋಕವು ರಸಿಕನ ಸುಂದರವಾದ ವರ್ಣನೆಯಾಗಿರುತ್ತದೆ. ಹೇಗೆ, ಧ್ವನಿಯ ಮೂಲಕ ಭಾವನೆಗಳನ್ನು ಅಭಿವ್ಯಕ್ತಿಗೊಳಿಸುವುದು ಶ್ರೇಷ್ಠಕವಿಯ ಕಾರ್ಯವೋ, ಅದೇ ವಿಧದಲ್ಲಿ ವ್ಯಂಜನಾವೃತ್ತಿಯ ಮೂಲಕ ಅದನ್ನು ಪ್ರಶಂಸೆ ಮಾಡುವುದು ಭಾವುಕನ ಕರ್ತವ್ಯ"[೧೮].

**ಕೋಶಃ ಸ್ಫೀತತರಃ ಸ್ಥಿತಾನಿ ಪರಿತಃ ಪಂತ್ರಾಣಿ ದುರ್ಗಂ ಜಲಂ**
**ಮೈತ್ರಂ ಮಂಡಲಮುಜ್ವಲಂ ಚಿರಮಧೋ ನೀತಾಸ್ತಥಾ ಕಂದಕಾಃ**
**ಇತ್ಯಾ ಕೃಷ್ಟ ಶಿಲೀಮುಖೇನ ರಚನಾ ಕೃತ್ವಾ ತದಪ್ಯದ್ಭುತಂ**
**ಯಸ್ಪದ್ಮೇನ ಜಿಗೀಷುಣಾಪಿ ನ ಜಿತಂ ಮುಗ್ದೆ ಸ್ವದೀಯಂ ಮುಖಂ ॥**

ರಾಜಮಂಡಲ, ಕೋಟೆ ಗಿರಿ–ಕಂದಕಗಳನ್ನೆಲ್ಲ ಗೆದ್ದು, ಕಂಠಕೋಪಾದಿಯ ಬಾಣಗಳನ್ನೆದುರಿಸಿ ದಿಗ್ವಿಜಯ ಸಾಧಿಸಿದರೂ ನಿನ್ನ ಮುಖ ಕಮಲದ ಮುಂದೆ ಸೋತೊ ಹೋದೆ ಎಂದು ಪ್ರಿಯಕರನು ತನ್ನ ಸಾಹಸವನ್ನೂ, ಪ್ರೇಯಸಿಯ ಮುಂದೆ ಸೋಲನ್ನೂ ಒಪ್ಪಿಕೊಳ್ಳುತ್ತಿದ್ದಾನೆ.

**ನಾರ್ಯಾ ಸಾ ರತಿಶೂನ್ಯತಾ ನಯನಯೋರ್ಥ ದೃಷ್ಟಿ ಪಾತೆ ಸ್ಥಿತಃ**
**ಕಾಮೀ ಪ್ರಾಪ್ತರತಾರ್ಥ ಏವ ನ ಭವತ್ಯಾಲಿಂಗಿತಂ ವಾಂಛತಿ**
**ಆಷ್ಲೇಷಾಲಪಿ ಯಾಪರಂ ಮೃಗಯತೆ ದಿಕ್ಕಾಮಯೋಗ್ಯಾಂ ಸ್ತ್ರಿಯಂ**
**ಶ್ರೇಣೀಗೋಚರಮಾಗತೋ ರತಿಫಲಂ ಪ್ರಾಪ್ನೋತಿ ತಿರ್ಯಂಕಂ ಕಿಂ ॥**

**ಪಾತುಂ ಪದ್ಮಸುಗಂಧಿ ಲೋಲನಯನಂ ರೋಮಾಂಚಿತಂ ಗಂಡಯೋ**
**ರ್ಯಾವದ್ವದುಮಪಾಟಲಾಧರಪುಟಂ ವಕ್ತ್ರಂ ಮಯೋನ್ನಾಮಿತಮ್**
**ವೈಲಕ್ಷ್ಯಪ್ರತಿಷೇಧವಿಕ್ಲವಗಿರಾ ತನ್ವ್ಯಾ ತಯಾ ಮುಗ್ಧಯಾ**
**ಪಶ್ಚಾತ್ತಾಮ್ರರುಚಾ ಕರೇಣ ಮಮ ತು ಪ್ರಚ್ಛಾದಿತೇ ಲೋಚನೇ ॥**

**ಉನ್ನಮಯ್ಯ ಸಕಚಗ್ರಹಮಾಸ್ಯಂ ಚುಂಬತಿ ಪ್ರಿಯತಮೇ ಹಠವೃತ್ತ್ಯಾ|**
**ಹುಂ ಮಮೇತಿ ವದನಾಂತರಲೀನಂ ಜಲ್ಪಿತಂ ಜಯತಿ ಮಾನವತೀನಾಮ್ ॥**

ಕಾಮನೇ ನಿನ್ನನ್ನು ಶಿವನು ಮೊದಲು ಜಯಿಸಿದನು ಬಳಿಕ ಬುದ್ಧನು ಸೋಲಿಸಿದನು. ನನ್ನನ್ನು ಬಿಟ್ಟು ಪ್ರವಾಸದಲ್ಲಿರುವ ನನ್ನ ಕಾಂತನೂ ನಿನ್ನನ್ನು ಜಯಿಸಿರುವನು . ಅವರೆಲ್ಲರನ್ನು ಬಿಟ್ಟು ಅಬಲೆಯಾದ ನನ್ನನ್ನು ಹಿಂಸಿಸುವೆಯಲ್ಲ! ಆದುದರಿಂದ "ಧಿಕ್ ತ್ವಾಮ್ ಧಿಕ್ ತವ ಪೌರುಷಮ್ ಧಿಉದಯಮ್ ಧಿಕ್ ಕಾರ್ಮುಕಮ್ ಧಿಕ್ ಶರಾನ್" ಎಂದು ವಿರಹಿಣಿಯ ವ್ಯಥೆಯನ್ನು ಮನಸ್ಸು ಕರಗುವಂತೆ ಚಿತ್ರಿಸಿರುವಳು.

**ಒನಕೆವಾಡು**

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ 'ಒನಕೆವಾಡು' ಅಥವಾ 'ಓವನಿಗೆ' ಎಂಬುದೊಂದು ಪ್ರಾಕಾರವಾಗಿತ್ತೆನ್ನುವ ಉಲ್ಲೇಖ ದೊರಕುತ್ತದೆ. ಆದರೆ ಇದರ ಸ್ವರೂಪ ಹೇಗಿತ್ತೆನ್ನುವ ವಿಚಾರ ತಿಳಿದು ಬರುವುದಿಲ್ಲ. ಒನಕೆವಾಡಿನ ಉಲ್ಲೇಖಗಳು ದೊರಕುವುದು ಹನ್ನೆರಡನೆಯ ಶತಮಾನದ ನಂತರದ ಕಾಲದಲ್ಲಿ. ಎಂಟನೆಯ ಶತಮಾನದ ಶಿವಮಾರನ ಒಂದು ಅಷ್ಟಕ ಕೃತಿಯು ಒನಕೆವಾಡಿನಂತೆ ಪ್ರಸಿದ್ಧಿ ಪಡೆಯಿತೆನ್ನುವ ವಿಚಾರವನ್ನು ಕ್ರಿ.ಶ.೧೧೭೭ರ ಶಾಸನ ತಿಳಿಸುತ್ತದೆ. ಪ್ರಾಚೀನ ಛಂದಸ್ಸಿನ ಗ್ರಂಥಗಳು ಜನಪದ ರೂಪಕವಿರಬಹುದಾದ ಈ 'ಒನಕೆವಾಡು' ಕುರಿತಂತೆ ಯಾವ ವಿಚಾರವನ್ನೂ ತಿಳಿಸಿಲ್ಲ. ಆದರೆ ವಿಜ್ಜಿಕಾಳ ಮುಕ್ತಕವೊಂದು ಸಂಸ್ಕೃತದಲ್ಲಿ ಕನ್ನಡದ ಈ ಪ್ರಕಾರದ ಕುರಿತಂತೆ ತಿಳಿಸುತ್ತದೆ.

**ವಿಲಾಸಮಸೃಣೋಲ್ಲಸನ್ಮುಸಲ ಲೋಕದೋಃ ಕಂದಲೀ**
**ಪರಸ್ಪರಪರಿಸ್ಖಲದ್ ವಲಯನಿಸ್ವನೋದ್ ಬಂಧುರಾಃ ।**
**ಲಸಂತಿ ಕಲಹುಂಕೃತಿ ಪ್ರಸಭಕಂಪಿತೋರಸ್ಥಲತ್ರುಟಿ**
**ದ್ಗಲದ್ಗಮಕಸಂಕುಲಾಃ ಕಲಮಕಂಡಿನೀಗೀತಯಃ ॥**

"ವಿಲಾಸದಿಂದ ಭತ್ತಕುಟ್ಟುವ ಯುವತಿಯರ ವರ್ಣನೆ ಮಾಡುತ್ತಾ, ಒನಕೆಯನ್ನು ಮೇಲಕ್ಕೆತ್ತುವ ಪುಷ್ಟವಾದ ತೋಳುಗಳ ಚಲನೆಗನುಸರಿಸಿ ಮೇಲೆ ಕೆಳಗೆ ಸರಿಯುವ ಬಳೆಗಳ ನಿನಾದ ಮತ್ತು ವಿಶಾಲವಾದ ಉರಃಸ್ಥಲಗಳ ಏರಿಳಿತಗಳಿಗನುಸಾರವಾಗಿ ಬರುವ ಹುಂಕಾರಗಳೆಂಬ ಪಕ್ಕವಾದ್ಯಗಳಿಂದ ಕೂಡಿದ ಭತ್ತ ಕುಟ್ಟುವ ಹಾಡುಗಳು ಮನಸ್ಸನ್ನು ಸೆಳೆಯುತ್ತದೆ" ಎಂದು ವಿಜ್ಜಿಕಾಳ ಮುಕ್ತಕ ಒಂದು ಬಣ್ಣನೆ ನೀಡುತ್ತದೆ.

ಈ ಪದ್ಯದಲ್ಲಿ ಅನುಪ್ರಾಸದ ಕುಶಲ ಪ್ರಯೋಗದಿಂದ ಭತ್ತಕುಟ್ಟುವ ಸುಕುಮಾರಿಗಳ ಶ್ರಮದ ದೀರ್ಘನಿಶ್ವಾಸ ಇವುಗಳನ್ನು ಕೇಳುವಂತೆ ಮಾಡಿ ಭತ್ತಕುಟ್ಟುವ ಸುಂದರಿಯರನ್ನು ನಮ್ಮ ಕಣ್ಣಮುಂದೆ ನಿಲ್ಲಿಸಿದ್ದಾಳೆ. ನಾದ ಸೌಂದರ್ಯವನ್ನು ತನ್ನ ಪದ್ಯದಲ್ಲಿ ಸಾಕಾರಪಡಿಸುವ ಸಾಮರ್ಥ್ಯ ಈಕೆಯ ಪದ್ಯಗಳಲ್ಲಿವೆ. ಜಾನಪದ ಹಾಡುಗಳ ಮಟ್ಟನ್ನು ಇವಳು ಗಮನಿಸುತ್ತಿದ್ದ ರೀತಿಯನ್ನಿಲ್ಲಿ ಕಾಣಬಹುದು. ಗ್ರಾಮೀಣ ಹಾಡುಗಳ ಅರಿವೂ ಇವಳಿಗಿತ್ತು.

ಬಳೆಗಳ ನಿನಾದ, ಹುಂಕಾರ, ಒನಕೆಯ ಸಪ್ಪಳ ಎಲ್ಲವೂ ತಾಳಲಯ ಬದ್ಧ!, ಇಂತಹ ಮೇಳವಾದ್ಯದಿಂದ ಕೂಡಿದ ಗೀತೆಯ ವಿವರಣೆ ನೀಡಿರುವ ವಿಜ್ಜಿಕಾ ಇದನ್ನು ಒನಕೆವಾಡು ಎಂದು ಹೆಸರಿಸಿಸದೆಯೇ ಈ ಪ್ರಕಾರದ ಗೀತೆಯ ವಿಚಾರವನ್ನು ತಿಳಿಸಿದ್ದಾಳೆ.

ಒನಕೆವಾಡಿನ ವಿಚಾರ ಅಲ್ಲಲ್ಲಿ ತಿಳಿದು ಬಂದರೂ ಅದರ ಲಕ್ಷಣಗಳನ್ನು ಯಾರೂ ತಿಳಿಸಿಲ್ಲ. ಆದರೆ ಸೋಮೇಶ್ವರನ (ಕ್ರಿ.ಶ.೧೧೨೯) ಮಾನಸೋಲ್ಲಾಸ ಕೃತಿಯಲ್ಲಿ ಒನಕೆವಾಡುಗಳು ತ್ರಿಪದೀ ರೂಪವಾಗಿರುತ್ತಿತ್ತೆನ್ನುವ ಉಲ್ಲೇಖ ದೊರಕುತ್ತದೆ. ನೇಮಿಚಂದ್ರನ ಲೀಲಾವತಿ (೧೧೭೦)ಕೃತಿಯೂ ಕೂಡ ಒನಕೆವಾಡುಗಳು ತ್ರಿಪದಿಗಳಲ್ಲಿರುತ್ತಿದ್ದವೆನ್ನುವುದನ್ನು ಸ್ಪಷ್ಟಪಡಿಸುತ್ತದೆ. ಇದೇ ಪ್ರಕಾರ ಕವಿ ಸುರಂಗ (ಕ್ರಿ.ಶ.೧೪೫೦–೧೫೦೦) ಕೂಡ, ಇದು ತ್ರಿಪದಿಯಲ್ಲಿರುತ್ತದೆನ್ನುವುದನ್ನು ಹೇಳಿದ್ದಾನೆ. ಸಿದ್ಧನಂದೇಶನ ಗುರುರಾಜ ಚಾರಿತ್ರೆಯಲ್ಲಿ “ಸುವ್ವಿ ಎಂದೊನಕೆವಾಡ ಹಾಡುತ್ತ ಕುಟ್ಟುತ್ತಿರಲ್” ಎಂಬ ಉಲ್ಲೇಖವು ಒನಕೆವಾಡು ಕುಟ್ಟುವ ಪದ ಎಂಬುದನ್ನು ತಿಳಿಸುತ್ತದೆ.

ಗಂಗದೊರೆ ಸೈಗೊಟ್ಟ ಶಿವಮಾರನ ‘ಗಜಾಷ್ಟಕ’ವನ್ನು ಕುರಿತು ಶಾಸನವೊಂದು “ಏವೇಳ್ವುದೊ ಶಿವಮಾರ ಮಹೀವಳಯಾಧಿಪನ ಸುಭಗಕವಿತಾ ಗುಣಮಂ । ಭೂವಳಯದೊಳ್ ಗಜಾಷ್ಟಕಮೋವನಿಗೆಯುಮೊನಕೆವಾಡು ಮಾದುದೆ ಪೇಟ್ಗುಂ”[೧೯] ಎಂದು ಗಜಾಷ್ಟಕ ಕೃತಿಯು ಓವನಿಗೆ, ವೊನಕೆವಾಡಿನಷ್ಟು ಪ್ರಸಿದ್ಧಿ ಪಡೆಯಿತೆಂದು ಶ್ಲಾಘಿಸಿದೆ. ಇದನ್ನು ಕುರಿತು ಚಿದಾನಂದ ಮೂರ್ತಿಯವರು “ಒಂದು ಕೃತಿಯು ಒನಕೆವಾಡಾಗಿ ಪರಿಣಮಿಸುವುದು ಅದರ ಶ್ರೇಷ್ಠತ್ವದೊರೆಗಲ್ಲು” ಎಂದಿದ್ದಾರೆ[೨೦].

ಬಹುಶಃ ಹನ್ನೊಂದನೆಯ ಶತಮಾನದ ವೇಳೆಯಲ್ಲಿ ‘ಮನೆಮನೆಯಲ್ಲಿ ಜನಪ್ರಿಯತೆ ಪಡೆಯಿತು’ ಎನ್ನುವ ಅರ್ಥದ ಪಡೆನುಡಿಯಾಗಿ ‘ಒನಕೆವಾಡು’ಪದ ಬಳಕೆಯಾಗುತ್ತಿದ್ದಿರಬೇಕು. ದುರ್ಗಸಿಂಹನ ಪಂಚತಂತ್ರದಲ್ಲಿ (೧೦೩೧)ಯೂ ಕೂಡ “ಸಮಸ್ತಾವನಿಯ ಜನಮೊನಕೆವಾಡಪ್ಪಿನೆಗಂ ಸಲೆ ನುಡಿದ ನುಡಿ....” ಎಂದು ತಿಳಿಸಿದೆ. ಭೀಮಕವಿ (೧೩೬೯) ಸಿರಿಯಾಳನ ಕೀರ್ತಿಯನ್ನು ಹೊಗಳುತ್ತಾ “ಮನೆಮನೆಗಳಲ್ಲಿ ಸ್ತ್ರೀಯರು ಒನಕೆವಾಡಾಗಿ ಹಾಡುವರು” ಎಂದು ತಿಳಿಸಿದ್ದಾನೆ.

“ಒನಕೆವಾಡಾಗಿ ಪರಿಣಮಿಸುವುದು ಅದರ ಜನಪ್ರಿಯವಾಯಿತು ಎಂದು ವ್ಯಾಖ್ಯಾನಿಸಬೇಕಾಗುತ್ತದೆ”[೨೧]

ತಿರುಮಲಾರ್ಯನ ‘ಕರ್ಣವೃತ್ತಾಂತ ಕಥೆ’ (೧೦.೨೩)ರಲ್ಲಿ “ಒನಕೆವಾಡುಡುಗಿ ವೊಲೆಯೊಳುರಿಯಡಗಿ ಭೋಜನಭಿಕ್ಷೆ ಕಳೆದ ಕಾಲದೊಳು.....” ಎಂಬ ಸಾಲು ಒನಕೆವಾಡು ಅಡಗಲು ಭೋಜನವೇನೂ ಇರುವುದಿಲ್ಲ ,,...... ಎಂದು ತಿಳಿಸಿರುವಲ್ಲಿ ಕುಟ್ಟುವ ಕೆಲಸವು ಒನಕೆವಾಡಿನ ಗಾಯನವಿಲ್ಲದೆ ನಡೆಯುವುದೇ ಇಲ್ಲ ಅಥವಾ ಒನಕೆ ಕುಟ್ಟುವ ಸದ್ದಿಗೇ, ಲಯಕ್ಕೇ ಒನಕೆವಾಡು ಎಂದು ಕರೆದಿದ್ದು, ಕುಟ್ಟುವ ಸದ್ದು ಅಡಗಿರುವುದರಿಂದ ಊಟವಿಲ್ಲ ಎಂಬ ವಿಚಾರವನ್ನು ಇದು ಹೇಳುತ್ತಿದೆ.

ಒನಕೆವಾಡು ಧಾನ್ಯವನ್ನು ಕುಟ್ಟುವಾಗ ಹಾಡುತ್ತಿದ್ದ ಹಾಡು, ಇಂದು ಸಿಗುವ ಬೀಸೋಕಲ್ಲಿನ ಪದಗಳಂತೆ ಇದೊಂದು ಜಾನಪದಗೀತೆಯ ಪ್ರಾಕಾರವಾಗಿದ್ದಿರಬಹುದು. ಜಾನಪದ ಗೀತೆಗಳಲ್ಲಿ ಬಹುಪಾಲು ತ್ರಿಪದೀ

ರೂಪವಾಗಿವೆ. ಯಾವುದೋ ಒಂದು ಸಂಗತಿಯನ್ನು, ಒಂದು ಕತೆಯನ್ನು ತೆಗೆದುಕೊಂಡು ಅದನ್ನು ತ್ರಿಪದಿಗಳಲ್ಲಿ ಕಟ್ಟಿ ಧಾನ್ಯ ಕುಟ್ಟುವಾಗ ಹಾಡುತ್ತಿದ್ದರು.

ಕನ್ನಡಿಗಳೇ ಆದ ವಿಜಯಭಟ್ಟಾರಿಕೆಯ ಕಾಲದಲ್ಲಿ ಬಹು ಪ್ರಸಿದ್ಧವಾಗಿದ್ದ ಈ ಜನಪದ ಗೀತೆಯನ್ನು ಮೆಚ್ಚಿ ಸಂಸ್ಕೃತದಲ್ಲಿ ಇದರ ಕುರಿತಾಗಿ ರಚಿಸಿದ್ದಾಳೆ. ಒನಕೆವಾಡು ಆ ಕಾಲದಲ್ಲಿ ಸಾಮಾನ್ಯರಿಂದ ಅರಸರವರೆಗೂ ಮನಸೆಳೆದ ಜನಪದ ಪ್ರಕಾರವಾಗಿತ್ತು. ಇಂತಹ ಜನಪದ ಪ್ರಕಾರವನ್ನು ಛಂದೋಗ್ರಂಥಗಳು ಉಲ್ಲೇಖಿಸದಿದ್ದರೂ ಅರಸಿಯಾದ ವಿಜಯಭಟ್ಟಾರಿಕೆ ಈ ಕುರಿತು ರಚಿಸಿರುವುದು ಗಮನಾರ್ಹವಾಗಿದೆ.

ಒನಕೆವಾಡನ್ನು ಕುರಿತು ಚರ್ಚಿಸಿರುವ ಇಪ್ಪತ್ತನೆಯ ಶತಮಾನದ ನಂತರದ ಕೆಲವೇ ಗ್ರಂಥಗಳಲ್ಲಿ, ವಿಜಯಭಟ್ಟಾರಿಕೆ ತಿಳಿಸಿರುವ ಈ ಮುಕ್ತಕವನ್ನು ಯಾರೂ ಗಮನಿಸಿಲ್ಲ.

**ಪ್ರೇರಣೆ**

**ಏಕೋಭೂನ್ನಲಿನಾತ್ತ ತಶ್ಚ ಪುನಿನಾದ್ವಾಲ್ಮೀಕತಶ್ಚಾಪರ**
**ಸ್ತೇ ಸರ್ವೇ ಕವಯೋ ಭವಂತಿ ಗುರುವಸ್ತೇಭ್ಯೋ ನಮಸ್ಕುರ್ಮಹೆ ॥**
**ಅರ್ವಾಂಚೋ ಯದಿ ಗದ್ಯಪದ್ಯರಚನೈಶ್ಚೇತಶ್ಚಮತ್ಕುರ್ವತೆ ।**
**ತೇಷಾಂ ಮೂರ್ಧ್ನಿ ದದಾಮಿ ವಾಮಚರಣಂ ಕರ್ಣಾಟರಾಜಪ್ರಿಯಾ ॥**

ಈ ಪದ್ಯವು ವಿದ್ವತ್ವಲಯದಲ್ಲಿ ಸಾಕಷ್ಟು ಕುತೂಹಲವನ್ನೂ, ಚರ್ಚೆಯನ್ನೂ ಉಂಟುಮಾಡಿದೆ. ಬ್ರಹ್ಮ, ವಾಲ್ಮೀಕಿ, ವ್ಯಾಸರನ್ನುಳಿದು ಮಿಕ್ಕವರು ಕವಿಗಳೇ ಅಲ್ಲ, ಚಾತುರ್ಯವನ್ನು ತೋರದ ಇತ್ತೀಚಿನ ಕವಿಗಳ ತಲೆಯಮೇಲೆ ನನ್ನ ಎಡಗಾಲು ಎನ್ನುವ ಉದ್ಧಟತನವನ್ನು ತೋರಿದ ವಿಜ್ಜಿಕೆಯನ್ನು ಪಾಂಡಿತ್ಯ ಮದಾಂಧಳೆಂದು ಕರೆದಿದ್ದಾರೆ. ಆದರೆ ಈ ಪದ್ಯವನ್ನು ಮೆಚ್ಚಿದವರು ಇಲ್ಲದಿಲ್ಲ. ಈ ರೀತಿಯ ಪದ್ಯವನ್ನು ಬರೆದ ಇವಳ ಧೈರ್ಯವನ್ನು ಹೊಗಳಿದವರೂ ಇದ್ದಾರೆ. ಅಲ್ಲದೆ ಶಾಕಮಲ್ಲನೆಂಬುವನು ಇದೇ ಪದ್ಯವನ್ನು ಅನುಕರಿಸಿ ಈ ರೀತಿಯಾಗಿ ರಚಿಸಿದ್ದಾನೆ

**ಏಕೋಭೂತ್ಪುಲಿನಾತ್ತತಶ್ಚ ನಲಿನಾಚ್ಚಾನ್ಯೋಪಿ ನಾಕೋರಭಾತ್**
**ಪ್ರಾಚ್ಯಸ್ತೇ ತ್ರಯಯೇವ ದಿವ್ಯ ಕವಯೋ ದಿವ್ಯಂತು ದೇವ್ಯಾಸಿರಾ ॥**
**ಅರ್ವಾಚೋ ಯದಿ ಗದ್ಯಪದ್ಯರಚನಾ ಚಾತುರ್ಯವಾಗುದ್ಧ ತಾ**
**ಸ್ತೇ ಸರ್ವಾನತಿಶೈಯ ಖೇಲತಿತರಾನ್ ಶಾಕಲ್ಲ ಮಲ್ಲಃ ಕವಿಃ ॥**

ಈ ಮಲ್ಲಕವಿ ಯಾರಿರಬಹುದು ಎಂದು ಖಚಿತವಾಗಿ ತಿಳಿದಿಲ್ಲ. ಸಂಸ್ಕೃತ ಕವಿಚರಿತೆ ರಚಿಸಿರುವ ಎಂ.ಎನ್.ಶ್ರೀನಿವಾಸ ಅಯ್ಯಂಗಾರ್ ಅವರು "ಮಲ್ಲಶಬ್ದವು ಕರ್ನಾಟಕ ರಾಜರ ಹೆಸರಿಗೆ ಹೊಂದಿರುತ್ತದೆ. ಉದಾಹರಣೆಗೆ ತ್ರಿಭುವನಮಲ್ಲದೇವ ಮುಂತಾದ ಹೆಸರುಗಳು ಇತಿಹಾಸದಲ್ಲಿ ದೊರಕುತ್ತದೆ"[೨೨] ಎಂದಿದ್ದಾರೆ. ಕಲ್ಯಾಣದ ಚಾಲುಕ್ಯರಲ್ಲಿ ಹಸ್ತಿಮಲ್ಲ, ಆಹವಮಲ್ಲ, ತ್ರೈಲೋಕ್ಯಮಲ್ಲ ಮೊದಲಾದವರು ಬರುತ್ತಾರೆ ಅಲ್ಲದೆ ಈ ಮನೆತನದಲ್ಲಿ ಮಾನಸೋಲ್ಲಾಸ ಮೊದಲಾದ ಮಹಾನ್ ಕೃತಿಗಳನ್ನು ರಚಿಸಿದ ಅರಸರೂ ಇದ್ದಾರೆ. ಬಾದಾಮಿ ಚಾಲುಕ್ಯರ ವಂಶಜರೇ ಎಂದು ಹೇಳಿಕೊಳ್ಳುವ ಕಲ್ಯಾಣಿ ಚಾಲುಕ್ಯ ಅರಸು ತಮ್ಮ ಪೂರ್ವಜಳಾದ ವಿಜ್ಜಿಕೆಯನ್ನು ಅನುಸರಿಸಿರುವುದರಲ್ಲಿ ಆಶ್ಚರ್ಯ ಎನಿಸುವುದಿಲ್ಲ.

ಮಹಾಕವಿಗಳು ತಾವು ಹೇಳಲಿರುವ ವಿಷಯಗಳನ್ನು ವಾಚ್ಯಾರ್ಥದಲ್ಲಿ ಸ್ಫೂರಿಸದೆ ಧ್ವನಿಯಲ್ಲಿ ಅಡಕಗೊಳಿಸಿರುತ್ತಾರೆ. ಕಿರಿದರಲ್ಲಿ ಪಿರಿದರ್ಥವನ್ನು ಎಂಬಂತೆ ಇವರ ರಚನೆಗಳಿರುತ್ತದೆ. ಇಂತಹ ರಚನೆಗಳನ್ನು ವಿಜಯಭಟ್ಟಾರಿಕೆಯ ಲಲಿತವೂ, ಮಧುರವೂ, ದೀರ್ಘಸಮಾಸ ಪದಗಳಿಂದ ಕೂಡಿರದ ಸರಳ ಪದಗಳ ಬಂಧದಿಂದ ಕೂಡಿರುವ ಪದ್ಯಗಳಲ್ಲಿ ಕಾಣಬಹುದು. ಇವಳ ಪದ್ಯಗಳು ಚಮತ್ಕಾರಯುತವಾಗಿಯೂ

ಅರ್ಥಶ್ಲೇಷೆಯಿಂದಲೂ ಕೂಡಿರುವಂಥದ್ದೆನ್ನುವುದನ್ನೂ ನಾವಿಲ್ಲಿ ಗಮನಿಸಿದ್ದೇವೆ. ಕಾಳಿದಾಸನ ನಂತರ ವೈದರ್ಭಿ ಶೈಲಿಯನ್ನು ಸಮರ್ಥವಾಗಿ ರೂಢಿಸಿಕೊಂಡವಳೆಂಬ ಹೆಮ್ಮೆಗೆ ಭಾಜನಳಾದ ವಿಜಯಭಟ್ಟಾರಿಕೆಯನ್ನು ಕುರಿತು ದೇಶದಾದ್ಯಂತ ಸಂಸ್ಕೃತ ವಿದ್ವಾಂಸರಷ್ಟೇ ಅಲ್ಲದೆ ವಿದೇಶೀ ವಿದ್ವಾಂಸರೂ ಕೂಡ ಮುಕ್ತಕಂಠದಿಂದ ಶ್ಲಾಘಿಸಿದ್ದಾರೆ.

ವಿಜಯಭಟ್ಟಾರಿಕೆ ಸಂಸ್ಕೃತ ನಾಟಕವನ್ನು ರಚಿಸಿದ್ದಾಳಲ್ಲದೆ ಒಂದು ಕನ್ನಡ ಶಾಸನವನ್ನೂ ರಚಿಸಿದ್ದಾಳೆ. ಇದೇ ಅಧ್ಯಾಯದ ಮುಂದಿನ ಭಾಗದಲ್ಲಿ ಅವುಗಳನ್ನು ಕುರಿತು ಚರ್ಚಿಸಲಾಗಿದೆ.

**ಶೀಲ ಭಟ್ಟಾರಿಕಾ**

ಸಂಸ್ಕೃತದಲ್ಲಿ ಮುಕ್ತಕಗಳನ್ನು ರಚಿಸಿದ ಮತ್ತೋರ್ವ ಕರ್ನಾಟಕದ ಅರಸಿ ಶೀಲಭಟ್ಟಾರಿಕಾ. ಎಂಟನೆಯ ಶತಮಾನದಲ್ಲಿದ್ದ ಇವಳು ರಾಷ್ಟ್ರಕೂಟ ಮನೆತನದ ಪ್ರಭಾವಿ ಅರಸು ಧ್ರುವನ ಅರಸಿ. ಪೂರ್ವಚಾಲುಕ್ಯರೆಂದು ಕರೆಯುತ್ತಿದ್ದ ವೆಂಗಿಚಾಳುಕ್ಯ ವಿಷ್ಣುವರ್ಧನನ ರಾಜಕುಮಾರಿ. ಶೀಲಭಟ್ಟಾರಿಕೆಯು ವೆಂಗಿಚಾಳುಕ್ಯ ಹಾಗೂ ರಾಷ್ಟ್ರಕೂಟ ರಾಜಮನೆತನಗಳ ನಡುವೆ ನಡೆಯಲಿದ್ದ ಯುದ್ಧವನ್ನು ತಪ್ಪಿಸಿ, ಸ್ನೇಹ ಬಾಂಧವ್ಯವನ್ನು ವೃದ್ಧಿಸಲೆಂದು ಧ್ರುವನನ್ನು ವರಿಸುತ್ತಾಳೆ.

ಶಾಸನಗಳಲ್ಲಿ ಇವಳನ್ನು ಶೀಲಮಹಾದೇವಿಯನ್ನು ಶೀಲಭಟ್ಟಾರಿಕಾ, ಪರಮಭಟ್ಟಾರಿಕಾ, ಪರಮೇಶ್ವರಿ ಎಂದು ಸಂಭೋಧಿಸಲಾಗಿದೆ. ಈ ಸಂಬೋಧನೆಯೆ ರಾಣಿಯರಿಗಿದ್ದ ಪರಮಾಧಿಕಾರವನ್ನು ಸೂಚಿಸುತ್ತದೆ. ಕ್ರಿ.ಶ.೭೮೮ರ ಜಿತ್ವಾಯ್ ತಾಮ್ರಪಟಶಾಸನವು, ಇವಳು ತನ್ನ ಹೆಸರಿನಲ್ಲೇ ರಾಜ್ಯದ ಅಧಿಕಾರಿಗಳಾದ ವಿಷಯಪತಿ, ರಾಷ್ಟ್ರಪತಿ, ಗ್ರಾಮಕೂಟ, ನಿಯುಕ್ತ, ಮಹತ್ತರತಿಗೆ ನಂದಪುರಿದ್ವಾರಿ ವಿಷಯದೊಳಗಿನ ಕೊಳಪದ್ರ ಗ್ರಾಮವನ್ನು ದಾನವಾಗಿ ಕೊಟ್ಟು, ಇದನ್ನು ನಡೆಸಿಕೊಡಲು ದುರ್ಗಾದಿತ್ಯನೆಂಬುವನಿಗೆ ಆದೇಶಿಸಿರುವುದನ್ನು ತಿಳಿಸುತ್ತದೆ[೨೩]. ಈ ದಾನಶಾಸನವನ್ನು ರಾಜನ ಸಾಂಪ್ರದಾಯಿಕ ಅನುಮತಿಯನ್ನು ಪಡೆಯದೆಯೇ ಸ್ವತಂತ್ರವಾಗಿ ತನ್ನ ಹೆಸರಿನಲ್ಲೇ ಹೊರಡಿಸಿದ್ದಾಳೆ[೨೪]. ಕ್ರಿ.ಶ.೭೮೬ರ ಇಂದೋರ್ ಜಿಲ್ಲೆಯ ಜೇಥ್ವಾಯ್ ತಾಮ್ರಪಟಗಳು ಇವಳು ಅಧಿಕಾರಿಗಳಿಗೆ ತನ್ನ ಆದೇಶವನ್ನು ನೀಡಿರುವುದನ್ನು ಸ್ಪಷ್ಟವಾಗಿ ಉಲ್ಲೇಖಿಸುತ್ತದೆ.

ದೂತಕ ಸೋಮದೇವ ಶಂಖಯ್ಯನು ತಂದ ಆದೇಶದಂತೆ ಖಡ್ಗಸೇನನ ಪುತ್ರ ಮಹಾಸನ್ನಿವಿಗ್ರಹಾಧಿಕಾರಿ ವಸುದೇವನು ೭೮೬ರಲ್ಲಿ ಇದನ್ನು ಬರೆದನು. ದೂತಕ ಮತ್ತು ಸಕ್ಷಿವಿಗ್ರಹಾಧಿಕಾರಿಯನ್ನು ಜೇಥ್ವಾಯ್ ತಾಮ್ರಪಟವು ಈ ಪ್ರಕಾರವಾಗಿ ಉಲ್ಲೇಖಿಸುತ್ತದೆ. "ಶ್ರೀ ಪೃಥುವೀವಲ್ಲಭ ಮಹಾದೇವಿ ಸಮಾದಿಷ್ಟ ಸೋಮಯಾಜಿ ಶಂಖಯ್ಯ ದೂತಕಂ ಲಿಖಿತಂ ಚ ಪರಮೇಶ್ವಯೋಜ್ಞಯಾ ಖಡ್ಗಸೇನ ಸೂನುನಾ ಮಹ ಸಕ್ಷಿವಿಗ್ರಹಾಧಿಕೃತೇನ ಗುಣಾಭರಾಪರನಾಮ್ನಾ ವಸುದೇವೇನೇತಿ." ಇಲ್ಲಿ ದೂತಕನು 'ಮಹಾದೇವಿ ಸಮಾಧಿಷ್ಟ' (ಉಪಾಸಕ) ನೆಂದು ಕರೆದುಕೊಂಡಿದ್ದಾನೆ. ಮಳಖೇಡದ ರಾಷ್ಟ್ರಕೂಟರು ಮಧ್ಯಪ್ರದೇಶದಲ್ಲಿ ಬರೆಸಿದ ಮೊದಲ ತಾಮ್ರಪಟ ಇದಾಗಿದೆ. ಈ ಸಂದರ್ಭದಲ್ಲಿ ಅರಸಿ ಪರಮಭಟ್ಟಾರಿಕಾ ಶೀಲಮಹಾದೇವಿಯೊಡನೆ ದೊರೆ ಧ್ರುವ ಕೂಡ ಕುರುಗೋಟದಲ್ಲಿರುತ್ತಾನೆ.

ಕಲ್ಹಣನು ತನ್ನ ರಾಜತರಂಗಿಣಿಯಲ್ಲಿ ಕಾಶ್ಮೀರದ ಅರಸು ಲಲಿತಾದಿತ್ಯನ ದಿಗ್ವಿಜಯವನ್ನು ಅತಿಶಯವಾಗಿ ಬಣ್ಣಿಸುತ್ತಾ ಪೂರ್ವಸಮುದ್ರದವರೆಗಿನ ರಾಜ್ಯಗಳನ್ನೆಲ್ಲಾ ಗೆದ್ದು, ಗೌಡದೇಶದ ಅಧಿಪತಿಯನ್ನು ಪರಾಭವಗೊಳಿಸಿ ದಕ್ಷಿಣದ ಮೇಲೆ ದಂಡೆತ್ತಿ ಹೋಗುತ್ತಾನೆಂಬ ಬಣ್ಣನೆ ನೀಡಿದ್ದಾನೆ. ಆ ಸಂದರ್ಭದಲ್ಲಿ ದಕ್ಷಿಣದಲ್ಲಿ 'ರಟ್ಟಾ' ಎಂಬ ಕರ್ನಾಟಕದ ರಾಣಿಯು ರಾಜ್ಯವಾಳುತ್ತಿದ್ದಳೆಂಬ ವಿಚಾರವನ್ನು ಕಲ್ಹಣನು ತಿಳಿಸಿದ್ದಾನೆ. ಕಲ್ಹಣನು ರಾಷ್ಟ್ರಕೂಟರನ್ನು ರಟ್ಟರೆಂದು ಗುರುತಿಸಿದ್ದಾನೆ. ಆ ಕಾಲದ ರಾಷ್ಟ್ರಕೂಟ ಮನೆತನದ ಪ್ರಸಿದ್ಧ ಅರಸಿ ಶೀಲಭಟ್ಟಾರಿಕೆಯೇ ಆಗಿದ್ದಾಳೆ.

ಕಲ್ಹಣನು ಬಣ್ಣಿಸಿರುವ ಲಲಿತಾದಿತ್ಯನ ದಿಗ್ವಿಜಯ ಉತ್ಪ್ರೇಕ್ಷೆಯಿಂದ ಕೂಡಿದೆ ಎಂಬುದನ್ನು ವಿದ್ವಾಂಸರು ಗುರುತಿಸಿದ್ದಾರೆ. ಲಲಿತಾದಿತ್ಯನು ಕಾವೇರಿ ತೀರದವರೆಗೆ ದಂಡಯಾತ್ರೆ ಮಾಡಿರುವ ಸಾಧ್ಯತೆಯೇ ಇಲ್ಲ ಎಂದು ಜಿ.ಎಸ್.ಗಾಯಿಯವರು ವಾ.ವಿ.ಮಿರಾಶಿಯವರ ಅನುವಾದಕೃತಿ ಭವಭೂತಿಯ ಪ್ರಸ್ತಾವನೆಯಲ್ಲಿ ತಿಳಿಸಿದ್ದಾರೆ[೨೫]. ಆದರೆ ಕಾಶ್ಮೀರದ ಕಲ್ಹಣ ರಾಷ್ಟ್ರಕೂಟ (ರಟ್ಟ) ಸಾಮ್ರಾಜ್ಯದಲ್ಲಿ ಆಳ್ವಿಕೆ ನಡೆಸುತ್ತಿದ್ದ ಪ್ರಭಾವಿ ಅರಸಿ ಎಂದು ಉಲ್ಲೇಖಿಸಿರುವುದು, ಆ ಕಾಲದಲ್ಲಿ ಆಳ್ವಿಕೆ ನಡೆಸುತ್ತಿದ್ದ ಶೀಲಭಟ್ಟಾರಿಕೆಯ ಹಿರಿಮೆ ಹಾಗೂ ಪ್ರಖ್ಯಾತಿಯನ್ನು ಕುರಿತು ತಿಳಿಸುತ್ತದೆ.

**ಶೀಲಮಹಾದೇವಿಯ ಮುಕ್ತಕಗಳು**

ಶೀಲಮಹಾದೇವಿಯನ್ನು ಹಲವು ಪ್ರಾಚೀನ ಕವಿಗಳು ಉಲ್ಲೇಖಿಸಿದ್ದಾರೆ. ಕೆಲವರು ತಮ್ಮ ಶಾಸ್ತ್ರಗ್ರಂಥಗಳಲ್ಲಿ ವಿವರಣೆಗಾಗಿ ನೀಡುವ ಉದಾಹರಣಾ ಪದ್ಯಗಳಾಗಿ ಇವಳ ಪದ್ಯಗಳನ್ನು ಬಳಸಿಕೊಂಡಿದ್ದಾರೆ. ಮತ್ತೆ ಕೆಲವು ಸುಭಾಷಿತಗಳಲ್ಲಿ ಸಂಗ್ರಹಗೊಂಡಿವೆ. ವಿಜಯಭಟ್ಟಾರಿಕೆಯ ಮುಕ್ತಕಗಳಂತೆ ಇವಳ ಮುಕ್ತಕಗಳೂ ಒಂದೆಡೆ ಪ್ರಕಟವಾಗಿಲ್ಲ. ಅಲ್ಲದೆ ಇವಳು ಎಷ್ಟು ಮುಕ್ತಕಗಳನ್ನು ರಚಿಸಿರುವಳೆಂಬುದೂ ಸ್ಪಷ್ಟವಾಗಿ ತಿಳಿದು ಬರುವುದಿಲ್ಲ.

ಶಾರ್ಙ್ಗಧರ ಪದ್ಧತಿಯಲ್ಲಿ ಧನದೇವನ ಒಂದು ಶ್ಲೋಕದಲ್ಲಿ ಕೆಲವು ಸಂಸ್ಕೃತ ಕವಯತ್ರಿಯರನ್ನು ಉಲ್ಲೇಖಿಸಿದ್ದಾನೆ. ಇಲ್ಲಿ ಕರ್ನಾಟಕದವಳೇ ಆದ ವಿಜ್ಜಿಕಾಳೊಂದಿಗೆ ಶೀಲಾಳ ಹೆಸರೂ ಸೇರಿರುವುದನ್ನು ಕಾಣುತ್ತೇವೆ. ಇವಳೂ ಕೂಡ ವಿಜ್ಜಿಕಾಳಂತೆಯೇ ವಿದ್ವಾಂಸರಿಂದ ಪ್ರಶಂಸೆಯನ್ನು ಪಡೆದಿದ್ದಳು.

**"ಶೀಲಾ ವಿಜ್ಞಾ ಮಾರುಲಾ ಮೋರಿಕಾದ್ಯಾಃ ।**
**ಕಾವ್ಯಂ ಕರ್ತುಂ ಸಂತಿ ವಿಜ್ಞಾಃ ಸ್ತ್ರೀ ಯೋಪಿ"॥**

ಜಲ್ಹಣನ ಸೂಕ್ತಿಮುಕ್ತಾವಳಿಯಲ್ಲಿ ಪಾಂಚಾಲೀ ಲಕ್ಷಣವನ್ನು ಹೇಳುವ ಪದ್ಯವೊಂದು ಈ ರೀತಿ ಉದ್ಧೃತವಾಗಿದೆ

**ಶಬ್ದಾರ್ಥಯೋಸ್ಸಮೋ ಗುಮ್ಮಃ ಪಾಞ್ಚಾಲೀ ರೀತಿರಿಷ್ಯತೇ ।**
**ಶೀ(ಶಿ)ಲಾಭಟ್ಟಾರಿಕಾವಾಚಿ ಬಾಣೋಕ್ತಿಷು ಚ ಸಾ ಯದಿ ॥** [೨೬]

"ಶಬ್ದ ಅರ್ಥ ಇವೆರಡೂ ಸಮಪ್ರಮಾಣದಲ್ಲಿ ಮಾಲೆ ಕಟ್ಟಲ್ಪಡುವುದು 'ಪಾಂಚಾಲೀ' ರೀತಿ" ಎಂದು ಇದರ ಲಕ್ಷಣವನ್ನು ತಿಳಿಸಿರುವ ಜಲ್ಹಣ "ಶೀ(ಶಿ?)ಲಾಭಟ್ಟಾರಿಕೆ ಹಾಗೂ ಬಾಣ ಇವರಿಬ್ಬರ ಸಾಹಿತ್ಯದಲ್ಲಿ ಮಾತ್ರ ಅದು ಕಾಣಿಸುತ್ತದೆ" ಎಂದಿದ್ದಾನೆ.

ಇಲ್ಲಿ ಜಲ್ಹಣನು ಶೀಲಭಟ್ಟಾರಿಕೆಯ ರಚನೆಗಳು 'ಪಾಂಚಾಲೀ' ರೀತಿಯಲ್ಲಿರುವುದೆಂದು ಶ್ಲಾಘಿಸಿದ್ದಾನೆ. ಅಲ್ಲದೆ ಪ್ರಸಿದ್ಧ ಕವಿ ಬಾಣನೊಂದಿಗೆ ಹೋಲಿಸಿರುವುದು ಇವಳ ಕವಿತಾ ಪ್ರೌಢಿಮೆಯನ್ನು ತಿಳಿಸುತ್ತದೆ.

ಭೋಜನು ತನ್ನ ಲಕ್ಷಣ ಗ್ರಂಥದಲ್ಲಿ ಪಾಂಚಾಲಿ ರೀತಿಯನ್ನು ಕುರಿತು

**ಸಮಸ್ತ ಪಂಚಷಪದಾಮೋಜುಕನ್ತಿ ಸಮನ್ವಿತಾಮ್ ।**
**ಮಧುರಾಂ ಸುಕುಮಾರಾಂ ಚ ಪಾಞ್ಚಾಲೀಂ ಕವಯೋ ವಿದುಃ ॥**[೨೭] ಐದಾರು ಪದಗಳನ್ನು ಮಾತ್ರ ಸೇರಿಸಿರುವ ಸಮಾಸಗಳಿಂದ ತುಂಬಿ, ಓಜಸ್ (=ಗಾಢಬಂಧ ಅಥವಾ ಅರ್ಥದ ಪ್ರೌಢಿಮೆ), ಕಾಂತಿ (=ಶೈಲಿಯ ಶ್ರೀಮಂತಿಕೆ ಅಥವಾ ಆಕರ್ಷಕತೆ) ಈ ಗುಣಗಳನ್ನು ಹೆಚ್ಚು ಸಮಾಸಗಳಿಲ್ಲದೇ ಮೃದುವಾದ ಶಬ್ದಗಳಿರುವ ರೀತಿಯನ್ನು 'ಪಾಂಚಾಲಿ' ಎಂದು ಕವಿಗಳು ತಿಳಿದಿದ್ದಾರೆ" ಎಂದಿದ್ದಾನೆ. ಇಂತಹ ಮಧುರ ಬಂಧದಲ್ಲಿ ಶೀಲಭಟ್ಟಾರಿಕೆಯ ಮುಕ್ತಕಗಳು ರಚಿತವಾಗಿವೆ.

ಬಾಣನ ಕಾದಂಬರಿಯನ್ನು ಆಧರಿಸಿದ ಕನ್ನಡ ಅವತರಣಿಕೆಯ 'ಪುಂಡರೀಕ'ದ ಕರ್ತೃ ಎಸ್.ಜಗನ್ನಾಥ ಅವರು ಮುನ್ನುಡಿಯಲ್ಲಿ ಈ ಕುರಿತು "ಪಾಂಚಾಲಿ ರೀತಿಯನ್ನು ನಿರ್ವಹಿಸಿರುವವರ ಪೈಕಿ ಬಾಣ ಹಾಗೂ ಶೀಲಾಭಟ್ಟಾರಿಕೆ ಇಬ್ಬರೂ ಶ್ರೇಷ್ಠರು" ಎಂಬುದಾಗಿ ಜಲ್ಹಣ ಅಭಿಪ್ರಾಯ ಪಟ್ಟಿರುವುದೇನೋ ಈ ಶ್ಲೋಕದಿಂದ ಗೊತ್ತಾಗುತ್ತದೆ. ಆದರೆ "ಬಾಣ ಹಾಗೂ ಶೀಲಾಭಟ್ಟಾರಿಕೆಯರ ಕೃತಿಗಳಿರುವುದೆಲ್ಲಾ ಒಂದೇ ಶೈಲಿ, ಅದರ ಹೆಸರುಪಾಂಚಾಲಿ' ಎಂದು ಹೇಳಲಾಗದು....." ಎಂದಿದ್ದಾರೆ. ಶೀಲಭಟ್ಟಾರಿಕೆಯ ಸಮಗ್ರ ಮುಕ್ತಕಗಳು ದೊರಕದೆ ಇಂತಹ ಹೇಳಿಕೆಗಳನ್ನು ನೀಡಲು ಸಾಧ್ಯವಾಗುವುದಿಲ್ಲ. ದೊರಕಿರುವ ಒಂದೆರಡು ಮುಕ್ತಕಗಳಿಂದ ಕವಯತ್ರಿಯ ಕವಿತಾ ಸಾಮರ್ಥ್ಯವನ್ನು ಅಳೆಯುವುದು ಸಾಧ್ಯವಿಲ್ಲ. ಶೀಲಭಟ್ಟಾರಿಕೆಯನ್ನು ಬಾಣಕವಿಯ ಸಮನಾಗಿ ಕಂಡಿರುವ ಜಲ್ಹಣನಿಗೆ ಈಕೆಯ ಸಮಗ್ರ ಪದ್ಯಗಳು ದೊರಕಿರುವ ಸಾಧ್ಯತೆಗಳಿವೆ.

ಸಂಸ್ಕೃತ ಕವಯತ್ರಿ ಶೀಲಭಟ್ಟಾರಿಕ ಕಾಶ್ಮೀರದವಳು ಎಂಬ ವಾದವೂ ಇದೆ. ಆದರೆ ಭಟ್ಟಾರಿಕೆ ಎಂಬ ಅಭಿಧಾನ ರಾಜಮನೆತನದವರದು, ಅಲ್ಲದೆ ಇವಳನ್ನು ಉಲ್ಲೇಖಿಸಿರುವ ಶಾಙ್ಗದೇವ, ಜಲ್ಹಣರಿಗಿಂತ ಪ್ರಾಚೀನ ಕಾಲದಲ್ಲಿದ್ದ ಶೀಲಭಟ್ಟಾರಿಕೆ ಕರ್ನಾಟಕದವಳೇ ಆಗಿರುವುದರಿಂದ ಬಹುಮತದ ವಿದ್ವಾಂಸರು ಇವಳು ಕರ್ನಾಟಕದ ಪ್ರಸಿದ್ಧ ರಾಜಮನೆತನವಾದ ರಾಷ್ಟ್ರಕೂಟ ಮನೆತನದವಳೆಂಬ ಅಭಿಪ್ರಾಯವನ್ನೇ ವ್ಯಕ್ತಪಡಿಸಿದ್ದಾರೆ.

ಜಲ್ಹಣ ಉಲ್ಲೇಖಿಸಿರುವ ಮೂರು ಮುಕ್ತಕಗಳಲ್ಲೊಂದು ಕಾವ್ಯಪ್ರಕಾಶದಲ್ಲಿಯೂ ಉದಾಹೃತವಾಗಿದೆ.

**ಯಃ ಕೌಮಾರಹರಃ ಸ ಏವ ಹಿ ವರಸ್ತಾ ಏವ ಚೈತ್ರ ಕ್ಷಪಾ**
**ಸ್ತೇಚೋನ್ಮೀಲಿತ ಮಾಲತೀ ಸುರಭಯಃ ಪ್ರೌಢಾಃ ಕದಂಬಾನಿಲಾಃ।**
**ಸಾ ಚೈವಾಸ್ಮಿ ತಥಾಪಿ ಚೌರ್ಯ ಸುರತವ್ಯಾಪಾರಲೀಲಾವಿಧೌ**
**ರೇವಾರೋಧಸಿ ವೇತಸೀತರುತಲೇ ಚೇತಃ ಸಮುತ್ಕಂಠತೇ ॥**

ಶೀಲಭಟ್ಟಾರಿಕೆಯ ಈ ಮುಕ್ತಕವನ್ನು ತೀನಂಶ್ರೀ ಅವರು ಈ ಪ್ರಕಾರವಾಗಿ ಕನ್ನಡದಲ್ಲಿ ಅನುವಾದಿಸಿದ್ದಾರೆ.

**ನನ್ನ ಕೌಮಾರವನದಾರು ಕಸಿದನೋ ಅವನೆ ವಲ್ಲಭನು, ಅದೆ ವಸಂತದ ನಿಶೆಗಳು**
**ಮಾಲತಿಯ ಪರಿಮಳದ ಸೆರೆಯ ಬಿಡಿಸಿ ಕದಂಬ ವನದ ಮೇಲ್ಮೆತಂದ ಅದೆ ಸಮೀರ**
**ಅದೆ ನಾನು ಮತ್ತೆ ; ಈ ಎಲ್ಲವಿಂತಿರಲೇನು ಅಲ್ಲಿ ರೇವಾನದಿಯ ತೀರದಲ್ಲಿ**
**ಹಬ್ಬೆಗಿಡದಡಿಯಲ್ಲಿ ಆ ರಹಸ್ಯ ಪ್ರಣಯ ಕೇಳಿಯನು ಬಗೆದು ತುಡಿವುದು ಹೃದಯವು॥**[೨೮]

ಎಸ್.ಜಗನ್ನಾಥ್ ಅವರು ಹೇಳಿರುವಂತೆ ದೊರೆತಿರುವ ಶೀಲಭಟ್ಟಾರಿಕೆಯ ಒಂದೆರಡು ಮುಕ್ತಕಗಳು ಪೋಲಿ ಪದ್ಯಗಳೇ ಆಗಿವೆ. ಆದರೆ, ಶೀಲಭಟ್ಟಾರಿಕೆ ರಚಿಸಿರುವ ಮುಕ್ತಕಗಳ ಸಂಖ್ಯೆ ನಿಖರವಾಗಿ ತಿಳಿದು ಬಂದಿಲ್ಲ. ಆದರೆ ಪ್ರಸಿದ್ಧ ಅಲಂಕಾರಿಕರು ಇವಳ ಮುಕ್ತಕವನ್ನು ಉದಾಹರಣೆಯಾಗಿ ಬಳಸಿರುವುದರಿಂದ ಇವಳ ರಚನೆಗಳಲ್ಲಿ ಮೂರು ಪದ್ಯಗಳು ಮಾತ್ರ ದೊರಕಿವೆ. ಅಗಾಧ ಸಂಸ್ಕೃತ ಕಾವ್ಯಗಳ ರಾಶಿಯಲ್ಲಿ ಮರೆಯಾಗಿರುವ ಇವಳ ಮುಕ್ತಕಗಳನ್ನು ಹೊರತೆಗೆದು ಒಂದೆಡೆ ಸಂಕಲಿಸುವ ಕೆಲಸವಾದಾಗ ಮಾತ್ರ ಇವಳ ಪಾಂಡಿತ್ಯವನ್ನು ಸರಿಯಾಗಿ ತೂಗಿನೋಡಲು ಸಾಧ್ಯವಾಗುತ್ತದೆ.

## ಜಗನ್ಮೋಹಿನಿ (ತುಕ್ಕಾರಾಣಿ)

ವಿಜಯನಗರದ ಪ್ರಸಿದ್ಧ ಅರಸು ಕೃಷ್ಣದೇವರಾಯನನ್ನು ವರಿಸಿದ ಕಳಿಂಗ ರಾಜಕುಮಾರಿ ತುಕ್ಕಾರಾಣಿ. ಇವಳು ಅತ್ಯಂತ ಸುಂದರಿಯಾದ್ದ ಕಾರಣ ಜಗನ್ಮೋಹಿನಿ ಎಂದು ಇವಳನ್ನು ಕರೆಯಲಾಗುತ್ತಿತ್ತು. ವಿಜಯನಗರ ಕಾಲದ ಕೆಲವು ಕೃತಿಗಳಲ್ಲಿ ಇವಳು ಉಕ್ತಳಾಗಿದ್ದಾಳೆ. ಅವುಗಳಲ್ಲಿ ಕುಮಾರ ದೂರ್ಜಟಿ ರಚಿಸಿರುವ ಕೃಷ್ಣದೇವರಾಯ

ವಿಜಯಮ್ ಕೃತಿಯಲ್ಲಿ ಇವಳನ್ನು ತುಕ್ಕಾರಾಣಿ ಎಂದು ಕರೆದಿದ್ದರೆ, 'ರಾಜವಾಚಕಮ್' ಕೃತಿಯಲ್ಲಿ ಇವಳನ್ನು ಜಗನ್ಮೋಹಿನಿ ಎಂದು ಕರೆಯಲಾಗಿದೆ. ಆದರೆ ಕೃಷ್ಣದೇವರಾಯನ ದಿನಚರಿ'ಯಲ್ಲಿ ಇವಳನ್ನು ಕೇವಲ 'ಗಜಪತಿ ಕೌಮಾರಿತಿ' ಎಂದು ಕರೆದಿದೆ[೨೯]. ಸಂಗೀತಸೂರ್ಯೋದಯಮು ಗ್ರಂಥದಲ್ಲಿಯೂ ಕೂಡ ಇವಳನ್ನು 'ಗಜಪತಿಸುತಾ' ಎಂದೇ ಕರೆಯಲಾಗಿದೆ. ಇದಲ್ಲದೆ ಇನ್ನೂ ಹಲವಾರು ತೆಲುಗು ಕೃತಿಗಳಲ್ಲಿ ಇವಳು ಉಲ್ಲೇಖಗೊಂಡಿದ್ದಾಳೆ. ಕೃಷ್ಣದೇವರಾಯನ ಪ್ರಧಾನ ಅರಸಿಯರಲ್ಲಿ ಇವಳೂ ಒಬ್ಬಳಾಗಿದ್ದಳೆನ್ನುವುದನ್ನು ಈ ಕೃತಿಗಳು ತಿಳಿಸುತ್ತವೆ. ಸಂಗೀತ, ನರ್ತನ ಮೊದಲಾದ ಲಲಿತ ಕಲೆಗಳಲ್ಲಿ ನೈಪುಣ್ಯತೆ ಪಡೆದಿದ್ದ ಇವಳು ಉತ್ತಮ ಕವಯತ್ರಿಯೂ ಆಗಿದ್ದಳು.

ಸಂಸ್ಕೃತದಲ್ಲಿ ಇವಳು ರಚಿಸಿರುವ ಐದು ಮುಕ್ತಕಗಳು ತುಕ್ಕಾಪಂಚಕವೆಂದೇ ಪ್ರಸಿದ್ಧವಾಗಿವೆ. ತುಕ್ಕಾ ಎಂದರೆ ದುಂಬಿ ಎಂಬ ಅರ್ಥವಿದೆ. ದುಂಬಿ–ತುಂಬಿಯು ಪ್ರಾಕೃತದಲ್ಲಿ ತುಕ್ಕಾ ಆಗಿದೆ[೩೦]. ಈ ತುಕ್ಕಾ ಪಂಚಕವು ದುಂಬಿಯನ್ನು ಕುರಿತು ಹೇಳುವುದಾದ್ದರಿಂದ ಇದನ್ನು 'ಭೃಂಗ ಪಂಚಕಮ್' ಎಂದೂ ಕರೆಯಲಾಗುತ್ತದೆ.

**ಅರಸಿಯ ಕುರಿತಾದ ಐತಿಹ್ಯ:** ಕೃಷ್ಣದೇವರಾಯನು ಕಳಿಂಗರಾಜ್ಯದಮೇಲೆ ಜಯಸಾಧಿಸಿದಾಗ ಒರಿಸ್ಸಾದ ಅರಸು ಗಜಪತಿ ತನ್ನ ಮಗಳು ಜಗನ್ಮೋಹಿನಿಯನ್ನು ಕೃಷ್ಣದೇವರಾಯನಿಗೆ ಮದುವೆ ಮಾಡಿಕೊಟ್ಟು ಸಂಬಂಧ ಬೆಳೆಸುತ್ತಾನೆ. ಆದರೆ ಒರಿಸ್ಸಾದ ರಾಜಕುಮಾರನೊಬ್ಬನ ಚಿತಾವಣೆಯಿಂದ ತುಕ್ಕಾದೇವಿಯು ಕೃಷ್ಣದೇವರಾಯನನ್ನು ಕೊಲ್ಲುವ ಪ್ರಯತ್ನ ಮಾಡಿದಳೆಂದೂ, ಮಹಾಮಂತ್ರಿ ತಿಮ್ಮರಸನ ಮುಂಜಾಗರೂಕತೆಯಿಂದ ರಾಯನು ಪಾರಾದನೆಂದೂ, ಇದರಿಂದ ಕುಪಿತನಾದ ಕೃಷ್ಣದೇವರಾಯ ಇವಳನ್ನು ಪರಿತ್ಯಾಗ ಮಾಡಿದನೆಂಬ ಐತಿಹ್ಯ ಕೇಳಿಬರುತ್ತದೆ. ಮತ್ತೊಂದು ಐತಿಹ್ಯದ ಪ್ರಕಾರ, ಹಂಪಿಯ ವಿಜಯವಿಟ್ಠಲ ದೇವಾಲಯದಲ್ಲಿನ ಸಂಗೀತ ಸ್ಥಂಭಗಳನ್ನು ನಿರ್ಮಿಸುವುದರಲ್ಲಿ ಬಹಳ ಆಸಕ್ತಿ ತೋರಿದ ಇವಳು, ಒರಿಸ್ಸಾದಿಂದ ಹಲವು ಶಿಲ್ಪಿಗಳನ್ನು ಕರೆಸಿಕೊಂಡು ಕೃಷ್ಣದೇವರಾಯ ಮೆಚ್ಚುವಂತಹ ನಿರ್ಮಾಣ ಕಾರ್ಯ ನಡೆಸುತ್ತಿದ್ದಳು. ಆದರೆ, ಇವಳ ಸೌಂದರ್ಯ, ನೈಪುಣ್ಯತೆಗಳನ್ನು ಸಹಿಸದ ಅರಮನೆಯ ಕುತಂತ್ರಿಗಳ ಕಿವಿಮಾತಿಗೆ ಕಟ್ಟುಬಿದ್ದು ಅರಸು ಕೃಷ್ಣದೇವರಾಯನು ಇವಳನ್ನು ರಾಜಧಾನಿಯಿಂದ ದೂರದಲ್ಲಿರಿಸಿದನೆಂದು ತಿಳಿದು ಬರುತ್ತದೆ. ಇವು ಯಾವುದೇ ಆಧಾರವಿಲ್ಲದ ದಂತಕಥೆಗಳಾಗಿವೆ. ಆದರೆ ವಾಸ್ತವವಾಗಿಯೂ ಇವಳು ತನ್ನ ಜೀವಿತಕಾಲದಲ್ಲಿ ವಿಜಯನಗರದ ರಾಜಧಾನಿ ಹಂಪಿಯಲ್ಲಿ ಇರದೆ, ದೂರದ ಕರ್ನೂಲು ಜಿಲ್ಲೆಯ ಕಂಬಂ ಗ್ರಾಮದಲ್ಲಿ ನೆಲೆಸಿದ್ದಳು ಎಂಬುದು ವಿಜಯನಗರ ಇತಿಹಾಸದಲ್ಲಿ ದಾಖಲಾದ ವಿಚಾರವಾಗಿದೆ. ಅಲ್ಲಿ ಇವಳು ತನ್ನ ಕಟ್ಟಿಸಿದ ಕೆರೆಯೊಂದು ಇಂದಿಗೂ ಬಳಕೆಯಾಗಿತ್ತಿದೆ. ಇವಳು ಕಂಬಂಗೆ ಹೋಗುವುದಿಕ್ಕಿಂತ ಮೊದಲು ವಿಜಯನಗರದಲ್ಲಿ ಇದ್ದಳೆನ್ನುವುದಕ್ಕೆ ವಿದೇಶಿ ಪ್ರವಾಸಿಗರ ಉಲ್ಲೇಖದಲ್ಲಿ ಆಧಾರ ಸಿಗುತ್ತದೆ. ಕ್ರಿ.ಶ.೧೫೨೦–೨೧ರ ಸುಮಾರಿನಲ್ಲಿ ಪೇಯಸ್ ಎಂಬುವ ಪ್ರವಾಸಿ ಬರೆದಿರುವ ವರದಿಯಲ್ಲಿ ಕಳಿಂಗ ರಾಜಪುತ್ರಿಯ ಅರಮನೆಯ ಉಲ್ಲೇಖ ಸಿಗುತ್ತದೆ. ಬಹುಶಃ ಈ ಕಾಲದ ನಂತರ ಇವಳು ಕಂಬಂ ಗ್ರಾಮಕ್ಕೆ ತೆರಳಿರಬಹುದು. ಇವಳು ಪ್ರಸಿದ್ಧ ರಾಜಮನೆತನದ ಕುಮಾರಿಯಾಗಿ ಬಂದಿದ್ದರೂ ಸಹ ತಿರುಪತಿಯಲ್ಲಿ ಕ್ರಿ.ಶ.೧೫೨೧ರಲ್ಲಿ ಸ್ಥಾಪಿಸಲಾದ ಕೃಷ್ಣದೇವರಾಯ, ತಿರುಮಲದೇವಿ ಹಾಗೂ ಚಿನ್ನಾದೇವಿಯರ ಪ್ರಸಿದ್ಧ ಕಂಚಿನ ವಿಗ್ರಹಗಳೊಂದಿಗೆ ಇವಳ ವಿಗ್ರಹಕ್ಕೆ ಸ್ಥಾನ ಸಿಗದೆ ಇರುವುದು, ಕೃಷ್ಣದೇವರಾಯ ಯಾವುದೋ ಘಟನೆಯ ಹಿನ್ನೆಲೆಯಲ್ಲಿ ಇವಳನ್ನು ಉಪೇಕ್ಷಿಸುತ್ತಿದ್ದುದೇ ಕಾರಣವಾಗಿರಬಹುದು.

**ತುಕ್ಕಾಪಂಚಕ**

ಕೃಷ್ಣದೇವರಾಯನಿಂದ ಪರಿತ್ಯಕ್ತಳಾದ ತುಕ್ಕಾದೇವಿಯು, ತನ್ನ ಅಳಲನ್ನು, ಮನದ ಭಾವನೆಗಳನ್ನು ಪದ್ಯರೂಪದಲ್ಲಿ ಹೊರಹಾಕಿದ್ದಾಳೆ. ಇವಳು ರಚಿಸಿರುವ ಪದ್ಯಗಳಲ್ಲಿ ಕೃಷ್ಣದೇವರಾಯನನ್ನು ಭ್ರಮರಕ್ಕೆ, ಹೋಲಿಸಿ, ಆ ಭ್ರಮರದಿಂದ ನಿರ್ಲಕ್ಷೆಗೊಳಗಾದ (ಉಪೇಕ್ಷಿಸಲ್ಪಟ್ಟ) ಹೂವು ತಾನು ಎಂಬಂತೆ ಚಿತ್ರಿಸಿದ್ದಾಳೆ.

**ವನಾನ್ತೇ ನವಮಂಜರೀಷು ಚರನ್ ಷಟ್ಪದ:**
**ಗಂಧಫಲೀಮ್ ನ ಅಜಿಘ್ರತ್**
**ಸಾ ಕಿಂ ರಮ್ಯಾ ನ ಸ ಚ ರಂನ್ತಾ ನ**
**ಕೇವಲಂ ಈಶ್ವರಾಜ್ಞಾವಲೀಯಸೀ ॥**

"ಭ್ರಮರವೆ, ನೀನು ಕಾಡುಗಳಲ್ಲಿ ಸುತ್ತುತ್ತ ಬಳ್ಳಿಗಳ ಮೇಲೂ ಸಂಚರಿಸುತ್ತೀಯೆ. ನೀನು ಗಂಧಫಲ ಹೂವನ್ನು ಆಸ್ವಾದಿಸದೆ ಇರುತ್ತೀಯೇನು? ಆ ಬಳ್ಳಿ ರಮ್ಯವಾಗಿಲ್ಲವೆ? ಭ್ರಮರವು ರಸಿಕವಲ್ಲವೆ? ಈಶ್ವರನ ಆಣತಿಯು ಯಾವಾಗಲೂ ಬಲವಾದುದು". ಎಂದು ತಿಳಿಸುವ ಈ ಪದ್ಯದಲ್ಲಿ ಯುವತಿಯೋರ್ವಳು ಯಾವ ಕೊರತೆಯು ಇಲ್ಲದಿದ್ದಾಗ್ಯೂ ಪ್ರಿಯನು ತನ್ನನ್ನು ನಿರ್ಲಕ್ಷಿಸುತ್ತಿರುವುದಕ್ಕೆ ಕಾರಣವೇನೆಂದು ತಿಳಿಯದೆ ಚಡಪಡಿಸುತ್ತಿರುವುದು ವ್ಯಕ್ತವಾಗುತ್ತದೆ. ಆದರೆ ಕಡೆಗೆ ಈಶ್ವರನ ಇಚ್ಛೆಯಂತೆಯೇ ಎಲ್ಲವೂ ನಡೆಯುವುದೆಂಬ ಸಮಾಧಾನವನ್ನೂ ಹೇಳಿಕೊಂಡಿದ್ದಾಳೆ.

**ಕಿಂಶುಕ! ಆತ್ಮನಿಮೇಷಮಾತ್ರಂ ಮಾಪ್ರಕಟಯ ಯತ್ ಮನ್ಮಸ್ತಕೇ**
**ಅಯಂ ಮಧುವ್ರತಃ ವಿಹರೇತಿ ಇತಿ ।**
**ಕಿಂ ಮೂಲತೇ ವಿರಹವಾದನಯಾ ತ್ವದಾದು**
**ಪ್ರಸೂನಮ್ ದೃಷ್ಟ್ವಾ ಅಚಿರಾತ್ ಅನಲ ಭ್ರಮೇಣ॥**

"ಮುತ್ತುಗದ ಹೂವೆ ನಿನ್ನ ತಲೆಯ ಮೇಲೆ ದುಂಬಿಯು ಕ್ಷಣಕಾಲ ಸುತ್ತುತ್ತಿದೆಯೆಂದು ದುರಹಂಕಾರ ಪಡಬೇಡ. ನಿನ್ನ ಹೂವನ್ನು ನೋಡಿದ ತಕ್ಷಣ ಬೆಂಕಿಯೆಂಬ ಭ್ರಮೆಯಿಂದ ನಿನ್ನನ್ನು ಬಿಟ್ಟುಬಿಡುತ್ತದೆ. ಆಮೇಲೆ ದುಂಬಿಯು ಮಾಲತೀ ಕುಸುಮದ ಕಡೆ ಹೋಗುತ್ತದೆ. ಅಲ್ಲಿಯೇ ರಮಿಸುತ್ತದೆ". ಇಲ್ಲಿ ಪ್ರಾಸಂಗಿಕವಾಗಿ ಮುತ್ತುಕದ ಹೂವಿನ ಬಣ್ಣನೆ ಬಂದಿರುವುದನ್ನು ಗಮನಿಸಬಹುದು. ಮುತ್ತುಗದ ಹೂವು ಬೆಳ್ಳಗಿದ್ದರೂ ಅದರ ಒಳಭಾಗ ಕೆಂಪಾಗಿರುವುದು. ದುಂಬಿಯು ಒಂದು ಕ್ಷಣ ಮುತ್ತುಗದ ಹೂವಿನಿಂದ ಆಕರ್ಷಿತವಾದರೂ, ಹತ್ತಿರ ಹೋದಮೇಲೆ ಅದನ್ನು ಬೆಂಕಿ ಎಂದು ಭಾವಿಸುತ್ತದೆ ಎಂಬ ಕಲ್ಪನೆ ಸೊಗಸಾಗಿದೆ.

ಇಲ್ಲಿ ತುಕ್ಕಾರಾಣಿಯು ಮುತ್ತುಗದ ಹೂವಿಗೆ ಯಾರನ್ನು ಹೋಲಿಸುತ್ತಿದ್ದಾಳೆನ್ನುವುದು ಸ್ಪಷ್ಟವಾಗುವುದಿಲ್ಲ. ಬೆಂಕಿ ಎಂದು ಭ್ರಮಿಸಿ, ಅರಸನು ತನ್ನಿಂದ ದೂರವಾದನೆಂದಿರಬಹುದೆ ಅಥವಾ ತನ್ನ ಸವತಿಯರಲ್ಲಾರಿಂದಲಾದರೂ ದೂರವಾಗುತ್ತಾನೆಯೇ ತಿಳಿಯುವುದಿಲ್ಲ.

**ಭ್ರಮರ ದಿಗಂತರಾಲೇ ಭ್ರಮತಾ ಕ್ವಚಿತ್**
**ಯದಿ ಜಾತಿ ಕುಸುಮಾನುಕಾರಿ ಪುಷ್ಪಮ್**
**ಅಸ್ವಾದಿತಮ್ ಈಕ್ಷಿತಂ ಶೃತ್ವಾ ವಾ ಪಕ್ಷಪಾತಂ**
**ಅತಾಸ್ಯ ಸತ್ಯಂ ವದ**

ಭ್ರಮರವೆ, ಜಾತಿ ಕುಸುಮಕ್ಕೆ ಸಮನಾದ ಹೂವಿದೆಯೆಂದು ಕೇಳಿರುವಿಯೇನು? ಅಥವಾ ನೋಡಿರುವಿಯೇನು, ಕೇಳಿರುವೆಯೇನು ಪಕ್ಷಪಾತವಿಲ್ಲದೆ ನಿಜ ಹೇಳು. ಎಂದು ಕೇಳುತ್ತಿರುವ ಈ ಮುಕ್ತಕದಲ್ಲಿ ಅರಸನಿಗೆ ನೇರವಾಗಿ ಪ್ರಶ್ನೆಯನ್ನು ಕೇಳುವಂತಿದೆ. ತನ್ನ ಶ್ರೇಷ್ಠಗುಣಗಳನ್ನು ಅರಿತೂ ಅರಿಯದವನಂತೆ ಇರುವ ಅರಸನಿಗೆ ಪಕ್ಷಪಾತವಿಲ್ಲದೆ ಹೇಳು ಎಂದು ಕೇಳುತ್ತಿದ್ದಾಳೆ.

**ಕತಿಚಿತ್ ಕರು ವಿಶೇಷರೂಡ ಶಿಕ್ಷಾಃ**
**ಚಿತ್ರೆ ಕುಸುಮಾನಿ ಲಿಖಿಂತಿ ನಾಮ ಕಿಮು ಚ**
**ಸುಪ್ತೇಷು ಭೃಂಗಾಃ ಸುರಭಿತ್ವಂ ಲಭಂತೇ**
**ಕಿಮು ಚೈತೇಷು ರಸಂ ಮಿಬಾನ್ತಿ?**

ಕೆಲವುವೇಳೆ ಶಿಲ್ಪಿಯ ವಿಶೇಷ ಕಲಾ ಶಿಕ್ಷಣದಿಂದ ಹೂವು ಅಂದವಾಗಿ ರಚಿಸಲ್ಪಡುತ್ತವೆ. ಮನಸ್ಸಿನಲ್ಲಿಯೇ ಬರೆಯುತ್ತವೆಯೇನೋ? ಇವುಗಳಲ್ಲಿ ಪರಿಮಳ ಇರಲಾರವೆಯೇನು? ದುಂಬಿಗಳೆಲ್ಲ ಒಂದೇ ಹೂವಿನಲ್ಲಿ ರಸಾಸ್ವಾದನ ಮಾಡುತ್ತದೆಯೆ? ಎಂದು ಕೇಳುತ್ತಿರುವ ಈ ಮುಕ್ತಕದಲ್ಲಿಯೂ ತನ್ನ ಶ್ರೇಷ್ಠಗುಣಗಳ ಕುರಿತಾಗಿ ಹೆಮ್ಮೆ ಇರುವುದನ್ನು ಪ್ರಕಟಿಸಿದ್ದಾಳೆ. ವಿಶೇಷ ಕಲಾ ನೈಪುಣ್ಯದಿಂದ ರಚಿತವಾದ ಹೂವು. ಆದರೆ ತನ್ನೆಡೆಗೆ ಬಾರದಿರುವ ದುಂಬಿ(ಪ್ರಿಯ)ಯನ್ನು ಕುರಿತು ಬೇಸರವನ್ನೂ ವ್ಯಕ್ತಪಡಿಸಿದ್ದಾಳೆ.

**ಕಿಂ ಮಾಲತಿ ಮಲಯಸಿ ಇಮಾನ್ ವಿಹಾಯ**
**ತುಮ್ಬೀಕುಸುಮಂ ಷಡಂಗಿಃ ಚುಚುಂಬ**
**ಲೋಕೇ ಚತುರ್ಥಃ ಚರಣೇಃ ಪಶುಃ ಸ್ಯಾತ್**
**ನ ಸದ್ಭಿಃ ಅತ್ಯಾರ್ಥ ಪಶುಃ**

ಈ ಪದ್ಯದ ಇದೇ ಅರ್ಥದಲ್ಲಿನ ಭಿನ್ನ ಪಾಠದೊಂದಿಗೆ ದೊರಕುತ್ತದೆ.

**ಕಿಂ ಮಾಲತಿ ಮಲಯಸಿ ಇಮಾನ್ ವಿಹಾಯ**
**ಕುಕುಂಬಾ ತುಂಬಿ ಕುಸುಮಾನ್ ಸದಾನ್‌ಗೃಹಿಃ**
**ಲೋಕೆ ಕತುಬೃಹಿಸ್ ಕರನೈಃ ಪಷುಸ್ಯತ್**
**ಸ ಸದ್ಭಿರ್ ಅತ್ಯಾರ್ಥ ಪಷುರ್ ನ ಕಿಂ ಸ್ಯಾ**

ನೀನು ನನ್ನನ್ನು ಬಿಟ್ಟು ಹೋಗುವುದಾದರೂ ಎಲ್ಲಿಗೆ? ನೀನು ಮಾಲತೀ ಕುಸುಮವನ್ನು ಅರಸಿ ಹೋಗಿರುವುದು ಏಕೆಂದು ನಿಜ ತಿಳಿಯೆನು! ದುಂಬಿಯು ತುಂಬೆ ಹೂವನ್ನು ಚುಂಬಿಸಿತು. ಜಗತ್ತಿನಲ್ಲಿ ನಾಲ್ಕು ಕಾಲುಗಳು ಇರುವವು ಪಶುಗಳು ತಾನೆ? ಅದರಂತೆ ಆರುಕಾಲುಗಳು ಇರುವವೆಲ್ಲ ದುಂಬಿಗಳೇ ಆಗಿರಬೇಕಲ್ಲ? ಎಂದು ಕೇಳುತ್ತಿರುವ ಈ ಪದ್ಯದ ಪ್ರಕಾರ ದುಂಬಿಯು ತುಂಬೇ ಹೂವಿನ ಬಳಿ ಹೋಗುವುದಿಲ್ಲ! ಇಲ್ಲಿ ಮಾಲತೀ ಹೂವನ್ನು ಸವತಿಗೆ ಹೋಲಿಸಿ ಹೇಳಿದ್ದಾಳೆ ಆದರೆ, ತುಂಬೆ ಹೂವನ್ನು ಯಾರಿಗೆ ಹೋಲಿಸಿದ್ದಾಳೆ ಎನ್ನುವುದು ತಿಳಿದು ಬರುವುದಿಲ್ಲ. ಅರಸನು ತನಗೆ ಉಚಿತವಾಗದವರೊಂದಿಗೆ ಇದ್ದಾನೆ ಎಂಬ ಭಾವ ಇಲ್ಲಿದೆ.

ಈ ಪಂಚಕವು ದುಂಬಿಯ ಸ್ವಭಾವವನ್ನು ಹೇಳುತ್ತಿದ್ದರೂ ಇದರ ಒಳಾರ್ಥ ಬೇರೆಯಾಗಿದೆ ಎಂದು ಮೇಲುನೋಟದಲ್ಲಿಯೇ ತಿಳಿದು ಬರುತ್ತದೆ. ಇತಿಹಾಸದ ಕೆಲವು ದಾಖಲೆಗಳಿಂದ ಕೃಷ್ಣದೇವರಾಯನು ಕಳಿಂಗ ರಾಜಕುಮಾರಿಯನ್ನು ಸೇಡಿನಿಂದಲೇ ವರಿಸಿದ ಎಂಬ ವಿಚಾರ ತಿಳಿದು ಬರುತ್ತದೆ. ರಾಜಕೀಯ ದ್ವೇಷದಿಂದ ವರಿಸಿದ ಅರಸಿಯನ್ನು ದೂರಮಾಡಿರಬಹುದಾದ ಕುರಿತಾಗಿ ಹಲವು ವಿದ್ವಾಂಸರೂ ಅಭಿಪ್ರಾಯ ಪಟ್ಟಿದ್ದಾರೆ[೩೧].

ಕವಿಯತ್ರಿಯು ತನ್ನನ್ನು ಇಲ್ಲಿ ಯಾವ ಅರ್ಥದಿಂದ ದುಂಬಿಯು ಬಯಸದ ಚಂಪಕ (ಸಂಪಿಗೆ) ಹೂವು ತಾನಾಗಿದ್ದೇನೆಂದು ಭಾವಿಸಿದ್ದಾಳೋ ತಿಳಿಯದು. ಇವಳ ಕುರಿತಾದ ಐತಿಹ್ಯಗಳು ತಿಳಿಸುವಂತೆ ಇವಳು ಹತಭಾಗ್ಯಳೇ ಇರಬಹುದೆಂಬುದನ್ನು ಇಲ್ಲಿನ ಕೆಲವು ಸಾಲುಗಳು ತಿಳಿಸುತ್ತಿವೆ. ಇವಳು ಅರಸನಿಂದ ಪರಿತ್ಯಕ್ತಳಾದವಷ್ಟೇ ಅಲ್ಲ, ಇಂದಿಗೂ ಇವಳನ್ನು ಕವಯತ್ರಿಯಾಗಿ ಗುರುತಿಸುವುದು ಬಹಳ ಅಪರೂಪ. ಇವಳ ಈ ಮುಕ್ತಕಗಳನ್ನು ಕುರಿತು ಸಂಸ್ಕೃತ ಸಾಹಿತ್ಯ ವಲಯದಲ್ಲಿ ಚರ್ಚೆಗಳು ನಡೆದಿಲ್ಲ. ಅಷ್ಟೇ ಅಲ್ಲ, ಸಂಸ್ಕೃತ ಕವಿಚರಿತೆ, ಸಾಹಿತ್ಯ ಚರಿತ್ರೆಗಳಲ್ಲಿ ತುಕ್ಕಾರಾಣಿ ಅಥವಾ ಜಗನ್ಮೋಹಿನಿಯ ಹೆಸರು ಕೂಡ ಉಲ್ಲೇಖವಾಗಿಲ್ಲದಿರುವುದು ಆಶ್ಚರ್ಯವೆನಿಸುತ್ತದೆ.

ಇವಳ ಮುಕ್ತಕಗಳನ್ನು ಓದಿದವರು ಮಾತ್ರ ಅದರಲ್ಲಡಗಿರುವ ಭಾವನೆ, ಇವಳ ಕವಿತಾ ಚಾತುರ್ಯವನ್ನು ಹೊಗಳದೆ ಇರಲು ಸಾಧ್ಯವಿಲ್ಲ. ಜೊತೆಗೆ ಶ್ಲೇಷಾರ್ಥಗಳಲ್ಲಿ ಮುಕ್ತಕಗಳನ್ನು ರಚಿಸುವ ಜಾಣ್ಮೆ ಸಿದ್ಧಿಸಿರುವ ಈ ಕವಯತ್ರಿಯು ಕೇವಲ ಐದು ಮುಕ್ತಕಗಳನ್ನು ಮಾತ್ರ ರಚಿಸಿರುವಳೇ ಎಂಬ ಅನುಮಾನ ಕಾಡದಿರದು.

## ಸಂಸ್ಕೃತ ನಾಟಕ

ಪ್ರಾಚೀನ ಸಂಸ್ಕೃತ ಕವಿಗಳು ನಾಟಕ ಪ್ರಕಾರಕ್ಕೆ ಬಹಳ ಮಹತ್ವವಿತ್ತಿದ್ದರೆನ್ನುವುದನ್ನು ಗಮನಿಸಬಹುದು. ಕಾಳಿದಾಸ, ಭಾಸ ಮೊದಲಾದವರು ತಮ್ಮ ನಾಟಕ ರಚನೆಗಳಿಂದಲೇ ಪ್ರಸಿದ್ಧಿ ಪಡೆದವರು. "ಕಾವ್ಯೇಷು ನಾಟಕಂ ರಮ್ಯಂ" ಎಂಬ ಭರತಮುನಿಯ ಹೇಳಿಕೆಯು, ನಾಟಕವನ್ನು ಕಾವ್ಯವೆಂದು ಪರಿಗಣಿಸುತ್ತಿದ್ದರೆನ್ನುವುದು ತಿಳಿದುಬರುತ್ತದೆ. ಸುಮಾರು ಹತ್ತು-ಹನ್ನೊಂದನೆಯ ಶತಮಾನದವರೆಗೂ ಸಂಸ್ಕೃತದಲ್ಲಿ ನಾಟಕಗಳರಚನೆ ಬಹಳವಾಗಿಯೇ ಬೆಳೆದು ಬಂದಿದೆ. ಇಂತಹ ವಾತಾವರಣದಲ್ಲಿ ಕನ್ನಡದಲ್ಲಿ ನಾಟಕರಚನೆಗಳಾದುದು ಮಾತ್ರ ಕಂಡುಬರುವುದಿಲ್ಲ. ಇದಕ್ಕೆ ಕಾರಣವೇನೇ ಇರಬಹುದು, ಆದರೆ ಇದೊಂದು ದೊಡ್ಡ ಕೊರತೆಯಾಗಿಯೇ ಉಳಿದಿದೆ. ಆದರೆ ಕನ್ನಡ ನಾಡಿನ ಅರಸಿಯೋರ್ವಳು ಈ ಕಾಲದಲ್ಲಿ ನಾಟಕ ರಚನೆಗೆ ತೊಡಗಿದ್ದಳೆನ್ನುವುದು ಸಮಾಧಾನ ತರಿಸುತ್ತದೆ. ಆದರೆ ಇವಳು ರಚಿಸಿರುವ ನಾಟಕ ಸಂಸ್ಕೃತದಲ್ಲಿದೆ. ಆದರೂ ಕನ್ನಡ ನಾಡಿನಲ್ಲಿ ನಾಟಕ ರಚನೆ ನಡೆದಿತ್ತೆನ್ನುವ ವಿಚಾರವೇ ಸಮಾಧಾನಕರ ಸಂಗತಿಯಾಗಿದೆ.

ಏಳನೆಯ ಶತಮಾನದಲ್ಲಿದ್ದ ವಿಜಯಭಟ್ಟಾರಿಕೆ ಮುಕ್ತಕಗಳನ್ನು ರಚಿಸಿದ್ದಾಳೆನ್ನುವುದನ್ನು ಈ ಹಿಂದೆ ಗಮನಿಸಲಾಗಿದೆ, ಇವಳು ನಾಟಕವನ್ನೂ ರಚಿಸಿರುವುದು ಹೆಮ್ಮೆಯ ವಿಚಾರವಾಗಿದೆ. ಈ ಅಧ್ಯಾಯದ ಆರಂಭದಲ್ಲಿ ಇವಳ ಕಾಲ-ದೇಶ, ಆಳ್ವಿಕೆ ಮೊದಲಾದ ಕೆಲವು ವಿಚಾರಗಳನ್ನು ಗಮನಿಸಲಾಗಿದೆ.

ಆದರೆ ಮುಕ್ತಕಗಳನ್ನೂ ರಚಿಸಿರುವ ವಿಜ್ಜಿಕಾ ನಾಟಕ ರಚಿಸಿರುವ ವಿಜ್ಜಿಕಾ ಇಬ್ಬರೂ ಭಿನ್ನರೆಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ವಿಜ್ಜಿಕಾಳದೆಂದು ಉಪಲಬ್ಧವಿರುವ ಯಾವ ಮುಕ್ತಕವನ್ನೂ ಈ ನಾಟಕದಲ್ಲಿ ಬಳಸಿಲ್ಲದಿರುವುದು ಈ ಅನುಮಾನಕ್ಕೆ ಮುಖ್ಯ ಕಾರಣವಾಗಿದೆ. ಅಲ್ಲದೆ ಈ ನಾಟಕದ ಯಾವುದೇ ಪದ್ಯವನ್ನು ಅಲಂಕಾರಿಕರಾಗಲೀ, ಸುಭಾಷಿತಕಾರರಾಗಲಿ ಉದಾಹರಿಸುವುದಿಲ್ಲ. ಆದರೆ ಇಲ್ಲಿ ಪ್ರಯೋಗವಾಗಿರುವ 'ಕರ್ನಾಟಕ ರಾಜಪ್ರಿಯಾ' ಎಂಬ ಸಂಬೋಧನೆ ಇದು ಬಾದಾಮಿ ಚಳುಕ್ಯ ವಿಜ್ಜಿಕಾಳ ಕೃತಿ ಎಂಬ ವಿಚಾರಕ್ಕೆ ಹೆಚ್ಚು ಪುಷ್ಟಿ ನೀಡುತ್ತದೆ.

ಕೇರಳದ ರಾಮಕೃಷ್ಣಕವಿಗಳು ತಮಗೆ ದೊರೆತ ಚೌಮುದೀ ಮಹೋತ್ಸವ ನಾಟಕದ ಏಕೈಕ ಹಸ್ತಪ್ರತಿಯಿಂದ ಈ ಕೃತಿಯನ್ನು ಕ್ರಿ.ಶ.೧೯೨೯ರಲ್ಲಿ ಸಂಪಾದಿಸಿದ್ದಾರೆ. ಹಸ್ತಪ್ರತಿಯಲ್ಲಿ ಕರ್ತೃವಿನ ಹೆಸರಿದ್ದ ಭಾಗವು ಹುಳುತಿಂದು ಹೋಗಿ 'ಕಯಾನಿಬದ್ಧಮ್' ಎಂದು ಮಾತ್ರ ಕಾಣುತ್ತಿತ್ತೆಂದು ಇವರು ತಿಳಿಸಿದ್ದಾರೆ. ಇದರಿಂದ ಈ ಕೃತಿಯ ರಚನೆಕಾರ್ತಿ ಒರ್ವ ಮಹಿಳೆ ಎಂಬುದು ಸ್ಪಷ್ಟವಾಗಿದೆಯಷ್ಟೇ ಹೆಸರು ತಿಳಿದು ಬರುವುದಿಲ್ಲ ಆದರೆ ಆದರೆ ಸೂಕ್ಷ್ಮವಾಗಿ ನೋಡಿದರೆ 'ಜ' ಒತ್ತಕ್ಷರವು ಕಾಣುತ್ತದೆ ಅಲ್ಲದೆ ನಾಟಕದ "ಜಯತಿ ಪ್ರಥಮಮ್ ವಿಜಯಾ" ಎಂಬ ಸಾಲಿನ ಶ್ಲೇಷಾರ್ಥವು ವಿಜ್ಜಿಕಾಳ ಹೆಸರನ್ನು ಸೂಚಿಸುತ್ತಿರುವುದರಿಂದ, ಸಂಪಾದಕರು 'ವಿಜ್ಜಿಕಾಯಾ' ಎಂದು ಹೊಂದಿಸಿರುವುದಾಗಿ ತಿಳಿಸಿದ್ದಾರೆ.

ನಾಟಕದಲ್ಲಿ ಬಳಸಲಾದ ವೈದರ್ಭೀಶೈಲಿ, ಇಲ್ಲಿನ ಕಾಳಿದಾಸನ ಪ್ರಭಾವ, ಮೊದಲಾದ ಅಂಶಗಳನ್ನು ಗಮನಿಸಿ ಇದು ವಿಜ್ಜಿಕಾಳದೇ ರಚನೆ ಎಂಬ ತೀರ್ಮಾನಕ್ಕೆ ಬರಲಾಗಿದೆ ಎಂದು ಇದರ ಸಂಪಾದಕರು ಕೃತಿಯ ಪೀಠಿಕಾಭಾಗದಲ್ಲಿ ತಿಳಿಸಿದ್ದಾರೆ.

**ಜಯತಿ ಪ್ರಥಮಂ ವಿಜಯಾ ಜಯಂತಿ ದೇವಾಃ ಸ್ವಯಂ ಮಹಾದೇವಃ ।**
**ಶ್ರೀಮಂತೌ ಭಗವಂತಾವನಂತನಾರಾಯಣೌ ಜಯತಃ ॥**

ಈ ಶ್ಲೋಕವನ್ನು ವಿಶ್ಲೇಷಿಸುತ್ತಾ ಪಿ.ವಿ.ಕಾಣೆಯವರು "ಇದರಲ್ಲಿ ಬರುವ ವಿಜಯಾ ಎಂಬ ಪದವು ಶರತ್ಕಾಲದಲ್ಲಿ ನಡೆಯುವ ಕೌಮುದೀ ಮಹೋತ್ಸವದ ದೇವತೆಯಾದ ವಿಜಯೆಯನ್ನು ಮೇಲ್ನೋಟಕ್ಕೆ ಸೂಚಿಸಿದರೂ, ಕರ್ತೃವಿನ ಬಗೆಗೆ ಗುಪ್ತವಾದ ಸೂಚನೆ ಇರಲು ಸಾಧ್ಯ"[೩೨] ಎಂಬ ಅಭಿಪ್ರಾಯ ಪಡುತ್ತಾರೆ.

**ಕೌಮುದೀ ಮಹೋತ್ಸವ:** ಕೌಮುದೀ ಮಹೋತ್ಸವವು ಐದು ಅಂಕದ ನಾಟಕ. ಭಾಸ – ಕಾಲಿದಾಸರ ಪ್ರಭಾವವು ನಾಟಕದ ಮೇಲೆ ಬಹಳವಾದಂತಿದೆ. ರತ್ನಾವಳಿ ನಾಟಕದ ಪ್ರಭಾವವೂ ಇದೆ. ರಾಜಕೀಯ ಘಟನೆಗಳಲ್ಲಿ 'ಮುದ್ರಾರಾಕ್ಷಸ'ದ ಪ್ರಭಾವವಿದೆ; ಇದು ಕವಯತ್ರಿಯ ಅಧ್ಯಯನದ ಹರಹನ್ನು ತಿಳಿಸುತ್ತದೆ

**ವಿರಸಾಪಿ ಕೃತಿಃ ಪ್ರಪತ್ಸ್ಯತೆ ಮಧುನಿಷ್ಯಂದಮಯೀಂ ದಶಾಂತರಂ ।**
**ಯದಿ ನಾಮ ಸತಾಮನುಗ್ರಹಃ ಶಿಶಿರಃ ಪ್ರಾಪ್ಯರವೇರಿವಾತಪಮ್ ॥**

ಕೃತಿಯು ನೀರಸವಾಗಿದ್ದರೂ, ಸಹೃದಯರ ಕೃಪೆಯಿದ್ದರೆ, ಚಳಿಗಾಲದ ಬಿಸಿಲಿನಂತೆ ಸುಖಕರವಾಗಿಯೇ ಇರುವುದು ಎನ್ನುವ ಕವಯತ್ರಿಯ ಮಾತು ಅವಳ ನಮ್ರತೆಯನ್ನು ತೋರಿಸುತ್ತದೆ. ಅಂದಿನ ಸಂಸ್ಕೃತ ನಾಟಕದ ನಿಯಮಗಳನ್ನೆಲ್ಲ ನಾಟಕಕಾರ್ತಿಯು ಅನುಸರಿಸಿದ್ದಾಳೆ. ನಾಟಕವು ಸಂಪ್ರದಾಯವನ್ನನುಸರಿಸಿದ್ದರೂ ನಾಟಕದ ಕೊನೆ ಮಾತ್ರ ಸಂಪ್ರದಾಯಕ್ಕೆ ಒಳಗಾಗಿಲ್ಲ. ಕೊನೆಯಲ್ಲಿ ಬರಬೇಕಿದ್ದ ಭರತವಾಕ್ಯ ಕಂಡುಬರುವುದಿಲ್ಲ, ಕೆಲವು ಮುಖ್ಯ ಪಾತ್ರಗಳು ಅಂತ್ಯಕಾಣಿಸುವಲ್ಲಿ ಕಣ್ಮರೆಯಾಗುತ್ತಾರೆ, ಪಟ್ಟಾಭಿಷೇಕ ಮತ್ತು ವಿವಾಹಗಳಲ್ಲಿ ಕತೆ ಪರ್ಯವಸನವಾಗುವುದಿಲ್ಲ. ಆದರೂ ನಾಟಕವು ಇತರ ಅಂಶಗಳಿಂದ ಪ್ರಶಂಸೆಗೆ ಒಳಗಾಗಿದೆ. ಇದರಲ್ಲಿನ ಪಾತ್ರಗಳ ರಚನೆ, ರಸನಿರೂಪಣೆ ಆಕರ್ಷಕವಾಗಿವೆ. ಅನುಭವದ ಆಣಿಮುತ್ತುಗಳು ಅಲ್ಲಲ್ಲಿ ಮೂಡಿಬಂದಿವೆ. ಪದ್ಯಗಳ ಸಂಖ್ಯೆ ಬೇಸರ ಬರುವಷ್ಟು ಅಧಿಕವಾಗಿಲ್ಲ, ಸಂಭಾಷಣೆಗಳು ಚುರುಕಾಗಿವೆ. ಪ್ರಾಸಂಗಿಕವಾದ ಯಾವುದೇ ದೃಶ್ಯವೂ ಬೇಸರ ತರಿಸುವುದಿಲ್ಲ. ಪಾತ್ರಗಳ ಪ್ರವೇಶವೂ, ನಿರ್ಗಮನವೂ ಆಕಸ್ಮಿಕವೆನಿಸುವುದಿಲ್ಲ.

ಪ್ರೇಮ ಹಾಗೂ ರಾಜಕೀಯ ಘಟನೆಗಳಿಂದ ಕೂಡಿದ ನಾಟಕವಿದು. ನಾಯಕನಾದ ಕಲ್ಯಾಣವರ್ಮನಿಗೆ ರಾಜ್ಯಪ್ರಾಪ್ತಿ ಮತ್ತು ಕೀರ್ತಿಮತಿಯ ಸಮಾಗಮಗಳಿಂದ ಮುಕ್ತಾಯವಾಗುತ್ತದೆ. ಮಂತ್ರಿ ಮಂತ್ರಗುಪ್ತನ ಯೋಜನೆಯಿಂದಾಗಿ ರಾಜಕುಮಾರ ಕಲ್ಯಾಣವರ್ಮನು ಬದುಕಿ, ಬೆಳೆದು ರಾಜ್ಯವನ್ನೂ ಕೀರ್ತಿಮತಿಯನ್ನೂ ಪಡೆಯುವುದು ಸಾಧ್ಯವಾಗುತ್ತದೆ. ಹಾಸ್ಯ ವೀರ, ಶೃಂಗಾರ ಎಲ್ಲ ರಸಗಳ ಚಿತ್ರಣಕ್ಕೂ ಯಥಾವಕಾಶ ದೊರೆತಿದೆ.

ನಾಟಕದಲ್ಲಿ ಶೃಂಗಾರರಸುವು ಮುಖ್ಯವಾಗಿ, ವೀರರಸವು ಅಂಗರಸವಾಗಿ ಇನ್ನುಳಿದ ರಸಗಳು ಔಚಿತ್ಯವನ್ನರಿತು ಬಂದಿವೆ. ಸಂಭಾಷಣೆಗಳು ಸುದೀರ್ಘವಾಗಿಲ್ಲದೆ ಚುರುಕಾಗಿವೆ. ಅಲ್ಲಲ್ಲಿ ಗಾದೆಯ ಮಾತಿನಂತಹ ಪಡೆನುಡಿಗಳು ಬಂದಿವೆ. "ಕೆಲವು ವಿಶಿಷ್ಟ ಸನ್ನಿವೇಶಗಳು ಅನಿವಾರ್ಯವೋ ಎನ್ನುವಂತೆ ಇಲ್ಲಿಯೂ ಬಂದಿವೆ; ಬಲಭುಜ ಹಾರುವದು, ಮೊದಲಾದ ಶಕುನಗಳು, ಸೀರೆಯ ಸೆರಗು ಬಳ್ಳಿಗೆ ಸಿಕ್ಕಿಕೊಳ್ಳುವ ಸಾಧಾರಣ ಪ್ರಸಂಗ, ಕೆಲವು ಪ್ರೇಮದ ಕಥಾವಸ್ತುವುಳ್ಳ ಸಂಸ್ಕೃತ ನಾಟಕಗಳಲ್ಲಿ ಬರಲೇಬೇಕಾದ ಪ್ರಸಂಗಗಳಾಗಿದ್ದಿರಬೇಕು"[೩೩].

"ಶಿಕ್ಷಣದಿಂದ ಬುದ್ಧಿವಂತನ ಮಾತು ಹೇಗೋ ಹಾಗೆ ತಾರುಣ್ಯದಿಂದ ಯುವತಿಯರು ಶೋಭಿಸುತ್ತಾರೆ' ; "ನೆರಳು ಬಿಸಿಲನ್ನು ಬೆನ್ನುಹತ್ತುವಂತೆ ವಿಪತ್ತುಗಳು ತೇಜಸ್ವಿಯ ಬೆನ್ನು ಹತ್ತುತ್ತವೆ" ; "ಪ್ರಮಾದದ ಅಂಜಿಕೆಯಿಂದ ವಿವೇಕಿಗಳ ಕಾರ್ಯಸಿದ್ದಿಯು ತಡವಾಗಿ ಫಲಿಸುತ್ತದೆ" ಇತ್ಯಾದಿಯಾಗಿ ಅನುಭವದ ಮಾತುಗಳು ನಾಟಕದ ತುಂಬೆಲ್ಲ ಕಂಡುಬರುತ್ತದೆ. ಹೀಗೆ ಅಲ್ಲಲ್ಲಿ ಬರುವ ಅನೇಕ ಮಾತುಗಳಿಂದ ಕವಯತ್ರಿಯ ಲೋಕಾನುಭವವೂ ಮಾತಿನ ಜಾಣ್ಮೆಯೂ ತಿಳಿದು ಬರುತ್ತದೆ.

**ಪ್ರಭಾವ:** ವಿಜ್ಜಿಕಾಳು ಅಂದಿನ ಹಲವಾರು ಪ್ರಸಿದ್ಧ ನಾಟಕಕಾರರಿಂದ ಪ್ರೇರಿತಳಾಗಿರುವುದನ್ನು ಗುರುತಿಸಬಹುದು. ಕಾಳಿದಾಸನ ಪ್ರೇರಣೆ ಇವಳ ನಾಟಕದ ಮೇಲಾಗಿರುವುದು ಮೇಲು ನೋಡದಲ್ಲಿಯೇ ಸಾಬೀತಾಗುತ್ತದೆ.

ಕಲ್ಯಾಣವರ್ಮನು ಗುರುಗಳ ಆಶ್ರಮದಿಂದ ಹೊರಡುವಾಗಿನ ವರ್ಣನೆಯು ಶಕುಂತಲೆಯು ಆಶ್ರಮ ಬಿಡುವಾಗಿನ ವರ್ಣನೆಯನ್ನು ಹೋಲುತ್ತದೆ. ನಾಯಕ–ನಾಯಕಿಯರ ಪ್ರಥಮ ದರ್ಶನದ ದೃಶ್ಯವೂ ಸಾಮಾನ್ಯವಾಗಿ ಕಾಳಿದಾಸನ ಮಾದರಿಯನ್ನೇ ಅನುಸರಿಸಿದೆ. "ಆದರೆ ಅಮರಕವಿಯ ಜಾಣ್ಮೆಯ ಅನುಕರಣೆಯೂ ಕೂಡ ದುಸ್ತರವಾದ ಕೆಲಸ"[೩೪].

ಸಂದರ್ಭಗಳ ವರ್ಣನೆಗಳಷ್ಟೇ ಅಲ್ಲದೆ "ಕೀರ್ತಿಮತಿಯು ಬ್ರಹ್ಮನ ಸೃಷ್ಟಿಯಲ್ಲ", "ತದನಯೋರ್ವಾಗರ್ಥಯೋರಿವ ಸಮವಾಯಂ ಕರಿಷ್ಯಾಮಿ (ವಾಗರ್ಥಗಳಂತೆ ಇವರಿಬ್ಬರನ್ನು ಕೂಡಿಸುವೆನು)", "ಶೈಲೇಯಗಂಧಿನಿ ಶಿಲಾತಲೇ" ಮೊದಲಾದ ಮಾತುಗಳು ರಘುವಂಶದ ಅನುಕರಣೆಗಳಾಗಿವೆ. "ಮಿಥ್ಯೈವ ಪ್ರತಿಭಾತಿ ಶೈಶವಕಥಾ ಸ್ವಪ್ನೋ ನು ಮಾಯಾ ನು ಮೇ" (ಕೌಮ ೧–೧೦) ಎಂಬ ಸಾಲಿನ ಮೇಲೆ ಶಾಕುಂತಲದ "ಸ್ವಪ್ನೋನು ಮಾಯಾ ನು ಮತಿಭ್ರಮೋ ನು" (ಅಭಿಜ್ಞಾನ ಶಾಕುಂತಲಮ್ ೬–೧೦) ಎಂಬ ಸಾಲಿನ ಪ್ರಭಾವವನ್ನು ಗುರುತಿಸಲಾಗಿದೆ.

**ಇದಂ ಕಿಲಾವಿಷ್ಕೃತ ಕಾಂತಿ ವಿಪ್ಲವಂ ತುಷಾರವಾತಾತಪದರ್ಶನೇಷ್ವಪಿ ।**
**ಶರೀರಮುದ್ಯಾನಶಿರೀಷಪೇಲವಂ ತಪೋವನಕ್ಲೇಶ ಸಹಂ ಭವಿಷ್ಯತಿ ॥ (ಕೌಮ ೧–೨೩)**

**ಇದಂ ಕಿಲಾವ್ಯಾಜ ಮನೋಹರಂ ವಪುಃ ತಪಃ ಕ್ಷಮಂ ಸಾಧಯಿತುಂ ಯ ಇಚ್ಛತಿ।**
**ಧ್ರುವಂ ಸ ನೀಲೋತ್ಪಲ ಪತ್ರಧಾರಯಾ ತಮೀಲತಾಃ ಛೇತ್ತುಮೃಷಿರ್ವ್ಯವಸ್ಯತಿ ॥ (ಅಶಾ–೧–೧೭)**

**ತಪ್ತಸ್ಯ ಸೋಯಮನಘಸ್ತಪಸೋ ವಿಪಾಕಃ (ಕೌಮ ೧–೧೫) ತಪ್ತೇನ ತಪ್ತಮಯಸಾ ಘಟನಾಯ ಯೋಗ್ಯಮ್ (ವಿಕ್ರಮೋರ್ವಶಿಯ ೨–೧೫)**

ಸಂಭಾಷಣೆಗಳಲ್ಲಷ್ಟೇ ಅಲ್ಲದೆ, ಕಲ್ಪನೆ, ಸನ್ನಿವೇಷವನ್ನು ಹೆಣೆಯುವುದರಲ್ಲಿಯೂ ಕೂಡ ಕಾಳಿದಾಸನ ಅನುಕರಣೆ, ಪ್ರಭಾವ ಸ್ಪಷ್ಟವಾಗಿ ಗೋಚರಿಸುತ್ತದೆ.

ಕೀರ್ತಿಮತಿಯು ಕಲ್ಯಾಣವರ್ಮನ ಪ್ರೇಮಕ್ಕೆ ಪಾತ್ರಳಾಗಿ ತೆರಳುವಾಗ ಮಾರ್ಗದಲ್ಲಿ ಕಾಲಿಗೆ ಬಳ್ಳಿಯು ತೊಡರಿದ ಘಟನೆಯು ಶಾಕುಂತಲದಲ್ಲಿರುವ ಇದೇ ಸನ್ನಿವೇಶವನ್ನು ನೆನಪಿಗೆ ತರುತ್ತದೆ.

ನಾಟಕದಲ್ಲಿ ಕಾಳಿದಾಸನ ಪ್ರಭಾವದಂತೆಯೇ ಇತರ ಪ್ರಸಿದ್ಧ ನಾಟಕಕಾರರಾದ ಶ್ರೀಹರ್ಷ, ವಿಶಾಖದತ್ತ, ಭವಭೂತಿ, ಭಾಸ ಮೊದಲಾದವರ ಪ್ರಭಾವಗಳನ್ನೂ ಗುರುತಿಸಬಹುದು. ನಾಯಕಿ ಚಿತ್ರವನ್ನು ಬರೆಯುವುದು, ಅದನ್ನು ಕಳೆದುಕೊಳ್ಳುವುದು, ನಾಯಕಿ ದೇವತಾ ದರ್ಶನಕ್ಕೆ ಬಂದಾಗ ನಾಯಕ–ನಾಯಕಿಯರ ಪ್ರಥಮ ದರ್ಶನವಾಗುವುದು ಮೊದಲಾದ ಕೆಲವು ಅಂಶಗಳಲ್ಲಿ ಶ್ರೀ ಹರ್ಷನ ರತ್ನಾವಳಿ ಮತ್ತು ನಾಗಾನಂದ ನಾಟಕಗಳ ಆರಂಭ ಭಾಗಗಳ ಪ್ರಭಾವವು ಕಂಡುಬರುತ್ತದೆ.

ರಾಜಕೀಯ ಘಟನೆಗಳ ಚಿತ್ರಣದಲ್ಲಿ ವಿಶಾಖದತ್ತನ ಮುದ್ರಾರಾಕ್ಷಸದ ಪ್ರಭಾವವೂ ಕಂಡುಬರುತ್ತದೆ. ವೇಷಧಾರಿಗಳಲ್ಲಿ ಸಂದೇಶ ಕಳಿಸುವುದು, ಜನಾಭಿಪ್ರಾಯವನ್ನು ಅಳೆದು ನೋಡುವುದು, ಜನರಲ್ಲಿ ಶತ್ರುಗಳ ಕುರಿತಂತೆ ಜಾಗ್ರತೆ ಮೂಡಿಸುವುದು, ಇವೇ ಮೊದಲಾದವುಗಳನ್ನು ಅನುಸರಿಸಲಾಗಿದೆ. ಮಂತ್ರಗುಪ್ತನು ಅಮಾತ್ಯರಾಕ್ಷಸನಲ್ಲಿರುವ ಸ್ವಾಮಿಭಕ್ತಿ ಮತ್ತು ಉದಾರ ಹೃದಯವನ್ನು ಪಡೆದಿರುವ ಪಾತ್ರವಾಗಿದೆ. ಚಾಣಕ್ಯನ ನೀತಿಕುಶಲತೆಯೂ ಅವನಲ್ಲಿದೆ. ಅವನ ಸಮೀಪದ ಸೇವರಕಲ್ಲಿಯೇ ಒಬ್ಬನಿಗೆ ತಿಳಿದ ಗುಟ್ಟು ಇನ್ನೊಬ್ಬನಿಗೆ ತಿಳಿದಿರುವುದಿಲ್ಲ. ರಾಜಕೀಯ ರಹಸ್ಯಗಳನ್ನು ಕಾಪಾಡುವುದರಲ್ಲಿ ದಕ್ಷತೆಯನ್ನು ತೋರಿಸುವನು. ಕೌಮುದೀ ಮಹೋತ್ಸವದ ಮೂಲ ಕಲ್ಪನೆಯನ್ನು ಮುದ್ರಾರಾಕ್ಷಸನಿಂದಲೇ ತೆಗೆದುಕೊಂಡಂತಿದೆ. ಗೂಢಚಾರರು ಇಲ್ಲಿ ಪಾಶುಪತ ವೇ಼ಷದಲ್ಲಿರುವರು. ಮುದ್ರಾರಾಕ್ಷಸದಲ್ಲಿ ಅರ್ಹಂತರ ವೇಷದಲ್ಲಿರುತ್ತಾರೆ.

ಸನ್ಯಾಸಿನಿ ಯೋಗಸಿದ್ಧಿಯು ಭವಭೂತಿಯ ಮಾಲತೀಮಾಧವದಲ್ಲಿಯ ಕಾಮದಂತಿಯನ್ನು ನೆನಪಿಗೆ ತರುತ್ತಾಳೆ.

ಭಾಸನ ನಾಟಕದ ಕಥೆಯು ಇಲ್ಲಿ ಉಲ್ಲೇಖಿಸಲ್ಪಟ್ಟಿದೆ. ಭಾಸನ ನಾಟಕಗಳಂತೆ "ಪ್ರಸ್ತಾವನಾ" ಎನ್ನುವುದರ ಬದಲು "ಸ್ಥಾಪನಾ" ಎಂದಿದೆ. "ನಾಂದ್ಯಂತೇ ತತಃ ಪ್ರವಿಶತಿ ಸೂತ್ರಧಾರಃ" ಎಂಬುದು ಮಂಗಲ್ಕಿಂತ ಮೊದಲೇ ಬಂದಿದೆ. "ಟಂಕಚ್ಛೇದ್ಯೈರಂಧಕಾರ ಪಟಲೈಃ ಎಂಬುದು ಮೃಚ್ಛಕಟಿಕದ ಸೂಚೀಭೇದ್ಯಮ್ ತಮಃ" ಎಂಬುದನ್ನು ಹೋಲುತ್ತದೆ.

ತನ್ನ ಕಾಲದಲ್ಲಿ ಉಪಲಬ್ದವಿದ್ದ ಎಲ್ಲ ಉತ್ತಮ ಕೃತಿಗಳಲ್ಲಿಯ ಉತ್ತಮ ಅಂಶಗಳನ್ನು ತೆಗೆದುಕೊಂಡು ಕೇವಲ ಅನುಕರಣೆ ಎನಿಸದಂತೆ ಅವುಗಳನ್ನು ಪ್ರಕೃತ ಕಥಾವಸ್ತುವಿಗೆ ಹೊಂದಿಸಿಕೊಂಡು ಸೊಗಸಾದ ನಾಟಕ ಬರೆದಿದ್ದಾಳೆ.

**ನಾಟಕದ ಪಾತ್ರಗಳು:** ವಿದೂಷಕನ ಪಾತ್ರವು ಸಂಸ್ಕೃತ ನಾಟಕಗಳಲ್ಲಿ ಹಾಸ್ಯ ಪಾತ್ರ. ವೇಷ ಮತ್ತು ಮಾತಿನಿಂದ ಅವನು ಹಾಸ್ಯವನ್ನುಂಟುಮಾಡಬೇಕೆಂದು ಲಕ್ಷಣಕಾರರು ಹೇಳಿದ್ದಾರೆ. ಇಲ್ಲಿ ವಿದೂಷಕನು ರಂಗಕ್ಕೆ ಬಂದೊಡನೆ ಅವನನ್ನು ನೋಡಿ ನಾಯಕಿಯ ಗೆಳತಿ ನಿಪುಣಿಕೆಯು "ಕ ಏಷ ಆಕೃತ್ಯಾ ಮರ್ಕಟಃ ವಾಚಾ ಗರ್ದಭಃ" ನೋಡಲು ಮಂಗ, ಮಾತನಾಡಿದರೆ ಕತ್ತೆಯಂತಿರುವ ಇವನಾರು? ಎಂದು ಕೇಳುತ್ತಾಳೆ. ಈ ವಾಕ್ಯದಲ್ಲಿಯೇ ವಿದೂಷಕನ ಹಾಸ್ಯಭರಿತ ರೂಪ ಕಣ್ಮುಂದೆ ಬರುತ್ತದೆ[೩೫].

ವಿದೂಷಕನು ರಾಜನ ಆಪ್ತ ಸಲಹೆಗಾರನೂ ಆಗಿರುತ್ತಾನೆ. ಅಂತೆಯೇ ಇಲ್ಲಿ ಪ್ರೇಮಪಾಶಕ್ಕೆ ಸಿಲುಕಿದ ನಾಯಕ ಕಲ್ಯಾಣವರ್ಮನನ್ನು ಕಂಡು ವಿದೂಷಕನು 'ಅಂಧಸ್ಯ ಕೂಪಪತನಮ್ ಸಂವೃತ್ತಮ್, ಪೂರ್ವಂ ರಾಜ್ಯನಾಶಃ ತತಃ ಸ್ತ್ರೀ ತಂತುನಾ ಬಂಧನಂ' ಎನ್ನುತ್ತಾ ಇದು ಕುರುಡನು ಭಾವಿಗೆ ಬಿದ್ದಂತಾಯಿತು. ಈಗಾಗಲೇ ರಾಜ್ಯವನ್ನು ಕಳೆದುಕೊಂಡಿರುವಿ, ಈಗ ಸ್ತ್ರೀ ಎಂಬ ಹಗ್ಗದಿಂದ ಬಿಗಿದುಕೊಳ್ಳುತ್ತಿರುವಿ' ಎಂಬ ನೀತಿ ಮಾತನ್ನು ಹೇಳುತ್ತಾನೆ.

ಹೊರಡುವ ಅವಸರದಲ್ಲಿದ್ದ ನಾಯಕಿ ಕೀರ್ತಿಮತಿಯ ಹಾರವು ಕೆಳಗೆ ಬಿದ್ದಾಗ ನಾಯಕನಿಗೆ ಅದು ಅವಳ ಹೃದಯದಂತೆ ಭಾಸವಾಗುತ್ತದೆ. ಆದರೆ, ಹೊಟ್ಟೆಬಾಕ ವಿದೂಷಕನಿಗೆ ಅದು ಅನ್ನದ ರಾಶಿಯಂತೆ ಕಾಣುತ್ತದೆ. ಹಾರವನ್ನು ಮರಳಿಸುವ ನೆಪದಿಂದ ತನ್ನ ಗೆಳೆಯನ ಪ್ರೇಮಸಂದೇಶವನ್ನು ಹೊತ್ತು ತಂದ ವಿದೂಷಕ ಯೋಗಸಿದ್ಧಿ ಹಾಗೂ ನಿಪುಣಿಕೆಯರ ಸಂಭಾಷಣೆಯನ್ನು ಮರೆಯಲ್ಲಿ ನಿಂತು ಕೇಳುತ್ತಾನೆ. ಕೀರ್ತಿಮತಿಯು ಕಲ್ಯಾಣವರ್ಮನಲ್ಲಿ ಅನುರಕ್ತಳಾಗಿರುವ ವಿಷಯವನ್ನು ನಿಪುಣಿಕೆಯಿಂದ ಕೇಳಿತಿಳಿದ ಯೋಗಸಿದ್ಧಿಯು ಅವರೀರ್ವರನ್ನು ಒಂದುಗೂಡಿಸುವುದರಲ್ಲಿ ಆಸ್ಥೆ ತೋರುತ್ತಾಳೆ. ನಾಯಕಿಗೆ ತನ್ನ ಮಿತ್ರನಲ್ಲಿ ಪ್ರೇಮ ಉಂಟಾಗಿರುವುದನ್ನೂ, ಯೋಗಸಿದ್ಧಿಯು ಇವರಿಬ್ಬರನ್ನೂ ಸೇರಿಸುವುದರಲ್ಲಿ ಆಸಕ್ತಿ ತೋರುತ್ತಿರುವುದನ್ನು ಕೇಳಿದ ವಿಧೂಷಕನು "ಭಿಕ್ಷೆಗೆ ಹೊರಟವನಿಗೆ ಮೃಷ್ಟಾನ್ನ ದೊರೆಯುವಂತಾಯಿತು" ಎಂದು ಹೇಳುತ್ತಾ ಮುಂದೆ ಬಂದು ಯೋಗಸಿದ್ಧಿಗೆ ನಮಸ್ಕರಿಸುತ್ತಾನೆ.

ತನ್ನನ್ನು ಕಂಡೊಡನೆ "ನೋಡಲು ಮಂಗನಂತೆ, ಮಾತನಾಡಿದರೆ ಕತ್ತೆಯಂತಿರುವ ನೀನಾರು" ಎಂದು ಅಪಹಾಸ್ಯ ಮಾಡಿದರೂ, ನಿಪುಣಿಕೆಯನ್ನು ಕುರಿತು ವಿದೂಷಕನು "ಕೀರ್ತಿಮತಿಯು ಕಲ್ಯಾಣವರ್ಮನ ಚಿತ್ರವನ್ನು ಬರೆದಿದ್ದಾಳೆ, ನೀನು ನನ್ನ ಚಿತ್ರವನ್ನು ರಚಿಸು" ಎಂದು ಹೇಳುತ್ತಾನೆ.

ರಾಜ್ಯವನ್ನು ಮರಳಿ ಗಳಿಸಿದಮೇಲೆ ಕಲ್ಯಾಣವರ್ಮನು ನಾಯಕಿಯನ್ನು ಕುರಿತು ಚಿಂತಿಸುತ್ತಿದ್ದಾಗ ವಿದೂಷಕ "ವಯಸ್ಯ ಏಕಮ್ ರಾಜಕಾರ್ಯಮ್ ಮಂತ್ರಯಾಮಿ" ಎಂದು "ಗೆಳೆಯಾ, ಒಂದು ರಾಜಕಾರ್ಯವನ್ನು ಹೇಳುವೆನು" ಎಂದು ಗಂಭೀರವಾಗಿ ತನಗೆ ಹೊಳೆದ ರಾಜಕಾರ್ಯವನ್ನು ಈ ರೀತಿಯಾಗಿ ತಿಳಿಸುತ್ತಾನೆ. "ಅಶಿತ್ವಾ ಪೀತ್ವಾ ತಿಷ್ಠತಾಮ್ ಕಿಮ್ ತೇನ ಅತಿಕ್ರಾಂತೇನ ಸ್ತ್ರೀವೃತ್ತಾಂತೇನ" – "ತಿಂದು ಕುಡಿದು ಸುಖವಾಗಿರು, ಆ ಹೆಣ್ಣಿನ ಸುದ್ದಿ ಹಾಳಾಗಲಿ" ಎಂದು ಹೇಳುವ ಇವನ ರಾಜರಹಸ್ಯಕ್ಕೆ ನಿಪುಣಿಕೆಯು "ನೀನು ರಾಜನಾದಾಗ ಹಾಗೆ ಮಾಡು" ಎಂದು ಅಪಹಾಸ್ಯ ಮಾಡುತ್ತಾಳೆ.

ಸನ್ಯಾಸಿನಿ ಯೋಗಸಿದ್ಧಿಯು, ನಾಟಕದ ವಸ್ತುವು ತ್ವರಿತಗತಿಯಿಂದ ವಿಕಾಸಹೊಂದಲು ಸಹಾಯಕಾರಿಯಾಗಿದ್ದಾಳೆ. "ಮಾಲತೀ ಮಾಧವ"ದ ಕಾಮಂದಕಿಯನ್ನು ಇವಳು ಹೋಲುತ್ತಾಳೆ. ಇದರಲ್ಲಿಯ ಕೌಮುದೀ ಮಹೋತ್ಸವದ ಕಲ್ಪನೆ "ಮುದ್ರಾರಾಕ್ಷಸ"ದಿಂದ ಬಂದಂತಿದೆ. ಒಟ್ಟಿನಲ್ಲಿ ಉಪಲಬ್ದವಿರುವಿದ್ದ ನಾಟಕಗಳಲ್ಲಿಯ ಎಲ್ಲ ಒಳ್ಳೆಯ ಅಂಶಗಳನ್ನೂ ತೆಗೆದುಕೊಳ್ಳಲು ನಾಟಕಕಾರ್ತಿಯು ಯತ್ನಿಸಿದ್ದಾಳೆ. ಮೇಲೆ ತನ್ನದೇ ಆದ ಪ್ರತಿಭೆಯ ಮೆರುಗನ್ನೂ ನೀಡಿ ನಾಟಕಕ್ಕೆ ಹೊಸ ಕಳೆಯನ್ನು ತಂದಿದ್ದಾಳೆ.

ಕಾಲ್ಪನಿಕ ಪಾತ್ರಗಳ ರಚನೆಯೂ ತುಂಬಾ ಆಕರ್ಷಕವಾಗಿದೆ. ಕಥೆಯ ವಿಕಾಸಕ್ಕೂ, ರಂಗಪೋಷಣೆಗೂ ಅನುಕೂಲವಾದ ಪಾತ್ರಗಳ ಸೃಷ್ಟಿ ಮಾಡಲ್ಪಟ್ಟಿದೆ. ಉಚಿತವಾದ ಹೆಸರುಗಳನ್ನು ಕೊಟ್ಟಿದ್ದಾಳೆ. ಪಾತ್ರಗಳಿಗೆ ಅವರವರು ಮಾಡುವ ಕೆಲಸಕ್ಕೆ ಉಚಿತವಾದ ಹೆಸರುಗಳನ್ನು ಕೊಟ್ಟಿದ್ದಾಳೆ. ಸಂತೋಷ ಸಮಾಚಾರವನ್ನು ತಂದ ಸೇವಕ ನಂದಕ, ಜನಾಭಿಪ್ರಾಯವನ್ನು ತಿಳಿದುಕೊಳ್ಳಲು ನಿಯಮಿಸಿದ ಗುಪ್ತಚರ ಲೋಕಾಕ್ಷಿ, ಸೇನಾಪತಿಯ ಹೆಸರು ಕುಂಜರಕ,

ಅನ್ಯೋಕ್ತಿ ಹಾಗೂ ಇನ್ನಿತರ ಅಲಂಕಾರಗಳಿಗೆ ಅವಳು ಕೊಡುವ ಉದಾಹರಣೆಗಳು ಮಾರ್ಮಿಕವಾಗಿವೆ. ಹಳೆಯ ಮಸ್ತುವೇ ಆದರೂ ನೋಡುವ ದೃಷ್ಟಿಕೋನ ಹೊಸದಾಗಿದೆ." ಕಾಮವನ್ನು ಶಂಕರನು ಜಯಿಸಿದನು, ಬುದ್ಧನು ಜಯಿಸಿದನು. ಪ್ರವಾಸದಲ್ಲಿರುವ ಪತಿಯೂ ಜಯಿಸಿದನು, ಹೀಗಾಗಿ ಕಾಮನು ದಿಕ್ಕುಗಾಣದೆ ಮನೆಯಲ್ಲಿದ್ದ ಅಬಲೆಯನ್ನು ಹಿಂಸಿಸುತ್ತಾನೆ" ಎನ್ನುವ ಕವಯಿತ್ರಿಯು ಕವಿಸಮಯದಲ್ಲಿಯೂ ನಾವಿನ್ಯವನ್ನು ತರಲೆತ್ನಿಸಿದ್ದಾಳೆ.[೩೬]

ನಾಲ್ಕನೆಯ ಅಂಕದ ಮುಖ್ಯ ದೃಶ್ಯದ ಘಟನೆ ರಾತ್ರಿಯಲ್ಲಿ ನಡೆಯುವುದು ವೀರಸೇನನೆಂಬ ಚಾರನು ರಾತ್ರಿಯಲ್ಲಿ ಮಂತ್ರಗುಪ್ತನನ್ನು ಸಂಧಿಸುವನು. ವೀರಸೇನನು ಬಂದೊಡನೆ ಅವನನ್ನು ಕೈಹಿಡಿದು ಬರಮಾಡಿಕೊಳ್ಳುವುದು, ತನ್ನ ಹಾಸಿಗೆಯ ಮೇಲೆಯೇ ಕುಳಿತುಕೊಳ್ಳಲು ಹೇಳುವುದೂ, ಆದರೂ ಅವನು ನೆಲದಮೇಲೆ ಕುಳಿತು ಕೊಳ್ಳುವುದು, ಮಂತ್ರಿ ಮಂತ್ರಗುಪ್ತನು ತನ್ನ ಸಹಾಯಕರೊಂದಿಗೆ ಎಷ್ಟು ಗೌರವದಿಂದ ನಡೆದುಕೊಳ್ಳುತ್ತಿದ್ದನೆಂಬುದನ್ನೂ, ಸಹಕಾರಿಗಳ ಶಿಸ್ತು ಮತ್ತು ವಿನಯಶೀಲತೆಯನ್ನೂ ತೋರಿಸುತ್ತವೆ. ಈ ಅಂಕದ ತುಂಬೆಲ್ಲ ಕಂಡುಬರುವ ರಾಜನೀತಿಯಲ್ಲಿಯ ಕೌಶಲ್ಯ ಮತ್ತು ರಾಜಕೀಯದಲ್ಲಿಯ ರಾಜನೀತಿಗಳ ಸೂಕ್ಷ್ಮ ಪರಿಚಯವನ್ನು ಪರಿಶೀಲಿಸಿದರೆ ಕವಯತ್ರಿಗೆ ಈ ವಿಷಯಗಳ ಪ್ರತ್ಯಕ್ಷ ಸಂಬಂಧವಿರಬೇಕೆಂಬುದು ಭಾಸವಾಗುತ್ತದೆ.

**ಉನ್ನಿದ್ರಾಶೋಕ ಚೂತಪ್ರಸವ ಪರಿಮಲೋದ್ಗಂಧಯೋ ಗಂಧವಾಹಾಃ**
**ಪ್ರೇಂಖದ್ವಾಲಾಪಮಾಲಾ ಶತಶಬಲಮುಖಃಪ್ರಾವೃಷೇಣ್ಯೋಂಧಕಾರಃ ।**
**ಸೌಧೋತ್ಸಂಗ ಪ್ರಸಂಗೀ ನವಶಶಿವಿಶದಃ ಶಾರದೋ ವಾ ಪ್ರದೋಷೋ**
**ಯದ್ಯಸ್ತ್ರಂ ನ ಸ್ಯುರೇತೇ ಸ್ವಯಮತನುರಸೌ ಕಾತರಃ ಕಿಂ ಕರೋತಿ ॥ (ಚೌಮುದೀ ಮಹೋತ್ಸವ ೩–೩)**

ಅರಳಿದ ಅಶೋಕ ಹಾಗೂ ಮಾವಿನ ಹೂಗಳ ಪರಿಮಳದಿಂದ ಸುಗಂಧಿತವಾದ ಗಾಳಿ, ಆಕಾಶದಲ್ಲಿ ಹಾರಾಡುತ್ತಿರುವ ಬೆಳ್ಳಕ್ಕಿಗಳ ನೂರಾರು ಸಾಲಿನಿಂದ ಚಿತ್ರವರ್ಣಕ್ಕೆ ತಿರುಗಿದ ಮೋಡಗಳುಳ್ಳ ಈ ಮಳೆಗಾಲದ ಸಂಜೆ ಉಪ್ಪರಿಗೆಯ ಮಡಿಲಲ್ಲಿ ನಲಿದಾಡುವ, ಉದಯಿಸುತ್ತಿರುವ ಚಂದ್ರನಿಂದ ಸ್ವಚ್ಛವಾದ ಈ ಶರತ್ಕಾಲದ ಪ್ರದೋಷ, ಶರೀರವಿಲ್ಲದ ಆ ಮದನನು ಈ ಅಸ್ತ್ರಗಳನ್ನು ಹೊಂದಿಲ್ಲದೆ ಇದ್ದರೆ ಏನು ತಾನೆ ಮಾಡುತ್ತಿದ್ದ?

ನಾಟಕದಲ್ಲಿ ಅಪರೂಪದ ಛಂದಸ್ಸಿನ ಬಳಕೆಯನ್ನು ಕಾಣಬಹುದು. ಒಟ್ಟಾರೆ ನಾಟಕದಲ್ಲಿ ೧೧೩ ಪದ್ಯಗಳನ್ನು ವಿವಿಧ ಛಂದಸ್ಸುಗಳಲ್ಲಿ ರಚಿಸಿದ್ದಾಳೆ. ೨೩ ಪದ್ಯಗಳನ್ನು ಶಾರ್ದೂಲವಿಕ್ರೀಡಿತದಲ್ಲಿ ರಚಿಸಿದ್ದಾಳೆ ಪುಷ್ಪಿತಾಗ್ರ, ಗೀತಿ, ಸುಂದರಿ, ಕೇತುಮತಿ, ರಥೋದ್ಧಾತ, ಮೊದಲಾದ ಅಪರೂಪದ ಛಂದಸ್ಸುಗಳನ್ನು ಇವಳು ಬಳಸಿದ್ದಾಳೆ.

**ನಾಟಕದ ಕಥಾವಸ್ತು:** ಪಾಟಲೀಪುತ್ರದಲ್ಲಿ ಸುಂದರವರ್ಮನೆಂಬ ರಾಜನಿದ್ದನು. ಅವನ ಆಶ್ರಯದಿಂದಲೇ ದೊಡ್ಡವನಾದ ಚಂಡಸೇನನೆಂಬ ಸೇನಾಪತಿಯು ಮಗಧಕುಲವೈರಿಗಳಾದ ಲಿಚ್ಛವಿಗಳೊಡನೆ ಸೇರಿಕೊಂಡು ರಾಜಧಾನಿಯನ್ನು ಆಕ್ರಮಿಸುವನು. ಆರಂಭದಲ್ಲಿ ಯುದ್ಧವು ರಾಜನಿಗೆ ಅನುಕೂಲವಾಗಿ ಕಂಡರೂ ಕೊನೆಯ ಗಳಿಗೆಯಲ್ಲಿ ರಾಜನು ಸಾಯುವನು. ಮಂತ್ರಿ ಮಂತ್ರಗುಪ್ತನು ರಾಜಕುಮಾರ ಕಲ್ಯಾಣವರ್ಮನನ್ನು ವಿಂಧ್ಯಪರ್ವತದಲ್ಲಿ ಗುಪ್ತವಾಗಿಟ್ಟು, ರಾಜ್ಯವನ್ನು ತಿರುಗಿ ಪಡೆಯಲು ನೀತಿಜಾಲವನ್ನು ಹರಡುವನು. ಕಲ್ಯಾಣವರ್ಮನು ಕುಂಜರಕನೆಂಬ ಸೇನಾಧಿಪತಿಯ ನಿರೀಕ್ಷಣೆಯಲ್ಲಿ ದೊಡ್ಡವನಾಗುವನು. ಮಥುರೆಯ ಅಧಿಪತಿ ಕೀರ್ತಿಷೇಣನು ಕೀರ್ತಿಮತಿ ಎಂಬ ತನ್ನ ಮಗಳನ್ನು ವಿಂಧ್ಯವಾಸಿನೀ ದೇವಿಯ ಸೇವೆಗಾಗಿ ವಿಂಧ್ಯಾಟವಿಗೆ ಕಳಿಸುವನು.

ಅಲ್ಲಿ ಕಲ್ಯಾಣವರ್ಮನಿಗೂ ದೇವಸ್ಥಾನದಿಂದ ಹಿಂತಿರುಗಿ ಬರುವ ಕೀರ್ತಿಮತಿಗೂ ಆದ ಪ್ರಥಮ ದರ್ಶನ ಮತ್ತು ಪ್ರೇಮಾಂಕುರಗಳೇ ನಾಟಕದ ಮೊದಲನೆಯ ಅಂಕದ ವಿಷಯವಾಗಿವೆ. ಪ್ರಥಮ ದರ್ಶನದ ರೀತಿಯು ಸಾಮಾನ್ಯವಾಗಿ ಕಾಳಿದಾಸನ ರೀತಿಯನ್ನು ಹೋಲುತ್ತದೆ, ಇಲ್ಲಿ ನಾಯಿಕೆಯ ಭಾವವನ್ನು ಚಿತ್ರಿಸುವಲ್ಲಿ ಕವಯತ್ರಿಯ ಕೌಶಲವನ್ನು ಗಮನಿಸಬಹುದು.

ನಾಯಕಿಯನ್ನು ಕಂಡಾಗ ನಾಯಕನ ಮನಸೆಳೆದ ನಾಯಕಿಯ ಸೌಂದರ್ಯವನ್ನು ಕಂಡು "ಇವಳು ಬ್ರಹ್ಮನ ಸೃಷ್ಟಿಯಾಗಿರಲಾರಳು, ಶಂಕರನನ್ನು ಜಯಿಸಲು ಮದನನು ಮಾಡಿದ ತಪಸ್ಸಿನ ಫಲವೇ ಇವಳಿರಬೇಕು" ಎಂದು ನಾಯಕನು ತರ್ಕಿಸುವನು. "ನವವಧೂರೇಷಾ ವಧೂಲಕ್ಷಣಮ್" ಉತ್ತಮ ಸ್ತ್ರೀಲಕ್ಷಣವೇ ರೂಪತಾಳಿ ಬಂದಂತಿದೆ ಎಂಬ ಉದ್ಗಾರ ತೆಗೆಯುವನು.

ಕಲ್ಯಾಣವರ್ಮನು ತಾನು ಇದ್ದ ಜಾಗಕ್ಕೆ ಬಂದರೆಂಬ ಕಾರಣದಿಂದ ರಾಜಕುಮಾರಿ ಹಾಗೂ ಅವಳೊಡನೆ ಬಂದ ವೃದ್ಧ ಕಂಚುಕಿ ಹಾಗೂ ನಿಪುಣೆಯೆಂಬ ದಾಸಿಯರನ್ನು ಅತಿಥಿಗಳೆಂದು ಬರಮಾಡಿಕೊಳ್ಳುವನು. ಕಂಚುಕಿಯಿಂದ ನಾಯಕಿಯ ವಿಚಾರವನ್ನು ನೇರವಾಗಿ ಕೇಳಿ ತಿಳಿದುಕೊಂಡು, ಜನನಿಭಿಡ ಅಡವಿಗೆ ಕೋಮಲೆಯನ್ನು ಕಳಿಸಿದ್ದು ತಪ್ಪೆಂದು ತಿಳಿಸುತ್ತಾನೆ.

ನಾಯಕ ನಾಯಕಿಗೆ ಮನಸೋತಂತೆ, ನಾಯಕಿಯೂ ಸೋಲುತ್ತಾಳೆ ಅದನ್ನವಳು "ಜನಪ್ರತಿಷಿದ್ದ ಪ್ರಸರಾಪಿ ಪುನಃ ಪುನಸ್ತತ್ರೈವ ದೃಷ್ಟಿಃ ಪ್ರಸರತಿ" ಎನ್ನುತ್ತಾ "ಜನರಿರುವುದರಿಂದ ತಡೆದುಕೊಂಡರೂ ನನ್ನ ದೃಷ್ಟಿಯು ಮತ್ತೆ ಮತ್ತೆ ಅವನ ಕಡೆಗೇ ಹರಿಯುತ್ತಿದೆ" ಎಂದು ಸ್ವಗತದಲ್ಲಿ ಹೇಳಿಕೊಂಡು ಪ್ರೇಕ್ಷಕರಿಗೆ ತನ್ನ ಭಾವನೆಯನ್ನು ತಿಳಿಸುತ್ತಾಳೆ. ವಿಶ್ರಾಂತಿಗಾಗಿ ಕುಟೀರವೊಂದನ್ನು ರಚಿಸಿದ ಸಿಂಹಲಕನು ಕರೆಯಲು ಬಂದಾಗ ಇವರೀರ್ವರು ಅಗಲಬೇಕಾಗುತ್ತದೆ.

**ಯಾತಾ ನಿತಂಬಗುರ್ವೀಯಾವದ್ಯಾವನ್ಮೃಗೇಕ್ಷಣಾ ದೂರಮ್।**
**ಬಿಂಬಿತರಾತ್ರೀ ವಾಂನಃ ತಾವತ್ತಾವದವಗಾಢಾ ಮೇ॥**

"ಕನ್ನಡಿಯಲ್ಲಿಯ ಪ್ರತಿಬಿಂಬದಂತೆ ಅವಳು ದೂರ ದೂರ ಹೋದಷ್ಟೂ ನನ್ನಲ್ಲಿ ಆಳವಾಗಿ ಸೇರಿಕೊಂಡಳು" ಎಂದು ನಾಯಕ ಕಲ್ಯಾಣವರ್ಮನು ತನ್ನ ಚಿತ್ರದಲ್ಲಿ ಅವಳು ಗಾಢವಾಗಿ ಸೇರಿಕೊಂಡದ್ದನ್ನು ಹೇಳುವನು.

ರಾಜಕುಮಾರನ ಮನಃಸ್ಥಿತಿಯನ್ನರಿತ ವಿಧೂಷಕನು "ಮೊದಲೇ ರಾಜ್ಯವನ್ನು ಕಳೆದುಕೊಂಡಿರುವಿ, ಈಗ ಹೆಣ್ಣೆಂಬ ಹಗ್ಗದಿಂದ ಬಿಗಿದುಕೊಳ್ಳುತ್ತಿರುವೆ" ಎಂದು ಎಚ್ಚರಿಸುತ್ತಾನೆ. ನಾಯಕಿಯು ಅವಸರದಿಂದ ತಿರುಗಿ ಹೋಗುವಾಗ ಬಳ್ಳಿಗೆ ಸಿಕ್ಕ ಸೆರಗನ್ನು ಬಿಡಿಸಿಕೊಳ್ಳುವ ಭರದಲ್ಲಿ ಕೆಳಗೆ ಬಿದ್ದ ಅವಳ ಹಾರವು ಹೊಟ್ಟೆಬಾಕ ವಿದೂಷಕನಿಗೆ ಅನ್ನದ

ರಾಶಿಯಂತೆ ಕಂಡರೆ ನಾಯಕನಿಗೆ ತನಗಾಗಿ ಬಿಟ್ಟುಹೋದ ಅವಳ ಹೃದಯದಂತೆ ಭಾಸವಾಗುತ್ತದೆ. ಪ್ರೀತಿಯಿಂದ ಅದನ್ನು ಎತ್ತಿಕೊಂಡು, ಸೇವಕರ ಸೂಚನೆಯಂತೆ ಹೊರಡುತ್ತಾನೆ.

ಎರಡನೆಯ ಅಂಕದಲ್ಲಿ ಕೀರ್ತಿಮತಿಯು ಮದನಭಾದೆಯಿಂದ ಪರಿತಪಿಸುವಳು. ಇವಳು ಬಿಡಿಸಿದ ನಾಯಕನ ಚಿತ್ರವನ್ನು ಪಕ್ಷಿಯೊಂದು ಅವಳ ಸಾಕುತಾಯಿ ಯೋಗಸಿದ್ಧಿಯಿದ್ದಲ್ಲಿಗೆ ತಂದು ಹಾಕುವುದು. ಈ ಮೊದಲು ಯೋಗಸಿದ್ಧಿಯು ಮಗಧದೇಶದ ರಾಜ ಸುಂದರವರ್ಮನ ಅರಮನೆಯಲ್ಲಿ ಕೆಲಸಕ್ಕಿದ್ದವಳು. ಇವಳು ಅಲ್ಲಿ ಕಲ್ಯಾಣವರ್ಮನ ದಾಯಿಯಾಗಿದ್ದಳು, ಚಂಡಸೇನನ ಆಕ್ರಮಣದ ನಂತರ ಕಲ್ಯಾಣವರ್ಮನು ಕಳೆದುಹೋಗಲು, ಜೀನವದಲ್ಲಿ ನಿರಾಶೆ ತಾಳಿ ಸನ್ಯಾಸಿನಿಯಾಗಿ ದೇಶ–ದೇಶವನ್ನು ಅಲೆಯುತ್ತಿದ್ದಾಗ ಕೀರ್ತಿಮತಿಯ ತಾಯಿಯ ಆಗ್ರಹದಿಂದ ಅವಳ ಅರಮನೆಯಲ್ಲಿದ್ದು, ನಾಯಕಿಯ ಬೆಂಗಾವಲಿಗಾಗಿ ಅವಳೊಂದಿಗೆ ಅಡವಿಗೆ ಬಂದಿರುತ್ತಾಳೆ. ರಾಜಕುಮಾರಿ ಬಿಡಿಸಿದ ಚಿತ್ರವನ್ನು ಕಂಡ ಯೋಗಸಿದ್ಧಿಗೆ ಆ ಚಿತ್ರದಲ್ಲಿರುವವನು ತಾನು ಸಾಕಿದ ಕಲ್ಯಾಣವರ್ಮನೇ ಎಂಬುದು ತಿಳಿದು ಬರುತ್ತದೆ. ಅಲ್ಲದೆ ಕೀರ್ತಿಮತಿಗೆ ಅವನಲ್ಲಿ ಅನುರಾಗ ಉಂಟಾಗಿರುವ ವಿಚಾರವನ್ನು ನಿಪುಣಿಕೆಯಿಂದ ತಿಳಿದು ಸಂತೋಷಗೊಳ್ಳುತ್ತಾಳೆ. ಈ ಸಂದರ್ಭದಲ್ಲಿ ಹಾರವನ್ನು ಹಿಂದಿರುಗಿಸುವ ನೆಪದಿಂದ ನಾಯಕನ ಪರವಾಗಿ ಪ್ರೇಮಸಂಧಾನ ಮಾಡಲು ಬಂದ ವಿಧೂಷಕ ಮರೆಯಲ್ಲಿ ನಿಂತು ನಿಪುಣಿಕೆ ಹಾಗೂ ಯೋಗಸಿದ್ಧಿಯರ ಸಂಭಾಷಣೆಯನ್ನು ಕೇಳಿಸಿಕೊಂಡು, ನಾಯಕಿಗೆ ತನ್ನ ಗೆಳೆಯನಲ್ಲಿ ಪ್ರೇಮ ಉಂಟಾಗಿರುವುದನ್ನು ಅರಿತುಕೊಳ್ಳುತ್ತಾನೆ. ಅಂತೆಯೇ ಅವರಿಬ್ಬರನ್ನು ಮಾತನಾಡಿಸಿ ಹಾರವನ್ನು ಕೊಟ್ಟು ಚಿತ್ರಪಟನ್ನು ತೆಗೆದುಕೊಂಡು ಹೊರಡುತ್ತಾನೆ.

ಮೂರನೆಯ ಅಂಕದಲ್ಲಿ ಕೀರ್ತಿಮತಿ ಬರೆದ ತನ್ನ ಚಿತ್ರವನ್ನು ಕಂಡು ಕಲ್ಯಾಣವರ್ಮನು ಪುಳಕಿತನಾಗುತ್ತಾನೆ. ಜೊತೆಗೆ ತನ್ನ ಸಾಕುತಾಯಿ ಯೋಗಸಿದ್ಧಿಯ ವಿಚಾರವನ್ನು ತಿಳಿದು ಸಂತೋಷಗೊಳ್ಳುತ್ತಾನೆ.

ನಾಲ್ಕನೆಯ ಅಂಕದಲ್ಲಿ ಪ್ರೇಮದ ಕಥೆಯು ಹಿಂದೆ ಸರಿದು ರಾಜಕೀಯ ಘಟನೆಗಳು ಪ್ರಾಮುಖ್ಯ ಪಡೆಯುತ್ತವೆ. ರಾಜಕುಮಾರ ಕಲ್ಯಾಣವರ್ಮನನ್ನು ಅಡವಿಯಲ್ಲಿಟ್ಟು ಬೆಳೆಸುತ್ತಿದ್ದ ಮಂತ್ರಿ ಮಂತ್ರಗುಪ್ತನು ಪಾಶುಪತನ ವೇಷದಲ್ಲಿದ್ದು, ರಾಜ್ಯ ಹಿಂಪಡೆಯಲು ಸಂಚುರೂಪಿಸುತ್ತಾನೆ. ಆರ್ಯರಕ್ಷಿತ, ವರ್ಧಮಾನ ಮೊದಲಾದವರು ಈತನ ಗುಪ್ತಚಾರರು. ಇವರ ಸಂಭಾಷಣೆಯಲ್ಲಿ ಕೆಲವೊಂದು ರಾಜಕೀಯ ಸನ್ನಿವೇಷಗಳು ತಿಳಿದುಬರುತ್ತವೆ. ಮಂತ್ರಗುಪ್ತನ ಪ್ರಚೋದನೆಯಿಂದ ಗಡಿರಕ್ಷಕರು ದಂಗೆಯೇಳಲು ಅವರನ್ನು ಬಗ್ಗುಬಡಿಯಲೆಂದು ಚಂಡಸೇನನು ರಾಜಧಾನಿಯನ್ನು ಬಿಟ್ಟು ಹೊರಹೋಗಿರುವ ವಿಚಾರ ಹಾಗೂ ರಾಜಕುಮಾರ ಕಲ್ಯಾಣವರ್ಮನ ಕುರಿತಂತೆ ಜನಾಭಿಪ್ರಾಯವೂ ಅನುಕೂಲಕರವಾಗಿರುವ ವಿಚಾರಗಳನ್ನು ಆ ಗುಪ್ತಚರರು ತಿಳಿಸುತ್ತಾರೆ.

ವೀರಸೇನನೆಂಬ ಚಾರನು ರಾತ್ರಿಯಲ್ಲಿ ಮಂತ್ರಗುಪ್ತನನ್ನು ಸಂಧಿಸಿ, ರಾಜಕುಮಾರನು ಪರಿಮಿತ ಸೈನ್ಯದೊಡನೆ ಹೊರಟಿರುವುದಾಗಿಯೂ, ಬೆಳಗಿನ ಹೊತ್ತಿಗೆ ರಾಜಧಾನಿಯನ್ನು ಮುಟ್ಟಬಹುದೆಂದೂ ತಿಳಿಸುತ್ತಾನೆ. ರಾಜಕೀಯ ಉದ್ದೇಶಕ್ಕಾಗಿಯೇ ಪ್ರೇಮದ ನಾಟಕವನ್ನು ಹೂಡುವ ಸಲುವಾಗಿ ಅಡವಿಯಲ್ಲಿ ರಾಜಕುಮಾರ ಹಾಗೂ ಕೀರ್ತಿಮತಿಯರು ಭೇಟಿಯಾಗುವಂತೆ ವ್ಯವಸ್ಥೆ ಮಾಡಿದ್ದ ಮಂತ್ರಗುಪ್ತನಿಗೆ, ಪ್ರೇಮದ ಗೊಂದಲದಲ್ಲಿ ಸಿಲುಗಿ ರಾಜಕುಮಾರನೆಲ್ಲಿ ರಾಜಕೀಯದ ಕಡೆಗೆ ಉದಾಸೀನನಾಗುವನೋ ಎಂಬ ಆತಂಕವಿರುತ್ತದೆ. ಆದರೆ ರಾಜ್ಯವನ್ನು ಮರಳಿ ಪಡೆಯುವುದರಲ್ಲಿ ಉತ್ಸಾಹಿತನಾಗಿರುವುದನ್ನು ಕಂಡು ಸಂತೋಷಗೊಳ್ಳುವನು. ರಾಜಕುಮಾರನು ನಗರಕ್ಕೆ ಬಂದು ಮುಟ್ಟಿದ ಗದ್ದಲ ಕೇಳುವುದು, ಸೂರ್ಯೋದಯವಾಗುವುದು.

ಐದನೆಯ ಅಂಕದಲ್ಲಿ ನಾಯಕಿ ಕೀರ್ತಿಮತಿ ಹಾಗೂ ಅವಳ ಸಂಗಡಿಗರು ತಮ್ಮ ಅರಮನೆಗೆ ಮರಳುವರು. ಯೋಗಸಿದ್ಧಿಯು ಭವಾನಿಯು ಸ್ವಪ್ನದಲ್ಲಿ ಕಲ್ಯಾಣವರ್ಮನೊಂದಿಗೆ ಕೀರ್ತಿಮತಿಯ ವಿವಾಹವಾಗಬೇಕೆಂಬ

ಆಜ್ಞೆಯನ್ನು ನೀಡಿರುವುದಾಗಿ ತಿಳಿಸಿ ಕೀರ್ತಿಮತಿಯ ತಂದೆ-ತಾಯಿಯರನ್ನು ಒಪ್ಪಿಸುವಳು. ಅಷ್ಟರಲ್ಲಿ ಮಂತ್ರಗುಪ್ತನು ವಿವಾಹಸಂಬಂಧದ ಮಾತುಗಳನ್ನಾಡಲೆಂದು ಕಳಿಸಿದ ಪುರೋಹಿತರು ಬರುತ್ತಾರೆ.

ಉದ್ಯಾನವನದಲ್ಲಿ ಕಲ್ಯಾಣವರ್ಮ-ಕೀರ್ತಿಮತಿಯರು ಮತ್ತೊಮ್ಮೆ ಸಂಧಿಸುತ್ತಾರೆ. ತಾವು ಈ ರೀತಿ ಸಂಧಿಸಲು ಮಂತ್ರಗುಪ್ತನೇ ಕಾರಣ ಎಂಬುದನ್ನು ಅರಿತ ರಾಜಕುಮಾರ ಕೃತಜ್ಞತೆ ಅವನಿಗೆ ಸಲ್ಲಿಸುತ್ತಾನೆ. ಅಷ್ಟರಲ್ಲಿ ಮುಗಿಲಲ್ಲಿ ಸಂಜೆಯಮೋಡಗಳು ಕಟ್ಟಿ ಗರ್ಜಿಸಲು ಆರಂಭಿಸುತ್ತದೆ, ಗಾಬರಿಗೊಂಡ ನಾಯಕಿಯನ್ನು ಸಂತೈಸುತ್ತಾ ನಾಯಕನು ಮಳೆಗಾಲದ ಆರಂಭದ ವರ್ಣನೆಮಾಡುತ್ತಾನೆ. ಕೊನೆಯ ನೀಲಕಂಠನ ಸ್ತುತಿಯೊಂದಿಗೆ ನಾಟಕದ ಸಮಾಪ್ತಿಯನ್ನು ಸೂಚಿಸುವುದು.

ನಾಟಕದ ಕೊನೆಯು ಮಾತ್ರ ಸಾಂಪ್ರದಾಯಿಕವಾಗಿಲ್ಲ ಎನ್ನುವುದೊಂದು ಕೊರತೆಯಾಗಿದೆ. ಕೊನೆಗೆ ಭರತವಾಕ್ಯವಿಲ್ಲ, ರಾಜ್ಯಪ್ರಾಪ್ತಿಗೂ, ಕೀರ್ತಿಮತಿ ಪ್ರಾಪ್ತಿಗೂ ಕಾರಣರಾದ ಮಂತ್ರಗುಪ್ತ, ಯೋಗಸಿದ್ಧಿಯರು ಅಲ್ಲಿರುವುದಿಲ್ಲ. ಕೇವಲ ಪ್ರಮದವನದಲ್ಲಿ ನಾಯಕ ನಾಯಕಿಯರು ಭೇಟಿಯಾಗುವರೇ ಹೊರತು ಪಟ್ಟಾಭಿಷೇಕ ಮತ್ತು ವಿವಾಹಗಳಲ್ಲಿ ಕತೆ ಪರ್ಯವಸನವಾಗುವುದಿಲ್ಲ. ಇಂತಹ ಬೆರಳೆಣಿಕೆಯ ಲೋಪದೋಷಗಳನ್ನು ಮೀರಿ ಪ್ರಶಂಸೆಗೆ ಕಾರಣವಾಗುವ ನಾಟಕದ ಇತರ ವಿಚಾರಗಳು ಹಲವಾರು ಇವೆ.

ಈ ನಾಟಕದ ವಸ್ತುವು ಅಂದಿನ ಸಂಸ್ಕೃತ ಸಾಹಿತ್ಯದಲ್ಲಿ ಪ್ರಚಲಿತವಿದ್ದ ಕಥಾಹಂದರವನ್ನು ಒಳಗೊಂಡಿದೆ. ಪೌರಾಣಿಕ ವಸ್ತುವನ್ನು ಆರಿಸಿಕೊಳ್ಳದೆ ರಾಜನೀತಿ, ಯುದ್ಧತಂತ್ರ, ಅರಸನ ಸುತ್ತಲಿನ ಸಚಿವರು ಮೊದಲಾದ ರಾಜಕೀಯ ವಿಚಾರಗಳನ್ನೊಳಗೊಂಡ ಕತೆಯನ್ನು ಆರಿಸಿಕೊಂಡಿರುವುದು ವಿಜ್ಜಿಕಾಳ ಅಭಿರುಚಿ, ಆಸಕ್ತಿಯನ್ನು ಕುರಿತು ತಿಳಿಸುತ್ತದೆ.

ಈ ಕೃತಿಯು ಪೂರ್ವ-ಪಶ್ಚಿಮದ ವಿದ್ವಾಂಸರಿಂದ ವಿಮರ್ಶಿಸಲ್ಪಟ್ಟಿದೆ. ಡಾ.ಕೆ.ಪಿ.ಜಯಸ್ವಾಲ್ ಅವರು ನಾಟಕದಲ್ಲಿನ ಐತಿಹಾಸಿಕ ವಿಚಾರವನ್ನು ಕುರಿತು ಐತಿಹಾಸಿಕ ಆಧಾರದಿಂದ ಚರ್ಚಿಸಿ, ಇಲ್ಲಿನ ಚಂದಸೇನನನ್ನು ಗುಪ್ತವಂಶದ ಸ್ಥಾಪಕ ಚಂದ್ರಗುಪ್ತನಿಗೆ ಹೋಲಿಸಲು ಯತ್ನಿಸಿದ್ದಾರೆ. ಆದರೆ, ಡಾ.ವಿಂಟರ್‌ನಿಟ್ಸ್ ಇದೊಂದು ಸಂಪೂರ್ಣ ಕಾಲ್ಪನಿಕ ಕತೆಯಾಗಿದ್ದು, ಇದರಲ್ಲಿ ಯಾವುದೇ ಐತಿಹಾಸಿಕ ವಿಚಾರಗಳಿಲ್ಲ ಎಂಬ ವಾದವನ್ನು ಮಂಡಿಸಿದ್ದಾರೆ.

ಇದು ಹಲವಾರು ನಾಟಕಗಳ ಪ್ರೇರಣೆಯಿಂದ ಮೂಡಿದ ಸ್ವತಂತ್ರ ನಾಟಕವಾಗಿದೆ. ವಿದ್ವಾಂಸರು ಗುರುತಿಸಿರುವಂತೆ ಈ ನಾಟಕದಲ್ಲಿ ಭಾಸ, ಕಾಳಿದಾಸ, ಹರ್ಷ ಮೊದಲಾದ ಸಂಸ್ಕೃತ ನಾಟಕಕಾರರ ಪ್ರಭಾವವಿದೆ. ಇದು ವಿಜ್ಜಿಕಾಳ ಅಧ್ಯಯನ ಹಾಗೂ ಸೋಪಜ್ಞತೆಯನ್ನು ತಿಳಿಸುತ್ತದೆ. ನಾಟಕವು ಹಾಸ್ಯ, ವೀರ, ಶೃಂಗಾರ ರಸಗಳಿಂದ ಕೂಡಿದೆ.

ಇವಳ ವಿದ್ಯೆ, ಸಂಸ್ಕೃತ ಸಾಹಿತ್ಯಾಭ್ಯಾಸ, ಸಮಾಜವನ್ನು ನೋಡುವ-ಗ್ರಹಿಸುವ ಇವಳ ಗುಣ, ಜೊತೆಗೆ ವಿಜ್ಜಿಕೆಯ ರಾಜಕೀಯ ಮತ್ತು ಸಾಂಸ್ಕೃತಿಕ ಹಿನ್ನೆಲೆಯನ್ನು ಈ ನಾಟಕ ಪರಿಚಯಿಸುತ್ತದೆ. ಇಂಥ ಪ್ರತಿಭಾನ್ವಿತ ಕವಯತ್ರಿ ವಿಜ್ಜಿಕೆ ಕರ್ನಾಟಕದವಳೆಂಬುದು ಅಭಿಮಾನದ ವಿಷಯವಾಗಿದೆ.

## ಸಂಸ್ಕೃತ ಕಾವ್ಯಗಳು (ಐತಿಹಾಸಿಕ)

ಕರ್ನಾಟಕದ ಅರಸಿಯರು ಬಿಡಿ ಮುಕ್ತಕಗಳು, ಪಂಚಕ, ನಾಟಕಗಳನ್ನು ರಚಿಸಿರುವಂತೆ ಕಾವ್ಯಗಳನ್ನೂ ರಚಿಸಿ ತಮ್ಮ ಪಾಂಡಿತ್ಯ ಪ್ರಕಟಿಸಿದ್ದಾರೆ. ಈ ಮೇಲೆ ಕಂಡಂತೆ ಮುಕ್ತಕಗಳೆಲ್ಲಾ ಒಂದೆಡೆ ದೊರಕದೆ ಕೆಲವನ್ನು ಮಾತ್ರ ಗುರುತಿಸಿ ಒಂದೆಡೆ ಸೇರಿಸುವ ಪ್ರಯತ್ನ ಮುದ್ರಣ ತಂತ್ರಜ್ಞಾನ ಬಂದಮೇಲೆ ನಡೆಯುತ್ತಿರುವಂತೆಯೇ, ಅರಸಿಯರು ರಚಿಸಿರುವ ಕಾವ್ಯಗಳೂ ಕೂಡ ಸಮಗ್ರವಾಗಿ ದೊರೆತಿಲ್ಲ. ಗಂಗಾದೇವಿ ರಚಿಸಿರುವ ಮಧುರಾವಿಜಯಂ ಕೃತಿಯ ಏಕೈಕ ಹಸ್ತಪ್ರತಿ ದೊರೆತಿದ್ದು, ಅದೂ ಕೂಡ ಸಮಗ್ರವಾಗಿಲ್ಲ. ಕೆಲ ಭಾಗಗಳು ತೃಟಿತವಾಗಿದ್ದರೂ, ಐತಿಹಾಸಿಕವಾಗಿ ಮಹತ್ವ ಉಳ್ಳ ಈ ಕೃತಿಯನ್ನು ದೊರೆತಷ್ಟೇ ಭಾಗವನ್ನು ಅಚ್ಚಿಗೆ ಸಿದ್ಧಪಡಿಸಿ ಪ್ರಕಟಿಸಲಾಗಿದೆ. ಇಲ್ಲಿ ಅಧ್ಯಯನಕ್ಕೆ ಬಳಸಿರುವ ಮಧುರಾವಿಜಯಂ ಹಾಗು ವರದಾಂಬಿಕಾ ಪರಿಣಯ ಚಂಪೂ ಎರಡೂ ಕೃತಿಗಳೂ ಐತಿಹಾಸಿಕ ಕಾವ್ಯಗಳಾಗಿವೆ.

### ಗಂಗಾದೇವಿ

ಗಂಗಾದೇವಿಯು ವಿಜನಗರವನ್ನಾಳಿದ ಸಂಗಮ ವಂಶದ ಬುಕ್ಕರಾಯನ ಸೊಸೆ. ಕಂಪಣನ ಅರಸಿ. ತನ್ನ ಪತಿಯನ್ನು ಕುರಿತು ರಚಿಸಿರುವ ಕಾವ್ಯಕ್ಕೆ 'ಮಧುರಾವಿಜಯಂ' ಎಂದು ಹೆಸರಿಸಿದ್ದರೂ ಅದನ್ನು 'ವೀರಕಂಪರಾಯ ಚರಿತೆ' ಎಂದು ಕರೆದಿದ್ದಾಳೆ. ಈ ಹೆಸರುಗಳೇ ಸೂಚಿಸುವಂತೆ ಇದು ವೀರಕಂಪಣನ ಕುರಿತದ್ದಾಗಿದೆ ಜೊತೆಗೆ ಆತನು ಮಧುರೆಯಮೇಲೆ ಸಾಧಿಸಿದ ವಿಜಯದ ವಿಚಾರವನ್ನು ಕುರಿತಾಗಿ ರಚಿಸಿರುವ ಕಾವ್ಯವಾಗಿದೆ. ಸಾಧಾರಣವಾಗಿ ಆಸ್ಥಾನ ಕವಿಗಳು ಅರಸನ ಶೌರ್ಯ–ಸಾಹಸ ಯಶೋಗಾಥೆಗಳನ್ನು ಕುರಿತು ರಚಿಸುವುದನ್ನು ಕಾಣುತ್ತೇವೆ. ಇಲ್ಲಿ ಸ್ವತಃ ಅರಸಿಯೇ ತನ್ನ ಪತಿಯ ಯುದ್ಧಸಾಹಸಗಳನ್ನು ಕಣ್ಣಾರೆ ಕಂಡು ಅದನ್ನು ಕಾವ್ಯರೂಪದಲ್ಲಿ ಬಣ್ಣಿಸಿದ್ದಾಳೆ.

ಗಂಗಾದೇವಿಯು ಕಾವ್ಯದಲ್ಲಿ ತನ್ನ ಕುರಿತಾದ ಹೆಚ್ಚಿನ ವಿವರಗಳನ್ನು ನೀಡಿಲ್ಲ. ಕಂಪಣನ ತಂದೆ ಬುಕ್ಕನು ಮಗನಿಗೆ ಅನೇಕ ರಾಜಕನ್ಯೆಯರನ್ನು ತಂದು ಮದುವೆ ಮಾಡಿದನು ಎಂದು ಹೇಳಿ ಮುಂದಿನ ಪದ್ಯದಲ್ಲಿ ಅವರಲ್ಲಿ ಓರ್ವಳು ಇಂದ್ರನಿಗೆ ಶಚಿಯಂತೆಯೂ, ವಿಷ್ಣುವಿಗೆ ರಮೆಯಂತೆಯೂ, ಶಿವನಿಗೆ ಸತಿಯಂತೆಯೂ ಎಂದು ಹೇಳುವ ಭಾಗವು ಹಸ್ತಪ್ರತಿಯಲ್ಲಿ ತ್ರುಟಿತವಾಗಿದೆ. ಬಹುಶಃ ಇಲ್ಲಿ ತನ್ನ ಕುರಿತಾಗಿಯೇ ಹೇಳಿರಬಹುದು. ಈ ವಿಚಾರವಾಗಿ ವಿದ್ವಾಂಸರಿಗೆ ಕೆಲವು ಅನುಮಾನಗಳಿವೆ. ಇಲ್ಲಿ ಗಂಗಾದೇವಿ ತನ್ನನ್ನು ಕುರಿತು ಹೇಳಿದ್ದಾಳೆಯೇ? ಇವಳು ಹಲವರು ರಾಣಿಯರಲ್ಲಿ ಒಬ್ಬಳೇ ಅಥವಾ ಕೇಲವ ಪ್ರಿಯೆಯಾಗಿದ್ದಳೆ? ಇವಳು ತನ್ನ ತವರಿನ ವಿಷಯವನ್ನೂ ತಿಳಿಸಿಲ್ಲ. ಅಲ್ಲದೆ ತಾನು ಪಟ್ಟದರಾಣಿ ಅಥವಾ ಪಿರಿಯರಸಿ ಎಂಬ ಮಾತಾಗಲೀ ಬಾರದಿರುವುದು "ಅವಳು ಸಾಮಾನ್ಯ ಕುಲದವಳಿದ್ದರು ವಿದ್ವತ್ತೆ ಮತ್ತು ರಸಿಕತೆಯಿಂದ ರಾಜಕುಲ ಸಂಬಂಧವನ್ನು ಪಡೆದಿರಬಹುದೆಂಬ ಊಹೆಗೆ ಅವಕಾಶ ಕೊಡುತ್ತದೆ"[೩೭]. ಆದರೆ ರಾಜನೀತಿ ಮತ್ತು ರಾಜಕಾರ್ಯವನ್ನು ನಿರ್ವಹಿಸುವ ವಿಷಯದಲ್ಲಿ ಅವಳಾಡುವ ಮಾತು, ಅವಳ ರಾಜಕೀಯ ಪರಿಜ್ಞಾನಗಳು, ಅವಳಿಗಿರುವ ನಿಕಟವಾದ ರಾಜಕುಲ ಸಂಬಂಧವನ್ನು ಸೂಚಿಸುತ್ತವೆ. ಅಷ್ಟೇಅಲ್ಲದೆ "ಗಂಗಾದೇವಿಯು ರಾಜಕೀಯ ವಿದ್ಯಮಾನಗಳನ್ನು ಅರಿತವಳಾಗಿದ್ದ ಕಾರಣದಿಂದಲೇ ಬುಕ್ಕರಾಯ ಕಂಪಣನಿಗೆ ಮಾಡುವ ಉಪದೇಶಗಳನ್ನು ಗ್ರಹಿಸಿ, ಗ್ರಥಿಸಬಲ್ಲವಳಾಗಿದ್ದಳು"[೩೮].

ಮೊದಲೆರಡು ಸರ್ಗದ ಕೊನೆಯಲ್ಲಿ "ಇತಿ ಶ್ರೀಗಂಗಾದೇವ್ಯಾ ವಿರಚಿತ ಮಧುರಾವಿಜಯನಾಮ್ನೀ ವೀರಕಂಪರಾಯಚರಿತೆ" ಎಂದು ತನ್ನ ಹೆಸರನ್ನು ತಿಳಿಸಿದ್ದಾಳೆ. ಮುಂದೆ ಏಳನೆಯ ಸರ್ಗದಲ್ಲಿ ಕಂಪಣನು ತನ್ನ ಪ್ರಿಯೆ ಗಂಗಾದೇವಿಯನ್ನು ಕುರಿತು ಚಂದ್ರೋದಯದ ವರ್ಣನೆ ಮಾಡಲು ಹೇಳಿದನೆಂಬ ವಿಚಾರ ತಿಳಿಸಿದ್ದಾಳೆ. ಕೆಲವು ವರ್ಣನೆಗಳು ಇವಳು ತನ್ನ ಪ್ರೌಢವಯಸ್ಸಿನಲ್ಲಿ ಈ ಕಾವ್ಯವನ್ನು ರಚಿಸಿದ್ದಾಳೆನ್ನುವುದನ್ನು ತಿಳಿಸುತ್ತದೆ.

ಜೊತೆಗೆ ಇವಳ ರಸಿಕತೆ, ಸೌಂದರ್ಯ ಪ್ರಿಯತೆ, ರಾಜನೀತಿ, ವೀರವೃತ್ತಿ, ದೇಶಪ್ರೇಮ ಮೊದಲಾದ ಇವಳ ಗುಣಗಳು ಕಾವ್ಯದಲ್ಲಿ ಅಭಿವ್ಯಕ್ತಿಗೊಂಡಿದೆ.

ಕಾವ್ಯಾರಂಭದಲ್ಲಿ ಕವಯಿತ್ರಿಯು ದೇವತಾ ವಂದನೆಯ ನಂತರ ಕಾಳಾಮುಖ ಸಂಪ್ರದಾಯದ ಕ್ರಿಯಾಶಕ್ತ ಆಚಾರ್ಯರಿಗೆ ನಮಸ್ಕರಿಸಿರುವಳು. ವಾಲ್ಮೀಕಿ, ವ್ಯಾಸ, ಕಾಳಿದಾಸ, ಭಾಣ, ಭಾರವಿ, ದಂಡಿ, ಭವಭೂತಿಯರ ಕೃತಿಗಳ ಮಹಿಮೆ ಹೊಗಳಿರುವಳು. ಜೊತೆಗೆ ಕವಿ ಕರ್ಣಾಮೃತ, ಅಗಸ್ತ್ಯ, ಗಂಗಾಧರ, ವಿಶ್ವನಾಥ ಕವಿಗಳನ್ನು ಹೊಗಳಿದ್ದಾಳೆ. ಅಗಸ್ತ್ಯನು ಎಪ್ಪತ್ತುನಾಲ್ಕು ಕಾವ್ಯಗಳನ್ನು ರಚಿಸಿದ್ದಾನೆಂದು ತಿಳಿಸಿದ್ದಾಳೆ. ಗಂಗಾಧರನು ಭಾರತದ ಕಥೆಯನ್ನು ನಾಟಕರೂಪದಲ್ಲಿ ಬರೆದಿರುವುದಾಗಿಯೂ, ವಿಶ್ವನಾಥ ಕವಿಯನ್ನು ಹೊಗಳಿ 'ಆತನ ಕೃಪೆಯಿಂದ ತನಗೆ ಸಾರ್ವಜ್ಞ್ಯವು ದೊರೆಯಿತು' ಎಂದು ಹೇಳಿದ್ದಾಳೆ. ಇದರಿಂದ ವಿಶ್ವನಾಥ ಕವಿಯು ಇವಳ ವಿದ್ಯಾಗುರುವಾಗಿದ್ದಿರಬಹುದೆಂದು ಊಹಿಸಬಹುದಾಗಿದೆ. ಅಗಸ್ತ್ಯನು ವಿದ್ಯಾನಾಥನೆಂದು ಪ್ರಸಿದ್ಧನಾಗಿ, ಬಾಲಭಾರತ, ಪ್ರತಾಪರುದ್ರ ಯಶೋಭೂಷಣ, ಕೃಷ್ಣಚರಿತ ಮೊದಲಾದವುಗಳನ್ನು ಬರೆದ ಕವಿ. ಈತ ವಾರಂಗಲ್ಲಿನ ಕಾಕತೀಯ ಅರಸು ಪ್ರತಾಪರುದ್ರನ ಆಸ್ಥಾನ ಹಾಗೂ ವಿಜಯನಗರದ ಬುಕ್ಕನ ಆಸ್ಥಾನಗಳಲ್ಲಿದ್ದವನು. ಈ ವಿದ್ಯಾನಾಥನ ತಂಗಿಯ ಮಗ ಗಂಗಾಧರ, ಈ ಗಂಗಾಧರನ ಮಗನೇ ಗಂಗಾದೇವಿಯ ಗುರುವಾದ ವಿಶ್ವನಾಥ. ಹೀಗೆ ಗುರುಪರಂಪರೆಯನ್ನೂ ತನ್ನ ಸಮಕಾಲೀನ ಕವಿಗಳನ್ನೂ ತನ್ನ ಕಾವ್ಯದಲ್ಲಿ ಸ್ಮರಿಸಿದ್ದಾಳೆ.

**ಚರಿತ್ರೆಗೆ ಪೂರಕವಾಗುವ ಕಾವ್ಯ ವಿಚಾರ :** ರಾಜಕೀಯ ಘಟನೆಗಳನ್ನು ಕುರಿತಂತೆ ಮಹಿಳೆಯೊಬ್ಬಳು ರಚಿಸಿರುವ ಚಾರಿತ್ರಿಕ ಕಾವ್ಯವೆಂಬ ಹೆಗ್ಗಳಿಕೆಗೆ ಪಾತ್ರವಾದ ಈ ಕಾವ್ಯದಲ್ಲಿನ ಚಾರಿತ್ರಿಕ ಅಂಶಗಳನ್ನು ಗುರುತಿಸಿ ವಿಶ್ಲೇಷಿಸುವ ಅಗತ್ಯವಿದೆ.

ಕಾವ್ಯವು ವಿಜಯನಗರದ ಆಸ್ಥಾನ ಗುರುಗಳನ್ನು ಸ್ತುತಿಸಿದ್ದಾಳೆ. "ಸರ್ವಜ್ಞಗುರು ಅಭಿನವ ಶಿವಕ್ರಿಯಾಶಕ್ತಿಗುರು"ವಿಗೆ ಗಂಗಾದೇವಿ (೧–೪) ಗೌರವಸಲ್ಲಿಸಿದ್ದಾಳೆ. ವಿದ್ಯಾರಣ್ಯರು ಹಾಗೂ ವಿದ್ಯಾಶಂಕರರಂತೆ ಕ್ರಿಯಾಶಕ್ತಿ ಪಂಡಿತರು ಕೂಡ ವಿಜಯನಗರ ಸ್ಥಾಪನೆಗೆ ಮಾರ್ಗದರ್ಶನ ನೀಡಿದ ನಾಥಪಂಥೀಯ ಗುರುಗಳು. ಸಂಗಮವಂಶದ ಅರಸರು ತಮ್ಮ ಶಾಸನಗಳಲ್ಲಿ ಗುರುಗಳಾದ ಕ್ರಿಯಾಶಕ್ತಿಯನ್ನು ಸ್ಮರಿಸಿದ್ದಾರೆ. ಕ್ರಿ.ಶ.೧೩೭೮ರ ಚೆನ್ನರಾಯಪಟ್ಟಣದ ಶಾಸನವು "ವಿರೂಪಾಕ್ಷ ಸಾಕ್ಷತ್ ಕುಲಪರಮ ದೈವಂ ಕುಲಗುರು ಕ್ರಿಯಾಶಕ್ತಾಚಾರ್ಯ..." ಎಂದೂ, ಕ್ರಿ.ಶ.೧೩೯೮ರ ಹರಿಹರದ ತಾಮ್ರಶಾಸನವು "ರಾಯರಾಜಗುರು ಪಿತಾಮಹ ಕ್ರಿಯಾಶಕ್ತಿದೇವ ಎಂದೂ..." ಕರೆದಿರುವಂತೆ ಇವಳೂ ಕೂಡ

**ಅಸಾಧಾರಣ ಸಾರ್ವಜ್ಞ್ಯಂ ವಿಲಸಿತ್ ಸರ್ವಮಂಗಲ**
**ಕ್ರಿಯಾಶಕ್ತಿ ಗುರುಂ ವಂದೇ ತ್ರಿಲೋಚನೆ ಮಿವಾಪರಂ** ॥ ಎಂದು ಕುಲಗುರುಗಳನ್ನು ಸ್ತುತಿಸಿದ್ದಾಳೆ.ಆದರೆ ಇವಳು ವಿದ್ಯಾರಣ್ಯರನ್ನಾಗಲಿ, ವಿದ್ಯಾಶಂಕರರನ್ನಾಗಲೀ ಉಲ್ಲೇಖಿಸಿಲ್ಲ ಎನ್ನುವುದು ಗಮನಾರ್ಹ ವಿಚಾರವಾಗಿದೆ.

ವಿಜಯನಗರ ಸಂಸ್ಥಾಪಕರು ಆಂಧ್ರ ಮೂಲದವರಲ್ಲ ಕರ್ನಾಟಕದ ಮೂಲದವರು ಎಂಬ ಸಿದ್ಧಾಂತಕ್ಕೆ ಪೂರಕವಾದ ಉಲ್ಲೇಖಗಳು ಈ ಕಾವ್ಯದಲ್ಲಿವೆ. ಬುಕ್ಕನನ್ನು 'ಕರ್ನಾಟಲೋಕ ನಯನೋತ್ಸವ ಪೂರ್ಣಚಂದ್ರ' (೧–೭೪) ಎಂದು ಕವಯತ್ರಿ ಬಣ್ಣಿಸಿದ್ದಾಳೆ. ಕಂಪಣನು ಕರ್ನಾಟ ಕುಲ ಪ್ರದೀಪ" (೯–೩೭) ನಾಗಿದ್ದನು. ಅಂತಃಪುರದ ಸ್ತ್ರೀಯರ ವರ್ಣನೆಯನ್ನು ಮಾಡುವಾಗ ಕುಂತಳದ ನಾರಿಯರೆಂದೇ ಕರೆದಿದ್ದಾಳೆ (೫–೨೦, ೨೧ ೨೨ ೫೩ ೫೪ ೫೫ ೫೮ ೭೪ ೭೫). ಕಂಪಣನು ಆಂಧ್ರರೆಂಬ ಅಂಧಕಾರವನ್ನು ನಾಶಮಾಡುವ ಸೂರ್ಯನು (೯–೩೦)ವಿಜಯನಗರದ ಸಂಸ್ಥಾಪಕರು ಆಂಧ್ರಮೂಲದವರಾಗಿದ್ದರೆ ಈ ವಿಶೇಷವಾದ ಬಳಕೆ ಸಾಧ್ಯವಿರುತ್ತಿರಲಿಲ್ಲ

ಎನ್ನುವುದು ವಿದ್ವಾಂಸರ ಅನಿಸಿಕೆ. ಕಂಪಣನ ಸೈನ್ಯದ ಬಗ್ಗೆ ಹೇಳುವಾಗಲೆಲ್ಲ ಕರ್ಣಾಟಕಸೇನೆ ಎಂದೇ ಹೇಳಿದ್ದಾಳೆ. ಕಂಪಣನನ್ನು 'ಕರ್ನಾಟಕ ಕುಲದೀಪ' ನೆಂದು ಕರೆದಿದ್ದಾಳೆ.

ಈ ಕಾವ್ಯದ ನಾಯಕನಾದ ಕಂಪಣನ ಕುರಿತಂತೆ ಕ್ರಿ.ಶ.೧೩೫೧ ರಿಂದ ೧೩೭೫ರ ಕಾಲದಲ್ಲಿ ಸುಮಾರು ೧೫ ಕ್ಕೂ ಹೆಚ್ಚಿನ ಶಾಸನಗಳು ಲಭಿಸುತ್ತದೆ. ಕಂಪಣನು ತುಂಡೀರಮಂಡಲದ ಮೇಲೆ ದಂಡೆತ್ತಿ ಹೋಗುವ ವೇಳೆಗಾಗಲೆ ಕೋಲಾರದ ಪ್ರದೇಶಗಳಲ್ಲಿ ಆಳ್ವಿಕೆ ನಡೆಸುತ್ತಿದ್ದ ವಿಚಾರ ಶಾಸನಗಳಲ್ಲಿ ತಿಳಿದು ಬರುತ್ತದೆ[೬೯]. ಕ್ರಿ.ಶ.೧೩೪೩–೬೧ರ ವೇಳೆಯಲ್ಲಿ ಈ ಭಾಗಗಳಲ್ಲಿ ಕಂಪಣನ ಶಾಸನಗಳು ಕಂಡುಬರುತ್ತವೆ. ಆದರೆ ಗಂಗಾದೇವಿ ಈ ಪ್ರದೇಶಗಳಲ್ಲಿನ ಇವನ ಆಳ್ವಿಕೆಯ ವಿಚಾರವನ್ನು ಗುರುತಿಸಿಲ್ಲ. ಬಹುಶಃ ಮಧುರಾ ವಿಜಯದ ವಿಚಾರ ಮಾತ್ರ ಇವಳಿಗೆ ಮುಖ್ಯವಾಗಿ ತೋರಿರಬೇಕು.

ನಾಲ್ಕನೆಯ ಸರ್ಗದಲ್ಲಿ ಯುದ್ಧಕ್ಕೆ ಹೊರಡುವ ಚಿತ್ರಣವನ್ನು ನೀಡುವಾಗ ಕವಯತ್ರಿಯು ಕಂಪಣನಿಗೆ ಚೋಳ, ಕೇರಳ ಪಾಂಡ್ಯರೆಲ್ಲರೂ ತಲೆಬಾಗಿದರು ಎಂದು ಉತ್ಪ್ರೇಕ್ಷೆಯಿಂದ ಹೇಳಿದ್ದಾಳೆ. ಈ ಸಂದರ್ಭದಲ್ಲಿ ಪಾಂಡ್ಯರ ತುಂಡರಸರಿದ್ದರೂ, ಚೋಳರು ಇರಲಿಲ್ಲ.

ಈ ಕಾವ್ಯದಲ್ಲಿ ಬರುವ ತುಂಡೀರಮಂಡಲದ ಚಂಪ ಯಾರಿರಬಹುದೆಂದು ಇತಿಹಾಸಕಾರರು ಸಾಕಷ್ಟು ಚರ್ಚೆ ನಡೆಸಿದ್ದಾರೆ. ಕ್ರಿ.ಶ.೧೩೩೮–೩೯ರಲ್ಲಿ 'ಶಂಬುವರಾಯ' ಎಂಬುವವನು ಚಿಂಗಲ್ಪಟ, ಆರ್ಕಾಟ್ ಸುತ್ತಮುತ್ತಲ ಪ್ರದೇಶಗಳನ್ನೊಳಗೊಂಡ ರಾಜ್ಯವನ್ನಾಳುತ್ತಿರುತ್ತಾನೆ. ಶಾಸನದಲ್ಲಿ ಇವನು 'ವೀರಚಂಪನ ಶಂದಿ' ಎಂದೂ, ಇವನು ಹೊರಡಿಸಿರುವ ನಾಣ್ಯದಲ್ಲಿ 'ವೀರಚಂಪನಕುಳಿಗೈ' ಎಂಬ ಉಲ್ಲೇಖವಿರುವುದರಂದ ಕಂಪಣನು ಹೋರಾಡಿದ್ದು ಈತನ ವಿರುದ್ಧವೇ ಎಂಬ ತೀರ್ಮಾನಕ್ಕೆ ಇತಿಹಾಸಕಾರರು ಬರುತ್ತಾರಾದರೂ, ಯುದ್ಧದಲ್ಲಿ ಇವನು ಸೋತು ಶರಣಾದನೇ ವಿನಃ ಗಂಗಾದೇವಿಯು ಹೇಳಿರುವಂತೆ ಯುದ್ಧದಲ್ಲಿ ಸಾಯುವುದಿಲ್ಲ[೭೦]. ಈ ಯುದ್ಧವು ಕ್ರಿ.ಶ.೧೩೬೧ರಲ್ಲಿ ನಡೆದಿರಬೇಕೆಂದು ತರ್ಕಿಸಲಾಗಿದೆ. ಆದರೆ ಈ ಕಾಲದ ನಂತರವೂ ವೀರಚಂಪನ ಶಂದಿಯ ದಾನ ಶಾಸನಗಳು ಈ ಭಾಗದಲ್ಲಿ ಲಭಿಸುತ್ತದೆ. ಬಹುಶಃ ಯುದ್ಧಾನಂತರ ಕಂಪಣನಿಗೆ ಸಾಮಂತರಾಗಿ ಈತ ಆಳ್ವಿಕೆ ನಡೆಸುತ್ತಿರಬೇಕು. ಕಂಪಣನ ಪ್ರತಾಪವನ್ನು ಪರಾಕಾಷ್ಠೆಗೊಯ್ಯಲು ಗಂಗಾದೇವಿಯು ಚಂಪನು ಈ ಯುದ್ಧದಲ್ಲಿ ಸತ್ತನೆಂದು ತಿಳಿಸಿರಬಹುದು.

ಎಂಟನೆಯ ಸರ್ಗದಲ್ಲಿ ಗಂಗಾದೇವಿಯು ನೀಡಿರುವ ಯವನರ ದಾಳಿಯ ಪರಿಣಾಮದ ಚಿತ್ರಣವು ಅಲ್ಲಿನ ಸ್ಥಿತಿಗತಿಗಳಿಗೆ ಹಿಡಿದ ಕೈಗನ್ನಡಿಯಂತಿದೆ. ಶಾಸನಗಳಲ್ಲಿ ಸೂಚ್ಯವಾಗಿ ಸಿಗುವ ಈ ಅಂಶಗಳು ಕಾವ್ಯದಲ್ಲಿ ಒಂದು ಸರ್ಗದಷ್ಟು ವಿಸ್ತಾರವಾಗಿದೆ.

ಈ ಕಾವ್ಯದ ಮುಖ್ಯ ವಸ್ತು ಮಧುರೆಯ ಯುದ್ಧವನ್ನು ಕುರಿತದ್ದಾಗಿದ್ದರೂ, ಈ ಯುದ್ಧಕ್ಕೂ ೧೦ ವರ್ಷ ಪೂರ್ವದಲ್ಲಿ ಕಂಪಣನು ತೊಂಡೈಮಂಡಲವನ್ನು ಸ್ವಾಧೀನ ಪಡೆಸಿಕೊಂಡು (ಕ್ರಿ.ಶ.೧೩೬೦) ಹತ್ತು ವರ್ಷ ರಾಜ್ಯಭಾರ ನಡೆಸಿದ ವಿಚಾರ ಸುದೀರ್ಘವಾಗಿ ಬಂದಿದೆ. ಕ್ರಿ.ಶ.೧೩೭೧ರಲ್ಲಿ ಮಧುರೆಯ ಸುಲ್ತಾನನನ್ನು ನಿರ್ಮೂಲಮಾಡಿದ ವಿಚಾರ ಕಾವ್ಯದ ಹೆಸರು ಸಾರ್ಥಗವಾಗುವ ಘಟನೆ ಎಂಟು ಹಾಗೂ ಒಂಬತ್ತನೆಯ ಸರ್ಗದಲ್ಲಿ ಬಣ್ಣಿತವಾಗಿದೆ. ಈ ಕಾವ್ಯದಲ್ಲಿ ಬಣ್ಣಿತವಾಗಿರುವ ಘಟನೆಗಳು ಕ್ರಿ.ಶ.೧೩೬೦ ರಿಂದ ೧೩೭೧ರ ವರೆಗಿನವು ಎಂದು ಹೇಳಬಹುದು.

ಗಂಗಾದೇವಿಯು ಪ್ರತ್ಯಕ್ಷದರ್ಶಿಯಂತೆ ಮಧುರಾವಿಜಯದ ಪ್ರಸಂಗವನ್ನು ಕಾವ್ಯಮಯವಾಗಿ ಬಣ್ಣಿಸಿದ್ದಾಳೆ. ನಾಲ್ಕು, ಎಂಟು, ಬಂಬತ್ತನೆಯ ಸರ್ಗಗಳು ಐತಿಹಾಸಿಕ ವಿಚಾರಗಳನ್ನೊಳಗೊಂಡಿದೆ. ನಾಲ್ಕನೆಯ ಸರ್ಗದಲ್ಲಿ ಕಂಪನು ತುಂಡೀರ ಮಂಡಲದ ಚಂಪನೊಂದಿಗೆ ಹೋರಾಡಿದ ವಿಚಾರ, ಎಂಟನೆಯ ಸರ್ಗದಲ್ಲಿ ಯವನರ ದಾಳಿಯಿಂದ

ಶ್ರೀರಂಗಂನ ದೇವಾಲಯ ಹಾಳಾಗಿದ್ದು ಹಾಗೂ ಅವರ ಧಾಳಿಯ ಒಟ್ಟಾರೆ ಪರಿಣಾಮದ ಚಿತ್ರಣವಿದೆ. ಒಂಬತ್ತನೆಯ ಸರ್ಗದಲ್ಲಿ ವೀರಕಂಪರಾಯ ಮಧುರೆಯ ಸುಲ್ತಾನರನ್ನು ಸೋಲಿಸಿ, ನಗರವನ್ನು ಅವರ ಮುಷ್ಟಿಯಿಂದ ಬಿಡುಗಡೆ ಗೊಳಿಸಿದ ವಿಚಾರ ಬಂದಿದೆ. "ಇಲ್ಲಿ 'ತಾಪವಳಿಯಲಿ ಶಾಂತಿಯಾಳಲಿಳೆಯ' ಎಂಬ ಇವಳ ಮಹಾ ಆಶಯ ಕೈಗೂಡುತ್ತದೆ"[೪೧].

ಯುದ್ಧವು ಮಧುರೆಯಲ್ಲಿ ನಡೆದುದರಿಂದ ಅಲ್ಲಿರುವ ವೈಗೈ ನದಿಯ ಉಲ್ಲೇಖ ಕಾವ್ಯದಲ್ಲಿ ಬರಬೇಕಿತ್ತು. ಆದರೆ ಈ ಕಾವ್ಯದಲ್ಲಿ ಆರಂಭದಿಂದಲೂ ತಾಮ್ರಪರ್ಣಿ ನದಿಯ ಉಲ್ಲೇಖವೇ ಕಂಡುಬರುತ್ತದೆ. ಇದಕ್ಕೆ ಕಾರಣ ಈ ನದಿಯು ಪುರಾಣ ಪ್ರಸಿದ್ಧವಾದದ್ದು, ನದಿಯ ಬಣ್ಣ ಕೆಂಪಾಗಿದ್ದು, ವೀರಭಾವಗಳ ವರ್ಣನೆಗೆ ಅನ್ವರ್ಥಕವಾಗಿದೆ, ಅಲ್ಲದೆ ತಾಮ್ರಪರ್ಣಿಯಿರುವ ತಿರುನೆಲ್ವೇಲಿ ಇನ್ನೂ ದೂರದ ಪ್ರದೇಶವಾಗಿರುವುದರಿಂದ ಅಲ್ಲಿಯವರೆಗೂ ಅರಸನು ದಂಡಯಾತ್ರೆ ವಿಸ್ತರಿಸಿತ್ತೆಂದು ಬಣ್ಣಿಸುವ ಚಪಲವೂ ಇದ್ದಿರಬಹುದು.

ತಾನು ಗೆದ್ದ ಪ್ರದೇಶದಲ್ಲಿ ಕಂಪನು ಆಳ್ವಿಕೆನಡೆಸಿದ ವೈಖರಿಯ ಪರಿಚಯ ಮಾಡಿಕೊಟ್ಟಿದ್ದಾಳೆ. ಚಂಪರಾಯನನ್ನು ಸದೆಬಡಿದು ಕಾಂಚೀನಗರದಲ್ಲಿ ಜಯಪ್ರಶಸ್ತಿಯನ್ನು ಕೆತ್ತಿಸಿ ಕಂಪನು ಮರಕತನಗರದಲ್ಲಿ ಕೆಲಕಾಲ ರಾಜ್ಯವಾಳಿದನು. ಇಲ್ಲಿನ ಇವನ ರಾಜ್ಯಭಾರವನ್ನು ಕುರಿತು 'ಶತ್ರುಗಳ ದೇಶದಲ್ಲಿ ರಾಜ್ಯಭಾರವನ್ನಾರಂಭಿಸಿದ ಕಂಪಣನು ಜನಪ್ರಿಯನಾದನು. ಆದರೆ ಜಾಗರೂಕನಾಗಿದ್ದನು. ಅವನು ಹೇರಿದ ಕರಭಾರಗಳು ಸೌಮ್ಯವಾಗಿದ್ದವು. ದೇಶವೆಲ್ಲ ಸಸ್ಯಗಳಿಂದ ತುಂಬಿ ಸಂವೃದ್ಧಿಯಿಂದ ಪುಲಕಿತವಾದಂತೆ ಕಂಡುಬರುತ್ತಿತ್ತು. ಅನೇಕ ಸಾಮಂತರಾಜರು ಇವನ ಭೇಟಿಗಾಗಿ ಕಾದಿರುತ್ತಿದ್ದರು. ಕವಿಗಳು ಗಮಕಿಗಳು ಇವನ ಆಸ್ಥಾನದಲ್ಲಿದ್ದರು. ನೃತ್ಯಗೀತ ಮೊದಲಾದ ಲಲಿತಕಲೆಗಳಲ್ಲಿ ವಿರೋಚಿತವಾದ ವಿನೋದಗಳಲ್ಲಿ ಕಾಲ ಕಳೆಯುತ್ತಿದ್ದನು.

**ಕಾವ್ಯವಸ್ತು:** ಮೊದಲನೆಯ ಸರ್ಗದಲ್ಲಿ ವಿಜಯನಗರದ ಅರಸು ಬುಕ್ಕರಾಜನು ವಿಜಯನಗರವನ್ನು ವೈಭವೋಪೇತವಾಗಿ ಆಳ್ವಿಕೆ ನಡೆಸುತ್ತಿದ್ದ. ತುಂಗಭದ್ರಾನದಿ ದಂಡೆಯ ಮೇಲಿನ ಈ ನಗರದ ಸುಂದರವರ್ಣನೆಯನ್ನು ಇಲ್ಲಿ ನೀಡಲಾಗಿದೆ. ಎರಡನೆಯ ಸರ್ಗದಲ್ಲಿ ಬುಕ್ಕರಾಯನ ಮಡದಿ ದೇವಾಯಿಯು ತಾಮ್ರಪರ್ಣಿಯಲ್ಲಿ ಸ್ನಾನಮಾಡಬೇಕೆಂಬ ಬಯಕೆಯನ್ನು ಪತಿ ನೆರವೇರಿಸುತ್ತಾನೆ. ತಂಪಾಗಿ ಹರಿಯುತ್ತಿದ್ದ ತುಂಗಭದ್ರೆಯನ್ನು ಬಿಟ್ಟು ಸೇನಾಸಾಗರದ ತರಂಗಗಳಿಂದ ತುಂಬಿದ ತಾಮ್ರಪರ್ಣಿಯಲ್ಲಿ ಮೀಯಲು ಇಚ್ಛಿಸಿದ ಇವಳ ಬಯಕೆಯಲ್ಲಿಯೇ, ವೀರ ಕುಮಾರ ಹುಟ್ಟುವ ಸೂಚನೆಗಳನ್ನು ಕವಯತ್ರಿಯು ತಂದಿದ್ದಾಳೆ. ಶತ್ರುಗಳೆದೆಯಲ್ಲಿ ಭೀತಿಯನ್ನು ಉಂಟುಮಾಡುವವನೆಂಬ ಅರ್ಥದಲ್ಲಿ ಮಗುವಿಗೆ ಕಂಪಣ ಎಂದು ಹೆಸರಿಡಲಾಗುತ್ತದೆ ಎಂದು ಅವನ ಹೆಸರನ್ನು ಅನ್ವರ್ಥವಾಗಿ ಬಳಸಿಕೊಂಡಿರುವ ಕುಶಲತೆಯನ್ನಿಲ್ಲಿ ಕಾಣಬಹುದು. ಕಂಪಣನೂ ಸೇರಿದಂತೆ ದೇವಾಯಿಯಲ್ಲಿ ಒಟ್ಟು ಮೂವರು ಮಕ್ಕಳು ಜನಿಸುತ್ತಾರೆ.

ಮೂರನೆಯ ಸರ್ಗದಲ್ಲಿ ಕಂಪಣನ ಚೌಲಕರ್ಮ ಸಂಸ್ಕಾರ, ಶಸ್ತ್ರಾಸ್ತ್ರ ವಿದ್ಯೆಗಳಲ್ಲಿ ಶಿಕ್ಷಣ ಮೊದಲಾದ ವಿವರಣೆಗಳಿವೆ. ಇಲ್ಲಿ ಕಂಪಣನ ವಿವಾಹ ವಿಚಾರವಿದೆ. ಹಸ್ತಪ್ರತಿಯಲ್ಲಿ ತೃಟಿತವಾಗಿರುವ ಭಾಗದಲ್ಲಿ ಗಂಗಾದೇವಿಯ ಹೆಸರಿರಬೇಕೆನ್ನುವುದು ವಿದ್ವಾಂಸರ ಅಭಿಪ್ರಾಯ. ಕಂಪಣನ ಶಾಸನವೊಂದರಲ್ಲಿ ಇವನ ಅರಸಿ ರಾಮಾಯಿ ಎಂಬುವವಳ ಏನಾಡಿ ಸೂಡೂರಿನ ಶಾಸನದಲ್ಲಿ ಉಲ್ಲೇಖ ಸಿಗುತ್ತದೆ ಆದರೆ ಗಂಗಾದೇವಿ ಅವಳನ್ನು ಹೆಸರಿಸಿಲ್ಲ[೪೨] ಮತ್ತು ರಾಜನೀತಿಯನ್ನೂ ಒಳಗೊಂಡಂತೆ ಹಲವಾರು ಉತ್ತಮ ವಿಚಾರಗಳನ್ನು ಕುರಿತಂತೆ ಮಗನಿಗೆ ತಂದೆ ಬುಕ್ಕನ ಉಪದೇಶ. ತುಂಡೀರಮಂಡಲದ ಚಂಪರಾಯನ ಮೇಲೆ ದಂಡೆತ್ತಿಹೋಗುವಂತೆ ಆದೇಶ, ರಾಜ್ಯವು ಸುಭದ್ರವಾಗಿರುವಾಗಲೇ ತುರುಷ್ಕರ ಭದ್ರಕೋಟೆಯಂತಿದ್ದ ಮಧುರೆಯ ಮೇಲೆ ಆಕ್ರಮಣ ಮಾಡುವ ಸೂಚನೆ ಇಲ್ಲಿ ಬಂದಿದೆ.

ನಾಲ್ಕನೆಯ ಸರ್ಗದಲ್ಲಿ ವಿಜಯಯಾತ್ರೆಗೆ ಹೊರಟ ಸುದೀರ್ಘ ವರ್ಣನೆಯಿದೆ. ತುಂಡೀರ ರಾಜನ ಮೇಲೆ ಆನೆ. ಆಶ್ವ, ಪದಾತಿಯನ್ನೊಳಗೊಂಡ ಬೃಹತ್ಸೇನೆಯೊಡನೆ ಜೈತ್ರಯಾತ್ರೆಗೆ ಹೊರಟು ಕರ್ನಾಟಕದ ಗಡಿಯನ್ನು ದಾಟಿದ ರೋಚಕ ವಿವರಣೆಯನ್ನು ನೀಡಿದ್ದಾಳೆ. ರೌದ್ರ ರಣಭೇರಿಯ ಘೋರ ಶಬ್ದವು ಪರ್ವತದ ಗುಹೆಯನ್ನೇ ಆವರಿಸಿರುವಾಗ ವೈರಿಗೆ ಇನ್ನು ಆಶ್ರಯವೆಲ್ಲಿ (೪–೫) ಎಂದು ಜೈತ್ರಯಾತ್ರೆಗೆ ಇವನು ಹೊರಟ ಪರಿಯನ್ನು ಬಣ್ಣಿಸಿದ್ದಾಳೆ. ವಿರಿಂಚಿಪುರದಲ್ಲಿ ಬಿಡಾರವನ್ನು ಹೂಡಿ, ದ್ರಾವಿಡ ರಾಜನೊಡನೆ ಹೋರಾಟ ಮಾಡಿದುದು, ಚಂಪರಾಯನ ಪರಾಜಯ, ಆತನ ಮರಣ, ವಿಜಯದೊಡನೆ ಕಾಂಚಿಯ ಕಡೆಗೆ ಪ್ರಯಾಣ, ತುಂಡೀರ ಮಂಡಲವನ್ನು ತನ್ನಾಳ್ವಿಕೆಗೆ ವಶಪಡಿಸಿಕೊಂಡುದು ಮೊದಲಾದ ವಿಷಯಗಳು ಈ ಸರ್ಗದಲ್ಲಿ ವರ್ಣಿತವಾಗಿವೆ.

ಐದನೆಯ ಸರ್ಗದಲ್ಲಿ ಹೊಸದಾಗಿ ರಾಜ್ಯವನ್ನು ಗೆದ್ದ ತರುವಾಯ ಆ ಪ್ರದೇಶದಲ್ಲಿ ಎಲ್ಲಾ ಜನರ ಮೆಚ್ಚುಗೆಗೆ ಪಾತ್ರನಾಗಿ, ಮರಾಟಕವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಮಗಧ, ಮಾಳ್ವ, ಸೇವು, ಕೇರಳ, ಗೌಡ ಮುಂತಾದ ಪ್ರದೇಶಗಳ ರಾಜರ ಮನ್ನಣೆಗೆ ಕಂಪಣನು ಪಾತ್ರನಾದ ವಿಷಯ ನಿರೂಪಿತವಾಗಿದೆ.

ಆರನೆಯ ಸರ್ಗದಲ್ಲಿ ಕಂಪಣನು ಜಲಕ್ರೀಡೆ ಹಾಗೂ ವನವಿಹಾರದಲ್ಲಿ ಕಳೆದ ಸನ್ನಿವೇಶಗಳು ಚಿತ್ರಿತವಾಗಿವೆ.

ಏಳನೆಯಸರ್ಗದಲ್ಲಿರಾಜಕುಮಾರನಾದ ಕಂಪಣನಿಗೂ, ಆತನ ನೆಚ್ಚಿನ ಮಡದಿ ಗಂಗಾದೇವಿಗೂ ನಡೆದ ಸಂಭಾಷಣೆಯ ವಿವರಗಳ ಜೊತೆಗೆ ಕಂಪಣನು ವಸಂತಋತುವನ್ನು ವರ್ಣಿಸುವಂತೆ ಗಂಗಾದೇವಿಯನ್ನು ಕೇಳಿಕೊಂಡುದು ಹಾಗೂ ಸೂರ್ಯೋದಯ, ಚಂದ್ರೋದಯ ವರ್ಣನೆಗಳು ಪ್ರಕೃತಿಯ ಹಿನ್ನೆಲೆಯ ವಿವರಣೆಯಲ್ಲಿ ಮೂಡಿ ಬಂದಿದೆ.

ಪಾಂಡ್ಯರಾಜ್ಯಲಕ್ಷ್ಮಿಯು ಕಂಪಣನ ಕನಸಿನಲ್ಲಿ ಬಂದು ದಕ್ಷಿಣದೇಶದಲ್ಲಿ ಮುಸಲ್ಮಾನರಿಂದ ಆಗುತ್ತಿದ್ದ ಅನ್ಯಾಯ, ಅತ್ಯಾಚಾರಗಳನ್ನು ಮತ್ತು ದೇವಾಲಯಗಳ ದುಸ್ಥಿತಿಯನ್ನು ವರ್ಣಿಸಿ, ಅವರ ಮೇಲೆ ದಂಡೆತ್ತಿ ಹೋಗಿ ದಕ್ಷಿಣ ದೇಶವನ್ನು ದುಷ್ಟರಿಂದ ವಿಮೋಚನೆಗೊಳಿಸಬೇಕೆಂದು ಆದೇಶ ನೀಡಿ ಆ ಕಾರ್ಯಕ್ಕಾಗಿ ಒಂದು ದಿವ್ಯ ಖಡ್ಗವನ್ನು ನೀಡಿದ ವಿಷಯವು ಎಂಟನೆಯ ಸರ್ಗದಲ್ಲಿ ಪ್ರಸ್ತಾಪಿತವಾಗಿದೆ. ಒಂಬತ್ತನೆಯ ಸರ್ಗದಲ್ಲಿ ಕಂಪಣ ಅನಂತರ ಮಧುರೆಯ ಮೇಲೆ ದಂಡೆತ್ತಿಹೋಗುವ ವರ್ಣನೆ ಇದೆ. ಇಲ್ಲಿ ಮದವೇರಿದ ಆನೆ, ಯುದ್ಧರಂಗದಲ್ಲಿ ಮಡಿದ ವೀರರು, ಅಲ್ಲಿ ಹರಿಯುವ ಆನೆಗಳ ರಕ್ತವನ್ನು ಕಂಡಾಗ 'ಒಂದಲ್ಲ ಹರಿಯುತಿವೆ ನೂರಾರು ತಾಮ್ರಪರ್ಣಿಗಳು' (೯–೧೭)ಎಂಬ ಚಿತ್ರಣಕೊಡುತ್ತಾಳೆ. ಕಡೆಗೆ ಕಂಪನು ದಿವ್ಯಸ್ತ್ರೀ ನೀಡಿದ ಖಡ್ಗದಿಂದ ವೈರಿಯ ರುಂಡವನ್ನು ಬೀಸಿ ಚಂಡಾಡುತ್ತಾನೆ. (೯–೧೮) 'ಕರ್ನಾಟಕ ಕುಲದ ದೀಪ ಬೆಳಗುತ್ತದೆ' ಇವನ ವಿಜಯದಿಂದ 'ಕಾಳ್ಗಿಚ್ಚು ನಂದಿದ ವನದಂತೆ, ಗ್ರಹಣದಿಂದ ಮೋಕ್ಷಪಡೆದ ಬಾನಿನಂತೆ' ಮಧುರೆಯು ದುಷ್ಟರ ಮುಷ್ಟಿಯಿಂದ ಬಿಡುಗಡೆ ಗೊಂಡಿತೆಂದು ಬಣ್ಣಿಸಿದ್ದಾಳೆ. ಇಷ್ಟಾದರೂ ಕಂಪಣನು ವಿಜಯೋನ್ಮತ್ತನಾಗದೆ, 'ಅಳಿದುಳಿದ ವೈರಿಗಳ ರಕ್ಷಿಸುವೆನೆಂಬ ಭರವಸೆಯ ಡಂಗುರವನ್ನು ಹೊಡೆಸಿ.. ದೇಗುಲವನ್ನು ಸಂರಕ್ಷಿಸಿ ಅದಕ್ಕೆ ಅನೇಕ ದತ್ತಿಗಳನ್ನು ಬಿಟ್ಟ ವಿವರಗಳು ಬಂದಿವೆ. ಇಲ್ಲಿಗೆ ಕಾವ್ಯ ಮುಕ್ತಾಯಗೊಳ್ಳುತ್ತದೆ.

**ಕಾವ್ಯಾಂಶ**

ಕಾವ್ಯದಲ್ಲಿ ಅಲಂಕಾರ, ಪ್ರಕೃತಿ ವರ್ಣನೆ, ಕಾವ್ಯಪ್ರಯೋಜನ, ಸಹೃದಯ ಗುಣ–ದೋಷ ಮೊದಲಾದ ವಿಚಾರಗಳನ್ನು ಯತೋಚಿತವಾಗಿ ತಂದಿದ್ದಾಳೆ. ಇಲ್ಲಿನ ಕೆಲವು ಹಿತವಚನಗಳು ಸೊಗಸಾಗಿವೆ ಮದಾಂಧರಾದವರು ಮಾತ್ರ ಮದವೇರಿದ ಆನೆಗಳಂತೆ ನಿಯಂತ್ರಕರ ಮಾತು ಕೇಳುವುದಿಲ್ಲ. ಅಹಂಕಾರಿಗಳ ದೃಷ್ಟಿಯು ನಿರ್ದುಷ್ಟವಾದುದನ್ನು ಕಾಣದು; ಅಂಥವರನ್ನು ಆಪತ್ತುಗಳು ಆವರಿಸುವವು; ಸ್ತ್ರೀ ಮೃಗಯಾ, ಮದಿರೆಗಳು ಸರ್ವಸ್ವವನ್ನು ಹಾಳುಮಾಡುವುದು. ಪ್ರಜೆಗಳಿಗೆ ನಿಷ್ಠುರ ಮಾತುಗಳನ್ನಾಡಬಾರದು; ಪ್ರಜೆಗಳ ಮೇಲೆ

ಅತಿಯಾದ ದಂಡೋಪಾಯವನ್ನು ಪ್ರಯೋಗಿಸುವುದೆಂದರೆ ತಾನು ಹತ್ತಿದ ಗಿಡದ ಟೊಂಗೆಯನ್ನು ತಾನೇ ಕಡಿದುಕೊಂಡಂತೆ; ಅಯೋಗ್ಯರಾದವರಿಗೆ ರಾಜಾನುಗ್ರಹವನ್ನು ತೋರಿಸುವುದು ಯಜ್ಞಾಗ್ನಿಕುಂಡದಲ್ಲಿ ಹಾಕಬೇಕಾದ ಹವಿಸ್ಸನ್ನು ಸ್ಮಶಾನಚಿತೆಯಲ್ಲಿ ಹಾಕಿದಂತೆ ಎಂಬ ಮೊದಲಾದ ಲೋಕೋಕ್ತಿಗಳಿಗೆ ಕಾವ್ಯರೂಪ ನೀಡಿದ್ದಾಳೆ.

ಕಾವ್ಯದಲ್ಲಿ ಉಪಮೆ, ರೂಪಕ ಮೊದಲಾದ ಅಲಂಕಾರಗಳನ್ನು ತಂದಿದ್ದಾಳೆ. ಈ ಕೆಳಗಿನ ಪದ್ಯದಲ್ಲಿ ಅತಿಶಯೋಕ್ತ್ಯಲಂಕಾರವನ್ನು ಗಮನಿಸಬಹುದು.

**ವಿಹಾಯಮಧ್ಯಂ ಯದಿ ಲಕ್ಷ್ಮರೇಖಯಾ ಬಹಿಃ ಪ್ರಸಾರ್ಯೇತ ಸುಧಾಂಶುಮಂಡಲಮ್**
**ದರೋದಿತಶ್ಮಶ್ರುಧೃತಶ್ರಿಯಸ್ತದಾ ತದಾನನೇಂದೋರುಪಮಾನತಾಂ ವ್ರಜೇತ್** ॥ (3–12)

ಇಲ್ಲಿ ಇವಳು ಕಂಪಣನನ್ನು ಚಂದ್ರನಿಗೆ ಹೋಲಿಸಿಲ್ಲ ಬದಲಿಗೆ ಚಂದ್ರನನ್ನೇ ಕಂಪಣನಿಗೆ ಹೋಲಿಸಿ, ಚಂದ್ರನಲ್ಲಿರುವ ಕಪ್ಪುಕಲೆ ನಡುವಿನಲ್ಲಿದ್ದು, ತುಸು ನೀಳವಾಗಿ ಹೊರಚಾಚಿದ್ದಿದ್ದರೆ ಕುಡಿಮೀಸೆಯ ಕಂಪಣನ ಮುಖವನ್ನು ಸ್ವಲ್ಪಮಟ್ಟಿಗೆ ಹೋಲಬಹುದಿತ್ತೆಂದಿದ್ದಾಳೆ. ಸೌಂದರ್ಯಕ್ಕೆ ಚಂದ್ರನ ಹೋಲಿಕೆ ನೀಡುವುದು ಸಾಮಾನ್ಯ ಸಂಗತಿ, ಆದರೆ ಇಲ್ಲಿ ಕವಯತ್ರಿಯು ಚಂದ್ರನ ಕಲೆಯನ್ನು ಕಲಾತ್ಮಕವಾಗಿ ಬಳಸಿಕೊಂಡು ಚಾತುರ್ಯ ತೋರಿದ್ದಾಳೆ.

'ಅರಳುತ್ತಿರುವ ಕಮಲಗಳ ನಾಲ್ಕು ದಿಕ್ಕುಗಳಲ್ಲಿಯೂ ಚಲಿಸುತ್ತಿರುವ ಭ್ರಮರವನ್ನು ಕಾವಲುಗಾರನಿಗೆ ಹೋಲಿಸಿರುವಲ್ಲಿ ಇವಳ ಕಲ್ಪನಾ ಸಾಮರ್ಥವನ್ನು ಕಾಣಬಹುದು.

**ಘಟಮಾನದಲಾರರೀಪುಟಂ ನಲಿನಂ ಮಂದಿರಮಿಂದಿರಾಸ್ಪದಮ್।**
**ಪರಿಪಾಲಯತಿ ಸ್ಮ ನಿಕ್ವಣನ್ ಪರಿತೋಯಾಮಿಕವನ್ಮಧುವ್ರತಃ** ॥

ಯಾವ ರೀತಿಯಲ್ಲಿ ಕಾವಲುಗಾರನು ಅಮೂಲ್ಯವಾದ ನಿಧಿಯ ನಾಲ್ಕೂ ದಿಕ್ಕಿನಲ್ಲಿಯೂ ಸುತ್ತುತ್ತಾ, ಮಧ್ಯದಲ್ಲಿ ಗೊಣಗುಟ್ಟುತ್ತಲಿರುತ್ತಾನೋ, ಅದೇ ರೀತಿಯಲ್ಲಿ ಕಮಲದಲ್ಲಿ ಅಡಗಿರುವ ಮಧುವನ್ನು ರಕ್ಷಿಸುತ್ತಾ ಭ್ರಮರವು ನಾಲ್ಕು ಕಡೆಯಲ್ಲಿಯೂ ಸುತ್ತುತ್ತಾ ಗುಯ್‌ಗುಡುತ್ತಲಿದೆ. ಉಪಮಾನದ ಔಚಿತ್ಯವು ಸಹೃದಯತೆಯನ್ನು ಸೂಚಿಸುತ್ತದೆ.

ಇದು ವರ್ಣನಾಪ್ರಧಾನವಾದ ಕಾವ್ಯ. ಇಲ್ಲಿನ ಐದು, ಆರು ಹಾಗೂ ಏಳನೆಯ ಸರ್ಗಗಳು ಮಹಾಕಾವ್ಯದ ಲಕ್ಷಣಗಳಾದ ಜೈತ್ರಯಾತ್ರೆ, ಋತುಗಳು, ಪುಷ್ಪಾಪಚಯ, ಸೂರ್ಯೋದಯ, ಚಂದ್ರೋದಯ, ಜಲಕ್ರೀಡೆ, ಮೊದಲಾದ ವರ್ಣನೆಗೆ ಮೀಸಲಾಗಿದೆ. ಪ್ರತಿ ಸರ್ಗದ ಅಂತ್ಯದಲ್ಲೂ ಮುಂದಿನ ಸರ್ಗದಲ್ಲಿನ ವಿಷಯಸೂಚನೆ ದೊರಕುತ್ತದೆ. ಏಳನೆಯ ಸರ್ಗದಲ್ಲಿ ಬರುವ ಸೂರ್ಯಾಸ್ತ, ಕತ್ತಲು ಕವಿಯುವುದು ಮತ್ತು ಚಂದ್ರೋದಯ ವರ್ಣನೆಗಳು ಇಡೀ ಕಾವ್ಯದಲ್ಲಿಯೇ ತುಂಬಾ ಆಕರ್ಷಕವಾದ ಸನ್ನಿವೇಶಗಳು ಎನಿಸಿವೆ.

ಕೆಲವು ವರ್ಣನೆಗಳನ್ನು ವೈಭವೋಪೇತವಾಗಿ ತಂದಿದ್ದಾಳೆ. ಇಂದ್ರನ ಅಮರಾವತಿಗೆ ಹೋಸಿಸುವ ನಗರವರ್ಣನೆ ಸೊಗಸಾಗಿ ಮೂಡಿಬಂದಿದೆ. ರಾಜಧಾನಿಯಾದ ವಿಜಯನಗರವೂ ತುಂಗಭದ್ರೆಯಿಂದ ಸುತ್ತುವರಿದ ಅಮರಾವತಿಯನ್ನು ಹೋಲುವ ಸ್ವರ್ಗ, ಮೇರುಪರ್ವತದಂಥ ಗೋಪುರಗಳು, ವಸಂತದ ಆವಾಸಗಳಂತಿದ್ದ ತೋಟಗಳು, ಕ್ರೀಡಾ ಪರ್ವತಗಳು, ಸರೋವರಳು, ಕಣ್ಣಿಗೆ ಹಬ್ಬ, ಸಕಲ ಸಂಪತ್ತುಗಳ ತವರುಮನೆ ಎಲ್ಲಾ ಶ್ರೇಷ್ಠವಸ್ತುಗಳ ಮಾಲೆ, ಸೂರ್ಯಮಂಡಲವು ಇಲ್ಲಿಯ ಎತ್ತರವಾದ ಅರಮನೆಯ ಮೇಲಿನ ಕಳಸದಂತೆ, ಚಂದ್ರ ಮಂಡಲ ಮಾಳಿಗೆಯ ಮೇಲೆ ಆಟವಾಡುವ ರಮಣೀಯರಿಗೆ ಆಡದ ಚಂಡು ಎಂಬ ಕೆಲವು ಸಾಂಪ್ರದಾಯಿಕ

ವರ್ಣನೆಗಳಿದ್ದರೂ ವಿಜಯನಗರ ಹಾಗೂ ಇದರ ಶಾಖಾನಗರಿ ಯಾದ ವಿರೂಪಾಕ್ಷನ ಆವಾಸ ಸ್ಥಳ ಪಂಪಾನಗರಗಳ ವರ್ಣನೆ ಅಭಿಮಾನ ಉಕ್ಕೇರಿಸುವಂತೆ ವರ್ಣಿತವಾಗಿದೆ.

ಕೆಲವು ವರ್ಣನೆಗಳು ಸಹಜವಾಗಿ ಬಂದಿವೆ. ಬುಕ್ಕರಾಯನ ಮಡದಿ ದೇಪಾಯಿಯು ಗರ್ಭಿಣಿಯಾದಾಗ, ರಾಣಿಯಾದರೂ ಸ್ತ್ರೀಸಹಜ ಬಯಕೆಗಳು ಅವಳಿಗೂ ಹೊರತಲ್ಲ ಎನ್ನುವುದನ್ನು ರಾಜಮನೆತನದ ಕವಯತ್ರಿ ಸಹಜವಾಗಿ ಬಣ್ಣಿಸಿದ್ದಾಳೆ. ಮಣ್ಣುತಿನ್ನುವ ಅವಳ ಬಯಕೆಯನ್ನು ಗಂಗಾದೇವಿಯು ಕಾವ್ಯಮಯವಾಗಿ ವರ್ಣಿಸಿರುವುದು ಅವಳ ಅಮೋಘ ಕಲ್ಪನೆಗೆ ಸಾಕ್ಷಿಯಾಗಿದೆ. "ಗರ್ಭಸ್ತೀತಸ್ಯೇವ ಶಿಶೋರ್ವಿಧಾತುಮ್ ವಸುಂಧರಾಮಂಡಲ ಭಾರಶಿಕ್ಷಾಮ್ ಅರೋಚಯತ್" ಎನ್ನುತ್ತಾ ಮಗು ಗರ್ಭದಲ್ಲಿರುವಾಗಲೇ ಭೂಮಂಡಲದ ಭಾರವನ್ನು ವಹಿಸುವುದನ್ನು ಕಲಿಸಲು ರಾಣಿಯು ಮಣ್ಣುತಿನ್ನಲು ಮನಸ್ಸು ಮಾಡಿದಳು ಎಂದು ಬಣ್ಣಿಸಿದ್ದಾಳೆ.

ನವಜಾತ ಮಗುವಿನ ದರ್ಶನಕ್ಕೆ ಕಾತರಿಸಿ ಕೋಣೆಯನ್ನು ಪ್ರವೇಶಿಸಿದ ಬುಕ್ಕರಾಯ ಬಾಡಿದ ಶರೀರದ ರಾಣಿಯ ತೊಡೆಯಮೇಲಿನ ಮಗುವನ್ನು ಕಂಡಾಗ "ಶರತ್ಕಾಲದಲ್ಲಿ ಸೊರಗಿದ ನದಿಯ ದಂಡೆಯಮೇಲಿನ ಹಂಸವನ್ನು ಕಂಡಂತಾಯಿತು" ಎಂಬ ಹೋಲಿಕೆ ಮನೋಜ್ಞವಾಗಿದೆ.

ಚಿಗುರೆಲೆಗಳಂತಿರುವ ಮುಷ್ಟಿಗೈಗಳನ್ನು ಎಳೆದುಕೊಳ್ಳುತ್ತಿರುವ ಮಗು ಶತ್ರು ಲಕ್ಷ್ಮಿಯ ಕೂದಲುಗಳನ್ನು ಎಳೆಯುವುದನ್ನು ಕಲಿಯುತ್ತಿರುವಂತೆ ಕಂಡಿತು. 'ಮುದ್ದಾದ ಮಗುವಿನ ಮುಖವನ್ನು ಇನ್ನಷ್ಟು ನೋಡಲು ಆನಂದ ಭಾಷ್ಪಗಳು ಅಡ್ಡಿಯಾದವು' ಎಂಬುದು ಸಹಜವಾಗಿ ಮೂಡಿಬಂದಿದೆ.

ಸಂಸಾರದ ಸಣ್ಣಪುಟ್ಟ ಘಟನೆಗಳಿಗೆ ಮಹಿಳೆಯರು ಸ್ಪಂದಿಸುವ ಹಾಗೆ ಪುರಷರು ಸ್ಪಂದಿಸಲಾರರು, ಪ್ರತಿಯೊಂದು ಘಟನೆಯನ್ನು ಹೆಣ್ಣು ಅನುಭವಿಸುವ ಪರಿ ಪುರುಷರ ಅನುಭವಕ್ಕಿಂತ ಭಿನ್ನವಾದದ್ದು. ಕಾವ್ಯ ನಿರ್ಮಾಣ ಶಕ್ತಿಯಿರುವ ಮಹಿಳೆಯರು ತಮ್ಮ ಅನುಭವಗಳನ್ನು ಆಕರ್ಶಕವಾಗಿ ವ್ಯಕ್ತಪಡಿಸಲು ಸಾಧ್ಯ ಎಂಬುದನ್ನು ಗಂಗಾದೇವಿಯ ಈ ಕಾವ್ಯ ತಿಳಿಸುತ್ತದೆ. ಈ ಕೃತಿಯ ದ್ವಿತೀಯ ಮುದ್ರಣದ ಮುನ್ನುಡಿಯಲ್ಲಿ ಹರಿಹರಶಾಸ್ತ್ರಿಯವರು 'ಕೆಲವು ವಿದ್ವಾಂಸರು ಈ ಕೃತಿ ಮಹಿಳಿಯೋರ್ವಳಿಂದ ರಚಿತವಾಗಿರುವುದನ್ನು ಅನುಮಾನ ವ್ಯಕ್ತಪಡಿಸಿ, ಆಸ್ಥಾನ ಕವಿಯಿಂದ ರಚಿತವಾಗಿ ರಾಣಿ ಗಂಗಾದೇವಿ ಅಂಕಿತ ಗೊಳಿಸಿರಬಹುದೆಂದು ಭಾವಿಸುತ್ತಾರೆ' ಎಂದು ತಿಳಿಸಿದ್ದಾರೆ. ಆದರೆ ಮೇಲೆ ಉಲ್ಲೇಖಿಸಿರುವ ಕೆಲವೊಂದು ಸೂಕ್ಮ ಮಸಸ್ಥಿತಿಯ ಮಹಿಳೆಯರ ಭಾವನೆಗಳನ್ನು ಪುರುಷ ಕವಿಗಳು ವ್ಯಕ್ತಪಡಿಸಲು ಸಾಧ್ಯವಿಲ್ಲವೆನ್ನುವುದು ಸ್ಪಷ್ಟವಾಗುತ್ತದೆ.

ಸ್ತ್ರೀಯರ ವರ್ಣನೆ ಕಾವ್ಯಗಳಲ್ಲಿ ಸಾಮಾನ್ಯ, ಆದರೆ ಸ್ತ್ರೀಯೋರ್ವಳು ಪುರುಷನ ವರ್ಣನೆ ಮಾಡಿರುವುದ ವಿರಳ ಹಾಗಾಗಿ ಗಂಗಾದೇವಿ ವರ್ಣಿಸಿರುವ ಕಂಪಣನ ವರ್ಣನೆ ವಿಭಿನ್ನ ಎನಿಸುತ್ತದೆ.

**ಋತುವರ್ಣನೆ:** ಮಹಾಕಾವ್ಯದ ಲಕ್ಷಣಗಳಲ್ಲೊಂದಾದ ಋತುವರ್ಣನೆಗೆ ಐದನೆಯ ಸರ್ಗದಲ್ಲಿ ಮೂಡಿಬಂದಿದೆ. ಇಲ್ಲಿ ಕೆಲವು ಸಾಂಪ್ರದಾಯಿಕ ವರ್ಣನೆಗಳು ಕಂಡುಬಂದರೂ ಕೆಲವು ಕವಯತ್ರಿಯ ಕಲ್ಪನೆ, ಸ್ವಂತಿಕೆಯೂ ಅವಕಾಶ ಗಳಿಸಿಕೊಂಡಿವೆ. ಗೆಳತಿಯರು ಒಬ್ಬರಿಗೊಬ್ಬರು ಗೇಲಿಮಾಡುವ ಮಾತುಗಳು ಸೊಗಸಾಗಿವೆ.

**ಸೂರ್ಯಾಸ್ತ:** ಸಂಧ್ಯಾಕಾಲದಲ್ಲಿ ಸಮುದ್ರದಲ್ಲಿ ಕಳಚಿಬಿದ್ದ ಸೂರ್ಯಮಂಡಲವನ್ನು ವರುಣಲೋಕದ ಸ್ತ್ರೀಯರು ದಿನಲಕ್ಷ್ಮಿಯ ಕರ್ಣಕುಂಡಲವೆಂದು ಭಾವಿಸಿದರಂತೆ

**ಕಮಲೋದರಸಂಭೃತಂ ಕರೈರ್ಮಧು ಪೀತ್ವಾ ರವಿರುಜ್ಜಿತಾಂಬರಃ ।**
**ಸ್ಪೃಶತಿ ಸ್ಮ ದಿಶಂ ಪ್ರಚೇತಸೋ ನ ಮದಃ ಕಸ್ಯ ವಿಕಾರಕಾರಣಮ್ ॥** (7–5)

ಕಮಲಗಳ ಉದರದಲ್ಲಿದ್ದ ಮಧುವನ್ನು ಹೀರಿದ ರವಿಯು ಅಂಬರ (ಬಟ್ಟೆ)ವನ್ನು ಬಿಟ್ಟು ಪಶ್ಚಿಮ ದಿಗ್ವಧುವಿನ ಕಡೆಗೆ ಸಾಗಿದನು. ಮದವು ಯಾರಿಗೆ ವಿಕಾರವನ್ನುಂಟುಮಾಡುವುದಿಲ್ಲ? ಎಂದು ಹೇಳುವ ಈ ಪದ್ಯದ ಮುಂದಿನ ಭಾಗವೆಂಬಂತೆ ಮೂಡಿಬಂದ ಪದ್ಯದಲ್ಲಿ ಪೂರ್ವದಿಗ್ವಧುವನ್ನು ಬಿಟ್ಟು ದೂರ ಸರಿದಂತೆ ಸೂರ್ಯನ (ವಿರಹ) ತಾಪವು ಹೆಚ್ಚಿತು. ಆದರೆ ಪಶ್ಚಿಮ ದಿಗ್ವಧುವಿನ ಹತ್ತಿರ ಸರಿದಂತೆ ಅದು ಮರೆಯಾಯಿತು. ಕಾಮಿಗಳ ಹೃದಯದ ನೆಲೆಯನ್ನು ಯಾರು ಬಲ್ಲರು? ಎಂಬ ಕಲ್ಪನೆ ಸೊಗಸಾಗಿದೆ. ಸೂರ್ಯಾಸ್ತದ ಮತ್ತೊಂದು ಪದ್ಯವು ಸಂಜೆಗೆ ಮುದುಡಿಕೊಂಡ ಕಮಲದ ಮೊಗ್ಗೆಗಳಿಂದ ಕಮಲಿನಿಯು ಹೊರಟುನಿಂತ ಸೂರ್ಯನಿಗೆ ಮತ್ತೆ ಬೇಗನೆ ಬರಬೇಕೆಂದು ಕೈ ಜೋಡಿಸಿದಳು ಎಂಬ ಪ್ರೇಯಸಿಯ ಭಾವ ವ್ಯಕ್ತವಾಗಿದೆ.

**ಚಂದ್ರೋದಯ:** ರಾತ್ರಿಯು ಚಂದ್ರಮಂಡಲವೆಂಬ ಚಿಕ್ಕಪೆಟ್ಟಿಗೆಯಿಂದ ತೆಗೆದು ಕೊಟ್ಟ ಬಿಳಿ ರೇಶಿಮೆಯ ಪತ್ತಲವನ್ನು ದಿಗ್ವಧು ಧರಿಸುತ್ತಿರುವಳು ; ದಿಗ್ವಧುವನ್ನು ಅಪ್ಪಿಕೊಂಡಿರುವ ಈ ಚಂದ್ರನು ಕುಮುದಿನಿಯ ಕಡೆಗೂ ಕೈಚಾಚುತ್ತಿರುವನು; ಕಾಮಿಗಳು ನಂಬಿಕೆಗೆ ಅರ್ಹರಲ್ಲ ; ಕಾಮಿ ಚಂದ್ರನು ತನ್ನ ಕರಗಳನ್ನು ಎಷ್ಟೇ ಚಾಚಿದರೂ ಸೂರ್ಯ ವಿಕಾಸಿನೀ ಕಮಲಿನಿಯು ಮುಖವನ್ನು ಮುದುಡಿಕೊಂಡೇ ಇರುವಳು ; ಕಾಲನೆಂಬ ರೈತನು ಕತ್ತಲು ಕವಿದ ಮುಗಿಲೆಂಬ ಮರುಭೂಮಿಯಲ್ಲಿ ತಿಂಗಳ ಬೆಳಕಿನ ಪೈರು ಬೆಳೆದುಕೊಳ್ಳಲು ತಾರೆಗಳನ್ನು ಬಿತ್ತಿರುವನು.

**ಸಂಧ್ಯಾಕಾಲದ ವರ್ಣನೆ:** ಹಗಲಿನ (ಪುರುಷ) ವೇಷವನ್ನು ಕಳಚಿ ರಾತ್ರಿ (ಸ್ತ್ರೀ) ವೇಷದಿಂದ ನರ್ತನ ಮಾಡಲು ಸಿದ್ಧನಾದ ಕಾಲನಟನ ಕೆಂಪಾದ ತೆರೆಯಂತೆ ಲೋಕವು ಸಂಧ್ಯಾಕಾಲವನ್ನು ನೋಡಿತು ಎಂದು ಈ ರೀತಿ ಹೇಳದ್ದಾಳೆ.

**ದಿನವೇಷಮಪಾಸ್ಯ ಯಾಮಿನೀ ವಪುಷಾ ಕಾಲನಟಸ್ಯ ನೃತ್ಯತಃ ।**
**ದದೃಶೇ ಜಗತಾ ಪಿತೃಪ್ರಸೂರ್ದಿವಿ ನೇಪಥ್ಯಪಟೀವ ಪಾಟಲಾ ॥** **(7–19)**

ಸಾಯಂಸಂಧ್ಯೆಯು ರಕ್ತವರ್ಣದಿಂದ ಶೋಭಿಸುತ್ತಿದೆ. ಹಗಲು ರಾತ್ರಿಗಳೆರಡೂ ಕಾಲಪುರುಷನ ಎರಡು ಒಡಲುಗಳು. ಅವೆರಡರ ವ್ಯವಧಾನವನ್ನು ನಟ ಹಾಗೂ ಸಾಮಾಜಿಕರ ಮಧ್ಯದಲ್ಲಿದ್ದು ವೇಷಾಂತರಧಾರಿಯಾದ ನಟನನ್ನು ನೇಪಥ್ಯವು ಮರೆಮಾಡುವಂತೆ ಸಂಧ್ಯೆಯು ನೆರವೇರಿಸುತ್ತಿದೆ.

**ವರ್ಷಕಾಲದ ವರ್ಣನೆ:** ಹಸಿರು, ಕೆಂಪು ಮತ್ತು ಬಿಳುಪುಳ್ಳ ಇಂದ್ರಧನುಸ್ಸಿನ ರೇಖೆಯು ಪಚ್ಚೆ, ಹವಳ ಮತ್ತು ಮುತ್ತಿನಿಂದ ಮಾಡಿದ ಆಕಾಶಲಕ್ಷ್ಮಿಯ ಒಡ್ಯಾಣದಂತೆ ಶೋಭಿಸಿತು.

**ಹರಿತಲೋಹಿತಪಾಂಡುರರಾಜತತ್ರಿ ದಶರಾಜಶರಾಸನಲೇಖಿಕಾ ।**
**ಮರತಕೋಪಲ ವಿದ್ರುಮ ಮೌಕ್ತಿಕೈರ್ವಿರಚಿತಾ ರಶನೇವ ನಭಶ್ರೀಯಃ ॥** **(5–27)**

**ಕಾವೇರಿ ನದಿಯ ವರ್ಣನೆ:** 'ತುರುಷ್ಕರ ಅಡ್ಡಾದಿಡ್ಡಿಯ ಕಾರ್ಯಗಳಂತೆ, ಕಾವೇರಿಯೂ, ತನ್ನ ಪಾತ್ರವನ್ನೂ ತೊರೆದು ಅಡ್ಡಾದಿಡ್ಡಿಯಾಗಿ ಪ್ರವಹಿಸಿ, ಜನರಿಗೆ ಬೆದರಿಕೆಯನ್ನುಂಟುಮಾಡಿದಳಂತೆ. ಆಗ ತುರುಷ್ಕರನ್ನು ನಿರ್ಬಂಧಿಸಿದಂತೆ, ಕಾವೇರಿ ನದಿಗೂ ವಿಜಯನಗರದ ಅರಸರು ಅಣೇಕಟ್ಟುಗಳನ್ನು ನಿರ್ಮಿಸಿ, ನಿರ್ಬಂದಿಸಿದರಂತೆ.[೪೩]

**ಯುದ್ಧವರ್ಣನೆ:** ಗಂಗಾದೇವಿಯು ಶೃಂಗಾರ, ಕರುಣಾರಸ ಪ್ರಧಾನವಾದ ಸನ್ನಿವೇಶಗಳನ್ನು ವರ್ಣಿಸಿರುವಷ್ಟೇ ಕೌಶಲ್ಯವನ್ನು ವೀರರಸ ಪ್ರಧಾನವಾದ ಯುದ್ಧದ ಸನ್ನಿವೇಶವನ್ನು ವರ್ಣಿಸುವುದರಲ್ಲಿಯೂ ತೋರಿಸಿದ್ದಾಳೆ. ಕಾವ್ಯದಲ್ಲಿ ವರ್ಣಿಸಿರುವ ಯುದ್ಧದ ದೃಶ್ಯಗಳು ಯುದ್ಧವನ್ನು ಪ್ರತ್ಯಕ್ಷವಾಗಿ ಕಂಡು ವರ್ಣಿಸಿರುವಂತೆ ತೋರುತ್ತದೆ. ಯುದ್ಧಕ್ಕೆ ಹೊರಡುವಾಗಿನ ಸನ್ನಿವೇಶವನ್ನು ನಾಲ್ಕನೆಯ ಸರ್ಗ ಕಟ್ಟಿಕೊಡುತ್ತದೆ. ಆನೆ, ಕುದುರೆ, ಕಾಲಾಳುಪಡೆಯ ಸೇನೆ ಹೊರಡಲು ಸಜ್ಜುಗೊಂಡಿರುತ್ತದೆ. ಸಾಮಂತ ಅರಸುಗಳು ಕಂಪಣನನ್ನು ಕಾಯುತ್ತಾ ಹೊರಗೆ ನಿಂತಿದ್ದರು, ಜೋಯಿಸರು ಹೇಳಿದ್ದ ಪ್ರಶಸ್ತ ಕಾಲವನ್ನೆದುರು ನೋಡುತ್ತ ಕಂಪಣ ನಿಂತಿದ್ದ. ವಿಜಯದ ಪೂರ್ವ

ಸೂಚನೆಯಾದಂತೆ ಅವನಿಗೆ ಬಲಭುಜ ಸ್ಫುರಿಸಿತು, ವಿಪ್ರರು ಅಥರ್ವ ವೇದವನ್ನು ಪಠಿಸುತ್ತಿರಲು, ಹೋಮಾಗ್ನಿಯು ಹವಿಸ್ಸನ್ನುಂಡು ಪ್ರಜ್ವಲಿಸುತ್ತಿತ್ತು. ತನ್ನ ವಿಜಯತುರುಗವನ್ನೇರಿ ಕಂಪಣನು ತಲೆಬಾಗಿಲನ್ನು ದಾಟಿ ಬಂದಾಗ ಸಾಮಂತರು ಗೌರವದಿಂದ ನಡೆದರು, ಪುರವನಿತೆಯರು ಲಾಜಾಕ್ಷತೆಗಳನ್ನು (ಅರಳು, ಅಕ್ಷತೆ) ಸುರಿದರು. ಆಕಾಶದವರೆಗೂ ಧೂಳೆಬ್ಬಿಸಿ ಸಾಗರೋಪಾದಿಯ ಸೈನ್ಯ ನಡೆದ ಸಂಭ್ರಮವನ್ನು ಗಂಗಾದೇವಿಯು ಕಲಾತ್ಮಕವಾಗಿ ಬಣ್ಣಿಸಿದ್ದಾಳೆ.

**ಪಾದಾತಪ್ರಾಪ್ತಪಾದಾತಮ್ ಹಾಸ್ತಿಕಾಕ್ರಾಂತ ಹಾಸ್ತಿಕಮ್**
**ಆಶ್ವೀಯಮಿಲಿತಾಶ್ವೀಯಾಮಾಸೀದಾಯೋಧನಮ್ ತಯೋ॥**

ಎರಡು ಪಕ್ಷಗಳ ಕಾಲಾಳು, ಆನೆ ಕುದುರೆಗಳ ಸೈನ್ಯಗಳು ಪರಸ್ಪರ ಸಂಧಿಸಿದವು; ರಕ್ತರಂಜಿತವಾದ ಖಡ್ಗಗಳ ಅಲೆಗಳು ಯಮನ ನಾಲಿಗೆಗಳಂತೆ ಮುಂದೆ ಬಂದವು; ಕತ್ತರಿಸಿ ಬಿದ್ದ ವೀರರ ತೋಳುಗಳನ್ನು ಹಾವುಗಳೆಂದು ಗಿಡಗಳು ಭಾವಿಸಿದವು, ಬಾಣಗಳ ಗುರಿಗೆ ತುತ್ತಾಗಿ ಮಡಿದು ಆನೆಗಳ ತಲೆಗಳ ಮೇಲೆ ಒರಗಿದ ಶತ್ರು ಸೈನಿಕರು ಸ್ವರ್ಗ ಕಂಡು ಕಣ್ಣು ತೆರೆದು ನೋಡಿದಾಗ ಅಪ್ಸರೆಯರ ಮೇಲೆ ಒರಗಿದ್ದರು. ಕಂಪಣರಾಯನ ಸೈನಿಕರ ಬಲಕ್ಕೆ ತಡೆಯದೆ ಕ್ರಮಿಡ ಸೈನ್ಯವು ದಿಕ್ಕೆಟ್ಟು ಓಡಿತು.

**ಛಾಯಾಮೇವಾತ್ಮನಃ ಕೇಚಿತ್ ಧಾವಂತೋ ಭೀತಿಭಾವಿತಾಃ**
**ಆರಾತಿ ಶಂಕಯಾ ಕಷ್ಟಮ್ ದಷ್ಟಾಂಗುಲಿ ವವಂದಿರೇ**

ಓಡುತ್ತಿದ್ದ ಸೈನಿಕರು ತಮ್ಮ ನೆರಳನ್ನೇ ಶತ್ರುಗಳೆಂದು ಭಾವಿಸಿ ಬೆಟ್ಟುಕಚ್ಚಿಕೊಂಡು ಸಮಸ್ಕರಿಸಿದರು. ಕಂಪರಾಯನು ಶತ್ರುಗಳನ್ನು ಬೆನ್ನಟ್ಟಿ ಅವರು ಆಶ್ರಯಿಸಿದ ರಾಜಗಂಭಿರಕ್ಕೆ ಮುತ್ತಿಗೆ ಹಾಕಿದನು.

ಚಂಪನ ರೂಪ ಕಂಪನ ಖಡ್ಗದಲ್ಲಿ ಗೋಚರಿಸುತ್ತಿರಲು (೪–೮೧) ಕಂಪನು ಚಂಪನನ್ನು ದೇವೇಂದ್ರನ ಆತಿಥ್ಯಕ್ಕೆ ಕಳುಹಿದನು (೪–೮೨)

ಕುದುರೆಯ ಸವಾರನು ಆನೆಯ ತಲೆಗೆ ಖಡ್ಗವನ್ನು ಚುಚ್ಚಿ ದೂರ ಸರಿಸುತ್ತಿರುವಷ್ಟರಲ್ಲಿಯೇ ಆನೆಯು ಅವನ ಕುದುರೆಯನ್ನು ಹಿಡಿದೆಳೆದು ನೆಲಕ್ಕೆ ಅಪ್ಪಳಿಸುತ್ತಿತ್ತು. ; ಆನೆಯಿಂದ ಮೇಲಕ್ಕೆಸೆಯಲ್ಪಟ್ಟ ಓರ್ವ ವೀರನು ಅದರ ಬೆನ್ನ ಮೇಲೆರಗಿ ಮಾವುತನನ್ನು ನೆಲಕ್ಕುರುಳಿಸಿ ತಾನೇ ಗಜಾರೋಹಿಯಾದನು. ; ಬಹಳಹೊತ್ತಿನಿಂದ ಖಡ್ಗ ಯುದ್ಧವನ್ನು ಮಾಡುತ್ತ ಕಲಹದಲ್ಲಿ ತೊಡಗಿದ ಇಬ್ಬರು ವೀರರು ಒಂದೇ ಕ್ಷಣದಲ್ಲಿ ಪರಸ್ಪರರ ರುಂಡಹಾರಿಸಿ ಸ್ನೇಹಿತರಂತೆ ಜೊತೆಯಾಗಿ ಸ್ವರ್ಗಸೇರಿದರು. ಎಂದು ಮೊದಲಾಗಿ ಯುದ್ಧದ ಚಿತ್ರವು ಕಣ್ಣಮುಂದೆ ಕಟ್ಟುವಂತೆ ಬಣ್ಣಿಸಿದ್ದಾಳೆ.

**ಪ್ರಶಾಂತದಾವೇವ ವನಾಂತ ಲಕ್ಷ್ಮೀಃ ಗತೋಪರಾಗಾ ಗಣನಸ್ಥಲೀವ**
**ಕಲಿಂದಜಾಮರ್ದಿತ ಕಾಲಿಯೇವ ದಿಗ್ ದಕ್ಷಿಣಾಸೀತ್ ಕ್ಷತಪಾರಸೀಕಾ॥**

"ದಾವಾಗ್ನಿಯು ಶಾಂತವಾದ ಅಡವಿಯಂತೆ, ಗ್ರಹಣವು ಬಿಟ್ಟಮೇಲಿನ ಆಕಾಶದಂತೆ, ಕಾಲಿಯ ಮರ್ದನವಾದ ನಂತರದ ಯಮುನೆಯಂತೆ, ದಕ್ಷಿಣದೇಶವು ಪಾರಸಿಕರ ಹಾವಳಿಯಿಂದ ಮುಕ್ತವಾಯಿತು" ಎಂದು ಕಾವ್ಯವನ್ನು ಮುಗಿಸಿದ್ದಾಳೆ.

ಸುಂದರವಾದ ಪ್ರಕೃತಿಯ ವರ್ಣನೆ ಮಾಡಿರುವಂತೆ, ಅಂದಿನ ಮಧುರಾನಗರದ ಚಿತ್ರಣವನ್ನೂ ಮನಃ ಕಲಕುವಂತೆ ಚಿತ್ರಿಸಿದ್ದಾಳೆ. ಮುಸಲ್ಮಾನರ ಧಾಳಿಯಿಂದಾದ ದಕ್ಷಿಣಭಾರತದಲ್ಲಿಯ ಪ್ರಸಿದ್ಧ ಕ್ಷೇತ್ರಗಳ, ಅಗ್ರಹಾರಗಳ ಮತ್ತು ದೇವಾಲಯಗಳ ದುರವಸ್ಥೆಯನ್ನು ವರ್ಣಿಸಿದ್ದಾಳೆ. ಮಧುರೆಯ ದುರ್ದೆಶೆಯ ಚಿತ್ರಣವನ್ನು ಮಧುರೆಯ ಅಧಿದೇವತೆಯು ಕಂಪಣನಿಗೆ ಸ್ವಪ್ನದಲ್ಲಿ ವಿವರಿಸುತ್ತಾಳೆ. ಮಧುರೆಯ ಉದ್ಯಾನಗಳಲ್ಲಿನ ತೆಂಗಿನ ಮರಗಳೆಲ್ಲ

ಕಡಿಯಲ್ಪಟ್ಟು ತಲೆಬುರುಡೆಗಳು ಜೋತಾಡುವ ಶೂಲದ ಕಂಬಗಳಿಂದ ತುಂಬಿದೆ. ರಾಜಬೀದಿಗಳಲ್ಲಿ ಕೇಳಿಬರುತ್ತಿದ್ದ ರಮಣಿಯರ ಕಾಲ್ಗೆಜ್ಜೆಯ ಸದ್ದಿಗೆ ಬದಲಾಗಿ ನಾಗರಿಕರಿಗೆ ಹಾಕಿದ ಕೈಬೇಡಿಗಳ ಸಪ್ಪಳ ಕಿವಿಗೆ ಅಪ್ಪಳಿಸುತ್ತದೆ ಎಂಬ ಭೀಭತ್ಸ ವರ್ಣನೆ ನೀಡಿದ್ದಾಳೆ.

**ನ ತಥಾ ಕಟುಘೂತ್ ಕೃತಾದ್ ವ್ಯಥಾ ಮೇಹೃದಿ ಜೀರ್ಣೋಪವನೇಷು ಘೂಕಲೋಕಾತ್**
**ಪರಿಶೀಲಿತ ಪಾರಸೀಕ ವಾಗ್ಭ್ಯೋಯವನಾನಾಮ್ ಭವನೇ ಯಥಾ ಶುಕೇಭ್ಯಃ** ಹಾಳು ತೋಟಗಳಲ್ಲಿ ಕೂಗುತ್ತಿರುವ ಗೂಗೆಗಳ ಧ್ವನಿಗಿಂತ ಯವನರ ಮನೆಯಂಗಳದಲ್ಲಿಯ ಗಿಳಿಗಳಾಡುವ ಪಾರಸಿಕ ಮಾತುಗಳಿಂದ ನನಗೆ ಹೆಚ್ಚು ವ್ಯಥೆಯಾಗುತ್ತದೆ.

ತರುಣಿಯರ ಮೈಗಂಧದಿಂದ ಸುವಾಸನೆಗೊಳ್ಳುತ್ತಿದ್ದ ತಾಮ್ರಪರ್ಣೀ ನದಿಯ ಪ್ರವಾಹವು ರಕ್ತ ಮಾಂಸಗಳಿಂದ ತುಂಬಿ ಹರಿಯುತ್ತಿದೆ. ವಿದ್ಯೆ, ನೀತಿ, ಧರ್ಮ, ಶೀಲ, ಸುಕೃತ ಮತ್ತು ಕುಲೀನತೆ ಎಲ್ಲವೂ ಹಾಳಾಗಿದೆ. ಕಲಿಕಾಲದ ತಾಂಡವ ನೃತ್ಯ ನಡೆದಿದೆ. ಹೀಗೆ ಮಧುರೆಯ ಶೋಚನೀಯ ಸ್ಥಿತಿಯನ್ನು ಬಣ್ಣಿಸಿದ ಮಧುರೆಯ ಅಧಿದೇವತೆಯು ಒಂದು ಹೊಳೆಯುವ ಖಡ್ಗವನ್ನು ಕಂಪಣನಿಗೆ ನೀಡುತ್ತಾ

**ನರನಾಥ ಪುರಾ ಕೃಪಾಣಮೇನಮ್ವಿರಚಯ್ಯಾಖಿಲ ದೇವತಾಯುಧಾಂಶೈಃ**
**ಉಪದೀಕೃತವಾನ್ ಪಿನಾಕಪಾಣೇಃ ದನುಜಾನಾಮ್ ವಿಜಯಾಯ ವಿಶ್ವಕರ್ಮಾ**

ಈ ಖಡ್ಗವನ್ನು ವಿಶ್ವಕರ್ಮನು ಎಲ್ಲ ದೇವತೆಗಳ ಆಯುಧ ಶಕ್ತಿಯ ಅಂಶಗಳಿಂದ ಪರಶಿವನು ದಾನವರನ್ನು ಗೆಲ್ಲುವುದಕ್ಕೆಂದು ರಚಿಸಿರುವನು. ಶಿವನು ಇದನ್ನು ಪಾಂಡ್ಯರಜನಿಗೆ ಕೊಟ್ಟನು. ಇದೀಗ ಪಾಂಡ್ಯರಾಜರು ಗತವೀರ್ಯರಾದ ಮೇಲೆ ಅಗಸ್ತ್ಯನು ನಿನಗೆ ಕಳಿಸಿಕೊಟ್ಟಿರುವನು. ಇದರಿಂದ ಯವನರನ್ನು ತುಂಡರಿಸು ಮಧುರೆಯನ್ನು ಪುನಃ ವಶಪಡಿಸಿಕೊಂಡು ದಕ್ಷಿಣಭಾರತದಿಂದ ಯವನರನ್ನಟ್ಟಿ ರಾಮಸೇತುವಿನಮೇಲೆ ವಿಜಯಸ್ತಂಭವನ್ನು ನಿಲ್ಲಿಸು ಎಂದು ಆದೇಶಿಸಿದಳು.

ಗಂಗಾದೇವಿ ಕವಿ, ಸಹೃದಯ ಮತ್ತು ಕಾವ್ಯಗಳ ಬಗ್ಗೆ ಕೆಲವು ವಿಚಾರಪೂರ್ಣವಾದ ಮಾತುಗಳನ್ನು ಹೇಳಿರುವುದನ್ನು ಗಮನಿಸಬಹುದು.

**ಕ್ವಚಿದರ್ಥಃ ಕ್ವಚಿಚ್ಛಬ್ದಃ ಕ್ವಚಿದ್ಭಾವಃ ಕ್ವಚಿದ್ರಸಃ**
**ಯತ್ರೈತೇ ಸಂತಿ ಸರ್ವೇಪಿ ಸ ನಿಬಂಧೋ ನ ವಿದ್ಯತೇ॥**

ಕೆಲವು ಕೃತಿಗಳಲ್ಲಿ ಅರ್ಥನಿರೂಪಣೆ ಚೆನ್ನಾಗಿರುವುದು, ಕೆಲವೆಡೆ ಶಬ್ದಯೋಜನೆ ಚೆನ್ನಾಗಿರುವುದು, ಕೆಲವು ರಚನೆಗಳಲ್ಲಿ ಭಾವವೂ ರಸವೂ ಸೊಗಸಾಗಿರುವುದು. ಆದರೆ ಅವೆಲ್ಲವೂ ಒಂದೆಡೆಗೆ ದೊರೆಯುವ ಕೃತಿಗಳು ದುರ್ಲಭ.

ಕಾವ್ಯದಲ್ಲಿ ಗುಣವಿದ್ದರೂ ಅದನ್ನು ಗಮನಿಸದೆ ಕೇವಲ ದೋಷವನ್ನೇ ಅನ್ವೇಷಿಸುವ ದುಷ್ಟರನ್ನು ಮಾವಿನ ಮರವನ್ನು ಬಿಟ್ಟು ಬೇವನ್ನು ಹುಡುಕುವ ಕಾಗೆಗೆ ಹೋಲಿಸಿದ್ದಾಳೆ (೧–೨೦)

**ನಿರ್ದೋಷಾಪ್ಯಗುಣಾ ವಾಣೀ ನ ವಿದ್ವಜ್ಜನ ರಂಜಿನೀ**
**ಪ್ರತಿವ್ರತಾಪ್ಯರೂಪಾ ಸ್ತ್ರೀ ಪರಿಣೇತ್ರೇ ನ ರೋಚತೇ** **(1–19)**

"ಕಾವ್ಯದಲ್ಲಿ ಕೇವಲ ದೋಷಗಳಿಲ್ಲದಿದ್ದರೆ ಸಾಲದು, ಗುಣಗಳಿಲ್ಲದೆ ಅದು ವಿದ್ವಜ್ಜನರ ಮನಸ್ಸನ್ನು ಸೆಳೆಯಲಾರದು. ನಿಷ್ಠೆಯಿಂದಿದ್ದರೂ ರೂಪವತಿಯಲ್ಲದ ಪತ್ನಿ ಗಂಡನ ಮನಸ್ಸನ್ನು ಆಕರ್ಷಿಸಲಾರಳು" ಎಂಬ ಈ ಮಾತಿನಲ್ಲಿ ಕಾವ್ಯಸತ್ಯಕ್ಕಿಂತಲೂ ಜೀವನಸತ್ಯವನ್ನು ಕಾಣಬಹುದು.

**ನ ಪ್ರಾರ್ಥನೀಯಃ ಸತ್ಕಾವ್ಯಶ್ರುತ್ಯೈ ಸಹೃದಯೋ ಜನಃ**
**ಸ್ವಾದು ಪುಷ್ಪರಸಾಸ್ವಾದೇ ಕಃ ಪ್ರೇರಯತಿ ಷಟ್ಪದಮ್**

ಒಳ್ಳೆಯ ಕಾವ್ಯವನ್ನು ಕೇಳಲು ಸಹೃದಯರನ್ನು ಕರೆದು ತರುವ ಅವಶ್ಯಕತೆಯಿಲ್ಲ. ಮಧುರವಾದ ಪುಷ್ಪರಸವನ್ನು ಸೇವಿಸಲು ಭ್ರಮರಗಳನ್ನು ಯಾರು ಪ್ರಚೋದಿಸುವರು?' ಎಂಬ ಮಾತಿನಲ್ಲಿ ಗಂಗಾದೇವಿಗೆ ತನ್ನ ಕಾವ್ಯದ ಯೋಗ್ಯತೆಯ ಬಗೆಗಿರುವ ಆತ್ಮವಿಶ್ವಾಸ ಮತ್ತು ಸಹೃದಯ ವಾಚಕರಲ್ಲಿರುವ ಆದರಗಳು ವ್ಯಕ್ತವಾಗುತ್ತವೆ.

**ತಾರ್ಕಿಕಾಃ ಬಹವಃ ಸಂತಿ ಶಾಬ್ದಿ ಕಾಶ್ಚ ಸಹಸ್ರಶಃ ।**
**ವಿರಲಾಃ ಕವಯೋ ಲೋಕೇ ಸರಲಾಲಾಪಪೇಶಲಾಃ ॥ (1–22)**

**ನಿರ್ದೋಷಾಪ್ಯಗುಣಾ ವಾಣೀ ನ ವಿದ್ವಜ್ಜನರಂಜಿನೀ।**
**ಪತಿವೃತಾಪ್ಯರೂಪಾ ಸ್ತ್ರೀ ಪರಿಣೇತ್ರೆ ನ ರೋಚತೆ ॥**

ದೋಷ ರಹಿತವಾದರೂ ಗುಣಗಳಿಲ್ಲದಿದ್ದರೆ ಕಾವ್ಯ ಯಾರಿಗೆ ಮೆಚ್ಚಿಕೆಯಾದೀತು ? ಪತಿವ್ರತೆಯಾದರೂ ಸ್ತ್ರೀಗೆ ರೂಪವೂ ಮುಖ್ಯವಾಗುತ್ತದೆ ಎಂದಿದ್ದಾಳೆ. **ಪ್ರಬಂಧಮೀಷನ್ಮಾತ್ರೋಪಿ ದೋಷೋ ನಯತಿ ದೂಷ್ಯತಾಂ** – ಕಿಂಚಿತ್ ದೋಷವಿದ್ದರೂ ಪ್ರಬಂಧವೇ ದೂಷಿತವಾಗುತ್ತದೆ.

**ಪ್ರಭಾವ:** ಕಾಳಿದಾಸನ ಪ್ರಭಾವವನ್ನು ಈ ಕಾವ್ಯದಲ್ಲಿ ಗುರುತಿಸಬಹುದು. ಮಧುರೆಯ ವರ್ಣನೆಯಲ್ಲಿ ವಿದ್ವಾಂಸರು ಕಾಳಿದಾಸನ ರಘುವಂಶದಲ್ಲಿ ಬರುವ ಹಾಳುಬಿದ್ದ ಅಯೋಧ್ಯೆಯ ವರ್ಣನೆಯ ಛಾಯೆಯನ್ನು ಗುರುತಿಸಿದ್ದಾರೆ. ಗಂಗಾದೇವಿ ಕಾಳಿದಾಸನಿಂದ ಪ್ರೇರಿತಳಾಗಿರುವುದು ಇಲ್ಲಿ ಕಂಡುಬರುತ್ತದೆ. ಆದರೆ ಈ ಎರಡೂ ನಗರಗಳು ಹಾಳು ಬೀಳಲು ಕಾರಣವಾದ ಸಂದರ್ಭಗಳು ಮಾತ್ರ ತೀರ ಭಿನ್ನವಾದವಗಳು. ಅಯೋಧ್ಯಾನಗರದ ಅಧಿದೇವತೆಯು ಮಧ್ಯರಾತ್ರಿಯಲ್ಲಿ ಕುಶನ ಶಯ್ಯಾಗಾರಕ್ಕೆ ಬಂದು ಚಿತ್ರಿಸಿದ ಅಯೋಧ್ಯೆಯ ದುರ್ದೆಶೆಯ ಚಿತ್ರದಲ್ಲಿಯ ಅನೇಕ ಅಂಸಗಳನ್ನು ಗಂಗಾದೇವಿ ಮಧುರೆಯ ದುರವಸ್ಥೆಯನ್ನು ಚಿತ್ರಿಸುವ ಸಂದರ್ಭಕ್ಕೆ ತಕ್ಕಂತೆ ಮಾರ್ಪಾಡು ಮಾಡಿಕೊಂಡು ಪರಿಣಾಮಕಾರಿಯಾಗಿ ಬಳಸಿಕೊಂಡಿದ್ದಾಳೆ.

ಕಾಳಿದಾಸನು ವರ್ಣಿಸಿರುವ ಅಯೋಧ್ಯೆಯ ದುರ್ದೆಶೆಯು ಈ ರೀತಿಯಾಗಿವೆ. ರಾತ್ರಿಯಲ್ಲಿ ಅಭಿಸಾರಿಕೆರು ಸಂಚರಿಸುತ್ತಿರುವ ಅಯೋಧ್ಯೆಯ ಬೀದಿಗಳಲ್ಲಿ ಈಗ ನರಿಗಳು ಸಂಚರಿಸುತ್ತವೆ. ಪ್ರಮದೆಯರು ಸ್ನಾನ ಮಾಡುತ್ತಿದ್ದ ಕೊಳಗಳಲ್ಲಿ ಈಗ ಕೋಣಗಳು ನುಗ್ಗುತ್ತಲಿವೆ. ರಮಣೀಯರು ಪಾದಗಳಿಗೆ ಹಚ್ಚಿಕೊಂಡ ಬಣ್ಣದ ಹೆಜ್ಜೆಗಳು ಮೂಡುತ್ತಿದ್ದ ಅರಮನೆಗಳ ಸೋಪಾನಗಳ ಮೇಲೆ ಮೃಗಗಳನ್ನು ಕೊಂದು ತಿರುಗುವ ಹುಲಿಗಳ ಹೆಜ್ಜೆಗಳು ಮೂಡುತ್ತಲಿವೆ. ಇದೇ ಪ್ರಕಾರದಲ್ಲಿ ಗಂಗಾದೇವಿಯು ಮಧುರೆಯ ದುರ್ದೆಶೆಯನ್ನು ವರ್ಣಿಸಿದ್ದಾಳೆ[೪೩೮].

ಅಯೋದ್ಯೆಯ ಬೀದಿಗಳಲ್ಲಿ ರಾತ್ರಿಯಲ್ಲಿ ಅಭಿಸಾರಿಕೆರು ಸಂಚರಿಸುತ್ತಿದ್ದರೆ, ಈಗ ಈಗ ನರಿಗಳು ಸಂಚರಿಸುತ್ತವೆ ಎಂದು ಕಾಳಿದಾಸ ಹೇಳಿದರೆ, ಗಂಗಾದೇವಿಯ ಕಾವ್ಯದಲ್ಲಿ ಯುವತಿಯರ ಕಾಲ್ಗೆಜ್ಜೆಗಳ ಮಂಜುಳ ಧ್ವನಿ ಕೇಳಿಬರುತ್ತಿದ್ದ ಮಧುರೆಯ ಬೀದಿಗಳಲ್ಲಿ ನಾಗರೀಕರಿಗೆ ಹಾಕಿದ ಬೇಡಿಗಳ ಕರ್ಕಶಧ್ವನಿ ಕೇಳುತ್ತಿದೆ ಎಂದು ಮಧುರಾಧಿದೇವತೆ ನುಡಿಯುತ್ತಾಳೆ. "ಕಾಳಿದಾಸನ ಪ್ರಭಾವ ಅವಳ ಕಾವ್ಯದಮೇಲೆ ವಿಪುಲವಾಗಿದೆ"[೪೪].

ಈ ಕಾವ್ಯವು ಗಂಗಾದೇವಿ ಓದಿನ ಹರಹು ಹಾಗೂ ಪಾಂಡಿತ್ಯಗಳನ್ನು ಕುರಿತು ತಿಳಿಸುತ್ತದೆ. ಇವಳ ಧಾರ್ಮಿಕ ಭಾವನೆಯು ಕಾವ್ಯದಲ್ಲಿ ವ್ಯಕ್ತವಾಗಿದೆ. ಶೈವರಾಗಿದ್ದ ಸಂಗಮ ಮನೆನತದ ಸೊಸೆಯಾಗಿದ್ದರೂ ಶೈವ–ವೈಷ್ಣವ ಧರ್ಮಗಳನ್ನು ಸಮಾನವಾಗಿ ಕಾಣುವ ಇವಳ ದೃಷ್ಟಿ ಇಲ್ಲಿ ವ್ಯಕ್ತವಾಗಿದೆ. ರಾಮಾಯಣ, ಮಹಾಭಾರತ ಮೊದಲಾದ ಪುರಾಣಗಳ ಹೋಲಿಕೆಗಳನ್ನು ಸನ್ನಿವೇಷಕ್ಕೆ ತಕ್ಕಂತೆ ಬಳಸಿಕೊಂಡಿದ್ದಾಳೆ. ರಾವಣನಂಥ ತುರುಕನನ್ನು

ಸಂಹರಿಸಲು ಕಂಪಣನು ರಾಮನಂತೆ ಹೊರಟನು' (೩–೪೩) ಎಂದು ಹೇಳಿದ್ದಾಳೆ. ಕಂಪಣನನ್ನು ಹರಿಹರಾತ್ಮಜ ಎಂದೂ ಕರೆದಿದ್ದಾಳೆ (೫–೭). ಕಂಪಣನ ಜನನವನ್ನು 'ಪಾರ್ವತಿಯು ಸ್ಕಂದನನ್ನು ಪಡೆದಂತೆ' (೨–೧೪) ಎಂದು ಬಣ್ಣಿಸಿರುವಲ್ಲಿ, ತಾರಕನ ಸಂಹಾರಕ್ಕೆಂದೇ ಸ್ಕಂದನು ಹುಟ್ಟಿದ ವಿಚಾರವನ್ನು, ಯವನರ ಸಂಹಾರಕ್ಕೆಂದೇ ಕಂಪನು ಹುಟ್ಟಿದ ಎಂಬುದಕ್ಕೆ ಹೋಲಿಸಿದ್ದಾಳೆ.

ಶಾಸನಗಳನ್ನೂ ಇವಳು ಗಮನಿಸಿದ್ದಾಳೆ ಎನ್ನುವುದಕ್ಕೆ ಇವಳ ಕಾವ್ಯದ ಕೆಲವು ಸಾಲುಗಳನ್ನು ಕಾಣಬಹುದು. ಬುಕ್ಕನ ಕುರಿತು ಹೇಳುವಾಗ 'ಇವನ ದಾನಾಂಬುವಿನ ತಂಪು ಸಿಂಚನದಿಂದ ಭೂಮಿಯು ಮತ್ತೆ ಹೊಸ ತಳಿರನ್ನು ಬಿಡಲು ಆರಂಭಿಸಿತು' ಎಂಬ ಮಾತು ಎರಡನೆಯ ಹರಿಹರನ ಶಾಸನವೊಂದರಲ್ಲಿ ಈತನು ಮಾಡಿದ 'ಮಹಾದಾನಗಳ ನೀರಿನಿಂದ ಧರ್ಮವೃಕ್ಷವು ಸಮೃದ್ಧಿಯಾಗಿ ಬೆಳೆಯಿತು' ಎಂಬ ವಿವರಣೆ ಬಂದಿದೆ[೪೫].

ಈ ಕೆಲವೊಂದು ವಿಚಾರಗಳು ಇವಳ ವಿದ್ವತ್ತು, ಅಧ್ಯಯನ, ಸಮಕಾಲೀನ ವಿಚಾರಗಳ ಕುರಿತಾಗಿ ಗ್ರಹಿಸಿಕೊಂಡ ಮಾಹಿತಿಗಳನ್ನು ಕುರಿತು ತಿಳಿಸುತ್ತದೆ.

**ಗ್ರಂಥಸಂಪಾದನೆ:** ಮಧುರಾವಿಜಯ ವೀರಕಂಪರರಾಯ ಚರಿತ ಕೃತಿಯು ೧೯೨೪ರಲ್ಲಿ ಜಿ.ಹರಿಹರ ಶಾಸ್ತ್ರಿ ಹಾಗೂ ವಿ.ಶ್ರೀನಿವಾಸ ಶಾಸ್ತ್ರಿಗಳಿಂದ ಸಂಪಾದಿತವಾಗಿ ತಿರುವನಂತಪುರಂನಿಂದ ದ್ವಿತೀಯ ಮುದ್ರಣವಾಗಿ ಪ್ರಕಟವಾಗಿ ಹೊರಬಂದಿದೆ. ಇದನ್ನು ಮದ್ರಾಸು ವಿಶ್ವವಿದ್ಯಾನಿಲಯ ಬಿ.ಎ ತರಗತಿಗಳಿಗೆ ಪಠ್ಯವಾಗಿರಿಸಿತ್ತೆನ್ನುವುದು ಈ ಕೃತಿಯ ಐತಿಹಾಸಿಕ ಹಾಗೂ ಸಾಹಿತ್ಯಕ ಮಹತ್ವವನ್ನು ತಿಳಿಸುತ್ತದೆ. ಈ ಕೃತಿಯ ಸಂಪಾದಕರು ತಿಳಿಸಿರುವಂತೆ ಇದು ಏಕೈಕ ಹಸ್ತಪ್ರತಿಯಿಂದ ಸಂಪಾದನೆ ಮಾಡಲಾದ ಕೃತಿ. ದೊರೆತಿರುವ ಒಂದೇ ಪ್ರತಿಯೂ ಅಸಮಗ್ರಪ್ರತಿಯಾಗಿದ್ದು ಅನೇಕ ಕಡೆಗಳಲ್ಲಿ ತೃಟಿತವಾಗಿದೆ. ಇಂಥ ಕಡೆಗಳಲ್ಲಿ ಅಪೂರ್ಣ ಪಾಠ ಹಾಗೆಯೇ ಉಳಿದಿದೆ. ಇದನ್ನು ಕುಶಾಲಪ್ಪ ಗೌಡ.ಕೆ ಅವರು ಕಾವ್ಯರೂಪದಲ್ಲಿಯೇ ಕನ್ನಡಕ್ಕೆ ಅನುವಾದಿಸಿದ್ದಾರೆ[೪೬].

ಸರಳವಾದ ಭಾಷೆ, ಸಂದರ್ಭೋಚಿತವಾದ ಹೊಸ ಹೊಸ ಪರಿಕಲ್ಪನೆಗಳಿಂದ ಸೊಗಸಾದ ಕಾವ್ಯ ವಾಗಿದೆ. ಅತೀ ಎನಿಸುವಂಥ ಧೀರ್ಘ ವರ್ಣನೆಗಳು ಕಂಡುಬರುವುದಿಲ್ಲ. ಕೋಮಲವಾದ ಪರಿಚಿತ ಪದಗಳ ಮೂಲಕ ಮಾನವಭಾವನೆಗಳ ಸಂಪೂರ್ಣವಾದ ಅಭಿವ್ಯಕ್ತಿಯನ್ನು ಈ ಕಾವ್ಯದಲ್ಲಿ ಕಾಣುತ್ತೇವೆ. ಕವಯತ್ರಿಗೆ ಕೀರ್ತಿಯನ್ನೂ ಆಹ್ಲಾದವನ್ನೂ ಉಂಟುಮಾಡಿರುವ ಕೃತಿ ಇದಾಗಿದೆ. ಇದರ ಕುರಿತಾಗಿ ಸ್ವತಃ ಗಂಗಾದೇವಿಗೆ ಹೆಮ್ಮೆ ಇರುವುದನ್ನು ವ್ಯಕ್ತಪಡಿಸಿದ್ದಾಲೆ.

**ಕರೋತಿ ಕೀರ್ತಿಮರ್ಥ್ಯಾಯ ಕಲ್ಪತೇ ಹಂತಿ ದುಷ್ಕೃತಮ್**
**ಉನ್ನೀಲಯತಿ ಚಾಲ್ಹಾದಮ್ ಕಿಮ್ ನ ಸೂತೇ ಕವೇಃ ಕೃತಿಃ॥**

ಈ ಕಾವ್ಯದಲ್ಲಿ ಹೊರಹೊಮ್ಮಿರುವ ವೈದರ್ಭೀ ಶೈಲಿಯು ಸಹಜವಾಗಿ ಮೂಡಿಬಂದಿದೆ. ಶಬ್ದಗಳಲ್ಲಿ ಚಮತ್ಕಾರವಿದೆ, ಕವಯತ್ರಿಯು ತನ್ನ ಪ್ರೇಮಭರಿತವಾದ ದೃಷ್ಟಿಯಿಂದ ಪ್ರಕೃತಿಯನ್ನು ನೋಡಿದ್ದಾಳೆ. ಆದಕಾರಣದಿಂದಲೇ ಈ ಕಾವ್ಯವು ಗಾತ್ರದಲ್ಲಿ ದೊಡ್ಡದಾಗಿಲ್ಲದಿದ್ದರೂ, ಕವಿತಾಗುಣಗಳ ದೃಷ್ಟಿಯಿಂದ ಬಹು ರೋಚಕವಾಗಿಯೂ ಮತ್ತು ಸರಸವಾಗಿಯೂ ಇದೆ. ಅಲಂಕಾರಗಳನ್ನು ಬಹು ಸರಳವಾಗಿಯೂ ಮತ್ತು ಸ್ವಾಭಾವಿಕವಾಗಿಯೂ ಉಪಯೋಗಿಸಿದ್ದಾಳೆ. ಯುದ್ಧರಂಗದ ಭೀಕರತೆಯನ್ನು ಬಣ್ಣಿಸುವಷ್ಟೇ ತನ್ಮಯಳಾಗಿ ಅಂತಃಪುರದ ಬಣ್ಣನೆಯನ್ನೂ ನೀಡಿದ್ದಾಳೆ. "ಸ್ತ್ರೀಯರೊಂದಿಗಿನ ಕ್ರೀಡಾ–ವಿನೋದಗಳನ್ನು ವರ್ಣಿಸುವಾಗ ವಿದುಷಿಯಾದ ಗಂಗಾದೇವಿಯಲ್ಲಿ ಸವತಿ ಮತ್ಸರ ಮುಂತಾದ ಕ್ಷುಲ್ಲಕ ಗುಣಗಳು ಕಿಂಚಿತ್ತೂ ಇರಲಿಲ್ಲವೆಂದು ಭಾವಿಸಬಹುದು"[೪೭].

ಗಂಗಾದೇವಿಯು ಮಹಾಕಾವ್ಯದ ಲಕ್ಷಣವನ್ನನುಸರಿಸಿ ಕಾವ್ಯ ರಚಿಸಿದ್ದಾಳೆ. ಒಂದೊಂದು ಸರ್ಗವನ್ನೂ ಬೇರೆ ಬೇರೆ ಛಂದಸ್ಸಿನ ವೃತ್ತಗಳಲ್ಲಿ ರಚಿಸಿದ್ದಾಳೆ. ಸರ್ಗಾಂತ್ಯದ ಪದ್ಯ ಭಿನ್ನ ಛಂದಸ್ಸಿನಿಂದ ಕೂಡಿದೆ. ಈ ಕಾವ್ಯದಲ್ಲಿ ಶೃಂಗಾರ ಹಾಗೂ ವೀರರಸಗಳು ಚೆನ್ನಾಗಿ ಮೂಡಿಬಂದಿದೆ. ಶೈಲಿಯೂ ಮಧುರವಾಗಿದೆ, ಕವಯತ್ರಿಯ ರಸಿಕತೆ, ಲೋಕಾನುಭವ, ವಿವೇಕ, ರಾಷ್ಟ್ರಭಕ್ತಿ, ರಾಜಕೀಯಪರಿಜ್ಞಾನಗಳು ಕಾವ್ಯದಲ್ಲಿ ಮೂಡಿಬಂದಿವೆ. ಇಲ್ಲಿ ಸಂಸ್ಕೃತಕಾವ್ಯಗಳ ಸಂಪ್ರದಾಯವೂ ಇದೆ–ಹೊಸತನವೂ ಇದೆ"[೪೮].

ಕವಯಿತ್ರಿಯೇ ಹೇಳಿದಂತೆ ಕಾವ್ಯವು ಕೀರ್ತಿಯನ್ನು, ಧನವನ್ನು ತಂದುಕೊಡುವುದಲ್ಲದೆ, ಪಾಪವನ್ನು ನಿವಾರಿಸುತ್ತದೆ, ಸಂತೋಷವನ್ನು ವರ್ಧಿಸುತ್ತದೆ. ಮಹಾಕವಿಯ ಕೃತಿಯಿಂದ ಯಾವ ಪ್ರಯೋಜನ ತಾನೆ ಉಂಟಾಗುವುದಿಲ್ಲ ಎಂದು ಕಾವ್ಯಪ್ರಯೋಜನವನ್ನು ಹೇಳಿದ್ದಾಳೆ. 'ಮನಃಕ್ಲೇಷವನ್ನು ತೊಳೆದು ಕೀರ್ತಿಯನ್ನೂ ಆನಂದವನ್ನೂ ಕಾವ್ಯ ಕೊಡಬಲ್ಲದು." ಕವಯತ್ರಿಗೆ ಕೀರ್ತಿಯನ್ನೂ, ಓದುಗರಿಗೆ ಆಹ್ಲಾದವನ್ನೂ ಉಂಟುಮಾಡುವ ಕನ್ನಡಿತಿ ಇಂತಹ ಕೃತಿಯೊಂದನ್ನಿತ್ತುದು ನಾಡಿಗೆ ಹೆಮ್ಮೆಯ ವಿಷಯ[೪೯].

ವಿಜಯನಗರ ಸಂಸ್ಥಾಪನೆಯಾದ ಕೆಲವೇ ವರ್ಷಗಳಲ್ಲಿ ಆ ರಾಜ್ಯಕ್ಕೆ ಸಂಬಂಧಸಿದಂತೆ ರಚಿತವಾದ ಚಾರಿತ್ರಿಕ ಕಾವ್ಯ ಎಂಬ ಹೆಗ್ಗಳಿಕೆ ಪಡೆದ ಕೃತಿ ಮಧುರಾವಿಜಯಂ ಅಥವಾ ವೀರಕಂಪರಾಯ ಚರಿತಂ.

**ತಿರುಮಲಾಂಬಾ**

ವಿಜಯನಗರ ಕಾಲದ ಮತ್ತೊಂದು ಪ್ರಸಿದ್ಧ ಕಾವ್ಯ 'ವರದಾಂಬಿಕಾ ಪರಿಣಯ ಚಂಪು'. ಈ ಸಂಸ್ಕೃತ ಕಾವ್ಯವನ್ನು ಅಚ್ಯುತರಾಯನ ಅರಸಿ ತಿರುಮಲಾಂಬ ರಚಿಸಿದ್ದಾಳೆ. ಕೃಷ್ಣದೇವರಾಯನ ನಂತರ ವಿಜಯನಗರವನ್ನಾಳಿದ ಅರಸು ಅಚ್ಚ್ಯುತರಾಯನ ಆಳ್ವಿಕೆಯ ಕಾಲವನ್ನು ಇತಿಹಾಸಕಾರರು ಕ್ರಿ.ಶ.೧೫೨೯–೧೫೪೨ ಎಂದು ಗುರುತಿಸಿದ್ದಾರೆ. ಈ ಕಾವ್ಯದಲ್ಲಿ ಅಚ್ಯುತರಾಯನ ಮಗ ಚಿನ್ನವೆಂಕಟಾದ್ರಿಗೆ ಯುವರಾಜ ಪಟ್ಟಾಭಿಷೇಕ ನಡೆದ ವಿಚಾರ ಉಲ್ಲೇಖಿಸಿರುವುದರಿಂದ ಕಾವ್ಯವು ಕ್ರಿ.ಶ.೧೫೪೦ರ ಆಸುಪಾಸಿನಲ್ಲಿ ರಚಿತವಾಗಿದೆ ಎಂದು ತರ್ಕಿಸಬಹುದು. ಅಚ್ಯುತರಾಯನ ಕಾಲದವಳಾದ ಕವಯತ್ರಿಯ ಕಾಲವೂ ಕೂಡ ಹದಿನಾರನೆಯ ಶತಮಾನದ ಪೂರ್ವಾರ್ಧವೆಂದು ಖಚಿತವಾಗಿ ಹೇಳಬಹುದು.

ತಿರುಮಲಾಂಬೆಯು ಅಚ್ಯುತರಾಯನ ಪಟ್ಟದರಸಿಯಲ್ಲದಿದ್ದರೂ ಆತನ ಹಲವು ಅರಸಿಯರಲ್ಲೊಬ್ಬಳಾಗಿದ್ದಳು. ತನ್ನನ್ನು 'ರಾಜಾಧಿರಾಜಾಚ್ಯುತ ಸಾರ್ವಭೌಮಪ್ರೇಮ ಸರ್ವಸ್ವಭುವಾ' ಎಂದು ಕರೆದುಕೊಂಡಿರುವುದರಿಂದ, ಅರಸನ ಪ್ರಿಯ ಮಡದಿಯಾಗಿದ್ದಳೆನ್ನುವುದು ತಿಳಿದುಬರುತ್ತದೆ.

ಕವಯತ್ರಿ ತಿರುಮಲಾಂಬಾ, ಕಾವ್ಯದಲ್ಲಿ ತನ್ನ ಕುರಿತಾದ ಯಾವ ವಿಚಾರವನ್ನೂ ಹೇಳಿಕೊಂಡಿಲ್ಲ. ಕಾವ್ಯದ ನಾಯಕ ತನ್ನ ಪತಿ ಅಚ್ಯುತರಾಯನಾದರೂ, ಆ ಕಾವ್ಯದಲ್ಲಿ ತಾನು ಪಾತ್ರವಾಗಿ ಬಂದಿಲ್ಲ. ಹಲವು ಶಾಸನಗಳಲ್ಲಿ ತನ್ನನ್ನು 'ಓದುವ' ತಿರುಮಲಾಂಬೆ ಎಂದು ಕರೆದುಕೊಂಡಿರುವ ಕವಯತ್ರಿಯು, ಅಚ್ಯುತರಾಯನ ಆಸ್ಥಾನದಲ್ಲಿ ಓದುವ ಕಾಯಕದಲ್ಲಿದ್ದಿರ ಬಹುದು. ಇವಳ ಪಾಂಡಿತ್ಯ ಹಾಗೂ ಇತರ ಗುಣಗಳನ್ನು ಮೆಚ್ಚಿ ಅರಸನು ಇವಳನ್ನು ವರಿಸಿರುವ ಸಾಧ್ಯತೆಗಳಿವೆ. ಶ್ರೀರಂಗಂನ ಶಾಸನವು ಇವಳನ್ನು ಸ್ಪಷ್ಟವಾಗಿ 'ರಾಣಿ ತಿರುಮಲಾಂಬಾ' ಎಂದು ಉಲ್ಲೇಖಿಸಿದೆ[೫೦]. 'ಸುಭದ್ರಾ ಪರಿಣಯಂ' ಎಂಬ ತೆಲುಗು ಕೃತಿಯೂ ಇವಳನ್ನು ಅಚ್ಯುತರಾಯನ ಅರಸಿಯೆಂದೇ ಕರೆದಿದೆ. ಈ ಕಾವ್ಯವನ್ನು ಸಂಪಾದಿಸಿರುವ ಡಾ.ಸೂರ್ಯಕಾಂತ ಅವರು ಕಾವ್ಯಕ್ಕೆ ಸುದೀರ್ಘ ಮುನ್ನುಡಿ ಹಾಗೂ ಇಂಗ್ಲಿಷ ಅನುವಾದವನ್ನು ನೀಡಿದ್ದಾರೆ. ಇವರು ಅಚ್ಯುತರಾಯನ ಕಾಲದಲ್ಲಿ ಶಾಸನಗಳನ್ನು ರಚಿಸಿರುವ ಓದುವ

ತಿರುಮಲಾಂಬೆ ಹಾಗೂ 'ವರದಾಂಬಿಕಾ ಪರಿಣಯ ಚಂಪು' ಕೃತಿ ರಚಿಸಿರುವ ತಿರುಮಲಾಂಬ ಏಕವ್ಯಕ್ತಿಗಳಾಗಿದ್ದಾರೆ ಎಂದು ಹಲವಾರು ಆಧಾರಗಳಿಂದ ಸ್ಪಷ್ಟಪಡಿಸಿದ್ದಾರೆ[೩೧].

'ವರದಾಂಬಿಕಾ ಪರಿಣಯ ಚಂಪು' ಕೃತಿಯು ಇವಳು ರಚಿಸಿರುವ ಏಕೈಕ ಕಾವ್ಯವಾಗಿದೆ. ಆದರೆ ಇವಳು ತನ್ನ ಪತಿ ಅಚ್ಯುತರಾಯ ಹಂಪಿಯ ವಿಜಯವಿಟ್ಠಲ ದೇವಾಲಯದಲ್ಲಿ ನಡೆಸಿರುವ 'ಸುವರ್ಣ ಮೇರು' ದಾನದ ಕುರಿತಾಗಿ ಶಾಸನಗಳನ್ನು ರಚಿಸಿದ್ದಾಳೆ. ರಾಜಧಾನಿ ಹಂಪಿಯಲ್ಲಿ ಸಂಕ್ಷಿಪ್ತವಾದ ವಿಚಾರವನ್ನು ತಿಳಿಸವ ಶಾಸನವನ್ನು ರಚಿಸಿದರೆ, ಲೇಪಾಕ್ಷಿ ಹಾಗೂ ಶ್ರೀರಂಗಂ ದೇವಾಲಯಗಳಲ್ಲಿ ಇವಳು ರಚಿಸಿರುವ ಸುದೀರ್ಘ ಶಿಲಾಶಾಸನಗಳು ದೊರಕುತ್ತವೆ[೩೨]. ಇದಲ್ಲದೆ ಕಾಂಚಿಪುರದಲ್ಲಿ ಅರಸ ಅಚ್ಯುತರಾಯನ 'ಮುಕ್ತಾತುಲಾಭಾರ'ಕ್ಕೆ ಸಂಬಂಧಿಸಿದ ಮೂರು ಶ್ಲೋಕಗಳನ್ನೂ ರಚಿಸಿದ್ದಾಳೆ[೩೩]. ಇವಳು ರಾಣಿಯ ಸ್ಥಾನಮಾನಗಳನ್ನು ಗಳಿಸಿದ್ದಳೆಂಬುದು ಇಲ್ಲಿನ ಶಾಸನಗಳಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ.

'ವರದಾಂಬಿಕಾ ಪರಿಣಯಂ' ಕೃತಿಯ ಕಡೆಯ ಭಾಗಗಳಲ್ಲಿ ಇವಳು ವಿದ್ವಾಂಸರಿಗೂ, ಕವಿಗಳಿಗೂ ಆಶ್ರಯ ನೀಡಿದುದಾಗಿ ತಿಳಿಸಿದ್ದಾಳೆ. 'ಕಾವ್ಯ, ನಾಟಕ, ಪುರಾಣಗಳಷ್ಟೇ ಅಲ್ಲದೆ ಆಗಮರಹಸ್ಯಸಾರಗಳನ್ನು ಅರಿಯುವ ಶಕ್ತಿಯುಳ್ಳವಳೂ, ಗತಿಯುಳ್ಳಂಥವಳು, ಒಂದೇ ಸಲ ಕೇಳಿ ತಿಳಿಯುವ ಗ್ರಹಣಶಕ್ತಿಯುಳ್ಳವಳು (ಏಕಸಂದಿಗ್ರಾಹಿ) ಅನೇಕ ಭಾಷೆಗಳನ್ನು ಬಲ್ಲವಳು, ಮಧುರ ಕಂಠದವಳು, ಕವಿಗಳಿಗೆ ಆಶ್ರಯದಾತಳು, ಶಾಸನಗಳನ್ನು ಬರೆದವಳು' ಎಂದು ತನ್ನನ್ನು ಪರಿಚಯಿಸಿಕೊಂಡಿದ್ದಾಳೆ.

ಇಲ್ಲಿ ಇವಳ ಬಹುಮುಖ ಪ್ರತಿಭೆ ತಿಳಿದುಬರುತ್ತದೆ. ಇವಳ ಕಾವ್ಯವನ್ನು ಓದಿದವರು ಇವಳ ಸಂಸ್ಕೃತ ಪಾಂಡಿತ್ಯವನ್ನು ಮೆಚ್ಚದಿರರು, ಅಂತೆಯೇ ಇವಳು ಇನ್ನೂ ಹಲವು ಭಾಷೆಗಳನ್ನು ಬಲ್ಲವಳೆಂದು ಹೇಳಿಕೊಂಡಿದ್ದಾಳೆ. ಅಲ್ಲದೆ ತಾನು ಸರಸಪ್ರಬಂಧ ರಚಿಸುವ ಸಾಮರ್ಥ್ಯವುಳ್ಳವಳೆಂದೂ ಕವಿಗಳ ಗೋಷ್ಠಿಗೆ ಆನಂದವನ್ನು ತರುವವಳೆಂದೂ ಹೇಳಿಕೊಂಡಿರುವುದು ಇವಳ ಇನ್ನೂ ಕೆಲವು ರಚನೆಗಳಿದ್ದಿರ ಬಹುದೆ? ಎಂಬ ಅನುಮಾನ ಮೂಡಿಸುತ್ತದೆ. "ವಿಪಂಚೀಪ್ರಪಂಚಿತ ಪಂಚಮ ಮಧುರಿ ಮೋದಂಚನ ವಿಕಸ್ವರ ಕಂಠಸ್ವರಯಾ..." ಎಂದು ತನ್ನ ಕೋಗಿಲೆಯಂತಹ ಇನಿದನಿ ಕುರಿತು ಹೆಮ್ಮೆ ವ್ಯಕ್ತಪಡಿಸಿದ್ದಾಳೆ[೩೪].

ಕವಯತ್ರಿ ತಿರುಮಲಾಂಬೆಯು, ಈ ಕೃತಿಯ ರಚನೆಯಿಂದಾಗಿ "ಇಡೀ ಸಂಸ್ಕೃತ ಸಾಹಿತ್ಯದಲ್ಲಿಯೇ ಚಂಪೂಕಾವ್ಯ ರಚಿಸಿದ ಏಕೈಕ ಮಹಿಳೆ" ಎಂಬ ಹಿರಿಮೆಗೆ ಪಾತ್ರಳಾಗಿದ್ದಾಳೆ[೩೫]. ಭಾರತೀಯ ಇತಿಹಾಸದ ಮಧ್ಯಯುಗದಲ್ಲಿ ರಚಿತವಾದ ಹಲವಾರು ಚಂಪೂ ಕಾವ್ಯಗಳಲ್ಲಿ ಮೊದಲ ಸ್ಥಾನದಲ್ಲಿ ವರದಾಂಬಿಕಾಪರಿಣಯ ಚಂಪೂ ನಿಲ್ಲುತ್ತದೆ ಎಂಬುದು ಸಂಸ್ಕೃತ ಕಾವ್ಯ ವಿಮರ್ಶಕ ಬಲದೇವ ಉಪಾಧ್ಯಾಯ ಅವರು ಅಭಿಪ್ರಾಯ ಪಟ್ಟಿದ್ದಾರೆ[೩೬].

ಈ ಕಾವ್ಯದಲ್ಲಿ ಅಚ್ಯುತರಾಯನ ಜೀವನಚರಿತ್ರೆಯನ್ನು ವಿವರಿಸುವುದರ ಜೊತೆಗೆ ವಿಜಯನಗರವನ್ನಾಳಿದ ತುಳುವ ವಂಶದ ವೈಭವೀಕರಣಯುಕ್ತವಾದ, ಪ್ರಶಂಸಾತ್ಮಕವಾದ ವಿವರಗಳೂ ಬಂದಿವೆ. ಪುರಾಣಪ್ರಸಿದ್ಧವಾದ ಚಂದ್ರವಂಶದ ಅರಸರನ್ನು ಹೆಸರಿಸುತ್ತಾ, ಆ ವಂಶದಲ್ಲಿ ಜನಿಸಿದ ಈಶ್ವರನಾಯಕ ಹಾಗೂ ಬುಕ್ಕಮಾಂಬೆಯರ ಸುತನಾಗಿ ನರಸಿಂಹ ಹುಟ್ಟಿದ ವಿಚಾರ ತಿಳಿಸಿದ್ದಾಳೆ. ಇವನ ಮಗ ಅಚ್ಯುತರಾಯನೇ ಕಾವ್ಯದ ನಾಯಕ. ಕಾವ್ಯದ ಆರಂಭದಲ್ಲಿ ನರಸಿಂಹನ ರೂಪ, ಗುಣ, ಪರಾಕ್ರಮ, ದಿಗ್ವಿಜಯಗಳು, ಚೋಳದೇಶ, ಸಮುದ್ರ, ಕಾವೇರಿ ಹಾಗೂ ಯುದ್ಧದ ವರ್ಣನೆಗಳು ವಿವರವಾಗಿ ಬಂದಿವೆ. ದಿಗ್ವಿಜಯದನಂತರ ನರಸಿಂಹನು ವಿದ್ಯಾನಗರಕ್ಕೆ ಹಿಂದಿರುಗಿ ಬರುತ್ತಾನೆ. ಆನಂತರ ಓಮಾಂಬೆಯೊಂದಿಗೆ ವಿವಾಹ ನೆರವೇರುತ್ತದೆ. ಮುಂದೆ ಅಚ್ಯುತರಾಯನ ಜನನ, ತಾರುಣ್ಯ, ವಿದ್ಯಾಭ್ಯಾಸದ ವಿವರಗಳು ಬಂದಿವೆ. ನರಸಿಂಹನ ಮರಣಾನಂತರ, ಮಗ ಅಚ್ಯುತರಾಯನು ವಿಜಯನಗರದ ಸಿಂಹಾಸನವನ್ನೇರುತ್ತಾನೆ. ಭವಾನೀ ಮಂದಿರಕ್ಕೆ ಬಂದಾಗ ಒಮ್ಮೆ ರಾಜಕುಮಾರಿ ವರದಾಂಬೆಯ

ಭೇಟಿಯಾಗುತ್ತದೆ, ಒಬ್ಬರನ್ನೊಬ್ಬರು ಕಂಡು ಮನಸೋತು ಪರಿತಪಿಸುವ ಶೃಂಗಾರದ ಚಿತ್ರಣವನ್ನು ಕವಯತ್ರಿಯು ವಿಸ್ತಾರವಾಗಿ ನೀಡಿದ್ದಾಳೆ, ವಿವಾಹದೊಂದಿಗೆ ಇವರ ಪ್ರೇಮ ಪ್ರಕರಣವು ಸುಖಾಂತ ಗೊಳ್ಳುತ್ತದೆ, ಮುಂದೆ ಚಿನವೆಂಕಟಾದ್ರಿಯ ಜನನ, ಯುವರಾಜ ಪಟ್ಟಾಭಿಷೇಕದೊಂದಿಗೆ ಕಾವ್ಯ ಮುಕ್ತಾಯವಾಗುತ್ತದೆ.

**ಕಾವ್ಯ:** ಬೇರೆ ಕೃತಿಗಳಲ್ಲಿ ಕಂಡುಬರುವಂತೆ ಈ ಕಾವ್ಯವು ಆಶ್ವಾಸ ಅಥವಾ ಪರಿಚ್ಛೇದಗಳಲ್ಲಿ ವಿಭಕ್ತವಾಗದೆ ಒಂದೇ ಪ್ರಕರಣವಾಗಿರುವ ರುಚಿರ ಗ್ರಂಥವಾಗಿದೆ[೫೭], ಈ ಇಡೀ ಕಾವ್ಯದ ಮೊದಲರ್ಧವನ್ನು ಅಚ್ಯುತರಾಯನ ತಂದೆ ನರಸಿಂಹನ ದಕ್ಷಿಣ ಭಾರತದ – ವಿಶೇಷವಾಗಿ ಚೋಳಮಂಡಲದ ದಿಗ್ವಿಜಯದ ವರ್ಣನೆ ಎಂದೂ, ದ್ವಿತೀಯಾರ್ಧವನ್ನು ನರಸಿಂಹನನಂತರ ಸಿಂಹಾಸನದಲ್ಲಿ ಅಭಿಷಿಕ್ತನಾದ ಅಚ್ಯುತರಾಯನು ರಾಜಕುಮಾರಿ ವರದಾಂಬಿಕಾ ಎಂಬ ಸುಂದರಿಯನ್ನು ಕಂಡು ಮೋಹಗೊಂಡು ಅವಳೊಡನೆ ವಿವಾಹವಾಗುವ ವರ್ಣನೆ ಎಂದು ಎರಡು ವಿಭಾಗದಲ್ಲಿ ಕಾಣಬಹುದು.

ಈ ಕಥೆಯನ್ನು ಕವಯತ್ರಿಯು ತನ್ನ ಪ್ರತಿಭೆಯಿಂದ ವಿಸ್ತಾರವಾಗಿ ರಚಿಸಿದ್ದಾಳೆ. ಪದ್ಯಕ್ಕಿಂತಲೂ ಗದ್ಯವೇ ಇದರಲ್ಲಿ ಪ್ರಚುರವಾಗಿದೆ. ಇಲ್ಲಿನ ಪ್ರೌಢವಾದ, ಸಮಾಸಬಹುಳವಾದ ಶೈಲಿ ಪಾಂಡಿತ್ಯಪೂರ್ಣವೆನಿಸಿದೆ. ವರ್ಣನೆ ಕಲೆಯಲ್ಲಿಯೂ ತಿರುಮಲಾಂಬಾ ವಿಶೇಷವಾದ ಸಫಲತೆಯನ್ನು ಗಳಿಸಿದ್ದಾಳೆನ್ನುವ ಹಿರಿಮೆ ಈ ಕಾವ್ಯ ಅವಳಿಗೆ ತಂದುಕೊಟ್ಟಿದೆ. ತಿರುಮಲಾಂಬೆಯು, ರಾಜ ನರಸಿಂಹನ ಯುದ್ಧದ ವರ್ಣನೆಯಲ್ಲಿ ವೀರರಸ, ಪ್ರಣಯದ ಕಥೆಯ ಚಿತ್ರಣದಲ್ಲಿ ಶೃಂಗಾರರಸ ಮತ್ತು ಋತುವರ್ಣನೆಯಲ್ಲಿ ಚಮತ್ಕಾರದ ವಿನ್ಯಾಸವನ್ನು ತಂದಿದ್ದಾಳೆ. "ಅಚ್ಯುತರಾಯನ ಅಂಗ ಪ್ರತ್ಯಂಗಗಳ ವರ್ಣನೆಯು ಬಹು ಉತ್ಸಾಹದಿಂದ ಕೂಡಿದೆ. ಈ ವರ್ಣನೆಯು ಎಷ್ಟು ಸುಂದರ ಹಾಗೂ ರೋಚಕವಾಗಿದೆಯೆಂದರೆ, ಪ್ರಾಯಃ ಯಾವ ಸ್ತ್ರೀಯೂ ಪುರುಷನ ವರ್ಣನೆಯನ್ನು ಇಷ್ಟು ಸಾಂಗೋಪಾಂಗವಾಗಿ ಮಾಡಿರುವುದು ಕಂಡುಬರುವುದಿಲ್ಲ"[೫೮] ಕವಯತ್ರಿಗಿರುವ ಸಂಸ್ಕೃತ ಭಾಷೆಯ ಮೇಲಿನ ಪ್ರಭುತ್ವ, ಅಲಂಕಾರಗಳ ವಿನ್ಯಾಸದಲ್ಲಿನ ಅದ್ಭುತ ಸಾಮರ್ಥ್ಯ, ಈ ಕಾವ್ಯವನ್ನು ಚಂಪೂಕಾವ್ಯಗಳಲ್ಲಿ ಉತ್ತಮವಾದ ಸ್ಥಾನದಲ್ಲಿರಿಸಲು ಕಾಣರವಾಗಿದೆ.

**ಕರಕೃತಮಪರಾಧಂ ಕ್ಷಂತುಮರ್ಹಂತಿ ಸಂತಃ**
**ಅಕ್ಷರಂ ಯತ್ ಪರಿಭ್ರಷ್ಟಂ ಮಾತ್ರಾಹೀನಂ ತು ಯದ್ ಭವೇತ್ ।**
**ಕ್ಷಂತುಮರ್ಹಂತಿ ವಿದ್ವಾಂಸಃ ಕ್ಷಮಾ ಹಿ ವಿದುಷಾಂ ಧನಮ್ ॥**

ಅಕ್ಷರ ಅಥವಾ ಮಾತ್ರೆ ಬಿಟ್ಟುಹೋಗಿದ್ದರೆ ವಿದ್ವಾಂಸರು ಕ್ಷಮಿಸಬೇಕು ಎಂದು ಕವಯತ್ರಿ ತಿರುಮಲಾಂಬಳು ವಿನಮ್ರತೆಯಿಂದ ಕೇಳಿದ್ದಾಳೆ.

**ಐತಿಹಾಸಿಕ ವಿಚಾರ:** **'**ವರದಾಂಬಿಕೆಯ ಪರಿಣಯ ಚಂಪು**'** ಕೃತಿಯೊಂದು ಐತಿಹಾಸಿಕ ಕಾವ್ಯ ವೆನಿಸಿರುವುದರಿಂದ ಇಲ್ಲಿನ ಐತಿಹಾಸಿಕ ವಿಚಾರಗಳನ್ನು ವಿಶ್ಲೇಷಿಸಬೇಕಾಗಿದೆ. ಕಾವ್ಯದ ಕಥೆಯು ಕ್ರಿ.ಶ.೧೪೯೭ ರಿಂದ ೧೫೦೩ರ ವರೆಗೆ ಆಳಿದ ನರಸನಾಯಕ ಮತ್ತು ೧೫೩೦–೧೫೪೨ರ ವರೆಗೆ ಆಳಿದ ಅವನ ಮಗ ಅಚ್ಯುತದೇವರಾಯನ ಕಾಲದ ಘಟನೆಗಳಿಂದ ಕೂಡಿದೆ. ಅಚ್ಯುತರಾಯನ ಮಗ ಚಿನ್ನವೆಂಕಟಾದ್ರಿಗೆ ಯುವರಾಜ ಪಟ್ಟಾಭಿಷೇಕ ನಡೆಯುವಲ್ಲಿ ಕಾವ್ಯ ಮುಗಿಯುತ್ತದೆ.

ವಿಜಯನಗರವನ್ನಾಳಿದ ಸಂಗಮ, ಸಾಳ್ವ, ತುಳುವ ಹಾಗೂ ಅರವೀಡು ವಂಶಗಳಲ್ಲಿ ನರಸನಾಯಕನು ತುಳುವ ವಂಶದ ಪ್ರಸಿದ್ಧ ಅರಸು ಕೃಷ್ಣದೇವರಾಯನ ತಂದೆ. ನರಸನಾಯಕನಿಗೆ ಮೂರುಜನ ಹೆಂಡತಿಯರಿದ್ದರೂ ಮೂರನೆಯವಳಾದ, ಅಚ್ಯುತರಾಯನ ತಾಯಿ ಓಮಾಂಬೆಯನ್ನುಳಿದು ಇತರರ ಹೆಸರನ್ನು ಕಾವ್ಯದಲ್ಲಿ ಹೇಳಿಲ್ಲ. ಅಚ್ಯುತರಾಯನಿಗಿಂತ ಮೊದಲು, ೨೦ ವರ್ಷ ವಿಜಯನಗರದ ರಾಜ್ಯವಾಳಿದ್ದ ಕೃಷ್ಣದೇವರಾಯನಾಗಲೀ, ಅವನ

ಅಣ್ಣ ವೀರನರಸಿಂಹನ ಉಲ್ಲೇಖವಾಗಲೀ ಕೃತಿಯಲ್ಲಿಲ್ಲ. ಹಲವು ರಾಜಕೀಯ ಕಾರಣಗಳಿಂದಾಗಿ, ವೈಮನಸ್ಯ ದಿಂದಾಗಿ ಉಲ್ಲೇಖ ಮಾಡಿರಲಿಕ್ಕಿಲ್ಲ[೫೯].

ನರಸರಾಜ ಮತ್ತು ಅಚ್ಯುತರಾಯರ ನಡುವಿನ ಐತಿಹಾಸಿಕ ಘಟನೆಗಳನ್ನು ಉಲ್ಲೇಖಿಸಿಲ್ಲದಿರುವುದು ಐತಿಹಾಸಿಕ ಕೊರತೆಯಾಗಿದೆ.

ತಿರುಮಲಾಂಬೆಯು ತನ್ನ ಕಾವ್ಯದ ೫೧–೫೫ರ ವರೆಗಿನ ಪದ್ಯಗಳಲ್ಲಿ ವಿಜಯನಗರದ ಸಿಂಹಾಸನವನ್ನೇರಿದ ತನ್ನ ಮಾವ ನರಸಿಂಹ ನಡೆಸಿದ ದಿಗ್ವಿಜಯ ಕುರಿತಾಗಿ ತಿಳಿಸಿದ್ದಾಳೆ. ಆದರೆ ಇದನ್ನು ಇತಿಹಾಸಕಾರರು ತಳ್ಳಿಹಾಕುತ್ತಾರೆ.[೬೦] ಮೊದಲನೆಯದಾಗಿ ತುಳುವ ನರಸಿಂಹನು ವಿಜಯನಗರದ ಸಿಂಹಾಸವನ್ನು ಏರಿದವನೇ ಅಲ್ಲ. ಕ್ರಿ.ಶ.೧೪೯೫ರಲ್ಲಿ ಸೇನಾಪತಿಯಾಗಿ ಆಳ್ವಿಕೆ ನಡೆಸುತ್ತಿದ್ದ ಈತ, ಕ್ರಿ.ಶ.೧೪೯೬ರಲ್ಲಿ ಪ್ರಧಾನಿ ಯಾಗಿದ್ದನೆಂದು ಮಾಗಡಿಯ ೩೩ನೆಯ ಶಾಸನ ತಿಳಿಸುತ್ತದೆ[೬೧]. ಮುಂದೆ ೧೫೦೩ ರಲ್ಲಿ ಸಾಳ್ವ ಇಮ್ಮಡಿ ನರಸಿಂಹನ ಅಧೀನದಲ್ಲಿ ಕೆಲವು ಪ್ರದೇಶಗಳನ್ನು ಆಳ್ವಿಕೆ ನಡೆಸುತಿದ್ದ ವೇಳೆಯಲ್ಲಿ ಶಿವಲೋಕಕ್ಕೆ ಸಂದ ವಿಚಾರವನ್ನು ಶಾಸನವೊಂದು ತಿಳಿಸುತ್ತದೆ[೬೨]. ಈ ಎಲ್ಲ ಆಧಾರಗಳಿಂಗ ತುಳುವ ನರಸಿಂಹನಾಯಕ ವಿಜಯನಗರದ ಅಭಿಷಿಕ್ತ ದೊರೆ ಯಾಗಲೀ, ಸ್ವತಂತ್ರ ರಾಜ್ಯಾಡಳಿತ ನಡೆಸಿದವನಾಗಲೀ ಆಗಿರಲಿಲ್ಲ. ಆದರೆ ಇವನ ನಂತರ ಇವನ ಹಿರಿಯ ಹೆಂಡತಿಯ ಮಕ್ಕಳಾದ ಭುಜಬಲ ನರಸಿಂಹ ಹಾಗೂ ಪ್ರಸಿದ್ಧ ಅರಸು ಕೃಷ್ಣದೇವರಾಯರು ಕ್ರಮವಾಗಿ ನಾಲ್ಕು ಹಾಗೂ ಇಪ್ಪತ್ತು ವರ್ಷಗಳ ಕಾಲ ವಿಜಯನಗರದ ಗದ್ದುಗೆ ಏರಿ ಆಳ್ವಿಕೆ ನಡೆಸಿದರು.

ತಿರುಮಲಾಂಬೆಯು ನರಸಿಂಹನಾಯಕನ ನಂತರ ಅಚ್ಯುತರಾಯನ ಸಿಂಹಾಸನವನ್ನೇರಿದ ವಿಚಾರ ತಿಳಿಸಿ ಕಾವ್ಯವನ್ನು ಮುಂದುವರೆಸಿದ್ದಾಳೆ.

ಕಾವ್ಯದ ಮೊದಲರ್ಧವು ಕೇವಲ ಶಬ್ದಾಡಂಭರದಿಂದ ಕೂಡಿದ್ದರು ವರ್ಣನಾಪ್ರಧಾನವೂ ಆಗಿದೆ. ಮುಂದಿನ ಭಾಗದಲ್ಲಿ ಕಥೆ ಹೆಚ್ಚು ಹದವಾಗಿ ಬೆಳೆದಿದೆ, ಶಬ್ದಗಳ ಅಬ್ಬರ ತುಸು ಕಡಿಮೆಯಾಗಿದೆ. ಕಲ್ಪನೆಗಳಲ್ಲಿ ಒತ್ತಾಯ ಕಡಿಮೆಯಾಗುತ್ತ ನಡೆದು ಸಹಜತೆ ಮೂಡುತ್ತಾ ಬಂದಿದೆ. ಗದ್ಯಪದ್ಯಗಳ ಸಾಮರಸ್ಯ ಹೆಚ್ಚಿದೆ. ಕೇವಲ ಉದ್ದುದ್ದಾದ ವರ್ಣನೆಗಳು ಕಡಿಮೆಯಾಗಿ ಪಾತ್ರಗಳ ಸಂಖ್ಯೆ ಹೆಚ್ಚಿ ನಡುನಡುವೆ ಸಂವಾದಗಳು ಕೂಡಿಕೊಂಡಿವೆ. ಮೊದಲಭಾಗದಲ್ಲಿ ಕವಯತ್ರಿಯು ಸಂಸ್ಕೃತಭಾಷೆಯ ಮೇಲೆ ತನಗಿರುವ ಪ್ರಭುತ್ವವನ್ನು ತೋರಿಸುವ ಚಾಪಲ್ಯವೇ ಹೆಚ್ಚಾಗಿದ್ದು ಸಹಜ ಸುಂದರ ಕಾವ್ಯ ನಿರೂಪಣೆಯ ಕಡೆಗೆ ಅಷ್ಟೊಂದು ಗಮನಹರಿಸಿಲ್ಲದಿರುವುದನ್ನು ಗಮನಿಸಬಹುದು.

“ಬಹುಶಃ ಕವಯತ್ರಿಯು ಕಾವ್ಯದ ಮೊದಲಿನ ಭಾಗವನ್ನು ಬರೆದು ಕೆಲಕಾಲದ ನಂತರ ಮುಂದಿನ ಭಾಗವನ್ನು ಬರೆದಿರಬೇಕು. ಕಾವ್ಯವನ್ನು ಬರೆಯಲು ಆರಂಭಿಸುವಾಗ ತುಳು ಮನೆತನದ ಸಂಸ್ಥಾಪಕ ನರಸಿಂಹನ ಚರಿತ್ರೆಯಿಂದಾರಂಭಿಸಿ ವಿಸ್ತಾರವಾಗಿ ಬರೆಯುವ ಉದ್ದೇಶವನ್ನಿಟ್ಟುಕೊಂಡು ನರಸಿಂಹನ ದಿಗ್ವಿಜಯವೇ ಮೊದಲಾದುವುಗಳನ್ನು ದೀರ್ಘವಾಗಿ ಬರೆದಿರಬೇಕು. ಆನಂತರದ ರಾಜಕೀಯ ಕಾರಣಗಳಿಂದ ನಡುವಿನ ಕೆಲವು ವಿಚಾರಗಳನ್ನು ಬಿಟ್ಟು ಕೇವಲ ಅಚ್ಯುತರಾಯನ ವೃತ್ತಾಂತವನ್ನು ಮುಂದುವರೆಸಿರಬೇಕು”[೬೩]

ಪ್ರಾರಂಭದ ಭಾಗದಲ್ಲಿ ಬಾಣನ ಗದ್ಯಶೈಲಿಯ ಪ್ರಭಾವವಿದ್ದಂತಿದೆ. ಬಾಣನ ಕೃತಿಯಲ್ಲಿ ಕಂಡು ಬರುವಂತೆ ಆರೆಂಟು ಸಾಲುಗಳ ಸಮಾಸ ಇವಳ ಕಾವ್ಯದಲ್ಲಿಯೂ ಇದೆ (ಪು. ೩೨೭). ದೀರ್ಘ ವರ್ಣನೆಯ ಕೊನೆಗೆ ಶ್ಲೇಷ, ವಿರೋಧಾಭಾಸ ಇತ್ಯಾದಿ ಅಲಂಕಾರಗಳನ್ನು ಸೇರಿಸುವ ಸಂಪ್ರದಾಯವನ್ನು ಅನುಸರಿಸಿದ್ದಾಳೆ.

ಗದ್ಯಲಕ್ಷಣಗಳಾದ ಧೀರ್ಘ ಸಮಾಸಗಳು, ಉಪಮೆ, ಉತ್ಪ್ರೇಕ್ಷಾ, ರೂಪಕದಿ ಅಲಂಕಾರಗಳ ಸರಮಾಲೆ, ಜೊತೆಗೆ ಶಬ್ದಾಲಂಕಾರಗಳೂ ಹೇರಳವಾಗಿವೆ. ನರಸಿಂಹನದಿಗ್ವಿಜಯದ ಸಂದರ್ಭದಲ್ಲಿ ಬರುವ ತುಂಡೀರ ದೇಶದ ವರ್ಣನೆಯ ಒಂದು ಸಮಾಸಪದ, ಸಂಸ್ಕೃತ ಗದ್ಯಕಾವ್ಯಗಳಲ್ಲೇ ಅತ್ಯಂತ ದೀರ್ಘವಾದುದು ಎನಿಸಿದೆ[೬೪].

ಇತಿಹಾಸದಲ್ಲಿ ತಿಳಿದು ಬರುವ ಪ್ರಕಾರ ನರಸಿಂಹನ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯವು ಕರ್ನಾಟಕ, ಆಂಧ್ರ ಮತ್ತು ಒರಿಸ್ಸಾದ ಕೆಲವು ಭಾಗಗಳಷ್ಟಕ್ಕೆ ಮಾತ್ರ ಸೀಮಿತವಗಿತ್ತು. ಆದರೆ ತಿರುಮಲಾಂಬೆಯ ಕಾಲ್ಪನಿಕ ವರ್ಣನೆಯಲ್ಲಿ ನರಸಿಂಹ ದಿಗ್ವಿಜಯ ಹೊರಟು ಆಸೇತು ಹಿಮಾಚಲವಾದ ಇಡೀ ಭಾರತದ ಭೂಮಿಯನ್ನೇ ಗೆದ್ದವನಾಗಿದ್ದಾನೆ.

**ಕಾವ್ಯಾಂಶ:**

ಪದ್ಯಗಳಲ್ಲಿ ಕವಿಸಮಯಗಳನ್ನು ಧಾರಾಳವಾಗಿ ಬಳಸಿದ್ದರೂ, ಕಲ್ಪನೆಯ ನಾವಿನ್ಯತೆಯಿಂದ ಅಲ್ಲಲ್ಲಿ ಹೊಸತನ ಮಿಂಚಿದೆ. ಉದ್ಯಾನವನದ ಈ ವರ್ಣನೆಯನ್ನು ಉದಾಹರಣೆಗೆ ನೋಡಬಹುದು

**ತನ್ವನಾ ಮೃದುಚಂಕ್ರಮಾನ್ ವನಲತಾಧಾತ್ರೀ ಪ್ರವಾಲಾಂಗುಲೀ ರಾಲಂಬ್ಯ ಸ್ಮಯಮಾನಗುಚ್ಛನಯನೈರಾಲೋಕಿತಶ್ಯಾಭಿಃ ।**
**ಕ್ರೀಡತ್ ಷಟ್ ಪದ–ಕಿಂಕಿಣೀ ಮುಖರಿತಂ ಕ್ಷೀರ್ತ್ವಾ ಪರಾಗಾನ್ ಮುಹೂರ್ವಲ್ಗಂತಃ ಸ್ಪೃಹಣೀಯ ಶೈಶವದಶಾ**
**ವಾತಾಸ್ಸಮಾನಂದಯನ್ ॥**

ವನಲತೆಗಳೆಂಬ ದಾಯಿಗಳ ಚಿಗುರು ಕೈಗಳನ್ನು ಹಿಡಿದು ಮೃದುವಾಗಿ ಅತ್ತಿತ್ತ ಅಡ್ಡಾಡುತ್ತಾ, ಅರಳಿದ ಪುಷ್ಪಗುಚ್ಛಗಳೆಂಬ ಕಣ್ಣುಗಳಿಂದ ತರುಗಳು ನೋಡುತ್ತಿರಲಾಗಿ, ಝೇಂಕರಿಸುತ್ತಿರುವ ಭ್ರಮರಗಳೆಂಬ ಕಾಲುಗೆಜ್ಜೆಯ ಧ್ವನಿಯಿಂದ ಶಬ್ದಗೈಯುತ್ತಾ ಪುಷ್ಪಪರಾಗವೆಂಬ ಧೂಳನ್ನು ಎಬ್ಬಿಸುತ್ತಾ ಓಡುತ್ತಿರುವಂತೆ ತೋರುವ ಅತ್ಯಾಕರ್ಷಕವಾದ ಶೈಶವಲೀಲೆಯನ್ನು ಪ್ರಕಟಿಸುತ್ತಿದ್ದ ಮೆಲು ಗಾಳಿಯು ರಾಜನನ್ನು ಸಂತೋಷಗೊಳಿಸಿತು. "ಈ ತರು–ಲತೆಗಳೊಡನೆ ಆಟವಾಡುತ್ತಿರುವ ಮಂದಾನಿಲವನ್ನಾಧರಿಸಿದ ಈ ಕಲ್ಪನೆಯಲ್ಲಿ ಸುಕುಮಾರವಾದ ಶೈಶವ ರೀತಿ ತಾನೇ ತಾನಾಗಿ ಮೆರೆದಿದೆ."[೬೫].

ಚಿನವೆಂಕಟಾದ್ರಿಯನ್ನು ಗರ್ಭದಲ್ಲಿ ಹೊತ್ತ ವರದಾಂಬಿಕೆಯು ಪಾಂಡುರವರ್ಣಚ್ಛಾಯೆಯನ್ನು ಕವಯತ್ರಿಯು ಹೊಸದೊಂದು ರೀತಿಯಲ್ಲಿ ಉತ್ಪ್ರೇಕ್ಷಿಸಿದ್ದಾಳೆ

**ಉತ್ಪಲದೃಶೋ ಗರ್ಭವರ್ತಿನಶ್ಚಕ್ರವರ್ತಿನಃ ಕುಮಾರಸ್ಯ ಸಮುದ್ರಿಕ್ತ ಸತ್ವ ಗುಣೋನ್ಮೇಷ ವಿಶೇಷೇಣೇವ ಶನೈಃ**
**ಪಾಂಡಿಮಾನಮಪುಷತ್ ವಪುರವಿರಲಮ್ ॥**

ಗರ್ಭದಲ್ಲಿ ಶಿಶುವಿನ, ಸತ್ವಗುಣದ ಉತ್ಕರ್ಷವನ್ನು ತೋರುತ್ತಿದೆಯೋ ಎಂಬಂತೆ, ತಾಯಿಯ ಮೈ ಬಿಳುಪಾಗ ತೊಡಗಿತು ಎಂದಿಲ್ಲಿ ವಿಶೇಷ ರೀತಿಯಲ್ಲಿ ಬಣ್ಣಿಸಿದ್ದಾಳೆ.

ಉದ್ದುದ್ದ ಸಮಾಸ ಪದಗಳು, ಅಸಂಖ್ಯ ವಿಶೇಷಣಗಳು ಪಂಡಿತಪ್ರಿಯವೆನಿಸಿದರೂ ಕ್ಲಿಷ್ಟವಾಗಿವೆ, ಕೆಲವೊಮ್ಮೆ ಬೇಸರವನ್ನುಂಟುಮಾಡುತ್ತದೆ. ಆದರೆ ನಡುವೆ ಪದ್ಯಗಳು ಬಂದು ಬೇಸರ ನೀಗಿಸುತ್ತದೆ. ಅನೇಕಕಡೆ ಅರ್ಥಕ್ಕಿಂತ ಪ್ರಾಸವೇ ಪ್ರಧಾನವಾಗಿರುವುದು ಬೇಸರ ತರಿಸುತ್ತದಾದರೂ, ಅರ್ಥವತ್ತಾದ ಮಾತುಗಳು ಸೊಗಸಾಗಿ ಬಂದಿವೆ. ಕಾವ್ಯದ ಮೊದಲಭಾಗದಲ್ಲಿ ಕಥೆಯ ಬೆಳವಣಿಗೆಯೇ ಇಲ್ಲದೆ ವರ್ಣನೆಯೇ ತುಂಬಿವೆ. ಮುಂದಿನ ಭಾಗದಲ್ಲಿ ಕಥೆ ವರ್ಣನೆಗಳು ಹಾಸುಹೊಕ್ಕಾಗಿ ಬಂದಿದೆ.

ಕವಯತ್ರಿಯ ಪಾಂಡಿತ್ಯ ಪ್ರತಿಭೆ, ಲೋಕಾನುಭವ, ಮಾನವಸ್ವಭಾವ ಪರಿಚಯ ವರ್ಣನಾಕೌಶಲ್ಯ ಮೊದಲಾದವುಗಳನ್ನು ಕೆಳಗಿನ ಕೆಲವು ಸಂದರ್ಭಗಳಿಂದ ತಿಳಿದುಕೊಳ್ಳಬಹುದು.

"ನರಸರಾಜನ ರಾಜ್ಯದಲ್ಲಿ ಸಮುದ್ರದ ತೆರೆಗಳಲ್ಲಿ ಡೊಂಕು, ಕವಿತಾರಚನೆಯಲ್ಲಿ ಅರ್ಥಾಭಿಲಾಷೆಯೂ, ಛಂದಸ್ಸಿನಲ್ಲಿ ವಿಷಮ ವೃತ್ತವು, ಭ್ರಮರಗಳಲ್ಲಿ ಪಕ್ಷಪಾತವು, ಆನೆಗಳಲ್ಲಿ ಮದವು ...... ಕಾಂತೆಯರ ಕೂದಲಲ್ಲಿ ಕುಟಿಲತೆ–ಚಂಚಲತೆಗಳೂ, ತುಟಿಯಲ್ಲಿ ರಾಗವು, ನಡುವಿನಲ್ಲಿ ಶೂನ್ಯತೆ ಇತ್ತು" ಎಂದು ಕವಯತ್ರಿ ವರ್ಣಿಸುತ್ತಾಳೆ.

ಮಹಾಕವಿಗಳ ಪರಂಪರೆಯಲ್ಲಿ ಬಂದ ಇಂತಹ ವರ್ಣನೆಯನ್ನು ಈ ಕಾವ್ಯದಲ್ಲಿ ಕಾಣಬಹುದು. ಇದು, ಕವಯತ್ರಿಯ ಸಾಹಿತ್ಯ–ಶಾಸ್ತ್ರವ್ಯಾಸಂಗದ ಕುರುಹಾಗಿದೆ. ಕಾವೇರಿ ನದಿಯ ವರ್ಣನೆ ಬಂದಾಗಲೂ ಶ್ಲೇಷಾಲಂಕಾರ ತುಂಬಿ ಬಂದಿದೆ. ನರಸಿಂಹರಾಜನು ವಿಜಯ ಯಾತ್ರೆಗೆ ಹೊರಟಾಗ ದಾರಿಯಲ್ಲಿ ಕಂಡ ಕಾವೇರಿಯನ್ನು ಈ ರೀತಿಯಾಗಿ ಬಣ್ಣಿಸಿದ್ದಾಳೆ. **"ಸಾಂದ್ರತರತಟ ಮಹೀರುಹಾಂತರ ನಿಪತದರವಿಂದ ಬಂಧು ಮಯೂಖದಂಡ ಸಂದಿತ ಪರ್ಯಂತಂತತ ಪರಿವರ್ತಮಾನ ಜಲಾವರ್ತ ಚಕ್ರ ನಿರ್ವರ್ತಿ ಬಹಿರ್ವಿಸ್ತೃತ ಬಹುವಿಕಲಶಸಾರ್ಥ ಸಮರ್ಥನೀಯ ಶತಪತ್ರ ಮುಕುಲಜಾಲ ವಿಚಿತ್ರಾಮ್ ನಿದ್ರಾಂಭೋಜ ರಾಜಿವ್ಯಾಜ ವಿವರವಿರಾಜಿತ ಗಂಭೀರತಾ ನಿಷ್ಪಂದನೀರ ಪೂರ ವಿನೋದನ ಸಾಧನ ಫಲಂ ಕಾಂತರತರಲಭಸಲ ಕುಲನೀಲ ಮಣಿಜಾಲ ಪ್ರತಿಕ್ಷಣ ನಿಕ್ಷೇಪಣೋತ್ ಕ್ಷೇಪಣವಿಧಿ ಲಕ್ಷಣ ಪವನನವಶಕ್ಷು ಭಿತಾವನ ಮದ್ವಿಪಟಭುಜ ಸಲಕ್ಷ್ಮೀ ಕೋಭಯತಟಷೋಣೀರುಹ ಶ್ರೇಣಿಕಾಮ್** ।[೬೬] "ಕಾವೇರಿಯು ಪ್ರಶಸ್ತ ಪಾವನೆಯು.... ಯೋಗಿಗಳ ಚಿತ್ತದಂತೆ ಇನ್ನಿತರ ರಸಗಳನ್ನು ತೊರೆದು ಅಮೃತರುಚಿಯುಳ್ಳವಳು, ರಾಮ ಕಥೆಯಂತೆ ಬಹು ಲಹರಿ (ಬಹುಲ ಹರಿ)ಗಳುಳ್ಳವಳು, ನರ್ತಕಿಯಂತೆ ತೆರೆಗಳ ನಟನೆಯಿಂದ ಶೋಭಿಸುವವಳು, ಆಧ್ಯಾತ್ಮವಿದ್ಯೆಯಂತೆ ಹಂಸ (ಪರಮ ಹಂಸ) ಗತಿಯುಳ್ಳವಳು, ಸಮುದ್ರರಾಜನ ಪ್ರಧಾನ ಮಹಿಷಿ ಗಂಗೆಯನ್ನು ಮೀರಿಸಿದವಳು" ಎಂದು ಸೊಗಸಾಗಿ ವರ್ಣಿಸಿರುವಳು. ನದಿ, ಪರ್ವತ, ಋತುಗಳು, ಉದ್ಯಾನ ಮೊದಲಾದ ವರ್ಣನೆಗಳು ಸಾಂಪ್ರದಾಯಿಕವಾಗಿದ್ದರೂ, ಭಿನ್ನತೆ ತರುವುದು ಕವಿಗಳ ಸಾಮರ್ಥ್ಯವನ್ನು ತೋರುತ್ತದೆ. ಇಂತಹ ಕಡೆಗಳಲ್ಲಿ ವಿಮರ್ಶಕರ ಮೆಚ್ಚುಗೆಯನ್ನು ಕವಯತ್ರಿ ತಿರುಮಲಾಂಬೆ ಪಡೆದಿದ್ದಾಳೆ.

ನಿಸರ್ಗ ಸೌಂದರ್ಯವನ್ನು ಬಣ್ಣಿಸುವಂತೆ ವ್ಯಕ್ತಿಚಿತ್ರಣವನ್ನೂ ಕಟ್ಟಿಕೊಡುತ್ತಾಳೆ.

ಅಚ್ಯುತರಾಯನು ವಿನಯ, ನಯ, ವಿವೇಕ, ಪರಾಕ್ರಮಗಳಲ್ಲಿ ಅಚ್ಯುತನಾಗಿರುವನೆಂದು ಅವನಿಗೆ ಅವನ ತಂದೆ ನರಸಿಂಹನು ಆ ಹೆಸರನ್ನಿಟ್ಟನು ಎಂದು ಹೇಳಿದ್ದಾಳೆ. ಅನನ್ಯ ಸಾಮಾನ್ಯ ಸೌಜನ್ಯ ಕಾರುಣ್ಯ ದಾಕ್ಷಿಣ್ಯಾದಿಗುಣ ಶರಣ್ಯ, ಪುಣ್ಯತರ ಸರಣ್ಯ ಧೀನಮತಿ ವಿನ್ಯಾಸ, ನಿಯತಶುಭಾಚರಣ ಇತ್ಯಾದಿ ವಿಶೇಷಣಗಳಿಂದ ಈತನನ್ನು ಬಣ್ಣಿಸಿದ್ದಾಳೆ. ತರುಣ ಅಚ್ಯುತರಾಯನ ಎದೆಯು **'ಸಕಲ ಕಲಾ ಆಲಾಪ ಚಾತುರ್ಯ ಗಾಂಭೀರ್ಯ ಕರುಣಾರಸೌದಾರ್ಯ ಶೌರ್ಯಾರಾಧನ ವಿತರಣಾದಿ ಸ್ಪೃಹಣೀಯ ಮಹನೀಯ'** ಗುಣಗಳಿಗೆ ಅವಕಾಶಕೊಡುವುದಕ್ಕಾಗಿ ತುಂಬ ವಿಶಾಲವಾಗಿದ್ದಿತು. ಪರನಿಂದೆ ಪರನಾರೀವರ್ಣನೆ, ಚಾಡಿಗಳನ್ನು ತಡೆಯಲು ಕಟ್ಟಿಕೊಂಡ ಪ್ರಾಕಾರಗಳಂತೆ ಅವನ ಕಿವಿಗಳಿದ್ದವು. "ಅರಸು ಅಚ್ಯುತರಾಯನ ವಿಶೇಷಜ್ಞತೆಗೆ ವಿಲಾಸಸ್ಥಾನನೂ, ದಾನಕ್ಕೆ ವಿಶ್ವಾಸಭೂಮಿಯೂ, ಸುಶೀಲರಿಗೆ ಮೇರೆಯೂ, ಗಾಂಭೀರ್ಯಕ್ಕೆ ಆಶ್ರಯನೂ, ಸೌಜನ್ಯಕ್ಕೆ ರಕ್ಷಕನೂ, ಸುಚರಿತೆಗೆ ಆಗರನೂ, ಸಾಹಿತ್ಯ ಸಂಗೀತಗಳಿಗೆ ಸಂಕೇತಸ್ಥಾನನೂ, ಸೌಂದರ್ಯದ ರಾಶಿಯೂ, ಸತ್ಯವಚನಕ್ಕೆ ನಿತ್ಯವಿಲಾಸನೂ, ಎಲ್ಲ ಪ್ರಾಮಾಣಿಕ ಗುಣಗಳಿಗೆ ಆವಾಸಸ್ಥಾನನೂ ಆಗಿದ್ದನು" ಇತ್ಯಾದಿ ವರ್ಣನೆಗಳೂ **"ಅನುಚಿಂತತನಿಖಿಲ ಜನಹಿತ ಕೃತ್ಯ" "ಸೌಜನ್ಯ ಸೀಮಾವಧಿ"** ಇತ್ಯಾದಿ ವಿಶೇಷಣಗಳೂ ನಮ್ಮ ಕವಯತ್ರಿಯು ಚಿತ್ರಿಸಬೇಕೆಂದಿರುವ ಆದರ್ಶ ಮಾನವಸ್ವಭಾವದ ಕಲ್ಪನೆಯನ್ನು ತಂದುಕೊಡುತ್ತದೆ.

ತಿರುಮಲಾಂಬೆಯ ಕೃತಿಯು ವರ್ಣನಾಪ್ರಧಾನವಾಗಿದ್ದು ಸಂಸ್ಕೃತ ಭಾಷೆಯ ಮೇಲಿನ ತನ್ನ ಪಾಂಡಿತ್ಯ ಪ್ರದರ್ಶಿಸುವುದರಲ್ಲಿಯೇ ಗಮನೀಯವಾಗಿದ್ದರೂ ಕಥಾನಾಯಕನ ಶಬ್ದಚಿತ್ರಣದ ಪದರುಗಳಲ್ಲಿ ಮಾನವಸ್ವಭಾವ ಚಿತ್ರಣವೂ ಮೂಡಿ ಬಂದಂತೆ ಅವಳ ಇನ್ನಿತರ ವರ್ಣನೆಗಳಲ್ಲಿ ಅವಳ ನಿಸರ್ಗ ನಿರೀಕ್ಷಣೆಯೂ ಕಲ್ಪನೆಯ ಚಾತುರ್ಯವೂ ಪ್ರತಿಫಲಿತವಾಗಿದೆ.

**ಮುಹುಃ ಸರೋವಾರಿಷು ಕೇಲಿಲೋಲಾ ।ನಿಮಜ್ಜನೋನ್ಮಜ್ಜನಮಾಚರಂತೀ।**
**ಬಲಾಹಕಾಂತಃ ಪರಿದೃಶ್ಯಮಾನಾ । ಸೌದಾಮಿನೀವಾಜನಿ ಚಂಚಲಾಕ್ಷೀ ॥**

ಈ ಕೆಲವು ವರ್ಣನೆಗಳು ಇವಳ ಕಲ್ಪನಾ ಚಾತುರ್ಯವನ್ನೂ, ನಿಸರ್ಗ ಸೌಂದರ್ಯ ಪ್ರೇಮವನ್ನೂ ತೋರಿಸುತ್ತದೆ.

ಅಚ್ಯುತರಾಯನ ವರ್ಣನೆಯು ಆದರ್ಶ ರಾಜನ ಹಾಗೂ ಆದರ್ಶ ಮಾನವನ ವರ್ಣನೆಯಾಗಿದೆ. ಅಚ್ಯುತರಾಯನು 'ಸಕಲಕಲಾಪಚಾತುರ್ಯ ಗಾಂಭೀರ್ಯ ಕರುಣಾರಸ ಔದಾರ್ಯ ಶೌರ್ಯಾರಾಧನ ವಿತರಣಾದಿ ಸ್ಪೃಹಣೀಯ ಮಹನೀಯ'ಗುಣಗಳಿಗೆ ಆಗರದಂತಿದ್ದನು. ಅವನು ದಾನಕ್ಕೆ ವಿಶ್ವಾಸಭೂಮಿ. ಗಾಂಭೀರ್ಯಕ್ಕೆ ಆಶ್ರಯ ಸೌಜನ್ಯಕ್ಕೆ ರಕ್ಷಕ, ಸಾಹಿತ್ಯ–ಸಂಗೀತಗಳಿಗೆ ಆಧಾರ, ಸರ್ವಪ್ರಾಮಾಣಿಕ ಗುಣಗಳಿಗೆ ಆವಾಸಸ್ಥಾನವಾಗಿದ್ದನು. ಇಂತಹ ರಾಜನು ವರದಾಂಬಿಕೆಯನ್ನು ನೋಡಿದಾಗ, **"ನಿಯಂತ್ರಿತ ಇವ, ನಿಯಮಿತ ಇವ, ನಿರಭಿಜ್ಞ ಇವ, ನಿಶ್ಚಲಧ್ಯಾನಶೀಲ ಇವ, ನಿರುದ್ಧ ಮನೋವೃತ್ತಿಃ ನಿರ್ನಿಮೇಷ ವೀಕ್ಷಣಃ ಕ್ಷಣಮತಿಷ್ಠತ್"** ಎಂದು ಬಣ್ಣಿಸಿದ್ದಾಳೆ. ಸರೋಜಿನಿ ಮಹಿಷಿ ಅವರು, ಈ ಸಂದರ್ಭದಲ್ಲಿ **"ನ ಯಯೌ ನ ತಸ್ ಥೌ"** ಎಂದು ಕಾಲಿದಾಸನು ಎರಡೇ ಶಬ್ದದಲ್ಲಿ ಪಾರ್ವತಿಯ ಚಿತ್ರವನ್ನು ಕೊಟ್ಟುದು ಸ್ಮರಿಸಬಹುದು ಎಂದಿದ್ದಾರೆ.

ತಿರುಮಲಾಂಬೆಯ ಪದರಚನಾಪ್ರೌಢಿಮೆ, ಚಾತುರ್ಯ, ವರ್ಣನಾಕೌಶಲ್ಯಗಳು ಗ್ರಂಥದುದ್ದಕ್ಕೂ ವ್ಯಕ್ತವಾಗಿದೆ.

ಮುಗಿಲು ಕುಂಕುಮ ಕರಡಿಗೆ; ರವಿ ಅದರ ಮುಚ್ಚಳ; ತುಂಟ ಬಾಲಕ ಚಂದ್ರನು ಅದನ್ನು ತೆಗೆದುಬಿಟ್ಟನು! ಎಲ್ಲೆಡೆಗೂ ಕುಂಕುಮವೇ ಕುಂಕುಮ! ಸಂಧ್ಯಾರುಣರಾಗ! ಮನ್ಮಥನ ಚಟುವಟಿಕೆಗಳಿಗೆ ಪ್ರಾರಂಭ ಆಗ!

**ತ್ರಿಜಗದ್ ವಿಷಯೋತ್ಸವಂ ವಿಧಾತುಂ ಸ್ಮರದೇವಸ್ಯ ಸಮುದ್ಯತಃ ಪ್ರದೋಷಃ।**
**ಸ್ಫುರದಿಂದುಕರಾಂತರಾಪದೇಶಾದುದಯಸ್ತಂಭಮಲಂಬಯತ್ ಪತಾಕಾಮ್ ॥**
**.....ವಿಯನ್ ಮಘವ ನೀಲಕರಂಡಾತ್।**
**ಗಲಿತಂ ಯಥಾ ಘನಮದೃಶ್ಯತ ಸಂಧ್ಯಾ ॥**

**ವಸಂತಮಾಸದ ಬಣ್ಣನೆ**

**ಆಲಂಬ್ಯ ಕೋರಕಿತಕೋಮಲಚೂತಯಷ್ಟಿಮಾಸ್ವಾದ್ಯ ಕೇಲಿಸರಸಾಂ ಸರಸಾಂಬುಪೂರಮ್ ।**
**ಸರ್ವತ್ರ ಸೌರಭಭರಂ ವಿಧೃತಂ ವಿಕೀರ್ಯ ಶಾಂತಿಂ ಕಿಲಾಪನಯತಿ ಪ್ರಸೃತಃ ಸಮೀರಃ ॥**

ಮೊಗ್ಗು ಬಿಟ್ಟಿರುವ ಮಾವಿನಮರಗಳನ್ನು ಆಶ್ರಯಿಸುತ್ತಾ, ತಂಪಾಗಿರುವ ಸರೋವರದ ನೀರನ್ನು ಹಾಯ್ದು ಎಲ್ಲೆಡೆಯಲ್ಲಿಯೂ ಸುಗಂಧವನ್ನು ಬೀರುತ್ತಾ, ತಂಗಾಳಿಯು ಎಲ್ಲ ಶ್ರಮವನ್ನು ಹೋಗಲಾಡಿಸುತ್ತಿದೆ.

**ಬೆಳದಿಂಗಳ ವರ್ಣನೆ**

**ವೇಲಾತಿಪಾತೇನ ಪಯಃಪಯೋಧಿಃ ಜ್ಯೋತ್ಸ್ನಾಸಮುದ್ರಃ ಸುತರಾಂ ವಿಜಿತ್ಯ ।**
**ಅಪೂಪುರಜ್ಜೈತ್ರಶಶಾಂಕ ಶಂಕಂ ಪ್ರಾಪ್ತಶ್ಚ ತಾರಾಘನ ಪುಷ್ಪವೃಷ್ಟಿಮ್ ॥**

ಬೆಳದಿಂಗಳ ಸಮುದ್ರವು, ಎಲ್ಲೆಮೀರಿ ಹರಿದು ಕ್ಷೀರಸಂಬಂಧವನ್ನು ಜಯಿಸಿ (ತತ್ಫಲವಾಗಿ) ಶಶಾಂಕವೆಂಬ ಶಂಖಧ್ವನಿಯ ಸ್ವಾಗತವನ್ನೂ, ನಕ್ಷತ್ರಗಳೆಂಬ ಪುಷ್ಪವೃಷ್ಟಿಯನ್ನೂ ಪಡೆಯಿತು.

**ಅಲಂಕಾರ:** ಕಾವ್ಯದಲ್ಲಿನ ಕೆಲವು ಉಪಮಾಲಂಕಾರಗಳನ್ನು ಇಲ್ಲಿ ಗಮನಿಸಬಹುದು. "ಸರೋವರದಲ್ಲಿ ಜಲಕ್ರೀಡೆಯನ್ನಾಡುವಾಗ ಮುಳುಮುಳುಗಿ ಏಳುತ್ತಿದ್ದ ಓರ್ವ ಚಂಚಲಾಕ್ಷಿಯು ಮೋಡಗಳ ಅಂಚಿನಲ್ಲಿ ಮೂಡಿ ಮುಳುಗುವ ಮಿಂಚಿನ ಬಳ್ಳಿಯಂತೆ ಕಂಡಳು" ಎಂದು ಈ ಪದ್ಯದಲ್ಲಿ ಸಹಜ ಸುಂದರ ವರ್ಣನೆ ಬಂದಿದೆ.

**ಮುಹುಃ ಸರೋವಾರಿಷು ಕೇಲಿಲೋಲಾ ನಿಮಜ್ಜನೋನ್ಮಜ್ಜನಮಾಚರಂತೀ।**
**ಬಲಾಹಕಾಂತಃ ಪರಿದೃಶ್ಯಮಾನಾ ಸೌದಾಮಿನೀವಾಜನಿ ಚಂಚಲಾಕ್ಷೀ॥**
**ಸ್ಮಿತಾಮ್ ಪುರಸ್ತಾದತಿದೂರ ಏವ ।ಕ್ರಮೇಣ ಚ ಸ್ವಸ್ಯ ವಶಮ್ ಪ್ರಪನ್ನಾಮ್ ।**
**ವೋಢಾ ನವೋಢಾಮಿವ ಸಾನುರಾಗಃ ।ಛಾಯಾಮ್ ತರುಃ ಕ್ರೋಡಗತಾಮತಾನೀತ್ ॥**

"ವೃಕ್ಷವು ಮೊದಲು ದೂರವಿದ್ದು, ಕ್ರಮೇಣ ತನ್ನ ವಶದಲ್ಲಿ ಬರುತ್ತಿದ್ದ ನೆರಳನ್ನು, ಹೊಸದಾಗಿ ಮದುವೆಯಾದ ಯುವಕನು ತನ್ನ ಪ್ರಿಯೆಯನ್ನು ಬರಮಾಡಿಕೊಳ್ಳುವಂತೆ ಬರಮಾಡಿಕೊಂಡಿತು"

**ಅಭೇದರೂಪಕ**

**ಅರವಿಂದ ಬಂಧುಕುರವಿಂದಪಿಧಾನೇ ।ಚಪಲೇನ ಬಾಲಶಶಿನಾ ವ್ಯಪನೀತೇ ।**
**ಘುಸೃಣಮ್ ವಿಯನ್ಮಘವನೀಲಕರಂಡಾತ್ । ಗಲಿತಮ್ ಯಥಾ ಘನಮದೃಶ್ಯತ ಸಂಧ್ಯಾ ॥**

"ತುಂಟ ಬಾಲಕ ಚಂದಿರನು ಮುಗಿಲೆಂಬ ಕುಂಕುಮ ಕರಡಿಗೆಯ ಮುಚ್ಚಳದಂತಿದ್ದ ಸೂರ್ಯನನ್ನು ಕಿತ್ತೊಯ್ಯಲು ಮುಗಿಲಿನ ತುಂಬೆಲ್ಲ ಕುಂಕುಮ ಹರಡಿದಂತೆ ಕೆಂಬಣ್ಣ ಕಾಣುತ್ತದೆ"

ಸಂಧ್ಯಾಕಾಲದ ಸುಂದರವಾದ ಸಮಯ ಆಕಾಶವು ಕೆಂಪು ಬಣ್ಣದ ಛಾಯೆಯಿಂದ ಮಂಡಿತವಾಗಿದೆ. ಕವಯತ್ರಿಯ ದೃಷ್ಟಿಯು ಇದರಿಂದ ಆಹ್ಲಾದಿತವಾಗುತ್ತದೆ. ಮತ್ತು ಪ್ರಶಸ್ತವಾದ ಪದ್ಯದಲ್ಲಿ ಆ ಕಲ್ಪನೆಯ ವರ್ಣನೆ ಇರುತ್ತದೆ.

**ಅರವಿಂದ ಬಂಧು ಕುರವಿಂದ – ಪಿಧಾನೇ ಚಪಲೇನ ಬಾಲಶಶಿನಾ ವ್ಯಪನೀತೇ ।**
**ಘುಸೃಣಂ ವಿಯನ್ಮಘವನೀಲ ಕರಂಡಾತ್ ಗಲಿತಂ ಯಥಾಘನಮದೃಶ ಸಂಧ್ಯಾ ॥ (೧೫೭)**

ಆಕಾಶವು ನೀಲಿಮದ ಕೇಸರದಿಂದ ತುಂಬಿರುವ ಪೆಟ್ಟಿಗೆ; ಅದಕ್ಕೆ ಮಾಣಿಕ್ಯಮಣಿಯಿಂದ ಮಾಡಿರುವ ಮುಚ್ಚಳವು ಸ್ವಯಂ ಸೂರ್ಯ, ಚಂದ್ರನು ಉದಯಿಸುತ್ತಿದ್ದ ಹಾಗೇ ಸೂರ್ಯನು ಅಸ್ತಾಚಲದಲ್ಲಿ ಮುಳುಗಲು ಹೊರಟ, ಚಂದ್ರನು ತನ್ನ ಬಾಲ್ಯ ಸಹಜವಾದ ಚಪಲತೆಯಿಂದ ಆ ಮುಚ್ಚಳವನ್ನು ತೆಗೆದ. ನಾಲ್ಕು ಕಡೆಯೂ ಆ ಪೆಟ್ಟಿಗೆಯಿಂದ ಕೇಸರವು ಹರಡಿತು. ಪ್ರಾಕೃತ ದೃಶ್ಯದ ವಿಷಯದಲ್ಲಿ ನೂತನವಾದ ಈ ಕಲ್ಪನೆಯು ಬಹಳ ಮನೋಹರವಾಗಿದೆ.

**ಅರ್ಥಾಂತರನ್ಯಾಸ**

**ಗೃಹೀತಮಾತ್ರೇ ಯುಧಿ ಚೋಳಭೂಪೇ ಕೃಪಾನಿಧಿಃ ಶ್ರೀನರಸಿಂಹದೇವಃ।**
**ಸತಾಂ ನ್ಯಷೇಧತ್ ಸಮರಾತ್ಸ್ವಸೇನಾಂ ಸತಾಂ ಪ್ರಸಾದಃ ಸಹಜೋ ನ ರೋಷಃ ॥**

ಯುದ್ಧ ದಲ್ಲಿ ಚೋಳಭೂಪಾಲನು ಸೆರೆಸಿಕ್ಕಿದ ತರುವಾಯ, ಕೃಪಾಳುವಾದ ನರಸಿಂಹನು ತನ್ನ ಸೈನ್ಯದ ಹೋರಾಟವನ್ನು ನಿಷೇಧಿಸಿದನು. ಸಜ್ಜನರಿಗೆ ಅನುಗ್ರಹವು ಸಹಜ, ರೋಷವನ್ನಲ್ಲ.

## ಸ್ವಭಾವೋಕ್ತಿ

**ಹಸ್ತೇನ ಹಸ್ತಮ ವಕೃಷ್ಯ ರದೌ ರದಾಭ್ಯಾಂ ಸಂಘಟ್ಟ ನಿಷ್ಠುರಹತಿಸ್ಫುರಿತ ಸ್ಫುಲಿಂಗಮ್।**
**ಘಂಟಾನಿನಾದ ಮುಖರೌ ಕರಿಣೌ ತದೀಯೌ ಚಂಡಾಹವಕ್ರಮಚಮತ್ಕರಣಂ ವ್ಯಧತ್ತಾಮ್॥**

ಆ ಇಬ್ಬರು ರಾಜರ ಎರಡು ಆನೆಗಳು, ಸೊಂಡಿಲಿನಿಂದ ಎಳೆದಾಡುತ್ತಾ ಪರಸ್ಪರ ದಂತವನ್ನು ಉಜ್ಜಿ ಕಿಡಿಗಳನ್ನು ಹೊರಡಿಸುತ್ತಾ, ಕೊರಳಲ್ಲಿನ ಗಂಟೆಗಳ ಶಬ್ದ ಮಾಡಿಸುತ್ತಾ ಭಯಂಕರವಾದ ಯುದ್ಧದ ಚಮತ್ಕಾರವನ್ನು ಮಾಡಿದವು.

**ಕಾವ್ಯ ಪ್ರತಿಪಾದಿಸುವ ರಸಗಳು** : ವರದಾಂಬೆ ಅಚ್ಯುತರಾಯನ ಪ್ರೇಮ ಹಾಗೂ ವಿವಾಹವೇ ಕಾವ್ಯದ ಪ್ರಮುಖವಸ್ತುವಾಗಿರುವುದರಿಂದ ಶೃಂಗಾರರಸವೇ ಪ್ರಧಾನವಾಗಿ ಚಿತ್ರಿತವಾಗಿದೆ. ವೀರ, ರೌದ್ರಾದಿ ರಸಗಳು ಆನುಷಂಗಿಕವಾಗಿ ಬಂದಿವೆ. ಅಚ್ಯುತರಾಯ–ವರದಾಂಬಿಕೆಯರ ಮೊದಲ ನೋಟದಲ್ಲೇ ಅನುರಾಗವು ಅಂಕುರಿಸಿ, ಬೆಳೆದು ಪ್ರೇಮಿಗಳ ವಿಕ್ರಲಂಭ ಶೃಂಗಾರವು ಇಲ್ಲಿ ವರ್ಣಿತವಾಗಿದೆ.

ವಿದ್ವಾಂಸರು ಗುರುತಿಸಿರುವಂತೆ ಈ ಕೆಳಗಿನ ಪದ್ಯವು ಹೇತೋತ್ಪ್ರೇಕ್ಷೆ – ಸಮಾಸೋಕ್ತಿ ಇವೆರಡರ ಸಂಸೃಷ್ಟಿಯಿಂದ ಕೂಡಿದೆ. **ನಿರಂತರೇಂದಿಂದಿರ ರಸಂದೋಹಝುಂಕಾರ ಸೀತ್ಕಾರಾ, ಸಮುದಂಚಿತ ಬಾಲಮುಕುಲ ಮಿಷೇಣ, ಸಂಕುಚಿತಪಾಣಿಃ, ಅಧಿಗತಕಂಟಕ ಶ್ರೇಣಿರಂಬುಜಿನೀಪರಿಷದಂಬುಶೈತ್ಯಭಾರೇಣೇವ ಸಮೀರಣವಶೇನ ಸಮಾಲಂಬತ ಕಂಪಮ್**ಸತತವಾಗಿ ದುಂಬಿಗಳ ಹಿಂಡಿನ ಝೇಂಕಾರವೆಂಬ ಸೀತ್ಕಾರವನ್ನು ಕಮಲಿನಿಗಳ ಗುಂಪು ಹೊಂದಿತು. ಅದು ಮೇಲೆ ಬಂದಿದ್ದ ಎಳೆಯ ಮೊಗ್ಗುಗಳ ನೆವದಿಂದ ಅಂಗೈಯನ್ನು ಮಡಸಿಕೊಂಡಂತಿತ್ತು. ಮುಳ್ಳು ರೋಮಾಂಚ ಶ್ರೇಣಿಯನ್ನು ಹೊಂದಿತು. ನೀರಿನ ಶೀತಲತೆಯ ಹೆಚ್ಚಳದಿಂದಲೋ ಎಂಬಂತೆ ಗಾಳಿಯ ಕಾರಣದಿಂದ ನಡುಕವನ್ನು ಹೊಂದಿತ್ತು. ಸೀತ್ಕರ, ಪಾಣಿಸಂಕೋಚ, ರೋಮಾಂಚ, ಕಂಪನ ಇವೆಲ್ಲಾ ಶೈತ್ಯದ ಪರಿಣಾಮಗಳು. ಗಾಳಿಯ ಕಾರಣದಿಂದ ಉಂಟಾದ ಪರಿಣಾಮಕ್ಕೆ ಶೈತ್ಯವನ್ನು ಕಾರಣವೆಂದು ಉತ್ಪ್ರೇಕ್ಷಿಸಲಾಗಿದೆ.

ಶೃಂಗಾರವಲ್ಲದೆ ವೀರ ರೌದ್ರಾದಿ ರಸಗಳನ್ನು ಅನುಷಂಗಿಕವಾಗಿ ನಿರೂಪಿಸಿದ್ದಾಳೆ. ನರಸಿಂಹನಿಗೂ ಚೋಳರಾಜನಿಗೂ ನಡೆದ ಯುದ್ಧವನ್ನು ವರ್ಣಿಸುವಲ್ಲಿ ವೀರರಸದ ಚಿತ್ರಣವನ್ನು ಕಾಣಬಹುದು. .............. **ಸಂಗರಕೇಲಿಸರಃ ಪ್ರವಿಶ್ಯ ಮೃಣಾಲಕಾಂಡಾನೀವ ಬಾಹುದಂಡಾನುನ್ಮೂಲಯಂತಃ ನತರೋರುಕಾಂಡೈ ರಂಭಾಸ್ತಂಭ ಸಂಭಾವನಾ ಮುತ್ತಂಭಯಂತಃ, ಕ್ರೋಧರಸಪುಷ್ಕಲ ವದನ ಪುಷ್ಕರಾಣಿ ಪುಷ್ಕರಾಗ್ರೇಣ ನಿಷ್ಕರುಣಂ ನಿಷ್ಪೀಡಯಂತಃ, ವೀರವರಧೈರ್ಯವಾರಿ ಪೂರಮಾವಿಲಯಂತಃ, ಸರಭಸಂಮಾಂಸಭೇದೋ ಮಸ್ತಿಷ್ಕ ಪಂಕಶೇಷಮಕುರ್ವನ್** ॥ 'ಯುದ್ಧವೆಂಬ ಕ್ರೀಡಾಸರೋವರವನ್ನು ಪ್ರವೇಶಿಸಿ, ಕಮಲದ ಕಾಂಡಗಳಂತೆ ಶತ್ರುಗಳ ಬಾಹುದಂಡಗಳನ್ನು ಕೀಳುತ್ತಾ, ಬಲಿಷ್ಠವಾದ, ದಪ್ಪನಾದ ತೊಡೆಗಳಿಂದ, ಬಾಳೆಯ ದಿಂಡಿನ ಭಾವನೆಯನ್ನು ಉಕ್ಕಿಸುತ್ತಾ, ಕ್ರೋಧವೆಂಬ ರಸ(ನೀರಿ)ದಿಂದ, ಪುಷ್ಟವಾಗಿ ಬೆಳೆದ ಮುಖ ಕಮಲಗಳನ್ನು, ಆನೆಯ ಸೊಂಡಿಲಿನ ತುದಿಯಿಂದ, ನಿಷ್ಕರುಣೆಯಿಂದ ಹಿಂಡುತ್ತಾ, ವೀರಶ್ರೇಷ್ಠರ ಧೈರ್ಯವೆಂಬ ನೀರಿನ ರಾಶಿಯನ್ನು ಬಗ್ಗಡಗೊಳಿಸುತ್ತಾ, ಅತಿಶೀಘ್ರವಾಗಿ ಆ ಕೊಳವನ್ನು ಮಾಂಸ, ಮೇದಸ್ಸು, ತಲೆಬುರುಡೆಗಳಿಂದ ತುಂಬಿದ ಕೆಸರುಳಿಯುವಂತೆ ಮಾಡಿದವು.

**ಪ್ರಭಾವ:** ಗದ್ಯದ ಶೈಲಿಯು ಬಾಣ, ಸುಬಂಧು, ದಂಡಿಯರ ಶೈಲಿಯನ್ನು ಅನುಸರಿಸಿದೆ. ದೀರ್ಘ ವರ್ಣನೆಗಳ ಕೊನೆಗೆ ಪರಿಸಂಖ್ಯೆ, ಶ್ಲೇಷ, ವಿರೋಧಾಭಾಸ ಮೊದಲಾದವುಗಳನ್ನು ಸೇರಿಸುವ ಗದ್ಯಕಾರರ ಸಂಪ್ರದಾಯವನ್ನು

ಅನುಸರಿಸಿದ್ದಾಳೆ. ತಿರುಮಲಾಂಬೆಯ ಕಾಲ್ಪನಿಕ ಪ್ರಕರಣವಾದ ಆಸೇತು ಹಿಮಾಚಲವಾದ ಇಡೀ ಭಾರತದ ಭೂಮಿಯನ್ನೇ ಗೆದ್ದ ನರಸಿಂಹನ ದಿಗ್ವಿಜಯ ವರ್ಣನೆಯಲ್ಲಿ ರಘುವಂಶದ ರಘುವಿನ ದಿಗ್ವಿಜಯದ ಪ್ರಭಾವ ಕಂಡುಬರುತ್ತದೆ.

ವಿದ್ವಾಂಸರು ಅಭಿಪ್ರಾಯ ಪಡುವಂತೆ ಕಥಾನಕದಲ್ಲಿ ಓಟ ಕಡಿಮೆ, ಕವಯತ್ರಿಯು ಓಜೋಗುಣಭೂಯಿಷ್ಠವಾದ ಗೌಡೀಶೈಲಿಯನ್ನು ಬಳಸಿಕೊಂಡಿದ್ದಾಳೆ. ದೀರ್ಘ ಸಮಾಸಪದಗಳುಳ್ಳ ಗದ್ಯ ಭಾಗವೇ ಅಧಿಕವಾಗಿವೆ. ಪದ್ಯಗಳು ಸುಂದರವಾಗಿವೆ.

ಕಾವ್ಯಾಂತ್ಯದಲ್ಲಿ ಅಚ್ಯುತರಾಯನನ್ನೂ, ಶೀಲವತಿಯಾದ ವರದಾಂಬಿಕೆಯನ್ನೂ ಶ್ರೇಯಸ್ಸಿಗೆ ಕಾರಣವಾದ ಚಿನವೆಂಕಟಾದ್ರಿಯನ್ನು ವೆಂಕಟೇಶ್ವರನು ಚಿರಕಾಲ ಕಾಪಿಡಲಿ ಎಂದು ಹೀಗೆ ಕೋರಿದ್ದಾಳೆ:

**ಅರ್ತಾದರಾತ್ ಅಚ್ಯುತದೇವರಾಯಂ ವರೇಣ್ಯ ಶೀಲಾಂ ವರದಾಂಬಿಕಾಂ ಚ**
**ಶ್ರೇಯೋವಿದಾನಮ್ ಚಿನ ವೇಂಕಟಾದ್ರಿಂ ಶ್ರೀ ವೇಂಕಟೇಶಃ ಚಿರಕಾಲ ಮವ್ಯಾತ್ ॥**

ಗಂಗಾದೇವಿಯು ವಿಜಯನಗರದ ಆರಂಭ ಕಾಲದ ಕವಯತ್ರಿಯಾದರೆ, ತಿರುಮಲಾಂಬಾ ಈ ಸಾಮ್ರಾಜ್ಯದ ಉತ್ಕರ್ಷಕಾಲದಲ್ಲಿ ಬಂದವಳು. "ಹನ್ನೆರಡನೆಯ ಶತಮಾನದ ಕ್ರಾಂತಿಯಿಂದ, ಹದಿನೇಳನೆಯ ಶತಮಾನದ ವರೆಗೆ ತೆರವು ಬಿದ್ದ ಸ್ಥಳವನ್ನು, ಕನ್ನಡ ಕವಯತ್ರಿಯರ ಅಭಾವವನ್ನು, ಈ ಕನ್ನಡಿತಿಯರು ಹೋಗಲಾಡಿಸಿದ್ದಾರೆ[೬೭].

ಕೇವಲ ಓದುವ ತಿರುಮಲಾಂಬೆಯಾಗಿ, ಶಾಸನ ರಚನೆಯಲ್ಲಷ್ಟೇ ತನ್ನ ಪ್ರತಿಭೆನ್ನು ವಿನಿಯೋಗಿಸದೆ, ಕಾವ್ಯರಚನೆಗೆ ತೊಡಗಿದ ಕವಯತ್ರಿಯು ತನ್ನ ಕವಿತಾ ಸಾಮರ್ಥ್ಯದಿಂದ ಅರಸನ ಮೆಚ್ಚುಗೆಗಳಿಸಿ, ಅವನ ಪ್ರಿಯ ಮಹಿಷಿಯರಲ್ಲೊಬ್ಬಳಾದವಳಷ್ಟೇ ಅಲ್ಲದೆ ತನ್ನ ಕಾವ್ಯದ ಮೂಲಕ ಸಹೃದಯರ ಮನಸ್ಸನ್ನೂ ಸೂರೆಗೊಂಡವಳಾಗಿದ್ದಾಳೆ.

**ಅಧ್ಯಯನದ ಫಲಿತ**

ಈ ಅಧ್ಯಾಯದಲ್ಲಿ ಸಂಸ್ಕೃತ ಕವಯತ್ರಿಯರ ಕೆಲವು ಕಾವ್ಯಗಳ ಅಧ್ಯಯಕ್ಕೆ ಬಳಸಿಕೊಳ್ಳಲಾಗಿದೆ. ಕರ್ನಾಟಕದ ಅರಸಿಯರು ರಚಿಸಿರುವ ಲಭ್ಯ ಕೃತಿಗಳು ಬೆರಳೆಣಿಕೆಯಷ್ಟಿದ್ದರೂ, ಪಾಂಡಿತ್ಯದಲ್ಲಿ ಯಾವ ಕವಿಯೂ ಕಡಿಮೆ ಇಲ್ಲದಂತಹ ರಚನೆಗಳನ್ನು ಇಲ್ಲಿ ಕಾಣಬಹುದು. ಇಲ್ಲಿ ವೈವಿಧ್ಯಮಯವಾದ ಕೃತಿಗಳನ್ನು ಕಾಣಬಹುದು. ವಿಭಿನ್ನ ಕಾಲಘಟ್ಟದ ಅರಸಿಯರು ವಿಭಿನ್ನ ಶೈಲಿ, ಛಂದಸ್ಸನ್ನು ತಮ್ಮ ಕೃತಿಗಳಲ್ಲಿ ಬಳಸಿಕೊಂಡಿರುವುದನ್ನು ಕಾಣುತ್ತೇವೆ. ವಿಜಯಭಟ್ಟಾರಿಕೆಯು ಅಂದಿನ ಕಾಲದಲ್ಲಿ ಬಹು ಮೆಚ್ಚುಗೆ ಪಡೆದಿದ್ದ, ಕಾವ್ಯೇಷು ನಾಟಕಂ ರಮ್ಯಂ ಎಂದು ಭಾವಿಸುತ್ತಿದ್ದ ನಾಟಕರಚನೆಗೆ ತೊಡಗಿದ್ದಳು. ಕನ್ನಡದ ಅರಸಿಯೋರ್ವಳು ರಚಿಸಿರುವ ಈ ನಾಟಕವು, ನಾಟಕ ಪ್ರಕಾರ ಅಂದಿನ ಕಾಲದಲ್ಲಿ ಕನ್ನಡ ನಾಡಿನಲ್ಲಿ ಪ್ರಚಲಿತದಲ್ಲಿತ್ತು ಎಂದು ಸಾಬೀತು ಪಡಿಸುವಲ್ಲಿ ಸಹಕಾರಿಯಾಗಿದೆ. ಪ್ರಾಚೀನ ಕನ್ನಡಸಾಹಿತ್ಯದ ನಾಟಕರಚನೆಗಳು ದೊರೆತಿಲ್ಲದ ಕಾರಣ ನಾಟಕಪ್ರಕಾರ ಕನ್ನಡ ನೆಲದಲ್ಲಿತ್ತೆ? ಎನ್ನುವ ಸಂಶಯಕ್ಕೆ ಉತ್ತರವನ್ನು ಕನ್ನಡನೆಲದಲ್ಲಿ ರಚಿತವಾದ ಈ ಸಂಸ್ಕೃತ ನಾಟಕ ನೀಡುತ್ತದೆ.

ಗಂಗಾದೇವಿ ಹಾಗೂ ತಿರುಮಲದೇವಿಯರು (ತಿರುಮಲಾಂಬೆ) ವಿಜಯನಗರಕಾಲದ ಐತಿಹಾಸಿಕ ವಿಚಾರಗಳನ್ನು ತಮ್ಮ ಕಾವ್ಯದಲ್ಲಿ ಕಲಾತ್ಮಕವಾಗಿ ತಂದಿದ್ದಾರೆ. ಐತಿಹಾಸಿಕ ವಿಚಾರಗಳನ್ನು ಕೇವಲ ಶಾಸನಗಳಿಂದ ಮಾತ್ರ ತಿಳಿದು ಕೊಳ್ಳಲು ಶಕ್ಯವಿಲ್ಲ. ಕೆಲವು ವಿಶಿಷ್ಟ ವರ್ಣನೆಗಳು, ಪ್ರಕರಣಗಳನ್ನು ಕಾವ್ಯಗಳು ದೀರ್ಘವಾಗಿ ಬಣ್ಣಿಸುತ್ತದೆ.

ವಿಜಯನಗರ ಕಾಲದಲ್ಲಿ ಇಂತಹ ಮಹತ್ವದ ದಾಖಲೆಗಳನ್ನು ಒಂಗೊಂಡ ಎರಡು ಕಾವ್ಯಗಳನ್ನು ವಿಜಯನಗರ ಮನೆತನದ ಅರಸಿಯರೇ ರಚಿಸಿರುವುದು ಈ ಕಾವ್ಯಕ್ಕೆ ಮತ್ತಷ್ಟು ಮಹತ್ವ ದೊರಕಲು ಕಾರಣವಾಗಿದೆ.

ವಿಜಯಭಟ್ಟಾರಿಕೆ, ಶೀಲಮಹಾದೇವಿಯರ ಮುಕ್ತಕಗಳನ್ನು ಒಂದೆಡೆ ಕಲೆಹಾಕುವ ಕಾರ್ಯ ನಡೆಯಬೇಕಾಗಿದೆ. ಈ ಸಂಪ್ರಬಂಧದ ಎರಡನೆಯ ಅಧ್ಯಾಯದಲ್ಲಿ ತಿಳಿಸಿರುವಂತೆ ಕರ್ನಾಟಕದ ಕವಿಗಳ, ಕವಯತ್ರಿಯರ ಚರಿತ್ರೆಯ ರಚನೆಯಲ್ಲಿ ಬಿಟ್ಟುಹೋಗಿರುವ ಈ ಸಂಸ್ಕೃತ ಕವಯತ್ರಿಯರ ಉಲ್ಲೇಖಗಳನ್ನು ಸೇರ್ಪಡೆಗೊಳಿಸಬೇಕಿದೆ. ಕನ್ನಡನಾಡಿನ ಹಿರಿಮೆ–ಗರಿಮೆಗಳನ್ನು ಅಂದಿನ ರಾಷ್ಟ್ರವ್ಯಾಪಿ ಭಾಷೆಯಾಗಿದ್ದ ಸಂಸ್ಕೃತದಲ್ಲಿ ಪ್ರಚಾರ ಪಡಿಸಿದ ಈ ಕವಯತ್ರಿಯರಿಗೆ ಕನ್ನಡ ನಾಡಿನ ಸಾಹಿತ್ಯದಲ್ಲಿ ಸೂಕ್ತ ಸ್ಥಾನವನ್ನು ಕೊಡದೆ ಎಸಗಿದ ಅಪಚಾರವನ್ನು ಸರಿಪಡಿಸಬೇಕಿದೆ.

**ಆಕರ ಗ್ರಂಥಗಳು ಹಾಗೂ ಟಿಪ್ಪಣಿಗಳು**


೧. ಚಂದ್ರಮೌಳಿ ಎಸ್.ನಾಯ್ಕರ (ಸಂ), ***ಬಿಲ್ಹಣ ಮಹಾಕವಿ ಕೃತ ಚೌರಪಂಚಾಶಿಕಾ***, ೨೦೧೨ ಮೇಧಾ ಪಬ್ಲಿಷರ್ಸ್, ಧಾರವಾಡ, ಪು.೧೫

೨. ಕೃಷ್ಣಮಾಚಾರ್: ಜಿ.ಓ.ಎಸ್(ಸಂ)., ೧೯೩೮, ***ಶಾರ್ಙ್ಗಧರ ಪದ್ಧತಿ ; ಜಲ್ಹಣ: ಸೂಕ್ತಿಮುಕ್ತಾವಳಿ***: ಬರೋಡ ಪು.೪೭

೩. ಕಾಣೆ.ಪಿ.ವಿ, ***ಹಿಸ್ಟರಿ ಆಫ್ ಸಂಸ್ಕೃತ್ ಪೊಯಟಿಕ್ಸ್***, ದೆಹಲಿ, ೧೯೬೧, ಪು.೧೩೧

೪. ಕೃಷ್ಣಮಾಚಾರ್.ಜಿ.ಓ.ಎಸ್, ಪೂರ್ವೋಕ್ತ, ಪು.೪೭

೫. I.A. ಸಂ. vii ಪು.೧೬೩. ನೇರೂರು ತಾಮ್ರಪಟ

6. Ep.Ind Vol IX pg.102

೭. I.A. ಸಂ. viii ಪು.೪೪–೪೭, ಕ್ರೋಚೆ ತಾಮ್ರಪಟ

೮. ಚೆನ್ನಕ್ಕ ಎಲಿಗಾರ, ***ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ***, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೯. ಪಾಂಡುರಂಗಿ.ಕೆ.ಟಿ., ೧೯೯೯, ***ಸಂಸ್ಕೃತ ಕವಿ ಕಾವ್ಯ ದರ್ಶನ***, ಮನೋಹರ ಗ್ರಂಥಮಾಲ, ಧಾರವಾಡ

೧೦. ಪೀಟರ್ಸನ್ ಪಿ.(ಸಂ), ೧೮೮೮, ***ವಲ್ಲಭದೇವ: ಸುಭಾಷಿತಾವಳೀ***, ಬೊಂಬಾಯಿ

೧೧. ಪೂರ್ವೋಕ್ತ

೧೨. ಕಾಣೆ.ಪಿ.ವಿ, ಪೂರ್ವೋಕ್ತ, ಪು.೧೩೦

೧೩. ನಾಗೇಂದ್ರ (ಸಂ)., ೧೯೬೦, ***ಮಮ್ಮಟ ಕಾವ್ಯಪ್ರಕಾಶ***, ವಾರಣಾಸಿ, ಪು.೧೯೮ ೫/೧೧೪

೧೪. Ganganatha Zha(Ed), 1967 , ***Kavyaprakasha of Mammata*** Bharatiya Vidya Prakashan, Varanasi- P.81

೧೫. ಕೃಷ್ಣಮೂರ್ತಿ.ಕೆ, ೧೯೫೬, ***ಕನ್ನಡ ಕಾವ್ಯ ಪ್ರಕಾಶ*** (ಅನು), ಶಾರದಾಮಂದಿರ, ಮೈಸೂರು, ಪು.೧೦೪–೧೦೫

೧೬. ಸುಬ್ಬಣ್ಣ.ಕೆ. ವಿ. ೧೯೫೮, ***ಧನಂಜಯನ ದಶರೂಪಕ*** (ಅನು) ಅಕ್ಷರಪ್ರಕಾಶನ, ಸಾಗರ, ಶಿವಮೊಗ್ಗ, ಪು.೧೧೯

೧೭. ತೀನಂಶ್ರೀ, ೨೦೦೧, ***ಬಿಡಿಮುತ್ತು***, ಕಾವ್ಯಾಲಯ, ಮೈಸೂರು, ಪು.೨೭

೧೮. ಆಚಾರ್ಯ ಬಲದೇವ ಉಪಾಧ್ಯಾಯ, ಅನು: ಎಸ್.ರಾಮಚಂದ್ರಶಾಸ್ತ್ರೀ, ೧೯೮೦, ***ಸಂಸ್ಕೃತ ಸಾಹಿತ್ಯದ ಇತಿಹಾಸ***, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

೧೯. E.C. ಸಂ VIII ನ ೩೫, ೧೦೭೭

೨೦. ಚಿದಾನಂದ ಮೂರ್ತಿ.ಎಂ, ೧೯೯೩, **ಛಂದೋತರಂಗ**, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂ, ಪು.೧೩೭

೨೧. ಪೂರ್ವೋಕ್ತ

೨೨. ಶ್ರೀನಿವಾಸ ಅಯ್ಯಂಗಾರ್.ಎಂ.ಎನ್, ೧೯೭೮, ***ಸಂಸಕೃತ ಕವಿಚರಿತೆ***, ಸಂಪುಟ–೨, ಬೆಂಗಳೂರು, ಪು೮೪೬

೨೩. E I ಸಂ xxii, No.17

೨೪. ಭಾರತಿ.ಬಿ.ಆರ್ (ಸಂ), ***ರಾಷ್ಟ್ರಕೂಟ ಶಾಸನಗಳು*** ಸಂ–೧, ಮೈಸೂರು ವಿವಿ ೫೭೧

೨೫. ಮಿರಾಶಿ.ವಾ.ವಿ. ಅನು:ಜಿ.ಎಸ್.ಗಾಯಿ ***ಭವಭೂತಿ,*** ಪ್ರಸ್ತಾವನೆ, ಮೈಸೂರು ವಿವಿ, ಮೈಸೂರು, ೧೯೯೧

೨೬. ಜಗನ್ನಾಥ.ಎಸ್., ***ಪುಂಡರೀಕ,*** ಲಲಿತಪ್ರಕಾಶನ, ಮಂತ್ರಾಲಯ, ದ್ವಿಮು ೨೦೦೯

೨೮. ತೀನಂಶ್ರೀ, ೨೦೦೧, ***ಬಿಡಿಮುತ್ತು,*** ಕಾವ್ಯಾಲಯ, ಮೈಸೂರು, ಪು.೬೯

೨೯. ಆಚಾರ್ಯ.ವಿ.ಎಸ್.ಎನ್(ಸಂ)., ೧೯೮೩, ***ಶ್ರೀಕೃಷ್ಣದೇವರಾಯ ದಿನಚರಿ,*** ಬಿ.ಎಂ.ಶ್ರೀ ಪ್ರತಿಷ್ಠಾನ, ಬೆಂ ಪು.೫೧

೩೦. ಗುರುಮೂರ್ತಿ ಪೆಂಡಕೂರು, ೨೦೧೨, ***ಶ್ರೀ ಕೃಷ್ಣದೇವರಾಯನ ಅರಸಿ ತುಕ್ಕಾದೇವಿ ವಿರಚಿತ 'ತುಕ್ಕಾಪಂಚಕಂ'*** ಕೈದಾಳ, ಅಭಿನಂದನಾ ಗ್ರಂಥ, ಬೆಂಗಳೂರು ಪು.೧೨೪

೩೧. ಗೋಪಾಲಕೃಷ್ಣರಾವ್.ಕೆ.ಜಿ, ***ಕೃಷ್ಣರಾಯ ಮತ್ತು ಕಳಿಂಗರಾಜಪುತ್ರಿ,*** ವಿಜಯನಗರ ಅಧ್ಯಯನ ಸಂಪುಟ–೧೨, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು

೩೨. ಕಾಣೆ.ಪಿ.ವಿ, ಪೂರ್ವೋಕ್ತ, ಪು.೧೩೧

೩೩. ಇಮ್ಮಡಿ ಶಿವಬಸವಸ್ವಾಮಿಗಳು, ೧೯೯೯, ***ಸಂಸ್ಕೃತ ಸಾಹಿತ್ಯಕ್ಕೆ ಕರ್ನಾಟಕದ ಕೊಡುಗೆ,*** ಸಂವಹನ, ಮೈಸೂರು

೩೪. ಶ್ರೀನಿವಾಸ ರಿತ್ತಿ, ***ಕರ್ನಾಟಕದ ಸಂಸ್ಕೃತ ಕವಯಿತ್ರಿಯರು,*** ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ಸಂ.೪೨ (೧) ಜೂ.೧೯೫೭ ಪು.೨೪–೩೩)

೩೬. ಸರೋಜಿನಿ ಮಹಿಷಿ, ***ಕರ್ನಾಟಕದ ಕವಯತ್ರಿಯರು,*** ೧೯೬೫, ಕ.ಸ.ಸಾಹಿತ್ಯ ಸಂಘ, ಧಾರವಾಡ ಪು.೨೧೭

೩೭. ಪಾಂಡುರಂಗಿ.ಕೆ.ಟಿ ಪೂರ್ವೋಕ್ತ ಪು.೫೬

೩೮. ಕುಶಾಲಪ್ಪ ಗೌಡ.ಕೆ (ಅನು)., ೨೦೧೧, ***ಮಧುರಾವಿಜಯಂ*** ಕನ್ನಡ ವಿಶ್ವವಿದ್ಯಾಲಯ, ಹಂಪಿ ಪು.೨೦

೩೯. E.C. Vol X, ಕೋಲಾರ ೨೦೩ ಚಿಕ್ಕಬಳ್ಳಾಪುರ

೪೦. ಅಪರ್ಣ.ಕೂ.ಸ, ೨೦೦೯, ***ಗಂಗಾದೇವಿಯ ಮಧುರಾವಿಜಯಂ–ಒಂದು ಚಾರಿತ್ರಿಕ ಅವಲೋಕನ,*** ವಿಜಯನಗರ ವೈಭವ ಹಂಪಿ ಉತ್ಸವ ಸ್ಮರಣ ಸಂಚಿಕೆ, ಪು.೧೪೦

೪೧. ಕುಶಾಲಪ್ಪಗೌಡ.ಕೆ ಪೂರ್ವೋಕ್ತ, ಪು.೨೦

೪೨. ಅಪರ್ಣ.ಕೂ.ಸ ಪೂರ್ವೋಕ್ತ, ಪು.೧೪೧

೪೩. ಕೊಟ್ರಯ್ಯ.ಸಿ.ಟಿ.ಎಂ, ೨೦೦೧, ***ವಿಜಯನಗರ ಸಾಮ್ರಾಜ್ಯದ ನೀರಾವರಿ ವ್ಯವಸ್ಥೆ,*** ಕನ್ನಡ ವಿವಿ, ಹಂಪಿ

೪೩ಅ. Chari S.T: 1957 , Madhura Vijayam of Gangadevi (translation), Annamalai, p.60

೪೪. ಪಾಂಡುರಂಗಿ.ಕೆ.ಟಿ, ಪೂರ್ವೋಕ್ತ, ಪು.೫೬

೪೫. E.C. Vol VII, ಚನ್ನಗಿರಿ ೧೩

೪೬. ಕುಶಾಲಪ್ಪಗೌಡ.ಕೆ ಪೂರ್ವೋಕ್ತ

೪೭. ಪೂರ್ವೋಕ್ತ

೪೮. ಪೂರ್ವೋಕ್ತ

೪೯. ಸರೋಜಿನಿ ಮಹಿಷಿ, ಪೂರ್ವೋಕ್ತ

೫೦. ಸೌತ್ ಇಂಡಿಯನ್ ಎಪಿಗ್ರಫಿಕಲ್ ರಿಪೋರ್ಟ್ಸ್ ನಂ.೧೬, ಕ್ರಿ.ಶ.೧೯೩೮

೫೧. ಸೂರ್ಯಕಾಂತ (ಸಂ), ***ತಿರುಮಲಾಂಬಾ ವರದಾಂಬಿಕಾಪರಿಣಯ ಚಂಪೂ,*** ಚೌಖಂಬಾ, ವಾರಣಾಸಿ ೧೯೭೦

೫೨. E I Vol xxiv pp.289

೫೩. S.I.I, Vol IX pt. II No.547 & 548

೫೪. ಸೂರ್ಯಕಾಂತ ಪೂರ್ವೋಕ್ತ, ಪು.೧೫೧

೫೫. ಲೀಲಾ.ಎಸ್.ಆರ್., ***ತಿರುಮಲಾಂಬೆ,*** ಕರ್ನಾಟಕದ ಕವಯಿತ್ರಿಯರು, ಶ್ರೀ ಪ್ರಕಾಶನ, ಬೆಂಗಳೂರು

೫೬. ಆಚಾರ್ಯ ಬಲದೇವ ಉಪಾಧ್ಯಾಯ, ಪೂರ್ವೋಕ್ತ

೫೭. ಪೂರ್ವೋಕ್ತ

೫೮. ಪೂರ್ವೋಕ್ತ

೫೯. ಸರೋಜಿನಿ ಮಹಿಷಿ , ಪೂರ್ವೋಕ್ತ

೬೦. Unhistorcal statements in varadambikaparinaya – QJMS VOL 68(2) 1977, 1977 : p.40-43

೬೧. E.C. ಸಂ XII ಮಾಗಡಿ ೩೩

೬೨. M.A.R ೧೯೧೨–೧೩ ಸಂ.೩೫೭

೬೩. ಆಚಾರ್ಯ ಬಲದೇವ ಉಪಾಧ್ಯಾಯ ಪೂರ್ವೋಕ್ತ

೬೪. ಪೂರ್ವೋಕ್ತ

೬೫. ಪೂರ್ವೋಕ್ತ

೬೬. ಸೂರ್ಯಕಾಂತ (ಸಂ), ೧೯೭೦, ***ತಿರುಮಲಾಂಬಾ ವರದಾಂಬಿಕಾಪರಿಣಯ ಚಂಪೂ***, ಚೌಖಂಬಾ, ವಾರಣಾಸಿ, ಪು.೨೧

೬೭. ಸರೋಜಿನಿ ಮಹಿಷಿ ಪೂರ್ವೋಕ್ತ

# ಅಧ್ಯಾಯ – ೯

## ಸಮಾರೋಪ

ಈ ಅಧ್ಯಯನವು ಕರ್ನಾಟಕ ಅರಸಿಯರು ಸಾಹಿತ್ಯಕ್ಕೆ ನೀಡರುವ ಕೊಡುಗೆಯನ್ನು ಗಮನಿಸುವುದರೊಂದಿಗೆ ಅರಸಿಯರ ಒಟ್ಟಾರೆ ಬದುಕಿನ ಹಲವಾರು ಮಜಲುಗಳನ್ನು ಗಮನಿಸುವಲ್ಲಿ ದೃಷ್ಟಿಹರಿಸಿದೆ. ಅರಸಿಯರ ಕುರಿತಾಗಿ ರಚಿತವಾಗಿರುವ ಹಲವಾರು ಕೃತಿಗಳನ್ನೂ ಇಲ್ಲಿ ಗಮನಿಸಲಾಗಿರುವುದು ಜೊತೆಗೆ ಶಾಸನದ ಮಾಹಿತಿಗಳನ್ನು ಪೂರಕವಾಗಿ ಬಳಸಿಕೊಂಡಿರುವುದು ಕರ್ನಾಟಕದ ಅರಸಿಯರ ಸ್ಥೂಲ ಚಿತ್ರಣವನ್ನು ವೀಕ್ಷಿಸಲು ಸಾಧ್ಯವಾಗಿದೆ.

ಕರ್ನಾಟಕದ ಅರಸು ಮನೆತನದಲ್ಲಿ ಸುಮಾರು ಆರನೆಯ ಶತಮಾನದಿಂದ ಪ್ರವರ್ಧಮಾನಕ್ಕೆ ಬಂದ ಬಾದಾಮಿ ಚಳುಕ್ಯರ ಕಾಲದಿಂದಲೇ ಅರಸಿಯರು ಆಳ್ವಿಕೆಗೆ ಅವಕಾಶ ಪಡೆದಿದ್ದರು, ಪ್ರಾಚೀನ ಅರಸು ಮನೆತನವೆಂದು ಗುರುತಿಸಲಾಗಿರುವ ಕದಂಬರೊಂದಿಗೆ ಆಳ್ವಿಕೆಗೆ ಆರಂಭಿಸಿದ ಗಂಗ ಮನೆತನದ ಹಲವಾರು ರಾಣಿಯರು ಬಹು ಪ್ರಾಚೀನ ಕಾಲದಿಂದಲೇ ಆಳ್ವಿಕೆಯಲ್ಲಿ ತೊಡಗಿ, ವಿಶೇಷ ಕೊಡುಗೆ ನೀಡಿದ್ದಾರೆ. ಪ್ರಪಂಚದ ಹಲವೆಡೆಗಳಲ್ಲಿ ನಾಗರೀಕತೆಯೇ ಇನ್ನೂ ಬೆಳೆದಿರದ ಸಂದರ್ಭದಲ್ಲಿ ಕರ್ನಾಟಕದಲ್ಲಿ ಮಹಿಳಾ ಆಳ್ವಿಕೆ ನಡೆದಿತ್ತೆನ್ನುವುದು ಮಹತ್ವದ ಸಂಗತಿ ಎನಿಸುತ್ತದೆ. ಕೇವಲ ಆಳ್ವಿಕೆ ನಡೆಸಿದ್ದಷ್ಟೇ ಅಲ್ಲದೆ ವ್ಯಾಪಾರ, ವಾಣಿಜ್ಯ, ಕೃಷಿ, ನಗರ ನಿರ್ಮಾಣ, ಕರೆ–ಕಾಲುವೆ ಮೊದಲಾದ ಸಮಾಜಿಕ ಕಾರ್ಯ, ದೇವಾಲಯಗಳ ನಿರ್ಮಾಣ, ವಾಸ್ತುಶಿಲ್ಪ, ಸಂಗೀತ–ನೃತ್ಯ ಮೊದಲಾದ ಕಲೆಗಳಿಗೆ ನೀಡಿದ ಕೊಡುಗೆ, ಯುದ್ಧಗಳಲ್ಲಿ ಭಾಗವಹಿಸಿ ಮೆರೆದ ಸಾಹಸಗುಣ ಮೊದಲಾದವುಗಳನ್ನು ಇಲ್ಲಿ ಗಮನಿಸಿ, ವಿಭಿನ್ನ ಕಾಲದಲ್ಲಿನ ಅರಸಿಯರ ಆಳ್ವಿಕೆಯ ಕುರಿತಂತೆ ವಿಶ್ಲೇಷಣೆ ನಡೆಸಲಾಗಿದೆ.

ಅರಸಿಯರ ಕುರಿತಾದ ಹಲವಾರು ಪವಾಡ, ಐತಿಹ್ಯ, ಸಾಹಸ ವಿಚಾರ, ಧಾರ್ಮಿಕ ಸಂಗತಿಗಳು, ಸಂಘರ್ಷ ಮೊದಲಾದವುಗಳನ್ನು ವಿವಿಧ ಆಕರಗಳಿಂದ ಸಂಗ್ರಹಿಸಿ ಕರ್ನಾಟಕದ ಅರಸಿಯರ ಒಂದು ಸಂಪೂರ್ಣ ಚಿತ್ರಣವನ್ನು ನೀಡಲಾಗಿದೆ. ಪ್ರಾಚೀನ ಅರಸಿಯರ ಸುತ್ತ, ಧಾರ್ಮಿಕ ವಿಚಾರಗಳ ಕುರಿತಾದ ಚಿತ್ರಣವನ್ನು ಪ್ರಾಚೀನ ಕಾವ್ಯಗಳು ಬಿಂಬಿಸಿದರೆ, ಮಧ್ಯಕಾಲೀನ ಅರಸಿಯರ ಶೌರ್ಯ, ಸಾಹಸ, ಯುದ್ಧದ ಚಿತ್ರಣಗಳನ್ನೂ, ಹೋರಾಟದ ಬದುಕಿನ ಚಿತ್ರಣವನ್ನು ಈ ಕಾಲದ ಕಾವ್ಯಗಳು ನೀಡುತ್ತವೆ. ಇದು ಇತಿಹಾಸದಲ್ಲಿ ಗುರುತಿಸ ಬೇಕಾದ ಪ್ರಮುಖ ಅಂಶವಾಗಿದೆ. ವಚನಚಳುವಳಿಯ ಸಂದರ್ಭದಲ್ಲಿ ಮಹಿಳೆಯರು ಹೆಚ್ಚು ಗುರುತಿಸಿಕೊಂಡಂತೆ ಆನಂತರ ಗುರುತಿಸಿಕೊಳ್ಳಲು ಸಾಧ್ಯವಾಗದೆ ಇದ್ದುದಕ್ಕೆ ಇಂತಹ ರಾಜಕೀಯ ಸಂಘರ್ಷಗಳು ಕಾರಣವಾಗಿವೆ. ವಚನಕಾಲದಲ್ಲಿ ಹಲವಾರು ಅರಸಿಯರು ಸಾಮಾನ್ಯರೊಂದಿಗೆ ಇದ್ದುದು, ವಚನಯುಗದ ಪೂರ್ವದಲ್ಲಿಯೂಕೂಡ ಹಲವಾರು ಅರಸಿಯರು ಕೆಲವು ಅಗ್ರಹಾರಗಳ, ಸಣ್ಣಪುಟ್ಟ ಪ್ರದೇಶದ ಒಡೆತನ ಪಡೆದು ಸಾಮಾನ್ಯಜನರೊಂದಿಗೆ ಹೆಚ್ಚು ಸಂಪರ್ಕದಲ್ಲಿದ್ದುದಲ್ಲದೆ, ಕೆರೆ–ಕಾಲುವೆಗಳ ನಿರ್ಮಾಣ, ವಿದ್ಯಾಕೇಂದ್ರಗಳ ಸ್ಥಾಪನೆ ಮೊದಲಾದ ಸಮಾಜಮುಖಿ ಕಾರ್ಯಗಳನ್ನು ನಡೆಸಿರುವುದು ಈ ಕಾಲದ ಸುಭಿಕ್ಷತೆಯನ್ನು ಕುರಿತು ಹೇಳುತ್ತದೆ. ಶಾಸನಗಳು ತಿಳಿಸುವುವಂತೆ ದೇವಾಲಯ, ಬಸದಿಗಳಲ್ಲಿ ಆಹಾರ, ಔಷಧಿ, ಅಭಯ, ಆಶ್ರಯ, ವಿದ್ಯಾಭ್ಯಾಸ – ಹೀಗೆ ಪ್ರಮುಖವಾದ ಐದು ದಾನಗಳು ಲಭಿಸುತ್ತಿತ್ತು. ಇವುಗಳಿಗೆ ಅಪಾರ ಧನಸಹಾಯ ಮಾಡಿರುವ ಅರಸಿಯರನ್ನು ಕಾಣಬಹುದು.

ಇಂತಹ ಕಾಲದಲ್ಲಿ ಸಾಹಿತ್ಯ ಕೃಷಿಯು ಹೇರಳವಾಗಿ ನಡೆದಿರುವುದಕ್ಕೆ ಆಹಾರ ಮೊದಲಾದ ಮೂಲಭೂತ ಕೊರತೆ ಹೆಚ್ಚಾಗಿ ಕಾಡದೆ, ರಾಜ್ಯ ಸುಭಿಕ್ಷವಾಗಿ ಇದ್ದುದು ಕೂಡ ಕಾರಣವಾದರೆ, ಅರಸು ಮಹಿಳೆಯರ ಜೀವನ ಕಣ್ಮುಂದೆ ಕಾಣುವಂತಾಗಿ ಸಾಮಾನ್ಯರಿಗೆ ಪ್ರೇರಣೆ ದೊರೆತದ್ದೇ ಮೂಲ ಕಾರಣವಾಗಿದೆ. ಇಂತಹ ಕಾರ್ಯದಲ್ಲಿ ಕಲ್ಯಾಣದ ಚಾಲುಕ್ಯ ಅರಸಿಯರ ಪಾತ್ರ ಹಿರಿದಾದುದು ಎಂಬುದನ್ನು ಗಮನಿಸಬಹುದು. ಅರಸು ವಿಕ್ರಮಾದಿತ್ಯನ ೨೬ಕ್ಕೂ ಮೀರಿದ

ರಾಣಿಯರು, ಈತನ ಪೂರ್ವದಲ್ಲಿದ್ದ ಹಲವಾರು ಅರಸಿಯರು ತಮ್ಮದೇ ಆದ ಸಣ್ಣಪುಟ್ಟ ಪ್ರದೇಶಗಳಲ್ಲಿ ಆಳ್ವಿಕೆ ನಡೆಸುತ್ತಿದ್ದುದಲ್ಲದೆ, ಅಲ್ಲಿಯೇ ವಾಸ್ತವ್ಯ ಹೂಡಿದ ಸಂಗತಿಯೂ ಕೂಡ ತಿಳಿದು ಬರುತ್ತದೆ. ಸಮಾಜಕ್ಕೆ ಅರಸಿಯರು ಹೆಚ್ಚು ಹತ್ತಿರವಾಗಲು ಇದು ಕಾರಣವಾಗಿದೆ.

ಶಾಸನಕವಿಗಳಿಗೆ ಅರಸಿಯರು ನೀಡಿದ ಪ್ರೋತ್ಸಾಹ ಎಂಬ ವಿಶೇಷ ವಿಚಾರವನ್ನು ಮೊದಲ ಬಾರಿಗೆ ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅರಸಿಯರ ಪೋಷಣೆಯಲ್ಲಿ ಕವಿ ಷಡಕ್ಷರಿ ರಚಿಸಿರುವ ವಸ್ತುಕ ಕಾವ್ಯ, ವಿಭಿನ್ನ ಅರಸಿಯರ ಪೋಷಿತ ಅಜ್ಞಾತ ಕವಿಗಳ ಕೆಲವು ವಿಚಾರಗಳನ್ನು ಮೊದಲ ಬಾರಿಗೆ ಇಲ್ಲಿ ಗಮನಿಸಲಾಗಿದೆ. ಅರಸಿಯರೇ ರಚಿಸಿರುವ ಕೆಲವು ಸಾಹಿತ್ಯಗಳನ್ನು ಅಧ್ಯಯನಕ್ಕೆ ಒಳಪಡಿಸಿ, ಈ ವರೆಗೆ ಗುರುತಿಸಲಾಗದ ಕೆಲವು ಕವಯತ್ರಿಯರನ್ನು ಗಮನಿಸಲಾಗಿದೆ. ಹೀಗೆ ಈ ಅಧ್ಯಯನದಲ್ಲಿ ಕೆಲವು ಹೊಸ ವಿಚಾರಗಳ ಮೇಲೆ ಬೆಳಕುಚೆಲ್ಲುವ ಪ್ರಯತ್ನವನ್ನು ನಡೆಸಲಾಗಿದೆ.

## ೯.೧ ಅಧ್ಯಯನದ ಫಲಿತಗಳು:

ಸಾಮಾನ್ಯ ಜನರಿಗಾಗಿ, ವಿದ್ಯಾರ್ಥಿಗಳಿಗಾಗಿ, ಪಠ್ಯಪುಸ್ತಕಗಳಲ್ಲಿ ಉಲ್ಲೇಖವಾಗದಿದ್ದ ವಿಚಾರಗಳು ಸಾಮಾನ್ಯ ಜನತೆಗೆ ತಲುಪಲು ಸಾಧ್ಯವಾಗುವುದಿಲ್ಲ. ಸಾಹಿತ್ಯ ಚರಿತ್ರೆಗಳಲ್ಲಿ, ಇತಿಹಾಸ ಚರಿತ್ರೆಗಳ ಪಠ್ಯಗಳಲ್ಲಿ ಸೇರ್ಪಡೆ ಆಗಬೇಕಾದ ಮಹಿಳೆಯರ ಕುರಿತಾದ ಹಲವು ಪ್ರಮುಖ ಅಂಶಗಳನ್ನು ಈ ಸಂಪ್ರಬಂಧದ ಎರಡು ಮತ್ತು ಮೂರನೆಯ ಅಧ್ಯಾಯಗಳಲ್ಲಿ ಪ್ರತಿಪಾದಿಸಲಾಗಿದೆ.

ಶಿಷ್ಟಕಾವ್ಯ, ಜನಪದ ಕಾವ್ಯ, ಶಾಸನ ಸಾಹಿತ್ಯ ಮೊದಲಾದೆಡೆಗಳಲ್ಲಿ ಚದುರಿಹೋಗಿರುವ ವಿಚಾರಗಳನ್ನು ಒಂದೆಡೆ ಸೇರಿಸಿ ಲಭ್ಯವಿರುವ ಇತಿಹಾಸದ ವಿಚಾರಗಳಿಗೆ ಮತ್ತಷ್ಟು ಪುಷ್ಟಿಯನ್ನೊದಗಿಸುವ, ಕಣ್ಮರೆಯಾಗಿರುವ ವಿಚಾರಗಳನ್ನು ಸಾಹಿತ್ಯಗಳಲ್ಲಿ ಹುಡುಕುವ ಪ್ರಯತ್ನವನ್ನು ಇಲ್ಲಿ ನಡೆಸಿದೆ. ಜೊತೆಗೆ ಇತಿಹಾಸವು ಕೇವಲ ಪುರುಷರಿಂದ ಮಾತ್ರ ನಿರ್ಮಿತವಾದುದಲ್ಲ, ಇದರಲ್ಲಿ ಮಹಿಳೆಯರ ಪಾಲೂ ಇದೆ ಎನ್ನುವ ಅಂಶಗಳನ್ನು ಇಲ್ಲಿ ತೋರಿಸಲಾಗಿದೆ.

ಈ ಸಂಪ್ರಬಂಧದಲ್ಲಿ, ಇದೂವರೆಗೂ ಬೆಳಕಿಗೆ ಬಾರದ ಕೆಲವು ಕವಯತ್ರಿಯರ ವಿಚಾರವನ್ನು ಚರ್ಚಿಸಲಾಗಿದೆ. ಮತ್ತೆ ಕೆಲವು ಕವಯತ್ರಿಯರು ವಿಭಿನ್ನ ಸಂದರ್ಭಗಳಲ್ಲಿ ಕೆಲವೆಡೆ ಉಕ್ತರಾಗಿದ್ದಾರಾದರೂ, ಅವರ ಕುರಿತಾಗಿ ಅಗತ್ಯ ಚರ್ಚೆಗಳು, ವಿಮರ್ಶೆಗಳು ನಡೆಯದ ಕಾರಣ ಮರೆಯಲ್ಲೇ ಉಳಿದಿರುವುದನ್ನು ಇಲ್ಲಿ ಗಮನಿಸಲಾಗಿದೆ.

ಅರಸಿಯರ ಪೋಷಣೆಯಲ್ಲಿ ಕಾವ್ಯ ರಚಿಸಿರುವ ಶಾಸನಕವಿಗಳು, ಶಿಷ್ಟಕವಿಗಳ ಪಟ್ಟಿಯಲ್ಲಿ ಇದುವರೆಗೂ ಬೆಳಕಿಗೆ ಬಾರದ ಹಲವು ಕವಿಗಳನ್ನು ಇಲ್ಲಿ ಪರಿಚಯಿಸಲಾಗಿದೆ. ಅವರಲ್ಲಿ ಕೆಲವೇ ವಿದ್ವಾಂಸರು ಉಲ್ಲೇಖಿಸಿರುವ ಜಕ್ಕಲಾಂಬೆಯ ವಿಷಯಕ್ಕೆ ಕುರಿತಂತೆ ಕೆಲವು ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಈ ಹಿಂದೆ ಉಕ್ತಳಾಗಿರುವಂತೆ ಶ್ರೀಮತಿ ಹಾಗೂ ಜಕ್ಕಲಾಂಬೆಯರಿಬ್ಬರೂ ಒಬ್ಬರೇ ಅಲ್ಲ, ಶ್ರೀಮತಿ ಎನ್ನುವುದು ಜಕ್ಕಲಾಂಬೆಯ ಕಾವ್ಯನಾಮವಲ್ಲ, ಶ್ರೀಮತಿ ಎನ್ನುವ ಕವಯತ್ರಿ ಇದ್ದುದರ ಕುರಿತಾದ ಕೆಲವು ಮಾಹಿತಿಗಳನ್ನು, ಅವಳ ಕುರಿತಾದ ಕಾವ್ಯವನ್ನು ಇಲ್ಲಿ ಮೊತ್ತ ಮೊದಲಿಗೆ ಗುರುತಿಸಲಾಗಿದೆ.

ಅರಸಿಯರು ಕವಿಗಳಿಗೆ ಪೋಷಣೆ ನೀಡಿರುವ ವಿಚಾರವನ್ನು ವಿಸ್ತೃತವಾಗಿ ಚರ್ಚಿಸಿ, ಹಲವಾರು ಮನೆತನದ ಅರಸಿಯರ ಸಾಹಿತ್ಯ ಪೋಷಣೆಗಳನ್ನು ಒಂದೆಡೆ ಚರ್ಚಿಸಲಾಗಿದೆ. ಸಾಳ್ವ ಮನೆತನದ ಅರಸಿಯರು, ಮೈಸೂರು ಅರಸು ಮನೆತನದ ಅರಸಿಯರು, ಕೆಳದಿ ಮನೆತನದ ಅರಸಿಯರು ಮೊದಲಾದ ಪ್ರತಿಷ್ಠಿತ ಅರಸು ಮನೆತನಗಳ ಕುರಿತಂತೆ ಈ ವರೆಗೂ ಹಲವಾರು ಅಧ್ಯಯನ ನಡೆದಿವೆಯಾದರೂ, ಅರಸಿಯರ ಸಾಹಿತ್ಯಿಕ ಕೊಡುಗೆಯನ್ನು ಒಂದೆಡೆ

ಸಮಗ್ರವಾಗಿ, ಗುರುತಿಸಿ ವಿಶ್ಲೇಷಿಸುವ ಕಾರ್ಯ ನಡೆದಿರಲಿಲ್ಲ. ಈ ಎಲ್ಲ ವಿಚಾರಗಳನ್ನು ಇಲ್ಲಿ ಗಮನಿಸಲಾಗಿದೆ ಅಲ್ಲದೆ ಶಾಸನ ಕವಿಗಳನ್ನು ಪೋಷಿಸಿದ ಅರಸಿಯರ ವಿಚಾರವನ್ನೂ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಕನ್ನಡದ ಪ್ರಸಿದ್ಧ ಕವಿ ಷಡಕ್ಷರಿಗೆ ಆರಂಭಕಾಲದಲ್ಲಿ ಆಶ್ರಯ ನೀಡಿದ ಅರಸಿ ಅಮೃತಾಂಬೆಯು ಷಡಕ್ಷರಿಯಿಂದ ಇನ್ನೂ ಕೆಲವು ಗ್ರಂಥಗಳನ್ನು ರಚಿಸಿರುವುದು, ಇದನ್ನು ವಸ್ತುಕ ಕಾವ್ಯವೆಂದು ಕರೆಯುತ್ತಿದ್ದ ಹೊಸ ವಿಚಾರವನ್ನು ಈ ಅಧ್ಯಯನದಲ್ಲಿ ಗಮನಿಸಲಾಗಿದೆ. ಇದರಿಂದ ಈ ವರೆಗೆ ಬೆಳಕಿಗೆ ಬಾರದಿರುವ ಷಡಕ್ಷರಿ ಬರೆದಿರುವ ಕನ್ನಡ ಗದ್ಯ ಕೃತಿಗಳನ್ನು ಇಲ್ಲಿ ಗುರುತಿಸಲಾಗಿದೆ.

ಈ ವರೆಗೆ ಯಾರೂ ಮಹಿಳಾ ಹರಿದಾಸರ ಗುಂಪಿನಲ್ಲಿ ಗುರುತಿಸದ ಅರಸಿ ರಂಗಮ್ಮನ ಕುರಿತಾದ ವಿಚಾರವನ್ನು ಕುರಿತು ಚರ್ಚಿಸಲಾಗಿದೆ. ವಿಶಿಷ್ಟಾದ್ವೈತದ ಹಿನ್ನೆಲೆಯಲ್ಲಿ ಕೀರ್ತನೆಗಳನ್ನು ರಚಿಸಿದ ರಂಗಮ್ಮಳ ಕೆಲವು ಕೀರ್ತನೆಗಳನ್ನು ಸಂಗ್ರಹಿಸಲಾಗಿದೆ. ಕನ್ನಡಿಗರೇ ಆದ ಕೆಲವು ಸಂಸ್ಕೃತ ಕವಯತ್ರಿಯರನ್ನು ಕರ್ನಾಟಕ ಕವಿ ಚರಿತ್ರೆಯಿಂದ ಹೊರಗೆ ಉಳಿಸಲಾಗಿರುವುದು ದೊಡ್ಡ ಕೊರತೆಯಾಗಿದೆ. ಈ ಕೃತಿಗಳ ಕುರಿತಾಗಿ ದೇಶಾದ್ಯಂತ ಹಲವಾರು ವಿಚಾರ ಸಂಕಿರಣಗಳು, ಚರ್ಚೆಗಳು ನಡೆದಿವೆಯಾದರೂ, ಕರ್ನಾಟಕದ ಕವಿಯರ ಸಾಲಿನಲ್ಲಿ ಇವರಿಗೆ ದೊರೆಯಬೇಕಾದ ಸ್ಥಾನ ದೊರಕದಿರುವ ವಿಚಾರ ಹಾಗೂ ಇವರ ಕೃತಿಗಳ ಕುರಿತಾದ ವಿಶೇಷ ವಿಚಾರಗಳನ್ನು ಇಲ್ಲಿ ಗಮನಿಸಲಾಗಿದೆ. ಕನ್ನಡದ ದೇಸಿ ಮಟ್ಟಾದ 'ಒನಕೆವಾಡು' ಕುರಿತಾದ ಲಕ್ಷಣ ಪದ್ಯವೊಂದು ಸಂಸ್ಕೃತ ಕವಯತ್ರಿಯಿಂದ ರಚಿತವಾಗಿರುವ ವಿಚಾರವನ್ನು ಇಲ್ಲಿ ಗುರುತಿಸಿ, ಸಂಸ್ಕೃತದಲ್ಲಿ ರಚನೆ ನಡೆದಿದ್ದರೂ ಅವು ದೇಸೀ ವಿಚಾರಗಳಿಂದ ಕೂಡಿರುತ್ತಿತ್ತೆನ್ನುವ ವಿಚಾರವನ್ನು ಗಮನಿಸಲಾಗಿದೆ. ಜೊತೆಗೆ ಕರ್ನಾಟಕದ ಸಂಸ್ಕೃತ ಕವಯತ್ರಿಯರು ರಚಿಸಿರುವ ಬಿಡಿ ಮುಕ್ತಕಗಳನ್ನು ಒಂದೆಡೆ ಸಂಗ್ರಹಿಸುವ ಪ್ರಯತ್ನವನ್ನೂ ಈ ಅಧ್ಯಯನದಲ್ಲಿ ನಡೆಸಲಾಗಿದೆ.

ಅರಸಿಯರ ಕೊಡುಗೆ, ಅರಸಿಯರಿಂದ ರಚಿತವಾದ ಬಿಡಿ ಬಿಡಿ ಕೃತಿಗಳನ್ನು ಸಂಗ್ರಹಿಸಿರುವುದರೊಂದಿಗೆ, ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ಅರಸಿಯರ ಪಟ್ಟಿಯನ್ನು ಒಂದೆಡೆ ನೀಡಿ ಮುಂದಿನ ಅಧ್ಯಯನಗಳಿಗೆ ಆಕರವಾಗುವ ಮಾಹಿತಿಯನ್ನು ನೀಡುವ ಪ್ರಯತ್ನ ಇಲ್ಲಿ ನಡೆಸಲಾಗಿದೆ.

## ೯.೨ ಮುಂದಿನ ಅಧ್ಯಯನದ ಸಾಧ್ಯತೆಗಳು

ಕನ್ನಡ ಸಾಹಿತ್ಯ, ಸಂಸ್ಕೃತಕಾವ್ಯ, ಶಾಸನ ಸಾಹಿತ್ಯ, ಜನಪದ ಸಾಹಿತ್ಯ ಮೊದಲಾದವುಗಳಿಂದ ಕನ್ನಡನಾಡಿನ ರಾಣಿಯರ ಕುರಿತಾದ ಐತಿಹಾಸಿಕ ಸಂಗತಿಗಳನ್ನೂ, ಅವರ ಸಾಹಿತ್ಯಾಭಿರುಚಿಯನ್ನು ಕುರಿತು ಅಧ್ಯಯನ ನಡೆಸುವ ಸಂದರ್ಭದಲ್ಲಿ ಕೆಲವು ತೊಡಕುಗಳನ್ನು ಎದುರಿಸಲಾಯಿತೆನ್ನುವ ವಿಚಾರವನ್ನು ಮೊದಲನೆಯ ಅಧ್ಯಾಯದಲ್ಲಿನ ಆಕರಗಳು ಮತ್ತು ಸಮಸ್ಯೆ ಎಂಬಲ್ಲಿ ವಿವರವಾಗಿ ತಿಳಿಸಲಾಗಿದೆ. ಇತಿಹಾಸ ಹಾಗು ಸಾಹಿತ್ಯಕ್ಕೆ ಸಂಬಂಧಿಸಿದಂತೆ ಹಲವು ಅರಸು ಮನೆತನಗಳ ಕುರಿತಂತೆ ಅಧ್ಯಯನ ನಡೆಯುವ ಅಗತ್ಯವಿದೆ. ಅಂತೆಯೇ ಕೆಲವು ಅರಸಿಯರ, ಕವಯತ್ರಿಯರ ಕೃತಿಗಳ ಸಂಗ್ರಹ ಕಾರ್ಯ ನಡೆಯುವ ಅಗತ್ಯವನ್ನು ಉಲ್ಲೇಖಿಸಲಾಗಿದೆ. ಇದರೊಂದಿಗೆ ತಾಡಪತ್ರದಲ್ಲಿರುವ ಕೆಲವು ಗ್ರಂಥಗಳನ್ನು ಸಂಪಾದಿಸಿ ಮುದ್ರಿಸುವ ಅಗತ್ಯವೂ ಇದೆ. ಈ ಕೃತಿಗಳು ಮುದ್ರಣ ಕಂಡರೆ ಇನ್ನೂ ಹೆಚ್ಚಿನ ಮಾಹಿತಿ ಲಭಿಸುವ ಸಾಧ್ಯತೆಯನ್ನೂ ತಿಳಿಸಲಾಗಿದೆ.

## ಆಧಾರಗ್ರಂಥಗಳು


೧. ಅನಂತರಂಗಾಚಾರ್.ಎನ್, **ಸಾಹಿತ್ಯ ಭಾರತಿ,** ಮೈಸೂರು ವಿವಿ, ಮೈಸೂರು, ೧೯೭೦

೨. ಅಣ್ಣಿಗೇರಿ.ಎ.ಎಂ ಮತ್ತು ಮೇವುಂಡಿ ಮಲ್ಲಾರಿ, **ಶಾಸನ ಸಾಹಿತ್ಯ ಸಂಚಯ,** ಕನ್ನಡ ಸಂಶೋಧನಾ ಸಂಸ್ಥೆ, ಧಾರವಾಡ, ೧೯೬೧

೩. ಆಚಾರ್ಯ ಬಲದೇವ ಉಪಾಧ್ಯಾಯ, ಅನು: ಎಸ್.ರಾಮಚಂದ್ರಶಾಸ್ತ್ರೀ, **ಸಂಸ್ಕೃತ ಸಾಹಿತ್ಯದ ಇತಿಹಾಸ,** ಬೆಂಗಳೂರು ವಿಶ್ವವಿದ್ಯಾಲಯ, ೧೯೮೦

೪. ಇಮ್ಮಡಿ ಶಿವಬಸವಸ್ವಾಮಿಗಳು, **ಸಂಸ್ಕೃತ ಸಾಹಿತ್ಯಕ್ಕೆ ಕರ್ನಾಟಕದ ಕೊಡುಗೆ,** ಸಂವಹನ, ಶಿವರಾಂಪೇಟೆ, ಮೈಸೂರು, ೧೯೯೯

೫. ಉಮಾನಾಥ ಶಣೈ.ವೈ, **ಮೂಡುಬಿದಿರೆ ಲೇಖಕರ ಕೊಡುಗೆ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೩

೬. ಉಮಾನಾಥ ಶಣೈ, **ಬಂಗರಸರ ಕಾಲದ ಸಾಹಿತ್ಯ,** ತುಳುಕರ್ನಾಟಕದ ಅರಸುಮನೆತನಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೭. ಕಮಲಾ ಹಂಪನಾ, **ಬೊಗಸೆ (ಮಹಿಳೆ ಸುತ್ತ-ಮುತ್ತ),** ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೩

೮. ಕಮಲಾ ಹಂಪನಾ, **ಮಹಾಮಂಡಲೇಶ್ವರಿ ರಾಣಿ ಚೆನ್ನಭೈರಾದೇವಿ ಮತ್ತು ಇತರ ಕರಾವಳಿ ರಾಣಿಯರು,** ಸ್ವಪ್ನಬುಕ್ ಹೌಸ್ ೨೦೧೧

೯. ಕಲುಬುರ್ಗಿ ಎಂ.ಎಂ (ಸಂ), **ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೧೦. ಕಲಬುರ್ಗಿ.ಎಂ.ಎಂ., **ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ,** ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೭೩

೧೧. ಕಲಬುರ್ಗಿ.ಎಂ.ಎಂ, **ಮಹಾರಾಷ್ಟ್ರದ ಕನ್ನಡ ಶಾಸನಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂ.೨೦೧೨

೧೨. **ಕನ್ನಡ ಸಾಹಿತ್ಯ ಚರಿತ್ರೆ,** ಹಾಮಾನಾಯಕ, ಟಿ.ವಿ.ವೆಂಕಟಾಚಲಶಾಸ್ತ್ರೀ (ಸಂ), ಕನ್ನಡ ಅಧ್ಯಯನ ಸಂಸ್ಥೆಯ ಮೈಸೂರು, ೧೯೭೪

೧೩. ಕನ್ನಡ ಕೈಪಿಡಿ, ಸಂಪುಟ-೧ & ೨ ಮೈಸೂರು ವಿಶ್ವವಿದ್ಯಾನಿಲಯ, ೨೦೧೦,

೧೪. ಕನ್ನಡ ವಿಷಯ ವಿಶ್ವಕೋಶ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿವಿ, ೧೯೭೬, ೨೦೦೫

೧೫. ಕಪಟರಾಳ ಕೃಷ್ಣರಾಯರು, **ಸುರಪುರ ಸಂಸ್ಥಾನದ ಇತಿಹಾಸ,** ಅನಂತ ಪ್ರಕಾಶನ, ೨೦೦೯

೧೬. ಕನ್ನಡ ವಿಷಯ ವಿಶ್ವಕೋಶ. (ಇತಿಹಾಸ ಮತ್ತು ಪುರಾತತ್ತ್ವ) ಮೈಸೂರು ವಿಶ್ವವಿದ್ಯಾನಿಲಯ ೨೦೦೯

೧೭. ಕಾರ್ತಿಕ್.ಎಸ್., **ಪದಾರ್ಥ ಸಂಪದ,** ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು, ೨೦೧೧

೧೮. ಕಿಟೆಲ್, Nagavarma's Canarese Prosody, ಪು. XXIV-LXXXI; ದ್ವಿತೀಯ ಮುದ್ರಣ Asian Educational Services, ನವದೆಹಲಿ, ೧೯೮೮

೧೯. ಕೀರ್ತಿನಾಥ ಕುರ್ತುಕೋಟಿ, **ಯುಗಧರ್ಮ ಹಾಗೂ ಸಾಹಿತ್ಯ ದರ್ಶನ,** ಕನ್ನಡ ಮತ್ತು ಸಂಸ್ಕೃತಿ ವಿಶ್ವಕನ್ನಡ ಸಮ್ಮೇಳನ, ಬೆಂಗಳೂರು, ೧೯೮೩

೨೦. ಕುಮುದಿನಿ.ವೈ.ಎಂ., **ಕನ್ನಡದ ಸಂಭಾವ್ಯ ರಾಣಿಯರು,** ರವಿಪ್ರಕಾಶನ, ಬೆಂಗಳೂರು

೨೧. ಕೃಷ್ಣಮೂರ್ತಿ.ಪಿ.ವಿ, **ಶಾಸನ, ಇತಿಹಾಸ ಮಂಥನ,** ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು ೨೦೧೧
ಕೃಷ್ಣಮೂರ್ತಿ.ಪಿ.ವಿ, **ಶಾಸನ ಮಂಥನ,** ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು ೨೦೧೧

೨೨. ಕೃಷ್ಣಮೂರ್ತಿ.ಪಿ.ವಿ, **ಬಾಣರಸರ ಶಾಸನಗಳು,** ಸಿ.ವಿ.ಜಿ.ಪಬ್ಲಿಕೇಷನ್ಸ್, ಬೆಂಗಳೂರು, ೨೦೦೯

೨೩. ಗಣೇಶ್.ಕೆ.ಆರ್, **ಆಂಧ್ರಪ್ರದೇಶದ ಕನ್ನಡ ಶಾಸನಗಳು – ಒಂದು ಅಧ್ಯಯನ,** ಕಸಾಪ ೧೯೯೬

೨೪. ಗಣೇಶ್.ಕೆ.ಆರ್, **ಶಾಸನ ಸರಸ್ವತಿ,** ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ ೨೦೦೮

೨೫. ಗಣೇಶ್.ಆರ್, **ಅಲಂಕಾರಶಾಸ್ತ್ರ,** ಭವನದ ಗಾಂಧೀಕೇಂದ್ರ, ಬೆಂಗಳೂರು. ೨೦೦೨

೨೬. ಗೋಪಾಲ್, ಬಾ.ರಾ., **ಕರ್ನಾಟಕದ ಇತಿಹಾಸ,** ಮೈಸೂರು ವಿಶ್ವವಿದ್ಯಾನಿಲಯ, ೧೯೮೯

೨೭. ಗೋಪಾಲ ರಾವ್.ಹೆಚ್.ಎಸ್, **ನಮ್ಮದಿದು ಇತಿಹಾಸ,** ಅಭಿನವ, ಬೆಂಗಳೂರು ೨೦೧೦

೨೮. ಗೋಪಾಲ್ ಬಿ.ಆರ್., **ಮೈನರ್ ಡೈನಾಸ್ಟಿಸ್ ಆಫ್ ಕರ್ನಾಟಕ**, ನ್ಯೂ ಎರಾ ಪಬ್ಲಿಕೇಷನ್ಸ್ ಮದ್ರಾಸು, ೧೯೮೨

೨೯. ಚೆನ್ನಕ್ಕ ಎಲಿಗಾರ, **ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೦

೩೦. ಚೆನ್ನಕ್ಕ ಎಲಿಗಾರ, **ಪ್ರಾಚೀನ ಕರ್ನಾಟಕದ ರಾಣಿಯರು,** ಚನ್ನಗಂಗಾ ಪ್ರಕಾಶನ, ಧಾರವಾಡ ೧೯೮೭

೩೧. ಚೆನ್ನಕ್ಕ ಪಾವಟೆ, **ಶಾಸನ ಸಂಜೀವಿನಿ**, ಚೆನ್ನಗಂಗಾ ಪ್ರಕಾಶನ, ಚೈತ್ರ ಗಂಗೋತ್ರಿ, ಎರಡನೇ ಅಡ್ಡರಸ್ತೆ, ಸಾಧನಕೇರಿ, ಧಾರವಾಡ. ೨೦೦೩.

೩೨. ಚೆನ್ನಕ್ಕ ಪಾವಟೆ, **ಹಾನಗಲ್ಲ ಕದಂಬರು**, ಚೆನ್ನಗಂಗಾ ಪ್ರಕಾಶನ, ಧಾರವಾಡ, ೧೯೯೮

೩೩. ಚಿದಾನಂದಮೂರ್ತಿ.ಎಂ. **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಸಪ್ನ ಬುಕ್‌ಹೌಸ್, ಬೆಂಗಳೂರು, ೨೦೧೧

೩೪. ಚಿದಾನಂದ ಮೂರ್ತಿ.ಎಂ, **ಶಿವಾಜಿ ಮಲ್ಲಮ್ಮಾಜಿ ಸಮರೋತ್ಸವ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೧೦

೩೫. ಜಯಮ್ಮ ಕರಿಯಣ್ಣ. ಎಚ್, **ನೊಳಂಬರ ಶಾಸನಗಳ ಸಾಂಸ್ಕೃತಿಕ ಅಧ್ಯಯನ**, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ, ೨೦೦೮

೩೬. ಜಯಲಕ್ಷ್ಮಿ ಸೀತಾಪುರ, **ಕನ್ನಡದಲ್ಲಿ ಐತಿಹಾಸಿಕ ಜನಪದ ಲಾವಣಿಗಳು**, ಕ.ಸಾ.ಪ, ಬೆಂಗಳೂರು, ೨೦೧೧

೩೭. ಜೋತ್ಸ್ನಾ ಕಾಮತ್, **ಕೈಗನ್ನಡಿಯಲ್ಲಿ ಕನ್ನಡಿತಿ**, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ, ೨೦೦೮

೩೮. ಜೋತ್ಸ್ನಾಕಾಮತ್, **ಕರ್ನಾಟಕದ ಶಿಕ್ಷಣ ಪರಂಪರೆ,** ಕನ್ನಡ ಅಧ್ಯಯನ ವಿಭಾಗ, ಮುಂಬಯಿ ವಿಶ್ವವಿದ್ಯಾನಿಲಯ, ೧೯೮೮

೩೯. ತಿ.ತಾ.ಶರ್ಮ, **ವಿಚಾರಕರ್ನಾಟಕ,** ಪುರೋಗಾಮಿ ಸಾಹಿತ್ಯ ಸಂಘ, ಮಲ್ಲೇಶ್ವರಂ, ಬೆಂಗಳೂರು, ೧೯೭೦

೪೦. ತಿಪ್ಪೇರುದ್ರಸ್ವಾಮಿ.ಎಚ್, **ಕರ್ಣಾಟಕ ಸಂಸ್ಕೃತಿ ಸಮೀಕ್ಷೆ**, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು, ೨೦೧೧

೪೧. ದೇಸಾಯಿ.ಪಿ.ಬಿ, **ಕನ್ನಡನಾಡಿನ ಮಿಂಚಿದ ಮಹಿಳೆಯರು**, ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ, ೨೦೦೮

೪೨. ನರಸಿಂಹಾಚಾರ್.ಡಿ.ಎಲ್., ***ಪೀಠಿಕೆಗಳು ಲೇಖನಗಳು***, ಡಿ.ವಿ.ಕೆ.ಮೂರ್ತಿ, ಮೈಸೂರು, ೧೯೭೧

೪೩. ನರಸಿಂಹಾಚಾರ್.ಡಿ.ಎಲ್., **ಕನ್ನಡ ಗ್ರಂಥ ಸಂಪಾದನೆ**, ಶಾರದಾಮಂದಿರ, ಮೈಸೂರು, ೧೯೭೬

೪೪. ನರಸಿಂಹಾಚಾರ್.ಆರ್, **ಕರ್ಣಾಟಕ ಕವಿಚರಿತೆ** ಸಂ.೧,೨,೩ ಕ.ಸಾ.ಪ, ಬೆಂಗಳೂರು, ೨೦೧೧

೪೫. ನರಸಿಂಹಾಚಾರ್.ಆರ್, **ಶಾಸನ ಪದ್ಯಮಂಜರಿ**, ಬೆಂಗಳೂರು ವಿಶ್ವವಿದ್ಯಾಲಯ, ೧೯೭೫

೪೬. ನರಸಿಂಹಮೂರ್ತಿ.ಎ.ವಿ., **ಕರ್ಣಾಟಕದ ಸೇವುಣರ ಇತಿಹಾಸ**, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು, ೨೦೧೦

೪೭. ನಾಗಭೂಷಣ.ಸಿ, **ಕಲ್ಯಾಣ ಕರ್ನಾಟಕ ಸಾಹಿತ್ಯ–ಸಂಸ್ಕೃತಿ,** ಅವಿರತ ಪುಸ್ತಕ, ಬೆಂಗಳೂರು ೨೦೦೯

೪೮. ನಾಗಭೂಷಣ.ಸಿ, **ಕನ್ನಡ ಸಾಹಿತ್ಯ ಸಂಸ್ಕೃತಿ ಶೋಧನೆ,** ಸಂಡೂರು, ೧೯೯೯

೪೯. ನಾಗರಾಜಯ್ಯ ಹಂಪ., **ಸಾಂತರರು ಒಂದು ಅಧ್ಯಯನ**, ಸಿದ್ಧಾಂತ ಕೀರ್ತಿ ಗ್ರಂಥಮಾಲೆ, ಹುಂಚಮಠ

೫೦. ನಾಗರಾಜಯ್ಯ.ಹಂಪ, **ದಾನಚಿಂತಾಮಣಿ ಅತ್ತಿಮಬ್ಬೆ,** ಐಬಿಎಚ್ ಪ್ರಕಾಶನ, ಬೆಂಗಳೂರು, ೧೯೯೬

೫೧. ನಾಗರಾಜಯ್ಯ.ಹಂಪ, **ಚಂದ್ರಕೊಡೆ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭

೫೨. ನಾಗರಾಜ ರಾವ್.ಸಿ.ಕೆ, **ಶ್ರೀಪೃಥ್ವೀವಲ್ಲಭ,** ಶ್ರೀಕಾಂತ ಪ್ರಕಾಶನ, ಬೆಂಗಳೂರು, ೧೯೯೫

೫೩. ನಾಗರಾಜ್ ಎಂ.ಜಿ, **ಕೊಡಗಿನ ಹಾಲೇರಿ ರಾಜವಂಶವು** ಭಾಗ ೧ & ೨, ಪ್ರಾಚ್ಯವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ, ೨೦೦೪

೫೪. ನಾಗೇಗೌಡ.ಎಚ್.ಎಲ್, **ಪ್ರವಾಸಿ ಕಂಡ ಇಂಡಿಯಾ,** ಐಬಿಎಚ್ ಪ್ರಕಾಶನ, ಬೆಂಗಳೂರು ೨೦೦೭

೫೫. ನಾಗೇಂದ್ರಪ್ಪ.ಕೆ, **ಹದಿನೈದನೆಯ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೬

೫೬. ಪಾಂಡುರಂಗಿ.ಕೆ.ಟಿ, **ಸಂಸ್ಕೃತ ಕವಿ ಕಾವ್ಯ ದರ್ಶನ**, ಮನೋಹರ ಗ್ರಂಥಮಾಲ, ಧಾರವಾಡ. ೧೯೯೯

೫೭. ಪಾಟೀಲ.ಯ.ರು, **ಬೆಳವಡಿ ಮಲ್ಲವ್ವ ಮಹಾರಾಣಿ ವಿಷಯ–ಇತಿಹಾಸ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೨೦೦೬

೫೮. ಪುಟ್ಟಪ್ಪ ಕೆ.ವಿ (ಸಂ), **ಕನ್ನಡ ಕೈಪಿಡಿ**, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ೨೦೧೦

೫೯. ಪದ್ಮ.ಎಂ.ಬಿ, The Position ofWomen in Mediaeval Karnataka ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೯೩.

೬೦. ಬಸವರಾಜು.ಕೆ.ಆರ್, **ನೊಳಂಬ ಇತಿಹಾಸ ದರ್ಶನ,** ನೊಳಂಬ ಇತಿಹಾಸ ಪರಿಷತ್ತು, ತಿಪಟೂರು. ೧೯೭೬

೬೧. ಆರ್.ಗೋಪಾಲ್ (ಸಂ), **ವಿಜಯನಗರ ಅಧ್ಯಯನ ಸಂಪುಟಗಳು,** ಹಂಪಿ

೬೨. ಬೋಜರಾಜ ಪಾಟೀಲ, **ನಾಗರಖಂಡ ೭೦,** ಮಲೆನಾಡು ವೀರಶೈವ ಅಧ್ಯಯನ ಸಂಸ್ಥೆ, ಶಿವಮೊಗ್ಗ ೧೯೯೫

೬೩. ಭಾಸ್ಕರ್ ರಾವ್ ಮುಡಬೂಳ, **ಮರೆತುಹೋದ ಸುರಪುರ ಇತಿಹಾಸ,** ೨೦೦೧

೬೪. ಭಾನುಮತಿ.ವೈ.ಸಿ(ಸಂ), **ಅರಸರ ಚರಿತ್ರೆಗಳು,** ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂ. ೨೦೧೧.

೬೫. ಮಂಜಪ್ಪ ಶೆಟ್ಟಿ.ಎಂ.ಪಿ, **ಛಂದೋವಿಚಾರ ಮಂಜರಿ,** ಮಸಗಲಿ ಪ್ರಕಾಶನ, ಮೈಸೂರು ೧೯೯೨

೬೬. ಮದನಕುಮಾರ್.ಎ.ಆರ್, **ಕನ್ನಡ ಸಾಹಿತ್ಯ ಮತ್ತು ರಾಜಾಶ್ರಯ,** ಕೆ.ಎಸ್.ಓ.ಯು, ಮೈಸೂರು

೬೭. ಮರಿಯಪ್ಪ ಭಟ್ಟ.ಎಂ, **ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ,** ಭಾರತಿ ಪ್ರಕಾಶನ, ಮೈಸೂರು, ೧೯೬೦

೬೮. ಮೇವುಂಡಿ ಮಲ್ಲಾರಿ, **ಕನ್ನಡನಾಡಿನ ಶಾಸನ ಕವಿಗಳು,** ಪ್ರತಿಭಾ ಗ್ರಂಥಮಾಲೆ, ಶಿವಾಜಿ ಬೀದಿ, ಧಾರವಾಡ, ದ್ವಿಮು. ೧೯೭೪.

೬೯. ರಂ.ಶ್ರೀ.ಮುಗಳಿ, **ಕನ್ನಡ ಸಾಹಿತ್ಯದ ಇತಿಹಾಸ,** ಸಾಹಿತ್ಯ ಅಕಾಡೆಮಿ, ನವದೆಹಲಿ, ೧೯೬೮.

೭೦. ರಂ.ಶ್ರೀ.ಮುಗಳಿ, **ಕನ್ನಡ ಸಾಹಿತ್ಯ ಚರಿತ್ರೆ,** ಗೀತಾಬುಕ್ ಹೌಸ್, ಮೈಸೂರು, ೨೦೧೧

೭೧. ರಂಗರಾಜ ದೇವೇಂದ್ರಪ್ಪ, **ಸುರಪುರ ಸಂಸ್ಥಾನ:ಒಂದು ಅಧ್ಯಯನ,** ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡಕ್ಕೆ ಸಾದರಪಡಿಸಿದ ಪಿಎಚ್ ಡಿ ಮಹಾಪ್ರಬಂಧ ೧೯೯೫.

೭೨. ರಮೇಶ್ ಕೆ.ವಿ., **ತುಳುನಾಡಿನ ಇತಿಹಾಸ,** ರಾಷ್ಟ್ರಕವಿ ಗೋವಿಂದ ಪೈ ಸ್ಮಾರಕ ಸಂಶೋಧನ ಕೇಂದ್ರ, ಉಡುಪಿ, ೧೯೬೮

೭೩. ರಾಜಶೇಖರ ಪಿ.ಕೆ (ಸಂ), **ಪಿರಿಯಾಪಟ್ಟಣದ ಕಾಳಗ,** ಹೊನ್ನಾರು ಜನಪದ ಗಾಯಕರು, ಮೈಸೂರು ೧೯೯೦

೭೪. ರಾಜಪ್ಪದಳವಾಯಿ, **ಕನ್ನಡ ಸಾಹಿತ್ಯಕೋಶ,** ಶ್ರೀ ರಾಘವೇಂದ್ರ ಪ್ರಕಾಶನ, ಬೆಂಗಳೂರು, ೧೯೯೬

೭೫. ರಾಜಶೇಖರಪ್ಪ.ಬಿ, **ಇತಿಹಾಸ ಕಥನ,** ಸಿ.ವಿ.ಜಿ.ಪಬ್ಲಿಕೇಷನ್ಸ, ಬೆಂಗಳೂರು, ೨೦೦೧

೭೬. ರಾಬರ್ಟ್ ಸಿವೆಲ್ (ಅನು:ಸದಾನಂದ ಕನವಳ್ಳಿ) **ಮರೆತುಹೋಗಿರುವ ಸಾಮ್ರಾಜ್ಯ ವಿಜಯನಗರ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೨

೭೭. ರಾಮಚಂದ್ರಶಾಸ್ತ್ರೀ.ಎಸ್, **ಸಂಸ್ಕೃತ ಸಾಹಿತ್ಯದ ಇತಿಹಾಸ,** ಬೆಂಗಳೂರು ವಿವಿ, ೧೯೮೦

೭೮. ರಾಜಾರಾಮ ಹೆಗಡೆ, **ಮಲೆಕರ್ನಾಟಕದ ಅರಸುಮನೆತನಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೧

೭೯. ರಾಗೌ, **ಕನ್ನಡ ಚಾರಿತ್ರಿಕ ಕಾವ್ಯಗಳು,** ಕೆ.ಎಸ್.ಓ.ಯು, ಮೈಸೂರು

೮೦. ರೈಸ್.ಇ.ಪಿ. A History of Kanarese Literature ಅಸೋಸಿಯೆಷನ್ ಪ್ರೆಸ್, ೫,ರಸ್ಸಲ್ ಸ್ಟ್ರೀಟ್, ಕಲ್ಕತ್ತ, ೧೯೨೧

೮೧. ಲಲಿತಾಂಬ.ಎನ್.ಆರ್, **ಮಧ್ಯಕಾಲೀನ ಕರ್ನಾಟಕದ ಸಾಮಾಜಿಕ ಸಂಚಲನ,** ಮುದ್ದುಶ್ರೀ ಗ್ರಂಥಮಾಲೆ, ಬೆಂಗಳೂರು, ೨೦೧೧

೮೨. ಲಕ್ಷ್ಮಣ್ ತೆಲಗಾವಿ & ಎಂ.ವಿ.ಶ್ರೀನಿವಾಸ್., **ಹುಲ್ಲೂರು ಶೀನಿವಾಸ ಜೋಯಿಸರ ಸಂಶೋಧನ ಲೇಖನಗಳು,** ಹುಲ್ಲೂರು ಶೀನಿವಾಸ ಜೋಯಿಸ ಗ್ರಂಥ ಪ್ರಕಟಣ ಸಮಿತಿ, ಚಿತ್ರದುರ್ಗ, ೧೯೯೫

೮೩. ಲಕ್ಷ್ಮೀನಾರಾಯಣರಾಯರು ನೆಲಮಂಗಲ, ಆರ್.ಎಸ್.ಪಂಚಮುಖಿ, **ಕರ್ನಾಟಕದ ಅರಸು ಮನೆತನಗಳು,** ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ. ೨೦೦೮

೮೪. ಲಿಂಗಯ್ಯ.ಡಿ (ಸಂ) **ಪಿರಿಯಾಪಟ್ಟಣದ ಜಗಳ,** ದಿನಕರ ಪ್ರಕಾಶನ, ಬೆಂಗಳೂರು ೧೯೭೯

೮೫. ವಸಂತ ಮಾಧವ(ಲೇ), ಉತ್ತರ ಕನ್ನಡಜಿಲ್ಲೆ ದರ್ಶನ, **ಗೇರುಸೊಪ್ಪೆಯ ಸಾಳ್ವರು,** ಕನ್ನಡ ಸಾಹಿತ್ಯ ಪರಿಷತ್ತು

೮೬. ವಸಂತಲಕ್ಷ್ಮಿ (ಸಂ), **ಭಾರತೀಯ ಸಂಸ್ಕೃತಿ ಮತ್ತು ಮಹಿಳೆ,** ದಿ ಮಿಥಿಕ್ ಸೊಸೈಟಿ, ಬೆಂಗಳೂರು. ೨೦೦೯

೮೭. ವಿಘ್ನರಾಜ.ಎಸ್.ಆರ್, **ಕರ್ನಾಟಕದ ಸಂಸ್ಕೃತ ಜೈನ ಕವಿಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

88. ವೆಂಕಟಾಚಲಶಾಸ್ತ್ರಿ.ಟಿ.ವಿ, **ಪ್ರಾಕ್ತನ,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ, ೧೯೮೬

೮೯. ವೆಂಕಟಾಚಲಶಾಸ್ತ್ರಿ.ಟಿ.ವಿ, **ಡಾ.ಎ.ವೆಂಕಟಸುಬ್ಬಯ್ಯನವರ ಸಂಶೋಧನ ಲೇಖನಗಳು,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ೨೦೦೧

೯೦. ವೆಂಕಟೇಶ ಜೋಯಿಸ್ ಕೆ.ಜಿ, **ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೬

೯೧. ವೆಂಕಟೇಶ್.ಟಿ.ಎಸ್, **ಕರುನಾಡಿನಲ್ಲಿ ಜೈನಧರ್ಮ ಮತ್ತು ಸಾಹಿತ್ಯ,** ಅನ್ನದಾನಿ ಭೈರವ ಪ್ರಕಾಶನ, ಬೆಂ.೨೦೧೨.

೯೨. ವೆಂಕಟರಾಮಪ್ಪ.ಕೆ, **ಕನ್ನಡ ಸಾಹಿತ್ಯ ಚರಿತ್ರೆ,** ವೆಸ್ಲಿಪ್ರೆಸ್, ಮೈಸೂರು, ೧೯೭೪

೯೩. ಶೆಟ್ಟರ್.ಷ, **ಹಳಗನ್ನಡಲಿಪಿ, ಲಿಪಿಕಾರ, ಲಿಪಿ ವ್ಯವಸಾಯ,** ಅಭಿನವ, ಬೆಂಗಳೂರು, ೨೦೧೪
೯೪. ಶರಣಬಸಪ್ಪ ಕೋಲ್ಕಾರ, **ಕಳವೆ – ಸ್ಮರಣ ಸಂಚಿಕೆ,** ಕನ್ನಡಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು
೯೫. ಶಾಸ್ತ್ರೀ.ಎ.ಕೆ, **ಶೃಂಗೇರಿ ಮಠದ ಆಯ್ದ ಚಾರಿತ್ರಿಕ ದಾಖಲೆಗಳು,** ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು, ೨೦೦೩
೯೬. ಶ್ಯಾಮಲ.ಸಿ.ಆರ್, **ಪೂರ್ವಕರ್ನಾಟಕದ ಪಾಳೆಯಗಾರರು ಒಂದು ಅಧ್ಯಯನ,** ಕಸಾಪ, ಬೆಂ ೨೦೦೮
೯೭. ಶಿರೂರ ಬಿ.ವಿ. **ಶ್ರವಣಬೆಳಗೊಳ: ರಾಜಕೀಯ ಸಾಹಿತ್ಯಿಕ ಸಾಂಸ್ಕೃತಿಕ ಮಹತ್ವ,** ಕ.ವಿ.ವಿ. ಧಾರವಾಡ, ೧೯೭೬
೯೮. ಶ್ರೀಮತಿ.ಎಚ್.ಎಸ್ (ಸಂ), **ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬
೯೯. ಶ್ರೀನಿವಾಸ ಅಯ್ಯಂಗಾರ್.ಎಂ.ಎನ್, **ಸಂಸ್ಕೃತ ಕವಿಚರಿತೆ** ಭಾಗ ೧&೨, ಬೆಂಗಳೂರು, ೧೯೭೮
೧೦೦. ಶ್ರೀನಿವಾಸ್ ರಿತ್ತಿ, **ದಿ ಸೇವುಣಾಸ್** ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ೧೯೭೩
೧೦೧. ಶ್ರೀನಿವಾಸ ಹಾವನೂರರು, **ಹೊಸಗನ್ನಡದ ಅರುಣೋದಯ,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೭೪
೧೦೨. ಶ್ರೀವತ್ಸ ಎಸ್ ವಟಿ, **ಕನ್ನಡನಾಡಿನ ಪ್ರಾಚೀನ ಸಾಂಸ್ಕೃತಿಕ ಕೇಂದ್ರಗಳು,** ಕೆ.ಎಸ್.ಓ.ಯು, ಮೈಸೂರು
೧೦೩. ಶ್ರೀಧರ್.ಸಿ.ವಿ, **ಮೈಸೂರು ಒಡೆಯರು ಮತ್ತು ಕರ್ನಾಟಕ ಸಂಸ್ಕೃತಿ,** ಸಂಸ್ಕೃತಿ ಬುಕ್ ಪಾರಡೈಸ್, ಮೈಸೂರು
೧೦೪. ಶ್ರೀಧರ್.ಎಂ.ಕೆ (ಸಂ), **ಸಂಸ್ಕೃತ ಭಾಷೆ–ಸಾಹಿತ್ಯಕ್ಕೆ ಕರ್ನಾಟಕದ ರಾಜಮನೆತನಗಳ ಕೊಡುಗೆ,** ಶ್ರೀಜಯರಾಮ ಸೇವಾ ಮಂಡಳಿ, ಬೆಂ.೨೦೧೨.
೧೦೫. **ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ** ಭಾಗ ೧,೨ ಶಿವರುದ್ರಪ್ಪ.ಜಿ.ಎಸ್(ಸಂ) ಬೆಂಗಳೂರು ವಿಶ್ವವಿದ್ಯಾನಿಲಯ.
೧೦೬. ಸರೋಜಿನಿ ಮಹಿಷಿ, **ಕರ್ನಾಟಕದ ಕವಯಿತ್ರಿಯರು** ಕ.ಸ.ಸಾಹಿತ್ಯಸಂಘ, ಧಾರವಾಡ ೧೯೬೫
೧೦೭. ಸಾ.ಶಿ.ಮರುಳಯ್ಯ, **ಸಾಶಿಮ.ಸಂಶೋಧನೆ,** ಸಪ್ನ ಬುಕ್‌ಹೌಸ್, ಬೆಂಗಳೂರು – ಮೊದಲ ಮುದ್ರಣ ೨೦೦೧
೧೦೮. ಸೂರ್ಯನಾಥ ಕಾಮಥ್, **ಕರ್ನಾಟಕದ ಸಂಕ್ಷಿಪ್ತ ಇತಿಹಾಸ,** ಬೆಂಗಳೂರು. ೧೯೭೩.
೧೦೯. ಸೂರ್ಯನಾಥ ಕಾಮತ್, **ಕರ್ಣಾಟಕದ ಪರಂಪರೆ,** ಸಂ.೨, ಕನ್ನಡ ಸಂಸ್ಕೃತಿ ಇಲಾಖೆ, ಬೆಂಗಳೂರು ೧೯೯೨
೧೧೦. ಸುಚರಿತಾ ಟಿ, **'ಮರೆಯಲಾಗದ ಮಾಣಿಕ್ಯಗಳು'** ಎ. ಕೃಷ್ಣಸುರಪುರ (ಸಂ) ಸಗರನಾಡ ದರ್ಶನ ೧೯೮೫.
೧೧೧. ಸರಸ್ವತಿ ಎನ್ The Position of Women During Vijayanagar Period (೧೩೩೬–೧೬೪೬), ಸರಸ್ವತಿ ಪಬ್ಲಿಕೇಶನ್, ಮೈಸೂರು, ೧೯೯೨.
೧೧೨. ಸಣ್ಣಯ್ಯ.ಬಿ.ಎಸ್, **ಪ್ರಾಚೀನ ಕನ್ನಡ ಗ್ರಂಥ ಸಂಪಾದನೆ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂ.೨೦೦೨.
೧೧೩. ಹೆರಂಜೆ ಕೃಷ್ಣಭಟ್ಟ, ಮುರಳೀಧರ ಉಪಾಧ್ಯ ಹಿರಿಯಡಕ (ಸಂ), **ಗೋವಿಂದ ಪೈ ಸಂಶೋಧನಾ ಸಂಪುಟ,** ಉಡುಪಿ, ೧೯೯೫
೧೧೪. ಹರೀಶ.ಜಿ.ಬಿ, **ದೇವಚಂದ್ರ ಕನ್ನಡ ಭಾಷೆ ಮತ್ತು ಸಂಸ್ಕೃತಿ,** ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು
೧೧೫. ಹನುಮಾಕ್ಷಿ ಗೋಗಿ, **ರಾಜಮನೆತನದ ಚರಿತ್ರೆಗಳು,** ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂ. ೨೦೧೧.
೧೧೬. ಹಿರೇಮಠ.ಆರ್.ಸಿ.& ಎಂ.ಎಂ.ಕಲಬುರ್ಗಿ, **ಶಾಸನ ಸಂಪದ,** ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ ೧೯೭೪
೧೧೭. ಹೆಗಡೆ.ಎಲ್.ಆರ್. (ಸಂ), **ಕೆಲವು ಲಾವಣಿಗಳು,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿವಿ ೧೯೭೩
118. Chari S.T: Madhura Vijayam of Gangadevi (translation), Annamalai, 1957
೧೧೯. Desai.P.B. Jainism in South India & Some Jain Epigraphs, ಜೈನ ಸಂಸ್ಕೃತಿ ಸಂರಕ್ಷಣ ಸಂಘ, ಸೊಲ್ಲಾಪುರ, ೧೯೫೭

## ಕಾವ್ಯಗಳು (ಮೂಲಪಠ್ಯ)


೧. ಕುಶಾಲಪ್ಪಗೌಡ.ಕೆ (ಅನು), ವಿಜಯನಗರದ **ಗಂಗಾದೇವಿ ವಿರಚಿತ ಮಧುರಾ ವಿಜಯಂ ಅಥವಾ ವೀರಕಂಪರಾಯ ಚರಿತಂ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧

೨. ಕೃಷ್ಣಶರ್ಮ, **ಸರಜಾಹನುಮೇಂದ್ರ ಯಶೋವಿಲಾಸಂ** (ಸಂ) ವೈ.ಸಿ.ಭಾನುಮತಿ, ಮೈಸೂರು ವಿವಿ, ಮೈಸೂರು ೧೯೯೬

೩. ಕೆಳದಿ ಬಸವರಾಜ **ಶಿವತತ್ವರತ್ನಾಕರ** (ಸಂ), ಪ್ರೊ.ಮಲ್ಲೇಪುರಂ.ಜಿ.ವೆಂಕಟೇಶ, ಪ್ರಸಾರಾಂಗ, ಕನ್ನಡ ವಿವಿ, ಹಂಪಿ ೧೯೯೯

೪. ಕೇಶವ, **ರಾಣಿ ಗೌರಮ್ಮನ ಚರಿತೆ, ರಾಣಿ ಗೌರ‍್ಮನ ಮೇಲಿನ ಬಿಡಿಪದಗಳು,** (ಸಂ) ಜಿ.ಜೆ.ಮಂಜುನಾಥ್, ಮೈಸೂರು ಒಡೆಯರ ಆಕರ ಸಾಹಿತ್ಯ, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು, ೨೦೦೭

೫. **ಕರ್ನಾಟಕ ಕೈಫಿಯತ್ತುಗಳು,** (ಸಂ) ಕಲುಬುರ್ಗಿ ಎಂ.ಎಂ, , ಕನ್ನಡ ವಿ.ವಿ.ಹಂಪಿ, ೧೯೯೪

೬. ಗಂಗಾದೇವಿ, **ಮಧುರಾವಿಜಯ ಅಥವಾ ವೀರಕಂಪರಾಯ ಚರಿತೆ** (ಸಂ)ಜಿ.ಹರಿಹರ ಶಾಸ್ತ್ರಿ ಮತ್ತು ವಿ.ಶ್ರೀನಿವಾಸ ಶಾಸ್ತ್ರಿ, ತಿರುವನಂತಪುರಂ, ದ್ವಿತೀಯ ಮುದ್ರಣ. ೧೯೨೪

೭. ಗಂಗಾದೇವಿ, **ಕೆಳದಿ ರಾಜ್ಯಾಭ್ಯುದಯಮ್** (ಸಂ) ಸ.ಶಿ.ಮರುಳಯ್ಯ, ಬೆಂಗಳೂರು

೮. ಜಗನ್ಮೋಹಿನಿ (ತುಕ್ಕಾರಾಣಿ), **ತುಕ್ಕಾಪಂಚಕಂ** – (ಸಂ) ಎನ್.ಸರಸ್ವತಿ, ದಿ ಪೊಸಿಶನ್ ಆಫ್ ವುಮೆನ್ ಡ್ಯೂರಿಂಗ್ ವಿಜಯನಗರ ಪೀರಿಯಡ್, ಮೈಸೂರು ೧೯೯೨

೯. ಜಗನ್ಮೋಹಿನಿ/ತುಕ್ಕಾರಾಣಿ, **ಶ್ರೀ ಕೃಷ್ಣದೇವರಾಯನ ಅರಸಿ ತುಕ್ಕಾದೇವಿ ವಿರಚಿತ 'ತುಕ್ಕಾಪಂಚಕಂ'** – (ಸಂ) ಗುರುಮೂರ್ತಿ ಪೆಂಡಕೂರು, ಕೈದಾಳ, ಬೆಂಗಳೂರು, ೨೦೧೨.

೧೦. ಚೆಲುವಾಂಬೆ **ಚೆಲುವಾಂಬೆ ಕೃತಿಗಳು** (ಸಂ) ಮಂಜಪ್ಪಶೆಟ್ಟಿ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿವಿ. ಮೈಸೂರು ೧೯೮೪

೧೧. ತಿರುಮಲಾಂಬಾ, **ವರದಾಂಬಿಕಾ ಪರಿಣಯ,** (ಸಂ) ಡಾ.ಲಕ್ಷ್ಮಣಸ್ವರೂಪ್, ಮೋತೀಲಾಲ್ ಬನಾರಿಸೀದಾಸ್, ಲಾಹೋರ್ ೧೯೩೮

೧೨. ತಿರುಮಲಾಂಬಾ **ವರದಾಂಬಿಕಾಪರಿಣಯ ಚಂಪೂ,** ಸೂರ್ಯಕಾಂತ (ಸಂ),ಚೌಖಂಬಾ, ವಾರಣಾಸಿ ೧೯೭೦

೧೩. ದೇವಚಂದ್ರ, **ರಾಜಾವಳಿ ಕಥಾಸಾರ** (ಸಂ) ಬಿ.ಎಸ.ಸಣ್ಣಯ್ಯ ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿವಿ. ಮೈಸೂರು, ೧೯೮೮

೧೪. ಧನಂಜಯ ವಿರಚಿತ **ದಶರೂಪಕ,** (ಅನು) ಕೆ. ವಿ. ಸುಬ್ಬಣ್ಣ, ಅಕ್ಷರಪ್ರಕಾಶನ, ಸಾಗರ, ಶಿವಮೊಗ್ಗ–೧೯೫೮, ಮಮ್ಮಟ, ಕಾವ್ಯಪ್ರಕಾಶ, (ಸಂ) ನಾಗೇಂದ್ರ, ವಾರಣಾಸಿ, ೧೯೬೦

೧೫. ನಾಗಲದೇವಿ, **ಷೋಡಶಭಾವನಾ ಕಾವ್ಯ,** (ಸಂ) ಕಮಲಾ ಹಂಪನಾ, ಜೈನ ಅಧ್ಯಯನ ಸಂಸ್ಥೆ, ಶ್ರವಣಬೆಳಗೊಳ ೨೦೦೪

೧೬. **ನಿಂಬಸಾಮಂತ ಚರಿತೆ,** (ಸಂ) ಎಂ.ಎಂ.ಕಲಬುರ್ಗಿ, ಸ್ವಪ್ನ ಬುಕ್ ಹೌಸ್, ಬೆಂ. ೨೦೧೦

೧೭. ನೇಮಿಚಂದ್ರ, **ಲೀಲಾವತಿ ಪ್ರಬಂಧಂ,** (ಸಂ) ದೇ.ಜವರೇಗೌಡ & ಕೆ.ವೆಂಕಟರಾಮಪ್ಪ, ಶಾರದಾಮಂದಿರ, ಮೈಸೂರು. ೧೯೬೬.

೧೮. ಪದ್ಮನಾಭ, **ಪದ್ಮಾವತಿ ಮಹಾತ್ಮ್ಯ ಅಥವಾ ಜಿನದತ್ತರಾಯ ಚರಿತ್ರೆ,** (ಸಂ) ಡಿ.ಪುಟ್ಟಸ್ವಾಮಿ, ವಿವೇಕಾಭ್ಯುದಯ ಕಾರ್ಯಾಲಯ, ವೀರಭವನ, ಮಂಗಳೂರು.೧೯೫೦

೧೯. ಬಿಲ್ಹಣ ಮಹಾಕವಿ ಕೃತ **ಚೌರಪಂಚಾಶಿಕಾ,** ಚಂದ್ರಮೌಳಿ ಎಸ್.ನಾಯ್ಕರ (ಸಂ) ಕಲ್ಯಾಣನಗರ ಧಾರವಾಡ, ೨೦೧೨

೨೦. ಮುಕ್ಕುತಿಮ್ಮಯ್ಯ ಮತ್ತು ಮಾದಯ್ಯನವರ ಮಲ್ಲಯ್ಯ, **ಶ್ರೀಕೃಷ್ಣದೇವರಾಯನ ದಿನಚರಿ,** (ಸಂ) ವಿ.ಎಸ್.ಎಸ್.ಆಚಾರ್ಯ, ಬಿ.ಎಂಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ೧೯೮೩

೨೧. ಮುಮ್ಮಟ, **ಕನ್ನಡ ಕಾವ್ಯ ಪ್ರಕಾಶ** (ಮಮ್ಮಟನ ಮೂಲಗ್ರಂಥದ ಅನುವಾದ) (ಅನು) ಕೃಷ್ಣಮೂರ್ತಿ.ಕೆ, ಶಾರದಾಮಂದಿರ, ಮೈಸೂರು, ೧೯೫೬

೨೨. Mammata, Kavyaprakasha of Mammata Ganganatha Zha(Ed), Bharatiya Vidya Prakashan, Varanasi-1967

೨೩. ಮೋಹನಾಂಗಿ, **ಮಾರೀಚೀ ಪರಿಣಯಂ** (ಸಂ) ಸಿ.ವಿ.ರಾಮಚಂದ್ರ ರಾವ್, ಮಾನಸ ಗ್ರಂಥಮಾಲ, ನೆಲ್ಲೂರು, ೧೯೭೩

೨೪. ರುದ್ರಭಟ್ಟ, **ಜಗನ್ನಾಥ ವಿಜಯಂ (ಗದ್ಯಾನುವಾದ)** ಯಂ.ಆರ್.ವರದಾಚಾರ್ಯ, ಕನ್ನಡಸಾಹಿತ್ಯ ಪರಿಷತ್ತು, ಬೆಂಗಳೂರು. ೧೯೯೯.
೨೫. ರಾಣಿ ರಂಗಮ್ಮ (ಲಕ್ಷ್ಮಮ್ಮಾ), **ಸುರಪುರದ ರಾಣಿಯರು ಮತ್ತಿತರ ಹರಿಭಕ್ತರ ರಚನೆಗಳು**, ಗಾನಗಂಧರ್ವ ಸುರಪುರದ ಶ್ರೀ ಆನಂದದಾಸರು, ಸುರಪುರ.
೨೬. ಲಿಂಗಣ್ಣ, **ಕೆಳದಿನೃಪ ವಿಜಯಂ,** (ಸಂ) ಆರ್.ಶಾಮಶಾಸ್ತ್ರಿ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿವಿ. ಮೈಸೂರು. ೧೯೭೩
೨೭. ವಲ್ಲಭದೇವ: **ಸುಭಾಷಿತಾವಳೀ**, ಪೀಟರ್ಸನ್ ಪಿ.(ಸಂ), ಬೊಂಬಾಯಿ ೧೮೮೮
೨೮. ವಿಜಯ ಭಟ್ಟಾರಿಕೆ, **ಕೌಮುದೀ ಮಹೋತ್ಸವ** (ಸಂ) ಶಕುಂತಲ ರಾವ್, ಬಾಂಬೆ. ೧೯೫೨
೨೯. ವಿಜ್ಜಿಕ, **ಬಿಡಿಮುಕ್ತಕಗಳು**, ಬಿಡಿಮುತ್ತು – (ಸಂ) ತೀನಂಶ್ರೀ, ಕಾವ್ಯಾಲಯ ಪ್ರಕಾಶನ, ಮೈಸೂರು. ೨೦೦೧.
೩೦. ವಿರುಪರಾಜ, **ತ್ರಿಭುವನ ತಿಲಕಂ,** (ಸಂ) ಟಿ.ಚಂದ್ರಶೇಖರನ್, ಗೌರ್ನಮೆಂಟ್ ಓರಿಯಂಟಲ್ ಮಾನ್ಯುಸ್ಕ್ರಿಪ್ಟ್ ಲೈಬ್ರರಿ, ಮದ್ರಾಸ್, ೧೯೫೪
೩೧. ವಿರೂಪಾಕ್ಷ ಪಂಡಿತ, **ಚೆನ್ನಬಸವ ಪುರಾಣ,** (ಸಂ) ಚಂದ್ರಶೇಖರ್.ಎಂ., ಕ.ಸಾ.ಪ., ಬೆಂಗಳೂರು, ೧೯೭೯
೩೨. **ಶಾರ್ಙ್ಗಧರಪದ್ಧತಿ**, ಪೀಟರ್‌ಸನ್ (ಸಂ), ಬೊಂಬಾಯಿ, ೧೮೮೮
೩೩. ಶಿವಶರಣೆಯರ **ವಚನಸಂಪುಟ**, ವೀರಣ್ಣ ರಾಜೂರ (ಸಂ), ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೩
೩೪. ಶೀಲಭಟ್ಟಾರಿಕಾ, **ಸಂಸ್ಕೃತ ಶ್ಲೋಕಗಳು,** (ಸಂ) ಡಾ.ಚೌಧರಿ **"**ಸಂಸ್ಕೃತ್ ಪೊಯೆಟೆಸಸ್**"** ಭಾಗ–೧, ಕಲ್ಕತ್ತಾ, ೧೯೩೯.
೩೫. ಶ್ರುತಕೀರ್ತಿ, **ವಿಜಯಕುಮಾರಿ ಚರಿತೆ,** (ಸಂ) ಭಾನುಮತಿ.ವೈ.ಸಿ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿವಿ, ೧೯೮೧
೩೬. ಶೇಷೋ ಶ್ರೀನಿವಾಸ, ಅನು.ಎನ್.ಕೆ.ಚಿಟ್ನೀಸ್ **ಶಿವಾಜಿ ಮಲ್ಲಮ್ಮಾಜಿ ಸಮರೋತ್ಸವ,** ವೀರಶೈವ ಅಧ್ಯಯನ ಸಂಸ್ಥೆ ಗದಗ, ೧೯೯೩
೩೭. ಷಡಕ್ಷರಿ, **ಬಸವರಾಜ ವಿಜಯ ಅಥವಾ ವೃಷಭೇಂದ್ರ ವಿಜಯ,** (ಸಂ) ಹಿರೇಮಠ.ಆರ್.ಸಿ., ಬೆಂಗಳೂರು, ೧೯೬೮
೩೮. ಸಂಚಿ ಹೊನ್ನಮ್ಮ, ಹದಿಬದೆಯ ಧರ್ಮ, (ಸಂ) ಡಿ.ಚಂಪಾಬಾಯಿ, ಪ್ರಸಾರಾಂಗ, ಮೈಸೂರು ವಿವಿ. ಮೈಸೂರು, ೧೯೯೯
೩೯. **ಸಿರುಮನ ಚಾರಿತ್ರ್ಯ**, (ಸಿದ್ಧಕವಿಯ ಸಿರುಮಣ ನಾಯಕನ ಸಾಂಗತ್ಯ, ಮಲ್ಲಕವಿಯ ಗೊಲ್ಲಸಿರುಮನ ಚರಿತೆ, ರಾಮಕವಿಯ ಸಿರುಮನ ಚರಿತೆ) (ಸಂ) ಕಲಬುರ್ಗಿ.ಎಂ.ಎಂ. ಸಪ್ನ ಬುಕ್‌ಹೌಸ್, ಬೆಂಗಳೂರು
೪೦. ಹರಿಹರ ವಿರಚಿತ **ಉಡುತಡಿಯ ಮಹಾದೇವಿಯರ ರಗಳೆ**, ದೇವೀರಪ್ಪ.ಎಚ್ (ಸಂ), ಶಿವಕುಮಾರ ಪ್ರಕಾಶನ, ಬೆಂಗಳೂರು, ೧೯೭೩

## ಲೇಖನಗಳು

೧. ಅಮರೇಶ ಯತಗಲ್, **ಸುರಪುರ ಸಂಸ್ಥಾನದ ರಾಣಿಯರು**, ಇತಿಹಾಸ ದರ್ಶನ ಸಂ.೨೬, ಬೆಂಗಳೂರು
೨. ಅಪರ್ಣ.ಕೂ.ಸ, **ಗಂಗಾದೇವಿಯ ಮಧುರಾವಿಜಯಂ–ಒಂದು ಚಾರಿತ್ರಿಕ ಅವಲೋಕನ**, ವಿಜಯನಗರ ವೈಭವ ಹಂಪಿ ಉತ್ಸವ ಸ್ಮರಣ ಸಂಚಿಕೆ, ೨೦೦೯
೩. ಕಮಲಾ ಹಂಪನಾ, **ಶ್ರೀಮತಿ–ಜಕ್ಕಲಾಂಬಾ,** ಬೊಗಸೆ (ಮಹಿಳೆ–ಸುತ್ತ–ಮುತ್ತ), ಬೆಂ. ೨೦೦೩ ಪು.೧–೯೫.
೪. ಕಮಲಾ ಹಂಪನಾ, **ನಾಗಲದೇವಿ**, ಕನ್ನಡ ಸಾಹಿತ್ಯ ಚರಿತ್ರೆ, ಮೈಸೂರು ವಿಶ್ವವಿದ್ಯಾನಿಲಯ, ೨೦೦೮
೫. ಕಲಬುರ್ಗಿ.ಎಂ.ಎಂ, **ಕಿತ್ತೂರು ಸಂಸ್ಥಾನ ಸಾಹಿತ್ಯ**, ಮಾರ್ಗ–೫, ಸ್ವಪ್ನ ಬುಕ್ ಹೌಸ್, ಬೆಂಗಳೂರು
೬. ಕೃಷ್ಣಯ್ಯ ಎ.ಡಿ. **ಚಿತ್ರದುರ್ಗದ ಒನಕೆ ಓಬವ್ವಳು ಚಾರಿತ್ರಿಕ ವ್ಯಕ್ತಿ** ಇತಿಹಾಸ ದರ್ಶನ ಸಂ.೭ (೧೯೯೨) ಪು.೨೧೩–೨೧೭.
೭. ಗಣೇಶ್.ಕೆ.ಆರ್, **ತುಳುನಾಡಿನ ಜೈನ ಶಾಸನ ಸಾಹಿತ್ಯ**, ತುಳುನಾಡಿನ ಜೈನ ಶಸನಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪
೮. ಗಣೇಶ್.ಕೆ.ಆರ್, **ಕನ್ನಡ–ತೆಲುಗು ಶಾಸನ ಸಾಹಿತ್ಯ**, ಗೌರವ, ಜಿ.ಎಸ್.ಎಸ್ ಅಭಿನಂದನಾಗ್ರಂಥ, ಅಂಕಣ ಗೆಳೆಯರಬಳಗ, ಬೆಂ ೨೦೦೧ ಪು.೪೨೫–೪೩೪

೯. ಗುಂಡಾಜೋಯಿಸ್ ಕೆಳದಿ, **ಕೆಳದಿ ಸಂಸ್ಥಾನದ ಇಕ್ಕೇರಿ ಸೀಮೆ ಕೈಫಿಯತ್ತು,** ಇತಿಹಾಸ ದರ್ಶನ ಸಂ.೩ (೧೯೮೮) ಪು.೧೮೭–೧೯೬.

೧೦. ಗುಂಡಾ ಜೋಯಿಸ್ ಕೆಳದಿ, **'ಆನಂದರಂಗಪಿಳ್ಳೈ ತಮಿಳು ದಿನಚರಿಯಲ್ಲಿ ಕೆಳದಿ ರಾಣಿಯರ ಸಂಗತಿಗಳು;** ಇತಿಹಾಸ ದರ್ಶನ ಸಂ.೧೩ (೧೯೯೮), ಪು.೨೪೫–೨೪೯

೧೧. ಗೋಪಾಲಕೃಷ್ಣರಾವ್.ಕೆ.ಜಿ, ಕೃಷ್ಣರಾಯ ಮತ್ತು ಕಳಿಂಗರಾಜಪುತ್ರಿ, ವಿಜಯನಗರ ಅಧ್ಯಯನ ಸಂಪುಟ–೧೨, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು

೧೨. ಚಂದ್ರಶೇಖರ ಹೆಚ್.**ಕಿತ್ತೂರು ರಾಣಿ ವೀರಮ್ಮನ ಕೊನೆಯ ದಿನಗಳು ಮತ್ತು ಸ್ಮಾರಕಗಳು,** ಇತಿಹಾಸ ದರ್ಶನ ಸಂ.೨೪ (೨೦೦೯) ಪು.೩೯೮–೪೦೩

**೧೩. ಚಿಕ್ಕಮಗಳೂರು ಜಿಲ್ಲೆಯ ಶಾಸನ ಕವಿಗಳು**, ಚಿಕ್ಕಮಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು ೨೦೦೩

೧೪. ಚೆನ್ನಕ್ಕ ಪಾವಟೆ, **ಜೈನಪರಂಪರೆ ಮತ್ತು ಮಹಿಳೆ,** ರತ್ನಶ್ರೀ – ಅಭಿನಂದನಾಗ್ರಂಥ, ೧೯೯೯ ಪು.೯೪–೧೧೯

೧೫. ಜಯ್ಯಮ್ಮ ಕರಿಯಣ್ಣ ಎಚ್, **ನೊಳಂಬ ಅರಸಿ ದೀವಳಬ್ಬರಸಿಯ ರಚನಾತ್ಮಕ ಕಾರ್ಯಗಳು,** ಇತಿಹಾಸ ದರ್ಶನ ಸಂ.೨೨ (೨೦೦೭) ಪು.೨೬೫–೨೬೬

೧೬. ದೇವರಕೊಂಡಾರೆಡ್ಡಿ, **ಕೆಳದಿ ಬಸವರಾಜ ವಿರಚಿತ ಕರ್ನಾಟಕ ಕಾಳಿಕಾಕಾಂಡದಲ್ಲಿನ ಐತಿಹಾಸಿಕ ಅಂಶಗಳು**, ಗೌರವ, ಜಿ.ಎಸ್.ಎಸ್ ಅಭಿನಂದನಾಗ್ರಂಥ, ಅಂಕಣ ಗೆಳೆಯರಬಳಗ, ಬೆಂಗಳೂರು ೨೦೦೧ ಪು.೧೮೬

೧೭. ನರಹರಿ, **ಕಾಂಟ್ರಿಬ್ಯೂಶನ್ ಆಫ್ ಕರ್ನಾಟಕ ಟು ಸಂಸ್ಕೃತ್ ಲಿಟರೇಚರ್**, ಕ್ಯು.ಜೆ.ಎಮ್.ಎಸ್, ಮಿಥಿಕ್‌ಸೊಸೈಟಿ, ಬೆಂಗಳೂರು. ೪೮(೧–೪) ೧೯೫೭–೫೮ ಪು.೧–೫

೧೮. ನಾಗಭೂಷಣ.ಸಿ, **ತುಮಕೂರು ಜಿಲ್ಲೆಯ ಸಾಹಿತ್ಯಕ ಹಿರಿಮೆ,** ಕನ್ನಡ ಸಾಹಿತ್ಯ ಸಂಸ್ಕೃತಿ ಶೋಧನೆ, ಅಮೃತವರ್ಷಿಣಿ ಪ್ರಕಾಶನ, ಸಂಡೂರು, ೧೯೯೯

೧೯. ನಾಗಭೂಷಣ ಎಸ್.ಎಂ, **ಉಜ್ಜಿನಿಯಲ್ಲಿ ಕೆಳದಿ ರಾಣಿ ವೀರಮ್ಮಾಜಿ ಸಮಾಧಿ ಶೋಧನೆ**, ಇತಿಹಾಸ ದರ್ಶನ ಸಂ.೯ (೧೯೯೪) ಪು.೧೫೨–೧೫೩

**೨೦.** ಪಾಟೀಲ.ಎಚ್.ಎಸ್, **ಕೊಪ್ಪಳ ಜಿಲ್ಲೆಯ ಸಾಹಿತ್ಯ,** ಕೊಪ್ಪಳ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು

೨೧. ಪಾಂಡುರಂಗ, **ಸಂಸ್ಕೃತ ಕವಯಿತ್ರಿಯರು,** ಸಂಸ್ಕೃತ ಕವಿ–ಕಾವ್ಯ ದರ್ಶನ, ಬೆಂಗಳೂರು

೨೨. ಪಿಯುಸ್ ಫಿದೆಲಿಸ್ ಪಿಂಟೋ, **ಕೆಳದಿ ರಾಣಿ ಚೆನ್ನಮ್ಮಾಜಿ ಮತ್ತು ಕೊಂಕಣಿ ಕ್ರೈಸ್ತರು,** ಇತಿಹಾಸ ದರ್ಶನ ಸಂ.೧೪ (೧೯೯೯) ಪು.೨೬೮–೨೭೦.

೨೩. ಭಟ್‌ಸೂರಿ.ಕೆ.ಜಿ, **ಶಾಸನಗಳ ಹಿನ್ನೆಲೆಯಲ್ಲಿ ಹಾಡುವಳ್ಳಿ ಇತಿಹಾಸ,** ವಿಜಯನಗರ ಅಧ್ಯಯನ ಸಂಪುಟ.೧೧ ೨೦೦೫.

೨೪. ಭಾರತಿ.ಬಿ.ಆರ್, **ಸಂಸ್ಕೃತ ಭಾಷೆ ಸಾಹಿತ್ಯಕ್ಕೆ ರಾಷ್ಟ್ರಕೂಟರ ಕೊಡುಗೆ,** ಸಂಸ್ಕೃತ ಭಾಷೆ–ಸಾಹಿತ್ಯಕ್ಕೆ ಕರ್ನಾಟಕದ ರಾಜ ಮನೆತನಗಳ ಕೊಡುಗೆ, ಬೆಂಗಳೂರು.

೨೫. ಭುಜಬಲಿ ಶಾಸ್ತ್ರಿ. ಕೆ, **ಮಹಾರಾಣಿ ಶಾಂತಲದೇವಿ,** ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ಸಂ.೨೭(೧) ಜೂ.೧೯೪೨ ಪು.೨೪–೨೭.

೨೬. ಭಾನುಮತಿ,ವೈ.ಸಿ, **ಸಂಸ್ಕೃತ ಹಸ್ತಪ್ರತಿಗಳು ಮತ್ತು ಕನ್ನಡ ಲಿಪಿಕಾರರು,** ಗ್ರಂಥಸಂಪಾದನೆ ಎಳೆಗಳು, ವಿಸ್ಮಯ ಪ್ರಕಾಶನ, ಮೈಸೂರು, ೨೦೦೯

೨೭. ಭಟ್‌ಸೂರಿ. ಕೆ.ಜಿ, **ಶಾಸನಗಳ ಹಿನ್ನೆಲೆಯಲ್ಲಿ ಹಾಡುವಳ್ಳಿ ಇತಿಹಾಸ**, ವಿಜಯನಗರ ಅಧ್ಯಯನ ಸಂಪುಟ.೧೧ ೨೦೦೫.

೨೮. ಬಸವರಾಜ ಮಲಶೆಟ್ಟಿ, **ಕಿತ್ತೂರ ಈರವ್ವನನ್ನು ಕುರಿತು ಇತಿಹಾಸ ಮತ್ತು ಜನಪದ ಸಾಹಿತ್ಯ;** ಇತಿಹಾಸ ದರ್ಶನ ಸಂ.೧೭ (೨೦೦೨) ಪು.೨೯೩–೨೯೫.

೨೯. ಭಾರತಿ.ಬಿ.ಆರ್, **ಸಂಸ್ಕೃತ ಭಾಷೆ ಸಾಹಿತ್ಯಕ್ಕೆ ರಾಷ್ಟ್ರಕೂಟರ ಕೊಡುಗೆ,** ಸಂಸ್ಕೃತ ಭಾಷೆ–ಸಾಹಿತ್ಯಕ್ಕೆ ಕರ್ನಾಟಕದ ರಾಜ ಮನೆತನಗಳ ಕೊಡುಗೆ, ಬೆಂಗಳೂರು

೩೦. ಮಹದೇವ ಸಿ. **ತಿರುಮಲಾದೇವಿಯರ ಪಟ್ಟಣ – ನಾಗಲಾಪುರ ಹೊಸಪೇಟೆ: ಒಂದು ಪರಿಶೀಲನೆ,** ಇತಿಹಾಸ ದರ್ಶನ ಸಂ.೧೦ (೧೯೯೫) ಪು.೧೩೩–೧೩೭.

೩೧. ಮಹಾದೇವಿ, **ಮೈಸೂರು ಒಡೆಯರ ಕಾಲದ ರಾಜಕೀಯ ಇತಿಹಾಸದಲ್ಲಿ ರಾಣಿಯರ ಪಾತ್ರ**, ಮೈಸೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ತ್ವ, ಮೈಸೂರು.

೩೨. ಮಂಜುಳ ಮಾ. **ಅತ್ತಿಮಬ್ಬೆ – ಕನ್ನಡ ಸಾಹಿತ್ಯ ಮತ್ತು ಶಾಸನದಲ್ಲಿ**, ಕನ್ನಡನುಡಿ, ಕ.ಸಾ.ಪ, ಬೆಂಗಳೂರು. ೪೨–೩–ಮಾ, ೧೯೭೯–೨೦

೩೩. ರತ್ನಕುಮಾರಿ.ಬೆಂ.ಶಾ, **ಬಾಗಲಕೋಟೆ ಜಿಲ್ಲೆಗೆ ರಾಜವಂಶಗಳ ಕೊಡುಗೆ**, ಬಾಗಲಕೋಟೆ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಮೈಸೂರು, ೨೦೧೧

**೩೪.** ರಮೇಶ.ಕೊ.ವ್ಯಾ, **ಜಯಸಿಂಹನ ತಳಂಗೆರೆ ಶಿಲಾಶಾಸನ,** ಗಡಿನಾಡಿನ ಕಿಡಿ, ಕಾಸರಗೋಡು, ೧೯೯೦

೩೫. ರಾಧಾಕೃಷ್ಣಮೂರ್ತಿ, **ಸಂಸ್ಕೃತ ಕವಯಿತ್ರಿಯರು**, ಕರ್ನಾಟಕ ಕವಿಯತ್ರಿಯರು, ಶ್ರೀ ಪ್ರಕಾಶನ, ಬೆಂಗಳೂರು.

೩೬. ರಾಮಭಟ್ಟ ಉಪ್ಪಂಗಳ, **ಕಾಸರಗೋಡಿನ ಇತಿಹಾಸ** (ಮೋಚಬ್ಬರಸಿ), ಗಡಿನಾಡಿನ ಕಿಡಿ, ಕಾಸರಗೋಡು, ೧೯೯೦.

೩೭. ರೊನಾಲ್ಡ್ ಕುಟಿನ್ಹೊ, **ಕನ್ನಡ ಕೈಫಿಯತ್ತುಗಳಲ್ಲಿ ರಾಣಿ ಚೆನ್ನಮ್ಮಾಜಿ,** ಇತಿಹಾಸ ದರ್ಶನ ಸಂ.೧೪, (೧೯೯೯) ಪು೨೭೮–೨೮೧

೩೮. ಲೀಲಾ.ಎಸ್.ಆರ್, **ತಿರುಮಲಾಂಬೆ**, ಕರ್ನಾಟಕದ ಕವಯಿತ್ರಿಯರು, ಶ್ರೀ ಪ್ರಕಾಶನ, ಬೆಂಗಳೂರು

೩೯. ವಸಂತ ಮಾಧವ.ಕೆ.ಜಿ, **ಗೇರುಸೊಪ್ಪೆಯ ಸಾಳ್ವರು**, ಉತ್ತರ ಕನ್ನಡ ಜಿಲ್ಲೆ ದರ್ಶನ, ಕನ್ನಡ ಸಾಹಿತ್ಯ ಪರಿಷತ್, ೧೯೮೬

೪೦. ವಿಜಯಲಕ್ಷ್ಮಿ.ಎಂ, **ಸಾಹಿತ್ಯಕ್ಷೇತ್ರದಲ್ಲಿ ಮಹಿಳೆ**, ಭಾರತೀಯ ಸಂಸ್ಕೃತಿ ಮತ್ತು ಮಹಿಳೆ, ದಿ ಮಿಥಿಕ್ ಸೊಸೈಟಿ, ಬೆಂಗಳೂರು. ೨೦೦೯

೪೧. ವೆಂಕಟಕೃಷ್ಣ ತೈಲೂರು, **ಮಂಡ್ಯಜಿಲ್ಲೆಯ ಸ್ಥಳನಾಮಗಳ ಅವಲೋಕನ**, ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ೨೦೦೮

೪೨. ಶಾಂತಾ ಇಮ್ರಾಪುರ, **ಸಾಹಿತ್ಯರಂಗದಲ್ಲಿ ಮಹಿಳೆ**, ಭಾರತೀಯ ಸಂಸ್ಕೃತಿ ಮತ್ತು ಮಹಿಳೆ, ದಿ ಮಿಥಿಕ್ ಸೊಸೈಟಿ, ಬೆಂಗಳೂರು. ೨೦೦೯

೪೩. ನಾಗರಾಜಯ್ಯ.ಹಂಪ **ಶಾಸನಗಳಲ್ಲಿ ಕುಂದಣಸಾಮಿ: ಹೊಸ ವಿವರಣೆ**, ಚಂದ್ರಕೊಡೆ, , ಕನ್ನಡ ವಿವಿ, ಹಂಪಿ ೧೯೯೭ ಪು.೬೩೭

೪೪. ಶ್ರೀನಿವಾಸ ರಿತ್ತಿ, **ಕರ್ನಾಟಕದ ಸಂಸ್ಕೃತ ಕವಯಿತ್ರಿಯರು**, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ಸಂ.೪೨ (೧) ಜೂ.೧೯೫೭

45. ಶ್ರೀನಿವಾಸ ರಿತ್ತಿ,Some Women administrators of Mediaeval Karnataka, Q.J.M.S XLVIII 1957-58

**೪೬.** ಶಿವಲಿಂಗಪ್ಪ.ಸಿ, **ಚಿತ್ರದುರ್ಗಜಿಲ್ಲೆಯ ಪ್ರಾಚೀನ ಸಾಹಿತ್ಯ**, ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು

೪೭. ಶೆಟ್ಟಿ.ಎಸ್.ಡಿ, **ಗೇರುಸೊಪ್ಪೆಯ ತಾಮ್ರಶಾಸನ**. ಮಂಜುವಾಣಿ, ಜೂನ್ ೧೯೮೯

೪೮. ಶೆಟ್ಟಿ.ಎಸ್.ಡಿ, **ಗೇರುಸೊಪ್ಪ ಮತ್ತು ಹಾಡುವಳ್ಳಿ ಸಾಳುವರು**, ತುಳು ಕರ್ನಾಟಕದ ಅರಸು ಮನೆತನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೦

೪೯. ಶೆಟ್ಟಿ.ಎಸ್.ಡಿ, **ರಾಣಿ ಅಬ್ಬಕ್ಕನ ಶಾಸನ**, ಮಂಜುವಾಣಿ ನವೆಂಬರ್ ೧೯೯೭

೫೦. ಶೆಟ್ಟಿ.ಎಸ್.ಡಿ, **ಮುಲ್ಕಿ ಸಾಮಂತರ ಕುರಿತು ಎರಡು ತಾಮ್ರಶಾಸನಗಳು,** ಗುರುದೇವ, ನವೆಂಬರ್ ೧೧೮೫

೫೧. ಶೆಟ್ಟಿ.ಎಸ್.ಡಿ, **ದ.ಕ.ಜಿಲ್ಲೆಯ ಮೂರು ಶಾಸನಗಳು,** ಶಾಸನ ಅಧ್ಯಯನ, ಸಂ.೧, ಸಂಚಿಕೆ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೮

**೫೨.** ಸಣ್ಣಯ್ಯ.ಬಿ.ಎಸ್, **ರಾಜಾವಳಿಯಲ್ಲಿ ಕನಕಗಿರಿ,** ರಾಜಾವಳಿ ಕಥೆ, ದೇವಚಂದ್ರನ ರಾಜಾವಳಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೩. ಸುಶೀಲಮ್ಮ ಪುಲಮತಿ, **ಕೃಷ್ಣದೇವರಾಯನ ಕಾಲದ ಕವಯಿತ್ರಿಯರು**, ಕನ್ನಡನುಡಿ, ಕ.ಸಾ.ಪ, ಬೆಂಗಳೂರು. ೧–೪೬–ಆ ೧೯೩೯–೩೭೫

**೫೪.** ಹರಿಶಂಕರ್.ಎಸ್, **ಸಂಚಿಯ ಹೊನ್ನಮ್ಮ**, ಸ್ಕಂದಗಿರಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೫೫. ಹನುಮಾಕ್ಷಿ ಗೋಗಿ, **ಆರನೆಯ ವಿಕ್ರಮಾದಿತ್ಯನ ಇನ್ನೊಬ್ಬ ರಾಣಿ ಧಾರಲದೇವಿ,** ಇತಿಹಾಸ ದರ್ಶನ ಸಂ.೧೧ (೧೯೯೬) ಪು.೨೩೧–೨೩೫.

56. Lakshminarayan Rao.N. 'Eminent Women of Karnataka' QJMS, JULY Vol.XLV 1954 No.1

57. Srinivasa Ritti, Some Women Administrators of Medieval Karnataka, Quarterly Journal of the Mythic Society, (QJMS) Vol.XLVIII - 1957-58,

**58.** Unhistorcal statements in varadambikaparinaya – QJMS VOL 68(2) 1977

## ಶಾಸನ ಸಂಪುಟಗಳು

೧. ಆನ್ಯುಯಲ್ ರಿಪೋರ್ಟ್ಸ್ ಆಫ್ ಮೈಸೂರ್ ಆರ್ಕಿಯಾಲಜಿಕಲ್ ಡಿಪಾರ್ಟ್‌ಮೆಂಟ್ಸ್ M A

೨. ಆನ್ಯುಯಲ್ ರಿಪೋರ್ಟ್ ಆಫ್ ಸೌತ್ ಇಂಡಿಯನ್ ಇಪಿಗ್ರಫಿ

೩. **ಆರನೆಯ ವಿಕ್ರಮಾದಿತ್ಯನ ಶಾಸನಗಳು**, ನಾಗಯ್ಯ ಜೆ.ಎಂ, ಬೆಳಗಾವಿ, ೧೯೯೨

೪. ಇಂಡಿಯನ್ ಆಂಟಿಕ್ವೆರಿ

೫. ಇನ್ಸ್ಕ್ರಿಪ್ಷನ್ಸ್ ಆಫ್ ನಾರ್ದನ್ ಕರ್ನಾಟಕ & ಕೊಲ್ಹಾಪುರ್ ಸ್ಟೇಟ್

೬. ಎಪಿಗ್ರಾಫಿಯ ಕರ್ನಾಟಿಕ ಸಂಪುಟಗಳು

೭. ಎಪಿಗ್ರಾಫಿಯ ಇಂಡಿಕ ಸಂಪುಟಗಳು

೮. ಕನ್ನಡ ಇನ್ಸ್ಕ್ರಿಪ್ಷನ್ಸ್ ಆಫ್ ಕೊಪ್ಪಳ್

೯. ಕರ್ನಾಟಕ ಇನ್ಸ್ಕ್ರಿಪ್ಷನ್ಸ್, ಧಾರವಾಡ

೧೦. **ಕಲಬುರ್ಗಿ ಜಿಲ್ಲೆಯ ಶಾಸನಗಳು**, ಹನುಮಾಕ್ಷಿ ಗೂಗಿ(ಸಂ) ೩೧, ನಿಪ್ಪಾಣಿ ಕ್ರಿ.ಶ.೧೦೩೭

೧೧. **ಕರ್ನಾಟಕದ ಶಾಸನಗಳು,** ಆರ್.ಎಸ್.ಪಂಚಮುಖಿ,

೧೨. **ಕುಂದನಾಡಿನ ಶಾಸನಗಳು, (ಸಂ)** ನರಸಿಂಹಮೂರ್ತಿ.ಪಿ.ಎನ್, ಕುಂದನಾಡಿನ ಶಾಸನಗಳು, ಸ್ವಾಗತ ಸಮಿತಿ, ಕನ್ನಡ ಸಾಹಿತ್ಯ ಸಮ್ಮೇಳನ, ಉಡುಪಿ, ೨೦೦೭

೧೩. **ಕೊಪ್ಪಳ ಜಿಲ್ಲಾ ಶಾಸನಗಳು**, (ಸಂ) ಹಂಪ.ನಾ

೧೪. **ಕೆಳದಿ ಅರಸರ ಶಾಸನ ಸಂಪುಟ**, ಕೆಳದಿ ವೆಂಕಟೇಶಜೋಯಿಸ್,ವೀರಶೈವ ಅಧ್ಯಯನ ಸಂಸ್ಥೆ, ಶ್ರೀಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ ಗದಗ, ೧೯೯೧

೧೫. **ತುಳುನಾಡಿನ ಶಾಸನಗಳು,** ರಮೇಶ.ಕೆ.ವಿ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ೧೯೭೮

೧೬. **ಧಾರವಾಡ ತಾಲೂಕಿನ ಶಾಸನಗಳು**, (ಸಂ) ಕಲಬುರ್ಗಿ.ಎಂ.ಎಂ,ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ, ೧೯೭೯

**೧೭. ಬಾಂಬೆ ಕರ್ನಾಟಕ ಇನ್ಸ್ಕ್ರಿಪ್ಷನ್ಸ್**

೧೮. **ಮಾನ್ವಿ ತಾಲೂಕಿನ ಶಾಸನಗಳು**, ಚನ್ನಬಸವ ಹಿರೇಮಠ, ಕನ್ನಡ ಸಾಹಿತ್ಯ ಪರಿಷತ್ತು, ಬೆಂ.೨೦೦೦

೧೯. **ರಾಷ್ಟ್ರಕೂಟ ಶಾಸನಗಳು** ಸಂಪುಟ೧–೨, ಭಾರತಿ ಬಿ.ಆರ್ (ಸಂ), ಮೈಸೂರು.ವಿವಿ

೨೦. **ಶಾಸನ ಸಂಗ್ರಹ,** ಅಣ್ಣಿಗೇರಿ.ಎ.ಎಂ, ಆರ್.ಶೇಷಶಾಸ್ತ್ರಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂ.೧೯೭೫

೨೧. **ಸೌಥ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್**, ಶ್ರೀನಿವಾಸ ರಿತ್ತಿ,

## ಇ–ಲೈಬ್ರರಿಯಲ್ಲಿ (ಅಂತರ್ಜಾಲ) ಪರಿಶೀಲಿಸಲಾದ ಪುಸ್ತಕಗಳು

1. Chari S.T: Madhura Vijayam of Gangadevi (translation), Annamalai, 1957
2. Desai.P.B. Jainism in South India & Some Jain Epigraphs.
3. Kane.P.V. History of Sanskrit Poetics, Delhi, 1961
4. Kavyaprakasha of Mammata -(Ed) Ganganatha Zha, Bharatiya Vidya Prakashan, Varanasi-1967, p 81
5. Mammata, Kavyaprakasha of Mammata Ganganatha Zha(Ed), Bharatiya Vidya Prakashan, Varanasi-1967

6. Vijjika Kaumudimahotsavam : (Eds) Ramakrishnakavi and Ramanatha Sastry.S.K. Trivendram, 1929
೭. ಗಂಗಾದೇವಿ, ಮಧುರಾವಿಜಯ ಅಥವಾ ವೀರಕಂಪರಾಯ ಚರಿತೆ (ಸಂ)ಜಿ.ಹರಿಹರ ಶಾಸ್ತ್ರಿ ಮತ್ತು ವಿ.ಶ್ರೀನಿವಾಸ ಶಾಸ್ತ್ರಿ, ತಿರುವನಂತಪುರಂ, ದ್ವಿತೀಯ ಮುದ್ರಣ. ೧೯೨೪.
೮. ಜಲ್ಹಣ, ಸೂಕ್ತಿಮುಕ್ತಾವಳೀ (ಸಂ) ಕೃಷ್ಣಮಾಚಾರ್, ಜಿ.ಓ.ಎಸ್, ಬರೋಡ ೧೯೩೮
೯. ತಿರುಮಲಾಂಬಾ, ವರದಾಂಬಿಕಾ ಪರಿಣಯ, (ಸಂ) ಡಾ.ಲಕ್ಷ್ಮಣಸ್ವರೂಪ್, ಮೋತೀಲಾಲ್ ಬನಾರಿಸೀದಾಸ್, ಲಾಹೋರ್ ೧೯೩೮
೧೦. ವಲ್ಲಭದೇವ, ಸುಭಾಷಿತಾವಳೀ (ಸಂ) ಪೀಟರ್ಸನ್ ಪಿ, ಬೊಂಬಾಯಿ
೧೧. ಶಾರ್ಙ್ಗದೇವ, ಶಾರ್ಙ್ಗಧರಪದ್ಧತಿ, (ಸಂ) ಪೀಟರ್‌ಸನ್, ಬೊಂಬಾಯಿ, ೧೮೮೮
೧೨. ಶ್ರೀಧರದಾಸ, ಸದುಕ್ತಿ ಕರ್ಣಾಮೃತಮ್ (ಸಂ) ರಾಮವತಾರಶರ್ಮಾ, ಲಾಹೋರ್, ೧೯೩೩

**ಹಸ್ತಪ್ರತಿ ಸೂಚಿ**

೧೩. ಎಸ್.ಶಿವಣ್ಣ, ಕನ್ನಡ ಅಧ್ಯಯನ ಕೇಂದ್ರದ ಹಸ್ತಪ್ರತಿ ಸೂಚಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೨೦೦೫.
೧೪. ಎಫ್.ಟಿ.ಹಳ್ಳಿಕೇರಿ ಮತ್ತು ಕೆ.ರವೀಂದ್ರನಾಥ್ ಹಸ್ತಪ್ರತಿ ಸೂಚಿ, ಸಂಪುಟ–೧ ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೦
೧೫. ವೀರೇಶ ಎಸ್ ಬಡಿಗೇರ ಮತ್ತು ಎಸ್.ಆರ್.ಚನ್ನವೀರಪ್ಪ ಹಸ್ತಪ್ರತಿ ಸೂಚಿ, ಸಂಪುಟ–೨ ಕನ್ನಡ ವಿಶ್ವವಿದ್ಯಾಲಯ, ಹಂಪಿ.೨೦೦೦
೧೬. ಎಫ್.ಟಿ.ಹಳ್ಳಿಕೇರಿ ಮತ್ತು ಕೆ.ರವೀಂದ್ರನಾಥ್ ಹಸ್ತಪ್ರತಿ ಸೂಚಿ, ಸಂಪುಟ–೩ ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೬
೧೭. ವೀರೇಶ ಎಸ್ ಬಡಿಗೇರ ಮತ್ತು ಎಸ್.ಆರ್.ಚನ್ನವೀರಪ್ಪ ಹಸ್ತಪ್ರತಿ ಸೂಚಿ, ಸಂಪುಟ–೪ ಕನ್ನಡ ವಿಶ್ವವಿದ್ಯಾಲಯ, ಹಂಪಿ.೨೦೦೬
೧೮. ಟಿ.ವಿ.ವೆಂಕಟಾಚಲಶಾಸ್ತ್ರಿ ಮತ್ತು ಬಿ.ರಾಮಚಂದ್ರರಾವ್ The Kannada Manuscripts in the Osmania University Library ಉಸ್ಮಾನಿಯಾ ವಿಶ್ವವಿದ್ಯಾಲಯ, ಹೈದರಾಬಾದ್, ೧೯೬೬
೧೯. ಬಿ.ಆರ್ ಹಿರೇಮಠ ಹಾಗೂ ಎಸ್.ವಿ.ಅಯ್ಯನಗೌಡ, ಹಸ್ತಪ್ರತಿ ಸೂಚಿ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ೧೯೭೬
೨೦. ಕೆಳದಿ ಗುಂಡಾಜೋಯಿಸ ಹಾಗೂ ಎಮ್ ವಿಶ್ವೇಶ್ವರ, ಹಸ್ತಪ್ರತಿ ಸೂಚಿ, ಕೆಳದಿ ಮ್ಯೂಸಿಯಮ್ ಮತ್ತು ಐತಿಹಾಸಿಕ ಸಂಶೋಧನಾಲಯ, ಕೆಳದಿ, ೧೯೮೫
೨೧. ಕೆಳದಿ ಗುಂಡಾ ಜೋಯಿಸ ಹಾಗೂ ನಾ.ಗೀತಾಚಾರ್ಯ, ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ೧೯೮೭
೨೨. ಕೆಳದಿ ಗುಂಡಾಜೋಯಿಸ್, ಹಸ್ತಪ್ರತಿ ಸೂಚಿ, ಶ್ರೀ ಜಗದ್ಗುರು ಮೂರುಸಾವಿರ ಮಠ, ಹುಬ್ಬಳ್ಳಿ, ೧೯೮೯
೨೩. ಎಸ್.ಶಿವಣ್ಣ, ಕನ್ನಡ ಹಸ್ತಪ್ರತಿ ಸೂಚಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೯೫
೨೪. ರಾಷ್ಟ್ರೀಯ ಪ್ರಾಕೃತ ಅಧ್ಯಯನ ಸಂಶೋಧನಾ ಕೇಂದ್ರ, ಶ್ರುತಕೇವಲಿ ಎಜುಕೇಶನ್ ಟ್ರಸ್ಟ, ಶ್ರೀಧವಲ ತೀರ್ಥಂ ಶ್ರವಣಬೆಳಗೊಳ ೨೦೦೩
೨೫. ಎಂ.ಎಂ.ಕಲಬುರ್ಗಿ, ಹಸ್ತಪ್ರತಿಸೂಚಿ, ಕೊಲ್ಲಾಪುರದ ಶ್ರೀ ಲಕ್ಷ್ಮೀಸೇನಭಟ್ಟಾರಕ ಜೈನಬಸದಿಯ ಹಸ್ತಪ್ರತಿ.
೨೬. ಎ.ಆರ್.ಗುರು, ಅಲಿಗೆ ಮೇಲಿನ ಮನೆಯ ಹಸ್ತಪ್ರತಿಗಳು, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು ೨೦೬
೨೭. ಹಸ್ತಪ್ರತಿ ಸೂಚಿಗಳು ಸಂಪುಟ ೧–೮, ಕನ್ನಡ ಅಧ್ಯಯನ ಕೇಂದ್ರ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು
೨೮. ಪಿ.ಕೆ.ರಾಠೋಡ, ಹಸ್ತಪ್ರತಿಸೂಚಿ, ಗದುಗಿನ ತೋಂಟದಾರ್ಯಮಠ, ಪತ್ರಾಗಾರ ಇಲಾಖೆ, ಬೆಂಗಳೂರು

ಮಂಗಳೂರು  ವಿಶ್ವವಿದ್ಯಾನಿಲಯ

MANGALORE UNIVERSITY

**ಎಸ್.ವಿ.ಪಿ. ಕನ್ನಡ ಅಧ್ಯಯನ ಸಂಸ್ಥೆ**

ಮಂಗಳ ಗಂಗೋತ್ರಿ, ಮಂಗಳೂರು

ಪಿಎಚ್.ಡಿ. ಪದವಿಗಾಗಿ
ಮಂಗಳೂರು ವಿಶ್ವವಿದ್ಯಾನಿಲಯಕ್ಕೆ ಸಾದರ ಪಡಿಸಿದ
ಸಂಶೋಧನಮಹಾಪ್ರಬಂಧ

# ಆಧುನಿಕ ಪೂರ್ವ ಸಾಹಿತ್ಯಕ್ಕೆ ಕರ್ನಾಟಕದ ಅರಸಿಯರ ಕೊಡುಗೆ

**ಸಂಶೋಧನ ವಿದ್ಯಾರ್ಥಿನಿ**

**ಸಂಧ್ಯಾ.ವಿ**

ಮಾರ್ಗದರ್ಶಕರು

**ಪ್ರೊ.ಸಬಿಹಾ**

ಪ್ರಾಧ್ಯಾಪಕರು
ಎಸ್.ವಿ.ಪಿ ಕನ್ನಡ ಅಧ್ಯಯನ ಸಂಸ್ಥೆ
ಮಂಗಳೂರು ವಿಶ್ವವಿದ್ಯಾನಿಲಯ
ಮಂಗಳಗಂಗೋತ್ರಿ–೫೭೪೧೯೯

೨೦೧೭

# ಪ್ರಮಾಣ ಪತ್ರ

ಮಂಗಳೂರು ವಿಶ್ವವಿದ್ಯಾನಿಲಯದ ಎಸ್.ವಿ.ಪಿ ಕನ್ನಡ ಅಧ್ಯಯನ ಸಂಸ್ಥೆಯ ಪ್ರಾಧ್ಯಾಪಕರಾದ **ಪ್ರೊ.ಸಬಿಹಾ** ಅವರ ಮಾರ್ಗದರ್ಶನದಲ್ಲಿ "*ಆಧುನಿಕ ಪೂರ್ವ ಸಾಹಿತ್ಯಕ್ಕೆ ಕರ್ನಾಟಕದ ಅರಸಿಯರ ಕೊಡುಗೆ*" ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ ಪದವಿಗಾಗಿ ಮಂಗಳೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಲು ಸಿದ್ಧಪಡಿಸಿದ್ದೇನೆ. ಈ ಮಹಾಪ್ರಬಂಧವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಪದವಿಗಾಗಲೀ, ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

**ಸ್ಥಳ :**

**ದಿನಾಂಕ :**

**ಸಂಧ್ಯಾ.ವಿ**

# ಕೃತಜ್ಞತೆ

ಸಂದೇಹವೀ ಕೃತಿಯೊಳಿನ್ನಿಲ್ಲವೆಂದಲ್ಲ ।
ಇಂದು ನಂಬಿಹುದೆ ಮುಂದೆಂದುಮೆಂದಲ್ಲ॥
ಕುಂದು ತೋರ್ದಂದದನು ತಿದ್ದಿಕೊಳೆ ಮನಸುಂಟು।
ಇಂದಿಗೀಮತವುಚಿತ – ಮಂಕುತಿಮ್ಮ ॥

ಮಂಗಳೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿರುವ ಈ ಮಹಾಪ್ರಬಂಧವು ನನ್ನ ಐದು ವರ್ಷಗಳ ಅಧ್ಯಯನದ ಫಲಿತವಾಗಿದೆ. ಈ ವೇಳೆಯಲ್ಲಿ ಓತಪ್ರೋತವಾಗಿ ಸಾಗಿದ ನನ್ನ ಅಧ್ಯಯನದ ದಿಕ್ಕನ್ನು ಸರಿಯಾದ ಕ್ರಮದಲ್ಲಿ ಸಾಗುವಂತೆ ಮಾರ್ಗದರ್ಶನ ಮಾಡಿ, ಅರೆ–ಕೊರೆಗಳನ್ನು ತಿದ್ದಿ ಸ್ಪಷ್ಟರೂಪ ಬರಲು ಕಾರಣರಾದವರು ನನ್ನ ಮಾರ್ಗದರ್ಶಕರಾದ ಪ್ರೊ.ಸಬಿಹಾ ಮೇಡಂ. ಅವರಿಗೆ ನನ್ನ ಮನಃಪೂರ್ವಕ ಕೃತಜ್ಞತೆಗಳನ್ನು ಈ ಮೂಲಕ ಅರ್ಪಿಸುತ್ತೇನೆ.

ನನಗೆ ಅಗತ್ಯವಿದ್ದ ಹಲವಾರು ಪುಸ್ತಕಗಳನ್ನು ಒದಗಿಸಿ ಸಹಕಾರ ನೀಡಿದ ನನ್ನ ಮಿತ್ರವೃಂದಕ್ಕೆ, ವಿಶ್ವವಿದ್ಯಾನಿಲಯದ ನಿಯಮಾವಳಿಗಳನ್ನು ತಿಳಿಸಿ ಸಕಾಲದಲ್ಲಿ ಪ್ರಬಂಧಸಲ್ಲಿಸಲು ಸಹಾಯ ಮಾಡಿದ ಸಹಪಾಠಿ ಪ್ರವೀಣ್ ಅವರಿಗೆ, ವಿಶ್ವವಿದ್ಯಾನಿಲಯದ ಎಲ್ಲ ಪ್ರಾಧ್ಯಾಪಕರಿಗೆ ಹಾಗೂ ಸಿಬ್ಬಂದಿ ವರ್ಗದವರಿಗೆ, ನನ್ನ ಅಧ್ಯಯನಕ್ಕೆ ಸಹಕರಿಸಿ ಶುಭಹಾರೈಸಿದ ಕುಟುಂಬವರ್ಗದವರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇನೆ.

**ಸಂಧ್ಯಾ.ವಿ**

# ಆಧುನಿಕ ಪೂರ್ವ ಸಾಹಿತ್ಯಕ್ಕೆ ಕರ್ನಾಟಕದ ಅರಸಿಯರ ಕೊಡುಗೆ

## ಪರಿವಿಡಿ

3. ಕನ್ನಡ ನಾಡಿನ ಅರಸಿಯರು

3.1 ಆಡಳಿತ ಮತ್ತು ಕೊಡುಗೆ

3.1.1 ಆಳ್ವಿಕೆ ನಡೆಸಿ, ಉತ್ತಮ ಕೊಡುಗೆ ನೀಡಿದ ಅರಸಿಯರ ಪಟ್ಟಿಕೆ

3.1.2 ಆಳ್ವಿಕೆ ನಡೆಸದೆಯೆ ಉತ್ತಮ ಕೊಡುಗೆ ನೀಡಿದ ಅರಸಿಯರ ಪಟ್ಟಿಕೆ

3.2 ಅರಸಿಯರ ಆಡಳಿತ

3.2.1 ಆಳ್ವಿಕೆಯ ಅವಕಾಶ ಪಡೆದ ಸಂದರ್ಭ

3.2.2 ಆಳ್ವಿಕೆಯ ಅವಧಿಯಲ್ಲಿ ಹೊರಡಿಸಿದ ಶಾಸನ

3.2.3 ಆಡಳಿತ ವಿಧಾನ

3.2.4 ಆಳ್ವಿಕೆಯ ಅವಧಿಯಲ್ಲಿ ನಿರ್ಮಿಸಿದ ಕೆರೆ ಕಾಲುವೆ

3.2.5 ವ್ಯಾಪಾರ-ವಾಣಿಜ್ಯ

3.2.6 ತೆರಿಗೆ-ಕಂದಾಯ

3.2.7 ಯುದ್ಧ

3.3 ಅರಸಿಯರ ಸಾಂಸ್ಕೃತಿಕ ಕೊಡುಗೆಗಳು

3.3.1 ವಾಸ್ತುಶಿಲ್ಪಕ್ಕೆ ನೀಡಿದ ಪ್ರೋತ್ಸಾಹ

3.3.2 ಸಂಗೀತ, ನೃತ್ಯ ಮೊದಲಾದ ಲಲಿತ ಕಲೆಗಳಿಗೆ ನೀಡಿದ ಕೊಡುಗೆ

3.3.3 ವಿದ್ಯಾಭ್ಯಾಸಕ್ಕೆ ನೀಡಿದ ಮಹತ್ವ

4 ಐತಿಹಾಸಿಕ ಮತ್ತು ಇತರ ಕಾವ್ಯಗಳಲ್ಲಿ ಕರ್ನಾಟಕದ ಅರಸಿಯರು

4.1 ಕನ್ನಡ ಕಾವ್ಯೋಲ್ಲೇಖದಲ್ಲಿನ ಅರಸಿಯರು

ಕಲ್ಯಾಣದ ಚಾಲುಕ್ಯ ಅರಸಿಯರಾದ ಸುಗ್ಗಲಾದೇವಿ, ರಾಣಿ ಲಕ್ಷ್ಮೀದೇವಿ,
ರಟ್ಟವಂಶದ ಚಂದ್ರಿಕಾದೇವಿ, ಬರ್ಮಭೂಪಾಲನ ಅರಸಿ ಸುಗ್ಗಲದೇವಿ,
ಸಾಹಸಿ ಸಾವಿಯಬ್ಬೆ, ಕೆಳದಿಯ ಅರಸಿ ಚೆನ್ನಮ್ಮ,
ಚೌಟ ರಾಣಿ ಅಬ್ಬಕ್ಕ, ಬೆಳವಡಿಯ ಮಲ್ಲಮ್ಮ

4.2 ಸಂಸ್ಕೃತ ಕಾವ್ಯೋಲ್ಲೇಖದಲ್ಲಿನ ಕರ್ನಾಟಕದ ಅರಸಿಯರು

ಕುಂಬಳೆ ಮನೆತನದ ರಾಣಿ ಸುಶೀಲ, ಮೃಣಾಳವತಿ,
ವಿಕ್ರಮಾದಿತ್ಯನ ಅರಸಿ ಚಂದ್ರಿಕಾದೇವಿ

4.3 ಜನಪದ ಸಾಹಿತ್ಯಗಳು ಉಲ್ಲೇಖಿಸುವ ಕರ್ನಾಟಕದ ಅರಸಿಯರು

ಕಿತ್ತೂರಿನ ರಾಣಿ ಚೆನ್ನಮ್ಮ, ಓಬವ್ವ ನಾಗತಿ, ಗಿರಿಜವ್ವೆ, ಕೊಡಗಿನ ಲಿಂಗರಾಜಮ್ಮ,
ಬೈಲಂಗಡಿಯ ಸೋಮಲಾದೇವಿ

## 5 ಪ್ರಾಚೀನ ಕರ್ನಾಟಕದ ಅರಸಿಯರ ಸಾಹಿತ್ಯ ಪೋಷಣೆ

ಕದಂಬಳಿಗೆ ಸಾಸಿರದ ಅರಸಿ ಜಕ್ಕಿಯಬ್ಬೆ, ನಾಗರಖಂಡ ಎಪ್ಪತ್ತರ ಅರಸಿ ಜಕ್ಕಿಯಬ್ಬೆ, ಕಂಚಿಕಬ್ಬೆ, ಅತ್ತಿಮಬ್ಬೆ, ದೀವಳಬ್ಬರಸಿ, ಮೋಚಬ್ಬರಸಿ, ಬನವಾಸಿ ಪನ್ನೀರ್ಚಾಸಿರದ ಜೋಗಬ್ಬರಸಿ, ಕದಂಬ ಮಾಳಲದೇವಿ, ಚಾಲುಕ್ಯ ಅರಸಿ ಜಾಕಲದೇವಿ, ಹೊಯ್ಸಳರಾಣಿ ಶಾಂತಲಾದೇವಿ, ಕದಂಬ ಅರಸಿ ಕಮಲಾದೇವಿ, ಹರಿಯಬ್ಬರಸಿ, ಹೊಯ್ಸಳ ರಾಣಿ ಉಮಾದೇವಿ, ಹೊಯ್ಸಳ ರಾಣಿ ಬೈಚಲಾದೇವಿ

## 6 ಮಧ್ಯಕಾಲೀನ ಕರ್ನಾಟಕದ ಅರಸಿಯರ ಸಾಹಿತ್ಯ ಪೋಷಣೆ

ಸಾಳ್ವ ಮನೆತನದ ಅರಸಿಯರು: ಭೈರಾದೇವಿ, ಚೆನ್ನಭೈರಾದೇವಿ, ಕೆಳದಿ ಅರಸಿಯರಾದ ಸೋಮಶೇಖರನ ಅರಸಿ ಚನ್ನಮ್ಮ, ಬಸವಪ್ಪ ನಾಯಕನ ಅರಸಿ ಚೆನ್ನಮ್ಮ, ಮೂಲ್ಕಿ ಅರಸು ಮನೆತನದ ರಾಣಿ ಚೆನ್ನಾಂಬಿಕೆ, ಮೈಸೂರು ಅರಸಿಯರು: ರಾಣಿ ಅಮೃತಾಂಬೆ, ದೇವಾಜಮ್ಮಣ್ಣಿ, ದೇವೀರಾಂಬೆ, ಗೌರಮ್ಮಣ್ಣಿ, ಮುಮ್ಮಡಿ ಕೃಷ್ಣರಾಜ ಒಡೆಯರ ಅರಸಿಯರಾದ ಚೆಲುವಾಜಮ್ಮಣ್ಣಿ, ದೇವಾಜಮ್ಮಣ್ಣಿ, ಕಿತ್ತೂರಿನ ರಾಣಿ ಚೆನ್ನಮ್ಮ, ಚೌಟರಾಣಿಯರು: ಅಬ್ಬಕ್ಕ, ಚನ್ನಮ್ಮ, ಬಂಗ ಅರಸುಮನೆತನದ ರಾಣಿ ಚಂದ್ರಮತಿ

## 7. ಕರ್ನಾಟಕದ ಅರಸಿಯರು ರಚಿಸಿದ ಕನ್ನಡ ಕಾವ್ಯಗಳು

ವಚನ ಸಾಹಿತ್ಯ,
ಚಂಪೂಕಾವ್ಯ,
ಸಾಂಗತ್ಯ,
ಚೌಪದಿ,
ಗದ್ಯಕೃತಿ,
ಕೀರ್ತನೆಗಳು

## 8. ಅರಸಿಯರು ರಚಿಸಿದ ಸಂಸ್ಕೃತ ಸಾಹಿತ್ಯ

ಸಂಸ್ಕೃತ ಮುಕ್ತಕಗಳು
ನಾಟಕ
ಐತಿಹಾಸಿಕ ಕಾವ್ಯಗಳು

## 9. ಸಮಾರೋಪ

9.1 ಅಧ್ಯಯನದ ಫಲಿತಗಳು
9.2 ಮುಂದಿನ ಅಧ್ಯಯನದ ಸಾಧ್ಯತೆಗಳು

## 9 ಅನುಬಂಧ

9.1 ಪರಾಮರ್ಶನ ಗ್ರಂಥಗಳು
9.2 ಮೂಲಪಠ್ಯ ಗ್ರಂಥಗಳು
9.3 ಲೇಖನಗಳು
9.4 ಶಾಸನ ಸಂಪುಟಗಳು
9.5 ಇ-ಲೈಬ್ರರಿ (ಅಂತರ್ಜಾಲದ) ಪುಸ್ತಕಗಳು

# ಅಧ್ಯಾಯ 1

## ಪ್ರಸ್ತಾವನೆ

ಸಂಗೀತ, ಸಾಹಿತ್ಯ, ಮೊದಲಾದ ಕಲೆಗಳು ರಾಜಾಶ್ರಯದಲ್ಲಿ ಹುಲುಸಾಗಿ ಬೆಳೆಯುತ್ತದೆಂಬುದನ್ನು ಪ್ರಾಚೀನಕಾಲದಿಂದ ಇಲ್ಲಿಯವರೆಗೂ ಮನಗಂಡಿದ್ದೇವೆ. ಪ್ರಸಿದ್ಧ ಕವಿ, ವಿದ್ವಾಂಸರು, ಕಲಾವಿದರಿಗೆ ತಮ್ಮ ಆಸ್ಥಾನದಲ್ಲಿ ಆಶ್ರಯ ನೀಡುವುದನ್ನು ಪ್ರತಿಷ್ಠೆಯೆಂದೇ ಅರಸರು ಬಗೆಯುತ್ತಿದ್ದರು. ರಾಜನೀತಿ, ಯುದ್ಧ, ವ್ಯಾಪಾರ ಚತುರತೆಯೊಂದಿಗೆ ರಾಜ ಕಲಾಪೋಷಕನಾಗಿರುತ್ತಿದ್ದ, ಸಾಹಿತ್ಯಾರಾಧಕನಾಗಿರುತ್ತಿದ್ದ. ಇತಿಹಾಸದಲ್ಲಿ ಕೇವಲ ಯುದ್ಧದಲ್ಲಿ ಸಾಹಸ–ಶೌರ್ಯ ಮೆರೆದ ರಾಜರು ಮಾತ್ರ ಕೀರ್ತಿವಂತರಾಗಿಲ್ಲ; ಕಲಾ ಪೋಷಣೆಯಿಂದಲೂ ಪ್ರಖ್ಯಾತಿ ಪಡೆದಿದ್ದ ರಾಜರನ್ನು ಕಾಣಬಹುದು. ಶೌರ್ಯದಲ್ಲಾಗಲೀ, ರಾಜನೀತಿಯಲ್ಲಾಗಲೀ ಅಷ್ಟೇನು ಪ್ರಸಿದ್ಧನಲ್ಲದ ವೇಮುಲವಾಡದ ಚಾಲುಕ್ಯದೊರೆ ಅರಿಕೇಸರಿಯು, ಪಂಪನ ಆಶ್ರಯದಾತನಾಗಿದ್ದ ಕಾರಣ ಸಾಹಿತ್ಯವಲಯದಲ್ಲಿ ಇಂದು ಚಿರಸ್ಥಾಯಿಯಾಗಿದ್ದಾನೆ.

ರಾಜಾಶ್ರಯದಲ್ಲಿದ್ದ ಕವಿಗಳ ಕೃತಿಗಳು ಚರಿತ್ರೆಯ ಪುನಾರಚನೆಗೆ ಮುಖ್ಯ ಆಕರಗಳಾಗಿ ಬಳಕೆಯಾಗುತ್ತಿರುವುದು, ಇವುಗಳಿಗಿರುವ ಐತಿಹಾಸಿಕ ಮಹತ್ವವನ್ನು ತಿಳಿಸುತ್ತವೆ. ಕವಿಗಳು ತಮ್ಮ ಆಶ್ರಯದಾತನ ವಿಚಾರಗಳನ್ನು ತಮ್ಮ ಕಾವ್ಯಗಳ ಪುಷ್ಪಿಕೆಗಳಲ್ಲಿ, ಸ್ತುತಿರೂಪವಾಗಿ ಉಲ್ಲೇಖಿಸಿರುತ್ತಾರೆ. ಕೆಲವೊಂದುಬಾರಿ ತಮ್ಮ ಆಶ್ರಯದಾತನನ್ನೇ ಕಾವ್ಯನಾಯಕನನ್ನಾಗಿ ಕಾವ್ಯ ರಚಿಸಿರುವುದೂ ಉಂಟು. ಇಂಥ ಕಾವ್ಯಗಳಲ್ಲಿ ಕೆಲವೊಂದು ವರ್ಣನೆಗಳು ಉತ್ಪ್ರೇಕ್ಷೆ ಎನಿಸಿದರೂ, ಇವು ಹಲವಾರು ಮಹತ್ವದ ಐತಿಹಾಸಿಕ ದಾಖಲೆಗಳನ್ನು ಒಳಗೊಂಡಿರುತ್ತವೆ. ಇಂಥ ಕಾವ್ಯಗಳು ಕೇವಲ ರಾಜ, ರಾಜಕೀಯ ವಿಚಾರಗಳನ್ನಷ್ಟೇ ಅಲ್ಲದೆ, ಅಂದಿನ ಸಮಾಜ, ಜನಜೀವನ, ರಾಜ್ಯದ ಗಡಿ, ನಗರವರ್ಣನೆ, ಧಾರ್ಮಿಕ ವಿಧಿ–ವಿಧಾನ, ದಾನ, ಯುದ್ಧ ಮೊದಲಾದ ವಿಚಾರಗಳನ್ನು ತಿಳಿಸುತ್ತವೆ.

ಆಧುನಿಕಪೂರ್ವ ಕನ್ನಡಸಾಹಿತ್ಯವು ಬಹುತೇಕ ಪುರಾಣದ ವಿಚಾರಗಳನ್ನು ಕಾವ್ಯ ವಸ್ತುವನ್ನಾಗಿಸಿಕೊಂಡು ರಚಿತವಾದದ್ದಾಗಿದೆ. ಕಾವ್ಯಗಳು ಪೌರಾಣಿಕ ಕಥನಗಳನ್ನು ಬಣ್ಣಿಸಿದರೂ, ಅದರಲ್ಲಿ ಐತಿಹಾಸಿಕ ಘಟನೆಗಳನ್ನು ಸೇರಿಸಿ ಹೇಳುವ ಜಾಣ್ಮೆಯನ್ನು ನಮ್ಮ ಪ್ರಾಚೀನಕವಿಗಳು ತೋರಿದ್ದಾರೆ. ಸಾಧಾರಣವಾಗಿ ಪೌರಾಣಿಕ ಕಥಾವಸ್ತುಗಳೆಲ್ಲಾ ಪುರುಷಪ್ರಧಾನವಾದುದೇ ಆಗಿರುವುದರಿಂದ ಆಸ್ಥಾನ ಕವಿಗಳು ತಮ್ಮ ಕಾವ್ಯಗಳಲ್ಲಿ ಆಶ್ರಯದಾತ ಅರಸನನ್ನೇ ಪ್ರಧಾನವಾಗಿರಿಸಿಕೊಂಡು ಕಾವ್ಯರಚನೆ ಮಾಡಿದ್ದಾರೆ.

ಅನೇಕ ಅರಸರು ಕಲಾಪೋಷಕರಾಗಿ, ಸ್ವತಃ ಕವಿಗಳಾಗಿ, ಕವಿಗಳಿಗೆ ಆಶ್ರಯ ನೀಡಿದ್ದ ಉದಾಹರಣೆಗಳು ದೊರಕುತ್ತವೆ. ಕಲಾವಲ್ಲಭ, ಕಲಾಪೋಷಕ ಮೊದಲಾದವು ಸಾಧಾರಣವಾಗಿ ರಾಜರಿಗಿರುತ್ತಿದ್ದ ಬಿರುದಾವಳಿಗಳಾಗಿರುತ್ತಿದ್ದವು. ಅರಸಿಯರೂ, ರಾಜರ ಸರಿಸಮಾನ ವಿದ್ಯಾಭ್ಯಾಸವನ್ನು ಪಡೆದವರಾಗಿ, ಸಾಹಿತ್ಯ, ಸಂಗೀತ, ನೃತ್ಯ ಮೊದಲಾದ ಲಲಿತಕಲೆಗಳಲ್ಲಿ ಪರಿಣತರಾಗಿರುತ್ತಿದ್ದರೆನ್ನುವ ವಿಚಾರ, ಶಾಸನ–ಕಾವ್ಯಗಳಿಂದ ತಿಳಿದುಬರುತ್ತದೆ. ತಮ್ಮ ಅಭಿರುಚಿಯನ್ನು ಪ್ರಕಟಿಸಲು ತಮಗಿದ್ದ ಅಧಿಕಾರವನ್ನು ರಾಣಿಯರು ಬಳಸಿಕೊಂಡಿದ್ದ ನಿದರ್ಶನಗಳೂ ಇವೆ. ಲೋಕಮಹಾದೇವಿ, ತ್ರೈಲೋಕ್ಯ ಮಹಾದೇವಿಯರು ಪಟ್ಟದಕಲ್ಲಿನಲ್ಲಿ ದೇವಾಲಯವನ್ನು ಕಟ್ಟಿಸಿ ತಮ್ಮ ಕಲಾಭಿರುಚಿ ಪ್ರಕಟಿಸಿದರೆ, ಶಾಂತಲೆ ಬೇಲೂರು, ಹಳೇಬೀಡು ಮೊದಲಾದ ಕಡೆಗಳಲ್ಲಿ ದೇವಾಲಯಗಳನ್ನು ನಿರ್ಮಿಸಿ ಶಿಲೆಯಲ್ಲಿ ಕಲೆಯನ್ನರಳಿಸಿದ ಕೀರ್ತಿಗೆ ಭಾಜನಳಾದವಳು. ರಾಣಿಯರು ದೇವಾಲಯ, ಕೆರೆ–ಕಾಲುವೆ,

ಅಗ್ರಹಾರಗಳ ನಿರ್ಮಾಣಗಳಿಗೆ, ಕೇವಲ ಧಾರ್ಮಿಕ ವಿಧಿಗಳಿಗೆ ಮಾತ್ರ ಗಮನ ಹರಿಸದೆ ಕಲೆ, ಸಾಹಿತ್ಯಕ್ಕೂ ಕೊಡುಗೆ ನೀಡಿದ್ದಾರೆ. ಅನೇಕ ರಾಣಿಯರು ಸ್ವತಃ ಕಾವ್ಯಗಳನ್ನೂ ರಚಿಸಿದ್ದಾರೆ. ಸಾಹಿತ್ಯಕ್ಕೆ ಕರ್ನಾಟಕದ ರಾಣಿಯರು ನೀಡಿರುವ ಕೊಡುಗೆ, ಅದರ ಮಹತ್ವವನ್ನು ಸಾಂಸ್ಕೃತಿಕ, ರಾಜಕೀಯ, ಸಾಮಾಜಿಕ ಹಿನ್ನೆಲೆಯಲ್ಲಿ ಗುರುತಿಸುವ ಅಗತ್ಯವಿದೆ.

## ೧.೧ ಅಧ್ಯಯನದ ಉದ್ದೇಶ

ಕರ್ನಾಟಕವನ್ನಾಳಿದ ರಾಜಮನೆತನಗಳಲ್ಲಿ ಪ್ರಭಾವೀ ರಾಣಿಯರೂ ಆಳ್ವಿಕೆ ನಡೆಸಿರುವುದನ್ನು ಕಾಣುತ್ತೇವೆ. ಎಲ್ಲ ರಾಣಿಯರಿಗೂ ಆಡಳಿತದಲ್ಲಿ ಅವಕಾಶ ದೊರೆಯದಿದ್ದರೂ, ಹಲವರು ಅಧಿಕಾರದ ಚುಕ್ಕಾಣಿ ಹಿಡಿದಿದ್ದಾರೆ. ರಾಜಮನೆತನಗಳಲ್ಲಿ ರಾಜರು ಸ್ವಾಭಾವಿಕವಾಗಿ ಅಧಿಕಾರಕ್ಕೆ ಬಂದರೆ, ರಾಣಿಯರು ವಿಷಮ ರಾಜಕೀಯ ಪರಿಸ್ಥಿತಿಯಲ್ಲಿ ಆಡಳಿತದ ಅವಕಾಶ ಪಡೆಯುತ್ತಿದ್ದರು. ಅರಸಿಯರು ಮಗನ ಪರವಾಗಿಯೋ, ಪತಿಯ ಅವಸಾನದ ನಂತರವೋ ಆಳ್ವಿಕೆ ನಡೆಸಿರುವುದನ್ನು ಕಾಣುತ್ತೇವೆ. ಇಂಥ ಸಮಯದಲ್ಲಿ ರಾಣಿಯೊಬ್ಬಳು ಮುಂದಿನ ಪೀಳಿಗೆಗಾಗಿ ನೀಡಿದ ಕೊಡುಗೆ ರಾಜನ ಕೊಡುಗೆಗಿಂತ ಮಹತ್ವಪೂರ್ಣದ್ದಾಗಿರುತ್ತದೆ. ಬಹುಪತ್ನೀ ವಲ್ಲಭನಾಗಿರುತ್ತಿದ್ದ ರಾಜ ತನ್ನೆಲ್ಲ ರಾಣಿಯರಿಗೂ ಸಮಾನ ಅವಕಾಶವನ್ನು, ಅಧಿಕಾರವನ್ನು ನೀಡಲು ಸಾಧ್ಯವಾಗುತ್ತಿರಲಿಲ್ಲ ಇಂಥ ಸನ್ನಿವೇಶದಲ್ಲಿಯೂ ತಮಗೆ ದೊರೆತ ಅಲ್ಪ ಅವಕಾಶವನ್ನು ಬಳಸಿಕೊಂಡು ರಾಣಿಯರು ಆಳ್ವಿಕೆ ಮತ್ತು ಕಲೆ–ಸಾಹಿತ್ಯಗಳಿಗೆ ನೀಡಿದ ಕೊಡುಗೆ ಮಹತ್ವಪೂರ್ಣದ್ದಾಗಿದೆ. ಇದೇ ಮೊದಲಾದ ಕಾರಣಗಳಿಂದ ರಾಣಿಯರ ಕೊಡುಗೆಯನ್ನು ಪ್ರತ್ಯೇಕವಾಗಿ ವಿಭಿನ್ನ ಆಯಾಮದಿಂದ ನೋಡುವ ಅಗತ್ಯವಿದೆ.

ಕರ್ನಾಟಕದ ರಾಣಿಯರು ಎಲ್ಲ ಕ್ಷೇತ್ರಕ್ಕೂ ಕೊಡುಗೆಯನ್ನು ನೀಡಿದ್ದಾರೆ. ಸಂಸ್ಕೃತ ಸಾಹಿತ್ಯ, ಕನ್ನಡ ಸಾಹಿತ್ಯ, ಧಾರ್ಮಿಕ ಗ್ರಂಥಗಳು, ದೇವಾಲಯ, ಅಗ್ರಹಾರ, ಕೆರೆ ನಿರ್ಮಾಣ, ಅವುಗಳಿಗೆ ನೀಡಿದ ದಾನ ದತ್ತಿ, ಯುದ್ಧ, ರಾಜಕೀಯ, ವ್ಯಾಪಾರ, ಸಂಗೀತ, ನೃತ್ಯ, ಶಿಲ್ಪಕಲೆ ಎಲ್ಲೆಡೆ ರಾಣಿಯರು ನೀಡಿದ ಕೊಡುಗೆಯನ್ನು ಗಮನಿಸಬಹುದು.

ಪ್ರಾಚೀನ ಕಾಲದ ರಾಜಕೀಯ ಪರಿಸ್ಥಿತಿಗಿಂತ ಮಧ್ಯಕಾಲೀನ ರಾಜಕೀಯ ಪರಿಸ್ಥಿತಿ ಭಿನ್ನವಾಗಿದೆ. ಮಧ್ಯಕಾಲೀನ ಪರಿಸ್ಥಿತಿಯಲ್ಲಿ ವಿದೇಶಿಗರ ದಾಳಿ, ಸಣ್ಣಪುಟ್ಟ ರಾಜವಂಶಗಳ ಆಡಳಿತ, ಪಾಳೆಗಾರರ ಅಧಿಕಾರ, ಧಾರ್ಮಿಕ ಸ್ಥಿತಿಗತಿಗಳಲ್ಲಿ ಬದಲಾವಣೆ ಮೊದಲಾದವು ಹೆಚ್ಚಾಗಿ ಕಂಡುಬರುತ್ತವೆ. ಸ್ವತಂತ್ರವಾಗಿ ಆಡಳಿತ ನಡೆಸಿದ ಅರಸಿಯರು ಮಧ್ಯಕಾಲೀನ ಸಂದರ್ಭದಲ್ಲಿ ಹೆಚ್ಚು ಕಂಡುಬರುತ್ತಾರೆ.

ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ರಾಣಿಯರು ಅನೇಕರಿದ್ದರೂ, ಇತಿಹಾಸದ ಪಠ್ಯಗಳಲ್ಲಿ ಹೆಸರಿಸುವುದು ಬೆರಳೆಣಿಕೆಯ ರಾಣಿಯರನ್ನು ಮಾತ್ರ. ಗಮನಾರ್ಹ ಸಾಧನೆಯನ್ನು ಮಾಡಿ ಕಲೆ, ವಾಸ್ತುಶಿಲ್ಪ, ಸಾಹಿತ್ಯಗಳಿಗೆ ಕೊಡುಗೆಗಳನ್ನು ನೀಡಿರುವ ಕರ್ನಾಟಕದ ರಾಣಿಯರನ್ನು ಒಂದೆಡೆ ಗುರುತಿಸುವ ಅಗತ್ಯವಿದೆ.

ಪ್ರಾಚೀನ ಕಾಲದಿಂದಲೂ ಕರ್ನಾಟಕದಲ್ಲಿ ಸಾಹಿತ್ಯರಚನೆ ಸಮೃದ್ಧವಾಗಿ ಬೆಳೆದುಬಂದಿದೆ. ವಿಭಿನ್ನ ಪ್ರಕಾರಗಳ ಸಾಹಿತ್ಯರಚನೆಗಳು ಇಲ್ಲಿ ನಡೆದಿರುವುದನ್ನು ಗಮನಿಸಬಹುದು. ಈ ಪ್ರಕಾರವಾಗಿ ಬೆಳೆದು ಬಂದಿರುವ ಸಾಹಿತ್ಯಗಳ ಮಾಹಿತಿಯನ್ನು ಒಂದೆಡೆ ದಾಖಲಿಸುವ ಕಾರ್ಯ ಕಳೆದೊಂದು ಶತಮಾನದಲ್ಲಿ ಹೆಚ್ಚಾಗಿ ನಡೆದಿದೆ. ಸಾಹಿತ್ಯವನ್ನು ಅನೇಕ ಮಜಲುಗಳಲ್ಲಿ ಚರ್ಚಿಸುವ, ವಿಮರ್ಶಿಸುವ, ಸಂಕ್ಷಿಪ್ತವಾಗಿ ಪರಿಚಯಿಸುವ ನಾನಾ ಪರಿಯನ್ನು ಕಾಣುತ್ತೇವೆ. ಪ್ರಾಚೀನ ಕನ್ನಡಸಾಹಿತ್ಯ, ವಚನಸಾಹಿತ್ಯ, ಮಧ್ಯಕಾಲೀನಸಾಹಿತ್ಯ, ರಗಳೆ, ಕನ್ನಡದ ಷಟ್ಪದಿಗಳು, ಚಂಪೂಕಾವ್ಯಗಳು, ಸಂಸ್ಕೃತಕಾವ್ಯಕ್ಕೆ ಕರ್ನಾಟಕದ ಕೊಡುಗೆ, ಕರ್ನಾಟಕ ಕವಿಗಳ ಪ್ರಾಕೃತರಚನೆ, ದಾಸಸಾಹಿತ್ಯ, ಚಾರಿತ್ರಿಕ ಕಾವ್ಯಗಳು, ರಾಷ್ಟ್ರಕೂಟರ ಕಾಲದ ಸಾಹಿತ್ಯ, ವಿಜಯನಗರ ಪೂರ್ವದ ಜೈನಸಾಹಿತ್ಯ ಇವೇ ಮೊದಲಾದ ಬಗೆಯನ್ನು ಇಲ್ಲಿ ಕಾಣುತ್ತೇವೆ.

ಈ ನಿಟ್ಟಿನಲ್ಲಿ ಕವಿಗಳ ಪೋಷಣೆ, ಕಾವ್ಯ ರಚನೆಗೆ ಪ್ರೇರಣೆ, ಪ್ರೋತ್ಸಾಹ ನೀಡಿರುವ ರಾಣಿಯರೊಂದಿಗೆ ಸ್ವತಃ ಕಾವ್ಯ ರಚನೆಗೆ ತೊಡಗಿ ಸಾಹಿತ್ಯ ವಲಯದಲ್ಲಿ ತಮ್ಮದೇ ಆದ ಕೊಡುಗೆಯನ್ನು ನೀಡಿರುವ ಕರ್ನಾಟಕದ ರಾಣಿಯರ ಕುರಿತಾದ ಸಮಗ್ರ ಅಧ್ಯಯನವನ್ನು ಇಲ್ಲಿ ಕೈಗೊಳ್ಳಲಾಗಿದೆ.

### ೧.೨ ಅಧ್ಯಯನದ ಸ್ವರೂಪ ಮತ್ತು ತಾತ್ವಿಕತೆ

ಕರ್ನಾಟಕದ ವಿಭಿನ್ನ ರಾಜಮನೆತನಗಳಲ್ಲಿ ಆಳ್ವಿಕೆ ನಡೆಸಿದ ರಾಣಿಯರನ್ನು ಕುರಿತಾಗಿ ಅವರ ಸಾಧನೆ, ನಾಡಿಗೆ ಅವರು ನೀಡಿರುವ ಸಾಂಸ್ಕೃತಿಕ ಕೊಡುಗೆ, ವಿಶೇಷವಾಗಿ ಅವರ ಸಾಹಿತ್ಯಿಕ ಕೊಡುಗೆಯ ಕುರಿತಾದ ಅಧ್ಯಯನ ಈ ಪ್ರಬಂಧದ ಮುಖ್ಯ ಉದ್ದೇಶವಾಗಿದೆ. ರಾಣಿಯರ ಪೋಷಣೆಯಲ್ಲಿ ಕಾವ್ಯ ರಚಿಸಿರುವ ಕವಿಯ, ಕಾವ್ಯ ವಿಮರ್ಶೆ ಹಾಗೂ ಅದರಲ್ಲಿ ಬಿಂಬಿತವಾಗಿರುವ ರಾಣಿಯರ ಜೀವನ ವಿಚಾರ, ಸ್ವತಃ ಕಾವ್ಯ ರಚಿಸಿರುವ ರಾಣಿಯರ ಕಾವ್ಯ, ವಿಮರ್ಶೆ ಕುರಿತಾಗಿ ರಚಿತವಾಗಿರುವ ಈ ಪ್ರಬಂಧವು ವಿಭಿನ್ನ ದೃಷ್ಟಿಕೋನ ಹೊಂದಿರುವ ಸಾಹಿತ್ಯ ಚರಿತ್ರೆಯಾಗಿದೆ.

ಈ ಅಧ್ಯಯನಕ್ಕೆ ಅರಸಿಯರ ಆಶ್ರಯದಲ್ಲಿ ಕವಿಗಳು ರಚಿಸಿರುವ ಕಾವ್ಯಗಳು ಹಾಗೂ ಸ್ವತಃ ಅರಸಿಯರೇ ರಚಿಸಿರುವ ಕಾವ್ಯಗಳೇ ಮುಖ್ಯ ಆಕರವಾಗಿದೆ. ಇವುಗಳೊಂದಿಗೆ ಅರಸಿಯರ ಜೀವನ ಶೈಲಿ, ವಿದ್ಯೆ, ಸಾಧನೆ, ಧಾರ್ಮಿಕ ಹಾಗೂ ಸಾಮಾಜಿಕ ಕೊಡುಗೆಗಳನ್ನು ಬಣ್ಣಿಸುವ, ಉಲ್ಲೇಖಿಸುವ ಕಾವ್ಯಗಳು, ಸಾಧನೆಯ ಪ್ರಮುಖ ದಾಖಲಾತಿ ಎಂದೆನಿಸಿದ ಶಾಸನಗಳು, ಕೈಫಿಯತ್ತು, ಬಖೈರು ಹಾಗೂ ಅಗತ್ಯವಿದ್ದೆಡೆ ವಿದೇಶಿ ಪ್ರವಾಸಿಗರ ಲೇಖನವನ್ನೂ ಬಳಸಿಕೊಂಡು ಅಧ್ಯಯನ ನಡೆಸಲಾಗಿದೆ.

ಅರಸಿಯರ ಪೋಷಿತ ಕವಿಗಳಲ್ಲಿ ಶಾಸನ ಕವಿಗಳನ್ನೂ ಗುರುತಿಸಲಾಗಿದೆ. ರಾಣಿಯರ ಪ್ರೋತ್ಸಾಹ ಕಾವ್ಯರಚನೆಗಷ್ಟೇ ಸೀಮಿತವಾಗಿರದೆ ಪ್ರಾಚೀನ ಕಾವ್ಯಗಳನ್ನು ಪ್ರತಿ ಮಾಡಿಸುವ ಕೆಲಸವನ್ನೂ ಕೈಗೊಂಡಿದ್ದಾರೆ. ಅನೇಕ ರಾಣಿಯರು ವಿದ್ಯಾಪಾರಂಗತರಾಗಿದ್ದುದಲ್ಲದೆ, ಸಾಹಿತ್ಯಾಭ್ಯಾಸ ಮಾಡುತ್ತಿದ್ದುದನ್ನೂ ಗಮನಿಸಬಹುದು. ಇಂತಹ ಅರಸಿಯರು ಪ್ರಾಚೀನಕಾವ್ಯಗಳನ್ನು ಪ್ರತಿಮಾಡಿಸಿರುವುದು ಮುಂದಿನ ಪೀಳಿಗೆಗೆ ಪ್ರಾಚೀನಕಾವ್ಯವನ್ನು ಉಳಿಸಿ, ತಲುಪಿಸಿದ ಮಹತ್ಕಾರ್ಯಕ್ಕೆ ಎಡೆಮಾಡಿದೆ. ಹೀಗೆ ಗ್ರಂಥಗಳನ್ನು ಪ್ರತಿಮಾಡಿಸಿರುವ ಕೆಲವು ಕಾರ್ಯಗಳ ಹಿಂದೆ ಧಾರ್ಮಿಕ ಮನೋಭಾವನೆಯೂ ಕಂಡುಬರುತ್ತದೆ. ವಿಶೇಷವಾಗಿ ಜೈನ ಧಾರ್ಮಿಕ ವಿಧಿಗಳಲ್ಲೊಂದಾದ ಶಾಸ್ತ್ರದಾನವನ್ನು ಕೈಗೊಂಡ ಹಲವರು ಅರಸಿಯರು ಅಪೂರ್ವ ಗ್ರಂಥಗಳನ್ನು ಪ್ರತಿಮಾಡಿಸಿರುವುದು, ಇಂದಿನ ಪೀಳಿಗೆಯವರೆಗೂ ಕೆಲವು ಮಹತ್ವದ ಗ್ರಂಥಗಳು ಉಳಿದು ಬರಲು ಕಾರಣವಾಗಿದೆ. ಇದೂ ಸಹ ಸಾಹಿತ್ಯ ಉಳಿಸಿ ಬೆಳೆಸುವ ಕಾರ್ಯಗಳಲ್ಲೊಂದಾಗಿದೆ.

ರಾಣಿಯರ ಆಸಕ್ತಿ, ಅಭಿರುಚಿ, ಅವರ ಕಾವ್ಯರಚನಾಸಾಮರ್ಥ್ಯ, ಪ್ರತಿಭೆಯನ್ನು ಗುರುತಿಸುವ ಹಾಗೂ ಅವರು ರಚಿಸಿರುವ ಕಾವ್ಯದ ವಸ್ತು ವಿವೇಚಿಸುವ ಸಲುವಾಗಿ ಕರ್ನಾಟಕದ ಅರಸಿಯರು ಸಾಹಿತ್ಯ ರಚನೆ, ಪೋಷಣೆ, ಸಾಹಿತಿಗಳ ಬೆಳವಣಿಗೆಗೆ ಪ್ರೋತ್ಸಾಹ ನೀಡಿರುವ ಸಮಗ್ರ ಕಾರ್ಯವನ್ನೂ ಗುರುತಿಸುವ ಪ್ರಯತ್ನ ಇಲ್ಲಿ ನಡೆಸಲಾಗಿದೆ.

ನಮ್ಮ ನಾಡಿನ ರಾಜಮನೆತನದವರು ತಮ್ಮ ಚರಿತ್ರೆಯನ್ನು ಕ್ರಮಬದ್ಧವಾಗಿ ದಾಖಲಿಸುವ ಕಡೆ ಗಮನಹರಿಸದೆ **'ಭಾರತೀಯರಿಗೆ ಚಾರಿತ್ರಿಕ ಪ್ರಜ್ಞೆ ಇಲ್ಲ'** ಎನ್ನುವ ಕಳಂಕಕ್ಕೆ ತುತ್ತಾಗಿದ್ದಾರೆ. ಆದರೆ ಬಹುತೇಕ ಸಂದರ್ಭಗಳಲ್ಲಿ, ದಾಖಲಿಸಿದ ವಿವರಗಳು ಉಳಿದು ಬರದೆ, ದೊರಕಿರುವ ಮಾಹಿತಿಗಳನ್ನು ಅರ್ಥೈಸಿಕೊಳ್ಳಲಾಗದೆಯೇ ತೊಡಕು ಎದುರಾಗುತ್ತಿದೆ. ವಿವಿಧೆಡೆಗಳಲ್ಲಿ ದೊರಕುವ ವಿಚಾರಗಳನ್ನು ಕ್ರೋಢೀಕರಿಸುವ ಕೆಲಸ ನಡೆಯಬೇಕಿದೆ. ಕೆಲವೊಂದು ಕಾವ್ಯಗಳಲ್ಲಿ ಪ್ರಾಸ್ತಾವಿಕವಾಗಿ ರಾಣಿಯರ ಕುರಿತಾದ ವಿಚಾರ ತಿಳಿದುಬರುತ್ತದೆ. ಉದಾಹರಣೆಗೆ, ಚಾಲುಕ್ಯ ಚಕ್ರವರ್ತಿ ಜಗದೇಕಮಲ್ಲ ಎರಡನೆಯ ಜಯಸಿಂಹನ ಪಿರಿಯರಸಿ ಸುಗ್ಗಲದೇವಿಯನ್ನು ಕುರಿತು ಕೆಲವು ವೀರಶೈವ ಕಾವ್ಯ

ಪುರಾಣಗಳು ಉಲ್ಲೇಖಿಸುತ್ತವೆ. ಇವಳು ತನ್ನ ಗುರು ದೇವರದಾಸಿಮಯ್ಯನ ಪವಾಡ ಸದೃಶ ಘಟನೆಯೊಂದಕ್ಕೆ ಕಾರಣಳಾಗಿ ಪಾಲ್ಕುರಿಕೆ ಸೋಮನಾಥನ **ಬಸವಪುರಾಣಮು,** ಷಡಕ್ಷರಿಯ **ಬಸವರಾಜ ವಿಜಯ,** ವಿರೂಪಾಕ್ಷಪಂಡಿತನ **ಚೆನ್ನಬಸವ ಪುರಾಣ,** ಭೀಮಕವಿಯ **ಬಸವಪುರಾಣ** ಕೃತಿಗಳಲ್ಲಿ ಪರಮ ಶಿವಭಕ್ತೆಯಾಗಿ ಕಂಡುಬರುತ್ತಾಳೆ. ಈ ಕಾವ್ಯಗಳಲ್ಲಿನ ವಿಚಾರವನ್ನೇ ಸೂಕ್ಷ್ಮವಾಗಿ ಲಕ್ಕಣದಂಡೇಶನ **ಶಿವತತ್ತ್ವ ಚಿಂತಾಮಣಿ,** ಶಾಂತಲಿಂಗದೇಶಿಕನ **ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ** ಮೊದಲಾದ ಕೃತಿಗಳಲ್ಲಿಯೂ ಕಾಣಬಹುದು. ಇದೇ ರೀತಿ ವಿಕ್ರಮಾದಿತ್ಯನ ರಾಣಿ ಲಕ್ಷ್ಮೀದೇವಿಗೆ ಸಂಬಂಧಿಸಿದ ಒಂದು ಪ್ರಸಂಗ ಕವಿ ಹರಿಹರನ **ತೆಲುಗು ಜೊಮ್ಮಯ್ಯನ ರಗಳೆ**ಯಲ್ಲಿ ಉಕ್ತವಾಗಿದೆ. ಇದೇ ವಿಚಾರ ಲಕ್ಕಣದಂಡೇಶನ **ಶಿವತತ್ವ ಚಿಂತಾಮಣಿ**ಯಲ್ಲಿಯೂ ಹೇಳಲಾಗಿದೆ. ಇಂಥ ಕಾವ್ಯಗಳಲ್ಲಿನ ರಾಣಿಯರ ವಿಚಾರಗಳೊಂದಿಗೆ ಆ ಪ್ರಸಂಗಗಳ ಚಾರಿತ್ರಿಕವಿಚಾರಗಳನ್ನು ಅವಲೋಕಿಸಲಾಗಿದೆ. ಇವುಗಳಲ್ಲದೆ ಪತಿಯೊಂದಿಗೆ ಹೆಸರಿಸಲಾದ ಕೆಲವು ರಾಣಿಯರು ಕಂಡುಬರುತ್ತಾರೆ ಉದಾಹರಣೆಗೆ, ನೇಮಿಚಂದ್ರನ **ಲೀಲಾವತಿ ಪ್ರಬಂಧ**ದಲ್ಲಿ ಉಲ್ಲೇಖಿತಳಾಗಿರುವ ರಟ್ಟವಂಶದ ರಾಣಿ ಚಂದ್ರಿಕಾದೇವಿ, ಕರ್ಣಪಾರ್ಯನ **ನೇಮಿನಾಥ ಪುರಾಣ**ದಲ್ಲಿ ಕಂಡುಬರುವ ಕರಹಾಟದ ಶಿಲಾಹಾರ ವಿಜಯಾದಿತ್ಯನ ಮಹಿಷಿ ಸೊನ್ನಲಾದೇವಿ, ಬಿಲ್ಹಣನ **ವಿಕ್ರಮಾಂಕದೇವಚರಿತ**ದ ರಾಣಿ ಚಂದಲಾದೇವಿ ಮೊದಲಾದವರು. ಇಲ್ಲಿ ರಾಣಿಯರನ್ನು ಪ್ರಾಸಂಗಿಕವಾಗಿ ಹೆಸರಿಸಲಾಗಿದ್ದರೂ, ಈ ರಾಣಿಯರ ಕುರಿತಾದ ಮತ್ತಷ್ಟು ವಿಚಾರ ಶಾಸನಗಳಲ್ಲಿಯೂ ತಿಳಿದುಬರುತ್ತದೆ. ಇಂಥ ಸಮಗ್ರ ಅಧ್ಯಯನಕ್ಕಾಗಿ ಕಾವ್ಯಗಳೊಂದಿಗೆ ಶಾಸನಗಳನ್ನು ಗಮನಿಸಲಾಗಿದೆ. ಅರಸಿಯರ ಉಲ್ಲೇಖವನ್ನು ನೀಡುವ ಕಾವ್ಯಗಳಲ್ಲಿ ಶಿಷ್ಟ ಹಾಗೂ ಜನಪದ ಕಾವ್ಯಗಳೆರಡೂ ದಾಖಲೆಯನ್ನು ನೀಡುವುದಾದ್ದರಿಂದ ಈ ಎಲ್ಲ ಬಗೆಯ ಸಾಹಿತ್ಯವನ್ನೂ ಕುರಿತು ಅಧ್ಯಯನ ನಡೆಸಲಾಗಿದೆ.

ವಿಚಾರ ಸ್ಪಷ್ಟತೆಗಾಗಿ ಕೆಲವು ಅಧ್ಯಾಯಗಳನ್ನಾಗಿ ರೂಪಿಸಿಕೊಂಡು ಅಧ್ಯಯನ ನಡೆಸಲಾಗಿದೆ. ಕನ್ನಡನಾಡಿಗೆ ಅರಸಿಯರು ನೀಡಿರುವ ಸಾಹಿತ್ಯಿಕ ಕೊಡುಗೆಯನ್ನು ಗಮನಿಸುವ ಈ ಅಧ್ಯಯನವು ಸಾಹಿತ್ಯ ಚರಿತ್ರೆಯ ಸ್ವರೂಪವನ್ನೇ ಹೊಂದಿದೆಯಾದ್ದರಿಂದ ಈ ಹಿಂದೆ ರಚಿತವಾಗಿರುವ ಅನೇಕ ಪ್ರಕಾರದ ಸಾಹಿತ್ಯ ಚರಿತ್ರೆಗಳಲ್ಲಿ, ಆಧುನಿಕಪೂರ್ವ ಕಾಲಘಟ್ಟಗಳಲ್ಲಿ ಮಹಿಳೆಯರು ನೀಡಿರುವ ಕೊಡುಗೆಯ ಪರಿಗಣನೆ ಹೇಗೆ ನಡೆದಿದೆ ಎನ್ನುವ ವಿಚಾರವನ್ನು **'ಕನ್ನಡ ಸಾಹಿತ್ಯ ಚರಿತ್ರೆಗಳಲ್ಲಿ ಲೇಖಕಿಯರ ಪ್ರತಿನಿಧೀಕರಣ'** ಎಂಬ ಎರಡನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಕನ್ನಡನಾಡಿನಲ್ಲಿ ಆಳ್ವಿಕೆ ನಡೆಸಿದ ಅರಸಿಯರ ಆಡಳಿತ, ಆಳ್ವಿಕೆ ನಡೆಸಿದ ಕಾಲ, ಪ್ರದೇಶ, ಆಳ್ವಿಕೆಯ ಸಮಯದಲ್ಲಿನ ಅವರ ಸಾಧನೆ, ವಾಣಿಜ್ಯ-ವ್ಯವಹಾರ ದೃಷ್ಟಿ, ಮೊದಲಾದ ವಿಚಾರಗಳನ್ನು ಕುರಿತು ಮೂರನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ತಮ್ಮ ಸಾಹಸಮಯ ಜೀವನ, ಸಮಾಜಮುಖಿ ಸಾಧನೆಗಳಿಂದಾಗಿ ಸಾಹಿತ್ಯಕ್ಕೆ ಪ್ರೇರಣೆಯಾದ ಅರಸಿಯರು ಕಾವ್ಯಗಳಲ್ಲಿ ಪ್ರಶಂಸೆಗೆ ಪಾತ್ರರಾಗಿದ್ದಾರೆ. ಕನ್ನಡ ಹಾಗೂ ಸಂಸ್ಕೃತ ಗ್ರಂಥಸ್ಥ ಸಾಹಿತ್ಯಗಳಷ್ಟೇ ಅಲ್ಲದೆ ಮೌಖಿಕ ಕಾವ್ಯಗಳಲ್ಲಿಯೂ ಅರಸಿಯರು ಬಣ್ಣಿತರಾಗಿದ್ದಾರೆ. ಇಂತಹ ಕಾವ್ಯಗಳಲ್ಲಿನ ಅರಸಿಯರ ವಿಚಾರಗಳನ್ನು ಕುರಿತಾಗಿ ನಾಲ್ಕನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಅರಸಿಯರು ಸಾಹಿತ್ಯ ರಚನೆಗೆ ನೀಡಿರುವ ಪ್ರೋತ್ಸಾಹವನ್ನು ಕುರಿತಂತೆ ನಡೆಸಿದ ವಿಚಾರವನ್ನು ಐದನೆಯ ಅಧ್ಯಾಯದಲ್ಲಿ ಎರಡು ವಿಭಿನ್ನ ವಿಭಾಗಗಳಲ್ಲಿ ಅವಲೋಕಿಸಲಾಗಿದೆ. ಇಲ್ಲಿ ಪ್ರಾಚೀನ ಸಾಹಿತ್ಯಕ್ಕೆ ಅರಸಿಯರ ಪ್ರೋತ್ಸಾಹ ಹಾಗೂ ಮಧ್ಯಕಾಲೀನ ಸಾಹಿತ್ಯಕ್ಕೆ ಅರಸಿಯರ ಪ್ರೋತ್ಸಾಹವನ್ನು ಪ್ರತ್ಯೇಕ ವಿಭಾಗಗಳಲ್ಲಿ ಗಮನಿಸಲಾಗಿದೆ. ಆರನೆಯ ಅಧ್ಯಾಯದಲ್ಲಿ ಸ್ವತಃ ಅರಸಿಯರೇ ರಚಿಸಿರುವ ಕನ್ನಡ ಕಾವ್ಯವನ್ನು ಕುರಿತಂತೆ ಹಾಗೂ ಏಳನೆಯ ಅಧ್ಯಾಯದಲ್ಲಿ ರಾಣಿಯರು ರಚಿಸಿರುವ ಸಂಸ್ಕೃತ ಕಾವ್ಯಗಳನ್ನು ಕುರಿತು ವಿವೇಚಿಸಲಾಗಿದೆ. ಈ ಅಧ್ಯಯನದ ಒಟ್ಟು ಫಲಿತದ ವಿಶ್ಲೇಷಣೆಯನ್ನು ಎಂಟನೆಯ ಅಧ್ಯಾಯ ಸಮಾರೋಪದಲ್ಲಿ ಮಂಡಿಸಲಾಗಿದೆ.

**ತಾತ್ವಿಕತೆ:** ಪ್ರಸ್ತುತ ಸಂಶೋಧನೆಯು ಅಂತರ್ಶಿಸ್ತೀಯ ಅಧ್ಯಯನವಾಗಿದೆ. ಆಕರಗಳಿಗೆ ಚರಿತ್ರೆಯ ಗ್ರಂಥಗಳು, ಶಾಸನಗಳು, ಸಾಹಿತ್ಯ ಕೃತಿಗಳು ಮತ್ತು ಜಾನಪದ ಈ ಎಲ್ಲ ಕ್ಷೇತ್ರಗಳನ್ನು ಅವಲಂಬಿಸಲಾಗಿದೆ. ಈಗಾಗಲೇ ಚರಿತ್ರೆಯ

ಕೃತಿಗಳಲ್ಲಿ ಕರ್ನಾಟಕದ ಅರಸಿಯರ ಕೊಡುಗೆಯ ಬಗ್ಗೆ ಏನು ದಾಖಲಾಗಿದೆ? ಯಾವ ಮತ್ತು ಯಾರ ಕುರಿತು ಮಾಹಿತಿಗಳು ಅಸಂಪೂರ್ಣವಾಗಿವೆ ಅಥವಾ ಕೊರತೆಯಾಗಿವೆ ಎಂಬುದನ್ನು ಗಮನಿಸಿ, ಅದಕ್ಕೆ ಇತರ ಆಕರಗಳ ಆಧಾರಗಳಿಂದ ದೊರೆಯುವ ಮಾಹಿತಿಗಳಿಂದ ಅರಸಿಯರ ರಾಜಕೀಯ, ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಕೊಡುಗೆಗಳನ್ನು ದಾಖಲಿಸುವ ಪ್ರಯತ್ನವನ್ನು ಮಾಡಲಾಗಿದೆ. ಅದೇ ರೀತಿಯಲ್ಲಿ, ಸಾಹಿತ್ಯಚರಿತ್ರೆಯ ಕೃತಿಗಳು ದಾಖಲಿಸದ ಅರಸಿಯರು ಮತ್ತು ಅವರ ಸಾಹಿತ್ಯಿಕ ಕೊಡುಗೆಯನ್ನು ಇಲ್ಲಿ ವಿಶೇಷವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಪ್ರಸಿದ್ಧ ವಚನ, ರಗಳೆ ಕಾವ್ಯಗಳು ಪ್ರಾಸ್ತಾವಿಕವಾಗಿ ಬಿಂಬಿಸುವ ಅರಸಿಯರ ಬದುಕಿನ ಘಟನೆಗಳು ಅರಸಿಯರು ವಹಿಸಿದ ಮಹತ್ವದ ಪಾತ್ರಗಳನ್ನು ಚರ್ಚೆಗೆ ಒಳಪಡಿಸಲಾಗಿದೆ. ಸಂಸ್ಕೃತ ಸಾಹಿತ್ಯದಲ್ಲಿ ಎಡೆಪಡೆದ ಕರ್ನಾಟಕದ ಮಹಿಳೆಯರ ವೈಶಿಷ್ಟ್ಯ ಹಾಗೂ ಅವರು ಸಾಹಿತ್ಯದಲ್ಲಿ ಬಿಂಬಿತರಾಗಿರುವ ಪರಿಯನ್ನು ವಿಶ್ಲೇಷಿಸಲಾಗಿದೆ. ಜನಪದ ಸಾಹಿತ್ಯ ಪ್ರಕಾರಗಳಲ್ಲಿ ಉಲ್ಲೇಖಿತವಾದ ಅರಸಿಯರ ಕುರಿತ ಮಾಹಿತಿಗಳನ್ನು ಅಧ್ಯಯನಕ್ಕೆ ಒಳಪಡಿಸಿ, ಜನಪದರಿಗೆ ಅರಸಿಯರಲ್ಲಿ ಯಾರು ಮತ್ತು ಏಕೆ ಮುಖ್ಯರಾಗಿದ್ದಾರೆ ಎಂಬುದನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

### ೧.೩ ಅಧ್ಯಯನದ ವ್ಯಾಪ್ತಿ

ಕರ್ನಾಟಕದ ಅರಸಿಯರನ್ನು ಕುರಿತಾದ ಈ ಅಧ್ಯಯನವು ಸಮಗ್ರವಾಗಿ ನಡೆಯಬೇಕೆಂಬ ಉದ್ದೇಶದಿಂದ ಈ ಪ್ರಬಂಧಕ್ಕೆ ಕಾಲದ ಪರಿಮಿತಿಯನ್ನಾಗಲಿ, ರಾಜಕೀಯ ಮನೆತನದ ಪರಿಮಿತಿಯನ್ನಾಗಲಿ ರೂಪಿಸದೆ ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ಕನ್ನಡದ ಮೊದಲ ರಾಜಮನೆತನದಿಂದ ಬ್ರಿಟಿಷರ ಅಧಿಕಾರದೊಂದಿಗೆ ಲೀನವಾಗುವವರೆಗಿನ ಎಲ್ಲ ರಾಜಮನೆತನಗಳ ಅರಸಿಯರ ಸಾಹಿತ್ಯಿಕ ಕಾರ್ಯಗಳನ್ನು ಇಲ್ಲಿ ಗಮನಿಸಲಾಗಿದೆ.

ಕರ್ನಾಟಕದಲ್ಲಿ ಬ್ರಿಟೀಶರ ಆಳ್ವಿಕೆ ಆರಂಭವಾದ ಅನಂತರವೂ ಅವರ ಅಧೀನದಲ್ಲಿ ಮೈಸೂರು ಸಂಸ್ಥಾನವನ್ನೂ ಒಳಗೊಂಡಂತೆ, ಸುಗುಟೂರು, ಸುರಪುರ, ಹರಪ್ಪನಹಳ್ಳಿ ಮೊದಲಾದ ಪಾಳೆಯಗಾರ ಮನೆತನದವರು ಆಡಳಿತವನ್ನು ನಡೆಸುತ್ತಿದ್ದರು. ಈ ಸಂದರ್ಭದಲ್ಲಿ ಮೈಸೂರಿನ ವಾಣೀವಿಲಾಸ ಸನ್ನಿಧಾನದ ಕೆಂಪನಂಜಮ್ಮಣ್ಣಿ, ಹರಪ್ಪನಹಳ್ಳಿ ಪಾಳೆಯಗಾರರ ಮನೆತನದ ನೀಲಮ್ಮ, ಸುಗುಟೂರು ಮನೆತನದ ಗೌರಮ್ಮ, ಸುರಪುರದ ಈಶ್ವರಮ್ಮ ಮೊದಲಾದವರು ರಾಜ್ಯಾಡಳಿತದಲ್ಲಿ ಸಕ್ರಿಯವಾಗಿ ಪಾಲುಗೊಂಡವರಾಗಿದ್ದರು. ಆದುದರಿಂದ ಈ ಅವಧಿಯವರೆಗೂ ಅಧ್ಯಯನದ ವ್ಯಾಪ್ತಿಯನ್ನು ವಿಸ್ತರಿಸಲಾಗಿದೆ.

ಇಲ್ಲಿ ಕರ್ನಾಟಕದ ಅರಸಿಯರು ಎಂಬ ಪದವನ್ನು ವ್ಯಾಪಕವಾದ ಅರ್ಥದಲ್ಲಿ ಬಳಸಿಕೊಳ್ಳಲಾಗಿದೆ. ರಾಜನ ಪಟ್ಟದರಸಿ, ಪಿರಿಯರಸಿ, ಕಿರಿಯರಸಿ, ರಾಜಕುಮಾರಿ, ರಾಜಮಾತೆ ಹೀಗೆ ಅಂತಃಪುರದ ಮಹಿಳೆಯರೆಲ್ಲರ ಸಾಹಿತ್ಯಿಕ ಕೊಡುಗೆಗಳನ್ನು ಇಲ್ಲಿ ಗಮನಿಸಲಾಗಿದೆ. ಜೊತೆಗೆ ಚಕ್ರವರ್ತಿ, ಸಾಮಂತ ಅರಸು, ಮಾಂಡಳೀಕರು, ಪಾಳೆಯಗಾರರು, ಮನ್ನೆಯರಸರು ಈ ಎಲ್ಲ ಮನೆತನದ ಮಹಿಳೆಯರೂ ಅಧ್ಯಯನದ ವ್ಯಾಪ್ತಿಗೆ ಬರುತ್ತಾರೆ. ಅಲ್ಲದೆ, ವಿಶೇಷ ಕಾರ್ಯಗಳನ್ನು ಕೈಗೊಂಡು, ವಿಶಿಷ್ಟ ಕೊಡುಗೆ ನೀಡಿದ ಗೌಡತಿ, ನಾಗತಿಯರ ಸಾಧನೆಗಳನ್ನೂ ಇಲ್ಲಿನ ವ್ಯಾಪ್ತಿಯೊಳಗೆ ತೆಗೆದುಕೊಳ್ಳಲಾಗಿದೆ.

ಕನ್ನಡ ನಾಡಿನಲ್ಲಿ ವಿಭಿನ್ನ ಕಾಲಘಟ್ಟದಲ್ಲಿ, ವಿಭಿನ್ನ ಮನೆತನಕ್ಕೆ ಸೇರಿದ ನೂರಾರು ರಾಣಿಯರು ಆಳ್ವಿಕೆ ನಡೆಸಿದ್ದಾರೆ. ಅನೇಕ ಕವಿಗಳಿಗೆ ಆಶ್ರಯ ನೀಡಿ, ಉತ್ತಮ ಕಾವ್ಯಗಳ ರಚನೆಗೆ ಕಾರಣರಾದ ರಾಣಿಯರಿದ್ದಾರೆ. ಸುಮಾರು ಅರಸಿಯರು ಸ್ವತಃ ಸಾಹಿತ್ಯ ರಚನೆಗೆ ತೊಡಗಿದ್ದಾರೆ. ಇವರಲ್ಲಿ ಕೆಲವರು ಸಂಸ್ಕೃತ ಕಾವ್ಯಗಳನ್ನು ರಚಿಸಿದ್ದರೆ, ಕೆಲವರು ಕನ್ನಡದಲ್ಲಿ ಧಾರ್ಮಿಕ ಗ್ರಂಥಗಳನ್ನು ರಚಿಸಿದ್ದಾರೆ. ನಾಟಕ, ಚಂಪೂಕಾವ್ಯ, ಸಾಂಗತ್ಯ ಮೊದಲಾದ ಪ್ರಕಾರಗಳಲ್ಲಿ ರಚಿತವಾಗಿರುವ ರಾಣಿಯರು ರಚಿಸಿದ ಕಾವ್ಯಗಳಲ್ಲಿ ಕೆಲವು ಐತಿಹಾಸಿಕ ಮಹತ್ವವನ್ನು ಹೊಂದಿದ್ದರೆ, ಕೆಲವು

ಕಾವ್ಯಗಳು ಧಾರ್ಮಿಕ ಮಹತ್ವಗಳನ್ನು ಪಡೆದಿವೆ. ಈ ಪ್ರಬಂಧದಲ್ಲಿ ಕನ್ನಡನಾಡಿನ ರಾಣಿಯರು ರಚಿಸಿರುವ, ರಚನೆಗೆ ಪ್ರೋತ್ಸಾಹ ನೀಡಿ ಬರೆಯಿಸಿರುವ ಕನ್ನಡ ಸಾಹಿತ್ಯದೊಂದಿಗೆ ಸಂಸ್ಕೃತಕಾವ್ಯಗಳನ್ನೂ ಗಮನಿಸಲಾಗಿದೆ. ಜೊತೆಗೆ ಶಿಷ್ಟ, ಜನಪದ, ಶಾಸನ ಸಾಹಿತ್ಯಗಳಲ್ಲಿ ಕಂಡುಬರುವ ಅರಸಿಯರ ಕುರಿತಾದ ಮಾಹಿತಿಗಳನ್ನು ಗಮನಿಸಲಾಗಿದೆ.

**ಶೀರ್ಷಿಕೆ**: 'ಆಧುನಿಕ ಪೂರ್ವ ಸಾಹಿತ್ಯಕ್ಕೆ ಕರ್ನಾಟಕದ ಅರಸಿಯರ ಕೊಡುಗೆ' ಎಂಬ ಈ ಶೀರ್ಷಿಕೆಯಲ್ಲಿ ಆಧುನಿಕ ಪೂರ್ವ ಎಂಬುದು ಕಾಲಘಟ್ಟವನ್ನು ಸೂಚಿಸುತ್ತದೆ. ಈ ಅಧ್ಯಯನದಲ್ಲಿ ಸಮಗ್ರತೆಯ ದೃಷ್ಟಿಯಿಂದ, ಇಂತಿಷ್ಟೇ ರಾಜಮನೆತನಗಳು ಎಂದಾಗಲಿ, ಇಂತಹುದೇ ಕಾಲಘಟ್ಟದ ಅರಸಿಯರೆಂದಾಗಲೀ ನಿರ್ಬಂಧ ನಿಯಮಿಸಿಕೊಂಡಿಲ್ಲ. ಅಂತೆಯೇ ಸಾಹಿತ್ಯದ ವಿಷಯದಲ್ಲಿಯೂ ಕೂಡ ಕನ್ನಡ, ಸಂಸ್ಕೃತ ಕಾವ್ಯಗಳನ್ನು ಬಳಸಿಕೊಂಡಿರುವಂತೆ, ಕನ್ನಡ ಸಾಹಿತ್ಯದಲ್ಲಿ ಹಳಗನ್ನಡ ಹಾಗೂ ನಡುಗನ್ನಡದ ಸಾಹಿತ್ಯವನ್ನು ಗಮನಿಸಲಾಗಿದೆ. ಹೊಸಗನ್ನಡದ ಸಾಹಿತ್ಯ ಈ ವ್ಯಾಪ್ತಿಗೆ ಬರುವುದಿಲ್ಲವಾದ್ದರಿಂದ, ಆಧುನಿಕ ಸಾಹಿತ್ಯದ ಆರಂಭದವರೆಗೂ ಎನ್ನುವ ಉತ್ತರದ ಗಡಿಯನ್ನು ರೂಪಿಸಿಕೊಳ್ಳಲಾಗಿದೆ. ಶೀರ್ಷಿಕೆಯಲ್ಲಿ ಹಳಗನ್ನಡ, ನಡುಗನ್ನಡ ಹಾಗು ಸಂಸ್ಕೃತ ಸಾಹಿತ್ಯ – ಎಂದು ಪ್ರತ್ಯೇಕವಾಗಿ ಹೆಸರಿಸದೆ, ಆಧುನಿಕ ಪೂರ್ವ ಎಂಬ ಪದದಿಂದ ಸೂಚಿಸಲಾಗಿದೆ. ಇಲ್ಲಿ ಪ್ರಾಚೀನ ಕಾಲದಿಂದ ಆಧುನಿಕಕಾಲ ಆರಂಭವಾಗುವವರೆಗಿನ ಕಾಲಮಾನವನ್ನು ಪರಿಗಣಿಸಲಾಗಿದೆ.

ಕನ್ನಡ ಸಾಹಿತ್ಯದಲ್ಲಿ ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದ ಅನಂತರ ಆಧುನಿಕಸಾಹಿತ್ಯವನ್ನು ಗುರುತಿಸಲಾಗುತ್ತದೆ. ಕನ್ನಡದಲ್ಲಿ ಅಚ್ಚಿನಯುಗ ಪ್ರಾರಂಭವಾದ ನಂತರದ ಕಾಲವನ್ನು ಆಧುನಿಕ ಕಾಲ ಎಂದು ಗುರುತಿಸುವ ಹಿನ್ನೆಲೆಯಲ್ಲಿ, ಅದಕ್ಕೂ ಪೂರ್ವದ ಕಾಲವನ್ನು ಆಧುನಿಕಪೂರ್ವಕಾಲ ಎನ್ನಬಹುದು. ಕವಿಯ ಕಾಲವನ್ನು ಮಾನದಂಡವನ್ನಾಗಿಸಿಕೊಂಡ, ಕನ್ನಡ ಸಾಹಿತ್ಯ ಚರಿತ್ರೆಯಲ್ಲಿನ ವಿಭಜನಾ ಕ್ರಮದ ಪ್ರಕಾರ ಹೇಳುವುದಾದಲ್ಲಿ ಮುದ್ದಣನ ಕಾಲದ ನಂತರವೇ ಆಧುನಿಕ ಸಾಹಿತ್ಯವನ್ನು ಗುರುತಿಸಲಾಗುತ್ತದೆ. ಈ ಮಾನದಂಡಗಳು ವಿಭಿನ್ನ ಸಾಹಿತ್ಯಚರಿತ್ರೆಗಳಲ್ಲಿ ವಿಭಿನ್ನವಾಗಿ ಬಳಸಿಕೊಂಡಿರುವರಾದರೂ, ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧಕ್ಕೂ ಹಿಂದಿನ ಕಾಲಘಟ್ಟವನ್ನು 'ಆಧುನಿಕ ಪೂರ್ವ' ಎಂದು ಗುರುತಿಸಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧ ಆರಂಭವಾಗುವವರೆಗಿನ ಕಾಲವನ್ನು ಉತ್ತರದ ಗಡಿಯಾಗಿರಿಸಿಕೊಂಡಿರುವುದರಿಂದ, 'ಆಧುನಿಕಪೂರ್ವ ಸಾಹಿತ್ಯಕ್ಕೆ ಕರ್ನಾಟಕದ ಅರಸಿಯರ ಕೊಡುಗೆ' ಎಂಬ ಶೀರ್ಷಿಕೆಯನ್ನು ನೀಡಲಾಗಿದೆ.

**ಆಕರಗಳು ಮತ್ತು ಸಮಸ್ಯೆ:** ಈ ಹಿಂದೆಯೇ ತಿಳಿಸಿರುವಂತೆ ಈ ಅಧ್ಯಯನದಲ್ಲಿ ಕಾವ್ಯಗಳು ಹಾಗೂ ಶಾಸನಗಳು ಪ್ರಮುಖ ಆಕರವಾಗಿವೆ. ಇದಲ್ಲದೆ ವಿದೇಶಿ ಪ್ರವಾಸಿಗರ ಬರಹಗಳು, ಕೈಫಿಯತ್ತು ಮೊದಲಾದವುಗಳನ್ನು ಪೂರಕ ಮಾಹಿತಿಗಾಗಿ ಬಳಸಿಕೊಳ್ಳಲಾಗಿದೆ. ಆದರೆ ಪ್ರಸ್ತುತ ಅಧ್ಯಯನಕ್ಕೆ ಅಗತ್ಯವಿರುವ ಕೆಲವು ಆಕರಗಳನ್ನು ಕಲೆಹಾಕುವುದರಲ್ಲಿಯೇ ಸಮಸ್ಯೆಗಳಿವೆ. ಕೆಲವು ಕಾವ್ಯಗಳು ಮುದ್ರಣ ಕಾಣದೆ, ತಾಳೆಗರಿಯಲ್ಲಿಯೇ ಉಳಿದಿವೆ. ಇಂತಹ ತಾಡಪತ್ರಗಳು ಪ್ರಯತ್ನಿಸಿದರೂ ನೋಡಲು ಕೂಡ ದೊರಕದೆ ಇರುವುದು ಸಮಸ್ಯೆಯಾಗಿದೆ. ಇವುಗಳಲ್ಲಿ ಬಂಗ ಅರಸು ಮನೆತನಕ್ಕೆ ಸೇರಿದ ಅರಸಿ ಚಂದ್ರಮತಿ ಪೋಷಿತ ಕವಿ ಧರಣೀಂದ್ರ ರಚಿಸಿರುವ ಕೆಲವು ಕೃತಿಗಳು, ಚೌಟ ಅರಸಿ ಚೆನ್ನಮ್ಮಳ ಪೋಷಿತ ಕವಿ ಸುರಾಲ ರಚಿಸಿರುವ ಕೃತಿ, ಅಬ್ಬಕ್ಕಳ ಉಲ್ಲೇಖವಿರುವ ರತ್ನಶೇಖರ ಚರಿತ್ರೆ, ಮೊದಲಾದ ಕೃತಿಗಳ ಹಸ್ತಪ್ರತಿಗಳು ಇಂದಿಗೆ ಅಲಭ್ಯವಾಗಿವೆ. ಇದರಂತೆಯೇ ಸುರಪುರದ ಅರಸಿ ರಂಗಮ್ಮ ರಚಿಸಿರುವ ಕೀರ್ತನೆಗಳು ಒಂದೆಡೆ ದೊರಕುವುದಿಲ್ಲ. ಇದು ಜನಪದ ಗೀತೆಯಂತೆ ಹಾಡಲು ಬರುವವರಿಂದ ಸಂಗ್ರಹಿಸುವ ಪರಿಸ್ಥಿತಿಯಲ್ಲಿದೆ. ಅರಸಿಯ ಅಂಕಿತ ದೊರಕಿರುವುದರಿಂದ, ಅದರ ಆಧಾರದಿಂದ ಕೀರ್ತನೆಗಳನ್ನು ಸಂಗ್ರಹಿಸಬೇಕಾಗಿದೆ. ಕೆಲವು ಸ್ವರವಚನಗಳನ್ನು ರಚಿಸಿರುವ ಮಹಿಳೆಯರು ದೊರಕುತ್ತಾರೆ, ಆದರೆ ಅಂಕಿತವೊಂದನ್ನು ಹೊರತುಪಡಿಸಿ ಮತ್ಯಾವ ವೈಯಕ್ತಿಕ ವಿವರಗಳು ದೊರಕುವುದಿಲ್ಲ.

ಕರ್ನಾಟಕದಲ್ಲಿ ಇತಿಹಾಸದ ಪುನಾರಚನೆಗೆ ಬಳಸಲಾಗುವ ಪ್ರಮುಖ ಸಾಧನ ಶಾಸನಗಳು. ಕರ್ನಾಟಕದಲ್ಲಿ ದೊರಕುವ ವೈವಿಧ್ಯಮಯವಾದಷ್ಟು ಶಾಸನಗಳು ಬಹುಶಃ ಬೇರೆಲ್ಲೂ ದೊರಕುವುದಿಲ್ಲ. ಆದರೆ ಈ ಶಾಸನಗಳ ಸಂಗ್ರಹ ಕಾರ್ಯ ಇನ್ನೂ ಸಮಗ್ರವಾಗಿ ನಡೆದಿಲ್ಲ. ಶಾಸನಗಳು ಅಧಿಕೃತ ಮಾಹಿತಿಗಳನ್ನೊಳಗೊಂಡ ಆಕರವಾಗಿವೆ. ಆದರೆ ಕೆಲವು ಜಿಲ್ಲೆಯ ಶಾಸನಗಳು ಒಂದೆಡೆ ಸಂಗ್ರಹವಾಗಿರದೆ ಹಲವಾರು ಸಂಪುಟಗಳಲ್ಲಿ ಚದುರಿಹೋಗಿದೆ. ಹಳೆಮೈಸೂರು ವಿಭಾಗದ ಶಾಸನಗಳೆಲ್ಲ ಎಪಿಗ್ರಾಫಿಯ ಕರ್ನಾಟಿಕದಲ್ಲಿ ಒಂದೆಡೆ ಸಿಗುತ್ತವೆ. ಜೊತೆಗೆ ಹಂಪಿ ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟಗಳು ಕೆಲವು ಉತ್ತರ ಕರ್ನಾಟಕ ಜಿಲ್ಲೆಗಳ ಶಾಸನಗಳ ಅಧ್ಯಯನಕ್ಕೆ ಉತ್ತಮ ಆಕರವಾಗಿವೆ. ಆದರೆ ದಕ್ಷಿಣ ಕನ್ನಡ, ಉತ್ತರ ಕನ್ನಡ, ಕರಾವಳಿಯ ಶಾಸನಗಳು, ಗೋವೆಯನ್ನು ಆಳುತ್ತಿದ್ದ ಕನ್ನಡ ಅರಸರ ಶಾಸನಗಳು, ಮಹಾರಾಷ್ಟ್ರದ ಕೆಲವು ಪ್ರದೇಶಗಳ ಕನ್ನಡ ಶಾಸನಗಳು ಸಮಗ್ರವಾಗಿ ದೊರಕುವುದಿಲ್ಲ. ಕೆಲವು ಶಾಸನಗಳು ಪ್ರಕಟವಾಗಿವೆಯಾದರೂ ಒಂದೆಡೆ ದೊರಕುವುದಿಲ್ಲ. ಈ ಕೆಲವು ಶಾಸನಗಳು ಕರ್ನಾಟಕ ಇನ್ಸ್ಕ್ರಿಪ್ಶನ್ಸ್ ಸಂಪುಟಗಳು, ಎಪಿಗ್ರಾಫಿಯಾ ಇಂಡಿಕಾ ಸಂಪುಟಗಳು, ಜರ್ನಲ್ಸ್ ಆಫ್ ಬಾಂಬೆ ರಾಯಲ್ ಏಷ್ಯಾಟಿಕ್ ಸೊಸೈಟಿ ಸಂಪುಟಗಳು, ಸೌತ್‌ಇಂಡಿಯನ್ ಇನ್ಸ್ಕ್ರಿಪ್ಶನ್ಸ್ ಸಂಪುಟಗಳು ಮೊದಲಾದೆಡೆಗಳಲ್ಲಿ ಬೆರೆತು ಹೋಗಿದೆ. ಇಲ್ಲಿನ ಕೆಲವು ಶಾಸನ ಸಂಪುಟಗಳಲ್ಲಿ ಕನ್ನಡ ಶಾಸನಗಳು ಲಾಟಿನ್ (ಇಂಗ್ಲಿಶ್) ಲಿಪಿಯಲ್ಲಿ ಪ್ರಕಟವಾಗಿರುವುದನ್ನು ಕನ್ನಡಕ್ಕೆ ಲಿಪ್ಯಂತರ ಗೊಳಿಸಿಕೊಂಡು ಓದಬೇಕಾಗಿದೆ.

ಇತಿಹಾಸದ ಕೆಲವು ದಾಖಲಾತಿಗಳು ಕೂಡ ಗೊಂದಲ ಸೃಷ್ಟಿಸಿ ಅಧ್ಯಯನಕ್ಕೆ ತೊಡಕು ಉಂಟುಮಾಡುತ್ತವೆ. ಉದಾಹರಣೆಗೆ, ಕರ್ನಾಟಕದ ಕರಾವಳಿ ತೀರದ ರಾಣಿಯರ ಕುರಿತಾಗಿ ನಡೆದಿರುವ ಅಧ್ಯಯನವು ಸಮರ್ಪಕವಾಗಿಲ್ಲ ಎಂದೇ ಹೇಳಬಹುದು. ನಡೆದಿರುವ ಕೆಲವು ಅಧ್ಯಯನಗಳು ಗೊಂದಲಗಳನ್ನು ಬಗೆಹರಿಸಲು ಸಹಕಾರಿಯಾಗುವುದಿಲ್ಲ. ಚೌಟ ಅರಸಿ ಅಬ್ಬಕ್ಕ ಒಬ್ಬಳೇ, ಇಬ್ಬರೆ ಎನ್ನುವುದು ಇನ್ನೂ ಅಸ್ಪಷ್ಟವಾಗಿರುವಾಗ ಕೆಲವರು ಈ ಮನೆತನದಲ್ಲಿ ನಾಲ್ಕು ಜನ ಅಬ್ಬಕ್ಕರನ್ನು ಗುರುತಿಸಿದ್ದಾರೆ. ಅಂತೆಯೇ ಸಾಳ್ವ ಮನೆತನದ ರಾಣಿ ಭೈರಾದೇವಿಯ ವಿಚಾರದಲ್ಲಿಯೂ ಗೊಂದಲಗಳಿರುವುದನ್ನು ಕಾಣಬಹುದು. ಇಬ್ಬರಿಂದ ಏಳುಮಂದಿಯವರೆಗೂ ಈ ಹೆಸರಿನ ಅರಸಿಯರನ್ನು ಗುರುತಿಸಿದ್ದಾರೆ. ಇಂತಹ ಹಲವಾರು ಕೊರತೆಗಳು ಅಧ್ಯಯನದ ವೇಳೆಯಲ್ಲಿ ಸಮಸ್ಯೆಗಳನ್ನು ತಂದೊಡ್ಡಿವೆ.

### ೧.೪ ಈ ವಿಷಯದಲ್ಲಿ ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ

ಕನ್ನಡದ ಮಹಿಳೆಯರ ಸಾಹಿತ್ಯಿಕ ಕೊಡುಗೆಯನ್ನು ಗಮನಿಸುವ ಕೆಲವು ಅಧ್ಯಯನಗಳು ನಡೆದು ಬಂದಿವೆಯಾದರೂ, ಅವುಗಳಲ್ಲಿ ಬಹುಪಾಲು ಆಧುನಿಕ ಕಾಲಘಟ್ಟಕ್ಕಷ್ಟೇ ಸೀಮಿತವಾಗಿವೆ. ಪ್ರಾಚೀನ ಕಾಲದ ಮಹಿಳೆಯರನ್ನು ಗುರುತಿಸುವ ಪ್ರಬಂಧಗಳು ಅತ್ಯಲ್ಪವೆನ್ನಬಹುದು. ಅವುಗಳಲ್ಲಿ ಚೆನ್ನಕ್ಕ ಎಲಿಗಾರ ಅವರ **'ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ'**, ಎಂ.ಬಿ.ಪದ್ಮ ಅವರ 'The Position of women in Medieval Karnataka', ಎಸ್. ಸರಸ್ವತಿ ಅವರ The Position of women during Vijayanagar Period (೧೩೩೬–೧೬೪೬), ರತ್ನಮ್ಮ ಅವರ **'ಕನ್ನಡ ನಾಡಿನ ವೀರ ಜೈನ ಮಹಿಳೆಯರು'**, ಡಿ.ಕೆ.ವಾಣಿಶ್ರೀ ಅವರ **'ಕರ್ನಾಟಕದ ಚರಿತ್ರೆ ಮತ್ತು ಸ್ತ್ರೀವಾದಿ ನೆಲೆಗಳು'**, ವಿಜಯಕುಮಾರಿ ಗುರುಲಿಂಗಪ್ಪ ಅವರ **'ಕನ್ನಡದಲ್ಲಿ ಮಹಿಳಾ ಕಾವ್ಯ ಪರಂಪರೆ – ಒಂದು ಅಧ್ಯಯನ'**, ವಿದ್ಯಾವತಿ ಪಾಟೀಲ ಅವರ **'ಸ್ತ್ರೀ ವಚನಕಾರ್ತಿಯರ ವಚನಗಳಲ್ಲಿ ಸ್ತ್ರೀ ಸಂವೇದನೆ'**, ವೀಣಾ ಆಚಾರ್ಯ ಅವರ **'ಅಕ್ಕಮಹಾದೇವಿ ವಚನಗಳಲ್ಲಿ ಸ್ತ್ರೀ ಸಂವೇದನೆ'**, ವಿನಯ ಜಿ.ನಾಯಕ ಅವರ **'ಕನ್ನಡದಲ್ಲಿ ಮಹಿಳಾ ಸಾಹಿತ್ಯದ ವಿಕಾಸದ ಘಟ್ಟಗಳು'**, ಸರೋಜಿನಿ ಮಹಿಷಿ ಅವರ **'ಕರ್ನಾಟಕದ ಕವಯಿತ್ರಿಯರು'** ಗಮನಾರ್ಹ ಕೃತಿಗಳಾಗಿವೆ.

ಪ್ರಸ್ತುತ ಪ್ರಬಂಧವು ರಾಜವಂಶದ ಪುರುಷರ ಸಾಧನೆಯ ಅಡಿಯಲ್ಲಿ ಮರೆಯಾಗಿರುವ ಅರಸುಕುಲದ ಮಹಿಳೆಯರ ಸಾಧನೆಯನ್ನು ಗುರುತಿಸುವೆಡೆ ಗಮನಹರಿಸುವ ನಿಟ್ಟಿನಲ್ಲಿ ನಡೆಯಲಿದ್ದು, ಮೇಲಿನ ಈ ಎಲ್ಲ ವಿಚಾರಗಳಿಗಿಂತ ಭಿನ್ನವಾಗಿದೆ.

### ೧.೫ ಪ್ರಸ್ತುತ ಅಧ್ಯಯನದ ಮಹತ್ವ

ಪ್ರಸ್ತುತ ಸಂಶೋಧನೆಯು ಮಹಿಳಾ ಅಧ್ಯಯನಕ್ಕೆ ವಿಶಿಷ್ಟ ಕೊಡುಗೆಯಾಗಬಲ್ಲದು ಎಂದು ಭಾವಿಸಲಾಗಿದೆ. ಇತಿಹಾಸ, ಸಾಹಿತ್ಯ, ಜಾನಪದ ಈ ಎಲ್ಲ ಶಿಸ್ತುಗಳ ಅಧ್ಯಯನದ ಸ್ವರೂಪವನ್ನು ಒಳಗೊಂಡು, ಮಹಿಳೆಯರ ಅದರಲ್ಲೂ, ಅರಸಿಯರ ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಕೊಡುಗೆಗಳ ಸ್ವರೂಪ ಮತ್ತು ಮಹತ್ವವನ್ನು ಈ ಅಧ್ಯಯನದಿಂದ ರೂಪಿಸಬಹುದಾಗಿದೆ. ಇದು ಮುಂದಿನ ದಿನಗಳಲ್ಲಿ ಸಾಹಿತ್ಯ, ಇತಿಹಾಸ ಮತ್ತು ಮಹಿಳಾ ಅಧ್ಯಯನ ಈ ಎಲ್ಲ ಕ್ಷೇತ್ರಗಳ ಅಭ್ಯಾಸಿಗಳಿಗೆ ಹಾಗೂ ಆಸಕ್ತರಿಗೆ ಮುಖ್ಯ ಆಕರ ಗ್ರಂಥವಾಗಬಲ್ಲದು.

ಶಿಷ್ಟಕಾವ್ಯ, ಜನಪದ ಕಾವ್ಯ, ಶಾಸನಸಾಹಿತ್ಯ ಮೊದಲಾದೆಡೆಗಳಲ್ಲಿ ಚದುರಿಹೋಗಿರುವ ವಿಚಾರಗಳನ್ನು ಒಂದೆಡೆ ಸೇರಿಸಿ ಲಭ್ಯವಿರುವ ಇತಿಹಾಸದ ವಿಚಾರಗಳಿಗೆ ಮತ್ತಷ್ಟು ಪುಷ್ಟಿಯನ್ನೊದಗಿಸುವ, ಕಣ್ಮರೆಯಾಗಿರುವ ವಿಚಾರಗಳನ್ನು ಸಾಹಿತ್ಯಗಳಲ್ಲಿ ಹುಡುಕುವ ಪ್ರಯತ್ನವನ್ನು ಇಲ್ಲಿ ನಡೆಸಲಾಗಿದೆ. ಜೊತೆಗೆ ಇತಿಹಾಸವು ಕೇವಲ ಪುರುಷರಿಂದ ಮಾತ್ರ ನಿರ್ಮಿತವಾದುದಲ್ಲ, ಇದರಲ್ಲಿ ಮಹಿಳೆಯರ ಪಾಲೂ ಇದೆ ಎನ್ನುವ ವಿಚಾರವನ್ನು ತಿಳಿಸುವ ಕಾವ್ಯದ ಅಂಶಗಳನ್ನು ಇಲ್ಲಿ ಗುರುತಿಸಿ ತೋರಿಸಲಾಗಿದೆ.

ಇತಿಹಾಸ ಎಂಬುದು ನಡೆದ ಘಟನೆಗಳನ್ನು ತಿಳಿಸುವ ವಿಚಾರವಾಗಿದೆ. ಪುರುಷಪ್ರಧಾನ ಸಮಾಜದಲ್ಲಿ ಇತಿಹಾಸವೆಂದರೆ ಕೇವಲ ಪುರುಷರ ವಿಚಾರವನ್ನೇ ಶೋಧಿಸಿ, ಕಟ್ಟುವುದು ಸ್ವಾಭಾವಿಕವಾಗಿದೆ. ಇತಿಹಾಸ ಎಂಬುದರ ಆಂಗ್ಲ ಸಂವಾದಿಪದ history ಎಂಬುದು his story ಎನ್ನುವ ಮಟ್ಟಿಗೆ ಕೇವಲ ಪುರುಷರ ವಿಚಾರಗಳನ್ನು ಒಳಗೊಂಡಿದೆ. ಇದರಲ್ಲಿ her story ಕೂಡ ಇದೆ ಎಂಬುದನ್ನು ಗುರುತಿಸಿ ತೋರಿಸುವ ಪ್ರಯತ್ನವನ್ನು ಈ ಪ್ರಬಂಧದಲ್ಲಿ ನಡೆಸಲಾಗಿದೆ. ರಾಜ್ಯವನ್ನು ರಕ್ಷಿಸುವ, ವಿಸ್ತರಿಸುವ, ಗದ್ದುಗೆಗಾಗಿ ಹೋರಾಡುವ ಹಕ್ಕು, ಜವಾಬ್ದಾರಿ ಕೇವಲ ಪುರುಷರದಾಗಿರದೆ ಮಹಿಳೆಯರೂ ಈ ಕಾರ್ಯದಲ್ಲಿ ಹೇಗೆ ಪ್ರಯತ್ನಿಸಿದ್ದರು, ಯಶಸ್ವಿಯಾಗಿದ್ದರು ಎನ್ನುವ ಐತಿಹಾಸಿಕ ಸಂಗತಿಗಳ ಮೇಲೆ ಆಧಾರಪೂರ್ವಕವಾಗಿ ಬೆಳಕು ಚೆಲ್ಲುವ, ರಾಜವಂಶದ ಮಹಿಳೆಯರು ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ, ಸಮಾಜಮುಖಿಯಾಗಿ ಕೊಟ್ಟ ಕೊಡುಗೆಗಳನ್ನು ಗಮನಿಸಿ, ಸಾಹಿತ್ಯ ಕ್ಷೇತ್ರಕ್ಕೆ ಅರಸಿಯರು ನೀಡಿದ ಕೊಡುಗೆಯನ್ನು ಎತ್ತಿಹಿಡಿಯುವ ಮಹತ್ವದ ದಾಖಲೆಯನ್ನು ಈ ಪ್ರಬಂಧದಲ್ಲಿ ಮಂಡಿಸಲಾಗಿದೆ.

ನಮ್ಮ ಇತಿಹಾಸವನ್ನು ರಚಿಸಲು ಪ್ರೇರಕರೂ ಸಹಾಯಕರೂ ಆದ ಪಾಶ್ಚಾತ್ಯರು 'ಭಾರತೀಯರಿಗೆ ಐತಿಹಾಸಿಕ ಪ್ರಜ್ಞೆ ಕಡಿಮೆ' ಎಂದು ಕಟುವಾಗಿ ಟೀಕಿಸಿದ್ದಾರೆ. ಆದರೆ ಶಾಸನ, ಐತಿಹಾಸಿಕ ಕಾವ್ಯಗಳು, ಸನ್ನದು, ಶ್ರೀಮುಖ, ಕೈಫಿಯತ್ತು, ಬಖೈರು ಮೊದಲಾದ ಬರಹಗಳು ನಮ್ಮ ಐತಿಹಾಸಿಕ ದಾಖಲುಗಳಾಗಿವೆ. ಸುಸಂಸ್ಕೃತ ಇತಿಹಾಸವನ್ನು ನಿರ್ಮಿಸಿದ ಭಾರತೀಯರು ತಮ್ಮ ಹೆಗ್ಗಳಿಕೆಯ ಹಲವಾರು ವಿಚಾರಗಳನ್ನು ದಾಖಲಿಸಿದ್ದಾರೆ. ಆದರೆ ಇವುಗಳನ್ನು ಸಮಗ್ರವಾಗಿ ಗುರುತಿಸುವ ಕಾರ್ಯ ಸಮರ್ಪಕವಾಗಿ ನಡೆದಿಲ್ಲ. ಹಲವಾರು ವಿಚಾರಗಳು ಉದಾಸೀನತೆಯ ಕಾರಣದಿಂದ ಬೆಳಕು ಕಂಡಿಲ್ಲ. ಇತಿಹಾಸಕಾರರಿಗೆ ಯಾವುದೇ ರೀತಿಯ ಪೂರ್ವಾಗ್ರಹವಾಗಲೀ, ಪಕ್ಷಪಾತಗುಣವಾಗಲೀ ಸಲ್ಲದು. ಇಂತಹ ಕಾರಣಗಳಿಂದಾಗಿ ಜನಸಾಮಾನ್ಯರಿಂದ ಮರೆಯಾಗಿರುವ ಕರ್ನಾಟಕದ ಕೆಲವು ಕವಯತ್ರಿಯರ ಹಾಗೂ ಉತ್ತಮ ಕೊಡುಗೆಯನ್ನು ನೀಡಿದ ಕರ್ನಾಟಕದ ಅರಸಿಯರ ಕುರಿತಾದ ವಿಚಾರವನ್ನು ಇಲ್ಲಿ ಎತ್ತಿ ಹಿಡಿಯಲಾಗಿದೆ.

# ಅಧ್ಯಾಯ – ೨

## ಕನ್ನಡ ಸಾಹಿತ್ಯ ಚರಿತ್ರೆಗಳಲ್ಲಿ ಲೇಖಕಿಯರ ಪ್ರತಿನಿಧೀಕರಣ

ಇಪ್ಪತ್ತನೆಯ ಶತಮಾನದಿಂದ ಗುರುತಿಸಲಾಗುವ ಆಧುನಿಕಯುಗದ ಕಾಲಘಟ್ಟದಲ್ಲಿ ನಾಡಿನಾದ್ಯಂತ ಎಲ್ಲ ಕ್ಷೇತ್ರಗಳಲ್ಲಿಯೂ ಕ್ರಾಂತಿ–ಬದಲಾವಣೆಗಳು ಕಂಡುಬಂದು, ಹೊಸತನದ ತರಂಗವೆದ್ದಿತು. ಅಂತೆಯೇ ಸಾಹಿತ್ಯ ಕ್ಷೇತ್ರದಲ್ಲಿಯೂ ಬದಲಾವಣೆಗಳು ಕಂಡುಬಂದು, ಇದನ್ನು ಹೊಸಗನ್ನಡದ ಕಾಲಘಟ್ಟವೆಂದು ಗುರುತಿಸಲಾಯಿತು. ಈ ಆಧುನಿಕ ಕನ್ನಡ ಸಾಹಿತ್ಯದ ಆರಂಭ ಕಾಲಘಟ್ಟದಲ್ಲಿ, ತಲೆದೋರಿದ ಭಿನ್ನತೆ ನವೀನತೆಗಳನ್ನು ಮೈಗೂಡಿಸಿಕೊಳ್ಳುವುದರೊಂದಿಗೆ, ಪ್ರಾಚೀನ ಸಾಹಿತ್ಯದೆಡೆಗೂ ಗಮನಹರಿಸಲಾಯಿತು. ಈ ಕಾಲದಲ್ಲಿ ಕನ್ನಡ ಸಾಹಿತ್ಯ ನಡೆದು ಬಂದ ಹಾದಿ, ಕರ್ನಾಟಕದಲ್ಲಿ ಸಾಹಿತ್ಯ ಬೆಳೆದುಬಂದ ಪರಿಯನ್ನು ಗುರುತಿಸುವ ಕೆಲಸವೂ ವಿಪುಲವಾಗಿ ನಡೆಯಿತು. ಈ ಕಾರ್ಯವು ಕನ್ನಡಸಾಹಿತ್ಯದ ಪ್ರಾಚೀನತೆಯನ್ನೂ, ವೈಶಿಷ್ಟ್ಯವನ್ನೂ ಎತ್ತಿಹಿಡಿಯುವುದರೊಂದಿಗೆ ಬೆಳಕಿಗೆ ಬಾರದ ಕವಿ, ಕೃತಿ ವಿಚಾರಗಳನ್ನು ಹುಡುಕಿ ಚರಿತ್ರೆ ಕಟ್ಟುವ ಮಹದುದ್ದೇಶದಿಂದ ಕೂಡಿತ್ತು. ಸ್ವಾತಂತ್ರ್ಯಪೂರ್ವದಲ್ಲಿಯೇ ಆರಂಭವಾದ ಚರಿತ್ರೆಯನ್ನು ಪುನಾರಚಿಸುವ ಕಾರ್ಯ ಇತ್ತೀಚಿನವರೆಗೂ ವಿಭಿನ್ನ ದೃಷ್ಟಿಕೋನಗಳಿಂದ ನಡೆಯುತ್ತಲೇ ಬಂದಿದೆ. ಪ್ರಾಚೀನ ಕವಿಗಳು ನಡೆಸಿದ ಕೆಲಸವನ್ನು ಉಲ್ಲೇಖಿಸುವ, ಗುರುತಿಸುವ, ವಿಮರ್ಶಿಸುವ, ವಿಶ್ಲೇಷಿಸಿ ವಿವೇಚಿಸುವ ಈ ಸರಣಿಯಲ್ಲಿ ಕವಿಯ ಕಾಲ, ಮತ, ದೇಶ, ಆಶ್ರಿತದೊರೆ, ಕೃತಿಗಳು, ಕೃತಿಗಳಲ್ಲಿನ ಕವಿಯ ಆಶಯ, ಪ್ರೇರಣೆ, ಪ್ರಭಾವ, ಅಲಂಕಾರ, ಛಂದಸ್ಸು, ವರ್ಣನೆ, ಮೊದಲಾದ ವಿಚಾರಗಳು ವಿಪುಲವಾದ ಚರ್ಚೆಗಳಿಗೆ ಒಳಗಾಗಿ ಇಂದಿಗೂ ಹೊಸ ಹೊಸ ವಿಚಾರಗಳು ಬೆಳಕಿಗೆ ಬರುತ್ತಲೇ ಇವೆ.

ಕನ್ನಡ ಆಧುನಿಕಪೂರ್ವ ಯುಗದ ಕವಿಗಳು ವೈಯಕ್ತಿಕ ವಿಚಾರಗಳನ್ನು ತಮ್ಮ ಕಾವ್ಯದಲ್ಲಿ ಹೇಳಿಕೊಂಡಿಲ್ಲದ ಕಾರಣ, ಅನೇಕ ಕವಿಗಳ ವಿಚಾರ ಇಂದಿಗೂ ಗೊಂದಲಮಯವಾಗಿಯೇ ಉಳಿದಿದೆ. ಸಾಧಾರಣವಾಗಿ ಕವಿಗಳು ತಮ್ಮ ಕಾವ್ಯಾರಂಭದಲ್ಲಿ ಇಷ್ಟದೇವತಾ ಸ್ತುತಿಗಳೊಂದಿಗೆ ಪೂರ್ವದ ಕವಿಗಳನ್ನು ಸ್ಮರಿಸುವುದನ್ನೂ ಸಂಪ್ರದಾಯವನ್ನಾಗಿಸಿಕೊಂಡಿರುವುದನ್ನು ಕಾಣುತ್ತೇವೆ. ಇಂತಹ ಪದ್ಧತಿಯಿಂದ ಕೆಲವೊಮ್ಮೆ ಇತರ ಕವಿಗಳ ವಿಚಾರ ಅಲ್ಪಸ್ವಲ್ಪ ತಿಳಿದು ಬರುತ್ತದೆ. ಉದಾಹರಣೆಗೆ ಆಚಣ್ಣನ **ವರ್ಧಮಾನ ಪುರಾಣ**ದಿಂದ ಎರಡನೆಯ ನಾಗವರ್ಮನೂ ವರ್ಧಮಾನನ ಕುರಿತಾದ ಒಂದು ಕಾವ್ಯ ರಚಿಸಿದ್ದಾನೆಂದು ತಿಳಿದುಬಂದು ಆ ಕೃತಿಯನ್ನು ಶೋಧಿಸಲು ಮೊದಲಾಯಿತು, ಆದರೆ ಅಸಗ, ಗುಣನಂದಿ, ಗುಣವರ್ಮ ಮೊದಲಾದ ಅನೇಕ ಕವಿಗಳ ಹೆಸರು ಇತರ ಕವಿಗಳಿಂದ ತಿಳಿದು ಬರುತ್ತದೆಯಾದರೂ ಅವರ ಕೃತಿಗಳು ಮಾತ್ರ ಇಂದಿಗೂ ಉಪಲಬ್ಧವಾಗಿಲ್ಲ. ಕೆಲವೊಂದು ದೊರೆತಿರುವ ಕೃತಿಗಳ ಕರ್ತೃ ವಿಚಾರ ಅಸ್ಪಷ್ಟವಾಗಿಯೇ ಉಳಿದಿದೆ. ಕಂತಿಯೆಂಬ ಕವಯತ್ರಿ ಸಮಸ್ಯಾರೂಪಕವಾದ ಮುಕ್ತಕಗಳನ್ನು ರಚಿಸಿರುವಳಾದರೂ ಇವಳ ವಿಚಾರದಲ್ಲಿ ಖಚಿತವಾದ ಮಾಹಿತಿ ದೊರಕದೆ ಅನೇಕ ಗೊಂದಲಗಳುಂಟಾಗಿವೆ. ಅವಳ ವಿಚಾರ ಹೆಚ್ಚು ಚರ್ಚೆಗೆ ಗ್ರಾಸವಾಗಿಯೂ ಬಗೆಹರಿಯದ ಸಮಸ್ಯೆಯಾಗಿ ಉಳಿದಿದೆ. ಕವಿ ನಾಗಚಂದ್ರ (ಅಭಿನವಪಂಪ)ನ ಸಮಕಾಲೀನಳೆನ್ನಲಾದ ಕಂತಿಯು ಅಕ್ಕಮಹಾದೇವಿಯ ಪೂರ್ವದವಳಾದರೂ ಈಕೆಯ ಬಗ್ಗೆ ನಿಖರ ಮಾಹಿತಿ ದೊರೆಯದ ಕಾರಣ ಕನ್ನಡದ ಮೊದಲ ಕವಯತ್ರಿಯ ಪಟ್ಟದಲ್ಲಿ ಅಕ್ಕಮಹಾದೇವಿಯನ್ನೇ ಕೂರಿಸಲಾಗಿದೆ. ಅನೇಕ ಕವಿಗಳ ಹಾಗೂ ಕಾವ್ಯಗಳ ಕುರಿತಾಗಿ ದೊರಕಿರುವ ಅಪೂರ್ಣ ಮಾಹಿತಿಗಳು ಇನ್ನೂ ಹಲವಾರು ಊಹಾಪೋಹಗಳ ನಡುವೆಯೇ ನಿಂತಿವೆ. ಇಂಥ ಅನೇಕ

ಚರ್ಚೆಗಳ ನಡುವೆ, ವಿದ್ವಾಂಸರ ಬಹುಮತದ ಅಭಿಪ್ರಾಯಗಳನ್ನಾಧರಿಸಿ ಸಾಹಿತ್ಯಚರಿತ್ರೆಗಳು ರಚಿತವಾಗಿವೆ. ಹೊಸ ಹೊಸ ಸಂಶೋಧನೆಗಳಿಂದ ಸಾಬೀತಾದ ಸತ್ಯಗಳನ್ನು ಆನಂತರ ರಚಿತವಾದ ಸಾಹಿತ್ಯ ಚರಿತ್ರೆಗಳು ದಾಖಲು ಮಾಡುತ್ತಿವೆ. ಕರ್ಣಾಟಕ ಕವಿಚರಿತೆಯಲ್ಲಿ ಹೇಳಿರುವ "ರಾಷ್ಟ್ರಕೂಟ ರಾಜರಲ್ಲಿ ಒಬ್ಬನಾದ ನೃಪತುಂಗನು ಕನ್ನಡದಲ್ಲಿ ಕವಿರಾಜಮಾರ್ಗವೆಂಬ ಒಂದು ಅಲಂಕಾರ ಗ್ರಂಥವನ್ನು ಬರೆದಿದ್ದಾನೆ"[೧] ಎಂಬ ಹೇಳಿಕೆಯು ಮುಂದಿನ ಪ್ರಮುಖ ವಿದ್ವಾಂಸರ ಸಂಶೋಧನೆಗಳನ್ನಾಧರಿಸಿ ಕವಿರಾಜಮಾರ್ಗದ ಕರ್ತೃ 'ಶ್ರೀವಿಜಯ' ಎಂದು ಬದಲಾಗಿರುವುದನ್ನು ಆನಂತರದ ಸಾಹಿತ್ಯ ಚರಿತ್ರೆಗಳಲ್ಲಿ ಕಾಣುತ್ತೇವೆ. ಈ ಪ್ರಕಾರವಾಗಿ ಕಾಲಾನುಕ್ರಮದಲ್ಲಿ ಒಂದು ಘಟ್ಟದಿಂದ ಮತ್ತೊಂದು ಘಟ್ಟದಲ್ಲಿ ರಚಿತವಾದ ಸಾಹಿತ್ಯಚರಿತ್ರೆಗಳಲ್ಲಿನ ಮಾಹಿತಿ ಹೆಚ್ಚು ನಿಖರವೂ, ಖಚಿತವೂ ಆಗುತ್ತಾ ಸಾಗಿಬಂದಿದೆ. ಈ ಹಾದಿಯಲ್ಲಿ ವಿಪುಲವಾಗಿ ಚರ್ಚೆಗೆ ಒಳಗಾಗಿರುವ ವಿಚಾರಗಳಲ್ಲಿ ಲೇಖಕಿಯರ ಕೃತಿಗಳು ಹೇಗೆ ಉಲ್ಲೇಖಗೊಂಡಿವೆ? ಎಷ್ಟು ಚರ್ಚೆಗೆ ಒಳಗಾಗಿವೆ? ಇಲ್ಲಿ ಮಹಿಳಾ ಸಾಹಿತ್ಯಕ್ಕೆ ಎಷ್ಟರಮಟ್ಟಿಗೆ ನ್ಯಾಯ ಒದಗಿಸಲಾಗಿದೆ? ಎಂಬುದನ್ನು ಕುರಿತು ಚರ್ಚಿಸುವುದು ಅತ್ಯಗತ್ಯವಾಗಿದೆ. ಈ ಅಧ್ಯಾಯವು ಸಾಹಿತ್ಯ ಚರಿತ್ರೆಗಳಲ್ಲಿ ಮಹಿಳಾ ಪ್ರತಿನಿಧೀಕರಣದ ಸ್ವರೂಪವನ್ನು ವಿಶ್ಲೇಷಿಸುವ ಉದ್ದೇಶವನ್ನು ಹೊಂದಿದೆ.

ಸಾಹಿತ್ಯಚರಿತ್ರೆಯು ಕೇವಲ ಸಾಹಿತ್ಯದ ವಿಚಾರವನ್ನು ಮಾತ್ರ ತಿಳಿಸದೆ, ಸಾಹಿತಿಯ ಕುರಿತಾದ ವಿಚಾರಗಳನ್ನೂ ದಾಖಲಿಸುವ ಕೆಲಸವಾದ್ದರಿಂದ, ಕವಿಯ ಕಾಲ, ದೇಶ, ವಂಶ, ಮತ, ಗುರು, ಪೋಷಕ, ಬಿರುದುಗಳು, ಜೀವನವೃತ್ತಾಂತದ ಮಹತ್ವದ ವಿಚಾರಗಳು, ಕವಿಯಿಂದ ರಚಿತವಾದ ಗ್ರಂಥಗಳ ಸಂಕ್ಷಿಪ್ತ ವಿವರ, ಇವೇ ಮೊದಲಾದ ಕವಿಯ ಕುರಿತಾದ ಹಾಗೂ ಕೃತಿಗಳ ಮಾಹಿತಿಯನ್ನು ತಕ್ಕಮಟ್ಟಿಗೆ ಒದಗಿಸುವಂತಿರಬೇಕು. ಈ ಪ್ರಕಾರವಾಗಿ ಸಂಗ್ರಹಗೊಂಡ ಕವಿ, ಕೃತಿಗಳ ಪರಿಚಯವು ಕೇವಲ ಸಾಹಿತ್ಯ ಚರಿತ್ರೆಯಾಗಿ ಉಳಿಯದೆ, ಒಂದು ನಾಡಿನ ಸಾಂಸ್ಕೃತಿಕ, ಧಾರ್ಮಿಕ, ಸಾಮಾಜಿಕ ವಿಚಾರಗಳನ್ನು ಅಧ್ಯಯನ ಮಾಡಲು ಮೂಲಭೂತ ಆಕರವಾಗಿ ಪರಿಣಮಿಸುತ್ತದೆ. ಲೇಖಕಿಯರನ್ನು ಕುರಿತಾದ ಈ ಬಗೆಯ ಮಾಹಿತಿಗಳು ಸಮಾಜದಲ್ಲಿ ಮಹಿಳೆಯರಿಗೆ ಯಾವ ಕಾಲದಲ್ಲಿ, ಯಾವ ರಾಜರ ಆಳ್ವಿಕೆಯಲ್ಲಿ, ಹೆಚ್ಚು ಸ್ವಾತಂತ್ರ್ಯವಿತ್ತು, ಯಾವ ಕುಲ/ಧಾರ್ಮಿಕ ಪಂಗಡದಲ್ಲಿ ಸಾಹಿತ್ಯಿಕ ಚಟುವಟಿಕೆಗಳಲ್ಲಿ ಪಾಲ್ಗೊಳ್ಳಲು ಮಹಿಳೆಯರಿಗೆ ಮುಕ್ತ ಅವಕಾಶ ದೊರೆಯುತ್ತಿತ್ತು. ಕಾಲಾಂತರದಲ್ಲಿ ಈ ವಿಚಾರಗಳು ಬದಲಾದದ್ದು ಹೇಗೆ? ಮತ್ತು ಏಕೆ? ಎನ್ನುವ ವಿಚಾರಗಳನ್ನು ಸೂಕ್ಷ್ಮವಾಗಿ ಹಾಗೂ ಹೆಚ್ಚು ವಿಸ್ತೃತವಾಗಿ ಚರ್ಚಿಸಲು ಅವಕಾಶ ಮಾಡಿಕೊಡುತ್ತವೆ.

ಆಧುನಿಕಪೂರ್ವ ಕನ್ನಡ ಸಾಹಿತ್ಯದಲ್ಲಿ ಮಹಿಳೆಯರ ಹೆಸರು ಕಂಡುಬಂದಿರುವುದು ಕಡಿಮೆ. ಪ್ರತಿಭೆಗಳಿದ್ದರೂ, ಪ್ರೇರಣೆ–ಪೋಷಣೆ ಅವಕಾಶಗಳ ಕೊರತೆಯು ಸಾಧಕಿಯರಿಗೆ ಮುಖ್ಯವಾಹಿನಿಗೆ ಬರಲು ತಡೆಯುಂಟುಮಾಡುತ್ತದೆ ಎಂಬ ಅಂಶ ಇಲ್ಲಿ ಸಾಬೀತಾಗಿದೆ. ೧೨ನೆಯ ಶತಮಾನದ ವಚನಸಾಹಿತ್ಯದ ವೇಳೆಯಲ್ಲಿ ಸಾಮಾನ್ಯ ವರ್ಗದ ಮಹಿಳೆಯರು ಹೆಚ್ಚು ಪ್ರಸಿದ್ಧಿ ಪಡೆದಂತೆ ಆ ನಂತರದ ಕಾಲದಲ್ಲಿ ಅವಕಾಶ ಪಡೆಯಲಿಲ್ಲ. ವಚನ ಚಳುವಳಿಯ ಈ ಕಾಲದ ಅನಂತರ ಸಾಹಿತ್ಯ ಕ್ಷೇತ್ರದಲ್ಲಿ ಮಹಿಳೆಯರನ್ನು ಹೆಚ್ಚಾಗಿ ಕಾಣುವುದು ೧೯ನೆಯ ಶತಮಾನದಿಂದೀಚೆಗೆ. ಬಸವಣ್ಣನ ಕಾಲದ ವೀರಶೈವ ಧರ್ಮದಡಿಯಲ್ಲಿ ಸಾಮಾನ್ಯ ಮಹಿಳೆಯರಿಗೆ ಸಿಕ್ಕಿದ್ದ ಪ್ರಾಶಸ್ತ್ಯ, ಮುಕ್ತವಾತಾವರಣ ಬೇರೆ ಕಾಲದಲ್ಲಿ ಬಂದ ಇದೇ ಧರ್ಮದ ಮುಖಂಡರಿಂದ ಹೆಚ್ಚಾಗಿ ದೊರೆಯಲಿಲ್ಲ. ಬಿಜ್ಜಳನ ಆಳ್ವಿಕೆಯ ಆರಂಭ ಕಾಲದಲ್ಲಿ ಶಿವಶರಣರಿಗೆ ದೊರೆತ ಅನುಕೂಲ ಪರಿಸ್ಥಿತಿ ವಿಜಯನಗರದ ಅರಸರ ಕಾಲದಲ್ಲಿಯೂ ಶರಣರಿಗೆ, ದಾಸರಿಗೆ, ಕವಿಗಳಿಗೆ ದೊರಕಿತು. ಲಕ್ಕಣ್ಣದಂಡೇಶ ಮೊದಲಾದವರ ಕಾಲದಲ್ಲಿ ವೀರಶೈವ ಧರ್ಮದಡಿಯಲ್ಲಿ ಶಿವಶರಣರ ಕೃತಿಗಳು ದೊರಕುವಂತೆ, ಶರಣೆಯರ ಕೃತಿಗಳು ಕಂಡುಬರುವುದಿಲ್ಲ. ಸಾಹಿತ್ಯ ಚರಿತ್ರೆಯು ರಾಜಕೀಯ ಇತಿಹಾಸ, ಧಾರ್ಮಿಕ, ಸಾಮಾಜಿಕ ಸ್ಥಿತಿಗತಿಗಳು, ಕುಲ ಮತಗಳ ಹಿನ್ನೆಲೆಯಲ್ಲಿ ರಚಿತವಾದಾಗ ಇಂತಹ ವಿಚಾರಗಳು ಚರ್ಚೆಗೊಳಗಾಗುತ್ತವೆ.

ಹತ್ತೊಂಬತ್ತನೆಯ ಶತಮಾನದ ಕೆಲವು ಮಹಿಳೆಯರು ಅನಕ್ಷರಸ್ಥರಾಗಿದ್ದರೂ, ಅವರ ಮೌಖಿಕ ಸಾಹಿತ್ಯವನ್ನು ಬರೆದಿಡುವುದರಲ್ಲಿ ಮನೆಯವರ, ಇತರರ ಸಹಕಾರ ಹಾಗೂ ಪ್ರೋತ್ಸಾಹ ಕೆಲವು ಮಧ್ಯಮವರ್ಗದ ಮಹಿಳೆಯರಿಗೆ ದೊರೆತಿರುವುದು ಕಂಡುಬರುತ್ತದೆ. ಈ ಕಾಲಘಟ್ಟದಲ್ಲಿ ಮಹಿಳೆಯರಿಗೆ ದೊರೆಯುತ್ತಿದ್ದ ಆದ್ಯತೆ, ಸ್ವಾತಂತ್ರ್ಯ ಗಣನೀಯವಾಗಿ ಹೆಚ್ಚುತ್ತಾ ಬಂದದ್ದು ಗೋಚರಿಸುತ್ತದೆ. ಓದುಬರಹ ಬಾರದ ಹರಪ್ಪನಹಳ್ಳಿಯ ಭೀಮವ್ವ, ಸಾವಿತ್ರೀಬಾಯಿ ಬಾಳೇಗದ್ದೆಯಂಥವರಿಗೆ ಸಿಕ್ಕ ಜನಾದರ ಪ್ರಸಿದ್ಧಿಯನ್ನು ಇಲ್ಲಿ ಉದಾಹರಿಸಬಹುದು. ಈ ನಿಟ್ಟಿನಲ್ಲಿ ೧೮೯೩ರಲ್ಲಿ ಎಂ.ರಾಮಾನುಜಯ್ಯಂಗಾರ್ ಮತ್ತು ಎಸ್.ಜಿ.ನರಸಿಂಹಾಚಾರ್ಯರು ಆರಂಭಿಸಿದ **'ಕರ್ಣಾಟಕ ಕಾವ್ಯಮಂಜರಿ'**ಯು **"ಶ್ರೀರಾಮಪಟ್ಟಾಭಿಷೇಕಂ"** ಎಂಬ ಮಹಾಲಕ್ಷ್ಮಿ ವಿರಚಿತ ಕಾವ್ಯವನ್ನು ಪ್ರಕಟಿಸುವ ಸಂದರ್ಭದಲ್ಲಿ ತೋರಿದ ಉತ್ಸಾಹವನ್ನು ಗಮನಿಸಬಹುದು (ಇದು ಮುದ್ದಣ ವಿರಚಿತ ಕೃತಿ ಎಂಬುದು ಆನಂತರ ತಿಳಿದುಬಂದ ವಿಷಯವಾಗಿದೆ). ಜೊತೆಗೆ ಈ ಪ್ರಕಾಶಕರು "ಕವಯತ್ರಿ ಮಹಾಲಕ್ಷ್ಮಿಯೆಂಬಾಕೆಯ ವಿಷಯ, ಅವಳ ಚರಿತ್ರವೇನಾದರೂ ತಿಳಿದಿದ್ದರೆ ವಿಚಾರಿಸಿ ಬರೆಯುವುದು, ನಿಮ್ಮ ಕಾರ್ಡಿನಲ್ಲಿ ನೀವು ತಿಳಿಸುವ ವೆಂಕಟಸುಬ್ಬಮ್ಮನೆಂಬಾಕೆಯು ಯಾರು? ಅವಳು ಬರೆದಿರುವ ಗ್ರಂಥಗಳೇನಾದರೂ ಉಂಟೆ? ಅವುಗಳೇನಾದರೂ ದೊರೆಯುತ್ತವೆಯೆ? ಮತ್ತಾರಾದರೂ ಸ್ತ್ರೀಯರು ನಿಮ್ಮಕಡೆ ಗ್ರಂಥಗಳನ್ನು ಬರೆದಿರುತ್ತಾರೆಯೆ?" ಎಂಬ ಮೊದಲಾದ ಪ್ರಶ್ನೆಗಳನ್ನು ಮುದ್ರಣಕ್ಕೆಂದು ಕೃತಿಯನ್ನು ಕಳಿಸಿದ್ದ ಕವಿ ಮುದ್ದಣನಲ್ಲಿ ಕೇಳಿರುವುದು, ಮಹಿಳಾ ಸಾಹಿತಿ ಹಾಗೂ ಸಾಹಿತ್ಯವನ್ನು ಕುರಿತಂತೆ ಇವರ ಕಾಳಜಿಯನ್ನು ತಿಳಿಸುತ್ತದೆ. ಇವರದೇ ಮಾಲಿಕೆಯಲ್ಲಿ ಸಂಚಿಹೊನ್ನಮ್ಮಳ **'ಹದಿಬದೆಯ ಧರ್ಮ'** ಪ್ರಕಟವಾಗಿರುವುದನ್ನೂ ಗಮನಿಸಬಹುದು.

ಮಹಿಳಾ ಸಾಹಿತ್ಯ ಬೆಳೆದು ಬರಲು ಜನಸಾಮಾನ್ಯರು, ಧಾರ್ಮಿಕ ಮುಖಂಡರು, ರಾಜಾಸ್ಥಾನಗಳು ಪ್ರೋತ್ಸಾಹ ನೀಡಿರುವ ಅನೇಕ ಉದಾಹರಣೆಗಳನ್ನು ಸಾಹಿತ್ಯ ಚರಿತ್ರೆಗಳು ನೀಡುತ್ತವೆ. ಆದರೆ ಇದು ಎಲ್ಲ ಕಾಲದಲ್ಲಿಯೂ ಲಭ್ಯವಿರಲಿಲ್ಲವೆನ್ನುವುದೂ ಅಷ್ಟೇ ಸತ್ಯ. ಅಂತೆಯೇ ಆಧುನಿಕಪೂರ್ವ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿಯೂ ಮಹಿಳೆಯರು ರಚಿಸಿರುವ ಕೃತಿಗಳು ದೊರಕುತ್ತವೆ; ಆದರೆ ಅವುಗಳ ಸಂಖ್ಯೆ ಬಹಳ ಕಡಿಮೆ.

## ಸಾಹಿತ್ಯ ಮತ್ತು ಚರಿತ್ರೆಯ ಸಂಬಂಧ

ಸಾಹಿತ್ಯಕ್ಕೆ ಕರ್ನಾಟಕದ ರಾಣಿಯರು ನೀಡಿರುವಂಥ ಕೊಡುಗೆಯನ್ನು ಕುರಿತಾದ ಈ ಮಹಾಪ್ರಬಂಧದ ಅಧ್ಯಯನವು, ಕೆಲವೊಂದು ನಿರ್ದಿಷ್ಟ ದೃಷ್ಟಿಕೋನ ಹೊಂದಿರುವ ಕರ್ನಾಟಕ ಸಾಹಿತ್ಯ ಚರಿತ್ರೆಯೆ ಆಗಿದೆ. ಆದರೆ ಹಿಂದಿನ ಅಧ್ಯಾಯದ 'ಅಧ್ಯಯನದ ಸ್ವರೂಪ'ದಲ್ಲಿ ತಿಳಿಸಿರುವಂತೆ ಇದು ಕೇವಲ ಕರ್ನಾಟಕದ ಅರಸಿಯರಿಂದ ರಚಿತವಾದ ಹಾಗೂ ಅರಸಿಯರಿಂದ ಪ್ರೇರಣೆ ಹಾಗೂ ಪ್ರೋತ್ಸಾಹಗೊಂಡು ರಚಿತವಾದ ಸಾಹಿತ್ಯಗಳ ಇತಿವೃತ್ತಗಳೊಂದಿಗೆ ಅರಸಿಯರನ್ನು ಕುರಿತಾಗಿ ರಚಿತವಾಗಿರುವ ಸಾಹಿತ್ಯಗಳ ಅಧ್ಯಯನವನ್ನೂ ಒಳಗೊಂಡಿದೆ. ಇದು ಬೆಳಕಿಗೆ ಬಾರದ ರಾಣಿಯರ ವಿಚಾರಗಳನ್ನು ಕುರಿತು ಚರ್ಚಿಸಲು ಸಹಾಯಕವಾಗುತ್ತದೆ. ಅಷ್ಟೇ ಅಲ್ಲದೆ ಕಾವ್ಯಗಳಲ್ಲಿ ಉಲ್ಲೇಖವಾಗಿರುವ ಅರಸಿಯರ ವಿಚಾರ ಕುರಿತಾದ ಕೆಲವೊಂದು ಚರ್ಚೆಗಳು ಕವಿಗಳ ಹಾಗೂ ಕೃತಿರಚನಾಕಾಲ ನಿರ್ಧರಿಸಲು ಸಹಕಾರಿಯಾಗಿದೆ. ಕಾವ್ಯಗಳಲ್ಲಿನ ರಾಣಿಯರ ಉಲ್ಲೇಖಗಳಿಂದಲೇ ಇತಿಹಾಸದ ಪುನಾರಚನೆಗೆ ಪೂರಕವಾದ ಅನೇಕ ಹೊಸ ಅಂಶಗಳು ಬೆಳಕಿಗೆ ಬಂದಿವೆ.

ಕವಿ ರುದ್ರಭಟ್ಟನ **'ಜಗನ್ನಾಥ ವಿಜಯ'** ಕಾವ್ಯದ ಕಾಲವನ್ನು ನಿರ್ಣಯ ಮಾಡುವಾಗ ಎ.ವೆಂಕಟಸುಬ್ಬಯ್ಯನವರು ಈ ಕಾವ್ಯದಲ್ಲಿ 'ವಿಬುಧತನುಮಾಕಾಮಿನೀಜೀವಿತೇಶಂ' ಎಂಬ ಸಾಲಿನಲ್ಲಿ ಅರಸಿ ಉಮಾದೇವಿಯ ಉಲ್ಲೇಖದ ಮೂಲಕ ಬಲ್ಲಾಳನನ್ನು ಸ್ತುತಿಸಿರುವ ಅಂಶವನ್ನು ಗಣನೆಗೆ ತೆಗೆದುಕೊಂಡು ಕಾಲವನ್ನು ಗುರುತಿಸಿದ್ದಾರೆ. ರಾಣಿ ಉಮಾದೇವಿಯ ಹೆಸರಿನೊಂದಿಗಿರುವ ರಾಜ ಬಲ್ಲಾಳನ ಸ್ತುತಿಗಳು ಕೇವಲ ಕಾವ್ಯದಲ್ಲಿ ಮಾತ್ರವಲ್ಲದೆ ಹಲವಾರು

ಶಾಸನಗಳಲ್ಲಿಯೂ ಕಂಡುಬಂದಿವೆ. ಅರಸೀಕೆರೆಯ ೯೩ನೇ ಸಂಖ್ಯೆಯ ಶಾಸನ ಹಾಗೂ ೪೦, ೭೭, ೮೫, ೯೦ನೇ ಸಂಖ್ಯೆಯ ಶಾಸಗಳಲ್ಲಿಯೂ ಈ ಉಲ್ಲೇಖವನ್ನು ಕಾಣಬಹುದು. ಆದರೆ ಕ್ರಿ.ಶ.೧೧೮೫ರ ಡಿ.೨೩ರ ಸುಮಾರಿನಲ್ಲಿ ರಚಿತವಾದ ೯೩ನೇ ಸಂಖ್ಯೆಯ ಶಾಸನದ ನಂತರವೇ ಈ ಉಲ್ಲೇಖ ಗುರುತಿಸಬಹುದಾದ್ದರಿಂದ ಬಲ್ಲಾಳನು ಉಮಾದೇವಿಯನ್ನು ೧೧೮೫ರ ಆಸುಪಾಸಿನಲ್ಲಿ ವಿವಾಹವಾದನೆಂದೂ, ಹಾಗಾಗಿ ಇದೇ ಉಲ್ಲೇಖವಿರುವ ರುದ್ರಭಟ್ಟನ ಕೃತಿ ಕೂಡ ೧೧೮೫ರ ನಂತರ ರಚಿತವಾದುದೆಂದು ಇವರು ಪ್ರತಿಪಾದಿಸುತ್ತಾರೆ.[೨]

ಕವಿ ನೇಮಿಚಂದ್ರನ 'ಲೀಲಾವತಿ ಪ್ರಬಂಧ' ಕೃತಿಯಲ್ಲಿ ಉಕ್ತವಾಗಿರುವ ಚಂದಲದೇವಿಯ ಉಲ್ಲೇಖವು ಕವಿ ನೇಮಿಚಂದ್ರನ ಕಾಲವನ್ನು ತಿಳಿಯಲು ಸಹಕಾರಿಯಾಗಿದೆ. ಕವಿ ನೇಮಿಚಂದ್ರನು ಸೌಂದತ್ತಿಯ ರಟ್ಟವಂಶದ ಲಕ್ಷ್ಮಣನ ಆಶ್ರಯದಲ್ಲಿ ಇದ್ದಾಗ ಈ ಕಾವ್ಯ ರಚಿಸಿದ್ದೆಂದು ಈ ಕೃತಿಯ ಕೆಲವು ಪದ್ಯಗಳಿಂದ ಸಾಬೀತಾಗುವುದಾದರೂ ರಟ್ಟವಂಶದಲ್ಲಿ ಲಕ್ಷ್ಮಣನೆಂಬ ಹೆಸರಿನ ಇಬ್ಬರು ರಾಜರು ಕ್ರಮವಾಗಿ ಕ್ರಿ.ಶ.೧೧೯೦ ಹಾಗೂ ಕ್ರಿ.ಶ.೧೨೨೮ರ ಕಾಲದಲ್ಲಿ ಆಳ್ವಿಕೆ ನಡೆಸಿರುವುದು ಇತಿಹಾಸದಿಂದ ತಿಳಿದು ಬರುತ್ತದೆ. ನೇಮಿಚಂದ್ರನು ತನ್ನ ಕಾವ್ಯದಲ್ಲಿ ಚಂದಲದೇವಿಯನ್ನು "ಅಂಬುಧಿವೇಷ್ಟಿತಾವನಿಗೆ ಲಕ್ಷ್ಮಣದೇವನೇ............... ಪುಣ್ಯಸತಿ ಚಂದಲದೇವಿಯೇ" (೧೪-೧೩೭) "ಧರೆಯಂ ರಕ್ಷಿಸುತಿರೆ....................ಶ್ರೀ ಚಂದ್ರಿಕಾದೇವಿ" (೧೪-೧೫೦) ಎಂಬುದಾಗಿ ಸ್ಮರಿಸಿದ್ದಾನೆ. ಕಾವ್ಯದಲ್ಲಿ ರಾಣಿ ಚಂದ್ರಿಕಾದೇವಿಯ ಕುರಿತಾದ ಈ ಉಲ್ಲೇಖದಿಂದ ಕವಿ ಸ್ತುತಿಸಿರುವ ಲಕ್ಷ್ಮೀದೇವ ಈ ವಂಶದ ಮೊದಲನೆಯ ಲಕ್ಷ್ಮೀದೇವ ಎಂಬುದು ಸ್ಪಷ್ಟಗೊಂಡಿದೆ. ಇದರಿಂದ ರಾಜನ ಕಾಲವನ್ನು ಪರಿಗಣಿಸಿರುವುದಲ್ಲದೆ ಕವಿಯ ಕಾಲವನ್ನು ನಿಖರವಾಗಿ ಗೊತ್ತುಪಡಿಸಲು ಸಾಧ್ಯವಾಯಿತು.

ಕಾವ್ಯಗಳಲ್ಲಿನ ರಾಣಿಯ ಉಲ್ಲೇಖವು ಕವಿಯ ಕಾಲವನ್ನು ತಿಳಿಯಲು ಸಹಕಾರಿಯಾದಂತೆ ಸವಾಲನ್ನು ತಂದೊಡ್ಡಿದ ಸಂದರ್ಭವೂ ಎದುರಾಗಿದೆ. ಕರ್ಣಪಾರ್ಯ ಹಾಗೂ ನೇಮಿಚಂದ್ರ ಕವಿಗಳಿಬ್ಬರೂ ಸೌದತ್ತಿಯ ರಟ್ಟರಾಜನಾದ ಲಕ್ಷ್ಮೀದೇವನ ಆಶ್ರಿತರಾಗಿದ್ದರೆಂದು ಆರ್.ನರಸಿಂಹಾಚಾರ್ಯರು ಮೈಸೂರು ಶಾಸನ ಇಲಾಖೆಯ ವರದಿಯಲ್ಲಿ ತಿಳಿಸಿದ್ದಾರೆ[೩]. ಆದರೆ ಕೆಲಕಾಲದ ನಂತರ ಇತರ ಆಧಾರಗಳು ದೊರೆತಮೇಲೆ ಹಾಗೂ ಕೆಲ ವಿದ್ವಾಂಸರ ಹೇಳಿಕೆಯನ್ನು ಕೂಲಂಕಶವಾಗಿ ಪರಿಶೀಲಿಸಿ ತಮ್ಮ ಅಭಿಪ್ರಾಯವನ್ನು ಬದಲಿಸಿಕೊಂಡ ಇವರು, "ಕರ್ಣಪಾರ್ಯನು ಶಿಲಾಹಾರರಾಜ ವಿಜಯಾದಿತ್ಯನ ಆಳ್ವಿಕೆಯಲ್ಲಿ ಲಕ್ಷ್ಮಣ ಅಥವಾ ಲಕ್ಷ್ಮೀದೇವನ ಪ್ರೋತ್ಸಾಹದಿಂದಲೂ, ನೇಮಿಚಂದ್ರನು ಸೌಂದತ್ತಿಯ ರಟ್ಟರಾಜನಾದ ಮೂರನೆಯ ಕಾರ್ತವೀರ್ಯನ ಮಗ ಲಕ್ಷ್ಮೀದೇವನ ಪ್ರೋತ್ಸಾಹದಿಂದಲೂ ಗ್ರಂಥಗಳನ್ನು ಬರೆದಿದ್ದಾರೆ. ಇವರಿಬ್ಬರಿಗೂ ಲಕ್ಷ್ಮೀದೇವನೆಂಬ ಒಂದೇ ಹೆಸರಿರುವುದರಿಂದಲೂ ಅಲ್ಲದೆ ಇಬ್ಬರ ಹೆಂಡತಿಯರಿಗೂ ಚಂದ್ರಿಕಾದೇವಿ ಎಂಬ ಒಂದೇ ಹೆಸರಿರುವುದರಿಂದಲೂ ಈ ಭ್ರಮೆವುಂಟಾಯಿತು" ಎಂದು ತಿಳಿಸಿದ್ದಾರೆ[೪].

ಡಿ.ಎಲ್.ನರಸಿಂಹಾಚಾರ್ ಅವರು ತಮ್ಮ 'ಸಾಹಿತ್ಯಚರಿತ್ರೆಯ ಸ್ವರೂಪ' ಲೇಖನದಲ್ಲಿ "ದೇಶಚರಿತ್ರೆಯೆಂದರೆ ಸಾಮಾನ್ಯವಾಗಿ ಅದರ ಅರಸುಗಳ ಚರಿತ್ರೆ. ಅವರು ಮಾಡಿದ ಕಾರ್ಯಗಳು, ಹೂಡಿದ ಯುದ್ಧಗಳು, ನಡೆಸಿದ ಪಿತೂರಿಗಳು- ಇವೇ ಮೊದಲಾದವು ಅಲ್ಲಿ ಪ್ರತಿಪಾದ್ಯವಾಗುವ ವಿಷಯಗಳು. ಸ್ಥೂಲವಾಗಿ ಇದು ದೇಶದ ಜೀವನ ಚರಿತ್ರೆ, ಸಾಹಿತ್ಯ ಚರಿತ್ರೆಯಾದರೆ ದೇಶದ ಆತ್ಮಕಥೆ......... ಒಂದು ಜನಾಂಗದ ಆತ್ಮಪರಿಚಯ ಮಾಡಿಕೊಳ್ಳಬೇಕಾದರೆ ಅದರ ಸಾಹಿತ್ಯಾಭ್ಯಾಸವೊಂದೇ ರಾಜಮಾರ್ಗ. ದೇಶಚರಿತ್ರೆಯನ್ನು ಎಲ್ಲ ದೃಷ್ಟಿಗಳಿಂದಲೂ ಸಾಹಿತ್ಯ ಚರಿತ್ರೆ ಪರಿಪೂರ್ಣಗೊಳಿಸುತ್ತದೆ"[೫] ಎಂದಿದ್ದಾರೆ. ಹೀಗೆ ದೇಶಚರಿತ್ರೆಯನ್ನು ಪರಿಪೂರ್ಣಗೊಳಿಸಬೇಕಿರುವ ಸಾಹಿತ್ಯ ಚರಿತ್ರೆಯಲ್ಲಿ ಮಹಿಳೆಯರ ಸಾಧನೆಯ ಪ್ರತಿನಿಧೀಕರಣವನ್ನು ಗುರುತಿಸುವುದಕ್ಕೂ ಆದ್ಯತೆ ನೀಡಬೇಕಿದೆ. ಇದು ಸಾಹಿತ್ಯ ರಚನೆಯಲ್ಲಿ ಲೇಖಕಿಯರ ಉಲ್ಲೇಖ ಹೇಗೆ ಆಗಿದೆ? ಕವಿ, ಕವಯತ್ರಿಯರ ದಾಖಲಾತಿಯ

ಸ್ವರೂಪದಲ್ಲಿ ತಾರತಮ್ಯ ನಡೆದಿದೆಯೆ? ದಾಖಲು ಮಾಡುವಾಗ ಆಯ್ಕೆಗಳ ಹಿಂದಿನ ಮತ್ತು ಅವಗಣನೆಯ ಹಿಂದಿನ ರಾಜಕಾರಣವನ್ನು ಅನಾವರಣ ಮಾಡುವುದು ಇಲ್ಲಿನ ಉದ್ದೇಶವಾಗಿದೆ.

## ಕನ್ನಡ ಸಾಹಿತ್ಯ ಚರಿತ್ರೆಗಳು ಸಾಗಿಬಂದ ಹಾದಿ

**ಕನ್ನಡ ಸಾಹಿತ್ಯ ಚರಿತ್ರೆಯ ಉಗಮ ಮತ್ತು ವಿಕಾಸ:** ಯಾವುದೇ ಅಧ್ಯಯನದ ಆರಂಭಕಾಲೀನ ರೂಪುರೇಷೆಗಳು, ಅಗತ್ಯಗಳು, ದೊರಕುವ ಅವಕಾಶಗಳು, ಆಕರಗಳು ಬಹಳ ಮಿತವಾಗಿರುತ್ತವೆ. ಆನಂತರ ಕಾಲದಲ್ಲಿ ಇದೇ ವಿಚಾರಗಳು ಹೆಚ್ಚು ವೈಜ್ಞಾನಿಕವಾಗಿಯೂ, ಕ್ರಮಬದ್ಧವಾಗಿಯೂ ರೂಪುಗೊಳ್ಳಲು ಈ ಆರಂಭಿಕ ಹಂತದ ಕಾರ್ಯಗಳು ಉತ್ತಮ ತಳಪಾಯವನ್ನು ನಿರ್ಮಿಸಿ ಕೊಡುತ್ತವೆ. ಹಾಗಾದಾಗ ಮಾತ್ರ ಅಧ್ಯಯನ ನಿಗದಿತ ಕಾರ್ಯ ಸಾಧಿಸಲು ಸಾಧ್ಯವಾಗುತ್ತದೆ. ಈ ನಿಟ್ಟಿನಲ್ಲಿ ಕನ್ನಡ ಸಾಹಿತ್ಯ ಚರಿತ್ರೆ ಬೆಳೆದು ಬಂದ ವಿಧಾನವನ್ನು ಅವಲೋಕಿಸುವುದು ಅವಶ್ಯಕವಾಗಿದೆ.

ಆಧುನಿಕ ಕಾಲಘಟ್ಟದಲ್ಲಿ ಭಾರತೀಯರು ಪಾಶ್ಚಿಮಾತ್ಯರಿಂದ ಕಲಿತ ಅನೇಕ ವಿಚಾರಗಳಲ್ಲಿ, ಚರಿತ್ರೆಯನ್ನು ಪುನಾರಚಿಸುವ ಕ್ರಮವೂ ಒಂದಾಗಿದೆ. ನಮ್ಮ ಪೂರ್ವಜರು ದಾಖಲಿಸಿರುವ ಇತಿಹಾಸವನ್ನು, ಪುರಾಣ ಕಾವ್ಯ ಶಾಸನ ಜನಪದ ಮೊದಲಾದ ವಿಭಿನ್ನ ಆಕರಗಳಿಂದ ಹೆಕ್ಕಿ ತೆಗೆದು, ಐತಿಹ್ಯವನ್ನು ಇತಿಹಾಸದಿಂದ ಬೇರ್ಪಡಿಸುವುದು ಸುಲಭದ ಕೆಲಸವಲ್ಲ. ಸಾವಿರಾರು ವರ್ಷಗಳ ಇತಿಹಾಸ ಹೊಂದಿರುವ ಕರ್ನಾಟಕ ಸಾಹಿತ್ಯ ಪರಂಪರೆ ಎಂದಿನಿಂದ ಆರಂಭವಾಯಿತೆನ್ನುವ ಪ್ರಶ್ನೆಗೆ ಸೂಕ್ತ ಉತ್ತರ ಕಂಡುಕೊಳ್ಳುವುದೇ ತ್ರಾಸದಾಯಕ ವಿಚಾರವಾಗಿದೆ. ಪೂರ್ವದ ಕವಿಗಳು ರಚಿಸಿರಬಹುದಾದ ಕಾವ್ಯಗಳನ್ನು ಪಟ್ಟಿಮಾಡುವುದೇ ದೊಡ್ಡ ಸವಾಲಾಗಿದ್ದ ೧೯ನೆಯ ಶತಮಾನದಲ್ಲಿ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯನ್ನು ರಚಿಸುವುದು ದುಸ್ಸಾಹಸದ ವಿಷಯವಾಗಿತ್ತು. ಸಹಸ್ರಾರು ವರ್ಷಗಳಿಂದ ಬೆಳೆದು ಬಂದ ಕನ್ನಡ ಸಾಹಿತ್ಯವನ್ನು ಮೊದಲು ಒಂದೆಡೆ ಕಲೆಹಾಕಿ ಪಟ್ಟಿಮಾಡುವ, ಸಂಪಾದಿಸಿ ಪ್ರಕಟಿಸುವ ಕಾರ್ಯ ಆರಂಭವಾದದ್ದೇ ೧೯ನೆಯ ಶತಮಾನದ ಉತ್ತರಾರ್ಧ ಕಾಲದಲ್ಲಿ.

೧೮೪೦ರಿಂದ ೧೯೦೦ರ ಕಾಲದಲ್ಲಿ ಪಾಶ್ಚಾತ್ಯ ವಿದ್ವಾಂಸರಾದ ಕಿಟ್ಟೆಲ್, ಬಿ.ಎಲ್.ರೈಸ್, ವೆಯ್‌ಗ್ಲೆ ಮೊದಲಾದವರು ಕನ್ನಡ ಸಾಹಿತ್ಯ ಚರಿತ್ರೆಯನ್ನು ಕುರಿತ ಲೇಖನಗಳನ್ನು ರಚಿಸಿದರು. ಅವರಲ್ಲಿ ವೆಯ್‌ಗ್ಲೆಯವರು ZDMG ಪತ್ರಿಕೆಯಲ್ಲಿ ಜರ್ಮನ್ ಭಾಷೆಯಲ್ಲಿ ೧೮೪೮ರಲ್ಲಿ ಬರೆದ Canares Sprache U. Literature ಎಂಬ ೨೮ ಪುಟಗಳ ಲೇಖನವೇ ಕನ್ನಡ ಸಾಹಿತ್ಯ ಚರಿತ್ರೆಯನ್ನು ಕುರಿತ ಮೊದಲ ಬರಹವಾಗಿದೆ. ಈ ಲೇಖನದ ಸಾರವನ್ನು ಶ್ರೀನಿವಾಸ ಹಾವನೂರರು ಸಂಗ್ರಹಿಸಿಕೊಟ್ಟಿದ್ದಾರೆ[೬] ಕೇವಲ ಜನಪ್ರಿಯ ಶಿಷ್ಟಕಾವ್ಯವನ್ನಷ್ಟೇ ಅಲ್ಲದೆ ಜನಪದ ಕಾವ್ಯವನ್ನೂ ಕುರಿತು "ಇವು ಪ್ರಪಂಚದ ಯಾವ ಜನಪದ ಕಥನಗಳಿಗೂ ಕಡಿಮೆಯಿಲ್ಲ" ಎಂಬ ಮೆಚ್ಚುಗೆಯನ್ನು ಈ ಮೊದಲ ಲೇಖನದಲ್ಲಿಯೇ ಕಾಣುತ್ತೇವೆ.

೧೮೭೩ರಲ್ಲಿ ಕಿಟೆಲ್ಲರು **'ಇಂಡಿಯನ್ ಇವಾಂಜಲಿಕಲ್ ರಿವ್ಯೂ'** ಎಂಬ ಪತ್ರಿಕೆಯಲ್ಲಿ Old Kanarese Literature ಎಂಬ ಲೇಖನವನ್ನು ಬರೆದರು. ಮುಂದೆ ಇದೇ ವಿಚಾರವನ್ನು ವಿಸ್ತರಿಸಿ 1875ರಲ್ಲಿ ತಾವೇ ಸಂಪಾದಿಸಿದ **'ನಾಗವರ್ಮನ ಕನ್ನಡ ಛಂದಸ್ಸು'** ಎಂಬ ಕೃತಿಯ ಆರಂಭದಲ್ಲಿ An Essay On Canarese Literature ಎಂಬ ಹೆಸರಿನಲ್ಲಿ ಸುಮಾರು ೬೦ ಪುಟಗಳ ಪ್ರಬಂಧವೊಂದನ್ನು ಪ್ರಕಟಿಸಿದರು. ಈ ಲೇಖನದ ಮತ್ತೊಂದು ಸ್ವಾರಸ್ಯಕರ ಅಂಶವೆಂದರೆ "ಭಾರತದ' ದೇಶೀಯ ಭಾಷೆಗಳಲ್ಲಿ ತಮಿಳು ಸಾಹಿತ್ಯ ಒಂದೇ ಸಂಸ್ಕೃತ ಅನುಕರಣಕ್ಕೆ ಪ್ರಯತ್ನಿಸದೆ ಅದಕ್ಕೆ ಸರಿಸಮನಾಗಿ ನಿಲ್ಲಲು ಪ್ರಕಾಶಿಸಲು ಪ್ರಯತ್ನಿಸಿದೆ" ಎಂದು ಹೇಳಿದ್ದ ಕಾಲ್ಡ್‌ವೆಲ್ಲರ ನಿಲುವನ್ನು ಒಪ್ಪದ ಕಿಟಲ್‌ರು "ನನ್ನ ಅಭಿಪ್ರಾಯದಲ್ಲಿ ಬೇರೆ ಯಾವುದೇ ದೇಶೀಯ ಭಾಷೆಗಳಿಗೆ ಹೋಲಿಸಿದರೂ ಕನ್ನಡ ಕೃತಿಗಳು

ಹೆಚ್ಚು ಪ್ರಸಿದ್ಧವಾಗಿರುವುದು ಸಾಬೀತಾಗುತ್ತದೆ” ಎಂಬ ಸೂಕ್ತ ಮೆಚ್ಚುಗೆಯ ಹೇಳಿಕೆಯನ್ನು ನೀಡಿದ್ದಾರೆ[೭]. ಮುಂದೆ ಎರಡು ವರ್ಷಗಳಲ್ಲಿ ಕಿಟೆಲ್ಲರು **‘ಇಂಡಿಯನ್ ಆಂಟಿಕ್ವೆರಿ’** ಪತ್ರಿಕೆಯಲ್ಲಿ ಬರೆದ On the Karnataka Vaishnava Dasas, ಹಾಗೂ Nijaguna’s notes on Indian Music ಲೇಖನಗಳೂ ಸಾಹಿತ್ಯ ಚರಿತ್ರೆಯ ಬೆಳವಣಿಗೆಯ ದೃಷ್ಟಿಯಿಂದ ಮಹತ್ವಪೂರ್ಣವಾಗಿವೆ.

೧೮೭೫ರಲ್ಲಿ ಬಿ.ಎಲ್.ರೈಸರು ತಾವು ಸಂಪಾದಿಸಿ ಪ್ರಕಟಿಸಿದ ಮೈಸೂರು ಗೆಜಿಟಿಯರ್‌ನ ಮೊದಲ ಸಂಪುಟದಲ್ಲಿ, ೧೮೮೪ರ ಕರ್ಣಾಟಕ ಭಾಷಾಭೂಷಣದಲ್ಲಿ ಹಾಗೂ ೧೮೯೦ರ ಕರ್ಣಾಟಕ ಶಬ್ದಾನುಶಾಸನಂ ಗ್ರಂಥಗಳ ಪೀಠಿಕಾಭಾಗದಲ್ಲಿ ಹಾಗೂ ೧೮೮೨–೧೮೯೦ರ ಅವಧಿಯಲ್ಲಿ JRASನ ಕೆಲವು ಸಂಚಿಕೆಗಳಲ್ಲಿ ಕನ್ನಡ ಸಾಹಿತ್ಯ ಚರಿತ್ರೆಗೆ ಸಂಬಂಧಿಸಿದಂತೆ ಹಲವು ವಿಚಾರಗಳನ್ನು ವಿಮರ್ಶಿಸಿ ಕೊಟ್ಟಿದ್ದಾರೆ. ಆದರೆ ಕಿಟೆಲ್ ಯಾವ ಲೇಖನದಲ್ಲಿಯೂ ಲೇಖಕಿಯರನ್ನು ಗುರುತಿಸಿಲ್ಲ. ಆದರೆ ರೈಸರು ತಮ್ಮ ಲೇಖನದಲ್ಲಿ ಹೊನ್ನಮ್ಮನನ್ನು ಸೇರಿಸಿ “ನಮ್ಮ ಪಟ್ಟಿಯಲ್ಲಿರುವ ಏಕೈಕ ಲೇಖಕಿ” ಎಂದು ತಿಳಿಸಿದ್ದಾರೆ. **ಈ ಮೂಲಕ ಕನ್ನಡಸಾಹಿತ್ಯ ಚರಿತ್ರೆಯಲ್ಲಿ ಮೊತ್ತಮೊದಲು ದಾಖಲಾದ ಕವಯತ್ರಿ ಹೊನ್ನಮ್ಮಳಾಗಿದ್ದಾಳೆ.**

ಕಿಟ್ಟೆಲ್ ಮತ್ತು ರೈಸರು ಕನ್ನಡ ಸಾಹಿತ್ಯ ಚರಿತ್ರೆಗೆ ಅಡಿಪಾಯ ಹಾಕಿದವರು. ಇವರ ಈ ಲೇಖನಗಳು ಪ್ರಕಟವಾದನಂತರ, ಸಾಹಿತ್ಯಚರಿತ್ರೆಯನ್ನು ಕುರಿತಂತೆ ಕನ್ನಡ ವಿದ್ವಾಂಸರು ಹೆಚ್ಚುಹೆಚ್ಚು ಚಿಂತಿಸಲಾರಂಭಿಸಿದರು. ಬಿ.ಎಂ.ಶ್ರೀ ಅವರು **“ಕಿಟೆಲ್ಲರ** ಲೇಖನವು ಕನ್ನಡ ಸಾಹಿತ್ಯ ಚರಿತ್ರೆಯನ್ನು ಸಾಧನೆ ಮಾಡಲು ಪೂರ್ವಭಾವಿಯಾಗಿ ನೆರವೇರಿಸಿದ ಆಯುಧಪೂಜೆ**”**[೮] ಎಂದಿರುವಂತೆ, ಆಯುಧ ಪೂಜೆಯನ್ನು ಸಾಂಗವಾಗಿ ನೆರವೇರಿಸಿದ ಬಳಿಕ ಸಾಕಷ್ಟು ವಾಕ್‌ಸಮರಗಳು, ಚರ್ಚೆಗಳೆಂಬ ಗದಾಪ್ರಹಾರಗಳು ಈ ಸಾಹಿತ್ಯಚರಿತ್ರೆಯ ಕುರಿತಾಗಿ ವಿದ್ವತ್‌ವಲಯದಲ್ಲಿ ಹೆಚ್ಚುಹೆಚ್ಚು ನಡೆದಿವೆ. ಎ.ವೆಂಕಟಸುಬ್ಬಯ್ಯನವರು ಕವಿಚರಿತೆಯ ಸಂಪುಟಗಳನ್ನು ವಿಮರ್ಶಿಸಿ ಬರೆದ ಹಲವು ಕವಿಗಳ ಜೀವನ, ಕಾಲ ವಿಚಾರಗಳ ವಿದ್ವತ್ಪೂರ್ಣ ವಿಚಾರಸರಣಿಗಳಿಂದ ಕವಿಚರಿತೆಯ ಮಾಹಿತಿ ಹೆಚ್ಚು ಪಕ್ವವಾಗುವಂತಾಯಿತು. ಕವಿಗಳ ಕುರಿತಾಗಿ ವಿದ್ವಾಂಸರು ಎತ್ತಿದ ಆಕ್ಷೇಪಣೆಗಳು ವಿದ್ವತ್‌ಜನತೆಯನ್ನು ಹೆಚ್ಚು ಆಲೋಚನೆಗೆ ವಿಮರ್ಶೆಗೆ ತೊಡಗುವಂತೆ ಪ್ರೇರೇಪಿಸಿತು. ಪ್ರಬುದ್ಧ ಕರ್ಣಾಟಕ, ಮಾನವಿಕ ಕರ್ಣಾಟಕ, ಪರಿಷತ್ಪತ್ರಿಕೆ ಮೊದಲಾದ ಸಂಶೋಧನ ಪತ್ರಿಕೆಯ ಸಂಪುಟಗಳಲ್ಲಿ ಕವಿ, ಕೃತಿಗಳ ಕುರಿತಾಗಿ ಚರ್ಚಿತಗೊಂಡ ಲೇಖನಗಳು, ಸವಾಲುಗಳು, ಜವಾಬುಗಳು ಪ್ರಕಟವಾಗಲು ತೊಡಗಿದವು.

ಕ್ರಿ.ಶ.೧೯೨೧ರಲ್ಲಿ ಇ.ಪಿ.ರೈಸರು ರಚಿಸಿರುವ A History of Kanarese Literature ಕೃತಿಯನ್ನು ಶಾಸ್ತ್ರೀಯ ದೃಷ್ಟಿಯನ್ನೊಳಗೊಂಡ ಮೊತ್ತಮೊದಲ ಸಾಹಿತ್ಯಚರಿತ್ರೆಯೆಂದು ವಿದ್ವಾಂಸರು ಗುರುತಿಸಿದ್ದಾರೆ. ೧೯೧೯ರಲ್ಲಿ ಕರ್ಣಾಟಕ ಕವಿಚರಿತೆಯ ಎರಡನೆಯ ಸಂಪುಟದಲ್ಲಿ ಬೆಳಕಿಗೆ ಬಂದ ಬಹಳಷ್ಟು ಸಂಗತಿಗಳನ್ನು ಸೇರಿಸಿಕೊಂಡು ಈ ಕೃತಿಯನ್ನು ಪುನರ್‌ಪರಿಷ್ಕರಿಸಿ ಪ್ರಕಟಿಸಲಾಗಿದೆ[೯]. ಇದು ಆಂಗ್ಲಭಾಷೆಯಲ್ಲಿ ರಚಿತವಾದ ೧೧೫ ಪುಟಗಳ ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆಯಾಗಿದೆ. ಇದರಲ್ಲಿ **ಕಂತಿ, ಅಕ್ಕಮಹಾದೇವಿ, ನಾಗಲಾಂಬಿಕೆ, ಹೊನ್ನಮ್ಮ** ಮೊದಲಾದ ಲೇಖಕಿಯರ ವಿಚಾರ ಸಂಕ್ಷಿಪ್ತವಾಗಿ ದಾಖಲಾಗಿದೆ.

**ಕರ್ಣಾಟಕ ಕವಿಚರಿತೆ:** ಪಾಶ್ಚಾತ್ಯ ವಿದ್ವಾಂಸರು ಹಾಕಿಕೊಟ್ಟ ಬುನಾದಿಯ ಮೇಲೆ ಕವಿಚರಿತೆಯ ಮೂರು ಸಂಪುಟಗಳನ್ನು ಆರ್.ನರಸಿಂಹಾಚಾರ್ಯರು ಸಂಪಾದಿಸಿದರು. ಈ ಮೂರು ಸಂಪುಟಗಳ ಮೊದಲ ಅವತರಣಿಕೆ ಕ್ರಮವಾಗಿ ೧೯೦೭, ೧೯೧೯, ೧೯೨೯ರಲ್ಲಿ ಪ್ರಕಟವಾಯಿತು. ಆರ್.ನರಸಿಂಹಾಚಾರ್ಯ ಮತ್ತು ಎಸ್.ಜಿ.ನರಸಿಂಹಾಚಾರ್ಯರ ಸಂಯುಕ್ತ ಸಂಪಾದಕತ್ವದಲ್ಲಿ ಹೊರಬಂದ ಮೊದಲನೆಯ ಸಂಪುಟದಲ್ಲಿ ಆರಂಭಕಾಲದಿಂದ ೧೪ನೆಯ ಶತಮಾನದ ಕೊನೆಯ ವರೆಗಿನ ಕಾಲದಲ್ಲಿದ್ದ ಕವಿಗಳನ್ನು, ದ್ವಿತೀಯ ಸಂಪುಟವು

೧೭ನೆಯ ಶತನಮಾನದವರೆಗಿನ, ಹಾಗೂ ತೃತೀಯ ಸಂಪುಟವು ೧೯ನೆಯ ಶತಮಾನದವರೆಗಿನ ಕವಿಗಳ ಪರಿಚಯವನ್ನೊಳಗೊಂಡಿದೆ. ಕನ್ನಡ ವಾಙ್ಮಯದ ಎಲ್ಲಾ ಅಭ್ಯಾಸಕ್ಕೂ ಕವಿಚರಿತೆಯ ಸಂಪುಟಗಳು ಆಕರಗ್ರಂಥಗಳಾಗಿವೆ. ಕವಿಕಾವ್ಯ ವಿಚಾರಗಳಿಗೆ ಮೂಲಆಕರ ಎನಿಸುವ ಕವಿಚರಿತೆಯು ಇಲ್ಲಿ ಉಕ್ತವಾದ ವಿಚಾರಗಳಿಗಷ್ಟೆ ಅಲ್ಲದೆ ಇಲ್ಲಿ ಅನುಕ್ತರಾದ ಕವಿಗಳ ವಿಚಾರವನ್ನು ಕುರಿತು ಹೇಳುವಾಗಲೂ ಮಾನದಂಡವಾಗಿರುವುದು, ಕಾಲ ಮೊದಲಾದ ವಿಚಾರಗಳ ನಿರ್ಣಯದಲ್ಲಿ ಖಚಿತ ಅಂಶಗಳಿಗಾಗಿ ಉಲ್ಲೇಖಿಸುವುದಲ್ಲದೆ, ಭಿನ್ನಾಭಿಪ್ರಾಯವಿದ್ದಲ್ಲೂ ಕವಿಚರಿತೆಯ ವಿಚಾರದೊಂದಿಗೇ ಚರ್ಚಿಸುವ ಪರಿ ಈ ಕೃತಿಯ ಹಿರಿಮೆ ಗರಿಮೆಗಳನ್ನು ಸಾರುತ್ತದೆ.

ಆರ್.ನರಸಿಂಹಾಚಾರ್ಯರ ಈ ಕವಿಚರಿತೆಯಲ್ಲಿ ಸಾಧಾರಣವಾಗಿ ಕವಿಗಳ ವಿವರವನ್ನು ಕೊಡುವಾಗ ಅನುಸರಿಸಿರುವ ಪದ್ಧತಿಯೆಂದರೆ, ಕವಿಯ ಕಾಲ, ದೇಶ, ವಂಶ, ಮತ, ಗುರು, ಪೋಷಕ, ಬಿರುದುಗಳು, ಜೀವನ ವೃತ್ತಾಂತದ ಮಹತ್ವದ ವಿಚಾರಗಳು, ಅನಂತರ ವಿಚಾರಪೂರ್ವಕವಾಗಿ ಕಾಲನಿರ್ಣಯ, ಕವಿಯನ್ನು ಸ್ತುತಿಸುವ ಇತರ ಕವಿಗಳ ಹೆಸರು, ಈ ಕವಿಯಿಂದ ಸ್ಮರಿಸಲ್ಪಟ್ಟ ಇತರ ಕವಿಗಳು. ಅನಂತರ ಕವಿ ತನ್ನ ಕವಿತಾಚಾತುರ್ಯ, ಗುಣಗಳು ಮೊದಲಾದುವನ್ನು ಹೇಳಿಕೊಳ್ಳುವ ಪದ್ಯಗಳು, ಈ ಕವಿಯಿಂದ ರಚಿತವಾದ ಗ್ರಂಥಗಳ ಪ್ರತ್ಯೇಕ ಪರಿಚಯ, ಕಾವ್ಯದ ಸ್ವರೂಪ, ಪ್ರತಿಪಾದ್ಯವಿಷಯ, ಕಥಾಗರ್ಭ, ಆಶ್ವಾಸ ಸಂಖ್ಯೆ, ಇಷ್ಟದೇವತಾ ಸ್ತುತಿ, ಗುರುಪರಂಪರೆ, ಗ್ರಂಥರಚನೆಗೆ ಕಾರಣ ಮೊದಲಾದುವನ್ನು ವಿವರಿಸಿ ಬಳಿಕ ಆಶ್ವಾಸಾಂತ್ಯಗಳಲ್ಲಿ ದೊರೆಯುವ ಗದ್ಯಗಳ ಅನುವಾದ, ಆನಂತರ ಗ್ರಂಥದ ಬಂಧದ ವಿಷಯವಾಗಿ ಒಂದೆರಡು ಮಾತುಗಳನ್ನು ಹೇಳಿ ಕವಿತೆಯ ಧೋರಣೆಯನ್ನು ತೋರಿಸುವುದಕ್ಕಾಗಿ ಕೆಲವು ಪದ್ಯಗಳನ್ನು ಉದಾಹರಿಸಲಾಗಿದೆ. ಈ ಕ್ರಮವನ್ನು ಅನುಸರಿಸಿ ಕವಿಗಳ ಚರಿತೆಯನ್ನು ಬರೆಯಲಾಗಿದ್ದರೂ, ಮೇಲೆ ವಿವರಿಸಿದ ಅಂಶಗಳೆಲ್ಲಾ ತಿಳಿದುಬಾರದಿರುವ ಕೆಲವು ಕವಿಗಳ ಚರಿತೆಯನ್ನು ಯಥೋಚಿತವಾಗಿ ಸಂಕ್ಷೇಪಿಸಿ ಬರೆದಿದೆ. ಕವಿಗಳು ಗೊತ್ತಿಲ್ಲದ ಕೆಲವು ಗ್ರಂಥಗಳ ವಿಚಾರಗಳನ್ನೂ ಪ್ರಸ್ತಾಪಿಸಿದ್ದಾರೆ. ಕವಿಗಳ ಕಾಲವನ್ನು ನಿರ್ಣಯಿಸುವುದರಲ್ಲಿ ಅವಶ್ಯಕವಾದ ಸಾಮಗ್ರಿಗಳನ್ನು ಸಂಗ್ರಹಿಸಿ, ಅವನ್ನು ಅಳವಡಿಸಿಕೊಂಡು ನಿರ್ಧಾರಕ್ಕೆ ಬಂದಿರುವ ಈ ಕ್ರಮವು ಶಾಸ್ತ್ರೀಯ ದೃಷ್ಟಿಯಿಂದ ಕೂಡಿದೆ. ಇವರ ಕೃತಿಯನ್ನು ಹಾಗೂ ಕೃತಿಯ ಹಿಂದಿನ ಪರಿಶ್ರಮವನ್ನು ಕುರಿತು ದೇಶ ವಿದೇಶದ ವಿದ್ವಾಂಸರು ನಾನಾ ಪರಿಯಲ್ಲಿ ಶ್ಲಾಘಿಸಿದ್ದಾರೆ.

**ಕವಯತ್ರಿಯರ ಉಲ್ಲೇಖ:** ಆರಂಭಿಕ ಹಂತದ ಈ ಗ್ರಂಥದಲ್ಲಿ ಮಹಿಳೆಯರ ಪ್ರಾತಿನಿಧ್ಯ ಯಾವ ಮಟ್ಟದಲ್ಲಿದೆ ಎಂಬುದನ್ನು ಗಮನಿಸುವ ಅಗತ್ಯವಿದೆ. ಕವಿಚರಿತೆ ಮೊದಲನೆಯ ಸಂಪುಟದಲ್ಲಿ ಉಲ್ಲೇಖಿತರಾಗಿರುವ ಕವಯತ್ರಿಯರು ಈ ಪ್ರಕಾರವಾಗಿದ್ದಾರೆ: ಕಂತಿಯೆಂದೇ ಪ್ರಸಿದ್ಧವಾದ ಕವಯತ್ರಿಯೋರ್ವಳ ಕುರಿತಾಗಿ ಹೇಳುತ್ತಾ, ಈಕೆ ರಚಿಸಿರುವ ಕೃತಿಗಳು ದೊರೆತಿಲ್ಲವಾದರೂ ಕಂತಿಹಂಪನ ಸಮಸ್ಯೆಗಳಿಂದ ಕೆಲವು ಪದ್ಯಗಳನ್ನು ಉದಾಹರಿಸಿ, ಈಕೆಯನ್ನು ಸ್ತುತಿಸಿರುವ ಇತರ ಕವಿಗಳಿಂದ ತಿಳಿದುಬರುವ ವಿವರಗಳನ್ನು ನೀಡಿದ್ದಾರೆ. ಬಸವಣ್ಣನ ಮಡದಿ ನೀಲಮ್ಮ ಕುರಿತಾದ ಕೆಲವು ವಿಚಾರಗಳೊಂದಿಗೆ ಇವಳು ರಚಿಸಿರುವ ಕಾಲಜ್ಞಾನ ವಚನ ಹಾಗೂ ಇವಳನ್ನು ಕುರಿತಾಗಿ ರಚಿತವಾದ ನೀಲಮ್ಮನ ಸ್ತೋತ್ರ, ನೀಲಾಂಬಿಕಾ ಪಂಚವಿಂಶತಿ, ನೀಲಮ್ಮನ ತ್ರಿವಿಧಿ ಮೊದಲಾದ ಗ್ರಂಥಗಳನ್ನು ಉಲ್ಲೇಖಿಸಿದ್ದಾರೆ. ಮಹಾದೇವಿಯಕ್ಕನ ಕಿರುಪರಿಚಯದೊಂದಿಗೆ ಇವಳ ವಚನಗಳನ್ನು ಹಾಗೂ ಯೋಗಾಂಗ ತ್ರಿವಿಧಿಯ ಕೆಲವು ವಚನಗಳನ್ನು ಕೊಟ್ಟಿದ್ದಾರೆ. ಗೊಗ್ಗವ್ವೆ, ರೆಮ್ಮವ್ವೆ, ರೇಚವ್ವೆ, ಬುದ್ಧಯ್ಯನ ಹೆಂಡತಿ ಕಾಳವ್ವೆ, ಕೊಟ್ಟಣದ ಸೋಮವ್ವೆ , ಬಾಚಿಕಾಯಕದ ಬಸವಪ್ಪನ ಹೆಂಡತಿ ಕಾಳವ್ವೆ, ಉರಿಲಿಂಗಪೆದ್ದಿಯ ಹೆಂಡತಿ ಕಾಳವ್ವೆ, ಬೊಂತಲದೇವಿ, ವೀರಮ್ಮ, ಲಿಂಗಮ್ಮ, ಸತ್ಯಕ್ಕ, ಬಿಜ್ಜಳದೇವಿ, ಮೋಳಿಗೆ ಮಾರಯ್ಯನ ಮಡದಿ ಮಹಾದೇವಿ ಮೊದಲಾದವರ ಕುರಿತಾದ ಸಂಕ್ಷಿಪ್ತ ವಿವರದೊಂದಿಗೆ ಅವರ ಕೆಲವೊಂದು ವಚನಗಳನ್ನು ಉದಾಹರಿಸಿದ್ದಾರೆ. ಈ ಪ್ರಕಾರವಾಗಿ ಮೊದಲನೆಯ ಸಂಪುಟದಲ್ಲಿ ೧೪ನೆಯ ಶತಮಾನದವರೆಗಿನ ಕಾಲದ

ಸುಮಾರು ೧೫ ವಚನಕಾರ್ತಿಯರನ್ನೂ ಹಾಗೂ ಅವರ ವಚನಗಳನ್ನು ಪರಿಚಯಿಸಿರುವುದಲ್ಲದೆ ಸುಮಾರು ೧೦ ಲೇಖಕಿಯರ ಉಲ್ಲೇಖಗಳನ್ನು ಇತರ ಕವಿಗಳ ಸ್ತುತಿಯಿಂದ ದಾಖಲಿಸಿದ್ದಾರೆ.

ದ್ವಿತೀಯ ಸಂಪುಟದಲ್ಲಿ ಎಡೆಮಟದ ನಾಗಿದೇವನ ಹೆಂಡತಿ ಮಸಣಮ್ಮ, ಕಾಲು ಕಣ್ಣಿಯ ಕಾಯಮ್ಮ, ಗುಡ್ಡವ್ವೆ, ರೇವಣ ಸಿದ್ಧಯ್ಯನ ಹೆಂಡತಿ ರೇಕಮ್ಮರ ವಿಚಾರವನ್ನು ತಿಳಿಸಿ, ಇವರು ರಚಿಸಿರುವ ವಚನಗಳನ್ನು ಉದಾಹರಿಸಿ ಬರೆದಿದ್ದಾರೆ. ೧೭ನೆಯ ಶತಮಾನದಲ್ಲಿ ಮೈಸೂರಿನ ಅರಸ ಚಿಕ್ಕದೇವರಾಯನ ಆಸ್ಥಾನದಲ್ಲಿದ್ದ ಹೊನ್ನಮ್ಮ ಹಾಗೂ ಶೃಂಗಾರಮ್ಮರನ್ನು ಕುರಿತಾಗಿ ಹಾಗೂ ಇವರು ರಚಿಸಿರುವ ಹದಿಬದೆಯ ಧರ್ಮ ಹಾಗೂ ಪದ್ಮಿನೀ ಕಲ್ಯಾಣ ಕೃತಿಗಳ ಕುರಿತಾದ ಪರಿಚಯ ಮಾಡಿಕೊಟ್ಟಿದ್ದಾರೆ.

೧೮ನೆಯ ಶತಮಾನದಲ್ಲಿದ್ದ ಹೆಳವನಕಟ್ಟೆ ಗಿರಿಯಮ್ಮಳ ಹಾಗೂ ಇವಳ ಕೃತಿಗಳ ಪರಿಚಯ, ಇದೇ ಕಾಲದಲ್ಲಿದ್ದ ಮೈಸೂರು ದೊಡ್ಡ ಕೃಷ್ಣರಾಜನ ರಾಣಿ ಚೆಲುವಾಂಬೆಯ ಪರಿಚಯದೊಂದಿಗೆ ಇವರು ರಚಿಸಿರುವ ಕೃತಿಗಳ ಕೆಲವು ಪದ್ಯಗಳ ಉದಾಹರಣೆಯೊಂದಿಗೆ ಪರಿಚಯಿಸಿದ್ದಾರೆ.

೧೯ನೆಯ ಶತಮಾನದಲ್ಲಿನ ಕವಯತ್ರಿಯರಲ್ಲಿ ಉತ್ತರ ಕರ್ನಾಟಕ ಪ್ರಾಂತದ ಶಾಂತಿಬಾಯಿ, ನಂಜನಗೂಡಿನ ಹಾಡಿನ ರಂಗಮ್ಮ, ಎಣ್ಣೆಹೊಳೆ ಕೊಪ್ಪಲು ಸೀಮೆಯ ಶ್ರೀವೈಷ್ಣವ ಕವಯತ್ರಿ ವೆಂಕಟಲಕ್ಷ್ಮಮ್ಮ, ಮೈಸೂರಿನ ತುಳಸೀಬಾಯಿ, ಸಿ.ಆರ್.ಚೆಲ್ಲಮ್ಮ ಮೊದಲಾದವರ ಒಂದೆರಡು ಸಾಲಿನ ಪರಿಚಯದೊಂದಿಗೆ ಲಭ್ಯ ಕೃತಿಗಳ ಉಲ್ಲೇಖವಿದೆ.

ದ್ವಿತೀಯ ಸಂಪುಟದ ಮುನ್ನುಡಿಯಲ್ಲಿ ರಾಣಿಯರು ಪ್ರೋತ್ಸಾಹ ನೀಡಿ ಕಾವ್ಯ ರಚನೆಗೆ ಕಾರಣವಾದ ಕೆಲವು ಪ್ರಸಂಗಗಳನ್ನು ತಿಳಿಸಿದ್ದಾರೆ. ಚೆನ್ನಮಾಂಬೆಯ ಆಳಿಕೆಯಲ್ಲಿ ತಿರುಮಲಸಾಮಂತನ ಕೋಶಾಧ್ಯಕ್ಷನಾದ ಪದ್ಮನಾಭ ರಚಿಸಿದ ಪದ್ಮಾವತೀ ಚರಿತೆ, ಅಬ್ಬಕ್ಕದೇವಿಯ ಆಳಿಕೆಯಲ್ಲಿ ಪಟ್ಟಾಭಿರಾಮ ರಚಿಸಿದ ರತ್ನಶೇಖರ ಚರಿತೆ, ಚೌಟರಸ ಚಂದ್ರಶೇಖರ ಚಿಕ್ಕರಾಯನ ರಾಣಿವಾಸದ ಚೆನ್ನಮ್ಮದೇವಿಯ ಆಜ್ಞಾನುಸಾರ ಪದ್ಮಾವತೀ ಚರಿತೆಯನ್ನು ರಚಿಸಿದ ಸುರಾಲ. ಮೈಸೂರು ಖಾಸಾಚಾಮರಾಜನ ಮಹಿಷಿ ದೇವೀರಮ್ಮಣ್ಣಿಯ ಪ್ರೇರಣೆಯಿಂದ ದೇವಚಂದ್ರ ರಚಿಸಿದ ರಾಜಾವಳೀ, ಮುಮ್ಮಡಿ ಕೃಷ್ಣರಾಜರ ಮಹಿಷಿಯರ ಆಜ್ಞಾನುಸಾರವಾಗಿ ಭಾಗವತ ಕೃಷ್ಣಸ್ವಾಮಿಯಿಂದ ರಚಿತವಾದ ಕೃತಿಗಳನ್ನು ಉಲ್ಲೇಖಿಸಿದ್ದಾರೆ.[೧೦] ಕಾವ್ಯಕ್ಕೆ ಪ್ರೋತ್ಸಾಹ ನೀಡಿರುವ ಕನ್ನಡ ನಾಡಿನ ಕೆಲವು ಅರಸಿಯರ ವಿಚಾರವನ್ನು ಒಂದೆಡೆ ಕಲೆಹಾಕಿ ಕವಿಚರಿತೆಯಲ್ಲಿ ಇಂಥ ಅಧ್ಯಯನಗಳು ನಡೆಯಲು ಇರುವ ಅವಕಾಶವನ್ನು ಸೂಚ್ಯವಾಗಿ ತಿಳಿಸಿದ್ದಾರೆ.

ಕರ್ಣಾಟಕ ಕವಿಚರಿತೆಯ ಸಂಪುಟಗಳಲ್ಲಿ ಕೆಲವು ಸಂಸ್ಕೃತ ಕವಿಗಳನ್ನು, ಶಾಸನ ಕವಿಗಳನ್ನು, ಕೃತಿಲಭ್ಯವಿಲ್ಲದ ಕೆಲವು ಕವಿಗಳ ಹೆಸರುಗಳನ್ನು ಉಲ್ಲೇಖಿಸಿ ಈತ ಯಾವುದಾದರೂ ಕನ್ನಡ ಗ್ರಂಥ ಬರೆದಿರುವ ಶಕ್ಯವಿದೆ ಎಂಬ ಅನುಮಾನ ವ್ಯಕ್ತಪಡಿಸಿರುವಂತೆ ಲೇಖಕಿಯರನ್ನೂ ಗುರುತಿಸಿದ್ದಾರೆ. ಮೊದಲನೆಯ ಸಂಪುಟದಲ್ಲಿ ಹೇರೂರ ಹೆಣ್ಣು, ಸೂಳೆ ಸಂಕಲದೇವಿ, ಕಾಮಲದೇವಿ, ನಂಬಿಯಕ್ಕ, ಪದ್ಮಲದೇವಿ, ಬೊಮ್ಮಲದೇವಿ, ಮುಕ್ತಾಯಕ್ಕ, ರಾಯಮ್ಮ ಮೊದಲಾದವರ ಹೆಸರುಗಳನ್ನು ಇತರ ಕವಿಗಳ ಉಲ್ಲೇಖಗಳ ಆಧಾರಗಳಿಂದ ಹೆಸರಿಸಿದರೆ, ದ್ವಿತೀಯ ಸಂಪುಟದಲ್ಲಿ ಕುಂತಿ, ಚವುಂಡಿಯರನ್ನು ಹೆಸರಿಸಿ ನೀತಿಸಾರ ಗ್ರಂಥದ ಆಧಾರದಮೇಲೆ ಸುಮಾರು ೧೫೦೦ರ ಕಾಲದಲ್ಲಿದ್ದಿರಬಹುದಾದ ಇವರನ್ನು ಕವಿಗಳ ಗೋಷ್ಠಿಯಲ್ಲಿ ಸೇರಿಸಿರುವುದರಿಂದ ಗ್ರಂಥ ರಚಿಸಿರಬಹುದೆಂದು ಊಹಿಸಿದ್ದಾರೆ.

ತೃತೀಯ ಸಂಪುಟವನ್ನು ೧೮-೧೯ನೆಯ ಶತಮಾನದ ಕವಿಗಳಿಗೆ ಮೀಸಲಿಟ್ಟಿದ್ದರೂ ೨೦ನೆಯ ಶತಮಾನದ ಕೆಲವು ಕವಿಗಳನ್ನು ಉಲ್ಲೇಖಿಸಿದ್ದಾರೆ ಅಂತೆಯೇ ಕೆಲವು ಕವಯತ್ರಿಯರನ್ನೂ ಗುರುತಿಸಿದ್ದಾರೆ. (ಈ ಕಾರಣದಿಂದ ತೃತೀಯ ಸಂಪುಟದಲ್ಲಿ ಲೇಖಕಿಯರನ್ನು ಒಂದೆರಡು ಸಾಲಿನಲ್ಲಿ ಪರಿಚಯಿಸಿರುವುದನ್ನು, ಲೇಖಕಿಯರ ಮೇಲಿನ ಅಸಡ್ಡೆ ಎನ್ನಲಾಗುವುದಿಲ್ಲ) ಈ ಸಂಪುಟದ ಮುನ್ನುಡಿಯಲ್ಲಿ ಕಂತಿಯ ಕುರಿತಾದ ಕೆಲವು ಆಕ್ಷೇಪಗಳಿಗುತ್ತರಿಸುತ್ತಾ ಕಂತಿಯೆಂಬುವ ಕವಿಯತ್ರಿ ಇದ್ದಳೆ? ಎನ್ನುವ ಸಂಶಯಕ್ಕೆ ಲಭ್ಯಮಾಹಿತಿಯಿಂದ ಕಂತಿಯ ಐತಿಹಾಸಿಕ ಸಂದೇಹ ನಿವಾರಿಸುವಲ್ಲಿ ಸೂಕ್ತ ಉತ್ತರ ನೀಡಿದ್ದಾರೆ.[೧೧] ಆದರೂ ಆನಂತರದ ಕೆಲವು ಸಾಹಿತ್ಯ ಚರಿತ್ರೆಗಳಲ್ಲಿ ಕಂತಿಯನ್ನು ಅಲಕ್ಷಿಸಿರುವುದನ್ನು ಕಾಣುತ್ತೇವೆ.

**ಕರ್ಣಾಟಕ ಕವಿಚರಿತೆಯ ನಂತರ ಬಂದ ಕೆಲವು ಸಾಹಿತ್ಯಚರಿತ್ರೆಗಳು**

ಎನ್.ಕೆ.ಕುಲಕರ್ಣಿಯವರ 'ಕನ್ನಡ ಸಾಹಿತ್ಯವಾಹಿನಿ' (೧೯೨೯), ಎಂ.ಜಿ.ವೆಂಕಟೇಶಯ್ಯನವರ 'ಕನ್ನಡ ಸಾಹಿತ್ಯ ಚರಿತ್ರೆಯ ಟಿಪ್ಪಣಿ' (೧೯೩೮), ಕೆ.ವೆಂಕಟರಾಮಪ್ಪನವರ 'ಕನ್ನಡಸಾಹಿತ್ಯ' (೧೯೩೯), ಬಿ.ಎಂ.ಶ್ರೀ ಅವರ 'ಕನ್ನಡ ಸಾಹಿತ್ಯ ಚರಿತ್ರೆ'[೧೨] ಮೊದಲಾದ ಸಾಹಿತ್ಯ ಚರಿತ್ರೆಗಳು ತಮ್ಮದೇ ಆದ ಹೊಸ ಆಯಾಮಗಳೊಂದಿಗೆ ರಚಿತವಾದವು.

ಎನ್.ಕೆ.ಕುಲಕರ್ಣಿಯವರ 'ಕನ್ನಡ ಸಾಹಿತ್ಯವಾಹಿನಿ'ಯನ್ನು ಕುರಿತು 'ಕನ್ನಡ ಸಾಹಿತ್ಯ ಚರಿತ್ರೆಯ ವಿಭಜನ ಕ್ರಮಗಳು' ಎಂಬ ಲೇಖನದಲ್ಲಿ[೧೩] ಡಿ.ಕೆ.ರಾಜೇಂದ್ರರು "ನಿರೂಪಣೆ ಬಹು ಸಂಕ್ಷೇಪವಾದರೂ, ಹಿಡಿದ ದಾರಿಯಲ್ಲಿ ಹೊಸತನವಿದೆ. ಸಾಹಿತ್ಯ ರೂಪಗಳಿಗೆ ಆದ್ಯತೆಕೊಟ್ಟು ಬರೆದ ಸಾಹಿತ್ಯ ಚರಿತ್ರೆಗಳಲ್ಲಿ ಪ್ರಾಯಃ ಇದೇ ಮೊದಲನೆಯದು" ಎಂದಿದ್ದಾರೆ. ಬಿ.ಎಂ.ಶ್ರೀ ಅವರ 'ಕನ್ನಡ ಸಾಹಿತ್ಯ ಚರಿತ್ರೆ'ಯು 'ಕನ್ನಡ ಕೈಪಿಡಿ' ಗ್ರಂಥದ ಐದನೆಯ ಭಾಗ, ದ್ವಿತೀಯ ಸಂಪುಟವಾಗಿ ಎರಡನೆಯ ಬಾರಿ ಮುದ್ರಿತವಾಗಿ ೧೯೪೭ರಲ್ಲಿ ಪುನಃ ಪ್ರಕಟಗೊಂಡಿತು. ಆದರೆ ಇದು 'ಕರ್ಣಾಟಕ ಕವಿಚರಿತೆ' ತೃತೀಯ ಸಂಪುಟವು ಹೊರಬರುವ (೧೯೨೯) ಪೂರ್ವದಲ್ಲಿಯೇ ರಚಿತವಾಗಿತ್ತೆಂದು ಇದರ ಮುನ್ನುಡಿಯಲ್ಲಿ ಕುವೆಂಪು ಅವರು ತಿಳಿಸಿದ್ದಾರೆ. ಆರ್.ನರಸಿಂಹಾಚಾರ್ಯರ 'History of Kannada Literature'ಎಂಬ ೭೭ ಪುಟಗಳ ಪುಟ್ಟ ಗ್ರಂಥವು ೧೯೪೦ರಲ್ಲಿ ಪ್ರಕಟವಾಗಿದೆ. ಇದು ಕವಿಚರಿತ್ರೆಯನ್ನು ಕುರಿತಾಗಿ ಮಾಡಿರುವ ಆಂಗ್ಲ ಉಪನ್ಯಾಸಗಳ ಸಂಗ್ರಹ. ಕನ್ನಡ ಸಾಹಿತ್ಯದ ಪ್ರಾಚೀನತೆ, ತೆಲುಗು, ತಮಿಳು ಮತ್ತು ಸಂಸ್ಕೃತಗಳೊಡನೆ ಕನ್ನಡದ ಸಂಬಂಧ ಮುಂತಾದ ವಿಷಯಗಳು ವಿಸ್ತಾರವಾಗಿ ಪ್ರಸ್ತಾಪಗೊಂಡಿವೆ.

೧೯೫೦ರ ಕಾಲದಲ್ಲಿ ಬಂದ ಈ ಸಾಹಿತ್ಯ ಚರಿತ್ರೆಯನ್ನು ಮೊದಲ ಹಂತವೆಂದು ಪರಿಗಣಿಸಿದಲ್ಲಿ ಮುಂದೆ ರಂ.ಶ್ರೀ ಮುಗಳಿಯವರ ಕನ್ನಡ ಸಾಹಿತ್ಯ ಚರಿತ್ರೆ, ಧರ್ಮಾಧಾರಿತ ಕಾಲವಿಂಗಡಣೆಯನ್ನು ಆಯಾಕಾಲದ ಪ್ರಮುಖ ಕವಿಗಳ ಹೆಸರಿನಲ್ಲಿ ಪಂಪಯುಗ ಬಸವಯುಗ ಮೊದಲಾಗಿ ಕರೆದು ಮಾನದಂಡಗಳನ್ನು ರೂಪಿಸಿ, ಪ್ರಸಿದ್ಧ ವಿದ್ವಾಂಸರ ಲೇಖನಗಳಲ್ಲಿ ಚರ್ಚಿತವಾದ ವಿಚಾರಗಳ ಕಾವ್ಯವಿಮರ್ಶೆಯನ್ನು ಬಳಸಿಕೊಂಡು, ಯುಗವೈಶಿಷ್ಟ್ಯಗಳನ್ನು ಎತ್ತಿಹಿಡಿದ ಕೃತಿಯಾಗಿದೆ.

ಸಾಹಿತ್ಯದ ವಿಭಿನ್ನ ಪ್ರಕಾರಗಳನ್ನೇ ಪ್ರಮುಖ ವಿಭಾಗಗಳನ್ನಾಗಿಸಿಕೊಂಡು ರಚಿಸಿಲಾದ ಮರಿಯಪ್ಪ ಭಟ್ಟರ 'ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ'[೧೩ಅ] (೧೯೬೦), ಪ್ರಾಚೀನಕಾಲ, ಮಧ್ಯಕಾಲ, ಅರ್ವಾಚೀನ ಕಾಲವೆಂಬ ವಿಭಿನ್ನ ಘಟ್ಟಗಳಲ್ಲಿನ ಸಾಹಿತ್ಯಗಳನ್ನು ವಿಭಾಗಿಸಿಕೊಂಡು ರಚಿಸಿದ ರಂಶ್ರೀ.ಮುಗಳಿಯವರ 'ಕನ್ನಡ ಸಾಹಿತ್ಯದ ಇತಿಹಾಸ'[೧೪] (೧೯೬೩), ಪಂಪಪೂರ್ವಯುಗ, ಹರಿಹರಯುಗ ಅಥವಾ ಸ್ವಾತಂತ್ರ್ಯಯುಗ, ಕುಮಾರವ್ಯಾಸಯುಗ

ಅಥವಾ ಷಟ್ಪದಿಯುಗ ಎಂಬ ವಿಭಾಗಕ್ರಮದಲ್ಲಿ ಹಳಗನ್ನಡ, ನಡುಗನ್ನಡದ ಸಾಹಿತ್ಯವನ್ನು ಕುರಿತು ೧೯೬೪ರಲ್ಲಿ ಹೊರಬಂದ ತ.ಸು.ಶಾಮರಾಯರ 'ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ, ೧೯೭೦ರಲ್ಲಿ ಪ್ರಕಟಿಸಲಾದ ಎನ್.ಅನಂತರಂಗಾಚಾರ್ ಅವರ 'ಸಾಹಿತ್ಯಭಾರತೀ'[೧೪ಅ], ೧೯೭೪ರಲ್ಲಿ ಹೊರಬಂದ ಕೆ.ವೆಂಕಟರಾಮಪ್ಪನವರ 'ಸಾಹಿತ್ಯಚರಿತ್ರೆ'[೧೫] ೧೯೮೧ರ ಡಿ.ಎಲ್.ಎನ್ ಅವರ 'ಕನ್ನಡ ಸಾಹಿತ್ಯ ಇತಿಹಾಸ' (ತರಗತಿ ಪಾಠದ ಟಿಪ್ಪಣಿಗಳು). ಇವುಗಳಲ್ಲದೆ ನಿಗದಿತ ಕಾಲವನ್ನು ಆಧರಿಸಿದ ಸಾಹಿತ್ಯ ಚರಿತ್ರೆಗಳು, ಕೆಲವೊಂದು ಧರ್ಮದಡಿಯಲ್ಲಿ ಬಂದ ಸಾಹಿತ್ಯಗಳು, ಶಾಸ್ತ್ರ ಗ್ರಂಥ, ಶಾಸನ ಸಾಹಿತ್ಯ, ಸಾಹಿತ್ಯದ ಪ್ರಕಾರಗಳನ್ನು ಆಧರಿಸಿ ರಚಿಸಲಾದವು, ಪಿಹೆಚ್.ಡಿ ಮೊದಲಾದ ಮಹಾಪ್ರಬಂಧ, ವಿಮರ್ಶೆಗಳ ಜೊತೆಯಲ್ಲಿ ವಿಶ್ವವಿದ್ಯಾಲಯಗಳು ಹೊರತಂದಿರುವ ಸಾಹಿತ್ಯ ಚರಿತ್ರೆಗಳು ಈ ಕ್ಷೇತ್ರದ ಗ್ರಂಥಗಳನ್ನು ಇನ್ನಷ್ಟು ಸಂವೃದ್ಧಿಗೊಳಿಸಿದವು. ಅವುಗಳಲ್ಲಿ ಕೆಲವನ್ನು ಹೆಸರಿಸುವುದಾದರೆ ೧೯೭೬ರಲ್ಲಿ ಹೊರಬಂದ ಸದಾನಂದ ಕನವಳ್ಳೀ ಚನ್ನಪ್ಪ ಕೆರಿಮನಿಯವರ 'ವೀರಶೈವ ಸಾಹಿತ್ಯ ಸಮೀಕ್ಷೆ', ಇದೇ ಕಾಲದಲ್ಲಿ ಬಂದ ವಿ.ಶಿವಾನಂದ ಅವರ ಶತಮಾನ ಕನ್ನಡ ಸಾಹಿತ್ಯ ಚರಿತ್ರೆ – (ವೀರಶೈವ ವಸಂತಕಾಲ) ಕೃತಿಯು ೧೫ನೆಯ ಶತಮಾನದ ವೀರಶೈವ ಸಾಹಿತ್ಯವನ್ನು ಕುರಿತಾದ ಸಾಹಿತ್ಯ ಚರಿತ್ರೆಯಾಗಿದೆ.

ನಿರ್ದಿಷ್ಟ ರಾಜಾಶ್ರಯಗಳಲ್ಲಿನ ಸಾಹಿತ್ಯ ಕೃತಿಗಳನ್ನು ಕುರಿತಂತೆ ರಚಿತವಾದ ಕೃತಿಗಳೆಂದರೆ ೧೯೩೮ರಲ್ಲಿ ಪ್ರಕಟವಾದ ಎನ್ ಅನಂತರಂಗಾಚಾರ್ ಅವರ 'ಕಲಾಸಾಹಿತ್ಯಗಳಿಗೆ ಮೈಸೂರರಸರ ಪ್ರೋತ್ಸಾಹ', ಡಿ.ಎಸ್.ರಾಮು ಅವರ ಕನ್ನಡ ಸಾಹಿತ್ಯ ಮತ್ತು ರಾಜಾಶ್ರಯ (೧೯೪೭), ೧೯೫೫ರಲ್ಲಿ ಹೊರಬಂದ ಡಿ.ಟಿ.ರಂಗಸ್ವಾಮಿಯವರ 'ಕನ್ನಡ ಸಾಹಿತ್ಯ ಮತ್ತು ಮೈಸೂರೊಡೆಯರು', ಸೀತಾರಾಮ್ ಎಸ್. ಜಾಗೀರದಾರ್ ಅವರ 'ಕನ್ನಡ ಸಾಹಿತ್ಯದ ಬೆಳವಣಿಗೆ ಮತ್ತು ರಾಷ್ಟ್ರಕೂಟ ಅರಸರ ಮನೆತನ' (೧೯೭೨), ಕೆ.ವೆಂಕಟರಾಮಪ್ಪನವರ 'ಶ್ರೀಕೃಷ್ಣದೇವರಾಯನ ಕಾಲದ ಕರ್ಣಾಟಾಂಧ್ರ ಸಾಹಿತ್ಯ ಸಮೀಕ್ಷೆ' (೧೯೭೪), ೧೯೭೭ರ ವಿ.ಶಿವಾನಂದರ 'ವಿಜಯನಗರದ ಪ್ರೌಢರಾಯನ ಕಾಲದ ಕನ್ನಡ ಸಾಹಿತ್ಯ', ಮೊದಲಾದವುಗಳನ್ನು ಹೆಸರಿಸಬಹುದು.

ಇದೇ ರೀತಿ ಪಿಹೆಚ್.ಡಿ ಮಹಾಪ್ರಬಂಧಕ್ಕಾಗಿ ರಚಿಸಲಾದ ಹೆಚ್.ಟಿ.ಸಾಸನೂರು ಅವರ 'ಇಲವೆಂತ್ ಅಂಡ್ ಟ್ವೆಲ್ತ್ ಸೆಂಚುರಿ ಕನ್ನಡ ಲಿಟರೇಚರ್' (೧೯೫೩), ಕೆ.ಶ್ರೀಕಂಠಯ್ಯ ಅವರ 'ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ', ಎಸ್.ಜಿ.ಕಾಡದೇವರ ಮಠ ಅವರ 'ಕನ್ನಡ ಲಿಟರೇಚರ್ ಡ್ಯೂರಿಂಗ್ ದಿ ಪೀರಿಯಡ್ ಆಫ್ ಕೆಳದಿ ಚೀಫ್ಸ್' (೧೯೫೪), ಸಾ.ಶಿ.ಮರುಳಯ್ಯ ಅವರ 'ಕೆಳದಿ ಅರಸರ ಕಾಲದ ಕನ್ನಡ ಸಾಹಿತ್ಯ'[೧೬], ಶ್ರೀನಿವಾಸ ಹಾವನೂರ ಅವರ 'ಹೊಸಗನ್ನಡದ ಅರುಣೋದಯ'[೧೭] (೧೯೭೪), ರಾ.ಯ.ಧಾರವಾಡಕರ ಅವರ 'ಹೊಸಗನ್ನಡ ಸಾಹಿತ್ಯದ ಉದಯಕಾಲ' (ಉತ್ತರ ಕರ್ನಾಟಕವನ್ನು ಅನುಲಕ್ಷಿಸಿ) (೧೯೭೫), ವೆಂಕಟೇಶಸಾಂಗ್ಲಿಯವರ 'ಸಿರಿಗನ್ನಡ ಗ್ರಂಥಕರ್ತರಕೋಶ, ಇವುಗಳಲ್ಲದೆ ೧೯೭೫ರಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯವು ಹೊರತಂದ ಹತ್ತು ಸಂಪುಟಗಳ 'ಸಾಹಿತ್ಯ ಚರಿತ್ರೆ'[೧೮], ೧೯೭೪-೧೯೮೧ರ ಅವಧಿಯಲ್ಲಿ ಮೈಸೂರು ವಿಶ್ವವಿದ್ಯಾನಿಲಯವು ಪ್ರಕಟಿಸಿದ ೧೦ ಸಂಪುಟಗಳ ಸಾಹಿತ್ಯಚರಿತ್ರೆ.[೧೯] ಕನ್ನಡ ಸಾಹಿತ್ಯ ಚರಿತ್ರೆಯ ಮಹತ್ವದ ಕೃತಿಗಳಾಗಿವೆ.

ಈ ಎಲ್ಲ ಸಾಹಿತ್ಯ ಚರಿತ್ರೆಗಳೊಂದಿಗೆ ಹಂಪಿ ಕನ್ನಡ ವಿಶ್ವವಿದ್ಯಾಲಯ ಹೊರತಂದಿರುವ 'ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ'[೨೦] ಪ್ರಸಕ್ತ ಅಧ್ಯಯನದ ದೃಷ್ಟಿಯಿಂದ ವಿಶೇಷವಾಗಿ ಪರಿಗಣಿಸಬೇಕಾಗಿರುವ ಕೃತಿಯಾಗಿದೆ. ಎಚ್.ಎಸ್.ಶ್ರೀಮತಿ ಅವರು ಸಂಪಾದಿಸಿರುವ ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ, ಎಂಟು ವಿಭಿನ್ನ ಅಧ್ಯಾಯಗಳಲ್ಲಿ ಸುಮಾರು ೭೫೦ ಪುಟಗಳ ಸುದೀರ್ಘ ಮಹಿಳಾ ಸಾಹಿತ್ಯ ಚರಿತ್ರೆಯನ್ನು ಒಳಗೊಂಡಿದೆ.

ಸಾಹಿತ್ಯ ಚರಿತ್ರೆಗಳು ಸಾಕಷ್ಟು ಸೃಷ್ಟಿಯಾದರೂ, ಕೆಲವೊಂದು ಕೊರತೆಗಳು ತುಂಬಲಾರದಾಗಿದ್ದವು. ಇದಕ್ಕೊಂದು ನಿದರ್ಶನವೆಂಬಂತೆ, ಇಪ್ಪತ್ತನೆಯ ಶತಮಾನದ ಮೊದಲ ಲೇಖಕಿ ಎಂದು ಗುರುತಿಸುವ ನಂಜನಗೂಡು ತಿರುಮಲಾಂಬ ಅವರ ಕುರಿತು ಬರೆಯುವಾಗ ಪ್ರೊ.ಚಿ.ನ.ಮಂಗಳ ಅವರಿಗೆ ಮಾಹಿತಿ ಕೊರತೆ ಉಂಟಾದುದನ್ನೂ, ಅದರಿಂದಾದ ಪ್ರಮಾದವನ್ನೂ ಕುರಿತು ಅವರೇ ತಿಳಿಸಿದ್ದಾರೆ. ಅವರು ಲೇಖನ ರಚಿಸಿದ ಕಾಲದಲ್ಲಿ ಜೀವಂತವಾಗಿದ್ದ ತಿರುಮಲಾಂಬ ಅವರನ್ನು ದಿವಂಗತ ತಿರುಮಲಾಂಬ ಎಂದು ಪ್ರಕಟಿಸಿ, ಆನಂತರ ತಿರುಮಲಾಂಬ ಅವರು ಮದ್ರಾಸಿನಲ್ಲಿ ಅವರ ಸೋದರಳಿಯ ರಂಗ ಅವರ ಮನೆಯಲ್ಲಿರುವುದನ್ನು ತಿಳಿದು ಅಲ್ಲಿಗೆ ಖುದ್ದಾಗಿ ಹೋಗಿ ಅವರಲ್ಲಿ ಕ್ಷಮಾಪಣೆ ಕೇಳಿದರಂತೆ. ಸರಸ್ವತಿ ಬಾಯಿ ರಾಜವಾಡೆ ಅವರ ಕುರಿತಂತೆಯೂ ಕರ್ನಾಟಕ ಲೇಖಕಿಯರ ಸಂಘದಿಂದ ಇದೇ ರೀತಿಯ ಪ್ರಮಾದ ನಡೆದಿದೆ. ಇದು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಲೇಖಕಿಯರ ಮಾಹಿತಿಯ ಕೊರತೆ ಯಾವ ಮಟ್ಟದಲ್ಲಿತ್ತೆಂಬುದಕ್ಕೆ ನಿದರ್ಶನವಾಗಿದೆ.

**ಸಾಹಿತ್ಯಚರಿತ್ರೆಯಲ್ಲಿ ಲೇಖಕಿಯರ ಸ್ಥಾನಮಾನ:**

'ಕನ್ನಡ ಸಾಹಿತ್ಯ ಚರಿತ್ರೆಗಳಲ್ಲಿ ಲೇಖಕಿಯರ ಪ್ರತಿನಿಧೀಕರಣ' ಕುರಿತಾದ ಈ ಅಧ್ಯಾಯದಲ್ಲಿ ಸಾಹಿತ್ಯ ಚರಿತ್ರೆಗಳಲ್ಲಿ ಆಧುನಿಕ ಪೂರ್ವ ಕಾಲಘಟ್ಟದ ಕವಿಯತ್ರಿಯರು ಪಡೆದ ಸ್ಥಾನಮಾನಗಳನ್ನು ಕುರಿತು ಚರ್ಚಿಸಲಾಗಿದೆ. ಪುರುಷ ಪ್ರಧಾನ ಸಮಾಜದಲ್ಲಿನ ರಾಜಕೀಯ, ಸಾಮಾಜಿಕ, ಧಾರ್ಮಿಕ ಸ್ಥಿತ್ಯಂತರಗಳ ನಡುವೆಯೂ ತನ್ನ ಹೆಜ್ಜೆಯನ್ನೂರಲು ಹೆಣಗಾಡಿದ ಪರಿಸ್ಥಿತಿ, ಪರಿಶ್ರಮದ ಹಿಂದಿರುವ ಮಹಿಳೆಯರ ವಿಶಿಷ್ಟ ಸಾಧನೆಯನ್ನು ಗುರುತಿಸುವಲ್ಲಿ ಸಾಹಿತ್ಯ ಚರಿತ್ರೆಗಳು ಪರಿಣಾಮಕಾರಿಯಾಗಿವೆಯೆ? ಸಾಹಿತ್ಯದ ವಿಭಿನ್ನ ಪ್ರಕಾರಗಳಲ್ಲಿ ಕಂಡು ಬರುವ ಮಹಿಳೆಯರ ಪ್ರಯೋಗಗಳ ಸಮಗ್ರ ಚಿತ್ರಣ ನೀಡುವುದರಲ್ಲಿ, ಸಾಹಿತ್ಯ ಕ್ಷೇತ್ರದ ಸಾಧಕಿಯರನ್ನೂ ಅವರ ಪಠ್ಯಗಳನ್ನು ಉತ್ತಮ ವಿಮರ್ಶೆಗೆ ಒಳಪಡಿಸುವಲ್ಲಿ, ಸಮಾನ ವಿಚಾರಗಳ ಚರ್ಚೆಗಳಲ್ಲಿ ಲೇಖಕಿಯರ ಸಾಹಿತ್ಯವನ್ನು ಮುಖ್ಯ ಆಕರವನ್ನಾಗಿಸಿಕೊಳ್ಳುವಲ್ಲಿ ಮಹಿಳಾ ಸಾಹಿತ್ಯವನ್ನು ಎಷ್ಟು ಪರಿಣಾಮಕಾರಿಯಾಗಿ ಬಳಸಿಕೊಳ್ಳಲಾಗಿದೆ ಎಂಬುದೂ ಇಲ್ಲಿ ಮುಖ್ಯವೆನಿಸುತ್ತದೆ.

ಕನ್ನಡನಾಡಿನ ವೀರ ವನಿತೆಯರು ಎಂದ ಕೂಡಲೆ ಕಿತ್ತೂರು ರಾಣಿ ಚೆನ್ನಮ್ಮ, ಒನಕೆ ಓಬವ್ವ, ಬೆಳವಡಿ ಮಲ್ಲಮ್ಮ ಎಂಬ ಮೂವರನ್ನು ಕರ್ನಾಟಕ ಚರಿತ್ರೆಯಲ್ಲಿ ಹೆಸರಿಸುವಂತೆ ಬಹುತೇಕ ಕನ್ನಡ ಸಾಹಿತ್ಯ ಚರಿತ್ರೆಗಳಲ್ಲಿ ಅಕ್ಕಮಹಾದೇವಿ, ಸಂಚಿಹೊನ್ನಮ್ಮ, ಹೆಳವನಕಟ್ಟೆ ಗಿರಿಯಮ್ಮ ಮೂರುಜನರು ಮಾತ್ರ ಉಲ್ಲೇಖಿತರಾಗಿದ್ದಾರೆ. ನೆಪಮಾತ್ರಕ್ಕೆ ಎಂಬಂತೆಯೋ ಅಥವಾ ಮಹಿಳೆಯರನ್ನು ಹೆಸರಿಸಿ ಪರಿಸಮಾಪ್ತಿ ಗೊಳಿಸುವ ವಾಡಿಕೆಯಂತೆಯೋ ಮೂರು–ನಾಲ್ಕು ಕವಯತ್ರಿಯರು ಸ್ಥಾನ ಪಡೆದಿರುವುದನ್ನು ಬಹುತೇಕ ಸಾಹಿತ್ಯ ಚರಿತ್ರೆಗಳಲ್ಲಿ ಕಾಣಬಹುದು. ಕವಿಗಳನ್ನು ಉಲ್ಲೇಖಿಸುವಾಗ ಚರಿತ್ರೆಕಾರರು ತೋರುವ ಆಸಕ್ತಿ ಕವಯತ್ರಿಯರನ್ನು ಹೆಸರಿಸುವಾಗ ತೋರುವುದಿಲ್ಲ ಎಂಬುದು ಈ ಕೆಳಗಿನ ಸಮೀಕ್ಷೆಯಲ್ಲಿ ಮೇಲುನೋಟಕ್ಕೇ ಸಾಬೀತಾಗುತ್ತದೆ.

ರಂ.ಶ್ರೀ.ಮುಗಳಿಯವರ ಕನ್ನಡ ಸಾಹಿತ್ಯ ಚರಿತ್ರೆ ಕೃತಿಯಲ್ಲಿ[20] ಕಂತಿ, ಹೆಳವನಕಟ್ಟೆ ಗಿರಿಯಮ್ಮರನ್ನು ಹೆಸರಿಸಲಾಗಿದ್ದು ಕೇವಲ ಅಕ್ಕಮಹಾದೇವಿ, ಹೊನ್ನಮ್ಮರನ್ನು ಕುರಿತ ವಿವರಣೆ ದೊರಕುತ್ತದೆ. ಇದೇ ವಿಭಜನಾಕ್ರಮವನ್ನನುಸರಿಸಿ ಬಂದ ತ.ಸು.ಶಾಮರಾಯರ ಕನ್ನಡ ಸಾಹಿತ್ಯ ಚರಿತ್ರೆ ಕೃತಿಯಲ್ಲಿಯೂ ಕೂಡ ಮಹಾದೇವಿ ಅಕ್ಕ, ಹೆಳವನಕಟ್ಟೆ ಗಿರಿಯಮ್ಮ, ಸಂಚಿ ಹೊನ್ನಮ್ಮ, ಶೃಂಗಾರಮ್ಮ ಕವಯತ್ರಿಯರು ಮಾತ್ರ ಉಲ್ಲೇಖಿತರಾಗಿದ್ದಾರೆ. ಹೆಚ್.ನಂಜೇಗೌಡ ಅವರ ಕನ್ನಡ ಸಾಹಿತ್ಯಚರಿತ್ರೆಯಲ್ಲಿ ಈ ಮೂವರೊಂದಿಗೆ ಮುಕ್ತಾಯಕ್ಕನ ಉಲ್ಲೇಖವೊಂದು ಹೆಚ್ಚುವರಿಯಾಗಿದೆ. ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟವಾದ ಇವರದೇ ಸಾಹಿತ್ಯ ಚರಿತ್ರೆಯಲ್ಲಿ ಕೇವಲ ಮಹಾದೇವಿ ಅಕ್ಕ, ಸಂಚಿಹೊನ್ನಮ್ಮರ ವಿವರಣೆಗಳು ದೊರಕುತ್ತದೆ. 'ಕರ್ನಾಟಕ

ಸಂಸ್ಕೃತಿ ಸಮೀಕ್ಷೆ' ಕೃತಿಯಲ್ಲಿ ಎಚ್.ತಿಪ್ಪೇರುದ್ರಸ್ವಾಮಿಯವರು ಸಾಹಿತ್ಯದಲ್ಲಿ ಸಂಸ್ಕೃತಿ ವಿಭಾಗದಲ್ಲಿ ಶರಣರ ಸಾಹಿತ್ಯದೊಂದಿಗೆ ಅಕ್ಕಮಹಾದೇವಿ, ಆಯ್ದಕ್ಕಿ ಲಕ್ಕಮ್ಮರ ವಚನಗಳನ್ನು ಉಲ್ಲೇಖಿಸಿದ್ದಾರೆ. ಕನ್ನಡ ಸಾಹಿತ್ಯ ಚರಿತ್ರೆ ಒಂದು ಸಮೀಕ್ಷೆ ಎಂಬ ಕೃತಿಯನ್ನು ರಚಿಸಿರುವ ಎಲ್.ಎಸ್.ಕಾಡದೇವರಮಠ ಅವರು ಪ್ರಾಚೀನ ಕಾಲದಿಂದ ಹೊಸಗನ್ನಡ ದಲಿತ ಬಂಡಾಯ ಸಾಹಿತ್ಯದವರೆಗೂ ಸಮೀಕ್ಷೆ ನಡೆಸಿ ಪ್ರಾಚೀನ ಸಾಹಿತ್ಯದ ವಿಭಾಗದಲ್ಲಿ ಅಕ್ಕಮಹಾದೇವಿ, ಅಮ್ಮುಗೆ ರಾಯಮ್ಮ, ಆಯ್ದಕ್ಕಿ ಲಕ್ಕಮ್ಮ, ಮುಕ್ತಾಯಕ್ಕ ನಾಲ್ಕುಜನ ವಚನಕಾರ್ತಿಯರ ಉಲ್ಲೇಖ ನೀಡಿದ್ದಾರೆ. ವಿದ್ಯಾರ್ಥಿಗಳನ್ನು ಗಮನದಲ್ಲಿರಿಸಿಕೊಂಡು, ಸ್ಪರ್ಧಾತ್ಮಕ ಪರೀಕ್ಷೆಗಳಿಗಾಗಿ ಸಿದ್ಧಪಡಿಸಿದ ರಾಜಪ್ಪ ದಳವಾಯಿಯವರ ಕನ್ನಡ ಸಾಹಿತ್ಯಕೋಶದ ಹಳಗನ್ನಡ ಹಾಗೂ ನಡುಗನ್ನಡದ ವಿಭಾಗದಲ್ಲಿ ಅಕ್ಕಮಹಾದೇವಿ ಹಾಗೂ ಸಂಚಿಹೊನ್ನಮ್ಮರಿಬ್ಬರು ಮಹಿಳೆಯರು ಮಾತ್ರ ಸೇರಿದ್ದಾರೆ. ಸಾಧಾರಣವಾಗಿ ಕಂತಿಯನ್ನು ಗಣನೆಗೆ ತೆಗೆದುಕೊಂಡಿರುವುದು ಅಪರೂಪವೇ ಆಗಿದೆ. ಅಂತೆಯೇ ಹರಿದಾಸ ಸಾಹಿತ್ಯ ಘಟ್ಟದಲ್ಲಿಯೂ ಕೂಡ ಹೆಳವನಕಟ್ಟೆ ಗಿರಿಯಮ್ಮನನ್ನು ಹೊರತು ಪಡಿಸಿದರೆ ಮತ್ತಾವ ಮಹಿಳೆಯ ಉಲ್ಲೇಖವೂ ಕಾಣಸಿಗುವುದಿಲ್ಲ. ಎಸ್.ಎಂ ಹಿರೇಮಠರ ಕೃತಿ, ಎಚ್.ತಿಪ್ಪೇರುದ್ರಸ್ವಾಮಿಯವರ ಕರ್ಣಾಟಕ ಸಂಸ್ಕೃತಿ ಸಮೀಕ್ಷೆ[೨೨] ಮೊದಲಾದ ಕೃತಿಗಳಲ್ಲಿ ಒಬ್ಬ ಮಹಿಳಾ ಹರಿದಾಸರ ಉಲ್ಲೇಖವೂ ಇಲ್ಲ.

ವಿಭಿನ್ನ ದೃಷ್ಟಿಕೋನಗಳಿಂದ ರಚಿತವಾದ ಸಾಹಿತ್ಯ ಹಾಗೂ ಸಾಂಸ್ಕೃತಿಕ ಚರಿತ್ರೆಗಳನ್ನು ಗಮನಿಸುವುದಾದಲ್ಲಿ, ಅಲ್ಲಿಯೂ ಮಹಿಳೆಯರ ಅವಗಣನೆ ಎದ್ದು ಕಾಣುತ್ತದೆ. ಎನ್.ಅನಂತರಂಗಾಚಾರ್ ಅವರ ಸಾಹಿತ್ಯ ಭಾರತಿ[೨೩] ಕೃತಿಯಲ್ಲಿ ಐತಿಹಾಸಿಕ ಕಾವ್ಯಗಳು ಎಂಬ ಶೀರ್ಷಿಕೆಯಡಿ ಬಿಲ್ಹಣನ 'ವಿಕ್ರಮಾಂಕದೇವ ಚರಿತೆ'ಯನ್ನು ಮಾತ್ರ ಉಲ್ಲೇಖಿಸಿದ್ದಾರೆ. ವಿಜಯನಗರ ಕಾಲದ ಎರಡು ಮಹತ್ವದ ಐತಿಹಾಸಿಕ ಕಾವ್ಯಗಳೆಂಬ ಪ್ರಖ್ಯಾತಿಗೆ ಒಳಗಾದ ಗಂಗಾಂಬಿಕೆಯ 'ವೀರಕಂಪಣರಾಯ ಚರಿತೆ' ಯಾಗಲೀ ತಿರುಮಲಾಂಬಾ ರಚಿಸಿರುವ 'ವರದಾಂಬಿಕಾ ಪರಿಣಯಚಂಪೂ' ಕೃತಿಯ ಕುರಿತಾಗಲೀ ಮಾಹಿತಿ ಇಲ್ಲ. ಕೀರ್ತಿನಾಥ ಕುರ್ತುಕೋಟಿಯವರ ಯುಗಧರ್ಮ ಹಾಗೂ ಸಾಹಿತ್ಯ ದರ್ಶನ ಕೃತಿಯು[೨೪] ಹೊಸಗನ್ನಡದ ಅನೇಕ ಪ್ರಕಾರಗಳಲ್ಲಿ ಬಂದ ಕೃತಿಗಳ ವಿಮರ್ಶೆಯನ್ನೊಳಗೊಂಡಿದೆ. ಇದು ಕವಿ–ಲೇಖಕರ ಕೃತಿಗಳೊಂದಿಗೆ ಅವರನ್ನು ಪರಿಚಯಿಸುತ್ತದೆ. ಈ ಗ್ರಂಥದಲ್ಲಿ ಕಾವ್ಯ, ಮಹಾಕಾವ್ಯ ನಾಟಕ, ಸಣ್ಣಕತೆ, ಕಾದಂಬರಿ, ಇದರ ವಿಭಾಗವಾಗಿ ಸಾಮಾಜಿಕತೆಯ ಅರಿವು, ಆದರ್ಶವಾದಿತ್ವ, ವಿನೋದಪರತೆ, ಐತಿಹಾಸಿಕ ಕಾದಂಬರಿ, ಕೆಲವು ಹೊಸಕಾದಂಬರಿಗಳು, ಸಾಹಿತ್ಯ–ವಿಮರ್ಶೆ ಇವೇ ಮೊದಲಾದ ವಿಭಾಗಗಳಲ್ಲಿ ಕೆಲವು ಸಾಹಿತಿಗಳ ಕೃತಿಗಳನ್ನು ಕುರಿತು ವಿಮರ್ಶೆ ಮಾಡಿದ್ದಾರೆ. ವೀಣಾಶಾಂತೇಶ್ವರ, ರಾಜಲಕ್ಷ್ಮಿ.ಎನ್.ರಾವ್ ಅವರ ಕೃತಿಗಳನ್ನು ಹೊರತುಪಡಿಸಿದರೆ ಕೀರ್ತಿನಾಥ ಕುರ್ತುಕೋಟಿ ಅವರು ತಮ್ಮ ಈ ವಿಮರ್ಶೆಗಳಿಗೆ ಮತ್ಯಾವ ಲೇಖಕಿಯರ ಕೃತಿಗಳನ್ನೂ ಬಳಸಿಕೊಂಡಿಲ್ಲ.

ಹೊಸಗನ್ನಡ ಕಾಲಘಟ್ಟದಲ್ಲಿಯೂ ಇಂಥ ಕೊರತೆ ಹೇರಳವಾಗಿ ಕಂಡುಬರುತ್ತದೆ. 'ಕನ್ನಡ ಸಾಹಿತ್ಯ ಚರಿತ್ರೆಯ ಘಟ್ಟಗಳು' ಕೃತಿಯಲ್ಲಿ ಕಾದಂಬರಿಕಾರ್ತಿಯರಲ್ಲಿ ತ್ರಿವೇಣಿಯನ್ನು ಮಾತ್ರ ಹೆಸರಿಸಿ ಉಳಿದವರನ್ನು ಮುಂತಾದವರು ಎಂದು ಸೂಚಿಸಲಾಗಿದೆ ಅಂತೆಯೇ ಸಣ್ಣಕತೆಯ ವಿಭಾಗದಲ್ಲಿ ಕೂಡ ಕೊಡಗಿನ ಗೌರಮ್ಮ, ಎಂ.ಕೆ.ಇಂದಿರಾ, ಎಚ್.ಎಸ್.ಪಾರ್ವತಿ, ಪ್ರೇಮಾಭಟ್ ಅವರನ್ನು ಮಾತ್ರ ಹೆಸರಿಸಲಾಗಿದೆ. ಕನ್ನಡ ಸಾಹಿತ್ಯ ಚರಿತ್ರೆ ಒಂದು ಸಮೀಕ್ಷೆ ಕೃತಿಯಲ್ಲಿ ಸುಮಾರು ೮೦ ಕವಿಗಳ ವಿವರಗಳೊಂದಿಗೆ ದಲಿತ ಬಂಡಾಯ ಸಾಹಿತ್ಯದಡಿಯಲ್ಲಿ ವಿಜಯಾದಬ್ಬೆ, ಮಾಲತಿ ಪಟ್ಟಣಶೆಟ್ಟಿಯರನ್ನು ಮಾತ್ರ ಉಲ್ಲೇಖಿಸಲಾಗಿದೆ. ರಾಜಪ್ಪ ದಳವಾಯಿಯವರ 'ಕನ್ನಡ ಸಾಹಿತ್ಯಕೋಶ'[೨೫] ಕೃತಿಯಲ್ಲಿ ಹೊಸಗನ್ನಡದ ಪ್ರಮುಖ ಕೃತಿಗಾರರ ಪಟ್ಟಿಯ ನಾಲ್ಕು ವಿಭಾಗಗಳಲ್ಲಿ ಸುಮಾರು ೧೪೧ ಕವಿಗಳೊಂದಿಗೆ ತ್ರಿವೇಣಿ, ಕೊಡಗಿನ ಗೌರಮ್ಮ, ವಾಣಿ, ಅನುಪಮಾ ನಿರಂಜನ, ಲಲಿತಾ ನಾಯಕ್, ವೀಣಾ ಶಾಂತೇಶ್ವರ, ಸಾರಾ ಅಬೂಬಕರ್, ವಿಜಯಾದಬ್ಬೆ ಎಂಟುಜನ ಲೇಖಕಿಯರು ಸ್ಥಾನಪಡೆದಿದ್ದಾರೆ.

ಇಲ್ಲಿನ ಸಮೀಕ್ಷೆಗೆ ಜನಪ್ರಿಯವೂ, ಹೆಚ್ಚು ಬಳಕೆಗೊಳ್ಳುವ ಕೆಲವು ಪ್ರಸಿದ್ಧ ಕೃತಿಗಳನ್ನು ಬಳಸಿಕೊಳ್ಳಲಾಗಿದೆ. ಇವು ಆರಂಭಕಾಲದ ಕೃತಿಗಳಲ್ಲ. ಈ ಸಾಹಿತ್ಯ ಚರಿತ್ರೆಗಳು ಪ್ರಕಟವಾಗುವ ವೇಳೆಗೆ ಅನೇಕ ಹಳಗನ್ನಡ ಕೃತಿಗಳ ಮುದ್ರಣಗಳು, ಸಂಶೋಧನೆ, ವಿಮರ್ಶೆ, ನಡೆದು ಲೇಖಕಿಯರ ಕುರಿತಾದ ಅನೇಕ ಮಹತ್ವದ ಕೃತಿಗಳು, ವಿಚಾರಗಳು ಹೊರಬಂದಿದ್ದವು. ಆದರೂ ಸಾಹಿತ್ಯಚರಿತ್ರೆಯ ದಾಖಲೀಕರಣದಲ್ಲಿ ಅವುಗಳನ್ನು ಬಳಸಿಕೊಂಡಿಲ್ಲ.

ಇಪ್ಪತ್ತನೆಯ ಶತಮಾನದ ಆರಂಭಕಾಲದಿಂದಲೂ ರಚಿತವಾಗುತ್ತಾ ಬಂದಿರುವ ಸಾಹಿತ್ಯಚರಿತ್ರೆಗಳಲ್ಲಿ ಕವಿಗಳಿಗೆ ಹೋಲಿಸಿದರೆ ಕವಯತ್ರಿಯರಿಗೆ ಸಲ್ಲಬೇಕಾದ ಸ್ಥಾನ ಸಂಪೂರ್ಣವಾಗಿ ಸಂದಿಲ್ಲವೆನ್ನಬಹುದು. 'ಕರ್ಣಾಟಕ ಕವಿಚರಿತೆ'ಯಲ್ಲಿ ಉಲ್ಲೇಖಿತರಾದ ಅನೇಕ ಕವಯತ್ರಿಯರನ್ನು ಮುಂದಿನ ಹಲವಾರು ಸಾಹಿತ್ಯ ಚರಿತ್ರೆಗಳಲ್ಲಿ ಕೈಬಿಡಲಾಗಿದೆ. ಜೊತೆಗೆ ಆರಂಭಕಾಲದ ಸಾಹಿತ್ಯಚರಿತ್ರೆ ರಚನಾಕಾಲದಲ್ಲಿ ಮಾಹಿತಿ ಕೊರತೆಯಿಂದಾಗಿ ಸೇರ್ಪಡೆಯಾಗದ ಕೆಲವು ಕವಯತ್ರಿಯರು, ಇತರ ನಿರ್ದಿಷ್ಟ ಕ್ಷೇತ್ರದ ಸಂಶೋಧನೆಗಳ ಫಲದಿಂದ ಬೆಳಕಿಗೆ ಬಂದರೂ ಅವರನ್ನು ಮುಂದಿನ ಕೆಲವು ಸಾಹಿತ್ಯಚರಿತ್ರೆಗಳಲ್ಲಿ ಗಮನಿಸಿಲ್ಲದಿರುವುದು ಈ ಕ್ಷೇತ್ರದ ಅಸಮರ್ಪಕ ಕಾರ್ಯಕ್ಕೆ ಕಾರಣವಾಗಿದೆ. ರಾಜಾಶ್ರಯದ ವಿಚಾರವನ್ನು ತಿಳಿಸುವಾಗಲೂ ಕೂಡ ಕೆಲವೊಂದು ಮಾಹಿತಿಗಳನ್ನು ಕೈಬಿಡಲಾಗಿದೆ. ಉದಾಹರಣೆಗೆ ಕವಿ ಷಡಕ್ಷರಿಯನ್ನು ಕುರಿತು ವಿಮರ್ಶಿಸುವಾಗ ಈತ ಮೈಸೂರು ದೊರೆ ಚಿಕ್ಕದೇವರಾಯನ ಆಸ್ಥಾನದಲ್ಲಿ ಇದ್ದನೆ? ಇಲ್ಲವೆ? ಎನ್ನುವುದನ್ನು ಕುರಿತು ಮಾತ್ರ ಚರ್ಚಿಸಲಾಗುತ್ತದೆ. ಆದರೆ ಈತ ರಾಣಿ ಅಮೃತಾಜಮ್ಮಣ್ಣಿಯಿಂದ ಸನ್ಮಾನಿತನಾಗಿದ್ದಾನೆ. ಈ ಕುರಿತಾಗಿ ಕವಿಚರಿತೆಯಲ್ಲಿಯೂ ಉಲ್ಲೇಖವಿದೆ, ಗೋವಿಂದ ಪೈ ಅವರ ಸಂಶೋಧನಾ ಲೇಖನದಲ್ಲಿಯೂ ವಿಸ್ತೃತವಾಗಿ ಈ ಕುರಿತ ಚರ್ಚೆ ನಡೆದಿದೆ. ಆದರೂ ಮುಂದಿನ ಚರಿತ್ರೆಕಾರರು ಇದನ್ನು ಉಲ್ಲೇಖಿಸುವುದಿಲ್ಲ.

ಹಲವಾರು ಸಾಹಿತ್ಯಚರಿತ್ರೆಗಳಲ್ಲಿ ಕಂತಿಯ ಉಲ್ಲೇಖವೇ ಇಲ್ಲ. ಸಾಧಾರಣವಾಗಿ ಧಾರ್ಮಿಕ ಸಾಹಿತ್ಯಗಳೇ ಮೇಳೈಸಿರುವ ಪ್ರಾಚೀನ ಹಾಗು ನಡುಗನ್ನಡದ ಸಾಹಿತ್ಯಗಳಲ್ಲಿ ಮಹಿಳೆಯೋರ್ವಳು ವಿಭಿನ್ನರೀತಿಯ ಚಿತ್ರಕಾವ್ಯವನ್ನು ರಚಿಸಿರುವುದು ಮಹತ್ವದ ವಿಚಾರವೆನಿಸುತ್ತದೆ. ಅದರಲ್ಲಿಯೂ ನಾಗಚಂದ್ರನಂಥ ಕವಿಯೋರ್ವನಿಗೆ ಸವಾಲು ಹಾಕುವ ಧಾಟಿಯಲ್ಲಿ ರಚಿತವಾಗಿರುವ ಈ ಚಿತ್ರಕವಿತ್ವಕ್ಕೆ ಸಲ್ಲಬೇಕಿದ್ದ ಸ್ಥಾನ ದೊರೆಯದಿರುವುದು ಕವಿಯತ್ರಿಯೋರ್ವಳಿಗೆಸಗಿದ ಅನ್ಯಾಯವಾಗಿದೆ. ಈ ಹಿಂದೆ ಹೇಳಿರುವಂತೆ ವಚನಸಾಹಿತ್ಯದಲ್ಲಿ ಸಾಧಾರಣವಾಗಿ ಕಂಡುಬರುವುದು ಅಕ್ಕಮಹಾದೇವಿ, ಇವಳೊಂದಿಗೆ ಕೆಲವೊಂದು ಸಾಹಿತ್ಯ ಚರಿತ್ರೆಯಲ್ಲಿ ಅಮುಗೆ ರಾಯಮ್ಮ ಅಥವಾ ಲಕ್ಕಮ್ಮರನ್ನು ಉಲ್ಲೇಖಿಸಲಾಗಿದೆ. ಇದೇ ಕ್ರಮವನ್ನು ದಾಸಸಾಹಿತ್ಯದಡಿಯಲ್ಲಿಯೂ ಕಾಣುತ್ತೇವೆ.

ಧರ್ಮದ ಹಿನ್ನೆಲೆಯಲ್ಲಿನ ವಿಭಜನಾಕ್ರಮವನ್ನು ಗಮನಿಸಿದಲ್ಲಿ, ಮಹಿಳೆಯರು ಪುರುಷರು ನಿರ್ಮಿಸಿದ ಅಧಿಪತ್ಯ ಸಂಪ್ರದಾಯಮಾರ್ಗಗಳನ್ನು ಅನುಸರಿಸುತ್ತಾ, ಅನುಕರಿಸುತ್ತಾ ಅದರಡಿಯಲ್ಲಿ ತಮ್ಮ ಅನುಭವಗಳನ್ನು ಸಾಹಿತ್ಯರೂಪದಲ್ಲಿ ಅಭಿವ್ಯಕ್ತಿ ಪಡಿಸಿದ್ದಾರೆ ಎಂಬಂತೆಯೇ ಬಿಂಬಿತರಾಗಿದ್ದಾರೆ. ಸಾಹಿತ್ಯ ಪ್ರಕ್ರಿಯೆಯಲ್ಲಿ ಮಹಿಳೆಯರೂ ಇದ್ದರೆಂಬುದಷ್ಟೇ ಇಂಥ ದಾಖಲಾತಿಯ ವಿಚಾರವಾಗಿದೆ. ಕೆಲವೊಂದು ಸಾಹಿತ್ಯಚರಿತ್ರೆಯ ವಿಭಜನಾಕ್ರಮವು ಆಯಾ ಯುಗದ ಪ್ರಸಿದ್ಧ ಕವಿಗಳ ಯುಗಗಳೆಂದು ವಿಭಾಗಗೊಂಡಿವೆ. ಪಂಪಯುಗ, ಬಸವಯುಗ, ಕುಮಾರವ್ಯಾಸಯುಗ ಮೊದಲಾದ ವಿಭಜನಾಕ್ರಮಗಳು ಪುರುಷ ಪ್ರಾಧಾನ್ಯವನ್ನು ಎತ್ತಿಹಿಡಿಯುವ ಮನಃಸ್ಥಿತಿಯನ್ನೇ ತೋರುತ್ತದೆ. ಈ ಕವಿಗಳು ಇತರರಿಗೆ ಪ್ರೇರಣೆಯೊದಗಿಸುವಲ್ಲಿ, ಜನ–ಮನ ಗೆಲ್ಲುವಲ್ಲಿ ಕೇವಲ ಆಯಾ ಯುಗದಲ್ಲಿ ಮಾತ್ರವಲ್ಲದೆ ಎಲ್ಲ ಕಾಲಗಳಲ್ಲಿಯೂ ಮಾನ್ಯರಾಗಿದ್ದಾರೆ. ಹಾಗಿರುವಾಗ ೧೦–೧೧ನೇ ಶತಮಾನ ಪಂಪಯುಗ, ೧೨–೧೩ ಬಸವಯುಗ, ೧೪–೧೬ ಕುಮಾರವ್ಯಾಸಯುಗ ಎಂದು ವಿಭಜಿಸುವುದು ಅನೌಚಿತ್ಯವೆನಿಸುತ್ತದೆ.

ಮಹಿಳಾಸಾಹಿತ್ಯ ಚರಿತ್ರೆಯೆಂದರೆ ಇಲ್ಲಿಯವರೆಗೆ ಅಜ್ಞಾನವಾಗಿದ್ದ, ಗುರುತಿಸಲಾರದ ಕವಯತ್ರಿಯರ, ಲೇಖಕಿಯರ ಹೆಸರುಗಳನ್ನು ಗುರುತಿಸುವುದಷ್ಟೇ ಅಲ್ಲದೆ, ಇಲ್ಲಿಯವರೆಗೆ ಸಾಹಿತ್ಯ ಚರಿತ್ರೆಯಲ್ಲಿ ಹೆಸರಿಸಲಾದ ಕವಯತ್ರಿಯರ ಕಾವ್ಯಗಳನ್ನೂ, ಕಾವ್ಯಸೃಷ್ಟಿಯ ಸಂದರ್ಭಗಳನ್ನೂ ವಿಶ್ಲೇಷಿಸಿ, ಕವಯತ್ರಿಯರಿಗಿದ್ದ ತೊಡಕುಗಳು, ಅವಶ್ಯಕತೆಗಳು, ಪ್ರೇರಣೆ–ಪ್ರಭಾವ ಅವಕಾಶಗಳನ್ನು ಕಾಲದ ಹಿನ್ನೆಲೆಯಲ್ಲಿ ಚರ್ಚಿಸಿದರೆ ಸಾಹಿತ್ಯಚರಿತ್ರೆಯು ಅರ್ಥಪೂರ್ಣ ಎನಿಸುತ್ತದೆ.

ಮಹಿಳಾಸಾಹಿತ್ಯವನ್ನು ಅಂದಾಜುಮಾಡಲು ರಾಜಕೀಯವಾಗಿ ಸಾಮಾಜಿಕವಾಗಿ ಬಂದ ಬದಲಾವಣೆಗಳು ಸ್ತ್ರೀಯರ ಅಂತಸ್ತು, ಸ್ಥಾನಗಳನ್ನು ಹೇಗೆ ಪ್ರಭಾವಗೊಳಿಸಿವೆ. ಈ ಪ್ರಭಾವಕ್ಕೆ ಒಳಗಾದ ವ್ಯಕ್ತಿಗಳಾಗಿ ಲೇಖಕಿಯರು ಹೇಗೆ ಕಾರ್ಯಗೈದಿದ್ದಾರೆ ಎಂಬ ವಿಷಯವನ್ನು ಒಂದು ಸೂತ್ರವಾಗಿ ತೆಗೆದುಕೊಳ್ಳಬಹುದು. ಹಾಗೇ ಆ ಲೇಖಕಿ ಎಂಥ ಮಾದರಿಗಳನ್ನು ಕೊಡುತ್ತಾಳೆ. ಆಕೆಯ ಸಾಹಿತ್ಯ ಪರಿಣತಿಗೆ ಇರುವ ಪರಿಮಿತಿಗಳು ಯಾವುವು ಎಂಬುದು ನಾವು ಗುರುತಿಸಬಹುದು. ಈ ಪ್ರಪಂಚವನ್ನು, ಸಾಹಿತ್ಯವನ್ನೂ, ಸಾಹಿತ್ಯದ ದೃಷ್ಟಿಕೋನವನ್ನು ಸ್ತ್ರೀಯರು ಹೇಗೆ ಅರ್ಥಮಾಡಿಕೊಳ್ಳುತ್ತಾರೆಂಬುದು ಈ ಸಮಾಜದಲ್ಲಿ ಅವರ ಸ್ಥಾನದ ಮೇಲೆ ಆಧರಿಸಿರುತ್ತದೆ. ಆ ಸ್ಥಾನವನ್ನು ನಿರ್ಣಯಿಸುವ ಲೈಂಗಿಕತ್ವ, ಮಾತೃತ್ವ ಶ್ರಮ ಮುಂತಾದ ಸೂತ್ರಗಳನ್ನು ನಾವು ಗಮನಿಸಿ ಅವುಗಳ ಆಧಾರದಿಂದ ಒಂದು ಅಂದಾಜಿಗೆ ಬಂದಾಗ ಮಹಿಳಾ ಸಾಹಿತ್ಯ ವಿಶ್ಲೇಷಣೆಗೆ ನ್ಯಾಯ ಒದಗಿಸಲು ಸಾಧ್ಯವಾಗುತ್ತದೆ.

ಸಾಹಿತ್ಯಚರಿತ್ರೆಗಳಲ್ಲಿ ಲೇಖಕಿಯರ ಸಂಪೂರ್ಣ ಅವಗಣನೆ ನಡೆದಿದೆ ಎಂದು ಹೇಳಲಾಗುವುದಿಲ್ಲ. ಕೆಲವೊಂದು ಕೃತಿಗಳಲ್ಲಿ ಮಹಿಳೆಯರ ಸಮಗ್ರ ಮಾಹಿತಿ ದೊರಕಿರುವ ಉದಾಹರಣೆಗಳಿವೆ. ಕುಂದೂರು ಮಠ ಮೈಸೂರಿನಿಂದ ಪ್ರಕಟವಾಗಿರುವ 'ಸಂಸ್ಕೃತ ಸಾಹಿತ್ಯಕ್ಕೆ ಕರ್ನಾಟಕದ ಕೊಡುಗೆ'[೨೬] ಕೃತಿಯಲ್ಲಿ ಸಂಸ್ಕೃತ ಸಾಹಿತ್ಯಕ್ಕೆ ಕೊಡುಗೆ ನೀಡಿರುವ ಮಹಿಳಾಸಾಹಿತಿಗಳ ವಿವರ ವಿಸ್ತೃತವಾಗಿ ದೊರಕುತ್ತದೆ. ಮೈಸೂರು ಹಾಗೂ ಬೆಂಗಳೂರು ವಿಶ್ವವಿದ್ಯಾನಿಲಯಗಳು ಪ್ರಕಟಿಸಿರುವ ಸಾಹಿತ್ಯ ಚರಿತ್ರೆಯ ಸಂಪುಟಗಳು, ಸಮಗ್ರ ವಚನಸಾಹಿತ್ಯ, ಸಮಗ್ರ ದಾಸಸಾಹಿತ್ಯ ಸಂಪುಟಗಳಲ್ಲಿ ಸಾಧ್ಯವಾದಷ್ಟು ಮಟ್ಟಿಗಿನ ಸಮಗ್ರ ಮಾಹಿತಿ ದೊರಕಿಸುವ ಪ್ರಯತ್ನ ಕಾಣುತ್ತೇವೆ. ಮಾಹಿತಿಯ ಕೊರತೆ, ಕಣ್ತಪ್ಪಿನಿಂದ ಕೆಲವೊಂದು ವಿಚಾರ ಬಿಟ್ಟಿರುವ ಸಾಧ್ಯತೆಗಳಿದ್ದರೂ ಈ ಗ್ರಂಥಗಳಲ್ಲಿ ಕವಯತ್ರಿಯರಿಗೂ ಸಮಾನ ಆದ್ಯತೆ ನೀಡಿರುವುದನ್ನು ಕಾಣಬಹುದು.

**ಮಹಿಳೆಯರಿಂದ ರಚಿತವಾದ ಸಾಹಿತ್ಯ ಚರಿತ್ರೆಗಳು.**

ಮಹಿಳಾ ಸಂವೇದನೆಗಳನ್ನು, ಸಾಧನೆಯ ಹಾದಿಯಲ್ಲಿನ ತೊಡಕುಗಳನ್ನು ಅರ್ಥಮಾಡಿಕೊಳ್ಳಲು ಮಹಿಳೆಯರೇ ಸಮರ್ಥರು ಎಂಬ ಆಶಯದ ಹಿನ್ನೆಲೆಯಲ್ಲಿ ಕೆಲವು ಮಹಿಳೆಯರು ಕಾರ್ಯಪ್ರವೃತ್ತರಾದರು. ಅವರುಗಳಲ್ಲಿ ಸರೋಜಿನಿ ಮಹಿಷಿಯವರು ಮೊದಲಿಗರು, ಇವರು ರಚಿಸಿರುವ **'ಕರ್ನಾಟಕದ ಕವಯಿತ್ರಿಯರು'**[೨೭] ಇವರಿಗೆ ಡಾಕ್ಟರೇಟ್ ಪದವಿಯನ್ನು ಗಳಿಸಿಕೊಟ್ಟಿದೆ. ನಂಜನಗೂಡು ತಿರುಮಲಾಂಬ ಅವರ ಹೆಸರಿನಲ್ಲಿ 'ಶಾಶ್ವತಿ' ಪ್ರಶಸ್ತಿಯನ್ನು ಲೇಖಕಿಯರಿಗೆ ನೀಡಿ ಸನ್ಮಾನಿಸುವ ಪರಂಪರೆಯನ್ನು ಹುಟ್ಟುಹಾಕಿರುವುದಲ್ಲದೆ, ಶಾಶ್ವತಿ ವಸ್ತುಪ್ರದರ್ಶನಾಲಯ ಸ್ಥಾಪಿಸುವುದರ ಮೂಲಕ ಪ್ರೊ.ಚಿ.ನ.ಮಂಗಳ ಅವರು ಮಹಿಳಾ ಲೇಖಕಿಯರನ್ನು ಪ್ರೋತ್ಸಾಹಿಸುವ ಹಲವಾರು ಕಾರ್ಯಕ್ರಮಗಳಿಗೆ ಮೇಲ್ಪಂಕ್ತಿ ಹಾಕಿಕೊಟ್ಟರು. ಪ್ರಶಸ್ತಿ ನೀಡಿ ಪ್ರೋತ್ಸಾಹಿಸುವುದಲ್ಲದೆ, ಲೇಖಕಿಯರ ವಿಚಾರವನ್ನು ಸಮಗ್ರವಾಗಿ ದಾಖಲಿಸುವ, ಶೋಧಿಸಿ ಹುಡುಕುವ ಕಾರ್ಯವು ಹೀಗೆ ಮಹಿಳೆಯರಿಂದಲೇ ಆರಂಭವಾಯಿತು.

ಡಾ॥ಸರೋಜಿನಿ ಮಹಿಷಿಯವರು ರಚಿಸಿರುವ 'ಕರ್ನಾಟಕದ ಕವಯಿತ್ರಿಯರು' ಕೃತಿಯು ಲೇಖಕಿಯರ ಕುರಿತಾಗಿ ರಚಿಸಲಾದ ಸಾಹಿತ್ಯಚರಿತ್ರೆಗಳಲ್ಲಿಯೇ ಮೊಟ್ಟಮೊದಲನೆಯದು. ಕ.ಸ.ಸಾಹಿತ್ಯಸಂಘ, ಧಾರವಾಡದಿಂದ

ಕ್ರಿ.ಶ.೧೯೬೫ರಲ್ಲಿ ಪ್ರಕಟವಾದ ಈ ಕೃತಿಯಲ್ಲಿ ವೇದ–ಪುರಾಣ ಜೈನ–ಬೌದ್ಧಯುಗಗಳಲ್ಲಿನ ಸ್ತ್ರೀ ಜೀವನ, ಸಾಹಿತ್ಯ ಅಭಿವ್ಯಕ್ತಿ, ಧಾರ್ಮಿಕ–ಸಾಮಾಜಿಕ ಸ್ಥಾನಗಳಮೇಲಾದ ಪರಿಣಾಮ, ಮಧ್ಯಯುಗದ ಧಾರ್ಮಿಕ ಸಾಮಾಜಿಕ ಕ್ರಾಂತಿ ಮೊದಲಾದವುಗಳನ್ನು ಚರ್ಚಿಸಿ ಕನ್ನಡದಲ್ಲಿ ಸ್ತ್ರೀ–ಸಾಹಿತ್ಯದ ಕುರಿತಾಗಿ ಅಧ್ಯಯನ ನಡೆಸಿದ್ದಾರೆ. ಕನ್ನಡದಲ್ಲಿ ಸ್ತ್ರೀಸಾಹಿತ್ಯ ಎಂಬ ಅಧ್ಯಾಯದಲ್ಲಿ ಇವರ ಕಾಲದಲ್ಲಿ ರಚಿತವಾಗಿದ್ದ ಸಾಹಿತ್ಯ ಚರಿತ್ರೆಗಳಲ್ಲಿ ಉಲ್ಲೇಖವಾಗಿರುವ ಮಹಿಳೆಯರ ಅಪ್ರಕಟಿತ ಕೃತಿಗಳು, ಕೇವಲ ಅಂಕಿತ ಮಾತ್ರ ದೊರಕಿರುವ ವಚನಕಾರ್ತಿಯರ ವಚನಗಳು, ಪುರಾತನದೇವಿಯರ ವಚನಾಮೃತದ ಮೇರೆಗೆ ವಚನಕಾರ್ತಿಯರು, ಅಲ್ಲಮಪ್ರಭು–ಸಿದ್ಧರಾಮೇಶ್ವರ ವಾದದ ವಚನಗಳ ಸಂಗ್ರಹದಲ್ಲಿ ದೊರೆತ ವಚನಕಾರ್ತಿಯರು, ಇತರ ಕಾವ್ಯ ರಚಿಸಿದ ಕವಯಿತ್ರಿಯರು. ಎಂಬ ಮೊದಲಾದ ವಿಭಾಗಗಳಲ್ಲಿ ವಚನಕಾರ್ತಿಯರು ಹಾಗೂ ನಡುಗನ್ನಡದ ಕವಯಿತ್ರಿಯರ ಕುರಿತಾಗಿ ವಿವರಣೆ ನೀಡಿದ್ದಾರೆ. ಹಂಪ–ಕಂತಿಯರ ಸಮಸ್ಯೆಯನ್ನು ಕುರಿತು ಚರ್ಚಿಸಿದ್ದಾರೆ. ಅಕ್ಕಮಹಾದೇವಿ, ರಾಣಿ ಮಹಾದೇವಿ, ಲಿಂಗಮ್ಮನವರ ಜೀವನ, ವಚನಗಳು ಶೈಲಿ ವಿಮರ್ಶೆಗಳೊಂದಿಗೆ ಇತರ ವಚನಕಾರ್ತಿಯರ ವಚನ ಹಾಗೂ ವಿಮರ್ಶೆಗಳನ್ನು ಮಾಡಿದ್ದಾರೆ. ಚಿಕ್ಕದೇವರಾಯರ ಕಾಲದ ಕವಯಿತ್ರಿಯರು ಎಂಬ ಅಧ್ಯಾಯದಲ್ಲಿ ಹೊನ್ನಮ್ಮ, ಶೃಂಗಾರಮ್ಮ, ಚೆಲುವಾಂಬೆಯರ ಕೃತಿಗಳನ್ನು ಕುರಿತು ಚರ್ಚಿಸಿದ್ದಾರೆ. ವೈಷ್ಣವ ಭಕ್ತಪಂಥದ ಕವಯಿತ್ರಿಯರ ಕುರಿತಾದ ಅಧ್ಯಾಯದಲ್ಲಿ ಸುಮಾರು ಹತ್ತುಜನ ಕವಯಿತ್ರಿಯರ ಕುರಿತು ಮಾಹಿತಿ ನೀಡಿ, ಅವರ ಕೃತಿಗಳ ವಿಮರ್ಶೆ ಮಾಡಿದ್ದಾರೆ. ಆಧುನಿಕ ಯುಗದ ಅನೇಕ ಕವಯತ್ರಿಯರ ಹಾಗೂ ಅವರ ಕೃತಿಗಳ ಕುರಿತಾಗಿ ವಿವರಣೆ ನೀಡಿದ್ದಾರೆ. ಇವರ ಕೃತಿಗಳಲ್ಲಿ ಉಲ್ಲೇಖಿತರಾಗಿರುವ ಕವಯತ್ರಿಯರಲ್ಲಿ ಅನೇಕರ ಹೆಸರು ಮೊದಲಬಾರಿಗೆ ಸಾಹಿತ್ಯ ಚರಿತ್ರೆಯೊಂದರಲ್ಲಿ ಸ್ಥಾನ ಪಡೆದುಕೊಂಡಿವೆ. ಇವರ ಈ ಕೃತಿಯ ರಚನೆಯ ಸಂದರ್ಭದಲ್ಲಿ ಹೆಳವನಕಟ್ಟೆ ಗಿರಿಯಮ್ಮನ ಕೆಲವು ಹಾಡುಗಳು ಮಾತ್ರ ಅಲ್ಲಲ್ಲಿ ಪ್ರಕಟವಾಗಿದ್ದವು, ಹರಪನಹಳ್ಳಿ ಭೀಮವ್ವ, ಗಣಪಕ್ಕ, ಸುಂದರಬಾಯಿ, ಪನ್ನಿ ಲಕ್ಷ್ಮೀಬಾಯಿ, ಕುಂದಗೋಳದ ಹಾಡಿನ ವೆಂಕಮ್ಮ ಮೊದಲಾದವರ ಕೃತಿ ಹಾಗೂ ಜೀವನ ಚರಿತ್ರೆಗಳಿಗಾಗಿ ಅವರ ವಂಶಸ್ಥರ, ತಿಳಿದವರ ಬಳಿ ಸಂಪಾದಿಸಲು ಸಾಕಷ್ಟು ಪರಿಶ್ರಮ ವಹಿಸಿರುವುದು ಕಂಡುಬರುತ್ತದೆ. ಚೆಲುವಾಂಬಾಳ ಕೃತಿಗಳು, ಗಿರಿಯಮ್ಮನ ಹಾಡುಗಳು ಮೊದಲಾದವುಗಳಿಗೆ ಹಸ್ತಪ್ರತಿ ಭಂಡಾರದ ತಾಳೆಗರಿಗಳನ್ನು ಪರಿಶೀಲಿಸಿ ಸಂಗ್ರಹಿಸಿದ್ದಾರೆ, ಅಲ್ಲಲ್ಲಿ ಕೆಲವು ಪತ್ರಿಕೆಗಳಲ್ಲಿ, ಇತರ ವಚನಕಾರರ ಸಂಪುಟಗಳಲ್ಲಿ ಪ್ರಕಟವಾಗಿದ್ದ ವಚನಕಾರ್ತಿಯರ ವಚನಗಳನ್ನು ಸಂಪಾದಿಸಿ ವಿವರಣೆ ಒದಗಿಸಿದ್ದಾರೆ. ಈ ಕೃತಿಯು ಮುಂದೆ ಕನ್ನಡದ ಕವಿಯತ್ರಿಯರನ್ನು ಕುರಿತು ರಚಿಸಲಾಗಿರುವ ಎಲ್ಲ ಕೃತಿಗಳಿಗೂ ಆಕರಗ್ರಂಥವಾಗಿದೆ. ವಿಶ್ವವಿದ್ಯಾಲಯಗಳು, ಸಂಘ ಸಂಸ್ಥೆಗಳು ನಡೆಸಬೇಕಾದ ಕೆಲಸವನ್ನು ಸರೋಜಿನಿ ಮಹಿಷಿಯವರು ಸಮರ್ಥವಾಗಿ ನಡೆಸಿ, ತಮ್ಮ ಕಾಲದಲ್ಲಿ ಲಭ್ಯವಿದ್ದ ಎಲ್ಲ ಮಾಹಿತಿಗಳನ್ನೂ ತಮ್ಮ ಗ್ರಂಥದಲ್ಲಿ ಒದಗಿಸಿದ್ದಾರೆ. ಅನುಬಂಧದಲ್ಲಿ ಕರ್ನಾಟಕದ ಸಂಸ್ಕೃತ ಕವಯತ್ರಿಯರನ್ನೂ ಹಾಗೂ ಅವರ ಕೃತಿಗಳ ಕುರಿತಾದ ಸುದೀರ್ಘ ವಿಮರ್ಶೆ ಮಾಡಿದ್ದಾರೆ.

**ನುಡಿಗವಳ** ಎಂಬ ಗ್ರಂಥವು ಸೃಜನೇತರ ಸಾಹಿತ್ಯವನ್ನು ರಚಿಸಿದ ಮಹಿಳೆಯರ ವಿವರಣೆ ನೀಡುವ ಕೃತಿಯಾಗಿದೆ.[೨೮] ಇದನ್ನು ರಚಿಸಿರುವ ಸಬಿಹಾ ಭೂಮಿಗೌಡ ಅವರು ಸಾಹಿತ್ಯ–ಸಂಸ್ಕೃತಿ, ಸಂಪಾದನೆ/ಸಂಶೋಧನೆ/ಭಾಷಾಂತರ, ಭಾಷೆ/ನಿಘಂಟು, ಮಾನವಿಕ, ವಿಜ್ಞಾನ, ಲಲಿತಕಲೆ, ಮೊದಲಾದ ವಿಭಾಗಗಳಲ್ಲಿ ಹಾಗೂ ಇವುಗಳ ಸುಮಾರು ೪೨ ಉಪವಿಭಾಗಗಳಲ್ಲಿ ಆಧುನಿಕ ಕಾಲದ ಮಹಿಳೆಯರ ಸೃಜನೇತರ ಸಾಹಿತ್ಯ ಕೃತಿಗಳ ಪರಿಚಯ ಮಾಡಿಕೊಟ್ಟಿದ್ದಾರೆ. ಜೊತೆಗೆ ಅನುಬಂಧದಲ್ಲಿ ಮಹಿಳೆಯರ ಸಂಶೋಧನ ನಿಬಂಧಗಳ ಪಟ್ಟಿ, ಸೃಜನೇತರ ಮಹಿಳಾ ಸಾಹಿತಿಗಳ ಪಟ್ಟಿಯನ್ನು ನೀಡಿದ್ದಾರೆ. ಇವರು ನೀಡಿರುವ ಪಟ್ಟಿಯಲ್ಲಿನ ಸುಮಾರು ೫೬೦ಕ್ಕೂ ಹೆಚ್ಚಿನ ಸೃಜನೇತರ ಮಹಿಳಾ ಸಾಹಿತಿಗಳ ಉಲ್ಲೇಖವು ಸಾಹಿತ್ಯ ಕ್ಷೇತ್ರಕ್ಕೆ ಮಹಿಳೆಯರು

ನೀಡಿರುವ ಕೊಡುಗೆಯನ್ನು (ಸೃಜನಶೀಲಸಾಹಿತ್ಯದ ಲೇಖಕಿಯರನ್ನು ಹೊರತು ಪಡಿಸಿ) ಕುರಿತ ಸ್ಥೂಲ ಚಿತ್ರಣ ನೀಡುತ್ತದೆ.

**ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ:** ಸಮಗ್ರ ಕನ್ನಡ ಕಬ್ಬಿಗಿತ್ತಿಯರ ಚರಿತ್ರೆಯೊಂದಿಗೆ ಅವರ ಸಾಹಿತ್ಯ ಚರಿತ್ರೆಯನ್ನು ವಿವರವಾಗಿ ಚರ್ಚಿಸಿರುವ ಈ ಬೃಹದ್‌ಗ್ರಂಥ ತರಲಾಯಿತು. ಈ ಸಾಹಿತ್ಯ ಚರಿತ್ರೆಯಲ್ಲಿ ಪ್ರಾಚೀನ ಕನ್ನಡ ಮಹಿಳಾ ಸಾಹಿತ್ಯ:, ೧೫೫೦-೧೮೯೯ರ ವರೆಗಿನ ಕನ್ನಡ ಮಹಿಳಾ ಸಾಹಿತ್ಯ, ತಿರುಮಲಾಂಬ ಅವರಿಂದ ೧೯೫೦ರ ವರೆಗಿನ ಕನ್ನಡ ಮಹಿಳಾ ಸಾಹಿತ್ಯ, ೧೯೫೦-೧೯೭೫ವರೆಗಿನ ಕನ್ನಡ ಮಹಿಳಾ ಸಾಹಿತ್ಯ, ೧೯೭೫ರ ಆನಂತರದ ಕನ್ನಡ ಮಹಿಳಾ ಸಾಹಿತ್ಯ, ಎಂಬ ವಿಭಾಗಗಳಲ್ಲಿ ವಿಭಿನ್ನ ಕಾಲಘಟ್ಟಗಳಲ್ಲಿ ಮೂಡಿಬಂದ ಮಹಿಳೆಯರ ಸಾಹಿತ್ಯ ಚರಿತ್ರೆಗಳನ್ನು ತಿಳಿಸಿ ಮುಂದಿನ ಎರಡು ಅಧ್ಯಾಯಗಳಲ್ಲಿ ಸೃಜನೇತರ ಕನ್ನಡ ಮಹಿಳಾ ಸಾಹಿತ್ಯ, ಮಹಿಳಾ ಜನಪದ ಸಾಹಿತ್ಯದ ಕುರಿತಾದ ವಿಪುಲ ಮಾಹಿತಿ ಇಲ್ಲಿದೆ.

ಪ್ರಾಚೀನ ಕನ್ನಡ ಸಾಹಿತ್ಯ ಅಧ್ಯಯನವನ್ನು ಜೈನ ಕವಿಗಳಿಂದ ಆರಂಭಿಸಲಾಗುತ್ತದೆ. ಆದರೆ ಪ್ರಾಚೀನ ಕನ್ನಡ ಮಹಿಳಾ ಸಾಹಿತ್ಯವು ಕನ್ನಡ ಸಾಹಿತ್ಯಚರಿತ್ರೆಯ ಎರಡನೆಯ ಘಟ್ಟವೆನಿಸಿದ ಬಸವಯುಗದಿಂದ ಆರಂಭವಾಗುತ್ತದೆ. ಹೀಗೆ ಕನ್ನಡ ಸಾಹಿತ್ಯದ ಪ್ರಾಚೀನ ಕಬ್ಬಿಗಿತ್ತಿಯರೆನಿಸಿದ ವಚನಕಾರ್ತಿಯರ ವಿಭಾಗದಲ್ಲಿ ಬಸವಪೂರ್ವಯುಗ, ಬಸವಯುಗ ಹಾಗೂ ಬಸವೋತ್ತರಯುಗದ ವಚನಕಾರ್ತಿಯರೆಂದು ಪ್ರತ್ಯೇಕ ವಿಭಾಗ ಮಾಡಿಕೊಂಡು ವಚನಕಾರ್ತಿಯರನ್ನು ಕುರಿತಾಗಿ ವಿವರವಾಗಿ ಚರ್ಚೆ ನಡೆಸಲಾಗಿದೆ.

ಮೂರನೆಯ ಭಾಗವಾದ ೧೭ನೇ ಶತಮಾನದಿಂದ ೧೯ನೆಯ ಶತಮಾನದ ವರೆಗಿನ ಮೂರು ಶತಮಾನಗಳ ಕವಯತ್ರಿಯರ ಸಾಹಿತ್ಯಚರಿತ್ರೆಯನ್ನು ಮೂರು ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ. ಈ ವಿಭಾಗದಲ್ಲಿ ೧೭ ಹಾಗೂ ೧೮ನೆಯ ಶತಮಾನದಲ್ಲಿ ಬರುವ ಕವಯತ್ರಿಯರ ಮಹತ್ವದ ಕೃತಿಗಳನ್ನು ವಿವರವಾಗಿ ಪರಿಚಯ ಮಾಡಿಕೊಡಲಾಗಿದೆ ಹಾಗೂ ೧೯ನೆಯ ಶತಮಾನದ ಕವಯತ್ರಿಯರ ಸಾಹಿತ್ಯದ ಕುರಿತಾಗಿ ಸಮಗ್ರ ಮಾಹಿತಿಯನ್ನು ಒದಗಿಸಿಕೊಟ್ಟಿದ್ದಾರೆ. ಐದನೆಯ ಭಾಗವಾದ ತಿರುಮಲಾಂಬ ಅವರಿಂದ ೧೯೫೦ರ ವರೆಗಿನ ಕನ್ನಡ ಮಹಿಳಾ ಸಾಹಿತ್ಯದಲ್ಲಿ ಸಂಕ್ಷಿಪ್ತವಾಗಿ ಹಲವಾರು ಕವಯತ್ರಿಯರ ಕಾಲ ದೇಶ, ಮತ, ಜೀವನದ ಮುಖ್ಯ ಘಟನೆ ಮೊದಲಾದವುಗಳನ್ನು ತಿಳಿಸಿ, ಸುಮಾರು ೨೫ ಕವಯತ್ರಿಯರ ಹೆಸರು ಹಾಗೂ ಕೃತಿಗಳನ್ನು ಉಲ್ಲೇಖಿಸಿದ್ದಾರೆ. ಈ ವಿಭಾಗದಲ್ಲಿ ಅಕಾರಾದಿಯಾಗಿ ಈ ಕಾಲದ ಕವಯತ್ರಿಯರ ಪಟ್ಟಿಯನ್ನು ನೀಡಿದ್ದಾರೆ. ೧೯೫೦-೧೯೭೫ರ ವರೆಗಿನ ಕನ್ನಡ ಮಹಿಳಾ ಸಾಹಿತ್ಯ ವಿಭಾಗದಲ್ಲಿ ಲೇಖಕಿಯರ ಕೃತಿ ಪರಿಚಯವಷ್ಟೇ ಅಲ್ಲದೆ ಸಂಕ್ಷಿಪ್ತವಾದ ವಿಮರ್ಶೆಯನ್ನೂ ಮಾಡಿದ್ದಾರೆ. ಈ ವಿಭಾಗದಲ್ಲಿ ಕೂಡ ಅನುಬಂಧದಲ್ಲಿ ಲೇಖಕಿಯರ ಅಕಾರಾದಿ ಪಟ್ಟಿಯನ್ನು ಕೊಟ್ಟಿದ್ದಾರೆ. ಆರನೇ ಭಾಗದಲ್ಲಿ ೧೯೭೫ರ ನಂತರದ ಕನ್ನಡ ಮಹಿಳಾ ಸಾಹಿತ್ಯದಲ್ಲಿ ಸಮಕಾಲೀನ ಮಹಿಳಾ ಸಾಹಿತ್ಯ, ಕಾವ್ಯ ಕಥಾಸಾಹಿತ್ಯ ಇತರ ಪ್ರಕಾರಗಳು, ಮಹಿಳಾ ಸಾಹಿತ್ಯ ಮತ್ತು ವಿಮರ್ಶೆಗಳನ್ನು ಕುರಿತು ಚರ್ಚಿಸಿದ್ದಾರೆ. ಸೃಜನೇತರ ಸಾಹಿತ್ಯವನ್ನು ಕುರಿತ ವಿಭಾಗವನ್ನೊಳಗೊಂಡಿರುವುದು ಈ ಸಾಹಿತ್ಯ ಚರಿತ್ರೆಯ ವೈಶಿಷ್ಟ್ಯದಲ್ಲೊಂದಾಗಿದೆ. ಇದರಲ್ಲಿ ಸಾಹಿತ್ಯ-ಸಂಸ್ಕೃತಿ, ಸಂಪಾದನೆ-ಸಂಶೋಧನೆ-ಭಾಷಾಂತರ, ಭಾಷೆ/ನಿಘಂಟು, ಮಾನವಿಕ, ವಿಜ್ಞಾನ, ಕಲೆ-ಲಲಿತ ಕಲೆ, ಸಂಕೀರ್ಣವೆಂಬ ವಿಭಿನ್ನ ಅಧ್ಯಾಯಗಳಲ್ಲಿ ಸೃಜನೇತರ ಸಾಹಿತ್ಯಕ್ಕೆ ಮಹಿಳೆಯರು ನೀಡಿರುವ ಕೊಡುಗೆಯನ್ನು ಕೃತಿಗಳ ವಿವರಣೆಯೊಂದಿಗೆ, ಕಾಲಮಾನ ಹಾಗೂ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಚರ್ಚಿಸಿದ್ದಾರೆ. ಜೊತೆಗೆ ಅಕಾರಾದಿಯಾಗಿ ಲೇಖಕಿಯರ ಪಟ್ಟಿಯನ್ನು ಕೊಟ್ಟಿದ್ದಾರೆ. ಕನ್ನಡ ಸೃಜನೇತರ ಸಾಹಿತ್ಯದ ಎಲ್ಲ ವಿಭಾಗಗಳಲ್ಲಿಯೂ ಮಹಿಳೆಯರು ತಮ್ಮ ಕೊಡುಗೆಯನ್ನು ನೀಡಿದ್ದಾರೆನ್ನುವ ಹೆಮ್ಮೆಪಡುವಂಥ ದಾಖಲೆಯನ್ನು ಈ ವಿಭಾಗದಲ್ಲಿ ಸಮರ್ಪಕ ಮಾಹಿತಿಯೊಂದಿಗೆ ಕಾಣಬಹುದು. ಎಂಟನೆಯ

ವಿಭಾಗದಲ್ಲಿ ಮಹಿಳಾ ಜನಪದಸಾಹಿತ್ಯದಲ್ಲಿ ಜಾನಪದ ಅಧ್ಯಯನಕಾರ್ತಿಯರು, ಜಾನಪದದಲ್ಲಿ ಮಹಿಳೆಯರು ಮೊದಲಾದ ವಿಚಾರಗಳನ್ನು ಕುರಿತು ಚರ್ಚಿಸಲಾಗಿದೆ.

## ಸಾಹಿತ್ಯ ಚರಿತ್ರೆಗಳಿಂದ ಹೊರಗುಳಿದ ಹಲವು ಕವಯತ್ರಿಯರು

ಈ ಮೇಲಿನ ಸಾಹಿತ್ಯ ಚರಿತ್ರೆಗಳಲ್ಲಿ ಒಂದೆರಡನ್ನು ಹೊರತುಪಡಿಸಿದರೆ ಉಳಿದೆಲ್ಲ ಚರಿತ್ರೆಗಳಲ್ಲಿ ಲೇಖಕಿಯರ ಮಾಹಿತಿಯ ಕೊರತೆ ಕಂಡುಬರುತ್ತದೆ. ಕೆಲವು ಕವಯತ್ರಿಯರು ಇಲ್ಲಿ ಸ್ಥಾನವನ್ನೇ ಪಡೆದಿಲ್ಲವೆನ್ನಬಹುದು. ಉದಾಹರಣೆಗೆ:

**ಗಂಗಾದೇವಿ:** ಕೆಳದಿ ಮಠದ ಶ್ರೀಗುರು ಚೆನ್ನವೀರಾಚಾರ್ಯರ ಪತ್ನಿ. ಹದಿನೇಳನೆಯ ಶತಮಾನದಲ್ಲಿ ಜೀವಿಸಿದ್ದ ಈಕೆ **ಕೆಳದಿ ರಾಜಾಭ್ಯುದಯಮ್** ಎಂಬ ಐತಿಹಾಸಿಕ ಗ್ರಂಥವನ್ನು ಬರೆದಿದ್ದಾಳೆ. ಕೆಳದಿಯ ರಾಜಗುರುವಿನ ಮಡದಿಯಾದ ಈಕೆಯ ಸಾಹಿತ್ಯ ರಚನಾ ಸಾಮರ್ಥ್ಯವನ್ನು ಮನಗಂಡ ಕೆಳದಿ ನೃಪ ಬಸವರಾಜೇಂದ್ರನ ಅರಸಿ ಚೆನ್ನಮ್ಮಾಜಿಯು ಪ್ರೋತ್ಸಾಹ ನೀಡಿ, ಕಾವ್ಯರಚನೆಗೆ ಮೂಲ ಪ್ರೇರಣೆಯಾದಳೆಂದು ಈ ಕಾವ್ಯದಲ್ಲಿ ಕವಯತ್ರಿ ಗಂಗಾದೇವಿಯು ತಿಳಿಸಿದ್ದಾಳೆ. ಇವಳಿಗೆ 'ಕರ್ನಾಟಕ ಕವಿ–ಪರಮೇಶ್ವರಿ', 'ವಿದ್ವಸ್ಸಭಾ ಸರಸ್ವತಿ' ಎಂಬ ಬಿರುದುಗಳಿತ್ತೆನ್ನುವುದನ್ನು ಸ್ವತಃ ಕವಯತ್ರಿಯೇ ತನ್ನ ಕಾವ್ಯದಲ್ಲಿ ತಿಳಿಸಿದ್ದಾಳೆ. 'ಕೆಳದಿ ರಾಜಾಭ್ಯುದಯಂ' ಕಾವ್ಯವು ಕೆಳದಿ ರಾಜಮನೆತನದ ಇತಿಹಾಸವನ್ನು ಕುರಿತು ರಚಿಸಲಾದ ಕನ್ನಡ ಕಾವ್ಯ. ದೊರೆತಿರುವ ಈ ಅಪೂರ್ಣ ಕೃತಿಯನ್ನು ಸಾ.ಶಿ.ಮರುಳಯ್ಯನವರು ಪ್ರಕಟಿಸಿದ್ದಾರೆ.

**ನಾಗಲದೇವಿ:** ನಗಿರೆ ನಾಡಿನ ಸಾಳುವ ರಾಜವಂಶದ ಭೈರವರಾಯನ ಮಡದಿ ನಾಗಲದೇವಿ 'ಷೋಡಶಭಾವನಾ' ಯೆಂಬ ಕಾವ್ಯವನ್ನು ರಚಿಸಿದ್ದಾಳೆ. ಕ್ರಿ.ಶ.೧೪೭೦ರ ಆಸುಪಾಸಿನಲ್ಲಿ ಜೀವಿಸಿದ್ದ ಈ ರಾಣಿ, ಕನ್ನಡದಲ್ಲಿ ಚಂಪೂ ಪ್ರಕಾರದಲ್ಲಿ ರಚಿಸಿರುವ ಏಕೈಕ ಕವಯತ್ರಿಯೆನಿಸಿದ್ದಾಳೆ. ಇವಳ ವಿಚಾರ ಕೇವಲ ಮೈಸೂರು ವಿಶ್ವವಿದ್ಯಾನಿಲಯದಿಂದ ಹೊರಬಂದಿರುವ ಕನ್ನಡ ಸಾಹಿತ್ಯ ಚರಿತ್ರೆಯನ್ನು ಹೊರತುಪಡಿಸಿ ಮತ್ಯಾವ ಸಾಹಿತ್ಯ ಚರಿತ್ರೆಯಲ್ಲಿಯೂ ಇವಳ ಪ್ರಸ್ತಾಪ ಕಂಡುಬರುವುದಿಲ್ಲ. ಈ ಕೃತಿಯನ್ನು ಕಮಲಾ ಹಂಪನಾ ಅವರು ಸಂಪಾದಿಸಿ, ಜೈನ ಅಧ್ಯಯನ ಸಂಸ್ಥೆಯಿಂದ ೨೦೦೪ರಲ್ಲಿ ಪ್ರಕಟಿಸಿದ್ದಾರೆ.

**ರಂಗಮ್ಮ:** ಸುರಪುರದ ವೆಂಕಟಪ್ಪನಾಯಕನ ಮಡದಿಯಾದ ಈಕೆ ಅನೇಕ ಕೀರ್ತನೆಗಳನ್ನು ರಚಿಸಿದ್ದಾಳೆ. ಇವಳು ಕನ್ನಡ ಹಾಗೂ ತೆಲುಗು ಎರಡೂ ಭಾಷೆಗಳಲ್ಲಿ ಕೀರ್ತನೆಗಳನ್ನು ರಚಿಸಿದ್ದು, ದಾಸಸಾಹಿತ್ಯದ ಪ್ರಭಾವವನ್ನು ಇವಳ ಕೀರ್ತನೆಗಳಲ್ಲಿ ಗುರುತಿಸಬಹುದಾಗಿದೆ. ಆದಾಗ್ಯೂ ಇವಳನ್ನು ಹರಿದಾಸ ಪಂಥದಲ್ಲಿ ಗಮನಿಸಿಲ್ಲ. ಇವಳನ್ನು ಸಾಹಿತ್ಯ ಚರಿತ್ರೆಗಳಿಂದ ಹೊರಗೆಯೇ ಇಡಲಾಗಿದೆ.

೧೯ನೆಯ ಶತಮಾನದಲ್ಲಿ ಯುಗ್ಗಮ್ಮ ಎಂಬುವವರು 'ಶ್ರೀರಂಗ ಮಹಾತ್ಮೆ'ಯನ್ನು ರಚಿಸಿದ್ದಾಳೆ. ಆದರೆ ಇದು ಹಸ್ತಪ್ರತಿ ರೂಪದಲ್ಲಿಯೇ ಇದ್ದು ಪ್ರಕಟಣೆಯಾಗಿಲ್ಲ. ಸಾಹಿತ್ಯ ಚರಿತ್ರೆಗಳಲ್ಲಿ ದಾಖಲು ಪಡೆಯದ ಹತ್ತೊಂಬತ್ತನೆಯ ಶತಮಾನದಲ್ಲಿದ್ದ ಇತರ ಕವಯತ್ರಿಯರುಗಳಲ್ಲಿ ಸುವ್ವಾಲೆ, ಶೋಭಾನೆಪದಗಳನ್ನು ರಚಿಸಿರುವ ಕಾಸರಗೋಡಿನ ಕಡುಮನೆ ಭಾಗೀರಥಿ ಹೆಬ್ಬಾರ, 'ದಾನಲಿಂಗ ಪುರಾಣ'ವೆಂಬ ಭಾಮಿನೀ ಷಟ್ಪದಿ ಕೃತಿರಚಿಸಿ, ಅನೇಕ ಕೀರ್ತನೆಗಳನ್ನು ರಚಿಸಿರುವ ಧಾರವಾಡದ ವಾಸಂತಿದೇವಿ ಮೊದಲಾದವರು ಸೇರುತ್ತಾರೆ. ಇವರುಗಳ ವಿಚಾರ ಹಸ್ತಪ್ರತಿ ಸೂಚಿ ಅಥವಾ ಆಯಾ ಪ್ರಾಂತೀಯ ವಿಚಾರಗಳನ್ನು ಸಂಶೋಧಾತ್ಮಕವಾಗಿ, ವಿಮರ್ಶಾತ್ಮಕವಾಗಿ ರಚಿಸಲಾಗಿರುವ ಲೇಖನಗಳಲ್ಲಿ ದೊರಕುತ್ತದೆ. ಆದರೆ ಸಮಗ್ರವಾಗಿ ದೊರಕಬೇಕಿರುವ ಸಾಹಿತ್ಯ ಚರಿತ್ರೆಗಳಲ್ಲಿ ಸೇರ್ಪಡೆಯಾಗಿಲ್ಲ.

## ಅಲಭ್ಯ ಕೃತಿಗಳು

**ಜಕ್ಕಲಾಂಬ:** ೧೨ನೆಯ ಶತಮಾನದಲ್ಲಿ ಜೀವಿಸಿದ್ದ ಜಕ್ಕಲಾಂಬೆ 'ಗುಣಾಂಕಮಾಲೆ ಚರಿತೆ' ಕೃತಿಯನ್ನು ರಚಿಸಿದ್ದಾಳೆ. ಇವಳು ರಚಿಸಿರುವ ಕೃತಿ ಲಭ್ಯವಿಲ್ಲದಿದ್ದರೂ ಇವಳ ಕುರಿತಾದ ಸುದೀರ್ಘ ಶಾಸನ ಪದ್ಯವೊಂದು ಲಭಿಸಿ ಇವಳ ಕುರಿತಾದ ಹೆಚ್ಚಿನ ಮಾಹಿತಿ ನೀಡುತ್ತದೆ. ವಿಪುಲವಾದ ಚರ್ಚೆಗೆ ಅವಕಾಶವಿರುವ ಈಕೆಯ ವಿಚಾರವನ್ನು ಯಾವ ಸಾಹಿತ್ಯ ಚರಿತ್ರೆಯೂ ಉಲ್ಲೇಖಿಸದಿರುವುದು ಆಶ್ಚರ್ಯವಾಗಿದೆ. ಕವಿಗಳನ್ನು ಉಲ್ಲೇಖಿಸುವಾಗ ಇತರ ಮೂಲಗಳಿಂದ ವಿಷಯಗಳನ್ನು ಶೋಧಿಸಿ, ಇರಬಹುದು.. ಇದ್ದಿರಬಹುದು... ಆಗಿರಬಹುದು... ಎಂಬ ಸಂಭಾವ್ಯವನ್ನು ಹುಡುಕುವ ಸಾಹಿತ್ಯಚರಿತ್ರೆಕಾರರು ಕವಯತ್ರಿಯೋರ್ವಳ ವಿಚಾರವನ್ನು ಆ ಬಗೆಯಲ್ಲಿ ಗಮನಿಸಿಲ್ಲ ಎನ್ನುವುದಕ್ಕೆ ಇದೊಂದು ಉತ್ತಮ ಉದಾಹರಣೆಯಾಗಿದೆ.

## ಅಜ್ಞಾತ ಕವಯಿತ್ರಿಯರು:

ತ್ರಿಪದಿ ಛಂದಸ್ಸಿನಲ್ಲಿ ರಚಿತವಾಗಿರುವ 'ಚಂದನಾಂಬಿಕೆಯ ಕಥೆ' ಯ ಕರ್ತೃವಿನ ವಿಚಾರವೇನೂ ತಿಳಿಯದಿದ್ದರೂ 'ಭಾಮೆಯರೆಲ್ಲಾ ನೆರೆಬನ್ನಿ' 'ನೀತಿಕುಸಲೆಯೊಬ್ಬ ಮಾತಿನ ಕಡುಜಾಣೆ', 'ನುಡಿದಳು ಮಾತೆ ಚಂದನೆಯ ಕಥೆಯನು' ಎಂಬ ಮೊದಲಾದ ಸಾಲುಗಳಿಂದ ಇದನ್ನು ಮಹಿಳೆಯೊಬ್ಬಳು ರಚಿಸಿರುವುದೆಂಬುದು ಸಾಬೀತಾಗುತ್ತದೆ. ೧೯೭೫ರಲ್ಲಿ ಜಯಚಂದ್ರರಿಂದ ಸಂಪಾದಿತಗೊಂಡು ಪ್ರಕಟಣೆ ಕಂಡ ಈ ಕೃತಿಯನ್ನು ಪರಿಶೀಲಿಸಿ ಹಂಪನಾ ಅವರು ಈ ಕೃತಿಯ ಭಾಷೆ, ತ್ರಿಪದಿಯ ಲಯ, ವಿನ್ಯಾಸ, ಆಂತರಿಕ ಪ್ರಮಾಣಾಧಾರಗಳಿಂದ ಇದು ೧೫ನೇ ಶತಮಾನದಲ್ಲಿ ರಚಿತವಾಗಿರಬಹುದೆಂದು ಊಹಿಸಿದ್ದಾರೆ. ಅಂಶ ತ್ರಿಪದಿಯಲ್ಲಿ ರಚಿತವಾಗಿರುವ ಈ ಕಾವ್ಯವು ಕೂಡ ಮುಂದಿನ ಸಾಹಿತ್ಯ ಚರಿತ್ರೆಗಳಲ್ಲಿ ಸೇರ್ಪಡೆಯಾಗಬೇಕಿದೆ.

ಮತ್ತೊರ್ವ ಅಜ್ಞಾತ ಕವಯತ್ರಿಯು ಹಾಗಲವಾಡಿ ಮನೆತನದಲ್ಲಿ ೧೮ನೆಯ ಶತಮಾನದಲ್ಲಿ ಆಳ್ವಿಕೆ ನಡೆಸಿದ ಇಮ್ಮಡಿ ಮುದಿಯಪ್ಪನಾಯಕನ ಮಗಳು. ಅನೇಕ ಸ್ವರವಚನಗಳನ್ನು ರಚಿಸಿರುವ ಇವಳು ತನ್ನ ಹೆಸರನ್ನು ನಮೂದಿಸದೆ ಗುರುಸಂಗಮೇಶ್ವರ ಲಿಂಗವೇ, ಗುರುಹುಚ್ಚಾರ್ಯ, ಗುರುಧೀರ ಹುಚ್ಚಾರ್ಯ ಎಂಬ ಅಂಕಿತಗಳನ್ನು ಬಳಸಿದ್ದಾಳೆ.

ಕೃಷ್ಣದೇವರಾಯನ ಆಸ್ಥಾನದಲ್ಲಿದ್ದ ಅಷ್ಟದಿಗ್ಗಜರ ಸಾಹಿತ್ಯವನ್ನು ಅಭ್ಯಾಸ ಮಾಡಿರುವ ಉಮಾ ರಾಮರಾವ್ ಅವರು ತಮ್ಮ ಕೂಚಿಪುಡಿ ಭಾರತಮ್ ನಲ್ಲಿ 'ಈ ಕಾಲದ ನೂರಾರು ನರ್ತಕಿಯರು ಸ್ವಯಂ ಕವಯತ್ರಿಯರಾಗಿದ್ದರು, ಸ್ವತಃ ಹಾಡು ಕಟ್ಟಿ ಆನಂದ ನರ್ತನ ಮಾಡುತ್ತಿದ್ದರು' ಎಂಬ ವಿಚಾರವನ್ನು ತಿಳಿಸಿದ್ದಾರೆ. ಕೃಷ್ಣದೇವರಾಯನ ಆರಾಧ್ಯದೈವ ತಿರುಪತಿ ವೆಂಕಟೇಶನನ್ನು ಕುರಿತ ಹಾಡು ಕಟ್ಟಿ ನರ್ತನ ಮಾಡುವವರಲ್ಲಿ ಕುಪ್ಪೈ ಎಂಬುವಳು ಖ್ಯಾತ ನರ್ತಕಿಯಾಗಿದ್ದಳೆಂಬ ವಿಚಾರವನ್ನು ತಿಳಿಸಿದ್ದಾರೆ. ಆದರೆ ಇವರ ಕೃತಿಗಳಾವುವೂ ದೊರೆತಿಲ್ಲ.

## ಶಾಸನ ಕವಯತ್ರಿಯರು: ಶಾಸನಕಾರ್ತಿಯರು:

ಕನ್ನಡ ನಾಡಿನಲ್ಲಿ ಶಾಸನಗಳನ್ನು ರಚಿಸಿದ ಮಹಿಳೆಯರೂ ಇದ್ದರೆನ್ನುವುದಕ್ಕೆ ಕೆಲವು ಉದಾಹರಣೆಗಳು ದೊರಕುತ್ತವೆ. ಇಂತಹ ವಿಶೇಷ ವಿಚಾರಗಳನ್ನು ಸಾಹಿತ್ಯಚರಿತ್ರೆಯ 'ಶಾಸನಕವಿಗಳು–ಕವಯತ್ರಿಯರು' ವಿಭಾಗದಲ್ಲಿ ಸೇರಿಸಬೇಕಿದೆ. ವಿಪರ್ಯಾಸವೆಂದರೆ ಈವರೆಗೆ ಬಂದಿರುವ ಯಾವುದೇ ಸಾಹಿತ್ಯಚರಿತ್ರೆಯಲ್ಲಿಯೂ ಈ ವಿಚಾರ ಉಕ್ತವಾಗಿಲ್ಲ.

ಚಿತ್ರದುರ್ಗದ ಪಾಂಡುರಂಗನ ಬೆಟ್ಟದಲ್ಲಿರುನ ಪ್ರಾಚೀನ ಶಾಸನವೊಂದನ್ನು ರಚಿಸಿದವಳು ಮಹಿಳೆ. ಈ ಶಾಸನದ ಕಡೆಯಲ್ಲಿ ಶ್ರೀಬಿಜಾಬೆ ಎಂಬ ಈಕೆಯ ಹೆಸರೂ ದಾಖಲಾಗಿದೆ. ರೈಸ್‌ರ ಶಾಸನ ಸಂಪುಟದಲ್ಲಿಯೇ ಈ ಶಾಸನ ಪ್ರಕಟವಾಗಿದ್ದರೂ[೩೨] ಈ ಶಾಸನವನ್ನು ರಚಿಸಿರುವುದು ಮಹಿಳೆ ಎಂಬ ವಿಚಾರ ಆಗ ಗಮನಿಸಿರಲಿಲ್ಲ (ಮಹತ್ವ ಪಡೆದಿರಲಿಲ್ಲ). ಇತ್ತೀಚೆಗೆ ಈ ಶಾಸನದ ಲಿಪಿಯ ಅಧ್ಯಯನ ನಡೆಸಿದ ಬಿ.ರಾಜಶೇಖರಪ್ಪ ಅವರು, ಇದು ಕ್ರಿ.ಶ.೭–೮ನೆಯ ಶತಮಾನದ ಬಾದಾಮಿಯ ಚಲುಕ್ಯ ಕಾಲದ ಶಾಸನ ಲಿಪಿಯನ್ನು ಹೋಲುವುದನ್ನೂ, ಇದನ್ನು ರಚಿಸಿದವಳು ಬಾದಾಮಿ ಚಳುಕ್ಯ ರಾಣಿ ವಿಜಯಬ್ಬೆ / ವಿಜಯಾಂಬೆ ಎಂಬ ತಮ್ಮ ನಿಲುವನ್ನೂ ಸಂಶೋಧನಾತ್ಮಕವಾಗಿ ತಿಳಿಸಿದ್ದಾರೆ.[೩೩]

ಕ್ರಿ.ಶ.೧೧೮೯ರ ನೂಲಗೇರಿಯ ಒಂದು ಶಾಸನದಲ್ಲಿನ 'ಹರಿಸೆಟ್ಟಿಕವ್ವೆಯ ಬರಪ' ಎಂಬ ಉಲ್ಲೇಖವಿರುವ ಸಾಲು ಇದು ಮಹಿಳಾ ಶಾಸನಕಾರ್ತಿಯ ರಚನೆ ಎಂಬುದನ್ನು ತಿಳಿಸುತ್ತದೆ.[೩೪]

ವಿಜಯನಗರದ ಅಚ್ಚುತರಾಯನ ಕಾಲದಲ್ಲಿ ಓದುವ ತಿರುಮಲಾಂಬೆಯು ಸಂಸ್ಕೃತ ಕಾವ್ಯವನ್ನು ರಚಿಸಿರುವಳಲ್ಲದೆ ಕೆಲವು ಶಾಸನಗಳನ್ನೂ ರಚಿಸಿದ್ದಾಳೆ. ಇವಳ ಸಂಸ್ಕೃತ ಶಾಸನ ಶ್ರೀರಂಗಂನಲ್ಲಿಯೂ ದೊರೆತಿದೆ. ಅಲ್ಲಿನ ಶಾಸನಗಳಲ್ಲಿಯೂ ಇವಳು ಓದುವ ತಿರುಮಲಾಂಬೆ ಎಂದು ಉಲ್ಲೇಖಿತಳಾಗಿದ್ದಾಳೆ. ಇವಳ ಹೆಸರಿನ ಮುಂದಿರುವ 'ಓದುವ' ಎಂಬ ವಿಶೇಷಣ ಇವಳು ಕನ್ನಡತಿ ಎಂಬುದನ್ನು ಸಾರುತ್ತಿದೆ. ತಿರುಮಲಾಂಬೆಯು ಆಂಧ್ರ, ತಮಿಳುನಾಡುಗಳಲ್ಲಿನ ಶಾಸನಗಳನ್ನು ರಚಿಸಿದ ಕನ್ನಡತಿ ಎಂಬ ಹೆಮ್ಮೆಗೆ ಭಾಜನಳಾಗಿದ್ದಾಳೆ.

ಕನ್ನಡನಾಡಿನಲ್ಲಿ ಹಲವಾರು ಶಾಸನಗಳನ್ನು ಮಹಿಳೆಯರು ರಚಿಸಿದ್ದರು ಎನ್ನುವುದಕ್ಕೆ ಇವೆಲ್ಲ ನಿದರ್ಶನಗಳಾಗಿವೆ. ಶಾಸನಕಾರ್ತಿಯರ ಕುರಿತಾದ ಶಿಲ್ಪವೂ ಕೂಡ ಈ ಕುರಿತಾದ ವಿಚಾರವನ್ನು ತಿಳಿಸುತ್ತದೆ. ಜಲಸಂಗಿಯ ಮಹಾದೇವ ದೇವಾಲಯದ ಹೊರಗೋಡೆಯ ಮೇಲೆ ಕೆತ್ತಲ್ಪಟ್ಟ ಶಿಲ್ಪದಲ್ಲಿ, ಶಿಲಾಬಾಲಿಕೆಯೊಬ್ಬಳು ಲೇಖನ ಪಟವನ್ನು ತನ್ನ ಎಡಗೈಯಿಂದ ಎತ್ತರದಲ್ಲಿ ಹಿಡಿದು ಬಲಗೈಯಲ್ಲಿ ಲೇಖನಿಯನ್ನು ಹಿಡಿದು ಶಾಸನವನ್ನು ಬರೆಯುತ್ತಿದ್ದಾಳೆ. ಬರಹ ಸಂಸ್ಕೃತಭಾಷೆಯ ಕನ್ನಡ ಲಿಪಿಯಲ್ಲಿ ಈ ರೀತಿಯಾಗಿದೆ "ಸಪ್ತದ್ವೀಪೋದರಿ ಭೂತಂ ಭೂತಲಂ ಸ್ವೀಕರಿಷ್ಯತಿ, ಚಲುಕ್ಯೋ ವಿಕ್ರಮಾದಿತ್ಯ ಸಪ್ತಮೋ ವಿಷ್ಣುವರ್ಧನಃ" ಕಲ್ಯಾಣಿ ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಪರಾಕ್ರಮವನ್ನು ಹೊಗಳಿ ಶಾಸನವನ್ನು ಬರೆಯುತ್ತಿದ್ದಾಳೆ.

ಕವಿಚರಿತೆಯು ಆರಂಭಘಟ್ಟದ ಕೃತಿಯಾದರೂ ಆರ್.ನರಸಿಂಹಾಚಾರ್ಯರು ಸಾಕಷ್ಟುಮಟ್ಟಿಗೆ ಕವಿಗಳ ವಿಚಾರವನ್ನು ವಿಸ್ತೃತವಾಗಿ, ವಿಮರ್ಶಾತ್ಮಕವಾಗಿ ಕೊಟ್ಟಿದ್ದಾರೆ. ಇಲ್ಲಿ ಕರ್ನಾಟಕದ ಕೆಲವು ಸಂಸ್ಕೃತ ಕವಿಗಳನ್ನೂ, ಶಾಸನ ಕವಿಗಳನ್ನೂ ಉಲ್ಲೇಖಿಸಿ ಇಂತಹ ಪಾಂಡಿತ್ಯವಿರುವ ಕವಿ ಕನ್ನಡದಲ್ಲಿಯೂ ಬರೆದಿರಬಹುದೆಂಬ ಸಂದೇಹವನ್ನು ಹಲವರ ವಿಚಾರದಲ್ಲಿ ವ್ಯಕ್ತಪಡಿಸಿದ್ದಾರೆ. ಇವರ ಮುಂದಿನ ಚರಿತ್ರೆಕಾರರು ಇವರು ಉಲ್ಲೇಖಿಸಿರುವ ಕವಿಗಳ ಕುರಿತಾದ ಹೆಚ್ಚಿನ ಮಾಹಿತಿ, ಇವರು ಉಲ್ಲೇಖಿಸದಿರುವ ಕವಿಗಳ ವಿಚಾರಗಳನ್ನು ಚರ್ಚಿಸಿದ್ದಾರಾದರೂ ಕವಿಯತ್ರಿಯರ ವಿಚಾರದಲ್ಲಿ ಈ ಮಟ್ಟಿಗಿನ ದಾಖಲೀಕರಣ ನಡೆದಿಲ್ಲ. ಉದಾಹರಣೆಗೆ ಸುಮಾರು ೧೩ನೆಯ ಶತಮಾನದಲ್ಲಿದ್ದ ಕಲ್ಯಾಣದೇವಿಯು "ವಾಯುಸ್ತುತಿ" ಎಂಬ ಸಂಸ್ಕೃತ ಪದ್ಯವನ್ನು ರಚಿಸಿದ್ದಾಳೆ. ಇವರು ರಚಿಸಿರುವ ಕೆಲವು ಸ್ತೋತ್ರಗೀತೆಗಳಲ್ಲಿ 'ತಾರತಮ್ಯ ಸ್ತೋತ್ರ' ಮುಖ್ಯವಾದುದು. ಮಹಿಳೆಯರ ಇಂಥ ದಾಖಲೆಗಳು, ಮುಂದಿನ ಸಂಶೋಧನೆಗೆ ನಾಂದಿಯಾಗುವುದು. ಆದರೆ ಸಾಹಿತ್ಯ ಚರಿತ್ರೆಗಳಲ್ಲಿ ಇಂಥ ಉಲ್ಲೇಖಗಳನ್ನು ಕೈಬಿಟ್ಟಿರುವುದು ಒಂದು ದೊಡ್ಡ ಕೊರತೆಯಾಗಿದೆ.

ಉಷ ಅವರು ತಮ್ಮ 'ಮಹಿಳಾ ಸಾಹಿತ್ಯಚರಿತ್ರ ರಚನಾಕ್ರಮ' ಲೇಖನದಲ್ಲಿ ಮಹಿಳಾ ಸಾಹಿತ್ಯ ಚರಿತ್ರೆಯೊಳಗೆ ಕಾಲಾನುಕ್ರಮಣಿಕೆಯ ಪ್ರಶ್ನೆಯನ್ನು ಮೀರಿ ಮಹಿಳಾ ಜನಪದ ಸಾಹಿತ್ಯ ಸೇರಿಸಿಕೊಳ್ಳುವುದನ್ನು

ಗಮನಿಸಬೇಕೆಂದಿದ್ದಾರೆ. ಮುಂದುವರಿದು ೧೯೮೦ರ ದಶಕದ ಪೂರ್ವದಲ್ಲಿ ಕಂಡುಬರುವ ಮಹಿಳಾ ಸಾಹಿತ್ಯ ಚರಿತ್ರೆ ರಚನೆಯ ಪ್ರಯತ್ನಗಳು ಕನ್ನಡ ಸಾಹಿತ್ಯ ಚರಿತ್ರ ರಚನೆಯ ಮುಂದುವರಿಕೆಯಾಗಿ, ಅದರ ಅಧೀನದಲ್ಲಿಯೇ ಎರಡು ಮಾದರಿಗಳಲ್ಲಿ ಮುಂದುವರಿಯುತ್ತದೆ. ಅದೇ ವಿಭಜನಾ ಕ್ರಮವನ್ನು ಕಾಲಾನುಕ್ರಮಣಿಕೆಯನ್ನು ಅನುಸರಿಸಿ ವಿಧೇಯತೆಯನ್ನು ಮೆರೆದುದಾಗಿದೆ ಎಂದಿದ್ದಾರೆ.

ಮಹಿಳೆಯರಿಗೆ ನೀಡಿದ ಸ್ಥಾನಮಾನದಿಂದ ಯಾವುದೇ ದೇಶದ ಸಂಸ್ಕೃತಿಯ ಉತ್ಕೃಷ್ಟತೆ ತಿಳಿದುಬರುತ್ತದೆ. ಸಾಹಿತ್ಯವು ಆಯಾ ಕಾಲದ ಸಮಾಜ ಮಹಿಳೆಯನ್ನು ಯಾವರೀತಿ ಕಾಣುತ್ತಾ ಬಂದಿದೆ ಎಂಬುದನ್ನು ಅರಿಯುವ ಸಾಧನವಾಗಿದೆ.

ಸಾಹಿತ್ಯ ಚರಿತ್ರೆಯು ಒಂದು ರಾಜ್ಯ, ಜನಾಂಗದ ಸಾಂಸ್ಕೃತಿಕ ವೈಭವವನ್ನು ಕುರಿತು ಹೇಳುವ ಅತ್ಯುತ್ತಮ ದಾಖಲೆಯಾಗಿದೆ. ಈ ವಲಯದಲ್ಲಿ ಮಹಿಳೆಯರ ಸಾಧನೆಯನ್ನು ಗುರುತಿಸಿ ಹೇಳುವುದು ಇಲ್ಲಿನ ವೈಭವಕ್ಕೆ ಮತ್ತಷ್ಟು ಮೆರುಗನ್ನು ನೀಡುತ್ತದೆ. "ಲೇಖಕನ ಜೀವನಚರಿತ್ರೆ, ಸಾಹಿತ್ಯಗಳನ್ನು ಚರಿತ್ರೆಕಾರ ಗಮನಿಸಬೇಕಾದ ಮುಖ್ಯವಿಚಾರ, ಈ ಚರಿತ್ರೆ ಕೇವಲ ಘಟನೆಗಳ ಪಟ್ಟಿಯಲ್ಲ ಅದು ಒಬ್ಬ ಲೇಖಕನ ಅಥವಾ ಒಂದು ಅವಧಿಯ ಲೇಖಕರ ಜೀವನಾನುಭವಸಾರ"[೩೫]. ಈ ಅನುಭವ ಸಾರದಲ್ಲಿ ಮಹಿಳೆಯರ, ಲೇಖಕಿಯರ ಅನುಭವ ಸೇರದೆ ಸಮಾಜದ ಸಾಂಸ್ಥಿಕ ವ್ಯವಸ್ಥೆಯ ಪರಿಪೂರ್ಣ ಅರಿವು ನೀಡಲು ಸಾಧ್ಯವಾಗುವುದಿಲ್ಲ. ಸಾಹಿತ್ಯ ಚರಿತ್ರೆಯನ್ನು ಸಾಮಾನ್ಯರು ಹಾಗೂ ಸಾಹಿತ್ಯದ ವಿದ್ಯಾರ್ಥಿಗಳಿಬ್ಬರನ್ನೂ ಗಮನದಲ್ಲಿರಿಸಿಕೊಂಡು ರಚಿಸಲಾಗಿರುತ್ತದೆ. ಜೊತೆಗೆ ಪಠ್ಯಪುಸ್ತಕವಾಗಿರುವ ಈ ಕೆಲವು ಸಾಹಿತ್ಯಚರಿತ್ರೆಗಳಲ್ಲಿ ಲೇಖಕಿಯರ ಉಲ್ಲೇಖ ಸಮರ್ಪಕವಾಗಿಲ್ಲದಿರುವುದು ಕೇವಲ ಲೇಖಕಿಯರಿಗಷ್ಟೇ ಅಲ್ಲ ಒಂದು ನಾಡಿನ ಇತಿಹಾಸ, ಸಂಸ್ಕೃತಿಯನ್ನು ಬಿಂಬಿಸುವಲ್ಲಿ ಪ್ರಮುಖ ಕೊರತೆಯಾಗಿ ತೋರುವುದು.

ಈ ಅಧ್ಯಾಯದಲ್ಲಿ ಗಮನಿಸಿದಂತೆ ಹಲವಾರು ಕವಯತ್ರಿಯರ ಉಲ್ಲೇಖ ಸಮರ್ಪಕವಾಗಿ ಪ್ರಸಿದ್ಧ ಸಾಹಿತ್ಯ ಚರಿತ್ರೆಗಳಲ್ಲಿಯೇ ದಾಖಲಾಗಿಲ್ಲ. ಸಂಚಿಹೊನ್ನಮ್ಮ, ಚೆಲುವಾಂಬೆ ಮೊದಲಾದವರ ಕೃತಿರಚನೆಯ ಕುರಿತು ಸಂದೇಹ ವ್ಯಕ್ತಪಡಿಸುವುದು, ಇತರರು ಇವರ ಹೆಸರಿನಲ್ಲಿ ಬರೆದಿರಬಹುದೆಂಬ ಊಹೆಗಳನ್ನು ಮಾಡುವುದು, ಹೆಚ್ಚಿನ ಮಾಹಿತಿ ದೊರತಿಲ್ಲವೆಂಬ ಕಾರಣದಿಂದ ಕಂತಿಯ ಉಲ್ಲೇಖವನ್ನೇ ಕೈಬಿಡುವುದು, ಕವಿಚರಿತೆಯಲ್ಲಿ ದಾಖಲು ಪಡೆದು, ಮಾಹಿತಿ ಲಭ್ಯವಿದ್ದರೂ ಆನಂತರ ಬಂದ ಸಾಹಿತ್ಯ ಚರಿತ್ರೆಗಳಲ್ಲಿ ಕವಯತ್ರಿಯರು ಉಲ್ಲೇಖಗೊಳ್ಳದಿರುವುದನ್ನು 'ಮಹಿಳೆಯ ಸಾಹಿತ್ಯ ಚರಿತ್ರೆಯ ದಾಖಲೀಕರಣದಲ್ಲಿ ಲಿಂಗರಾಜಕಾರಣ ನಡೆದಿದೆ' ಎಂದೇ ಖಂಡಿಸಬೇಕಾಗುತ್ತದೆ.

**ಟಿಪ್ಪಣಿಗಳು ಹಾಗೂ ಆಕರಗ್ರಂಥಗಳು**

೧. ನರಸಿಂಹಾಚಾರ್.ಆರ್., ೨೦೧೧, ***ಕರ್ಣಾಟಕ ಕವಿಚರಿತೆ***, ಕ.ಸಾ.ಪ, ಬೆಂಗಳೂರು, ಪು.೧೧

೨. ವೆಂಕಟಾಚಲಶಾಸ್ತ್ರಿ.ಟಿ.ವಿ(ಸಂ) ೨೦೦೧, ಡಾ.***ಎ.ವೆಂಕಟಸುಬ್ಬಯ್ಯನವರ ಸಂಶೋಧನ ಲೇಖನಗಳು*** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ಪು.೭೫

೩. M.A.R. ೧೯೧೬, ಪು.೫೦

೪. ನರಸಿಂಹಾಚಾರ್.ಆರ್., ೨೦೧೧, ಮುನ್ನುಡಿ, ***ಕರ್ಣಾಟಕ ಕವಿಚರಿತೆ***, ಸಂಪುಟ–೩, ಕ.ಸಾ.ಪ, ಬೆಂ, ಪು.೬೪

೫. ನರಸಿಂಹಾಚಾರ್.ಡಿ.ಎಲ್., ೧೯೭೧, ***ಪೀಠಿಕೆಗಳು ಲೇಖನಗಳು***, ಡಿ.ವಿ.ಕೆ.ಮೂರ್ತಿ, ಮೈಸೂರು ಪು.೯೩

೬. ಶ್ರೀನಿವಾಸ ಹಾವನೂರ, ೧೯೭೪, ***ಹೊಸಗನ್ನಡದ ಅರುಣೋದಯ***, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ ಪು.೪೪೪–೪೭

೭. ಕಿಟೆಲ್, ೧೯೮೮, ***Nagavarma's Canarese Prosody'***, ದ್ವಿತೀಯ ಮುದ್ರಣ, ಏಷ್ಯನ್ ಎಜುಕೇಷನಲ್ ಸರ್ವೀಸಸ್, ನವದೆಹಲಿ, ಪು. XXIV-LXXXI

೮. ಶ್ರೀಕಂಠಯ್ಯ.ಬಿ.ಎಂ. ೧೯೭೪, ***ಕನ್ನಡ ಸಾಹಿತ್ಯದ ಚರಿತ್ರೆ***, 'ಕನ್ನಡ ಕೈಪಿಡಿ', ೨ ಪ್ರಸಾರಾಂಗ, ಮೈಸೂರು, ಪು.೩೯೬

೯. ರೈಸ್.ಇ.ಪಿ. ೧೯೨೧, ***A History of Kanarese Literature*** ಅಸೋಸಿಯೆಷನ್ ಪ್ರಸ್, ೫,ರಸ್ಸಲ್ ಸ್ಟ್ರೀಟ್, ಕಲ್ಕತ್ತ

೧೦. ನರಸಿಂಹಾಚಾರ್.ಆರ್., ೨೦೧೧, ***ಕರ್ಣಾಟಕ ಕವಿಚರಿತೆ***, ಕ.ಸಾ.ಪ, ಬೆಂಗಳೂರು, ಪು.೩೮

೧೧. ಪೂರ್ವೋಕ್ತ, ಪು.೭೬

೧೨. ಶ್ರೀಕಂಠಯ್ಯ.ಬಿ.ಎಂ. ೧೯೭೪, ***ಕನ್ನಡ ಸಾಹಿತ್ಯದ ಚರಿತ್ರೆ***, 'ಕನ್ನಡ ಕೈಪಿಡಿ', ೨ ಪ್ರಸಾರಾಂಗ, ಮೈಸೂರು

೧೩. ಶ್ರೀಕಂಠಯ್ಯ.ಬಿ.ಎಂ. ೧೯೭೪, ***ಕನ್ನಡ ಸಾಹಿತ್ಯದ ಚರಿತ್ರೆ***, ಕನ್ನಡ ಕೈಪಿಡಿ–೧ ಪ್ರಸಾರಾಂಗ, ಮೈಸೂರು, ಪು.೫೫

೧೩ಅ. ಮರಿಯಪ್ಪ ಭಟ್ಟ.ಎಂ, ೧೯೬೦, ***ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ***, ಭಾರತಿ ಪ್ರಕಾಶನ, ಮೈಸೂರು

೧೪. ರಂ.ಶ್ರೀ.ಮುಗಳಿ, ೧೯೬೮, ಕನ್ನಡ ಸಾಹಿತ್ಯದ ಇತಿಹಾಸ ಸಾಹಿತ್ಯ ಅಕಾಡೆಮಿ, ನವದೆಹಲಿ

೧೪ಅ. ಅನಂತರಂಗಾಚಾರ್.ಎನ್., ೧೯೭೦, ***ಸಾಹಿತ್ಯಭಾರತಿ,*** ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೧೫. ವೆಂಕಟರಾಮಪ್ಪ.ಕೆ, ೧೯೭೪, ***ಕನ್ನಡ ಸಾಹಿತ್ಯ ಚರಿತ್ರೆ,*** ವೆಸ್ಲಿಪ್ರೆಸ್, ಮೈಸೂರು

೧೬ ಮರುಳಯ್ಯ.ಸಾ.ಶಿ., ೨೦೦೧, '***ಕೆಳದಿ ಅರಸರ ಕಾಲದ ಕನ್ನಡ ಸಾಹಿತ್ಯ***', ಸಪ್ನ ಬುಕ್‌ಹೌಸ್, ಬೆಂಗಳೂರು

೧೭. ಶ್ರೀನಿವಾಸ ಹಾವನೂರ, ೧೯೭೪, ***ಹೊಸಗನ್ನಡದ ಅರುಣೋದಯ***, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು

೧೮. ಶಿವರುದ್ರಪ್ಪ.ಜಿ.ಎಸ್(ಸಂ)., ***ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ,*** ಬೆಂಗಳೂರು ವಿಶ್ವವಿದ್ಯಾನಿಲಯ, ಬೆಂಗಳೂರು

೧೯. ಟಿ.ವಿ.ವೆಂಕಟಾಚಲಶಾಸ್ತ್ರೀ (ಸಂ), ೧೯೭೪, ***ಕನ್ನಡ ಸಾಹಿತ್ಯ ಚರಿತ್ರೆ,*** ಕನ್ನಡ ಅಧ್ಯಯನ ಸಂಸ್ಥೆಯ ಮೈಸೂರು

೨೦. ಶ್ರೀಮತಿ.ಎಚ್.ಎಸ್(ಸಂ)., ೨೦೦೬, ***ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ,*** ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೧. ರಂ.ಶ್ರೀ.ಮುಗಳಿ, ೨೦೧೧, ***ಕನ್ನಡ ಸಾಹಿತ್ಯ ಚರಿತ್ರೆ,*** ಗೀತಾಬುಕ್ ಹೌಸ್, ಮೈಸೂರು,

೨೨. ತಿಪ್ಪೇರುದ್ರಸ್ವಾಮಿ.ಎಚ್, ೨೦೧೧, ***ಕರ್ಣಾಟಕ ಸಂಸ್ಕೃತಿ ಸಮೀಕ್ಷೆ***, ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು,

೨೩. ಅನಂತರಂಗಾಚಾರ್.ಎನ್., ೧೯೭೦, ***ಸಾಹಿತ್ಯಭಾರತೀ*** ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೨೪. ಕೀರ್ತಿನಾಥ ಕುರ್ತುಕೋಟಿ, ೧೯೮೩, ***ಯುಗಧರ್ಮ ಹಾಗೂ ಸಾಹಿತ್ಯ ದರ್ಶನ***, ಕನ್ನಡ ಮತ್ತು ಸಂಸ್ಕೃತಿ ವಿಶ್ವಕನ್ನಡ ಸಮ್ಮೇಳನ, ಬೆಂಗಳೂರು,

೨೫. ರಾಜಪ್ಪದಳವಾಯಿ, ೧೯೯೬, ***ಕನ್ನಡ ಸಾಹಿತ್ಯಕೋಶ***, ಶ್ರೀ ರಾಘವೇಂದ್ರ ಪ್ರಕಾಶನ, ಬೆಂಗಳೂರು

೨೬' ಇಮ್ಮಡಿ ಶಿವಬಸವಸ್ವಾಮಿಗಳು, ೧೯೯೯, ***ಸಂಸ್ಕೃತ ಸಾಹಿತ್ಯಕ್ಕೆ ಕರ್ನಾಟಕದ ಕೊಡುಗೆ***' ಸಂವಹನ, ಶಿವರಾಂ ಪೇಟೆ, ಮೈಸೂರು

೨೭. ಸರೋಜಿನಿ ಮಹಿಷಿ, ೧೯೬೫, ***ಕರ್ನಾಟಕದ ಕವಯತ್ರಿಯರು***, ಕ.ಸ.ಸಾಹಿತ್ಯ ಸಂಘ, ಧಾರವಾಡ

೨೮. ಸಬಿಹಾ ಭೂಮಿಗೌಡ, ೨೦೦೬, ***ನುಡಿಗವಳ*** (ಮಹಿಳೆಯರ ಸೃಜನೇತರ ಸಾಹಿತ್ಯದ ಅವಲೋಕನ), ಕ.ಸಾ.ಪ ಬೆಂಗಳೂರು

೨೯ ಶ್ರೀಮತಿ.ಎಚ್.ಎಸ್(ಸಂ)., ೨೦೦೬, ***ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ,*** ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೦. ಮರುಳಯ್ಯ.ಸಾ.ಶಿ (ಸಂ)., ಗಂಗಾದೇವಿ, ***ಕೆಳದಿ ರಾಜ್ಯಾಭ್ಯುದಯಂ,*** ಬೆಂಗಳೂರು

೩೧. ಕಮಲಾ ಹಂಪನಾ (ಸಂ)., ೨೦೦೪, ನಾಗಲಾದೇವಿ, ***ಷೋಡಶಭಾವನಾ ಕಾವ್ಯ,*** ಜೈನ ಅಧ್ಯಯನ ಸಂಸ್ಥೆ, ಶ್ರವಣಬೆಳಗೊಳ

೩೨. E.C XI ಚಿತ್ರದುರ್ಗ ಶಾ.ಸಂ.೨೪

೩೩. ರಾಜಶೇಖರಪ್ಪ.ಬಿ, ೨೦೦೧, ***ಇತಿಹಾಸ ಕಥನ***, ಸಿ.ವಿ.ಜಿ.ಪಬ್ಲಿಕೇಷನ್ಸ, ಬೆಂ. ಪು.೧೩೨

೩೪. KI. ಸಂ.iv ೩೪ ನೂಲಗೇರಿ (ತಾ) ಧಾರವಾಡ (ಕ್ರಿ.ಶ.೧೧೧೯)

೩೫. ರಂ.ಶ್ರೀ.ಮುಗಳಿ, ೧೯೭೪, ***ಕನ್ನಡ ಸಾಹಿತ್ಯ ಚರಿತ್ರೆ***, ಗೀತಾಬುಕ್ ಹೌಸ್, ಮೈಸೂರು, ಪು.೨೯

# ಅಧ್ಯಾಯ – ೩

# ಕರ್ನಾಟಕದ ರಾಣಿಯರು

## ಆಡಳಿತ ಮತ್ತು ಕೊಡುಗೆ

ಸುಮಾರು ಎರಡು ಸಾವಿರ ವರ್ಷಗಳ ಕರ್ನಾಟಕದ ರಾಜಕೀಯ ಇತಿಹಾಸದಲ್ಲಿ, ಅನೇಕ ರಾಜಮನೆತನಗಳು ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ್ದನ್ನು ಕಾಣುತ್ತೇವೆ. ಬಹುಪತ್ನಿವಲ್ಲಭನಾದ ದೊರೆಯ ಮಡದಿಯರಲ್ಲಿ ಪಟ್ಟದರಸಿಯ ಉಲ್ಲೇಖ ಮಾತ್ರ ರಾಜನ ಹೆಸರಿನೊಂದಿಗೆ ದಾಖಲಾಗುವುದು ಸಾಮಾನ್ಯ ಸಂಗತಿ. ಉಳಿದ ಅರಸಿಯರು ತಮ್ಮ ಸಾಧನೆಗಳ ಮೂಲಕ ಶಾಸನಗಳಲ್ಲಿ, ಸಾಹಿತ್ಯಗಳಲ್ಲಿ ಉಲ್ಲೇಖಿತರಾಗಿದ್ದಾರೆ. ಕೇವಲ ರಾಜನ ಮಡದಿಯಾಗಷ್ಟೇ ಅಲ್ಲದೆ ಕೆಲವೊಂದು ಗಮನಾರ್ಹ ಕಾರ್ಯಗಳಿಂದ ಇತಿಹಾಸದಲ್ಲಿ ತಮ್ಮ ಹೆಸರುಗಳನ್ನು ದಾಖಲಿಸಿದ ಅನೇಕ ಅರಸಿಯರ ವಿಚಾರಗಳು ಇತಿಹಾಸದ ಕೆಲವು ಆಕರಗಳಿಂದ ದೊರಕುತ್ತದೆ. ಬಹುಪಾಲು ಮಾಹಿತಿಗಳು ಅರಸಿಯರು ಕೈಕೊಂಡ ಧಾರ್ಮಿಕ ಕಾರ್ಯಗಳನ್ನು ತಿಳಿಸುವ ವಿಚಾರಗಳೊಂದಿಗೇ ಲಭಿಸಿವೆಯಾದರೂ, ಕೆಲವು ಅರಸಿಯರು ಸ್ವತಂತ್ರವಾಗಿ ರಾಜಕೀಯ, ಸಾಂಸ್ಕೃತಿಕ, ಶೈಕ್ಷಣಿಕ, ಸಾಮಾಜಿಕ ವಲಯಗಳಲ್ಲಿ ಉಲ್ಲೇಖಾರ್ಹ ಸಾಧನೆಗಳನ್ನು ನಡೆಸುವುದರ ಮೂಲಕ ಗುರುತಿಸಿಕೊಂಡಿದ್ದಾರೆ.

ಈ ಅಧ್ಯಾಯದಲ್ಲಿ ಕರ್ನಾಟಕದ ವಿಭಿನ್ನ ರಾಜಮನೆತನಗಳ ರಾಣಿಯರು, ರಾಜಮಾತೆ, ರಾಜಕುಮಾರಿಯರ ಸಂಕ್ಷಿಪ್ತ ಮಾಹಿತಿಯನ್ನು ಒಂದೆಡೆ ಗಮನಿಸಲಾಗಿದೆ. ಕೇವಲ ಅಧಿಕಾರ ಚುಕ್ಕಾಣಿ ಹಿಡಿದ ರಾಣಿಯರನ್ನು ಮಾತ್ರ ಗಮನಿಸದೆ, ಅಧಿಕಾರದಲ್ಲಿ ಪಾಲ್ಗೊಳ್ಳದೆಯೂ ದಾನ, ಧಾರ್ಮಿಕ ಕಾರ್ಯಗಳು, ಸಾಂಸ್ಕೃತಿಕ ಕೊಡುಗೆ ನೀಡಿದ, ಕೊಡುಗೆ ನೀಡಲು ಪ್ರೇರಣೆಯಾದ ರಾಜಮನೆತನದ ಮಹಿಳೆಯರನ್ನು ಇಲ್ಲಿ ಗುರುತಿಸಲಾಗಿದೆ. ಇಲ್ಲಿ ಅರಸಿಯರು ಅಧಿಕಾರ ನಡೆಸಿದ ಸಂದರ್ಭ ಹಾಗೂ ಅವರು ನೀಡಿದ ಕೊಡುಗೆಗಳಿಗೆ ಮಹತ್ವ ನೀಡಲಾಗಿದೆಯಾದ್ದರಿಂದ, ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ಪ್ರಸಿದ್ಧ ರಾಜಮನೆತನದ ಅರಸಿಯರ ಜೊತೆಗೆ ಸಣ್ಣಪುಟ್ಟ ಪ್ರದೇಶವನ್ನಾಳಿದ ನಾಯಕಿಯರ ವಿಚಾರಗಳನ್ನು ಗಮನಿಸಲಾಗಿದೆ. 'ತೊಟ್ಟಿಲನ್ನು ತೂಗುವ ಕೈ ಜಗವನ್ನಾಳುವುದು' ಎಂಬುದು ಕೇವಲ ಪಡೆನುಡಿಯಲ್ಲ ಎಂಬುದನ್ನು ಕರ್ನಾಟಕದ ವಿಭಿನ್ನ ಮನೆತನಗಳಲ್ಲಿ, ವಿಭಿನ್ನ ಕಾಲಘಟ್ಟಗಳಲ್ಲಿ, ವಿಶಿಷ್ಟ ಸನ್ನಿವೇಶಗಳಲ್ಲಿ ಸಾಧಿಸಿ ತೋರಿಸಿರುವ ಅರಸಿಯರ ಇತಿಹಾಸದಲ್ಲಿ ಕಾಣುತ್ತೇವೆ.

ಪ್ರಾಚೀನಕಾಲದಿಂದಲೂ ಕರ್ನಾಟಕದಲ್ಲಿ ಮಹಿಳೆಯರಿಗೆ ಉಚಿತವಾದ ಸ್ಥಾನಮಾನ, ಸ್ವಾತಂತ್ರ ನೀಡಲಾಗಿತ್ತೆಂಬುದನ್ನು ಇಲ್ಲಿ ಕಾಣುತ್ತೇವೆ. ರಾಜಮನೆತನಗಳ ಹಾಗೂ ಸಮಾಜದ ಮೇಲ್ವರ್ಗದ ಮಹಿಳೆಯರಿಗೆ ತಕ್ಕಮಟ್ಟಿಗಿನ ಸ್ವಾತಂತ್ರ, ವಿದ್ಯಾಭ್ಯಾಸದ ಅವಕಾಶಗಳಿತ್ತು. ಆದರೆ ಇವು ದೇಶ–ಕಾಲ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಕೆಲವೊಮ್ಮೆ ಬದಲಾಗಿರುವುದನ್ನು ಕಾಣುತ್ತೇವೆ. ಆದರೆ ತಮಗೆ ದೊರೆತ ವಿದ್ಯೆ, ಸ್ವಾತಂತ್ರ, ಅವಕಾಶಗಳನ್ನು ಅವರು ಬಳಸಿಕೊಂಡು ಸಾಧನೆಗೈಯುವಲ್ಲಿ ಎಷ್ಟರಮಟ್ಟಿಗೆ ಯಶಸ್ವಿಯಾಗಿದ್ದಾರೆ ಎನ್ನುವುದು ಚರಿತ್ರೆಯಲ್ಲಿ ಮುಖ್ಯವಾಗುತ್ತದೆ.

ಸಾವಿರಾರು ವರ್ಷದ ಇತಿಹಾಸದುದ್ದಕ್ಕೂ ಕಂಡುಬರುವ ಕರ್ನಾಟಕದ ಅರಸಿಯರ ಕುರಿತಾದ ಸಮಗ್ರ ವಿಚಾರವನ್ನೂ ಒಂದೆಡೆ ವಿಶ್ಲೇಷಿಸುವುದು ದುಃಸ್ಸಾಹಸವೆನಿಸುತ್ತದೆ. ಇವರಲ್ಲಿ ಅಪಾರ ಜನಮನ್ನಣೆಗಳಿಸಿ ದಾಖಲೆ ಸೃಷ್ಟಿಸಿದ ಕೆಲವು ಅರಸಿಯರ ಸಂಕ್ಷಿಪ್ತ ಮಾಹಿತಿಯ ಪಟ್ಟಿಕೆಯೊಂದನ್ನು ಸಿದ್ಧಪಡಿಸಿಕೊಂಡು ಇವರ ಸಾಧನೆಯ

ಕುರಿತಾದ ಸ್ಥೂಲನೋಟವನ್ನು ವಿಶ್ಲೇಷಿಸಲಾಗಿದೆ. ಅರಸಿಯರ ಆಡಳಿತ ಮತ್ತು ಕೊಡುಗೆಯನ್ನು ಗಮನಿಸುವ ನಿಟ್ಟಿನಲ್ಲಿ ಅಧಿಕಾರದ ಚುಕ್ಕಾಣಿ ಹಿಡಿದ ಕರ್ನಾಟಕದ ವಿವಿಧ ಕಾಲದ, ಮನೆತನದ ಅರಸಿಯರ ಅಗತ್ಯ ಮಾಹಿತಿಗಳನ್ನು ಒಳಗೊಂಡ ಪಟ್ಟಿಕೆಯು ಅರಸಿಯರ ಸಾಧನೆಯ ಕುರಿತಾದ ಸ್ಥೂಲನೋಟವನ್ನು ಕಟ್ಟಿಕೊಡಲು ಸಹಾಯಕವಾಗುತ್ತದೆ. ಆಡಳಿತದ ಚುಕ್ಕಾಣಿ ಹಿಡಿಯದ ಅರಸಿಯರೂ ಹಲವು ಉತ್ತಮ ಕೊಡುಗೆ ಕೊಟ್ಟಿರುವುದನ್ನು ಗಮನಿಸಬಹುದು. ಇಲ್ಲಿ ಕೇವಲ ಉದಾಹರಣೆಗೆಂದು ಆಳ್ವಿಕೆ ನಡೆಸದೆ ಕೊಡುಗೆ ನೀಡಿದ ಕೆಲವು ಅರಸಿಯರ ಮಾಹಿತಿ ಒದಗಿಸುವ ಪಟ್ಟಿಕೆಯನ್ನೂ ನೀಡಲಾಗದೆ.

ಆಳ್ವಿಕೆ ನಡೆಸಿದ ಅರಸಿಯರು ಪಟ್ಟಿಕೆಯಲ್ಲಿ ಅರಸಿಯರು, ಅರಸು ಮನೆತನ, ಅರಸಿಯರ ಕಾಲದೊಂದಿಗೆ ಆಳ್ವಿಕೆಗೆ ಸಂಬಂಧಿಸಿದಂತೆ ಅವರ ಕುರಿತಾದ ಇತರ ಮಾಹಿತಿಗಳ ಸಂಕ್ಷಿಪ್ತ ವಿಚಾರ ನೀಡಲಾಗಿದೆ. ಅರಸಿಯರು ಆಳ್ವಿಕೆ ನಡೆಸಿದ ಸಂದರ್ಭ ಕೆಲವೊಮ್ಮೆ ಭಿನ್ನವಾಗಿ ತೋರುತ್ತದೆ. ಕೆಲವರು ಪತಿಯೊಂದಿಗೆ ಆಡಳಿತದಲ್ಲಿ ಭಾಗವಹಿಸಿದರೆ ಮತ್ತೆ ಕೆಲವರು ಪತಿಯ ಆಳ್ವಿಕೆಯಲ್ಲಿ ತಮ್ಮದೇ ಆದ ಕೆಲವು ಪ್ರದೇಶಗಳನ್ನು ಸ್ವತಂತ್ರವಾಗಿ ಆಳ್ವಿಕೆ ನಡೆಸಿದ್ದಾರೆ. ಮತ್ತೆ ಕೆಲವು ಪ್ರಸಿದ್ಧ ಮನೆತನದ ಅರಸಿಯರಿಗೆ ಮದುವೆಯ ಬಳುವಳಿಯಾಗಿ ತಂದೆಯ ಕಡೆಯಿಂದ ಕೆಲವು ಪ್ರದೇಶಗಳು ದೊರೆತಿದ್ದು, ಅವುಗಳ ಆಳ್ವಿಕೆ ನಡೆಸಿದ್ದಾರೆ. ಇದಲ್ಲದೆ ಪತಿಯ ಮರಣಾನಂತರ, ಅಪ್ರಾಪ್ತ ವಯಸ್ಸಿನ ಮಕ್ಕಳ ಪರವಾಗಿ ಆಳ್ವಿಕೆ ನಡೆಸಿದ ಅರಸಿಯರು, ಅಳಿಯ ಸಂತಾನ ಸಂಪ್ರದಾಯವನ್ನು ಹೊಂದಿದ ಮನೆತನದಲ್ಲಿ ಹಿರಿಯ ಹೆಣ್ಣುಮಗಳಾಗಿ ಅಧಿಕಾರವನ್ನು ಪಡೆದ ಅರಸಿಯರೂ ಕಂಡುಬರುತ್ತಾರೆ. ಅರಸಿಯರು ಅಧಿಕಾರ ಚುಕ್ಕಾಣಿ ಹಿಡಿದ ಈ ವಿಭಿನ್ನ ಕಾರಣಗಳು ಗಮನಾರ್ಹವಾಗಿದ್ದು ಈ ಕೆಳಗಿನ ಪಟ್ಟಿಕೆಯಲ್ಲಿ ಇದನ್ನೂ ಗುರುತಿಸಲಾಗಿದೆ. ಇದರೊಂದಿಗೆ ಅರಸಿಯರು ಆಳ್ವಿಕೆ ನಡೆಸಿದ ಪ್ರದೇಶ, ಆಳ್ವಿಕೆಯ ಸಂದರ್ಭದಲ್ಲಿ ಹೊರಡಿಸಿದ ಶಾಸನ, ಅರಸಿಯರ ಕೊಡುಗೆ, ಭಾಗವಹಿಸಿದ ಯುದ್ಧ ಹಾಗು ಪೋಷಿತ ಕವಿಗಳನ್ನು ಈ ಪಟ್ಟಿಕೆಯಲ್ಲಿ ಪ್ರತ್ಯೇಕವಾಗಿ ಗಮನಿಸಲಾಗಿದೆ.

ಕರ್ನಾಟಕದ ಅರಸಿಯರ ಸಾಧನೆಯನ್ನು ಸ್ಥೂಲವಾಗಿ ಗುರುತಿಸಲು ಈ ಪಟ್ಟಿಕೆಯು ಸಹಾಯಕವಾಗುತ್ತದೆ. ಇಲ್ಲಿನ ಮಾಹಿತಿಗಳನ್ನು ಹಾಗೂ ಅರಸಿಯರ ಸಾಧನೆಗಳನ್ನು ಅವರು ಹೊರಡಿಸಿರುವ ಶಾಸನಗಳನ್ನು ಆಧರಿಸಿ ದಾಖಲಿಸಲಾಗಿದೆ. ಆದರೆ ಬಹುತೇಕ ಅರಸಿಯರು ತಮ್ಮ ಸಾಧನೆಗಳನ್ನು ದಾಖಲಿಸದೇ ಇರುವುದು ಕೂಡ ಗಮನಿಸಬಹುದು, ಇಂತಹ ಕೆಲವು ವಿಚಾರಗಳನ್ನು ಇತರರ ಶಾಸನಗಳಲ್ಲಿ ದೊರಕುವ ಮಾಹಿತಿಯನ್ನು ಆದರಿಸಿ ದಾಖಲಿಸಬೇಕಾಗುತ್ತದೆ. ಅರಸಿಯೋರ್ವಳು ಅಧಿಕಾರ ನಡೆಸುತ್ತಿದ್ದ ವಿಚಾರ ಅವಳ ಕೈಕೆಳಗಿನ ಅಧಿಕಾರಿ ಹಾಕಿಸಿರುವ ಶಾಸನದಲ್ಲಿ ಕಂಡುಬರುತ್ತದೆ. ಈತ ತನ್ನನ್ನು ಪರಿಚಯಿಸಿಕೊಳ್ಳುವಾಗ ತಾನು ಇಂತಹ ಅರಸಿಯ ಪಾದಪದ್ಮೋಪಜೀವಿ ಎಂತಲೋ, ಇಂತಹ ಅರಸಿಯ ಆಡಳಿತಾವಧಿಯಲ್ಲಿ ಈ ಶಾಸನ ಹೊರಡಿಸಲಾಗಿದೆ ಎಂದೋ ತಿಳಿಸುವ ಮಾಹಿತಿಯ ಆಧಾರದಿಂದ ಅರಸಿಯನ್ನು ಗುರುತಿಸುವ ಸಂದರ್ಭ ಎದುರಾಗುತ್ತದೆ.

ಈ ಪಟ್ಟಿಕೆಯಲ್ಲಿ ಆಡಳಿತ ನಡೆಸಿದ ಕರ್ನಾಟಕದ ಅರಸಿಯರ ಮಾಹಿತಿಯನ್ನು ಸಮಗ್ರವಾಗಿ ನೀಡಲು ಪ್ರಯತ್ನಿಸಲಾಗಿದೆಯಾದರೂ ನಿಖರವಾದ ಅಂಕಿ ಅಂಶವನ್ನು ನೀಡುವುದು ದುಃಸ್ಸಾಹಸವೆನಿಸುತ್ತದೆ. ಇದರ ಕಾರಣವನ್ನು ಈ ಹಿಂದಿನ ಅಧ್ಯಾಯದಲ್ಲಿ ಆಕರಗಳು ಹಾಗೂ ಸಮಸ್ಯೆ ಶೀರ್ಷಿಕೆಯ ಅಡಿಯಲ್ಲಿ ಚರ್ಚಿಸಲಾಗಿದೆ. ಸಾವಿರಾರು ವರ್ಷಗಳ ಇತಿಹಾಸವಿರುವ ವಿಶಾಲ ಕರ್ನಾಟಕದ ಎಲ್ಲ ಅರಸು ಹಾಗೂ ಸಾಮಂತ ಮನೆತನದ ಮಹಿಳೆಯರು ದಾನ–ದತ್ತಿಗಳನ್ನು ನೀಡಿರುವ ವಿವರಗಳನ್ನು ಒಂದೆಡೆ ಕಲೆಹಾಕುವುದು ಅಸಾಧ್ಯದ ಕೆಲಸವಾಗಿದೆ. ಆಳ್ವಿಕೆ ನಡೆಸದ ಅರಸಿಯರ ಕುರಿತಾದ ಎರಡನೆಯ ಪಟ್ಟಿಕೆಯಲ್ಲಿ ಪ್ರಸಿದ್ಧ ಅರಸಿಯರನ್ನು ಕೆಲವು ವಿವರಗಳನ್ನು ಮಾತ್ರ ನೀಡಲಾಗಿದೆ.

## ಆಳ್ವಿಕೆ ನಡೆಸಿದ ಅರಸಿಯರು

| ಅರಸಿಯರು | ರಾಜಮನೆತನ | ಕಾಲ | ಆಳ್ವಿಕೆಯ ಕಾರಣ | ಆಳಿದ ಸ್ಥಳ | ಹೊರಡಿಸಿದ ಶಾಸನ | ಸಾಧನೆ – ಧಾರ್ಮಿಕ, ಸಾಮಾಜಿಕ ಕೊಡುಗೆ, ಯುದ್ಧ | ಸಾಂಸ್ಕೃತಿಕ ಕೊಡುಗೆ |
|---|---|---|---|---|---|---|---|
| **ವಿಜ್ಜಿಕಾ / ವಿಜಯ ಭಟ್ಟಾರಿಕ** | ಬಾದಾಮಿ ಚಳುಕ್ಯ ಚಂದ್ರಾದಿತ್ಯನ ರಾಣಿ | ೭ನೆಯ ಶತಮಾನ | ಪತಿಯೊಂದಿಗೆ ಆಳ್ವಿಕೆ, ಪತಿಯ ಮರಣಾನಂತರ ಮಾಂಡಳಿಕಳಾಗಿ ಆಳ್ವಿಕೆ | ಸಾವಂತ ವಾಡಿಯಲ್ಲಿ ಸ್ವತಂತ್ರ ಆಳ್ವಿಕೆ | I.A vii ಪು.೧೬೩ ನೇರೂರು (ಕ್ರಿ.ಶ.೬೫೯) E.I IX ಪು.102 ಕ್ರೋಚೆ ತಾಮ್ರಪಟ | ಈ ಕ್ರೋಚೆ, ನೇರೂರು ತಾಮ್ರಪಟಗಳು ಭೂದಾನದ ವಿಚಾರದೊಂದಿಗೆ ಇವಳ ಆಳ್ವಿಕೆಯ ವಿಚರ ತಿಳಿಸುತ್ತದೆ. | ಸ್ವತಃ ಕವಯತ್ರಿ ಸಂಸ್ಕೃತದಲ್ಲಿ ನಾಟಕ, ಬಿಡಿ ಮುಕ್ತಕಗಳ ರಚನೆ. ಶಾಸನ ರಚನೆ |
| **ಲೋಕಾಂತಿಕಾ/ ಲೋಕ ಮಹಾದೇವಿ:** | ಬಾದಾಮಿ ಚಳುಕ್ಯ ವಿಕ್ರಮಾದಿತ್ಯನ ರಾಣಿ | ೮ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಅಧಿಕಾರ | ಕುರ್ತಕುಂಟ/ ಕುರ್ತಕೋಟಿ | I.A x ನಂ.೨೨ ಗದ್ವಾಲತಾಮ್ರಪಟ (ಕ್ರಿ.ಶ.೭೫೪) | ಪಟ್ಟದಕಲ್ಲಿನಲ್ಲಿ ಲೋಕೇಶ್ವರ (ವಿರೂಪಾಕ್ಷ) ದೇವಾಲಯ ನಿರ್ಮಾಣ | |
| **ಶೀಲ ಮಹಾದೇವಿ/ ಶೀಲಭಟ್ಟಾರಿಕಾ** ಬಿರುದುಗಳು: ಪರಮ ಭಟ್ಟಾರಿಕಾ, ಪರಮೇಶ್ವರಿ | ರಾಷ್ಟ್ರಕೂಟ ಧ್ರುವನ ಪಟ್ಟದ ರಾಣಿ. ವೆಂಗಿಚಾಳುಕ್ಯ ರಾಜಕುಮಾರಿ | ೮ ನೆಯ ಶತಮಾನ | ಪತಿಯೊಂದಿಗೆ ಆಳ್ವಿಕೆ | | E.I xxii, ಸಂ.೧೭ (ಕ್ರಿ.ಶ.೭೮೯) ಜಿತ್ವಾಯ್ ; E.I vi ಪು.163 ; S.I.I xx ಸಂ. ೧೦ | ಗ್ರಾಮವೊಂದನ್ನು ದಾನವಾಗಿ ಕೊಟ್ಟು, ಇದನ್ನು ನಡೆಸಿಕೊಡಲು ದುರ್ಗಾದಿತ್ಯನೆಂಬುವನಿಗೆ ಆದೇಶಿಸಿದ್ದಾಳೆ | ಸ್ವತಃ ಕವಯತ್ರಿ ಸಂಸ್ಕೃತದಲ್ಲಿ ಬಿಡಿಮುಕ್ತಕ ಗಳನ್ನು ರಚಿಸಿದ್ದಾಳೆ |
| ವಿನಿ.ತ್ತಿ ನಿಮ್ಮಡಿ /ವಿನಯವತಿ | ಗಂಗ ಶ್ರೀಪುರುಷನ ರಾಣಿ | ೮ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಆಡಳಿತ | ಮಣಿವೆಲ್ಲೂರು | E.C *Sup* xvi ತುಮಕೂರು | | |
| ಕಂಚಿಕಬ್ಬೆ | ಗಂಗ ದುಗ್ಗಮಾರ ಎಱೆಯಪ್ಪನ ಅರಸಿ | ೮ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಆಡಳಿತ | ಆಗಳಿ | E.C V. ಚೆನ್ನರಾಯಪಟ್ಟಣ | | |
| ಚಂದ್ರೋಬ್ಬಲಬ್ಬೆ | ಗಂಗ ಬೂತುಗನ ೧ ರಾಣಿ ರಾಷ್ಟ್ರಕೂಟ ರಾಜಕುಮಾರಿ | ೮ನೆಯ ಶತಮಾನ | ಮದುವೆಯ ಬಳುವಳಿಯಾಗಿ ದೊರೆತಿದ್ದ ಪ್ರದೇಶಗಳ ಆಳ್ವಿಕೆ | ರಾಯಚೂರು ದೋಅಬ್ (ಕೃಷ್ಣ–ತುಂಗಭದ್ರಾ ನದಿಗಳ ನಡುವಣ ಪ್ರದೇಶ) | | | |

| | | | | | | | |
|---|---|---|---|---|---|---|---|
| **ನೊಳಂಬ ಮಾದವೆ** | ನೊಳಂಬ ರಾಜಕುಮಾರಿ<br><br>ಸಿಂಹಪೋತನ ಮಗಳು | ೯ ನೆಯ ಶತಮಾನ | ತನ್ನ ಸಹೋದರ ಚಾರುಪೊನ್ನೇರನ ಆಳ್ವಿಕೆಯಲ್ಲಿನ ಆಡಳಿತ | ಮದರಿಕಲ್ಲು | ಚಿತ್ರದುರ್ಗದ ಚಳ್ಳಕೆರೆಯ ಶಾಸನದಲ್ಲಿ ಉಕ್ತಳಾಗಿದ್ದಾಳೆ | | |
| **ಗವಗಣಬ್ಬೆ** | ನೊಳಂಬ ಚಾರುಪೊನ್ನೇರನ ರಾಣಿ | ೯ ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಆಡಳಿತ | ಮದರಿಕಲ್ಲು | E.C xi ಚಿತ್ರದುರ್ಗ, ಚಳ್ಳಕೆರೆಯ | ಮದರಿಕಲ್ಲಿನಲ್ಲಿ ಗವಗಣೇಶ್ವರ ದೇವಾಲಯ ನಿರ್ಮಾಣ | |
| **ಗಾಮುಂಡಬ್ಬೆ** | ರಾಷ್ಟ್ರಕೂಟ ಮೂರನೆ ಗೋವಿಂದನ ರಾಣಿ | ೯ನೆಯ ಶತಮಾನದ ಆದಿಭಾಗ | ಪತಿಯೊಂದಿಗೆ ಆಳ್ವಿಕೆ | | I.A xi ಪು.೧೫೬<br>M.A.R. ೧೯೪೨ ಪು.೧೭೫ | ಯುದ್ಧಶಿಭಿರದಲ್ಲಿ ಪುತ್ರ ಶರ್ವ ಅಮೋಘವರ್ಷನನ್ನು ಪ್ರಸವಿಸಿದ ವೀರ ರಾಣಿ.<br>ಪತಿಯೊಡನೆ ದಂಡಯಾತ್ರೆ ಯಲ್ಲಿ ಭಾಗವಹಿಸಿ ರಾಮೇಶ್ವರ ತೀರ್ಥದಲ್ಲಿ ದಾನ ನೀಡಿದ್ದಾಳೆ | |
| **ಬಿಜಾ ಮಹಾದೇವಿ** | ನೊಳಂಬ ಮಹೇಂದ್ರನ ಅರಸಿ | ೯ನೆಯ ಶತಮಾನ | ಪತಿಯ ಆಳಿಕೆಯಲ್ಲಿ ಅಧಿಕಾರ | ಧರ್ಮ ಪೊಳಲ್ | E.C XII ಸಿರಾ ೨೪ ಕಾಮ ಗೊಂಡನಹಳ್ಳಿ | ಧಾರ್ಮಿಕ ಕಾರ್ಯಗಳಿಗೆ ದಾನ | |
| **ಪರಮ ಮಹಾದೇವಿ** | ನೊಳಂಬ ಮಹೇಂದ್ರನ ಅರಸಿ | ೯ನೆಯ ಶತಮಾನ | ಪತಿಯ ಆಳಿಕೆಯಲ್ಲಿ ಅಧಿಕಾರ | ಬರಗೂರು | ಈ ಮೇಲಿನ ಸಿರಾ ಶಾಸನದಲ್ಲಿ ಉಕ್ತಳಾಗಿದ್ದಾಳೆ | | |
| **ಮಾರಕ್ಕಬ್ಬೆ** | ನೊಳಂಬ ಮಹೇಂದ್ರನ ಅರಸಿ | ೯ನೆಯ ಶತಮಾನ | ಪತಿಯ ಆಳಿಕೆಯಲ್ಲಿ ಅಧಿಕಾರ | ಸಿಯವೂರು | ಸಿರಾ ಶಾಸನದಲ್ಲಿ ಉಕ್ತಳಾಗಿದ್ದಾಳೆ | ಧಾರ್ಮಿಕ ಕಾರ್ಯಗಳಿಗೆ ದಾನ | |
| **ಗಾಮಬ್ಬೆ** | ನೊಳಂಬ ಮಹೇಂದ್ರನ ಅರಸಿ | ೯ನೆಯ ಶತಮಾನ | ಪತಿಯ ಆಳಿಕೆಯಲ್ಲಿ ಅಧಿಕಾರ | ತ್ರೈಲೋಕ್ಯ ಪೊಳಲ್ | ಸಿರಾ ಶಾಸನದಲ್ಲಿ ಉಕ್ತಳಾಗಿದ್ದಾಳೆ | | |
| **ಭಾಗಿಯವ್ವೆ** | ರಾಷ್ಟ್ರಕೂಟ ನಾಲ್ವಡಿ ಗೋವಿಂದನ ರಾಣಿ, ವೆಂಗಿ ಚಾಲುಕ್ಯ ರಾಜಕುಮಾರಿ | ೧೦ನೆಯ ಶತಮಾನ | ಪತಿಯೊಂದಿಗೆ ಆಳ್ವಿಕೆ | | ಅಂದೂರ ತಾಮ್ರಪಟಗಳು | ರಾಜ್ಯದ ೧೨ಜನ ಸಾಮಂತರಿಂದ ಪಟ್ಟದ ಕಿರೀಟವನ್ನು ತೊಡಿಸಿಕೊಂಡು ಪಟ್ಟದ ರಾಣಿ ಎನಿಸಿದ ವಿಶೇಷ ಸಂದರ್ಭದಲ್ಲಿ ಹಿರಣ್ಯಗರ್ಭ, ಉಭಯಮುಖಿ, ಗೋಸಹಸ್ರ ಮತ್ತು ಕಲ್ಪವೃಕ್ಷ ದಾನಯಜ್ಞಗಳ ಆಚರಣೆ ಹಾಗೂ ದಾನ | |

| | | | | | | | |
|---|---|---|---|---|---|---|---|
| **ಸರಮಬ್ಬೆ** (ಪರಮಬ್ಬೆ) | ಗಂಗ ಬೂತುಗ ೧ ಅರಸಿ | ೧೦ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಆಡಳಿತ | ಕೂರ್ಗ್ಗಲ್ಲು | E.C ಮೈಸೂರು ೯೨ ಹುಣಸೂರು, | ಕೂರ್ಗ್ಗಲ್ಲಿನ ಗಾವುಂಡ ತುಱುಗೋಳಿನಲ್ಲಿ ಮಡಿದ ವಿಚಾರ ತಿಳಿಸುವ ವೀರಗಲ್ಲು ಅರಸಿಯನ್ನು ಉಲ್ಲೇಖಿಸುತ್ತದೆ | |
| **ಬುಜಬ್ಬರಸಿ** | ಗಂಗ ಎಱೆಯಪ್ಪನ ರಾಣಿ | ೧೦ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿನ ಆಡಳಿತ | ಪುಲಿಗೆರೆ ೩೦೦ ಕ್ಕೆ ಸೇರಿದ್ದ ಪತ್ತು ಪೆರ್ಬಾಳಿನ ಆಳ್ವಿಕೆ | E.I iv ನಂ ೫೦ ಹೆಬ್ಬಾಳು (ತಾ) ಶಿರಹಟ್ಟಿ ಕ್ರಿ.ಶ.೯೭೫ | ಶಿರಹಟ್ಟಿಯ ಹೆಬ್ಬಾಳುವಿನ ದೇವಾಲಯಕ್ಕೆ ದಾನ ಹಾಗೂ ಅಲ್ಲಿ ಸೇವೆ ನಡೆಸುವವರಿಗೆ ವೃತ್ತಿ ಸಹಿತ ದತ್ತಿನೀಡಿದ್ದಾಳೆ | ಸಂಗೀತಗಾರರು ನೃತ್ಯಗಾರ್ತಿಯರ ಪೋಷಣೆ |
| **ರೇವಕ ನಿರ್ಮ್ಮಡಿ** ಬಿರುದು ಚಾಗವೆಡಂಗಿ | ಗಂಗ ಇಮ್ಮಡಿ ಬೂತುಗನ ರಾಣಿ ರಾಷ್ಟ್ರಕೂಟ ರಾಜಕುಮಾರಿ | ೧೦ನೆಯ ಶತಮಾನ | ಮದುವೆಯ ಬಳುವಳಿಯಾಗಿ ದೊರೆತಿದ್ದ ಪ್ರದೇಶಗಳಲ್ಲಿ ಹಾಗೂ ಪತಿಯೊಡನೆ ಆಳ್ವಿಕೆ | ಬೆಳ್ವೊಲ೩೦೦, ಪುಲಿಗೆರೆ ೩೦೦, ಎಡೆವೊಳಲು ೭೦, ಕಿಸು ಕಾಡು ೭೦, ಎಡದೊರೆ ನಾಡು | ಉಲ್ಲೇಖ ಬಿ.ಕೆ.ಅಯ್.li7 ಕೆಸರಭಾವಿ (ತಾ) ಹುನಗುಂದ (ಕ್ರಿ.ಶ.೮೩೭) | ಎಡದೊರೆಯ ಆಳ್ವಿಕೆಯ ಕಾಲದಲ್ಲಿ ಅಧಿಕಾರಿ ಹಾಕಿಸಿದ ಕೆಸರಬಾವಿ ಶಾಸನ | |
| **ಪದುಮಬ್ಬರ** (ಪದ್ಮಬ್ಬರಸಿ) | ಗಂಗ ಇಮ್ಮಡಿ ಬೂತುಗನ ರಾಣಿ | ೧೦ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿನ ಆಡಳಿತ | ನರೇಗಲ್ಲ / ನೆರೆಯಂಗಲ್ ೧೨ | S.I.I xi-i ಶಾ.ಸಂ.೩೮ | ಜಿನಾಲಯ ಹಾಗೂ ಕೆರೆ ನಿರ್ಮಾಣ | |
| **ಅಂಕಬ್ಬರಸಿ** | ಗಂಗ ಇಮ್ಮಡಿ ಮಾರಸಿಂಹನ ರಾಣಿ, ವೆಂಗಿಚಾಲುಕ್ಯ ರಾಜಕುಮಾರಿ. | ೧೦ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿನ ಆಡಳಿತ | ಪುಲ್ಲುಂಗೂರು | E.I xxxiv ಭಾಗ ೨ ಹುಲಗೂರು ಶಾಸನ, ಶಾ.ಸಂ ೧೨ ಪುಟ ೫೯ ; E.I xiv ಹೆಮ್ಮಿಗೆ ಶಾಸನ, ಪುಟ ೨೩೪ | ಧಾರ್ಮಿಕ ಕಾರ್ಯಕ್ಕಾಗಿ 'ಪತ್ತೊಂದಿ' ತೆರಿಗೆಯ ವರಮಾನವನ್ನು ದಾನ ಮಾಡಿದಳು. (ಹೆಮ್ಮಿಗೆಯ ಶಾಸನ) | |
| **ದೀವಬ್ಬರಸಿ** | ನೊಳಂಬ ಪೊಳಲ್ಚೋರನ ರಾಣಿ, ಕದಂಬ ರಾಜಕುಮಾರಿ. | ೧೦ನೆಯ ಶತಮಾನ | ಮಗ ನೊಳಿಪಯ್ಯ ನೊಂದಿಗೆ ಆಳ್ವಕೆ | ಕೋಲಾರ | E.C. x ಮುಳುಬಾಗಿಲು, ಸಂ.೩೮ | ಆವನಿಯಲ್ಲಿ ನೊಳಂಬ ನಾರಾಯಣೇಶ್ವರ ದೇವಾಲಯ ವಿಷ್ಣುದೇವಾಲಯ, ಮಹೇಂದ್ರ ಕೊಳ, ಪೊಱಲ್ಚೋರ ಮಂಗಲ ಅಗ್ರಹಾರ,ದೀವಬ್ಬೆ ಸಮುದ್ರಗಳ ನಿರ್ಮಾಣ | |
| **ಜೋಗಬ್ಬೆ** | ಚಾಳುಕ್ಯರ ಸಾಮಂತ ಕುಂದಮರಸನ ರಾಣಿ | ೧೦ನೆಯ ಶತಮಾನ | ಕಲ್ಯಾಣಿ ಚಾಳುಕ್ಯರ ಸಾಮಂತರಾಗಿ ಆಳ್ವಿಕೆ | ಅಜ್ಜಡಿ | SSI Vol xviii No 44 | ಅಜ್ಜಡಿಯ ದೇವಾಲಯಕ್ಕೆ ಭೂದಾನ ನೀಡಿದ್ದಾಳೆ. ಈ ಶಾಸನವು ಇವಳಿಗೆ ಮುಂಜ ಎಂಬ ಲೆಂಕ ಇದ್ದ ವಿಚಾರವನ್ನು ಈ ಶಾಸನ ತಿಳಿಸುತ್ತದೆ. | |

| | | | | | | | |
|---|---|---|---|---|---|---|---|
| **ಪಂಪಾದೇವಿ** | ಚಾಳುಕ್ಯರ ಸಾಮಂತ ಕುಂದಮರಸನ ರಾಣಿ | ೧೧ನೆಯ ಶತಮಾನ | ಕಲ್ಯಾಣಿ ಚಾಳುಕ್ಯರ ಸಾಮಂತರಾಗಿ ಆಳ್ವಿಕೆ | ಜಿಡುಗೂರು | | | |
| **ಚಟ್ಟಲದೇವಿ** | ಗಂಗ ರಾಜಕುಮಾರಿ ಚೋಳ ಕಾಡುವೆಟ್ಟಿಯ ಅರಸಿ ಸಾಂತರ ಅರಸಿ ಕಂಚಲದೇವಿಯ ಸಹೋದರಿ | ೧೧ನೆಯ ಶತಮಾನ | ಸಾಂತರ ಅರಸಿ ಕಂಚಲದೇವಿಯ ಮಕ್ಕಳನ್ನು ಪೋಷಿಸಿ, ಅವರ ಪರವಾಗಿ ಕೆಲಕಾಲ ಆಳ್ವಿಕೆ ನಡೆಸಿದ್ದಾಳೆ | ಹೊಂಬುಜ | E.C viii, ನಗರ ೩೫ & ೩೬ | ಹೊಂಬುಜದಲ್ಲಿ ಪಂಚಕೂಟ ಬಸದಿಯನ್ನು ನಿರ್ಮಿಸಿದ್ದಾಳೆ. ಕೆರೆ ಕಟ್ಟಿಸಿ, ಕಾಲುವೆಗಳನ್ನೂ ನಿರ್ಮಿಸಿದ್ದಾಳೆ. ಸಾಂತರ ಮನೆತನಕ್ಕೆ ಸೇರದ ಅರಸಿಯೊಬ್ಬಳು ಅಲ್ಲಿ ಅಧಿಕಾರ ನಡೆಸಿದಳೆನ್ನುವುದು ವಿಶೇಷ | |
| **ಗೋವಿಂದಬ್ಬೆ** | ರಾಷ್ಟ್ರಕೂಟ ಇಂದ್ರನ ರಾಣಿ | ೧೦ನೆಯ ಶತಮಾನ | ಮಾವ ಹಾಗೂ ಪತಿಯ ಆಳ್ವಿಕೆಯಲ್ಲಿ ಆಡಳಿತ | ದೇವಗೇರಿ | S.I.I xviii ಸಂ ೧೪ ದೇವಗೇರಿ ಪುಟ.೮ | ಗೋವಿಂದಬ್ಬೆ ದೇವಗೇರಿಯ ಆಳ್ವಿಕೆಯ ಸಂದರ್ಭದಲ್ಲಿ ಈಕೆಯ ಅಧಿಕಾರಿ ಕಲಿಯಮ್ಮನಾಳ್ಗಾಮುಂಡ ಹಾಕಿಸಿದ ಶಾಸನ | |
| **ಜಕ್ಕಿಯಬ್ಬೆ** | ಸತ್ತರ ವಂಶ ನಾಗರಖಂಡದ ನಾಗಾರ್ಜುನನ ರಾಣಿ | ೧೦ನೆಯ ಶತಮಾನ | ಪತಿಯಮರಣಾ ನಂತರ ಆಳ್ವಿಕೆ | ನಾಗರಖಂಡ ೭೦ | E.C. vii ಶಿಕಾ ೨೧೯. ಬಂದಳಿಕೆ (ಕ್ರಿ.ಶ.೯೧೮) | ದಕ್ಷತೆಯಿಂದ ರಾಜ್ಯಭಾರ ನಡೆಸಿ, ನಾಗರಖಂಡದ ದೇವಾಲಯಕ್ಕೆ ಭೂದಾನ ಮಾಡಿದ್ದಾಳೆ. | |
| **ಕೇತಲದೇವಿ** 'ರೂಪ ವಿದ್ಯಾಧರಿ', 'ಸರಸ್ವತೀ ಕರ್ಣಾವತಂಸೆ' ಬಿರುದುಗಳು | ಕ.ಚಾಳುಕ್ಯ ಮೊದಲನೆಯ ಸೋಮೇಶ್ವರನ ರಾಣಿ | ೧೧ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಕೆಲ ಪ್ರದೇಶಗಳ ಆಡಳಿತ | ಪೊನ್ನವಾಡ ಅಗ್ರಹಾರ, ಕರಡಿಕಲ್ಲು ೩೦೦, ಬನ್ನಿಗೋಳ | IA xix ೧೯೦ ಹೊನ್ನವಾಡ(ತಾ) ಬಿಜಾಪುರ (ಕ್ರಿ.ಶ.೧೦೫೪) ; ಬನ್ನಿಗೋಳದ ಶಾಸನ | ಹೊನ್ನವಾಡದ ಸಿದ್ದೇಶ್ವರದೇವಸ್ಥಾನದ ಜೀರ್ಣೋದ್ಧಾರ ಮಾಡಿಸಿ, ಪೂಜೆಗೆ ದತ್ತಿ ಬಿಟ್ಟಿದ್ದಾಳೆ. ಪೊನ್ನವಾಡದ ಶಾಂತಿನಾಥ ತ್ರಿಭುವನತಿಲಕ ಚೈತ್ಯಾಲಯಕ್ಕೆ ದತ್ತಿ ಬಿಟ್ಟಿದ್ದಾಳೆ. | |
| **ಮೈಳದೇವಿ** ವಿಳಾಸ ವಿದ್ಯಾಧರಿ, ದಾನ ಚಿಂತಾಮಣಿ ಬಿರುದುಗಳು | ಕ.ಚಾಲುಕ್ಯ ಒಂದನೆಯ ಸೋಮೇಶ್ವರನ ಪಟ್ಟದರಾಣಿ | ೧೧ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಕೆಲ ಪ್ರದೇಶಗಳ ಆಡಳಿತ | ಬನವಾಸಿ ಪನ್ನಿರ್ಚ್ಛಾಸಿರ | S.I.I. IX Part I ಬಾಗೇವಾಡಿ ೮೩ (ಕ್ರಿ.ಶ.೧೦೫೮); S.I.I. IX i 121 ನಂದಿಕೋಟಕೂರು (ತಾ) ಕರ್ನೂಲ (ಕ್ರಿ.ಶ.೧೦೫೭) S.I.I. IX Part I ಕೊಟ್ಟಪಲ್ಲೈ (ತಾ) | ಹೊಂನವಾಡಿ ಸೋಮೇಶ್ವರದೇಗುಲಕ್ಕೆ ದತ್ತಿ, ಶ್ರೀಶೈಲದ ದೇವಸ್ಥಾನಕ್ಕೆ, ಅಲ್ಲಿನ ತಪೋಧನರಿಗೆ, **ವಿದ್ಯಾಭ್ಯಾಸಕ್ಕೆ** ದಾನ, ಮೆಹಬೂಬನಗರದ ಅಗಸ್ತೇಶ್ವರ ದೇವಾಲಯಕ್ಕೆ ದಾನ | |

| | | | | | | | |
|---|---|---|---|---|---|---|---|
| **ಚಾಮಲ ದೇವಿ** | ಕ.ಚಾಳುಕ್ಯ ಸೋಮೇಶ್ವರನ ರಾಣಿ | ೧೧ನೆಯ ಶತಮನ | ಪತಿಯ ಆಳ್ವಿಕೆಯಲ್ಲಿ ಕೆಲ ಪ್ರದೇಶಗಳ ಆಡಳಿತ | ಮೊಸಳಿಕಲ್ಲು– ೩೦೦ರ ಕೆಲವು ಭತ್ತಗ್ರಾಮಗಳಾದ ಕಪಗಲ್ಲು, ಮಲೆವೂರು, ಬಲ್ಲಟಗಿಗಳಲ್ಲಿ ಆಳ್ವಿಕೆ ನಡೆಸುತ್ತಿದ್ದಳು. | ಕವಿಶಾಸಂ vii ರಾಯಚೂರು ಮಾನ್ವಿ ೯೫ ಕ್ರಿ.ಶ.೧೦೫೮ | ಬಲ್ಲಟಗಿಯಲ್ಲಿ ಚಾಮೇಶ್ವರ ದೇವಾಲಯವನ್ನು ನಿರ್ಮಿಸಿ, ಹಲವಾರು ಸೇವೆಗಳಿಗೆ, ಜೀರ್ಣೋದ್ಧಾರಕ್ಕೆ ದತ್ತಿ ನೀಡಿದ್ದಾಳೆ. ಕಪಗಲ್ಲಿನ ಭೋಗೇಶ್ವರದೇವರಿಗೆ, ಮಲೆವೂರು ಹಾಗೂ ಬಲ್ಲಟಗಿಗಳಲ್ಲಿ ದತ್ತಿಗಳನ್ನು ಬಿಟ್ಟಿದ್ದಾಳೆ. | ಸಂಗೀತಗಾರರು ನೃತ್ಯಗಾರ್ತಿಯರ ಪೋಷಣೆ |
| **ತ್ರೈಲೋಕ್ಯ ಮಹಾದೇವಿ** | ಕ.ಚಾಳುಕ್ಯ ಸೋಮೇಶ್ವರನ ರಾಣಿ | ೧೧ನೆಯ ಶತಮನ | ಪತಿಯ ಆಳ್ವಿಕೆಯಲ್ಲಿ ಕೆಲ ಪ್ರದೇಶಗಳ ಆಡಳಿತ | ನಿಟ್ಟರವೆ ೭೦ರ ಬಳಿಯ ಅಗ್ರಹಾರ ಮುಕ್ಕುಂದೆಯ ಲ್ಲಿ ಆಳ್ವಿಕೆ | ಕವಿಶಾಸಂ vii ರಾಯಚೂರು ಸಿಂಧನೂರು ತಾ. ಮುಕ್ಕುಂದಿ ೨೦ ಕ್ರಿ.ಶ.೧೦೬೬ | ತುಂಗಭದ್ರಾ ತೀರದ ಕಪಾಳೇಶ್ವರ ದೇವರಿಗೆ ೧೨ ಮತ್ತರು ಭೂಮಿ, ತೋಟ, ಗಾಣ ದಾನನೀಡಿದ್ದಾಳೆ. | |
| **ಲಚ್ಚಲ ಮಹಾದೇವಿ** | ಕ.ಚಾಳುಕ್ಯ ಒಂದನೆಯ ಸೋಮೇಶ್ವರನ ರಾಣಿ | ೧೧ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಕೆಲ ಪ್ರದೇಶಗಳ ಆಡಳಿತ | ಹಾನಗಲ್ಲಿನ ಬೆಳವಟ್ಟಿ | | | |
| **ಹೊಯ್ಸಳ ದೇವಿ** ಕ್ರಿ.ಶ.೧೦೫೫ | ಕ.ಚಾಳುಕ್ಯ ಸೋಮೇಶ್ವರನ ರಾಣಿ ಹೊಯ್ಸಳ ವಿನಯಾದಿತ್ಯನ ಮಗಳು | ೧೧ನೆಯ ಶತಮಾನ | ಪತಿಯೊಂದಿಗೆ ಆಳ್ವಿಕೆ | ಕಲ್ಯಾಣ | ಹೊನ್ನಾಳಿ ಶಾಸನ | ಹೊನ್ನಾಳಿಯ ಮಲ್ಲಿಕೇಶ್ವರ ತೀರ್ಥದ ದೇವರಿಗೆ ದತ್ತಿ ಬಿಟ್ಟಿದ್ದಾಳೆ | |
| **ಸುಗ್ಗಲದೇವಿ** | ಮಹಾ ಮಂಡಲೇಶ್ವರ ಸಿಂಹಣದೇವರಸನ ಮಡದಿ ಕ.ಚಾಳುಕ್ಯ ರಾಜಕುಮಾರಿ | ೧೧ನೆಯ ಶತಮಾನ | ತಂದೆ ಆಹವಮಲ್ಲ ದೇವ ಹಾಗೂ ಅಣ್ಣ ಭುವನೈಕ ಮಲ್ಲರ ಅಧೀನದಲ್ಲಿ ಆಳ್ವಿಕೆ ನಡೆಸುತ್ತಿದ್ದಳು | ಕಿಸುಕಾಡು ೭೦ರ ನಿಡಗುಂದಿ | ಅಯ್.ಎನ್.ಕೆ. v ನಿಡಗುಂದಿ (ಜಿ) ವಿಜಾಪುರ (ಕ್ರಿ.ಶ.೧೦೭೧) | ನಿಡುಗುಂದಿಯ ದೇವಾಲಯಕ್ಕೆ ದಾನ | |

| | | | | | | | |
|---|---|---|---|---|---|---|---|
| **ಅಕ್ಕಾದೇವಿ** | ಹಾನುಗಲ್ಲು ಕದಂಬ ಮಯೂರವರ್ಮನ ಅರಸಿ ಚಾಲುಕ್ಯ ರಾಜಕುಮಾರಿ | ೧೧ನೆಯ ಶತಮಾನ | ಪತಿಯೊಡನೆ ಹಾಗೂ ಪತಿಯ ಮರಣಾನಂತರ | ಕಿಸುಕಾಡು ೭೦, ತೊರೆಗೆರೆ ೬, ಮಾಸವಾಡಿ೧೪೦ ಪಾನುಗಲ್ಲು೫೦೦, ಬನವಾಸಿ ೧೨೦೦ | IA xvii ಪು.೨೭೦-೭೫ ಬೇಲೂರು (ತಾ) ಬದಾಮಿ ಕ್ರಿ.ಶ.೧೦೨೨<br>E.I. xvii no.10 ಅರಸಿಬೀದಿ ಹುನಗುಂದ (ಕ್ರಿ.ಶ.೧೦೪೭)<br>E.I. xv ನಂ.೬ ಸೂಡಿ (ತಾ)ರೋಣ(ಕ್ರಿ.ಶ.೧೦೫೦)<br>BKI I-i ೮೬ ಕೊರಲಹಳ್ಳಿ (ತಾ) ಮುಂಡರಗಿ (ಕ್ರಿ.ಶ.೧೦೫೦)<br>BKI I-i ೮೮ ಅರಸಿ ಬೀದಿ ಹುನಗುಂದ, ಕ್ರಿ.ಶ.೧೦೫೩<br>E.I. xvi No.11 ಹೊಟ್ಟೂರು (ತಾ) ಶಿಗ್ಗಾಂವ | ಅಗ್ರಹಾರ ನಿರ್ಮಾಣ, ಸೂಡಿಯಲ್ಲಿ ಅಕ್ಕೇಶ್ವರ ದೇವಾಲಯ ನಿರ್ಮಾಣ, ವಿಕ್ರಮಪುರದ ಗುಣದ ಬೆಡಂಗಿ ಜಿನಾಲಯ ನಿರ್ಮಾಣ, ತ್ರೈಪುರುಷ ಶಾಲೆಯ ನಿರ್ಮಾಣ ಹಾಗೂ ಉಚಿತ ವಿದ್ಯಾಭ್ಯಾಸದ ವ್ಯವಸ್ಥೆ, ಬಂಕಾಪುರದ ಬಳಿಯ ಮಠವೊಂದರಲ್ಲಿ ನಡೆಯುವ ವಿದ್ಯಾಭ್ಯಾಸಕ್ಕಾಗಿ ಕಾಳಾಮುಖ ಸನ್ಯಾಸಿನಿಗೆ ದಾನ | |
| **ಶಾಂತಲಾ ದೇವಿ** ನಾಟ್ಯರಾಣಿ ಅಭಿನವ ಶಾರದೆ | ಹೊಯ್ಸಳ ವಿಷ್ಣುವರ್ಧನನ ಪಟ್ಟದರಸಿ | ೧೧-೧೨ ನೆಯ ಶತಮಾನ | ಪತಿಯೊಂದಿಗೆ ಆಳ್ವಿಕೆ ನಡೆಸುತ್ತಿದ್ದಳು | | E.C. v ಸಂ. ೧೬ ಬೇಲೂರು ಕ್ರಿ.ಶ.೧೧೨೦ ;<br>E.C v ಸಂ ೧೧೬, ಗ್ರಾಮ ಕ್ರಿ.ಶ.೧೧೨೨<br>E.C ii ಶ್ರವಣಬೆಳಗೊಳ ೧೬೨ ಕ್ರಿ.ಶ.೧೧೨೩ | ಶ್ರವಣಬೆಳಗೊಳದಲ್ಲಿ ಸವತಿ ಗಂಧವಾರಣೆ ಬಸದಿ, ಕೆರೆ ಕಟ್ಟಿಸಿ, ದತ್ತಿಗಳನ್ನು ಬಿಟ್ಟಿದ್ದಾಳೆ. ಶಾಂತಿ ಗ್ರಾಮ ಹಾಗೂ ಅಲ್ಲಿ ದೇವಾಲಯಗಳ ನಿರ್ಮಾಣ, ಬೇಲೂರಿನಲ್ಲಿ ದೇವಾಲಯದ ನಿರ್ಮಾಣ | ಸ್ವತಃ ನೃತ್ಯಕಲಾವಿದೆ ; ವಾಸ್ತುಶಿಲ್ಪಕ್ಕೆ ಉತ್ತಮ ಕೊಡುಗೆ ನೀಡಿದವಳು |
| **ಬಮ್ಮಲದೇವಿ** | ಹೊಯ್ಸಳ ವಿಷ್ಣುವರ್ಧನನ ರಾಣಿ. ನೊಳಂಬ ಪಲ್ಲವ ರಾಜಕುಮಾರಿ . | ೧೧-೧೨ ನೆಯ ಶತಮಾನ | ಪತಿಯೊಂದಿಗೆ ಆಡಳಿತ ಹಾಗೂ ಪತಿಯ ಆಳ್ವಿಕೆಯಡಿಯಲ್ಲಿ ಕೆಲ ಭಾಗಗಳ ಸ್ವತಂತ್ರ ಆಳ್ವಿಕೆ | ಆಸುಂಡಿ-೫೦೦, ನೀರಗುಂದ-೨೦೦, ಹಾಗು ಪತಿಯೊಂದಿಗೆ ಪಾನುಂಗಲ್ (ಹಾನುಗಲ್ಲು) ನಲ್ಲಿ ಆಳ್ವಿಕೆ | E.C. v ಸಂ ೨೩೫ ಅರಸಿಕೆರೆ.<br>E.C xii ಸಂ ೧೩ ಗುಬ್ಬಿ ಬೇಚಿನಗೆರೆ ಕ್ರಿ.ಶ.೧೧೪೦ | ನೀರಗುಂದದಲ್ಲಿ ಅಗ್ರಹಾರ ಸ್ಥಾಪನೆ, ನಾಗಮಂಗಲದ ಶಂಕರನಾರಾಯಣ ದೇವಾಲಯಕ್ಕೆ ದಾನ, ಸಾಂತಗೆರೆಯಲ್ಲಿ ಅಶ್ವಶಾಲೆ ಸ್ಥಾಪನೆ ಹಾಗೂ ನಿರ್ವಹಣೆ.<br>ಗೋವೆ ಕದಂಬದೊರೆ ಜಯಕೇಶಿಯ ವಿರುದ್ಧದ ಯುದ್ಧದಲ್ಲಿ ಭಾಗಿಯಾಗಿ ಪತಿಯ ಗೆಲುವಿಗೆ ಕಾರಣಳಾದವಳು | |
| **ದೇವಕಿದೇವಿ** | ಹೊಯ್ಸಳ ವಿಷ್ಣುವರ್ಧನನ ಅರಸಿ | ೧೧-೧೨ ನೆಯ ಶತಮಾನ | ಪತಿಯೊಂದಿಗೆ ಆಳ್ವಿಕೆ | ನಿಡುಗಟ್ಟದ ಶಾಸನ ಈಕೆ ಬೇಲೂರಿನಿಂದ ಆಳ್ವಿಕೆ ಮಾಡುತ್ತಿದ್ದ ವಿಚಾರವನ್ನು ತಿಳಿಸುತ್ತದೆ. | ಕ್ರಿ.ಶ.೧೧೩೯ರ ನಿಡುಗಟ್ಟದ ಶಾಸನ | ಧಾರ್ಮಿಕ ಕಾರ್ಯಗಳಲ್ಲಿ ಗುರುತಿಸಿಕೊಂಡಿದ್ದಾಳೆ. | |

| | | | | | | | |
|---|---|---|---|---|---|---|---|
| **ಲಕ್ಷ್ಮೀದೇವಿ** | ಕ.ಚಾಳುಕ್ಯ ಆರನೆಯ ವಿಕ್ರಮಾದಿತ್ಯನ ರಾಣಿ | ೧೧–೧೨ ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಕೆಲ ಪ್ರದೇಶಗಳ ಆಡಳಿತ | ದ್ರೋಣಪುರ, & ಡಂಬಳದ ೧೮ ಅಗ್ರಹಾರಗಳು, ಜೊತೆಗೆ ನಿಟ್ಟಸಿಂಗಿ, ಧರ್ಮಪುರ ಗಳಲ್ಲಿ ಆಡಳಿತ | SII XI(II)126, ಡೋಣಿ,ಮುಂಡರಗಿ (೧೦೮೦); EI XV no.6 ಸೂಡಿ ರೋಣ(ತಾ) ;SII XX 94 ಖೇಡಗಿ, ಇಂಡಿ(ತಾ) IA 10 CXVI ಡಂಬಳ, ಗದಗ | ಸೂಡಿಯ ಆಚಲೇಶ್ವರ ದೇಗುಲಕ್ಕೆ ಕಿಸುಕಾಡು ಬಳಿಯ ಪೊಂಗರಿ ಎಂಬ ಗ್ರಾಮವನ್ನು ದತ್ತಿಯಾಗಿ ನೀಡಿದಳು. ಅಗ್ರಹಾರ ನಿರ್ಮಾಣ, ವಿದ್ಯಾಭ್ಯಾಸಕ್ಕೆ ದಾನ ಮೊದಲಾದ ಕಾರ್ಯಗಳನ್ನು ನಡೆಸಿ ಹಲವಾರು ಶಾಸನಗಳಲ್ಲಿ ಉಕ್ತಳಾಗಿದ್ದಾಳೆ. | |
| **ಚಂದಲ ದೇವಿ** (೧೦೮೨)<br><br>ನೃತ್ಯ ವಿದ್ಯಾಧರಿ, ಕಲಿಕಾಲ ಸರಸ್ವತಿ | ಕ.ಚಾಳುಕ್ಯ ವಿಕ್ರಮಾದಿತ್ಯನ ಪಟ್ಟಮಹಿಷಿ ಶಿಲಾಹಾರ ಮಾರಸಿಂಹನ ಮಗಳು. | ೧೧–೧೨ ನೆಯ ಶತಮಾನ | ಪತಿಯೊಡನೆ ರಾಜ್ಯಕಲಾಪಗಳಲ್ಲಿ ಪಾಲ್ಗೊಳ್ಳುತ್ತಿದ್ದಳಲ್ಲದೆ, ಸ್ವತಂತ್ರವಾಗಿಯೂ ಆಳ್ವಿಕೆ ನಡೆಸುತ್ತಿದ್ದಳು. | ಅಳಂದೆ ಸಾಸಿರ ಪ್ರಾಂತ್ಯದಲ್ಲಿ ಆಡಳಿತ | ಕಲ್ಬುರ್ಗಿ ಜಿಲ್ಲೆಯ ಶಾಸನಗಳು, ೩೮, ಹುಣಸಿಹಡಗಲಿ, ಕ್ರಿ.ಶ.೧೮೯, ಪು.೨೯; S.I.I xi-ii ೧೪೨ ಕಟಗೇರಿ (ತಾ) ಬಾದಾಮಿ (ಕ್ರಿ.ಶ.೧೮೯೬) ಕವಿಶಾಸಂ ೭ ರಾಯಚೂರು ಮಾನ್ವಿ ೯೬ (೧೧೧೫) | ಅಲಂದೆಪುರದ ಸ್ವಯಂಭೂ ಸೋಮೇಶ್ವರ ದೇವರಿಗೆ ದತ್ತಿ ಬಿಡಿಸಿದ್ದಾಳೆ. ರುದ್ರವಾಡಿಯ ಕೇಶವ ದೇಗುಲಕ್ಕೆ ದತ್ತಿ ನೀಡಿದ್ದಾಳೆ, ಕಡಕೆರೆಯಲ್ಲಿ ವಿದ್ಯಾಭ್ಯಾಸಕ್ಕೆ ದಾನ ನೀಡಿದ್ದಾಳೆ. | |
| **ಜಾಕಲದೇವಿ** | ಕ.ಚಾಲುಕ್ಯ ೬ನೇ ವಿಕ್ರಮಾದಿತ್ಯನ ರಾಣಿ | ೧೧–೧೨ ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ಇಂಗುಣಿಗೆ | ಕಲ್ಬುರ್ಗಿ ಜಿಲ್ಲೆಯ ಶಾಸನಗಳು, ೨, ಇಂಗಳಗಿ; Jainism in South India & Some Jain Epigraphs Pg.229 | ಇಂಗಳಿಗೆಯಲ್ಲಿ ಬಸದಿಯನ್ನು ನಿರ್ಮಿಸಿ, ತಳವೃತ್ತಿ ಸಹಿತ ಇಂದ್ರಸೇನ ಭಟ್ಟಾರಕರಿಗೆ ದಾನ ನೀಡಿದ್ದಾಳೆ. | |
| **ಮಲಯಮತಿ** | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ | ೧೧–೧೨ ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ಸಿಂದವಾಡಿನಾಡಿನ ಕೆಲವು ಭಾಗಗಳು | ಎ.ಪಿ.ಎ.ಎಸ್.೧೭ ದಿಗ್ಗಾವ (ಜಿ) ಗುಲಬರ್ಗಾ (ಕ್ರಿ.ಶ.೧೧೦೭) | ಚಿಲ್ಲಾರಗ್ರಾಮದ ಬ್ರಹ್ಮೇಶ್ವರದೇವರಿಗೆ ದಾನ, ಸಿಂದವಾಡಿನಾಡಿನ ಅಗ್ರಹಾರ ತುಂಬುಳದ ಮಹಾಜನರಿಗೆ ದಾನ ನೀಡಿದ್ದಾಳೆ | |
| **ಮಲ್ಲಣದೇವಿ** | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ | ೧೧–೧೨ ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ಕಲ್ಯಾಣದ ಕೆಲವು ಭತ್ತಗ್ರಾಮಗಳ ಆಳ್ವಿಕೆ | ಅಯ್.ಎನ್.ಡಿ. ಪು.೩೨/೨೩ (ಕ್ರಿ.ಶ.೧೧೨೩) | ಈಕೆಯ ಭಂಡಾರ ನಿಯೋಗ ಹಾಗೂ ದಂಡನಾಯಕನಾಗಿದ್ದ ನಾಗವರ್ಮನ ಮೂಲಕ ದಾನಗಳನ್ನು ಕೊಡಿಸಿದ್ದಾಳೆ | |

| | | | | | | | |
|---|---|---|---|---|---|---|---|
| **ಸುಗ್ಗಲದೇವಿ** | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ | ೧೨ ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | | ಕ್ರಿ.ಶ.೧೧೨೨ರ ಬಿಮ್ರಾಶಾಸನ | ಅಧಿಕಾರಿ ನಾಗರಾಜನ ಕೋರಿಕೆಯ ಮೇರೆಗೆ ದಾನ ನೀಡಿದ್ದಾಳೆ. | |
| **ಅಬ್ಬಲದೇವಿ** | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ | ೧೨ ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ಕರಡಿಕಲ್ಲು-೩೦೦ರ ಲಿಂಗಸುಗೂರು (ಲಿಂಗದೂರು) | ಕವಿಶಾಸಂ ೭ ರಾಜಚೂರು, ಲಿಂಗಸಗೂರು ತಾ. ೧; | ತನ್ನ ಅಧಿಕಾರಿಗಳೊಂದಿಗೆ ಊರಿನ ಕಲಿದೇವದೇವರಿಗೆ ಹಲವಾರು ಸೇವೆಗಳಿಗೆ ದಾನನೀಡಿ ತೆರಿಗೆಗಳನ್ನು ಮಾನ್ಯ ಮಾಡಿದ್ದಾಳೆ | |
| **ಕೇತಲದೇವಿ** ಅಭಿನವ ಸರಸ್ವತಿ, ದ್ವಿತೀಯ ಲಕ್ಷ್ಮೀ, ಸಂಗೀತ ವಿದ್ಯಾಧರಿ | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ | ೧೨ ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ಸಿರಿಗುಪ್ಪೆ, ಕೊಳನೂರು ಮೊದಲಾದ ಊರುಗಳಲ್ಲಿ ಆಳ್ವಿಕೆ | S.I.I ix-i, 159 ಸಿರುಗುಪ್ಪ ಬಳ್ಳಾರಿ (ಕ್ರಿ.ಶ.೧೦೯೨) S.I.I xx 51 ಬಿಜಾಪುರ, ಸಿಂದಗಿ ಕುಳೇಕುಮಟ್ಟಿ (೧೦೭೭) | ಬಳ್ಳಾರಿಯ ಸಿರುಗುಪ್ಪದ ಕೇತಲೇಶ್ವರ ದೇವರಿಗೆ, ಹಾಗೂ ಅಲ್ಲಿನ ತಪೋಧನರಿಗೆ ಆರುಮತ್ತರು ಭೂಮಿ, ನಿವೇಶನ, ಎರಡು ಗಾಣ, ತೋಟ ದಾನ, ಚಂಡೇಶ್ವರ ದೇವರಿಗೆ ಭೂಮಿ & ಗಾಣ ತೆರಿಗೆಸಹಿತ ದಾನ ನೀಡಿದ್ದಾಳೆ | |
| **ಸಾವಳದೇವಿ** | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ | ೧೨ ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ನೆರೆಯಮಂಗಲ / ನೆರೆಯಂಗಲ | AR(S)IE ೧೯೪೬-೪೭ (೫೨) ೨೭೭ ; ಧಾರವಾಡ ಜಿಲ್ಲೆ ಶಾಸನ ಹಾನಗಲ್ಲು ೧೪೧ ನರೇಗಲ್ಲು (ಕ್ರಿ.ಶ.೧೧೦೦) | ತನ್ನಾಳ್ವಿಕೆಯ ಊರಿನಲ್ಲಿ ಅಧಿಕಾರಿಯೊಬ್ಬ ನಿರ್ಮಿಸಿದ ಶಿವದೇವಾಲಯಕ್ಕೆ ದಾನ ನೀಡಿದ್ದಾಳೆ | |
| **ಮಲಯಮತಿ** | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ | ೧೨ ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ಪಿರಿಯ ಕೆರೆಯೂರು, ಎಲೆಯ ಪೂರ್ವದವಳ್ಳಿ, ಆಲಂಪುರ, ದಿಗ್ಗವಿಗೆ, ಸಿನ್ದವಾಡಿಗಳ ಅಗ್ರಹಾರ, ತುಂಬುಳ | ಧಾರವಾಡದ ಚಿಕ್ಕೇರೂರಿನ ಶಾಸನ, ಕ್ರಿ.ಶ.೧೧೧೦ರ ಕಾಲದ ಎಲೆಯ ಪೂರ್ವದವಳ್ಳಿ, ಆಲಂಪುರ ಶಾಸನ, | ಇವಳ 'ಪಾದಪದ್ಮೋಪಜೀವಿ' ಎಂದು ಕರೆದುಕೊಂಡಿರುವ ಮಹಾಮಂಡಳೇಶ್ವರ ಅಯ್ಯಣ್ಣನ ಶಾಸನದಲ್ಲಿ ಉಕ್ತಳಾಗಿದ್ದಾಳೆ. | |
| **ಪದ್ಮಲದೇವಿ** ಅಭಿನವಸರಸ್ವತಿ | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ ಸಿಂದವಾಡಿ ನಾಡಿನ ಅರಸಿ | ೧೨ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ಬಿಜಾಪುರ ಜಿಲ್ಲೆಯ ಮಂಗಳ (ಮಂಗೋಳಿ) | SII ix-i ೧೯೫ ಬಳ್ಳಾರಿ ರಂಗಪುರ (ತಾ) ಹಡಗಲಿ (ಕ್ರಿ.ಶ.೧೧೧೬) ; ಕವಿಶಾಸಂ ೭೧ | ಮಾಂಗೊಳದ ಹಾಗೂ ರಂಗಪುರದ ಜನತೆಯ ಕೋರಿಕೆಯ ಮೇರೆಗೆ ನಾರಸಿಂಘದೇವರ ಹಾಗೂ ನವಮಾಲಾ ದೇವಾಲಯಗಳಿಗೆ ದತ್ತಿ ನೀಡಿದ್ದಾಳೆ | |

| | | | | | | | |
|---|---|---|---|---|---|---|---|
| **ಮಾಳಲದೇವಿ** | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ | ೧೨ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ಎಳವಟ್ಟಿ ಗ್ರಾಮ | | ಎಳವಟ್ಟಿ ಗ್ರಾಮದಲ್ಲಿ ಮಾಳಲೇಶ್ವರ ದೇವಾಲಯ ನಿರ್ಮಾಣ | |
| **ಅಚಲಾದೇವಿ** | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ | ೧೨ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ದುತ್ತರಗಾವೆ | ದುತ್ತರಗಾವೆ ಶಾಸನ | ದುತ್ತರಗಾವೆಯಲ್ಲಿ ಅಗ್ರಹಾರ ನಿರ್ಮಾಣ ಹಾಗು ಕೇಶವ ದೇವಾಲಯಕ್ಕೆ ದಾನ | |
| **ಧಾರಲದೇವಿ** ಗುಣದಂಕಕಾರ್ತಿ,ಮಹಾಸತಿ ತಿಳಕೆ | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ | ೧೨ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | | | ಕೈಕೆಳಗಿನ ಅಧಿಕಾರಿಗಳೊಂದಿಗೆ ದೇವಾಲಯಕ್ಕೆ ದಾನ | |
| **ಮೈಳಲದೇವಿ** | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ | ೧೨ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ಕನ್ನವಳ್ಳಿಯ ಆಡಳಿತ | ತೆಂಗುಳಿಯ ಶಾಸನ ಕನ್ನವಳ್ಳಿಯ ಶಾಸನ | ದೇವಾಲಯವೊಂದಕ್ಕೆ ೨ ಗ್ರಾಮಗಳನ್ನು ದತ್ತಿಯಾಗಿ ನೀಡಿದ್ದಾಳೆ | |
| **ಜಾಕಲದೇವಿ** | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ | ೧೨ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ಧಾರವಾಡದ ಸುತ್ತಮುತ್ತಲಿನ ಕೆಲವು ಪ್ರದೇಶ, ಹುಣಸಿಹಡಗಲಿ ಯಲ್ಲಿ ಆಳ್ವಿಕೆ | ಧಾರವಾಡಜಿಲ್ಲೆಯ ಶಾಸನ | | |
| **ಜಾಕಲದೇವಿ** | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ ಕದಂಬ ತಿಕ್ಕಣನ ಮಗಳು | ೧೨ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ಹಿರೇಲಿಂಗದ ಹಳ್ಳಿ | ಹಿರೇಲಿಂಗದ ಹಳ್ಳಿಯ ಶಾಸನ | ಹಿರೇಲಿಂಗದ ಹಳ್ಳಿಯಲ್ಲಿನ ಸ್ವಯಂಭೂಲಿಂಗಕ್ಕೆ ದತ್ತಿ | |
| **ಭಾಗಲ ಮಹಾದೇವಿ** | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ | ೧೨ ನೆಯ ಶತಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ಭತ್ತಗ್ರಾಮ | | ಈಕೆಯ ಅನುಮತಿಯ ಮೇರೆಗೆ ಅಧಿಕಾರಿಯಾಗಿದ್ದ ಇವಳ ಸೋದರ ಮಾವ ರಾಜರಸ ದಾನ ನೀಡಿ ಶಾಸನ ಹಾಕಿಸಿದ್ದಾನೆ | |
| **ಶ್ರೀಯಾದೇವಿ** | ಕ.ಚಾಳುಕ್ಯ ವಿಕ್ರಮಾದಿತ್ಯನ ರಾಣಿ | ೧೨ ನೆಯ ಶತ ಮಾನ | ಪತಿಯ ಆಡಳಿತದಲ್ಲಿ ಆಳ್ವಿಕೆ | ಬೀದರಜಿಲ್ಲೆಯ ಬಗದಾಳ | ಕ.ವಿ.ವಿ ಶಾ.ಸಂ.೮ ಬೀದರ್ ೬೭, ಬಗ್ದಲ (ಬಗದಾಳ) ಪು.೧೭೮ | ದಾನ ಶಾಸನ (ಶಾಸನ ಪಾಠ ಬಹಳವಾಗಿ ತೃಟಿತವಾಗಿದೆ) | |
| **ಮೈಳಲದೇವಿ** | ಗೋವೆಯ ಕದಂಬ ಜಯಕೇಶಿಯ ರಾಣಿ ಚಾಲುಕ್ಯ ರಾಜಕುಮಾರಿ | ೧೨ನೆಯ ಶತಮಾನ | ಮದುವೆಯ ಬಳುವಳಿಯಾಗಿ ದೊರೆತಿದ್ದ ಪ್ರದೇಶಗಳ ಆಳ್ವಿಕೆ ಹಾಗೂ ಪತಿಯೊಡನೆ ಆಳ್ವಿಕೆ | ಹಲಸಿಗೆ ೧೨೦೦ ಹಾಗೂ ಸ್ಥಾನ ಕುಂದೂರು | E.I xiii ನಂ.೨೮ ನರೇಂದ್ರ (ತಾ) ಧಾರವಾಡ (ಕ್ರಿ.ಶ.೧೧೨೫) | ಧಾರವಾಡದ ಗೂಗಿ ಕಟ್ಟಿಯಲ್ಲಿ ಕೇಶವದೇವಾಲಯ, ದುಮಗಳ್ಳಿಯ ಮೈಳಲೇಶ್ವರ ದೇವಾಲಯಗಳ ನಿರ್ಮಾಣ ಹಾಗೂ ಮಂದೂರ ಸ್ವಯಂಭು ಕಲಿದೇವರಿಗೆ ದತ್ತಿ | |

| | | | | | | | |
|---|---|---|---|---|---|---|---|
| **ರೆಬ್ಬಲದೇವಿ** | ವಿಕ್ರಮಾದಿತ್ಯನ ಕಾಲದ ಮಹಾ ಮಂಡಲೇಶ್ವರ ಕಲಿಚೋರನ ಅರಸಿ | ೧೨ನೆಯ ಶತಮಾನ | ಪತಿಯ ಮರಣಾನಂತರ ಕಲ್ಯಾಣಿ ಚಾಳುಕ್ಯರ ಮಹಾಮಂಡಳೇಶ್ವರಿಯಾಗಿ ಅಧಿಕಾರ ನಡೆಸುತ್ತಿದ್ದಳು | ಆವಂತೀ ಪುರ, ಕರ್ಹಾಡ ಮೊದಲಾದ ಸ್ಥಳಗಳು | ಕರ್ಹಾಡ, ಸಗ್ರೋಳಿ, ಬಿಮ್ರಾ ಬೈರೋಲಿ ಶಾಸನಗಳು IND (ಇನ್ಸ್ಕ್ರಿಪ್ಷನ್ಸ್ ಫ್ರಂ ನಾಂದೇಡ್ ಡಿಸ್ಟ್ರಿಕ್ಟ್) No.೧೯, ಪು.೩೧–೩೨ ; No.೧೧ ಪು.೨೩ | ಅಧಿಕಾರಿಗಳೊಂದಿಗೆ ದೇವಾಲಯಗಳಿಗೆ ದಾನ–ದತ್ತಿ ನೀಡಿದ್ದಾಳೆ | |
| **ದೇಮಲ ದೇವಿ.** | ಸಿಂಧವಂಶದ ಚಾವುಂಡರಾಯನ ಮಡದಿ | ೧೨ನೆಯ ಶತಮಾನ | ಪತಿಯ ಆಳ್ವಿಕೆಯಡಿಯಲ್ಲಿ ಮಗನೊಂದಿಗೆ ಆಡಳಿತ | ಪಟ್ಟದ ಕಿಸುವೊಳಲು | ಕವಿಶಾಸಂ ಬಳ್ಳಾರಿ ೧೦೧ ; ಜೆ.ಬಿ.ಬಿ.ಆರ್.ಎ.ಎಸ್ ೧೧ ಪು.೨೫೯ (ಕ್ರಿ.ಶ.೧೧೬೩) | ಧಾರ್ಮಿಕಕಾರ್ಯಗಳಲ್ಲಿ ಭಾಗಿಯಾದ ಬಗ್ಗೆ ಶಾಸನ ಉಲ್ಲೇಖಿಸುತ್ತದೆ | |
| **ಲಕ್ಷ್ಮಿ ದೇವಿ** | ಸಿಂಧವಂಶದ ಚಾಮುಂಡರಾಯನ ರಾಣಿ | ೧೨ನೆಯ ಶತಮಾನ | ಪತಿಯ ಆಳ್ವಿಕೆಯಡಿಯಲ್ಲಿ ಆಡಳಿತ | ಸೂಂಡಿ, ಹೊಸವೂರ ಮತ್ತು ಕಡಕೆರೆ ಮಂಡಲದ ಕೆಲವು ಊರುಗಳಲ್ಲಿ ಆಡಳಿತ | ಕ.ವಿ.ವಿ.ಶಾ.ಸಂ ೯ ಹೊಸೂರು ೩೮೩, ಬಾದಾಮಿ ತಾ ಕ್ರಿ.ಶ.೧೧೬೨ | ಭಕ್ತರ ಕೋರಿಕೆಯ ಮೇರೆಗೆ ಮಲ್ಲಿಕಾರ್ಜುನ ದೇವಾಲಯವನ್ನು ಅಭಿವೃದ್ಧಿಪಡಿಸಿ, ಪೂಜಾಕಾರ್ಯಗಳಿಗೆ ಭೂದಾನ ನೀಡಿದ್ದಾಳೆ. ಅಲ್ಲದೆ ದುರುಪಯೋಗವಾಗದಂತೆ ಕ್ರಮ ಕೈಗೊಂಡಿದ್ದಾಳೆ. | |
| **ಚಾಗಲದೇವಿ** | ಆರನೇ ವಿಕ್ರಮಾದಿತ್ಯನ ಸಾಮಂತರಸ ತೊರಗಲೆಯ ದಂಡನಾಯಕನ ರಾಣಿ | ೧೨ನೆಯ ಶತಮಾನ | ಪತಿಯೊಂದಿಗೆ ಆಡಳಿತ | ತೊರಗಲೆ ನಾಡು | ಕವಿಶಾಸಂ ೯ ಬಾಗಲಕೋಟೆ, ನೀಲಗುಂದ ೨೩ ಕ್ರಿ.ಶ.೧೧೦೬ | ಯುದ್ಧವೀರಳಾಗಿದ್ದು, ಸ್ವತಃ ಸೇನೆಯನ್ನು ಮುನ್ನಡೆಸುತ್ತಿದ್ದ ಳು. ನೀಲಗುಂದ ಗ್ರಾಮದ ಮೇಲೆ ದಾಳಿಯಿಟ್ಟ ವಿಚಾರವನ್ನು ಇಲ್ಲಿಯ ಶಾಸನ ತಿಳಿಸುತ್ತದೆ | |
| **ಪದುಮಲ ದೇವಿ** ಕ್ರಿ.ಶ.೧೧೭೭ | ಗುತ್ತಿ ಮಲ್ಲಿದೇವನ ರಾಣಿ | ೧೨ನೆಯ ಶತಮಾನ | ಪತಿಯೊಂದಿಗೆ ಆಳ್ವಿಕೆ ನಡೆಸುತ್ತಿದ್ದಳು | | E.C.ಸಂ.viii ಸೊ–೪೧೨ ಹಿರೇಮಾಗಡಿ ಕ್ರಿ.ಶ.೧೧೭೭ | ಸೋಯಿದೇವನನ್ನು ಎದುರಿಸಿ ಕುಪಟೂರನ್ನು ಸೂರೆಗೈದು ತುರುಗೋಳ್ ಕದನವನ್ನು ನಡೆಸಿದ್ದಾಳೆ | |

| | | | | | | | |
|---|---|---|---|---|---|---|---|
| **ಮೈಳಲದೇವಿ** | ಹೊಯ್ಸಳ ನಾರಸಿಂಹನ ಅರಸಿ | ೧೨ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಕೆಲ ಭಾಗಗಳ ಆಳ್ವಿಕೆ | ಮೊದರು ನಾಡು | E.C ಮಂಡ್ಯ ಕೃಷ್ಣರಾಜಪೇಟೆ ೧೨ | | |
| **ಪದ್ಮಲದೇವಿ** | ಹೊಯ್ಸಳ ವೀರಬಲ್ಲಾಳನ ಪಟ್ಟದರಸಿ | ೧೨ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಕೆಲ ಭಾಗಗಳ ಆಳ್ವಿಕೆ | ಗುತ್ತೊಳಲು ಪೊಸಪಡಂಗಿಲೆ (ಹೊಸಹಡಗಲಿ) | ಕವಿಶಾಸಂ ಬಳ್ಳಾರಿ ಹಡಗಲಿ ೫ ಕ್ರಿ.ಶ.೧೨೦೫ | ಮಹಾಪ್ರಧಾನಿ ಭಂಡಾರಿ ಸೋವರಸ ತನ್ನ ಶಾಸನದಲ್ಲಿ ಸ್ತುತಿಸಿದ್ದಾನೆ | |
| **ಉಮಾದೇವಿ** | ಹೊಯ್ಸಳ ವೀರಬಲ್ಲಾಳನ ರಾಣಿ. | ೧೨ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಕೆಲ ಭಾಗಗಳ ಸ್ವತಂತ್ರ ಆಳ್ವಿಕೆ | ಪತಿ ಬಲ್ಲಾಳನ ಅನುಪಸ್ಥಿತಿ ಯಲ್ಲಿ ದೋರ ಸಮುದ್ರ ದಿಂದ ಆಳ್ವಿಕೆ<br><br>ಮಗರೆ ಮುನ್ನೂರು ಮೊದಲಾದ ಅರಸಿಕೆರೆಯ ಪ್ರದೇಶಗಳಲ್ಲಿ ಸ್ವತಂತ್ರವಾದ ಆಳ್ವಿಕೆ | E.C v ಅರಸಿಕೆರೆ ಶಾ.ಸಂ.೮೬, ೯೦, ೯೩, ೨೦೫, ಶಾಸನಗಳು | ನೀಲೇಶ್ವರ, ಸಿದ್ದೇಶ್ವರ, ಅಡಗೂರಿನ ನರಸಿಂಹ ದೇವಾಲಯಗಳಿಗೆ ದಾನ–ದತ್ತಿ ನೀಡಿ ಹಸ್ತಾಕ್ಷರ ಹಾಕಿದ್ದಾಳೆ.<br>ವಿಷಮ ಪರಿಸ್ಥಿತಿಯಲ್ಲಿ ಅಣ್ಣಿಗನ ಹಳ್ಳಿ, ಕಿತ್ತನ ಕೆರೆಯ ಕೆಲವು ಜನರಿಗೆ ತೆರಿಗೆ ಮನ್ನಾಮಾಡಿದ್ದಾಳೆ.<br>ಅರಸಿಕೆರೆಯಲ್ಲಿ ಕೋಡಿ, ಕೆರೆಯ ನಿರ್ಮಾಣಕ್ಕಾಗಿ ಹಲವು ಸುಂಕದ ದತ್ತಿ ಬಿಟ್ಟು, ಭೂಮಿ ನೀಡಿದ್ದಾಳೆ.<br>ಕಲಿದೇವರ ದೇವಾಲಯದ ಬಳಿ ಕನ್ನೆಗೆರೆ ನಿರ್ಮಾಣ.<br>ಬೆಳಗುತ್ತಿ,ಕತ್ತಿಗೆಯ ಸಾಮಂತರ ವಿರುದ್ಧ ಯುದ್ಧನಡೆಸಿದ್ದಾಳೆ | |
| **ಕೇತಲದೇವಿ** | ಹೊಯ್ಸಳ ವೀರಬಲ್ಲಾಳನ ರಾಣಿ | ೧೨ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಕೆಲ ಭಾಗಗಳ ಆಡಳಿತ | ಕೊಪ್ಪಳ ತಾಲೂಕಿನ ಅಳವಂಡಿ ಮತ್ತಿಹಳ್ಳಿ ಮೊದಲಾದ ಪ್ರದೇಶಗಳು | E.C vii (ಪರಿ) ಹಾಸನ ೧೧೭ ಜಕ್ಕೇನಹಳ್ಳಿ (ಕ್ರಿ.ಶ.೧೧೭೬) | ಕೈಕೆಳಗಿನ ಅಧಿಕಾರಿಗಳಿಗೆ ಆದೇಶ ನೀಡಿ ಕಾಳೇಶ್ವರ ದೇವಸ್ಥಾನಕ್ಕೆ ದಾನ ಕೊಟ್ಟಿದ್ದಾಳೆ | |
| **ಚೋಳ ಮಹಾದೇವಿ** | ಹೊಯ್ಸಳ ವೀರಬಲ್ಲಾಳನ ಅರಸಿ | ೧೨ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಕೆಲ ಭಾಗಗಳ ಸ್ವತಂತ್ರ ಆಳ್ವಿಕೆ | ಕೆಂಬಾಳು | E.C. V ಅರಸಿಕೆರೆ ಕಾಟಿಗೆರೆ ಸಂ.೧೦೨ (ಕ್ರಿ.ಶ.೧೧೮೩)<br><br>(ಚ.ಪ.೭೨) | ಬೇವೂರಿನ ಮೇಲೆ ಜಯಸಾಧಿಸಿ, ಯುದ್ಧದಲ್ಲಿ ತನ್ನನ್ನು ಎದುರಿಸಿ ಮಡಿದ ಕೇತಮಲ್ಲನಾಯಕನಿಗೆ ವೀರಗಲ್ಲು ಹಾಕಿಸಿ ಅವನ ಮಕ್ಕಳಿಗೆ ಉಂಬಳಿ ಬಿಟ್ಟು, ವೈಶಿಷ್ಟತೆ ತೋರಿದ್ದಾಳೆ.<br>ಇವಳ ಅಧಿಕಾರಿ ಗಂಗ ಪೆರುಮಾಳೆ ದೇವರಸ ಸ್ವಾಮಿನಿಷ್ಠೆಯ ಪ್ರತೀಕವಾಗಿ ಅಭಿವೃದ್ಧಿ ಪಡಿಸಿದ ಊರಿಗೆ ಚೋಳಮಹಾದೇವಿಪುರ ಎಂಬ ನಾಮಧೇಯವಿತ್ತಿದ್ದಾನೆ | |

| | | | | | | | |
|---|---|---|---|---|---|---|---|
| **ಬಮ್ಮಲದೇವಿ** ಬಿರುದು: ನರ್ತನ ಪ್ರವೀಣೆ, ಪ್ರತ್ಯುತ್ಪನ್ನ ವಾಚಸ್ಪತಿ, ಗೀತವಾದ್ಯ ನೃತ್ಯಸೂತ್ರಧಾರೆ | ಹೊಯ್ಸಳ ವೀರಬಲ್ಲಾಳನ ಮಡದಿ | ೧೨ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಕೆಲ ಭಾಗಗಳ ಸ್ವತಂತ್ರ ಆಳ್ವಿಕೆ | ಮಹಾಮಂಡಳೇಶ್ವರಿ ಯಾಗಿ ಹೆಮ್ಮನಹಳ್ಳಿ ಮೊದಲಾದೆಡೆ ಗಳಲ್ಲಿ ಹಾಗೂ ದ್ವಾರಸಮುದ್ರದಿಂದ ಲೂ ಆಡಳಿತ | E.C. V ಚನ್ನರಾಯಪಟ್ಟಣ ೨೫೪, ಅತ್ತಿಹಳ್ಳಿ (ಕ್ರಿ.ಶ.೧೧೮೪) ; E.C. ಮೈ.೨೧೯ ಹುಲಿಕಲ್ಲು ಕ್ರಿ.ಶ.೧೧೭೩ | ಮಲಪರೊಂದಿಗೆ ಯುದ್ಧ ನಡೆಸಿ ಅವರನ್ನು ನಿಯಂತ್ರಿದ್ದಾಳೆ. | ಸಂಗೀತ ಹಾಗು ನಾಟ್ಯಕಲಾವಿದೆ |
| **ತುಳುವಲ ಮಹಾದೇವಿ** | ಹೊಯ್ಸಳ ಬಲ್ಲಾಳನ ರಾಣಿ, ಗುಪ್ತವಂಶದ ಇಮ್ಮಡಿ ವಿಕ್ರಮಾದಿತ್ಯನ ಮಗಳು | ೧೨ನೆಯ ಶತಮಾನ | ಪತಿಯೊಡನೆ ಆಳ್ವಿಕೆ | | E.C ಯಳಂದೂರು ತಾ ಹೊನ್ನೂರು ಕ್ರಿ.ಶ.೧೧೯೧ ; E.C V ಅಕೆ.೨೭೭, ದ್ಯಾಮೇನಹಳ್ಳಿ ಶಾಸನ ಕ್ರಿ.ಶ.೧೧೧೯ | ಇವಳು ಪೊನ್ನೂರಿನ ದೇವಸ್ತಾನಕ್ಕೆ ದತ್ತಿ ಬಿಟ್ಟಿರುವುದನ್ನೂ ಮತ್ತು ಇಮ್ಮಡಿ ಬಲ್ಲಾಳನು ಇವಳ ಹೆಸರಿನಿಂದ ಕೊಟ್ಟಿರುವ ದಾನವಿವರವನ್ನು ಶಾಸನಗಳು ತಿಳಿಸುತ್ತದೆ. | |
| **ಮಧುಕಲಾಂಬಿಕೆ** ಸಂಗೀತ ಚೂಡಾಮಣಿ, ಜಂಗಮ ಸರಸ್ವತಿ | ಹೊಯ್ಸಳ ವೀರಬಲ್ಲಾಳನ ರಾಣಿ | ೧೨ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಕೆಲ ಭಾಗಗಳ ಸ್ವತಂತ್ರ ಆಳ್ವಿಕೆ | ಚಿಕ್ಕಮಗಳೂರು ತಾಲೂಕಿನ ಕೆಂಕೆರೆ | E.C vi ಚಿಕ್ಕಮಗಳೂರು ೧೫೭ ಹಾಗೂ ೧೫೮ ಕೆಂಕೆರೆ (ಕ್ರಿ.ಶ.೧೧೯೫) (ತರಿಕೆರೆ ೪೬). ಕ್ರಿ.ಶ.೧೧೮೦ರ ಗುಡಿಹಳ್ಳಿ ಶಾಸನ | ಧಾರ್ಮಿಕ ಕಾರ್ಯಗಳಲ್ಲಿ ಆಸಕ್ತಿ ತೋರಿದಂತೆಯೇ ಯುದ್ಧಪ್ರಿಯೆಯಾಗಿ ತುರುಗೋಳಿನಲ್ಲಿ ಮಡಿದ ವೀರರಿಗೆ ವೀರಕೊಡುಗೆ ದತ್ತಿಗಳನ್ನು ನೀಡಿದ ನಾಲ್ಕು ಶಾಸನಗಳು ದೊರಕಿವೆ. | ಸಂಗೀತ ಹಾಗು ನಾಟ್ಯಕಲಾವಿದೆ |
| **ತುಪ್ಪದ ಭಾಗಲದೇವಿ** | ಹೊಯ್ಸಳ ವೀರಬಲ್ಲಾಳನ ರಾಣಿ | ೧೨ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಕೆಲ ಭಾಗಗಳ ಸ್ವತಂತ್ರ ಆಳ್ವಿಕೆ | | E.C. vii ಶಿಕಾರಿಪುರ ಸಂ.೮೭ | ಬಳ್ಳಿಗಾವೆಯ ಬಲ್ಲೇಶ್ವರ ದೇವರ ದೇವಕಾರ್ಯಕ್ಕೆ ಕೆಲವು ಗದ್ಯಾಣಗಳನ್ನು ದತ್ತಿಯನ್ನಾಗಿ ಬಿಟ್ಟು ವರ್ಷದಿಂದ ವರ್ಷಕ್ಕೆ ವೃದ್ಧಿಯಾಗುವಂತೆ ಉಪಯೋಗಿಸಬೇಕೆಂದು ಸೂಚನೆ ನೀಡಿದ್ದಾಳೆ | |
| **ಬಮ್ಮಲದೇವಿ**<br><br>ವಿವೇಕ ಬೃಹಸ್ಪತಿ, ವಾಚಸ್ಪತಿ ಸಕಳ ವಂದಿಜನ ಚಿಂತಾಮಣಿ | ವೀರಬಲ್ಲಾಳನ ರಾಣಿ | ೧೨ನೆಯ ಶತಮಾನ | ಪತಿಯೊಂದಿಗೆ ರಾಜಧಾನಿಯಲ್ಲಿ ಆಳ್ವಿಕೆ ಹಾಗೂ ಕೆಲ ಊರುಗಳಲ್ಲಿ ಸ್ವತಂತ್ರ ಆಳ್ವಿಕೆ | ಹೆಮ್ಮನಹಳ್ಳಿ ಮೊದಲಾದೆಡೆಗಳಲ್ಲಿ ಮಹಾಮಂಡಳೇಶ್ವರಿ ಯಾಗಿ ಆಳ್ವಿಕೆ, ಪತಿಯೊಂದಿಗೆ ದೋರಸಮುದ್ರದಿಂದ ಆಳ್ವಿಕೆ | E.C V ಅರಸಿಕೆರೆ ೭೨ ; E.C V ಚೆನ್ನರಾಯಪಟ್ಟಣ ೨೫೪ ಅತ್ತಿಹಳ್ಳಿ ಕ್ರಿ.ಶ.೧೧೮೩ | ಅತ್ತಿಹಳ್ಳಿ ಶಾಸನವು ಇವಳು ಅಮೃತೇಶ್ವರ ದೇವರಿಗೆ ನೀಡಿದ ದಾನದ ವಿಚಾರ ತಿಳಿಸುತ್ತದೆ. ಯುದ್ಧ ಸಾಹಸದಲ್ಲಿಯೂ ಮೆರೆದು ಮಲಪ ಕುಲವನ್ನು ನಿಯಂತ್ರಿಸಿದ್ದಳು | ಗೀತವಾದ್ಯನೃತ್ಯ ಸೂತ್ರಧಾರೆ, ಪಾತ್ರ ಚೂಡಾಮಣಿ ಮೊದಲಾದ ಬಿರುದು ಹೊಂದಿದ ಕಲಾವಿದೆ |

| | | | | | | | |
|---|---|---|---|---|---|---|---|
| **ರಾಣಿ ಬೈಚಲದೇವಿ** | ಹೊಯ್ಸಳ ಇಮ್ಮಡಿ ಬಲ್ಲಾಳನ ಅಗ್ರಮಹಿಷಿ | ೧೨ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಕೆಲವು ಪ್ರದೇಶಗಳ ಸ್ವತಂತ್ರ ಆಳ್ವಿಕೆ | ಮಗರೆ ಮುನ್ನೂರನ್ನು | E.C vi ಕಡೂರು ಸಂ.೧೨೯ ಕ್ರಿ.ಶ.೧೨೧೭ | ಮಾಧವಪುರದಲ್ಲಿ ಪ್ರಸನ್ನ ಮಾಧವ ದೇವಾಲಯವನ್ನು ನಿರ್ಮಿಸಿ ದಾನ–ದತ್ತಿಗಳನ್ನು ನೀಡಿದ್ದಾಳೆ. | ಶಾಸನಕವಿ ನಾಗದೇವನ ಪೋಷಿತಳು |
| **ಅಭಿನವ ಕೇತಲದೇವಿ** | ಹೊಯ್ಸಳ ಬಲ್ಲಾಳನ ರಾಣಿ | ೧೩ನೆಯ ಶತಮಾನ | ಪತಿಯ ಆಳ್ವಿಕೆಯಲ್ಲಿ ಕೆಲ ಭಾಗಗಳ ಸ್ವತಂತ್ರ ಆಳ್ವಿಕೆ | ಕುಂದವಾಡ | E.C. Xi ದಾವಣಗೆರೆ ೧೦೫ ಕುಂದವಾಡದ ಕ್ರಿ.ಶ.೧೨೪೦ | ತನ್ನ ಸೋದರಮಾವ ಮಾಧವ ದಣ್ಣಾಯಕ ಬಂದಳಿಕೆಯ ಮಹಾಜನರಿಗೆ ನೀಡಿದ ೩೩ ವೃತ್ತಿಗಳನ್ನು ದೃಢೀಕರಿಸಿದ್ದಾಳೆ. ಕ್ರಿ.ಶ.೧೨೪೦ ರಲ್ಲಿ ತನ್ನ ಆಳ್ವಿಕೆಯ ಪ್ರದೇಶವಾದ ಕುಂದವಾಡದಲ್ಲಿ ಸಂತೆಯನ್ನು ಸ್ಥಾಪಿಸಿದ್ದಾಳೆ | |
| **ಭಾಗುಬಾಯಿ** ಯಾದವ ಸಿಂಘಣ ನಿಂದ ಬಿರುದು 'ಪರಮವಿಶ್ವಾಸಿ' | ಯಾದವ ಅರಸು ಸಿಂಘಣ ಸರ್ವಾಧಿಕಾರಿಣಿ | ೧೩ನೆಯ ಶತಮಾನ | ಮಹಾ ಮಂಡಳೇಶ್ವರಿ ಯಾಗಿ ಆಳ್ವಿಕೆ ನಡೆಸಿದವಳು | ಹೇಡ, ಕಣಂಬಾಡಿ & ತರ್ದವಾಡಿ | SII XVIII 223; ಕವಿಶಾಸಂ ೧೦, ಬಿಜಾಪುರ ೯ ಪು.೧೯ | ಉತ್ತಮ ಆಡಳಿತಗಾರ್ತಿ | |
| **ದೇಮಲಾ ದೇವಿ** | ಮೂರನೆಯ ಬಲ್ಲಾಳನ ರಾಣಿ | ೧೪ನೆಯ ಶತಮಾನ | ಪತಿಯೊಂದಿಗೆ ಆಳ್ವಿಕೆ | | E.C ಕೃಷ್ಣರಾಜಪೇಟೆ ಸಂ ೧೦೮ ಕ್ರಿ.ಶ.೧೩೩೪ | ಮಹಾಪ್ರಧಾನಿ ಆದಿಸಿಂಗೇಯನಾಯಕನು ಈಕೆಯ ಹೆಸರಿನಲ್ಲಿ ದೇಮಲಾಪುರವೆಂಬ ಅಗ್ರಹಾರವನ್ನು ನಿರ್ಮಿಸಿ, ಸ್ವಾಮಿ ನಿಷ್ಠೆ ತೋರಿದ್ದಾನೆ | |
| **ಕಿಕ್ಕಾಯಿ ತಾಯಿ** | ಹೊಯ್ಸಳ ಮೂರನೆಯ ಬಲ್ಲಾಳನ ರಾಣಿ, ಆಳುಪ ರಾಜಕುಮಾರಿ | ೧೪ನೆಯ ಶತಮಾನ | ಅಳಿಯಸಂತಾನ ಕ್ರಮದಂತೆ ಆಳುಪ ರಾಜ್ಯದ ಆಳ್ವಿಕೆ. ಪತಿ ಬಲ್ಲಾಳನ ಮರಣಾನಂತರ ವಿಜಯನಗರದ ಅರಸರ ಅಧೀನ ದಲ್ಲಿ ಆಡಳಿತ | ಕರಾವಳಿ ತೀರ ಪ್ರದೇಶಗಳಲ್ಲಿ (ಆಳುಪ ರಾಜ್ಯ) ಆಳ್ವಿಕೆ ನಡೆಸುತ್ತಿದ್ದಳು | E.C. vii ಶೃಂಗೇರಿ ಕ್ರಿ.ಶ.೧೩೪೬ SII XXVII ಸಂಖ್ಯೆ ೩೯ ಶಿವಳ್ಳಿ | ವಿಜಯನಗರದ ಮೊದಲನೆಯ ಹರಿಹರನು ಶೃಂಗೇರಿ ಮಠಕ್ಕೆ ದಾನನೀಡಿದ ಸಂದರ್ಭದಲ್ಲಿ **ಕಿಕ್ಕಾಯಿ ತಾಯಿಯು** ಸಾಂತಳಿಗೆ ನಾಡಿನ ಕೆಲವು ಸೀಮೆಗಳನ್ನು ದಾನನೀಡಿದ್ದಾಳೆ. (ಪತಿಯ ಮರಣಾನಂತರ) ಶಿವಳ್ಳಿ ಶಾಸನವು ಬಲ್ಲಾಳನ ಜೀವಿತಾವಧಿಯ ದಾನಶಾಸನ | |
| **ಸೆಟ್ಟಿಕವ್ವೆ** | ನಾಗರ ಖಂಡದ ಸಾತೇನಹಳ್ಳಿಯ ನಾಳ್ಗಾವುಂಡ ಕಾಮಿಸೆಟ್ಟಿಯ ಕುಲಾಂಗನೆ | ೧೩ನೆಯ ಶತಮಾನ | ಹೊಯ್ಸಳ ವೀರಬಲ್ಲಾಳನ ಆಳ್ವಿಕೆಯಲ್ಲಿ ಗಾವುಂಡಿಯಾಗಿದ್ದ ವಳು | ಸಾತೇನಹಳ್ಳಿ | KI IV – 1 ಸಾತೇನಹಳ್ಳಿ (ಕ್ರಿ.ಶ.೧೨೦೪) ; KI IV – 2 ಸಾತೇನಹಳ್ಳಿ (ಕ್ರಿ.ಶ.೧೨೪೧) | ಸಾತೇಯನಹಳ್ಳಿಯಲ್ಲಿ ಹರಿಹರೇಶ್ವರನನ್ನು ಪ್ರತಿಷ್ಠಿಸಿ ದೊರೆ ಬಲ್ಲಾಳನಿಂದ ದತ್ತಿ ಪಡೆದು ಕೊಟ್ಟಿದ್ದಾಳೆ. ಯುದ್ಧದಲ್ಲಿ ಭಾಗವಹಿಸಿ ವೈರಿಗಳನ್ನು ಸಂಹರಿಸಿದ ಸಾಹಸಿ | |

| | | | | | | | |
|---|---|---|---|---|---|---|---|
| **ಮಹಾದೇವಿ** (೧೨೩೦–೧೨೫೦) | ಆಳುಪ ವಲ್ಲಭದೇವನ ರಾಣಿ ಸಾಂತರ ಕುಲದ ರಾಜಕುಮಾರಿ. | ೧೩ನೆಯ ಶತಮಾನ | ಪತಿಯೊಂದಿಗೆ ರಾಜ್ಯಾಡಳಿತ ನಿರ್ವಹಣೆ ಪತಿಯ ಮರಣಾನಂತರ ಮಗ ವೀರಪಾಂಡ್ಯನ ಪರವಾಗಿ ರಾಜ್ಯಾಡಳಿತ | ಬಾರಕೂರು, ಮಂಗಳೂರು ಪ್ರದೇಶಗಳು | SII ಸಂ IX ಭಾಗ–೧ ನಂ.೩೯೫, ೩೯೬, ಸಂ.೨೭. ನಂ.೨೦೮ | | |
| **ಬಲ್ಲಮಹಾದೇವಿ**<br><br>ಆಳುಪ ಅರಸರಿಗಿದ್ದ ಬಿರುದುಗಳನ್ನು ಧರಿಸಿದ್ದಾಳೆ. | ಆಳುಪ ವೀರಪಾಂಡ್ಯನ ರಾಣಿ | ೧೩ನೆಯ ಶತಮಾನ | ಪತಿಯ ಮರಣಾನಂತರ ಅತ್ತೆಯ ಸಹಕಾರದಿಂದ ಸ್ವತಂತ್ರವಾಗಿ ರಾಜ್ಯವನ್ನು ಆಳಿದಳು. | ಬಾರಹಕನ್ಯಾಪುರ ಬಾರಕೂರು, ಮಂಗಳೂರು ಪ್ರದೇಶಗಳು | SII ಸಂ.IX ಭಾಗ ೧ ನಂ.೩೯೫, ೩೯೬, ಸಂ.೨೭. ನಂ.೨೦೮ ; ಅದೇ ೨೨೦<br>ಶಾಸನ SII XXVII ಸಂಖ್ಯೆ ೨೧೮ ಕೊಡವೂರು; ಅದೇ ೨೨೦ ಅಲೆವೂರು; ಅದೇ<br>ಬೈಲೂರು ಶಾಸನ ೨೨೧ | ಉಡುಪಿ ಜಿಲ್ಲೆಯ ಕಚ್ಚೂರು (ಕೊಟಕೇರಿ)ಯ ಮಾರ್ಕಂಡೇಶ್ವರ ದೇವರಿಗೆ ದಾನ, ಸಂತೆ ನಿರ್ಮಾಣ, ವ್ಯಾಪಾರ,ತೆರಿಗೆ ಕುರಿತಂತೆ ಶಾಸನಗಳನ್ನು ಹೊರಡಿಸಿದ್ದಾಳೆ.<br>ವ್ಯಾಪಾರ ವಹಿವಾಟುಗಳನ್ನು ಸೂಕ್ತ ರೀತಿ ನಿಭಾಯಿಸಿ ವಿದೇಶಿಯರ ಕಡತಗಳಲ್ಲಿ ಪ್ರಸಿದ್ಧಿಯಾಗಿದ್ದಾಳೆ. | |
| **ಜಾಕಲ ಮಹಾದೇವಿ** | ತೋಳಹಾರ ಮನೆತನದ ಅರಸಿ | ೧೩ನೆಯ ಶತಮಾನ | ಅಳಿಯ ಸಂತಾನ ಪರಂಪರೆ | ಸುರಾಳು | E.C.VI ಮೂಡಿಗೆರೆ ಸಂ ೬೭, ೭೦ | ಅಧಿಕಾರಿಗಳೊಂದಿಗೆ ಕಳಸ ಮೊದಲಾದ ದೇವಾಲಯಗಳಿಗೆ ದಾನ | |
| **ಕಾಳಲ ಮಹಾದೇವಿ** | ತೋಳಹಾರ ಮನೆತನದ ಅರಸಿ | ೧೩ನೆಯ ಶತಮಾನ | ಅಳಿಯ ಸಂತಾನ ಪರಂಪರೆ | ಸುರಾಳು | E.C VI ಮೂಡಿಗೆರೆ ಸಂ ೭೧,೭೨, ೭೩ & ೭೫ | ದಾನ ಹಾಗೂ ಧಾರ್ಮಿಕ ಕಾರ್ಯಗಳಲ್ಲಿ ಉಕ್ತವಾಗಿದ್ದಾಳೆ | |
| **ಹಲಸೂರಮ್ಮ** | ಆವಂತಿ ನಾಡಪ್ರಭು ಹಿರಿಯ ಕೆಂಪೇಗೌಡನ ಪತ್ನಿ | ೧೬ನೆಯ ಶತಮಾನ | ಪತಿಯ ಮರಣಾ ನಂತರ ಅಧಿಕಾರ ವಹಿಸಿಕೊಂಡಳು | ಶಿಡಿಲಘಟ್ಟದ ಸುತ್ತಮುತ್ತಲ ಪ್ರದೇಶ | | ಕ್ರಿ.ಶ.೧೫೨೬ರಲ್ಲಿ ಮಾವ ಸಿಡಿಲೇಗೌಡನ ಹೆಸರಾಗಿ ಶಿಡ್ಲಘಟ್ಟ ಎಂಬ ಊರನ್ನು ನಿರ್ಮಿಸಿ, ಕೆರೆಕಟ್ಟಿಸಿದ್ದಾಳೆ. ಊರಿನ ಉತ್ತರಕ್ಕೆ ಅಬ್ಲೋಡು ಕೋಟೆಯನ್ನು ಕಟ್ಟಿಸಿದಳು. | |

| | | | | | | | |
|---|---|---|---|---|---|---|---|
| **ಭೈರಾದೇವಿ** | ಸಾಳ್ವಮನೆತನ ಸಾಳುವೇಂದ್ರ (ಹೈವಭೂಪ)ನ ರಾಣಿ. | ೧೫ನೆಯ ಶತಮಾನದ ಆರಂಭ | ಪತಿಯ ಮರಣಾನಂತರ ಆಳ್ವಿಕೆ ನಡೆಸಿದ್ದಾಳೆ | ಹಾಡುವಳ್ಳಿಯಿಂದ ಆಳ್ವಿಕೆ ನಡೆಸುತ್ತಿದ್ದಳು | MAR 1939-40 P.90 | ಸಮಾಧಿಮರಣ ಹೊಂದಿದ ಇವಳಿಗಾಗಿ ಮಗ ಸಂಗೀರಾಯ ನಿಸಿದಿಗಲ್ಲನ್ನು ಹಾಕಿಸಿದ್ದಾನೆ. | |
| **ವೀರಾದೇವಿ** (೧೪೪೮–೧೫೩೨) | ಸಾಳ್ವ ಮನೆತನ ಗುರುರಾಜವೊಡೆಯನ ರಾಣಿ | ೧೫ನೆಯ ಶತಮಾನ | | ಭಟ್ಕಳದಿಂದ ಕೆಲಕಾಲ ಆಳ್ವಿಕೆ ನಡೆಸುತ್ತಿದ್ದಳು | ಕುಂದನಾಡಿನ ಶಾಸನ | ಕ್ರಿ.ಶ.೧೫೨೭ರ ಭಟ್ಕಳದಲ್ಲಿ ಬಸದಿ ನಿರ್ಮಾಣ | |
| **ಮಹಾಮಂಡಲೇಶ್ವರಿ ಪದುಮಲ ದೇವಿ (ಪದ್ಮಾಂಬಾ)** (೧೫೨೨–೧೫೩೦) | ಸಾಳ್ವ ಮನೆತನ ಗುರುರಾಜ ಒಡೆಯ ಹಾಗೂ ದೇವರಾಯ ಒಡೆಯರ ಸಹೋದರಿ | ೧೬ನೆಯ ಶತಮಾನ | ವಿಜಯ ನಗರದ ಅರಸು ಕೃಷ್ಣದೇವ ರಾಯನ ಆಳ್ವಿಕೆಯಲ್ಲಿ ಮಹಾ ಮಂಡಲೇಶ್ವರಿ | ಹೊನ್ನಾವರ ರಾಜಧಾನಿ ಯಿಂದ ಹೈವೆ, ತುಳು, ಕೊಂಕಣ ಪ್ರದೇಶಗಳ ಆಳ್ವಿಕೆ ನಡೆಸುತ್ತಿದ್ದಳು | SII ೨೧ ಕ್ರಿ.ಶ.೧೫೭೧ ಪು.೧೦೬<br><br>ಕುಂದನಾಡಿನ ಶಾಸನಗಳು ಸಂ.೬೫ | ಪೋರ್ಚುಗೀಸ್ ಹಾಗೂ ಇತರ ವಿದೇಶಿಯರೊಂದಿಗೆ ಸಮುದ್ರ ವ್ಯಾಪಾರ ನಡೆಸಿ, ವ್ಯಾಪಾರ ಚಾತುರ್ಯತೆಗೆ ಹೆಸರಾದವಳು.<br>ಡೇವರ್ಸ್: ದಿ ಪೋರ್ಚುಗೀಸ್ ಇನ್ ಇಂಡಿಯಾ. ಸಂಪುಟ ೧ ಪು.೧೪೪ – ಇವಳ ವ್ಯಾಪಾರ ವ್ಯವಹಾರಗಳ ಕುರಿತಾದ ಒಪ್ಪಂದ ದಾಖಲಾಗಿದೆ | |
| **ಭೈರಾದೇವಿ** | ಸಾಳ್ವ ಮನೆತನ ಕೃಷ್ಣದೇವರಸನ ಸಹೋದರಿ. | ೧೬ನೆಯ ಶತಮಾನ | ಸಹೋದರನ ಆಳ್ವಿಕೆಯಲ್ಲಿ ಕೆಲ ಭಾಗಗಳನ್ನು ನೋಡಿಕೊಳ್ಳು ತ್ತಿದ್ದಳು | ಹಾಡುವಳ್ಳಿ | K I – 1 ಸಂ. 49 | | ಕವಿ ಬ್ರಹ್ಮಸೂರಿಗೆ ಆಶ್ರಯ ನೀಡಿದ ಅರಸಿ |
| **ಚೆನ್ನಾದೇವಿ** | ಸಾಳ್ವ ಮನೆತನ ಭೈರಾದೇವಿಯ ಮಗಳು | ೧೬ನೆಯ ಶತಮಾನ | ಸೋದರ ಮಾವ ಕೃಷ್ಣ ದೇವರಸನ ಆಳ್ವಿಕೆಯಲ್ಲಿ ಕೆಲವು ಪ್ರದೇಶಗಳನ್ನಾಳುತ್ತಿದ್ದಳು | ಭಟ್ಕಳದಿಂದ ಕೆಲಕಾಳ ಆಳ್ವಿಕೆ ನಡೆಸಿದಳು | KI. ಸಂ.೧೨–೧೩ | ಪೋರ್ಚುಗೀಸರೊಂದಿಗೆ ಯುದ್ಧ ನಡೆಸಿದ್ದಾಳೆ.<br>ಎಂಕಪ್ಪ ನಾಯಕ ಮತ್ತು ಇತರರಿಗೆ ವೀರಗಲ್ಲು ಹಾಕಿಸಿ ಅವರ ಮನೆಯವರಿಗೆ ಉಂಬಳಿ ನೀಡಿದ್ದಾಳೆ. | (ಡೇವರ್ಸ್: ದಿ ಪೋರ್ಚುಗೀಸ್ ಇನ್ ಇಂಡಿಯಾ. ಸಂ.೪೬೦–೬೧) |
| **ಚೆನ್ನಭೈರಾ ದೇವಿ** (೧೫೬೦–೧೬೦೮) ಪೋರ್ಚುಗೀಸರಿಂದ ಬಿರುದು: **ಕರಿಮೆಣಸಿನ ರಾಣಿ** (ರೈನಾ.ಡಾ. ಪಿಮೆಂಟಾ) | ಸಾಳ್ವ ಮನೆತನ ಭೈರಾದೇವಿಯ ಮಗಳು ಸಾಳ್ವ ಕೃಷ್ಣದೇವರಸನ ಸೋದರಸೊಸೆ. ಚೆನ್ನಾದೇವಿಯ ಸಹೋದರಿ. | ೧೬ನೆಯ ಶತಮಾನ | ವಿಜಯನಗರದ ಮಹಾ ಮಂಡಲೇಶ್ವರಿ | ಅಂಕೋಲಾ ಭಟ್ಕಳ,ಮಿರ್ಜಾನ ಗೋಕರ್ಣ,ಕರೂರು,ಚಂದಾವರ, ಹೊನ್ನಾವರ, ಬೈಂದೂರು, ಉಪ್ಪುಂದ, ತ್ರಾಸಿ, ಮೊದಲಾದ ಹೈವ–ತುಳು– ಕೊಂಕಣ ಪ್ರದೇಶಗಳು | K I III part 1, No.16 & 17<br><br>ಕುಂದನಾಡಿನ ಶಾಸನ ಸಂ.೬೮–೭೩ | ಪೋರ್ಚುಗೀಸ್, ಪರ್ಷಿಯ ಅರಬ್, ಮೊದಲಾದ ಹೊರ ದೇಶಗಳೊಂದಿಗೆ ವ್ಯಾಪಾರ, ಪೋರ್ಚುಗೀಸ್‌ರಂಥ ವಿದೇಶಿ, ಬೀಳಗಿ, ಕೆಳದಿ ಮೊದಲಾದ ದೇಸೀ ಅಸರೊಂದಿಗೆ ಯುದ್ಧ ಗೇರುಸೊಪ್ಪೆ ಮೊದಲಾದ ಕಡೆಗಳಲ್ಲಿ ಬಸದಿ ನಿರ್ಮಾಣ, ಬಸದಿ–ದೇಗುಲಗಳಿಗೆ ದಾನ–ದತ್ತಿ | ಹಲವಾರು ಕವಿಗಳಿಗೆ ಆಶ್ರಯ ನೀಡಿದ್ದಳು. ವಿದೇಶಿ ಪ್ರವಾಸಿಗ ಬುಕಾನೆನ್ ಮೊದಲಾದವರ ಬರಹಗಳಲ್ಲಿ ಉಕ್ತಳಾಗಿದ್ದಾಳೆ |

| | | | | | | | |
|---|---|---|---|---|---|---|---|
| **ತಿರುಮಲ ದೇವಿ** | ಚೌಟ ಅರಸು ಮನೆತನ | ೧೬ನೆಯ ಶತಮಾನ | ಅಳಿಯ ಸಂತಾನ ಪರಂಪರೆ | ಉಲ್ಲಾಳ | | ಕಾರ್ಕಳದ ಭೈರರಸನೊಂದಿಗೆ ಹೋರಾಡಿ ವೀರ ಮರಣ ಹೊಂದಿದವಳು | |
| **ಹಿರಿಯ ಅಬ್ಬಕ್ಕದೇವಿ** ಕ್ರಿ.ಶ.೧೫೪೪ರಿಂದ ೧೫೮೨ರ | ಚೌಟ ಅರಸುಮನೆತನ | ೧೬ನೆಯ ಶತಮಾನ | ಅಳಿಯ ಸಂತಾನ ಪರಂಪರೆ | ಉಲ್ಲಾಳ | | ಸಹೋದರಿ ಪದುಮಲದೇವಿಯ ಪರೋಕ್ಷವಿನಯವಾಗಿ ಕಾರ್ಕಳದ ಬಸದಿಯಲ್ಲಿ ಆಹಾರದಾನಕ್ಕಾಗಿ ದತ್ತಿ ನೀಡಿದ್ದಾಳೆ.<br>ಪೋರ್ಚುಗೀಸರ ವಿರುದ್ಧ ಕೆಲವು ಯುದ್ಧಗಳನ್ನು ನಡೆಸಿದ್ದಾಳೆ. | ಪೋರ್ಚುಗೀಸರನ್ನೆದುರಿಸಿದ ದಿಟ್ಟ ಅರಸಿ ಎಂಬ ಖ್ಯಾತಿಯಿಂದ ದೇಶ ವಿದೇಶಗಳಲ್ಲಿ ಪ್ರಸಿದ್ಧಳಾದವಳು. |
| **ಲೋಕದೇವಿ** | ಚೌಟ ಅರಸುಮನೆತನ ಅಬ್ಬಕ್ಕದೇವಿಯ ಸಹೋದರಿ | ೧೬ನೆಯ ಶತಮಾನ | ಅಳಿಯ ಸಂತಾನ ಪರಂಪರೆ | ಪುತ್ತಿಗೆ | SII Vol.7 No.210 | ತನ್ನ ಸಹೋದರಿ ಪದುಮಲ ದೇವಿಯ ಪರೋಕ್ಷ ವಿನಯವಾಗಿ ಮೂಡುಬಿದರೆ ಪಾರ್ಶ್ವನಾಥ ಬಸದಿಗೆ ದಾನ ನೀಡಿದ್ದಾಳೆ. | |
| **ಕಿರಿಯ ಅಬ್ಬಕ್ಕದೇವಿ** (ಚನ್ನಮ್ಮ ದೇವಿ) ಕ್ರಿ.ಶ.೧೬೨೩ರಲ್ಲಿ | ಚೌಟ ಅರಸು ಮನೆತನ (ಭೋಜರಾಜನ ಸೊಸೆ?) ಬಂಗರಾಜನ ಅರಸಿ | ೧೭ನೆಯ ಶತಮಾನ | ಅಳಿಯ ಸಂತಾನ ಪರಂಪರೆ | ಉಲ್ಲಾಳ | | ಉತ್ತಮ ಆಳ್ವಿಕೆ, ವ್ಯಾಪಾರ ದಕ್ಷತೆ ಹಾಗೂ ಯುದ್ಧ ಸಾಹಸಿಯಾಗಿ ಹೆಸರು ಗಳಿಸಿದವಳು | ಇಟಲಿಯ ಪ್ರವಾಸಿ ದೆಲ್ಲಾವೆಲ್ಲೆ ಇವಳನ್ನು ಭೇಟಿಯಾಗಿ ಇವಳ ಕುರಿತು ವಿವರಣೆ ನೀಡಿದ್ದಾನೆ |
| ಸೋಮಲಾದೇವಿ | ಮೂಲರು ಅರಸುವಂಶ ಲಕ್ಷ್ಮಪ್ಪ ಬಂಗರಸನ ಕಿರಿಯರಸಿ | ೧೭ನೆಯ ಶತಮಾನ | ಅಳಿಯಸಂತಾನ ಪದ್ಧತಿಯಂತೆ ಸಿಂಹಾಸನವೇರಿದವಳು | ಬೈಲಂಗಡಿ | | ಬೈಲಂಗಡಿಯಲ್ಲಿ ಪಾರ್ಶ್ವನಾಥ ಜಿನಮಂದಿರ ನಿರ್ಮಾಣ | |
| **ಚೆನ್ನಾಂಬಿಕೆ ಅಥವಾ ಚೆನ್ನಮ್ಮ**<br><br>೧೬೧೮ | ಮೂಲ್ಕಿಯ ಸಾವಂತರು ದುಗ್ಗಣ ಸಾವಂತನ ಸೋದರಸೊಸೆ, ದೇಮ್ಮಾಜಿಯ ಮಗಳು | ೧೭ನೆಯ ಶತಮಾನ | ಅಳಿಯ ಸಂತಾನ ಪರಂಪರೆ | ಮೂಲ್ಕಿ | ಶಾ.ಶ.೧೫೩೭ರ ಮೂಲ್ಕಿಯ ಶಾಸನ ಸಂ. ವಸಂತಮಾಧವ | ಪೋರ್ಚುಗೀಸರೊಂದಿಗೆ ವ್ಯಾಪಾರ ವ್ಯವಹಾರ ನಡೆಸುತ್ತಿದ್ದಳು. ಪೋರ್ಚುಗೀಸರ ಸಹಾಯ ಪಡೆದು ಕೆಳದಿ ವೆಂಕಟಪ್ಪನಾಯಕನ ವಿರುದ್ಧ ಯುದ್ಧ ನಡೆಸಿದಳು. ಮೂಲ್ಕಿಯ ಬಸದಿ ಹಾಗೂ ದೇವಾಲಯಗಳಿಗೆ ದಾನ ನೀಡಿದ್ದಾಳೆ. | ಇಟಲಿಯ ಪಿಯತ್ರೊ ದೆಲ್ಲೆವೆಲ್ಲಾ ೧೬೨೩ ರಲ್ಲಿ ಭೇಟಿಯಾದ ಇವಳ ಕುರಿತು ಬರೆದಿದ್ದಾನೆ. ಪದ್ಮನಾಭ ಇವಳ ಆಸ್ಥಾನ ಕವಿ. |

| | | | | | | | |
|---|---|---|---|---|---|---|---|
| **ಚಿನ್ನಾದೇವಿ** | ತುಳುವ ವಂಶದ ಪ್ರಸಿದ್ಧದೊರೆ ಕೃಷ್ಣದೇವ ರಾಯನ ರಾಣಿ | ೧೬ನೆಯ ಶತಮಾನ | ಪತಿಯೊಡನೆ ಆಳ್ವಿಕೆ | | E.C. xii, ಪಾವುಗಡ ೬೯ ; ತಿರುಪತಿ ದೇವಸ್ಥಾನದ ಶಾಸನ ; ಆಂಧ್ರಪ್ರದೇಶದ ಶಾಸನ ಸಂಪುಟ | ತಿರುಪತಿ ಮೊದಲಾದ ದೇವಾಲಯಗಳಿಗೆ ದಾನ–ದತ್ತಿಗಳನ್ನು ನೀಡಿದ್ದಾಳೆ. ಪತಿಯೊಡನೆ ಕೆಲವು ಯುದ್ಧಗಳಲ್ಲಿ ಭಾಗಿ. ಪಾವುಗಡದ ಶಾಸನವ ಇಮ್ಮಡಿ ದೇವರಾಯನ ಕಾಲದ ದತ್ತಿ ಗಳನ್ನು ಇವಳು ಪುನರ್ ನವೀಕರಿಸಿದ ವಿಚಾರ ತಿಳಿಸಿದೆ | ನರ್ತನ ಮೊದಲಾದ ಕಲೆಗಳಲ್ಲಿ ಪ್ರವೀಣೆ ಎಂಬ ಹೊಗಳಿಕೆಗೆ ಪಾತ್ರಳಾದವಳು |
| **ತಿರುಮಲ ದೇವಿ** | ತುಳುವ ವಂಶದ ಪ್ರಸಿದ್ಧದೊರೆ ಕೃಷ್ಣದೇವ ರಾಯನ ರಾಣಿ | ೧೬ನೆಯ ಶತಮಾನ | ಪತಿಯೊಡನೆ ಆಳ್ವಿಕೆ | | ಇನ್‌ಸ್ಕ್ರಿಪ್ಷನ್ ಆಫ್ ಆಂದ್ರಪ್ರದೇಶ್ ಪು.೫೨ & ೫೩; ತಿರುಮಲ ತಿರುಪತಿ ದೇವಸ್ಥಾನಂ ಇನ್‌ಸ್ಕ್ರಿಪ್ಷನ್ ೧೧೧ ಪು.೧೬೪–೧೬೭ | ತಿರುಪತಿ ಮೊದಲಾದ ದೇವಾಲಯಗಳಿಗೆ ದಾನ–ದತ್ತಿಗಳನ್ನು ನೀಡಿದ್ದಾಳೆ. ಕೆಲವು ಯುದ್ಧಗಳಲ್ಲಿ ಪತಿಯೊಡನೆ ಭಾಗಿಯಾಗಿದ್ದಾಳೆ. ಪತಿಯ ಮರಣಾ ನಂತರ ಅಚ್ಯುತರಾಯನಿಗೆ ಆಳ್ವಿಕೆಯ ಅಧಿಕಾರ ನೀಡುವಲ್ಲಿ ಸಮ್ಮತ ಸೂಚಿಸಿದ್ದಾಳೆ. ಮುಂದೆ ತನ್ನ ಅಳಿಯಂದಿರಿಗೆ ಅಧಿಕಾರ ಕೊಡಿಸುವಲ್ಲಿಯೂ ಪಾತ್ರ ವಹಿಸಿದ್ದಾಳೆ | |
| **ಮಧುರಕ್ಕ ದೇವಿ/ ಅಮ್ಮಾಜಿಲ** | ಅಜಿಲ ಮನೆತನ ತಿಮ್ಮಣ್ಣ ಅಜಿಲನ ಸೋದರಸೊಸೆ | ೧೭ನೆಯ ಶತಮಾನ | ಅಳಿಯ ಸಂತಾನ ಪದ್ಧತಿಯಂತೆ | ಪುಂಜಳಿಕೆ ಯ ರಾಜ್ಯ | ಉಲ್ಲೇಖ S.I.I ಸಂ. VII. No.255 ೧೬೨೧ | ಬಸದಿಯ ಧಾರ್ಮಿಕ ವಿಧಿಗಳಿಗೆ ದಾನ | |
| **ಮಲ್ಲಮ್ಮ** | ಬೆಳವಡಿಯ ಈಶಪ್ರಭುವಿನ ಸತಿ ಸ್ವಾದಿಯ ರಾಜಕುಮಾರಿ ಸದಾಶಿವ ನಾಯಕನ ಸಹೋದರಿ | ೧೭ ನೆಯ ಶತಮಾನ | ಪತಿಯ ಮರಣಾನಂತರ ಬೆಳವಡಿ ಸಂಸ್ಥಾನದಲ್ಲಿ ಆಳ್ವಿಕೆ ನಡೆಸಿದಳು | ಬೆಳವಾಡಿ | ಯಾರವಾಡದ ಶಾಸನ. ಹೂಲಿ ಮಠದ ತಾಮ್ರಶಾಸನ | ಶಿವಾಜಿಯ ವಿರುದ್ಧ ಸೆಣಸಾಡಿ, ಶಿವಾಜಿಯನ್ನು ಮಣಿಸಿದ ವೀರ ಮಹಿಳೆ. 'ಸ್ತ್ರೀ ಸೈನ್ಯ'ವನ್ನು ಕಟ್ಟಿದ ಯುದ್ಧಪ್ರಿಯೆ. | ಶೇಷೋ ಶ್ರೀನಿವಾಸ ಮುತಾಲಿಕ ಮೊದಲಾದವರು ಈಕೆಯ ಕುರಿತು ಬರೆದಿದ್ದಾರೆ |

| | | | | | | | |
|---|---|---|---|---|---|---|---|
| **ಕೆಳದಿ ಚೆನ್ನಮ್ಮ** | ಕೆಳದಿ ಸೋಮಶೇಖರ ನಾಯಕನ ರಾಣಿ. | ೧೭ನೆಯ ಶತಮಾನ | ಪತಿಯೊಡನೆ ಆಳ್ವಿಕೆ ನಡೆಸುತ್ತಿದ್ದಳು, ಪತಿಯ ಮರಣಾನಂತರ ಕ್ರಿ.ಶ.1672ರಲ್ಲಿ ವಿಧಿವತ್ತಾಗಿ ಕೆಳದಿ ರಾಜ್ಯದ ಸಿಂಹಾಸನವನ್ನೇರಿ ಆಡಳಿತ ನಡೆಸಿದಳು | ಕೆಳದಿ, ಇಕ್ಕೇರಿ, ಶಿವಮೊಗ್ಗ, ಸಾಗರ ಮೊದಲಾದ ಪ್ರದೇಶಗಳು | ಕೆಳದಿ ಅರಸ ಶಾಸನ ಸಂಪುಟ ಪು.೨೮೧–೩೩೦. ಸುಮಾರು ೪೫ ಶಾಸನಗಳು | ಮೈಸೂರು, ಸೋಂದೆ, ಬಿಜಾಪುರ ಮೊದಲಾದ ದೊರೆಗಳೊಂದಿಗೆ ಯುದ್ಧ ನಡೆಸಿದುದಲ್ಲದೆ, ಔರಂಗಜೇಬನ ಸೈನ್ಯದೊಂದಿಗೆ ಕಾದಾಡಿದ ವೀರ ಮಹಿಳೆ. ರಾಜ್ಯಾಡಳಿತ, ಕಾನೂನು ಸುವ್ಯವಸ್ಥೆ, ತೆರಿಗೆ ನೀತಿ, ಒಳನಾಡು ವ್ಯಾಪಾರ ಹಾಗೂ ಪೋರ್ಚುಗಿಸ್ ಮೊದಲಾದವರೊಂದಿಗಿನ ಸಮುದ್ರ ವ್ಯಾಪಾರ–ವ್ಯವಹಾರಗಳನ್ನು ಸಮರ್ಥವಾಗಿ ನಡೆಸಿದ ರಾಣಿ | ಶರಜ ಹನುಮಪ್ಪ ಇವಳ ಆಸ್ಥಾನದಲ್ಲಿ ಮಂತ್ರಿಯಾಗಿದ್ದ ಬಸವಪ್ಪನಾಯಕನನ್ನು ಸಾಕಿ ಸಲಹಿದವಳು |
| **ಚನ್ನವೀರಮ್ಮ** | ಇಮ್ಮಡಿ ಬಸವಪ್ಪನಾಯಕನ ಪತ್ನಿ, | ೧೮ನೆಯ ಶತಮಾನ | ಪತಿಯೊಡನೆ ಆಳ್ವಿಕೆ ನಡೆಸುತ್ತಿದ್ದು, ಪತಿಯ ಮರಣಾನಂತರ ಮಗನ ಪರವಾಗಿ ಆಡಳಿತ ನಡೆಸಿದಳು | ಕೆಳದಿ, ಇಕ್ಕೇರಿ, ಶಿವಮೊಗ್ಗ, ಸಾಗರ ಮೊದಲಾದ ಪ್ರದೇಶಗಳು | ಕೆಳದಿ ಅರಸ ಶಾಸನ ಸಂಪುಟ ಸಂ.೨೨೪ | ಇಂಗ್ಲೀಷರು, ಪೋರ್ಚುಗೀಸರು ಮೊದಲಾದವರೊಂದಿಗೆ ವ್ಯಾಪಾರ ವ್ಯವಹಾರ ನಡೆಸಿ, ಹಲವಾರು ಯುದ್ಧಗಳನ್ನು ನಡೆಸಿದ್ದಾಳೆ. ಹಲವಾರು ದಾನಶಾಸನಗಳಲ್ಲಿ ಉಕ್ತಳಾಗಿದ್ದಾಳೆ | |
| **ರಾಣಿ ಅಮ್ಮಾನಾಗತಿ** | ಸುರಪುರ ಪಾಮನಾಯಕನ ಮಡದಿ | ೧೭ನೆಯ ಶತಮಾನ | ಪತಿಯ ನಿಧನಾನಂತರ | ಸುರಪುರ | | ಉತ್ತಮ ಆಡಳಿತಗಾರ್ತಿ. | |
| **ರಾಣಿ ಕಾಂತಮ್ಮ** (೧೮೦೧–೧೮೦೩) | ಸುರಪುರದ ಇಮ್ಮಡಿ ವೆಂಕಟಪ್ಪನಾಯಕನ ಪತ್ನಿ | ೧೮೦೧–೧೮೦೩ | ಪತಿಯ ಮರಣಾನಂತರ ಮೊಮ್ಮಗಳು ವೆಂಕಟರಂಗಮ್ಮಳನ್ನು ಸಿಂಹಾಸನದ ಮೇಲೆ ಕೂಡಿಸಿ ಅವಳ ಪರವಾಗಿ ಆಳ್ವಿಕೆ ನಡೆಸಿದಳು | ಗುಲ್ಬರ್ಗ ಸುರಪುರ | | ಉತ್ತಮ ಆಡಳಿತಗಾರ್ತಿ | |
| **ರಾಣಿ ಈಶ್ವರಮ್ಮ** | ಕೃಷ್ಣಪ್ಪನಾಯಕನ ಮಡದಿ, ನಾಲ್ವಡಿ ವೆಂಕಟಪ್ಪನಾಯಕನ ತಾಯಿ. | ೧೯ ನೆಯ ಶತಮಾನ | ಪತಿಯಮರಣಾನಂತರ ಅಪ್ರಾಪ್ತ ವಯಸ್ಕ ಮಗನ ಪರವಾಗಿ ಆಡಳಿತ ನಡೆಸುತ್ತಾಳೆ | ಗುಲ್ಬರ್ಗ ಸುರಪುರ | | ನಿಜಾಮ ಹಾಗೂ ಬ್ರಿಟಿಷ್ ಸರ್ಕಾರದ ವಿರುದ್ಧ ಹೋರಾಟ ನಡೆಸುತ್ತಾಳೆ. ತನ್ನ ಮಗ ವೆಂಕಟಪ್ಪನಾಯಕ ಬ್ರಿಟಿಷರ ವಿರುದ್ಧ ಹೋರಾಡಲು ಪ್ರೇರಣೆಯಾಗುತ್ತಾಳೆ | |

| | | | | | | | |
|---|---|---|---|---|---|---|---|
| **ಬಾಗುಳಿ ಹರಿಯಮ್ಮಾಜಿ** | ಹರಪ್ಪನ ಹಳ್ಳಿ ಪಾಳೆಯಗಾರ್ತಿ ಎರಡನೆಯ ಬಸವಂತನಾಯಕನ ಅರಸಿ | ೧೭ ನೆಯ ಶತ ಮಾನ | ಪತಿಯ ನಿಧನಾನಂತರ ರಾಜ್ಯಭಾರ ನಿರ್ವಹಿಸಿದಳು | ಹರಪ್ಪನ ಹಳ್ಳಿ, ಅಲಗಿಲವಾಡದ ಕೋಟೆ | ಉದ್ಗಟಿಯ ೧೬೪೮ರ ಶಾಸನ | ಉತ್ತಮ ಆಡಳಿತ ನಡೆಸಿದಳಲ್ಲದೆ, ಹಲವಾರು ಯುದ್ಧಗಳಲ್ಲಿಯೂ ಭಾಗಿಯಾಗಿದ್ದಾಳೆ. ಉಚ್ಚಂಗಿದುರ್ಗದ ಬಳಿ ಇವಳ ಹೆಸರಿನಲ್ಲಿ ಹರೇನಹಳ್ಳಿ–ಹರಿಯಮ್ಮನಹಳ್ಳಿ ಎಂಬ ಹಳ್ಳಿಯನ್ನೂ, ಉದ್ಗಟಿ ಎಂಬ ಊರಿನಲ್ಲಿ ಕೂಡ್ಲಿ ಶೃಂಗೇರಿ ಮಠದ ಶಾಖೆಯನ್ನೂ ಸ್ಥಾಪಿಸಿದ್ದಾಳೆ | |
| **ಸೋಮಮ್ಮಾಜಿ** | ಹರಪ್ಪನ ಹಳ್ಳಿ ಸೋಮ ಶೇಖರನ ಮಡದಿ | | ಪತಿಯ ಮರಣಾನಂತರ ದತ್ತುಮಕ್ಕಳ ಪರವಾಗಿ, ಮುಂದೆ ಮೊಮ್ಮಗನ ಪರವಾಗಿ ಆಡಳಿತ ನಡೆಸುತ್ತಾಳೆ. | ಹರಪ್ಪನ ಹಳ್ಳಿ | ಮಠದ ನಿರೂಪ | ಧಾರ್ಮಿಕ ಕಾರ್ಯಗಳಲ್ಲಿ ಗುರುತಿಸಿಕೊಂಡಿದ್ದಾಳಲ್ಲದೆ, ಉತ್ತಮ ಆಡಳಿತಗಾರ್ತಿಯಾಗಿದ್ದಳು | |
| **ರಾಮಕ್ಕ** | ಗುಮ್ಮನಾಯಕನ ಹಳ್ಳಿ ಪಾಳೆಯಗಾರ್ತಿ ನರಸಿಂಹ ನಾಯಕನ ಪತ್ನಿ | ೧೮ನೆಯ ಶತಮಾನ | ಪತಿಯೊಂದಿಗೆ ಆಳ್ವಿಕೆ | ಚಿಕ್ಕಬಳ್ಳಾಪುರ ಬಾಗೇಪಲ್ಲಿ | | ಸಾನಿ ನರಸಿಂಹಯ್ಯನೆಂಬ ದಳವಾಯಿಇಂದ ಪಾಳೆಯ ಪಟ್ಟನ್ನು ರಕ್ಷಿಸಿದ ನಾಗತಿ | |
| **ಚೆನ್ನಮ್ಮ** | ಕಿತ್ತೂರಿನ ಮಲ್ಲಸರ್ಜ ದೇಸಾಯಿಯ ಮಡದಿ, ಕಾಕತಿಯ ದೇಸಾಯಿಯ ಮಗಳು | ೧೮ನೆಯ ಶತಮಾನ | ಪತಿಯ ಅನುಪಸ್ಥಿತಿಯಲ್ಲಿಪತಿಯ ಮರಣಾನಂತರ ಮಗನೊಂದಿಗೆ ಹಾಗೂ ದತ್ತು ಮೊಮ್ಮಗನ ಪರವಾಗಿ ಆಳ್ವಿಕೆ | ಬೆಳಗಾವಿಯ ಕಿತ್ತೂರು | | ದತ್ತಕನಿಗೆ ಅಧಿಕಾರ ದೊರಕಿಸಿಕೊಡಲು ಬ್ರಿಟಿಶ್ ರೊಂದಿಗೆ ಎರಡು ಬಾರಿ ಯುದ್ಧ ನಡೆಸಿ, ಬ್ರಿಟಿಷರ ವಿರುದ್ಧ ಸ್ವಾತಂತ್ರಕ್ಕಾಗಿ ಹೋರಾಡಿದ ಮೊದಲ ಮಹಿಳೆ ಎನಿಸಿದ್ದಾಳೆ | |
| **ಚನ್ನವ್ವ ದೇಸಾಯಿಣಿ** (೧೭೧೬–೧೭೩೩) | ಸಿರಸಂಗಿ ನವಲಗುಂದ ಲಿಂಗಪ್ಪ ದೇಸಾಯಿಯ ಹಿರಿಯ ಪತ್ನಿ | ೧೮ನೆಯ ಶತಮಾನ | ಪತಿಯ ನಿಧನಾನಂತರ ಸವಣೂರ ನವಾಬ ಅಬ್ದುಲ್ ಗಫಾರ್‌ಖಾನ್‌ನ ಅದೀನ ಆಳ್ವಿಕೆ | | | ಶೌರ್ಯ, ನಿಷ್ಠೆಗೆ ಮೆಚ್ಚಿ ಸವಣೂರ ನವಾಬ, ಕರವೀರಪುರದ ಮರಾಠ ಅರಸ, ಪುಣೆಯ ಪೇಶ್ವೆ, ಮೊದಲಾದವರು ಇವಳಿಗೆ ಗ್ರಾಮಗಳನ್ನು ಉಂಬಳಿಯಾಗಿ ಕೊಟ್ಟು, ಆಳ್ವಿಕೆಗೆ ಸಹಕರಿಸಿದ್ದಾರೆ | |

| | | | | | | | |
|---|---|---|---|---|---|---|---|
| **ಗೌರಮ್ಮ** ಕ್ರಿ.ಶ.೧೭೯೩ | ಸುಗುಟೂರು ಐಮಗೌಡ ಹಿರಿಯ ರಾಣಿ | ೧೮ನೆಯ ಶತಮಾನ | ಪತಿಯ ಮರಣಾನಂತರ ಕೆಲವು ಪ್ರದೇಶ ಗಳನ್ನು ವಶ ಪಡಿಸಿಕೊಂಡು ಆಳ್ವಿಕೆನಡೆಸಿದ್ದಾಳೆ | ಪಾಲ್ಕೋಡು, ಮಾರಂಡನಹಳ್ಳಿ | | ಪತಿಯ ಮರಣಾನಂತರ ಬ್ರಿಟಿಶ್ ರೊಂದಿಗೆ ಹೋರಾಡಿ ಸಂಸ್ಥಾನದ ಪಟ್ಟ ದೊರಕಿಸಿಕೊಂಡಳಲ್ಲದೆ, ಮುಂದೆ ಚಿಕ್ಕರಾಯನೆಂಬ ಬಾಲಕನನ್ನು ದತ್ತು ಸ್ವೀಕಾರ ಮಾಡಿ, ಆನೇಕಲ್‌ಸಂಸ್ಥಾನದ ಉತ್ತರಾಧಿಕಾರಿಯನ್ನಾಗಿಸಿದಳು | |
| **ದೇವ ರಾಜಮ್ಮ/ ದೇವಾಜಮ್ಮ** ಸು.ಕ್ರಿ.ಶ.೧೬೮೫–೧೭೧೪ | ಮೈಸೂರು ಚಿಕ್ಕದೇವರಾಜ ಒಡೆಯರ್‌ನ ರಾಣಿ, ಯಳಂದೂರಿನ ರಾಜಕುಮಾರಿ | ೧೭ನೆಯ ಶತಮಾನ | ಪತಿಯ ಮರಣಾನಂತರ ಮಗನ ಪರವಾಗಿ ಆಳ್ವಿಕೆ | ಮೈಸೂರು ಸಂಸ್ಥಾನ | ಚಿಕ್ಕದೇವರಾಜನ ಕಾವ್ಯಗಳಲ್ಲಿ ಹಾಗೂ ಶಾಸನಗಳಲ್ಲಿ ಉಲ್ಲೇಖಿತಳಾಗಿದ್ದಾಳೆ. | ಪತಿಯ ಮರಣಾನಂತರ ಸಿಂಹಾಸನ ಇತರರ ಪಾಲಾಗುವುದನ್ನು ತಪ್ಪಿಸಲು ಕಿವುಡ ಮತ್ತು ಮೂಕನಾದ ಮಗ ಎರಡನೆಯ ಕಂಠೀರವ ನರಸರಾಜ ಒಡೆಯರ್‌ನನ್ನು ಪಟ್ಟಕ್ಕೆ ತಂದಳು | ಸಂಚಿಯ ಹೊನ್ನಮ್ಮನ ಕಾವ್ಯ ರಚನೆಗೆ ಮೂಲ ಪ್ರೇರಣೆಯಾದವಳು, |
| **ಲಕ್ಷ್ಮಿ ಅಮ್ಮಣ್ಣಿ/ ಲಕ್ಷ್ಮಮ್ಮಣ್ಣಿ** ಸು.ಕ್ರಿ.ಶ.೧೭೪೧– | ಮೈಸೂರು ಎರಡನೆಯ ಕೃಷ್ಣರಾಜ ಒಡೆಯರ್‌ನ ಪಟ್ಟಮಹಿಷಿ, ಬೆಟ್ಟದಕೋಟೆಯ ಕತ್ತಿಗೋಪಾಲರಾಜ ಅರಸ್‌ನ ಮಗಳು | ೧೮ನೆಯ ಶತಮಾನ | ಪತಿಯೊಂದಿಗೆ ಆಡಳಿತದಲ್ಲಿ ಭಾಗವಹಿಸುತ್ತಿದ್ದಳು | ಮೈಸೂರು ಸಂಸ್ಥಾನ | | ಪತಿ ಹಾಗೂ ಇಬ್ಬರು ಮಕ್ಕಳ ಮರಣಾನಂತರ ಖಾಸಾ ಚಾಮರಾಜ ಒಡೆಯರ್ ನನ್ನು ದತ್ತು ಪಡೆಯುತ್ತಾಳೆ. ಟಿಪ್ಪುವಿನ ಪ್ರಾಬಲ್ಯದಿಂದ ಮೈಸೂರು ಸಿಂಹಾಸನವನ್ನು ಮರಳಿ ಪಡೆವಲ್ಲಿ ಯಶಸ್ವಿಯಾಗುತ್ತಾಳೆ. ಟಿಪ್ಪುವಿನಿಂದ ಗೃಹಬಂಧನಕ್ಕೆ ಒಳಗಾಗಿದ್ದರೂ ಮರಾಠ, ನಿಜಾಮ, ಬ್ರಿಟಿಶ್‌ರನ್ನು ಸಂಪರ್ಕಿಸಿ ಚಾಣಕ್ಷತನ ತೋರಿದವಳು | |
| **ಕೆಂಪ ನಂಜಮ್ಮಣ್ಣಿ** ವಾಣಿವಿಲಾಸ ಸನ್ನಿಧಾನ | ಚಾಮರಾಜೇಂದ್ರ ಒಡೆಯರ್‌ನ ಮಹಿಷಿ, ಕಳಲೆ ಅರಸು ಮನೆತನದ ಮಗಳು. ನಾಲ್ವಡಿ ಕೃಷ್ಣರಾಜ ಒಡೆಯರ್‌ನ ತಾಯಿ | ೧೯ನೆಯ ಶತಮಾನ | ಪತಿಯೊಡನೆ ಆಡಳಿತದಲ್ಲಿ ಭಾಗಿಯಾಗಿದ್ದು, ಪತಿಯ ಅಕಾಲಿಕ ಮರಣದ ನಂತರ ೧೦ವರ್ಷದ ಮಗನ ಪರವಾಗಿ ಆಳ್ವಿಕೆ ನಡೆಸಿದವಳು | ಮೈಸೂರು ಸಂಸ್ಥಾನ | | ಗಣಿಗಾರಿಕೆಗೆ ಆದ್ಯತೆ, ಕೃಷಿ ಇಲಾಖೆ ಸ್ಥಾಪನೆ, ಶಿವನಸಮುದ್ರದಲ್ಲಿ ಜಲವಿದ್ಯುತ್ ಆಗರ ಸ್ಥಾಪನೆ, ಭಾರತದಲ್ಲಿಯೇ ಮೊಟ್ಟಮೊದಲು ನೀರನ್ನು ಬಳಸಿ ವಿದ್ಯುತ್ ಉತ್ಪಾದಿಸುವ ಯಂತ್ರಾಗಾರ ಸ್ಥಾಪನೆ, ಚಿತ್ರದುರ್ಗದಲ್ಲಿ 'ವಾಣಿವಿಲಾಸ–ಸಾಗರ' ಎಂಬ ಹೆಸರಿನ ಅಣೆಕಟ್ಟಿನ ನಿರ್ಮಾಣ, ಕೆರೆ–ಸೇತುವೆಗಳ ನಿರ್ಮಾಣ, ೧೮೯೫ರಲ್ಲಿ ಕಾಣಿಸಿಕೊಂಡ ಭೀಕರ ಪ್ಲೇಗ್–ಕ್ಷಯರೋಗ ನಿರ್ಮೂಲನಕ್ಕೆಂದು ಹೊಸಬಡಾವಣೆ ಯೋಜನೆಗಳು, ಶಿಕ್ಷಣಕ್ಕೆ ಪ್ರೋತ್ಸಾಹ, ವಿದ್ಯಾರ್ಥಿನಿಯರಿಗೆ ಪ್ರತ್ಯೇಕ ಶಾಲಾ–ಕಾಲೇಜು, ಅಂಬಾವಿಲಾಸ ಅರಮನೆಯ ನಿರ್ಮಾಣ | |

ಈ ಮೇಲಿನ ಪಟ್ಟಿಕೆಯಲ್ಲಿ ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ಅರಸಿಯರೆಲ್ಲರ ಮಾಹಿತಿಗಳನ್ನು ಸಾಧ್ಯವಾಗುವ ಮಟ್ಟಿಗೆ ಒದಗಿಸುವ ಪ್ರಯತ್ನ ನಡೆಸಲಾಗಿದೆ. ಶಾಸನಗಳು ಹಾಗೂ ಕಾವ್ಯಗಳು ದೊರಕಿಸಿಕೊಡುವ ಮಾಹಿತಿಗಳನ್ನು ಅವಲಂಬಿಸಿ ಈ ಮಾಹಿತಿಗಳನ್ನು ಕ್ರೋಢೀಕರಿಸಲಾಗಿದೆ. ಇಲ್ಲಿ ಅರಸಿಯರೇ ಹೊರಡಿಸಿರುವ ಶಾಸನಗಳನ್ನು ಪಟ್ಟಿಮಾಡುವ ಪ್ರಯತ್ನ ಮಾಡಲಾಗಿದೆಯಾದರೂ, ಆಳ್ವಿಕೆ ನಡೆಸಿದ ಎಲ್ಲ ಅರಸಿಯರ ಶಾಸನಗಳೂ ದೊರಕುವುದಿಲ್ಲ. ಕೆಲವು ಅರಸಿಯರು ಆಳ್ವಿಕೆ ನಡೆಸಿದ ಕುರಿತಾಗಿ ನೇರವಾಗಿ ಉಲ್ಲೇಖಿಸುವ ಶಾಸನಗಳು ಲಭಿಸಿಲ್ಲ ಆದರೆ ಅರಸಿಯರ ಅಧಿಕಾರಿಗಳು, ಸಾಮಂತರು ಎಂದು ಕರೆದುಕೊಳ್ಳುವವರು ಹೊರಡಿಸಿರುವ ಶಾಸನಗಳಿಂದ ಆ ರಾಣಿಯರು ಆಳ್ವಿಕೆ ನಡೆಸುತ್ತಿದ್ದರೆನ್ನುವುದು ತಿಳಿದು ಬರುತ್ತದೆ. ಆದರೆ ಅವರು ಆಳ್ವಿಕೆ ನಡೆಸುತ್ತಿದ್ದ ಪ್ರದೇಶ ಮೊದಲಾದ ವಿವರಗಳು ನಿಖರವಾಗಿ ತಿಳಿದು ಬರುವುದಿಲ್ಲ ಉದಾಹರಣೆಗೆ ಮಾಚೆಯನಾಯಕ ತನ್ನನ್ನು ಮಾಳಲದೇವಿಯ ಪಾದಪದ್ಮೋಪಜೀವಿ ಎಂದು ಕರೆದುಕೊಂಡಿದ್ದಾನೆ.[೧] ಮಾಳಲದೇವಿಯು ಸೋವಿದೇವನ ಅರಸಿ ಎಂಬ ಉಲ್ಲೇಖ ಮಾತ್ರ ದೊರಕುತ್ತದೆ, ಇವಳ ಆಳ್ವಿಕೆಯ ಇತರ ವಿವರಗಳು ದೊರಕುವುದಿಲ್ಲ. ಇದೇ ರೀತಿ ವಿಕ್ರಮಾದಿತ್ಯನ ಅರಸಿ ಧಾರಲಾದೇವಿಯ ಅಧಿಕಾರಿಗಳ ದಾನಶಾಸನದಲ್ಲಿ ಈಕೆಯ ಉಲ್ಲೇಖ ದೊರೆತಿದೆ. ಇಂತಹ ಅಪೂರ್ಣಮಾಹಿತಿಗಳನ್ನೂ ಇಲ್ಲಿ ದಾಖಲುಮಾಡಿದೆ.

ರಾಜ–ರಾಣಿಯರು ಜೊತೆ ಜೊತೆಯಾಗಿ ಆಡಳಿತ ನಡೆಸಿದ ಉದಾಹರಣೆ ಪಾಶ್ಚಿಮಾತ್ಯ ರಾಷ್ಟ್ರದಲ್ಲಿ ಸಿಗುವುದು ಹದಿನೇಳನೆಯ ಶತಮಾನದಿಂದೀಚೆಗೆ. ಹದಿನೇಳನೆಯ ಶತಮಾನದಲ್ಲಿ ಇಂಗ್ಲೆಂಡಿನ ರಾಣಿ ಮೇರಿ ಹಾಗೂ ವಿಲಿಯಮ್‌ರು ಸಮಾನ ಅಧಿಕಾರ ಹೊಂದಿ ಜಂಟಿಯಾಗಿ ಆಳ್ವಿಕೆ ನಡೆಸಿದ ಸಂದರ್ಭವೇ ಅಲ್ಲಿನ ಮೊತ್ತಮೊದಲ ದಾಖಲೆಯಾಗಿದೆ.[೨] ಆದರೆ ಅದಕ್ಕೂ ಸುಮಾರು ಸಾವಿರ ವರ್ಷಗಳ ಹಿಂದೆಯೇ ಇಂತಹ ವ್ಯವಸ್ಥೆ ಕರ್ನಾಟಕದ ಇತಿಹಾಸದಲ್ಲಿ ಕಂಡುಬರುತ್ತದೆ. ಕರ್ನಾಟಕದಲ್ಲಿ ಶಾತವಾಹನರ ಕಾಲದಿಂದಲೇ ಅರಸಿಯರ ಉಲ್ಲೇಖ ಶಾಸನಗಳಲ್ಲಿ ದೊರಕುತ್ತಿವೆ. ಕರ್ನಾಟಕವನ್ನಾಳಿದ ಮೊದಲ ಅರಸು ಮನೆತನ ಎಂದು ಗುರುತಿಸುವ ಕದಂಬವಂಶದ ಅರಸಿಯರು ದಾನಶಾಸನಗಳಲ್ಲಿ ಉಕ್ತರಾಗಿದ್ದಾರೆ. ಏಳನೆಯ ಶತಮಾನದಲ್ಲಿಯೇ ವಿಜಯಭಟ್ಟಾರಿಕೆ ಪತಿಯೊಡನೆ ಹಾಗು ಪತಿಯ ಮರಣಾನಂತರ ಆತನ ಸಹೋದರನ ಆಳ್ವಿಕೆಯಲ್ಲಿ ತನ್ನದೇ ಆದ ಪ್ರದೇಶಗಳಲ್ಲಿ ಸ್ವತಂತ್ರವಾಗಿ ಆಡಳಿತ ನಡೆಸುತ್ತಿದ್ದಳು. ಇವಳು ಹೊರಡಿಸಿರುವ ಶಾಸನಗಳೂ ಲಭಿಸಿವೆ.

ಈ ಮೇಲಿನ ಪಟ್ಟಿಕೆಯಲ್ಲಿ ಸ್ವತಂತ್ರವಾಗಿ, ಜಂಟಿಯಾಗಿ ಆಳ್ವಿಕೆ ನಡೆಸಿದ ನೂರಾರು ಅರಸಿಯರ ಮಾಹಿತಿ ಅವರ ಕೊಡುಗೆಗಳೊಂದಿಗೆ ದಾಖಲಾಗಿದೆ. ಆಳ್ವಿಕೆ ನಡೆಸದೆ ಕೊಡುಗೆಗಳನ್ನು ನೀಡಿದ ಅರಸಿಯರು ಅಸಂಖ್ಯಾತವಾಗಿ ಕಂಡುಬರುತ್ತಾರೆ. ಅವರೆಲ್ಲರ ಕೊಡುಗೆಗಳನ್ನೂ ಸಮಗ್ರವಾಗಿ ದಾಖಲಿಸುವುದು ಕಷ್ಟಸಾಧ್ಯವಾಗುವುದರಿಂದ ಕೆಲವು ವಿಭಿನ್ನ ಕಾಲದ ಅರಸಿಯರನ್ನು ಮಾತ್ರ ಈ ಮುಂದಿನ ಪಟ್ಟಿಕೆಯಲ್ಲಿ ಹೆಸರಿಸುವ ಪ್ರಯತ್ನ ನಡೆಸಲಾಗಿದೆ.

## ಆಳ್ವಿಕೆ ನಡೆಸದ ಅರಸಿಯರು

| ಅರಸಿ | ರಾಜಮನೆತನ | ಕಾಲ | ಶಾಸನ | ದಾನ | ಸಾಂಸ್ಕೃತಿಕ ಕೊಡುಗೆ |
|---|---|---|---|---|---|
| **ಶಿವಸ್ಕಂದ ನಾಗಶ್ರೀ** | ಚುಟುಕುಲಾನಂದ ಹಾರತೀಪುತ್ರ ವಿಣ್ಹುಕಡ ಸಾತಕರ್ಣಿಯ ಮಗಳು | | ಲಿಸ್ಟ ಆಫ್ ಬ್ರಾಹ್ಮಿ ಇನ್ಸ್ಕ್ರಿಪ್ಶನ್ಸ ಸಂ.೧೧೯೫ | ಬನವಾಸಿಯಲ್ಲಿ ನಾಗಪ್ರತಿಮೆಯನ್ನು ಮಾಡಿಸಿ ಒಂದು ಕೊಳ ಮತ್ತು ವಿಹಾರವನ್ನು ಮಾಡಿಸಿದ್ದಾಳೆ | |
| **ಪ್ರಭಾವತಿ** | ಕದಂಬ ಮೃಗೇಶವರ್ಮನ ರಾಣಿ | | M.A.R.1911 p.35 | ಪತಿಯ ಮರಣಾನಂತರ ಮಗ ರವಿವರ್ಮನ ಆಳ್ವಿಕೆಯಲ್ಲಿ ಪ್ರಣವೇಶ್ವರ ದೇವಾಲಯದಲ್ಲಿ ದಾನನೀಡಿ ಶಾಸನಹಾಕಿಸಿದ್ದಾಳೆ | |
| **ಕಾದಂಬ ಮಹಾದೇವಿ** | ಬಾದಾಮಿ ಚಳುಕ್ಯ ಮಂಗಲೇಶನ ರಾಣಿ ಆಳುಪ ರಾಜಕುಮಾರಿ | ೬ನೆಯ ಶತಮಾನ | ಎ.ಪಿ.ಜಿ.ಎ.ಎಸ್,–೬ ಪು.೧೪–೧೫ | ತನ್ನ ತಂದೆಯ "ಅಕ್ಷಯಫಲ" (ಮೋಕ್ಷ)ಕ್ಕಾಗಿ ದಾನ ಮಾಡಿಸಿದ್ದಾಳೆ. | |
| **ಅಂಬೇರಾ** | ಇಮ್ಮಡಿ ಪೊಲೆಕೇಶಿಯ ಮಗಳು | ೬ನೆಯ ಶತಮಾನ | I.A.ಸಂ.VIII ಪು. 89-96 & IX P 304 | ದಾನ | |
| **ಗಂಗಮಹಾದೇವಿ** | ಬಾದಾಮಿ ಚಳುಕ್ಯ ವಿಕ್ರಮಾದಿತ್ಯನ ರಾಣಿ, ಗಂಗ ರಾಜಕುಮಾರಿ | ೭ನೆಯ ಶತಮಾನ | E.I. ಸಂ.x ನಂ.೨೨ ಗದ್ವಾಲತಾಮ್ರಪಟ (ಕ್ರಿ.ಶ.೬೭೪) | ಪಲ್ಲವರ ಮೇಲೆ ಜಯ ಸಾಧಿಸಿದ ನಂತರ ಯುದ್ಧರಂಗದಲ್ಲಿ ದಾನ | |
| **ವಿನಯವತಿ** | ಬಾದಾಮಿ ಚಳುಕ್ಯ ವಿನಯಾದಿತ್ಯನ ರಾಣಿ | ೭ ನೆಯ ಶತಮಾನ | ೬೯೮–೯೯ರಲ್ಲಿ | ತ್ರಿಕೂಟಾಚಲ* ವೆಂದೇ ಪ್ರಸಿದ್ಧಿ ಪಡೆದ ಜಂಬುಲಿಂಗ ದೇವಾಲ ನಿರ್ಮಾಣ | * ಒಂದೇ ಅಧಿಷ್ಠಾನದಲ್ಲಿ ಮೂರು ಗರ್ಭಗೃಹಗಳನ್ನು ಪ್ರತಿಷ್ಠಾಪಿಸುವ ತ್ರಿಕೂಟಾಚಲ ದೇವಾಲಯಗಳಲ್ಲಿ ಇದೇ ಮೊದಲಿನದೆಂದು ವಾಸ್ತುಶಿಲ್ಪಿಗಳ ಅಭಿಪ್ರಾಯ |
| **ಕುಂಕುಮ ಮಹಾದೇವಿ** | ಆಳುಪ ರಾಣಿ ಚಿತ್ರವಾಹನನ ಅರಸಿ ಬಾದಾಮಿ ಚಳುಕ್ಯ ರಾಜಕುಮಾರಿ | ೬–೭ನೆಯ ಶತಮಾನ | ಶಿಗ್ಗಾಂವ್ ತಾಮ್ರಶಾಸನ E.I.ಸಂ.XXXII. p.317 ff | ಅಂದಿನ ಕಾಲದ ಪ್ರತಿಷ್ಠಿತ ಬಸದಿ ಎನಿಸಿದ ಆನೆಸಜ್ಜೆ ಬಸದಿಯ ನಿರ್ಮಾಣ | |
| **ತ್ರೈಲೋಕ್ಯ ಮಹಾದೇವಿ** | ಬಾದಾಮಿ ಚಳುಕ್ಯ ವಿಜಯಾದಿತ್ಯನ ರಾಣಿ | ೮ ನೆಯ ಶತಮಾನ | E.I. ಸಂ.III ನಂ.೧ ಪಟ್ಟದಕಲ್ಲು (ತಾ) ಬದಾಮಿ (ಕ್ರಿ.ಶ.೭೫೪) | ಪಟ್ಟದಕಲ್ಲಿನಲ್ಲಿ ತ್ರೈಲೋಕೇಶ್ವರ ದೇವಾಲಯ ನಿರ್ಮಾಣ ಹಾಗು ನಿರ್ವಹಣೆಗಾಗಿ ದಾನ | |
| **ಬೃಹದ್ದೇವಿ (ಜ್ಯೇಷ್ಠಾದೇವಿ)** | ಗಂಗ ಅವನೀತನ ರಾಣಿ, ಪುನ್ನಾಟ ರಾಜಕುಮಾರಿ | | E.C. vii ಶೃಂಗೇರಿ, E.C. ಸಂ IX ದೊಡ್ಡಬಳ್ಳಾಪುರ 67 | ಭೂ ದಾನ | |

| | | | | | |
|---|---|---|---|---|---|
| **ನಾಗಿಯಕ್ಕ** | ಬಾಪ್ಪುರ ಕುಲ | ೧೦ ನೆಯ ಶತಮಾನ | ಕ್ರಿ.ಶ.೯೪೯ರ ಬಳ್ಳಿಗಾವೆಯ ಶಾಸನ ೧೦ನೆಯ ಶತಮಾನದಲ್ಲಿನ ಬೌದ್ಧ ಮತದ ಕುರಿತಾಗಿ ತಿಳಿಸುವ ಇದೊಂದು ಮಹತ್ವದ ಶಾಸನವಾಗಿದೆ | ಬಳ್ಳಿಗಾವೆಯಲ್ಲಿ ತಾರಾಭಗವತಿಯ ಮಂದಿರವನ್ನು ಸ್ಥಾಪಿಸಿದಳು. | ಬೌದ್ಧರ ಅಧಿದೇವತೆಯ ಈ ವಿಗ್ರಹವು ಕಾನಿಷ್ಕನ ಕಾಲದ ಸಮ್ಮಿಶ್ರಣ ಕಲೆಯನ್ನು ಒಳಗೊಂಡು ಅಪ್ರತಿಮ ಕಲಾಕೃತಿ ಎನಿಸಿದೆ |
| **ಮಾಳಲದೇವಿ** | ಹಾನುಗಲ್ಲು ಕದಂಬ ಕೀರ್ತಿವರ್ಮನ ಪಟ್ಟಮಹಾದೇವಿ | ೧೦೭೫ | E.C. ಸಂ VIII ಸೊರಬ ೨೬೨ ಮಲ್ಲಾಪುರದ ಶಾಸನ | ಕುಪ್ಪಟೂರಿನ ಶ್ರೀಪಾರ್ಶ್ವನಾಥ ಜಿನಾಲಯ ನಿರ್ಮಾಣ | ಕವಿ ಬಮ್ಮರಹರಿಯಣ್ಣ ಇವಳ ಆಶ್ರಯದಲ್ಲಿ ಶಾಸನಪದ್ಯ ರಚಿಸಿದ್ದಾನೆ |
| **ಕಮಲಾದೇವಿ** | ಹಾನುಗಲ್ಲು ಕದಂಬ ಶಿವಚಿತ್ತ ಪೆರ್ಮಾಡಿಯ ಪಿರಿಯರಸಿ | ೧೧೭೪ | ಜೆ.ಬಿ.ಆರ್.ಎಸ್ ೯ | ಕಿತ್ತೂರಿನ ಸಮೀಪದ ದೇಗಾಂವಿಯ ಕಮಲ ನಾರಾಯಣ ದೇವಾಲಯ ಮತ್ತು ಅಲ್ಲಿ ಅಗ್ರಹಾರ ನಿರ್ಮಾಣ | ಕವಿ ತಿಪ್ಪಣ್ಣೋಜ ಇವಳ ಆಶ್ರಯದಲ್ಲಿ ಶಾಸನಪದ್ಯ ರಚಿಸಿದ್ದಾನೆ |
| **ನೀಜಿಯಬ್ಬರಸಿ / ನೀಜಿಕಬ್ಬರಸಿ** | ಸವದತ್ತಿ ರಟ್ಟರು ಪೃಥ್ವಿರಾಮ/ಪಿಟ್ಟಿಗನ ಪಿರಿಯರಸಿ | ೧೦ ನೆಯ ಶತಮಾನ | | ಸುಗಂಧವರ್ತಿಯ (ಸೌದತ್ತಿ) ಬಸದಿಗೆ ಭೂದಾನ ನೀಡಿದ್ದಾಳೆ | |
| **ಲಕ್ಷ್ಮಮ್ಮ ಗಾವುಂಡಿ** | ಮಾಚಿಗಾವುಣ್ಡನ ಮಗಳು | ೧೧ ನೆಯ ಶತಮಾನ | E.C ಸಂ IX ಹೊಸಕೋಟೆ ೧೧ ಬೆಂಗಳೂರು ಜಿಲ್ಲೆ, ಕ್ರಿ.ಶ.೧೦೪೧ | ಬೆಂಗಳೂರು ಜಿಲ್ಲೆ ಹೊಸಕೋಟೆ ತಾಲೂಕಿನ ಸರಕುನೂರು(ಸರಕೂರು) | ತುರುಗಾಳಗದಲ್ಲಿ ಹೋರಾಡಿದವಳು |
| **ಪರಿಯಲದೇವಿ** ಕ್ರಿ.ಶ.೧೦೬೩ | ರಕ್ಕಸಪೊಯ್ಸಳ ವಿನಯಾದಿತ್ಯನ ರಾಣಿ | ೧೧ನೆಯ ಶತಮಾನ | E.C. XI (ಪರಿ) ಮೂಡಿಗೆರೆ – ೨೨೫ | ಮುಳ್ಳೂರ ಗುಣಸೇನಪಂಡಿತರಿಗೆ ಸೊಸೆವೂರಿನ ಬಸದಿ ಸ್ಥಾನವನ್ನು ಒಪ್ಪಿಸಿದ್ದಾಳೆ | |
| **ಚಂದಲದೇವಿ** | ಹೊಯ್ಸಳ ವಿಷ್ಣುವರ್ಧನನ ಕಿರಿಯರಸಿ. ಪೃಥ್ವಿಕೊಂಗಾಳ್ವನ ಮಗಳು | ೧೧ನೆಯ ಶತಮಾನ | E.C. ಕೆ.ಆರ್.ಪೇಟೆ ೨೧ | ತನ್ನ ತಂದೆಯಿಂದ ತನಗೆ ಬಳುವಳಿಯಾಗಿ ಬಂದಿದ್ದ ಮಂದಗೆರೆಯ ಕಾವನಹಳ್ಳಿಯನ್ನು ದಾನಕೊಟ್ಟಿದ್ದಾಳೆ | |
| **ಸೋಮಲದೇವಿ** | ಕ.ಚಾಲುಕ್ಯ ಮೊದಲನೆಯ ಜಯಸಿಂಹನ ರಾಣಿ | ೧೧ನೆಯ ಶತಮಾನ | ಕವಿಶಾಸಂ–೭ ರಾಯಚೂರು ಮಾನ್ವಿ ೯೧ ; ಕವಿಶಾಸಂ–೭ ರಾಯಚೂರು ಮಾನ್ವಿ ೧೦೦ ಕ್ರಿ.ಶ.೧೦೩೫) | ಏತಗಿರಿ (ಯಾದಗಿರಿ), ಪೊಟ್ಟಲಗೆರೆ ನೆಲೆವೀಡುಗಳಲ್ಲಿದ್ದಾಗ ಬಂಕೇಶ್ವರ ದೇವರಿಗೆ ಗಾಣ, ತೋಟ ದಾನ | |
| **ಸೋಮಲದೇವಿ** | ಕ.ಚಾಲುಕ್ಯ ಮೊದಲನೆಯ ಸೋಮೇಶ್ವರನ ರಾಣಿ | ೧೧ನೆಯ ಶತಮಾನ | ಕವಿಶಾಸಂ–೭ ರಾಯಚೂರು ಮಾನ್ವಿ ೮೧ (ಕ್ರಿ.ಶ.೧೦೨೮) ಕವಿಶಾಸಂ–೭ ರಾಯಚೂರು ಮಾನ್ವಿ ೮೭ (ಕ್ರಿ.ಶ.೧೦೨೮) | ಬಲ್ಲಟಗಿಯ ದೇವಾಲಯಕ್ಕೆ ಹಾಗೂ ಬಸದಿಗೆ ಹೊಲ, ಮನೆ, ಗಾಣ ದಾನ | ಶಾಸನಗಳಲ್ಲಿ ಇವಳ ಕೈಕೆಳಗಿನ ಅಧಿಕಾರಿಗಳ ಉಲ್ಲೇಖವಿದ್ದರೂ, ಇವಳು ಆಳ್ವಿಕೆ ನಡೆಸುತ್ತಿದ್ದುದಕ್ಕೆ ಸ್ಪಷ್ಟ ಆಧಾರ ದೊರಕುವುದಿಲ್ಲ. |
| **ಬಿಜ್ಜಳದೇವಿ** | ಕ.ಚಾಲುಕ್ಯ ಮೊದಲನೆಯ ಸೋಮೇಶ್ವರನ ಅರಸಿ | ೧೧ನೆಯ ಶತಮಾನ | ಕವಿಶಾಸಂ–೭ ರಾಯಚೂರು ಮಾನ್ವಿ ೧೬ (ಕ್ರಿ.ಶ.೧೦೩೩) | ಅಗ್ರಹಾರ ತಡಕಲ್ಲಿನಲ್ಲಿ ದೇವಾಲಯಕ್ಕೆ ಭೂದಾನ | |

| | | | | | |
|---|---|---|---|---|---|
| **ಸೋಮಲದೇವಿ** 'ಸಹಜವೆಡಂಗಿ' | ಕ.ಚಾಲುಕ್ಯ ಮೊದಲನೆಯ ಸೋಮೇಶ್ವರನ ಮಗಳು | ೧೧ನೆಯ ಶತಮಾನ | ಕವಿಶಾಸಂ.೭ ರಾಜಚೂರು, ಲಿಂಗಸಗೂರು ೪೫ (ಕ್ರಿ.ಶ.೧೦೨೭) | ಬಸದಿಗೆ ಭೂದಾನ ಹಾಗೂ ಗಾಣ, ಹೂತೋಟ ದಾನ ನೀಡಿದ್ದಾಳೆ | |
| **ಕಂಚಲ ಮಹಾದೇವಿ** ಶೃಂಗಾರ ವಿದ್ಯಾಧರಿ, ಸಕಳಕಳಾಧರಿ | ಕ.ಚಾಲುಕ್ಯ ಎರಡನೆಯ ಸೋಮೇಶ್ವರನ ಅರಸಿ | ೧೧ನೆಯ ಶತಮಾನ | SII ಸಂ ix-i 134. ನಂದಿಕೋಟಕೂರು (ತಾ) ಕರ್ನೂಲ (ಕ್ರಿ.ಶ.೧೦೬೯) | ಶ್ರೀಶೈಲದಲ್ಲಿ ದಾನ | |
| **ಪಂಪಾದೇವಿ** | ಕ.ಚಾಲುಕ್ಯ ಎರಡನೆಯ ಸೋಮೇಶ್ವರನ ಅರಸಿ | ೧೧ನೆಯ ಶತಮಾನ | ಕವಿಶಾಸಂ–೭ ರಾಯಚೂರು ಮಾನ್ವಿ ೫೫ (ಕ್ರಿ.ಶ.೧೦೬೯) | ಕಪ್ಪಕಲ್ಲ ಭೋಗೇಶ್ವರ ದೇವರಿಗೆ ಭೂದಾನ, ಎಣ್ಣೆಯ ಗಾಣಗಳನ್ನು ದಾನವಾಗಿ ನೀಡಿದ್ದಾಳೆ | |
| **ಪದ್ಮಲದೇವಿ** | ಕ.ಚಾಲುಕ್ಯ ಜಯಸಿಂಹನ ಅರಸಿ | ೧೧ನೆಯ ಶತಮಾನ | | ಕರಡಿಕಲ್ಲು ೩೦೦೦ರ ಬಳಿ ಗೋವಂತಿಗೆಯ ಸ್ವಯಂಭು ಕಲಿದೇವ ಸ್ವಾಮಿಗೆ ದಾನ | |
| **ಸುಗ್ಗಲದೇವಿ** ಕಲಿಕಾಲಸರಸ್ವತಿ, ಆಶ್ರಿತಜನ ಕಲ್ಪಲತೆ, ರೂಪವಿದ್ಯಾಧರಿ | ಕ.ಚಾಲುಕ್ಯ ಜಯಸಿಂಹನ ಅರಸಿ | ೧೧ನೆಯ ಶತಮಾನ | SII ಸಂ xx ೨೩ ದೇವೂರು (ತಾ) ಸಿಂದಗಿ (ಕ್ರಿ.ಶ.೧೦೨೯) | ದೇವಾಪುರದ ಮಾರಸಿಂಗೇಶ್ವರ ದೇವರ ಅಂಗಭೋಗಕ್ಕೆ, ತಪೋ ಧನರಿಗೆ, ಪಂಡಿತರಿಗೆ, ವಿದ್ಯಾರ್ಥಿಗಳಿಗೆ ದತ್ತಿ | |
| **ಕಂಚಿಕಬ್ಬೆ** | ಧನಗರ ಕರಿಯ ಕೇತಿಮಯ್ಯನ ಅರಸಿ | ೧೦ ನೆಯ ಶತಮಾನ | ಕ್ರಿ.ಶ.೯೮೦ರ ಶಾಸನ E I . XVI p.3 | ಸವದತ್ತಿ ತಾಲ್ಲೂಕಿನ ಸೋಗಲದ ಸುವರ್ಣಾಕ್ಷಿ ದೇವರಿಗೆ ದಾನ | ಕವಿ ಕಮಲಾದಿತ್ಯ ಇವಳ ಆಶ್ರಯದಲ್ಲಿ ಶಾಸನಪದ್ಯ ರಚಿಸಿದ್ದಾನೆ |
| **ಪೊಲ್ಲಿಕಬ್ಬೆ** | ಸಾಮಂತ ಜೋಗಭೂಪನ ಅರಸಿ | | ಕೊರ್ಗಟನೂರ ಕರ್ನಾಟಕ ವಿವಿ 'ಕರ್ನಾಟಕ ಭಾರತಿ' ನವೆಂಬರ್ ೧೯೭೦. ಶಾಸನ.ಸಂ ಆರ್.ಎನ್.ಗುರವ | ತ್ರೈಪುರುಷ ದೇವರ ಪೂಜೆಗೆ, ಅಲ್ಲಿನ ಶಾಲೆಯ ಉಪಾಧ್ಯಾಯರಿಗೆ ಹಾಗೂ ವಿದ್ಯಾರ್ಥಿಗಳ ಊಟ–ಉಡಿಗೆಗಳಿಗಾಗಿ ದತ್ತಿ | |
| **ಜಕ್ಕಿಯಬ್ಬೆ** | ಸಾಮಂತ ಕೇತೆಯ ನಾಯಕನ ಮಡದಿ, ಹೊಯ್ಸಳ ವಿಷ್ಣುವರ್ಧನನ ಅರಸಿ ಚಿಕ್ಕಶಾಂತಲೆಯ ತಾಯಿ | ೧೧ನೆಯ ಶತಮಾನ | E.C. v ಹಾಸನ ೮೯ ಯೆಲಗುಂದ (ಕ್ರಿ.ಶ.೧೦೩೭) | ಮಗಳು ಚಿಕ್ಕಶಾಂತಲೆ, ಮೊಮ್ಮಗಳು ಬೊಪ್ಪಲೆಯರ ಪರೋಕ್ಷವಿನಯವಾಗಿ ಎಲೆಗುಂದದಲ್ಲಿ ಶಾಂತಲೇಶ್ವರ, ಬೊಪ್ಪಲೇಶ್ವರ ದೇವಾಲಯ, ತಟಾಕಗಳ ನಿರ್ಮಾಣ | |
| **ಸುಗ್ಗಿಯಬ್ಬರಸಿ** | ಗಂಗ ಮಾರಸಿಂಗನ ಪತ್ನಿ | ೧೦ ನೆಯ ಶತಮಾನ | E.C. VIII ಸಂ.೨೩೩ ವುದ್ರಿ ಗ್ರಾಮ, ಆನವಟ್ಟಿ | ಉದ್ರಿಯಲ್ಲಿ ಬಸದಿ ನಿರ್ಮಾಣ | |
| **ಮಾಯಾದೇವಿ** | ಕಲ್ಯಾಣಿ ಚಾಲುಕ್ಯರ ಸಾಮಂತ ಬಾಚಯ್ಯನಾಯಕನ ಅರಸಿ | ಕ್ರಿ.ಶ.೧೧೪೧ರ ತಿಳಿಸುತ್ತದೆ. | ನೇಸರಗಿ ಶಾಸನ | ನೇಸರಗಿಯಲ್ಲಿ ಮಾಣಿಕೇಶ್ವರ ದೇವಾಲಯ ನಿರ್ಮಾಣ | |
| **ಅಳಿಯಾದೇವಿ** | ಸಾಂತರು ಅರಸು ಮನೆತನದ ಕಾಮನೃಪನ ಮಗಳು | | | ತನ್ನ ಸ್ತ್ರೀಧನ (ತವರುಮನೆ ಉಡುಗೊರೆ) ದಿಂದ ಸೇತುಪುರದಲ್ಲಿ ಜಿನಾಲಯ ನಿರ್ಮಾಣ | |

| | | | | | |
|---|---|---|---|---|---|
| **ಬಾಚಲದೇವಿ** | ನನ್ನಿ ಶಾನ್ತರ ಹಾಗೂ ಪಂಪಾದೇವಿಯ ಮಗಳು. ಗಂಗ ಮಾರಸಿಂಹನ ಅರಸಿ | ೧೧ನೆಯ ಶತಮಾನ | E.C. ಸಂ. VIII ನಂ.೪೭, ಹೊಂಬುಜ | ತಾಯಿಯೊಡನೆ ಹೊಂಬುಜದಲ್ಲಿ ತೋರಣ ಬಸದಿಯನ್ನು ಕಟ್ಟಿಸಿದ್ದಾಳೆ | |
| **ಪಂಪಾದೇವಿ** ಬಿರುದು: ನೂತನ ಅತ್ತಿಮಬ್ಬೆ | ವಿಕ್ರಮ ಶಾನ್ತರನ ಅಕ್ಕನಾದ | ೧೧ನೆಯ ಶತಮಾನ | | ಮಗಳು ಬಾಚಲದೇವಿಯೊಡನೆ ಪಂಚ ಬಸದಿಗೆ ಬಡಗಣ ಪಟ್ಟಸಾಲೆಯನ್ನು ಮಾಡಿಸಿ, ಕೆಲವು ದಾನ ನೀಡಿದ್ದಾಳೆ | |
| **ರಾಣಿ ರೇವಲದೇವಿ** | ನೊಳಂಬ ಪೆರ್ಮಾನಡಿದೇವನ ರಾಣಿ | ೧೦ ನೆಯ ಶತಮಾನ | | ಬಳ್ಳಾರಿಯ ದೇವರಿಗೆ ೬೦ ಮತ್ತರು ಭೂದಾನ | |
| **ಚಂದಿಯಬ್ಬೆ** | ಸಿಂಧವಾಡಿ ೧೦೦೦ ಪ್ರಾಂತದ ದೊರೆ ಕನ್ನರನ ಅರಸಿ | ೧೦ ನೆಯ ಶತಮಾನ | SII ಸಂ ix ಶಾ.ಸಂ ೬೨ ಹಾಳಹರವಿ ಶಾಸನ ಪುಟ.೮ | ನಂದಾವರದ ಬಸದಿಯನ್ನು ನಿರ್ಮಾಣ | |
| **ಕುಂದಾಚ್ಚಿ** | ಬಾಣವಂಶದ ಪೃಥ್ವಿನಿರ್ಗುಂದ ರಾಜನ ಮಡದಿ | ೮ ನೆಯ ಶತಮಾನ | E.C. ಸಂ.IV. ಪು.೨೩೩ | ಶ್ರೀ ಪುರದಲ್ಲಿ ಲೋಕತಿಲಕ ಎಂಬ ಜಿನಾಲಯ ನಿರ್ಮಾಣ | |
| **ಪೋಚಬ್ಬರಸಿ** | ಕೊಂಗಾಳ್ವ ಅರಸಿ ರಾಜಾಧಿರಾಜನ ತಾಯಿ | | E.C. ಕೊಡಗು ೬೮, ೬೯, ೭೨, ೭೦, ೭೫ | ಮುಳ್ಳೂರಿನಲ್ಲಿ ಬಸದಿ ನಿರ್ಮಾಣ | |
| **ಚಾಗಲದೇವಿ** | ಸಾಂತರು ಅರಸು ಮನಡತನದ ವೀರ ಶಾನ್ತರನ ರಾಣಿ | ೧೧ನೆಯ ಶತಮಾನ | E.C. ಸಂ VIII. ನಗರ. ೪೭ & ೪೮ ಕ್ರಿ.ಶ.೧೦೬೨ | ಬಳ್ಳಿಗಾವಿಯಲ್ಲಿ ಚಾಗಲೇಶ್ವರ ದೇವಾಲಯ ನಿರ್ಮಾಣ ಹಾಗೂ ದಾನ. ನೊಕ್ಕಿಯಬ್ಬೆಯ ಬಸದಿಯ ಮುಂದೆ ಮಕರ ತೋರಣ ಮಾಡಿಸಿದ್ದಾಳೆ. | |
| **ವೀರಮಾಂಬೆ** | ಕೆಳದಿಯ ಹಿರಿಯ ವೆಂಕಟಪ್ಪ ನಾಯಕನ ಅರಸಿ | ೧೭ನೆಯ ಶತಮಾನ | ಕೆಳದಿಅರಸರ ಶಾಸನ ಸಂಪುಟ | ಭಟ್ ಪೇಟೆಯಲ್ಲಿ ಮಠದ ನಿರ್ಮಾಣ ಹಾಗೂ ನಿರ್ವಹಣೆಗಾಗಿ ದಾನ, ಕೊಲ್ಲೂರು ಮೂಕಾಂಬಿಕಾ ದೇವಾಲಯಕ್ಕೆ ಹಲವಾರು ದಾನ | |
| **ಲಕ್ಷ್ಮೀವಿಲಾಸ ದೇವಾಜಮ್ಮಣ್ಣಿ** | ಮುಮ್ಮಡಿ ಕೃಷ್ಣರಾಜ ಒಡೆಯರ ಪಟ್ಟಮಹಿಷಿ | ೧೯ನೆಯ ಶತಮಶನ | | ವರುಣ ಗ್ರಾಮದಲ್ಲಿ ಮಹದೇಶ್ವರ ಮತ್ತು ದೇವಾಂಬಾ ದೇವಿಯರ ದೇವಾಲಯ, ತಟಾಕಗಳ ನಿರ್ಮಾಣ | |
| **ಲಿಂಗಾಜಮ್ಮಣ್ಣಿ** | ಮುಮ್ಮಡಿ ಕೃಷ್ಣರಾಜ ಒಡೆಯರ ಪಟ್ಟಮಹಿಷಿ | | E.C. ಸಂ. IV ಮೈಸೂರು, ವರುಣಾ ಶಾ.ಸಂ.೧೬೬ | ಮಹಾಲಿಂಗೇಶ್ವರ ದೇವಾಲಯ, ಲಿಂಗಾಂಬುದಿಯೆಂಬ ತಟಾಕದ ನಿರ್ಮಾಣ | |

**ಈ ಮೇಲಿನ ಪಟ್ಟಿಕೆಯಲ್ಲಿ ಹಾಗೂ ಸಂಪ್ರಬಂಧದ ಇತರ ಅಧ್ಯಾಯಗಳಲ್ಲಿ ಬಳಸಿರುವ ಸಂಕೇತಾಕ್ಷರಗಳು**

E.C. - ಎಪಿಗ್ರಾಫಿಯಾ ಕರ್ನಾಟಿಕ, ರೈಸ್ ಸಂಪುಟ

E.C (ಪರಿ) – ಎಪಿಗ್ರಾಫಿಯಾ ಕರ್ನಾಟಿಕ ಪರಿಷ್ಕೃತ ಸಂಪುಟ

SII - ಸೌತ್ ಇಂಡಿಯನ್ ಇನ್ಸ್ಕ್ರಿಪ್ಶನ್ಸ್

E I – ಎಪಿಗ್ರಾಫಿಯಾ ಇಂಡಿಯಾ

KI - ಕರ್ನಾಟಕ ಇನ್ಸ್ಕ್ರಿಪ್ಶನ್ಸ್

IA – ಇಂಡಿಯನ್ ಆಂಟಿಕ್ವಿರಿ

M.A.R – ಮೈಸೂರು ಆರ್ಕಿಯಾಜಿಕಲ್ ರಿಪೋರ್ಟ್

ಜೆ.ಬಿ.ಬಿ.ಆರ್.ಎ.ಎಸ್ – ಜರ್ನಲ್ಸ್ ಆಫ್ ಬಾಂಬೆ ರಾಯಲ್ ಏಷ್ಯಾಟಿಕ್ ಸೊಸೈಟಿ

ಕವಿಶಾಸಂ – ಕನ್ನಡ ವಿಶ್ವವಿದ್ಯಾನಿಲಯ ಶಾಸನ ಸಂಪುಟ

A.P.G.A.S – Andhra Pradesh Government Archaeological Series

ಈ ಮೇಲಿನ ಕೋಷ್ಟಕದಲ್ಲಿ ಕರ್ನಾಟಕದ ಅರಸಿಯರ ಕೆಲವೊಂದು ಅಗತ್ಯ ಮಾಹಿತಿಗಳನ್ನು ದಾಖಲಿಸಲಾಗಿದೆ. ಅದು ಅರಸಿಯರ ಹೆಸರು, ಮನೆತನ ಆಳ್ವಿಕೆ ನಡೆಸಿದ ಪ್ರದೇಶ, ಹೊರಡಿಸಿದ ಶಾಸನ, ಸಾಧನೆ ಅಥವಾ ನಡೆಸಿದ ಕಾರ್ಯದ ಕೆಲವು ಮುಖ್ಯಾಂಶಗಳನ್ನು ಮಾತ್ರ ಇಲ್ಲಿ ಗಮನಿಸಲಾಗಿದೆ. ಆದರೆ ಅರಸಿಯರ ವ್ಯಾಪಕವಾದ ಸಾಧನೆಯನ್ನು ಇಷ್ಟರಿಂದ ಗಮನಿಸಲು ಸಾಧ್ಯವಾಗದು. ಕೆಲವೊಂದು ಮುಖ್ಯ ವಿಚಾರಗಳನ್ನು ಗಮನಿಸುವ ಸಲುವಾಗಿ ಅರಸಿಯರು ಆಳ್ವಿಕೆಯ ಅವಕಾಶ ಪಡೆದ ಸಂದರ್ಭ, ಆಡಳಿತದ ವೈಖರಿ, ಹೊರಡಿಸಿದ ಶಾಸನ, ವ್ಯಾಪಾರ–ವಾಣಿಜ್ಯ, ತೆರಿಗೆ–ಕಂದಾಯ, ಯುದ್ಧ, ನಿರ್ಮಿಸಿದ ಕೆರೆ ಕಾಲುವೆ, ಅರಸಿಯರ ಸಾಂಸ್ಕೃತಿಕ ಕೊಡುಗೆಗಳು ಮೊದಲಾದ ವಿಚಾರಗಳನ್ನು ಗಮನಿಸುವ ಅಗತ್ಯವಿದೆ. ಆದರೆ, ಸಾಹಿತ್ಯಿಕ ಕೊಡುಗೆಯನ್ನು ಗಮನಿಸಲು ಕೈಗೊಂಡಿರುವ ಈ ಅಧ್ಯಯನದಲ್ಲಿ ಅರಸಿಯರ ಕುರಿತಾದ ಈ ಎಲ್ಲ ವಿಚಾರಗಳನ್ನೂ ಪ್ರತ್ಯೇಕವಾಗಿ ಅಥವಾ ಸೂಕ್ಷ್ಮವಾಗಿ ಗಮನಿಸುವುದು ಸಾಧ್ಯವಾಗದ ಕಾರಣ, ಎಲ್ಲ ಅರಸಿಯರ ಕೊಡುಗೆಯನ್ನು ಒಟ್ಟಾರೆಯಾಗಿ ಈ ವಿಭಾಗಗಳಲ್ಲಿ ಸ್ಥೂಲ ಚಿತ್ರಣವನ್ನು ಕೊಡುವ ಪ್ರಯತ್ನವನ್ನು ನಡೆಸಲಾಗಿದೆ.

**ರಾಣಿಯರು ಆಳ್ವಿಕೆಯ ಅವಕಾಶ ಪಡೆದ ಸಂದರ್ಭ**

ಪ್ರಾಚೀನ ಕರ್ನಾಟಕದ ಇತಿಹಾಸದಲ್ಲಿ ಅನೇಕ ಅರಸಿಯರು ಅಧಿಕಾರವನ್ನು ಪಡೆದು ಆಳ್ವಿಕೆ ನಡೆಸಿದ್ದಾರೆ. ಇವರಲ್ಲಿ ಬಹುತೇಕ ಅರಸಿಯರು ತಮ್ಮ ಪತಿಯ ಆಳ್ವಿಕೆಯಲ್ಲಿ ಕೆಲವು ಪ್ರಾಂತಗಳ ಜವಾಬ್ದಾರಿಯನ್ನು ಪಡೆದು, ಅಲ್ಲಿ ತಮ್ಮ ಸ್ವತಂತ್ರ ಅಧಿಕಾರವನ್ನು ಕೈಕೊಂಡಿದ್ದನ್ನು ಕಾಣುತ್ತೇವೆ. ಬಾದಾಮಿ ಚಳುಕ್ಯ, ಗಂಗ, ರಾಷ್ಟ್ರಕೂಟ, ನೊಳಂಬ, ಕಲ್ಯಾಣಿ ಚಾಲುಕ್ಯ, ಹೊಯ್ಸಳ, ಹಾನುಗಲ್ಲು ಕದಂಬ ಮೊದಲಾದ ಅರಸು ಮನೆತನಗಳಲ್ಲಿನ ಅರಸಿಯರು ತಮ್ಮ ಪತಿಯರೊಂದಿಗೆ ಆಳ್ವಿಕೆ ನಡೆಸಿದ್ದಾರೆ. ಈ ಪರಿಪಾಟು ಸುಮಾರು ಏಳನೆಯ ಶತಮಾನದಿಂದಲೇ ಕಂಡು ಬಂದರೂ ೧೦–೧೨ನೆಯ ಶತಮಾನಗಳಲ್ಲಿ ಕಲ್ಯಾಣಿ ಚಾಲುಕ್ಯ, ಹೊಯ್ಸಳರ

ಕಾಲದಲ್ಲಿ ಹೆಚ್ಚಾಗಿದ್ದುದನ್ನು ಕಾಣುತ್ತೇವೆ. ಈ ಕಾಲದ ಸಾಮಂತಾಧಿಕಾರಿಗಳು, ಮಾಂಡಳೀಕರ ಮನೆತನದ ಮಹಿಳೆಯರೂ ಕೂಡ ಆಡಳಿತದಲ್ಲಿ ಭಾಗವಹಿಸುತ್ತಿದ್ದುದು ಕಂಡುಬರುತ್ತದೆ. ಕಲ್ಯಾಣಿ ಚಾಲುಕ್ಯ ಅರಸರ ಸಾಮಂತರಾಗಿ ಆಳ್ವಿಕೆ ನಡೆಸಿದ ದೇಮಲದೇವಿ, ಚಾಗಲದೇವಿ, ಜೋಗಬ್ಬೆ, ಪಂಪಾದೇವಿ, ರೆಬ್ಬಲದೇವಿ, ರಾಷ್ಟ್ರಕೂಟ ಅರಸರ ಸಾಮಂತರಾಗಿ ನಾಗರಖಂಡವನ್ನಾಳಿದ ಜಕ್ಕಿಯಬ್ಬೆ, ಅದೇ ಕಾಲದಲ್ಲಿದ್ದ ಲಕ್ಷ್ಮೀಗಾವುಂಡಿ, ಹೊಯ್ಸಳರ ಆಳ್ವಿಕೆಯಲ್ಲಿ ಸೆಟ್ಟಿಕವ್ವೆ, ಸೇವುಣ ಸಿಂಘಣನ ಸಾಮಂತರಾಗಿ ಭಾಗುಬಾಯಿ ಮೊದಲಾದವರನ್ನೂ ಹೆಸರಿಸಬಹುದು.

ಈ ಕಾಲದ ಅರಸಿಯರು ಪತಿಯೊಂದಿಗಿನ ಆಳ್ವಿಕೆಯಲ್ಲದೆ ತಮಗೆ ಮದುವೆಯ ಬಳುವಳಿಯಾಗಿ (ಸ್ತ್ರೀಧನ) ಬಂದ ಪ್ರದೇಶಗಳಲ್ಲಿಯೂ ಆಳ್ವಿಕೆ ನಡೆಸಿದ್ದಾರೆ. ಗಂಗ ಬೂತುಗನನ್ನು ವರಿಸಿದ್ದ ರಾಷ್ಟ್ರಕೂಟ ರಾಜಕುಮಾರಿ ಚಂದ್ರೋಬಲಬ್ಬೆ, ಇಮ್ಮಡಿ ಬೂತುಗನ ಅರಸಿ ರೇವಕನಿಮ್ಮಡಿ, ಗೋವೆಯ ಕದಂಬ ಜಯಕೇಶಿಯನ್ನು ಮದುವೆಯಾದ ಚಾಲುಕ್ಯ ವಿಕ್ರಮಾದಿತ್ಯನ ಮಗಳು ಮೈಳಲದೇವಿ ಮೊದಲಾದವರು ಮದುವೆಯ ಸಂದರ್ಭದಲ್ಲಿ ತಂದೆಯಿಂದ ಕೊಡಲಾದ ಪ್ರದೇಶಗಳಲ್ಲಿಯೂ ಆಳ್ವಿಕೆ ನಡೆಸಿದ್ದಾರೆ. ಸಿಂಹಪೋತನ ಮಗಳು ನೊಳಂಬ ಮಾದವೆಯು ತನ್ನ ಸಹೋದರನ ಅರಸಿಯಾದ ಗವಗಣಬ್ಬೆಯೊಂದಿಗೆ ಮದರಿಕಲ್ಲು ಮೊದಲಾದ ಪ್ರದೇಶದಲ್ಲಿ ಆಡಳಿತ ನಡೆಸುತ್ತಿದ್ದಳು. ಕಲ್ಯಾಣಿ ಚಾಳುಕ್ಯ ರಾಜಕುಮಾರಿಯೂ ಮಹಾಮಂಡಳೇಶ್ವರ ಸಿಂಹಣದೇವರಸನ ಅರಸಿಯೂ ಆದ ಸುಗ್ಗಲದೇವಿಯು ತನ್ನ ತಂದೆ ಆಹವಮಲ್ಲದೇವ ಹಾಗೂ ಅಣ್ಣ ಭುವನೈಕಮಲ್ಲರ ಅಧೀನದಲ್ಲಿ ಕಿಸುಕಾಡು ೭೦ರ ನಿಡುಗುಂದಿಯಲ್ಲಿ ಆಳ್ವಿಕೆ ನಡೆಸುತ್ತಿದ್ದಳು.

ಕೆಲವು ಅರಸಿಯರು ಕೇವಲ ಪತಿಯ ಆಳ್ವಿಕೆಯಲ್ಲಿ ಮಾತ್ರ ಅಧಿಕಾರವನ್ನು ಪಡೆಯದೆ ಅವರ ಮರಣಾ ನಂತರವೂ ಆಳ್ವಿಕೆ ನಡೆಸಿದ್ದಾರೆ. ಬಾದಾಮಿ ಚಳುಕ್ಯ ವಿಜಯಭಟ್ಟಾರಿಕೆ ತನ್ನ ಪತಿಯ ಕಾಲದಲ್ಲಿಯೂ ಆಡಳಿತದಲ್ಲಿ ಭಾಗಿಯಾಗಿದ್ದಳಲ್ಲದೆ ಆತನ ನಂತರವೂ ಪತಿಯ ಸಹೋದರನ ಆಳ್ವಿಕೆಯಲ್ಲಿ ಆಡಳಿತ ಮುಂದುವರೆಸಿದ್ದಾಳೆ, ಗಂಗರಾಜವಂಶದ ಎಱೆಗಂಗನ ಮಡದಿ ಬುಜಬ್ಬರಸಿಯು, ಪೆರ್ಬಾಳುವನ್ನು ಆಳ್ವಿಕೆಗೆಯ್ಯುತ್ತಿರುವ ವಿಚಾರ ತಿಳಿಸುವ ದಾನಶಾಸನವೊಂದು ಇವಳ ಮಗ ಬೂತುಗನ ಮಗನಾದ ಮಾರಸಿಂಹನ ಕಾಲದ್ದಾಗಿದೆ. ಇದು ಮೊಮ್ಮಗನ ಕಾಲದಲ್ಲಿ ಅಜ್ಜಿಯು ಆಡಳಿತ ನಡೆಸುತ್ತಿದ್ದ ವಿಚಾರವನ್ನು ತಿಳಿಸುತ್ತದೆ. ಎರಡನೆಯ ಬಲ್ಲಾಳನ ರಾಣಿ ಉಮಾದೇವಿ ಪತಿಯ ಮರಣಾನಂತರವೂ ಆಳ್ವಿಕೆ ನಡೆಸುತ್ತಿದ್ದಳು. ಈ ಕಾಲದಲ್ಲಿ ಇವಳ ಸವತಿ ಪದ್ಮಲದೇವಿಯ ಮಗ ಇಮ್ಮಡಿ ನಾರಸಿಂಹ ಹೊಯ್ಸಳ ಸಾಮ್ರಾಜ್ಯ ಸಿಂಹಾಸನವನ್ನೇರಿದ್ದ. ಹೀಗೆ ಪತಿಯ ಆಳ್ವಿಕೆಯಲ್ಲಿ ತಮ್ಮದೇ ಆದ ಪ್ರಾಂತಗಳ ಆಡಳಿತ ಅವಕಾಶ ಪಡೆದ ಹಲವಾರು ರಾಣಿಯರು, ಪತಿಯ ಆಳ್ವಿಕೆಯ ಅಥವಾ ಮರಣಾನಂತರವೂ ತಮ್ಮ ಆಡಳಿತ ಮುಂದುವರೆಸಿದ ಉದಾಹರಣೆಗಳು ದೊರಕುತ್ತವೆ.

ಕೆಲವೊಂದು ಸಂದರ್ಭಗಳಲ್ಲಿ ಉತ್ತರಾಧಿಕಾರಿಯಾದ ಅಪ್ರಾಪ್ತ ವಯಸ್ಕ ಮಗನ ಪರವಾಗಿ ಆಳ್ವಿಕೆ ನಡೆಸಿದ ಉದಾಹರಣೆಗಳೂ ಕಂಡುಬರುತ್ತವೆ. ಹತ್ತನೆಯ ಶತಮಾನದ ಕಲ್ಯಾಣಿ ಚಾಲುಕ್ಯ ರಾಜಕುಮಾರಿ ಅಕ್ಕಾದೇವಿ, ಪತಿಯ ಮರಣಾನಂತರ ಅಪ್ರಾಪ್ತವಯಸ್ಸಿನ ಮಕ್ಕಳ ಪರವಾಗಿ ಆಳ್ವಿಕೆ ನಡೆಸಿದ್ದಾಳೆ. ನಾಗರಖಂಡವನ್ನಾಳಿದ ಜಕ್ಕಿಯಬ್ಬೆ, ಆಳುಪ ರಾಣಿ ಬಲ್ಲಮಹಾದೇವಿ, ರೆಬ್ಬಲದೇವಿ ಮೊದಲಾದವರು ಪತಿಯ ಮರಣಾನಂತರ ಅಧಿಕಾರವನ್ನು ಪಡೆದು ಆಳ್ವಿಕೆ ನಡೆಸಿದ್ದಾರೆ.

ಸುಮಾರು ಏಳನೆಯ ಶತಮಾನದಿಂದ ಹದಿಮೂರನೆಯ ಶತಮಾನದವರೆಗಿನ ಕಾಲಘಟ್ಟದಲ್ಲಿ ಅರಸಿಯರು ಪತಿಯ ಆಳ್ವಿಕೆಯಲ್ಲಿ ಅಥವಾ ಚಕ್ರವರ್ತಿಯ ಅಧೀನದ ಮಾಂಡಳೀಕಳಾಗಿ ಅಧಿಕಾರ ನಡೆಸಿರುವುದು ಕಂಡುಬರುತ್ತದೆ. ವಿಜಯನಗರದ ಅರಸರ ಕಾಲದಲ್ಲಿ ಮಹಿಳಾಧಿಕಾರಿಗಳು ಕಂಡುಬರುವುದು ಅಪರೂಪವಾಗಿದೆ. ಆಡಳಿತಾಧಿಕಾರವನ್ನು ಕೈಗೆ ತೆಗೆದುಕೊಳ್ಳದಿದ್ದರೂ ಈ ಕಾಲದ ಕೆಲವು ಅರಸಿಯರು ರಾಜಕೀಯ ವಿಚಾರಗಳಲ್ಲಿ

ಭಾಗವಹಿಸಿದ ಉಲ್ಲೇಖಗಳು ದೊರಕುತ್ತವೆ. ಮೊದಲನೆಯ ಬುಕ್ಕರಾಯನ ಮಗ ವೀರಕಂಪಣನ ಮಡದಿ ಗಂಗಾದೇವಿ ಪತಿಯೊಂದಿಗೆ ಕೋಲಾರ ಪ್ರದೇಶದಲ್ಲಿ ಆಳ್ವಿಕೆ ನಡೆಸುತ್ತಿದ್ದಳಲ್ಲದೆ ಯುದ್ಧರಂಗವನ್ನೂ ಪ್ರವೇಶಿಸಿದ್ದಳು. ಎರಡನೆಯ ಬುಕ್ಕರಾಯನ ಮಗಳು ವಿರೂಪಾದೇವಿ ಮಾಂಡಳೀಕನ ಮಡದಿಯಾಗಿ ಪೆನುಗುಂಡೆಯ ಸುತ್ತಮುತ್ತಲಿನ ಕೆಲವು ಶಾಸನಗಳಲ್ಲಿ ಉಕ್ತಳಾಗಿದ್ದಾಳೆ. ಇವಳ ಮಗಳು ಜೊಮ್ಮಾದೇವಿ ಕೂಡ ಕೆರೆ–ಕಾಲುವೆ ನಿರ್ಮಾಣದಲ್ಲಿ ಆಸಕ್ತಿ ವಹಿಸಿದ್ದಳು. ಕೃಷ್ಣದೇವರಾಯನ ಮಡದಿಯರಾದ ಚಿನ್ನಾದೇವಿ ಹಾಗೂ ತಿರುಮಲದೇವಿಯರೂ ಆಡಳಿತದಲ್ಲಿ ಕೊಂಚಮಟ್ಟಿಗೆ ಸ್ವಾತಂತ್ರ ವಹಿಸಿದ್ದರು. ಇವರು ತಮ್ಮದೇ ಆದ ಖಜಾನೆಯನ್ನೂ ಅದನ್ನು ನೋಡಿಕೊಳ್ಳುವ ಅಧಿಕಾರಿಗಳನ್ನೂ ಹೊಂದಿದ್ದರು ಎಂದು ವಿದೇಶಿ ಪ್ರವಾಸಿಗರೂ ಸಹ ತಿಳಿಸಿದ್ದಾರೆ. ಕೃಷ್ಣದೇವರಾಯನೊಂದಿಗೆ ದಂಡಯಾತ್ರೆಗಳಲ್ಲಿ ಭಾಗವಹಿಸುತ್ತಿದ್ದ ಇವರು ತಮ್ಮ ಕಾಲದಲ್ಲಿ ತಲೆದೋರಿದ ರಾಜಕೀಯ ಬಿಕ್ಕಟ್ಟನ್ನು ಬಗೆಹರಿಸುವಲ್ಲಿಯೂ ಪ್ರಮುಖ ಪಾತ್ರ ವಹಿಸಿದ್ದಾರೆ. ಕೃಷ್ಣದೇವರಾಯನ ಮರಣಾನಂತರ ಅವನ ಅಳಿಯಂದಿರಾದ ರಾಮರಾಯ ಹಾಗೂ ತಿರುಮಲರಾಯರನ್ನು ಆಸ್ಥಾನದ ಕೋಶಾಧಿಕಾರಿ ಕಲಾಕಂ ತಿಮ್ಮಯ್ಯನು ಸೆರೆಮನೆಯಲ್ಲಿರಿಸಲು ತಿರುಮಲಾದೇವಿ ಹಾಗೂ ಚಿನ್ನಾದೇವಿಯರು ತಮ್ಮ ಅಳಿಯಂದಿರಿಗೆ ನಗರವನ್ನು ಬಿಟ್ಟುಕೊಡುವಂತೆ ಆಜ್ಞೆ ಹೊರಡಿಸಿ, ರಾಜ್ಯದ ಉತ್ತರಾಧಿಕಾರಿಯನ್ನು ನೇಮಿಸುವಲ್ಲಿ ತಮ್ಮ ಅಧಿಕಾರ ಚಲಾಯಿಸಿದ ಕೆಲವು ವಿಚಾರಗಳು ಪಾಳೇಗಾರರ ಕಡತಗಳಿಂದ ತಿಳಿದು ಬಂದಿವೆ (ಹಂಡೆ ಅನಂತಪುರನ ವಾರ್ಷಿಕ ಲೆಕ್ಕ ಪತ್ರ, ಸೊನ್ನಲಾಪುರದ ಹಂಡೆ ಹನುಮಪ್ಪನಾಯ್ಡು).

ಈ ಮೇಲಿನ ಕೋಷ್ಟಕದಲ್ಲಿ ಕಂಡುಬರುವಂತೆ ಕರ್ನಾಟಕದಲ್ಲಿ ಆಡಳಿತ, ಅಧಿಕಾರಗಳನ್ನು ನಡೆಸಿದ ಅರಸಿಯರ ಸಂದರ್ಭಗಳನ್ನು ವಿಭಿನ್ನ ಕಾಲದಲ್ಲಿ ಹಾಗೂ ವಿಭಿನ್ನ ಮನೆತನಗಳಡಿಯಲ್ಲಿ ಈ ರೀತಿಯಾಗಿ ಗುರುತಿಸಬಹುದು.

- ಗಂಗ, ಚಾಲುಕ್ಯ, ಹೊಯ್ಸಳ ರಾಜಮನೆತನಗಳ ಅರಸಿಯರಿಗೆ ಪತಿಯ ಆಳ್ವಿಕೆಯ ಅವಧಿಯಲ್ಲಿ ತಮ್ಮದೇ ಆದ ಪ್ರದೇಶಗಳಲ್ಲಿ ಆಡಳಿತ ನಡೆಸುವ ಅಧಿಕಾರದ ಅವಕಾಶಗಳು ಹೆಚ್ಚಾಗಿತ್ತು. ಈ ಕಾಲದ ಹಲವು ಅರಸಿಯರು ಮದುವೆಯ ಬಳುವಳಿಯಾಗಿ ಬಂದಿದ್ದ ಪ್ರದೇಶಗಳಲ್ಲಿಯೂ ಆಳ್ವಿಕೆ ನಡೆಸಿದ್ದಾರೆ.
- ರಾಷ್ಟ್ರಕೂಟ, ವಿಜಯನಗರ ಮೊದಲಾದ ಕರ್ನಾಟಕದ ಪ್ರತಿಷ್ಠಿತ ರಾಜಮನೆತನಗಳ ಕೆಲವು ಅರಸಿಯರು ಪತಿಯೊಡನೆ ಆಳ್ವಿಕೆಯಲ್ಲಿ ಭಾಗವಹಿಸುತ್ತಿದ್ದ ವಿಚಾರ ತಿಳಿದುಬರುತ್ತದೆ ಆದರೆ, ಪ್ರತ್ಯೇಕವಾಗಿ ತಮ್ಮದೇ ಆದ ಪ್ರದೇಶಗಳಲ್ಲಿ ಆಡಳಿತ ನಡೆಸುತ್ತಿದ್ದ ಉದಾಹರಣೆಗಳಾಗಲೀ, ಪತಿಯ ಮರಣಾನಂತರ, ಮಕ್ಕಳ ಪರವಾಗಿ, ಸ್ವತಂತ್ರವಾಗಿ ಆಳ್ವಿಕೆ ನಡೆಸಿದ ರಾಣಿಯರು ಕಂಡುಬರುವುದಿಲ್ಲ.
- ರಾಷ್ಟ್ರಕೂಟರಲ್ಲಿ ಅಪ್ರಪ್ತವಯಸ್ಕ ರಾಜಕುಮಾರರು ಸಿಂಹಾಸನವನ್ನೇರಿದ ಸಂದರ್ಭವಿದ್ದರೂ, ರಾಣಿಯರು ಮಕ್ಕಳ ಪರವಾಗಿ ರಾಜ್ಯಭಾರ ಮಾಡಿದ ಉಲ್ಲೇಖಗಳು ದೊರೆಯುವುದಿಲ್ಲ. ಈ ಕಾಲದಲ್ಲಿ ಪ್ರಬಲ ಸಾಮಂತಾಧಿಕಾರಿಗಳ ಹಿಡಿತ, ವಿಕ್ಷಿಪ್ತ ರಾಜಕೀಯ ಹಿನ್ನೆಲೆಗಳಿದ್ದುದನ್ನು ಗಮನಿಸಬಹುದು.
- ವಿಜಯನಗರದ ಅರಸು ಮನೆತನದಲ್ಲಿ ರಾಣಿಯರು ಅಧಿಕಾರದ ಚುಕ್ಕಾಣಿ ಹಿಡಿಯಲಿಲ್ಲವಾದರೂ, ಕೆಲವು ಅರಸಿಯರು ಪತಿಯೊಂದಿಗೆ ರಾಜಕೀಯ ವಿಚಾರಗಳಲ್ಲಿ ಭಾಗವಹಿಸುತ್ತಿದ್ದ ಉಲ್ಲೇಖ ದೊರಕುತ್ತದೆ.
- ವಿಜಯನಗರದ ಅರಸರ ನಂತರದ ಕಾಲದಲ್ಲಿ ಕರ್ನಾಟಕದ ಕೆಲವು ರಾಜಮನೆತನದ ಅರಸಿಯರು ಸ್ವತಂತ್ರವಾಗಿ ಆಡಳಿತಸೂತ್ರ ಕೈಕೊಂಡಿದ್ದಾರೆ. ಕೆಳದಿಯ ಅರಸಿಯರಾದ ಚನ್ನಮ್ಮ ಹಾಗೂ ಚನ್ನವೀರಮ್ಮ, ಚೌಟ ಅರಸ ಅಬ್ಬಕ್ಕದೇವಿ, ಸೋಮಲದೇವಿ, ಗೇರುಸೊಪ್ಪೆಯ ಭೈರಾದೇವಿ, ಚನ್ನಭೈರಾದೇವಿ, ಬೆಳವಡಿಯ ಮಲ್ಲಮ್ಮ ಮೊದಲಾದ ಪ್ರಸಿದ್ಧ ಆಡಳಿತಗಾರ್ತಿಯರನ್ನು ಈ ಕಾಲದಲ್ಲಿ ಕಾಣಬಹುದು.

ಇವರಲ್ಲಿ ತುಳುನಾಡಿನ ಕೆಲವು ಅರಸಿಯರು ಅಳಿಯ ಸಂತಾನದ ಕಟ್ಟಿನ ಸಂಪ್ರದಾಯದಲ್ಲಿ ಆಳ್ವಿಕೆ ವಹಿಸಿಕೊಂಡರೆ, ಮತ್ತೆ ಕೆಲವು ಅರಸಿಯರು ಪತಿಯ ಅಕಾಲಿಕ ಮರಣಾನಂತರ ವಾರಸುದಾರರು ಇಲ್ಲದ ಸಂದರ್ಭದಲ್ಲಿ ಸ್ವತಃ ತಾವೇ ಪಟ್ಟವನ್ನೇರಿ ಆಳ್ವಿಕೆ ನಡೆಸಿದ್ದಾರೆ.

## ಆಳ್ವಿಕೆಯ ಅವಧಿಯಲ್ಲಿ ಹೊರಡಿಸಿದ ಶಾಸನ

ಶಾಸನಗಳು ಇತಿಹಾಸದ ತಾಯಿಬೇರು. ಕರ್ನಾಟಕದ ರಾಣಿಯರ ಬಹುತೇಕ ವಿಚಾರಗಳು ತಿಳಿದುಬರುವುದೇ ಶಾಸನಗಳಿಂದ. ರಾಣಿಯರ ಉಲ್ಲೇಖವಿರುವ ಹಲವಾರು ಶಾಸನಗಳಲ್ಲಿ ರಾಜನೊಂದಿಗೆ ಪ್ರಾಸಂಗಿಕವಾಗಿ ರಾಣಿಯರ ಉಲ್ಲೇಖವಿದೆ. ಇದಲ್ಲದೆ ಸ್ವತಃ ರಾಣಿಯರೇ ಹೊರಡಿಸಿರುವ ಹಲವಾರು ದಾನ ಶಾಸನಗಳು ದೊರಕುತ್ತವೆ. ರಾಣಿಯರು ದೇವಾಲಯ, ಬಸದಿಗಳಿಗೆ ದಾನ, ದತ್ತಿ ನೀಡಿದ ವಿಚಾರಗಳನ್ನು ತಿಳಿಸುವ ಶಾಸನಗಳು, ದೇವಾಲಯ, ಬಸದಿ ನಿರ್ಮಿಸಿದ ಶಾಸನಗಳು. ಕೆರೆ–ಕಾಲುವೆಗಳನ್ನು ನಿರ್ಮಿಸಿದ ವಿಚಾರ ತಿಳಿಸುವ, ಅಗ್ರಹಾರ–ಬ್ರಹ್ಮಪುರಿಗಳನ್ನು ನಿರ್ಮಿಸಿದ, ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ನೀಡಿದ ಇವೇ ಮೊದಲಾದ ವಿಚಾರಗಳನ್ನು ತಿಳಿಸುವ ರಾಣಿಯರು ಹೊರಡಿಸಿದ ಅನೇಕ ಶಾಸನಗಳನ್ನು ಕಾಣುತ್ತೇವೆ. ಇವುಗಳೊಂದಿಗೆ ತೆರಿಗೆ ವಿನಾಯತಿ ನೀಡಿರುವ, ಕಾಮಗಾರಿಯ ಒಪ್ಪಂದ ಮಾಡಿಕೊಂಡಿರುವ, ಸಂತೆ – ವ್ಯಾಪಾರ ಕುರಿತಾದ ಮಾಹಿತಿ ನೀಡುವ ಶಾಸನಗಳೂ ದೊರೆತಿವೆ. ರಾಣಿಯರು ಯುದ್ಧದಲ್ಲಿ ಭಾಗವಹಿಸಿರುವ ವಿಚಾರ ಹಾಗೂ ಯುದ್ಧ ಕುರಿತಾದ ವಿವರಗಳನ್ನೊಳಗೊಂಡ ವೀರಗಲ್ಲುಗಳು ಸಹಾ ದೊರೆತು ರಾಣಿಯರ ಸಾಹಸ ಮನೋಭಾವವನ್ನು ತಿಳಿಸುತ್ತವೆ.

ರಾಣಿಯರು ಹೊರಡಿಸಿರುವ ದಾನ ಶಾಸನಗಳಲ್ಲಿ ಕೆಲವೊಂದು ಅವರ ಆಡಳಿತ ವೈಖರಿಯನ್ನು ತೋರಿಸುತ್ತವೆ. ಅಕ್ಕಾದೇವಿಯು ಪೆರೂರಿನ ತ್ರೈಪುರುಷ ಶಾಲೆಯ ೫೦೦ ವಿದ್ಯಾರ್ಥಿಗಳ ಊಟ ಮತ್ತು ಬಟ್ಟೆಗಾಗಿ ಅದೇ ಊರಿನಲ್ಲಿ ಐನೂರು ಮತ್ತರು ಭೂಮಿಯನ್ನು, ಐವತ್ತು ಮನೆಯನ್ನು ಎರಡು ಮತ್ತರು ಹೂವಿನ ತೋಟವನ್ನು ದಾನ ಮಾಡಿದಳು. ಈ ಧರ್ಮವನ್ನು ಅವಳು 'ರಾಜರಕ್ಷಿತ ಧರ್ಮವೆಂದು ಕರೆದು ಇದನ್ನ ಪೆರೂರ ೪೦೦ ಮಹಾಜನರು ಪಾಲಿಸಬೇಕು' ಎಂಬ ಆದೇಶವನ್ನು ಮಾಡಿರುವುದು ತಾನು ನೀಡಿರುವ ದಾನವು ಸದುಪಯೋಗ ವಾಗಲು ತೆಗೆದುಕೊಂಡ ಕ್ರಮವನ್ನು ತಿಳಿಸುತ್ತದೆ.

ಸಿಂಧವಂಶದ ಚಾವುಂಡದೇವರಸನ ಪಿರಿಯರಸಿ ದೇಮಲದೇವಿಯು ವಿಜಯೇಶ್ವರ ದೇವರ ಅಂಗ–ರಂಗ ಭೋಗಕ್ಕೆ ಅಲ್ಲಿನ ಇತರ ಕಾರ್ಯಗಳಿಗಾಗಿ ದತ್ತಿ ನೀಡಿದ್ದಾಳೆ.[೨] ಈ ವಿಷಯ ತಿಳಿಸುವ ಶಾಸನವು, ಇವಳು ತಮ್ಮ ಪೂರ್ವದ ಅರಸರು ಬಿಟ್ಟ ದಾನ ದತ್ತಿಗಳು ನಡೆಯುತ್ತಿವೆಯೋ ಅಥವಾ ಇಲ್ಲವೋ ಎಂಬುದನ್ನು ವಿಚಾರಿಸಿ ನೋಡಿದಳೆನ್ನುವುದು ಉಲ್ಲೇಖಿಸಿರುವುದು ವಿಶೇಷವಾಗಿ ತೋರುತ್ತದೆ. ಇಂಥ ವಿಚಾರಣೆಗಳು ಹಿಂದಿನ ದಾನ ದತ್ತಿಗಳು ದುರುಪಯೋಗವಾಗಬಾರದೆಂಬ ರಾಣಿಯ ಕಾಳಜಿಯನ್ನು ತಿಳಿಸುತ್ತದೆ.

ಸಿಂಧವಂಶಕ್ಕೆ ಸೇರಿದ ಲಕ್ಷ್ಮಾದೇವಿಯು ಮಂಡಳೇಶ್ವರ ಚಾಮುಂಡನ ರಾಣಿ. ಇವಳು ಸೂಂಡಿ, ಹೊಸವೂರ ಮತ್ತು ಕಡಕೆರೆ ಮಂಡಲದ ಕೆಲವು ಊರುಗಳಲ್ಲಿ ಆಡಳಿತ ಮಾಡುತ್ತಿದ್ದ ಸಂದರ್ಭದಲ್ಲಿ ಇವಳ ಆಡಳಿತ ಪ್ರದೇಶದ ತೀರ್ಥದ ಮಲ್ಲಿಕಾರ್ಜುನ ದೇವಾಲಯದ ಭಕ್ತರಾದ ಪೆರ್ಗಡೆ ಸೋಮನಾಥನಾಯಕ, ಗಯಾಧರನಾಯಕ, ಕರಣರಾದ ರಾಯರಸ ಮಾಚಿರಾಜ, ಪ್ರತಿಕಂಠಕೇಶವದೇವ, ಮಾಧವದೇವ ಮೊದಲಾದವರು ದೇವಾಲಯದ ಅಭಿವೃದ್ಧಿಗಾಗಿ ರಾಣಿಗೆ ಬಿನ್ನಹ ಮಾಡಿ ಅವಳಿಂದ ಅನುಮತಿ ಪಡೆದುಕೊಂಡು

ಗದ್ದೆ ಮತ್ತು ಎಂಟು ಮತ್ತರು ಹೊಲವನ್ನು ದೇವಾಲಯಕ್ಕೆ ಬಿಡುತ್ತಾರೆ.[೪] ಶಾಸನವು ತಿಳಿಸಿರುವಂತೆ ಈ ದಾನಕ್ಕೆ ಅನುಮತಿ ನೀಡಿರುವುದಲ್ಲದೆ ದುರುಪಯೋಗವಾಗಬಾರದೆಂಬ ರಾಣಿಯ ಷರತ್ತು ಗಮನಾರ್ಹವಾಗಿದೆ.

ರಾಣಿಯರು ಹೊರಡಿಸಿರುವ ಬಹುತೇಕ ಶಾಸನಗಳಲ್ಲಿ ತಮ್ಮ ಪತಿ ಅಥವಾ ಪ್ರಭುತ್ವದಲ್ಲಿರುವ ದೊರೆಯ ಹೆಸರನ್ನು ಮೊದಲು ಉಲ್ಲೇಖಿಸಿ ಆನಂತರ ತಮ್ಮ ವಿಚಾರಗಳನ್ನೂ, ವ್ಯಕ್ತಪಡಿಸಬೇಕಿರುವ ವಿಚಾರಗಳನ್ನೂ ತಿಳಿಸುವುದು ವಾಡಿಕೆಯಾಗಿ ಬಂದಿದೆ. ಕೆಲವೊಂದು ಶಾಸನಗಳು ಮಾತ್ರ ಇಂಥ ಸಂಪ್ರದಾಯವನ್ನೂ ಮೀರಿವೆ. ರಾಷ್ಟ್ರಕೂಟ ರಾಣಿ ಶೀಲಮಹಾದೇವಿಯು ಪತಿಯ ಹೆಸರನ್ನು ಹೇಳದೆಯೆ ಸ್ವತಂತ್ರವಾಗಿ ಶಾಸನಗಳನ್ನು ಹೊರಡಿಸಿದ್ದಾಳೆ. ಶೀಲಭಟ್ಟಾರಿಕಾ, ಪರಮಭಟ್ಟಾರಿಕಾ, ಪರಮೇಶ್ವರಿ ಎಂದು ಇವಳನ್ನು ಕರೆದಿರುವ ಶಾಸನವು, ಈ ಹೆಸರಿನ ಮುಖಾಂತರವೇ ಇವಳಿಗಿದ್ದ ಪರಮಾಧಿಕಾರವನ್ನು ಸೂಚಿಸುತ್ತದೆ. ಗ್ರಾಮವೊಂದನ್ನು ದಾನವಾಗಿ ಕೊಟ್ಟು, ಇದನ್ನು ನಡೆಸಿಕೊಡಲು ದುರ್ಗಾದಿತ್ಯನೆಂಬುವನಿಗೆ ಆದೇಶಿಸಿರುವುದನ್ನು ತಿಳಿಸುವ ಕ್ರಿ.ಶ.೭೮೬ರ ಜೆತ್ವಾಯ್ ತಾಮ್ರಪಟಗಳನ್ನು ರಾಜನ ಸಾಂಪ್ರದಾಯಿಕ ಅನುಮತಿಯನ್ನು ಪಡೆಯದೆಯೇ ಸ್ವತಂತ್ರವಾಗಿ ತನ್ನ ಹೆಸರಿನಲ್ಲೇ ಹೊರಡಿಸಿದ್ದಾಳೆ. ಅಧಿಕಾರಿಗಳಿಗೆ ತನ್ನ ಆದೇಶವನ್ನು ನೀಡಿದ್ದಾಳೆ[೫].

ಧಾರ್ಮಿಕ ಕಾರ್ಯಗಳನ್ನು ಉಲ್ಲೇಖಿಸುವ ಇಂತಹ ಕೆಲವು ಶಾಸನಗಳು ಅರಸಿಯರು ತೋರುತ್ತಿದ್ದ ಸ್ವತಂತ್ರ ಮನೋಭಾವ, ಅವರಿಗಿರುತ್ತಿದ್ದ ಅಧಿಕಾರಗಳನ್ನು ಕುರಿತು ತಿಳಿಸುತ್ತದೆ. ಸಾಧಾರಣವಾಗಿ ತೆರಿಗೆ ವಿನಾಯಿತಿ ನೀಡುವ ಸಂದರ್ಭದಲ್ಲಿ ಕೆಲವು ಅಧಿಕಾರವರ್ಗದವರು ಅರಸರ ಅಥವಾ ಚಕ್ರವರ್ತಿಯ ಅನುಮತಿ ಪಡೆಯುತ್ತಿದ್ದ ಉಲ್ಲೇಖ ವಿರುತ್ತದೆ. ಆದರೆ, ಹೊಯ್ಸಳ ಉಮಾದೇವಿ ಮೊದಲಾದ ಅರಸಿಯರು ತೆರಿಗೆ ವಿನಾಯಿತಿ ತೋರುವ ವಿಚಾರದಲ್ಲಿಯೂ ಕೂಡ ಸ್ವಾತಂತ್ರ ವಹಿಸಿರುವುದನ್ನು ಕಾಣಬಹುದು.

ರಾಣಿಯರು ಹೊರಡಿಸಿರುವ ಶಾಸನಗಳು ಹಲವು ಐತಿಹಾಸಿಕ ಮಹತ್ವದ ಸಂಗತಿಗಳನ್ನು ಒಳಗೊಂಡಿರುವುದನ್ನು ಕಾಣುತ್ತೇವೆ. ವಿಜಯಭಟ್ಟಾರಿಕೆಯ ಶಾಸನವು ಅವಳ ಪತಿಯ ಕಾಲ, ಆಳ್ವಿಕೆ, ಆತನ ತಮ್ಮ ವಿಕ್ರಮಾದಿತ್ಯನ ಸಾರ್ವಭೌಮತ್ವಗಳ ಮೇಲೆ ಬೆಳಕು ಚೆಲ್ಲುತ್ತದೆ. ಅವನೀತನ ರಾಣಿ ಬೃಹದ್ದೇವಿಯ ದಾನಶಾಸನ ಅವನೀತನ ಆಳ್ವಿಕೆಯ ಆರಂಭದ ಕಾಲವನ್ನು ನಿಶ್ಚಯಿಸಲು ಸಹಾಯಕವಾಗಿದೆ. ರಾಷ್ಟ್ರಕೂಟ ದೊರೆ ನಾಲ್ವಡಿ ಗೋವಿಂದನ ರಾಣಿ ಭಾಗಿಯವ್ವೆ ರಾಜ್ಯದ ಹನ್ನೆರಡು ಜನ ಸಾಮಂತರಿಂದ ತನ್ನ ಹಣೆಗೆ ಪಟ್ಟದ ಕಿರೀಟವನ್ನು ತೊಡಿಸಿಕೊಂಡು ಪಟ್ಟಮಹಿಷಿಯ ಅಧಿಕಾರವನ್ನು ಪಡೆದಿದ್ದಳು ಹಾಗೂ ಅವಳಿಗೆ ಧಾರ್ಮಿಕವಾಗಿ ಅಧಿಕಾರದ ಅರ್ಹತೆಯನ್ನು ಉಂಟುಮಾಡಲು ದೊರೆ ಗೋವಿಂದನು ಆ ಸಂದರ್ಭದಲ್ಲಿ ಹಿರಣ್ಯಗರ್ಭ, ಉಭಯಮುಖಿ, ಗೋ ಸಹಸ್ರ ಮತ್ತು ಕಲ್ಪವೃಕ್ಷ ದಾನಯಜ್ಞಗಳನ್ನು ಆಚರಿಸಿದನೆಂದು ಅಂದೂರ ತಾಮ್ರಪಟಗಳು ತಿಳಿಸುತ್ತದೆ.

ಯುದ್ಧ ಪ್ರಸಂಗಗಳಲ್ಲಿ ಯುದ್ಧ ನಡೆದ ಸ್ಥಳದ ಸುತ್ತಮುತ್ತಲಿನ ಕೆಲವು ಗ್ರಾಮಗಳು ಹಾನಿಗೊಳಗಾಗುತ್ತಿದ್ದುದು ಸಹಜ. ಆ ಗ್ರಾಮಗಳ ಅವ್ಯವಸ್ಥೆಯನ್ನು ಸರಿಪಡಿಸಬೇಕಾದದ್ದು ಆಡಳಿತವರ್ಗದವರ ಕರ್ತವ್ಯವಾಗಿರುತ್ತಿತ್ತು. ಇಂಥ ಪ್ರಸಂಗವೊಂದರ ಉಲ್ಲೇಖ ಅಕ್ಕಾದೇವಿಯ ಕಾಲದಲ್ಲಿ ಕಂಡುಬರುತ್ತದೆ[೬]. ಚೋಳರ ದಾಳಿಯಿಂದ ಸೂಡಿಯ ಬಹುಭಾಗ ನಾಶವಾಗಲು ಅಕ್ಕಾದೇವಿ ಅಲ್ಲಿಯ ಎಂಟುಜನ ವರ್ತಕರಿಗೂ, ಎಂಬತ್ತು ಒಕ್ಕಲುಗಳಿಗೂ ಸಲ್ಲಬೇಕಾದ ಅಂಗಡಿ, ಮನೆ, ಹೊಲಗಳನ್ನು 'ಪುನರ್ಭರಣ' ಮಾಡಿಕೊಟ್ಟು, ಇಡೀ ಕಿಸುಕಾಡು ಎಪ್ಪತ್ತಕ್ಕೆ ಅನೇಕ ಸುಂಕಗಳ ವಿನಾಯಿತಿ ನೀಡಿದ್ದಾಳೆ[೭]. ಅಲ್ಲದೆ, ಪಟ್ಟಣದಲ್ಲಿ ಏನಾದರೂ ಅನ್ಯಾಯ ನಡೆದರೆ ಅದಕ್ಕೆ ತಳವಾರನು ಹೊಣೆ, ಅವನು ಆ ನಷ್ಟವನ್ನು ತುಂಬಿ ಕೊಡಬೇಕು. ತಂದೆಯ ದೋಷ ಮಗನನ್ನು, ಮಗನ ದೋಷ ತಂದೆಯನ್ನು ಹೊಂದುವುದಿಲ್ಲ. ಕಳ್ಳ, ಬಂದಿಕಾರ, ಅಂಚಲ್‌ವಿಡಿವಂ, ಮೊದಲಾದ ಕೆಟ್ಟ ಮನುಷ್ಯರನ್ನು ಅಪರಾಧದ ಸ್ಥಳದಲ್ಲಿಯೇ ಇರಿದರೆ ದಂಡವಾಗಲಿ, ದೋಷವಾಗಲಿ ಇಲ್ಲ. ಇವರನ್ನು ಬಿಟ್ಟು ಬೇರೆಯವರನ್ನು

ಇರಿದರೆ ಅದಕ್ಕೆ ತಕ್ಕ ದಂಡವನ್ನು ತೆರಬೇಕು ಎಂದು ಅಕ್ಕಾದೇವಿಯು ರಾಜಾಜ್ಞೆಯನ್ನು ಹೊರಡಿಸಿದ್ದಳು[೮]. ಇಲ್ಲಿ ಅರಸಿಗೆ ಪ್ರಜಾವಾತ್ಸಲ್ಯ, ನ್ಯಾಯಪರತೆ, ದಮನಿತಪರ ನಿಲುವು ಮೊದಲಾದ ಪ್ರಜಾಹಿತಗುಣಗಳು ಕಂಡುಬರುತ್ತವೆ.

ಯುದ್ಧದಿಂದ ಹಾನಿಗೊಳಗಾದವರಿಗೆ ನಷ್ಟ ತುಂಬಿಸಲು ಪ್ರಯತ್ನಿಸಿದ ಮತ್ತೊಂದು ಘಟನೆಯನ್ನು ಹೊಯ್ಸಳ ರಾಣಿಯ ಕಾಲದಲ್ಲಿ ದಾಖಲಾಗಿದೆ. ಹೊಯ್ಸಳ ಬಲ್ಲಾಳನ ಪತ್ನಿಯಾದ ಚೋಳಮಹಾದೇವಿಯು ಗೌಡ ಕೇತಮಲ್ಲನ ಬಗ್ಗೆ ಚಾಡಿಮಾತನ್ನು ಕೇಳಿ ಅವನ ಅಹಂಕಾರ ಮುರಿಯಲು ಅವನ ಗ್ರಾಮ ಬೇವೂರನ್ನು ಮುತ್ತಿ ಅಲ್ಲಿನ ದನಗಳನ್ನು ಅಪಹರಿಸಲು ಸೈನ್ಯ ಕಳಿಸುತ್ತಾಳೆ. ಕೇತಮಲ್ಲ ತನ್ನ ಗ್ರಾಮದ ದನಗಳ ಅಪಹರಣ ತಡೆಯುತ್ತಾ ಹೋರಾಡಿ ಮಡಿಯುತ್ತಾನೆ. ಈ ವೇಳೆಗೆ ಚೋಳಮಹಾದೇವಿಗೆ ತಾನು 'ದುಷ್ಟರ ಮಾತ ಕೇಳಿ ವಿನಾಕಾರಣ ಬೇವೂರನ್ನು ಮುತ್ತಿಗೆ ಹಾಕಿಸಿ, ಕೇತಮಲ್ಲನನ್ನು ಸಾವಿಗೀಡುಮಾಡಿದೆನಲ್ಲ' ಎಂದು ಪಶ್ಚಾತಾಪ ಮೂಡುತ್ತದೆ. "ಎಮ್ಮ ಮಕ್ಕಳನ್ನು ನಾವು ನೋಯಿಸಿದೆವು.." ಎಂದು ಹೇಳಿ ಕೇತಮಲ್ಲನ ಮಗನಿಗೆ ಪರಿಹಾರವಾಗಿ ಉಂಬಳಿಯನ್ನಿತ್ತ ವಿವರಗಳನ್ನು ಶಾಸನವು ತಿಳಿಸುತ್ತದೆ.

ರಾಣಿಯರ ವ್ಯಾಪಾರನೀತಿ, ವ್ಯಾಪಾರಕ್ಕೆಂದು ಬಂದ ವಿದೇಶಿಯರಿಗೆ ಹಾಕಲಾದ ಶರತ್ತುಗಳು ಇವರ ಆಡಳಿತ ನೀತಿಯನ್ನು ಕುರಿತು ತಿಳಿಸುತ್ತವೆ. ಇಂಗ್ಲೀಷರಿಗೆ ಕಾರವಾರದಲ್ಲಿ ಕೋಠಿಯೊಂದನ್ನು ಕಟ್ಟಿಕೊಳ್ಳಲು ಅನುಮತಿ ನೀಡಿದ್ದ ಕೆಳದಿಯ ಚನ್ನವೀರಮ್ಮಾಜಿಯು ಕ್ರಿ.ಶ.೧೮೨೧ರಲ್ಲಿ ನಿರೂಪವೊಂದನ್ನು ಹೊರಡಿಸಿ ತನ್ನ ರಾಜ್ಯದಲ್ಲಿ ಇಂಗ್ಲೀಷರು ಹಸು ಎತ್ತುಗಳನ್ನೂ ಮತ್ತು ಜನರನ್ನು ಹಿಂಸಿಸಬಾರದೆಂದೂ, ಕೊಲ್ಲಬಾರದೆಂದೂ ಆಜ್ಞೆಮಾಡಿದ್ದಳು.

**ಅರಸಿಯರ ಆಡಳಿತ**

ಈ ಹಿಂದೆ ನೋಡಿದಂತೆ ಅರಸಿಯರು ನಾನಾ ಕಾರಣಗಳಿಂದ ಆಡಳಿತದ ಚುಕ್ಕಾಣಿ ಹಿಡಿದು ರಾಜ್ಯವಾಳಿದ್ದಾರೆ. ಆಳ್ವಿಕೆ ನಡೆಸುವ ಅರಸರಿಗೆಂದೇ ಕೆಲವು ಸಂಹಿತೆಗಳು ರಚಿತವಾಗಿದ್ದು, ಅದಕ್ಕನುಗುಣವಾಗಿ ಆಡಳಿತ ನಡೆಸುತ್ತಿದ್ದುದು ಪ್ರಾಚೀನ ಕಾಲದಲ್ಲಿ ಕಂಡು ಬರುತ್ತಿದ್ದ ಸಾಮಾನ್ಯ ಸಂಗತಿಯಾಗಿತ್ತು. ಅರಸಿಯರೂ ಇದಕ್ಕೆ ಹೊರತಾಗಿರಲಿಲ್ಲ. ಸಾಧಾರಣವಾಗಿ ಚಾಣಿಕ್ಯನ ನೀತಿ, ಶುಕ್ರನೀತಿಸಾರ, ಕರ್ನಾಟಕದಲ್ಲಿ ಚಾಲುಕ್ಯರ ಕಾಲದಲ್ಲಿ ರಚಿತವಾದ ಮಿತಾಕ್ಷರ ಇವೇ ಮೊದಲಾದ ಸಂಹಿತೆಗಳು ರಾಜನೀತಿಯನ್ನು ತಿಳಿಸಿ, ಆಳ್ವಿಕೆಗೆ ಮಾರ್ಗದರ್ಶಿಯಾಗಿರುತ್ತಿತ್ತು. ಅರಸಿಯರಿಗೆ ದೊರಕುತ್ತಿದ್ದ ಹಲವಾರು ವಿಧವಾದ ವಿದ್ಯಾಭ್ಯಾಸಗಳಲ್ಲಿ ರಾಜನೀತಿಯ ಪಾಠವೂ ಆಗಿರುತ್ತಿತ್ತೆನ್ನುವ ಉಲ್ಲೇಖಗಳು ದೊರಕುತ್ತದೆ.

ಅರಸಿಯರು ತಮ್ಮ ಆಳ್ವಿಕೆಯ ಸಂದರ್ಭದಲ್ಲಿ ಹಲವಾರು ಸಚಿವರು, ಸಲಹೆಗಾರರನ್ನು ಹೊಂದಿರುತ್ತಿದ್ದುದರ ಕುರಿತು ಮಾಹಿತಿಗಳು ದೊರಕುತ್ತವೆ. ಅರಸಿಯರ ಕೈಕೆಳಗಿನ ಕೆಲವು ಅಧಿಕಾರಿಗಳ ಉಲ್ಲೇಖವನ್ನು ಶಾಸನಗಳಲ್ಲಿ ಕಾಣುತ್ತೇವೆ. ಸೂಡಿಯ ಶಾಸನದಲ್ಲಿ **ಅರಸಿ ಅಕ್ಕಾದೇವಿ**ಯ ಕೈಕೆಳಗಿನ ಮನೆವೆರ್ಗಡೆ ಕಾಳಿದಾಸಯ್ಯ, ತಂತ್ರಪಾಳ ಮಿಳ್ಳಯ, ತಂತ್ರಪಾಳ ಚಿಟ್ಟಿಮಯ್ಯ, ಪ್ರಧಾನ ದೆಮ್ಮಣ್ಣ, ಅಳಿಯ ಚಂದಿಮಯ್ಯ, ಅಡಪದ ಚಾವುಂಡರಾಯ, ತಂತ್ರದ ಸೇನಬೋವ, ನಾಡಪೆರ್ಗಡೆ ನಾಗದೇವಯ್ಯ ಮೊದಲಾದ ಅಧಿಕಾರ ವರ್ಗದವರ ಹೆಸರುಗಳ ಜೊತೆ ಮಹಾಸಾಮಂತ ಅಜ್ಜರಭೂಪನ ಉಲ್ಲೇಖವಿದೆ.

ಗೋವೆಯ ಕದಂಬ ಅರಸಿಯೂ ಚಾಲುಕ್ಯ ರಾಜಕುಮಾರಿಯೂ ಆದ**ಮೈಳಲದೇವಿ**ಯ ಆಳ್ವಿಕೆಯಲ್ಲಿ ಮಹಾಪ್ರಧಾನ, ಪುರಾಧ್ಯಕ್ಷ, ಮನೆವೆರ್ಗಡೆ, ಮಹಾಪ್ರಧಾನ ದಂಡನಾಯಕ ಹೀಗೆ ವಿಭಿನ್ನ ಅಧಿಕಾರಿವರ್ಗದವರ ಉಲ್ಲೇಖ ದೊರಕುತ್ತದೆ[೯]. ಪೆರ್ಮಾಡಿ ವಿಕ್ರಮಾದಿತ್ಯನ ಮಡದಿ ಮಲ್ಲಣದೇವಿಯ ಮಂತ್ರಿಯನ್ನು ಬಾಗೇವಾಡಿಯ ಇಂಗಳೇಶ್ವರದ ಕ್ರಿ.ಶ.೧೧೨೬ರ ಶಾಸನ ಉಲ್ಲೇಖಿಸುತ್ತದೆ. ಇವಳ ಅರಮನೆಯ ಮಾಣಿಕಭಣ್ಡಾರ ನಿಯೋಗವನ್ನು

ನಾಗವರ್ಮನೆಂಬಾತ ನೋಡಿಕೊಳ್ಳುತ್ತಿದ್ದ. ಅರಸಿಯರಿಗೆ ನಿಷ್ಠೆ ತೋರುತ್ತಿದ್ದ ಅಧಿಕಾರಿಗಳು ಅರಸಿಯರ ಹೆಸರನ್ನು ಶಾಶ್ವತವಾಗಿಸುತ್ತಿದ್ದರು. ಹೊಯ್ಸಳ ರಾಣಿ ಚೋಳಮಹಾದೇವಿಯ ಗೌರವಸೂಚಕವಾಗಿ ಕ್ರಿ.ಶ.೧೨೯೧ರಲ್ಲಿ ಆಕೆಯ ಪಾದಪದ್ಮೋಪಜೀವಿ ಗಂಗ ಪೆರುಮಾಳೆ ದೇವರಸ ಕೊಳ್ಳಿಗನ ಘಟ್ಟಕ್ಕೆ ಆಕೆಯ ಹೆಸರನ್ನು ಇಟ್ಟು 'ಚೋಳಮಹಾದೇವಿಪುರ' ಎಂದು ಕರೆದಿದ್ದಾನೆ.

ರಾಣಿಯರು ತಮ್ಮ ರಕ್ತ ಸಂಬಂಧಿಗಳನ್ನು ಮಾಂಡಲೀಕರಾಗಿ, ಕೈಕೆಳಗಿನ ಅಧಿಕಾರಿಗಳಾಗಿ ನೇಮಿಸಿಕೊಳ್ಳುತ್ತಿದ್ದರು. ಪದ್ಮಲದೇವಿಯ ಸಹೋದರ ಇವಳ ಕೈಕೆಳಗಿನ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದ. ಈತ ಶಾಸನವೊಂದರಲ್ಲಿ ತನ್ನನ್ನು 'ಭಾವನ ಅಂಕಕಾರ; ಪದ್ಮಲದೇವಿಯ ನಿಜಗಂಧವಾರಣ' ಎಂದು ಕರೆದುಕೊಂಡಿದ್ದಾನೆ. ಮತ್ತೊಂದು ಉದಾಹರಣೆ ಎಂದರೆ, ವಿಕ್ರಮಾದಿತ್ಯನ ಅರಸಿ ಭಾಗಲದೇವಿಯ ಕೈಕೆಳಗಿನ ಅಧಿಕಾರಿಯಾಗಿದ್ದ ರಾಜಅರಸ ಎಂಬಾತನು ಈಕೆಯ ಸೋದರಮಾವನಾಗಿದ್ದ.

ಹೊಯ್ಸಳ ವಿಷ್ಣುವರ್ಧನನ ರಾಣಿ ಶಾಂತಲೆಯ ಉಲ್ಲೇಖವಿರುವ ಕ್ರಿ.ಶ.೧೧೧೭ರ ಕಾಲಕ್ಕೆ ಸೇರಿರುವ ಶಾಸನವೊಂದನ್ನು ಮಾಳಿಗೆಯೂರನ್ನಾಳುತ್ತಿದ್ದ ಬಲ್ಲೆಯನಾಯಕನೆಂಬುವನು ಹಾಕಿಸಿದ್ದಾನೆ. ಈತನು ತನ್ನನ್ನು 'ಪಿರಿಯರಸಿ ಪಟ್ಟಮಹಾದೇವಿ ಶಾಂತಲದೇವಿಯರ ಮಯ್ದುನ' ಎಂದು ಕರೆದುಕೊಂಡಿದ್ದಾನೆ. ರಾಣಿಯರ ಪಾದಪದ್ಮೋಪಜೀವಿ, ಅಂಕಕಾರ ಅಥವಾ ಇನ್ನಾವುದೋ ಸಂಬಂಧಿಯೆಂಬಂತೆ ತಮ್ಮನ್ನು ಕುರಿತು ಹೇಳಿಕೊಳ್ಳುವುದು ಆಯಾ ರಾಣಿಯರಿಗಿದ್ದ ಪ್ರಭಾವ ಗೌರವಗಳನ್ನು ತಿಳಿಸುತ್ತದೆ.

ದೇವಾಲಯ ನಿರ್ಮಾಣವು ದೊರೆಗಳ ಹಾಗೂ ಪ್ರಜೆಗಳ ಬಾಂಧವ್ಯಕ್ಕೆ ಸೇತುವೆಯಂತಿತ್ತು. ಅನೇಕ ಕಡೆಗಳಲ್ಲಿ ಪ್ರಜೆಗಳ ಕೋರಿಕೆಯ ಮೇರೆಗೆ ರಾಣಿಯರು ದೇವಾಲಯ ನಿರ್ಮಾಣ ಕೈಗೊಂಡುದುದು ತಿಳಿದುಬರುತ್ತದೆ. ಮಾಂಗೊಳ ಅಗ್ರಹಾರದ ಆಳ್ವಿಕೆ ನಡೆಸುತ್ತಿದ್ದ ಆರನೆಯ ವಿಕ್ರಮಾದಿತ್ಯನ ರಾಣಿ ಪದ್ಮಲದೇವಿಯು ಅಲ್ಲಿಯ ಮಹಾಜನರ ಕಾರುಣ್ಯವಚನಕ್ಕೆ ತಲೆಬಾಗಿ ನಾರಸಿಂಘದೇವರ ಪೂಜೆ ಜೀರ್ಣೋದ್ಧಾರಕ್ಕೆ ಹಾಗೂ ರಂಗಪುರದ ನವಮಾಲಾ ದೇವಸ್ಥಾನಕ್ಕೆ ದತ್ತಿ ನೀಡಿದ್ದಾಳೆ. ಇದೇ ಪ್ರಕಾರ ಸಿಂಧ ಮನೆತನದ ರಾಣಿ ಲಕ್ಷ್ಮಾದೇವಿಯು ಪ್ರಜೆಗಳ ಕೋರಿಕೆಯ ಮೇರೆಗೆ ಮಲ್ಲಿಕಾರ್ಜುನ ದೇವಾಲಯದ ಅಭಿವೃದ್ಧಿ ಕಾರ್ಯ ನೆರವೇರಿಸಿದ್ದಾಳೆ.

ರಾಣಿಯರು ತಾವು ನಂಬಿದ ಧರ್ಮಕ್ಕೆ ನಡೆದುಕೊಳ್ಳುತ್ತಿದ್ದರೂ, ಪ್ರಜೆಗಳ ಹಿತವನ್ನು ಕಾಪಾಡಲು ಸರ್ವಧರ್ಮ ಸಮನ್ವಯ ಕಾಪಾಡುತ್ತಿದ್ದುದಕ್ಕೆ ನಿದರ್ಶನಗಳಿವೆ. ಕಿಸುಕಾಡು ಎಪ್ಪತ್ತರ ಆಳ್ವಿಕೆ ನಡೆಸಿದ ಕದಂಬ ಅಕ್ಕಾದೇವಿ ಜೈನಧರ್ಮೀಯಳಾದರೂ ಎಲ್ಲ ಧರ್ಮವನ್ನೂ ಸಮಾನವಾಗಿ ಕಂಡು ಪುರಸ್ಕರಿಸಿ ದೇವಾಲಯ, ಬಸದಿಗಳಿಗೆ ನೀಡಿರುವ ಹಲವಾರು ದಾನಗಳ ಉಲ್ಲೇಖ ಕಂಡುಬರುತ್ತದೆ. ಇವಳು ಕ್ರಿ.ಶ.೧೦೬೪ರ ಸುಮಾರಿನಲ್ಲಿ ಬಂಕಾಪುರದ ಬಳಿಯ ಮಠವೊಂದರಲ್ಲಿ ನಡೆಯುವ ವಿದ್ಯಾಭ್ಯಾಸಕ್ಕಾಗಿ ದಾನ ನೀಡಿದ್ದಾಳೆ. ಈ ದಾನವನ್ನು ಸ್ವೀಕರಿಸಿರುವವಳು ಕಾಳಾಮುಖ ಸನ್ಯಾಸಿನಿ ಎನ್ನುವುದು ವಿಶೇಷವಾಗಿದೆ[೧೦].

ಕಿಸುಕಾಡು ೭೦ರ ರಾಜಧಾನಿಯಾಗಿದ್ದ ವಿಕ್ರಮಪುರಿಯ ನಂದಿಯಣ್ಣ ಷಡಂಗಿ ಭಟ್ಟೋಪಾಧ್ಯಾಯರ ಜೊತೆ ೪೨ ಜನ ಬ್ರಾಹ್ಮಣರಿಗೆ ಸರ್ವನಮಸ್ಯವಾಗಿ ಭೂದಾನ ನೀಡಿದ್ದಾಳೆ[೧೧]. ಸೂಡಿಯಲ್ಲಿ ಅಕ್ಕೇಶ್ವರ ದೇವಾಲಯವನ್ನು ನಿರ್ಮಾಣ ಮಾಡಿದ್ದಾಳೆ. ವಿಕ್ರಮಪುರದಲ್ಲಿ ಗುಣದ ಬೆಡಂಗಿ ಜಿನಾಲಯ ನಿರ್ಮಿಸಿ, ಅಲ್ಲಿನ ಪೂಜಾವಿಧಿಗಳಿಗೆ, ನಾಗಸೇನ ಪಂಡಿತರಿಗೆ, ಅಲ್ಲಿನ ಋಷಿಗಳಿಗೆ, ಅಜ್ಜಿಯರಿಗೆ ಭೂದಾನ ನೀಡಿದ್ದಾಳೆ.

ಹೀಗೆ ಶೈವರಿಗೆ, ಕಾಳಾಮುಖರಿಗೆ, ಬ್ರಾಹ್ಮಣರಿಗೆ, ಜೈನರಿಗೆ, ವಿದ್ಯಾರ್ಥಿಗಳಿಗೆ ಸಹಾಯ ಮಾಡಿರುವ ಅಕ್ಕಾದೇವಿ ತನ್ನ ನಾಡಿನಲ್ಲಿ ಧರ್ಮಸಮನ್ವಯವನ್ನು ಕಾಪಾಡಿ, ಎಲ್ಲ ಧರ್ಮೀಯರನ್ನೂ ಸಮಾನವಾಗಿ ಕಂಡಿರುವುದನ್ನು ಶಾಸನಗಳು ಉಲ್ಲೇಖಿಸುತ್ತವೆ. ವಿದ್ವಾಂಸರಿಗೆ ಆಶ್ರಯದಾತಳೂ, ವಿದ್ವತ್ಪ್ರೇಮಿಯೂ ಆದ ಇವಳ ರಾಜನೀತಿ,

ಶಸ್ತ್ರಾಭ್ಯಾಸಗಳನ್ನೂ ಶಾಸನಗಳು ಹೊಗಳಿವೆ. ೫೦ ವರ್ಷಗಳ ಸುದೀರ್ಘ ರಾಜ್ಯಾಡಳಿತ ನಡೆಸಿದ ಧೀರ ರಾಣಿ ಇವಳು.

ಹೊಯ್ಸಳ ವಿಷ್ಣುವರ್ಧನನ ರಾಣಿ ಶಾಂತಲೆಯ ತಂದೆ ಮಾರಸಿಂಹನು ಶೈವ, ತಾಯಿ ಮಾಚಿಕಬ್ಬೆಯು ಜೈನಳು, ಶಾಂತಲೆಯ ಪತಿ ವಿಷ್ಣುವರ್ಧನನು ಶ್ರೀವೈಷ್ಣವ ಧರ್ಮದ ಪ್ರಭಾವಕ್ಕೊಳಗಾದವನು. ಶಾಂತಲೆಯು ಸರ್ವಧರ್ಮಗಳಲ್ಲಿಯೂ ಆದರ ತೋರಿದ್ದು, ಶ್ರವಣಬೆಳಗೊಳದಲ್ಲಿನ ಸವತಿ ಗಂಧವಾರಣೆ ಬಸದಿ, ಈಶಪುರದಲ್ಲಿ ರಾಮೇಶ್ವರ ದೇವಾಲಯ, ಬೇಲೂರಿನ ಕಪ್ಪೆ ಚೆನ್ನಿಗರಾಯ ದೇವಾಲಯಗಳನ್ನು ನಿರ್ಮಿಸಿರುವುದರಲ್ಲಿ ವ್ಯಕ್ತವಾಗಿದೆ. ರಟ್ಟವಂಶದ ನಾಲ್ವಡಿ ಕಾರ್ತವೀರ್ಯನ ರಾಣಿ ಏಚಲಾದೇವಿಯು ಜೈನಳಾಗಿದ್ದರೂ ಶಿವಭಕ್ತೆಯಾಗಿದ್ದಳು. ಈಕೆಯ ಸಾಮನ್ತ ಅಂಕರಸ ಮಾಡಿಸಿದ ಅಂಕೇಶ್ವ ದೇವರಿಗೆ ದತ್ತಿಯನ್ನು ನೀಡಿದ್ದಾಳೆ.

ಕೆಳದಿ ರಾಣಿ ಚೆನ್ನಮ್ಮಳು ತನ್ನ ರಾಜ್ಯದಲ್ಲಿ ಕ್ರೈಸ್ತ ಧರ್ಮಕ್ಕೆ ಪ್ರೋತ್ಸಾಹ ಕೊಟ್ಟಿದ್ದಳು. ವ್ಯಾಪಾರ ಸಂಬಂಧವಾಗಿ ತನ್ನ ನಾಡಿಗೆ ಬರುತ್ತಿದ್ದ ಕ್ರೈಸ್ತರು ಇಲ್ಲಿ ಚರ್ಚು ಕಟ್ಟಿಕೊಳ್ಳಲು ಅವಕಾಶ ನೀಡಿದ್ದಳು. ಮುಂದೆ ಟಿಪ್ಪುವಿನ ಸೈನಿಕರ ಆಕ್ರಮಣಕ್ಕೆ ಒಳಗಾದ ಈ ಚರ್ಚ್‌ನ ವಿವರ ವಿದೇಶಿ ಪ್ರವಾಸಿಗರ ಬರಹದಲ್ಲಿ ದೊರಕುತ್ತದೆ.

ರಾಣಿಯರು ಕೇವಲ ಧಾರ್ಮಿಕ ಕಾರ್ಯಗಳಲ್ಲಷ್ಟೇ ಭಾಗವಹಿಸದೆ, ಆಡಳಿತದಲ್ಲಿಯೂ ಸಕ್ರಿಯವಾಗಿ ಭಾಗಿಯಾಗಿರುತ್ತಿದ್ದರು. ಕೃಷ್ಣದೇವರಾಯನ ಪಟ್ಟಮಹಿಷಿ ತಿರುಮಲಾದೇವಿಯು ರಾಜನ ಎಲ್ಲ ದಂಡಯಾತ್ರೆಗಳಲ್ಲೂ ಅವನೊಂದಿಗೆ ಇರುತ್ತಿದ್ದಳು. ಕೃಷ್ಣದೇವರಾಯನ ಉತ್ತರಾಧಿಕಾರಿಯನ್ನು ನೇಮಿಸುವಲ್ಲಿ ಇವಳ ಪಾತ್ರ ಹಿರಿದಾಗಿತ್ತು. ಕೃಷ್ಣದೇವರಾಯನ ಕಿರಿಯರಸಿ ಚಿನ್ನಾದೇವಿಯು ತನ್ನದೇ ಆದ ಸ್ವಂತ ಖಜಾನೆ ಹಾಗೂ ಸ್ವಂತ ಸೇವಕರನ್ನು ಹೊಂದಿದ್ದಳು. ಇವಳು ದೇವಾಲಯಗಳಿಗೆ ಮಾಡಿದ ಅಪಾರವಾದ ದಾನ, ಹಾಗೂ ಜನರ ಹಿತಾಸಕ್ತಿಗಳಿಗಾಗಿ ಮಾಡಿದ ಕೆಲಸಗಳಿಂದ ಜನತೆಯು ಇವಳನ್ನು ಪ್ರೀತಿಸುತ್ತಿದ್ದರೆಂದು ತಿಳಿದುಬರುತ್ತದೆ[೧೨&೧೩]. ಶಾಸನಗಳು ಈ ಕುರಿತಂತೆ ಹೆಚ್ಚಿನ ಮಾಹಿತಿಗಳನ್ನು ನೀಡುತ್ತವೆ. ತುಮಕೂರಿನ ಶಾಸನವೊಂದರಲ್ಲಿ ಅಲ್ಲಿನ ಮಹಾಜನರು ಈ ಹಿಂದೆ ಪ್ರೌಢದೇವರಾಯನ ಕಾಲದಲ್ಲಿ ತಮ್ಮ ಪೂರ್ವಜರಿಗೆ ಹಾಕಿಕೊಟ್ಟ ದತ್ತಿಯನ್ನು ಪುನರ್ನವೀಕರಿಸಬೇಕೆಂದು ಚಿನ್ನಾದೇವಿಯ ಮುಖಾಂತರ ಕೃಷ್ಣದೇವರಾಯನಲ್ಲಿ ಬಿನ್ನಹ ಮಾಡಿಕೊಂಡಿರುವುದು[೧೪], ಇವಳ ಅಧಿಕಾರದ ಗುರುತ್ವವನ್ನು ಸೂಚಿಸುತ್ತದೆ.

ಅರಸಿಯರು ಪ್ರಜೆಗಳೊಂದಿಗೆ ಹೊಂದಿರುತ್ತಿದ್ದ ಉತ್ತಮ ಬಾಂಧವ್ಯಕ್ಕೆ ಮತ್ತೊಂದು ಉತ್ತಮ ನಿದರ್ಶನ ಹೀಗಿದೆ. ಸಾಳ್ವ ಮನೆತನದ ಚೆನ್ನಾದೇವಿಯು ಪೋರ್ಚುಗೀಸರಿಗೆ ಸಲ್ಲಿಸುತ್ತಿದ್ದ ಕಾಣಿಕೆಯನ್ನು ನಿಲ್ಲಿಸಿದಳೆಂದು ಮಂಡಲಾಧಿಕಾರಿ ಅಲ್ಫಾನ್ಸೋ ಡಿಸೋಜ ಇವಳ ವ್ಯಾಪಾರ ಕೇಂದ್ರವಾದ ಭಟ್ಕಳವನ್ನು ಸೂರೆಮಾಡಿ, ಸುಟ್ಟು ನಾಶಪಡಿಸಿದ್ದ ವಿಚಾರ ಪೋರ್ಚುಗೀಸ್ ಇನ್ ಇಂಡಿಯಾ ಕೃತಿಯಲ್ಲಿ ದಾಖಲಾಗಿದೆ. ಇಂತಹ ಸಂದರ್ಭದಲ್ಲಿ ಅಧಿಕಾರ ವಹಿಸಿಕೊಂಡ ಚೆನ್ನಾದೇವಿಯ ಸಹೋದರಿ ಚೆನ್ನಭೈರಾದೇವಿಗೆ ನಗರವನ್ನು ಪುನರ್ನಿರ್ಮಾಣ ಮಾಡಲು ನಾಡಿನ ಸಿರಿವಂತರು ಹಾಗೂ ವರ್ತಕರು ಸಹಕಾರನೀಡಿದ್ದಾರೆ[೧೫].

ಕೆಳದಿಯ ಅರಸಿಯರಾದ ಚೆನ್ನಮ್ಮ ಹಾಗೂ ಚೆನ್ನವೀರಮ್ಮರು ರಾಜಾಡಳಿತದಲ್ಲಿ ತನ್ನ ಅಧಿಕಾರಿಗಳೊಡನೆ ಸಮಾಲೋಚನೆ ನಡೆಸಿ ಅವರ ಸಲಹೆಗಳನ್ನು ಸ್ವೀಕರಿಸಿ, ಆಡಳಿತವನ್ನು ನಡೆಸುತ್ತಿದ್ದರು. ಅಸಮರ್ಥ, ಅವಿಧೇಯ ಮತ್ತು ಲಂಚಗುಳಿ ಅಧಿಕಾರಿಗಳನ್ನು ಕೆಲಸದಿಂದ ನಿವೃತ್ತಿಗೊಳಿಸುತ್ತಿದ್ದರಲ್ಲದೆ, ಅವರ ಅಪರಾಧಗಳಿಗೆ ತಕ್ಕಂತೆ ಶಿಕ್ಷೆಯನ್ನೂ ನೀಡುತ್ತಿದ್ದರು (ಕೆಳದಿ ನೃಪವಿಜಯ). ಕೆಳದಿಯ ಚೆನ್ನಮ್ಮಳು ತನ್ನ ವಿರುದ್ಧ ನಿಂತಿದ್ದ ಸಬುನೀಸ ಕೃಷ್ಣಯ್ಯ ಹಾಗೂ ಕಾಸರಗೋಡು ತಿಮ್ಮಣ್ಣರನ್ನು ರಾಜಕೀಯ ತಂತ್ರವನ್ನು ಬಳಸಿ ತನ್ನ ಪ್ರಧಾನಿಗಳನ್ನಾಗಿ ಮಾಡಿಕೊಂಡು ಅವರ ಸಂಪೂರ್ಣ ಬೆಂಬಲ ಪಡೆದು ಚಾಣಕ್ಯನಿಗೆ ಸರಿಸಾಟಿ ಎನಿಸಿದ್ದಾಳೆ. ತನ್ನ ಅಧಿಕಾರಿ

ವರ್ಗದಲ್ಲಿದ್ದ ಮೂಡಬಿದರೆಯ ಲಿಂಗಪ್ಪನೆಂಬುವವನು ದ್ರೋಹವೆಸಗಿದ ಸಂದರ್ಭದಲ್ಲಿ ಅರಸಿ ಚೆನ್ನವೀರಮ್ಮಳು ಆತನನ್ನು ಕುಂಸಿಯಲ್ಲಿ ಸೆರೆಯಲ್ಲಿರಿಸಿದ್ದಳು.

ಬಾದಾಮಿ ಚಲುಕ್ಯರ ಕಾಲದಿಂದ ಬ್ರಿಟೀಶರ ಅಧೀನದ ಆಳ್ವಿಕೆಯವರೆಗೂ ಹಲವಾರು ರಾಜಮನೆತನಗಳ ಅರಸಿಯರು ಆಳ್ವಿಕೆ ಕೈಗೊಂಡಿರುವುದನ್ನು, ಅಧಿಕಾರದಲ್ಲಿ ಭಾಗಿಯಾಗಿರುವುದನ್ನು ಕಾಣುತ್ತೇವೆ. ಇಲ್ಲಿ ಇವರ ಪ್ರಜಾಪರ ಕಾಳಜಿ, ಧಾರ್ಮಿಕ ಸಮನ್ವಯ, ಕೈ ಕೆಳಗಿನ ಅಧಿಕಾರಿ ವರ್ಗದ ನಿಯಂತ್ರಣ ಮೊದಲಾದವುಗಳನ್ನು ಗುರುತಿಸಬಹುದು.

## ಆಳ್ವಿಕೆಯ ಅವಧಿಯಲ್ಲಿ ನಿರ್ಮಿಸಿದ ಕೆರೆ ಕಾಲುವೆ

ಕೌಟಿಲ್ಯನ ಅರ್ಥಶಾಸ್ತ್ರ ತಿಳಿಸುವಂತೆ ಕೆರೆ ಕಾಲುವೆ ನಿರ್ಮಿಸುವುದು ರಾಜನ ಪ್ರಮುಖ ಕರ್ತವ್ಯಗಳಲ್ಲೊಂದಾಗಿದೆ. ಅಷ್ಟೇಅಲ್ಲ ಕಟ್ಟಿಸುವವರಿಗೆ ಹಣ ಮತ್ತು ಉಪಕರಣಗಳನ್ನು ನೀಡಿ ಸಹಕರಿಸಬೇಕು ಎಂಬ ವಿಚಾರಗಳನ್ನೂ ಸಹ ಸಂಹಿತೆಗಳು ತಿಳಿಸುತ್ತವೆ. ಕೆರೆಯ ನಿರ್ಮಾಣದಷ್ಟೇ ಅದರ ನಿರ್ವಹಣೆಯ ಜವಾಬ್ದಾರಿ ಕೂಡ ಬಹಳ ಮುಖ್ಯವಾದದ್ದು. ಕೆರೆಯ ನೀರಿನ ಶುಚಿತ್ವ ಕಾಪಾಡಿಕೊಳ್ಳುವ, ಹಾಳಾದ ಕೆರೆಯ ಜೀರ್ಣೋದ್ಧಾರ ಕೈಗೊಳ್ಳುವ ಕುರಿತಾಗಿ ಸಹ ಸಂಹಿತೆಗಳಲ್ಲಿ ಹಲವಾರು ವಿಚಾರಗಳನ್ನು ಕಾಣುತ್ತೇವೆ. ಪ್ರಾಚೀನ ಕಾಲದಿಂದಲೂ ಕೃಷಿಯೇ ಮುಖ್ಯ ಕಸುಬಾಗಿದ್ದುದರಿಂದ ಅದಕ್ಕೆ ಅಗತ್ಯವಾದ ನೀರಾವರಿ ವ್ಯವಸ್ಥೆ ಕಲ್ಪಿಸುವುದು ರಾಜರಿಗೆ ಅತ್ಯವಶ್ಯಕವಾಗಿತ್ತು. ನಗರ ನಿರ್ಮಾಣವಾಗಬೇಕಾದಲ್ಲಿ ಕೆರೆಯ ನಿರ್ಮಾಣ ಅಗತ್ಯವಾಗಿತ್ತು. ಕನ್ನಡ ನಾಡಿನ ರಾಣಿಯರು ಕೇವಲ ದಾನಶೀಲೆಯರು, ಆಡಳಿತ ಚತುರೆಯರಷ್ಟೇ ಆಗಿರಲಿಲ್ಲ, ಲೋಕೋಪಕಾರ ದೃಷ್ಟಿಯುಳ್ಳವರೂ ಆಗಿದ್ದರು. ಅಂತೆಯೇ ಕೃಷಿ ಕಾರ್ಯಗಳಿಗೆ ಅನುಕೂಲವಾಗುವಂತೆ ಕೆರೆಗಳನ್ನು ಕಟ್ಟಿಸಿದರು. ಅಗ್ರಹಾರ–ದೇವಾಲಯಗಳ ನಿರ್ಮಾಣದೊಂದಿಗೆ ಕೆರೆಗಳ ಅಗತ್ಯವನ್ನೂ ಗಮನಿಸಿ ದೇವಾಲಯಗಳೊಂದಿಗೆ ತೀರ್ಥದ ಕೆರೆ–ಕಲ್ಯಾಣಿಗಳು, ವಾಸಯೋಗ್ಯವಾದ ಅಗ್ರಹಾರ ನಿರ್ಮಾಣದೊಂದಿಗೆ ಕೆರೆ–ಕಾಲುವೆಗಳನ್ನೂ ಕಟ್ಟಿಸಿದರು.

ಕರ್ನಾಟಕದ ಅರಸಿಯರು ನಿರ್ಮಿಸಿರುವ ಅಸಂಖ್ಯಾತ ಕೆರೆಗಳನ್ನು ನಾಡಿನಾದ್ಯಂತ ಕಾಣಬಹುದು. ಇವುಗಳಲ್ಲಿ ಅನೇಕ ಕೆರೆಗಳ ನಿರ್ಮಾಣದ ವಿಚಾರವನ್ನು ತಿಳಿಸುವ ಶಾಸನಗಳೂ ಲಭಿಸುತ್ತವೆ. ಯೆರೆಯಂಗನ ಮಡದಿ ಮಹಾದೇವಿ ಮುತ್ತಣ್ಣ ಪೊಸವೂರಿನಲ್ಲಿ ಕಟ್ಟಿಸಿದ ಕೆರೆ[೧೬], ಕಲ್ಯಾಣ ಚಾಲುಕ್ಯ ತ್ರಿಭುವನಮಲ್ಲ ಜಯಸಿಂಹ ಮಗಳು ಮೋಚಲದೇವಿ ಸಕಲೇಶಪುರದ ಹಳೇಬೇಲೂರಿನಲ್ಲಿ ನಿರ್ಮಿಸಿದ ಮೋಚಲಸಮುದ್ರ ಎಂಬ ಕೆರೆ, ಸಾಂತರ ರಾಣಿ ಚಟ್ಟಲದೇವಿಯು ಹೊಂಬುಜದಲ್ಲಿ ನಿರ್ಮಿಸಿದ ಕೆರೆ.[೧೭] ಶಿಡ್ಲಘಟ್ಟದಲ್ಲಿ ಕೆಂಪೇಗೌಡನ ಪತ್ನಿ ಹಲಸೂರಮ್ಮ ಕಟ್ಟಿಸಿದ ಕೆರೆ, ಪೆರ್ಬಾಳನ್ನು ಆಳುತ್ತಿದ್ದ ಭುಜಬ್ಬರಸಿ ಹೆಬ್ಬಾಳಿನಲ್ಲಿ ಕಟ್ಟಿಸಿದ ಕೆರೆ ಮೊದಲಾದವು ಅರಸಿಯರು ನಿರ್ಮಿಸಿದ ಕೆರೆಗಳಿಗೆ ಉದಾಹರಣೆಯನ್ನಾಗಿ ನೋಡಬಹುದು. ಅರಸಿಯರಷ್ಟೇ ಅಲ್ಲದೆ ಗಾವುಂಡಿಯರು, ದಣ್ಣಾಯಕ, ಪ್ರಧಾನಿ ಮೊದಲಾದ ಪ್ರಭಾವಿ ವ್ಯಕ್ತಿಯರ ಮಡದಿ, ತಾಯಿ, ಸಹೋದರಿಯರು ನಿರ್ಮಿಸಿದ ಅಸಂಖ್ಯಾತ ಕೆರೆಗಳ ಉಲ್ಲೇಖ ಕಂಡುಬರುತ್ತವೆ.

ಅರಸಿಯರು ಸ್ವತಃ ನಿರ್ಮಿಸುತ್ತಿದ್ದ ಕೆರೆಗಳಷ್ಟೇ ಅಲ್ಲದೆ, ತಮ್ಮ ಕೈಕೆಳಗಿನ ಅಧಿಕಾರಿಗಳು ನಿರ್ಮಿಸುತ್ತಿದ್ದ ಕೆರೆಗಳಿಗೆ ಧನಸಹಾಯ, ಭೂಮಿ, ತೆರಿಗೆ ಮೊದಲಾದವುಗಳನ್ನು ಕೊಡುವುದರ ಮೂಲಕ ಸಹಕಾರ ನೀಡಿರುವ ದಾಖಲೆಗಳೂ ಹಲವಾರು ದೊರಕುತ್ತದೆ. ಹೊಯ್ಸಳ ಅರಸಿ ಉಮಾದೇವಿಯು ತನ್ನ ಅಧಿಕಾರಿ ಕಟ್ಟಿಸಿದ ಕೆರೆಗೆ ಸಮಸ್ತ ತಿಪ್ಪೆಸುಂಕ, ಆಲೆವೆತ್ತ, ಮಾನೆಣ್ಣೆ, ಹಂದರವಣ, ಪೊಡೆಮೆಳಸು, ಅರಿಸಿ, ಅಡಕೆಯ ಹೇರು, ಸೀರೆಯ ಮಳವೆ, ಎಲೆಯ ಹೇರಿನ ಆಯಗಳನ್ನೆಲ್ಲಾ ಬಿಟ್ಟಿದ್ದಾಳೆ[೧೮].

ಕೆಲವೊಂದು ಕೆರೆಗಳ ನಿರ್ಮಾಣದೊಂದಿಗೆ ಕೆಲವು ರೋಚಕ ವಿಚಾರಗಳು ದೊರಕುತ್ತವೆ. ತಳಂಗೆರೆಯ ಮೋಚಬ್ಬರಸಿಯು ಪಾಳುಭೂಮಿಯನ್ನು ಹಸಿರಾಗಿಸಲು ಕಾಲುವೆಯನ್ನು ತೋಡಿಸಿ, ತಟಾಕಗಳನ್ನು ನಿರ್ಮಿಸಿ ನೀರಿನ ವ್ಯವಸ್ಥೆಮಾಡಿದ ವಿಚಾರವು ಸುಂದರ ಶಾಸನ ಕಾವ್ಯದಲ್ಲಿ ಬಣ್ಣಿತವಾಗಿದೆ[೧೯]. ನೊಳಂಬ ಅರಸಿ ಧರ್ಮಮಹಾದೇವಿಯು ತಾನು ಬೆದ್ದುಗೊಂದೆಯಲ್ಲಿ ಕಟ್ಟಿಸಿದ ಕೆರೆಗೆ ನೀರು ಬಂದ ಸಂಭ್ರಮದಲ್ಲಿ ಕೆರೆಯನ್ನು ಕಟ್ಟಿದಾತನಿಗೆ ಕಡಗವನ್ನು ತೊಡಿಸಿ, 'ಪೊನ್ನೇರದೊಡ್ಡ'ನೆಂದು ತಮ್ಮ ಪೂರ್ವಜರ ಹೆಸರನ್ನಿಟ್ಟು ಮರ್ಯಾದೆ ಮಾಡಿದ ವಿಚಾರವನ್ನು ಕಂಬದೂರಿನ ಶಾಸನವು ತಿಳಿಸುತ್ತದೆ[೨೦].

ನಗರವನ್ನು ಹೊಸದಾಗಿ ನಿರ್ಮಿಸಿ ಅಥವಾ ಪ್ರತಿನಾಮವನ್ನು ಕೊಟ್ಟು ಕೆರೆಯನ್ನು ನಿರ್ಮಿಸಿರುವುದನ್ನು ಕಾಣುತ್ತೇವೆ. ಅರಸಿ ಕಟ್ಟಿಸಿದ ಕರೆಯ ಕಾರಣದಿಂದಲೇ ಊರಿಗೆ ಅರಸೀಕೆರೆ ಎಂಬ ಹೆಸರು ಬಂದಿರುವುದನ್ನು ಗುರುತಿಸಬಹುದು. ಇಲ್ಲಿನ ಕೆರೆಯನ್ನು ಎರೆಯಂಗನ ಮಡದಿ ಮಹಾದೇವಿ ಕಟ್ಟಿಸಿದಳೆಂದು ತಿಳಿದುಬರುತ್ತದೆ[೨೧]. ಎಂಬ ಅಭಿಪ್ರಾಯವೂ ಇದೆ. ಹಾಸನ ತಾಲ್ಲೂಕಿನ ಶಾಂತಿಗ್ರಾಮದ ಶಾಸನದಲ್ಲಿ ಅರಸಿಕಟ್ಟೆ ಎಂಬ ಕೆರೆಯ ನಿರ್ಮಾಣ ಕುರಿತಂತೆ ಪ್ರಸ್ತಾಪವಿರುವುದನ್ನು ಕಾಣಬಹುದು.

ವಿಜಯನಗರದ ಅರಸ ಬುಕ್ಕರಾಯನ ಮಗಳಾದ ವಿರುಪಾದೇವಿಯ ಮಗಳು ಜೊಮ್ಮದೇವಿಯು ಪೆನುಗೊಂಡೆಯ ತಿರುಮಣಿ ಹಳ್ಳಿಯಲ್ಲಿ ಕಾಲುವೆ ನಿರ್ಮಾಣ ಮಾಡಿಸಿದ್ದು, ಈ ಕಾಲುವೆ ನಿರ್ಮಾಣಕ್ಕಾಗಿ ೧೩೦ ಗದ್ಯಾಣ, ಕೆಲವು ಭೂಮಿನೀಡಲಾಗಿದೆಯಲ್ಲದೆ, ಕಾರ್ಯವು ಯಶಸ್ವಿಯಾದ ನಂತರ ಕುದುರೆ ಹಾಗೂ ಕಡಗವನ್ನಿತ್ತು ಸನ್ಮಾನಿಸಲಾಗಿದೆ. ಆದರೆ ಗುತ್ತಿಗೆ ನೀಡಿದ ಸಂದರ್ಭದಲ್ಲಿ ಕಾಲುವೆಯಲ್ಲಿ ನೀರು ಬಾರದಿದ್ದಲ್ಲಿ ಈ ಎಲ್ಲ ಕೊಡುಗೆಯನ್ನೂ ಹಿಂದಿರುಗಿಸಬೇಕು ಜೊತೆಗೆ ನಿರ್ಮಾಣಕಾರ್ಯಕ್ಕೆ ಆದ ವೆಚ್ಚವನ್ನೂ ಗುತ್ತಿಗೆದಾರರೇ ಭರಿಸಬೇಕೆಂಬ ಒಪ್ಪಂದವನ್ನು ಮಾಡಿಕೊಳ್ಳಲಾಗಿತ್ತು ಎನ್ನುವ ವಿಚಾರ ವಿಶಿಷ್ಟವಾಗಿದೆ. ಕಾಲುವೆ ನಿರ್ಮಾಣವಾಗಿ ನೀರು ಬಂದ ಸಂದರ್ಭದಲ್ಲಿ ಮೇಲೆ ಉಲ್ಲೇಖಿಸಿದ ಕೊಡುಗೆಯನ್ನು 'ದಶವಂದ'ವಾಗಿ ನೀಡಿ ಸನ್ಮಾನಿಸಿದ ವಿಚಾರವೂ ಈ ಶಾಸನದಿಂದ ತಿಳಿದುಬರುತ್ತದೆ[೨೨]. ಈ ಶಾಸನದಲ್ಲಿನ ಕರಾರು ಹಾಗೂ ನೀರು ಬಂದ ನಂತರ ಗುತ್ತಿಗೆದಾರರಿಗೆ ಮಾಡಿದ ಸನ್ಮಾನ ಕಾಲುವೆ ನಿರ್ಮಾಣದಲ್ಲಿ ಅರಸಿಯೋರ್ವಳು ತೋರಿಸಿದ ಕಾಳಜಿಯನ್ನು ತಿಳಿಸುತ್ತದೆ.

ಕೆರೆಗಳ ನಿರ್ಮಾಣದ ಹಿಂದೆ ಕೇವಲ ರಾಜಕೀಯ ಕರ್ತವ್ಯವಷ್ಟೇ ಅಲ್ಲದೆ ಧಾರ್ಮಿಕ ಕಾಳಜಿಯೂ ಇರುತ್ತಿತ್ತು. ಸಾಮಾಜಿಕ ಕಳಕಳಿಯೆಂದು ಬಗೆಯುತ್ತಿದ್ದರು. ದೇವಾಲಯ, ಬಸದಿಗಳ ನಿರ್ಮಾಣದೊಂದಿಗೆ ನಡೆಯುತ್ತಿದ್ದ ಕೆಲವು ಕೆರೆ, ತೀರ್ಥಗಳ ಹಿನ್ನೆಲೆಯಲ್ಲಿ ಇಂತಹ ಭಾವನೆಗಳನ್ನು ಗುರುತಿಸಬಹುದು. ಶಾಂತಲೆಯು ಎಳಸನ ಕಟ್ಟದ ಕೆರೆಯನ್ನು ಕಟ್ಟಿಸಿ ಅದನ್ನು ತಾನು ನಿರ್ಮಿಸಿದ ಸವತಿ ಗಂಧವಾರಣ ಬಸದಿಗೆ ಸಮರ್ಪಿಸಿದ್ದಾಳೆ. ನೊಳಂಬಾಧಿರಾಜ ಮಹೇಂದ್ರನ ರಾಣಿ ದೀವಬ್ಬರಸಿಯು, ಆವನಿಯಲ್ಲಿ ನೊಳಂಬನಾರಾಯಣೇಶ್ವರ ದೇವಾಲಯದೊಂದಿಗೆ ಕೊಳವನ್ನೂ, ಪೊಜಿಲ್ಚೋರ ಮಂಗಲದಲ್ಲಿ ದೀವಬ್ಬೆ ಸಮುದ್ರವನ್ನೂ ಕಟ್ಟಿಸಿದ್ದಾಳೆ[೨೩]. ಹೊಯ್ಸಳ ಮೊದಲನೆಯ ನರಸಿಂಹನ ಆಳ್ವಿಕೆಯಲ್ಲಿ ನಂದಿಹಳ್ಳಿ ಪ್ರದೇಶದಲ್ಲಿ ಸಾತಲೆ ನಾಯಿಕಿತಿಯು ಸಾತಲೇಶ್ವರ ದೇವರ ಪ್ರತಿಷ್ಠೆ ಮಾಡಿ ಕೆರೆಕಟ್ಟಿಸಿದ್ದಾಳೆ. ನಿಡಗಲ್ಲಿನ ಚಿಕ್ಕತಿಪ್ಪರಾಜೇಂದ್ರನ ರಾಣಿ ಲಕ್ಷ್ಮಿ ಕೆರೆಯನ್ನು ನಿರ್ಮಿಸಿ ಭೂದಾನಗಳನ್ನು ನೀಡಿದ್ದಾಳೆ.

ಕೇವಲ ತಮ್ಮ ಶ್ರೇಯಸ್ಸಿಗಾಗಿ ಅಲ್ಲದೆ ಇತರರ ಪರೋಕ್ಷ ವಿನಯವಾಗಿ ಕೆರೆಯನ್ನು ಕಟ್ಟಿಸಿರುವುದನ್ನೂ ಕಾಣುತ್ತೇವೆ. ಹೊಯ್ಸಳ ಚಿಕ್ಕಶಾಂತಲೆಯ ತಾಯಿ ಜಕ್ಕಿಯಬ್ಬೆಯು ತನ್ನ ಮಗಳ ಹಾಗೂ ಮೊಮ್ಮಗಳ ಪರೋಕ್ಷವಿನಯವಾಗಿ ಕಟ್ಟಿಸಿದ ದೇವಾಲಯಗಳೊಂದಿಗೆ ತೀರ್ಥದ ಕೆರೆಯನ್ನೂ ನಿರ್ಮಿಸಿದ್ದಾಳೆ. ಮಗನ

ಹೆಸರಿನಲ್ಲಿ ಕೆರೆಯನ್ನು ನಿರ್ಮಿಸಿದ ಮಹಾಪ್ರಧಾನಿ ಬೂಚಿರಾಜ ತಾಯಿ ಮಾಕಣವ್ವೆ ಮೊದಲಾದವರನ್ನು ಇಲ್ಲಿ ಗಮನಿಸಬಹುದು.

ತಾವು ಇತರರ ಹೆಸರಿನಲ್ಲಿ ಕೆರೆ, ಕಾಲುವೆಯನ್ನು ನಿರ್ಮಿಸಿದಂತೆ ಇತರರಿಗೂ ಕೆರೆ ನಿರ್ಮಿಸುವಂತೆ ಬುದ್ಧಿಮಾತನ್ನು ಹೇಳುತ್ತಿದ್ದ ಅರಸು ಮನೆತನದ ಹಾಗೂ ಅಧಿಕಾರಿವರ್ಗದ ಮಹಿಳೆಯರನ್ನು ಕಾಣಬಹುದು. "ಕೆರೆಯಂ ಕಟ್ಟಿಸು ಬಾವಿಯಂ ಸವೆಸು..." ಎಂದು ಕಿವಿಮಾತು ಹೇಳಿರುವ ಬೆಳೆಸಿದ ಅಮಾತ್ಯ ಲಕ್ಷ್ಮೀಧರನ ತಾಯಿ ಸಿಂಗಲೆಯಂತಹ ಹಲವಾರು ಮಹಿಳೆಯರು ಕಂಡುಬರುತ್ತಾರೆ. ತಾನು ಸತ್ತ ನಂತರ ತನ್ನ ಕುರಿತಾಗಿ ಯೋಚಿಸದೆ ಪ್ರಜೆಗಳ ಹಿತಕ್ಕಾಗಿ ಕೆರೆಯನ್ನು ನಿರ್ಮಿಸುವುದರಲ್ಲಿ ಗಮನಹರಿಸಬೇಕೆಂದು ಮಗನಿಗೆ ಬುದ್ದಿವಾದ ಹೇಳಿದ ಹರ್ಯಲೆ, ತನಗೆ ಉದಕದಾನದ ಫಲ ದೊರಕಬೇಕೆಂದು ಸಾಯುವಗಳಿಗೆಯಲ್ಲಿ ಅಪೇಕ್ಷಿಸಿ ಕೆರೆಯ ನಿರ್ಮಾಣಕ್ಕೆ ಕಾರಣಳಾದ ಸಾಗುಳದ ರಾಜಿಗಾವುಂಡನ ಹೆಂಡತಿ ಸೋರಿಗಾವುಂಡಿ[೨೪] ಮೊದಲಾದ ನಾಯಕಿಯರ ಸಮಾಜಮುಖಿ ಕಾರ್ಯಗಳೂ, ಮಕ್ಕಳಿಗೆ ಹೇಳಿದ ಕಿವಿಮಾತು ಆದರ್ಶವಾಗಿದೆ.

ಕೆರೆ – ಕಾಲುವೆಯ ನಿರ್ಮಾಣದ ಹಿಂದಿರುವ ಒಪ್ಪಂದ ರಾಣಿಯರ ವ್ಯವಹಾರಗುಣಕ್ಕೆ ಸಾಕ್ಷಿಯಾಗಿದೆ. ವಿಜಯನಗರದ ಜೊಮ್ಮದೇವಿಯು ಕಾಲುವೆಯ ಕಾಮಗಾರಿಯ ಗುತ್ತಿಗೆಯನ್ನು ಪಡೆದವರೊಂದಿಗೆ ಕಾಲುವೆಯಲ್ಲಿ ನೀರು ಬಾರದಿದ್ದಲ್ಲಿ ತಾನು ಅದಕ್ಕಾಗಿ ನೀಡಲಿರುವ ಕೊಡುಗೆಯನ್ನೂ ಹಿಂದಿರುಗಿಸಬೇಕು ಜೊತೆಗೆ ನಿರ್ಮಾಣಕಾರ್ಯಕ್ಕೆ ಆದ ವೆಚ್ಚವನ್ನೂ ಗುತ್ತಿಗೆದಾರರೇ ಭರಿಸಬೇಕೆಂದು ಮಾಡಿಕೊಂಡ ಒಪ್ಪಂದವು ಅರಸಿಯರ ಕಾಳಜಿ, ಜವಾಬ್ದಾರಿಗಳನ್ನು ತಿಳಿಸುತ್ತದೆ. ಇಂಥ ಜನೋಪಯೋಗಿ ಕೆಲಸ ಮಾಡುವ ರಾಣಿಯು ತನ್ನ ಅಧಿಕಾರಿಗಳಿಗೆ ಹಾಗೂ ಸಾಮಂತರಿಗೆ ಮಾದರಿಯಾಗಿರುವುದನ್ನೂ ಇಂಥ ಶಾಸನಗಳು ತಿಳಿಸುತ್ತವೆ. ಯೆರೆಯಂಗನ ಮಡದಿ ಮಹಾದೇವಿ ಮುತ್ತಣ್ಣ ಪೊಸವೂರಿನಲ್ಲಿ ಕೆರೆ ಕಟ್ಟಿಸಿದ ವಿಚಾರ ತಿಳಿಸುವ ಶಾಸನವು ಅವಳ ಅಧಿಕಾರಿವರ್ಗದವರ ನಿಷ್ಠೆಯನ್ನು ಸಮರ್ಥರೀತಿಯಲ್ಲಿ ಬಳಸಿಕೊಂಡ ಅರಸಿಯ ವೈಖರಿಯನ್ನು ತಿಳಿಸುತ್ತದೆ. ಊರಿನಲ್ಲಿ ಜನರು ಕೊಡುತ್ತಿದ್ದ ದಂಡರೂಪದ ಉತ್ಪನ್ನವನ್ನು ಕೆರೆಗಳ ನಿರ್ಮಾಣ ಹಾಗೂ ನಿರ್ವಹಣೆಗಳಿಗೆ ವಿನಿಯೋಗಿಸಲೆಂದು ಹೊರಡಿಸುತ್ತಿದ್ದ ಆಜ್ಞೆ, ವಿಶಿಷ್ಟ ತೆರಿಗೆಯ ಹಣವನ್ನು ಕೆರೆಯ ನಿರ್ವಹಣೆಗೆಂದು ಬಿಡುತ್ತಿದ್ದ ನಿರ್ಣಯಗಳ ಹಲವಾರು ಉದಾಹರಣೆಗಳು ಅರಸಿಯರು ಕೆರೆಗಳ ನಿರ್ಮಾಣ ಹಾಗೂ ನಿರ್ವಹಣೆಗಾಗಿ ರೂಪಿಸಿದ ಯೋಜನೆ, ಕೈಗೊಂಡ ಕಾರ್ಯಗಳನ್ನು ತಿಳಿಸುತ್ತವೆ.

## ವ್ಯಾಪಾರ–ವಾಣಿಜ್ಯ

ರಾಜ್ಯದ ಬೊಕ್ಕಸ ತುಂಬಿಸುವಲ್ಲಿ, ವಾಣಿಜ್ಯ–ವ್ಯಾಪಾರಗಳು ಪ್ರಮುಖ ಪಾತ್ರ ವಹಿಸುತ್ತಿತ್ತು. ಅರಸಿಯರು ಇಂತಹ ಕಾರ್ಯಗಳಿಗೆ ಪ್ರೋತ್ಸಾಹ ನೀಡಿರುವುದನ್ನು ಕಾಣುತ್ತೇವೆ. ವೀರಬಲ್ಲಾಳನ ರಾಣಿ ಕೇತಲದೇವಿ ಕುಂದವಾಡದ ವ್ಯಾಪಾರಿ ಸಂಘಗಳಿಗೆ, ಮಹಾಜನರಿಗೆ ಅನುಕೂಲವಾಗುವಂತೆ ಕುಂದವಾಡದಲ್ಲಿ ಸಂತೆಯನ್ನು ಸ್ಥಾಪಿಸಿದಳು[೨೫]. ತನ್ನ ಅಧಿಕಾರಿಗಳೊಂದಿಗೆ 'ನನ್ನಿ ಕಂಬ'ವನ್ನು ಪ್ರತಿಷ್ಠಾಪಿಸಿ, ಬುಧವಾರದಂದು ಸಂತೆ ನಡೆಸಲಾಗುವಂತೆ ಅನುವು ಮಾಡಿಕೊಟ್ಟಳೆಂಬ ವಿಚಾರವನ್ನು ಈ ದಾಖಲೆ ತಿಳಿಸುತ್ತದೆ.

ಕಲ್ಯಾಣದ ಚಾಲುಕ್ಯರ ಸಾಮಂತ ಬೊಪ್ಪಣ್ಣನ ಅರಸಿ ಸಿರಿದೇವಿಯಕ್ಕಳೂ ಧರ್ಮಸಂತೆಯೊಂದನ್ನು ಸ್ಥಾಪಿಸಿದ್ದಳು. ಇದು ಆನೆ ಕುದುರೆ ಮಾಣಿಕ ಮುಂತಾದವುಗಳ ವ್ಯಾಪಾರ ನೆಡಸಬಹುದಾಗಿದ್ದ ಹಿರಿಯ ಮಟ್ಟದ ಸಂತೆಯಾಗಿತ್ತು[೨೬]. ತನ್ನ ಊರಿನ ಆದಾಯವೂ ಇದರಿಂದ ಹೆಚ್ಚಾಗುವುದನ್ನು ಮನಗಂಡಿದ್ದ ಅರಸಿಯು ಇಂತಹ ಕಾರ್ಯಗಳಿಗೆ ಪ್ರೋತ್ಸಾಹ ನೀಡುತ್ತಿದ್ದರು.

ಆಳುಪ ರಾಣಿ ಪಾಂಡ್ಯಮಹಾದೇವಿಯು ತನ್ನ ಆಡಳಿತ ಸಂದರ್ಭದಲ್ಲಿ, ವ್ಯಾಪಾರಕ್ಕೆ ನೀಡಿದ ಮಹತ್ವವನ್ನೂ, ತೋರಿಸಿದ ಆಸಕ್ತಿಯನ್ನು ಕುರಿತು ಉಡುಪಿಯ ಕೋಟಕೇರಿಯ ಕ್ರಿ.ಶ. ೧೧೫೫ರ ಶಾಸನ ತಿಳಿಸುತ್ತದೆ[೨೭]. ಅಲ್ಲಿನ ವ್ಯಾಪಾರಿ ವರ್ಗಕ್ಕೆ ಇದು ಅನುಕೂಲ ವಾಗುತ್ತಿದ್ದುದಲ್ಲದೆ, “ಆ ಊರನಾಳ್ವ ಪಾಂಡ್ಯಮಹಾದೇವಿಯರ ನಕರಸಮೂಹ” ಎಂಬ ವಾಕ್ಯವು ಅರಸಿಯು ತನ್ನದೇ ಆದ ವರ್ತಕ ಸಂಘವೊಂದನ್ನು ಹೊಂದಿದ್ದಳು ಎಂಬುದನ್ನು ತಿಳಿಸುತ್ತದೆ.

ವ್ಯಾಪಾರಿಗಳಿಂದ ನಾಡಿನ ಆದಾಯ ಹೆಚ್ಚುತ್ತಿತ್ತು. ಇವರಿಂದ ಕೇವಲ ಆದಾಯವನ್ನು ಮಾತ್ರ ಅಪೇಕ್ಷಿಸದೆ ಅವರಿಗೆ ಪ್ರೋತ್ಸಾಹ ನೀಡುವುದು ಹಾಗೂ ಅವರ ಹಿತಾಸಕ್ತಿಯನ್ನು ಗಮನಿಸುವುದೂ ಸಹ ದೊರೆಗಳ ಕರ್ತವ್ಯವಾಗಿತ್ತು. ರಾಜ್ಯದ ಆರ್ಥಿಕ ಸ್ಥಿತಿ–ಗತಿಗಳ ಸಮತೋಲನವು ಯುದ್ಧ ಹಾಗೂ ವ್ಯಾಪಾರಗಳ ಮೇಲೆ ಅವಲಂಬಿತವಾಗಿರುತ್ತಿತ್ತು. ಇತರ ರಾಜ್ಯಗಳ ಮೇಲಿನ ಗೆಲುವು ಬೊಕ್ಕಸ ತುಂಬಿಸುತ್ತಿತ್ತಾದರೂ, ಸೈನ್ಯದ ಖರ್ಚು ನಿಭಾಯಿಸಬೇಕಾಗುತ್ತಿತ್ತು. ಯುದ್ಧದಲ್ಲಿ ಅನುಭವಿಸುತ್ತಿದ್ದ ಸೋಲು ಕೇವಲ ರಾಜ್ಯದ ಬೊಕ್ಕಸಕ್ಕೆ ಉಂಟಾಗುತ್ತಿದ್ದ ಹಾನಿಯಷ್ಟೇ ಆಗಿರದೆ, ಯುದ್ಧ ನಡೆದ ಪ್ರದೇಶ ಸುತ್ತಮುತ್ತಣ ಗ್ರಾಮಗಳು ಹಾನಿಗೊಳಗಾಗುತ್ತಿದ್ದವು. ಇಂತಹ ಸಂದರ್ಭದಲ್ಲಿ ಅವುಗಳ ಪುನರುಜ್ಜೀವನಗೊಳಿಸುವ ಜವಾಬ್ದಾರಿಯನ್ನು ಸ್ವತಃ ರಾಣಿಯೇ ವಹಿಸುತ್ತಿದ್ದಳೆಂಬುದಕ್ಕೂ ಉದಾಹರಣೆಗಳು ಕಂಡುಬರುತ್ತವೆ[೨೮].

ಗೇರುಸೊಪ್ಪೆಯನ್ನಾಳುತ್ತಿದ್ದ ಚನ್ನಭೈರಾದೇವಿ ಹಾಗೂ ಪೋರ್ಚುಗೀಸರ ನಡುವೆ ನಡೆದ ಸಮರದಲ್ಲಿ ಗೋವೆಯ ರಾಜ್ಯಪಾಲ, ಅಲ್ಫಾನೋ ಡಿಸೋಜಾ ಎಂಬುವ ತನ್ನ ಅಧಿಕಾರಿಯೊಂದಿಗೆ ೧೨೦೦ ಸೈನಿಕ ಬಲದೊಂದಿಗೆ ಭಟ್ಕಳದಲ್ಲಿದ್ದ ರಾಣಿಯ ಅರಮನೆಯನ್ನು ಸಂಪೂರ್ಣ ಸೂರೆಮಾಡಿ ಸುಟ್ಟು ನಾಶಪಡಿಸಲು, ಅಲ್ಲಿನ ವರ್ತಕ ಸಂಘದವರು ಹಾಗೂ ವ್ಯಾಪಾರಿಗಳು ನಗರವನ್ನು ಪುನರ್‌ನಿರ್ಮಾಣ ಮಾಡಲು ಸಹಕರಿಸಿದರು. ಇದು ಸಮುದ್ರತೀರದ ವ್ಯಾಪಾರಕ್ಕೆ ರಾಣಿಯು ಬೆಂಬಲವಿತ್ತಂತೆ, ಅಲ್ಲಿನ ವರ್ತಕರು ರಾಣಿಗೆ ಬೆಂಬಲ ನೀಡಿದ್ದನ್ನು ಸೂಚಿಸುವುದಲ್ಲದೆ, ಆ ಕಾಲದ ಮೌಲ್ಯಗಳ ಬಗ್ಗೆ ಬೆಳಕು ಚೆಲ್ಲುತ್ತದೆ.

ಕ್ರಿ.ಶ.೧೭೫೫ರಲ್ಲಿ ಕಣ್ಣಾನೂರಿನ ಸುಲ್ತಾನ ಆಲಿರಾಜ ಸಮುದ್ರಮಾರ್ಗವಾಗಿ ಬಂದು ಮಂಜೇಶ್ವರದ ಬಂದರು ವ್ಯಾಪಾರಿಗಳನ್ನೂ ಹಾಗೂ ಕೊಲ್ಲೂರು ದೇವಾಲಯದ ನಗನಾಣ್ಯಗಳನ್ನು ದೋಚಲು, ರಾಣಿ ಚನ್ನವೀರಮ್ಮಾಜಿಯು ಕೂಡಲೆ ತನ್ನ ಸುಸಜ್ಜಿತವಾದ ಸೈನ್ಯವನ್ನು ಅಲ್ಲಿನ ವ್ಯಾಪಾರಿಗಳ ಬೆಂಬಲಕ್ಕೆ ಕಳುಹಿಸಿದಳು, ಆದರೆ ಅಷ್ಟರಲ್ಲಿ ವ್ಯಾಪಾರಿಗಳನ್ನು ದೋಚಿದ್ದ ಶತ್ರುಗಳು ಅಲ್ಲಿಂದ ಪಲಾಯನ ಮಾಡಿದ್ದರು. ಅಷ್ಟಕ್ಕೇ ಸುಮ್ಮನಾಗದ ರಾಣಿಯು ಮಲಬಾರಿಗೆ ರಾಜ್ಯದಿಂದ ಅಕ್ಕಿಯನ್ನು ರವಾನಿಸಕೂಡದೆಂದು ಆದೇಶನೀಡಿದಳು.

ವರ್ತಕರ ಸಮೂಹ ರಾಜ್ಯಾಡಳಿತದಲ್ಲಿ ಪ್ರವೇಶಿಸುತ್ತಿತ್ತು. ವ್ಯಾಜ್ಯಗಳನ್ನು ಬಗೆಹರಿಸುವಲ್ಲಿ ರಾಣಿಗೆ ಸಹಕರಿಸುತ್ತಿದ್ದುದನ್ನು ಕಾಣುತ್ತೇವೆ. ರಾಣಿ ಅಬ್ಬಕ್ಕಳ ಆಡಳಿತದಲ್ಲಿ ತಲೆದೋರಿದ ಧಾರ್ಮಿಕ ಸಂಘರ್ಷದ ಒಂದು ವ್ಯಾಜ್ಯವನ್ನು ಬಗೆಹರಿಸಲು ವರ್ತಕಸಂಘ ಹಾಗೂ ಮಠಾಧಿಪತಿಗಳು ಮಧ್ಯಸ್ಥಿಕೆ ವಹಿಸಿದ್ದನ್ನು ಶಕ ೧೪೯೬ ಕಾಲಕ್ಕೆ ಸೇರಿದ ತಾಮ್ರಶಾಸನವೊಂದು[೨೮ಅ] ಅನಾವರಣ ಗೊಳಿಸಿದೆ. ಬಿದಿರೆಯಲ್ಲಿ ಜಂಗಮರು ಪೂಜಿಸುತ್ತಿದ್ದ ವೀರೇಶ್ವರನನ್ನು ಕಿತ್ತು ಹಾಕಿದ್ದಕ್ಕೆ ಪ್ರತಿಕಾರವಾಗಿ ನೆಲ್ಲಿ ತೀರ್ಥದಲ್ಲಿ ಬ್ರಾಹ್ಮಣರ ಪೂಜೆಗೆ ಅಡ್ಡಿಪಡಿಸಿದ ಈ ವ್ಯಾಜ್ಯದ ಮಧ್ಯಸ್ಥಿಕೆಯನ್ನು ನಗರದ ಹಲವು ಸೆಟ್ಟಿಗಾರರು ಮತ್ತು ರತ್ನಪ್ಪ ಸೆಟ್ಟಿ ಎಂಬ ವ್ಯಾಪಾರಿಯು ಬಾಳೆಹಳ್ಳಿ ಮಠದ ಕುಮಾರ ಚೆನ್ನಬಸವರೊಂದಿಗೆ ಸಮಸ್ಯೆ ಬಗೆಹರಿಸಿ, ಆನಂತರ ತಮ್ಮ ತೀರ್ಮಾನವನ್ನು ಅರಸಿಗೆ ತಿಳಿಸಿ ಅವಳ ಒಪ್ಪವನ್ನು ಪಡೆದಿದ್ದಾರೆ.

ವಿದೇಶೀ ವ್ಯಾಪಾರದಲ್ಲಿ ಕರ್ನಾಟಕದ ರಾಣಿಯರ ಪಾತ್ರವನ್ನೂ ಗಮನಿಸಬಹುದು. ಆಳುಪ ವೀರ ಪಾಂಡ್ಯದೇವನ ಮರಣಾನಂತರ ಆಳ್ವಿಕೆ ವಹಿಸಿಕೊಂಡ ಆತನ ರಾಣಿ ಬಲ್ಲಮಹಾದೇವಿಯು ವ್ಯಾಪಾರ, ವ್ಯವಹಾರಗಳಿಗೆ ಹೆಚ್ಚಿನ ಪ್ರೋತ್ಸಾಹ ನೀಡಿ ಪಶ್ಚಿಮ ಸಮುದ್ರಾಧಿಪತಿಯಾಗಿದ್ದಳು. ಆ ಕಾಲದಲ್ಲಿ ಸಮುದ್ರದ ಮೇಲೆ ನಡೆಯುತ್ತಿದ್ದ ಎಲ್ಲ ರೀತಿಯ ಕಾರ್ಯಚಟುವಟಿಕೆಗಳ ಮೇಲೂ ಈಕೆ ಹಿಡಿತ ಸಾಧಿಸಿದ್ದಳು. ಬೃಹತ್ ಪ್ರಮಾಣದ ವ್ಯಾಪಾರದ ಮೇಲಿನ ನಿಯಂತ್ರಣ ಸಾಧಿಸಬೇಕಿದ್ದ ಅರಸಿಗೆ ದೇಶೀಯ ವ್ಯಾಪಾರಿಗಳಷ್ಟೇ ಅಲ್ಲದೆ ಸಾಮ್ರಾಟರು ಹಾಗೂ ವಿದೇಶಿಗರೊಂದಿಗಿನ ಉತ್ತಮ ಬಾಂಧವ್ಯ ಕೂಡ ಅತ್ಯಂತ ಮಹತ್ವದ್ದಾಗಿತ್ತು. ಇಂತಹ ಕಾರ್ಯವನ್ನು ಸೂಕ್ತರೀತಿಯಲ್ಲಿ ನಿಭಾಯಿಸಿ ತೋರಿಸಿದ ಕರಾವಳಿ ಪ್ರದೇಶದ ಕೆಲವು ಅರಸಿಯರಂತೆ ಅರಸಿ ಬಲ್ಲಮಹಾದೇವಿಯೂ ಸಮರ್ಥ ಆಡಳಿತಗಾರ್ತಿ ಎಂಬುದನ್ನು ನಿರೂಪಿಸಿದ್ದಳು.

ಇವಳ ಕಾಲದಲ್ಲಿ ಬಾರಕೂರು, ಬಸರೂರು ಪಟ್ಟಣಗಳು ತುಳುನಾಡಿನ ಪ್ರಧಾನ ವಾಣಿಜ್ಯ ಕೇಂದ್ರಗಳಾಗಿದ್ದವು. ಆಡಳಿತ ಸೌಕರ್ಯಕ್ಕಾಗಿ ಆ ನಗರವನ್ನು ಹತ್ತು ಕೇರಿಗಳಾಗಿ ವಿಭಜಿಸಲಾಗಿತ್ತು. ಮೂರುಕೇರಿ, ಚೌಳಿಯಕೇರಿ ಮಣಿಗಾರ ಕೇರಿ, ಕೋಟೆ ಕೇರಿ, ಪಡುವ ಕೇರಿಗಳ ಪ್ರಸ್ತಾಪವು ಆ ಕಾಲದ ಅನೇಕ ಶಾಸನಗಳಲ್ಲಿ ಕಂಡುಬರುತ್ತದೆ. ಪ್ರತಿಯೊಂದು ಕೇರಿಯಲ್ಲೂ ಸೆಟ್ಟಿಕಾರ ಮತ್ತು ನಖರಹಂಜಮಾನ (ವ್ಯಾಪಾರಿ) ಸಂಘಗಳಿದ್ದವು.

ಅರಬ ದೇಶದಿಂದ ಜಾತಿಕುದುರೆಗಳನ್ನು ಆಮದು ಮಾಡಿಕೊಳ್ಳಲು ಸಾಮ್ರಾಜ್ಯದ ಅಧಿಕಾರಿಗಳು ಮಂಗಳೂರು, ಬಾರಕೂರು ಮೊದಲಾದ ಬಂದರುಗಳನ್ನು ಉಪಯೋಗಿಸುತ್ತಿದ್ದರು. ಇವರ ಮೇಲೆ ವಿಧಿಸಲಾಗುತ್ತಿದ್ದ ಸುಂಕ ಈ ತೀರ ಪ್ರದೇಶಗಳನ್ನು ಆಳುತ್ತಿದ್ದ ಅರಸರ ಬೊಕ್ಕಸ ತುಂಬಿಸಲು ಕಾರಣವಾಗುತ್ತಿತ್ತು. ಹೀಗೆ ಅರಸಿ ಬಲ್ಲಮಹಾದೇವಿಯು ವ್ಯಾಪಾರ ವಹಿವಾಟುಗಳಿಂದ ರಾಜ್ಯವು ಸಂಪದ್ಭರಿತವಾಗಿರುವಂತೆ ನೋಡಿಕೊಂಡಳಲ್ಲದೆ ಪೂರ್ವದಿಂದ ನಡೆದುಕೊಂಡು ಬಂದ ವ್ಯವಹಾರಕ್ಕೆ ಚ್ಯುತಿಬಾರದಂತೆ ಆಡಳಿತ ನಿರ್ವಹಿಸಿದಳು.

ಮಹಾಮಂಡಲೇಶ್ವರಿ ಎನಿಸಿದ್ದ ಪದುಮಲದೇವಿಯು ಕ್ರಿ.ಶ.೧೫೨೮–೧೫೪೦ರವರೆಗೆ ಹೊನ್ನಾವರದಿಂದ ಆಳ್ವಿಕೆ ನಡೆಸುತ್ತ ಹೈವೆ ತುಳು ಕೊಂಕಣ ಮೊದಲಾದ ಸಮಸ್ತ ರಾಜ್ಯಗಳನ್ನು ಪ್ರತಿಪಾಲಿಸುತ್ತಿದ್ದವಳು. ಪೋರ್ಚುಗೀಸರು ಇವಳ ಕಾಲದಲ್ಲಿ ವ್ಯಾಪಾರವನ್ನು ಆರಂಭಿಸಿದರು. ಕೊಚ್ಚಿಯ ಕ್ಯಾಪ್ಟನ್ ಅಫಾನ್ಸೋ ಮೆಕ್ಸಿಯಾ ಎಂಬುವವನು ಪೋರ್ಚುಗಲ್ಲಿನ ತನ್ನ ಮಹಾರಾಜನಿಗೆ ಬರೆದ ಪತ್ರವೊಂದರ ಒಕ್ಕಣೆಯಿಂದ ರಾಣಿ ಪದುಮಲದೇವಿಯ ವ್ಯಾಪಾರ ವಿಚಾರ ತಿಳಿದುಬರುತ್ತದೆ. ಇವಳ ಕಾಲದಲ್ಲಿ ವಿದೇಶಗಳೊಂದಿಗಿನ ಸಾಂಬಾರ ಪದಾರ್ಥಗಳ ವ್ಯಾಪಾರ ಬಿರುಸಾಗಿ ಸಾಗಿತ್ತು. "ಬೆಟಿಕಾಲಿಯ ಮತ್ತು ಗೋವಾ ನಡುವೆ ಓನೋರ್ (ಹೊನ್ನಾವರ), ಮೆರ್ಜಿನ್ (ಮಿರ್ಜಾನ) ಮತ್ತು ಅಂಕೋಲಾ ಎಂಬ ಹೆಸರಿನ ಸ್ಥಳಗಳಿವೆ. ಇಲ್ಲಿಂದ ಪ್ರತಿವರ್ಷವೂ ೫೦೦೦ ಕುಸೆಡೋ ಬೆಲೆಯ ಮೆಣಸು ದಿಯೂ, ಆಮೇಜ್ ಮತ್ತು ಜೆಡ್ಡಾಗಳಿಗೆ ಹಡಗಿನಲ್ಲಿ ಹೋಗುತ್ತದೆ. ಮೂರರ ಹಡಗುಗಳು ಅದನ್ನು ಒಯ್ಯುತ್ತವೆ. ಈ ಸ್ಥಳಗಳು ಗೇರುಸೊಪ್ಪೆಯ ರಾಣಿಯ ಅಧಿಕಾರಕ್ಕೆ ಒಳಪಟ್ಟಿವೆ. ಅವಳು ನರಸಿಂಗರಾಜನ (ವಿಜಯನಗರ) ಅಧೀನಳಾಗಿದ್ದಾಳೆ. ಈ ಮೆಣಸು ಕೊಚ್ಚಿನ್‌ನಲ್ಲಿ ದೊರಕುವುದಕ್ಕಿಂತಲೂ ದೊಡ್ಡದು. ಆದರೆ ಅದರಷ್ಟು ಖಾರವಿಲ್ಲ. ನಾವು ಇದನ್ನು ಸಂಗ್ರಹಿಸಬೇಕೆಂದು ತೋರುತ್ತದೆ. ರಾಣಿಯೊಂದಿಗೆ ಒಂದು ಒಪ್ಪಂದ ಮಾಡಿಕೊಂಡು ಅದನ್ನು ಮಾಡಬಹುದು" ಎಂಬ ದಿ ಪೋರ್ಚುಗೀಸ್ ಇನ್ ಇಂಡಿಯಾ ಸಂಪುಟ ಒಂದರ ವರದಿಯನ್ನು (ಪು.೧೪೪) ಗಮನಿಸಬಹುದು[೨೯]. ಇದರಿಂದ ನಿಚ್ಚಳ ಆಗುವಂತೆ, ಪದುಮಲದೇವಿಯ ಕಾಲದಲ್ಲಿ ವಾಣಿಜ್ಯವು ಭರದಿಂದ ಸಾಗಿತ್ತು.

ಪದುಮಲದೇವಿಯ ಆಡಳಿತದಲ್ಲಿ "ಒಳಭಾಗಗಳಿಂದ ಪಶ್ಚಿಮ ಕರಾವಳಿಯ ಅಂಕೋಲ ಮಿರ್ಜಾನ ಹೊನ್ನಾವರ ಭಟ್ಕಳ ಬೈಂದೂರು ಬಸ್ರೂರು ಮಂಗಳೂರು ಮತ್ತು ಕುಂಬ್ಳೆ ಮೊದಲಾದ ಪಟ್ಟಣಗಳಿಗೆ ಕೃಷಿ ಉತ್ಪನ್ನಗಳು ಕಾವಡಿಗಳ ಮೂಲಕ ಸಾಗುತ್ತಿದ್ದುವು. ಒಂದು ಉದ್ದನೆಯ ಕೋಲಿಗೆ ಎರಡೂ ತುದಿಗಳಲ್ಲಿ ಹಗ್ಗದಿಂದ ಸರಕನ್ನು

ನೇತುಹಾಕಿ, ಹೆಗಲ ಮೇಲೆ ಹೊತ್ತು ಒಯ್ಯುವುದೇ ಕಾವಡಿ/ ತಲೆಹೊರೆಗಳು, ಕುದುರೆ ಹೇರುಗಳು, ಎತ್ತಿನ ಹೇರುಗಳು, ಬಂಡಿಗಳು ಮತ್ತು ಹೇರು ಕತ್ತೆಗಳೂ ಉಪಯೋಗವಾಗುತ್ತಿದ್ದವು. ಕರ್ನಾಟಕದ ಈ ಮುಖ್ಯ ಬಂದರುಗಳಲ್ಲಿ ಪೋರ್ಚುಗೀಸ್ ವರ್ತಕರು ಅಕ್ಕಿ, ಸಕ್ಕರೆ, ಸಾಂಬಾರ ವಸ್ತುಗಳು, ಹತ್ತಿಯ ಬಟ್ಟೆ, ಮೊದಲಾದುವನ್ನು ಕೊಂಡು ವಿದೇಶಗಳಿಗೆ ಹಡಗುಗಳ ಮೂಲಕ ರವಾನಿಸುತ್ತಿದ್ದರು. ಬಸ್ರೂರು ಬಾರಕೂರು ಮತ್ತು ಮಂಗಳೂರು ಬಂದರುಗಳಿಂದ ಮಾಲ್ಡೀವ್ ದ್ವೀಪಗಳು, ಏಡನ್ ಮತ್ತು ಆರ್ಮುಜ್‌ಗಳಿಗೆ ಅಕ್ಕಿಯು ರಫ್ತಾಗುತ್ತಿತ್ತು[೩೦].

ಮಹಾಮಂಡಲೇಶ್ವರಿ ರಾಣಿ ಪದುಮಲದೇವಿಯ ಆಳ್ವಿಕೆಯಲ್ಲಿ ವಿದೇಶಿ ವ್ಯಾಪಾರ ವಹಿವಾಟು ಭರದಿಂದ ಸಾಗಿತ್ತು. ಒಳ್ಳೆಯ ಆದಾಯ ಬರುತ್ತಿತ್ತು. ಯುದ್ಧಗಳಿರಲಿಲ್ಲವಾಗಿ ಪ್ರಭು–ಪ್ರಜೆಗಳು ನೆಮ್ಮದಿಯ ಬದುಕಿನಿಂದ ಸುಖ ಕಂಡರು. ಹಾಡುವಳ್ಳಿ–ಗೇರುಸೊಪ್ಪೆ ರಾಜ್ಯಗಳನ್ನು ಪ್ರಗತಿಪಥಕ್ಕೆ ಹೊರಳಿಸಿದ ಮೊದಲ ರಾಣಿ ಪದುಮಲದೇವಿ. ಇದು ಇತಿಹಾಸದಲ್ಲಿ ದಾಖಲಾಗಬೇಕಾದ ದೊಡ್ಡ ಸಾಧನೆ ಎಂದು ಕಮಲಾಹಂಪನಾ ಅವರು ಪ್ರತಿಪಾದಿಸುತ್ತಾರೆ[೩೧].

ಕೆಳದಿ ಸಂಸ್ಥಾನವು ಆಫ್ರಿಕದ ಕಾಂಗೋ, ಅರೇಬಿಯಾದ ಮಸ್ಕತ್ ಮತ್ತು ಯೂರೋಪಿನ ಮೆಡಿಟರೇನಿಯನ್ ಸಮುದ್ರ ತೀರದ ದೇಶಗಳೊಡನೆ ವ್ಯಾಪಕವಾದ ವ್ಯಾಪಾರ ವ್ಯವಸ್ಥೆಯನ್ನಿಟ್ಟುಕೊಂಡಿತ್ತು. ಅರಬ್ಬಿ ಕಡಲ ತೀರದಲ್ಲಿ ಮಂಗಳೂರು, ಹೊನ್ನಾವರ ಮಲ್ಪೆ, ಕುಂದಾಪುರ, ಕಾರವಾರ, ಮತ್ತು ಭಟ್ಕಳಗಳು ಮುಖ್ಯ ಬಂದರು ಕಟ್ಟೆಗಳಾಗಿದ್ದವು. ಒಳನಾಡಿನ ನದಿಗಳ ಮೂಲಕವೂ ವ್ಯಾಪಾರ ವಹಿವಾಟು ನಡೆಯುತ್ತಿತ್ತು. ದೋಣಿಗಳಿಗೆ ಮಣಿವೆ ಎಂದು ಕರೆಯುತ್ತಿದ್ದರು. ಒಳನಾಡಿನ ವ್ಯಾಪಾರವು ಸಾಮಾನ್ಯವಾಗಿ ಹೇರೆತ್ತುಗಳ ಮೂಲಕ ನಡೆಯುತ್ತಿತ್ತು. ವ್ಯಾಪಾರಿಗಳು ನೂರಾರು ಎತ್ತುಗಳ ಗುಂಪಿನೊಂದಿಗೆ ಊರಿಂದೂರಿಗೆ ಪ್ರಯಾಣ ಮಾಡುತ್ತಿದ್ದರು. ೫೦ ಎತ್ತುಗಳ ಒಂದು ಗುಂಪಿಗೆ 'ಎತ್ತುನಡೆ' ಎಂಬ ಹೆಸರಿತು. ಈ ಹೇರೆತ್ತುಗಳಲ್ಲಿ ಅಡಿಕೆ, ಮೆಣಸಿನಕಾಯಿ, ಕೊಬ್ಬರಿ, ಉಪ್ಪು ಬೆಲ್ಲ ಎಣ್ಣೆ, ತಂಬಾಕು, ಜವಳಿ, ಗೋದಿ, ಕಡಲೆಯ ಭೂಸಾ ಮುಂತಾದ ವಸ್ತುಗಳನ್ನು ಸಾಗಿಸುತ್ತಿದ್ದರು[೩೨]. ಬಿದನೂರಿನಿಂದ ಪಶ್ಚಿಮ ಕರಾವಳಿಯ ರೇವುಪಟ್ಟಣಗಳಿಗೆ ಅತ್ಯುತ್ತಮವಾದ ರಾಜಮಾರ್ಗಗಳಿದ್ದವು. ಒಳನಾಡಿನಲ್ಲಿಯೂ ಉತ್ತಮ ರಸ್ತೆಗಳಿದ್ದು ಅಲ್ಲಲ್ಲಿ ಸುಂಕದ ಕಟ್ಟೆಗಳಿದ್ದವು.

ವ್ಯಾಪಾರದಿಂದ ಲಾಭವಾಗುವುದಷ್ಟೇ ಅಲ್ಲದೆ, ಅದನ್ನು ಸಮರ್ಥವಾಗಿ ನೆರವೇರಿಸದಿದ್ದಲ್ಲಿ ಆಗುತ್ತಿದ್ದ ನಷ್ಟವು ದುಪ್ಪಟ್ಟಾಗಿರುತ್ತಿತ್ತು. ಇಂಥವರಿಗೆ ಶತ್ರುಗಳನ್ನು ನಿಗ್ರಹಿಸುವ ಛಲ–ಬಲ ಬಹು ಮುಖ್ಯವಾಗಿರಬೇಕಿತ್ತು. ಕರಿಮೆಣಸಿಗೆ ಬಹಳ ಬೇಡಿಕೆ ಒಡ್ಡಿದ್ದ ಪೋರ್ಚುಗೀಸರು ಗೋವಾದಲ್ಲಿ ತಳವೂರಿ ಸಮುದ್ರ ಕಳ್ಳತನಕ್ಕೆ ಕುಖ್ಯಾತರಾಗಿದ್ದರು.

ಪೋರ್ಚುಗೀಸರು ಭಾರತವನ್ನು ಪ್ರವೇಶಿಸಿದ್ದು ಮಹಾಮಂಡಲೇಶ್ವರಿ ಪದುಮಲದೇವಿಯ ಆಳ್ವಿಕೆಯಲ್ಲಿ. ಕ್ರಿ.ಶ.೧೫೨೮– ೧೫೪೦ಕಾಲದಲ್ಲಿ ಹೊನ್ನಾವರದಿಂದ ಆಳ್ವಿಕೆ ನಡೆಸುತ್ತ ಹೈವೆ ತುಳು ಕೊಂಕಣ ಮೊದಲಾದ ಸಮಸ್ತ ರಾಜ್ಯಗಳನ್ನು ಪ್ರತಿಪಾಲಿಸುತ್ತಿದ್ದ ಪದುಮಲದೇವಿಯು ಶರತ್ತುಬದ್ಧ ವ್ಯಾಪಾರವನ್ನು ಆರಂಭಿಸಿ ತನ್ನ ವರ್ತಕರಿಗೂ ಪ್ರಜೆಗಳಿಗೂ ರಕ್ಷಣೆ ಒದಗಿಸಿದ್ದಳು.

ಇವಳ ನಂತರದ ಕಾಲದಲ್ಲಿ ಬಂದ ಪ್ರಸಿದ್ಧ ರಾಣಿ ಚೆನ್ನಭೈರಾದೇವಿ ಕರಾವಳಿ ತೀರದ ಹೊನ್ನಾವರ, ಭಟ್ಕಳದಂಥ ಅಂತರಾಷ್ಟ್ರೀಯ ಮಹತ್ವದ ಬಂದರುಗಳ ನಾಡು ಹಾಗೂ ಮಿರ್ಜಾನ ಬೈಂದೂರು, ಅಂಕೋಲೆಗಳಂಥ ಒಳನಾಡನ್ನು ಜೋಡಿಸುವ ಚಿಕ್ಕರೇವುಗಳ ಪ್ರದೇಶಗಳ ಒಡೆತನ ಹೊಂದಿದ್ದಳು. ಇವಳಿಗೂ ಮುನ್ನ ಆಳ್ವಿಕೆ ನಡೆಸಿದ ಭೈರಾದೇವಿಯ ಕಾಲದಲ್ಲಿ ನಿಯಂತ್ರಣಕ್ಕೆ ಸಿಗದೆ ಪೋರ್ಚುಗೀಸರಿಂದ ಸಾಕಷ್ಟು ತೊಂದರೆ ಅನುಭವಿಸಿದ ಘಟನೆಗಳಿಂದ ಚೆನ್ನಭೈರಾದೇವಿಯು ಎಚ್ಚೆತ್ತಿದ್ದಳು. ಕಿರುಕುಳ ಕೊಡಲಾರಂಭಿಸಿದ

ಪೋರ್ಚುಗೀಸರನ್ನು ಅರಸಿ ಚೆನ್ನಭೈರಾದೇವಿಯು ಕೆಲವೊಮ್ಮೆ ಯುದ್ಧದಲ್ಲಿ, ಕೆಲವೊಮ್ಮೆ ಸಂಧಾನದ ಮುಖಾಂತರ ನಿಯಂತ್ರಣದಲ್ಲಿಟ್ಟುಕೊಂಡಿದ್ದಳು. ಇವರನ್ನು ಎದುರಿಸಲು ಅರಸಿಯು ವಿಜಾಪುರ ಮತ್ತು ಕಾಲಿಕತ್ತದ ಝಾಮೋರಿನನೊಡನೆ ಯುದ್ಧ ಸಹಾಯಗಳಿಗಾಗಿ ಒಪ್ಪಂದ ಮಾಡಿಕೊಂಡಿದ್ದಳು. ಹೊನ್ನಾವರವನ್ನು ವಶಪಡಿಸಿಕೊಳ್ಳಲು ಬಂದ ಪೋರ್ಚುಗೀಸರನ್ನು ಸಂಪೂರ್ಣವಾಗಿ ಮಣ್ಣುಮುಕ್ಕಿಸಿ ಅವರಿಗೆ ತಾನು ನೀಡಿದ್ದ ನಿವೇಶನಗಳನ್ನೂ ಫ್ಯಾಕ್ಟರಿಗಳನ್ನೂ ನೆಲಸಮ ಮಾಡಿ ಹೊರದೂಡಿದಳು.

ಚೆನ್ನಭೈರಾದೇವಿಯ ವ್ಯಾಪಾರ ಚತುರತೆ, ಅಪಾರ ಅಗತ್ಯಗಳನ್ನು ಪೂರೈಸುತ್ತಿದ್ದ ಚಾಕಚಕ್ಯತೆಯನ್ನು ಮನಗಂಡ ಪೋರ್ಚುಗೀಸರು ಅರಸಿಯನ್ನು 'ರೈನಾ–ಡಾ–ಪಿಮೆಂಟಾ' (ಕರಿಮೆಣಸಿನ ರಾಣಿ) ಎಂದು ಕರೆದರು. ಪೋರ್ಚುಗೀಸರೊಂದಿಗಷ್ಟೇ ಅಲ್ಲದೆ ಅರಬಸ್ತಾನ್, ಪರ್ಷಿಯ ದೇಶಗಳೊಂದಿಗೆ ಸಹ ಚೆನ್ನಭೈರಾದೇವಿಯು ಸ್ವತಂತ್ರ ವಾಣಿಜ್ಯ ಸಂಪರ್ಕ ಹೊಂದಿದ್ದಳು.

ಕೆಳದಿಯ ಚೆನ್ನಮ್ಮಾಜಿಯೂ ಕೂಡ ಸಮುದ್ರವ್ಯಾಪಾರ ನಡೆಸುತ್ತಿದ್ದಳು. ಹಿರಿಯ ಸೋಮಶೇಖರನಾಯಕನ ಕಾಲದಲ್ಲಿ ಕುಂದಾಪುರ, ಹೊನ್ನಾವರ ಮತ್ತು ಮಂಗಳೂರು ನಗರಗಳಲ್ಲಿ ವ್ಯಾಪಾರ ಕೇಂದ್ರ ತೆರೆಯಲು ಅನುಮತಿ ಪಡೆದುಕೊಂಡಿದ್ದ ಪೋರ್ಚುಗೀಸರು ಚನ್ನಮ್ಮಾಜಿಯು ಅಧಿಕಾರ ವಹಿಸಿಕೊಂಡಮೇಲೆ ಹೆಂಗಸೆಂಬ ಉದಾಸೀನದಿಂದ ಎರಡು ವ್ಯಾಪಾರಿ ಹಡಗುಗಳನ್ನು ಸ್ವಾಧೀನಪಡಿಸಿಕೊಂಡು ಅವುಗಳಲ್ಲಿದ್ದ ಸರಕನ್ನು ಮಾರಿಕೊಂಡರು. ಇವರ ವರ್ತನೆಯಿಂದ ಕುಪಿತಗೊಂಡ ಚನ್ನಮ್ಮ ಸಮಯ ಸಾಧಿಸಿ ಕರಾವಳಿ ತೀರದಲ್ಲಿ ಆಹಾರ ಸಂಗ್ರಹಣೆಗಾಗಿ ಹೋಗಿದ್ದ ಪೋರ್ಚುಗೀಸರ ಹಡಗುಗಳನ್ನು ವಶಪಡಿಸಿಕೊಂಡಳು. ಇದಕ್ಕೆ ಪ್ರತಿಯಾಗಿ ಪೋರ್ಚುಗೀಸರು ಯುದ್ಧದ ಬೆದರಿಕೆಯೊಡ್ಡಿದರೂ ಕದಲದ ಚನ್ನಮ್ಮಳಿಕೆ ಮಣಿದ ಪೋರ್ಚುಗೀಸರು ತಾವು ಹಿಡಿದ ಚನ್ನಮ್ಮಳ ಹಡಗುಗಳಿಗೆ ಪರಿಹಾರ ಧನವನ್ನು ಪಾವತಿಸಿ ತಮ್ಮ ಹಡಗುಗಳನ್ನು ಬಿಡಿಸಿಕೊಂಡರು. ಇದು ೧೬೭೪ರಲ್ಲಿ ಚನ್ನಮ್ಮ ಕೆಂಪುಜಲಸಂಧಿಗೆ ತೆರಳಿದ ಸಂದರ್ಭದಲ್ಲಿ ನಡೆದ ಘಟನೆಯಾಗಿದೆ.

ಪೋರ್ಚುಗೀಸರಿಂದ ಬೇಡಿಕೆ ಇದ್ದರೂ, ಅರಬ್ ವ್ಯಾಪಾರಗಾರರಿಗೆ ಅಕ್ಕಿ ರಫ್ತುಮಾಡಿದುದನ್ನು ಖಂಡಿಸಿದ ಪೋರ್ಚುಗೀಸರೊಂದಿಗೆ ಚೆನ್ನಮ್ಮಾಜಿಯು ಒಪ್ಪಂದ ಮಾಡಿಕೊಂಡು ತನ್ನ ಇತರ ವ್ಯಾಪಾರ ವ್ಯವಹಾರಗಳಿಗೆ ಅವರು ಮೂಗು ತೂರಿಸದ ಹಾಗೆ ದೂರವಿರಿಸಿದಳು.

ಕೆಳದಿಯ ಚೆನ್ನವೀರಮ್ಮಳ ಕಾಲದಲ್ಲಿಯೂ ಬಿರುಸಾಗಿ ಸಾಗಿದ್ದ ಸಮುದ್ರದಮೇಲಿನ ವ್ಯಾಪಾರವು ಬಹು ಆದಾಯಕರವಾಗಿತ್ತು. ವ್ಯವಸಾಯೋತ್ಪನ್ನ ವಸ್ತುಗಳಾದ ಹೊಗೆಸೊಪ್ಪು, ಕಾಳುಮೆಣಸು, ಭತ್ತ, ಅಕ್ಕಿ ಅಡಿಕೆ, ತೆಂಗು, ಸಾಂಬಾರ ಪದಾರ್ಥಗಳು ಮತ್ತು ಗೋಡಂಬಿಗಳಲ್ಲದೆ ಚಿನ್ನ, ರತ್ನಾಭರಣ, ದಂತ ಶ್ರೀಗಂಧ ಮೊದಲಾದ ಬಹು ಅಮೂಲ್ಯ ವಸ್ತುಗಳಿಗೂ ವಿದೇಶದಲ್ಲಿ ಬೇಡಿಕೆಗಳಿದ್ದು, ಕೆಳದಿಗೆ ಸೇರಿದ ಬಂದರಿನ ಮೂಲಕ ವ್ಯಾಪಾರ ವಹಿವಾಟುಗಳಿಗೆ ಅವಕಾಶ ಮಾಡಿಕೊಟ್ಟಿದ್ದ ಚನ್ನವೀರಮ್ಮಾಜಿಯು ಕಡಲ್ಗಳ್ಳರು ಮೊದಲಾದ ದರೋಡೆಕೋರರಿಂದ ಹಾಗೂ ವಿದೇಶೀ ಶಕ್ತಿಗಳಿಂದ ರಕ್ಷಣೆ ನೀಡಲು ಬಸವಪ್ಪನಾಯಕನ ಕಾಲದ ಕೋಟೆಗಳನ್ನು ಭದ್ರಗೊಳಿಸಿದಳು, ಮಿರಿಂಜನಗಢದ ಕೋಟೆಯನ್ನು ಮರಾಠರಿಂದ ಬಿಡಿಸಿಕೊಂಡಳು.

ಚೆನ್ನವೀರಮ್ಮಾಜಿಯ ಕಾಲದಲ್ಲಿ ಪೋರ್ಚುಗೀಸರು ಅಡಿಕೆ, ತಂಬಾಕುಗಳೊಂದಿಗೆ ಚಿನ್ನಾಭರಣಗಳು, ಸೊರಬ ಸಾಗರ ಸಿರ್ಸಿಗಳಲ್ಲಿ ತಯಾರಾಗುತ್ತಿದ್ದ ಶ್ರೀಗಂಧದ ಕೆತ್ತನೆ ವಸ್ತುಗಳಿಗೆ ಬೇಡಿಕೆಯಿಡುತ್ತಿದ್ದರು. ಅವರ ಅಗತ್ಯಗಳನ್ನು ಪೂರೈಸಿ ಅವರಿಂದ ಯುದ್ಧ ಸಾಮಗ್ರಿಗಳನ್ನು ಕೊಳ್ಳುತ್ತಿದ್ದಳು. ಈ ಎಲ್ಲ ಸಾಮಗ್ರಿಗಳಿಗಿಂತಲೂ ಅಕ್ಕಿಯ ವ್ಯಾಪಾರವೇ ಪ್ರಧಾನ ವಾಗಿರುತ್ತಿತ್ತು. ಪೋರ್ಚುಗೀಸರೊಂದಿಗೆ ಯಾವುದೇ ವೈಮನಸ್ಯ ಉಂಟಾದರೂ ಚೆನ್ನವೀರಮ್ಮಾಜಿಯು ಅಕ್ಕಿ ಮಾರಾಟವನ್ನು ನಿಲ್ಲಿಸುವುದರ ಮೂಲಕ ನಿಯಂತ್ರಿಸುತ್ತಿದ್ದಳು.

ಇವಳ ಕಾಲದಲ್ಲಿ ಬ್ರಿಟೀಶರೊಂದಿಗಿನ ವ್ಯಾಪಾರವೂ ಆರಂಭವಾಗಿತ್ತು. ಇವಳು ಇಂಗ್ಲೀಷರಿಗೆ ಕಾರವಾರದಲ್ಲಿ ಕೋಠಿಯೊಂದನ್ನು ಕಟ್ಟಿಕೊಳ್ಳಲು ಅನುಮತಿ ನೀಡಿದ್ದಳು. ಇಂಗ್ಲೀಷ್ ವ್ಯಾಪಾರಿ ಕಂಪೆನಿಗೆ ಫರ್ಮಾನೊಂದನ್ನು ನೀಡಿ ಕೆಲವು ಪ್ರಮುಖ ವಸ್ತುಗಳಿಗೆ ಶೇಕಡಾ ಒಂದೂವರೆಯಷ್ಟು ತೆರಿಗೆಯನ್ನು ವಿಧಿಸಿದಳು. ೧೮೭೧ರಲ್ಲಿ ನಿರೂಪವೊಂದನ್ನು ಹೊರಡಿಸಿ ರಾಣಿಯು ತನ್ನ ರಾಜ್ಯದಲ್ಲಿ ಇಂಗ್ಲೀಷರು ಹಸು ಎತ್ತುಗಳನ್ನೂ ಕೊಲ್ಲಬಾರದೆಂದೂ, ಜನರನ್ನು ಹಿಂಸಿಸಬಾರದೆಂದೂ ಆಜ್ಞೆಮಾಡಿದ್ದಳು.

ಹೀಗೆ ಪ್ರಾಚೀನ ಕಾಲದಿಂದಲೂ ಕನ್ನಡ ನಾಡಿನಲ್ಲಿ ನಡೆಯುತ್ತಿದ್ದ ವ್ಯಾಪಾರ–ವಾಣಿಜ್ಯ ಸಂಬಂಧಿ ವ್ಯವಹಾರಗಳಿಗೆ ರಾಜ ಮನೆತನದ ಕೊಡುಗೆ ಇದ್ದು, ರಾಜ್ಯಾಡಳಿತ ನಡೆಸಿದ ರಾಣಿಯರೂ ಸಹ ತಮ್ಮದೇ ಆದ ಕೊಡುಗೆಗಳನ್ನು ನೀಡಿದ್ದಾರೆ. ಅವಶ್ಯಕ ನೀತಿ–ನಿಯಮಾವಳಿಗಳನ್ನು ರೂಪಿಸಿ ವ್ಯವಹಾರಕ್ಕೆ ಉತ್ತೇಜನ ನೀಡಿದ್ದಾರೆ ಅಲ್ಲದೆ ಅಗತ್ಯ ಬಿದ್ದಾಗ ಹೋರಾಟವನ್ನೂ ನಡೆಸಿದ್ದಾರೆ.

### *ತೆರಿಗೆ–ಕಂದಾಯ*

ರಾಜ್ಯದಲ್ಲಿ ವಿಧಿಸಲಾದ ವಿವಿಧ ರೂಪದ ತೆರಿಗೆಗಳು, ರಾಜ್ಯದ ಬೊಕ್ಕಸಕ್ಕೆ ಮುಖ್ಯವಾದ ಆದಾಯವಾಗಿರುತ್ತಿತ್ತು. ಭೂಕಂದಾಯ, ವ್ಯಾಪಾರೀ ಸರಕುಗಳ ಮೇಲಿನ ಕಂದಾಯ, ಮೆಣಸು, ಅಡಿಕೆ, ವಿಳ್ಳೆದೆಲೆ ಮೊದಲಾದ ವಾಣಿಜ್ಯ ಬೆಳೆಗಳ ಮೇಲಿನ ಕಂದಾಯ, ವಿವಿಧ ವೃತ್ತಿಗಳಿಗೆ ವಿಧಿಸಲಾಗುತ್ತಿದ್ದ ಕಂದಾಯಗಳಲ್ಲದೆ ಎಣ್ಣೆಯ ಗಾಣ, ಆಲೆಮನೆ ಮೊದಲಾದವುಗಳ ಮೇಲೆ ಸುಂಕ ವಿಧಿಸಲಾಗುತ್ತಿತ್ತು. ತಿಪ್ಪೆಯ ಮೇಲೆ ಸುಂಕ ವಿಧಿಸಲಾಗುತ್ತಿದ್ದ ದಾಖಲೆಗಳೂ ಇವೆ. ಹೀಗೆ ವಿಧಿಸಲಾಗುತ್ತಿದ್ದ ತೆರಿಗೆಗಳಿಗೆ ಕೆಲವೊಮ್ಮೆ ವಿನಾಯಿತಿ ತೋರಿದ ಉದಾಹರಣೆಗಳು ಕಂಡುಬರುತ್ತವೆ. ನೈಸರ್ಗಿಕ ಅನಾಹುತಗಳಲ್ಲಿ ರೈತರಿಗೆ ತೆರಿಗೆ ಮಾಫಿ ಇದ್ದ ವಿಚಾರಗಳು ತಿಳಿದು ಬರುತ್ತದೆ. ಬೆಟ್ಟ, ಹೊಳೆ ಉಕ್ಕಿ ಹರಿದ ನಷ್ಟ, ಹೊಯ್ಲಿಗೆ ಹಾದು ಬೆಟ್ಟ ಮಾಡಿದ ನಷ್ಟ, ಉಪ್ಪ ನೀರು ಹಾದ ನಷ್ಟ, ಗೋಡೆ ಜಾರಿದ ನಷ್ಟ, ಮೊದಲಾದ ಸಂದರ್ಭಗಳಲ್ಲಿ ತೆರಿಗೆ ವಿನಾಯಿತಿ ಇತ್ತು ಎಂಬುದನ್ನು ಶಾಸನಗಳು ಉಲ್ಲೇಖಿಸುತ್ತವೆ.

ಅರಸಿಯರು ತಮ್ಮ ಆಳ್ವಿಕೆಯ ಸಂದರ್ಭದಲ್ಲಿ ಕೆಲವು ಬಾರಿ ಸುಂಕ ವಿಧಿಸುವ ಹಾಗೂ ವಿನಾಯತಿ ತೋರುವ ವಿಚಾರಗಳಲ್ಲಿ ಸ್ವಾತಂತ್ರ್ಯ ವಹಿಸುತ್ತಿದ್ದರು. ದಾನ ಶಾಸನಗಳಲ್ಲಿ ತೆರಿಗೆ ವಿನಾಯಿತಿಯನ್ನೂ, ವ್ಯಾಪಾರ – ವ್ಯವಹಾರಗಳಲ್ಲಿ ತೆರಿಗೆ ವಿಧಿಸಿ ಶಾಸನ ಹಾಕಿಸಿರುವುದನ್ನು ಕಾಣುತ್ತೇವೆ.

### **ದಾನ ಶಾಸನಗಳಲ್ಲಿನ ತೆರಿಗೆ ವಿಚಾರ**

ಕದಂಬ ಅಕ್ಕಾದೇವಿ ಬಂಕಾಪುರದ ಬಳಿಯ ಮಠವೊಂದರಲ್ಲಿ ನಡೆಯುವ ವಿದ್ಯಾಭ್ಯಾಸಕ್ಕಾಗಿ ದಾನ ನೀಡಿದ ಸಂದರ್ಭದಲ್ಲಿ ಕಾಳಾಮುಖ ಸನ್ಯಾಸಿನಿ ಗಂಗೆಯಬ್ಬೆಯ ಕಾಲುತೊಳೆದು 'ತಮಗೆ ಸಲ್ಲುವ ಅಂದಿಗರ್ಚ ಕಾಣಿಕೆಯ ಎರಡು ಗದ್ಯಾಣದ **ತೆರಿಗೆಯನ್ನು** ದಾನ' ಕೊಟ್ಟಿರುವಳು ಎಂದು ಶಾಸನವು ಉಲ್ಲೇಖಿಸಿದೆ[೩೩]. ನೀತಿಮಾರ್ಗನ ರಾಣಿಯು ಧಾರ್ಮಿಕ ಕಾರ್ಯಕ್ಕಾಗಿ 'ಪತ್ತೊಂದಿ' ತೆರಿಗೆಯ ವರಮಾನವನ್ನು ದಾನಮಾಡಿದಳು[೩೪] ಎಂಬ ವಿಚಾರ ತಿಳಿದು ಬಂದರೆ ಚಾಗಿಯಬ್ಬೆ ಬಿತ್ತುವಟ್ಟವನ್ನು ನೀಡಿದ ವಿಷಯವೂ ತೆರಿಗೆಯ ವಿನಾಯತಿಯನ್ನು ಕುರಿತು ತಿಳಿಸುತ್ತದೆ[೩೫]. ಲಿಂಗಸುಗೂರಿನಲ್ಲಿ ಆಳ್ವಿಕೆ ನಡೆಸುತ್ತಿದ್ದ ಆರನೆಯ ವಿಕ್ರಮಾದಿತ್ಯನ ಅರಸಿ ಅಬ್ಬಲದೇವಿಯು ತನ್ನ ಆಡಳಿತ ಪ್ರದೇಶದಲ್ಲಿನ ಕಲಿದೇವದೇವರಿಗೆ ಧೂಪ, ದೀಪ ನೈವೇದ್ಯ ಅಂಗಭೋಗ ಮೊದಲಾದ ಸೇವೆಗಳಿಗೆ ದಾನ–ದತ್ತಿಗಳನ್ನು ನೀಡಿರುವುದಲ್ಲದೆ ಅವುಗಳ ಮೇಲಿನ ತೆರಿಗೆಗಳನ್ನು ಮಾನ್ಯಮಾಡಿದ್ದಾಳೆ.

ಮೈಸೂರು ಪುರಾತತ್ತ್ವ ವರದಿ ೧೯೧೬ ಸಂ.೧೧೬ ತಿಳಿಸುವಂತೆ ಕೆಳದಿಯ ಚನ್ನಮ್ಮಾಜಿಯು ಕ್ರಿ.ಶ.೧೬೯೧ರಲ್ಲಿ ಅವುಬಲರಾಯನಿಗೆ (ಅಹೋಬಲರಾಯನಿಗೆ) ಪತ್ರ ಬರೆದು ಮುಕ್ಕರನಾಡು ಸೀಮೆಯ ಕೆಲವು ಹಳ್ಳಿಗಳಲ್ಲಿ ಮಣಿಹಾಗಾರ ಎಂಬುವನು ಸುಂಕವನ್ನು ವಸೂಲಿ ಮಾಡುತ್ತಿದ್ದು, ಈ ಸುಂಕವು ನ್ಯಾಯವಾಗಿ ಶೃಂಗೇರಿ ಮಠದ ಆಸ್ತಿಯಾಗಿದ್ದು, ಅದಕ್ಕಾಗಿ ಇನ್ನು ಮುಂದೆ ಮಣಿಹಾಗಾರನು ಈ ರೀತಿ ಮಠದ ವಿಷಯದಲ್ಲಿ ಹಸ್ತಕ್ಷೇಪ ಮಾಡಬಾರದೆಂದು ತಿಳಿಸಿಲಾಗಿದೆ.

ದಾಸೋಹ ಪಗುದಿ, ಪಟ್ಟಿ ಮುಂತಾದ ತೆರಿಗೆಯು ಭತ್ತ, ರಾಗಿ ಅಡಿಕೆ, ತೆಂಗು, ಉಪ್ಪು ಮೆಣಸು, ಎಣ್ಣೆ, ತುಪ್ಪ, ಹುಣಸೆಹಣ್ಣು, ತಂಬಾಕು, ಬಿದರಿನ ವಸ್ತುಗಳು ಮುಂತಾದವುಗಳ ಮೇಲೆ ಹೇರಲಾಗುತ್ತಿತ್ತು. ಬಡವರಿಗೆ ಅನ್ನ ಹಾಕಿಸಲು ದಾಸೋಹವೆಂದು ವರಹ ಒಂದಕ್ಕೆ ಒಂದು ಆಣೆಯನ್ನು ಸುಂಕವನ್ನು ಚನ್ನಮ್ಮಾ ಹಾಕಿಸಿದ್ದಳು.

ಶಾಸನದಲ್ಲಿ ಅಡಿಕೆ, ಮೆಣಸು ಕೊಬ್ಬರಿ ಮೊದಲಾದವುಗಳನ್ನು ಗಡಸಿನ ಸರಕು ಎಂದು ಕರೆಯಲಾಗಿದೆ. ಕೆಳದಿಯ ಚನ್ನಮ್ಮಳ ಕಾಲದಲ್ಲಿ ಮಠಕ್ಕೆ ಸಂದಾಯವಾಗುವ ಇಂಥ ಕೆಲವು ಪದಾರ್ಥಗಳ ಮೇಲಿನ ಸುಂಕಗಳಿಗೆ ವಿನಾಯತಿ ತೋರಿದ್ದಾಳೆ. ಈ ಮೇಲೆ ನಮೂದಾಗಿರುವ ದಾಖಲೆಯಲ್ಲಿ ಚನ್ನಮ್ಮಳು ಮಠದ ಸೇವೆಗಾಗಿ ಬೇಕಾಗುವ ಪದಾರ್ಥಗಳನ್ನು ಸುಂಕರಹಿತವಾಗಿ ಕಳುಹಿಸುವಂತೆ ತೆರಿಗೆ ಅಧಿಕಾರಿಗಳಿಗೆ ಅದೇಶ ನೀಡಿರುವ ವಿಚಾರವನ್ನು, ಶೃಂಗೇರಿಯ ನರಸಿಂಹ ಭಾರತಿ ಸ್ವಾಮಿಗಳಿಗೆ ಬರೆದು ತಿಳಿಸಿದ್ದಾಳೆ[೩೬]. ಇದೇರೀತಿಯ ವಿನಾಯತಿ ನೀಡಿರುವುದನ್ನು ಕೌಲೇದುರ್ಗದ ಆಗುಂಬೆ ಮಹತ್ತಿನ ಮಠ, ಚಿನ್ನಾಪುರದ ರೇವಣಸಿದ್ಧದೇವರ ಮಠ, ಚಿಕ್ಕಜಂಬೂರು ವಿರಕ್ತಮಠ ಮೊದಲಾದ ಮಠ–ದೇಗುಲಗಳಿಗೂ ನೀಡಲಾಗಿರುವುದನ್ನು ಅರಸಿ ಚೆನ್ನಮ್ಮಳು ಹೊರಡಿಸಿರುವ ಶಾಸನಗಳು ಉಲ್ಲೇಖಿಸುತ್ತವೆ.  ಇಲ್ಲಿನ ಕೆಲವು ನಿರೂಪಗಳಲ್ಲಿ 'ದುರ್ಗದ ಹೋಬಳಿ ಘಟ್ಟದ ಕೆಳಗಣ ಸುಂಕಠಾಣೆಗಳಲ್ಲೂ ಬರೆಸುವುದು', 'ಈ ಕಾಗದವ ಸೇನಬೋವನ ಕಡತಕ್ಕೆ ಬರೆಸಿ ತಿರುಗಿ ಇವನ ವಶಕ್ಕೆ ಕೊಡುವುದು' ಎಂಬ ಮೊದಲಾದ ಬರಹಗಳು ಲೆಕ್ಕ–ಪತ್ರಗಳ ದಾಖಲಾತಿಗಳಿಗೆ ಚೆನ್ನಮ್ಮಳು ನೀಡುತ್ತಿದ್ದ ಮಹತ್ವವನ್ನು ಕುರಿತು ತಿಳಿಸುತ್ತವೆ.

ಚೆನ್ನಮ್ಮಳ ಅಧಿಕಾರದಲ್ಲಿ ಒಂದು ಹೇರು/ಹೇರು ಹೊರುವ ಪ್ರಾಣಿಗೆ ವಿಧಿಸುತ್ತಿದ್ದ ತೆರಿಗೆಯನ್ನು 'ಮೂಲವೀಸೆ ತೆರಿಗೆ' ಎಂದು ಕರೆಯಲಾಗುತ್ತಿತ್ತು. ಈ ಹೇರೆತ್ತಿಗೆ ೧/೧೬ ವೀಸೆ ತೆರಿಗೆ, ಒಂದು ಲಕ್ಷ ಅಡಿಕೆಗೆ ೧/೪ ಹಣ ತೆರಿಗೆ, ಎಂದು ಗೊತ್ತುಪಡಿಸಲಾಗಿತ್ತು. ೧೭೬೪ರಲ್ಲಿ ರಾಣಿ ಚನ್ನಮ್ಮಾಜಿಯು ರುದ್ರಮುನಿ ದೇವರ ಮಠಕ್ಕೆ ಈ ತೆರಿಗೆಯ ವಿನಾಯಿತಿ ತೋರಿದ್ದಾಳೆ.

ದೇವಾಲಯಕ್ಕೆ ನೀಡಿದ ದಾನಗಳ ಮೇಲಿನ ತೆರೆಗೆಗಳಷ್ಟೇ ಅಲ್ಲದೆ ಕೆಲವು ವ್ಯಕ್ತಿಗಳಿಗೆ ನೀಡಿದ ದಾನದ ಮೇಲಿನ ತೆರಿಗೆಗಳಿಗೂ ವಿನಾಯಿತಿ ತೋರಿರುವುದನ್ನು ಗಮನಿಸಬಹುದು. ಬಾದಾಮಿ ಚಳುಕ್ಯ ವಿಕ್ರಮಾದಿತ್ಯನ ಅರಸಿ ಲೋಕಮಹಾದೇವಿಯು ತಾನು ನಿರ್ಮಿಸಿದ ದೇವಾಲಯದ ರೂವಾರಿಗೆ 'ಬಳ್ಳಿಗವರ್ತ್ತೆ'ಯನ್ನು ಮಾನ್ಯಮಾಡಿದ್ದಾಳೆ. ಬಳ್ಳಿಗವರ್ತ್ತೆ ಎಂಬುದು ತಾಂಬೂಲಕ್ಕೆ ವಿಧಿಸಲಾಗುತ್ತಿದ್ದ ಸುಂಕ ಅರಸಿಯು ಈ ಸುಂಕಕ್ಕೆ ವಿನಾಯಿತಿಯನ್ನು ಅವರಿಗೆ ನೀಡಿದ್ದಳು[೩೭].

ಕೆಲವೊಮ್ಮೆ ಸುಂಕಗಳನ್ನು ಜನೋಪಕಾರಿ ಕೆಲಸಕ್ಕೆ ವಿನಿಯೋಗಿಸುತ್ತಿದ್ದ ಉದಾಹರಣೆಗಳು ಕಂಡುಬರುತ್ತವೆ. ಹೊಯ್ಸಳ ವೀರಬಲ್ಲಾಳನ ಅರಸಿ ಉಮಾದೇವಿಯು ಅರಸಿಕೆರೆಯ ಸಮಸ್ತ ತಿಪ್ಪೆಸುಂಕ, ಆಲೆಮನೆ, ಎಣ್ಣೆ, ಮೆಣಸು, ಅರಿಸಿನ, ಅಡಕೆ, ಎಲೆಹೇರಿನ ಮೇಲಿನ ಸುಂಕವನ್ನು ಕೆರೆಯ ಕೋಡಿಯ ಧರ್ಮಕ್ಕೆಂದು (ನಿರ್ಮಾಣಕ್ಕೆಂದು) ಬಿಟ್ಟಿದ್ದಾಳೆ[೩೮]. ಕ್ರಿ.ಶ.೧೨೨೦ ರಲ್ಲಿ ಸೌಭಾಗ್ಯಪುರದ ಪ್ರಸಂನ ಕೇಶವ ದೇವರಿಗೆ ಬಿಟ್ಟಿದ್ದ ಹದಿನೈದು ವೃತ್ತಿಗಳು ನಷ್ಟವಾದ ಕಾರಣ ದೇವಾಲಯದ ಶ್ರೀಕಾರ್ಯ ನಡೆಯದಿದ್ದ ಸಂದರ್ಭದಲ್ಲಿ ಅಲ್ಲಿನ

ಮಹಾಜನರನ್ನು ಮುಂದಿಟ್ಟುಕೊಂಡು ನಷ್ಟಕ್ಕೆ ಪರಿಹಾರದ ರೂಪದಲ್ಲಿ ಹೊಸದಾಗಿ ವೃತ್ತಿಯನ್ನು ನೀಡಿ ಹಳೆಯ ತರಿಗೆಯನ್ನು ಮಾನ್ಯಮಾಡಿ ಹೊಸದಾಗಿ ಸಿದ್ಧಾಯ ನಿಗದಿ ಪಡಿಸಿದ್ದಾಳೆ. ಇದೇ ರೀತಿ ೧೨೨೭ರಲ್ಲಿ ಪುಷ್ಪಗಿರಿಯ ದೇವರ ಆಣಿಗನ ಹಳ್ಳಿ ಮತ್ತು ಕಿತ್ತನ ಕೆರೆಯ ವೃತ್ತಿಗಳು ನಷ್ಟಕ್ಕೆ ಒಳಗಾಗಿದ್ದಾಗ ಅಲ್ಲಿ ಹಿರಿಯ ಮಹಾಜನರಿಗೆ ವಹಿಸಿಕೊಟ್ಟು ಎಂಟು ವರ್ಷಗಳವರೆಗೆ ತೆರಿಗೆ ಮಾನ್ಯ ಮಾಡಿ ಆನಂತರ ಸಿದ್ಧಾಯ ನೀಡುವಂತೆ ಏರ್ಪಾಟು ಮಾಡಿದ್ದಾಳೆ. ಇವಳ ಈ ಸಾಧನೆಯನ್ನು ಹಾಸನ ಜಿಲ್ಲೆಯ ಶಾಸನ ಸಂಪುಟದ (ರೈಸ್ ಆವೃತ್ತಿ) ಶಾಸನಗಳು ತಿಳಿಸುತ್ತವೆ[೩೯].

ಕ್ರಿ.ಶ.೧೯೭೩ರ ಕೋನೇರಿಪುರ (ತೀರ್ಥಹಳ್ಳಿ ತಾ) ಶಾಸನವು ಚೆನ್ನಮ್ಮಾಜಿ ಕೊಳಲಾದ ವೆಂಕಪ್ಪಗೆ ಬರಸಿಕೊಟ್ಟ ಕ್ರಯದಾನದ ಈ ಶಾಸನದಲ್ಲಿ ಭತ್ತದ ಗದ್ದೆಗಳಿಗೆ ಹೊಳೆ ಹರಿದು ಆದ ನಷ್ಟಕ್ಕೆ ಕೆರೆ ಕಾಲುವೆ ಕಟ್ಟಿಸಿ ಸಸಿ ಬಾಳೆ ಹಾಕಿಸಿ ಹುಟ್ಟುವಳಿ ಮಾಡಿಸಿಕೊಟ್ಟ ಉಲ್ಲೇಖವಿದೆ.

ಹೀಗೆ ಪ್ರಜೆಗಳ ಹಿತವನ್ನು ಕಾಪಾಡಲು ತೆರಿಗೆಯಲ್ಲಿ ವಿನಾಯಿತಿ ತೋರಿರುವುದು, ತೆರಿಗೆಯ ಹಣವನ್ನು ಧಾರ್ಮಿಕ ಕಾರ್ಯಕ್ಕೆ ಸಂದಾಯವಾಗುವಂತೆ ಆದೇಶ ನೀಡುತ್ತಿದ್ದ ಉದಾಹರಣೆಗಳನ್ನು ಕಾಣಬಹುದು.

## ವ್ಯಾಪಾರದಲ್ಲಿ ತೆರಿಗೆ

ಕರ್ನಾಟಕದ ಅರಸಿಯರು ವ್ಯಾಪಾರಕ್ಕೆ ಹೆಚ್ಚಿನ ಮಹತ್ವ ನೀಡಿದ್ದರೆನ್ನುವುದನ್ನು ಈ ಹಿಂದೆ ಗಮನಿಸಲಾಗಿದೆ. ವ್ಯಾಪಾರವು ಲಾಭ ದೃಷ್ಟಿಯನ್ನು ಹೊಂದಿರುತ್ತಿತ್ತು. ವ್ಯಾಪಾರದ ಇಂತಿಷ್ಟು ಎಂದು ನಿಗದಿ ಗೊಳಿಸಲಾದ ಭಾಗವು ಸುಂಕದ ರೂಪದಲ್ಲಿ ರಾಜ್ಯದ ಬೊಕ್ಕಸಕ್ಕೆ ಸಂದಾಯವಾಗುತ್ತಿತ್ತು. ವ್ಯಾಪಾರದ ಮೇಲಿನ ಈ ಸುಂಕವು ದೇಶೀಯರಿಗೆ, ವಿದೇಶೀಯರಿಗೆ ವಿಭಿನ್ನವಾಗಿರುತ್ತಿತ್ತೆಂದು ತಿಳಿದು ಬರುತ್ತದೆ. ಕೆಳದಿಯ ಅರಸಿ ಚನ್ನವೀರಮ್ಮಾಜಿಯು ಇಂಗ್ಲೀಷರಿಗೆ ಕಾರವಾರದಲ್ಲಿ ಕೋಠಿಯೊಂದನ್ನು ಕಟ್ಟಿಕೊಳ್ಳಲು ಅನುಮತಿ ನೀಡಿದ್ದಳು. ಇಂಗ್ಲೀಷ್ ವ್ಯಾಪಾರಿ ಕಂಪೆನಿಗೆ ಫರ್ಮಾನೊಂದನ್ನು ನೀಡಿ ಕೆಲವು ಪ್ರಮುಖ ವಸ್ತುಗಳಿಗೆ ಶೇಕಡಾ ಒಂದೂವರೆಯಷ್ಟು ತೆರಿಗೆಯನ್ನು ವಿಧಿಸಿದಳು.

ತೆರಿಗೆಗಳಲ್ಲದೆ ಸರಕು ಸಾಗಣೆಯ ಮೇಲೂ ಸುಂಕವನ್ನು ವಿಧಿಸಲಾಗುತ್ತಿತ್ತು. ಸಂತೆಗೆ ಬರುವ ಸರಕುಗಳ ಮೇಲೆ 'ಹೊರ ಸುಂಕ' ತೋಟದ ಅಡಿಕೆಗೆ 'ಅಡಿಕೆಯ ಸುಂಕ' ಮತ್ತು ದೋಣಿಗಳಲ್ಲಿ ಸಾಗಿಸುವ ಸರಕುಗಳಿಗೆ 'ಹೊಳೆಯ ಹೊರಸುಂಕ'ಗಳನ್ನು ವಸೂಲು ಮಾಡಲಾಗುತ್ತಿತ್ತು[೪೦]. ಪ್ರಮುಖ ವ್ಯಾಪಾರ ಕೇಂದ್ರಗಳಲ್ಲಿ ಸುಂಕದ ಕಟ್ಟೆಗಳಿದ್ದವು. ತೆರಿಗೆಗಳನ್ನು ಕಟ್ಟು ನಿಟ್ಟಾಗಿ ವಸೂಲುಮಾಡುತ್ತಿದ್ದರು.

ವಿದೇಶಕ್ಕೆ ಮಾರುವ ವಸ್ತುಗಳ ಮೇಲೆಯೂ ತೆರಿಗೆ ವಿಧಿಸಲಾಗುತ್ತಿತ್ತು. ಹಡಗುಕಟ್ಟೆಯಲ್ಲಿ ಆಮದಾಗುವ ಮತ್ತು ರಫ್ತಾಗುವ ವಸ್ತುಗಳ ಮೇಲೆ ಕೆಳದಿ ರಾಜ್ಯವು ತೆರಿಗೆ ವಿಧಿಸುತ್ತಿತ್ತು. ರಾಣಿ ಚನ್ನವೀರಮ್ಮಾಜಿಯು ಇಂಗ್ಲೀಷ್ ವ್ಯಾಪಾರಿ ಕಂಪೆನಿಗೆ ನೀಡಿದ ಫರ್ಮಾನಿನಂತೆ ಕೆಲವು ಪ್ರಮುಖ ವಸ್ತುಗಳಿಗೆ ಶೇಕಡಾ ೧ ೧/೨ ರಷ್ಟು ತೆರಿಗೆ ವಿಧಿಸಿದ್ದಳು.

## ಯುದ್ಧ

ಅಧಿಕಾರದ ಚುಕ್ಕಾಣಿ ಹಿಡಿದ ರಾಣಿಯರು, ತಮ್ಮ ರಾಜ್ಯವನ್ನು ರಕ್ಷಿಸಲೂ ಮುಂದಾಗುತ್ತಿದ್ದರು. ಶತ್ರುಗಳಿಂದ ರಾಜ್ಯವನ್ನು ರಕ್ಷಿಸುವುದೂ ಅಧಿಕಾರವನ್ನು ವಹಿಸಿಕೊಂಡವರ ಕರ್ತವ್ಯವಾಗಿರುತ್ತಿತ್ತು. ಆದುದರಿಂದ ಯುದ್ಧ ವಿದ್ಯೆ ರಾಜಮನೆತನದವರು ಕಲಿಯಲೇ ಬೇಕಾದ ವಿದ್ಯೆಗಳಲ್ಲೊಂದಾಗಿರುತ್ತಿತ್ತು. ಕರ್ನಾಟಕದ ರಾಣಿಯರು ಆಡಳಿತ

ಹಾಗೂ ಯುದ್ಧ ಎರಡರಲ್ಲಿಯೂ ನೈಪುಣ್ಯತೆ ತೋರುತ್ತಿದ್ದರೆನ್ನುವುದಕ್ಕೆ ಹಲವಾರು ಉದಾಹರಣೆಗಳನ್ನು ಕಾಣಬಹುದು.

**ಪತಿಯೊಂದಿಗೆ ಯುದ್ಧದಲ್ಲಿ ಭಾಗವಹಿಸಿದ ಮಹಿಳೆಯರು**

ಪ್ರಾಚೀನ ಕಾಲದಿಂದಲೂ ಅರಸಿಯರು ತಮ್ಮ ಪತಿಯರೊಂದಿಗೆ ಯುದ್ಧರಂಗದಲ್ಲಿ ಭಾಗವಹಿಸುತ್ತಿದ್ದ ಉಲ್ಲೇಖಗಳು ದೊರಕುತ್ತವೆ. ಬಾದಾಮಿ ಚಳುಕ್ಯಅರಸ ಮೊದಲನೆಯ ವಿಕ್ರಮಾದಿತ್ಯನ ಮಡದಿ ಗಂಗಮಹಾದೇವಿ ಪತಿಯೊಂದಿಗೆ ಯುದ್ಧ ಭೂಮಿಯಲ್ಲಿ ದಾನನೀಡಿದ ಉಲ್ಲೇಖದಲ್ಲಿ ದೊರಕುತ್ತದೆ[೪೧]. ಮುಮ್ಮಡಿ ಗೋವಿಂದನ ರಾಣಿ ಗಾಮುಂಡಬ್ಬೆಯ ಹೆಸರು ರಾಜನ ಹೆಸರೊಂದಿಗೆ ತಾಮ್ರಪಟಗಳಲ್ಲಿ ಕಂಡುಬರುತ್ತದೆ. ಇವಳು ಯುದ್ಧಶಿಬಿರದಲ್ಲಿ ತಂಗಿದ್ದಾಗ ಪುತ್ರ ಶರ್ವ ಅಮೋಘವರ್ಷನನ್ನು ಪ್ರಸವಿಸಿದಳೆಂದು ತಿಳಿಸುತ್ತದೆ. ಈ ವಿವರಗಳಲ್ಲಿ ಮುಮ್ಮಡಿ ಗೋವಿಂದನು ಉತ್ತರಭಾರತದ ಮೇಲಿನ ದಂಡಯಾತ್ರೆಯ ಸಂದರ್ಭದಲ್ಲಿ ರಾಣಿಯನ್ನು ತನ್ನೊಂದಿಗೆ ಕರೆದೊಯ್ದಿದ್ದ ಎಂದು ತಿಳಿಯುತ್ತದೆ. ಈಕೆ ಪತಿಯೊಂದಿಗೆ ದಂಡಯಾತ್ರೆಯಲ್ಲಿ ಭಾಗವಹಿಸಿದಾಗಲೊಮ್ಮೆ 'ಕಂಚಿಯನಾಳ್ವ ದಂತಿಗನಮೇಗೆಳ್ದು ಕಪ್ಪಂಗೊಳಲ್ಬನ್ದಲ್ಲಿ' ರಾಮೇಶ್ವರ ತೀರ್ಥದ ಶಿವಧಾರಿ ಗೊರವನಿಗೆ ದತ್ತಿ ಬಿಟ್ಟ ವಿಚಾರವೊಂದು ಶಾಸನ ತಿಳಿಸುತ್ತದೆ.

ಚಾಲುಕ್ಯ ವಿಕ್ರಮಾದಿತ್ಯನ ಮಡದಿ ಜಾಕಲದೇವಿ "ಮದವದರರಾಯ ಮದಮರ್ದನ ಸಮಯದೊಳ್ ವಿಜಯಲಕ್ಷ್ಮೀ" ಎಂಬ ಹೊಗಳಿಕೆಗೆ ಪಾತ್ರಳಾಗಿದ್ದಾಳೆ[೪೨]. ಹೊಯ್ಸಳ ವಿಷ್ಣುವರ್ಧನನ ಮಡದಿ ಶಾಂತಲೆ "ರಣವ್ಯಾಪಾರದೊಳ್ ಖಡ್ಗದೇವತೆ" ದುರದೊಳ್ ವಿಷ್ಣುನೃಪಾಳಕಂಗೆ ವಿಜಯಶ್ರೀ ಎಂದು ಹೊಗಳಲ್ಪಟ್ಟಿದ್ದಾಳೆ[೪೩]. ವಿಷ್ಣುವರ್ಧನನ ಅರಸಿ ಬೊಮ್ಮಲದೇವಿಯೂ ಹಲವಾರು ಯುದ್ಧಗಳಲ್ಲಿ ಭಾಗವಹಿಸಿದ್ದಾಳೆ. ಯುದ್ಧವೀರಳಾದ ಇವಳು ಒಂದು ಅಶ್ವಶಾಲೆಯನ್ನು ಸ್ಥಾಪಿಸಿದ್ದಳು.

ವಿಜಯನಗರದ ರಾಣಿ ಗಂಗಾದೇವಿಯು ತನ್ನ ಪತಿಯೂ ಬುಕ್ಕರಾಯನ ಮಗನೂ ಆದ ಕಂಪಣರಾಯನೊಂದಿಗೆ ಯುದ್ಧವೊಂದರಲ್ಲಿ ಭಾಗವಹಿಸಿ ಅದರಿಂದ ಪ್ರೇರಣೆಗೊಂಡು 'ಮಧುರಾವಿಜಯಂ' ಎಂಬ ಕಾವ್ಯವನ್ನೇ ರಚಿಸಿದ್ದಾಳೆ ಈ ಕಾವ್ಯವನ್ನು 'ವೀರಕಂಪಣರಾಯ ಚರಿತೆ' ಎಂದೂ ಕರೆಯಲಾಗುತ್ತದೆ.

ಚಿನ್ನಾದೇವಿ ಹಾಗೂ ತಿರುಮಲದೇವಿಯರು ತಮ್ಮ ಪತಿ ಕೃಷ್ಣದೇವರಾಯನೊಂದಿಗೆ ದೇವಾಲಯಗಳಿಗೆ ಭೇಟಿಕೊಟ್ಟಂತೆ ಪತಿಯೊಂದಿಗೆ ರಣರಂಗಕ್ಕೂ ಪ್ರವೇಶಿಸುತ್ತಿದ್ದರೆಂದು ತಿಳಿದುಬರುತ್ತದೆ[೪೪]. ಕೃಷ್ಣದೇವರಾಯನು ಕ್ರಿ.ಶ.೧೫೧೫ರಲ್ಲಿ ಕೊಂಡವೀಡಿನ ಮೇಲೆ ಮುತ್ತಿಗೆ ಹಾಕಿದಾಗ ಅವನ ಇಬ್ಬರು ರಾಣಿಯರಾದ ಚಿನ್ನಾದೇವಿ ಮತ್ತು ತಿರುಮಲದೇವಿಯರು ಅವನೊಂದಿಗಿದ್ದರೆಂಬುದನ್ನು ತಿಳಿಸುತ್ತದೆ.

**ಸ್ವತಂತ್ರವಾಗಿ ಯುದ್ಧ ಮಾಡಿದ ರಾಣಿಯರು**

ಪತಿಯೊಂದಿಗೆ ಯುದ್ಧರಂಗದಲ್ಲಿ ಭಾಗವಹಿಸುತ್ತಿದ್ದ ಮಹಿಳೆಯರ ಸಾಹಸಕ್ಕಿಂತಲೂ ಸ್ವತಂತ್ರವಾಗಿ ಯುದ್ಧ ತೀರ್ಮಾನ ಕೈಗೊಂಡು, ರಣರಂಗದಲ್ಲಿ ಸೇನೆಯನ್ನು ಮುನ್ನಡೆಸಿದ ಅರಸಿಯರ ಸಾಹಸ ಹಿರಿದೆನಿಸುತ್ತದೆ. ಅಂತಹ ಹಲವಾರು ಅರಸಿಯರನ್ನು ಕರ್ನಾಟಕದ ಇತಿಹಾಸದಲ್ಲಿ ಕಾಣಬಹುದು. ಹಾನುಗಲ್ಲು ಕದಂಬ ಅರಸಿ ಅಕ್ಕಾದೇವಿಯು, ಗೋಕಾಕಿನ ಕೋಟೆ ಕಾಳಗದಲ್ಲಿ ಬಂಡಾಯವೆದ್ದ ಸಾಮಂತರನ್ನು ಮಣಿಸಿದ ವಿಚಾರ ಶಾಸನದಿಂದ ತಿಳಿದುಬರುತ್ತದೆ. ಅಂತೆಯೇ ಯುದ್ಧಪ್ರಿಯೆ ಎಂದು ಪ್ರಖ್ಯಾತಳಾಗಿದ್ದ ಅರಸಿ ಹೊಯ್ಸಳ ರಾಣಿ

ಉಮಾದೇವಿಯು ಸಾಮಂತ ಅರಸರು ದಂಗೆಯೆದ್ದಾಗ, ಅವರ ವಿರುದ್ಧ ಯುದ್ಧ ನಡೆಸಿದ ರಾಜ್ಯದ ಸುಸ್ಥಿತಿ ಕಾಪಾಡುತ್ತಿದ್ದಳು. ಇವಳು ಬೆಳಗುತ್ತಿಯ ಮೇಲೆ ಮೂರುಬಾರಿ ಆಕ್ರಮಣ ಮಾಡಿದ್ದಾಳೆ[೪೫].

ನಾಡಿನ ಸಂಪತ್ತುಗಳಲ್ಲಿ ಒಂದಾದ ಪಶುಸಂಪತ್ತನ್ನು ಅಪಹರಿಸಿ, ಯುದ್ಧಕ್ಕೆ ಆಹ್ವಾನ ನೀಡುವುದು ಅಂದಿನ ಕಾಲದ ಸಾಮಾನ್ಯ ಸಂಗತಿಯಾಗಿತ್ತು. ಇಂದಿಗೂ ಕಂಡುಬರುವ ತುರುಗೋಳು ಸ್ಮಾರಕ ಕಲ್ಲು ಇಂತಹ ಹಲವಾರು ಘಟನೆಗಳಿಗೆ ಸಾಕ್ಷಿಯಾಗಿವೆ. ಹೀಗೆ ತುರುಗೋಳು ನಡೆಸುವುದರ ಮೂಲಕ ಮಲೆತುನಿಂದ ಸಾಮಂತರನ್ನು ಮಣಿಸುವುದು ಒಂದು ತಂತ್ರವಾಗಿತ್ತು. ಅರಸಿಯರೂ ಕೂಡ ಇಂತಹ ತುರುಗೋಳನ್ನು ನಡೆಸಿದ್ದಾರೆ. ಈ ಮೇಲೆ ತಿಳಿಸಿರುವಂತೆ ಅರಸಿ ಉಮಾದೇವಿ ಹಲವಾರು ಬಾರಿ ಹಸುಗಳನ್ನು ಹಿಡಿದು ಯುದ್ಧವನ್ನು ನಡೆಸಿದ್ದಾಳೆ. ಇದೇ ರೀತಿ ಹೊಯ್ಸಳ ಅರಸಿ 'ಚೋಳಮಹಾದೇವಿ' ಪಾಳೆಗಾರರನ್ನು ಮಣಿಸಲು ಬೇವೂರಿನಲ್ಲಿ ತುರುಗೋಳ್ ನಡೆಸಿದ್ದಾಳೆ[೪೬]. ಸುಮಾರು ಇದೇ ಕಾಲದಲ್ಲಿದ್ದ ಮಹಾಮಂಡಳೇಶ್ವರ ಗುತ್ತಿ ಮಲ್ಲದೇವನ ಅರಸಿ ಪದುಮಲದೇವಿ ಕ್ರಿ.ಶ.೧೧೭೭ರಲ್ಲಿ ಸೋಯಿದೇವನನ್ನು ಎದುರಿಸಿ ಕುಪಟೂರನ್ನು ಸೂರೆಗೈದು ದನಗಳನ್ನು ಒಯ್ದಳೆಂದು ಶಾಸನವು ತಿಳಿಸುತ್ತದೆ[೪೭]. ಮಹಾಸಾಮಂತ ತೊರಗಲೆಯ ಸಾಮಂತನ ಅರಸಿ ಚಾಗಲದೇವಿ ಕೂಡ ನೀಲಗುಂದ ಗ್ರಾಮದ ಮೇಲೆ ದಾಳಿಯಿಟ್ಟು ಹೋರಾಡಿದ ವಿಚಾರವನ್ನು ಬಾದಾಮಿಯ ಶಾಸನ ತಿಳಿಸುತ್ತದೆ[೪೮]. ಹೊಯ್ಸಳ ವೀರಬಲ್ಲಾಳನ ಅರಸಿ ಬಮ್ಮಲದೇವಿಯು ಮಲೆದುನಿಂತ ಮಲೆಪರಕುಲವನ್ನು ಬೇರುಸಹಿತ ಕಿತ್ತು ಬಿಸುಟು, ಮತ್ತೆಂದೂ ಅದು ಚಿಗುರದಂತೆ ಮಾಡಿದ ಸಾಹಸಿ ಎಂದು ಅರಸಿಕೆರೆಯ ೯೬ನೆಯ ಸಂಖ್ಯೆಯ ಶಾಸನವು "ಮಲಮಲದು ಮಲೆದು ಮಲೆಪರ ಕುಲಮಂ ಬೇರ್ವೆರಸಿ ಕಿತ್ತು ಬಂಮಲೆ..." ಎಂದು ಕೊಂಡಾಡಿದೆ.

ಈ ಮೇಲಿನ ಘಟನೆಗಳಲ್ಲಿ ಅರಸಿಯರು ಪ್ರಭುತ್ವವನ್ನು ಸಾಧಿಸಲು ಅಥವಾ ಕೈಕೆಳಗಿನ ಸಾಮಂತರಸರು ಹದ್ದುಮೀರಿನಡೆದ ಸಂದರ್ಭದಲ್ಲಿ ಪರಿಸ್ಥಿತಿಯನ್ನು ನಿಯಂತ್ರಿಸಲು ಯುದ್ಧ ಕೈಗೊಂಡಿರುವುದನ್ನು ಕಾಣುತ್ತೇವೆ. ಮತ್ತೆ ಕೆಲವು ಸಂದರ್ಭಗಳಲ್ಲಿ ರಾಜ್ಯವನ್ನು ಉಳಿಸಿಕೊಳ್ಳಲು, ರಾಜ್ಯ ವಿಸ್ತರಿಸಲೆಂದು ಯುದ್ಧಗಳನ್ನು ನಡೆಸಿದ್ದಾರೆ.

ಕೆಳದಿಯ ಚೆನ್ನಮ್ಮ ಇಂತಹ ಹಲವಾರು ಯುದ್ಧಗಳಲ್ಲಿ ತೊಡಗಿದ್ದನ್ನು ಗಮನಿಸಬಹುದು. ಪತಿಯ ಮರಣಾನಂತರ, ಅಧಿಕಾರ ವಹಿಸಿಕೊಂಡ ಕೆಳದಿಯ ಅರಸು ಸೋಮಶೇಖರನ ರಾಣಿ ಚನ್ನಮ್ಮ, ಪತಿಯ ಮರಣಕ್ಕೆ ಕಾರಣರಾದ ರಾಜ್ಯದ ಒಳ ಹಾಗೂ ಹೊರ ಶತ್ರುಗಳನ್ನು ನಿಗ್ರಹಿಸಿದಳು. ಹೊನ್ನಾಳಿ, ಹುಲಿಕೇರಿ ಕೋಟೆಗಳನ್ನು ಯುದ್ಧದಲ್ಲಿ ಗೆದ್ದು, ಹುಲಿಕೆರೆ ಕೋಟೆಗೆ 'ಚೆನ್ನಗಿರಿ' ಎಂಬ ನಾಮಕರಣ ಮಾಡಿದಳು. ಸೋದೆ, ಬೀಳಗಿಗಳಿಂದ ಕಪ್ಪ ಕಾಣಿಕೆ ವಸೂಲಿ ಮಾಡಿ, ಮೈಸೂರರಸರ ವಿರುದ್ಧ ಸಮರ ಸಾರಿ ಮೈಸೂರಿಗೆ ಸೇರಿದ್ದ ಹಾಸನ, ಬಾಣಾವರ, ಬೇಲೂರು ಪ್ರಾಂತ್ಯಗಳನ್ನು ಹಿಂಪಡೆಯುತ್ತಾಳೆ. ಇವಳು ಶಿವಾಜಿಯ ಮಗ ರಾಜಾರಾಮನಿಗೆ ಆಶ್ರಯ ನೀಡಿ ಔರಂಗಜೇಬನ ಸೈನ್ಯವನ್ನು ಎದುರಿಸಿದ ಖ್ಯಾತಿ ಇತಿಹಾಸದಲ್ಲೇ ಅಚ್ಚಳಿಯದ ವಿಚಾರವಾಗಿದೆ.

ಕೆಳದಿಯ ಚೆನ್ನಮ್ಮನ ನಂತರ ಇದೇ ಮನೆತನದಲ್ಲಿ ಆಳ್ವಿಕೆ ನಡೆಸಿದ ಮತ್ತೋರ್ವ ರಾಣಿ ಚನ್ನವೀರಮ್ಮಳೂ ಸಹ ಯುದ್ಧ ಪ್ರವೀಣೆಯಾಗಿದ್ದಳು, ಕಡಲ್ಗಳರು ಮೊದಲಾದ ದರೋಡೆಕೋರರಿಂದ ಪಾರಾಗಲು ಸೂಕ್ತ ಮುಂಜಾಗ್ರತೆ ಕ್ರಮ ಕೈಗೊಂಡು, ಹಳೆಯ ಕೋಟೆಗಳನ್ನು ಭದ್ರ ಪಡಿಸುತ್ತಾಳೆ. ಕಣ್ಣಾನೂರಿನ ಸುಲ್ತಾನ ಆಲಿರಾಜನ ಧಾಳಿಯನ್ನು ತಡೆಯಲು ಒಮ್ಮೆ ವಿಫಲವಾದರೂ ಮುಂದೆ ವ್ಯಾಪಾರ–ವ್ಯವಹಾರಗಳಲ್ಲಿ ಅದಕ್ಕೆ ಪ್ರತಿಕಾರ ತೋರುತ್ತಾಳೆ. ಮರಾಠರಿಗೆ ಒಪ್ಪಂದದ ಪ್ರಕಾರ ಪೊಗದಿ ನೀಡಿ ಅವರ ದಾಳಿಯನ್ನು ತಪ್ಪಿಸಿಕೊಂಡಿದ್ದರೂ, ತಮ್ಮ ಅನುಮತಿ ಇಲ್ಲದೆ ದತ್ತುಸ್ವೀಕರಿಸಿದಳೆಂಬ ಕಾರಣ ನೀಡಿ ದಾಳಿಮಾಡಿದ ಮರಾಠರನ್ನು ವೀರಭದ್ರನಾಯಕನ ನೇತೃತ್ವದಲ್ಲಿ ಸೈನ್ಯವನ್ನು ಕಳುಹಿಸಿ ಚೆನ್ನವೀರಮ್ಮಳು ಹಿಮ್ಮೆಟ್ಟಿಸುತ್ತಾಳೆ[೪೯].

ಸಂಪದ್ಭರಿತವಾದ ಕೆಳದಿ ರಾಜ್ಯದಮೇಲೆ ಹೈದರಾಲಿ ಸೈನ್ಯ ಮುತ್ತಲು, ಕೆಲಕಾಲ ವೀರಾವೇಶದಿಂದ ಕಾದಾಡಿ ಸೈನ್ಯವನ್ನು ಹಿಮ್ಮೆಟ್ಟಿಸಿದರೂ, ಪದೇ ಪದೇ ರಾಜ್ಯಕ್ಕೆ ತೊಂದರೆ ಕೊಡುತ್ತಿದ್ದ ಮೈಸೂರಿನವರೊಂದಿಗೆ, ಪ್ರಜೆಗಳ ಹಿತದೃಷ್ಟಿಯಿಂದ ಸಂಧಾನಕ್ಕೆ ಮುಂದಾಗುತ್ತಾಳೆ, ಆದರೆ ಸಂಪೂರ್ಣ ರಾಜ್ಯವನ್ನೇ ಕೈವಶ ಮಾಡಿಕೊಳ್ಳಲು ಬಯಸಿದ ಹೈದರಾಲಿಯು, ಸಂಧಿಗಾಗಿ ಮಧುಗಿರಿಗೆ ತೆರಳಿದ ವೀರಮ್ಮಾಜಿಯನ್ನು ಅವಳ ಎರಡನೆಯ ಸಾಕುಮಗನೊಂದಿಗೆ ಮೋಸದಿಂದ ಬಂಧನದಲ್ಲಿ ಇಡುತ್ತಾನೆ. ಯುದ್ಧ ಪ್ರವೀಣೆಯಾದರೂ ಚನ್ನಮ್ಮಳಂತೆ ರಾಜಕೀಯ ತಂತ್ರ ಕರಗತ ಮಾಡಿಕೊಳ್ಳದೇ ಹೋದದ್ದು ಹಾಗೂ ಇವಳ ಹಿರಿಯ ದತ್ತುಪುತ್ರ ಅಕಾಲ ಮರಣಕ್ಕೆ ತುತ್ತಾದದ್ದು ಇವಳ ಕುರಿತು ಇಲ್ಲಸಲ್ಲದ ಅಪಖ್ಯಾತಿ ಹಬ್ಬಿ, ರಾಜ್ಯವನ್ನು ಕಳೆದುಕೊಳ್ಳುವಂತಾಗುತ್ತದೆ[೫೦]. ಮೊದಲಾದವು ಇವಳ ಯುದ್ಧದ ಕುರಿತಾದ ವಿವರಗಳನ್ನು ನೀಡುತ್ತವೆ.

ಕನ್ನಡ ನಾಡಿನ ವೀರವನಿತೆಯೆಂದೇ ಗುರುತಿಸಿಕೊಳ್ಳುವ ಬೆಳವಡಿ ಮಲ್ಲಮ್ಮಳು ಇತಿಹಾಸದಲ್ಲಿ ಶೌರ್ಯ–ಸಾಹಸಕ್ಕೆ ಹೆಸರಾದ ಛತ್ರಪತಿ ಶಿವಾಜಿಯನ್ನೇ ಮಣಿಸಿದ ಸಾಹಸಿ. ಮಲ್ಲಮ್ಮನ ಪತಿ ಬೆಳವಡಿಯ ಈಶಪ್ರಭು, ತನ್ನ ನಾಡಿನ ಹಸುಗಳನ್ನು ಅಪಹರಿಸಿದ ಶಿವಾಜಿಯ ಸೈನ್ಯದ ಎದುರು ಕಾದಾಡಿ ರಣರಂಗದಲ್ಲಿ ಮಡಿಯುತ್ತಾನೆ. ಪತಿಯ ಸಾವಿನ ನಂತರ ಧೃತಿಗೆಡದ ಮಲ್ಲಮ್ಮ ಕೆಚ್ಚೆದೆಯಿಂದ ರಣರಂಗದಲ್ಲಿ ಹೋರಾಟ ಮುಂದುವರೆಸುತ್ತಾಳೆ. ಕೆಲವೊಂದು ಮರಾಠ ದಾಖಲೆಯ ಪ್ರಕಾರ ಮಲ್ಲಮ್ಮಳು ೨೭ ದಿನಗಳ ಪರ್ಯಂತ ಯುದ್ಧ ಮಾಡಿ ಮರಾಠರ ಸೈನ್ಯವನ್ನು ಹಿಮ್ಮೆಟ್ಟಿಸುತ್ತಾಳೆ. ಮಲ್ಲಮ್ಮಳ ಸಾಹಸವನ್ನು ಕಂಡ ಶಿವಾಜಿ ಸ್ತ್ರೀ ಶಕ್ತಿಯ ಮುಂದೆ ತಲೆಬಾಗುತ್ತಾನೆ. ಮಲ್ಲಮ್ಮಳನ್ನು ತನ್ನ ಸಹೋದರಿಯಂತೆ ಕಾಣುವುದಾಗಿ ಭರವಸೆ ನೀಡಿ ಅವಳನ್ನು ಸನ್ಮಾನಿಸುತ್ತಾನೆ.

ಜದುನಾಥ ಸರಕಾರ ಎಂಬುವವನ 'ಶಿವಾಜಿ ಮತ್ತು ಶಿವಕಾಲಿನ', ರಣಜಿತ್ ದೇಸಾಯಿ ಅವರ 'ಶ್ರೀಮಾನ್ ಯೋಗಿ', ಪುರಂದರೆಯವರು ಬರೆದ ರಾಜಾ ಛತ್ರಪತಿ', ಚಿತ್ರಗುಪ್ತ ಬಖರ್, ಶೇಡಗಾವಕರ ಬಖರ್, ಮೊದಲಾದವುಗಳಲ್ಲಿ ಶಿವಾಜಿ–ಮಲ್ಲಮ್ಮರ ಯುದ್ಧ ಕುರಿತಾದ ಘಟನೆಗಳು ದಾಖಲಾಗಿವೆ. ಈ ಎಲ್ಲ ದಾಖಲೆಗಳು ಮರಾಠರು ೨೦ ದಿನಕ್ಕೂ ಮೀರಿ ಬೆಳವಡಿಯ ಸೈನಿಕರೊಂದಿಗೆ ಹೋರಾಡಿದ ವಿಚಾರವನ್ನು ತಿಳಿಸುತ್ತದೆ.

ಮಲ್ಲಮ್ಮ ತನ್ನ ರಾಜ್ಯದಲ್ಲಿ ಸ್ತ್ರೀ ಸೈನ್ಯವನ್ನು ಕಟ್ಟಿ ತರಬೇತು ನೀಡಿದ್ದ ವಿಚಾರ ಈ ಬಖೈರುಗಳಿಂದ ತಿಳಿದು ಬರುತ್ತದೆ. ಅಲ್ಲದೆ ಈ ಸೈನ್ಯದಲ್ಲಿ ಗೌರಮ್ಮ ಎಂಬುವವಳ ಸಾಹಸವೂ ದಾಖಲಾಗಿದೆ. ಯಾದವಾಡ, ವಕ್ಕುಂಡ, ದೊಡಬಾಡ, ಚಚಡಿ ಮೊದಲಾದೆಡೆಗಳಲ್ಲಿ ಶಿವಾಜಿ–ಮಲ್ಲಮ್ಮರ ಯುದ್ಧ ಘಟನೆಗಳ ಕುರಿತಾದ ಶಿಲ್ಪಗಳಿವೆ (ಪಾಟೀಲ.ಯ.ರು : ೨೦೦೬) ಇದರಲ್ಲಿ ಮಲ್ಲಮ್ಮನು ಕಟ್ಟಿದ ಸ್ತ್ರೀ ಸೈನ್ಯದ ಶಿಲ್ಪವನ್ನೂ ಕಾಣಬಹುದು. ಯಾದವಾಡದ ಶಿಲ್ಪದಲ್ಲಿ ಶಿವಾಜಿಯ ತೊಡೆಯಮೇಲೆ ಕುಳಿತಿರುವ ಮಗುವನ್ನು ಮಲ್ಲಮ್ಮಳ ಮಗ ನಾಗಭೂಷಣನೆಂದು ಗುರುತಿಸಲಾಗುತ್ತದೆ.

ಎಂಥಹ ಎದುರಾಳಿಯೇ ಆದರೂ ಧೃತಿಗೆಡದೆ ಎದುರಿಸುವ ಸಾಹಸ ತೋರಿದ ಕನ್ನಡ ನಾಡಿನ ಅರಸಿಯರು ವಿದೇಶಿಯರೊಂದಿಗೆ ನಡೆಸಿದ ಹೋರಾಟಗಳಿಗೂ ಹೆಸರುವಾಸಿಯಾಗಿದ್ದಾರೆ.

ಹದಿನಾರನೆಯ ಶತಮಾನದ ಚೌಟ ರಾಜಮನೆತನದ ಅಬ್ಬಕ್ಕದೇವಿಯು ಅಳಿಯಸಂತಾನ ಕಟ್ಟಿನಿಂದಾಗಿ ತವರುಮನೆಯಲ್ಲಿ ರಾಜ್ಯಾಡಳಿತ ಅಧಿಕಾರವನ್ನು ಪಡೆದು ಉಲ್ಲಾಳದಲ್ಲಿ ಆಳ್ವಿಕೆ ನಡೆಸುತ್ತಿದ್ದಳು. ಇವಳ ಅಧಿಕಾರದ ವ್ಯಾಪ್ತಿಗೆ ಸೇರಿದ ತೀರಪ್ರದೇಶಗಳಲ್ಲಿ ವ್ಯಾಪಾರ – ವ್ಯವಹಾರ ನಡೆಸುತ್ತಿದ್ದ ಪೋರ್ಚುಗೀಸರಿಗೆ ಕೋಟೆಯನ್ನು ಕಟ್ಟಿಕೊಳ್ಳಲು ಅನುಮತಿ ನೀಡಿದ್ದಳು. ಆದರೆ ಕ್ರಮೇಣ ಪೋರ್ಚುಗೀಸರು ಇವಳನ್ನು ನಿಯಂತ್ರಿಸಲು, ಇವಳ ರಾಜ್ಯವನ್ನೇ ಕಬಳಿಸಲು ಸಂಚು ನಡೆಸಿದಾಗ ಅವರೊಡನೆ ಧೀರತನದಿಂದ ಹೋರಾಡಿದಳು.

ಇವಳನ್ನು ಕೆಣಕಲೆಂದೇ ಪೋರ್ಚುಗೀಸರು ಇವಳ ಪ್ರಜೆಗಳನ್ನು ಹಿಂಸೆ ನೀಡಿ, ದೇವಾಲಯಗಳನ್ನು ಲೂಟಿಮಾಡಿ ಇವಳ ಹಡಗುಗಳಿಗೆ ಬೆಂಕಿ ಹಚ್ಚುತ್ತಾರೆ. ಇದನ್ನು ಸಹಿಸದ ಅಬ್ಬಕ್ಕ, ತಾನು ಅವರಿಗೆ ಕೋಟೆಯನ್ನು ಕಟ್ಟಿಕೊಳ್ಳಲು ಅನುಮತಿ ನೀಡಿದ ಪ್ರದೇಶಗಳನ್ನು ತೆರವುಗೊಳಿಸಲು ಆದೇಶ ನೀಡುತ್ತಾಳೆ. ಇದರಿಂದ ಆಕ್ರೋಶಗೊಂಡ ಪೋರ್ಚುಗೀಸರ ಸೈನ್ಯ ಕ್ರಿ.ಶ.೧೫೬೭ರಲ್ಲಿ ಉಲ್ಲಾಳವನ್ನು ಅತಿಕ್ರಮಿಸುತ್ತಾರೆ. ಪೋರ್ಚುಗೀಸ್ ಜನರಲ್ ಪಿಕ್ಸೊಟೊ ಎಂಬುವವನು ಆಂಟೋನಿ ನೊರೊಹ್ನನೊಡನೆ ಸೈನ್ಯವನ್ನು ಉಲ್ಲಾಳಕ್ಕೆ ನುಗ್ಗಿಸಿ ಇವಳ ಅರಮನೆಯನ್ನು ವಶಪಡಿಸಿಕೊಳ್ಳುತ್ತಾನೆ. ಆಗ ಅಬ್ಬಕ್ಕಳು ಮಸೀದಿಯೊಂದರಲ್ಲಿ ಅಡಗಿಕೊಂಡು, ಅಲ್ಲಿಂದಲೇ ಸಂಚು ನಡೆಸಿ ೨೦೦ ಜನ ಸೈನಿಕರನ್ನು ಕಲೆಹಾಕಿ, ವಿಜಯೋತ್ಸವವನ್ನಾಚರಿಸುತ್ತಿದ್ದವರ ಮೇಲೆ ಮುನ್ಸೂಚನೆ ನೀಡದೆ ಎರಗುತ್ತಾಳೆ. ಈ ಯುದ್ಧದಲ್ಲಿ ಜನರಲ್ ಪಿಕ್ಸೊಟೊ ಹಾಗೂ ನೂರಾರು ಪೋರ್ಚುಗೀಸ್ ಸೈನಿಕರು ಸಾವಿಗೀಡಾಗುತ್ತಾರೆ. ಇದಕ್ಕೆ ಪ್ರತಿಕಾರವಾಗಿ ಅಬ್ಬಕ್ಕಳ ವ್ಯಾಪಾರಿ ಹಡಗುಗಳನ್ನು ಹಿಡಿಯಲು ಸಂಚು ನಡೆಸಿದ ಪೋರ್ಚುಗೀಸರ ಕಣ್ಣಿಗೆ ಮಣ್ಣೆರಚಿ ಅವರ ಹಲವು ಹಡಗುಗಳನ್ನು ವಶಪಡಿಸಿಕೊಂಡು ಮತ್ತೆ ಕೆಲವನ್ನು ಸುಟ್ಟು ನಾಶಪಡಿಸುತ್ತಾಳೆ. ಪುನಃ ೧೫೬೯ರಲ್ಲಿ ಪೋರ್ಚುಗೀಸರು ಮಂಗಳೂರಿನ ಕೋಟೆಯನ್ನು ಇವಳಿಂದ ಕಸಿದುಕೊಂಡು ನೆಲಸಮ ಮಾಡಿದ್ದಲ್ಲದೆ, ಕುಂದಾಪುರ ಬಸ್ರೂರಿನ ಬಂದರನ್ನೂ ವಶಪಡಿಸಿಕೊಳ್ಳಲು ಮುಂದಾಗುತ್ತಾರೆ. ಆಗ ಇವರೀರ್ವರ ನಡುವೆ ಯುದ್ಧ ತೀವ್ರವಾಗುತ್ತದೆ. ಧೃತಿಗಡೆದ ಅಬ್ಬಕ್ಕ ಬಿಜಾಪುರದ ಸುಲ್ತಾನ ಹಾಗೂ ಕಲ್ಲಿಕೋಟೆಯ ಝಾಮೋರಿನ್ ಸಹಾಯವನ್ನು ಪಡೆದು ಪೋರ್ಚುಗೀಸರನ್ನು ಎದುರಿಸುತ್ತಾಳೆ.

ಇಟಲಿಯ ಪ್ರವಾಸಿ ಪಿಯತ್ರೊ ದಲ್ಲಾವೆಲ್ಲೆ 'ತನ್ನ ಸಂಚಾರದಲ್ಲಿ ಅರಬ್ ದೇಶದ ಖಲೀಫನಿಂದ ಪೋರ್ಚುಗೀಸರನ್ನೇ ಎದುರಿಸದ ಧೀರ ಮಹಿಳೆ ಅಬ್ಬಕ್ಕನ ವಿಚಾರ ತಿಳಿದುಕೊಂಡು ಕುತೂಹಲದಿಂದ ರಾಣಿ ಅಬ್ಬಕ್ಕಳನ್ನು ಭೇಟಿಯಾಗಲು ಭಾರತಕ್ಕೆ ಬಂದಿರುವುದಾಗಿ ತನ್ನ ಬರಹದಲ್ಲಿ ಹೇಳಿಕೊಂಡಿದ್ದಾನೆ.

ಸುಮಾರು ೪೦ ವರ್ಷಗಳಷ್ಟು ದೀರ್ಘಕಾಲ ಆಳ್ವಿಕೆ ನಡೆಸಿದ ಅಬ್ಬಕ್ಕ ಅಭಯರಾಣಿ (ನಿರ್ಭಯ ರಾಣಿ) ಎಂಬ ಬಿರುದಿಗೆ ಪಾತ್ರಳಾದವಳಾಗಿದ್ದಳು. ಅಬ್ಬಕ್ಕಳ ಕುರಿತಾಗಿ ಇಲ್ಲಿನ ಸ್ಥಳೀಯ ಬರಹಗಳು ಯಾವುದೇ ನಿಖರ ಮಾಹಿತಿಯನ್ನು ನೀಡುವಲ್ಲಿ ವಿಫಲವಾಗಿವೆ. ಇವಳ ಕುರಿತಾದ ಮಾಹಿತಿಗೆ ವಿದೇಶಿಯರ ಬರಹವನ್ನೇ ಆಶ್ರಯಿಸಬೇಕಾಗಿ ಬಂದಿದೆ. ಅಲ್ಲದೆ ವಿದೇಶಿಯರು ಈ ಮನೆತನದ ರಾಣಿಯರನ್ನೆಲ್ಲ ಅಬ್ಬಕ್ಕಳೆಂದೇ ಕರೆದಿದ್ದಾರೆ. ಹಾಗಾಗಿ ಹಿರಿಯ ಅಬ್ಬಕ್ಕದೇವಿ, ಕಿರಿಯ ಅಬ್ಬಕ್ಕದೇವಿ ಎಂದು ತಾಯಿ–ಮಗಳನ್ನು ಗುರುತಿಸುವುದು ಅನಿವಾರ್ಯವಾಗಿದೆ.

ಹದಿನಾರನೆಯ ಶತಮಾನದಲ್ಲಿ ಹೈವೆಕೊಂಕಣಗಳ ಮಹಾಮಂಡಳಾಧಿಪತಿ ಆಗಿದ್ದ ಸಾಳ್ವ ಮನೆತನದ ಚೆನ್ನಭೈರಾದೇವಿಯು ಉತ್ತಮ ಆಡಳಿತಗಾರ್ತಿಯಾಗಿದ್ದಂತೆ, ವ್ಯಾಪಾರ ಹಾಗೂ ಯುದ್ಧದಲ್ಲಿಯೂ ಚತುರೆಯಾಗಿದ್ದಳು. ಇವಳಿಗೂ ಮುನ್ನ ಆಳ್ವಿಕೆ ನಡೆಸುತ್ತಿದ್ದ ಇವಳ ಸೋದರಿ ಚೆನ್ನಾದೇವಿಯ ಕಾಲದಲ್ಲಿ ಇವಳು ಪೋರ್ಚುಗೀಸರಿಗೆ ಸಲ್ಲಿಸುತ್ತಿದ್ದ ಕಾಣಿಕೆಯನ್ನು ನಿಲ್ಲಿಸಿದಳೆಂದು ಮಂಡಲಾಧಿಕಾರಿ ಅಲ್ಫಾನ್ಸೋ ಡಿಸೋಜ ಇವಳ ವ್ಯಾಪಾರ ಕೇಂದ್ರವಾದ ಭಟ್ಕಳವನ್ನು ಸೂರೆಮಾಡಿ, ಸುಟ್ಟು ನಾಶಪಡಿಸಿದ್ದ. ಪೋರ್ಚುಗೀಸರ ದುಷ್ಟತನವನ್ನು ಕಂಡಿದ್ದ ಅರಸಿ ಚೆನ್ನಭೈರಾದೇವಿಯು, ಇವರನ್ನು ನಿಯಂತ್ರಣದಲ್ಲಿ ಇರಿಸಲು ವಿಜಾಪುರ ಮತ್ತು ಕಾಲಿಕತ್ತದ ಝಾಮೋರಿನನೊಡನೆ ಗುಪ್ತ ಒಪ್ಪಂದ ಮಾಡಿಕೊಂಡಿದ್ದಳು.

೧೫೭೦ರಲ್ಲಿ ಪೋರ್ಚುಗೀಸರ ಯುದ್ಧನೌಕೆ ಹೊನ್ನಾವರದಬಳಿಗೆ ಬರುವುದನ್ನು ತಿಳಿದಿದ್ದ ರಾಣಿಯು ಝಾಮೋರಿನ್ ಹಾಗೂ ವಿಜಾಪುರದ ಅರಸರೆಡೆಗೆ ಸಹಾಯ ಹಸ್ತ ಚಾಚಿದಳು. ಆದರೆ ಅವರ ಸಹಾಯ ದೊರಕುವುದು ತಡವಾದರೂ ತಾನೊಬ್ಬಳೇ ಧೈರ್ಯಗುಂದದೆ ನಾಲ್ಕು ದಿನಗಳಕಾಲ ನಿರಂತರ ಹೋರಾಟ ನಡೆಸಿದಳು. ಅವರಿಗೆ ಕೊಡಮಾಡಿದ ಅವರ ನಿವೇಶನಗಳೂ, ಫ್ಯಾಕ್ಟರಿಗಳೂ ನೆಲಸಮಮಾಡಿದಳು. ತಡವಾಗಿ

ಬಂದರೂ ಝಾಮೋರಿನ್ ಹಾಗೂ ವಿಜಾಪುರದ ಸೈನಿಕರು ಪೋರ್ಚುಗೀಸರನ್ನು ಪೂರ್ಣವಾಗಿ ಮಣ್ಣುಮುಕ್ಕಿಸಲು ನೆರವಾದರು. ಅಷ್ಟೇ ಅಲ್ಲದೆ ಪೋರ್ಚುಗೀಸರು ಬಸ್ರೂರನ್ನು ಮುತ್ತಿದಾಗ ಚೆನ್ನಭೈರಾದೇವಿಯು ಸೂರಾಲಿನ ತೋಳಹಾರ ಅರಸರ ಸಹಾಯಕ್ಕೆ ೩೦೦೦ ಸೈನಿಕರನ್ನು ಕಳಿಸಿದಳು.

ಪೋರ್ಚುಗೀಸರನ್ನು ನಿಯಂತ್ರಣದಲ್ಲಿರಿಸಿದ ಅರಸಿ ಚೆನ್ನಭೈರಾದೇವಿಗೆ ದೇಸೀ ಅರಸರೂ ತೊಂದರೆ ಕೊಡುತ್ತಿದ್ದರು. ನೆರೆಹೊರೆಯ ಅರಸುಗಳಾದ ಬಿಳಗಿಯ ರಂಗರಾಜ ಮತ್ತು ಕೆಳದಿಯ ವೆಂಕಟಪ್ಪನಾಯಕ ಹಲವಾರು ಬಾರಿ ಇವಳ ರಾಜ್ಯದ ಮೇಲೆ ಸಮರ ಸಾರಿದರು. ಬಿಳಗಿಯ ರಂಗರಾಜ ಎರಡುಬಾರಿ ಇವಳಿಂದ ಸೋತರೂ ತನ್ನ ಆಕ್ರಮಣಕಾರಿ ಚಟುವಟಿಕೆ ನಿಲ್ಲಿಸಲಿಲ್ಲ. ಬಿಳಗಿ–ಕೆಳದಿ ರಾಜ್ಯಗಳು ವೈವಾಹಿಕ ಸಂಬಂಧ ನಡೆಸುವುದರ ಮೂಲಕ ಒಂದಾಗಿ ಇವಳನ್ನು ಸೋಲಿಸಲು ಸಂಘಟಿತರಾದರು. ಸುಮಾರು ೫೦ ವರ್ಷಗಳ ಕಾಲ ಆಳ್ವಿಕೆ ನಡೆಸಿದ ಚೆನ್ನಭೈರಾದೇವಿಯು ತನ್ನ ಶಕ್ತಿ ಸಾಮರ್ಥ್ಯದಿಂದ ಶತ್ರುಗಳನ್ನು ನಿಗ್ರಹಿಸಿದರೂ ಕಡೆಯ ಕಾಲದಲ್ಲಿ ಕೆಳದಿಯ ವೆಂಕಟಪ್ಪನಾಯಕನ ಕೈದಿಯಾಗಿದ್ದಳೆಂದು ತಿಳಿದುಬರುತ್ತದೆ.

ಬ್ರಿಟಿಶರಿಗಿಂತಲೂ ಮುಂಚಿತವಾಗಿ ಭಾರತಕ್ಕೆ ಬಂದ ಪೋರ್ಚುಗೀಸರು ಇಡೀ ಭಾರತವನ್ನು ಆಕ್ರಮಿಸಬಹುದಿದ್ದ ಅಪಾಯದಿಂದ, ದೇಶವನ್ನು ರಕ್ಷಿಸಿದವರು ಕನ್ನಡನಾಡಿನ ಅರಸಿಯರು. ಪೋರ್ಚುಗೀಸರೊಂದಿಗೆ ಹೋರಾಡಿದ ಅರಸಿಯರಂತೆ ಬ್ರಿಟೀಶರೊಂದಿಗೆ ಸೆಣಸಾಡಿದ ಅರಸಿಯರೂ ಕನ್ನಡನಾಡಿನಲ್ಲಿ ಕಂಡುಬರುತ್ತಾರೆ. ಇವರಲ್ಲಿ ರಣರಂಗದಲ್ಲಿ ಮುಖಾಮುಖಿಯಾಗಿ ಸೆಣಸಾಡಿದ ಅರಸಿ ಕಿತ್ತೂರಿನ ಚೆನ್ನಮ್ಮ.

ಕಿತ್ತೂರು ಚೆನ್ನಮ್ಮ, ಸಣ್ಣ ಪ್ರಾಂತವನ್ನು ಪ್ರತಿನಿಧಿಸುತ್ತಿದ್ದವಳು. ಪತಿ ಹಾಗೂ ಆತನ ಹಿರಿಯ ಮಗನ ಮರಣಾನಂತರ ಚೆನ್ನಮ್ಮಳು ತನ್ನ ಮಲಮಗನ ದತ್ತು ಪುತ್ರನಿಗೆ ರಾಜ್ಯದ ಪಟ್ಟವನ್ನು ಕಟ್ಟಿ ಅವನ ಪರವಾಗಿ ಆಳ್ವಿಕೆ ನಡೆಸುತ್ತಿರುವ ಸಂದರ್ಭದಲ್ಲಿ, ಬ್ರಿಟೀಶರು ಇವಳ ರಾಜ್ಯವನ್ನು ಕಬಳಿಸುವ ಹುನ್ನಾರ ನಡೆಸುತ್ತಾರೆ. ಇವರ ವಿರುದ್ಧ ಎರಡು ಬಾರಿ ಯುದ್ಧ ನಡೆಸುತ್ತಾಳೆ. ಮೊದಲನೆಯ ಕಿತ್ತೂರು ಯುದ್ಧದಲ್ಲಿ ಬ್ರಿಟೀಶ್ ಅಧಿಕಾರಿ ಥ್ಯಾಕರೆಯನ್ನು ರಣರಂಗದಲ್ಲಿ ಕೊಂದು ಜಯಭೇರಿ ಬಾರಿಸಿದ ಚೆನ್ನಮ್ಮಳಿಗೆ, ಎರಡನೆಯ ಯುದ್ಧದಲ್ಲಿ ತನ್ನ ಕಡೆಯಲ್ಲಿದ್ದ ಹಿತಶತ್ರುಗಳ ಒಳಪಿತೂರಿ, ಯುದ್ಧಸಲಕರಣೆಗಳ ಕೊರತೆಯಿಂದ ಬ್ರಿಟೀಶರ ವಿರುದ್ಧ ಸೋಲುವ ಸಂದರ್ಭ ಬರುತ್ತದೆ. ಚೆನ್ನಮ್ಮಳು ತನ್ನ ಕಡೆಯ ದಿನಗಳನ್ನು ಬ್ರಿಟೀಶರ ಬಂಧಿಯಾಗಿ ಕಳೆದರೂ, ಸ್ವಾತಂತ್ರದ ಕಿಚ್ಚನ್ನು ಜನರಲ್ಲಿ ಹಚ್ಚಿದ ಮಹಾ ಹೋರಾಟಗಾರ್ತಿ ಎನಿಸಿದ್ದಾಳೆ.

ಸಾಮಾನ್ಯ ಪಾಳೆಯಗಾರನನ್ನು ಮಣಿಸುವುದರಿಂದ ಹಿಡಿದು ದೇಶ–ವಿದೇಶದ ಪ್ರಬಲ ಶತ್ರುಗಳೊಂದಿಗೆ ಹೋರಾಟ ನಡೆಸಿದ ಕನ್ನಡ ನಾಡಿನ ಅರಸಿಯರ ಸಾಹಸದ ಈ ಸ್ಥೂಲ ನೋಟವು ಕರ್ನಾಟಕದ ವೀರಅರಸಿಯರ ಯಶೋಗಾಥೆಯನ್ನು ಪರಿಚಯಿಸುತ್ತದೆ.

## ಅರಸಿಯರ ಸಾಂಸ್ಕೃತಿಕ ಕೊಡುಗೆಗಳು

ನಮ್ಮ ನಾಡಿಗೆ ಹೆಮ್ಮೆ ತರುವಂತಹ ಹಲವಾರು ಸ್ಮಾರಕಗಳು ಪ್ರಾಚೀನರ ಕೊಡುಗೆಗಳಾಗಿವೆ. ಇಲ್ಲಿ ನಮ್ಮ ಪೂರ್ವಜರ ಅಭಿರುಚಿ, ಜ್ಞಾನ, ಧಾರ್ಮಿಕ ನಂಬಿಕೆಗಳು, ಆಚರಣೆಗಳು ಮೊದಲಾದವುಗಳನ್ನು ಗುರುತಿಸಬಹುದು. ಅರಸಿಯರೂ ಕೂಡ ಇಂತಹ ಕೊಡುಗೆಗಳನ್ನು ನೀಡಿರುವುದನ್ನು ಕಾಣಬಹುದು. ಇಲ್ಲಿ ಗುರುತಿಸಿರುವ ಅರಸಿಯರ ಕೊಡುಗೆಗಳು ಕೇವಲ ಉದಾಹರಣಾ ರೂಪದಲ್ಲಿದೆ. ಈ ಹಿಂದೆಯೇ ತಿಳಿಸಿರುವಂತೆ ಸಮಗ್ರ ಮಾಹಿತಿಯನ್ನು ಇಲ್ಲಿ ದಾಖಲಿಸಲಾಗಿಲ್ಲ. ಈ ವಿಭಾಗದಲ್ಲಿ ಅರಸಿಯರು ವಾಸ್ತುಶಿಲ್ಪಕ್ಕೆ ನೀಡಿರುವ ಪ್ರೋತ್ಸಾಹ,

ಸಂಗೀತ–ನೃತ್ಯ ಮೊದಲಾದ ಲಲಿತಕಲೆಗಳಿಗೆ ನೀಡಿರುವ ಪ್ರೋತ್ಸಾಹ, ವಿದ್ಯಾಭ್ಯಾಸಕ್ಕೆ ನೀಡಿದ ಮಹತ್ವ ಮೊದಲಾದ ವಿಚಾರಗಳನ್ನು ಕುರಿತು ಗಮನಿಸಲಾಗಿದೆ. ಮುಂದಿನ ಅಧ್ಯಾಯಗಳಲ್ಲಿ ಸಾಹಿತ್ಯಿಕ ಕೊಡುಗೆಯನ್ನು ಕುರಿತು ವಿಸ್ತೃತವಾಗಿ ಚರ್ಚೆ ಮಾಡಲಾಗುವುದರಿಂದ ಇಲ್ಲಿ ಆ ವಿಚಾರದ ಚರ್ಚೆ ನಡೆಸಿಲ್ಲ.

## ವಾಸ್ತುಶಿಲ್ಪಗಳಿಗೆ ನೀಡಿರುವ ಪ್ರೋತ್ಸಾಹ

ದೇವಾಲಯ ನಿರ್ಮಾಣವು ಕೇವಲ ಧಾರ್ಮಿಕ ಕಾರ್ಯದ ಭಾಗವಾಗಿರದೆ, ಕಲೆಯನ್ನು ಪೋಷಿಸುವ, ಸಂಸ್ಕೃತಿಯನ್ನು ಬಿಂಬಿಸುವ ಅಂಗವಾಗಿ ಬೆಳೆದು ಬಂದಿದೆ. ದೇವಾಲಯದ ಸೌಂದರ್ಯ ಹೆಚ್ಚಿಸುವ ಶಿಲೆಯ ಚಿತ್ತಾರಗಳು, ಗೋಪುರದ ಶೈಲಿಗಳು, ಕಂಬಗಳ ವಿನ್ಯಾಸಗಳಿಗೆ ಬಹಳಷ್ಟು ಒತ್ತುಕೊಟ್ಟು, ಶಿಲ್ಪಿಗಳನ್ನು ದೂರದೂರುಗಳಿಂದ ಕರೆಸಿ ನಿರ್ಮಿಸಿದ ಅನೇಕ ದೇವಾಲಯಗಳ ಕುರಿತಾಗಿ ಅಲ್ಲಿನ ಶಿಲಾಬರಹಗಳು ಮಾಹಿತಿ ನೀಡುತ್ತವೆ. ಇಂಥ ಕಲೆಗಳ ನಿರ್ಮಾಣದಲ್ಲಿ ಕರ್ನಾಟಕದ ಅರಸಿಯರೂ ಹಿಂದೆ ಬಿದ್ದಿಲ್ಲ. ದೇವಾಲಯದ ವಾಸ್ತುಶಿಲ್ಪಕ್ಕೆ ಇವರು ನೀಡಿರುವ ಕೊಡುಗೆ ಅಪಾರವಾಗಿದೆ.

ಕನ್ನಡನಾಡಿನಾದ್ಯಂತ ವಿವಿಧ ಮನೆತನದ ಅರಸಿಯರು ನಿರ್ಮಿಸಿರುವ ದೇವಾಲಯ, ಬಸದಿಗಳು ಅಪಾರ ಸಂಖ್ಯೆಯಲ್ಲಿ ದೊರಕುತ್ತದೆ. ಈ ಅಧ್ಯಾಯದ ಆರಂಭದಲ್ಲಿ ನೀಡಲಾಗಿರುವ ಪಟ್ಟಿಕೆಯಲ್ಲಿ, ಶಾಸನಗಳಲ್ಲಿ ಉಕ್ತವಾಗಿರುವ ಕೆಲವು ದೇವಾಲಯ ಹಾಗೂ ಬಸದಿಗಳನ್ನು ಹೆಸರಿಸಲಾಗಿದೆ. ಕಾಲದಿಂದ ಕಾಲಕ್ಕೆ ದೇವಾಲಯಗಳ ನಿರ್ಮಾಣದ ಶೈಲಿಯಲ್ಲಿ ಭಿನ್ನತೆ ಇರುವುದನ್ನು ತಜ್ಞರು ಗುರುತಿಸಿದ್ದಾರೆ. ವಿಭಿನ್ನ ಶೈಲಿಗಳನ್ನು ರಾಜಮನೆತನದ ಹೆಸರಿನೊಂದಿಗೆ ಗುರುತಿಸಲಾಗುತ್ತದೆ. ಉದಾಹರಣೆಗೆ ಕದಂಬ ಶೈಲಿ, ಹೊಯ್ಸಳ ಶೈಲಿ, ಗಂಗರ ಶೈಲಿ, ಹೀಗೆ ವಿಭಿನ್ನ ರಾಜಮನೆತನಗಳ ಕಾಲದಲ್ಲಿ ವಿಭಿನ್ನ ರೀತಿಯ ವಾಸ್ತು ಕಲೆಗಳನ್ನು ಪರಿಚಯಿಸಲಾಗಿದೆ. ಇದು ದೇವಾಲಯದ ರಚನೆ, ಕಂಬಗಳ ನಿರ್ಮಾಣ, ಶಿಖರದ ಶೈಲಿ ಎಲ್ಲದರಲ್ಲೂ ಭಿನ್ನತೆಯನ್ನು ತೋರುತ್ತದೆ. ಹೊಯ್ಸಳರ ಕಾಲದಲ್ಲಿ ನಕ್ಷತ್ರಾಕಾರದ ದೇವಾಲಯಗಳು, ಗಂಗರ ಕಾಲದಲ್ಲಿ ನಿರ್ಮಾಣವಾಗುತ್ತಿದ್ದ ದುಂಡಾಕಾರದ ಕಂಭಗಳು, ಕದಂಬರ ಶೈಲಿಯನ್ನು ಎತ್ತಿ ಹಿಡಿಯುವ ಚೌಕಾಕಾರದ ಶಿಖರ, ನೊಳಂಬರ ಕಾಲದ ಮಕರ ತೋರಣ ಇವುಗಳನ್ನು ಅರಸಿಯರು ನಿರ್ಮಿಸಿರುವ ದೇವಾಲಯ ಬಸದಿಗಳ ನಿರ್ಮಾಣದಲ್ಲಿಯೂ ಕಾಣಬಹುದಾಗಿದೆ. ಇವುಗಳಿಗೆ ಹೊರತಾಗಿಯೂ ಅರಸಿಯರು ನಿರ್ಮಿಸಿರುವ ದೇವಾಲಯದ ಕೆಲವು ವೈಶಿಷ್ಟ್ಯಗಳನ್ನೂ ಗುರುತಿಸಬಹುದು.

ವಿಜಯಾದಿತ್ಯನ ತಾಯಿ ವಿನಯವತಿಯು ೬೯೮–೯೯ರಲ್ಲಿ ನಿರ್ಮಿಸಿದ ಜಂಬುಲಿಂಗದೇವಾಲಯವು ತ್ರಿಕೂಟಾಚಲವೆಂದು ಪ್ರಸಿದ್ಧಿ ಪಡೆದಿದೆ. ಒಂದೇ ಜಗತಿಯಮೇಲೆ ಪ್ರತ್ಯೇಕ ಮೂರು ಗರ್ಭಗುಡಿಯಲ್ಲಿ ಬ್ರಹ್ಮ ವಿಷ್ಣು ಮಹೇಶ್ವರರನ್ನು ಪ್ರತಿಷ್ಠಾಪಿಸುವ ಈ ಪ್ರಕಾರದ ದೇವಾಲಯಗಳಲ್ಲಿ ಇದೇ ಮೊದಲಿನದೆಂದು ವಾಸ್ತುಶಿಲ್ಪಿಗಳು ಅಭಿಪ್ರಾಯ ಪಡುತ್ತಾರೆ[೫೧].

ಲೋಕಮಹಾದೇವಿಯು ಪತಿಯು ಮೂರನೆಯ ಬಾರಿ ಕಂಚೀಪಟ್ಟಣದ ಮೇಲೆ ದಿಗ್ವಿಜಯ ಗೈದುದರ ಸ್ಮರಣಾರ್ಥವಾಗಿ ಪಟ್ಟದಕಲ್ಲಿನಲ್ಲಿ ದೇವಾಲಯ ಕಟ್ಟಿಸಿದಳು. ಈಕೆಯ ಅಚ್ಚುಮೆಚ್ಚಿನ ಕಲಾಕೃತಿಯಾದ ಈ ಗುಡಿಗೆ ಲೋಕೇಶ್ವರನೆಂಬ ಹೆಸರು ರೂಢವಾಯಿತು. ಈಗ ಇದನ್ನು ವಿರೂಪಾಕ್ಷದೇವಾಲಯವೆಂದು ಗುರುತಿಸಲಾಗುತ್ತದೆ[೫೨].

ಬಾಣರಸ ವಿಜಯಾದಿತ್ಯನ (೭೭೨–೮೯೪) ಮಡದಿ ಮಾಣಿಕಬ್ಬೆ ಅಥವಾ ರತ್ನಾವಳಿಯು ನಂದಿಯಲ್ಲಿ ಭೋಗನಂದೀಶ್ವರ ದೇವಾಲಯ ನಿರ್ಮಿಸಿದ್ದಾಳೆ. ವಾಸ್ತು ಶಿಲ್ಪ ದೃಷ್ಟಿಯಿಂದ ಇದು ಗಮನಾರ್ಹವಾದುದಾಗಿದೆ. ಈ ದೇವಾಲಯದ ಉಬ್ಬುಶಿಲ್ಪ ವಿಶಿಷ್ಟವಾಗಿದೆ, ಗಂಗರ ಕಾಲದ ದೇವಾಲಯಗಳಲ್ಲಿ ಕಂಡುಬರುವಂತೆ

ರುದ್ರಕಾಂತ ಕಂಬಗಳ ಬಳಕೆ ಹೆಚ್ಚಾಗಿದೆ. "ನಂದಿಗ್ರಾಮದ ಆಸುಪಾಸಿನಲ್ಲೆಲ್ಲಿಯೂ ಆ ಕಾಲಕ್ಕೆ ಅಷ್ಟು ಪರಿಪೂರ್ಣತೆಯನ್ನು ಪಡೆದ ವಾಸ್ತು ರಚನೆಗಳು ತಲೆಯೆತ್ತಿರಲಿಲ್ಲ" ಎಂದು ಪಿ.ವಿ.ಕೃಷ್ಣಮೂರ್ತಿಯವರು ಅಭಿಪ್ರಾಯ ಪಡುತ್ತಾರೆ.[೫೩]

ಹೊಯ್ಸಳ ರಾಣಿ ಶಾಂತಲೆಯು ವಾಸ್ತು ಶಿಲ್ಪಕ್ಕೆ ನೀಡಿದ ಮಹತ್ವಕ್ಕೆ, ಇವಳು ನಿರ್ಮಿಸಿದ ಬಸದಿ ಹಾಗೂ ದೇವಾಲಯಗಳೇ ಸಾಕ್ಷಿಯಾಗಿವೆ. ಅಲ್ಲದೆ ಸ್ವತಃ ಈಕೆಯೆ ಕ್ರಿ.ಶ.೧೧೨೩ ರಲ್ಲಿ ಶ್ರವಣಬೆಳಗೊಳದಲ್ಲಿ ಸವತಿ ಗಂಧವಾರಣ ಬಸದಿ ಕಟ್ಟಿಸಿ, ಉದ್ಯಾನವನವನ್ನು ಮಾಡಿಸಿ ಭಕ್ತಜನರ ನಿತ್ಯ ಪೂಜೆಗೋಸ್ಕರ ಒಂದು ಹಳ್ಳಿಯನ್ನೇ ದತ್ತಿಯಾಗಿ ಬಿಟ್ಟುಕೊಟ್ಟಳಲ್ಲದೆ, ಈಶಪುರದಲ್ಲಿ ರಾಮೇಶ್ವರ ದೇವಾಲಯವನ್ನೂ, ಬೇಲೂರಿನ ಕಪ್ಪೆ ಚೆನ್ನಿಗರಾಯ ದೇವಾಲಯವನ್ನೂ ನಿರ್ಮಿಸಿದ್ದಾಳೆ.

ಹಾನುಗಲ್ಲು ಕದಂಬ ರಾಣಿ ಅಕ್ಕಾದೇವಿಯು ನಿರ್ಮಾಣ ಮಾಡಿರುವ ಹಲವು ದೇವಾಲಯಗಳಲ್ಲಿ ಸೂಡಿಯಲ್ಲಿ ಅಕ್ಕೇಶ್ವರ ದೇವಾಲಯ, ವಿಕ್ರಮಪುರದಲ್ಲಿ ಗುಣದಬೆಡಂಗಿ ಜಿನಾಲಯ ಮೊದಲಾದವು ಪ್ರಸಿದ್ಧವಾದುದಾಗಿದೆ. ಪ್ರಸಿದ್ಧ ಸೇನಾಧಿಕಾರಿ ಗಂಗರಾಜನ ಪತ್ನಿ ಅಕ್ಕಲೆ ಕ್ರಿ.ಶ೧೧೧೮ರಲ್ಲಿ ಶ್ರವಣಬೆಳಗೊಳದಲ್ಲಿ ಕಟ್ಟಿಸಿದ ಜಿನಾಲಯ ಇಂದಿಗೂ ಅಕ್ಕನ ಬಸದಿ ಎಂದೇ ಪ್ರಸಿದ್ಧಿ ಪಡೆದಿದೆ. ಅನ್ನ, ವಸತಿ, ಓಷಧಿ, ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡಿಕೊಡಲಾದ ಈ ಬಸದಿಯು ವಾಸ್ತು ಕಲೆಯಲ್ಲಿಯೂ ಶ್ರೇಷ್ಠ ಮಟ್ಟದ್ದಾಗಿದೆ. ಶಿಖರದಲ್ಲಿ ಮೂರು ತೀರ್ಥಂಕರರ ವಿಗ್ರಹವನ್ನೊಳಗೊಂಡಿರುವುದು ಈ ಬಸದಿಯ ವೈಶಿಷ್ಟ್ಯವಾಗಿದೆ. ಸುಂದರವಾದ ಶೈಲಿಯ ಬರಹವನ್ನಷ್ಟೇ ಅಲ್ಲದೆ ಇಲ್ಲಿನ ಶಾಸನವು ಸುಂದರ ಶಿಲ್ಪವನ್ನೂ ಒಳಗೊಂಡಿದೆ.

ಹತ್ತನೆಯ ಶತಮಾನದಲ್ಲಿ ಬಾಪ್ಪುರ ರಾಜಮನೆತನದ ನಾಗಿಯಕ್ಕ ಬಳ್ಳಿಗಾವೆಯಲ್ಲಿ ತಾರಾಭಗವತಿಯ ಮಂದಿರ ನಿರ್ಮಿಸಿದ್ದಾಳೆ. ಬೌದ್ಧರ ಅಧಿದೇವತೆಯಾದ ಈ ವಿಗ್ರಹ ಕಾನಿಷ್ಕನ ಕಾಲದ ಸಮ್ಮಿಶ್ರಣ ಕಲೆಯನ್ನು ಒಳಗೊಂಡು ಅಪ್ರತಿಮ ಕಲಾಕೃತಿ ಎನಿಸಿದೆ.

## ಸಂಗೀತ, ನೃತ್ಯ ಮೊದಲಾದ ಲಲಿತ ಕಲೆಗಳಿಗೆ ಅರಸಿಯರ ಕೊಡುಗೆ

ಶಾಸನಗಳು ಕೆಲವು ರಾಣಿಯರನ್ನು ಉತ್ತಮ ವಾಙ್ಮಿಗಳೆಂದೂ, ಚತುರೆಯರೆಂದು, ವಿದ್ಯಾವಿಳಾಸಿನಿಯರೆಂದೂ, ಮೊದಲಾಗಿ ಬಣ್ಣಿಸಿವೆ. ಆರನೆಯ ವಿಕ್ರಮಾದಿತ್ಯನ ರಾಣಿಯರು ಧರ್ಮ, ರಾಜಕೀಯ ಕಲೆಯನ್ನು ಕರಗತಗೊಳಿಸಿಕೊಂಡಂತೆ ಲಲಿತಕಲೆಯಲ್ಲಿಯೂ ಪ್ರಾವೀಣ್ಯತೆ ಪಡೆದಿದ್ದರು. ಚಂದಲದೇವಿ 'ಸಕಳಕಳಾಧರಿ', 'ನೃತ್ಯವಿದ್ಯಾಧರಿ', ಅಭಿನವಸರಸ್ವತಿ', 'ಕಲಿಕಾಲಸರಸ್ವತಿ', ಎಂದು ಮೊದಲಾಗಿ ಕರೆಯಲ್ಪಟ್ಟಿದ್ದರೆ, ಜಾಕಲದೇವಿಯನ್ನು 'ಕಲಿಕಾಲಪಾರ್ವತಿ', 'ಅಭಿನವ ಸರಸ್ವತಿ', ಎಂದು ಕರೆದಿದೆ. ಪದ್ಮಲದೇವಿಯೂ 'ಸಕಳಕಳಾಧರಿ', 'ಅಭಿನವ ಸರಸ್ವತಿ', ಎಂದು ಕರೆಯಲ್ಪಟ್ಟಿದ್ದಾಳೆ. ಕೇತಲದೇವಿಯನ್ನು 'ಅನೇಕದೇಶಭಾಷಾ ಸಂಗೀತ ವಿದ್ಯಾಧರಿ, 'ಸಕಳಕಳಾಧರಿ' ಎಂದು ಶಾಸನಗಳು ಕೊಂಡಾಡಿವೆ. ಇದೇ ರೀತಿ ಶಾಸನಗಳು ಕೊಂಡಾಡಿರುವ ಇತರ ರಾಣಿಯರೆಂದರೆ 'ವಾಗ್ದೇವಿಯರ ದೊರೆ' ಎನಿಸಿರುವ ಪಲ್ಲವ ದೀವಬ್ಬರಸಿ[೫೪], 'ಸಹಜಸರಸ್ವತಿ ವಿಳಾಸ ವಿದ್ಯಾಧರಿ' ಎಂದೆನಿಸಿರುವ ಮಹಾಸಾಮಂತ ಶೂಕ್ರಕಾಂಕನ ಮಡದಿ ಜಕ್ಕಿಸುಂದರಿ[೫೫], 'ಕಲಿಕಾಲ ಸರಸ್ವತಿ' ಎಂದು ಕರೆಯಲ್ಪಟ್ಟ ಚಾಲುಕ್ಯ ಜಗದೇಕಮಲ್ಲದೇವನ ಮಡದಿ ಸುಗ್ಗಲದೇವಿ[೫೬], 'ವಿಳಾಸ ವಿದ್ಯಾಧರಿ' ಎಂಬ ಬಣ್ಣನೆಗೊಳಗಾಗಿರುವ ಚಾಲುಕ್ಯ ತ್ರೈಲೋಕ್ಯಮಲ್ಲ ಸೋಮೇಶ್ವರನ ಮಡದಿ ಮೈಳಲದೇವಿ[೫೭], 'ಭಾರತೀ ಕರ್ಣಾವತಂಸೆ' ಎಂಬ ಬಿರುದಿಗೆ ಬಾಜನಳಾಗಿರುವ ಸೋವರಸ ದಂಡನಾಥನ ಮಡದಿ, 'ಶೃಂಗಾರ ವಿದ್ಯಾಧರಿ, ಸಕಳಕಳಾಧರಿ ಎಂದೆನಿಸಿದ್ದ ಚಾಲುಕ್ಯ ಭುವನೈಕಮಲ್ಲನ ಮಡದಿ ಕಂಚಲಮಹಾದೇವಿ[೫೮], 'ಅಭಿನವ ಸರಸ್ವತಿ, ವೀರನೊಳಂಬನ ಪತ್ನಿ ಮಾಳಲದೇವಿ 'ವಿದ್ಯಾಧರಿ' ಎಂದೆಲ್ಲ ಹೊಗಳಿಕೆಗೆ ಪಾತ್ರಳಾದ ಭುಮನೈಕಮಲ್ಲನ

ತಂಗಿ ಸುಗ್ಗಲದೇವಿ[೫೯], 'ಅತಿಚತುರೋಕ್ತಿಯೊಳೆ ಸರಸ್ವತಿಗಂ ಮಿಗಿಲು' ಎನಿಸಿದ ಕದಂಬ ಕುಲದ ರಾಣಿ ಮೇಚಲದೇವಿ ಮೊದಲಾದವರು ತಮ್ಮ ಸಂಗೀತ, ನೃತ್ಯ, ವಿದ್ವತ್ತು, ಪಾಂಡಿತ್ಯ ಮೊದಲಾದವುಗಳಿಂದ ಪ್ರಸಿದ್ಧರಾಗಿದ್ದರೆನ್ನುವುದನ್ನು ಅವರ ಈ ಬಿರುದಾವಳಿಗಳೇ ಸಾರುತ್ತವೆ.

ವಿಷ್ಣುವರ್ಧನನ ಅರಸಿ ಶಾಂತಲೆಯು ನಾಟ್ಯರಾಣಿ ಎಂಬ ಬಿರುದನ್ನು ಪಡೆದು, ಇಂದಿಗೂ ಜನಮನದಲ್ಲಿ ನಿಂತಿದ್ದಾಳೆ. ಇವಳ ಹಲವು ಬಿರುದುಗಳಲ್ಲಿ "ಗೀತವಾದ್ಯನ್ರಿತ್ಯ ಸೂತ್ರಧಾರೆಯುಂ" ಎಂಬುದು ಇವಳು ನರ್ತನವನ್ನು ಸಂಯೋಜಿಸುತ್ತಿದ್ದುದರ ಕುರಿತು ತಿಳಿಸುತ್ತದೆ.

ಗಂಗ ಪೆರ್ಮಾಡಿಯ ಪತ್ನಿ ಬಾಚಲದೇವಿ 'ನೃತ್ಯವಿದ್ಯಾಪ್ರಭಾವ ಪ್ರಭೂತನಿರ್ಮ್ಮಳಯಶೋವಿಭಾಸಿನಿ, ಸ್ಥಾನಪಾತ್ರಮುಖಮಣ್ಡನೆ, ಪ್ರತಿಪಕ್ಷಗಾಯಕಾಗಾನ ಮಾನ ಪರಿಖಂಡನೆ, ಚತುರ ವಿದ್ಯಾವಿನೋದೆ, ಎಂಬ ಹಲವು ವಿಶಿಷ್ಟ ಬಿರುದುಗಳನ್ನು ಪಡೆದುಕೊಂಡಿದ್ದಳು. ವೀರಪಾತ್ರಗಳನ್ನು ನೃತ್ಯಕೌಶಲದ ಮೂಲಕ ತೋರ್ಪಡಿಸುವುದು ಬಾಚಲದೇವಿಯ ಪ್ರಮುಖ ಕಲಾವಿದ್ಯೆಯಾಗಿತ್ತು. ತನ್ನ ಪತಿಯ ಯುದ್ಧ ಕೌಶಲ್ಯವನ್ನು, ಆತನು ವೈರಿಗಳನ್ನು ಸೋಲಿಸಿದ ಬಗೆಯನ್ನೂ, ಅವರಿಂದ ಮಾಡಿಸಿಕೊಂಡ ಪಾದಪೂಜೆಯ ಪ್ರಸಂಗಗಳನ್ನೂ ನಾಟ್ಯರೂಪದಲ್ಲಿ ಅಭಿನಯಿಸಿ ತೋರಿಸುವುದರಲ್ಲಿ ನಿಪುಣೆಯಾಗಿದ್ದ ಬಾಚಲದೇವಿಗೆ ಈಕೆಯ ಪತಿ 'ಪಾತ್ರಜಗದಳೆ' ಎಂಬ ಬಿರುದನ್ನು ನೀಡಿದ್ದ ಎನ್ನುವ ವಿಚಾರ ಶಿವಮೊಗ್ಗೆಯ ಶಾಸನದಿಂದ ತಿಳಿದುಬರುತ್ತದೆ[೬೦].

ಗಾಯನ-ನರ್ತನದಲ್ಲಿ ಪ್ರವೀಣೆಯರೆನಿಸಿದ್ದ ಅರಸಿಯರು ಕಲಾವಿದರನ್ನು ಪೋಷಿಸುತ್ತಿದ್ದ ವಿಚಾರವು ತಿಳಿದು ಬರುತ್ತದೆ. ಅಂದಿನ ಕಾಲದಲ್ಲಿ ವಿದ್ಯಾಭ್ಯಾಸ, ಪ್ರವಾಸಿಗರ ತಂಗುದಾಣ, ಅನ್ನಛತ್ರ ಎಲ್ಲವೂ ದೇವಾಲಯದ ಅಧೀನದಲ್ಲಿಯೇ ನಡೆಯುತ್ತಿದ್ದ ಪದ್ಧತಿಯಂತೆಯೇ ಗಾಯನ-ನರ್ತನ ಪ್ರದರ್ಶನಗಳೂ ದೇವರಿಗೆ ಅರ್ಪಿಸುವ ಒಂದು ಸೇವೆ ಎಂಬ ರೀತಿಯಲ್ಲಿಯೇ ನಡೆಯುತ್ತಿತ್ತು. ಅರಸಿಯರು ದೇವಾಲಯದಲ್ಲಿ ನಡೆಯುವ ಇಂತಹ ಸಂಗೀತ, ನರ್ತನಗಳನ್ನು ಪ್ರೋತ್ಸಾಹಿಸಿದ್ದಾರೆ. ಇಲ್ಲಿನ ಕಲಾವಿದರಿಗೆ ದತ್ತಿಯನ್ನು ಕೊಡುವುದರ ಮೂಲಕ ಅವರನ್ನು ಪೋಷಿಸಿರುವುದನ್ನೂ ಕಾಣುತ್ತೇವೆ.

ಒಂದನೇ ಸೋಮೇಶ್ವರನ ರಾಣಿ ಚಾಮಲದೇವಿಯು ಬಲ್ಲಟಗಿಯಲ್ಲಿ ಚಾಮೇಶ್ವರ ದೇವಾಲಯವನ್ನು ನಿರ್ಮಿಸಿ ನರ್ತನಸೇವೆ, ಸಂಗೀತಸೇವೆ ಮೊದಲಾದ ಸೇವೆಗಳಿಗೆ ದತ್ತಿ ನೀಡಿದ್ದಾಳೆ. ಗಂಗ ಬುಜಬ್ಬರಸಿಯು ಶಿರಹಟ್ಟಿಯ ಹೆಬ್ಬಾಳುವಿನ ದೇವಾಲಯದ ವಿವಿಧ ಕಲಾವಿದರಿಗೆ ಕೊಟ್ಟಿರುವ ದತ್ತಿಯ ವಿಚಾರವನ್ನು ಅಲ್ಲಿಯ ಶಾಸನವು ತಿಳಿಸುತ್ತದೆ. ಚಾಳುಕ್ಯ ಅಬ್ಬಲದೇವಿಯು ಲಿಂಗಸುಗೂರಿನಲ್ಲಿ ನಿರ್ಮಿಸಿರುವ ಕಲಿದೇವರ ದೇವಾಲಯದಲ್ಲಿನ ನಾಟ್ಯ ಸೇವೆನೀಡುವವರಿಗೆ ದತ್ತಿ ಕೊಟ್ಟಿರುವುದಲ್ಲದೆ ಅವರಿಗೆ ತೆರಿಗೆಯನ್ನೂ ಮಾನ್ಯಮಾಡಿದ್ದಾಳೆ. ವೀರಬಲ್ಲಾಳನ ರಾಣಿ ಬಮ್ಮಲದೇವಿಯ ಕಲಾಪೋಷಣೆಯನ್ನು ಅತ್ತಿಹಳ್ಳಿಯ ಅಮೃತೇಶ್ವರ ದೇವಾಲಯದ ಶಾಸನವು ಬಣ್ಣಿಸಿದೆ. ಚಾಲುಕ್ಯ ಅರಸಿ ಸುಗ್ಗಲದೇವಿಯು ದೇವಾಪುರದ ಮಾರಸಿಂಗೇಶ್ವರ ದೇವರ ರಂಗಭೋಗಕ್ಕೆ ನೀಡಿರುವ ದತ್ತಿಯು ಇವಳು ಅಲ್ಲಿನ ಕಲಾವಿದರ ಪೋಷಣೆಗೆ ನೀಡಿರುವುದೇ ಆಗಿದೆ.

## ವಿದ್ಯಾಭ್ಯಾಸಕ್ಕೆ ನೀಡಿದ ಮಹತ್ವ

ಸ್ವತಃ ವಿದ್ಯಾವತಿಯರಾಗಿದ್ದು, ಪಾಂಡಿತ್ಯವನ್ನು ಪಡೆದಿದ್ದ ರಾಜಮನೆತನದ ಮಹಿಳೆಯರು ಗ್ರಂಥಗಳನ್ನು ಪ್ರತಿ ಮಾಡಿಸಿ ಅಧ್ಯಯನಕ್ಕಾಗಿ ಬಳಸಿಕೊಳ್ಳುತ್ತಿದ್ದರು. ಇವರು ಅಧ್ಯಯನಕ್ಕೆ ಬಳಸಿಕೊಳ್ಳಲೆಂದು, ಪಾರಾಯಣ ಮಾಡಲೆಂದು ಲಿಪಿಮಾಡಿಸಿಕೊಂಡ ಕೆಲವು ಹಸ್ತಪ್ರತಿಗಳೂ ದೊರೆತು, ಅವರ ಶಾಸ್ತ್ರ ಪರಿಣತಿ ಹಾಗೂ

ಶಾಸ್ತ್ರದಾನಗಳ ಕುರಿತಾದ ಆಸಕ್ತಿಗಳನ್ನು ತಿಳಿಸಿವೆ. ಹೀಗೆ ವಿದ್ಯೆಯ ಮಹತ್ವವನ್ನರಿತ ರಾಣಿಯರು ಸ್ವತಃ ವಿದ್ಯಾಕೇಂದ್ರಗಳಿಗೆ ದತ್ತಿಯನ್ನಿತ್ತು ಪ್ರೋತ್ಸಾಹಿಸಿದ್ದಾರೆ.

ಹನ್ನೊಂದನೆಯ ಶತಮಾನದ ರಟ್ಟ ಅರಸ ಎರಡನೆಯ ಕಾರ್ತವೀರ್ಯನ ಪತ್ನಿ ಭಾಗಲದೇವಿಯು ರಾಜನೀತಿಗಳಲ್ಲಿ ಮಾರ್ಗದರ್ಶಿಯೂ ಆಗಿದ್ದಳು ಈಕೆಯು ಅಂಕರಸನು ಸವದತ್ತಿಯಲ್ಲಿ ಕಟ್ಟಿಸಿದ ಅಂಕೇಶ್ವರ ದೇವಾಲಯಕ್ಕೆ ಹಾಗೂ ಹೂಲಿಯ ಸೋಮೇಶ್ವರ ಮಠದ ಪಂಡಿತರಾದ ಜ್ಞಾನಪಂಡಿತರಿಗೆ ದಾನಮಾಡಿದಳೆನ್ನುವ ವಿಚಾರವನ್ನು ಕ್ರಿ.ಶ.೧೦೮೭ನೆಯ ಸವದತ್ತಿಯ ಶಾಸನವು ತಿಳಿಸುತ್ತದೆ[೬೧].

ಹಾನುಗಲ್ಲು ಕದಂಬ ಅಕ್ಕಾದೇವಿ ಕ್ರಿ.ಶ.೧೦೬೪ರ ಸುಮಾರಿನಲ್ಲಿ ಬಂಕಾಪುರದ ಬಳಿಯ ಮಠವೊಂದರಲ್ಲಿ ಐನೂರು ವಿದ್ಯಾರ್ಥಿಗಳಿಗೆ ಅನುಕೂಲವಾಗುವಂತಹ ವಿದ್ಯಾಕೇಂದ್ರವನ್ನು ನಿರ್ಮಿಸಿದ್ದಳು. ಇದಕ್ಕಾಗಿ ಐನೂರು ಮತ್ತರು ಭೂಮಿ, ಐವತ್ತು ಮನೆಗಳು, ಎರಡು ತೋಟಗಳನ್ನು ಈ ಪೆರೂರಿನ ಅಗ್ರಹಾರಕ್ಕೆ ದಾನವಾಗಿ ನೀಡಿ, ಶಾಸನ ಹಾಕಿಸಿದ್ದಾಳೆ. ಹೊಯ್ಸಳ ಎರಡನೆಯ ನರಸಿಂಹನ ಸೋದರಿ ಸೋವಲದೇವಿಯು ಆ ಕಾಲದ ಪ್ರಸಿದ್ಧ ವಿಶ್ವವಿದ್ಯಾಲಯವಾಗಿದ್ದ ವಲ್ಲಭಿಯನ್ನು ಹೋಲುವಂಥ ವಿದ್ಯಾಲಯವನ್ನು ನಿರ್ಮಿಸಬೇಕೆಂಬ ಬಯಕೆಯಿಂದ ಸೋಮನಾಥಪುರವನ್ನು ನಿರ್ಮಿಸಿ, ಇದನ್ನು ಕೇವಲ ಅಗ್ರಹಾರವಾಗಿಸದೆ ವಿದ್ಯಾಕೇಂದ್ರವನ್ನಾಗಿಸಿ ಹಲವಾರು ಜನರಿಗೆ ಆಶ್ರಯ ಸ್ಥಾನಗಳನ್ನು ಕಲ್ಪಿಸಿಕೊಟ್ಟಳೆನ್ನುವ ವಿಚಾರವನ್ನು ಶಾಸನವು ತಿಳಿಸುತ್ತದೆ. ಕದಂಬ ಮಲ್ಲಿದೇವನ ರಾಣಿ ಪದ್ಮಲದೇವಿ ಹುಲ್ಲುಂಗೂರಿನಲ್ಲಿ ಬ್ರಹ್ಮಪುರಿಯನ್ನು ನಿರ್ಮಿಸಿ ಯಾದವ ಸಿಂಘಣನಿಂದ ಅನುಮತಿಯನ್ನು ಪಡೆದು ಎಲ್ಲಾ ತೆರಿಗೆಗಳನ್ನು ಮುಕ್ತಗೊಳಿಸಿ ಮಹಾಜನರಿಗೆ ದಾನಮಾಡಿದ್ದಾಳೆ. ಜೊತೆಗೆ ಹುಲ್ಲುಂಗೂರನ್ನು ಪ್ರಸಿದ್ಧ ವಿದ್ಯಾಕೇಂದ್ರವನ್ನಾಗಿಸಿದ ಕೀರ್ತಿಯೂ ಇವಳಿಗೇ ಸಲ್ಲುತ್ತದೆ[೬೨]. ಚಾಲುಕ್ಯ ಒಂದನೆಯ ಸೋಮೇಶ್ವರನ ರಾಣಿ ಮೈಳಲದೇವಿಯು ಶ್ರೀಶೈಲದ ದೇವಸ್ಥಾನಕ್ಕೆ ದಾನ ನೀಡುವ ಸಂದರ್ಭದಲ್ಲಿ ಇಲ್ಲಿನ ತಪೋಧನರಿಗೆ ಹಾಗೂ ವಿದ್ಯಾಭ್ಯಾಸಕ್ಕಾಗಿಯೂ ದಾನ ನೀಡಿದ್ದಾಳೆ[೬೩].

ಕಟಗೇರಿ ಗ್ರಾಮದ ಕಡಕೆರೆ ಅಗ್ರಹಾರ ಪ್ರತಿಷ್ಠಿತ ವಿದ್ಯಾಕೇಂದ್ರವಾಗಿತ್ತು. ಕಟಗೆರೆ ತ್ರೈಪುರುಷ ಶಾಲೆಯ ೫೦೦ ಮಹಾಜನರ ಬಹುಮುಖ ಪ್ರತಿಭೆಯನ್ನು ಶಾಸನಗಳು ತಿಳಿಸುತ್ತವೆ. ಅದರಂತೆ ಕ್ರಿ.ಶ.೧೦೯೭ರಲ್ಲಿ ಇಲ್ಲಿನ ಮಹಾಜನರಿಗೆ ಆರನೆಯ ವಿಕ್ರಮಾದಿತ್ಯನ ರಾಣಿ **ಚಂದಲದೇವಿ** ಋಗ್ವೇದ ಖಂಡಿಕ ಮತ್ತು ಶಾಸ್ತ್ರ ಖಂಡಿಕಕ್ಕೆ ತಲಾ ೮ ಗದ್ಯಾಣದಂತೆ ೧೬ ಗದ್ಯಾಣ ನೀಡಿದ್ದಾಳೆ. ಖಂಡಿತ ಎಂದರೆ ಗ್ರಂಥವನ್ನು ಭಾಗವಾಗಿ ಅಧ್ಯಯನ ಮಾಡುವುದು ಎಂದರ್ಥ, ಶಾಸ್ತ್ರಗಳಲ್ಲಿ ಧರ್ಮಶಾಸ್ತ್ರ, ಅರ್ಥಶಾಸ್ತ್ರ, ಗಜಶಾಸ್ತ್ರ, ಹಯಶಾಸ್ತ್ರಗಳ ಅಧ್ಯಯನಕ್ಕೆ ಅವಕಾಶ ಕಲ್ಪಿಸಿದ್ದಾಳೆ.

ಹುಣಸಿಗೆ ಶಾಸನವು, ಜೋಗಣಬ್ಬರಸಿಯು ಆಲನಕೆರೆಯಲ್ಲಿ ಸಹಸ್ರಲಿಂಗದೇವರನ್ನು ಪ್ರತಿಷ್ಠಾಪಿಸಿ, ದೇವಾಲಯ ಹಾಗೂ ವಿದ್ಯಾಸತ್ರಕ್ಕೆ ಭೂಮಿಯನ್ನು ದತ್ತಿಬಿಟ್ಟಳೆಂಬ ಮಾಹಿತಿ ದೊರಕುತ್ತದೆ.

ಗುಲ್ಬರ್ಗಾಜಿಲ್ಲೆಯ ನಾಗಾಯಿ (ನಾಗಾವಾವಿ) ಸುಪ್ರಸಿದ್ಧ ಘಟಿಕಾಸ್ಥಾನ. ಅಲ್ಲಿ ತ್ರೈಪುರುಷದೇವರ ಶಾಲೆ ಘಟಿಕಾಸ್ಥಾನವಾಗಿತ್ತು. ಈ ಅಗ್ರಹಾರವನ್ನು ಕಾಳಿದಾಸ ದಂಡಾಧೀಶನ ಮಡದಿ ರೆಬ್ಬಣಬ್ಬೆ ತನ್ನ ಪತಿಯ ಜೊತೆಗೂಡಿ ಚತುರ್ವೇದ ಪಾರಂಗತರಾದ ೪೦೦ ವಿಪ್ರರಿಗೆ ಕೊಟ್ಟಿದ್ದಳು. ಅದು ೨೦೦ಜನ ವೇದಾಧ್ಯಾಯಿಗಳು, ೫೦ ಶಾಸ್ತ್ರಾಧ್ಯಾಯಿಗಳು, ೩ ಜನ ಉಪಾಧ್ಯಾಯರು, ಇಬ್ಬರು ಭಟ್ಟದರ್ಶನ, ನ್ಯಾಸ ಪ್ರಭಾಕರ ವ್ಯಾಖ್ಯಾತೃಗಳು ಇಬ್ಬರು ವೇದಮನೋದಿಸುವ ಉಪಾಧ್ಯಾಯರು, ೬ ಜನ ಶಾಲೆಯ ಸರಸ್ವತಿ ಭಂಡಾರಿಗರನ್ನು ಹೊಂದಿದ್ದ ಬೃಹತ್ ವಿದ್ಯಾಕೇಂದ್ರವಾಗಿತ್ತು. ಇಲ್ಲಿನ ೨೬೫ ಜನರ ಅಶನಾಚ್ಛಾದನಕ್ಕೆ ದೇವಾಲಯದ ಜೀರ್ಣೋದ್ಧಾರ ಖಣ್ಡ

ಸ್ಫುಟಿತ ನವಸುಧಾಕರ್ಮಕ್ಕೆ ಗಂಧಾಕ್ಷತೆ, ಧೂಪ, ಪುಷ್ಪ ದೀಪ ನೈವೇದ್ಯಗಳಿಗಾಗಿ ೧೦೦೦ ಮತ್ತರು ಭೂಮಿಯನ್ನು ರೆಬ್ಬಣಬ್ಬೆದೇವಿಯು ಪತಿ ಕಾಳಿದಾಸ ದಂಡಾಧೀಶ ನೊಂದಿಗೆ ದಾನ ನೀಡಿದ್ದಾಳೆ.

ಕ್ರಿ.ಶ.೧೧೬೭ರ ಶಾಸನದಲ್ಲಿ[೬೪] ಮಲ್ಲಿದೇವ ಅರಸನ ರಾಣಿ ಸೀತಾದೇವಿಯನ್ನು 'ಶತಸಹಸ್ರ ಫಲಭೋಗ ಭಾಮಿನಿ, ದ್ವಿತೀಯ ಲಕ್ಷ್ಮೀಸಮಾನೆ ಕಳಹಂಸಯಾನೆ, ಶ್ರವ್ಯ ಕಾವ್ಯ ದಿವ್ಯ ಗೀತವಾದ್ಯ ನೃತ್ಯಾದಿವಿದ್ಯಾಪ್ರವೀಣೆ, ರಕ್ಷಿತಾನೇಕಭೀತಜನಪ್ರಾಣೆ, ಎಂದು ಮೊದಲಾಗಿ ವರ್ಣಿಸಲಾಗಿದೆ. ಈ ಸೀತಾದೇವಿಯು ಹೆಂಜೇರಿನ ಮಹಾಘಟಿಕಾಸ್ಥಾನವೆನಿಸಿದ್ದ ಶ್ರೀ ನೊಣಂಬೇಶ್ವರ ದೇವಸ್ಥಾನಕ್ಕಾಗಿ ಅಲ್ಲಿಯ ಆಚಾರ್ಯ ರಾಜಗುರುಗಳಾದ ಶ್ರೀ ಶಿವದೇವರಿಗೆ ಆ ನೊಣಂಬೇಶ್ವರ ದೇವರ ಆವರಣದಲ್ಲಿ ಛತ್ರವನ್ನು ನಡೆಸಲು ದಾನ ನೀಡಿರುವಳಲ್ಲದೆ, ಅಲ್ಲಿಯ ಘಡಿಕಾಸ್ಥಾನದ ವಿದ್ಯಾರ್ಥಿಗಳಿಗೆ, ತಪೋಧನರಿಗೆ, ಪರಿಚಾರಕರಿಗೆ ಆಹಾರಕ್ಕಾಗಿ ದಾನ ನೀಡಿದ್ದಾಳೆ.

ಹತ್ತೊಂಬತ್ತನೆಯ ಶತಮಾನದಲ್ಲಿ ಮೈಸೂರಿನ ಚಾಮರಾಜೇಂದ್ರ ಒಡೆಯರ್‌ನ ಅರಸಿ ಕೆಂಪನಂಜಮ್ಮಣ್ಣಿ ವಾಣಿವಿಲಾಸ ಸನ್ನಿಧಾನ ಆಧುನಿಕ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಿರುವುದಲ್ಲದೆ, ವಿದ್ಯಾರ್ಥಿನಿಯರಿಗೆ ಪ್ರತ್ಯೇಕ ಶಾಲಾ–ಕಾಲೇಜುಗಳ ನಿರ್ಮಾಣ ಮಾಡಿಸಿ, ಸರ್ವರಿಗೂ ವಿದ್ಯಾಭ್ಯಾಸಕ್ಕೆ ಅನುವು ಮಾಡಿಕೊಟ್ಟಿರುವುದೂ ಮಹತ್ವದ ಸಾಧನೆಯೇ ಆಗಿದೆ.

ಪ್ರಾಚೀನ ಭಾರತದಲ್ಲಿ ವಿದ್ಯಾಪ್ರಸಾರಕ್ಕೆ ಗುರುಕುಲಗಳು, ಬ್ರಹ್ಮಪುರಿಗಳು, ಘಟಿಕಾ ಸ್ಥಾನಗಳು ಮತ್ತು ಅಗ್ರಹಾರಗಳು ಅಪಾರ ಕೊಡುಗೆಯನ್ನು ನೀಡಿವೆ. ದೇಶದ ಇಂತಹ ವಿದ್ಯಾಕೇಂದ್ರಗಳಿಗೆ ಜನರು ಹಾಗೂ ರಾಜಕುಲದವರು ಉದಾರವಾಗಿ ದಾನ, ದತ್ತಿ, ಉಂಬಳಿ ಉತ್ತಾರಗಳನ್ನು ನೀಡಿ ಅವು ಉಳಿದು ಬೆಳೆಯಲು ನೆರವಾಗಿದ್ದರು. ಈ ವಿದ್ಯಾಕೇಂದ್ರಗಳು ನಾಡಿನ ಇತಿಹಾಸವನ್ನು ಬಿಂಬಿಸುವಲ್ಲಿ ನಾಡಿನ ಸಾಂಸ್ಕೃತಿಕ ಪರಂಪರೆಯ ಕೊಂಡಿಗಳಂತಿದ್ದವು. ಅಗ್ರಹಾರಗಳಲ್ಲಿ ವಿದ್ಯಾಭ್ಯಾಸ ನಡೆಯುತ್ತಿದ್ದವಾದರೂ ಎಲ್ಲಾ ಅಗ್ರಹಾರಗಳೂ ವಿದ್ಯಾಕೇಂದ್ರಗಳಾಗಿರಲಿಲ್ಲ. "ಯಮನಿಯಮ, ಸ್ವಾಧ್ಯಾಯ, ಧ್ಯಾನ, ಧಾರಣ ಮೋನಾನುಷ್ಠಾನ ಜಪ ಸಮಾಧಿ ಶೀಳ ಗುಣಸಂಪನ್ನರು" ಎಂದು ವರ್ಣಿಸುವೆಡೆ ಸ್ವಾಧ್ಯಯಕ್ಕೆ ೪ ವೇದಗಳಿದ್ದರೂ ಹೆಚ್ಚಿನ ಮಹತ್ವ ಯೋಗಾಭ್ಯಾಸಕ್ಕೆ ನೀಡಿದ ವಿಚಾರ ತಿಳಿಸುತ್ತದೆ. ಚತುರ್ವೇದಿಗಳು, ಶ್ರೀ ಮಹಾಚತುರ್ವಿದ್ಯಾಸಮುದಾಯ, ಮೊದಲಾಗಿ ಮಹಾಜನರನ್ನು ಸ್ತುತಿಸುವುದು ಅಲ್ಲಿನ ಪಂಡಿತರು ನಾಲ್ಕೂ ವೇದಗಳಲ್ಲಿಯೂ ಪಾರಂಗತರಾಗಿದ್ದರೆಂದೂ, ಅಲ್ಲಿನ ವಿದ್ಯಾಕೇಂದ್ರಗಳು ನಾಲ್ಕುವೇದಗಳ ಅಧ್ಯಯನಕ್ಕೆ ಪ್ರಾಶಸ್ತ್ಯ ನೀಡಿದ್ದವೆಂದೂ ತಿಳಿದುಬರುತ್ತದೆ. ಇಂತಹ ಅಗ್ರಹಾರಗಳನ್ನು ಸ್ಥಾಪಿಸುವುದರ ಮೂಲಕ ವಿದ್ಯಾಕೇಂದ್ರಳನ್ನೇ ಸ್ಥಾಪಿಸಿದಂತಾಗಿ ವಿದ್ಯಾಪ್ರಸಾರ ಸುಗಮವಾಗಿ ನಡೆಯುತ್ತಿತ್ತು.

ವಿಷ್ಣುವರ್ಧನನ ಮಡದಿ ಬಮ್ಮಲದೇವಿಯು ಇವಳು ನೀರಗುಂದದಲ್ಲಿ ಒಂದು ಅಗ್ರಹಾರ ಸ್ಥಾಪಿಸಿದಳು. ಕದಂಬ ಶಿವಚಿತ್ತನ ಮಡದಿ ಕಮಲಾದೇವಿಯು ಪ್ರಸಿದ್ಧ ಕಮಲನಾರಾಯಣ ದೇವಾಲಯವನ್ನು ದೇಗಾಂವೆಯಲ್ಲಿ ಕಟ್ಟಿಸಿ, ಆ ಗ್ರಾಮವನ್ನು ಅಗ್ರಹಾರವಾಗಿ ಪರಿವರ್ತಿಸಿದಳೆಂದು ಇಲ್ಲಿಯ ಶಾಸನ ತಿಳಿಸುತ್ತದೆ. ಕ್ರಿ.ಶ.೧೨೨೭ರಲ್ಲಿ ಮೂರನೆಯ ನರಸಿಂಹನ ಕಾಲದಲ್ಲಿ ಹೇರಳಗಟ್ಟ ಶಾಸನ ತಿಳಿಸುವಂತೆ ಬೊಮ್ಮಲೆನಾಗತಿ ಬ್ರಹ್ಮಲಾಪುರ ಅಗ್ರಹಾರವನ್ನು ಸ್ಥಾಪಿಸಿದಳು. ದೀವಬ್ಬರಸಿಯು ಪೊಟಿಲ್ಲೋರ ಮಂಗಳ ಎಂಬ ಅಗ್ರಹಾರವನ್ನು ಆವನಿಯಲ್ಲಿ ನಿರ್ಮಿಸಿದಳು. ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಅರಸಿ ಮಲಯಮತಿಯು ಸಿಂದವಾಡಿ ನಾಡಿನ ಅಗ್ರಹಾರಕ್ಕೆ ದಾನ ನೀಡಿದ್ದಾಳೆ. ಆರನೆಯ ವಿಕ್ರಮಾದಿತ್ಯನ ಮತ್ತೋರ್ವ ಅಚಲಾದೇವಿಯು ದುತ್ತರಗಾವೆಯಲ್ಲಿ ಅಗ್ರಹಾರ ನಿರ್ಮಿಸಿ ದತ್ತಿಯನ್ನು ನೀಡಿದ್ದಾಳೆ. ಕದಂಬ ಅಕ್ಕಾದೇವಿಯು ಪೆರೂರು ಅಗ್ರಹಾರವನ್ನು, ವಿಕ್ರಮಪುರಿಯನ್ನೂ ನಿರ್ಮಿಸಿದ್ದಳು[೬೫].

ರಾಣಿ ಚನ್ನಮ್ಮಾಜಿ ತನ್ನ ಪತಿಯ ಹೆಸರಿನಲ್ಲಿ ಸೋಮಶೇಖರಪುರ ಅಗ್ರಹಾರವನ್ನು ನಿರ್ಮಿಸಿ, ಕೆಲವು ದಾನದತ್ತಿಗಳನ್ನು ನೀಡಿದ್ದಾಳೆ. ಯಲಹಂಕನಾಡ ಪ್ರಭುಗಳ ಪುಣ್ಯ ಸ್ತ್ರೀ ಮತ್ತು ನಾಟಕ ಶಾಲೆ ಸ್ತ್ರೀ ಕ್ರಮವಾಗಿ

ವೆಂಕಟ ಕೃಷ್ಣಸಾಗರ ಮತ್ತು ಶೃಂಗಾರ ಸಾಗರ ಅಗ್ರಹಾರವನ್ನು ನಿರ್ಮಾಣಮಾಡಿದುದನ್ನು ಶಾಸನಗಳು ಉಲ್ಲೇಖಿಸುತ್ತದೆ[೬೬]. ಮೈಸೂರಿನ ಶಾಸನವೊಂದು ತಿಳಿಸುವಂತೆ[೬೭] ಮೂರನೆಯ ಕೃಷ್ಣರಾಜನ ಎರಡನೆಯ ಧರ್ಮಪತ್ನಿ ಲಿಂಗಾಜಮ್ಮಣ್ಣಿಯವರು ಕೃಷ್ಣವಿಳಾಸದ ಲಿಂಗಾಂಬ ಅಗ್ರಹಾರ ನಿರ್ಮಿಸಿದ್ದಾಳೆ.

## ಅಧ್ಯಯನದ ಫಲಿತ

ಕರ್ನಾಟಕದ ರಾಣಿಯರ ದಕ್ಷಆಡಳಿತ ನಿರ್ವಹಣೆಗೆ ಈ ಮೇಲಿನ ಕೆಲವು ಉದಾಹರಣೆಗಳು ಸಾಕ್ಷಿಯಾಗಿವೆ. ವಿವಿಧ ಕ್ಷೇತ್ರಗಳಲ್ಲಿನ ಅರಸಿಯರ ಕಾರ್ಯಗಳು ನಾಡಿಗೆ ಉತ್ತಮ ಕೊಡುಗೆಗಳಾಗಿವೆ. ಕೆಲವೊಂದು ಪರಿಮಿತಿಯಲ್ಲಿ ಗಮನಿಸಲಾದ ಈ ಅಲ್ಪವಿಚಾರವು ಇತಿಹಾಸದ ಪುಟಗಳಲ್ಲಿ ಅರಸಿಯರು ಮೂಡಿಸಿದ ಹೆಜ್ಜೆಯ ಸ್ಥೂಲ ಚಿತ್ರಣ ನೀಡಿದೆ. ಒಟ್ಟಾರೆಯಾಗಿ ಗಮನಿಸಲಾದ ಈ ಮಾಹಿತಿಗಳನ್ನು ಪ್ರಾಚೀನ ಹಾಗೂ ಮಧ್ಯಕಾಲೀನ ಎಂಬ ಎರಡು ಕಾಲಮಾನಗಳಲ್ಲಿ ನೋಡಬಹುದು. ಪ್ರಾಚೀನ ಕಾಲದಿಂದ ವಿಜಯನಗರದ ಪೂರ್ವಕಾಲವನ್ನು ಪ್ರಾಚೀನ ವಿಭಾಗದಲ್ಲಿಯೂ ವಿಜಯನಗರ ಅರಸರ ಕಾಲದಿಂದ ಮುಂದಿನ ಕಾಲಮಾನವನ್ನು ಮಧ್ಯಕಾಲೀನ ಎಂದು ವಿಭಾಗಿಸಿ ಗಮನಿಸಿಬಹುದು. ಈ ಎರಡು ಕಾಲಘಟ್ಟವು ಭಾರತದ ರಾಜಕೀಯ ಸ್ಥಿತ್ಯಂತರ ಪರಿಸ್ಥಿತಿಯನ್ನು ಸೂಚಿಸುತ್ತದೆ. ಮೊದಲನೆಯ ಕಾಲಘಟ್ಟದಲ್ಲಿ ದೇಶೀಯ ರಾಜರುಗಳ ಪರಸ್ಪರ ಹೋರಾಟ ಸಂಘರ್ಷಗಳು ಕಂಡುಬಂದರೆ, ಎರಡನೆಯ ಕಾಲಘಟ್ಟದಲ್ಲಿ ವಿದೇಶಿಯರ ದಾಳಿಯ ಸಂದರ್ಭಗಳು ಎದುರಾಗಿವೆ.

ಪ್ರಾಚೀನ ಕಾಲದ ಅರಸಿಯರು ತಮ್ಮ ಪತಿಯ ಸಹಕಾರದೊಂದಿಗೆ ಆಳ್ವಿಕೆ ನಡೆಸಿದ್ದಾರೆ. ಶಾಸನಗಳು ತಿಳಿಸುವಂತೆ 'ಸುಖ ಸಂಕಥಾ ವಿನೋದ'ದಲ್ಲಿ ತೊಡಗಿದ ಅರಸಿಯರು ಧಾರ್ಮಿಕ-ಸಾಂಸ್ಕೃತಿಕ ಕಾರ್ಯಗಳಲ್ಲಿ ಆಸಕ್ತಿವಹಿಸುತ್ತಿದ್ದುದು ಹೆಚ್ಚಾಗಿ ಕಂಡುಬರುತ್ತದೆ. ಆದರೆ, ಮಧ್ಯಕಾಲೀನ ಕರ್ನಾಟಕದ ರಾಣಿಯರ ಸಂದರ್ಭ ವಿಭಿನ್ನವಾಗಿ ತೋರುವುದು. ಪತಿಯ ಅಕಾಲಿಕ ಮರಣದಿಂದ ರಾಜ್ಯಾಡಳಿತ ಕೈಗೊಂಡ ಸಂದರ್ಭಗಳೇ ಹೆಚ್ಚಾಗಿ ತೋರುತ್ತದೆ. ಈ ಕಾಲದಲ್ಲಿ ಸಣ್ಣಪುಟ್ಟ ತುಂಡರಸರು, ಪಾಳೆಯಗಾರರ ಆಡಳಿತವೇ ಹೆಚ್ಚಾಗಿದ್ದು, ಈ ಮನೆತನದ ಮಹಿಳೆಯರು ಪ್ರಾಚೀನ ಅರಸಿಯರಿಗಿಂತ ಭಿನ್ನವೆನಿಸುವುದಕ್ಕೆ ಇಂತಹ ಹಲವಾರು ಕಾರಣಗಳನ್ನು ಗುರುತಿಸಬಹುದಾಗಿದೆ. ಪತಿಯ ಸಹಕಾರದಿಂದ ಪ್ರಾಚೀನ ಅರಸಿಯರು ವಿವಿಧ ಕ್ಷೇತ್ರಗಳಲ್ಲಿ ತಮ್ಮನ್ನು ಗುರುತಿಸಿಕೊಂಡಂತೆ, ತಮಗೆದುರಾದ ಹಲವಾರು ವಿಷಮ ಪರಿಸ್ಥಿತಿಯ ನಡುವೆಯೂ ಹಲವಾರು ಸಾಧನೆಗೈದ ಮಧ್ಯಕಾಲೀನ ಕರ್ನಾಟಕದ ಅರಸಿಯರು ಸಾಹಸಿಗಳೆನಿಸಿದ್ದಾರೆ. "ಈ ಕಾಲದ ಕರ್ನಾಟಕದ ಅರಸಿಯರಿಗೆ ದೊರೆತ ಅವಕಾಶ ಅದೇ ಕಾಲದ ಉತ್ತರ ಭಾರತದ ಯಾವ ರಾಣಿಯರಿಗೂ ದೊರೆತಿರಲಿಲ್ಲ"[೬೮].

ಕನ್ನಡ ಸಾಹಿತ್ಯವಲಯ ಹಾಗೂ ಸಾಮಾಜಿಕ ನೆಲೆಗಳಲ್ಲಿ ಹನ್ನೆರಡನೆಯ ಶತಮಾನದಲ್ಲಿ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಗುರುತಿಸಿಕೊಂಡಂತೆ ಇತರ ಕಾಲದಲ್ಲಿ ಮಹಿಳೆಯರು ಕಂಡು ಬರುವುದಿಲ್ಲ. ಈ ಅಧ್ಯಾಯದಲ್ಲಿ ಗಮನಿಸಿದಂತೆ ರಾಜಕೀಯ ಕ್ಷೇತ್ರದಲ್ಲಿಯೂ ಈ ಕಾಲಘಟ್ಟದಲ್ಲಿ ಮಹಿಳೆಯರು ಹೆಚ್ಚಾಗಿ ಗುರುತಿಸಿಕೊಂಡಿದ್ದಾರೆ. ಕಲ್ಯಾಣಿ ಚಾಲುಕ್ಯ ಅರಸಿಯರು, ಹೊಯ್ಸಳ ಅರಸಿಯರು ತಮ್ಮದೇ ಆದ ಆಳ್ವಿಕೆಯ ಪ್ರದೇಶಗಳನ್ನು ಹೊಂದಿದ್ದು, ದೇವಾಲಯ ನಿರ್ಮಾಣನಡೆಸಿ, ಅಂಗಭೋಗ-ರಂಗಭೋಗಗಳಿಗೆ ದತ್ತಿ ನೀಡುವುದರ ಮೂಲಕ ಸಂಗೀತ-ನರ್ತನಗಳಿಗೆ, ವಿದ್ಯಾಭ್ಯಾಸಕ್ಕೆ, ವಾಸ್ತುಶಿಲ್ಪಕ್ಕೆ ಪ್ರೋತ್ಸಾಹ ನೀಡಿದ್ದಾರೆ. ಕೆರೆ-ಅಗ್ರಹಾರಗಳ ನಿರ್ಮಾಣದಲ್ಲಿ ತೊಡಗಿ ಸಮಾಜಮುಖಿ ಕಾರ್ಯಗಳನ್ನು ನಡೆಸಿದ್ದಾರೆ. ಅಷ್ಟೇ ಅಲ್ಲದೆ ಹಲವಾರು ಸಂಖ್ಯೆಯಲ್ಲಿರುತ್ತಿದ್ದ ಅರಸಿಯರು, ರಾಜಧಾನಿಯಲ್ಲಿರದೆ ತಮ್ಮ ಆಳ್ವಿಕೆಗೆ ಒಳಪಟ್ಟ ಭತ್ತಗ್ರಾಮಗಳಲ್ಲಿ, ಅಗ್ರಹಾರಗಳಲ್ಲಿ ವಾಸವಾಗಿರುತ್ತಿದ್ದರು. ಜನಸಾಮಾನ್ಯರು ತೀರ ಹತ್ತಿರದಿಂದ ಅರಸುಮನೆತನದ ಮಹಿಳೆಯರನ್ನು ಗಮನಿಸಲು ಇದು ಅವಕಾಶ ಕಲ್ಪಿಸಿತು. ಇವರ ವಿದ್ಯಾಭ್ಯಾಸ, ಧಾರ್ಮಿಕ ಚಟುವಟಿಕೆ, ಸಾಮಾಜಿಕ ಕಳಕಳಿ ಹನ್ನೆರಡನೆಯ ಶತಮಾನದ ಮಹಿಳೆಯರ

ಮೇಲೆ ಉತ್ತಮ ಪ್ರಭಾವವನ್ನು ಬೀರಿರುವುದರಲ್ಲಿ ಆಶ್ಚರ್ಯವಿಲ್ಲ. ಸ್ವತಃ ಅರಸಿಯರೇ ಕಾರ್ಯವನ್ನು ಮುನ್ನಡೆಸುವ ಕ್ರಮ ಬಸವಣ್ಣನವರ **'ಕಾಯಕವೇ ಕೈಲಾಸ'** ತತ್ವಕ್ಕೆ ನಿದರ್ಶನವೆಂಬಂತಿದ್ದು, ಪ್ರಜೆಗಳಿಗೆ ಅನುಕರಣೀಯವೆನಿಸಿರುವ ಸಾಧ್ಯತೆಗಳನ್ನು ಅಲ್ಲಗಳೆಯುವಂತಿಲ್ಲ. ಅರಸಿಯರ ಜೀವನ, ಸಾಧನೆಗಳು ಸಾಮಾನ್ಯ ಜನತೆಗೆ ಆದರ್ಶವೆನಿಸುವಂತಿದ್ದು, ಇವರ ಧಾರ್ಮಿಕನಡೆ, ಸಮಾಜದ ಒಳತಿಗಾಗಿ ಕೈಗೊಂಡ ಕಾರ್ಯಗಳು ಪ್ರಜೆಗಳ ಮೇಲೆ ಬೀರಿರಬಹುದಾದ ಪ್ರಭಾವವನ್ನು ಕುರಿತು ವಿಶ್ಲೇಷಿಸುವ ಅಗತ್ಯವಿದೆ.

ಶಾಸನಗಳು ತಿಳಿಸುವಂತೆ ಈ ಕಾಲದಲ್ಲಿ ಹಲವಾರು ಕೆರೆ-ಕಾಲುವೆಗಳ ನಿರ್ಮಾಣ ನಡೆದಿದೆ. ಮಾನವನ ಮೂಲಭೂತ ಅಗತ್ಯವೆನಿಸಿದ ಅನ್ನ, ನೀರು, ಆಶ್ರಯಗಳಿಗೆ ಕೊರತೆ ಇಲ್ಲದಾದಾಗ ಸಾಂಸ್ಕೃತಿಕ ಚಟುವಟಿಕೆಗಳು, ಧಾರ್ಮಿಕ ಕಾರ್ಯಗಳು ಹೆಚ್ಚು ಸುಸೂತ್ರವಾಗಿ ನಡೆಯುವುದು ಸಹಜ. ಇಂತಹ ಅನುಕೂಲಕರ ವಾತಾವರಣ ಹನ್ನೆರಡನೆಯ ಶತಮಾನದಲ್ಲಿ ನಿರ್ಮಾಣವಾದದ್ದು, ಆ ಕಾಲದ ಸಾಮಾನ್ಯ ಜನರು ವಿಭಿನ್ನ ಕ್ಷೇತ್ರಗಳಲ್ಲಿ ತಮ್ಮನ್ನು ಗುರುತಿಸಿಕೊಳ್ಳಲು ಸಾಧ್ಯವಾಗಿದೆ. ಈ ಕಾಲದ ಸಾಮಾನ್ಯ ಮಹಿಳೆಯರು ಹೆಚ್ಚು ಮುಂಚುಣಿಗೆ ಬರಲು ಇವೆಲ್ಲ ಪ್ರಮುಖ ಕಾರಣಗಳಾಗಿವೆ.

ಈ ಅಧ್ಯಾಯದಲ್ಲಿ ಕೆಲವು ಪರಿಮಿತಿಗಳ ಒಳಗೆ ಕರ್ನಾಟಕದ ರಾಣಿಯರ ಕೆಲವೇ ವಿಚಾರಗಳನ್ನು ಮಾತ್ರ ಗಮನಿಸಲಾಗಿದೆ. ಇಲ್ಲಿ ಚರ್ಚಿಸಲಾಗಿರುವ ವಿಚಾರವು ಕೇವಲ ಒಂದು ಅಧ್ಯಾಯಕ್ಕೆ ಮಾತ್ರ ಸೀಮಿತ ಗೊಳಿಸುವ ವಿಷಯವಾಗಿರದೆ ಇದರ ವ್ಯಾಪಕತೆ ಅಧಿಕವಾಗಿರುವ ಕಾರಣ ಕೆಲವೊಂದು ಮುಖ್ಯ ಅಂಶಗಳನ್ನು ಮಾತ್ರ ಚರ್ಚಿಸಲಾಗಿದೆ. ರಾಣಿಯರ ವಿಚಾರ ಕೇವಲ ಆಕರಗಳ ಪರಿಶೀಲನೆ, ದಾಖಲೀಕರಣಕ್ಕೆ ಮಾತ್ರ ಸೀಮಿತವಾಗದೆ, ವಿಸ್ತೃತವಾಗಿ ಚರ್ಚೆಗೆ ಒಳಗಾಗಬೇಕಾಗಿದೆ ಎನ್ನುವ ಸಂಗತಿಗಳನ್ನು ಈ ಅಧ್ಯಯನವು ನಿರೂಪಿಸಿದೆ.

ಶಾಂತಲೆ, ಕಿತ್ತೂರು ಚೆನ್ನಮ್ಮ, ಬೆಳವಡಿ ಮಲ್ಲಮ್ಮ ಮೊದಲಾದ ಕೆಲವೇ ಬೆರಳೆಣಿಕೆಯ ರಾಣಿಯರು ಮಾತ್ರ ಇತಿಹಾಸದ ಪಠ್ಯಗಳಲ್ಲಿ ಸ್ಥಾನ ಪಡೆದಿದ್ದಾರೆ. ಕೆಲವೊಂದು ಅಧ್ಯಯನದಲ್ಲಿ ಸಾಂದರ್ಭಿಕವಾಗಿ ಕೆಲವು ರಾಣಿಯರ ಕುರಿತಾದ ಅಧ್ಯಯನ ನಡೆದಿದೆಯಾದರೂ, ಪ್ರತಿಯೊಂದು ಕ್ಷೇತ್ರದಲ್ಲಿಯೂ ತಮ್ಮದೇ ಆದ ಕೊಡುಗೆಯನ್ನು ನೀಡಿರುವ ಅನೇಕರಾಣಿಯರ ಕುರಿತಾದ ಸಮಗ್ರ ಅಧ್ಯಯನ ನಡೆದು ಒಂದೆಡೆ ದಾಖಲಾಗಬೇಕಾದ ಅಗತ್ಯತೆಯನ್ನು ಈ ಅಧ್ಯಾಯ ತಿಳಿಸುತ್ತದೆ. ಇಲ್ಲಿ ತೆಗೆದುಕೊಂಡ ಪ್ರತಿಯೊಂದು ಉಪಶೀರ್ಷಿಕೆಗಳನ್ನೂ ಪ್ರತ್ಯೇಕವಾಗಿ ಅಧ್ಯಯನಕ್ಕೆ ಒಳಪಡಿಸುವ ಅಗತ್ಯವಿದೆ. ಪ್ರಸ್ತುತ ಸಂಪ್ರಬಂಧದ ಉದ್ದೇಶ ಸಾಹಿತ್ಯಿಕ ಕೊಡುಗೆಯನ್ನು ಗಮನಿಸುವುದಾದ್ದರಿಂದ ಈ ಎಲ್ಲ ವಿಚಾರಗಳನ್ನು ಸೂಕ್ಷ್ಮವಾಗಿ, ವಿಸ್ತೃತವಾಗಿ ಅಧ್ಯಯನಕ್ಕೆ ಒಳಪಡಿಸುವುದು ಔಚಿತ್ಯವೆನಿಸುವುದಿಲ್ಲವಾದ್ದರಿಂದ, ಕೆಲವು ಉದಾಹರಣೆಗಳ ಮೂಲಕ ಕರ್ನಾಟಕದ ಅರಸಿಯರ ಮಹತ್ಕಾರ್ಯಗಳನ್ನು, ವಿಶೇಷತೆಗಳನ್ನು ಗಮನಿಸಲಾಗಿದೆ.

**ಟಿಪ್ಪಣಿಗಳು ಹಾಗೂ ಆಕರಗ್ರಂಥಗಳು**


೧. E.C VII ಶಿವಮೊಗ್ಗ ೨೪೨ ಶಿಕಾರಿಪುರ

೨. Lakshminarayan Rao.N. 1954, '**Eminent Women of Karnataka**' QJMS, JULY Vol.XLV No.1

೩. ಕ.ವಿ.ವಿ.ಶಾ.ಸಂ. IX ಪಟ್ಟದಕಲ್ಲು ೧೦೧ ಬಾದಾಮಿ ತಾ (ಕ್ರಿ.ಶ.೧೧೬೨)

೪. ಕ.ವಿ.ವಿ.ಶಾ.ಸಂ IX ಹೊಸೂರು ೩೮೩, ಬಾದಾಮಿ ತಾ (ಕ್ರಿ.ಶ.೧೧೬೨)

೫. E.I. XXII, ಪು.೯೮, ನಂ.೧೭ ಕ್ರಿ.ಶ.೭೮೯

೬. E.I. XV ಪು.೭೮, ನಂ.೬, ಕ್ರಿ.ಶ.೧೦೫೦
೭. ಚೆನ್ನಕ್ಕ ಪಾವಟೆ, ೧೯೯೮, **ಹಾನಗಲ್ಲ ಕದಂಬರು**, ಚೆನ್ನಗಂಗಾ ಪ್ರಕಾಶನ, ಧಾರವಾಡ
೮. ಚಿದಾನಂದಮೂರ್ತಿ.ಎಂ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೨೦೧೧, ಸಪ್ನ ಬುಕ್‌ಹೌಸ್, ಬೆಂಗಳೂರು, ಪು.೩೮೧
೯. E.I XIII ನಂ. ೨೮ ನರೇಂದ್ರ, ಧಾರವಾಡ, ಕ್ರಿ.ಶ.೧೧೨೬
೧೦. E.I XV ನಂ ೧೧ ಹೊಟ್ಟೂರು (ತಾ) ಬಂಕಾಪುರ ಕ್ರಿ.ಶ.೧೦೬೪
೧೧. ಕ.ವಿ.ವಿ.ಶಾ. ಸಂix ಅರಸೀಬೀದಿ ೧೦೩ ಹುನಗುಂದ (ತಾ) ಕ್ರಿ.ಶ.೧೦೫೩
೧೨. ಇನ್‌ಸ್ಕ್ರಿಪ್ಷನ್ ಆಫ್ ಆಂಧ್ರಪ್ರದೇಶ್ ಪು.೫೨ & ೫೩
೧೩. ಟಿ.ಟಿ.ಡಿ ಶಾಸನ ೧೧೧ ಪು.೧೬೪–೧೬೭
೧೪. E.C XII ತುಮುಕೂರು, ೬೯ ಪಾವಗಡ
೧೫. ವಸಂತ ಮಾಧವ.ಕೆ.ಜಿ, ೧೯೮೬, **ಗೇರುಸೊಪ್ಪೆಯ ಸಾಳ್ವರು**, ಉತ್ತರ ಕನ್ನಡ ಜಿಲ್ಲೆ ದರ್ಶನ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ಪು.೪೬–೫೪
೧೬. E.C. V ಹಾಸನ ೩೨೧ ಅರಸಿಕೆರೆ
೧೭. E.C. ಶಿವಮೊಗ್ಗ VIII ನಗರ ೩೫
೧೮. E.C. X (ಪರಿ) ೩೬, ಅರಸೀಕೆರೆ
೧೯. E.I. XXIX ಪು ೨೦೩–೨೦೯
೨೦. SII IX(i) No.೧೭
೨೧. **ಕನ್ನಡ ವಿಷಯ ವಿಶ್ವಕೋಶ**, ೨೦೦೫, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಪು.೫೨
೨೨. E.C X ಕೋಲಾರ, ೧೦ ಬಾಗೇಪಲ್ಲಿ
೨೩. E.C X ಕೋಲಾರ, ೩೮ ಮುಳುಬಾಗಿಲು
೨೪. K.I. I–24 ಸಿರಸಂಗಿ (ತಾ) ಸೌಂದತ್ತಿ, (ಕ್ರಿ.ಶ.೧೧೪೮)
೨೫. E.C XI ದಾವಣಗೆರೆ, ೧೦೫ ಕುಂದವಾಡ (ಕ್ರಿ.ಶ.೧೨೧೮)
೨೬. SII ಸಂ XX, ಹಿರೇಬೇವನೂರು ತಾ ೧೭೫ (ಕ್ರಿ.ಶ.೧೧೯೦)
೨೭. SII ಸಂ VII, ೩೭೬ ಕೋಟಕೇರಿ (ತಾ) ಉಡುಪಿ (ಕ್ರಿ.ಶ.೧೧೫೫)
೨೭ಅ. ಶೆಟ್ಟಿ. ಎಸ್.ಡಿ, ***ಗೇರುಸೊಪ್ಪೆಯ ತಾಮ್ರಶಾಸನ***, ಮಂಜುವಾಣಿ, ಜೂನ್ ೧೯೮೯
೨೮. E.I XV ನಂ.೬ ಸೂಡಿ (ತಾ) ರೋಣ, (ಕ್ರಿ.ಶ.೧೦೫೦)
೨೯. ಕಮಲಾ ಹಂಪನಾ, ೨೦೧೧, **ಮಹಾಮಂಡಲೇಶ್ವರಿ ರಾಣಿ ಚೆನ್ನಭೈರಾದೇವಿ ಮತ್ತು ಇತರ ಕರಾವಳಿ ರಾಣಿಯರು**, ಸಪ್ನಬುಕ್ ಹೌಸ್, ಪು.೨೯
೩೦. ಶಿವಣ್ಣ ಕೆ.ಎಸ್(ಸಂ), ೧೯೯೭, **ಕರ್ನಾಟಕ ಚರಿತ್ರೆ** ೩, ಕನ್ನಡ ವಿವಿ, ಹಂಪಿ, ಪು.೨೨೯
೩೧. ಕಮಲಾಹಂಪನಾ ಪೂರ್ವೋಕ್ತ, ೨೦೧೧ ಪು.೨೮
೩೨. E.C. VII ಶಿವಮೊಗ್ಗ ಸಂ.೨೮
೩೩. E.I. XV ೧೧ ಹೊಟ್ಟೂರು (ತಾ) ಬಂಕಾಪುರ (ಕ್ರಿ.ಶ.೧೦೬೪)
೩೪. E.I. XIV ಹೆಮ್ಮಿಗೆ ಶಾಸನ, ಪು.೨೩೪
೩೫. M.A.R. ೧೯೧೧, ಪ್ಯಾರಾ ೭೭ ಪು.೩೮
೩೬. ಶಾಸ್ತ್ರೀ.ಎ.ಕೆ, ೨೦೦೩, **ಶೃಂಗೇರಿ ಮಠದ ಆಯ್ದ ಚಾರಿತ್ರಿಕ ದಾಖಲೆಗಳು**, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂ
೩೭. ಶಟ್ಟರ್.ಷ., ೨೦೧೪, **ಹಳಗನ್ನಡಲಿಪಿ, ಲಿಪಿಕಾರ, ಲಿಪಿ ವ್ಯವಸಾಯ**, ಅಭಿನವ, ಬೆಂಗಳೂರು
೩೮. E.C. ಸಂ X (ಪರಿ) ಶಾ.ಸಂ.೩೬, ಅರಸೀಕೆರೆ, (ಕ್ರಿ.ಶ.೧೧೯೦)
೩೯. E.C. V ಅರಸಿಕೆರೆಯ ಶಾಸನ ಸಂ.೩೬, ೮೬, ಬೇಲೂರು ೧೦೭, ೪೧೫

೪೦. E.C. VII ಶಿವಮೊಗ್ಗ ೩೦
೪೧. E.I. X ನಂ.೨೨ ಗದ್ವಾಲತಾಮ್ರಪಟ (ಕ್ರಿ.ಶ.೬೭೪)
೪೨. ದೇಸಾಯಿ.ಪಿ.ಬಿ(ಸಂ)., ೧೯೫೭, **ಜೈನಿಸಂ ಇನ್ ಸೌತ್ಇಂಡಿಯ,** ಜೈನಸಂಸ್ಕೃತಿ ಸಂರಕ್ಷಕ ಸಂಘ, ಸೊಲ್ಲಾಪುರ, ಪು.೨೩೬
೪೩. E.C. ಸಂ.V ಹಾಸನ ೧೧೬ ಗ್ರಾಮ (ಕ್ರಿ.ಶ.೧೧೨೨)
೪೪. ಎ.ಆರ್.ಎಸ್.ಐ.ಇ ೧೯೦೮–೯ ಪು.೧೭೮
೪೫. E.C. VII ಹೊನ್ನಾಳಿ ಸಂ೨೮, ೩೭,೩೮,೪೦
೪೬. E.C. V ಅರಸಿಕೆರೆ ೧೦೨ ಕಾಟಿಗೆರೆ (ಕ್ರಿ.ಶ.೧೧೮೩)
೪೭. E.C. VIII ಸೊ–೪೧೨ ಹಿರೇಮಾಗಡಿ (ಕ್ರಿ.ಶ.೧೧೭೭)
೪೮. SII ಸಂ XV, ೮೩ ನೀಲಗುಂದ (ತಾ) ಬಾದಾಮಿ (ಕ್ರಿ.ಶ.೧೧೦೬)
೪೯. ಶಾಮಶಾಸ್ತ್ರಿ.ಆರ್.(ಸಂ) ಲಿಂಗಣ್ಣ, ***ಕೆಳದಿನೃಪ ವಿಜಯಂ,*** ಕನ್ನಡ ಅಧ್ಯಯನ ಸಂಸ್ಥೆ, ೧೯೭೩, ಮೈಸೂರು ವಿವಿ
೫೦. ಕಲುಬುರ್ಗಿ ಎಂ.ಎಂ.(ಸಂ), ***ವಸುಧಾರೆಗ್ರಾಮದ ಕೃಷಿಯತ್ತು ಸಾಗರದ ಕೃಷಿಯತ್ತು ಕರ್ನಾಟಕ ಕೃಷಿಯತ್ತುಗಳು,*** ೧೯೯೪, ಕನ್ನಡ ವಿವಿ ಹಂಪಿ, ಪು.೧೨೨, ೧೨೩ ,೧೫೧
೫೧. ರತ್ನಕುಮಾರಿ.ಬೆಂ.ಶಾ, ***ಬಾಗಲಕೋಟೆ ಜಿಲ್ಲೆಗೆ ರಾಜವಂಶಗಳ ಕೊಡುಗೆ,*** ಬಾಗಲಕೋಟೆ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ೨೦೧೧, ಮೈಸೂರು, ಪು.೩೭೩
೫೨. I.A. X ನಂ.೨೨ ಗದ್ವಾಲತಾಮ್ರಪಟ (ಕ್ರಿ.ಶ.೭೫೪)
೫೩. ಕೃಷ್ಣಮೂರ್ತಿ.ಪಿ.ವಿ., ***ಬಾಣರಸರ ಶಾಸನಗಳು,*** ೨೦೦೯, ಸಿ.ವಿ.ಜಿ.ಪಬ್ಲಿಕೇಷನ್ಸ, ಬೆಂಗಳೂರು
೫೪. E.C. X, ಮುಳಬಾಗಿಲು, ೩೮ ಆವನಿ (ಕ್ರಿ.ಶ.೮೯೦)
೫೫. E.C. XI ಚಿತ್ರದುರ್ಗ, ೭೪ ಬೇವಿನಹಳ್ಳಿ (ಕ್ರಿ.ಶ.೯೬೮)
೫೬. SII ಸಂ XX ೨೩ ದೇವೂರು (ತಾ) ಸಿಂದಗಿ (ಕ್ರಿ.ಶ.೧೦೨೯)
೫೭. SII ಸಂ I-೧ ೮೩ ಬಾಗೇವಾಡಿ (ಕ್ರಿ.ಶ.೧೦೪೯)
೫೮. SII ಸಂ.IX-I, ೧೩೪ ನಂದಿಕೋಟಕೂರು (ತಾ) ಕರ್ನೂಲ (ಕ್ರಿ.ಶ.೧೦೬೯)
೫೯. SII ಸಂ XX, ೪೯, ಕಲಕೇರಿ (ತಾ) ಹಾನಗಲ್ಲ (ಕ್ರಿ.ಶ.೧೦೭೬)
೬೦. E.C. ಸಂ. VII ಶಿವಮೊಗ್ಗ ೯೭. ಆಲಹಳ್ಳಿ, (ಕ್ರಿ.ಶ.೧೧೧೩)
61. ಬಿ.ಬಿ.ಆರ್.ಎ.ಎಸ್ ಸಂ.೧೦ ಪು–೨೧೩ ; ಕೆಐ ಸಂ.೫ ಪು–೨೦೯
೬೨. KI. ಸಂ IV, ೫೪ ಹುಲಗೂರು, ತಾ. ಶಿಗ್ಗಾಂವ (ಕ್ರಿ.ಶ.೧೨೪೫)
೬೩. S.I.I. IX-i ೧೨೧ ನಂದಿಕೋಟಕೂರು (ತಾ) ಕರ್ನೂಲ (ಕ್ರಿ.ಶ.೧೦೫೭)
೬೪. E.C. XII ತುಮಕೂರು, ೨೩ ಶಿರಾ (ಹೇಮಾವತಿ)
೬೫. ಕವಿಶಾಸಂ– IX ಬಾದಾಮಿ ೧೬, (ಕ್ರಿ.ಶ.೧೦೨೧)
೬೬. E.C. XII ತುಮಕೂರು, ೧೩ & ೨೯ ಕುಣಿಗಲ್ಲು
೬೭. E.C. IV ಮೈಸೂರು ೨, (ಕ್ರಿ.ಶ.೧೮೨೧)
೬೮ ಮಜುಂದಾರ್.ಪಿ.ಬಿ., ***ಸೋಷಿಯೋ ಎಕನಾಮಿಕ್ ಹಿಸ್ಟರಿ ಆಫ್ ನಾರ್ತ್ ಇಂಡಿಯಾ*** ಪು.೧೩೯

# ಅಧ್ಯಾಯ – ೪

## ಐತಿಹಾಸಿಕ ಮತ್ತು ಇತರ ಕಾವ್ಯಗಳಲ್ಲಿ ಕರ್ನಾಟಕದ ಅರಸಿಯರು

ಈ ಹಿಂದಿನ ಅಧ್ಯಾಯದಲ್ಲಿ ಗಮನಿಸಿರುವಂತೆ ಕರ್ನಾಟಕದಲ್ಲಿ ವಿವಿಧ ರಾಜಮನೆತನಗಳಲ್ಲಿ ಅನೇಕ ಅರಸಿಯರು ಅಪಾರ ಸಾಧನೆಗೈದಿದ್ದಾರೆ. ಅವರ ಪ್ರಜಾಪರ ಕಾಳಜಿ, ಶೌರ್ಯ, ವ್ಯಾಪಾರ ಚತುರತೆ, ಧಾರ್ಮಿಕ ಕಾರ್ಯಗಳು, ನೂರಾರು ವರ್ಷಗಳ ಹಿಂದಿನ ಅವರ ಕಾರ್ಯ ಇಂದಿನವರೆಗೂ ಉಳಿದು ಬರುವಂತೆ ನಿರ್ಮಿಸಿರುವ ಸ್ಮಾರಕಗಳು, ಹಾಕಿಸಿರುವ ಶಾಸನಗಳು ಅವರ ಹಿರಿಮೆಯ ದ್ಯೋತಕವಾಗಿವೆ. ಅರಸಿಯರನ್ನು ಸ್ಮರಿಸಿಕೊಳ್ಳಲು ಇವಿಷ್ಟು ಮಾತ್ರವಲ್ಲದೆ, ಹಲವಾರು ಕಾವ್ಯಗಳು ಕರ್ನಾಟಕದ ಅರಸಿಯರ, ರಾಜಕುಮಾರಿಯರ ಕುರಿತಾಗಿ ರಚಿತವಾಗಿರುವುದನ್ನು ಕಾಣುತ್ತೇವೆ. ಕರ್ನಾಟಕದ ಅರಸರನ್ನು ಕುರಿತು ರಚಿಸಲಾದ ಪಂಪನ ವಿಕ್ರಮಾರ್ಜುನವಿಜಯ, ರನ್ನನ ಸಾಹಸಭೀಮವಿಜಯ, ಪೊನ್ನನ ಭುವನೈಕರಾಮಾಭ್ಯುದಯ ಮೊದಲಾದ ಕೃತಿಗಳಂತೆ ಅರಸಿಯರನ್ನು ಕಥಾನಾಯಕಿಗೆ ಸಮೀಕರಿಸಿ ಬರೆದ ಮಹಾಕಾವ್ಯಗಳು ರಚಿತವಾಗಿರದಿದ್ದರೂ, ರಾಣಿಯರನ್ನು ಚಿತ್ರಿಸಿರುವ, ಕಥಾನಾಯಕಿಯಾಗಿಸಿರುವ ಹಲವಾರು ಕೃತಿಗಳನ್ನು ಕಾಣಬಹುದು.

ಅರಸಿಯರ ಗುಣಗಳು, ನಡೆ, ಅವರ ಬದುಕಿನ ಸುತ್ತ ನಡೆದ ಘಟನೆಗಳು ಕಾವ್ಯರಚನೆಗೆ ವಸ್ತುವನ್ನೊದಗಿಸಿವೆ. ಅರಿಕೇಸರಿಯನ್ನು ಅರ್ಜುನನಿಗೆ ಹೋಲಿಸಿರುವಂತೆ, ಅನೇಕ ಅರಸಿಯರನ್ನು ಸೀತೆ, ಅನುಸೂಯ, ಸಾವಿತ್ರಿ, ರತಿ, ಮೊದಲಾದ ಪೌರಾಣಿಕ ಸ್ತ್ರೀಯರಿಗೆ ಹೋಲಿಸಿ ಪದ್ಯ ರಚಿಸಿರುವುದನ್ನು ಕಾಣುತ್ತೇವೆ. ಅಂದಿನ ಸಮಾಜದ ಮೌಲ್ಯಕ್ಕೆ ತಕ್ಕಂತೆ, ಅಂದಿನ ಜನರು ಗೌರವಿಸುತ್ತಿದ್ದ, ಪೂಜ್ಯಭಾವದಿಂದ ಕಾಣುತ್ತಿದ್ದ ಆದರ್ಶನಾರಿ ಎಂಬ ಕಲ್ಪನೆಗೆ ತಕ್ಕುದಾದ ರಾಣಿಯರ ಬದುಕನ್ನು ಅವರ ದೃಷ್ಟಿಯಲ್ಲಿ ಚಿತ್ರಿಸಿದ ಪರಿ ಅಂದಿನ ಸಾಹಿತ್ಯಗಳಲ್ಲಿ ಕಾಣಬಹುದಾಗಿದೆ. ಇವೆಲ್ಲ ದೀರ್ಘಕಾವ್ಯಗಳಲ್ಲದಿದ್ದರೂ, ಸಂದರ್ಭಕ್ಕೆ ಉಚಿತರೀತಿಯಲ್ಲಿ, ಅಗತ್ಯವೆನಿಸಿದ ವಿಚಾರಗಳನ್ನು, ಹೆಚ್ಚು ವೈಭವೀಕರಿಸದೆ ದಾಖಲಿಸಲಾಗಿದೆ.

ಕನ್ನಡದ ಅರಸಿಯರು ಕೆಲವು ಸಂಸ್ಕೃತ ಸಾಹಿತ್ಯಗಳಲ್ಲಿಯೂ ಉಲ್ಲೇಖಗೊಂಡಿದ್ದಾರೆ. ಇವರ ಬದುಕನ್ನು ಕಂಡರಿಸುವುದರಲ್ಲಿ ಶಾಸನ ಸಾಹಿತಿಗಳಂತೆ, ಜನಪದ ಸಾಹಿತಿಗಳೂ ಆಸಕ್ತಿವಹಿಸಿದ್ದರೆನ್ನುವುದನ್ನು ಗಮನಿಸಬಹುದು. ಕನ್ನಡ–ಸಂಸ್ಕೃತ, ಶಿಷ್ಟ–ಜನಪದ' ಸಾಹಿತ್ಯಗಳ ವಿಭಿನ್ನ ಪ್ರಾಕಾರಗಳಲ್ಲಿ ದೊರಕುವ ಅರಸಿಯರ ಕುರಿತಾದ ವಿಚಾರಗಳನ್ನು ಈ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ತಮ್ಮ ಸಾಧನೆ, ನೈಪುಣ್ಯ, ಜೀವನಶೈಲಿಯಿಂದ ಕಾವ್ಯಕ್ಕೆ ಪ್ರೇರಣೆಯಾಗಿ, ಕಾವ್ಯ ರಚನೆಗೆ ವಸ್ತುವನ್ನೊದಗಿಸಿರುವ ಕರ್ನಾಟಕದ ಅರಸಿಯರನ್ನು ಕಾವ್ಯಗಳಲ್ಲಿ ಗುರುತಿಸಿ, ಆ ಮೂಲಕ ಇತಿಹಾಸದ ಕೆಲವೊಂದು ಮಹತ್ವದ ಘಟನೆಗಳಲ್ಲಿ ಕರ್ನಾಟಕದ ಅರಸಿಯರ ಪಾತ್ರ ಹೇಗೆ ಚಿತ್ರಿತವಾಗಿದೆ ಎಂಬುದನ್ನು ವಿಶ್ಲೇಷಿಸಲಾಗಿದೆ.

ಶಿಷ್ಟಕಾವ್ಯಗಳಲ್ಲಿ ಧಾರ್ಮಿಕ, ಐತಿಹಾಸಿಕ, ಸಾಂಸ್ಕೃತಿಕ, ಪೌರಾಣಿಕ ವಿಚಾರಗಳನ್ನು ಕುರಿತಂತೆ ರಚಿಸಲಾಗಿರುವ ಕೆಲವೊಂದು ಕಾವ್ಯಗಳು ಸಾಂದರ್ಭಿಕವಾಗಿ ರಾಣಿಯರ ಬದುಕಿನ ಚಿತ್ರಣವನ್ನು ನೀಡುವುದು. ಆದರೆ ಹಲವು ಜನಪದ ಸಾಹಿತ್ಯಗಳು ಅರಸಿಯರ ಬದುಕಿನ ಸುತ್ತಲೇ ರಚಿತವಾಗಿ, ಅರಸಿಯರ ಜೀವನದ ಪ್ರಮುಖ ಘಟನೆಯೊಂದರ ವಿವರಣೆಯನ್ನು ನೀಡುತ್ತದೆ.

ಪ್ರಸಿದ್ಧ ವಚನ, ರಗಳೆ ಕಾವ್ಯಗಳು ಪ್ರಾಸ್ತಾವಿಕವಾಗಿ ಬಿಂಬಿಸುವ ಅರಸಿಯರ ಬದುಕಿನ ಘಟನೆಗಳು ಅರಸಿಯರು ವಹಿಸಿದ ಮಹತ್ವದ ಪಾತ್ರಗಳನ್ನು ಚರ್ಚೆಗೆ ಒಳಪಡಿಸಲಾಗಿದೆ. ಸಂಸ್ಕೃತ ಸಾಹಿತ್ಯದಲ್ಲಿ ಎಡೆಪಡೆದ ಕರ್ನಾಟಕದ ಮಹಿಳೆಯರ ವೈಶಿಷ್ಟ್ಯ ಹಾಗೂ ಅವರು ಸಾಹಿತ್ಯದಲ್ಲಿ ಬಿಂಬಿತರಾಗಿರುವ ಪರಿಯನ್ನು ವಿಶ್ಲೇಷಿಸಲಾಗಿದೆ. ಜನಪದ ಸಾಹಿತ್ಯ ಪ್ರಕಾರಗಳಲ್ಲಿ ಉಲ್ಲೇಖಿತವಾದ ಅರಸಿಯರ ಕುರಿತ ಮಾಹಿತಿಗಳನ್ನು ಅಧ್ಯಯನಕ್ಕೆ ಒಳಪಡಿಸಿ,

ಜನಪದರಿಗೆ ಅರಸಿಯರಲ್ಲಿ ಯಾರು ಮತ್ತು ಏಕೆ ಮುಖ್ಯರಾಗಿದ್ದಾರೆ ಎಂಬುದನ್ನು ಇಲ್ಲಿ ಗುರುತಿಸುವ ಪ್ರಯತ್ನ ಮಾಡಲಾಗಿದೆ.

## ಕನ್ನಡ ಕಾವ್ಯೋಲ್ಲೇಖದಲ್ಲಿನ ಕರ್ನಾಟಕ ಅರಸಿಯರು

ಸಾವಿರಾರು ವರ್ಷಗಳ ಇತಿಹಾಸವಿರುವ ಕನ್ನಡ ಸಾಹಿತ್ಯವು ಕೇವಲ ಧಾರ್ಮಿಕ ವಿಚಾರವನ್ನು ಮಾತ್ರ ಕುರಿತು ಹೇಳುವುದಿಲ್ಲ. ಸಾಹಿತ್ಯದಲ್ಲಿ ಆಗಮ–ಪೌರಾಣಿಕ ಗ್ರಂಥಗಳಲ್ಲದೆ ಐತಿಹಾಸಿಕ, ಸಾಮಾಜಿಕ, ಕಾಲ್ಪನಿಕ ಮತ್ತು ಲೌಕಿಕ ವಸ್ತುಗಳ ಆಧಾರಿತ ಕೃತಿಗಳೂ ರಚಿತವಾಗಿವೆ. ಧಾರ್ಮಿಕ ವಿಚಾರವನ್ನೇ ಹೇಳುವ ಕೃತಿಗಳೂ ಕೂಡ ಸಮಕಾಲೀನ ಸಾಮಾಜಿಕ, ರಾಜಕೀಯ ವಿಚಾರಗಳನ್ನು ಒಳಗೊಂಡಿರುತ್ತವೆ. ಪ್ರಸ್ತುತ ಅಧ್ಯಯನದಲ್ಲಿ ಈ ಎಲ್ಲ ವಿಚಾರಗಳ ಮೇಲೆ ರಚಿತವಾಗಿರುವ ಸಾಹಿತ್ಯಗಳು, ರಾಜಾಶ್ರಯದಲ್ಲಿ ರಚಿತವಾದ ಕಾವ್ಯಗಳೊಂದಿಗೆ, ಸ್ವತಂತ್ರ ಮನೋಭಾವದಿಂದ ಜನಸಾಮಾನ್ಯರ ನಡುವಿನ ಕವಿಗಳ ಕಾವ್ಯಗಳಲ್ಲಿ ಕಂಡುಬರುವ ಅರಸಿಯರ ಚಿತ್ರಣವನ್ನು ಗಮನಿಸಲಾಗಿದೆ.

### ಸುಗ್ಗಲದೇವಿ

ಚಾಲುಕ್ಯ ಅರಸಿ ಸುಗ್ಗಲದೇವಿಯು ಚಕ್ರವರ್ತಿ ಜಗದೇಕಮಲ್ಲ ಎರಡನೆಯ ಜಯಸಿಂಹನ ಪಿರಿಯರಸಿ. ಶಿವಭಕ್ತೆಯಾದ ಈಕೆಯನ್ನು ಅನೇಕ ಶಾಸನಗಳು ಹಾಗೂ ವೀರಶೈವ ಕಾವ್ಯ ಪುರಾಣಗಳು ಉಲ್ಲೇಖಿಸುತ್ತವೆ.

ಇವಳ ಶೈವಧರ್ಮ ನಿಷ್ಠೆಯನ್ನು ಕೆಲವು ಶಾಸನಗಳು ಚಿತ್ರಿಸಿವೆ. ಇವಳ ಉಲ್ಲೇಖವಿರುವ ಶಾಸನಗಳಲ್ಲಿ ಕೆಲವು ಇವಳು ನೀಡಿದ ದಾನಶಾಸನಗಳಾಗಿದ್ದರೆ, ಇವಳ ಕಾಲದ ನಂತರದಲ್ಲಿ ಕಂಡುಬರುವ ಶಾಸನಗಳಲ್ಲಿ ಇವಳೋರ್ವ ಆದರ್ಶ ಸತಿಯಾಗಿ, ಶಿವಶರಣೆಯಾಗಿ ಬಿಂಬಿತಳಾಗಿದ್ದಾಳೆ. ವೀರಶೈವ ಪುರಾಣಗಳಲ್ಲಿ ಇವಳು ತನ್ನ ಗುರು ದೇವರದಾಸಿಮಯ್ಯನ ಪವಾಡಸದೃಶ್ಯ ಘಟನೆಯೊಂದಕ್ಕೆ ಕಾರಣಳಾಗಿ, ಪಾಲ್ಕುರಿಕೆ ಸೋಮನಾಥನ 'ಬಸವ ಪುರಾಣಮು', ಷಡಕ್ಷರಿಯ 'ಬಸವರಾಜ ವಿಜಯ', ವಿರೂಪಾಕ್ಷ ಪಂಡಿತನ 'ಚೆನ್ನಬಸವ ಪುರಾಣ', ಭೀಮಕವಿಯ 'ಬಸವ ಪುರಾಣ' ಕೃತಿಗಳಲ್ಲಿ ಪರಮ ಶಿವಭಕ್ತೆಯಾಗಿ ಕಂಡುಬರುತ್ತಾಳೆ. ಈ ಕಾವ್ಯಗಳಲ್ಲಿನ ವಿಚಾರವನ್ನೇ ಸೂಕ್ಷ್ಮವಾಗಿ ಲಕ್ಕಣ ದಂಡೇಶನ 'ಶಿವತತ್ತ್ವ ಚಿಂತಾಮಣಿ', ಶಾಂತಲಿಂಗ ದೇಶಿಕನ 'ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ' ಮೊದಲಾದ ಕೃತಿಗಳಲ್ಲಿಯೂ ಕಾಣಬಹುದು.

ಈ ಎಲ್ಲ ಕೃತಿಗಳು ತಿಳಿಸುವಂತೆ ಜಿನಧರ್ಮಪರನಾದ ಅರಸು ಜಯಸಿಂಹ ಪೊಟ್ಟಳಕೆರೆಯ ದೊರೆ. ಈತನ ಮಡದಿ ಸುಗ್ಗಲಾದೇವಿ ಪರಮ ಶಿವಭಕ್ತೆ. ದೇವರ ದಾಸಿಮಯ್ಯ ಇವಳ ಗುರು. ಇವಳ ಶಿವಭಕ್ತಿಯನ್ನು ಕಂಡು ಸಹಿಸದ ಜಿನಮುನಿಗಳು ದೊರೆಗೆ ಆತನ ಅರಸಿಯ ವಿರುದ್ಧವೇ ದೂರು ನೀಡುತ್ತಾರೆ. ಸತಿಪತಿಯರಲ್ಲಿ ಧರ್ಮವಿಚಾರವಾಗಿ ವಾದ–ವಿವಾದಗಳು ನಡೆಯುತ್ತವೆ. ಕಡೆಗೆ ಅರಸನು ಜೈನಗುರುಗಳನ್ನೂ ಸತಿಯು ತನ್ನ ಗುರುವಾದ ದೇವರದಾಸಿಮಯ್ಯನನ್ನೂ ಆಸ್ಥಾನಕ್ಕೆ ಬರಮಾಡಿಕೊಳ್ಳುತ್ತಾರೆ. ಈ ಎರಡೂ ಪಂಗಡದ ಧರ್ಮಗುರುಗಳಲ್ಲಿ ವಾದ ನಡೆಯುತ್ತದೆ. ವಾದದಲ್ಲಿ ಸೋತುಹೋದ ಜೈನರು ಕುಂಭವೊಂದರಲ್ಲಿ ಉಗ್ರವಾದ ಸರ್ಪವೊಂದನ್ನಿರಿಸಿ, ಎಲ್ಲೆಡೆ ಶಿವನಿದ್ದಾನೆನ್ನುವುದಾದಲ್ಲಿ ಈ ಕುಂಭದಲ್ಲಿ ಶಿವನನ್ನು ತೋರಿಸು ಎಂದು ಸವಾಲು ಹಾಕುತ್ತಾರೆ. ದೇವರದಾಸಿಮಯ್ಯನು ತನ್ನ ದೈವ ರಾಮನಾಥನನ್ನೇ ಧ್ಯಾನಿಸುತ್ತಾ ಕುಂಭದೊಳಗೆ ಕೈ ಹಾಕಲು ಈತನ ಸ್ಪರ್ಶದಿಂದಾಗಿ ಆ ಘೋರ ಸರ್ಪವು ಲಿಂಗರೂಪವನ್ನು ತಾಳುತ್ತದೆ. ಸ್ಪಟಿಕ ಲಿಂಗವಾಗಿ ಬದಲಾದ ಸರ್ಪವನ್ನು ಕುಂಭದಿಂದ ಹೊರತೆಗೆದು ನೆರೆದ ಜನರಿಗೆ ಆಶ್ಚರ್ಯವಾಗುವಂತೆ ತೋರಿಸುತ್ತಾನೆ.ಈ ಪವಾಡದಿಂದ ರಾಜ ಜಯಸಿಂಹ ಹಾಗೂ ಅಲ್ಲಿ ನೆರೆದಿದ್ದವರೆಲ್ಲರೂ ಶಿವಲೀಲೆಗೆ ಮನಸೋತು ಶೈವಧರ್ಮೀಯರಾಗುತ್ತಾರೆ.

ಈ ಘಟನೆಯಲ್ಲಿ ಒಬ್ಬ ರಾಣಿಯಾಗಿ ಸುಗ್ಗಲೆ ತಾನು ನಂಬಿದ ಧರ್ಮಕ್ಕಾಗಿ ತನ್ನ ಪತಿಯ ವಿರುದ್ಧವೇ ವಾದ ಹೂಡುತ್ತಾಳೆ. ಶೈವಧರ್ಮೀಯರಿಗೆ ಆಶ್ರಯ ನೀಡಿ, ಶಿವಪಾರಮ್ಯತೆಯನ್ನು ಹರಡಲು ಚರ್ಚೆಗಳನ್ನು ಆಸ್ಥಾನದಲ್ಲಿ ಏರ್ಪಡಿಸುತ್ತಾಳೆ. ತನ್ನನ್ನು ಪರಿವರ್ತಿಸಲು ಬಂದ ಪತಿಯನ್ನೇ ಸಾತ್ವಿಕ ರೀತಿಯಲ್ಲಿ ಬದಲಾಯಿಸಿದ ಆದರ್ಶ ಸತಿಯೆನಿಸಿದ್ದಾಳೆ. ತನ್ನ ಭಕ್ತಿ–ಭಾವನೆಗೆ, ಧಾರ್ಮಿಕ ಚಟುವಟಿಕೆಗಳಿಗೆ ಭಂಗ ಉಂಟಾದಾಗ ಮೀರಾ, ಅಕ್ಕಮಹಾದೇವಿಯರಂತೆ ಅರಮನೆಯನ್ನು ತೊರೆದು ಹೊರಡದೆ, ಹೋರಾಟ ನಡೆಸಿ ತನಗೊದಗಿದ ಪರಿಸ್ಥಿತಿಯನ್ನು ಬದಲಾಯಿಸಿಕೊಂಡ ಛಲಗಾತಿಯಾಗಿ ಸುಗ್ಗಲದೇವಿ ಕಾಣುತ್ತಾಳೆ.

ಷಡಕ್ಷರಿಯ 'ಬಸವರಾಜ ವಿಜಯ' ಅಥವಾ 'ವೃಷಭೇಂದ್ರ ವಿಜಯ'[೧] ೩೫ನೇ ಆಶ್ವಾಸದಲ್ಲಿ ವರ್ಣಿತವಾಗಿರುವ ಈ ಇದೇ ಘಟನೆಯನ್ನು ಚೆನ್ನಬಸವ ಪುರಾಣ[೨] ೫೭ನೇ ಸಂಧಿಯಲ್ಲಿಯೂ ಕಾಣಬಹುದು. ಶಿವಭಕ್ತೆಯಾದ ಅರಸಿ ಸುಗ್ಗಲೆಯ "ಗುರುವೆನಿಪ ದೇವರದಾಸನುಂ ಜಿನರಕೂಡೆ ವಾದಂ ಗೆಯ್ಯೆ ಪೆಟ್ಟಿಯೊಳು ತೊನೆವ ಘಟಸರ್ಪನಂ ಚಂದ್ರಕಾಂತದ ಲಿಂಗವನೆ ಮಾಡಿ ಗೆಲಿಸಿ..." ಎಂಬ ಸಾಲುಗಳು ಸುಗ್ಗಲೆಯ ಗುರು ದೇವರ ದಾಸಿಮಯ್ಯನು ಜೈನರೊಂದಿಗೆ ವಾದವನ್ನು ನಡೆಸಿ, ಅವರು ಪೆಟ್ಟಿಗೆಯಲ್ಲಿರಿಸಿದ್ದ ಘಟಸರ್ಪವನ್ನು ಶಿವಲಿಂಗವನ್ನಾಗಿ ಪರಿವರ್ತಿಸಿದ ಪವಾಡದ ವಿಚಾರವನ್ನು ತಿಳಿಸುತ್ತದೆ.

ಶಿವಭಕ್ತೆ ಸುಗ್ಗಲೆಯು "ಜೈನರಿಗಾಜ್ಞೆಯಂ ಮಾಡಿ ಜನಪತಿಯನಂದು ಶಿವಭಕ್ತನಂ ಮಾಡಿದಳ್ ಅದೇನೆಂಬೆನ್ ಅಚ್ಚರಿಯನು" ಎಂದು ರಾಣಿಯು, ಜೈನಮತೀಯನಾದ ತನ್ನ ಪತಿಯನ್ನು ಶಿವಭಕ್ತನನ್ನಾಗಿ ಮಾಡಿದ್ದಷ್ಟೇ ಅಲ್ಲದೆ, ಮಧ್ಯೆ ಪ್ರವೇಶಿಸದಂತೆ ಜೈನರಿಗೆ ಆಜ್ಞೆಯನ್ನೂ ಮಾಡಿದಳು.

ಇದೇ ಘಟನೆಯು ಬಸವ ಪುರಾಣದ ೨೩ನೆಯ ಸಂಧಿಯಲ್ಲಿ ಮಡಿವಾಳ ಮಾಚಯ್ಯ ದಾಸಿಮಯ್ಯನನ್ನು ಕುರಿತು ಬಸವೇಶ್ವರನಿಗೆ ಹೇಳಿದ ಕಥೆಯಲ್ಲಿಯೂ ಪ್ರಸ್ತಾಪವಾಗಿದೆ. ೫೧ನೆಯ ಸಂಧಿ ಹೊ(ಪೊ)ಟ್ಟಲಕೆರೆಯ ಅರಸನಾದ ದೇಸಿಂಗರಾಯನು ಜಿನಸಮಯಿಯಾಗಿದ್ದನು. ಆತನ ಹೆಂಡತಿ ಸುಗ್ಗಲದೇವಿ ಶಿವಭಕ್ತೆ. ಇಲ್ಲಿಯೂ ಕೂಡ ಸುಗ್ಗಲದೇವಿಯ ಬಿನ್ನಹದ ಮೇರೆಗೆ ಅವಳ ಗುರು ದಾಸಿಮಯ್ಯ ಅರಸನ ಆಸ್ಥಾನಕ್ಕೆ ಜೈನರೊಡನೆ ವಾದಿಸಲು ಬರುತ್ತಾನೆ. ದಾಸಿಮಯ್ಯನ ಎದುರು ಸೋತ ಜೈನರು "ಆವ ಮಾರ್ಗದೊಳಾದಡಾತನ ನಾವು ಕೆಡಿಸಿದಡಲ್ಲದಾಗದು" ಎಂದು ತಮ್ಮೊಳು ವಿಚಾರಿಸಿ, "ಪಾವಕಜ್ವಾಲಾ ಪ್ರಭಾವದ ಹಾವನೊಂದಂ ತರಿಸಿ ಘಟದೊಳಗಿರಿಸಿ ತುಡುಕಿಸುವ" ಎಂದು ಒಂದು 'ಘನಭುಜಂಗಮನಿರಿಸಿ ಹೆರವಿಯೊಳು', "ಇಲ್ಲುಂಟೆ ಶಿವಂ?" ಎಂದು ದಾಸಿಮಯ್ಯನನ್ನು ಕೇಳಲು ಆ ಕುಂಭದೊಳಗಿದ್ದ 'ಘಟಸರ್ಪನಂ ನೋಡಿ' ಅದರಲ್ಲಿ 'ಕೈದುಡುಕಿ ಪಟು ದುರ್ಘಟ ಗರಳಧರನಂ ಪಿಡಿದು ತೆಗವಾ ಸಮಯದಲ್ಲಿ ಸ್ಫಟಿಕಲಿಂಗವೊಂದು' ಕಾಣಿಸುತ್ತಲೆ ಆ ಶ್ರಾವಕರು 'ಭಯವೊಂದಿಯ ಭಯವನೀವುದೆನುತಡಿಗಡಿಗೆ ಪೊಡಮಡಲು' ದಾಸಿಮಯ್ಯನು ಆ ಅರಸನಿಗೂ ಆ ಜೈನರಿಗೂ ಶಿವದೀಕ್ಷೆಯನ್ನು ಕೊಡುತ್ತಾನೆ.

ಅರಸಿ ಸುಗ್ಗಲೆಯ ಶಿವಭಕ್ತಿಯನ್ನು ಕೆಲವು ಶಾಸನಗಳೂ ಹೊಗಳುತ್ತವೆ. ಇವಳು ದೇವೂರಿನ ಮಾರಸಿಂಗೇಶ್ವರ ದೇವಾಲಯಕ್ಕೆ ಹಾಗೂ ಅಲ್ಲಿನ ಪಾಶುಪತ ಯೋಗಾಚಾರ್ಯ ಬ್ರಹ್ಮರಾಸಿ ಪಂಡಿತದೇವರಿಗೆ ನೀಡಿರುವ ದಾನದ ವಿವರವನ್ನು ಸಿಂದಗಿಯ ಶಾಸನ[೩] ತಿಳಿಸುತ್ತದೆ.

ಬಸವಪೂರ್ವ ಯುಗದ ಶಿವಭಕ್ತೆಯಾಗಿ, ಶಿವಶರಣರ ಪೋಷಕಳಾಗಿ, ಪರಸಮಯಿಗಳ ವಿರುದ್ಧ ಸೆಣಸಾಡಿದ ದೇವರ ದಾಸಿಮಯ್ಯನ ಶಿಷ್ಯಳಾಗಿ, ತನ್ನಂತೆ ಪತಿಯನ್ನೂ ಶೈವಧರ್ಮಪರನನ್ನಾಗಿಸಿದ ಪ್ರಭಾವಿ ಅರಸಿ ಸುಗ್ಗಲೆ, ಧಾರ್ಮಿಕ ಕಾರಣದಿಂದಾಗಿ ಅನೇಕ ವೀರಶೈವ ಪುರಾಣದಲ್ಲಿ ಸ್ಥಾನ ಪಡೆದಿದ್ದಾಳೆ. ಪ್ರಸ್ತುತ ಸಂದರ್ಭದಲ್ಲಿ ಬಹಳ

ಚರ್ಚೆಗೆ ಒಳಗಾಗಿರುವ ದೇವರದಾಸಿಮಯ್ಯನ ಕಾಲ ನಿರ್ಣಯಕ್ಕೆ ಅರಸಿ ಸುಗ್ಗಲೆಯ ಕುರಿತಾದ ಕಾವ್ಯಗಳು ಆಧಾರ ಒದಗಿಸುವಲ್ಲಿ ಸಹಕಾರಿಯಾಗಿದೆ.

ದಾನಶಾಸನಗಳಲ್ಲಿ, ಧಾರ್ಮಿಕ ವಿಧಿಗಳಲ್ಲಿ ಹಲವಾರು ರಾಜಮನೆತನದ ರಾಣಿಯರು ರಾಜನನ್ನೂ ಮೀರಿಸುವಂತಹ ಕಾರ್ಯಗಳನ್ನು ಮಾಡಿರುವುದನ್ನು ಕಾಣುತ್ತೇವೆ. ಅನೇಕ ಶಾಸನಗಳಲ್ಲಿ ರಾಣಿಯರ ದಾನವನ್ನು ದೊರೆ ಅನುಮೋದಿಸಿರುವುದು, ಸೇನಾಪತಿ ಅಥವ ರಾಣಿಯ ಕೈಕೆಳಗಿನ ಅಧಿಕಾರಿಯ ದಾನಕ್ಕೆ ರಾಣಿ ಸಹಮತ ನೀಡಿರುವುದನ್ನೂ ಕಾಣುತ್ತೇವೆ. ಆದರೆ ಪತಿಯನ್ನು ಎದುರಿಸಿ, ಅವನು ಒಪ್ಪದಿರುವ, ತಾನು ನೆಚ್ಚಿರುವ ಧರ್ಮಕ್ಕೆ ನಿಷ್ಠಳಾಗಿ ನಡೆದುಕೊಂಡು ಕಾವ್ಯಗಳಲ್ಲಿ ಬಿಂಬಿತಳಾಗಿ, ತನ್ನ ನಂತರದ ಕಾಲದಲ್ಲಿಯೂ ಚಿರಸ್ಮರಣೆಯಾಗಿ ಶಾಸನಗಳಲ್ಲಿ ಕಂಡುಬಂದಿರುವ ಸುಗ್ಗಲಾದೇವಿ ಬಸವಪೂರ್ವ ಯುಗದಲ್ಲಿಯೇ ಶಿವಶರಣರಿಗೆ ಆಶ್ರಯ ನೀಡಿ ವಿಭಿನ್ನ ಸಾಲಿಗೆ ಸೇರುವ ಅರಸಿಯಾಗಿ ತೋರುತ್ತಾಳೆ.

ಸುಗ್ಗಲದೇವಿಯು ಪತಿಯ ಇಚ್ಛೆಗೆ ವಿರುದ್ಧವಾಗಿ ನಿಂತು, ಧಾರ್ಮಿಕ ಸ್ವಾತಂತ್ರಗಳಿಸುವಲ್ಲಿ ಅಕ್ಕಮಹಾದೇವಿಯ ನಿಲುವನ್ನೇ ತಳೆದಿರುವುದನ್ನು ಕಾಣುತ್ತೇವೆ. ಬಸವ ಪುರಾಣಮು ಕೃತಿಯಲ್ಲಿ "ಸತಿಗೊಂದು ಗತಿಯು ತಾ ಪತಿಗೊಂದು ಗತಿಯು ಯಾವ ಲೋಕದಲಾದರಿಹುದೇನು" ಎಂದು ಕೇಳಿದ ರಾಜನಿಗೆ "ಪುರುಷಗೆ ಸತಿಯಾದರೂ ಮಾರ್ಗವೊಂದೆ, ಗುರುಶಿಷ್ಯರಿಗೆ ಬೇರೆ ಮಾರ್ಗಗಳುಂಟೆ" ಎಂದು ಪ್ರತಿಯಾಗಿ ಕೇಳಿ "ಮದುವೆ ದಿನವೆನಗಿತ್ತ ಭಾಷೆಯನು ನೀನೆಯಾಲೋಚಿಸು ಹೆಚ್ಚಿನದೇಕೆ ? ಮಾಡಿಕೋ ಮತ್ತೊಬ್ಬ ಭಾರ್ಯೆಯ ನೀನು ಬಿಡು ನನ್ನ ಮೃಡನ ಬಿಟ್ಟೊಲ್ಲೆನು ನಾನು...." ಎಂಬ ವಾದವನ್ನು ಹೂಡುತ್ತಾಳೆ. 'ಪತಿಯೇ ಪರದೈವ' ವೆಂಬ ಸಂಪ್ರದಾಯಬದ್ಧವಾದ ವಿಚಾರವನ್ನು ಬದಿಗಿರಿಸಿ, ತಾನೊಲಿದ ಧರ್ಮಕ್ಕೆ ನಿಷ್ಠಳಾಗಿ ದಿಟ್ಟತನ ತೋರಿದ ಬಸವಪೂರ್ವ ಕಾಲದ ಮಹಿಳೆಯಾಗಿದ್ದಾಳೆ ಸುಗ್ಗಲೆ.

ಧರ್ಮನಿಷ್ಠೆಯನ್ನು ಮೆರೆದ ಸುಗ್ಗಲಾದೇವಿಯ ಆದರ್ಶವನ್ನು ಬಹಳವಾಗಿ ಮೆಚ್ಚಿರುವ ಸಂಗತಿಯನ್ನು ಇವಳ ಕಾಲಾನಂತರದಲ್ಲಿಯೂ ಕೆಲವು ಶಾಸನಗಳು ದೃಢಪಡಿಸುತ್ತವೆ. ಕ್ರಿ.ಶ.೧೧೮೨ರ ಶಾಸನವು ಹೊಯ್ಸಳ ಬಲ್ಲಾಳನ ಅರಸಿ ಕೇತಲದೇವಿಯನ್ನು ಹೊಗಳುವ ಸಂದರ್ಭದಲ್ಲಿ, ವಿಷ್ಣುವರ್ಧನನ ರಾಣಿಶಾಂತಲೆ ಹಾಗೂ ಚಾಲುಕ್ಯ ಅರಸಿಯಾದ ಈ ಸುಗ್ಗಲೆಯರೊಂದಿಗೆ "ಮೂವರರಸಿಯರು ಸೌಭಾಗ್ಯ ಭಾಗ್ಯಗಳಂ" ಪಡೆದವರೆಂದು ಹೊಗಳಿದೆ[೪].

ಇದೇರೀತಿ ಹಳೇಬೀಡಿನ ಶಾಸನದಲ್ಲಿಯೂ ಕೂಡ, ಕುವರಲಕ್ಷ್ಮನ ಹೆಂಡತಿ ಸುಗ್ಗಲೆಯನ್ನು ಬಣ್ಣಿಸುವಾಗ ಇಡೀ ಲೋಕವೇ ಹೊಗಳುವಂತೆ ದೊರೆ ಜಯಸಿಂಹನು ಸುಗ್ಗಲದೇವಿಗೆ ಭಾಷೆ ನೀಡಿದನೆಂದು ಸ್ಮರಿಸಲಾಗಿದೆ.

**ಜಯಸಿಂಹ ಕ್ಷಿತಿಪಾಳಕಂಗೆ ಜಗಮೆಲ್ಲಂ ಬಣ್ಣಿಸಲ್ ಪೂಣ್ದುಭಾ**
**ಷೆಯನಾ ಸುಗ್ಗಲದೇವಿ ಕೊಟ್ಟತೆಱದಿಂ ಬಲ್ಲಾಳ ಭೂಪೋತ್ತಮ**

ಸುಗ್ಗಲಾದೇವಿಯ ಪತಿ ಇಮ್ಮಡಿ ಜಯಸಿಂಹನಿಗೆ ಜಗದೇಕಮಲ್ಲನೆಂಬ ಬಿರುದಿತ್ತು. ಈತನು ಕ್ರಿ.ಶ. ೧೦೧೫–೧೦೪೨ರ ಅವಧಿಯಲ್ಲಿ ಪೊಟ್ಟಲಕೆರೆ (ಈಗಿನ ಹೈದರಾಬಾದ್ ಬಳಿಯ ಪೊಟ್ಲಚೆರು) ಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸುತ್ತಿದ್ದ ಕಲ್ಯಾಣಿ ಚಾಲುಕ್ಯ ಮನೆತನದ ಹೆಸರಾಂತ ಚಕ್ರವರ್ತಿ. ಇಮ್ಮಡಿ ಜಯಸಿಂಹನು ಜೈನಧರ್ಮದ ಆರಾಧಕನಾಗಿದ್ದನು ಎಂಬುದನ್ನು ಶ್ರವಣಬೆಳಗೊಳದ ಶಾಸನ ಹಾಗೂ ಕೆಲವು ಶಿಕಾರಿಪುರದ ಶಾಸನಗಳು ಸ್ಪಷ್ಟಪಡಿಸುತ್ತವೆ. ಆದರೆ ಈತನ ಹೆಚ್ಚಿನ ಸಂಖ್ಯೆಯ ಶಾಸನಗಳು ಶೈವಧರ್ಮಕ್ಕೆ ನಿಷ್ಠೆಯನ್ನು ವ್ಯಕ್ತಪಡಿಸಿರುವ ಹಿನ್ನೆಲೆಯಲ್ಲಿ ರಾಣಿ ಸುಗ್ಗಲಾದೇವಿಯ ಪ್ರಭಾವ ಈತನ ಮೇಲಾಗಿರುವುದನ್ನು ಗುರುತಿಸಬಹುದು.

**“**ರಾಜಮನೆತನದ ಹಿನ್ನೆಲೆಯಿಂದ ಬಂದು ಶಿವಭಕ್ತೆಯಾಗಿ, ಶೈವರಿಗೆ ಪ್ರೋತ್ಸಾಹ ನೀಡಿ, ಪತಿಯ ನಿಲುವನ್ನೂ ಬದಲಿಸಿ ಆತನ ಆದರವನ್ನೂಗಳಿಸಿ, ತನ್ನ ನಿಲುವನ್ನು ಸಮರ್ಥಿಸಿಕೊಂಡ ಮೊದಲ ಶಿವಶರಣೆ ಸುಗ್ಗಲಾದೇವಿ**”**[೪೮]. ಕಲ್ಯಾಣಿಚಾಲುಕ್ಯ ಅರಸಿ ಸುಗ್ಗಲಾದೇವಿಯ ಹೆಸರು ಧಾರ್ಮಿಕ ಸ್ವಾತಂತ್ರವನ್ನು ಪಡೆದ ಆದರ್ಶಮಹಿಳೆಯಾಗಿ ಇತಿಹಾಸ ಸಂಸ್ಕೃತಿ ಧಾರ್ಮಿಕ ಅಧ್ಯಯನದ ಸಂದರ್ಭದಲ್ಲಿ ಉಲ್ಲೇಖಾರ್ಹಳಾಗಿದ್ದಾಳೆ.

**ಲಕ್ಷ್ಮೀದೇವಿ:**

ರಾಣಿ ಲಕ್ಷ್ಮೀದೇವಿಯು ಕಲ್ಯಾಣಿ ಚಾಲುಕ್ಯರ ಪ್ರಸಿದ್ಧದೊರೆ ಆರನೆಯ ವಿಕ್ರಮಾದಿತ್ಯನ ಅರಸಿ. ಇವಳು ಕಲ್ಯಾಣದಿಂದಲೇ ದ್ರೋಣಪುರ(ಡೋಣಿ)ವನ್ನಾಳುತ್ತಿದ್ದಳು. ಅಲ್ಲದೆ ರಾಜ್ಯದಲ್ಲಿದ್ದ ೧೮ ಅಗ್ರಹಾರಗಳ, ನಿಟ್ಟಸಿಂಗಿ, ಧರ್ಮಪುರ (ಡಂಬಳ)ಗಳ ಆಡಳಿತಾಧಿಕಾರವನ್ನೂ ನಿರ್ವಹಿಸುತ್ತಿದ್ದಳು. ಇವಳ ಕುರಿತಾಗಿ ಸುಮಾರು ಎಂಟು ಶಾಸನಗಳು ಲಭ್ಯವಿದ್ದು, ಎರಡು ಶಾಸನಗಳು ಡೋಣೀ(ದ್ರೋಣಾಪುರದ)ಯ ಆಡಳಿತ ಕುರಿತಾಗಿ ತಿಳಿಸುವ ಶಾಸನವಾಗಿದೆ. ಇವಳು ಕಲ್ಯಾಣದ ನೆಲೆವೀಡಿನಿಂದಲೂ ಆಳ್ವಿಕೆ ನಡೆಸಿದ್ದಳೆಂದು ತಿಳಿದು ಬರುತ್ತದೆ. ಡೋಣಿಯ ಆಳ್ವಿಕೆ ಕೈಕೊಂಡ ನಾಲ್ಕು ವರ್ಷಗಳಲ್ಲಿ ಕಲ್ಯಾಣದ ಆಳ್ವಿಕೆಯ ಉಲ್ಲೇಖ ಸಿಗುತ್ತದೆ. ಕ್ರಿ.ಶ.೧೦೯೫ರ ಕಾಲದ ಶಾಸನವೊಂದು ಇವಳು ‘ಪದಿನೆಂಟು ಅಗ್ರಹಾರಮುಮಂ ಧರ್ಮಪುರಮುಮಂ’ ಆಳುತ್ತಿದ್ದಳೆಂದು ತಿಳಿಸುತ್ತದೆ. ಇವಳ ಆರಂಭ ಕಾಲದಿಂದ ದೊರಕಿರುವ ಶಾಸನಗಳನ್ನು ಕ್ರಮವಾಗಿ ಗಮನಿಸಿದಲ್ಲಿ, ಇವಳು ತನ್ನ ಆಡಳಿತ ಪ್ರದೇಶದ ವ್ಯಾಪ್ತಿಯನ್ನು ಹೆಚ್ಚಿಸಿಕೊಂಡು ಬಂದಿರುವುದನ್ನು ಕಾಣುತ್ತದೆ. ಇವಳು ಉತ್ತಮ ಆಡಳಿತಗಾರ್ತಿಯಾಗಿದ್ದಳೆನ್ನುವುದನ್ನು ಇದು ಸೂಚಿಸುತ್ತದೆ. ಲಕ್ಷ್ಮೀದೇವಿಯು ಪಟ್ಟಮಹಾದೇವಿ ಆಗಿದ್ದಳು ಎಂಬ ವಿಚಾರವು ಕ್ರಿ.ಶ.೧೧೦೪ರ ಭಂಡಾರ್ಕರ್ ದಾಖಲೆಗಳು ಮತ್ತು ರಾಮತೀರ್ಥದ ಶಾಸನಗಳಿಂದ ತಿಳಿದು ಬರುತ್ತದೆ.

ಕವಿ ಹರಿಹರನ ‘ತೆಲುಗು ಜೊಮ್ಮಯ್ಯನ ರಗಳೆ’[೪೯]ಯಲ್ಲಿ ವಿಕ್ರಮಾದಿತ್ಯ ಹಾಗೂ ಇವನ ರಾಣಿ ಲಕ್ಷ್ಮೀದೇವಿಗೆ ಸಂಬಂಧಿಸಿದ ಒಂದು ಪ್ರಸಂಗ ಕಾವ್ಯವಸ್ತುವಾಗಿದೆ. ಇದೇ ವಿಚಾರ ಲಕ್ಕಣದಂಡೇಶನ **‘ಶಿವತತ್ವ ಚಿಂತಾಮಣಿ’**ಯಲ್ಲಿಯೂ ಉಲ್ಲೇಖವಾಗಿದೆ. ಇಲ್ಲಿ ಲಕ್ಷ್ಮೀದೇವಿಯನ್ನು ‘ಪಟ್ಟಮಹಾದೇವಿ ಮಹಾದೇವಿ’ ಎಂದು ಕರೆಯಲಾದರೆ, ಹರಿಹರ ‘ಲಕುಮಾದೇವಿ’ ಎಂದು ಕರೆದಿದ್ದಾನೆ.

**ಹರಿಹರನ ರಗಳೆಯಲ್ಲಿ ಕಂಡುಬರುವ ಲಕ್ಷ್ಮೀದೇವಿಯ ವಿಚಾರ:** ವಿಷ್ಣುಪೂಜಕನಾದ ಪೆರ್ಮಾಡಿಯ ಮಡದಿ ಲಕುಮಾದೇವಿ ‘ಪರಮಶಿವ ಲಿಂಗಾರ್ಚನಾನಿರತೆ’ ಎನಿಸಿದ್ದಳು. ಒಂದುದಿನ ಜೊಮ್ಮಯ್ಯನು, ‘ಪಿರಿಯ ಮಾಳಿಗೆಯೊಳಗೆ ಅರಸನಾ ವಿಷ್ಣುಮಂ ಪೂಜಿಸಲೆಂದು’ ನಿಯೋಜಿಸಲ್ಪಟ್ಟ ಪುರಾಣಿಕನು ವಿಷ್ಣು ಸ್ತುತಿಮಾಡಿ ಶಿವನಿಂದೆ ಕೈಕೊಂಡನೆಂದು, ಕುಪಿತನಾಗಿ ಆ ಪುರಾಣಿಕನನ್ನು ಇರಿದು ಕೊಲ್ಲುತ್ತಾನೆ. ಶಿವನಿಂದೆ ಕೇಳಲಾಗದೆ ತಾನು ಮಾಡಿದ ಕಾರ್ಯವನ್ನು ಸಮರ್ಥಿಸಿಕೊಳ್ಳುತ್ತಾ, ಸಮಸ್ತ ಶಿವಭಕ್ತರಲ್ಲಿ ಅರಿಕೆ ಮಾಡಿ, ಎಂದಿನಂತೆ ಲಿಂಗಪೂಜೆಯಲ್ಲಿ ತಲ್ಲೀನನಾಗುತ್ತಾನೆ. ಮಾರನೆಯ ದಿನ ವಿಷ್ಣುಪೂಜೆಗೆ ಪುರಾಣಿಕ ಬರದಿರಲು ಆತಂಕಗೊಂಡ ರಾಜನು ವಿಚಾರಿಸಲಾಗಿ, ಬ್ರಾಹ್ಮಣನೊಬ್ಬನು ನಡೆದ ಸಂಗತಿಯನ್ನು ತಿಳಿಸುತ್ತಾನೆ. ಪುರಾಣಿಕನನ್ನು ಕೊಂದ ಜೊಮ್ಮಯ್ಯನನ್ನು ವಿಚಾರಣೆಗೆ ಬರಬೇಕೆಂದು ದೊರೆ ಕರೆಕಳುಹಿಸುತ್ತಾನೆ. ಆಗ ಅರಸಿ ಲಕುಮಾದೇವಿಯು ಸಂದರ್ಭವನ್ನರಿತು ‘ಶಿವಭಕ್ತಂಗಳಿವಿಲ್ಲದ ಚಿಹ್ನಂ ಅಡ್ಡಮಾಗಲ್ ಅದು ಮುನ್ನೆಂದು ಪೊಡಮಡದ ಜೊಮ್ಮಣ್ಣನಿಂದು ಪೊಡೆಮಡೆ ತನಗೆ ಪೊಡಮಟ್ಟನೆಂದರಸಂ ಮನ್ನಿಸುವ’ನೆಂಬ ಬಗೆಯಿಂದ ‘ತನ್ನ ಪ್ರಾಣಲಿಂಗಮಂ ಸಿಂಗರಿಸಿ ಮಾಣಿಕ್ಯದ ಸಿಂಹಾಸನವೆರಸರಸನರಿಯದಂತೆ’ ಹಿಡಿದಳು. ಹೀಗೆ ದೊರೆ ಕರೆ ಕಳುಹಿಸಿದಾಗ, ಎಂದೂ ದೊರೆಗೆ ತಲೆಬಾಗದ ಶಿವಭಕ್ತ ಜೊನ್ನಮಯ್ಯ ಇಂದು ದೊರೆಗೆ ನಮಸ್ಕರಿಸಿದರೆ ಅವನು

ಮನ್ನಿಸಿ ಕಳಿಸುವನೆಂದು ಬಗೆದ ರಾಣಿ ಲಕ್ಷ್ಮೀದೇವಿ ದೊರೆಗೆ ತಿಳಿಯದಂತೆ ತನ್ನ ಶಿವಲಿಂಗವನ್ನು ಸಿಂಗರಿಸಿ ಸಿಂಹಾಸನದ ಬಳಿ ಇಟ್ಟಳು.

ಇತ್ತ ಸಭಾಭವನ ಪ್ರವೇಶ ಮಾಡಿದ ಜೊಮ್ಮಯ್ಯ 'ಮೇಲಂ ನೋಡಿ ತೊಳತೊಳಪ ಲಿಂಗಮಂ ಘಳಿಲನೆ ಕಂಡು ನಿಜಭಕ್ತಿಯ ಭರದಿಂ ಪೊಡಮಡಲ್ಕೈಯೆತ್ತುತ್ತೋಲ್ಲದೆ ನಿಂದು ಭುವಿಯ ಪಿಂದಿರಲೇಕೆ ಪೊಡಮಡಿಸಸಿಕೊಳಲ್ ಒಲಿವರೆ ಕೆಲಕ್ಕೆ ಬಿಜಯಂಗೈವುದು', ಎನ್ನುತ್ತಾ ಸಿಂಹಾಸನದ ಬಳಿ ಕಂಡ ಶಿವಲಿಂಗಕ್ಕೆ ಕೈಮುಗಿಯಲೆಂದು ಎತ್ತಿದ ಹಸ್ತವನ್ನು ಮತ್ತೊಂದು ದೆಸೆಗೆ ತಿರುಗಿಸಿದಾಗ 'ಶಿವಲಿಂಗಂ ಸಿಂಹಾಸನಮಂ ಬಿಟ್ಟು ಭಕ್ತನ ಕೆಯ್ಯೊಡನೆ ಸರ್ರನೆ ತಿರುಗಿ ಸರಿಸಕ್ಕೆ ಬಂದು ಕೆಲಸಾರ್ದು ಗಗನಾಸನಮಂ' ಕೈಕೊಂಡಿತು. ಜೊಮ್ಮಯ್ಯ ಭಕ್ತಿಭಾವದಿಂದ 'ದೇವ ದೇವ, ಸುಕುಮಾರಲಿಂಗ ಬಿಸಿಲುಗಾಳಿಯೊಳರ್ಪ್ಪರೆ ಸಜ್ಜೆಗೆ ಬಿಜಯಂಗೈವುದು' ಎಂದು ಬಿನ್ನವಿಸಿ ಲಿಂಗವನ್ನು ಸಜ್ಜೆಮನೆಗೆ ಬರಿಸಿಕೊಂಡು ತನ್ನ ಭಕ್ತಿಯ ಮಹತ್ವವನ್ನು ವ್ಯಕ್ತಪಡಿಸುತ್ತಾನೆ.

ಕಣ್ಣೆದುರಿಗೆ ಜೊಮ್ಮಯ್ಯನ ಭಕ್ತಿ ಶಕ್ತಿಯನ್ನು ಕಂಡ ವಿಕ್ರಮಾದಿತ್ಯ ಕಂಪಿತನಾಗುತ್ತಾನೆ. ಪುರಾಣಿಕರನ್ನು ಕೊಂದ ಬಗೆಗೆ ಜೊಮ್ಮಯ್ಯನನ್ನು ವಿಚಾರಿಸಲಾಗಿ ಜೊಮ್ಮಯ್ಯ ಶಿವನಿಂದೆಗಾಗಿ ಅವನನ್ನು ಕೊಂದುದಾಗಿಯೂ ಇದಕ್ಕೆ ಪ್ರತ್ಯಕ್ಷ 'ಆ ಪೆಣನಂ ಮುಸುಂಕಿಟ್ಟು ತೆಗೆಯಲ್ಪುಳುವಿನ ರಾಶಿಯಾಗದಿರ್ದೊಡೆ ನಾನು ಅಪರಾಧಿ', ಎಂದು ಸಾರಿದ. ಅದರಂತೆ ಹೆಣದ ಮುಸುಕು ತೆಗೆಯಲು ಹುಳುವಿನರಾಶಿಯನ್ನು ಕಂಡ ರಾಜ ಜೊಮ್ಮಯ್ಯನಲ್ಲಿ ಕ್ಷಮೆಬೇಡಿ 'ಇರ್ಚ್ಛಾಸಿರ ಪೊನ್‌ಗಳಂ' ಕಾಣ್ಕೆಯಾಗಿತ್ತನು.

ಲಕ್ಷ್ಮೀದೇವಿಯೂ ಪೊನ್ನಪೊಟ್ಟಣ ದಿವ್ಯವಸ್ತ್ರಗಳನ್ನು ಧಾರೆ ಎರೆದಳಲ್ಲದೆ, ವಿಕ್ರಮಾದಿತ್ಯನು ಕಲ್ಯಾಣಕ್ಕೆ ಒಂದು ಯೋಜನದ ಅಂತರದಲ್ಲಿ 'ಪನ್ನಿರ್ಚ್ಛಾಸಿರ ಪೊನ್ನನಿಕ್ಕುವ ಪಟ್ಟಣಮಂ ಶಿವಪುರಮಂ ಮಾಡಿ'ಕೊಟ್ಟನು.

ಇಲ್ಲಿ ಕಥೆ ಅಥವಾ ಪವಾಡಕ್ಕಿಂತ ರಾಣಿ ಲಕ್ಷ್ಮೀದೇವಿಯ ಶಿವಭಕ್ತಿ, ಗುರುವಿನ ಪರವಾದ ಪಕ್ಷಪಾತಿಗುಣ ಕಂಡುಬರುತ್ತದೆ. ಕಾವ್ಯದುದ್ದಕ್ಕೂ ಇವಳನ್ನು 'ಪರಮಶಿವಲಿಂಗಾರ್ಚನಾನಿರತೆ, ಶಿವಭಕ್ತೆ, ಜಂಗಮಸ್ನೇಹಿ ಎಂದು ಕರೆದಿರುವುದನ್ನು ಕಾಣಬಹುದು. ಲಕುಮಾದೇವಿಯ ಪ್ರಾಣಲಿಂಗ ಇಷ್ಟಲಿಂಗವೆಂದು ವ್ಯಕ್ತವಾಗುತ್ತದೆ.

ರಾಣಿ ಲಕ್ಷ್ಮೀದೇವಿಯ ಶಿವಭಕ್ತಿ, ಶಿವಶರಣರ ಪರವಾದ ಗುಣಗಳನ್ನು ಶಾಸನಗಳಲ್ಲಿಯೂ ಕಾಣಬಹುದು. ಇವಳು ಕಲ್ಯಾಣದಲ್ಲಿದ್ದಾಗ ಸೂಡಿಯ ಅಚಲೇಶ್ವರದ ಸೋಮೇಶ್ವರ ಪಂಡಿತ, ಅಲ್ಲಿಯ ತಪೋಧನರಿಗೆ ದಾನ ನೀಡಿರುವುದನ್ನು ಕ್ರಿ.ಶ.೧೦೮೪ರ ಶಾಸನ[೬] ತಿಳಿಸುತ್ತದೆ. ಅಲ್ಲದೆ ಇವಳ ತವರು ಮನೆಯವರೂ ಶೈವನಿಷ್ಠರಾಗಿದ್ದರೆನ್ನುವುದನ್ನು ಖೇಡಗಿಯ ಶಾಸನ ತಿಳಿಸುತ್ತದೆ. ಈ ಶಾಸನವು ಇವಳ ತಂದೆ–ತಾಯಿಗಳು ಕಂಕೇಶ್ವರದೇವರಿಗೆ ನೀಡಿದ ದಾನದ ವಿವರಗಳನ್ನು ನೀಡುತ್ತದೆ[೭].

ಶೈವಧರ್ಮನಿಷ್ಠೆಯನ್ನು ತೋರಿದ ಅರಸಿ ಲಕ್ಷ್ಮೀದೇವಿಯು ತನ್ನ ಆಡಳಿತದ ಅವಧಿಯಲ್ಲಿ ಬೌದ್ಧ, ಜೈನಧರ್ಮಗಳಿಗೂ ಅವಕಾಶ ಒದಗಿಸಿಕೊಟ್ಟಿದ್ದಳು. ಕ್ರಿ.ಶ.೧೧೧೫ರ ಡಂಬಳದ ಶಾಸನದ ಪ್ರಕಾರ ಇವಳು ಹದಿನೆಂಟು ಅಗ್ರಹಾರ ಧರ್ಮಪುರದ ಆಳಿಕೆ ಕೈಕೊಂಡ ಸಮಯದಲ್ಲಿ ಧರ್ಮಪೊಳಲದ ಹದಿನಾರುಜನ ಸೆಟ್ಟಿ ಮಹಾನಗರರು ಬೌದ್ಧವಿಹಾರ ಮತ್ತು ಲೊಕ್ಕಿಗುಂಡಿಯ ವಡ್ಡವ್ಯವಹಾರಿ ಸಂಗಮಯ್ಯಸೆಟ್ಟಿಯರು ಮಾಡಿಸಿದ ಶ್ರೀ ಭಗವತಿ ಆರ್ಯತಾರಾದೇವಿ ವಿಹಾರಕ್ಕೆ ಅಲ್ಲಿಯ ಬುದ್ಧದೇವರಿಗೆ ಪೂಜಾ, ಸತ್ಕಾರ್ಯ ನೈವೇದ್ಯ, ಭಿಕ್ಷುಗಳಿಗೆ ದಾನ ಬಿಟ್ಟುಕೊಟ್ಟಿರುವ ವಿಚಾರ ಕ್ರಿ.ಶ.೧೧೧೫ರ ಶಾಸನ ತಿಳಿಸುತ್ತದೆ[೮]. ಇವಳ ಕಾಲದಲ್ಲಿ ಬೌದ್ಧಧರ್ಮ ಜೀವಂತವಿದ್ದಿತೆನ್ನುವ ವಿಚಾರ ಸ್ಪಷ್ಟವಾಗುತ್ತದೆ. ಇವಳು ಕ್ರಿ.ಶ.೧೧೧೬ರಲ್ಲಿ ಸೋಕಸೆಟ್ಟಿ ಎಂಬುವವನು ಕಟ್ಟಿಸಿದ ಬಸದಿಗೆ ಭೂದಾನ ಮಾಡಿದ ವಿಚಾರ ಇವಳು ಜೈನಮತಕ್ಕೆ ನೀಡಿದ ಪ್ರೋತ್ಸಾಹಕ್ಕೆ ಸಾಕ್ಷಿಯಾಗಿದೆ

**ಯುವತೀಮುಖ ತಿಳಕಂ ಲೋ**
**ಳವಿಲೋಚನೆ ಸವತಿಗಂಧಹಸ್ತಿ ಮಹಾದಾ**
**ನವಿನೋದೆಯೆನಿಸಿ ನೆಗಳ್ದಳ್**
**ಭುವನದೊಳೆ ಪುರಾಣಲಕ್ಷ್ಮಿ ಲಕ್ಷ್ಮೀದೇವಿ॥**

ಕ್ರಿ.ಶ.೧೦೮೦ರ ಡೋಣಿಯ ಮತ್ತೊಂದು ಶಾಸನ[೯] ಲಕ್ಷ್ಮೀದೇವಿಯನ್ನು ಯುವತಿಯರಲ್ಲಿ ತಿಲಕಪ್ರಾಯಳಾದವಳು, ಸವತಿಯರನ್ನು ಪ್ರೀತಿಯಿಂದ ನಡೆಸಿಕೊಳ್ಳುವವಳು, ದಾನಮಾಡುವುದರಲ್ಲಿ ಆನಂದ ಕಾಣುವವಳು ಎಂದು ಸ್ತುತಿಸಿದೆ.

ಇಲ್ಲಿ ಲಕ್ಷ್ಮೀದೇವಿಯನ್ನು ಸವತಿಗಂಧಹಸ್ತಿ ಎಂದು ಸ್ತುತಿಸಿರುವಂತೆ, ಹಲವಾರು ಅರಸಿಯರನ್ನು ಸವತಿ ಗಂಧವಾರಣೆ ಮೊದಲಾದ ಬಿರುದುಗಳಿಂದ ಕರೆಯಲಾಗಿದೆ. ಸವತಿಮದಭಂಜನೆ, ಸವತಿಬೆನ್ನ ಚವಟಿಕೆ ಎಂಬುದೂ ಅರಸಿಯರಿಗಿರುತ್ತಿದ್ದ ಬಿರುದುಗಳು. ಈ ಕುರಿತಂತೆ ವಿದ್ವಾಂಸರಲ್ಲಿ ಕೆಲವು ಚರ್ಚೆಗಳು ನಡೆದಿವೆ. ಇಲ್ಲಿ ಉದಾಹರಣೆಯಾಗಿ ನೀಡಿರುವ ಕಡೆಯ ಎರಡು ಬಿರುದುಗಳು ಸವತಿಯರನ್ನು ನಿಯಂತ್ರಿಸುವವಳು ಎಂಬ ಅರ್ಥನೀಡಿದರೆ, ಸವತಿ ಗಂಧಹಸ್ತಿ, ಸವತಿ ಗಂಧವಾರಣೆ ಎಂಬುದು ಸವತಿಯರನ್ನು ಪ್ರೀತಿಯಿಂದ ನಡೆಸಿಕೊಳ್ಳುತ್ತಿದ್ದವಳೆಂಬ ಅರ್ಥಬರುತ್ತದೆ. ಹಸ್ತಿ ಅಥವಾ ವಾರಣ ಎಂದರೆ ಆನೆ ಎಂಬ ಅರ್ಥವಿದೆ. 'ಆನೆಯ ಗುಂಪಿನಲ್ಲಿ ಮರಿ ಆನೆಗಳನ್ನು ಎಲ್ಲ ಹಿರಿಯ ಆನೆಗಳೂ ಪ್ರೀತಿಯಿಂದ ನಡೆಸಿಕೊಳ್ಳುತ್ತವೆ. ಅದನ್ನು ರೂಪಕವಾಗಿ ಬಳಸಿ ಪ್ರೀತಿಯಿಂದ ಸಲಹುವುದಕ್ಕೆ ಇಂತಹ ಹೋಲಿಕೆಯನ್ನು ನೀಡಲಾಗುತ್ತಿತ್ತು"[೧೦] ಹೊಯ್ಸಳ ಅರಸಿ ಶಾಂತಲೆಯ ಹಲವಾರು ಬಿರುದುಗಳಲ್ಲಿ 'ಸವತಿಗಂಧವಾರಣೆ' ಎಂಬುದು ಅವಳ ನೆಚ್ಚಿನ ಬಿರುದಾಗಿತ್ತು. ಶ್ರವಣಬೆಳಗೊಳದಲ್ಲಿ ಅವಳು ಕಟ್ಟಿಸಿದ ಬಸದಿಗೆ ಸವತಿಗಂಧವಾರಣೆ ಬಸದಿ ಎಂಬ ಹೆಸರೇ ನೀಡಿರುವುದು ಇದು ಅವಳು ತೋರುತ್ತಿದ್ದ ವಾತ್ಸಲ್ಯ ಪ್ರೀತಿಯ ಪ್ರತೀಕವಾಗಿತ್ತೆನ್ನುವುದನ್ನು ಗಮನಿಸಬಹುದು.

**ಚಂದಲಾದೇವಿ/ಚಂದ್ರಿಕಾದೇವಿ:**

ಸೌದತ್ತಿಯ ರಟ್ಟವಂಶದ ಲಕ್ಷ್ಮೀದೇವನ ಮಡದಿ ಚಂದಲಾದೇವಿ. ಇವಳು ಕಾವ್ಯಗಳಲ್ಲಿ ಹಾಗೂ ಶಾಸನಗಳಲ್ಲಿ ಉಲ್ಲೇಖಿತಳಾಗಿದ್ದಾಳೆ.ಇವಳು ರಾಜ್ಯಾಡಳಿತದಲ್ಲಿ ಪತಿ ಲಕ್ಷ್ಮೀದೇವನಿಗೆ ಸಲಹೆಗಳನ್ನು ಕೊಡುತ್ತಿದ್ದಳು ಎಂಬುದನ್ನು ಶಾಸನಗಳು ತಿಳಿಸುತ್ತವೆ.

ಲಕ್ಷ್ಮೀದೇವನು ತನ್ನ ಆಸ್ಥಾನದಲ್ಲಿದ್ದ ಕವಿ ನೇಮಿಚಂದ್ರನಿಂದ 'ಲೀಲಾವತಿ ಪ್ರಬಂಧಂ' ಕೃತಿಯನ್ನು ಬರೆಯಿಸಿದ್ದಾನೆ. ಈ ಕಾವ್ಯದಲ್ಲಿ ನೇಮಿಚಂದ್ರನು ತನ್ನ ಪೋಷಕರಾದ ಲಕ್ಷ್ಮೀದೇವ ಹಾಗೂ ಚಂದಲದೇವಿಯರನ್ನು ಸ್ತುತಿಸಿದ್ದಾನೆ.

**ಧರೆಯಂ ರಕ್ಷಿಸುತ್ತಿರ್ಕೆ ಲಕ್ಕಬರಿಸಂ ಲಕ್ಷ್ಮೀಧರೋರ್ವೀಶ್ವರಂ**
**ಸಿರಿಯಂತಾತನತೋಳೊಳಿರ್ಕೆ ಸತತಂ ಶ್ರೀ ಚಂದ್ರಿಕಾದೇವಿ**
**ಸಾಸಿರಮಂ ಕಾವ್ಯಮನೊಲ್ದು ಪೇಟಿಗ್ಗೆ ಸುಖದಿಂ ಚಂದ್ರೋದಯಂ ಸಪ್ತಸಾ**
**ಗರಪರ್ಯಂತ ಧರಿತ್ರಿಯೊಳ್ ನೆಲಸುಗೀ ಕಾವ್ಯಂ ಶುಭಂ ಮಂಗಳಂ॥**[೧೧]

ಈ ಮೇಲಿನ ಪದ್ಯದಲ್ಲಿ ಕವಿಯು ಅನಂತಕಾಲದವರೆಗೂ ಧರೆಯನ್ನು ಲಕ್ಷ್ಮೀಧರ ಅರಸು ರಕ್ಷಿಸುತ್ತಿರಲು, ಐಶ್ವರ್ಯದಂತೆ ಅರಸಿ ಚಂದ್ರಿಕಾದೇವಿಯೂ ಆತನಿಗೊಲಿದು ಜೊತೆ ಇರುವಾಗ, ರಚಿಸಿದ ಈ ಕಾವ್ಯವು ಇವರ

ಕೀರ್ತಿಯನ್ನು ಹರಡುತ್ತಾ ಆ ಸೂರ್ಯಚಂದ್ರರಿರುವವರೆಗೂ ಸಪ್ತಸಾಗರದ ಮೇರೆದಾಟಿ ಭೂಮಿಯಲ್ಲಿ ವ್ಯಾಪಿಸಲಿ ಎಂಬ ಆಶಯ ವ್ಯಕ್ತಪಡಿಸಿದ್ದಾನೆ.

ಪಾರ್ಶ್ವಪಂಡಿತನೂ ಕೂಡ ತನ್ನ ಕಲ್ಲೊಳೆ ಶಾಸನದಲ್ಲಿ ಇವರನ್ನು ಸ್ತುತಿಸಿದ್ದಾನೆ[೧೨]. ಶಾಸನಗಳಲ್ಲಿ ಇವಳನ್ನು ಚಂದಲದೇವಿ, ಚಂದ್ರಿಕೆ, ಚಂದ್ರಿಕಾದೇವಿ ಮೊದಲಾಗಿ ಕರೆಯಲಾಗಿದೆ.

ಶಾಸನವು ಇವಳ ದೀನಪರತೆ, ದಾನಗುಣಗಳನ್ನು ಹೊಗಳಿದೆ. "ಶರಣಾಗತ ರಕ್ಷಾಮಣಿ ತರುಣೀನುತೆ ಸಕಳಗುಣ ಚಿಂತಾಮಣಿ ಭಾಸುರ ನಿಜಗೋತ್ರ ಶಿರೋಮಣಿ ವರಚಂದಲದೇವಿ ಪಟ್ಟದರಾಣಿಮೆನಿಕ್ಕುಂ" ಎನ್ನುತ್ತಾ ಪಟ್ಟದರಸಿಯಾದ ಚಂದಲದೇವಿಯ ಗುಣಸ್ವಭಾವವನ್ನು ಬಣ್ಣಿಸಿದೆ. ಅಷ್ಟೇ ಅಲ್ಲದೆ ಇವಳನ್ನು "ಭೂನುತ ಸಚ್ಚರಿತೆ ಚಂದ್ರಿಕಾದೇವಿ ಮಹಾದಾನೆ" ಎಂದು ಸ್ತುತಿಸಿರುವುದಲ್ಲದೆ "ಘಟಸರ್ಪವಿಜಯ" ಎಂದು ಇವಳು ದಿವ್ಯ ಮೆರೆಸಿದ ಸಂಗತಿಯನ್ನೂ ಹೊಗಳಿದೆ[೧೩]. ಸಾರ್ವಜನಿಕರೆದುರು ಘಟಸರ್ಪದಿವ್ಯ ಮಾಡಿ ಮೆರೆದ ಇವಳ ಈ ಪವಾಡವನ್ನು ಕಲ್ಲೊಳೆ ಶಾಸನವೂ "ಘಟೋದರ ಸುಸ್ತಿತಸರ್ಪ ದರ್ಪಭಂಜನಿ" ಎಂದು ಕ್ರಿ.ಶ.೧೨೦೫ರ ಶಾಸನ ಉಲ್ಲೇಖಿಸಿದೆ[೧೪].

**ಪ್ರಣುತ ಶ್ರೀನಿಧಿ ಚಂದ್ರಿಕಾಪತಿಯ ಶೀಲಭ್ರತಮಂ ಕೂಡೆ ಧಾ**
**ರಿಣಿಯೊಳ್ ಬಣ್ಣಿಸಲ್ ಆರುಂ ಆರ್ತಪರೆ ಲಕ್ಷ್ಮೋರ್ವಿಶನಂ**
**ಕ್ಷತ್ರಿಯಾಗ್ರಣಿಯಂ ಶೀಲದೆ ಮೆಚ್ಚಿಸಲ್ ಫಣಿಪನಂ ಪೂಣ್ದೆತ್ತಿ ತಾಂ ತನ್ನಕೈ**
**ಗುಣಮಂ ಕಂಡುದರಿಂದವಂ ಪೊಗಳಲಾರ್ಪಂ ವಿಶ್ವಜಿಹ್ವಾಳಿಯಂ॥**[೧೫]

ಪಟ್ಟದರಸಿ ಚಂದ್ರಿಕಾದೇವಿಯನ್ನು ಹೊಗಳುವ ಬೆಳಗಾವಿಯ ಶಾಸನಪದ್ಯವು, ಪತಿವ್ರತೆ ಎನಿಸಿದ್ದ ಚಂದ್ರಿಕಾದೇವಿಯು ಶೀಲವ್ರತವನ್ನು ಕೈಗೊಂಡು, ಘಟಸರ್ಪವನ್ನು ಕೈಯಲ್ಲಿ ಹಿಡಿದೆತ್ತಿದ ಘಟನೆಯನ್ನು ಕುರಿತು ತಿಳಿಸಿದೆ. 'ಶೌರ್ಯಸಾಹಸಕ್ಕೆ ಹೆಸರಾದ ಚಂದ್ರಿಕಾದೇವಿಯ ಪತಿಯ ಶೀಲವ್ರತವನ್ನು ಹೊಗಳಲು ಈ ಭೂಮಂಡಲದಲ್ಲಿ ಯಾರಿಗೂ ಸಾಧ್ಯವಿಲ್ಲ' ಎಂಬ ಹೊಗಳಿಕೆಗೆ ಪಾತ್ರನಾದ ಲಕ್ಷ್ಮೀದೇವರಸನನ್ನು ಮೆಚ್ಚಿಸಲು, ಆತನಿಗೆ ತಕ್ಕ ಅರಸಿ ಎಂಬುದನ್ನು ಸಾಬೀತು ಪಡಿಸಲು ಅರಸಿಯು ಇಂತಹ ಸಾಹಸಕ್ಕೆ ಮುಂದಾದಳೆಂದು ಶಾಸನವು ಬಣ್ಣಿಸುತ್ತದೆ.

ಘಟಸರ್ಪವನ್ನು ಕೈಯಲ್ಲಿ ಹಿಡಿದು ಮಾಡುವ ದಿವ್ಯವು ಅಂದಿನ ಸಮಾಜದಲ್ಲಿ ಪ್ರಚಲಿತವಿದ್ದ, ಶೀಲವ್ರತವೆಂದು ಕರೆಯಲಾಗುತ್ತಿದ್ದ, ಘೋರತರ ವ್ರತವಾಗಿತ್ತೆಂದು ತಿಳಿದು ಬರುತ್ತದೆ. ಉತ್ತರ ಕರ್ನಾಟಕದ ಜನಪದ ನಾಟಕಗಳಲ್ಲಿ ಇದರ ಉಲ್ಲೇಖ ದೊರಕುತ್ತದೆ. ಮೇಲೆ ತಿಳಿಸಿರುವಂತೆ ಕವಿ ಕಂದರ್ಪನೆನಿಸಿದ ಬಾಳಚಂದ್ರ ಕವಿಯ ಬೆಳಗಾವಿ ಶಾಸನದಲ್ಲಷ್ಟೇ ಅಲ್ಲದೆ ಕಲ್ಲೊಳಿ ಶಾಸನ, ಕೊಲ್ಲಾಪುರದ ಶಾಸನಗಳೂ ಇವಳ ಘಟಸರ್ಪ ದಿವ್ಯವನ್ನು ಕುರಿತು ತಿಳಿಸುತ್ತವೆ. ಈ ಘಟನೆಯು ಹಲವಾರು ಶಾಸನಗಳಲ್ಲಿ ಉಕ್ತವಾಗಿ, ಅಂದಿನ ಪ್ರಮುಖ ವಿಚಾರವಾಗಿತ್ತೆನುವುದನ್ನು ತಿಳಿಸುತ್ತದೆ. ಇದು ಅರಸಿಯೋರ್ವಳು ಅಂದಿನ ಜನಮನದಲ್ಲಿ ಮಹತ್ವದ ಸ್ಥಾನವೊಂದನ್ನು ಪಡೆದಿದ್ದರ ಕುರುಹಾಗಿದೆ. ಅಂದಿನ ಕಾಲದ ಬಹುಮೌಲ್ಯವೆನಿಸಿದ ಪಾತಿವ್ರತ್ಯಕ್ಕೆ ಅರಸು ಮನೆತನದವರು ಕೊಡುತ್ತಿದ್ದ ಮಹತ್ವ ಇಲ್ಲಿ ಬಿಂಬಿತವಾಗಿದೆ.

**ಬರ್ಮಭೂಪಾಲನ ಅರಸಿ ಸುಗ್ಗಲದೇವಿ**

ಚಂದ್ರಿಕಾದೇವಿಯ ಕಾಲದಲ್ಲಿದ್ದ ಮತ್ತೋರ್ವ ರಾಣಿ ಸುಗ್ಗಲದೇವಿಯೂ ಕೂಡ ಇವಳಂತೆಯೇ ಘಟಸರ್ಪ ದಿವ್ಯವನ್ನು ಮಾಡಿರುವುದರ ಉಲ್ಲೇಖ ದೊರಕುತ್ತದೆ. ಅರಸಿ ಸುಗ್ಗಲದೇವಿಯು ಬರ್ಮಭೂಪಾಲನ ರಾಣಿ. ಇವಳನ್ನು ಕುರಿತು ತೋರಗಲ್ಲಿನ ಶಾಸನವು "ಪುಣ್ಯನಿಧಿ ಸುಗ್ಗಲದೇವಿ ಲಸಚ್ಚರಿತ್ರಭೂಷಿತೆ ಘಟಸರ್ಪವಂ ಹಿಡಿದು ಗೆಲ್ದಳಿಳಾತಳವ್ವೆದೆ ಬಣ್ಣಿಸಲು"[೧೬] ಎಂದು ಇವಳು ಮಾಡಿದ ಶೀಲವ್ರತವನ್ನು ಕುರಿತು ಹೇಳಿದೆ.

ಪರಮ ಶಿವಭಕ್ತಳಾಗಿದ್ದ ಇವಳು ಪರಮ ಮಾಹೇಶ್ವರಿ ಎನಿಸಿಕೊಂಡವಳು. ತೊರಗಲ್ಲಿನಲ್ಲಿ ಅಂದು ಪ್ರಧಾನವಾಗಿದ್ದು ಕಾಳಾಮುಖಶೈವ ಸಂಪ್ರದಾಯ, ಶೈವಧರ್ಮಕ್ಕೆ ತನ್ನನ್ನೆ ಸಮರ್ಪಿಸಿಕೊಂಡ ಸುಗ್ಗಲೆ ಅದ್ವಿತೀಯಳು. ದಾನ ವಿರಾಜಿತೆಯೆನಿಸಿದ ಈಕೆ ಬರ್ಮದೇವರಸನೊಂದಿಗೆ ತೊರಗಲೆಯಲ್ಲಿ ಸುಗ್ಗಲೇಶ್ವರ ಪ್ರತಿಷ್ಠಾಪಿಸಿ ದೇವರ ಧೂಪ ದೀಪಕ್ಕೆ ಮತ್ತರು ೪೫೦ ಕಂಬ ಅಡಿಕೆ ಸೀಮೆಯನ್ನು ಬಿಟ್ಟುಕೊಟ್ಟಿರುವಳು.

ಪತಿಪತ್ನಿಯರಲ್ಲಿರುತ್ತಿದ್ದ ಪರಸ್ಪರ ನಿಷ್ಠೆಯನ್ನು, ಅವರ ಶುಚಿತ್ವವನ್ನೂ ಶಾಸನಗಳು ಪರನಾರಿ ಸಹೋದರ, ಪರಾಂಗನ ಪುತ್ರನೆಂದು ರಾಜನನ್ನು ಕುರಿತು ಹೇಳಿದರೆ. ರಾಣಿಯರ ಪಾತಿವ್ರತ್ಯವನ್ನು ಹೊಗಳಲು ಸೀತೆ, ಅನುಸೂಯ ಮೊದಲಾದ ಪುರಾಣದ ಸ್ತ್ರೀಯರೊಂದಿಗೆ ಹೋಲಿಸಿ ಗುಣಗಾನ ಮಾಡಲಾಗುತ್ತಿತ್ತು. ಆದರೆ ಈ ವಿಶೇಷ ಶಾಸನವು ರಾಣಿಯರು ತಮ್ಮ ಪಾತಿವ್ರತ್ಯವನ್ನು ಪ್ರಕಟಪಡಿಸಲು 'ಘಟಸರ್ಪ ಪವಾಡ'ದಂಥ ಪರೀಕ್ಷೆಗಳನ್ನು ಸಾಮೂಹಿಕವಾಗಿ ಎದುರಿಸಲು ಉತ್ಸಾಹಿತರಾಗಿರುತ್ತಿದ್ದರು ಎಂಬುದನ್ನು ತಿಳಿಸುತ್ತದೆ. ದಾನವಿನೋದೆಯೆನಿಸಿದ ಸುಗ್ಗಲದೇವಿಯು ಇಂಥ 'ಘಟಸರ್ಪ ಪವಾಡವನ್ನು ಮೆರೆದ ವಿಚಾರವನ್ನು ಈ ಮೇಲಿನ ಶಾಸನ ತಿಳಿಸುತ್ತದೆ.

ಈ ಬರ್ಮಭೂಪಾಲನ ಸರ್ವಾಂಗಲಕ್ಷ್ಮಿಯನ್ನು ಶಾಸನ ಕವಿಯು

**ಹರಿಯ ಸಿರಿ ಹರನ ಪಾರ್ವತಿ**
**ಸರಸಿಜ ಸಂಭವನ ವಾಣಿಯಂದದಿ ಮುದದಿಂ**
**ಧರೆಪೊಗಳೆ ನೆಗಳ್ದ ಪೆಂಪಿಂ**
**ಪರಮ ಪತಿವ್ರತೆ ಯೆನಿಸಿದೆ ಸುಗ್ಗಲದೇವಿ॥** ಎಂದು ಬಣ್ಣಿಸಿದ್ದಾನೆ.

"ಬಮ್ಮೀದೇವರಸರ ಕೈಯಲು ಸುಗ್ಗಲದೇವಿಯರಸಿ ಕೊಂಡು ಹಾಲಹೊಳೆಯ ಹೊಲದೊಳಗೆ ದೇವ ದೇವನೆನಿಪ್ಪ ಶ್ರೀ ಸುಗ್ಗಲೇಶ್ವರ ದೇವರ ಧೂಪ ದೀಪ ನೈವೇದ್ಯ ತಾಂಬೂಲಕ್ಕೆ ಬಿಟ್ಟ ದತ್ತಿಯ ಸೀಮೆ"ಯನ್ನು ಶಾಸನ ಸ್ಪಷ್ಟವಾಗಿ ಗುರುತಿಸಿದೆ. ದೇವರಿಗೆ ನಂದಾದೀಪಕ್ಕಾಗಿ ಮತ್ತರೆರಡು ಕಂಬ ನಾನೂರು ಐವತ್ತು ಕಲ್ಲು ಗಾಣದ ಮಾನೆಣ್ಣೆಯನ್ನು ಬಿಟ್ಟುಕೊಟ್ಟಿರುವಳು.

ರಾಣಿಯರ ಜೀವನ ಸಾಮಾನ್ಯ ಜನಜೀವನದ ಮೇಲೆ ಪ್ರಭಾವ ಬೀರುತ್ತಿತ್ತು. ಅಂತೆಯೇ ರಾಣಿಯರ ಪಾತಿವ್ರತ್ಯ ಆದರ್ಶವೆನಿಸುತ್ತಿತ್ತು. ಇವರ ಇಂಥ ಗುಣಗಳನ್ನು ಶಾಸನಗಳಲ್ಲಿ ಅತಿಶಯವಾಗಿ ಬಿಂಬಿಸಲಾಗುತ್ತಿತ್ತು ಅವುಗಳಲ್ಲಿ ಭರ್ಮಭೂಪಾಲನ ಮಡದಿ ಸುಗ್ಗಲದೇವಿಯ, ರಟ್ಟ ರಾಣಿ ಚಂದ್ರಿಕಾದೇವಿಯರ ವಿಚಾರವು ಜನಜನಿತವಾಗಿ ಶಾಸನಗಳೂ ಕೊಂಡಾಡುತ್ತಿವೆ.

### ಸಾವಿಯಬ್ಬೆ:

ಸಾವಿಯಬ್ಬೆಯು ತನ್ನ ಶೌರ್ಯಕ್ಕೆ ಹೆಸರಾಗಿದ್ದಾಳೆ. ಇವಳ ವಿಚಾರದ ಮೇಲೆ ಬೆಳಕುಚೆಲ್ಲುವ ಶಾಸನ ಹಾಗೂ ಶಿಲ್ಪ ಶ್ರವಣಬೆಳಗೊಳದಲ್ಲಿದೆ. ಲೋಕವಿದ್ಯಾಧರ ಈಕೆಯ ಪತಿ. ಮಧುವರ ಹಾಗೂ ದೋಯಿಲಮ್ಮ ಎಂಬುವವರು ಇವಳ ಸಹೋದರರು. ಶ್ರವಣಬೆಳಗೊಳದ ಶಾಸನ[೧೭] ಸೋದರಿ ಸಾವಿಯಬ್ಬೆ ಯುದ್ಧದಲ್ಲಿ ಹೋರಾಡಿ ಮಡಿದ ವಿಷಯ ತಿಳಿಸುತ್ತದೆ. ಈಕೆ ಗಂಡನ ಸಾವಿನ ಸೇಡನ್ನು ತೀರಿಸಿಕೊಳ್ಳಲು, ಸ್ವತಃ ಕಾದಾಡಿ ಮಡಿದಿರಬೇಕೆಂದು ಶಾಸನತಜ್ಞರು ಅಭಿಪ್ರಾಯ ಪಡುತ್ತಾರೆ. ಸಾವಿಯಬ್ಬೆಯನ್ನು ಸ್ತುತಿಸುವ ಪದ್ಯಗಳು ಶಾಸನದಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ ಆದರೆ, ಅವಳು ಹೋರಾಡಿ ಸಾವನ್ನಪ್ಪಿದ ಪ್ರಸಂಗ ವಿವರಿಸುವ ಶಾಸನ ಭಾಗ ಬಹುತೇಕ ಒಡೆದುಹೋಗಿದೆ.  ಇಲ್ಲಿನ ಶಿಲ್ಪಗಳು ಇವಳು ಹೋರಾಟದಲ್ಲಿ ತೋರಿದ ಪರಾಕ್ರಮವನ್ನು ಕುರಿತು ತಿಳಿಸುತ್ತದೆ. ಮೊದಲ ಹಂತದ ಶಿಲ್ಪ ಕುದುರೆಯನ್ನೇರಿ ಕತ್ತಿ ಹಿಡಿದಿರುವ ಮಹಿಳೆ ಆನೆಯ ಮೇಲೆ ಕುಳಿತಿರುವ ಖಡ್ಗಧಾರಿಯನ್ನೆದುರಿಸುತ್ತಿರುವಂತಿದ್ದರೆ, ಶಿಲ್ಪದ ಕಡೆಯ ಹಂತ ಜೈನಮತದವಳಾದ ಈಕೆ ತೀರ್ಥಂಕರನ ಪಾದ ಸೇರಿದಳು ಎಂದು ತಿಳಿಸುತ್ತಿದೆ.

ಸಾವಿಯಬ್ಬೆಯ ಕುರಿತಾದ ಶಾಸನ ಈ ಪದ್ಯವನ್ನು ಕವಿ ರನ್ನ ರಚಿಸಿರುವನೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಇಲ್ಲಿನ ಪದ್ಯ ಮೊಲೆವೆತ್ತ ಸಾವಿಯಬ್ಬೆ.... ಮೀಸೆವೊತ್ತಣ್ಣ(ಜ್ಞ)ಳ್.. ಎಂಬ ಪದ್ಯವು ಗದಾಯುದ್ಧ ಹಾಗೂ ಅಜಿತನಾಥ ಪುರಾಣಗಳಲ್ಲಿ ಪುನರಾವರ್ತನೆಯಾಗಿದೆ. ಅಲ್ಲದೆ ಶ್ರಾವಕಧರ್ಮದೊಳ್ ದೊರೆಯೆನಲ್ ಪೆರರಿಲ್ಲೆನೆ ಸನ್ದರೇವತಿ... ಎಂಬ ಉತ್ಪಲಮಾಲಾ ವೃತ್ತದ ಪದ್ಯವೂ ಸಹ ಅಜಿತಪುರಾಣ (೧–೨೭) ದಲ್ಲಿ ಪುನಾರಚನೆಯಾಗಿದೆ.

ರನ್ನನ ಅಜಿತ ಪುರಾಣ ಕೃತಿ ರಚನೆಯು ಕ್ರಿ.ಶ.೯೩ರಲ್ಲಿಯೂ ಸಾಹಸಭೀಮ ವಿಜಯವನ್ನು ೧೦೦೫ ರಲ್ಲಿಯೂ ರಚಿಸಿದ್ದಾನೆಂದು ವಿದ್ವಾಂಸರು ನಿರ್ಣಯಿಸಿದ್ದಾರೆ. ಆದರೆ ಸಾವಿಯಬ್ಬೆಯ ಈ ಶಾಸನ ಈ ಎರಡೂ ಕೃತಿಗಳಿಗಿಂತಲೂ ಪೂರ್ವದಲ್ಲಿ ಕ್ರಿ.ಶ.೯೭೮ರಲ್ಲಿ ರಚಿಸಿದುದಾಗಿದೆ.

ಕಾಳಗದಲ್ಲಿ ಭಾಗವಹಿಸಿ ಬಗಿಯೂರಿನಲ್ಲಿ ಮಡಿದ ಸಾವಿಯಬ್ಬೆಯ ಪತಿ ಗಂಗವಂಶದವನು. ಹಾಗಾಗಿ ಇವಳನ್ನು ಕುರಿತಂತೆ ಗಂಗ ಮಾಂಡಳೀಕ ಚಾವುಂಡರಾಯನ ಆಶ್ರಯದಲ್ಲಿದ್ದ ರನ್ನನಿಂದ ಶ್ರವಣಬೆಳಗೊಳದಲ್ಲಿ ಈ ಶಾಸನವನ್ನು ಬರೆಯಿಸಲಾಗಿದೆ[೧೮].

ಸಾವಿಯಬ್ಬೆಯು, ರನ್ನ ಕವಿಯಿಂದ ಹೊಗಳಿಸಿಕೊಂಡ ವೀರಮಹಿಳೆ ಎಂಬ ಹಿರಿಮೆಗೆ ಪಾತ್ರಳಾಗುತ್ತಾಳೆ.

### ಕೆಳದಿ ಚೆನ್ನಮ್ಮ

ಕೆಳದಿಯ ಅರಸು ಸೋಮಶೇಖರನ ರಾಣಿ ಚೆನ್ನಮ್ಮ, ಪತಿಯೊಂದಿಗೆ ಆಡಳಿತ ವ್ಯವಹಾರದಲ್ಲಿ ಪಾಲ್ಗೊಳ್ಳುತ್ತಿದ್ದಳು. ಪತಿಯ ಮರಣಾನಂತರ, ಸೂಕ್ತ ಉತ್ತರಾಧಿಕಾರಿ ಇಲ್ಲದ ಕಾರಣ ತಾನೇ ಅಧಿಕಾರ ವಹಿಸಿಕೊಂಡಳು. ಪತಿಯ ಮರಣಕ್ಕೆ ಕಾರಣರಾದ ರಾಜ್ಯದ ಒಳ ಹಾಗೂ ಹೊರ ಶತ್ರುಗಳನ್ನು ನಿಗ್ರಹಿಸಿದಳು. ತಾನು ಪಟ್ಟಕ್ಕೆ ಬಂದ ಮರುವರ್ಷವೇ ಕ್ರಿ.ಶ.೧೬೭೩ರಲ್ಲಿ ತನ್ನ ನಂತರ ರಾಜ್ಯಕ್ಕೆ ವಾರಸುದಾರರಿಲ್ಲದ ಕಾರಣ ಬಸವಪ್ಪನಾಯಕನನ್ನು ದತ್ತುತೆಗೆದು ಕೊಳ್ಳುತ್ತಾಳೆ. ಕೆಳದಿ ನೃಪವಿಜಯದಲ್ಲಿ ದಾಖಲಾಗಿರುವಂತೆ (ಶಾ.ಶ.೧೫೯೪–೧೬೨೦) ಸುಮಾರು ೨೪ ವರ್ಷಗಳ ಕಾಲ ರಾಜ್ಯಭಾರ ಮಾಡಿ ನಂತರ ಬಸವಪ್ಪನಾಯಕನಿಗೆ ಪಟ್ಟವನ್ನುಕಟ್ಟಿ, ಅವನಿಗೆ ಮಾಗದರ್ಶನ

ನೀಡುತ್ತಾಳೆ. ಇವಳ ಕಾಲದಲ್ಲಿ ಅನೇಕ ಯುದ್ಧಗಳು ನಡೆದವು. ಅವುಗಳಲ್ಲಿ ಮೊಗಲರ ಸೈನ್ಯವನ್ನು ಎದುರಿಸಿದ ಇವಳ ಸಾಹಸ ಶ್ಲಾಘನೀಯವಾದುದು.

ಕೆಳದಿ ನೃಪವಿಜಯದಲ್ಲಿ ಚೆನ್ನಮ್ಮ: ಲಿಂಕಣ್ಣಕವಿ ರಚಿಸಿರುವ ಕನ್ನಡದ ಪ್ರಸಿದ್ಧ ಐತಿಹಾಸಿಕ ಕಾವ್ಯ 'ಕೆಳದಿ ನೃಪವಿಜಯ'ದಲ್ಲಿ ಕೆಳದಿಯ ಸಿಂಹಾಸನವನ್ನೇರಿದ ಚೆನ್ನಮ್ಮಳ ಚರಿತ್ರೆಯೂ ಸಹ ಚಿತ್ರಿತವಾಗಿದೆ. ಇವಳ ಸಾಹಸ, ಯುದ್ಧ ನೈಪುಣ್ಯ, ಆಡಳಿತ ವೈಖರಿ ಮೊದಲಾದವನ್ನು ಕವಿ ಸೊಗಸಾಗಿ ಬಣ್ಣಿಸಿದ್ದಾನೆ.

**ನೆರೆ ರಾಜಧರ್ಮಮಾರ್ಗದ**
**ಪರಿಯಂ ಬಲ್ಲವನಿಪಾಲರೊಳ್ ಮಿಗಿಲೆನಿಪಾ**
**ತರುಣೀನಿಕರಶಿರೋಮಣಿ**
**ವರಚನ್ನಮ್ಮಾಜಿ ಕೆಳದಿಯಿಳೆಗರಸಾದಳ್ ॥**

ರಾಜಧರ್ಮವನ್ನು ಬಲ್ಲ ಅರಸರಿಗಿಂತಲೂ ಮಿಗಿಲೆನಿಸುವಂತೆ ಕೆಳದಿಗೆ ಅರಸಳಾದ ಪರಿಯನ್ನು ಹೊಗಳಿರುವ ಕವಿಯು ತನ್ನ ಹನ್ನೆರಡು ಆಶ್ವಾಸದ ಈ ಕೃತಿಯಲ್ಲಿ ನವಮಾಶ್ವಾಸವನ್ನು ಸಂಪೂರ್ಣವಾಗಿ ಚೆನ್ನಮ್ಮಳ ಆಳ್ವಿಕೆಯ ವರ್ಣನೆಗೆ ಮೀಸಲಿಟ್ಟಿದ್ದಾನೆ.

ಇನ್ನೂ ಹಲವಾರು ಕಾವ್ಯಗಳಲ್ಲಿ ಚೆನ್ನಮ್ಮಳ ಚಿತ್ರಣ ಕಂಡುಬರುತ್ತವೆ. ಅವುಗಳಲ್ಲಿ ಇವಳ ಪೋಷಣೆಯಲ್ಲಿ ಬೆಳೆದ, ಇವಳ ದತ್ತುಮಗ ಬಸವಪ್ಪ ನಾಯಕ ರಚಿಸಿದ 'ಶಿವತತ್ವ ರತ್ನಾಕರ' ಹಾಗೂ 'ಕರ್ನಾಟಕ ಕಾಳಿಕಾಕಾಂಡ' ಕೃತಿಗಳು ಚೆನ್ನಮ್ಮನ ಕುರಿತಾಗಿ ವಿಸ್ತೃತ ವಿವರಣೆ ನೀಡುತ್ತದೆ. ಕರ್ನಾಟಕ ಕಾಳಿಕಾ ಕಾಂಡ ಕೃತಿಯಲ್ಲಿನ ಕಥಾನಾಯಕಿ ಕಾಳಿಕಾದೇವಿಗೆ ರಾಣಿ ಚೆನ್ನಮ್ಮನನ್ನು ಸಮೀಕರಿಸಿ ರಚಿಸಲಾಗಿದೆ. ಈ ಕೃತಿಗಳನ್ನು ಅರಸಿಯರ ಪೋಷಣೆಯಲ್ಲಿ ರಚಿತವಾದ ಕಾವ್ಯಗಳು ಎಂಬ ಮುಂದಿನ ಅಧ್ಯಾಯದಲ್ಲಿ ಚರ್ಚಿಸಲಾಗುತ್ತದೆ.

## ಬೂದಿಹಾಳು ಪಾಳೆಯದ ಚಿಕ್ಕಮ್ಮನಾಗತಿ

ಬೂದಿಹಾಳು ಕೋಟೆಯನ್ನಾಳಿದ ಪ್ರಸಿದ್ಧ ಪಾಳೆಯಪಟ್ಟಿನ ನಾಯಕತಿ ಚಿಕ್ಕಮ್ಮ ೧೫ನೆಯ ಶತಮಾನದಲ್ಲಿದ್ದವಳು. ಇವಳ ಪತಿ ಸಿರುಮ ಸುತ್ತಣ ಸೀಮೆಯನ್ನೆಲ್ಲಾ ವಶಪಡಿಸಿಕೊಂಡು ಸುಮಾರು ೨೫ ವರ್ಷ ಆಳ್ವಿಕೆ ನಡೆಸಿದ ನಾಯಕ. ಇವನಿಗೆ ಪ್ರಬಲ ವೈರಿಗಳಾಗಿದ್ದ ಹಿರಿಯೂರು, ಎಕ್ಕಟಿ, ಮೊದಲಾದ ನಾಯಕರ ಸಂಚಿನ ಮೇರೆಗೆ ವಿಜಯನಗರದ ಸಾಳುವ ನರಸಿಂಗ ತನ್ನ ಮಂತ್ರಿ ಈಶ್ವರನಾಯಕನೊಂದಿಗೆ ಬೂದಿಹಾಳು ಮುತ್ತಲು ಅಪಾರ ಸೈನ್ಯವನ್ನು ಕಳುಹಿಸುತ್ತಾನೆ. ಮಾರ್ಗದುದ್ದಕ್ಕೂ ಈ ಸೈನ್ಯ ಡೆಂಕಣಿಕೋಟೆ, ಕೋಳುಕೋಟೆ, ಮುಳವಾಗಿಲು, ಸಾವಂದಿಗೆ ಕಲ್ಲದುರ್ಗ, ನಿಡಗಲ್ಲು, ಮಿಡಿಗೇಸಿ ಮೊದಲಾದ ಕೋಟೆಗಳನ್ನು ವಶಪಡಿಸಿಕೊಂಡು ಬೂದಿಹಾಳಿನತ್ತ ನಡೆದು ದೇವಿಕೆರೆಯ ಬಳಿ ಬಿಡಾರ ಹೂಡುತ್ತದೆ. ಇದರಿಂದ ಕೊಂಚ ಕಂಗಾಲಾದ ಸಿರುಮನನ್ನು ಅವನ ಮಡದಿ ಚಿಕ್ಕಮ್ಮ ಸಮಾಧಾನಪಡಿಸಿ ಧೈರ್ಯ ತುಂಬುತ್ತಾಳೆ. ಚಿಕ್ಕಮ್ಮ ಎದುರಾಳಿ ಸೈನ್ಯವನ್ನು ಉಪಾಯದಿಂದ ಮಣಿಸಲು ಹವಣಿಸುತ್ತಾಳೆ. ಇವಳು ಪೂಜೆಯ ನೆಪದಲ್ಲಿ ತನ್ನ ಬಳಗವನ್ನು ಕರೆದುಕೊಂಡು ದೇವಿಕೆರೆಗೆ ವಿಷದಡಿಗೆ ಮಾಡಿಕೊಂಡು ತರುತ್ತಾಳೆ. ಅಲ್ಲಿ ವೈರಿಸೈನಿಕರನ್ನು ಕಂಡು ಹೆದರಿದಂತೆ ನಟಿಸಿ, ಅಡಿಗೆ ಬುಟ್ಟಿಗಳನ್ನು ಅಲ್ಲಿಯೇ ಬಿಟ್ಟು ಓಡಿ ಬರುತ್ತಾಳೆ. ವೈರಿ ಸೈನಿಕರು ವಿಷದಡಿಗೆಯನ್ನು ಉಂಡು ಅಲ್ಲಿಯೇ ಮಡಿದು ಬೀಳುತ್ತಾರೆ. ಹೀಗೆ ಮೊದಲನೆಯ ಬಾರಿ ತಮ್ಮ ಪ್ರದೇಶವನ್ನು ಮುತ್ತಿದ ವಿಜಯನಗರ ಸೈನ್ಯವನ್ನು ಹಿಮ್ಮೆಟ್ಟಿಸಲು ಚಿಕ್ಕಮ್ಮ ಕಾರಣಳಾಗುತ್ತಾಳೆ.

ಈ ಚಿಕ್ಕಮ್ಮನ ವಿಷಯ ತಿಳಿದ ನರಸಿಂಹರಾಯ ಕುಪಿತಗೊಂಡರೂ ಚಿಕ್ಕಮ್ಮನ ಸಾಹಸಕ್ಕೆ ಮೆಚ್ಚಿಕೊಳ್ಳುತ್ತಾನೆ. ಆದರೆ ಸಿರುಮನನ್ನೆದುರಿಸಿ ಅವನ ಕೋಟೆಯನ್ನು ವಶಪಡಿಸಿಕೊಳ್ಳಲೇಬೇಕೆಂದು ಪುನಃ ಭಾರಿ ಸೈನ್ಯವನ್ನು

ಕಳಿಸುತ್ತಾನೆ. ಸುಮಾರು ಒಂದು ತಿಂಗಳ ಕಾಲ ನಡೆದ ಯುದ್ಧದಲ್ಲಿ ಸಿರುಮನ ಮಕ್ಕಳೆಲ್ಲಾ ಆಹುತಿಯಾಗುತ್ತಾರೆ. ಕಡೆಗೆ ತನ್ನ ಪ್ರಾಣವನ್ನೊಪ್ಪಿಸಿದ ಸಿರುಮನೊಂದಿಗೆ ಚಿಕ್ಕಮ್ಮಕೂಡ ಕೊಂಡಕ್ಕೆ ಹಾರಿ ಮಹಾಸತಿಯೆನಿಸುತ್ತಾಳೆ.ಈ ವಿಚಾರಗಳು ಸಿರುಮನ ಕುರಿತಾದ ಕೃತಿಗಳಲ್ಲಿ ಸಿಗುತ್ತದೆ[೧೯].

## ರಾಣಿ ಮಲ್ಲಮ್ಮ

ಛತ್ರಪತಿ ಶಿವಾಜಿಯನ್ನೇ ಎದುರಿಸಿದ ಧೀರಮಹಿಳೆ ಎಂದೇ ಪ್ರಖ್ಯಾತಳಾದ ಬೆಳವಡಿಯ ಮಲ್ಲಮ್ಮ, ೧೭ನೆಯ ಶತಮಾನದಲ್ಲಿ ಪುಟ್ಟ ಪ್ರಾಂತ್ಯವೊಂದರ ನಾಯಕಿ. ಈಕೆಯ ಶೌರ್ಯ–ಸಾಹಸವನ್ನು ಕುರಿತಂತೆ ಅವಳ ಜೀವಿತಾವಧಿಯಲ್ಲಿಯೇ 'ಶಿವಾಜಿ–ಮಲ್ಲಮ್ಮಾಜಿ ಸಮರೋತ್ಸವ'ಎಂಬ ಕೃತಿಯೊಂದು ರಚಿತವಾಗಿ, ಕರವೀರಪುರದ (ಕೊಲ್ಲಾಪುರ) ಆಸ್ಥಾನದಲ್ಲಿ ಓದಲ್ಪಟ್ಟು, ಅಲ್ಲಿಯ ರಾಣಿ ತಾರಾಬಾಯಿ ಹಾಗೂ ಅಂದಿನ ಸಭಿಕರ ಪ್ರಶಂಸೆಗೆ ಒಳಗಾಗಿದೆ.

ಈ ಕೃತಿಯ ಲೇಖಕ ಶೇಷೋ ಶ್ರೀನಿವಾಸ ಮುತಾಲಿಕ, ದಿಟ್ಟತನದಿಂದ ಶಿವಾಜಿಯನ್ನೇ ಮಣಿಸಿದ ಮಲ್ಲಮ್ಮಳ ಸಾಹಸಮಯವಾದ ಕಥೆಯನ್ನು, ಶಿವಾಜಿಯ ಸೊಸೆ ತಾರಾಬಾಯಿಯ ಆಸ್ಥಾನದಲ್ಲಿ, ಶಿವಾಜಿಯ ಸರದಾರರ ಎದುರಿನಲ್ಲಿ, ಅವರು ಬಳಸುವ ಮರಾಠಿ (ಪ್ರಾಕೃತ) ಭಾಷೆಯಲ್ಲಿ ಓದಿದ್ದು ಮತ್ತೊಂದು ಮಹತ್ವದ ಸಂಗತಿಯಾಗಿದೆ.

ಶ್ರೀನಿವಾಸ ಮುತಾಲಿಕನು ಮಲ್ಲಮ್ಮನ ಬಾಲ್ಯ, ವಿದ್ಯಾಭ್ಯಾಸ ಹಾಗೂ ಅವಳ ತವರುಮನೆ ಸ್ವಾದಿ(ಸೋಂದೆ)ಯ ಮನೆತನ ಮೊದಲಾದವುಗಳ ವಿಚಾರಗಳನ್ನು ವಿವರಿಸಿರುವ ಪರಿ, ಈತ ಸ್ವಾದಿಯವನಾಗಿದ್ದು ಮಲ್ಲಮ್ಮನನ್ನು ಹತ್ತಿರದಿಂದ ಬಲ್ಲವನಾಗಿದ್ದಿರಬಹುದೆಂಬ ಸಂದೇಹ ಮೂಡಿಸುತ್ತದೆ.

ಈ ಕೃತಿಯಲ್ಲಿ ಕಂಡುಬರುವ ಯುದ್ಧದ ವರ್ಣನೆ, ಯುದ್ಧದ ಕಾರಣ, ಯುದ್ಧಾನಂತರ ಸನ್ನಿವೇಶಗಳು ಯಾವ ಉತ್ಪ್ರೇಕ್ಷೆಯೂ ಇಲ್ಲದೆ, ಸಹಜವಾಗಿ ತೋರಿಬಂದಿದೆ. ಅಲ್ಲದೆ ಮಲ್ಲಮ್ಮಳು ಹೋರಾಡಿದ ರೀತಿ, ಅವಳ ಉಡುಗೆ ತೊಡುಗೆಗಳ ವಿವರ, ಯುದ್ಧದಲ್ಲಿ ಭಾಗವಹಿಸಿದ ಎರಡು ಸಾವಿರ ಸ್ತ್ರೀ ಸೈನ್ಯ ಹಾಗೂ, ಮೂರುಸಾವಿರ ಸ್ತ್ರೀವೇಷಧಾರಿ ಪುರುಷ ಸೈನಿಕರ ವಿವರ ಮೊದಲಾದುವನ್ನು ಕಣ್ಣಾರೆ ಕಂಡಂತೆ ಬಣ್ಣಿಸಿರುವುದು, ಈ ಗ್ರಂಥಕರ್ತ ಸ್ವತಃ ಯುದ್ಧವನ್ನು ಕಂಡಿರಬಹುದೆ? ಎನಿಸುತ್ತದೆ.

ಶೇಷೋ ಮುತಾಲಿಕನು ಇಲ್ಲಿ "ಔರಂಗಜೇಬ ಬಾದಶಹನು ಮಡಿದಮೇಲೆ, ತಾರಾಬಾಯಿ ಅರಸಿಯವರು ಮಲ್ಲಮ್ಮಾಜಿಯನ್ನು ಕರವೀರ ಸಂಸ್ಥಾನಕ್ಕೆ ಕರೆತರೆಸಿಕೊಂಡು ದೊಡ್ಡ ಸತ್ಕಾರವನ್ನು ಮಾಡಿ ಕಳಿಸಿಕೊಟ್ಟರು. ಆಗ ಮಲ್ಲಮ್ಮಾಜಿಯ ಕಡೆಯಿಂದ ಯಾವ ವೃತ್ತಾಂತವನ್ನು ತಾರಾಬಾಯಿ ರಾಣಿಯವರು ಕೇಳಿದ್ದರೋ ಆ ಪ್ರಕಾರ ನಾವು ಬರೆದೆವು." ಎಂದಿದ್ದಾನೆ. ಜೊತೆಗೆ ಮಲ್ಲಮ್ಮಳೊಡನೆ ಮಾತನಾಡುತ್ತಾ ತಾರಾಬಾಯಿಯು "ನಮ್ಮ ದೆಶೆಯು (ಸ್ಥಿತಿಯು) ಮಲ್ಲಮ್ಮಾಜಿಯ ದೆಶೆಯೂ ಒಂದೇ ಎಂದು ಮೇಲಿಂದ ಮೇಲೆ ಅನ್ನುತ್ತಿದ್ದರು"[೨೦] ಎಂಬ ಮೊದಲಾದ ತಾರಾಬಾಯಿ ಹಾಗೂ ಮಲ್ಲಮ್ಮಳ ಸಂಭಾಷಣೆಯ ವಿವರಣೆಗಳನ್ನು ನೀಡಿದ್ದಾನೆ. ಎರಡು ಸಂಸ್ಥಾನಗಳ ರಾಣಿಯರು ಕುಳಿತು ಮಾತನಾಡುವ ಸಂದರ್ಭದಲ್ಲಿ ಶೇಷೋ ಮುತಾಲಿಕನು ಅವರೊಟ್ಟಿಗಿದ್ದು ಕೇಳಿಸಿಕೊಂಡಿರಬೇಕಾದಲ್ಲಿ, ಈತನು ಮಲ್ಲಮ್ಮಳಿಗೆ ಬಹಳ ಆಪ್ತನಾಗಿದ್ದಿರಬೇಕು. ಇದಕ್ಕಿಂತ ಪ್ರಮುಖವಾದ ವಿಚಾರವೆಂದರೆ ತಾರಾಬಾಯಿಗಿಂತಲೂ ಮುನ್ನ ಅಧಿಕಾರವಹಿಸಿಕೊಂಡ ಶಿವಾಜಿಯ ಮಗ ಸಾಂಬಾಜಿಯು ಬೆಳವಡಿ ಸಂಸ್ಥಾನವನ್ನು ವಶಪಡಿಸಿಕೊಳ್ಳಬೇಕೆನ್ನುವ ಹುನ್ನಾರ ನಡೆಸಿದಾಗ, ಅವನ ಸಂಚನ್ನು ಅರಿತ

ತಾರಾಬಾಯಿಯು ಮಲ್ಲಮ್ಮಳಿಗೆ ಆ ವಿಚಾರವನ್ನು ತಿಳಿಸಿ ಎಚ್ಚರಿಸಿದಳು[೨೧] ಎಂಬ ವಿಚಾರವನ್ನು ಈತ ತಿಳಿಸಿದ್ದಾನೆ. ರಾಜಕೀಯ ಗೂಢಾಚಾರ ವಿಚಾರಗಳನ್ನು ಈತ ಅರಿತಿರಬೇಕಾದಲ್ಲಿ, ಇವನು ಮಲ್ಲಮ್ಮಳ ಆಡಳಿತದಲ್ಲಿ ಯಾವುದಾದರೂ ಹುದ್ದೆಯಲ್ಲಿದ್ದಿರಬಹುದೆಂಬ ಅನುಮಾನ ಮೂಡಿಸುತ್ತದೆ. ಮುತಾಲೀಕ್ ಎಂದರೆ ಕಾರ್ಯಭಾರಿ; ಆಡಳಿತದಲ್ಲಿ ನೇಮಕಗೊಂಡ ಉದ್ಯೋಗಿ ಎಂಬ ಅರ್ಥವಿದೆ.

ಈ ಕೃತಿಯ ರಚನೆಕಾರ ಶ್ರೀನಿವಾಸ ಮುತಾಲಿಕನು ತನ್ನ ಈ ಕೃತಿಗೆ ಕೊಲ್ಲಾಪುರದ ರಾಣಿ ತಾರಾಬಾಯಿಯಿಂದ ಬಹುಮಾನವನ್ನು ಪಡೆದುಕೊಂಡಿದ್ದಾನೆ. ಈ ಕಥೆಯಲ್ಲಿ ಪೂರ್ವಾರ್ಧ ಹಾಗೂ ಉತ್ತರಾರ್ಧ' ಎಂಬ ಎರಡು ವಿಭಾಗಗಳಿದ್ದು ಈ ಎರಡರಲ್ಲಿಯೂ ಮಲ್ಲಮ್ಮಳೇ ನಾಯಕಿ.

**'ಶಿವಾಜಿ-ಮಲ್ಲಮ್ಮಾಜಿ ಸಮರೋತ್ಸವ'ದ ಸಾರಾಂಶ:** ಸ್ವಾದಿಯ ಅರಸು ಮಧುಲಿಂಗನಾಯಕ ಮತ್ತು ಅವನ ಹೆಂಡತಿ ವೀರಮ್ಮಾಜಿಗೆ ಮಕ್ಕಳಿಲ್ಲವೆಂಬ ಚಿಂತೆಯಲ್ಲಿ ಹಲವಾರು ಪೂಜೆ, ವ್ರತಗಳನ್ನು ಮಾಡಿದರು. ಕಡೆಗೆ ಸೊಪ್ಪಿ ಸಿದ್ಧಬಸವ ಎಂಬ ಯೋಗಿಗಳ ಉಪದೇಶದಂತೆ ಕಾರ್ತಿಕದೇವರ ವ್ರತವನ್ನು ಮಾಡಲು, ಸ್ವಪ್ನದಲ್ಲಿ ಒಬ್ಬ ಪುತ್ರ ಹಾಗೂ ಪುತ್ರಿಯನ್ನು ಕರುಣಿಸಿರುವುದಾಗಿ ದೈವವು ನುಡಿಯಿತು ಎಂದು ಹೇಳುತ್ತಾ ಶೇಷೋ ಮುತಾಲಿಕನು ಮಲ್ಲಮ್ಮಾಜಿಯು ದೈವಾಂಶ ಸಂಭೂತೆ ಎಂಬಂತೆ ಚಿತ್ರಿಸಿದ್ದಾನೆ.

ಶಾ.ಶ.೧೫೮೨ರಲ್ಲಿ ಮಲ್ಲಮ್ಮಳು ಜನಿಸಿದಳೆಂದು ತಿಥಿ ಪಕ್ಷ ಸಂವತ್ಸರದ ವಿವರಣೆ ನೀಡಲಾಗಿದೆ. ಅರಸನು ಸದಾಶಿವನಾಯಕ ಹಾಗೂ ಮಲ್ಲಮ್ಮಾಜಿ ಇಬ್ಬರಿಗೂ ಸರಿಸಮನಾಗಿ ವಿದ್ಯಾಭ್ಯಾಸವನ್ನು ಮಾಡಿಸುತ್ತಾನೆ. ಇವರ ವಿದ್ಯಾಭ್ಯಾಸಕ್ಕಾಗಿ ಎರಡುನೂರು ಹುಡುಗರೂ ಎರಡುನೂರು ಹುಡುಗಿಯರೂ ಇದ್ದ ದೊಡ್ಡ ಪಾಠಶಾಲೆಯನ್ನು ನಿರ್ಮಿಸಿ ಅನುಕೂಲ ಕಲ್ಪಿಸುತ್ತಾನೆ. ಹತ್ತು ವರ್ಷಗಳಲ್ಲಿಯೇ ಕನ್ನಡ, ಮರಾಠಿ, ಸಂಸ್ಕೃತ ಹಾಗೂ ಉರ್ದು ಭಾಷೆಗಳಲ್ಲಿ ಪ್ರವೀಣರಾದರು. ಮಹಾಶೂರ ರಣವೀರ ಸಿಂಗನಿಂದ ಯುದ್ಧ ಶಿಕ್ಷಣ ಪಡೆದ ಇಬ್ಬರೂ ಕುದುರೆ ಸವಾರಿ, ಭಲ್ಲೆಯನ್ನು ಹೊಡೆಯುವುದು, ಮೊದಲಾದ ಯುದ್ಧವಿದ್ಯೆಗಳಲ್ಲಿಯೂ ಪಾರಂಗತರಾದರು. ಮಲ್ಲಮ್ಮಳು ಇದರೊಂದಿಗೆ ದೈನಂದಿಕ ಚಟುವಟಿಕೆಗಳಲ್ಲಿಯೂ ಸಾಮಾನ್ಯರಂತೆ ತೊಡಗಿಕೊಳ್ಳುತ್ತಿದ್ದುದು, ಧಾರ್ಮಿಕ ಆಸಕ್ತಿ, ಗುರುಪೂಜೆ ಮೊದಲಾದವುಗಳು ವರ್ಣಿತವಾಗಿವೆ.

ಮಲ್ಲಮ್ಮಳ ಸ್ವಯಂವರ ವಿಶಿಷ್ಟ ರೀತಿಯಲ್ಲಿ ನಡೆದುದನ್ನು ಬಣ್ಣಿಸಲಾಗಿದೆ. ಯಾವ ರಾಜಕುಮಾರ ತನ್ನ ವಯಸ್ಸಿನಷ್ಟು ಸಂಖ್ಯೆಯ ಹುಲಿಗಳನ್ನು ನಿರ್ದಿಷ್ಟ ಕಾಲದಲ್ಲಿ ಭೇಟಿಯಾಡಿ ತರುವನೋ ಆತನನ್ನು ತಾನು ವರಿಸುವುದಾಗಿ ಮಲ್ಲಮ್ಮಳು ಶರತ್ತು ವಿಧಿಸಿರುತ್ತಾಳೆ. ಮಲ್ಲಮ್ಮಾಜಿಯನ್ನು ವರಿಸಲು ಸ್ವಯಂವರಕ್ಕೆ ಕೆಳದಿ, ಕೊಡಗು, ಮೈಸೂರು, ಆನೆಗುಂದಿ, ಜಯಪುರ, ಉದಯಪುರ ಮೊದಲಾದ ರಾಜ್ಯಗಳ ರಾಜಕುಮಾರರು, ಶಿವಾಜಿಯ ಇಬ್ಬರು ಮಕ್ಕಳು ಗೊತ್ತುಪಡಿಸಿದ ವೇಳೆಯಲ್ಲಿ ಹುಲಿಗಳನ್ನು ಕೊಂದು ತಂದಿರುತ್ತಾರೆ. ಇವರೊಂದಿಗೆ ಸ್ವಯಂವರಕ್ಕೆ ಬಂದಿದ್ದ ಬೆಳವಡಿಯ ಈಶಪ್ರಭು ಈ ಎಲ್ಲರಿಗಿಂತಲೂ ಹಾಗೂ ತನ್ನ ವಯಸ್ಸಿಗಿಂತಲೂ ಹೆಚ್ಚಿಗೆ ಹುಲಿಯನ್ನು ಕೊಂದು ತಂದು, ಮಲ್ಲಮ್ಮಳನ್ನು ಸ್ವಯಂವರದಲ್ಲಿ ವರಿಸುತ್ತಾನೆ.

ಮಲ್ಲಮ್ಮಳ ಮತ್ತೊಂದು ಸಾಹಸ ವಿಚಾರ ಇಲ್ಲಿ ದಾಖಲಾಗಿದೆ. ಈಶಪ್ರಭುವಿನೊಡನೆ ಪ್ರಯಾಣದಲ್ಲಿದ್ದಾಗ ಒಮ್ಮೆ ಮೇಲೆರಗಿದ ಎರಡು ಹುಲಿಗಳನ್ನು ಮಲ್ಲಮ್ಮ ಏಕಾಂಗಿಯಾಗಿ ಕೊಂದುಹಾಕಿದ ರೋಮಾಂಚಕಾರಿ ಘಟನೆಯನ್ನು ಲೇಖಕ ಬಣ್ಣಿಸಿದ್ದಾನೆ. ಮುಂದೆ ತಿಂಗಳಾನುಗಟ್ಟಲೆ ಶಿವಾಜಿಯ ಸೈನ್ಯವನ್ನು ಎದುರಿಸಿದ ಧೀರತನ ಒಮ್ಮಿಂದೊಮ್ಮೆಗೇ ಬಂದದ್ದಲ್ಲ, ಈ ಕೆಚ್ಚು ಮಲ್ಲಮ್ಮಳಿಗೆ ರಕ್ತಗತವಾಗಿತ್ತೆನ್ನುವುದನ್ನೂ, ಮಲ್ಲಮ್ಮಳು ಸಾಹಸಪ್ರಿಯೆ ಎನ್ನುವುದನ್ನೂ ಇಂಥ ಪ್ರಕರಣಗಳು ತಿಳಿಸಿವೆ.

ಪೂರ್ವಾರ್ಧದಂತೆ ಉತ್ತರಾರ್ಧದಲ್ಲಿಯೂ ಮಲ್ಲಮ್ಮನೇ ನಾಯಕಿ. ಗ್ರಂಥಕರ್ತನು ಇದನ್ನು "ಶ್ರೀ ಛತ್ರಪತಿ ಶಿವಾಜಿ ಮಹಾರಾಜರ ಸಂಗಡ ಯುದ್ಧ ಮಾಡಿ ಜಯ ಸಂಪಾದನೆ ಮಾಡಿದ ವಿಷಯವನ್ನು ಯಥಾವತ್ ಬರೆಯುತ್ತೇನೆ" ಎಂದು ಆರಂಭಿಸಿದ್ದಾನೆ.

ತಾನು ಕೃತಿ ರಚನೆಗೆ ತೊಡಗಲು ಕಾರಣವಾದ ತಾರಾಬಾಯಿಯ ಘೋಷಣೆ, ಕೃತಿಗೆ ದೊರಕಿದ ಸನ್ಮಾನ ಮೊದಲಾದವುಗಳನ್ನು ತಿಳಿಸಿ. ಶಿವಾಜಿಯ ಪಟ್ಟಾಭಿಷೇಕ, ದಕ್ಷಿಣ ಭಾರತದ ಜೈತ್ರಯಾತ್ರೆ ಮೊದಲಾದವುಗಳನ್ನು ತಿಳಿಸಿದ್ದಾನೆ. ಮರಳಿ ತನ್ನೂರಿಗೆ ಬರುವಾಗ ಹಂಪಿಯಲ್ಲಿ ಬೀಡುಬಿಟ್ಟಿದ್ದ ಶಿವಾಜಿ ಮುಂದೆ ಕೊಪ್ಪಳ, ಯಾದವಾಡ, ಧಾರವಾಡ ಮೊದಲಾದ ಕೋಟೆಗಳನ್ನು ವಶಪಡಿಸಿಕೊಂಡು ಮುಂದೆ ಬರುತ್ತಾನೆ. ಬೆಳವಡಿ ಕೋಟೆಯ ಬಳಿ ಬೀಡು ಬಿಟ್ಟಿದ್ದ ಶಿವಾಜಿಯ ಸೈನಿಕರು ಸುತ್ತಮುತ್ತಲಿನ ಊರುಗಳಲ್ಲಿನ ಆಕಳು ಹಾಗೂ ಎಮ್ಮೆಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡು ಹೋಗುತ್ತಾರೆ (ಗೋಗ್ರಹಣ/ತುರುಗೋಳ್ ನಡೆಸುವುದು ಯುದ್ಧಕ್ಕೆ ಆಹ್ವಾನ ನೀಡುವುದರ ಸಂಕೇತವೇ ಆಗಿದೆ). ಈಶಪ್ರಭುವು ತನ್ನ ದಳವಾಯಿ ಸಿದ್ಧಗೌಂಡಾಪಾಟೀಲರನ್ನು ಆಕಳನ್ನು ಕರೆತರಲು, ಶಿವಾಜಿಯ ಜೊತೆ ಮಾತನಾಡಿ ಬರಲೆಂದು ಕಳುಹಿಸುತ್ತಾನೆ. ಆದರೆ ಶಿವಾಜಿಯು ಈತನನ್ನು ಭೇಟಿಯಾಗುವುದಿಲ್ಲ, ಬದಲಿಗೆ ಶಿವಾಜಿಯ ಸೈನಿಕರು ಈತನನ್ನು ಬಹಳವಾಗಿ ಪರಿಹಾಸ್ಯಮಾಡಿ, ಅಪಮಾನಗೊಳಿಸುತ್ತಾರೆ.ಇದರಿಂದ ಕ್ರೋಧಗೊಂಡ ಈಶಪ್ರಭುವು ಯುದ್ಧದಿಂದಲೇ ಇದಕ್ಕೆ ಉತ್ತರ ನೀಡುವುದಾಗಿ ಸೈನಿಕರನ್ನು ಸಜ್ಜುಗೊಳಿಸುತ್ತಾನೆ. ಆದರೆ ಇವನನ್ನು ತಡೆದ ಮಲ್ಲಮ್ಮ ತಾನೇ ಸ್ವತಃ ಸೈನ್ಯ ತೆಗೆದುಕೊಂಡು ಹೋಗಿ ಆಕಳನ್ನು ಬಿಡಿಸಿಕೊಂಡು ಬರುವುದಾಗಿ ಹೇಳಿ, ಮಲ್ಲಮ್ಮ ತನ್ನ ಸ್ತ್ರೀಸೈನ್ಯವನ್ನು ತೆಗೆದುಕೊಂಡು ಹೊರಡುತ್ತಾಳೆ. ಸ್ತ್ರೀಯರೆಂದು ಪರಿಹಾಸ್ಯ ಮಾಡಿದ ಸೈನಿಕರಿಗೆ ಆಯುಧದಿಂದಲೇ ತಕ್ಕ ಉತ್ತರವನ್ನು ನೀಡಿ, ಶಿವಾಜಿಯ ಸೈನಿಕರು ಊಹಿಸಲೂ ಸಾಧ್ಯವಾಗದ ರೀತಿಯಲ್ಲಿ ಸಾಹಸ ತೋರುತ್ತಾಳೆ. ಶಿವಾಜಿಯ ಕಡೆಯಲ್ಲಿದ್ದ ತಮ್ಮ ಆಕಳನ್ನು ಬಿಡಿಸಿಕೊಂಡು ಬರುವುದರೊಂದಿಗೆ ಅವರ ಬಳಿಯ ೪೦೦ ಎತ್ತುಗಳನ್ನೂ ಹೊಡೆದುಕೊಂಡು ಬರುತ್ತಾಳೆ. ಈ ವಿಜಯೋತ್ಸವವನ್ನು ಹಳ್ಳಿಹಳ್ಳಿಗಳಲ್ಲಿಯೂ ಆಚರಿಸಲು, ಶಿವಾಜಿ ಅಪಮಾನಗೊಂಡು ಬೆಳವಡಿಯನ್ನು ವಶಪಡಿಸಿಕೊಳ್ಳಲು ತನ್ನ ಸೈನಿಕರಿಗೆ ತಿಳಿಸುತ್ತಾನೆ. ಶಿವಾಜಿ ಕಡೆಯ ಸೈನಿಕರು ಬೆಳವಡಿ ಕೋಟೆಯ ಸುತ್ತಲೂ ಬೀಡುಬಿಡಲು, ಈಶಪ್ರಭು ಕೋಟೆಯ ಬಾಗಿಲನ್ನು ಭದ್ರಪಡಿಸಿ, ಸ್ವಾದಿಯ ಸದಾಶಿವನಾಯಕನಿಗೂ, ಹೂಲಿಮಠದ ಗುರುಮಹಾರಾಜರಿಗೂ ಸಹಾಯ ಕೋರಿ ಪತ್ರ ಬರೆಯುತ್ತಾನೆ. ಕೋಟೆಯ ಮೇಲಿಂದ ಮರಾಠ ಸೈನಿಕರಮೇಲೆ ಗುಂಡಿನ ಮಳೆಗರೆದು ಕೆಲಕಾಲ ನಿಯಂತ್ರಣದಲ್ಲಿರಿಸಿದನಾದರೂ, ದಿನಗಳುರುಳಿದಂತೆ ಕೋಟೆಯ ಒಳಗಿನ ಮದ್ದುಗುಂಡು ಹಾಗೂ ಆಹಾರ ಸಾಮಗ್ರಿಗಳು ಮುಗಿಯುತ್ತಾ ಬರುತ್ತದೆ. ಸ್ವಾದಿ ದೂರದ ಹಾದಿಯಿದ್ದುದರಿಂದ ಕೂಡಲೇ ಸಹಾಯ ಒದಗಿಬರುವುದಿಲ್ಲ. ಹೂಲಿ ಗುರುರಾಯರು ಎಲ್ಲ ಪಾಟೀಲರಿಗೂ ಸರದಾರರಿಗೂ ದೇಸಾಯಿಗಳಿಗೂ ಶಿವಾಜಿಯ ವಿರುದ್ಧ ಬೆಳವಡಿಗೆ ಸಹಾಯ ಮಾಡಲು ಆದೇಶ ನೀಡಿದರೂ, ಶಿವಾಜಿಗೆ ಹೆದರಿ ಅವರಾರೂ ಸಹಾಯಕ್ಕೆ ಬರುವುದಿಲ್ಲ. ಕೋಟೆಯ ಒಳಗಿನ ಆಹಾರ ಸಾಮಗ್ರಿಗಳು ಸಂಪೂರ್ಣವಾಗಿ ಬರಿದಾಗುತ್ತಾ ಬರಲು, ಬೇರೆ ದಾರಿಕಾಣದ ಈಶಪ್ರಭು ಕೋಟೆಯ ಬಾಗಿಲನ್ನು ತೆರೆದು ಮರಾಠೆ ಸೈನ್ಯವನ್ನೆದುರಿಸಲಾರಂಭಿಸುತ್ತಾನೆ. ಮಲ್ಲಮ್ಮ ಸಹ ಸೈನ್ಯವನ್ನು ತೆಗೆದುಕೊಂಡು ಮತ್ತೊಂದು ಭಾಗದಲ್ಲಿ ಯುದ್ಧಕ್ಕೆ ನಿಲ್ಲುತ್ತಾಳೆ. ಈ ಸಮರದಲ್ಲಿ ಮಲ್ಲಮ್ಮ ಮರಾಠೆ ಸೈನ್ಯವನ್ನು ಹಿಂದಿರುಗಿಸುವಲ್ಲಿ ಯಶಸ್ಸು ಕಂಡರೆ, ಈಶಪ್ರಭು ಮಾರಣಾಂತಿಕ ಗಾಯಗೊಂಡು, ಬೆಳವಾಡಿಗೆ ಮರಳಿ ಸಾವನ್ನಪ್ಪುತ್ತಾನೆ. ಮರಣ ಶಯ್ಯೆಯಲ್ಲಿದ್ದ ಪತಿಗೆ ನಾಡನ್ನು ರಕ್ಷಿಸುವುದಾಗಿ ಭಾಷೆ ನೀಡಿದ್ದ ಮಲ್ಲಮ್ಮ ಯುದ್ಧವನ್ನು ಮುಂದುವರಿಸುವ ಸಂಕಲ್ಪ ಮಾಡಿದಳು. ಹೂಲಿಯ ಗುರುರಾಯರ ಸಲಹೆಯ ಮೇರೆಗೆ ಬೆಳವಡಿಯ ಸಮೀಪದ ಲೋಕೂರಿನಲ್ಲಿ ದ್ಯಾಮವ್ವ ಹೆಸರಿನ ಜಗದಂಬೆಯ ದರ್ಶನಕ್ಕೆ ಬಂದ ಶಿವಾಜಿಯನ್ನು ಮಲ್ಲಮ್ಮಳು ತನ್ನ ಸ್ತ್ರೀ ಸೈನ್ಯದೊಡನೆ ಸುತ್ತುವರಿಯುತ್ತಾಳೆ. ಮಲ್ಲಮ್ಮಳಿಗೆ ಸಂಪೂರ್ಣ ಶರಣಾದ ಶಿವಾಜಿಯು ಮಲ್ಲಮ್ಮಳನ್ನು ಸಾಕ್ಷಾತ್ ಭವಾನಿಯೆಂಬಂತೆ ಸ್ತುತಿಸಿದನು, ಅವಳನ್ನು ತನ್ನ ತಾಯಿ ಜೀಜಾಬಾಯಿ ಎಂಬಂತೆಯೇ ಕಂಡು, ಅವಳ ಪತಿಯನ್ನು ಕೊಂದ ಸರದಾರನನ್ನು ಶಿಕ್ಷಿಸಿ ಅವಳ ವಶಕ್ಕೆ

ಬಿಡುವುದಾಗಿ ತಿಳಿಸಿ, ತಾನು ಮಾಡಿದ ಅಪರಾಧಕ್ಕೆ ಯಾವ ಶಿಕ್ಷೆ ನೀಡಿದರೂ ಪಾಲಿಸುತ್ತೇನೆಂದು ಕೋರಿಕೊಳ್ಳುತ್ತಾನೆ. ಕಾಲಿಗೆರಗಿದ ಶಿವಾಜಿಯನ್ನು ಮಲ್ಲಮ್ಮ ಉದಾರ ಮನಸ್ಸಿನಿಂದ ಕ್ಷಮಿಸುತ್ತಾಳೆ. ಯುದ್ಧವು ಇಲ್ಲಿ ಮುಕ್ತಾಯ ಗೊಂಡಿದ್ದರೂ ಬೆಳವಡಿಯ ರಣರಂಗದಲ್ಲಿನ ಸೈನಿಕರಿಗೆ ಸುದ್ದಿ ತಲುಪಿಸುವುದು ತಡವಾಗಿ ಅಲ್ಲಿ ಯುದ್ಧ ಆರಂಭವಾಗಿರುತ್ತದೆ. ಶಿವಾಜಿಯ ಎದುರು ಮಲ್ಲಮ್ಮಳ ವಿಜಯ ಸಾಧಿಸಿಯಾಗಿತ್ತಾದರೂ ಇಲ್ಲಿ ನಡೆಯುತ್ತಿದ್ದ ಯುದ್ಧದಿಂದಾಗಿ ಬೆಳವಡಿಗೆ ಮರಳುತ್ತಿದ್ದ ಮಲ್ಲಮ್ಮಳನ್ನು ಶಿವಾಜಿಯ ಸೈನಿಕರು ಮುತ್ತುತ್ತಾರೆ. ಆಗ ರಾಣಿಯು ಪ್ರತಿ ಧಾಳಿಯನ್ನು ನಡೆಸಿ ಧನಾಜಿ ಮೊದಲಾದ ಸರದಾರರನ್ನು ಕುದುರೆಯಿಂದ ಕೆಳಗುರುಳಿಸಿ ಘಾಸಿಗೊಳಿಸುತ್ತಾಳಾದರೂ ಮಲ್ಲಮ್ಮನ ಕಡೆಯ ಗೌರಮ್ಮ ಮೊದಲಾದವರು ಅಸುನೀಗುತ್ತಾರೆ. ಈ ಸಂದರ್ಭದಲ್ಲಿ ಶಿವಾಜಿಯ ಕಡೆಯಿಂದ ಶಾಂತಿ ಬಾವುಟವನ್ನು ಹಿಡಿದ ಕೆಲವು ಸೈನಿಕರು ಬಂದು ಯುದ್ಧವನ್ನು ನಿಲ್ಲಿಸುವ ಆದೇಶದೊಂದಿಗೆ ಮಲ್ಲಮ್ಮಳಿಗಾಗಿ ಪಲ್ಲಕ್ಕಿಯನ್ನೂ ತರುತ್ತಾರೆ. ಪುನಃ ಮಲ್ಲಮ್ಮಳ ಕ್ಷಮೆಕೋರಿದ ಶಿವಾಜಿ ಇವಳ ರಾಜ್ಯದಲ್ಲಿ ಇವಳನ್ನು ಸಂಸ್ಥಾಪಿಸಿ, ಬೇರಾವ ತೊಂದರೆ ಒದಗಿದರೂ ರಕ್ಷಣೆ ನೀಡುವುದಾಗಿ ಭರವಸೆ ನೀಡಿ ಹಿಂದಿರುಗುತ್ತಾನೆ. ಮುಂದೆ ರಾಜಧಾನಿಗೆ ಮರಳಿದ ಶಿವಾಜಿ ಒಂದೆರಡು ವರ್ಷಗಳಲ್ಲಿ ಕ್ರಿ.ಶ.೧೬೮೦ರ ರೌದ್ರನಾಮ ಸಂವತ್ಸರದಲ್ಲಿ ಅಸುನೀಗುತ್ತಾನೆ. ಮಲ್ಲಮ್ಮಾಜಿಯು ಕ್ರಿ.ಶ.೧೭೧೭ನೆಯ ಸಂವತ್ಸರದಲ್ಲಿ ಇಹಲೋಕಯಾತ್ರೆಯನ್ನು ಮುಗಿಸಿದಳೆಂಬಲ್ಲಿಗೆ ಕೃತಿಯು ಮುಕ್ತಾಯವಾಗುತ್ತದೆ.

**ಸ್ತ್ರೀ ಸೈನ್ಯ:** ಯುದ್ಧಕ್ಕೆ ಹೊರಟ ರಾಣಿಯ ಯುದ್ಧ ವೇಷವು ಇಲ್ಲಿ ಬಣ್ಣಿತವಾಗಿದೆ. "ಸೀರೆಯ ಅಂಚನ್ನು ಬಲಗಡೆಯ ಭುಜದ ಮೇಲಿಂದ ತಂದು ಸೊಂಟಕ್ಕೆ ಕಟ್ಟಿ, ಮೇಲೆ ಒಂದು ಟೊಂಕದ ಪಟ್ಟಿಯನ್ನು ಹಾಕಿದಳು. ಕಬ್ಬಿಣದ ಕವಚದ ಮೇಲೆ ಜರಿದ ಕುಪ್ಪುಸವನ್ನು ತೊಟ್ಟಳು. ತಲೆಯ ಮೇಲೆ ಶಿರಸ್ತ್ರಾಣವನ್ನು ಇಟ್ಟು ತನ್ನ ಪತಿದೇವನ ಕಿರೀಟವನ್ನು ಧರಿಸಿದಳು. ಕೈಯಲ್ಲಿ ಖಡ್ಗವನ್ನೂ ಹಾಗೂ ಭಲ್ಲೆಯನ್ನು ತೆಗೆದುಕೊಂಡಳು". ಹೀಗೆ ಶಿವಾಜಿಯ ಸೈನ್ಯವನ್ನೆದುರಿಸಲು ಎರಡುಸಾವಿರ ಸ್ತ್ರೀಸೈನ್ಯವನ್ನೂ, ಮೂರುಸಾವಿರ ಸ್ತ್ರೀವೇಷಧಾರಿ ಪುರುಷರ ಸೈನ್ಯವನ್ನು ತೆಗೆದುಕೊಂಡು ಹೊರಟ ಚಿತ್ರಣವನ್ನು ಶ್ರೀನಿವಾಸ ಮುತಾಲಿಕನು ನೀಡುತ್ತಾನೆ.

"ಹನ್ನೆರಡು ವರ್ಷಗಳ ವಯಸ್ಸಿನಲ್ಲಿಯೆ ಮಲ್ಲಮ್ಮಾಜಿ ಎಲ್ಲರಿಗಿಂತ ಮೇಧಾವಿ ಯೆನಿಸಿಕೊಂಡು ಕನ್ನಡ ಸಂಸ್ಕೃತದಲ್ಲಿ ಕವಿತೆಯನ್ನು ರಚಿಸುವ ಸಾಮರ್ಥ್ಯ ಹೊಂದಿದ್ದಳು" ಎಂದು ಹೇಳಿರುವ ಈ ಗ್ರಂಥಕರ್ತನ ಹೇಳಿಕೆಯು ಮಲ್ಲಮ್ಮಳು ಯಾವುದಾದರೂ ಕೃತಿಯನ್ನು ರಚಿಸಿರಬಹುದೇ ಎಂಬ ಅನುಮಾನ ಮೂಡಿಸುತ್ತದೆ. ಇದಕ್ಕೆ ಪೂರಕವಾಗಿ ಯ.ರು.ಪಾಟೀಲರು ಮಲ್ಲಮ್ಮಳು 'ರಟ್ಟಾನ್ವಯ ಚರಿತಾಮೃತ' ಎಂಬ ಸಂಸ್ಕೃತ ಕೃತಿಯನ್ನು ರಚಿಸಿದ್ದಾಳೆ ಎಂದು ತಿಳಿಸಿದ್ದಾರೆ[೨೨]. ಆದರೆ ಲಭ್ಯವಿಲ್ಲದ ಈ ಕೃತಿಯನ್ನು ಕುರಿತಾಗಿ ಬೇರಾವ ಕವಿಯೂ ಉಲ್ಲೇಖಿಸದಿರುವುದರಿಂದ ಇದರ ಕುರಿತಾಗಿಹೆಚ್ಚಿನ ಮಾಹಿತಿ ದೊರಕುವುದಿಲ್ಲ.

ಬೆಳಗಾವಿಯ ಸುತ್ತಮುತ್ತಲ ಪ್ರದೇಶದಲ್ಲಿ ಕಂಡುಬರುವ ಮಲ್ಲಮ್ಮನ ಚಿತ್ರವಿರುವ ಕೆಲವು ವೀರಗಲ್ಲುಗಳು, ಮಲ್ಲಮ್ಮಳ ಜೀವಿತಾವಧಿಯಲ್ಲಿ ಸ್ವತಃ ರಾಣಿ ತಾರಾಬಾಯಿಯೇ ಹಾಕಿಸಿದ ಸ್ಮಾರಕ ಕಲ್ಲುಗಳುಗಳಾಗಿವೆ ಎಂಬ ವಿಚಾರವನ್ನು ಈ ಗ್ರಂಥಕರ್ತ ತಿಳಿಸಿದ್ದಾನೆ.

ಶೇಷೋ ಶ್ರೀನಿವಾಸ ಮುತಾಲಿಕನು ರಚಿಸಿರುವ ಈ ಕೃತಿಯು, ಪ್ರಾಕೃತದಿಂದ ಅನುವಾದ ಮಾಡಲಾದ ಗದ್ಯಕೃತಿಯಾಗಿದ್ದರೂ, ಇದು ಬೆಳವಡಿಯ ಮಲ್ಲಮ್ಮನನ್ನು ಸಂಪೂರ್ಣವಾಗಿ ಪರಿಚಯಿಸುವ ಮಹತ್ವದ ಕೃತಿಯಾಗಿದೆ.

ಮಲ್ಲಮ್ಮಳನ್ನು ಕುರಿತು ರಚಿತವಾಗಿರುವ ವಿಭಿನ್ನ ಕೃತಿಗಳಲ್ಲಿ, ಕೆಲವು ಶಿವಾಜಿಯೊಡನೆ ನಡೆದ ಯುದ್ಧದಲ್ಲಿ ಈಕೆ ಗೆದ್ದಳೆಂದು ತಿಳಿಸಿದ್ರೆ, ಮತ್ತೆ ಕೆಲವು ಸೋತಳೆಂದೂ, ಇನ್ನೂ ಕೆಲವು ಯುದ್ಧವೇ ಜರುಗಲಿಲ್ಲವೆಂದು ತಿಳಿಸಿವೆ.

ಆದರೆ ಈ ಕೃತಿಯು ಸಮಗ್ರ ವಿಚಾರವನ್ನು ವಿಸ್ತಾರವಾಗಿ ತಿಳಿಸುತ್ತಾ ಮೊದಲ ಯುದ್ಧದಲ್ಲಿ ಮಲ್ಲಮ್ಮ ಗೆದ್ದರೂ, ನಂತರ ಪತಿಯನ್ನು ಕಳೆದುಕೊಳ್ಳುವಲ್ಲಿ ಸೋಲುತ್ತಾಳೆ, ಮುಂದೆ ಯುದ್ಧ ಮುಂದುವರೆಸಿದಾಗ ಗುರುಗಳ ಸಲಹೆಯ ಮೇರೆಗೆ ದೇವಾಲಯದ ಬಳಿ ಶಿವಾಜಿಯನ್ನು ಭೇಟಿಮಾಡಿದಾಗ, ಅವನಿಂದ ಭವಾನಿ ಸ್ವರೂಪಳೆಂದೂ, ತನ್ನ ತಾಯಿಯ ಪ್ರತಿರೂಪಳೆಂದು ಕರೆಸಿಕೊಂಡು ಗೌರವಕ್ಕೆ ಪಾತ್ರಳಾದ ವಿಚಾರ ಚಿತ್ರಿತವಾಗಿ ಹಲವಾರು ಗೊಂದಲಗಳನ್ನು ಬಗೆಹರಿಸುವಲ್ಲಿ ಈ ಕೃತಿಯು ಸಹಕಾರಿಯಾಗಿದೆ.

**ಅಬ್ಬಕ್ಕ**

ಈ ಮೇಲೆ ಉಲ್ಲೇಖಿಸಿರುವ ಅರಸಿಯರ ಕುರಿತಾದ ಕಾವ್ಯಗಳಿಗಿಂತ ಭಿನ್ನವಾದ ಪದ್ಯವೊಂದು ಚೌಟರಾಣಿ ಅಬ್ಬಕ್ಕಳ ಕುರಿತಾಗಿ ರಚಿತವಗಿರುವುದು ವಿಶೇಷ ವೆನಿಸುತ್ತದೆ. ಈ ಪದ್ಯವನ್ನು ರಚಿಸಿರುವವನು ವಿದೇಶಿ ಕವಿ. ಈತ ಇಟಲಿ ದೇಶದಿಂದ ಬಂದ ಪ್ರವಾಸಿ.

ಅಬ್ಬಕ್ಕಳ ಯಶೋಗಾಥೆಯನ್ನು ಕೇಳಿ ತಿಳಿದುಕೊಂಡು, ಅವಳನ್ನು ಭೇಟಿಯಾಗಲೇ ಬೇಕೆಂದು ಕರ್ನಾಟಕದ ಕರಾವಳಿ ತೀರಕ್ಕೆ ಬಂದ ಈತ, ಅರಸಿಯನ್ನು ಕಂಡ ಮೇಲೆ ತನಗಾದ ಆಶ್ಚರ್ಯ ಬಣ್ಣಿಸಿದ್ದಾನೆ. ಸಾಧಾರಣ ಸ್ತ್ರೀ ವೇಷಭೂಷಣಗಳಲ್ಲಿದ್ದ ಈಕೆಯನ್ನು, ಕೆಲಸಗಾರರ ನಡುವೆ ನಿಂತು ಸ್ವತಃ ಕಾರ್ಯ ವೀಕ್ಷಣೆ ನಡೆಸುತ್ತಿದ್ದುದನ್ನು ಕಂಡ. ಇವಳ ಕೆಲಸ–ಕಾರ್ಯ, ದಿನಚರಿಗಳನ್ನು ಕೇಳಿ ತಿಳಿದುಕೊಂಡ. ಐಶ್ವರ್ಯ, ಅಧಿಕಾರದಿಂದ ದರ್ಪ ತೋರಿ ಹೆಸರು ಮಾಡದೆ, ತನ್ನ ಕಾರ್ಯಸಾಧನೆ, ಸಾಹಸಗಳಿಗೆ ಹೆಸರುವಾಸಿಯಾಗಿದ್ದಾಳೆಂಬುದನ್ನು ಮನಗಂಡ.

ಉಲ್ಲಾಳದ ರಾಣಿಯ ಕಾರ್ಯ ವೈಖರಿಯನ್ನು ಕಂಡ ದೆಲ್ಲಾವೆಲ್ಲೆ “ನನಗೆ ಪರ್ಷಿಯಾದ ರಾಜ ಷಾ ಅಬ್ಬಾಸನ ನೆನಪಾಯಿತು. ಈ ರಾಣಿಯು ಷಾ ಅಬ್ಬಾಸನಂತಹ ಮನಸ್ಸಿನವಳೆಂದು ಭಾವಿಸಿದೆ. ಅವನಷ್ಟೇ ಚಟುವಟಿಕೆ ಹಾಗೂ ದಿಟ್ಟ ವರ್ತನೆಯನ್ನು ಈ ರಾಣಿ ಯುದ್ಧ ಹಾಗೂ ಮತ್ತಿತರ ಪ್ರಾಮುಖ್ಯ ವಿಚಾರಗಳಲ್ಲಿ ಎತ್ತಿ ತೋರಿಸಿದ್ದಾಳೆ. ರಾತ್ರಿ ಹೊತ್ತು ತನ್ನ ಪ್ರಜೆಗಳಿಗೆ ಭೇಟಿಯನ್ನಿತ್ತು, ಅವರ ಅಹವಾಲುಗಳನ್ನು ಕೇಳುವುದರಲ್ಲಿ ನಿರತಳಾಗಿರುತ್ತಾಳೆಂದು ತಿಳಿಯಿತು”[೨೩]

ಉಲ್ಲಾಳದ ರಾಣಿಯ ಕುರಿತಾಗಿ ಮೆಚ್ಚುಗೆಯ ಮಾತುಗಳನ್ನಾಡಿದ ಪ್ರವಾಸಿ ದೆಲ್ಲಾವೆಲ್ಲೆ ಕವನವನ್ನೂ ರಚಿಸಿದ್ದಾನೆ. ಈಕೆಯನ್ನು ಕುರಿತು ರಚಿಸಿರುವ ಕವನದ ಇಂಗ್ಲಿಷ್ ಭಾವಾನುವಾದವನ್ನು ಪ್ರವಾಸಿ ಕಂಡ ಇಂಡಿಯ ಕೃತಿ ರಚಿಸಿರುವ ನಾಗೇಗೌಡರು ಈ ರೀತಿ ನೀಡಿದ್ದಾರೆ:

You are black but comely,
and all India and the Orient now bow down before your courage,
O! famous great Queen of Ulala as victorious in war as in love;
Sallo King of Bangher, driven by you from his kingdom,
and likewise the neighbouring Potugese armies,
whose ruin was brought about by your justly kindled wrath but this hand, which with lethal weapons has often destroyed lances and countless soldiers,
weaponless also divides souls from bodies; but so sweetly,
that the captured and the conquered, to save their lives,
give themselves up as willing spoil to her who kills them.

ಪೋರ್ಚುಗೀಸರನ್ನು ದಿಟ್ಟತನದಿಂದ ಮಣಿಸಿದ ರಾಣಿ ಅಬ್ಬಕ್ಕಳ ವ್ಯಾಪಾರ, ಯುದ್ಧ ಕುರಿತಾದ ಕೆಲವು ಮಾಹಿತಿಗಳು ಪೋರ್ಚುಗೀಸರ ದಾಖಲೆಗಳಲ್ಲೂ ದೊರಕುತ್ತವೆ. ಚೌಟ ಅರಸು ಮನೆತನದಲ್ಲಿ ಇದೇ ಹೆಸರಿನ

ಹಲವಾರು ಅರಸಿಯರು ಆಳ್ವಿಕೆ ನಡೆಸಿದ್ದು, ಅಬ್ಬಕ್ಕಳ ಕುರಿತಾಗಿ ಅನೇಕ ಗೊಂದಲಗಳಿಗೆ ಕಾರಣವಾಗಿವೆ, ಇವಳ ಕುರಿತಾದ ಸ್ಪಷ್ಟಮಾಹಿತಿಗೆ ಇತಿಹಾಸಕಾರರು ದೆಲ್ಲಾವೆಲ್ಲೆಯ ಲೇಖನವನ್ನು ಮುಖ್ಯ ಆಕರವಾಗಿ ಅವಲಂಬಿಸಿದ್ದಾರೆ. ಚರಿತ್ರೆಯಲ್ಲಿ ಮರೆತುಹೋಗುತ್ತಿದ್ದ ಅರಸಿಯೋರ್ವಳ ವಿಚಾರ ಪ್ರವಾಸಿಯೊಬ್ಬನ ಲೇಖನದಿಂದ ಉಳಿದು ಬಂದಿದೆ.

## ಸಂಸ್ಕೃತ ಸಾಹಿತ್ಯದಲ್ಲಿನ ಕರ್ನಾಟಕದ ಅರಸಿಯರು

ಕರ್ನಾಟಕದ ಅರಸು ಮನೆತನದ ಪೋಷಣೆಯಲ್ಲಿ ಸಂಸ್ಕೃತ ಸಾಹಿತ್ಯವೂ ಹುಲುಸಾಗಿ ಬೆಳೆದು ಬಂದಿದೆ. ಅನೇಕ ಐತಿಹಾಸಿಕ ಮಹತ್ವವನ್ನು ಪಡೆದ ಸಂಸ್ಕೃತ ಕಾವ್ಯಗಳೂ ಕೂಡ ಕನ್ನಡದ ರಾಣಿಯರನ್ನು ವಿಶೇಷವಾಗಿ ಹಲವಾರು ರಾಜಕುಮಾರಿಯರನ್ನು ಕುರಿತು ತಿಳಿಸುತ್ತವೆ. ಇಲ್ಲಿನ ಕೆಲವೊಂದು ಪ್ರಕರಣಗಳು ಸುಂದರ ಕಾವ್ಯವಾಗಿ ಹೊರಹೊಮ್ಮಲು ಪ್ರೇರೇಪಿಸಿದೆ.

### ರಾಣಿ ಸುಶೀಲೆ

ಸಾಧಾರಣವಾಗಿ ರಾಜಮನೆತನಗಳಲ್ಲಿ ಹಿರಿಯ ಮಗನಿಗೆ ಪಟ್ಟಕಟ್ಟುವ ಪರಂಪರೆ ಬೆಳೆದುಬಂದಿರುವುದನ್ನು ಕಾಣುತ್ತೇವೆ. ಆದರೆ ಕರ್ನಾಟಕದ ಕರಾವಳಿಯ ಕೆಲವು ರಾಜಮನೆತನಗಳಲ್ಲಿ ಹೆಣ್ಣುಮಕ್ಕಳಿಗೇ ಅಧಿಕಾರ ನೀಡುವ ಸಂಪ್ರದಾಯ ವಿಶೇಷವೆನಿಸುತ್ತದೆ. ಇಂಥ ವಿಶೇಷ ಆಚರಣೆ ನಡೆಸಿಕೊಂಡು ಬಂದಿರುವ ಮನೆತನವಾದ ಕುಂಬಳೆ ಅರಸು ಮನೆತನದ ವಿಚಾರವನ್ನು ತಿಳಿಸುವ ೧೩ನೆಯ ಶತಮಾನದ ಸಂಸ್ಕೃತ ಕೃತಿ 'ವೇಲಾಪುರ ಮಹಾತ್ಮ್ಯ'. ಈ ಕೃತಿಯಲ್ಲಿ ಈ ಕುಂಬಳೆ ಅರಸುಮನೆತನದ ಮೊದಲ ರಾಣಿ ಸುಶೀಲೆಯ ಜೀವನ ಚರಿತ್ರೆ ಚಿತ್ರಿತವಾಗಿದೆ. ಉಪ್ಪಳ ಸಮೀಪದ ಐಲ ದುರ್ಗಾಪರಮೇಶ್ವರೀ ದೇವಸ್ಥಾನದ ವಿಚಾರವನ್ನು ತಿಳಿಸುವ ಈ ಕೃತಿಯಲ್ಲಿ ಕದಂಬದೊರೆ ಮಯೂರ ಶರ್ಮನ ಮಗ ಚಂದ್ರಾಂಗದ, ಮಗಳು ಸುಶೀಲೆಯ ವಿಚಾರ ಹಾಗೂ ಇವಳಿಂದ ಮುಂದುವರೆದ ಕುಂಬಳೆ ರಾಜಮನೆತನದ ವಿಚಾರವಿದೆ. ತೀರ್ಥಯಾತ್ರೆಗೆಂದು ತಂದೆಯೊಡನೆ ತೆರಳಿ ಹಿಂದಿರುಗುವಾಗ, ಕುಂಬಳೆ ಹೊಳೆಯ ದಡದಲ್ಲಿ ಅನಾರೋಗ್ಯಪೀಡಿತಳಾಗುತ್ತಾಳೆ. ಯಾರಿಗೂ ಗುಣಪಡಿಸಲಾಗದ ಇವಳ ಕಾಯಿಲೆಯನ್ನು ಬ್ರಾಹ್ಮಣನೊಬ್ಬನು ಗುಣಪಡಿಸುತ್ತಾನೆ. ದೊರೆಯು ಅವನಿಗೇ ತನ್ನ ಮಗಳನ್ನು ಕೊಟ್ಟು ಮದುವೆಮಾಡಿ ತುಳುನಾಡಿನ ಒಡೆತನವನ್ನು, ಮೂವತ್ತೆರಡು ಗ್ರಾಮಗಳನ್ನು ಕೊಡುತ್ತಾನೆ. ಆದರೆ ಅಧಿಕಾರ ಮಾತ್ರ ಹೆಣ್ಣುಮಗಳದೇ ಆಗಿರುತ್ತದೆ. ಅಲ್ಲದೆ ಮುಂದೆಯೂ ಕೂಡ ಈ ವಂಶದ ಮೊದಲನೆಯ ಮಗಳಿಗೆ ಅಧಿಕಾರ ದೊರೆಯುವುದು ಹಾಗೂ ಇವಳ ಮಗ ಸಿಂಹಾಸನವನ್ನೇರುವನು, ಇವನ ನಂತರ ಈತನ' ಮೊದಲನೆಯ ಮಗಳು ಅಧಿಕಾರ ಪಡೆಯುವಳು. ಹೀಗೆ ಈ ಮನೆತನದ ಸಂಪ್ರದಾಯ ನಡೆದುಕೊಂಡು ಬಂದಿದೆ. ಪ್ರಬಲ ರಾಜಮನೆತನವಾಗಿ ಕಾಣಿಸಿಕೊಂಡ ಸಂದರ್ಭದಲ್ಲಿಯೂ ಕೂಡ ಮನೆತನದ ಈ ಸಂಪ್ರದಾಯಕ್ಕೆ ಚ್ಯುತಿ ಬಂದಿಲ್ಲದಿರುವುದು ವಿಶೇಷ. ಕವಿಸಿಂಹನು ಪಯಸ್ವಿನೀ ನದಿಯ ತಟದಲ್ಲಿ ಪಾಂಡ್ಯನೊಡನೆ ನಡೆದ ಘೋರ ಯುದ್ಧದಲ್ಲಿ ಅವನನ್ನು ಸೋಲಿಸಿ ಸೆರೆಹಿಡಿದು ತಾಯ ಪಾದಕ್ಕೊಪ್ಪಿಸಿದ ಹಾಗೂ ರಾಣಿಯು ಅವನನ್ನು ಮನ್ನಿಸಿ ಕಳುಹಿಸಿಕೊಟ್ಟ ಉಲ್ಲೇಖಗಳು ಐತಿಹಾಸಿಹ ಘಟನೆಗಳಾಗಿವೆ, ಅಲ್ಲದೆ ಇದು ರಾಣಿಗಿದ್ದ ಅಧಿಕಾರವನ್ನು ಕುರಿತು ತಿಳಿಸುತ್ತದೆ.

ಕರ್ನಾಟಕದಲ್ಲಿ ಅಳಿಯಕಟ್ಟಿನ ಸಂಪ್ರದಾಯವನ್ನು ರೂಢಿಸಿಕೊಂಡ ಪ್ರಾಚೀನ ಉಲ್ಲೇಖ ದೊರಕುವುದು ಈ ಅರಸು ಮನೆತನದಲ್ಲಿಯೇ. ಬ್ರಿಟೀಶ್‌ರಿಂದ ಸ್ವಾತಂತ್ರ ಪಡೆಯುವವರೆಗೂ, ಕುಂಬಳೆ ಪ್ರದೇಶದ ಅಧಿಕಾರವನ್ನು

ನಡೆಸಿಕೊಂಡು ಬಂದ ಈ ಅರಸುಮನೆತನದಲ್ಲಿ ಇಂದಿಗೂ ಮನೆತನದ ಕಾರ್ಯಕ್ರಮವಾಗಿ ಹಿರಿಯ ಮಗಳಿಗೆ ಅಧಿಕಾರ ಹಸ್ತಾಂತರ ವಿಧಿ ನಡೆಯುತ್ತಲೇ ಬಂದಿದೆ.

ಅರಸಿಯೋರ್ವಳಿಗಾಗಿ ಹೊಸ ರಾಜಮನೆತನ ಸ್ಥಾಪಿತವಾದದ್ದಲ್ಲದೆ, ಮುಂದಿನ ಉತ್ತರಾಧಿಕಾರಿಯೂ ಹೆಣ್ಣುಮಗಳೇ ಆಗುವ ಸಂಪ್ರದಾಯವನ್ನು ಕುರಿತು ತಿಳಿಸುವ 'ವೇಲಾಪುರ ಮಹಾತ್ಮೆ' ಯು ಮಹತ್ವದ ಕೃತಿಯೆನಿಸಿದೆ. ಸಂಸ್ಕೃತ ಭಾಷೆಯಲ್ಲಿರುವ ಈ ಕೃತಿಯ ಕಥಾಭಾಗವು, ಕರಾವಳಿ ತೀರದಲ್ಲಿ ಆಡುಭಾಷೆಯಲ್ಲಿ, ಯಕ್ಷಗಾನ ಪ್ರಯೋಗಗಳಲ್ಲಿಯೂ ಜನಪ್ರಿಯವಾಗಿರುವುದನ್ನು ಕಾಣುತ್ತೇವೆ.

## ಮೃಣಾಳವತಿ

ಸಂಸ್ಕೃತಕವಿ ಮೇರುತುಂಗ (ಕ್ರಿ.ಶ.೧೩೦೬) ತನ್ನ ಕೃತಿ **'ಪ್ರಬಂಧಚಿಂತಾಮಣಿ'**ಯಲ್ಲಿ ಸಾಕಷ್ಟು ಐತಿಹಾಸಿಕ ವಿಚಾರಗಳನ್ನು ತಿಳಿಸಿದ್ದಾನೆ. ಶಕಪುರುಷ ವಿಕ್ರಮಾದಿತ್ಯ, ಶಾತವಾಹನರು, ಅನಿಲವಾಡದ ಚಾಲುಕ್ಯರು, ಭೋಜರಾಜ ಮತ್ತು ಮುಂಜರಾಜ, ವಘೇಲರಾಜರಾದ ಲವಣಪ್ರಸಾದ ಮತ್ತು ವೀರಧವಳ ಇವರ ಮಂತ್ರಿಗಳು, ಇದರೊಂದಿಗೆ ಬರುವ ಇತರ ಪ್ರಸ್ತಾವನೆಗಳಲ್ಲಿ ಭರ್ತೃಹರಿಯ ವಿಚಾರವೂ ಇದೆ.

ಈ ಪ್ರಕಾರವಾಗಿ ಅನೇಕ ಐತಿಹಾಸಿಕ ವ್ಯಕ್ತಿಗಳ ವಿಚಾರವನ್ನು ತಿಳಿಸುವ ಈ ಕೃತಿಯಲ್ಲಿ ೧೦ನೆಯ ಶತಮಾನದ ಪೂರ್ವಭಾಗದಲ್ಲಿದ್ದ ಮುಂಜ ಅಥವಾ ವಾಕ್ಪತಿ ರಾಜನು ಕಲ್ಯಾಣದ ಚಾಲುಕ್ಯ ಅರಸನಾದ ಎರಡನೆಯ ತೈಲಪನ ಮೇಲೆ ದಂಡೆತ್ತಿ ಬಂದು ಪರಾಜಿತನಾಗಿ ಕೈಸೆರೆ ಸಿಗುವ ಘಟನೆ ಕರ್ನಾಟಕಕ್ಕೆ ಸಂಬಂಧಿಸಿದ್ದಾಗಿದೆ. ಪರಮಾರ ಮುಂಜನು ಕಲ್ಯಾಣದ ಚಾಲುಕ್ಯರ ಮೇಲೆ ಅನೇಕಬಾರಿ ದಂಡೆತ್ತಿ ಬಂದದ್ದು, ಈತನ ಮಂತ್ರಿ ರುದ್ರಾದಿತ್ಯರೆಂಬುದು, ಇವರು ತೈಲಪನಿಗೆ ಸೋತಿರುವುದು ಶಾಸನಗಳಲ್ಲಿ ಸ್ಪಷ್ಟವಾಗಿ ತಿಳಿದುಬರುವ ವಿಚಾರವಾಗಿದೆ.

ಮುಂಜನು ಅನೇಕ ಮಹಾ ಕವಿಗಳಿಗೆ ಆಶ್ರಯ ನೀಡರುವುದಲ್ಲದೆ ಸ್ವತಃ 'ರತ್ನಮಾಲಿಕಾ' ಎಂಬ ಗ್ರಂಥವನ್ನು ರಚಿಸಿರುವ ಪರಮಾರ ಮುಂಜನು ಸಾಹಿತ್ಯ ಪ್ರೇಮಿಯೂ ಆಗಿದ್ದನು. ಸಾಹಿತ್ಯ ಪ್ರೇಮಿಯಂತೆ, ಸಾಹಸಪ್ರೇಮಿಯೂ ಆದ ಮುಂಜನು ಕಲ್ಯಾಣದ ಚಾಲುಕ್ಯದೊರೆ ತೈಲಪನ ರಾಜ್ಯದ ಮೇಲೆ ದಾಳಿಯಿಡಲು ನಿರ್ಧರಿಸುತ್ತಾನೆ. ಆದರೆ ತೈಲಪನು ಯುಕ್ತಿಯಿಂದ ಮುಂಜನನ್ನು ನೊಜೆಯ ಹುಲ್ಲಿನಿಂದ ಕೈಕಟ್ಟಿ ಸೆರೆಹಿಡಿಯುತ್ತಾನೆ.

ಸೆರೆಮನೆಯಲ್ಲಿದ್ದ ಮಾಳವ ದೊರೆ ಮುಂಜನನ್ನು ನೋಡಿಕೊಳ್ಳಲು ತೈಲಪನು ತನ್ನ ತಂಗಿ ಮೃಣಾಳವತಿಯನ್ನು ನೇಮಿಸುತ್ತಾನೆ. ಆದರೆ ಮುಂಜ ಹಾಗೂ ಮೃಣಾಳವತಿಯರಲ್ಲಿ ಪ್ರಣಯಾಂಕುರವಾಗುತ್ತದೆ. ಇತ್ತ ಮುಂಜನ ಮಂತ್ರಿಗಳು ಇವನನ್ನು ಬಿಡಿಸಿಕೊಂಡು ಹೋಗಲು ಅವನಿರುವ ಠಾಣಕ್ಕೆ ನೆಲದಲ್ಲಿ ಸುರಂಗವನ್ನು ತೋಡಿ, ಅಲ್ಲಿಂದ ಪಾರಾಗಿ ಹೋಗಲು ಏರ್ಪಾಡುಮಾಡುತ್ತಾರೆ. ಮುಂಜನು ಈ ವಿಚಾರವನ್ನು ಮೃಣಾಳವತಿಯಲ್ಲಿ ತಿಳಿಸಿ, ಅವಳಿಗೂ ತನ್ನೊಂದಿಗೆ ಬರುವಂತೆ ಹೇಳುತ್ತಾನೆ. ಆದರೆ ಈ ವೇಳೆಗಾಗಲೇ ವಿಧವೆಯಾಗಿದ್ದ ಮೃಣಾಳವತಿಗೆ ಇವನೊಂದಿಗೆ ಹೋಗಲು ಮನಸ್ಸು ಬರುವುದಿಲ್ಲ. ಆದರೆ ಅವಳು ತನ್ನರಮನೆಗೆ ಹೋಗಿ ಆಭರಣದ ಪೆಟ್ಟಿಗೆ ತರುವುದಾಗಿ ನಂಬಿಸಿ, ಅಣ್ಣ ತೈಲಪನಲ್ಲಿ ಮುಂಜನು ತಪ್ಪಿಸಿಕೊಂಡು ಹೋಗಲಿರುವ ವಿಚಾರ ತಿಳಿಸುತ್ತಾಳೆ. ಮುಂಜನ ಈ ಕಾರ್ಯದಿಂದ ಕುಪಿತನಾದ ತೈಲಪನು ಅವನನ್ನು ಕ್ರೂರವಾಗಿ ದಂಡಿಸಿ ಕಡೆಗೆ ಶೂಲಕ್ಕೇರಿಸುತ್ತಾನೆ[೨೪].

ಕರ್ನಾಟಕರಾಜನಿಂದ ಶೂಲಾರೋಹಣಕ್ಕೊಳಗಾದ ಮುಂಜನ ಕುರಿತಾಗಿ ವಿಷಾದ ವ್ಯಕ್ತಪಡಿಸಿರುವ ಕವಿ, ಇತಿಹಾಸವನ್ನು ಕಾವ್ಯವಾಗಿಸುವತ್ತ ಹೆಚ್ಚು ಗಮನ ಹರಿಸಿಲ್ಲ. ಈ ಕೃತಿಯು ಔತ್ತರೇಯ ಕವಿಕೃತವಾಗಿದೆ. ಅವಂತಿಯ ದೊರೆ ಮುಂಜನನ್ನು ನಾಯಕನನ್ನಾಗಿಸಿದ ಈ ಕಾವ್ಯದಲ್ಲಿ ಕರ್ನಾಟಕದ ರಾಜಕುಮಾರಿ ಮೃಣಾಳವತಿ

ನಾಯಕಿಯ ಸ್ಥಾನದಲ್ಲಿ ಚಿತ್ರಿತಳಾಗಿಲ್ಲ. ಈ ಘಟನೆಯನ್ನು ದೇಸೀಯ ದೃಷ್ಟಿಯಲ್ಲಿ ನೋಡಿದಾಗ ಮೃಣಾಳವತಿ ತನ್ನ ರಾಜ್ಯಹಿತಕ್ಕಾಗಿ ತ್ಯಾಗ ಮಾಡಿದ ವಿಚಾರವೇ ಮುಖ್ಯಾಂಶವೆನಿಸುತ್ತದೆ. ಆರುಬಾರಿ ತನ್ನ ರಾಜ್ಯದಮೇಲೆ ದಂಡೆತ್ತಿ ಬಂದಿರುವ ಮುಂಜನನ್ನು ಕಡೆಗೂ ದೊರೆ ತೈಲಪ ಬಂಧಿಸಿರುತ್ತಾನೆ. ಅಲ್ಲದೆ ಅವನನ್ನು ರಾಜನಿಗೆ ಉಚಿತವಾದ ರೀತಿಯಲ್ಲಿಯೇ ನಡೆಸಿಕೊಂಡು ಅವನ ಮೇಲ್ವಿಚಾರಣೆಗೆಂದು ತನ್ನ ಸಹೋದರಿ ಮೃಣಾಳವತಿಯನ್ನು ನೇಮಿಸಿರುತ್ತಾನೆ. ಆದರೆ ಮುಂಜ ತಪ್ಪಿಸಿಕೊಂಡು ಹೋಗಲು ಪ್ರಯತ್ನಿಸುವುದನ್ನು ತನ್ನ ರಾಜ್ಯಕ್ಕೆ ಅಪಾಯವೆಂದು ಬಗೆದ ಮೃಣಾಳವತಿಗೆ ಅದನ್ನು ತನ್ನ ಅಣ್ಣನಿಗೆ ಹೇಳುವುದಲ್ಲದೆ ಬೇರೆ ದಾರಿ ಇರುವುದಿಲ್ಲ. ಇತಿಹಾಸದ ಈ ಘಟನೆಯನ್ನು ಒಂದು ಸುಂದರ ಕಾವ್ಯವನ್ನಾಗಿಸುವವರಿಗೆ ಮೃಣಾಳವತಿಯ ಜೀವನ ಒಳ್ಳೆಯ ವಸ್ತುವನ್ನು ಒದಗಿಸುತ್ತದೆ.

ಕೆ.ಎಮ್.ಮುನ್ಷಿ ಎನ್ನುವವರು ಈ ಕಥೆಯನ್ನಾಧರಿಸಿ ಸ್ವತಂತ್ರ ಪೂರ್ವದಲ್ಲಿಯೇ **'ಪೃಥ್ವೀವಲ್ಲಭ'** ಎಂಬ ಹೆಸರಿನ ಕಾದಂಬರಿಯನ್ನು ರಚಿಸಿದ್ದು, ಕ್ರಿ.ಶ.೧೯೪೩ರಲ್ಲಿ ಸೊಹರಾಬ್ ಮೋದಿ ಎಂಬ ಪ್ರಸಿದ್ಧ ನಿರ್ದೇಶಕರು ಇದನ್ನು ಚಲನಚಿತ್ರವಾಗಿ ತಯಾರಿಸಿ ಬಿಡುಗಡೆ ಮಾಡಿದ್ದಾರೆ. ಆದರೆ ಇದರಲ್ಲಿ ತೈಲಪನನ್ನು ನಯವಂಚಕನಂತೆಯೂ, ಮೃಣಾಲಿನಿಯನ್ನು ಕಟುಕಹೃದಯದವಳಂತೆ ಚಿತ್ರಿಸಲಾಗಿದೆ. ಈ ಕಾದಂಬರಿ ಹಾಗೂ ಚಲನಚಿತ್ರದಲ್ಲಿ ಚಾಲುಕ್ಯ ಚಕ್ರವರ್ತಿಗೆ ಹಾಗೂ ಚಾಲುಕ್ಯ ಇತಿಹಾಸ ಪರಂರೆಗೆ ಕಳಂಕವೆಸಗಿದೆ ಎಂದೆನಿಸಿ ಅ.ನ.ಕೃ ನೇತೃತ್ವದಲ್ಲಿ ಪ್ರತಿಭಟನೆ ನಡೆಸಲಾಯಿತು. ಧಾರವಾಡದ ವಿದ್ಯಾವರ್ಧಕ ಸಂಘದ ನಿರ್ಣಯದ ಮೇರೆಗೆ ಶ್ರೀರಂಗರು, ಬೆಟಗೇರಿಯವರು, ಬಸವನಾಳರು ಮೊದಲಾದವರು ಸೇರಿ ಮುನ್ಶಿಯವರಿಗೆ ಕನ್ನಡಿಗರ ಕ್ಷಮೆಕೋರುವಂತೆಯೂ, ಚಲನಚಿತ್ರಕ್ಕೆ ತಡೆಹಿಡಿಯುವಂತೆಯೂ ಆಗ್ರಹಿಸಿ ಪತ್ರ ಬರೆದರು. ಆದರೆ ಅದಕ್ಕೆ ಉತ್ತರ ನೀಡದೆ, ಪತ್ರಿಕೆಯೊಂದಕ್ಕೆ ಲೇಖನ ಬರೆದು ಮೂರ್ಖ ಜನರಿಗೆ ಹಿಸ್ಟರಿ (ಇತಿಹಾಸ) ಹಾಗೂ ಹಿಸ್ಟಾರಿಕಲ್ ಫಿಕ್ಷನ್ (ಐತಿಹಾಸಿಕ ಕಾದಂಬರಿ) ಎಂದರೇನೆಂಬುದು ತಿಳಿದಿಲ್ಲ ಎಂದು ಬರೆದಿದ್ದಾರೆ. ಆದರೆ ಗಾಂಧೀಜಿಯವರು ಮುನ್ಶಿಯವರಿಗೆ ಪತ್ರಬರೆದು ತಮಗೆ ಈ ಕಾದಂಬರಿಯ ಯಾವ ಪಾತ್ರವೂ ಹಿಡಿಸಲಿಲ್ಲವೆಂದು ಬರೆದಿರುವ ಪತ್ರದ ಪ್ರತಿಯನ್ನು ಎನ್ಕೆಯವರು ತರಿಸಿಕೊಂಡು ಪ್ರಕಟಿಸಿರುವುದು ಕನ್ನಡಿಗರಿಗೆ ಕೊಂಚ ಸಮಾಧಾನವನ್ನು ನೀಡಿದೆ ಎಂದು ತಿಳಿಸಿದ್ದಾರೆ[೨೫]. ಮುಂದೆ ಇದರ ಕುರಿತಾಗಿ ಐತಿಹಾಸಿಕ ಅಧ್ಯಯನ ಕೈಗೊಂಡು ಸಿ.ಕೆ.ನಾಗರಾಜ ರಾವ್ ಅವರು ಕನ್ನಡದಲ್ಲಿ ಶ್ರೀಪೃಥ್ವೀವಲ್ಲಭ ಎಂಬ ಕಾದಂಬರಿಯನ್ನು ರಚಿಸಿದ್ದಾರೆ[೨೬].

### ಚಂದಲಾದೇವಿ

ಕವಿ ಬಿಲ್ಹಣನ ವಿಕ್ರಮಾಂಕದೇವ ಚರಿತೆಯಲ್ಲಿ, ವಿಕ್ರಮಾದಿತ್ಯನು ಶಿಲಾಹಾರ ಮನೆತನದ ಚಂದ್ರಲೇಖೆಯನ್ನು ಸ್ವಯಂವರಪೂರ್ವಕವಾಗಿ ವರಿಸಿದನೆಂದು ತಿಳಿಸಿದ್ದಾನೆ. ಕವಿ ಬಿಲ್ಹಣನು ತಿಳಿಸಿರುವಂತೆ ಈಕೆಯ ಸೌಂದರ್ಯಕ್ಕೆ ಮನಸೋತು ದೇಶದ ನಾನಾ ಭಾಗಗಳಿಂದ ಪ್ರಸಿದ್ಧ ದೊರೆಗಳು ಸ್ವಯಂವರಕ್ಕೆ ಬಂದಿದ್ದರಂತೆ. ಅವರಲ್ಲಿ ಕಾಶ್ಮೀರದ ಹರ್ಷದೇವನೂ ಒಬ್ಬ. ಆದರೆ ಸ್ವಯಂವರದಲ್ಲಿ ಚಂದಲೆಯು ವಿಕ್ರಮಾದಿತ್ಯನನ್ನು ವರಿಸಿದಾಗ, ಬೇರೆ ರಾಜರುಗಳಿಗೆ ಅಸಮಾಧಾನವಾದರೂ ವಿಕ್ರಮಾದಿತ್ಯನ ಶೌರ್ಯಪರಾಕ್ರಮಗಳನ್ನು ತಿಳಿದಿದ್ದ ಅವರು ಇವನನ್ನು ವಿರೋಧಿಸಲು ಅಸಮರ್ಥರಾಗಿ ಸುಮ್ಮನೆ ಹಿಂದಿರುಗಿದರಂತೆ. ಈ ಕಾವ್ಯದಲ್ಲಿ ಚಂದ್ರಿಕಾ/ಚಂದ್ರಲೇಖೆಯನ್ನು, ಕವಿ ಬಿಲ್ಹಣ ಪ್ರಕಾರ ವರ್ಣಿಸಿದ್ದಾನೆ.

**ಇಯಂ ವಿಲಾಸದ್ರುಮ ದೋಹದ ಶ್ರೀಃ**
**ಇಯಂ ಸುಧಾಯೌವನ ದುಗ್ಧಸಿಂಧೋಃ**
**ಲಾವಣ್ಯ ಮಾಣಿಕ್ಯರುಚಿಚ್ಛಟೀಯಂ**
**ಇಯಂ ಮನಃ ಕಾರ್ಮಣ ಚೂರ್ಣ ಮುಷ್ಟಿಃ॥**

ಇವಳು ಸಿಂಗಾರದ ಬಳ್ಳಿ, ಸುರಿದ ಸೊಬಗಿನ ಸುಗ್ಗಿ, ಪ್ರಾಯದ ಪಾಲ್ಗಡಲಿನ ಅಮೃತ, ಲಾವಣ್ಯ ರತ್ನದ ಕಮನೀಯ ಕಾಂತಿ. ಮನವನ್ನು ಮರುಳು ಮಾಡುವ ಮೋಹಿನಿಯ ಮಾಟ ಎಂದು ವರ್ಣಿಸಲ್ಪಟ್ಟಿರುವ ಇವಳನ್ನು ಶಾಸನಗಳೂ ಕೂಡ ಬಣ್ಣಿಸಿವೆ:

**ಸ್ವಸ್ತ್ಯನವರತ ಪರಮಕಲ್ಯಾಣಾಭ್ಯುದಯ ಸಹಸ್ರಫಳಭೋಗ ಭಾಗಿನಿ**
**ದ್ವಿತೀಯ ಲಕ್ಷ್ಮೀ ಸಮಾನೆ ಕಲಹಂಸಯಾನೆ ರಾಯರ್ಝುಳಪ್ಪಕವ್ವಿರುಜ ಸಮಾಲಿಂ**
**ಗಿತ ಕಲ್ಪಲತೆ ಸಾಮಂತ ಸೀಮಂತೀನಿ ಪರಿವ್ರತ ದುಷ್ಟದರ್ಪಿಷ್ಟ ಸ**
**ವತಿ ಶಿರೋವಜ್ರಾಮುಷ್ಠಿ ಧೀನಾನಾಥ ಕಥಕ ವೈತಾಳಿಕ ಸುವರ್ಣವೃಷ್ಟಿ॥**

ಅರಸಿ ಲಕ್ಷ್ಮೀದೇವಿಯು ಅನಂತ ಫಲವನ್ನು (ಸುಖವನ್ನು) ಪಡೆದ, ಸಾಕ್ಷಾತ್ ಲಕ್ಷ್ಮಿಯ ಸಮಾನಳು, ಹಂಸನಡಿಗೆಯವಳು, ಕಲ್ಪಿಸಿದ್ದನ್ನು ನೀಡುವ ಕಲ್ಪವೃಕ್ಷದಂತವಳೂ, ಸಾಮಂತರಿಗೆ ಅನುಗ್ರಹಿಸುವವಳೂ, ದುಷ್ಟ ಆಲೋಚನೆಗಳಿಂದ ದರ್ಪಿಸುವ ಸವತಿಯರಿಗೆ ವಜ್ರಮುಷ್ಠಿಯಂತೆಯೂ, ದೀನ ಅನಾಥ ಮೊದಲಾದವರಿಗೆ ಚಿನ್ನದ ಮಳೆಗರೆವವಳೂ ಆಗಿದ್ದಾಳೆ ಎಂದು ಈ ಶಾಸನ ಪದ್ಯವು ಅರಸಿಯನ್ನು ಬಣ್ಣಿಸಿದೆ.

**ವಂದಿಚಿಂತಾಮಣಿ ಅಂತಃಪುರ ಚೂಡಾಮಣಿ ಮಲವಿದ್ಯಾಧರಿ**
**ಸರಳ ಕಳಾಧರಿರಾಯಮನೋಜರಾಜರತಿ ಅಡಬಳ ಸರಸ್ವತಿ**
**ನೃತ್ಯವಿದ್ಯಾಧರಿ ಸವತಿಗಜಕೇಸರಿ ಕಲಿಕಲಾ ಸರಸ್ವತಿ**
**ಶ್ರೀಮತ್ರಿಭುವನಮಲ್ಲ ವಿಶಾಲವಕ್ಷಸ್ಥಲ ನಿವಾಸಿನಿಯಿರಪ್ಪ ಶ್ರೀಮತ್ಸಿರಿಯರಸಿ ಚಂದಲದೇವಿ॥**[೨೭]

ವಂದಿಮಾಗದ ಹೊಗಳುಭಟರಿಗೆ ಚಿಂತಾಮಣಿಯಂತೆಯೂ, ಅಂತಃಪುರದ ಚೂಡಾಮಣಿಯಂತೆಯೂ, ಅಮಲ ವಿದ್ಯಾಧರಿ, ಸಕಲ ಕಲಾಧರಿ, ರಾಜನ ಮನೋವಲ್ಲಭೆ, ನೃತ್ಯವಿದ್ಯೆಯಲ್ಲಿ ಪರಿಣತಳೂ, ನೃತ್ಯವಿದ್ಯಾಪಾರಂಗತಳೂ, ಸವತಿ ಎನ್ನುವ ಆನೆಗೆ ಸಿಂಹದಂತೆಯೂ, ಕಲಿಯುಗದ ಸರಸ್ವತಿಯೂ ಆದ ಚಂದಲಾದೇವಿಯು ತ್ರಿಭುವನಮಲ್ಲ ವಿಕ್ರಮಾದಿತ್ಯನ ಹೃದಯನಿವಾಸಿನಿ ಎಂದು ವಿಶಿಷ್ಟವಾದ ಬಿರುದಾವಳಿಗಳಿಂದ ಚಾಲುಕ್ಯರಾಣಿ ಚಂದಲದೇವಿಯನ್ನು ಈ ಶಾಸನವು ಬಣ್ಣಿಸಿದೆ.

ಸಂಸ್ಕೃತ ಸಾಹಿತ್ಯದಲ್ಲಿನ ಕನ್ನಡ ಅರಸಿಯರ ವಿಚಾರಗಳು ಬಣ್ಣಿತವಾಗಿರುವುದಕ್ಕೆ ಈ ಮೇಲಿನ ಕೆಲವು ಉದಾಹರಣೆಗಳ ನೀಡಲಾಗಿದೆ.

ಇನ್ನೂ ಕೆಲವು ರಾಜಕುವರಿಯರ ವಿಚಾರಗಳನ್ನು ಪ್ರಸಿದ್ಧ ಕವಿಗಳ ಕಾವ್ಯಗಳಲ್ಲಿ ಗುರುತಿಸುವ ಪ್ರಯತ್ನವನ್ನು ನಮ್ಮ ವಿದ್ವಾಂಸರು ನಡೆಸಿದ್ದಾರೆ. ಅವರಲ್ಲಿ ಕನ್ನಡದ ಪ್ರಾಚೀನ ರಾಜಮನೆತನ ಎನಿಸಿದ ಕದಂಬರ ರಾಜಕುಮಾರಿಯನ್ನು ಪ್ರಸಿದ್ಧಕವಿ ಕಾಳಿದಾಸನ ಕಾವ್ಯದಲ್ಲಿನ ನಾಯಕಿ ಎಂದು ಹುಲ್ಲೂರು ಶ್ರೀನಿವಾಸ ಜೋಯಿಸರು ಪ್ರತಿಪಾದಿಸುತ್ತಾರೆ. ಕವಿ ಕಾಳಿದಾಸನ ವಿಕ್ರಮೋರ್ವಶೀಯದಲ್ಲಿನ ನಾಯಕಿಯನ್ನು ಧ್ರುವದೇವಿಗೂ, ನಾಯಕ ವಿಕ್ರಮನನ್ನು ಗುಪ್ತವಂಶದ ದೊರೆ ಚಂದ್ರಗುಪ್ತನಿಗೂ ಸಮೀಕರಿಸಲಾಗುತ್ತದೆ. ಅಲ್ಲದೆ ಧ್ರುವದೇವಿಯು ಕದಂಬದೊರೆ ಕಾಕುತ್ಥ್ಸವರ್ಮನ ಮಗಳೆಂದು ವಾದಿಸುವ ಕೆಲವು ಅಂಶಗಳನ್ನು ವಿದ್ವಾಂಸರು ಶೋಧಿಸಿದ್ದಾರೆ[೨೮]. ಈ ವಾದವು ನಿಜವಾದಲ್ಲಿ ಸಂಸ್ಕೃತ ಕಾವ್ಯವೊಂದರಲ್ಲಿ ಅದರಲ್ಲೂ ಕಾಳಿದಾಸನ ಕಾವ್ಯದ ನಾಯಕಿಯಾಗಿ ವಿಶಿಷ್ಟ ಸ್ಥಾನಪಡೆದ ರಾಣಿ ಕರ್ನಾಟಕದವಳಾಗುತ್ತಾಳೆ.

ಶಾಸನಗಳಲ್ಲಿ ಕದಂಬ ಹಾಗೂ ಗುಪ್ತವಂಶದ ದೊರೆಗಳಲ್ಲಿ ವೈವಾಹಿಕ ಸಂಬಂಧಗಳು ಏರ್ಪಟ್ಟಿದ್ದ ಕುರಿತಾಗಿ ಸೂಚನೆಗಳಿವೆ. (ತಾಳಗುಂದ ಶಾಸನ) ಆದರೆ, ಕಾಕುತ್ಥ್ಸವರ್ಮ ಹಾಗೂ ಚಂದ್ರಗುಪ್ತ ವಿಕ್ರಮಾದಿತ್ಯರು

ಸಮವಯಸ್ಕರಾಗುವುದರಿಂದ, ಇದು ಅಸಂಭವವಾಗಿ ತೋರುತ್ತದೆ. ಅಲ್ಲದೆ ಕಾಕುತ್ಸ್ಥವರ್ಮನ ಮಗಳನ್ನು ವರಿಸಿದವನು ಚಂದ್ರಗುಪ್ತನ ಮಗ ಕುಮಾರಗುಪ್ತ ಎಂಬ ವಾದವೂ ಇರುವುದರಿಂದ ಧ್ರುವದೇವಿಯೇ ಕರ್ನಾಟಕದ ರಾಜಕುಮಾರಿ ಎಂಬುದು ಖಚಿತ ವಾಗಿಹೇಳಲಾಗುವುದಿಲ್ಲ.

ಮತ್ತೊಬ್ಬ ಪ್ರಸಿದ್ಧ ಸಂಸ್ಕೃತ ಕವಿ ಬಿಲ್ಹಣನ ಕಾವ್ಯವೊಂದಕ್ಕೆ ಮೂಲ ಪ್ರೇರಣೆ ಕಲ್ಯಾಣದ ಚಾಲುಕ್ಯ ದೊರೆ ಆರನೆಯ ವಿಕ್ರಮಾದಿತ್ಯನ ಮಗಳೆಂದು ಹೇಳಲಾಗುತ್ತದೆ. ಬಿಲ್ಹಣನ 'ಚೋರಪಂಚಶಿಕಾ' ಎಂಬ ಕೃತಿಯು ರಾಜಕುಮಾರಿಯೋರ್ವಳ ಪ್ರೇಮಕಥೆಯ ಸುತ್ತಲು ರಚಿತವಾದ ಕಾವ್ಯ. ಇಲ್ಲಿ ಕವಿಯು ತನ್ನ ಪ್ರೇಯಸಿಯಂತೆ ಚಿತ್ರಿಸಿರುವ ರಾಜಕುಮಾರಿಯನ್ನು ಚಾಲುಕ್ಯ ವಿಕ್ರಮಾದಿತ್ಯನ ಮಗಳು ಎಂದು ಹೇಳಲಾಗುತ್ತದೆ[೨೯]. 'ವಿಕ್ರಮಾಂಕದೇವ ಚರಿತ' ಕೃತಿಯನ್ನು ರಚಿಸಿರುವ ಕವಿ ಬಿಲ್ಹಣನು ಕಲ್ಯಾಣಿ ಚಾಲುಕ್ಯ ವಿಕ್ರಮಾದಿತ್ಯನ ಆಸ್ಥಾನದಲ್ಲಿದ್ದನೆಂಬುದು ಖಚಿತವಾದರೂ, ಇವನ ಆಸ್ಥಾನಕ್ಕೆ ಬರುವ ಮುನ್ನ ಕನ್ಯಾಕುಬ್ಜ, ಧಾರಾ ರಾಜ್ಯಗಳಿಗೆ ಭೇಟಿ ಇತ್ತು ಮುಂದೆ ಕಲಚೂರಿ ರಾಜವಂಶದ ದೊರೆ ಕರ್ಣನ ಆಶ್ರಯದಲ್ಲಿಯೂ ಕೆಲಕಾಲ ಇದ್ದನೆಂಬ ವಿಚಾರ ತಿಳಿದು ಬರುತ್ತದೆ. ಅಲ್ಲದೆ 'ಚೋರಪಂಚಶಿಕಾ' ಕೃತಿಯಲ್ಲಿ ರಾಜಕುಮಾರಿಯ ಹೆಸರಾಗಲೀ, ಆಕೆಯ ತಂದೆಯ ಹೆಸರಾಗಲೀ ಸ್ಪಷ್ಟವಾಗಿ ತಿಳಿಸಿಲ್ಲದಿರುವುದು ಕೆಲವು ಗೊಂದಲಕ್ಕೆಡೆಮಾಡಿದೆ.

## ಜನಪದ ಸಾಹಿತ್ಯದಲ್ಲಿ ಕರ್ನಾಟಕದ ಅರಸಿಯರು

ಇತಿಹಾಸದಲ್ಲಿ ಘಟಿಸಿದ ಕೆಲವು ಮಹತ್ತರ ವಿಚಾರಗಳು ಜನರ ಮನಸ್ಸಿನಲ್ಲಿ ಅಚ್ಚಳಿಯದೆ ನಿಂತು, ಕಾವ್ಯ, ಕಥೆ, ನಾಟಕ ಮೊದಲಾದ ರೂಪವನ್ನು ಪಡೆದು ಮುಂದಿನ ತಲೆಮಾರಿಗೆ ಮೌಖಿಕವಾಗಿ ಹರಿದು ಬಂದಿದೆ.

ಜನಪದ ಸಾಹಿತ್ಯದಲ್ಲಿ ಇತಿಹಾಸದ' ಸಂಗತಿಗಳ ಖಚಿತವಾದ ದಾಖಲೆ ದೊರಕುವುದು ಅಪರೂಪ, ತೀರಾ ಪ್ರಾಚೀನವಾದ ಐತಿಹಾಸಿಕ ವಿಷಯಗಳು ಜನಪದ ಲೋಕದಲ್ಲಿ ಅನೇಕ ರೂಪಗಳನ್ನು ಪಡೆದುಕೊಂಡಿರುತ್ತದೆ. ಮಹತ್ವದ ಚಾರಿತ್ರಿಕ ಘಟನೆಯೊಂದು ಜನಪದ ಸಾಹಿತ್ಯದ ಉಗಮಕ್ಕೆ ಕಾರಣವಾಗಿದ್ದರೂ, ಅದರ ಬೆಳವಣಿಗೆಯಲ್ಲಿ ಅತಿಮಾನುಷ, ಅವಾಸ್ತವ ಅಂಶಗಳು ಸೇರ್ಪಡೆಗೊಂಡು ಮೂಲಘಟನೆ ಇಷ್ಟೇ ಎಂದು ಗುರುತಿಸುವುದು ಅಸಾಧ್ಯ ಎನ್ನುವ ಮಟ್ಟಕ್ಕೆ ಬೆಳೆದು ಬಂದಿರುತ್ತದೆ. ಅರ್ಧ ಚಾರಿತ್ರಿಕ ಅರ್ಧ ಕಾಲ್ಪನಿಕ ರೂಪದ ಇಂಥ ಜನಪದ ಗೀತೆ, ಕಥೆ, ಲಾವಣಿಗಳಿಗೆ ಅಡ್ಡಗಥೆಗಳು ಸೇರಿಕೊಂಡು ಕಲ್ಪನೆಯ ರೆಂಬೆಕೊಂಬೆಗಳು ಮೂಡಿರುತ್ತವೆ.

ಐತಿಹಾಸಿಕ ಲಾವಣಿ, ಜನಪದ ಐತಿಹ್ಯಗಳನ್ನು ಅಸಮಗ್ರ ಐತಿಹಾಸಿಕ ಘಟನೆಗಳು, ಅಸ್ಪಷ್ಟ ಐತಿಹಾಸಿಕ ಘಟನೆಗಳು, ಸಮಗ್ರ ಐತಿಹಾಸಿಕ ಘಟನೆಗಳು ಎಂದು ವಿಭಾಗಿಸಬಹುದು. ಇವುಗಳಲ್ಲಿ ಮರೆತು ಹೋಗಿರುವ, ಆರ್ಧಂಬರ್ಧ ನಿರೂಪಣೆ ಇರುವ ಸಾಹಿತ್ಯಗಳನ್ನು ಅಸಮಗ್ರ ಗುಂಪಿಗೂ, ಐತಿಹಾಸಿಕ ವಿಚಾರಗಳಿಗೆ ಕಾಲ್ಪನಿಕ ಘಟನೆಗಳು ಹೆಣೆಯಲ್ಪಟ್ಟಿರುವುದನ್ನು ಅಸ್ಪಷ್ಟ ಸಾಹಿತ್ಯದ ಗುಂಪಿಗೂ ಸೇರಿಸಿ, ಸಮಗ್ರ ವಿಚಾರವನ್ನು ಉಳಿಸಿಕೊಂಡು ಬಂದಿರುವುದನ್ನು ಪ್ರತ್ಯೇಕವಾಗಿ ಪರಿಗಣಿಸಬಹುದು.

ಜನಪದ ಸಾಹಿತ್ಯದಲ್ಲಿ ಪ್ರಸಿದ್ಧ ಚಕ್ರವರ್ತಿ, ದೊರೆಗಳ ವಿಚಾರ ಹೆಚ್ಚಾಗಿ ಕಂಡುಬರುವುದಿಲ್ಲ. ಜನಸಾಮಾನ್ಯರಿಂದ ದೂರವಾಗಿ, ನಗರಗಳಲ್ಲಿ, ವೈಭವೋಪೇತ ಅರಮನೆಗಳಲ್ಲಿ ವಾಸಿಸುತ್ತಾ ಜನಸಾಮಾನ್ಯರ ಸಂಪರ್ಕಕ್ಕೆ ಬಾರದೆ, ಅವರ ಖಾಸಗಿ ಹಾಗೂ ಸಾರ್ವತ್ರಿಕ ಬದುಕಿನ ಅನೇಕ ವಿವರಗಳು ಗ್ರಾಮೀಣ ಸಾಹಿತ್ಯ ರಚನಕಾರರ ಪ್ರತಿಭಾಸ್ಪರ್ಷಕ್ಕೆ ಸಿಲುಕದೆ ದೂರವಾದದ್ದೇ ಇದಕ್ಕೆ ಕಾರಣವಾಗಿರಬಹುದೆಂದು ಒಂದು ಅಭಿಪ್ರಾಯವಿದೆ. ಆದರೆ

ಜನಪದ ಲಾವಣಿಕಾರರು ತಾವು ಹತ್ತಿರದಿಂದ ಕಂಡ ಸಣ್ಣಪುಟ್ಟ ತುಂಡರಸರ, ಪಾಳೆಯಗಾರರ ಕುರಿತಾಗಿ ಚಿತ್ರಿಸಿರುವುದನ್ನು ಕಾಣುತ್ತೇವೆ.

**ಲಾವಣಿ:** ಕನ್ನಡದ ಒಂದು ವಿಶೇಷ ಸಾಹಿತ್ಯ ಪ್ರಕಾರ. ಇದು ಹಾಡುವ ಮಟ್ಟುಗಳು. ಲಾವಣಿಯೆಂದರೆ ಒಂದು ಕಥೆಯನ್ನು ಹೇಳುವ ಹಾಡು ಅಥವಾ ಹಾಡಿನಲ್ಲಿ ಹೇಳಲಾದ ಒಂದು ಕಥೆ. ಲಾವಣಿಗಳೆಲ್ಲ ಕ'ಥನಗೀತೆಗಳು. ಸಾಧಾರಣವಾಗಿ ಐತಿಹಾಸಿಕ ವಿಚಾರಗಳೇ ಲಾವಣಿಗಳಿಗೆ ವಸ್ತುಗಳಾಗಿರುತ್ತವೆಯಾದರೂ, ಪೌರಾಣಿಕ, ಸಾಮಾಜಿಕ ವಿಷಯಗಳೂ ಇಲ್ಲಿ ಕಂಡುಬರುತ್ತವೆ.

ಲಾವಣಿಯನ್ನು ಹಾಡುವಾಗ ಮೊದಲಿಗೆ ಉಪೋದ್ಘಾತ ಸ್ವರೂಪದ ಚಿಕ್ಕಹಾಡನ್ನೂ ಕೊನೆಗೊಂದು ಉಪಸಂಹಾರ ಸ್ವರೂಪದ ಹಾಡನ್ನೂ ಹೇಳುವುದು ವಾಡಿಕೆ. ಸೂಚನಾ ಪಲ್ಲವಿಯನ್ನು ಸಖಿ ಎಂದೂ ಕೊನೆಯದನ್ನು ಖ್ಯಾಲಿ ಎಂದೂ ಹೆಸರಿಸುತ್ತಾರೆ. ಪ್ರತಿ ಲಾವಣಿಯಲ್ಲಿಯೂ ಚೌಕ ಎಂಬ ವಿಭಾಗವನ್ನು ಕಲ್ಪಿಸಿ ಅದರಲ್ಲಿ ಕೆಲವು ನುಡಿಗಳು ಸೇರಿರಬೇಕೆಂಬುದು ನಿಯಮ. ಇಂಥ ನಾಲ್ಕಾರು ಚೌಕಗಳು ಸೇರಿ ಇಡಿ ಲಾವಣಿ ರೂಪುಗೊಂಡಿರುತ್ತವೆ. ಲಾವಣಿ ಹಾಡುವಾಗ ಸಾಮಾನ್ಯವಾಗಿ ಇಬ್ಬರು ಜೊತೆಯಾಗುತ್ತಾರೆ. ಅವರು ಎಡಗೈಯಲ್ಲಿ ಕೈತಾಳ, ಬಲಗೈಯಲ್ಲಿ ಡಪ್ಪು ಹಿಡಿದು ಗೆಜ್ಜೆ ಕಟ್ಟಿಕೊಂಡು ಹಾಡಲು ಸಿದ್ಧವಾಗುತ್ತಾರೆ. ಅವರ ಹಿಂದೆ ತಿಂತಿಣಿ ಎಂಬ ವಾದ್ಯವನ್ನು ಹಿಡಿದ ಸೂರಿನವ ನಿಂತಿರುತ್ತಾನೆ.

**ದುಂದುಮೆ:** ಇದೂ ಕೂಡ ಲಾವಣಿಯಂತೆ ಹಾಡಿನ ಮಟ್ಟು. ಉತ್ತರ ಕರ್ನಾಟಕದಲ್ಲಿ ವಿಶೇಷವಾಗಿ ಪ್ರಚಾರದಲ್ಲಿರುವ ಕಥನಕಾವ್ಯ ಪ್ರಕಾರ. ಈ ಕಾವ್ಯಗಳನ್ನು ಹಾಡುವಾಗ ದಿಮ್ಮು ಎಂಬ ಚರ್ಮವಾದ್ಯವನ್ನು ಬಳಸುತ್ತಾರೆ. ಆ ವಾದ್ಯದ ದುಮ್ ದಿಮ್ಮಿ ಎಂಬ ಶಬ್ದದಿಂದ ದುಮ್‌ದುಮೆ ಎಂದೇ ಈ ಪ್ರಕಾರವನ್ನು ಕರೆಯಲಾಗುತ್ತದೆ. ಹೀಗೆ ದಿಮ್ಮು ಬಳಸಿಕೊಂಡು ಹಾಡುವ ಕಾವ್ಯಗಳೇ ದುಂದುಮೆ ಎನಿಸಿವೆ. ಈ ವಾದ್ಯದ ನೆರವಿಲ್ಲದೆ ಹಾಡುವಂತಿಲ್ಲ ಹಾಗೆ ಹಾಡಿದರೆ ಅವು ಹೋಳಿಪದಗಳೆನಿಸುತ್ತವೆ. ದುಂದುಮೆ ಮತ್ತು ಹೋಳಿ ಪದಗಳಿಗಿರುವ ಮುಖ್ಯ ವ್ಯತ್ಯಾಸವೇ ಈ ವಾದ್ಯ. ಇನ್ನುಳಿದಂತೆ ಇವುಗಳ ಭಾಷೆ, ಶೈಲಿ, ರಚನೆ ತಂತ್ರ ಮುಂತಾದವುಗಳಲ್ಲಿ ಏಕರೀತಿ ಕಂಡುಬರುತ್ತದೆ.

ದುಂದುಮೆಗಳಲ್ಲಿ ವೀರರಸ ಪ್ರಧಾನವಾದರೂ ಉಳಿದ ರಸಗಳೂ ಉಂಟು. ದುಂದುಮೆಗಳನ್ನು ಕುರಿತು ಸುದೀರ್ಘವಾಗಿ ಅಧ್ಯಯನ ನಡೆಸಿರುವ ಬಿ.ಎಸ್.ಗದ್ದಗೀ ಮಠ ಅವರು ದುಂದುಮೆ ಹಾಗೂ ದುಂದುಭಿ ಎಂಬ ಎರಡು ಕಾವ್ಯ ಪ್ರಕಾರಗಳನ್ನು ಹೇಳುತ್ತಾರೆ. ಇವೆರಡನ್ನೂ ಅವರು ಬಾಜನಗಬ್ಬ ಎಂದಿದ್ದಾರೆ. ಅರಸರು ದಿಗ್ವಿಜಯಕ್ಕೆ ಹೊರಟಾಗ ದುಂದುಬಿ ಮೊಳಗಿಸಿ ಹಾಡಲಾಗುತ್ತಿದ್ದಂಥವು ದುಂದುಬಿಗಳು. ದುಂದುಮೆಗಳಿಗೆ ಕರಡೆ, ಸಂಬಾಳ, ಮದ್ದಲೆ ಮೊದಲಾದ ವಾದ್ಯಗಳನ್ನು ಬಳಸಿಕೊಂಡು ಹಾಡುತ್ತಿದ್ದರೆಂದು ತಿಳಿದು ಬಂದಿದೆ. ಈಗ ದಿಮ್ಮು ದಿಮ್ಮಡಿಗಳನ್ನು ಬಳಸುತ್ತಾರೆ.

ದುಂದುಮೆ ಪದಗಳು ಕಿತ್ತೂರು ಅರಸರ ಕಾಲದಲ್ಲಿ ಬಹು ವ್ಯಾಪಕವಾಗಿ ಬೆಳೆಯಿತು.[೩೦] ಇದರ ಲಕ್ಷಣಗಳೆಂದರೆ ಕಥೆ, ಸನ್ನಿವೇಶಗಳು ವರ್ಣನೆಗಳಿಂದ ಕೂಡಿರುತ್ತವೆ. ವರ್ಣನೆಗಳು ಸಂದರ್ಭೋಚಿತವಾಗಿರುತ್ತವೆಯೇ ಹೊರತು ದೀರ್ಘವಾಗಿರುವುದಿಲ್ಲ. ಕಥನಕ್ರಿಯೆ ತೀವ್ರಗತಿಯಲ್ಲಿ ಮುನ್ನಡೆಯುತ್ತದೆ. ವೀರರಸಕ್ಕೆ ಪ್ರಧಾನ್ಯವಿದ್ದರೂ ಉಳಿದ ರಸಗಳೂ ಬರಬಲ್ಲವು. ನೀತಿ ಪ್ರಸಾರ ಕಾರ್ಯವೂ ಇದರಲ್ಲಿ ಮತ್ತೊಂದು ಅಂಗ. ಓಟ, ರಭಸ, ಉತ್ಸಾಹವೇ ಇದರ ಜೀವಾಳ.

**ಅರಸಿಯರ ಸಾಹಸ ಬಣ್ಣಿಸುವ ಜನಪದ ಗೀತೆಗಳು**

**ಓಬವ್ವ ನಾಗತಿ:** ಚಿತ್ರದುರ್ಗದ ಪಾಳೆಗಾರ ವಂಶದ ಎರಡನೆಯ ಕಸ್ತೂರಿ ರಂಗಪ್ಪ ನಾಯಕ ಮಡದಿ ಓಬವ್ವ ನಾಗತಿಯು ಪತಿಯ ಅಕಾಲಿಕ ಸಾವಿನ ನಂತರ ಧೃತಿಗೆಡದೆ ರಾಜ್ಯವನ್ನು ಮುನ್ನಡೆಸಿದ ಛಲಗಾರ್ತಿ. ಅಪುತ್ರಕನಾದ ಕಸ್ತೂರಿ ರಂಗಪ್ಪನ ಮರಣದ ನಂತರ, ಚಿತ್ರದುರ್ಗದ ಪಾಳೆಯ ಪಟ್ಟಿನ ಉತ್ತರಾಧಿಕಾರಿಯೇ ಇಲ್ಲ ಎನ್ನುವ ಸಂದರ್ಭದಲ್ಲಿ, ಅರಾಜಕತ್ವ ತೋರಗೊಡದೆ, ತನಗೆ ವಿಧೇಯರಾಗಿ ನಡೆಯದವರನ್ನು ದೂರವಿರಿಸಿ, ತನ್ನ ಮನಸ್ಸಿಗೊಪ್ಪುವ ಬಾಲಕನನ್ನು ದತ್ತು ಸ್ವೀಕರಿಸಿ ರಾಜ್ಯ ಮುನ್ನಡೆಸಿದ ವೀರ ವನಿತೆ ಓಬವ್ವ ನಾಗತಿ.

ಓಬವ್ವ ನಾಗತಿಯ ಕುರಿತಾದ ಜನಪದ ಗೀತೆಯೊಂದು ಈಕೆಯ ಶೌರ್ಯವನ್ನು ಬಣ್ಣಿಸುತ್ತದೆ. ಸಿಂಹಾಸನಕ್ಕೇರಿದ ಚಿಕ್ಕಮದಕೇರಿ ಕೇವಲ ೧೨ ವಯಸ್ಸಿನವನಾಗಿದ್ದಾಗ, ರಾಯದುರ್ಗದ ದಳಪತಿಯು, ಚಿತ್ರದುರ್ಗವು ಓರ್ವ ಹೆಣ್ಣಿನ ಕೈಯಲ್ಲಿದೆ ಅದನ್ನು ಸುಲಭವಾಗಿ ಆಕ್ರಮಿಸಬಹುದೆಂಬ ಕಲ್ಪನೆಯಿಂದ ಊರ ಗಡಿಯಲ್ಲಿ ಮೇಯುತ್ತಿದ್ದ ದನಗಳನ್ನು ಅಪಹರಿಸುತ್ತಾನೆ. ಗೋಗ್ರಹಣ ನಡೆಸಿ ಯುದ್ಧಕ್ಕೆ ಆಹ್ವಾನ ಕೊಟ್ಟ ಎದುರಾಳಿಯ ವಿರುದ್ಧ ಓಬವ್ವ ನಾಗತಿಯು ದಂಡುಗಟ್ಟಿಕೊಂಡು ಹೋಗಿ ಎರಗುತ್ತಾಳೆ. ಹೆಣ್ಣಿನ ಗಂಡುತನ ಕಂಡು ಬೆಚ್ಚಿದ ದಳಪತಿಯು ದನಗಳನ್ನು ಬಿಟ್ಟು ಓಡಿ ಹೋಗುತ್ತಾನೆ. ಆದರೆ ಓಬವ್ವ ಅಷ್ಟಕ್ಕೇ ಸುಮ್ಮನಿರದೆ ಅವನನ್ನು ನಾಡಿನ ಆಚೆಯ ತನಕ ಬೆನ್ನಟ್ಟಿ ಓಡಿಸುತ್ತಾಳೆ[೩೧].

**ಕೆಳದಿ ಚನ್ನಮ್ಮ**

ಕೆಳದಿಯನ್ನಾಳಿದ ಪ್ರಸಿದ್ಧ ಅರಸಿ ಚೆನ್ನಮ್ಮಳ ಕುರಿತಾದ ಹಲವಾರು ವಿಚಾರಗಳು ಶಿಷ್ಟಕಾವ್ಯಗಳಲ್ಲಿ ಬಣ್ಣಿತವಾಗಿದ್ದರೂ, ಯುದ್ಧದಲ್ಲಿ ಸಾಹಸ ತೋರಿದ ಇವಳ ಧೈರ್ಯ-ಸಾಹಸಗಳನ್ನು ಜನಪದ ಕವಿಗಳು ರೋಚಕವಾಗಿ ಬಹುಪರಿಯಿಂದ ಬಣ್ಣಿಸುತ್ತಾರೆ. ಹದಿನಾರನೆಯ ಶತಮಾನದಲ್ಲಿ ಮೊಗಲರನ್ನು ಎದುರಿಸಲು ಪ್ರಸಿದ್ಧ ದೊರೆಗಳೇ ಹಿಂದೇಟು ಹಾಕುತ್ತಿದ್ದ ಸಂದರ್ಭದಲ್ಲಿ, ಅರಸಿಯೋರ್ವಳು ಕೆಚ್ಚೆದೆಯಿಂದ ಮೊಗಲರ ಸೈನ್ಯವನ್ನು ಎದುರಿಸಿದ್ದು ಮಹತ್ವದ ವಿಚಾರವೇ ಆಗಿದೆ. ಚೆನ್ನಮ್ಮಳು ನಡೆಸಿದ ಈ ಯುದ್ಧ ಹಾಗೂ ಅದರ ಯಶಸ್ಸು ಜನಮನದಲ್ಲಿ ಅಚ್ಚಳಿಯದೆ ನಿಂತು ಚೆನ್ನಮ್ಮಳಿಗೆ ವಿಶೇಷ ಸ್ಥಾನ ತಂದುಕೊಟ್ಟಿರುವುದು ಇಂತಹ ಹೋರಾಟದ ಹಾಡುಗಳ ರಚನೆಗೆ ಕಾರಣವಾಗಿದೆ. ಇಂಥ ಸಾಹಸಮಯ ವಿಚಾರವನ್ನು ಜನಪದ ಕವಿಗಳು ಕಣ್ಣಿಗೆ ಕಟ್ಟುವಂತೆ ಬಣ್ಣಿಸುತ್ತಾರೆ. ಚನ್ನಮ್ಮಳ ಯುದ್ಧ ವಿಚಾರವನ್ನು ಬಣ್ಣಿಸುವ ಜನಪದ ಗೀತೆಯನ್ನು ಸಾ.ಶಿ.ಮರುಳಯ್ಯನವರು ಸಂಗ್ರಹಿಸಿದ್ದಾರೆ[೩೨].

ಜನಪದ ಕೃತಿಗಳು ಕೇವಲ ಚನ್ನಮ್ಮಳ ಸಾಹಸವನ್ನಷ್ಟೇ ಬಣ್ಣಿಸದೆ, ರಾಜಕೀಯ ವಿಚಾರದಲ್ಲಿ ಇವಳು ತೆಗೆದುಕೊಂಡ ಮಹತ್ವದ ತೀರ್ಮಾನ, ಇವಳ ಚಾಣಾಕ್ಷತನದ ಕುರಿತಾಗಿಯೂ ಕೆಲವು ವಿಚಾರಗಳನ್ನು ಬಣ್ಣಿಸುತ್ತವೆ. ಅವುಗಳಲ್ಲಿ ಒಂದು ಪ್ರಕರಣವು ಹೀಗಿದೆ –

ಪತಿ ಸೋಮಶೇಖರ ಅಕಾಲದಲ್ಲಿ ದುಷ್ಟರ ಕುತಂತ್ರದಿಂದ ಮಡಿದಾಗ, ಚೆನ್ನಮ್ಮಳಿಗೆ ಮಕ್ಕಳಿರುವುದಿಲ್ಲ. ಸಿಂಹಾಸನವು ಶತ್ರುಗಳ ಪಾಲಾಗುವುದನ್ನು ತಪ್ಪಿಸಲು ತಾನೇ ಸಿಂಹಾಸನವನ್ನೇರಿದರೂ, ಉತ್ತರಾಧಿಕಾರಿಯನ್ನು ನೇಮಿಸುವುದು ಇವಳ ಪ್ರಮುಖ ಜವಾಬ್ದಾರಿಯಾಗಿರುತ್ತದೆ. ಇಂತಹ ಸಂದರ್ಭದಲ್ಲಿ ದತ್ತು ತೆಗೆದುಕೊಳ್ಳಲು ನಿರ್ಧರಿಸುತ್ತಾಳೆ. ದತ್ತು ಸ್ವೀಕಾರಕ್ಕೆ ಮಗುವನ್ನು ಆರಿಸಿಕೊಳ್ಳಲು ರಾಜ್ಯಾಧಿಕಾರಕ್ಕೆ ಅರ್ಹತೆಯುಳ್ಳ ರಾಜಬಂಧುಗಳ ಮಕ್ಕಳನ್ನು ಅರಮನೆಗೆ ಕರೆಸಿಕೊಂಡು, ಅರಮನೆಯ ವಿಶಾಲವಾದ ಕೋಣೆಯೊಂದರಲ್ಲಿ ಮಕ್ಕಳು ಬಯಸುವ ನಾನಾ ಆಟಿಕೆಗಳು, ತಿಂಡಿ ಮೊದಲಾದ ವಸ್ತುಗಳನ್ನಿರಿಸಿ ಬರಮಾಡಿಕೊಂಡ ಮಕ್ಕಳಿಗೆ ತಮಗಿಷ್ಟವಾದುದನ್ನು ತೆಗೆದುಕೊಳ್ಳಲು ಏರ್ಪಾಡಾಗಿರುತ್ತದೆ. ಮಕ್ಕಳ ಮನಸ್ಸನ್ನು ಪರೀಕ್ಷಿಸುವ ಸಲುವಾಗಿ ಇರಿಸಲಾದ ಈ ಸಾಮಗ್ರಿಗಳಲ್ಲಿ

ಹತ್ತುವರ್ಷದ ಬಾಲಕನೊಬ್ಬನು ದೊರೆ ಶಿವಪ್ಪನಾಯಕನ ಚಿತ್ರಪಟ, ಒಂದು ವಚನಗ್ರಂಥ ಮತ್ತೊಂದು ಕತ್ತಿಯನ್ನು ಆರಿಸಿಕೊಳ್ಳುತ್ತಾನೆ. ಆಯ್ದುಕೊಂಡ ವಸ್ತುಗಳ ವಿಚಾರವಾಗಿ ಪ್ರಶ್ನಿಸಲು, ತಾನು ಈ ಪಟದಲ್ಲಿರುವ ಶಿವಪ್ಪನಾಯಕರಂತಾಗಬೇಕು, ಗ್ರಂಥಗಳನ್ನು ಓದಿ ಹೆಚ್ಚು ವಿದ್ಯೆ ಕಲಿಯಬೇಕು ಹಾಗೂ ಕತ್ತಿಯನ್ನು ಹಿಡಿದು ಶತ್ರುಗಳನ್ನು ನಿಗ್ರಹಿಸಬೇಕೆಂದು ತಿಳಿಸಿದ ಬಾಲಕ ರಾಣಿಯ ಮೆಚ್ಚುಗೆಗೆ ಪಾತ್ರನಾಗಿ, ಅವಳ ದತ್ತುಪುತ್ರನಾದನೆಂಬ ದಂತಕಥೆಯನ್ನು ಜನಪದರು ರಂಜಕವಾಗಿ ಬಣ್ಣಿಸಿದ್ದಾರೆ[೩೩]. ಸಿಂಹಾಸನದ ಮುಂದಿನ ವಾರಸುದಾರನನ್ನೂ ತಕ್ಕ ರೀತಿಯಲ್ಲಿ ಬೆಳೆಸಿ ಕೆಳದಿರಾಜ್ಯಾಭ್ಯುದಯಕ್ಕೆ ಉತ್ತಮ ಕಾಣಿಕೆಯನ್ನು ನೀಡಿರುವ ಚೆನ್ನಮ್ಮಳ ಆಯ್ಕೆಯ ಮಾನದಂಡವನ್ನು ಕೊಂಡಾಡುವಲ್ಲಿ ಜನಪದರು ಈ ಕತೆಯನ್ನು ಪ್ರಸಿದ್ಧ ಪಡಿಸಿದ್ದಾರೆ.

### ನಿಜಗಲ್ಲಿನ ರಾಣಿ ಗಿರಿಜವ್ವೆ

ಮೈಸೂರಿನ ರಾಜರಿಗೆ ಅಧೀನನಾಗಿ ಪಾಳೆಪಟ್ಟನ್ನು ನಡೆಸುತ್ತಿದ್ದ ನಿಜಗಲ್ಲಿನ ಪಾಳೆಯಗಾರ ರಾಮರಸ ನಾಯಕನಿಗೆ ಲಕುಮವ್ವೆ ಹಾಗೂ ಗಿರಿಜವ್ವೆ ಇಬ್ಬರು ಮಡದಿಯರು. ಲಕುಮವ್ವೆಗೆ ಮಕ್ಕಳಿರಲಿಲ್ಲ. ಹಾಗಾಗಿ ಎರಡನೆಯ ಮಡದಿ ಗಿರಿಜವ್ವೆಗಿದ್ದ ಒಬ್ಬ ಮಗನೇ ಉತ್ತರಾಧಿಕಾರಿಯಾಗಲಿದ್ದ. ಈ ನಡುವೆ ಮರಾಠೆಯ ಸೈನಿಕರು ಮೂರುಬಾರಿ ನಿಜಗಲ್ಲಿಗೆ ಮುತ್ತಿಗೆಹಾಕಿ ರಾಮರಸನಾಯಕನನ್ನು ಸೋಲಿಸಲಾರದೆ ಹಿಂದಿರುಗಿರುತ್ತಾರೆ. ಆದರೆ ನಾಲ್ಕನೆಯ ಬಾರಿ ಸದಾಶಿವರಾಯನ ಮುಂದಾಳತ್ವದಲ್ಲಿ ನಿಜಗಲ್ಲನ್ನು ಮುತ್ತಿದ ಮರಾಠೆಯವರೊಂದಿಗೆ ರಾಮರಸನಾಯಕನ ಎರಡನೆಯ ಮಡದಿ ಗಿರಿಜವ್ವೆಯ ತಮ್ಮ ಕಸ್ತೂರಿನಾಯಕ ಶಾಮೀಲಾಗುತ್ತಾನೆ. ಮುಂದೆ ತಾನು ಪಾಳೆಯ ಪಟ್ಟಿನ ನಾಯಕನಾಗಬೇಕೆಂಬ ದುರಾಸೆಯಿಂದ ಮರಾಠರೊಂದಿಗೆ ಒಪ್ಪಂದ ಮಾಡಿಕೊಂಡ ಕಸ್ತೂರಿನಾಯಕ, ತನ್ನ ಭಾವ ರಾಮರಸನಾಯಕನ ಸಾವಿಗೆ ಕಾರಣನಾಗುತ್ತಾನೆ. ನಿಜಗಲ್ಲು ಮರಾಠೆಯವರ ಪಾಲಾಗುತ್ತದೆ.

ನಿಜಗಲ್ಲಿನ ಉತ್ತರಾಧಿಕಾರಿಯಾಗಲು ಹವಣಿಸಿದ ತಮ್ಮನ ಕುತಂತ್ರ ಅರಿತ ಗಿರಿಜವ್ವೆ ತನ್ನ ಮಗನಿಗೆ ನಾಯಕ ಪಟ್ಟವನ್ನು ಉಳಿಸಲು ಹಾಗೂ ತನ್ನ ಪತಿಯ ಮರಣಕ್ಕೆ ಪ್ರತಿಕಾರ ತೆಗೆದುಕೊಳ್ಳಲು ಪಣತೊಡುತ್ತಾಳೆ. ಗಿರಿಜವ್ವೆ, ಮುಂದಿನ ನಿಜಗಲ್ಲಿನ ನಾಯಕನಾಗಲು ಸಜ್ಜಾಗಿರುವ ತನ್ನತಮ್ಮ ಕಸ್ತೂರಿ ನಾಯಕನೊಂದಿಗೆ ಮೆರವಣಿಗೆಯಲ್ಲಿ ಭಾಗವಹಿಸಿ, ಕೋಟೆಯಮೇಲೆ ಗೊತ್ತು ಮಾಡಿದ ಸ್ಥಳಕ್ಕೆ ಬಂದು ತನ್ನ ತಮ್ಮನಿಗೆ ಆರತಿ ಮಾಡುವ ನೆವದಿಂದ ಅವನನ್ನು ಬಲವಾಗಿ ಹಿಡಿದುಕೊಂಡು ಕೋಟೆಯ ಕಂದಕಕ್ಕೆ ಹಾರಿ ತನ್ನೊಂದಿಗೆ ಕಸ್ತೂರಿನಾಯಕನನ್ನೂ ಬಲಿತೆಗೆದುಕೊಳ್ಳುತ್ತಾಳೆ. ಈ ಪ್ರಕಾರವಾಗಿ ಗಿರಿಜವ್ವೆ ತನ್ನ ಮಗನಿಗೆ ನಾಯಕ ಪಟ್ಟವನ್ನು ಉಳಿಸಿ, ತನ್ನ ಪತಿಯ ಮರಣಕ್ಕೆ ಪ್ರತಿಕಾರ ತೆಗೆದುಕೊಳ್ಳುತ್ತಾಳೆ. ಜನಪದದ ಕಥೆಯೊಂದನ್ನು ಆಧರಿಸಿ ಮಾಸ್ತಿಯವರು ರಚಿಸಿರುವ ಈ ವಿಚಾರವು ಐತಿಹಾಸಿಕವಲ್ಲ ಎಂದು ಇತಿಹಾಸಕಾರರು ಅಭಿಪ್ರಾಯ ಪಡುತ್ತಾರೆ[೩೪].

### ಕಿತ್ತೂರು ಚೆನ್ನಮ್ಮ

ಕಿತ್ತೂರು ರಾಣಿ ಚೆನ್ನಮ್ಮಳ ಕುರಿತಾಗಿ ಶಿಷ್ಟಕಾವ್ಯಗಳು ರಚಿತವಾಗಿರುವುದಕ್ಕಿಂತ ಅಧಿಕವಾಗಿ ಜನಪದ ಕಾವ್ಯಗಳು ರಚಿತವಾಗಿವೆ. ಚೆನ್ನಮ್ಮನ ಕುರಿತಾದ ಗೀತೆಗಳು ಅವಳ ಜೀವಿತಾವಧಿಯ ಕಾಲದಿಂದ ಇಂದಿನವರೆಗೂ ವಿಭಿನ್ನ ಪ್ರಕಾರಗಳಲ್ಲಿ ದೊರಕುತ್ತಲೇ ಇವೆ. ಕುಮಾರರಾಮ, ಸಂಗೊಳ್ಳಿರಾಯಣ್ಣರಂತೆ ಚೆನ್ನಮ್ಮಳ ಯಶೋಗಾಥೆಯೂ ಕೂಡ ಜನಮನ್ನಣೆಯನ್ನು ಯಾವ ಮಟ್ಟದಲ್ಲಿ ಗಳಿಸಿತ್ತೆನ್ನುವುದಕ್ಕೆ ಇವಳ ಕುರಿತಾಗಿ ಸಿಗುವ ಅಸಂಖ್ಯಾತ ಗೀತೆಗಳೇ ಸಾಕ್ಷಿಯಾಗಿವೆ. ಇಲ್ಲಿ ವಿಭಿನ್ನ ನಿರೂಪಣೆಯೊಂದಿಗೆ ಪ್ರಸಿದ್ಧವಾದ ಕೆಲವು ಗೀತೆಗಳನ್ನು ಮಾತ್ರ ಪರಿಗಣಿಸಲಾಗಿದೆ.

**ಕರಿಯಾತಿ ಕಾಳಗ:** ಇದು ಚೆನ್ನಮ್ಮಳ ಕುರಿತಾಗಿ ರಚಿತವಾಗಿರುವ ಕೋಲು ಪದ. ಸಾಧಾರಣವಾಗಿ ಚೆನ್ನಮ್ಮಳ ಕುರಿತಾಗಿ ದೊರಕುವ ಗೀತೆಗಳು ಚೆನ್ನಮ್ಮ–ಬ್ರಿಟಿಶ್‌ರ ನಡುವೆ ನಡೆದ ಕಾಳಗವನ್ನು ವಿವರಿಸುತ್ತವೆ, ಆದರೆ ಈ ಗೀತೆಯು ಬೆಳವಡಿ ಸಂಸ್ಥಾನದೊಂದಿಗೆ ಚೆನ್ನಮ್ಮಳು ಕಾದಾಡಿದ ವಿಚಾರವನ್ನು ತಿಳಿಸುತ್ತದೆ.

ಕಿತ್ತೂರಿನ ನೆರೆಯ ಸಂಸ್ಥಾನವಾದ ಬೆಳವಡಿಯ ನಾಯಕರನ್ನು ಚೆನ್ನಮ್ಮಳ ಪತಿ ಮಲ್ಲಸರ್ಜನು ಮೋಸದಿಂದ ಕೊಂದು, ವಾರಸುದಾರರೇ ಇಲ್ಲದಂತೆ ಮಾಡಿರುತ್ತಾನೆ. ಮುಂದೆ, ಕಿತ್ತೂರಿನ ರಾಜಕೀಯ ಪರಿಸ್ಥಿತಿ ಸರಿಯಿಲ್ಲದ ಸಂದರ್ಭದಲ್ಲಿ ಬೆಳವಡಿ ಸಂಸ್ಥಾನದ ಮನೆತನಕ್ಕೆ ಸಂಬಂಧಪಟ್ಟ ಬೊಮ್ಮಪ್ಪ ದೇಸಾಯಿ ಎಂಬುವನು ಸೈನ್ಯ ಸಮೇತ ಕಿತ್ತೂರಿನ ಮೇಲೆ ದಂಡೆತ್ತಿ ಬರುತ್ತಾನೆ. ಈ ವೇಳೆಗೆ ರಾಜ್ಯಾಡಳಿತವನ್ನು ನೋಡಿಕೊಳ್ಳುತ್ತಿದ್ದ ಚೆನ್ನಮ್ಮ, ಎದುರಾಳಿಯ ದಂಗೆಯನ್ನು ಸದೆಬಡಿಯಲು ಕಿತ್ತೂರು ರಾಜ್ಯದ ಸೈನ್ಯಾಧಿಕಾರಿ ರಾಮಯ್ಯನ ಮುಖಂಡತ್ವದಲ್ಲಿ ಸೈನ್ಯವನ್ನು ಕಳಿಸುತ್ತಾಳೆ. ಆದರೆ ರಾಮಯ್ಯ ವೈರಿಗಳಿಗೆ ಸೆರೆಯಾಳಾಗುತ್ತಾನೆ. ಕಡೆಗೆ ಸ್ವತಃ ಚೆನ್ನಮ್ಮನೇ ಕಾಳಗಕ್ಕೆ ಹೊರಡುತ್ತಾಳೆ.

**ಸೆರೆಯ ಹಿಡಿದವರನ್ನು ತರಿದಾಳೊ ರುಂಡವ**
**ಭರದಿಂದ ಬಿಡಿಸಿ ತರತಾಳೊ**
**ಕರಿಸ್ಯಾಳೋ ಮಂದಿನ್ನ ಕೊರಿಸ್ಯಾಳೋ ಕಕಾಲು**
**ತ್ವರದಿಂದ ಕಿತ್ತೂರಕ ಸಾಗ್ಯಾಳೋ ॥**

ಕರಿಯಾತಿ ಗ್ರಾಮದ ಸಮೀಪ ಯುದ್ಧಮಾಡಿ ಎದುರಾಳಿಗಳನ್ನು ಹಿಮ್ಮೆಟ್ಟಿಸಿ, ರಾಮಸ್ವಾಮಿಯನ್ನೂ ಬಿಡಿಸಿಕೊಂಡು ಬರುತ್ತಾಳೆ. ಕರಿಯಾತಿ ಗ್ರಾಮದ ಬಳಿಯ ಯುದ್ಧವಾದ್ದರಿಂದ ಇದನ್ನು ಕರಿಯಾತಿ ಕಾಳಗವೆಂದು ಕರೆಯಲಾಗುತ್ತದೆ.

**ಕಿತ್ತೂರು ಮಿಂಚಿನ ಕಾಳಗ:** ಇದೊಂದು ಲಾವಣಿ. ಇದರಲ್ಲಿ ಬಣ್ಣಿಸಿರುವಂತೆ, ಚೆನ್ನಮ್ಮ ದತ್ತಕ ಮೊಮ್ಮಗನಿಗೆ ಪಟ್ಟ ಕಟ್ಟಿದ ಸುದ್ದಿ ತಿಳಿದ ಥ್ಯಾಕರೆ ಕಿತ್ತೂರಿನ ಮೇಲೆ ದಾಳಿ ಮಾಡುತ್ತಾನೆ. ಆದರೆ ವೀರಾವೇಶದಿಂದ ಹೋರಾಡಿದ ಚೆನ್ನಮ್ಮನ ಕಡೆಯವರು ವೈರಿಯ ಮೇಲೆರಗಿ ಥ್ಯಾಕರೆಯ ರುಂಡ ಚೆಂಡಾಡುತ್ತಾರೆ. ಇದರಿಂದ ರೊಚ್ಚಿಗೆದ್ದ ಮಂಡೇಲ ಸಾಹೇಬ ಕಂಪನಿಗೆ ಪತ್ರ ಬರೆದು ಹೆಚ್ಚಿನ ಸೈನ್ಯ ತರಿಸುತ್ತಾನೆ. ಚೆನ್ನಮ್ಮ ತನ್ನ ಸೈನಿಕರಿಗೆ ಉಡುಗೊರೆ ನೀಡಿ ಹುರಿದುಂಬಿಸುತ್ತಾಳೆ. ಆದರೆ ದೇಶದ್ರೋಹಿಗಳ ಸಂಚಿನಿಂದ ಚೆನ್ನಮ್ಮನ ಆಸೆ ಫಲಿಸುವುದಿಲ್ಲ ಅಕ್ಕ ಚೆನ್ನವ್ವ ಅತ್ತಂಥ ಕಣ್ಣೀರು ಚಿಕ್ಕ ಹೊಳೆಯಾಗಿ ಹರಿದವು ಎಂದು ಪದ್ಯ ಮುಗಿಯುತ್ತದೆ.

**ಚೆನ್ನಮ್ಮ ರಾಣಿ:** ಇದು ಚೆನ್ನಮ್ಮ ರಾಣಿಯು ಥ್ಯಾಕರೆಯೊಂದಿಗೆ ನಡೆಸಿದ ಯುದ್ಧದ ವಿಚಾರವನ್ನು ಬಣ್ಣಿಸಿ ಹಾಡುವ ಪದ.

**ಸಟ್ಟನ್ನ ಸರ್ವತ್ತು ನಟ್ಟಿರುಳು ರಾತರಿ**
**ಕಾಗೆ ಗುಬ್ಬೀಯ ಸುಳುವಿಲ್ಲ**
**ಚೆನ್ನವ್ವ ಮಂಚದ ಮ್ಯಾಲ ಸುಖನಿದ್ದಿ ಮಾಡೂತ**
**ಎಚ್ಚರೆಂಬೂದು ಮೊದಲಿಲ್ಲ**

ಇಂಥ ಗಾಢ ನಿದ್ದೆಯಲ್ಲಿರುವಾಗ ಅಗಲಿದ ಪತಿ ಮಲ್ಲಸರ್ಜ ಕನಸಿನಲ್ಲಿ ಬಂದು ಕಿತ್ತೂರನ್ನು ಉಳಿಸಿಕೊಳ್ಳಲು ಹೇಳಿದ ಮಾತಿಗೆ ಚೆನ್ನಮ್ಮಳು ಸಂಗೊಳ್ಳಿ ರಾಯಣ್ಣ, ಅಂಕಲಗಿ ಅಡಿವೆಪ್ಪ, ಮಡಿವಾಳ ಮಹದೇವಪ್ಪ, ಕಲ್ಮಠದ ಮಡಿವಾಳಸ್ವಾಮಿ, ತಳವಾರ ಫಕ್ಕೀರ, ಗೌಡರ ಬಸವಪ್ಪ, ಅಂಬಡಗಟ್ಟಿ ಗುರುಸಿದ್ದಪ್ಪ ಇವರಿಗೆಲ್ಲ ಯುದ್ಧಕ್ಕೆ ನೆರವಾಗಬೇಕೆಂದು ಪತ್ರ ಬರೆಯಿಸುತ್ತಾಳೆ.

ಯುದ್ಧದ ಸಿದ್ಧತೆ ಅಷ್ಟೇ ಅಲ್ಲದೆ, ಯುದ್ಧದ ವಿವರಣೆಯನ್ನೂ ಈ ಗೀತೆ ನೀಡುತ್ತದೆ. ಚೆನ್ನಮ್ಮಳು ಗಂಡುವೇಷ ಧರಿಸಿ, ಖಡ್ಗಹಿಡಿದು ಯುದ್ಧಕ್ಕೆ ಅಡಿ ಇಟ್ಟಳು. ಇಲ್ಲಿ ಇವಳ ಸಹಾಯಕ್ಕೆ ನಿಂತ ಹೆಗ್ಗೇರಿ, ವಕ್ಕುಂದ, ಹೂಲಿ, ಹೊಂಗಲ, ಕೋರಿಕೊಪ್ಪ, ನಾವಲಗಟ್ಟಿ, ಇಲಿಹಾಳ, ಮರಕಟ್ಟಿ, ಹುಣಸೀಕಟ್ಟಿ, ಮಣ್ಣೂರು, ಗರಗ ಮೊದಲಾದ ನಾಯಕರ ಹೆಸರುಗಳನ್ನು ಅವರ ಸಹಾಯಗಳ ವಿವರದೊಂದಿಗೆ ನೀಡಲಾಗಿದೆ. ಈ ಎಲ್ಲ ದಂಡು ಧಾರವಾಡದ ಮಾಳಕ್ಕೆ ಹೊರಟು ಥ್ಯಾಕರೆ ಸಾಹೇಬನ ದಂಡನ್ನು ಸುತ್ತುಕಟ್ಟಿ ಹೋರಾಡುತ್ತದೆ. ವೀರಾವೇಶದಿಂದ ಕಾದಾಡಿದ ಚೆನ್ನವ್ವ ಥ್ಯಾಕರೆ ಸಾಹೇಬನ ರುಂಡ ಕತ್ತರಿಸಿದ ಚೆನ್ನಮ್ಮ ಹಿಂದಕ್ಕೆ ಹೊರಳಿ ನೋಡಲಿಲ್ಲ, ಎಂಬ ವಿವರಣೆಯೊಂದಿಗೆ ಅವಳ ಕುದಿವ ಕೋಪವನ್ನು ಜನಪದ ಕವಿ ಬಣ್ಣಿಸಿದ್ದಾನೆ. ಇದರೊಂದಿಗೆ, ಸಾಹೇಬನ ಎಳೆಯ ಮಕ್ಕಳ ಮೇಲೆ ಕರುಣೆ ತೋರಿ ಜಕಾತಿ ಬಸವಲಿಂಗಪ್ಪನನ್ನು ಕರೆಯಿಸಿ 'ಈ ಮಕ್ಕಳನ್ನು ನಮ್ಮ ಮಕ್ಕಳಂತೆ ಸಲಹುದು' ಎಂದು ಅಪ್ಪಣೆ ನೀಡಿದಳೆಂಬ ವಿಚಾರ ಚೆನ್ನಮ್ಮನ ಹೆಂಗರುಳನ್ನೂ ಪರಿಚಯಿಸುತ್ತದೆ. ರೋಷ–ಮಮಕಾರ ಎರಡೂ ಗುಣಗಳ ಚೆನ್ನಮ್ಮಳ ಚಿತ್ರಣ ಇಲ್ಲಿ ಮೂಡಿ ಬಂದಿದೆ.

**ಚೆನ್ನಮ್ಮ ರಾಣಿಯ ಕೊನೆಯ ಕಾಳಗ:** ಇದು ಕಾಳಗದ ಬಣ್ಣನೆಯನ್ನು ಮಾಡುವ ಮತ್ತೊಂದು ಗೀತೆ. ಕೈಯಲ್ಲಿ ಖಡ್ಗ ಝಳಪಿಸುತ್ತಾ, ಚಂಡಿ, ಚೌರಿಯಂತೆ ಭೀಕರಳಾಗಿ ತೋರುವ ಚೆನ್ನಮ್ಮಳು ಥ್ಯಾಕರೆಯ ರುಂಡವನ್ನು ಯುದ್ಧರಂಗದಲ್ಲಿ ಚೆಂಡಾಡಿ ಅವನ ಅಧಿಕಾರಿಗಳಾದ ಸ್ಟೀವನ್‌ಸನ್, ಇಲಿಯಟ್‌ರನ್ನು ಸೆರೆಹಿಡಿಯುತ್ತಾಳೆ.

ಇದರಿಂದ ಕುಪಿತನಾದ ಅಧಿಕಾರಿ ಚಾಪ್ಲಿನ್, ಎಲ್ಲ ಕಡೆಯಿಂದ ತಮ್ಮ ಸೈನ್ಯವನ್ನು ಕಲೆಹಾಕಿ ದೊಡ್ಡ ದಂಡಿನೊಡನೆ ಲೆಫ್ಟಿನಂಟ್ಜನರಲ್ ಡೀಕನ್ ಎಂಬ ಅಧಿಕಾರಿಯ ಮುಂದಾಳತ್ವದಲ್ಲಿ ಕಿತ್ತೂರಿಗೆ ಮುತ್ತಿಗೆ ಹಾಕಲು ಆದೇಶಿಸುತ್ತಾನೆ. ಹೋರಾಟಕ್ಕೆ ಸಜ್ಜಾಗಲು ಚೆನ್ನಮ್ಮ ಮೊಗಲಾಯಿಗೆ ಪತ್ರಬರೆದು ನೆರವು ಕೋರುತ್ತಾಳೆ. ಇವಳ ಕೋರಿಕೆ ಮನ್ನಿಸಿದ ಚಂದೂಲಾಲನು ಹತ್ತುಸಾವಿರ ಪೌಜನ್ನು ತನ್ನ ತಮ್ಮನ ನೇತೃತ್ವದಲ್ಲಿ ಕಳಿಸುತ್ತಾನೆ. ಆಂಗ್ಲರು ಬಳ್ಳಾರಿಯಿಂದ ಕುಂಬಾರ ಅರಸನ ದಂಡು, ಮೈಸೂರಿನ ದಂಡನ್ನು ತರಿಸಿ ಕರ್ನಲ್ ಆಲ್ಬರ್ಟ್‌ನ ನೇತೃತ್ವದಲ್ಲಿ ಕಿತ್ತೂರಿಗೆ ಮುತ್ತಿಗೆ ಹಾಕುತ್ತಾರೆ.

ಚೆನ್ನಮ್ಮನ ಪಡೆ ಆಂಗ್ಲರ ಸೈನ್ಯವನ್ನು ಸೋಲಿಸಿ, ಪ್ರಮುಖರನ್ನು ಸೆರೆ ಹಿಡಿಯುತ್ತಾರೆ. ಚೆನ್ನಮ್ಮಳು ಸೆರೆ ಸಿಕ್ಕವರನ್ನು ಗೌರವದಿಂದ ನಡೆಸಿಕೊಳ್ಳುತ್ತಾಳೆ. ಕುತಂತ್ರ ಹೂಡಿದ ಆಂಗ್ಲರು ಕಿತ್ತೂರಿನ ಕರಣಿಕ ನರಸಿಂಗರಾಯನಿಗೆ ಲಂಚಕೊಟ್ಟು ಕೋಟೆ ಒಳಗಿನ ರಹಸ್ಯಗಳನ್ನು ಅರಿತುಕೊಳ್ಳುತ್ತಾರೆ. ಸಂಚುಹೂಡಿ ಗರಗದ ಹಳ್ಳದಿಂದ ಹೊರಟು ಕಿತ್ತೂರು ಸಮೀಪಕ್ಕೆ ಬಂದು ಕೆಮ್ಮಣ್ಣುಗುಂಡಿಯಲ್ಲಿ ಕಾದಾಟಕ್ಕಿಳಿಯುತ್ತಾರೆ. ಇವರ ಮೋಸಕ್ಕೆ ಕಿತ್ತೂರು ಪಡೆ ಸೋಲುಣಬೇಕಾಗುತ್ತದೆ. ಚೆನ್ನಮ್ಮಳು ಪತಿ ಮಲ್ಲಸರ್ಜ, ವೀರಪ್ಪದೇಸಾಯಿ ಶಿವಲಿಂಗರುದ್ರ ಸರ್ಜರನ್ನು ನೆನೆದು ಸೊಸೆಯಂದಿರನ್ನು ಮುಂದಿಟ್ಟುಕೊಂಡು ಕಣ್ಣೀರು ಹಾಕುತ್ತಾಳೆ.

**ಕಿತ್ತೂರು ರಾಣಿ ಚೆನ್ನಮ್ಮನ ಅಂತ್ಯ:**

ಈ ಗೀತೆಯು ಚೆನ್ನಮ್ಮಳು ಬ್ರಿಟಿಶ್‌ರೊಂದಿಗೆ ನಡೆಸಿದ ಎರಡನೆಯ ಯುದ್ಧದ ಚಿತ್ರಣವನ್ನು ನೀಡುತ್ತದೆ. ಕಿತ್ತೂರು ಸಂಸ್ಥಾನ ಎರಡನೆಯ ಯುದ್ಧದಲ್ಲಿ ಬ್ರಿಟಿಶರ ಸೈನ್ಯ ಹಿಮ್ಮೆಟ್ಟತೊಡಗಿತು. ಆಗ ಚೆನ್ನಮ್ಮನ ಕಡೆಯವರ ಒಳಪಿತೂರಿಯಿಂದ ಯುದ್ಧಕ್ಕೆ ಸಿದ್ಧಪಡಿಸಿಟ್ಟಿದ್ದ ಮದ್ದಿಗೆ ಎಣ್ಣೆ ಬೆರೆಸಿ ಮೋಸ ಮಾಡಲಾಯಿತು. ಸುಳಿವು ನೀಡದೆ ಬ್ರಿಟಿಶ್ ಸೈನ್ಯ ಕೆಮ್ಮಣ್ಣಿನ ಮರಡಿಗೆ ಮುಖಾಂತರ ಬಂದು ಕಿತ್ತೂರಿನ ಕೋಟೆಯನ್ನು ಭಗ್ನಗೊಳಿಸಿ, ಊರನ್ನು ಪ್ರವೇಶಿಸಿ ಲೂಟಿಮಾಡತೊಡಗಿತು. ಕಿತ್ತೂರನ್ನು ಕೈವಶ ಪಡಿಸಿಕೊಂಡ ಆಂಗ್ಲರು ಅರಮನೆಯತ್ತ ನಡೆದು ಬಂದರು. ಅರಮನೆಯಲ್ಲಿ ನಿಲ್ಲದ ಚೆನ್ನಮ್ಮ ಸೊಸೆಯಂದಿರಾದ ವೀರಮ್ಮ, ಜಾನಕಿಬಾಯಿಯರೊಂದಿಗೆ ಹೊಂಗಲಕ್ಕೆ ಹೋಗಿ ಸೆರೆಯಾಗುತ್ತಾಳೆ.

**ವೀರಮ್ಮ:**

ಕಿತ್ತೂರು ಚೆನ್ನಮ್ಮನ ಸೊಸೆ ವೀರಮ್ಮನ ಕುರಿತಾಗಿ ಕೂಡ ಜನಪದ ಗೀತೆಗಳು ರಚಿತವಾಗಿವೆ. ವೀರಮ್ಮ ಚೆನ್ನಮ್ಮನ ಹಾಗೆ ರಾಜ್ಯಭಾರ ಮಾಡಿದವಳಲ್ಲವಾದರೂ, ಚೆನ್ನಮ್ಮನಿಗೆ ಬೆಂಬಲವಾಗಿ ಇದ್ದವಳು. ಚೆನ್ನಮ್ಮನ ಮರಣಾನಂತರ ಬ್ರಿಟೀಶರ ವಿರುದ್ಧ ಹೋರಾಡಲು ಸಂಗೊಳ್ಳಿರಾಯಣ್ಣ ಮೊದಲಾದವರಿಗೆ ವೀರಮ್ಮ ಪ್ರೇರಣೆಯಾಗಿದ್ದಳು. ಕಿತ್ತೂರಿನ ಜನತೆಯಿಂದ ದೂರ ಇಡಲೆಂದು ಇವಳನ್ನು ಹೊಂಗಲದಿಂದ ಧಾರವಾಡಕ್ಕೆ ಸಾಗಿಸಲಾಯಿತು. ವೀರಮ್ಮನನ್ನು ಉಳಿಸಿಕೊಳ್ಳಲು ಸಂಗೊಳ್ಳಿರಾಯಣ್ಣ ಪ್ರಯತ್ನ ಪಡುತ್ತಾನಾದರೂ ಇವಳು ಜೀವಂತವಾಗಿ ಇರುವುದೇ ಆಪತ್ತು ಎಂದು ಬಗೆದ ಶತ್ರುಗಳು ವಿಷಪ್ರಾಶನ ಮಾಡಿಸಿ ಜೀವಕ್ಕೇ ಕುತ್ತು ತರುತ್ತಾರೆ. ವೀರಮ್ಮನ ಕುರಿತಾದ ಈ ಘಟನೆಗಳು 'ಕಿತ್ತೂರು ಚೆನ್ನವ್ವನ ಸೊಸಿ', 'ಈರವ್ವನ ದುರಂತ ಮರಣ' ಮೊದಲಾದ ಜನಪದ ಗೀತೆಗಳಲ್ಲಿ ಚಿತ್ರಿತವಾಗಿವೆ.

**ಕೊಡಗಿನ ಲಿಂಗರಾಜಮ್ಮ (ವೀರರಾಜಮ್ಮ)**

ಪಿರಿಯಾಪಟ್ಟಣದ ಕಾಳಗದ ಜೊತೆಯಲ್ಲಿ ಹಾಡುವ ಕಂಸಾಳೆ ಪದ. ಇದು ವಿಭಿನ್ನ ರೂಪಗಳಲ್ಲಿ ದೊರಕುತ್ತದೆ. ದೈವದ ಥಳಕು ಹಾಕಿ ಹೇಳುವ ಕಥೆಯಲ್ಲಿ ಸಂಪೂರ್ಣವಾಗಿ ಪುರಾಣದ ಲೇಪವಿರುವುದನ್ನು ಕಾಣುತ್ತೇವೆ.

ಅಸ್ಪಷ್ಟ ಐತಿಹಾಸಿಕ ಎಂಬ ವಿಭಾಗಕ್ಕೆ ಸೇರಿಸಬಹುದಾದ ಪದದಲ್ಲಿ ತಿಳಿಸಿರುವಂತೆ, ಕೊಡಗಿನ ದೊರೆಯು ತವರಿಗೆಂದು ಬಂದ ನೆರೆರಾಜ್ಯದ ಅರಸಿಯಾದ ತನ್ನ ತಂಗಿಯನ್ನು ಹೀನಾಯವಾಗಿ ಕಂಡು, ಕೂಡಿ ಹಾಕುತ್ತಾನೆ. ತನಗೆ ಒದಗಿದ ಯಾವುದೋ ಸಂಕಷ್ಟ ನಿವಾರಣೆಗಾಗಿ ಜೋಯಿಸರು ತಿಳಿಸುವಂತೆ, ಇವಳ ಮಗುವನ್ನು (ಭಿನ್ನ ಪಾಠದಲ್ಲಿ ಸಿಗುವಂತೆ ಇವಳ ಗಂಡನನ್ನು) ಬಲಿ ಕೊಡಲು ನಿರ್ಧರಿಸುತ್ತಾನೆ. ಅಣ್ಣನ ಸಂಚನ್ನು ಅರಿತ ತಂಗಿ, ತವರಿನಿಂದ ತಪ್ಪಿಸಿಕೊಂಡು ಬಂದು ಪತಿಗೆ ತಿಳಿಸುತ್ತಾಳೆ. ಆನಂತರ ಈ ಇಬ್ಬರ ನಡುವೆ ಯುದ್ಧ ನಡೆಯುತ್ತದೆ. ಯುದ್ಧದಲ್ಲಿ ವೀರಗಚ್ಚೆ ಹಾಕಿ ನಿಂತ ಲಿಂಗಮ್ಮ ಕೂಡ ಸೆಣಸಾಡಿ ಗೆಲುವನ್ನು ಸಾಧಿಸುತ್ತಾಳೆ. ಪೌರಾಣಿಕ ಲೇಪನವಿರುವ ಗೀತೆಯ ಅಂತ್ಯದಲ್ಲಿ ಮರಣಿಸಿದ ತನ್ನ ಮಗುವಿಗಾಗಿ, ದೈವಕ್ಕೆ ಮೊರೆಹೋಗಿ ಬದುಕಿಸಿಕೊಳ್ಳುತ್ತಾಳೆ.

ಕೊಡಗನ್ನು ಆಳಿದ ಹಾಲೇರಿ ವಂಶದ ವೀರಶೈವ ಅರಸರಲ್ಲಿ ಲಿಂಗರಾಜನ ನಂತರ ಇವನ ಮಗ ವೀರರಾಜೇಂದ್ರ (೧೮೨೦–೩೪) ಆಳ್ವಿಕೆಗೆ ಬರುತ್ತಾನೆ. ಇವನ ಸಹೋದರಿ ದೇವಮ್ಮಾಜಿ. ಇವಳನ್ನೇ ಲಿಂಗಮ್ಮ ಎಂದು ಜನಪದ ಗೀತೆಯಲ್ಲಿ ಕರೆದಿರಬಹುದು. ಇವಳ ಪತಿ ಚೆನ್ನಬಸಪ್ಪ. ಅನ್ಯ ಜಾತಿಯವನೆಂದು ಇವನೊಡನೆ ತಂಗಿಯ ವಿವಾಹ ನಡೆಸಲು ವೀರರಾಜೇಂದ್ರ ಒಪ್ಪದೇ ಇದ್ದಾಗ, ಇವನು ಲಿಂಗಾಯಿತ ಧರ್ಮಕ್ಕೆ ಮತಾಂತರವಾಗುತ್ತಾನೆ. ಮದುವೆ ಆದಮೇಲೆ ಕೂಡ ವೀರರಾಜೇಂದ್ರನಿಗೆ ಇವರ ಮೇಲೆ ಅಸಮಾಧಾನ ಇದ್ದೇ ಇರುತ್ತದೆ. ಇದನ್ನರಿತ ಇವರೀರ್ವರು ವೀರರಾಜೇಂದ್ರನಿಗೆ ತಿಳಿಯದಂತೆ ತಪ್ಪಿಸಿಕೊಂಡು ಬಂದು ಬ್ರಿಟಿಷರ ರಕ್ಷಣೆಯಲ್ಲಿ ಇರುತ್ತಾರೆ. ಕೊಡಗಿನಲ್ಲಿಯೇ ಬಿಟ್ಟುಬಂದ ಇವರ ಮಗುವನ್ನು ವೀರರಾಜೇಂದ್ರನ ಹಿರಿಯ ರಾಣಿ ಸಾಕಿಕೊಳ್ಳುತ್ತಾಳೆ.

ಈ ಪ್ರಕರಣಕ್ಕೆ ಭಿನ್ನ ರೂಪವನ್ನು ನೀಡಿ ನಾನಾ ರೂಪದಲ್ಲಿ ಕಂಸಾಳೆ ಪದವನ್ನು ಹೆಣೆಯಲಾಗಿದೆ[೩೪೮]. ಈ ಕಂಸಾಳೆಪದಗಳ'ಲ್ಲಿ ಲಿಂಗಮ್ಮ ತನ್ನ ಮಗುವನ್ನು ಬೆನ್ನಿಗೆ ಕಟ್ಟಿಕೊಂಡು ಅಣ್ಣನ ಸೈನ್ಯದ ವಿರುದ್ಧ ಯುದ್ಧ ಮಾಡುವ ವಿವರಣೆ ಇದೆ. ವೀರಗಚ್ಚೆಯನ್ನು ಹಾಕಿ, ಮಗುವಿಗಾಗಿ ಹೋರಾಡುವ ಪ್ರಸಂಗವೇ ಈ ಇಡೀ ಕಂಸಾಳೆಯಲ್ಲಿ ಮೇಳೈಸುವ ಘಟನೆಯಾಗಿ ಮೂಡಿ ಬಂದು, ತೊಟ್ಟಿಲನ್ನು ತೂಗುವ ಕೈ, ಕತ್ತಿಯನ್ನೂ ಝಳಪಿಸುತ್ತದೆ ಎಂಬ ಹೇಳಿಕೆಯೊಂದಿಗೆ ಇವಳ ಸಾಹಸಕ್ಕೆ ಒತ್ತುನೀಡಿರುವುದರಲ್ಲಿ ಇದೊಂದು ಮಹಿಳಾ ಪ್ರಧಾನ ಜನಪದ ಕಾವ್ಯವಾಗಿ ಮಹತ್ವ ಪಡೆದಿದೆ.

ನಿಂಗವ್ವ, ಲಿಂಗಮ್ಮ, ಲಿಂಗವ್ವನೆಂಬ ವಿಭಿನ್ನಹೆಸರುಗಳಿಂದ ಹಲವಾರು ಗೀತೆಗಳಲ್ಲಿ ಕಂಡುಬರುವ ಈ ಪ್ರಕರಣವು, ಕೊಡಗಿನ ಅರಸುಮನೆತನದ ಅಣ್ಣ–ತಂಗಿಯರ ನಡುವಿನ ಜಗಳ ಹಾಗೂ ತಂಗಿಯ ಮಗುವನ್ನು ತನ್ನ ಬಳಿಯಲ್ಲಿಯೇ ಇರಿಸಿಕೊಂಡ ದೊರೆಯ ವಿಚಾರ, ಇದಕ್ಕಾಗಿ ಬ್ರಿಟೀಶ್‌ರ ಮೊರೆಹೋದ ಲಿಂಗಮ್ಮನ ಪರಿಸ್ಥಿತಿ ಈ ಜನಪದ ಕಾವ್ಯಗಳಲ್ಲಿ ವಿಭಿನ್ನ ರೂಪ ತಳೆದಿರುವುದನ್ನು ಕಾಣಬಹುದು.

## ದೈವತ್ವಕ್ಕೇರಿದ ಅರಸಿಯರ ಮೇಲಿನ ಗೌರವ

ನಮ್ಮ ನಾಡಿನಾದ್ಯಂತ ಕಂಡುಬರುವ ಮಾಸ್ತಿಕಲ್ಲುಗಳಿಗೆ ಹಲವೆಡೆ ಬಹಳ ಮಹತ್ವ ನೀಡಲಾಗಿದೆ. ಪತಿಯೊಡನೆ ಚಿತೆ ಏರಿ ಮಹಾಸತಿಯಾದವಳಿಗೆ ದೈವತ್ವ ನೀಡಿ ಮಾಸ್ತಿಯಮ್ಮ, ಮಾಸ್ತಮ್ಮನ ಗುಡಿ ಕಟ್ಟಲಾಗಿದೆ. ಇದೇ ರೀತಿ ವೀರಗಲ್ಲುಗಳನ್ನೂ ಪೂಜಿಸುವ ಪದ್ಧತಿ ಇದ್ದು, ಊರಿಗಾಗಿ ಪ್ರಾಣ ನೀಡಿದ ಒಡತಿಯನ್ನು ದೈವತ್ವಕ್ಕೇರಿಸಿ ಪೂಜಿಸುವಲ್ಲಿನ ವೈಶಿಷ್ಟ್ಯವನ್ನು ತುಮಕೂರು ಜಿಲ್ಲೆಯ ತುರುವೇಕೆರೆ ತಾಲ್ಲೂಕಿನ ದಂಡಿನ ಶಿವರದಲ್ಲಿ ಪೂಜೆಗೊಳ್ಳುವ ಹೊನ್ನಮ್ಮನ ಜಾತ್ರೆಯಲ್ಲಿ ಕಾಣುತ್ತೇವೆ.

ಇಲ್ಲಿ ಪೂಜೆಗೊಳ್ಳುವ ಹೊನ್ನಮ್ಮ ಶಿಷ್ಟರೂಪವನ್ನು ತಾಳಿ ಹೊನ್ನಾದೇವಿ ಆಗಿದ್ದಾಳೆ. ಇವಳ ಮೂಲ ಹೆಸರು ಪೊನ್ನಕ್ಕ ಎಂದು ತಿಳಿದುಬರುತ್ತದೆ[೩೫].

ಕ್ರಿ.ಶ.೯೬೫ (ಶಕವರ್ಷ ೮೮೮) ಕ್ಕೆ ಸೇರಿದ ಇಲ್ಲಿನ ವೀರಗಲ್ಲು ಶಾಸನದಲ್ಲಿ **'(ಹ)ನುಮ ಗಾವುಣ್ಡ ಎರೆನಲ್ಲೂರಿನ ಸಿರಿವುದರ ಅಳಿವಿನಲ್ಲಿದ್ದಾಗ (ಸೆಟ್ಟಿ)ಯ ಮಗಳು ಪೊನ್ನಕ್ಕ......'** ಎಂಬ ವಿಷಯ ದಾಖಲಾಗಿದೆ. ಊರಿನ ಗೌರವವನ್ನು ರಕ್ಷಿಸಲು ಹೋರಾಡಿ ವೀರ ಮರಣವನ್ನು ಸಾಧಿಸಿದ ಪೊನ್ನಕ್ಕನನ್ನು ಸ್ಥಳದ ಜನ ಮರೆಯದೆ, ಅವಳಿಗೆ ದೈವತ್ವವನ್ನು ನೀಡಿ ಪ್ರತಿ ವರ್ಷ ಜಾತ್ರೆಯ ನೆಪದಲ್ಲಿ ನೆನಪು ಮಾಡಿಕೊಳ್ಳುತ್ತಾರೆ. ಯುದ್ಧ ನಡೆದ ಸ್ಥಳವಾದ್ದರಿಂದ ಸಿರಿವುರವು ದಂಡಿನ ಜೊತೆಗೆ ಸೇರಿಕೊಂಡು ಊರಿನ ಹೆಸರು ದಂಡಿನ ಸಿರಿವುರವಾಗಿ, ನಂತರ ದಂಡಿನ ಶಿವರವಾಗಿ ಉಳಿದಿದೆ. ವೀರಗಲ್ಲು ಶಾಸನ ಇರುವ ಜಾಗದಲ್ಲಿ ಮುತ್ತಿನ ಅಮ್ಮನ ದೇವಸ್ಥಾನವೂ ಇದೆ. ಆ ಮುತ್ತಿನ ಅಮ್ಮನಿಗೂ ಪೊನ್ನಕ್ಕನಿಗೂ ಇರುವ ಸಂಬಂಧ ತಿಳಿಯುವುದಿಲ್ಲ. ಆದರೆ, ಶಾಸನದಲ್ಲಿ ಉಲ್ಲೇಖಿತಳಾಗಿರುವ ಪೊನ್ನಕ್ಕ ದಂಡಿನ ಶಿವರದಲ್ಲಿ ಈಗಲೂ ಹೊನ್ನಮ್ಮನಾಗಿ ಉಳಿದಿದ್ದಾಳೆ. ಇತಿಹಾಸದ ಒಬ್ಬ ವೀರಸ್ತ್ರೀ ಜಾನಪದ ದೇವತೆಯಾಗಿ ಪ್ರಸಿದ್ಧಿ ಪಡೆದಿದ್ದಾಳೆ.

## ಅಲಮೇಲಮ್ಮ

ವಿಜಯನಗರದ ಸಾಮಂತ ಅರಸು ಶ್ರೀರಂಗರಾಯನ ಮಡದಿ ಅಲಮೇಲಮ್ಮನ ಕುರಿತಾಗಿ ಜನಪದ ಕಥೆಯೊಂದು ಜನಜನಿತವಾಗಿದೆ. ಶ್ರೀರಂಗಪಟ್ಟಣವನ್ನಾಳುತ್ತಿದ್ದ ವಿಜಯನಗರದ ಪ್ರತಿನಿಧಿ ಶ್ರೀರಂಗರಾಯ ಅನಾರೋಗ್ಯದಿಂದ ಮರಣಿಸಿದಾಗ, ಮೈಸೂರಿನ ದೊರೆ ರಾಜ ಒಡೆಯರ್ ಶ್ರೀರಂಗಪಟ್ಟಣವನ್ನು ವಶಪಡಿಸಿಕೊಳ್ಳುತ್ತಾನೆ. ರಾಜ್ಯದ ಅಧಿಕಾರವನ್ನು ವಹಿಸಿಕೊಂಡ ರಾಜ ಒಡೆಯರ್, ಪುತ್ರವಿಹೀನಳಾದ ಅಲಮೇಲಮ್ಮನ ಒಡವೆಗಳನ್ನು ರಾಜ್ಯದ ಬೊಕ್ಕಸಕ್ಕೆ (ಖಜಾನೆಗೆ) ಒಪ್ಪಿಸಬೇಕೆಂದು ಆದೇಶ ನೀಡುತ್ತಾನೆ. ಆದರೆ ರಾಜ್ಯಕ್ಕೂ ತನ್ನ ಖಾಸಗೀ ಒಡವೆಗಳಿಗೂ ಸಂಬಂಧವಿಲ್ಲವೆಂಬ ಧೋರಣೆಯಿಂದ ಅಲಮೇಲಮ್ಮಳು ದೊರೆಯ ಮಾತಿಗೆ ಒಪ್ಪದಿದ್ದಾಗ, ರಾಜನು ಬಲವಂತದಿಂದ ಕಸಿದುಕೊಳ್ಳಲು ಯತ್ನಿಸುತ್ತಾನೆ.

ಅವನಿಗೆ ಮಣಿಯದೆ, ಅಲಮೇಲಮ್ಮ ತಲಕಾಡಿಗೆ ಪ್ರಯಾಣಿಸುತ್ತಾಳೆ. ಆದರೆ ರಾಜ ಒಡೆಯನ ಸೈನಿಕರು ಅಲ್ಲಿಗೂ ಅವಳನ್ನು ಬೆಂಬತ್ತಿ ಹೋದಾಗ, ಮಾಲಂಗಿ ಮಡುವಿನ ಬಳಿ 'ತಲಕಾಡು ಮರಳಾಗಿ ಮಾಲಂಗಿ ಮಡುವಾಗಿ ಮೈಸೂರು ದೊರೆಗೆ ಮಕ್ಕಳಿಲ್ಲದೆ ಹೋಗಲಿ' ಎಂದು ಶಪಿಸಿ, ಆತ್ಮಾರ್ಪಣೆ ಮಾಡಿಕೊಳ್ಳುತ್ತಾಳೆ.

ಅಲಮೇಲಮ್ಮನ ಶಾಪಕ್ಕೆ ಹೆದರಿದ ಮೈಸೂರ ಅರಸರು ಅಲ್ಲಿಂದ ಮುಂದೆ ಅಲಮೇಲಮ್ಮನ ಚಿನ್ನದ ವಿಗ್ರಹವನ್ನು ಸ್ಥಾಪಿಸಿ ಪೂಜಿಸುವ ಪದ್ಧತಿ ನಡೆಸಿಕೊಂಡು ಬಂದಿದ್ದಾರೆ. ಇಂದಿಗೂ ವಿಶ್ವವಿಖ್ಯಾತ ದಸರಾ ಉತ್ಸವದಲ್ಲಿ ಅಲಮೇಲಮ್ಮನ ವಿಗ್ರಹಕ್ಕೆ ವಿಜೃಂಭಣೆಯಿಂದ ಪೂಜೆ ಸಲ್ಲಿಸಲಾಗುತ್ತದೆ. ಈ ವಿಚಾರ ಜನಪದ ಗೀತೆಗಳಲ್ಲಷ್ಟೇ ಅಲ್ಲದೆ, ಮೈಸೂರು ಅರಸರ ಕುರಿತಾಗಿ ರಚಿತವಾದ ಶಿಷ್ಟ ಕಾವ್ಯಗಳಲ್ಲಿಯೂ ಬಣ್ಣಿತವಾಗಿದೆ.

ತನ್ನ ಸ್ವಾತಂತ್ರಕ್ಕೆ ಧಕ್ಕೆಯುಂಟಾದಾಗ ದೊರೆಯನ್ನು ಎದುರಿಸುವಲ್ಲಿ ಅಲಮೇಲಮ್ಮ ತೋರಿದ ದಿಟ್ಟತನ ಪ್ರಶಂಸನೀಯವಾಗಿದೆ. ಈ ಪ್ರಕರಣದಲ್ಲಿ, ಅಪುತ್ರಕಳಾದ ವಿಧವೆ ಒಡವೆಯನ್ನು ಹೊಂದಿರಬಾರದೆಂಬ ಅಂದಿನ ಸಾಮಾಜಿಕ ಕಟ್ಟಳೆಯ ವಿರುದ್ಧ ತಿರುಗಿ ಬಿದ್ದ ವೀರ ಮಹಿಳೆಯಾಗಿ ಅಲಮೇಲಮ್ಮ ಕಾಣುತ್ತಾಳೆ. ಪತಿಯ ಮರಣಾನಂತರ ಒಡವೆಗಳನ್ನು ದೇವತಾ ಕಾರ್ಯಕ್ಕೆ ವಿನಿಯೋಗಿಸುತ್ತಿದ್ದ, ವಿನಿಯೋಗಿಸಲೇ ಬೇಕಿದ್ದ ಪರಿಸ್ಥಿತಿಯಲ್ಲಿನ ಅಂದಿನ ಹಲವಾರು ಅರಸಿಯರ, ನಾಯಕಿಯರ ಗುಂಪಿನ ನಡುವೆ ಅಲಮೇಲಮ್ಮ ವಿಭಿನ್ನವಾಗಿ ನಿಲ್ಲುತ್ತಾಳೆ.

ಅಲಮೇಲಮ್ಮನ ಶಾಪದ ವಿಚಾರವಾಗಿ ಸಾಕಷ್ಟು ವಿಮರ್ಶೆಗಳು, ಭೂ ಸಂಶೋಧನಾ ವರದಿಗಳ ಕುರಿತಂತೆ ಚರ್ಚೆಗಳು ನಡೆದಿವೆ. ಗಂಗರ, ಹೊಯ್ಸಳರ ಕಾಲದಲ್ಲಿ ಮರಳಿನಿಂದ ಆವೃತವಾಗಿರದ ತಲಕಾಡು, ಆನಂತರದ ಕಾಲದಲ್ಲಿ ಸಂಪೂರ್ಣವಾಗಿ ಮರಳಿನಿಂದ ಮುಚ್ಚಿಹೋದದ್ದಕ್ಕೆ ನಿಖರವಾದ ವೈಜ್ಞಾನಿಕ ಕಾರಣ ದೊರಕದೆ ಒಗಟಾಗಿಯೇ ಉಳಿದಿದೆ.

**ಬಸರಾಳಿನ ಪಾಳೇಗಾರ್ತಿ**

ಅಸಹಾಯಕ ಸ್ಥಿತಿಯಲ್ಲಿಯೂ ಅರಸಿಯರು ತೋರುತ್ತಿದ್ದ ಸಾಹಸಗಳನ್ನು ಇನ್ನೂ ಹಲವಾರು ಪ್ರಕರಣಗಳಲ್ಲಿ ಕಾಣುತ್ತೇವೆ. ಮಂಡ್ಯ ತಾಲ್ಲೂಕಿನ ದುದ್ದದ ಒಂದು ಜನಪದ ಕಥೆಯ ಪ್ರಕಾರ ಅಲ್ಲಿನ ಕೆರೆಯ ಬಳಿಯ ಸ್ಥಳವೊಂದನ್ನು ಹಿಂದೆ ದುದ್ದ ಹಾಗು ಬಸರಾಳಿನ ಪಾಳೇಗಾರರ ನಡುವೆ ಯುದ್ಧನಡೆದುದಕ್ಕೆ ಸಾಕ್ಷಿಯಾಗಿ ತೋರಿಸಲಾಗುತ್ತದೆ. ಈ ಎರಡೂ ಪಾಳೆಯ ಪಟ್ಟಿನ ನಡುವೆ ಶೀತಲ ಸಮರ ನಡೆಯುತ್ತಿದ್ದು, ಬಸರಾಳಿನ ಪಾಳೇಗಾರನನ್ನು ದುದ್ದದ ಪಾಳೆಯಗಾರ ಸಂಧಾನಕ್ಕೆಂದು ಕರೆಸಿ, ಬಂಧಿಸಿ, ಶಿರಚ್ಛೇದನ ಮಾಡುತ್ತಾನೆ. ಅಲ್ಲದೆ ಅವನೊಡನೆ ಬಂದಿದ್ದ ನಾಗತಿಯನ್ನು ಬಲಾತ್ಕಾರ ಮಾಡಲು ಮುಂದಾದ ದುದ್ದದ ಪಾಳೇಗಾರನನ್ನು ಎದುರಿಸಿದ ಬಸರಾಳಿನ ಪಾಳೇಗಾರ್ತಿ, ತನ್ನ ಪತಿಗೆ ಒದಗಿದ ಹೀನಸ್ಥಿತಿಗೆ ದುಃಖಿಸಿ, ದುದ್ದದ ಹೆಬ್ಬಾಗಿಲು ಬಳಿ ಆತ್ಮಾಹುತಿ ಮಾಡಿಕೊಳ್ಳುತ್ತಾಳೆ. ಅವಳು ಶಪಿಸಿದ ಕಾರಣ ದುದ್ಧ ಪಾಳೆಯ ಪಟ್ಟು ನಾಶವಾಯಿತು, ಕರುಗಲ್ಲಿಗಾಗಿ (ಕಾರಾಹುಣ್ಣಿಮೆಯ ದಿನ ಪೂಜಿಸುವ ಕಲ್ಲು) ದುದ್ದ ಮತ್ತು ಬಸರಾಳ ಪಾಳೇಪಟ್ಟುಗಳು ಹಾಳಾದವೆಂದು ಇಂದಿಗೂ ಜನಪದ ಹಾಡುಗಾರರು ಹೇಳುವರು[೩೬].

**ಆದರ್ಶ ಮೆರೆದ ಅರಸಿಯರು**

ರಾಜನು ಉತ್ತಮ ನಡತೆಯನ್ನು ಮೈಗೂಡಿಸಿಕೊಂಡು ಪ್ರಜೆಗಳಿಗೆ ಆದರ್ಶ ನಾಯಕನಂತಿರಬೆಕು. ದೊರೆಯಾದವನ ರೀತಿ–ನೀತಿಗಳನ್ನು ಪಾಲಿಸಬೇಕಾದ ಕಟ್ಟಳೆಗಳನ್ನು ಕುರಿತು ಸಂಹಿತೆಗಳು ಸಾರಿ ಹೇಳುತ್ತವೆ. ಇವನಿಗೆ ಸರಿಯಾದ ಮಾರ್ಗದರ್ಶನವನ್ನು ಮಾಡಲೆಂದು ಅರಮನೆಯಲ್ಲಿ ಗುರು–ಹಿರಿಯರಿರುತ್ತಿದ್ದರು. ಇಂತಹ ರಾಜ ತಪ್ಪುದಾರಿ ತುಳಿದಾಗ ಅರಸಿಯು ತನ್ನ ಕರ್ತವ್ಯವನ್ನು ಹೇಗೆ ಪಾಲಿಸಿದ ಪರಿಯನ್ನು ಜನಪದರು ಸ್ಮರಿಸಿಕೊಳ್ಳುತ್ತಾರೆ.

ಕೆಳದಿಯ ಹಿರಿಯ ವೆಂಕಪ್ಪನಾಯಕನ ಪತ್ನಿ **ಭದ್ರಾಂಬೆ**ಯನ್ನು ಕುರಿತು ಇಂತಹ ಪ್ರಸಂಗವೊಂದನ್ನು ಜನಪದರು ತಿಳಿಸುತ್ತಾರೆ. ಇವಳು ರಾಜ್ಯ ವ್ಯವಹಾರ, ಕಾರ್ಯ ಕಲಾಪಗಳಲ್ಲಿ ಭಾಗವಹಿಸಿ, ಆಡಳಿತದಲ್ಲಿ ಸಲಹೆ ಸೂಚನೆ

ನೀಡುತ್ತಾ ಪತಿ ವೆಂಕಟಪ್ಪ ನಾಯಕನಿಗೆ ಸಹಕಾರಿಯಾಗಿರುತ್ತಾಳೆ. ಅರಸು ಅನ್ಯಧರ್ಮೀಯ ಪರಹೆಂಗಸನ್ನು ಮೋಹಿಸಿ, ತಪ್ಪುದಾರಿ ತುಳಿದಾಗ ಭದ್ರಾಂಬೆಯು ಹೆಂಡತಿ ಎಂಬ ಸಂಬಂಧದಿಂದ ದೂರವಾಗುತ್ತಾಳೆ. ಆದರೆ ರಾಜಕೀಯ ವಿಚಾರಗಳಲ್ಲಿ ಮುಂಚಿನಂತೆಯೇ ಭಾಗವಹಿಸುತ್ತಿರುತ್ತಾಳೆ. ಈ ಘಟನೆಯಿಂದ ಮುಂದೆ ತನ್ನ ಜೀವಿತದ ಕಡೆಯವರೆಗೂ ತನ್ನ ಕಟ್ಟಳೆಯನ್ನು ಸರಿಸದೆಯೇ ರಾಜನಿಗೆ ತಾನು ಮಾಡಿದ್ದು ತಪ್ಪೆಂಬ ತಿಳುವಳಿಕೆ ಮೂಡಿಸಿ, ಮಾದರಿ ಅರಸಿ ಎನಿಸಿಕೊಂಡಿದ್ದಾಳೆ. ಜನಪದರ ಈ ಕಥೆಯು ಕ್ರಿ.ಶ.೧೬೨೩ರಲ್ಲಿ ಕೆಳದಿಯನ್ನು ಸಂದರ್ಶಿಸಿದ ಇಟಲಿಯ ಪ್ರವಾಸಿ ಪೆಯತ್ರೊದೆಲ್ಲವೆಲ್ಲೆಯ ಲೇಖನದಲ್ಲಿಯೂ ಕಾಣಬಹುದು.

**ಸೋಮಲದೇವಿ**

ಬೆಳ್ತಂಗಡಿ ತಾಲ್ಲೂಕಿನ ಸಮೀಪದ ಬೈಲಂಗಡಿಯ ಸಣ್ಣ ಪ್ರದೇಶದಲ್ಲಿ 'ಮೂಲರು' ಎಂಬ ಅರಸು ಮನೆತನದ ರಾಜಕುಮಾರಿ ಸೋಮಲದೇವಿ (ಶಂಕರದೇವಿ)ಯನ್ನು ಲಕ್ಷ್ಮಪ್ಪಬಂಗರಸ (ಕ್ರಿ.ಶ.೧೫೪೫–೧೫೫೬) ವಿವಾಹವಾಗುತ್ತಾನೆ. ಚೌಟ ಅಬ್ಬಕ್ಕ ಇವನ ಮತ್ತೋರ್ವ ಮಡದಿ.

ಅಳಿಯ ಸಂತಾನದ ಕ್ರಮದಂತೆ ಮದುವೆಯಾದ ನಂತರವೂ ಸೋಮಲದೇವಿಯು ಬೈಲಂಗಡಿಯಲ್ಲಿಯೇ ಆಳ್ವಿಕೆ ನಡೆಸುತ್ತಿರುತ್ತಾಳೆ. ಒಮ್ಮೆ ಪತಿಯೊಂದಿಗೆ ಅನಂತನಾಥ ನೋಂಪಿಯಲ್ಲಿ ಭಾಗವಹಿಸಲೆಂದು ಬಂಗರ ಅರಮನೆಗೆ ಬಂದ ಈಕೆಗೆ ಎಲ್ಲರ ಸಮ್ಮುಖದಲ್ಲಿ ಅಗೌರವ ಉಂಟಾಗುತ್ತದೆ. ಇದರಿಂದ ಕುಪಿತಗೊಂಡ ಸೋಮಲದೇವಿಯು ನೋಂಪಿಯನ್ನು ಅರ್ಧಕ್ಕೆ ನಿಲ್ಲಿಸಿ ಬೈಲಂಗಡಿಗೆ ಹೊರಟು ಹೋಗುತ್ತಾಳೆ.

ಇದರಿಂದ ಕುಪಿತನಾದ ಬಂಗರಾಜನು ಬೈಲಂಗಡಿಯ ಮೇಲೆ ಯುದ್ಧ ಸಾರುತ್ತಾನೆ. ಆದರೆ ಕಡೆ ಘಳಿಗೆಯಲ್ಲಿ, ಯುದ್ಧಕ್ಕೆ ಸಿದ್ಧಳಾಗಿಯೇ ಇದ್ದ ಸೋಮಲದೇವಿಯನ್ನು ಮುಖತಃ ಭೇಟಿಯಾಗಿ ಸಂಧಾನಕ್ಕೆ ಒಪ್ಪಿಸುವುದಾಗಿ ತೀರ್ಮಾನಿಸಿದ ಬಂಗರಾಜನು ಏಕಾಂಗಿಯಾಗಿ ಅವಳ ಅರಮನೆಯತ್ತ ಧಾವಿಸುತ್ತಾನೆ, ಸೈನಿಕರು ಇವನು ಯುದ್ಧಕ್ಕಾಗಿ ಬಂದನೆಂದು ಭಾವಿಸಿ ಅಸ್ತ್ರ ಪ್ರಯೋಗಿಸುತ್ತಾರೆ, ಯಾವುದೇ ಸೂಚನೆಯಿಲ್ಲದೆ ಇವನ ಮೇಲೆ ಹಾಯ್ದ ಸೈನಿಕರನ್ನು ತಡೆಯಲು ವಿಫಲನಾದ ಬಂಗರಸನು ಅವರ ಕತ್ತಿಗೆ ಬಲಿಯಾಗಿ ಅರಮನೆಯ ಮೆಟ್ಟಿಲಿನಿಂದ ಉರುಳಿ ಅಸುನೀಗುತ್ತಾನೆ. ಈ ವಾರ್ತೆ ತಿಳಿದ ಸೋಮಲದೇವಿ ತನ್ನ ಪತಿಯ ಸಾವಿಗೆ ತಾನೇ ಕಾರಣಳಾದಳೆಂಬ ದುಃಖದಿಂದ ಅದೇ ಕತ್ತಿಯಿಂದ ತಾನೂ ಸಹ ಇರಿದುಕೊಂಡು ಪ್ರಾಣಬಿಟ್ಟಳು. ಕೆಲವೊಂದು ಮೂಲದ ಪ್ರಕಾರ ಜಿನಾಲಯದಲ್ಲಿ ನಿರಶನ ವ್ರತ ಕೈಗೊಂಡು ಅಸುನೀಗಿದಳು ಎಂಬ ಪ್ರತೀತಿ ಇದೆ.

ಯುದ್ಧಾರಂಭಕ್ಕೂ ಮುನ್ನ ಅರಸಿಯು ಪಾರ್ಶ್ವನಾಥ ಜಿನಮಂದಿರ ನಿರ್ಮಿಸಿಕೊಂಡು, ಬಂಗರ ಅರಮನೆಯಲ್ಲಿ ಆರಂಭಿಸಿದ ನೋಂಪಿಯನ್ನು ಸಂಪೂರ್ಣ ಗೊಳಿಸಿರುತ್ತಾಳೆ. ತರಾತುರಿಯಲ್ಲಿ ಕಟ್ಟಿಸಿದ ಪಾರ್ಶ್ವನಾಥ ಬಸದಿಯನ್ನು ಕ್ರಿ.ಶ.೧೬೧೧ರಲ್ಲಿ ಬಂಗರಸನ ಸೋದರಳಿಯ ಕಾಮರಾಯ ತನ್ನ ಪ್ರಧಾನಿ ಈಶ್ವರಸೇನಬೋವನ ಮುಖಾಂತರ ದುರಸ್ಥಿಗೊಳಿಸಿ, ಇವರಿಬ್ಬರ ಸ್ಮಾರಕವಾಗಿ ಪುನರ್ನಿರ್ಮಿಸಿ, ಜಿನಾಲಯದ ಕಂಬದ ಮೇಲೆ ಶಾಸನವೊಂದನ್ನು ಹಾಕಿಸಿದ್ದಾನೆ.

ಒಂದು ರಾಜ್ಯದ ಅರಸಿಯಾಗಿ ತನ್ನ ಘನತೆಗೆ ಕುಂದು ಬರುವುದನ್ನು ಸಹಿಸದ ಅಭಿಮಾನಿ ಅರಸಿಯ ಈ ವಿಚಾರವು ಕೈಫಿಯತ್ತುಗಳಲ್ಲಿಯೂ ದಾಖಲಾಗಿದೆ.

ಜನಪದ ಸಾಹಿತ್ಯದಲ್ಲಿ ಇನ್ನೂ ಹಲವಾರು ಅರಸಿಯರನ್ನು ಗುರುತಿಸಬಹುದು. ಕೆಲವೊಂದು ಪ್ರಕರಣದಲ್ಲಿ ಸ್ಪಷ್ಟ ಘಟನೆಗಳು ತಿಳಿದು ಬರುವುದಿಲ್ಲ. ಐತಿಹಾಸಿಕ ವೆಂದು ಕರೆಯಲಾದರೂ, ಅವುಗಳು ನಿಖರವಾದ ವಿಚಾರವನ್ನು

ಹೊಂದಿರುವುದಿಲ್ಲ. ಅತಿಮಾನುಷ ವ್ಯಕ್ತಿ, ಅಲೌಕಿಕ ವಿಚಾರಗಳು ಅದರೊಂದಿಗೆ ಬೆರೆತುಹೋಗಿರುತ್ತದೆ. ಅಸ್ಪಷ್ಟ ಐತಿಹಾಸಿಕ ಕೃತಿಗಳಲ್ಲಿ ಐತಿಹ್ಯ ಮತ್ತು ಇತಿಹಾಸವನ್ನು ಬೇರ್ಪಡಿಸುವುದು ಕಷ್ಟವಾಗುತ್ತದೆ. ಹೊಯ್ಸಳ ರಾಜಕುಮಾರಿ ಜಗನ್ಮೋಹಿನಿಗೆ ಸಂಬಂಧಿಸಿದ ಕಥೆಯ ಆಧಾರಿತವೆಂದು ಹೇಳಲಾಗುವ ಪ್ರಸಿದ್ಧ ಜನಪದ ನಾಟಕ 'ಕರಿಭಂಟನ ಕಥೆ' ಕರಿಭಂಟನ ಕಥೆಯಲ್ಲಿನ ನಾಯಕಿ ಹೊಯ್ಸಳ ಬಲ್ಲಾಳನ ಮಗಳು. ಹೊಯ್ಸಳ ಅರಸು ಮನೆತನದಲ್ಲಿ ಬಲ್ಲಾಳ ಹೆಸರಿನ ಮೂವರು ಪ್ರಸಿದ್ಧ ದೊರೆಗಳು ಆಳ್ವಿಕೆ ನಡೆಸಿದ್ದರು. ಅಲ್ಲದೆ ಈ ಕಥೆಯಲ್ಲಿ ಉಕ್ತವಾಗಿರುವ ದೋರಸಮುದ್ರ, ತೊಣ್ಣೂರು ಮೊದಲಾದ ಪ್ರದೇಶಗಳೂ ಕೂಡ ಹೊಯ್ಸಳ ಸಾಮ್ರಾಜ್ಯಕ್ಕೆ ಸೇರಿದ ಪ್ರಮುಖ ಊರುಗಳು. ಆದರೆ ಈ ಕಥೆಯಲ್ಲಿ ಬರುವ ರಾಕ್ಷಸಿ, ಅತಿಮಾನುಷ ವ್ಯಕ್ತಿತ್ವಗಳು ಹಾಗೂ ಇಲ್ಲಿನ ಘಟನೆಗಳು, ಇದೊಂದು ಸಂಪೂರ್ಣ ಕಾಲ್ಪನಿಕ ಕಥೆ ಎಂಬುದನ್ನು ತಿಳಿಸುತ್ತದೆ. ಈ ಕಥೆಯಲ್ಲಿ "ಇತಿಹಾಸ ಘಟನೆಗಳನ್ನು ಶೋಧಿಸುವುದು ಕಷ್ಟಕರವಾಗಿದೆ"[೩೭] ಈ ಕಥೆಯನ್ನು ಅಸ್ಪಷ್ಟ ಐತಿಹಾಸಿಕ ಕೃತಿಗಳ ಗುಂಪಿಗೆ ಸೇರಿಸಬಹುದು.

ತುಳುನಾಡಿನಲ್ಲಿಯೂ ಕೂಡ ಪಾಡ್ದನ, ವಿಶಿಷ್ಟ ಮನೆತನದ ಭೂತಾರಾಧನೆಯ ಹಿನ್ನೆಲೆಯಲ್ಲಿ ಕೆಲವು ಐತಿಹಾಸಿಕ ವ್ಯಕ್ತಿಗಳ ಹೆಸರು, ಐತಿಹಾಸಿಕ ಸ್ಥಳ, ಘಟನೆಗಳು ಅಸ್ಪಷ್ಟವಾಗಿ ದೊರಕುತ್ತವೆ. ಉದಾಹರಣೆಗೆ ಸುರಾಲು ಅರಸುಮನೆತನಕ್ಕೆ ಸಂಬಂಧಿಸಿದ ಭೂತಾರಾಧನೆಯ ಸನ್ನಿವೇಷದಲ್ಲಿ ಆ ಮನೆತನದ ಅರಸಿಯೋರ್ವಳ ವಿಚಾರ ತಿಳಿದುಬರುತ್ತದೆ. ಅಲ್ಲಿ ದೈವವೆಂದು ಬಗೆಯುವ ಕಪ್ಪಣ್ಣ ಸ್ವಾಮಿ ದೈವದ ವೃತ್ತಾಂತಕ್ಕೆ ಅರಸಿಯ ಕಥೆಯು ಥಳುಕು ಹಾಕಿಕೊಂಡಿದೆ.

ಸುರಾಲು ಮಾಗಣೆ ಜೈನ ಅರಸರ ಆರೋಗ್ಯ ಹದಗೆಟ್ಟಿರುವ ಸಂದರ್ಭದಲ್ಲಿ ರಾಣಿಯೇ ಎಲ್ಲ ಕಾರ್ಯಗಳನ್ನೂ ನಿರ್ವಹಿಸುತ್ತಿರುತ್ತಾಳೆ. ಒಂದು ದಿನ ಸುರಾಲಿನ ಮಹಾಲಿಂಗೇಶ್ವರ ದೇವರ ಸನ್ನಿಧಾನಕ್ಕೆ ಹೋಗಿ ತೀರ್ಥಪ್ರಸಾದ ತೆಗೆದುಕೊಂಡು ಸುರಾಲು ರಥಬೀದಿಯಲ್ಲಿ ಬರುವಾಗ, ಕಪ್ಪಣ್ಣ ನೆಂಬ ಬಡಬ್ರಾಹ್ಮಣನ ಪರಿಚಯವಾಗಿ, ರಾಣಿಯು ಅವನನ್ನು ಅರಮನೆಗೆ ಕರೆದೊಯ್ದು, ಉದ್ಯೋಗ ನೀಡಿ ಪೊರೆಯುತ್ತಾಳೆ.

ಈತನು ಅರಮನೆಗೆ ಸೇರಿದಮೇಲೆ ರಾಜನ ಆರೋಗ್ಯ ದಿನೇ ದಿನೇ ಸುಧಾರಿಸುತ್ತದೆ. ಅರಮನೆಯ ಬೊಕ್ಕಸ ತುಂಬುತ್ತದೆ. ಒಂದು ಬಾರಿ ಅಲ್ಲಿನ ಮಹಾಲಿಂಗೇಶ್ವರ ದೇವರ ಮೇಲೆ ಹಿರಿಯಡ್ಕ ಮೆಕ್ಕಿ ಕಟ್ಟೆಯ ದೇವರುಗಳು ಭೂತಗಳು ಯುದ್ಧಕ್ಕೆ ಬರುತ್ತವೆ. ಅವರನ್ನು ಎದುರಿಸಲು ಸಾಧ್ಯವಾಗದೆ ರಾಣಿ ಕಂಗಾಲಾಗುತ್ತಾಳೆ. ಆಗ ಕಪ್ಪಣ್ಣ ರಾಣಿಗೆ ಧೈರ್ಯದ ಮಾತುಗಳನ್ನು ಆಡಿ, ಅವಳ ಅನುಮತಿ ಪಡೆದು, ಯುದ್ಧದಲ್ಲಿ ಭಾಗವಹಿಸಿ ಜಯ ಸಾಧಿಸುತ್ತಾನೆ. ಅಸಮಾನ ಸಾಹಸಿ ಕಪ್ಪಣ್ಣ ದೈವಾಂಶ ಸಂಭೂನತೇ ಎಂದು ಬಗೆದ ರಾಣಿಯು ಅವನನ್ನು ಸನ್ಮಾನಿಸಿ ಪಲ್ಲಕ್ಕಿಯನ್ನು ಕಾಣಿಕೆಯಾಗಿ ನೀಡುತ್ತಾಳೆ. ಕಾಲಾನಂತರ ಆತ ದೈವವಾಗಿ ಸುರಾಲು ಅರಮನೆಯಲ್ಲಿ ನೆಲೆ ನಿಲ್ಲುತ್ತಾನೆ. ಆತನಿಗೆ ಕೊಕ್ಕರ್ಣೆಯಲ್ಲಿ ಆರಾಧನೆ ಇದೆ.

ಕಪ್ಪಣ್ಣ ಒಬ್ಬ ಯುದ್ಧವೀರನಿದ್ದು, ಸುರಾಲಿನ ಮೇಲೆ ವೈರಿಗಳು ಧಾಳಿ ಮಾಡಿದ ಸಂದರ್ಭದಲ್ಲಿ ರಾಣಿಯ ಪರವಾಗಿ ನಿಂತು ಕಾದಾಡಿ ಜಯ ತಂದು ಕೊಟ್ಟ ವೀರನಾಗಿರಬಹುದು. ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಬೆಳಗಾವಿ ಜಿಲ್ಲೆಯಿಂದ ತುಳು ನಾಡಿಗೆ ವೈಸರಾಯಿಯಾಗಿ ಬಂದು ಆಳ್ವಿಕೆ ವಹಿಸಿಕೊಂಡ ಸುರಾಳು ತೋಳಹಾರ ಮನೆತನದವರು ಕ್ರಿ.ಶ.೯೧೧ ರಿಂದ ೧೯ನೇ ಶತಮಾನದವರೆಗೂ ರಾಜ್ಯವಾಳಿದವರು[೩೮]. ಈ ಮನೆತನದಲ್ಲಿ ಹಲವಾರು ರಾಣಿಯರು ರಾಜ್ಯವಾಳಿದ ವಿಚಾರ ತಿಳಿದು ಬರುತ್ತದೆ.

**ಜಾಕಲ ಮಹಾದೇವಿ** (೧೨೪೬–೧೨೭೦) ಹಾಗೂ **ಕಾಳಲ ಮಹಾದೇವಿ** (೧೨೭೦–೧೨೮೧)ಯರು ಬಹಳ ಪ್ರಭಾವೀ ರಾಣಿಯರಾಗಿದ್ದರೆಂಬುವುದನ್ನು ಕೆಲವು ಶಾಸನಗಳು ತಿಳಿಸುತ್ತವೆ[೩೯]. ಮುಂದೆ ಕಾಳಲ ಮಹಾದೇವಿಯ ಮಗಳು **ಸಿದ್ದಲದೇವಿ** ಆಡಳಿತ ನಡೆಸಿದ್ದಾಳೆ. ಆದರೆ ಈ ಮೇಲಿನ ಘಟನೆ ನಡೆದ ಕಾಲವಾಗಲೀ, ರಾಣಿಯ ಹೆಸರಾಗಲಿ ತಿಳಿದು ಬರುವುದಿಲ್ಲವಾದ್ದರಿಂದ, ಇತಿಹಾಸದ ಘಟನೆಗಳಿಗೆ ಹೋಲಿಕೆ ಮಾಡುವುದು ಕಷ್ಟವಾಗುತ್ತದೆ.

**ಅಧ್ಯಯನದ ಫಲಿತ**

ಕರ್ನಾಟಕದ ಅರಸಿಯರ ಕುರಿತಾಗಿ ರಚಿತವಾಗಿರುವ ಈ ಮೇಲೆ ಗಮನಿಸಿದ ಕೆಲವು ಕೃತಿಗಳು ಅನೇಕ ಐತಿಹಾಸಿಕ ಘಟನೆಗಳನ್ನು ಒಳಗೊಂಡು ಇತಿಹಾಸದ ಪುನಾರಚನೆಗೆ ಮುಖ್ಯ ದಾಖಲೆಗಳೆನಿಸಿವೆ. ಅರಸಿಯರ ಬದುಕಿನ ರೋಚಕ ವಿವರಗಳನ್ನು ಶಿಷ್ಟಸಾಹಿತ್ಯ, ಜನಪದ ಸಾಹಿತ್ಯ, ಶಾಸನ ಸಾಹಿತ್ಯಗಳು ಬಣ್ಣಿಸುತ್ತಿವೆ. ಅರಸಿಯೋರ್ವಳ ಜೀವನದ ಘಟನೆಯನ್ನು, ಕಾವ್ಯಮಯವಾಗಿಸಬೇಕೆನಿಸುವಷ್ಟರ ಮಟ್ಟಿಗೆ ಕವಿಯ ಮನಸ್ಸನ್ನು ಪ್ರಭಾವಗೊಳಿಸಿರುವುದು ಇಲ್ಲಿನ ಕೆಲವು ಸಾಹಿತ್ಯಗಳಲ್ಲಿ ಕಾಣುತ್ತೇವೆ.

ಈ ಸಾಹಿತ್ಯಗಳಲ್ಲಿ ಅರಸಿಯರ ಬದುಕಿನ ಘಟನೆಗಳ ಚಿತ್ರಣವಷ್ಟೇ ಅಲ್ಲದೆ, ಇತಿಹಾಸದಲ್ಲಿ ಪ್ರಸಿದ್ಧರೆನಿಸಿರುವ ದೊರೆಗಳು ಅವರ ಮಡದಿಯರ ಕಥೆಯೊಂದಿಗೆ ವಿಭಿನ್ನ ದೃಷ್ಟಿಕೋನದಲ್ಲಿ ಚಿತ್ರಿತರಾಗಿರುವುದನ್ನೂ ಗಮನಿಸಬಹುದು. ಇತಿಹಾಸದಲ್ಲಿ ಬಹಳ ಪ್ರಸಿದ್ಧ ಚಕ್ರವರ್ತಿಗಳೆನಿಸಿದ ಚಾಲುಕ್ಯ ಜಯಸಿಂಹ, ಆರನೆಯ ವಿಕ್ರಮಾದಿತ್ಯರಿಗಿಂತಲೂ ಅವರ ಅರಸಿಯರಾದ ರಾಣಿ ಸುಗ್ಗಲದೇವಿ ಹಾಗೂ ರಾಣಿ ಲಕ್ಷ್ಮೀದೇವಿಯರೇ ಇಲ್ಲಿನ ಕೆಲವು ಕೃತಿಗಳಲ್ಲಿ ಪ್ರಮುಖ ಪಾತ್ರರಾಗಿದ್ದಾರೆ. ಈ ಚಕ್ರವರ್ತಿಗಳ ಪ್ರಶಸ್ತಿಗಳನ್ನು ತಿಳಿಸುವ ಇತರ ಶಾಸನಗಳು, ಸಂಸ್ಕೃತ ಕಾವ್ಯಗಳು ಇವರ ಶೌರ್ಯ–ಸಾಹಸಗಳನ್ನು ವಿಜೃಂಬಿಸಿ ಬಣ್ಣಿಸಿದರೆ ಇಲ್ಲಿ ಗಮನಿಸಿರುವ ಸಾಹಿತ್ಯಗಳಲ್ಲಿ ತಮ್ಮ ರಾಣಿಯರ ಪ್ರಭಾವಕ್ಕೆ ಒಳಗಾಗುವ ಸಾಮಾನ್ಯರಂತೆ ತೋರುತ್ತಾರೆ.

ಅರಸರನ್ನು ಪ್ರಧಾನವಾಗಿಸಿ ರಚಿಸಲಾಗಿರುವ ಕಾವ್ಯಗಳಲ್ಲಿ, ಪೌರುಷ, ಶೌರ್ಯ ಶ್ರೇಷ್ಠತೆಗಳೇ ಮೆರೆದರೆ, ಅರಸಿಯರ ಬದುಕು ಜನ ಸಾಮಾನ್ಯರಿಗೆ ಹತ್ತಿರವೆನಿಸುವಂತೆ ತೋರುತ್ತಿದ್ದುದು ಇಲ್ಲಿ ಕಂಡುಬರುತ್ತದೆ. ಇತಿಹಾಸದಲ್ಲಿ ಶೌರ್ಯ–ಸಾಹಸಗಳಿಗೆ ಹೆಸರಾದ ದೊರೆಗಳು ಅವರ ಅರಸಿಯರಿಗೆ ಪ್ರಾಧಾನ್ಯತೆ ಇರುವಂತಹ ಕಾವ್ಯಗಳಲ್ಲಿ ವಿಭಿನ್ನ ದೃಷ್ಟಿಕೋನದಿಂದ ಚಿತ್ರಿತರಾಗಿರುವುದನ್ನು ಕಾಣುತ್ತೇವೆ.

ಈ ಅಧ್ಯಾಯದಲ್ಲಿ ಪ್ರಾಚೀನ ಕವಿಗಳು ಅರಸಿಯರ ಕುರಿತಾಗಿ ಕಾವ್ಯಗಳನ್ನು ರಚಿಸಲು ಅವರಿಗೆ ಮುಖ್ಯವೆನಿಸಿದ ಅರಸಿಯರ ಜೀವನದ ಘಟನೆ ಅಥವಾ ಸ್ವಭಾವಗಳನ್ನು ಈ ರೀತಿಯಾಗಿ ಗಮನಿಸಬಹುದು:

- ಅರಸಿಯರ ಧಾರ್ಮಿಕಗುಣ, ಧಾರ್ಮಿಕಕಾರ್ಯಗಳಿಗಾಗಿ ಇಟ್ಟ ದಿಟ್ಟ ಹೆಜ್ಜೆ.
- ಅರಸರ ಶೌರ್ಯವನ್ನು ಕೀರ್ತಿಸಲು ಪೂರಕವಾಗುವ ಅರಸಿಯರ ಗುಣಸ್ವಭಾವ
- ಯುದ್ಧಸಾಹಸಗಳಲ್ಲಿ ಮೆರೆದ ಅರಸಿಯರ ಶೌರ್ಯಗುಣ

ಕಲ್ಯಾಣದ ಚಾಲುಕ್ಯ ಅರಸಿಯರಾದ ಸುಗ್ಗಲಾದೇವಿ, ಲಕ್ಷ್ಮೀದೇವಿಯರು ಅರಮನೆಯ ಕವಿಗಳಿಂದ ಸ್ತುತಿಸಲ್ಪಟ್ಟಿಲ್ಲ. ಇವರು ಪಾಲ್ಕುರಿಕೆ ಸೋಮನಾಥ, ಷಡಕ್ಷರಿ, ಹರಿಹರ, ವಿರೂಪಾಕ್ಷ ಪಂಡಿತ, ಭೀಮಕವಿ, ಶಾಂತಲಿಂಗ ದೇಶಿಕ ಮೊದಲಾದ ಯಾವುದೇ ಆಸ್ಥಾನ ಕವಿಗಳಲ್ಲದವರ ಕಾವ್ಯಗಳಲ್ಲಿ ಚಿತ್ರಿತರಾದ ಅರಸಿಯರು. ಈ ಕವಿಗಳು ಅರಸಿಯರ ಸಮಕಾಲೀನರಲ್ಲ ಈ ಅರಸಿಯರ ಕಾಲಕ್ಕೂ ಕವಿಗಳ ಕಾಲಕ್ಕೂ ಅಂತರವಿರುವುದನ್ನೂ ಗಮನಿಸಬಹುದು. ಇವರ ವಿವರಣೆಗಳಿರುವ ಕಾವ್ಯಗಳಲ್ಲಿ ಈ ಅರಸಿಯರು ಕಾವ್ಯದ ಪ್ರಧಾನ ನಾಯಕಿಯರಾಗಿಲ್ಲ. ಅರಸಿಯರು ಧಾರ್ಮಿಕ ಸನ್ನಿವೇಶಗಳಲ್ಲಿ ತಳೆದ ತೀರ್ಮಾನ, ಸ್ವಾತಂತ್ರ್ಯಗಳು ಅವರನ್ನು ಅವರ ಕಾಲಾನಂತರವೂ ಸ್ಮರಿಸುವಂತೆ ಮಾಡಿವೆ. ಅಂದಿನ ಬಹುಮುಖ್ಯ ಘಟನೆಗಳಿಗೆ ಸಾಕ್ಷಿಯಾಗಿ, ಕಾರಣರಾಗಿ ನಡೆದುಕೊಂಡ ಅವರ ಸ್ವಭಾವ, ನಡೆವಳಿಕೆಗಳು ಅವರು ಕಾವ್ಯಗಳಲ್ಲಿ ಚಿತ್ರಿತರಾಗಲು ಕಾರಣವಾಗಿದೆ.

ಅರಸಿಯರು ಆಸ್ಥಾನ ಕವಿಗಳ ಕಾವ್ಯದಲ್ಲಿ ಚಿತ್ರಿತವಾದಾಗ ಸೀತೆ, ಅರುಂಧತಿ ಮೊದಲಾದ ಹೋಲಿಕೆಗಳನ್ನು ಪಡೆದು ಪತಿವ್ರತಾ ಧರ್ಮ ಪಾಲಿಸಿ, ಅರಸನ ಕಾರ್ಯಗಳಿಗೆ ಸಹಕರಿಸುವ ಮಹಿಳೆಯರಂತೆ ಬಣ್ಣಿಸಲ್ಪಟ್ಟಿದ್ದಾರೆ. ಉದಾಹರಣೆಗೆ ರಟ್ಟಮನೆತನದ ಚಂದ್ರಿಕಾದೇವಿ, ಭರ್ಮಭೂಪಾಲನ ಅರಸಿ ಸುಗ್ಗಲಾದೇವಿ, ವಿಕ್ರಮಾದಿತ್ಯನ ಅರಸಿ ಚಂದ್ರಿಕಾದೇವಿಯರು ಶಾಸನಗಳಲ್ಲಿ ಹಾಗೂ ಕಾವ್ಯಗಳಲ್ಲಿ ಬಣ್ಣಿತವಾಗಿರುವ ಪರಿಯನ್ನು ಕಾಣಬಹುದು. ಆದರೆ ಇಲ್ಲಿ ಅರಸಿಯರ ಆದರ್ಶಗುಣಗಳನ್ನು ಸಾರುವುದೇ ಕವಿಯ ಉದ್ದೇಶ ಎನ್ನುವುದು ಸ್ಪಷ್ಟವಾಗಿ ತೋರುತ್ತದೆ.

ಕೆಲವು ಕಾವ್ಯಗಳು ಅರಸಿಯರ ಸಾಹಸವನ್ನು ಬಣ್ಣಿಸುವ ಪರಿಯನ್ನು ಗಮನಿಸಿದಾಗ ಶಿಷ್ಟಕಾವ್ಯವಿರಲಿ, ಜನಪದವಿರಲಿ ಮುಕ್ತಕಂಠದಿಂದ ಅರಸಿಯರ ಶೌರ್ಯವನ್ನು ಚಿತ್ರಿಸಿ ಶ್ಲಾಘಿಸಿರುವುದು ತೋರುತ್ತದೆ. ಸಾವಿಯಬ್ಬೆ, ಕೆಳದಿ ಚೆನ್ನಮ್ಮ, ಬೆಳವಡಿ ಮಲ್ಲಮ್ಮ, ಕಿತ್ತೂರು ಚೆನ್ನಮ್ಮ, ಚಿಕ್ಕಮ್ಮ ನಾಗತಿ ಇವರೆಲ್ಲಾ ಯುದ್ಧದಲ್ಲಿ, ರಾಜ್ಯಾಡಳಿತದಲ್ಲಿ ಚಾತುರ್ಯತೋರಿ ಕಾವ್ಯನಾಯಕಿಯರಾದ ಅರಸಿಯರಾಗಿದ್ದಾರೆ. ಅಂತೆಯೇ ಆದರ್ಶವನ್ನು ಪಾಲಿಸುವ ಸಲುವಾಗಿ ಅರಸಿಯರು ತಮ್ಮ ವೈಯಕ್ತಿಕ ಜೀವನವನ್ನು ಬದಿಗಿಟ್ಟು, ಬದುಕಿದ ಅರಸಿಯರ ವಿಚಾರವನ್ನು ಕೆಲವು ಜನಪದ ಸಾಹಿತ್ಯ ಬಣ್ಣಿಸಿವೆ.

ಕರ್ನಾಟಕದ ಅರಸಿಯರು ಅರಸರಷ್ಟೇ ಮಹತ್ವವನ್ನು ಪಡೆದವರಾಗಿದ್ದರು. ವಿಭಿನ್ನ ದೃಷ್ಟಿಕೋನಗಳಲ್ಲಿ ಭಿನ್ನ ಸಂದರ್ಭಗಳಲ್ಲಿ ಕಾವ್ಯಗಳಲ್ಲಿ ಬಿಂಬಿತರಾಗಿರುವ ಅರಸಿಯರ ವಿಚಾರವನ್ನು ಗಮನಿಸಿದಾಗ, ಕರ್ನಾಟಕದ ಅರಸಿಯರು ಆರಂಭಕಾಲದಿಂದಲೂ ತಮ್ಮದೇ ಆದ ವಿಶಿಷ್ಟವ್ಯಕ್ತಿತ್ವವನ್ನು ಹೊಂದಿದ ವಿಚಾರ ತಿಳಿದು ಬರುತ್ತದೆ. ಧಾರ್ಮಿಕ ಸ್ವಾತಂತ್ರಗಳಿಸಿದ ಅರಸಿ ಸುಗ್ಗಲೆ, ರಾಣಿ ಲಕ್ಷ್ಮಿದೇವಿಯರ ವಿಚಾರ, ಯುದ್ಧ-ಸಾಹಸ ಮೆರೆದ ಚೆನ್ನಮ್ಮ, ಬೂದಿಹಾಳು ಪಾಳೆಯಗಾರ್ತಿ ಚಿಕ್ಕಮ್ಮ, ಬೆಳವಡಿ ಮಲ್ಲಮ್ಮ, ಓಬವ್ವ ನಾಗತಿ ಆಡಳಿತ ವೈಖರಿಯಿಂದ ಪ್ರಶಂಸೆ ಪಡೆದ ಕೆಳದಿಯ ಚೆನ್ನಮ್ಮ, ಆಯಾಕಾಲದ ಮೌಲ್ಯವನ್ನು ಎತ್ತಿಹಿಡಿಯುವಲ್ಲಿ ಪ್ರಜೆಗಳಿಗೆ ಆದರ್ಶ ರಾಣಿಯೆನಿಸುವಲ್ಲಿ ರಟ್ಟ ಚಂದ್ರಿಕಾದೇವಿ, ಸುಗ್ಗಲೆ, ಸೌಂದರ್ಯದ ಪ್ರಶಂಸೆಗಾಗಿ ಚಂದಲಾದೇವಿ, ಅಳಿಯಸಂತಾನ ಪರಂಪರೆ ಸ್ಥಾಪನೆಗೆ ಕಾರಣಳಾದ ರಾಣಿ ಸುಶೀಲೆ, ರಾಜ್ಯದ ಹಿತಕ್ಕಾಗಿ ಪ್ರೀತಿಯನ್ನು ತ್ಯಾಗ ಮಾಡಿದ ಮೃಣಾಳವತಿ, ಪತಿಯ ಸಾವಿಗೆ ಪ್ರತಿಕಾರ ತೆಗೆದುಕೊಂಡ ಗಿರಿಜ, ಅಲಮೆಲಮ್ಮ, ಸ್ವಾಭಿಮಾನಿ ಸೋಮಲದೇವಿ ಮೊದಲಾದವರು ಕಾವ್ಯದ ಕೇಂದ್ರ ವ್ಯಕ್ತಿಗಳಾಗಿ ತೋರುತ್ತಾರೆ.

ಪ್ರಸಿದ್ಧ ಕವಿಗಳ ಕನ್ನಡ, ಸಂಸ್ಕೃತ ರಚನೆಗಳಷ್ಟೇ ಅಲ್ಲದೆ ಜನಪದ ಸಾಹಿತ್ಯಗಳಲ್ಲಿ ಬಣ್ಣಿತರಾಗಿದ್ದಾರೆ. ಅಬ್ಬಕ್ಕನಂತಹ ಅರಸಿ ವಿದೇಶಿಯರಿಂದ ಸ್ತುತಿಸಲ್ಪಟ್ಟ ಹೆಮ್ಮೆಯ ಅರಸಿಯರೆನಿಸದ್ದಾರೆ. ಇಂತಹ ಅರಸಿಯರ ವಿಭಿನ್ನ ಕತೆಗಳು ರೋಚಕವೆನಿಸುತ್ತವೆ. ಅರಸಿಯರೂ ಕೂಡ ಆಶ್ರಿತ ಕವಿಗಳಿಂದ ಸ್ತುತಿಸಲ್ಪಟ್ಟ ಯಾವುದೇ ಅರಸನಿಗಿಂತ ಕಡಿಮೆ ಎನಿಸುವುದಿಲ್ಲ.

**ಟಿಪ್ಪಣಿಗಳು ಹಾಗೂ ಆಕರಗ್ರಂಥಗಳು**

೧. ಹಿರೇಮಠ.ಆರ್.ಸಿ. (ಸಂ)., ೧೯೬೮, ಷಡಕ್ಷರದೇವ, **ಬಸವರಾಜವಿಜಯ**, ಧಾರವಾಡ,
೨. ಚಂದ್ರಶೇಖರ್.ಎಂ. (ಸಂ), ೧೯೭೯, ವಿರೂಪಾಕ್ಷ ಪಂಡಿತ, **ಚೆನ್ನಬಸವ ಪುರಾಣ**, ಕ.ಸಾ.ಪ., ಬೆಂಗಳೂರು
೩. SII XX ಶಾಸನ ಸಂ.೨೩ ದೇವೂರು, ಸಿಂದಗಿ
೪. MAR ೧೯೭೫, ೬೪ ಕಡೂರು ಕೆರೆಸಂತೆ
೪ಅ. ನಾಗಭೂಷಣ.ಸಿ, ೨೦೦೯, **ಕಲ್ಯಾಣ ಕರ್ನಾಟಕ ಸಾಹಿತ್ಯ-ಸಂಸ್ಕೃತಿ**, ಅವಿರತ ಪುಸ್ತಕ, ಬೆಂಗಳೂರು

೫. ಹಳಕಟ್ಟಿ.ಫ.ಗು.(ಸಂ) ೧೯೬೮, **ಹರಿಹರನ ರಗಳೆಗಳು** (ಸಮಗ್ರ ಸಂಪುಟ), ಸಮಾಜ ಪುಸ್ತಕಾಲಯ, ಧಾರವಾಡ,

೬. ಎ.ಇ. XV – ೬ ಸೂಡಿ (ತಾ) ರೋಣ

೭. SII XX, ೯೪ ಖೇಡಗಿ (ತಾ) ಇಂಡಿ

೮. I.A. X ಪು.೧೮೫ ಡಂಬಳ.ತಾ ಗದಗ

೯. SII xi-ii ೧೪೦ ಡೋಣಿ.ತಾ ಮುಂಡರಗಿ

೧೦. ಕೆ.ಆರ್.ಗಣೇಶ್ & ದೇವರಕೊಂಡಾರೆಡ್ಡಿ, ೧೪.೧೦.೨೦೧೬ 'ಅಕ್ಕರಗೊಟ್ಟಿ' ಕಾರ್ಯಕ್ರಮ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು

೧೧. ಜವರೇಗೌಡ.ದೇ & ವೆಂಕಟರಾಮಪ್ಪ.ಕೆ (ಸಂ), ೧೯೬೬, ನೇಮಿಚಂದ್ರ, **ಲೀಲಾವತಿ ಪ್ರಬಂಧಂ**, ಶಾರದಾಮಂದಿರ, ಮೈಸೂರು, ೧೪–೧೫೦

**೧೨.** ಜೆ.ಬಿ.ಬಿ.ಆರ್.ಎ.ಎಸ್. ೧೦ ಪು.೨೨೦

೧೩. ಆರ್.ಎನ್.ಕೆ.ಕೆ.೨೩ ರಾಯಭಾಗ ೧೧೨೭

೧೪. ಜೆ.ಬಿ.ಬಿ.ಆರ್.ಎಸ್ X ೫ ಕಲ್ಹೋಳಿ

೧೫. ಎ.ಇ. xiii ೩ ಬೆಳಗಾವಿ ಪು.೧೮

೧೬. ಹಳಕಟ್ಟಿ.ಫ.ಗು., **ಶಿವಾನುಭವ,** ಸಂ.೧೧, ೧೧೮೭

೧೭. E.C. ಸಂ.II ಶ್ರ.ಬೆ ೧೩೯

೧೮. ನಾಗರಾಜಯ್ಯ.ಹಂ.ಪ., ೧೯೯೬, **ದಾನಚಿಂತಾಮಣಿ ಅತ್ತಿಮಬ್ಬೆ,** ಐಬಿಎಚ್ ಪ್ರಕಾಶನ ಬೆಂಗಳೂರು ಪು.೮೩

೧೯. ಕಲಬುರ್ಗಿ.ಎಂ.ಎಂ.(ಸಂ)., ೨೦೧೧, **ಸಿರುಮನ ಚಾರಿತ್ರ್ಯ,** (ಸಿದ್ಧಕವಿಯ ಸಿರುಮಣ ನಾಯಕನ ಸಾಂಗತ್ಯ, ಮಲ್ಲಕವಿಯ ಗೊಲ್ಲಸಿರುಮನ ಚರಿತೆ, ರಾಮಕವಿಯ ಸಿರುಮನ ಚರಿತೆ) ಸ್ವಪ್ನ ಬುಕ್‌ಹೌಸ್, ಬೆಂಗಳೂರು

೨೦. ಶೇಷೋ ಶ್ರೀನಿವಾಸ(ಮೂಲ ಮರಾಠಿ), ಚಿಟ್ನಿಸ್.ಎನ್.ಕೆ (ಅನು), **ಶಿವಾಜಿ ಮಲ್ಲಮ್ಮಾಜಿ ಸಮರೋತ್ಸವ,** ವೀರಶೈವ ಅಧ್ಯಯನ ಸಂಸ್ಥೆ, ಗದಗ ೧೯೯೩, ಪು೨೯)

೨೧. ಪೂರ್ವೋಕ್ತ

೨೨. ಪಾಟೀಲ.ಯ.ರು., ೨೦೦೬, **ಬೆಳವಡಿ ಮಲ್ಲವ್ವ ಮಹಾರಾಣಿ ವಿಷಯ–ಇತಿಹಾಸ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಪು೭೩

೨೩. ನಾಗೇಗೌಡ.ಎಚ್.ಎಲ್., ೨೦೦೭, **ಪ್ರವಾಸಿ ಕಂಡ ಇಂಡಿಯಾ ಸಂಪುಟ ೪,** ಐ.ಬಿ.ಎಚ್. ಪ್ರಕಾಶನ, ಬೆಂಗಳುರು, ಪು.೨೬೪

೨೪. ಶ್ರೀನಿವಾಸ ಅಯ್ಯಂಗಾರ್.ಎಂ.ಎನ್., ೧೯೭೮, ಸಂಸ್ಕೃತ ಕವಿ ಚರಿತೆ, ಸಂಸ್ಕೃತ ಕವಿಚರಿತೆ ಪ್ರಕಾಶನ, ಬೆಂ, ಪು.೧೦೬

೨೫. ಎನ್ಕೆ, ೧೯೯೫, ಮುನ್ನುಡಿ, ಶ್ರೀಪೃಥ್ವೀವಲ್ಲಭ, ಶ್ರೀಕಾಂತ ಪ್ರಕಾಶನ, ಬೆಂಗಳೂರು, ಪು.೧೧

೨೬. ನಾಗರಾಜ ರಾವ್.ಸಿ.ಕೆ., ೧೯೯೫, **ಶ್ರೀಪೃಥ್ವೀವಲ್ಲಭ,** ಶ್ರೀಕಾಂತ ಪ್ರಕಾಶನ, ಬೆಂಗಳೂರು,

೨೭. ಹನುಮಾಕ್ಷಿ ಗೋಗಿ (ಸಂ)., ೧೯೯೬, **ಕಲ್ಬುರ್ಗಿ ಜಿಲ್ಲೆಯ ಶಾಸನಗಳು,** ೧೧೯೯ರ ಹುಣಸೀಹಡಗಲಿ ಶಾಸನ, ಶಿವಚಂದ್ರ ಪ್ರಕಾಶನ, ಹುಬ್ಬಳ್ಳಿ, ಪು.೨೨೯

**೨೮.** ಲಕ್ಷ್ಮಣ್ ತೆಲಗಾವಿ & ಎಂ.ವಿ.ಶ್ರೀನಿವಾಸ್ (ಸಂ), ೧೯೯೫, **ಹುಲ್ಲೂರು ಶೀನಿವಾಸ ಜೋಯಿಸರ ಸಂಶೋಧನ ಲೇಖನಗಳು,** ಹುಲ್ಲೂರು ಶೀನಿವಾಸ ಜೋಯಿಸ ಗ್ರಂಥ ಪ್ರಕಟಣ ಸಮಿತಿ, ಚಿತ್ರದುರ್ಗ, ಪು.೩೫

**೨೯.** ಚಂದ್ರಮೌಳಿ.ಎಸ್.ನಾಯ್ಕರ (ಸಂ)., ೨೦೧೨, **ಬಿಲ್ಹಣ ಮಹಾಕವಿ ಕೃತ ಚೋರಪಂಚಾಶಿಕಾ,** ಧಾರವಾಡ, ಪು.೧೫

**೩೦.** ಕನ್ನಡ ವಿಷಯ ವಿಶ್ವಕೋಶ ಸಂ.೨, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೯, ಪು.೧೬

**೩೧.** ಜ್ಯೋತ್ಸ್ನಾ ಕಾಮತ, ೨೦೦೮, **ಕೈಗನ್ನಡಿಯಲ್ಲಿ ಕನ್ನಡಿತಿ,** ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ

**೩೨.** ಮರುಳಯ್ಯ.ಸಾ.ಶಿ., ೨೦೦೧, **ಕೆಳದಿ ಅರಸರು ಮತ್ತು ಕನ್ನಡ ಸಾಹಿತ್ಯ,** ಸಪ್ನಬುಕ್ ಹೌಸ್, ಬೆಂಗಳೂರು

**೩೩.** ಕುಮುದಿನಿ.ವೈ.ಎಂ. ೨೦೧೧, **ಕನ್ನಡದ ಸಂಭಾವ್ಯ ರಾಣಿಯರು,** ರವಿಪ್ರಕಾಶನ, ಬೆಂಗಳೂರು

**೩೪.** ಗೋಪಾಲ ರಾವ್.ಹೆಚ್.ಎಸ್., ೨೦೧೦, **ನಮ್ಮದಿದು ಇತಿಹಾಸ,** ಅಭಿನವ, ಬೆಂಗಳೂರು

**೩೪ಅ.** ಜಯಲಕ್ಷ್ಮಿ ಸೀತಾಪುರ, ಕನ್ನಡದಲ್ಲಿ ಐತಿಹಾಸಿಕ ಜನಪದ ಲಾವಣಿಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

**೩೪ಆ** ಲಿಂಗಯ್ಯ.ಡಿ (ಸಂ) ೧೯೭೯, **ಪಿರಿಯಾಪಟ್ಟಣದ ಜಗಳ,** ದಿನಕರ ಪ್ರಕಾಶನ, ಬೆಂಗಳೂರು

೩೫. ಗೋಪಾಲ ರಾವ್.ಹೆಚ್.ಎಸ್., ಪೂರ್ವೋಕ್ತ, ಪು.೬೨–೬೩

೩೬. ತೈಲೂರು ವೆಂಕಟಕೃಷ್ಣ, ೨೦೦೮, **ಮಂಡ್ಯಜಿಲ್ಲೆಯ ಸ್ಥಳನಾಮಗಳ ಅವಲೋಕನ,** ಮಂಡ್ಯ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ಪು.೨೮೮

೩೭. ಲಕ್ಷ್ಮಣ್ ತೆಲಗಾವಿ & ಎಂ.ವಿ.ಶ್ರೀನಿವಾಸ್(ಸಂ) ಪೂರ್ವೋಕ್ತ, ಪು.೩೧೯

೩೮. K.I.Vol.I Introduction, pp.8-9

೩೯. E.C.VI ಮೂಡಿಗೆರೆ ಸಂ. ೬೭,೭೦,೭೧,೭೨,೭೩ & ೭೫

೪೦.

# ಅಧ್ಯಾಯ – ೫

## ಪ್ರಾಚೀನ ಕರ್ನಾಟಕದ ಅರಸಿಯರ ಸಾಹಿತ್ಯ ಪೋಷಣೆ

ಸಾಹಿತ್ಯ ಚರಿತ್ರೆಗಳಲ್ಲಿ ಅಧ್ಯಯನಕ್ಕೆ ಅನುಕೂಲವಾಗುವಂತೆ, ಕನ್ನಡ ಸಾಹಿತ್ಯ ಬೆಳೆದು ಬಂದ ಪರಿಯನ್ನು ಅನೇಕ ಘಟ್ಟಗಳಲ್ಲಿ ಗುರುತಿಸಲಾಗಿದೆ. ಅರಸಿಯರ ಪೋಷಣೆಯಲ್ಲಿ ಬೆಳೆದು ಬಂದ ಸಾಹಿತ್ಯವನ್ನೂ ಪ್ರಾಚೀನ ಹಾಗೂ ಮಧ್ಯಕಾಲೀನ ಎಂಬ ಎರಡು ವಿಭಿನ್ನ ಘಟ್ಟಗಳಲ್ಲಿ ವಿಶ್ಲೇಷಿಸುವುದು ಅಗತ್ಯವಾಗಿದೆ. ಅರಸುಮನೆತನಗಳ ಅವಧಿಯಲ್ಲಿ ಹೇಳುವುದಾದರೆ ಹೊಯ್ಸಳ ಅರಸರ ಕಾಲದವರೆಗಿನ ಸಾಹಿತ್ಯವನ್ನು ಪ್ರಾಚೀನವೆಂದೂ, ವಿಜಯನಗರ ಹಾಗೂ ಆ ನಂತರದ ಕಾಲದ ಸಾಹಿತ್ಯವನ್ನು ಮಧ್ಯಕಾಲೀನ ಸಾಹಿತ್ಯವೆಂದು ಪ್ರಸ್ತುತ ಅಧ್ಯಯನದಲ್ಲಿ ಪರಿಗಣಿಸಲಾಗಿದೆ.

ಮಧ್ಯಕಾಲೀನ ಸಂದರ್ಭದಲ್ಲಾದ ರಾಜಕೀಯ ಸಂಘರ್ಷಗಳು, ಆನಂತರ ವಸಾಹತುಗಳ ಕಾಲದಲ್ಲಾದ ಸಾಮಾಜಿಕ, ಧಾರ್ಮಿಕ, ಬದಲಾವಣೆಗಳ ನಡುವೆಯೂ ಈವರೆಗೆ ಉಳಿದುಬಂದಿರುವ ಸಾಹಿತ್ಯ ಕೃತಿಗಳು, ಮಾಹಿತಿಗಳು ಅಂದಿನವರ ಅಪಾರ ಕೊಡುಗೆ, ಸಾಧನೆಗಳನ್ನು ಮನವರಿಕೆ ಮಾಡಿಸುತ್ತವೆ. ಕನ್ನಡನಾಡಿನಲ್ಲಿ ಬೆಳೆದು ಬಂದ ಸಾಹಿತ್ಯ ಪರಂಪರೆಗೆ ಈ ನಾಡಿನ ಅರಸಿಯರ ಪೋಷಣೆ ಹೇಗಿತ್ತು ಎನ್ನುವುದನ್ನು ಈ ಅಧ್ಯಾಯಗಳಲ್ಲಿ ಗಮನಿಸಲಾಗಿದೆ.

### ಅರಸಿಯರ ಪೋಷಣೆ, ಪ್ರೋತ್ಸಾಹ

ಅರಸಿಯರ ಪೋಷಣೆಯಲ್ಲಿ ಸಾಹಿತಿಗಳು, ಕಲಾವಿದರು ಸನ್ಮಾನಗೊಳ್ಳುತ್ತಿದ್ದ ಪರಿಯನ್ನು ಶಾಸನಗಳು ಚಿತ್ರಿಸಿವೆ. ಸುಕವಿಜನ ವಿನೋದೆ, ಪಂಡಿತ–ಬುಧಜನ ಮಂಡಿತೆ, ವಿದ್ವಜ್ಜನಾಶ್ರಿತೆ ಮೊದಲಾದ ವಿಶೇಷಣಗಳನ್ನು ಧರಿಸಿದ ಅರಸಿಯರ ವಿಚಾರ ಶಾಸನಗಳಲ್ಲಿ ಉಕ್ತವಾಗಿವೆ. ಇವು ಕೇವಲ ಮುಖಸ್ತುತಿಯಾಗಿರದೆ, ಅರಸಿಯರು ಕವಿ–ಪಂಡಿತ, ಕಲಾಕೋವಿದರ ಪ್ರತಿಭೆಗಳನ್ನು ಗುರುತಿಸಿ, ಅವಕಾಶ ನೀಡಿ ಅವರಿಗೆ ಸೂಕ್ತ ಸನ್ಮಾನಗಳನ್ನು ಮಾಡಿದ್ದರೆಂಬುದಕ್ಕೆ ಹಲವಾರು ನಿದರ್ಶನಗಳು ದೊರಕುತ್ತವೆ. ಬಾದಾಮಿ ಚಳುಕ್ಯದೊರೆ ವಿಕ್ರಮಾದಿತ್ಯನ ರಾಣಿಯರಾದ ಲೋಕಮಹಾದೇವಿ ಹಾಗೂ ತ್ರೈಲೋಕ್ಯ ಮಹಾದೇವಿಯರು ತಾವು ನಿರ್ಮಿಸಿದ ದೇವಾಲಯದ ಶಿಲ್ಪಿಗಳಿಗೆ ಮಾಡಿದ ಸನ್ಮಾನಗಳನ್ನು ಕುರಿತು ಶಾಸನ ಹಾಕಿಸಿದ್ದಾರೆ. ಇಲ್ಲಿ 'ಪೆರ್ಜ್ಜೆಱೆಪು' ಎಂಬ ವಿಶೇಷ ಸನ್ಮಾನವನ್ನು ರಾಣಿಯರು ಮಾಡಿರುವ ವಿಚಾರ ತಿಳಿದು ಬರುತ್ತದೆ. ಇದನ್ನು ಷ.ಶೆಟ್ಟರ್ ಅವರು 'ಪೆರ್' ಎಂದರೆ ಹಿರಿಯ 'ಜರಿಪು' ಎಂದರೆ ಜರಿ ರುಮಾಲು, ಎಂಬ ಅರ್ಥವನ್ನು ನೀಡಿ 'ಜರಿಪೇಟ'ವನ್ನು ತೊಡಿಸುವ ಸನ್ಮಾನವಿರಬಹುದೆಂದು ಅಭಿಪ್ರಾಯ ಪಟ್ಟಿದ್ದಾರೆ[೧]. ಅಲ್ಲದೆ ಅವರಿಗೆ 'ಬಳ್ಳಿಗವರ್ತ್ತೆ ಇಲ್ಲ' ಎನ್ನುವ ಮತ್ತೊಂದು ವಿಚಾರವನ್ನು ಶಾಸನವು ತಿಳಿಸುತ್ತದೆ. ಬಳ್ಳಿಗವರ್ತ್ತೆ ಎಂಬುದು ತಾಂಬೂಲಕ್ಕೆ ವಿಧಿಸಲಾಗುತ್ತಿದ್ದ ಸುಂಕ. ಈ ಸುಂಕದ ವಿನಾಯಿತಿಯನ್ನೂ ಅರಸಿಯು ಅವರಿಗೆ ನೀಡಿದ್ದಳು. ಇಷ್ಟೇ ಅಲ್ಲದೆ ಈ ರೂವಾರಿಗಳಿಗೆ ಅನಿವಾರಿತಾಚಾರಿ, ತ್ರಿಭುವನಾಚಾರಿ ಎಂಬ ಬಿರುದುಗಳನ್ನೂ ನೀಡಿ ಸನ್ಮಾನಿಸಲಾಗಿದೆ. 'ಅನಿವಾರಿತ' ಎಂಬುದು ವಿಕ್ರಮಾದಿತ್ಯನ ಬಿರುದಾಗಿದ್ದು, ಪತಿಯ ಬಿರುದನ್ನು ತನ್ನ ನೆಚ್ಚಿನ ಕಲಾವಿದನಿಗೆ ರಾಣಿಯು ನೀಡಿರುವುದು ಅವಳ ಕಲಾಭಿಮಾನದ ಪರಾಕಾಷ್ಠೆಯನ್ನು ತಿಳಿಸುತ್ತದೆ. ಪತಿಯ ಬಿರುದುಗಳನ್ನು ತಾವು ಮೆಚ್ಚಿದ ಶ್ರೇಷ್ಠವ್ಯಕ್ತಿಗಳಿಗೆ ನೀಡುವುದು ವಿಶೇಷ ಸನ್ಮಾನಗಳಲ್ಲಿ ಒಂದಾಗಿತ್ತೆಂದು ತೋರುತ್ತದೆ. ನೊಳಂಬ ಅರಸಿಯೂ ಕೂಡ ಇಂತಹ

ಸನ್ಮಾನ ಮಾಡಿದ ಸಂದರ್ಭವನ್ನು ನೋಡಬಹುದು[೨]. ವೀರನೊಳಂಬಾಧಿರಾಜ ಪೊನ್ನೇರರಸನ ಧರ್ಮಮಹಾರಾಣಿಯು ಸಿಂಗಪೋತರಸನನ್ನು 'ಪೊನೇಜಿದೊಡ್ಡ'ರೆನ್ದು ಕರೆದು ಕಡಗಮಿಟ್ಟು ಸನ್ಮಾನಿಸಿದಳು. ಕಡಗವನ್ನಿಟ್ಟು ಸನ್ಮಾನಿಸುವುದೂ ಕೂಡ ಒಂದು ವಿಶೇಷ ಸನ್ಮಾನವಾಗಿತ್ತು. ಇದೇ ಅರಸಿಯು ಮುಖರಾಮರ್ ಎಂಬುವನಿಗೆ 'ಶ್ರೀಮುಖದೊಡ್ಡ'ನೆಂದು ಕರೆದು ಕಡಗಮಿಟ್ಟು ಸನ್ಮಾನಿಸಿರುವುದನ್ನೂ ಇದೇ ಶಾಸನವು ತಿಳಿಸುತ್ತದೆ. ಸನ್ಮಾನಮಾಡಿ ತೊಡಿಸುತ್ತಿದ್ದ ಕಡಗವನ್ನು ಕೆಲವೆಡೆ ತೊಡರ್ ಎಂದೂ ಕರೆಯಲಾಗಿದೆ.

ಹೀಗೆ ಸನ್ಮಾನಗಳನ್ನು, ಬಿರುದು ನೀಡುವುದು; ಸುಂಕ ವಿನಾಯಿತಿ ತೋರುವುದು, ಕಡಗ ತೊಡಿಸುವುದು, ನಗ-ನಾಣ್ಯ ಭೂಮಿ ವಾಹನ ಮೊದಲಾದವುಗಳನ್ನು ಕೊಡುವುದರ ಮೂಲಕ ನಡೆಸಲಾಗುತ್ತಿತ್ತು. ಗಂಗ ಮಾರಸಿಂಹನ ಅಜ್ಜಿ ಬುಜಬ್ಬರಸಿಯು ಕ್ರಿ.ಶ.೯೭೫ರಲ್ಲಿ ಧಾರವಾಡ ಜಿಲ್ಲೆಯ ಹೆಬ್ಬಾಳಿನಲ್ಲಿ ಒಂದು ದೇವಾಲಯವನ್ನು ಕಟ್ಟಿಸಿ, ಇಲ್ಲಿ ವಾದ್ಯಗಾರ (ಪಜೆಯೊಯ್ವಂ) ದೇಗುಲದ ಸೂಳೆಯರು, ಪಾತ್ರದವರು, ಕಹಳೆಯವನು, ಮುಂತಾದವರಿಗೆ ದತ್ತಿಗಳನ್ನು ಕೊಟ್ಟಿರುವುದಲ್ಲದೆ ಕಾಲಕಾಲಾಂತರದೊಳ್ ಇವರ ಸಂತತಿಗೆ ಸೇರುವಂತೆ ಪ್ರತಿಪಾಳಿಸುವುದು ಎಂಬ ಆಜ್ಞೆಯನ್ನೂ ಹೊರಡಿಸಿದ್ದಾಳೆ. ಇವಳು ನೀಡಿರುವ ದಾನದ ವಿವರಗಳನ್ನೂ, ಇವಳ ಆಜ್ಞೆಯನ್ನೂ ರಚಿಸಿದ ಶಾಸನ ಬರಹಗಾರ ಕಮ್ಮರ ಕೇತೋಜನಿಗೆ ಎರಡು ಮತ್ತರು ಭೂಮಿಯನ್ನು ನೀಡಿದ ವಿವರವನ್ನೂ ಈ ಶಾಸನ ನೀಡುತ್ತದೆ[೩].

ಅರಸಿಯರಿಂದ ಸನ್ಮಾನಿತರಾದ ಬರಹಗಾರರ ಕುರಿತಾದ ಇನ್ನೂ ಕೆಲವು ನಿದರ್ಶನಗಳನ್ನು ಕಾಣಬಹುದು. ೧೦ನೆಯ ಶತಮಾನದಲ್ಲಿ ಚಿತ್ರದುರ್ಗದ ಕೆಲವು ಪ್ರದೇಶಗಳನ್ನಾಳುತ್ತಿದ್ದ ರಾಷ್ಟ್ರಕೂಟರ ಸಾಮಂತ ಬದ್ದೆಗರಸನ ರಾಣಿ ಸುಗ್ಗಿಯಬ್ಬರಸಿಯು ಕ್ರಿ.ಶ.೯೨೯ರಲ್ಲಿ ತಾನು ನೀಡಿದ ದಾನದ ವಿಚಾರವನ್ನು ತಿಳಿಸುವ ತಾಮ್ರಶಾಸನವನ್ನು ಹೊರಡಿಸಿದ್ದಾಳೆ[೪]. ನಲವತ್ತೊಂದು ಸಾಲುಗಳ ಈ ಗದ್ಯ ಶಾಸನವನ್ನು ಚಾವಯ್ಯನೆಂಬುವವನಿಂದ ಬರೆಯಿಸಿದ್ದಾಳೆ. ಈ ಕಾಲದ ತಾಮ್ರಶಾಸನಗಳು ಸಾಧಾರಣವಾಗಿ ಸಂಸ್ಕೃತದಲ್ಲಿ ಬರೆಯಲ್ಪಟ್ಟು ದಾನ ನೀಡಿದ ಭೂಮಿಯ ಮೇರೆಯನ್ನು ಮಾತ್ರ ಕನ್ನಡದಲ್ಲಿ ಉಲ್ಲೇಖಿಸುವುದು ಕಂಡು ಬರುತ್ತದೆ. ಆದರೆ ಸುಗ್ಗಿಯಬ್ಬರಸಿಯ ಈ ತಾಮ್ರಶಾಸನವು ಹತ್ತನೆಯ ಶತಮಾನದಲ್ಲಿ ಅರಸಿಯೊಬ್ಬಳು ಕನ್ನಡದಲ್ಲಿ ಬರೆಯಿಸಿದ ತಾಮ್ರಪತ್ರ ಎಂಬ ವಿಶೇಷತೆಯನ್ನು ಪಡೆದಿದೆ[೫]. ಈ ಶಾಸನವನ್ನು ಬರೆದುದಕ್ಕಾಗಿ ಅರಸಿಯು ಚಾವಯ್ಯನಿಗೆ ಕೆರೆಯ ಮೊದಲ ಏರಿಯಲ್ಲಿ ೩೦ ಗುಳ ತೋಟವನ್ನು ಮತ್ತು ಮೂರು ಖಂಡುಗ ಗದ್ದೆಯನ್ನು ಕೊಟ್ಟು ಸನ್ಮಾನಿಸಿದ್ದಾಳೆ. ಇಂತಹ ಸನ್ಮಾನಗಳನ್ನು ಸಾಹಿತ್ಯಿಕ ಕೊಡುಗೆಗಳಾಗಿ ಕೊಡುತ್ತಿದ್ದ ಉದಾಹರಣೆಗಳನ್ನೂ ಕಾಣಬಹುದು. ಕಲ್ಯಾಣಿ ಚಾಲುಕ್ಯ ದೊರೆ ಸೋಮೇಶ್ವರನ ಅರಸಿ ರಾಯಚೂರಿನ ಮಾನ್ವಿ ಬಳಿಯ ಮಾಳಾಪುರದ ದೇಗುಲದಲ್ಲಿ ಗೀತ-ನೃತ್ಯ-ವಾದ್ಯದವರಿಗೆ ದಾನ ನೀಡಿರುವುದಲ್ಲದೆ ಈ ವಿಚಾರವನ್ನು ಶಾಸನರೂಪದಲ್ಲಿ ರಚಿಸಿದ ಕಸಿಗವೋಜ ಎಂಬುವವನಿಗೂ ದಾನ ನೀಡಿದ್ದಾಳೆ[೬].

**ಸಾಹಿತ್ಯರಚನೆಗೆ, ಕವಿಗಳಿಗೆ ಅರಸಿಯರ ಪ್ರೋತ್ಸಾಹ**

ಪ್ರಾಚೀನ ಕನ್ನಡ ಸಾಹಿತ್ಯದ ಅದೆಷ್ಟೋ ಕೃತಿಗಳು ಇಂದಿಗೆ ಅಲಭ್ಯವಾಗಿವೆ. ಕೇವಲ ಉಲ್ಲೇಖಗಳು ಮಾತ್ರ ದೊರಕುವ ಇಂಥ ಕೃತಿಗಳಲ್ಲಿ ಅರಸಿಯರ ಪ್ರೋತ್ಸಾಹದಿಂದ ರಚಿತವಾಗಿರುವ, ಅರಸಿಯರ ಕುರಿತಾದ ಮಾಹಿತಿ ನೀಡಬಲ್ಲ ಕೃತಿಗಳೂ ಸೇರಿವೆ. ಹನ್ನೆರಡನೆಯ ಶತಮಾನದಲ್ಲಿ ಗುತ್ತಲ ವಂಶದ ಅರಸಿ ವೀರ ವಿಕ್ರಮಾದಿತ್ಯನ ಸೊಸೆಯೂ ಇಮ್ಮಡಿ ಗುತ್ತನ ರಾಣಿ**ಪದ್ಮಲದೇವಿ**ಯು ಕವಿಗಳಿಗೆ ಆಶ್ರಯ ನೀಡಿದ್ದಳೆಂಬ ವಿಚಾರ ಶಾಸನದ ಉಲ್ಲೇಖದಿಂದ ತಿಳಿದುಬರುವುದಾದರೂ[೭] ಕೃತಿಯಾಗಲೀ, ಕವಿಯ ವಿಚಾರವಾಗಲೀ ತಿಳಿದುಬಂದಿಲ್ಲ.

ನಿಪ್ಪಾಣಿ ಪ್ರದೇಶದಲ್ಲಿ ಆಳ್ವಿಕೆ ನಡೆಸುತ್ತಿದ್ದ ಕಲ್ಯಾಣಿ ಚಾಲುಕ್ಯ ಅರಸಿ **ಸೋಮಲದೇವಿಯು** ಕ್ರಿ.ಶ.೧೦೩೭ರಲ್ಲಿ ಸರಸ್ವತಿ ವಿಗ್ರಹವನ್ನು ಪ್ರತಿಷ್ಠೆ ಮಾಡಿಸಿ ಆ ದೇವಾಲಯಕ್ಕೆ ದತ್ತಿ ಬಿಟ್ಟುಕೊಟ್ಟಿದ್ದಾಳೆ. ಈ ವಿಚಾರವನ್ನು ತಿಳಿಸುವ ಶಾಸನವು **ದುರ್ಗಸಿಂಹನನ್ನು** ಈಕೆಯ ಮನೆವೆರ್ಗಡೆ ಎಂದು ಕರೆದಿದೆ[೮].

ಸೋಮಲಾದೇವಿಯ ಪತಿ ಚಾಲುಕ್ಯ ಜಯಸಿಂಹನ ಸಂಧಿವಿಗ್ರಹಿ ಹಾಗೂ ಆಸ್ಥಾನ ಕವಿಯಾಗಿದ್ದ, ಕನ್ನಡದ ಪ್ರಸಿದ್ಧ ಕೃತಿ 'ಕರ್ನಾಟಕ ಪಂಚತಂತ್ರ'ವನ್ನು ರಚಿಸಿರುವ ಕವಿ ದುರ್ಗಸಿಂಹನೂ ಇದೇ ಕಾಲದವನಾಗಿದ್ದಾನೆ. "ಈ ಇಬ್ಬರೂ ಅಭಿನ್ನರು. ರಾಜನ ಆಸ್ಥಾನಕ್ಕೆ ಸೇರುವ ಮುನ್ನ ದುರ್ಗಸಿಂಹನು ರಾಣಿಯ ಮನೆವೆರ್ಗಡೆಯಾಗಿ ಕಾರ್ಯ ನಿರ್ವಹಿಸುತ್ತಿದ್ದು, ಈತನ ಸಾಮರ್ಥ್ಯವನ್ನರಿತ ದೊರೆ ಇವನನ್ನು ತನ್ನ ಆಸ್ಥಾನಕ್ಕೆ ಆಹ್ವಾನಿಸಿರುವ ಸಾಧ್ಯತೆಯಿದೆ" ಎಂದು ಹನುಮಾಕ್ಷಿ ಗೋಗಿಯವರು ಅಭಿಪ್ರಾಯ ಪಡುತ್ತಾರೆ[೯].

'ಕರ್ನಾಟಕ ಪಂಚತಂತ್ರ'ದ ರಚನೆಯ ಕಾಲ ಕ್ರಿ.ಶ.೧೦೩೩ ಎಂದು ತಿಳಿದು ಬರುತ್ತದೆ. ಇದೇ ಕಾಲದವಳಾದ ಅರಸಿ ಸೋವಲಾದೇವಿ ಹಾಗೂ ಪಂಚತಂತ್ರದ ಕರ್ತೃ ದುರ್ಗಸಿಂಹರು ಸಮಕಾಲೀನರೆನ್ನುವುದರಲ್ಲಿ ಅನುಮಾನವಿಲ್ಲ. ಆದರೆ ದುರ್ಗಸಿಂಹನು ಒಂದುಬಾರಿಯಾದರೂ ಅರಸಿಯನ್ನು ತನ್ನ ಕೃತಿಯಲ್ಲಿ ಸ್ಮರಿಸಿಲ್ಲ. ಸೋವಲದೇವಿಯ ಮನೆವೆರ್ಗಡೆಯೇ ಪಂಚತಂತ್ರದ ಕರ್ತೃ ಎನ್ನಲು ಮತ್ತಷ್ಟು ಆಧಾರಗಳ ಅಗತ್ಯವಿದೆ. ಅಂತೆಯೆ ಹನುಮಾಕ್ಷಿ ಗೋಗಿಯವರ ಅಭಿಪ್ರಾಯವನ್ನು ನಿರಾಕರಿಸಲೂ ಆಗದು. ಕವಿ ರನ್ನನು ಅನೇಕ ದೊರೆಗಳ ಪೋಷಣೆಯಲ್ಲಿ ಹಂತ ಹಂತವಾಗಿ ಬೆಳೆದಂತೆ, ದುರ್ಗಸಿಂಹನೂ 'ಪಂಚತಂತ್ರ' ಕೃತಿ ರಚನೆಗೂ ಮೊದಲು ಅರಸಿ ಸೋಮಲಾದೇವಿಯ ಪೋಷಣೆಯಲ್ಲಿದ್ದಿರುವ ಸಾಧ್ಯತೆ ಇದೆ.

ಕನ್ನಡದ ಪ್ರಾಚೀನ ಸಾಹಿತ್ಯವನ್ನು ಶಾಸನಗಳಲ್ಲಿ ಗುರುತಿಸುವಂತೆ, ಪ್ರಾಚೀನ ಕರ್ನಾಟಕದ ರಾಣಿಯರ ಸಾಹಿತ್ಯ ಪೋಷಣೆ (ಬರೆಯಿಸಿರುವ ಸಾಹಿತ್ಯ, ಪೋಷಿತ ಕವಿ)ಗಳನ್ನೂ ಶಾಸನಗಳಲ್ಲಿಯೇ ಗುರುತಿಸಬೇಕಾಗಿದೆ. "ಕೃತಿಗಳು ಲಭ್ಯವಿರುವ ಕವಿಗಳಿಗಿಂತ ಪ್ರತಿಭೆಯಲ್ಲಿ ದೊಡ್ಡವರಾದ ಅನೇಕ ಕವಿಗಳು ಕನ್ನಡ ಶಾಸನಗಳನ್ನುರಚಿಸಿದ್ದಾರೆ"[೧೦] ಇಂತಹ ಕವಿಗಳಿಗೆ ಪೋಷಣೆ ನೀಡಿ ಸಾಹಿತ್ಯ ರಚನೆಗೆ ಮುಂದಾದ ಕೆಲವು ಅರಸಿಯರನ್ನಿಲ್ಲಿ ಗಮನಿಸಬಹುದು.

ಈ ಅಧ್ಯಾಯದಲ್ಲಿ, ಕಾಲಾನುಕ್ರಮದಲ್ಲಿ ವಿಭಿನ್ನ ಮನೆತನದ ಹಾಗೂ ವಿಭಿನ್ನ ಕಾಲಕ್ಕೆ ಸೇರಿದ ಅರಸಿಯರ ಕೊಡುಗೆಗಳನ್ನು ಗಮನಿಸಲಾಗಿದೆ. ಶಾಸನಕವಿಗಳು ಹಾಗೂ ಅವರ ಕಾವ್ಯದಲ್ಲಿ ಬಿಂಬಿತರಾಗಿರುವ ಅವರ ಪೋಷಿತ ಅರಸಿಯರ ವಿಚಾರವನ್ನು ವಿವರಣಾತ್ಮಕವಾಗಿ ಗಮನಿಸಲಾಗಿದೆ.

**ಸತ್ತರ ವಂಶದ ಜಕ್ಕಿಯಬ್ಬೆ**

ನಾಗರಖಂಡ ಎಪ್ಪತ್ತನ್ನು ಆಳಿದ (ಕ್ರಿ.ಶ.೯೧೨–೯೧೮) ಗಾವುಂಡಿ ಜಕ್ಕಿಯಬ್ಬೆಯು, ಸತ್ತರ ವಂಶದ ನಾಗಾರ್ಜುನನ ಮಡದಿ. ಸಾಂತರ ಒಂದು ಶಾಖೆಯೇ ಸತ್ತರವಂಶವೆಂಬ ಅಭಿಪ್ರಾಯವಿದೆ[೧೧]. ಇವಳು ದಾನ ನೀಡಿದ ವಿಚಾರದೊಂದಿಗೆ ಅವಳ ಆಳ್ವಿಕೆ, ಮಗಳಿಗೆ ನೀಡಿದ ಆಳ್ವಿಕೆಯ ಹಸ್ತಾಂತರ ಮೊದಲಾದ ವಿಚಾರವನ್ನು ತಿಳಿಸುವ ಶಾಸನವನ್ನು ಕವಿ ನಾಗವರ್ಮ ರಚಿಸಿದ್ದಾನೆ[೧೨].

ರಾಷ್ಟ್ರಕೂಟ ಕನ್ನರದೇವ (ಎರಡನೆಯ ಕೃಷ್ಣ)ನ ಕಾಲದಲ್ಲಿ ನಾಗರಖಂಡ ಎಪ್ಪತ್ತರ ಆಳ್ವಿಕೆ ನಡೆಸುತ್ತಿದ್ದ ನಾಗಾರ್ಜುನನು ಯುದ್ಧದಲ್ಲಿ ಮಡಿದಾಗ, ಅರಸನ ಆಣತಿಯಂತೆ ಆಡಳಿತದ ಚುಕ್ಕಾಣಿ ಹಿಡಿದ ಜಕ್ಕಿಯಬ್ಬೆಯು ಸಮಸ್ತ ಗಾವುಂಡರ ಕೋರಿಕೆಯಂತೆ ಆವುತಪುರವನ್ನು ಬಿಡಿಸಿಕೊಂಡು, ದೇವಾಲಯಕ್ಕೆ ದಾನ ನೀಡಿದ ವಿಚಾರವನ್ನೂ, ಇವಳು ಕೈಗೊಂಡ ವ್ರತದ ವಿಚಾರವನ್ನೂ ಕವಿ ನಾಗವರ್ಮನು ಈ ಶಾಸನದಲ್ಲಿ ಬಣ್ಣಿಸಿದ್ದಾನೆ.

**॥ಉತ್ತಮ ಪ್ರಭುಶಕ್ತಿಯುಕ್ತೆ ಜಿನೇನ್ದ್ರಶಾಸನಭಕ್ತೆ ಕಾನ್ತಾತ್ಯೆತ್ತೆವಿಭ್ರಮೆ ಜಕ್ಕಿಯಬ್ಬೆ ಸಮನ್ತು ನಾಗರಖಣ್ಡಮೆ**
**ಪ್ಪತ್ತುಮಂ ವಧುವಾಗಿಯುಂ ನಿಜವೀರವಿಕ್ರಮ ಗರ್ಬ್ಬದಿಂ ಪೆತ್ತವಂ ಪ್ರತಿಪಾಲಿಸುತ್ತೊಸದಿಟ್ಟಳಿಟ್ಟವಸಾನದೊಳ್ ॥**

ನಾಗರಖಂಡ ಎಪ್ಪತ್ತಕ್ಕೆ ವಧುವಾಗಿ ಬಂದ (ನಾಗಾರ್ಜುನನ ಸತಿಯಾದ) ಜಕ್ಕಿಯಬ್ಬೆಯು ಉತ್ತಮ ಆಡಳಿತಗಾರ್ತಿಯೂ, ಜಿನಭಕ್ತೆಯೂ ಆಗಿ ತನ್ನ ಜೀವನದ ಕಡೆಯ ದಿನಗಳವರೆಗೂ ಆಳ್ವಿಕೆ ನಡೆಸುತ್ತಿದ್ದಳು.

ಜಕ್ಕಿಯಬ್ಬೆಯು ರೋಗದಿಂದ ಬಾಧಿತಳಾದಾಗ, ತನ್ನ ಮಗಳಿಗೆ ರಾಜ್ಯಾಧಿಕಾರದ ಜವಾಬ್ದಾರಿಯನ್ನು ನೀಡಿ ಮುಕ್ತಳಾಗಬಯಸಿದ್ದನ್ನು ಕವಿಯು "ತನುರುಜೆಯಂ ಪುದುಙ್ಗುಳಿಸೆ ಸಂಸ್ಕೃತಿ ಭೋಗಮಸಾರಮೆನ್ದು ನಿಚ್ಚಿನಿಸಿ ನಿಜಪ್ರಿಯಾತ್ಮಜೆಗೆಸನ್ತತಿಯಂ ಕರೆದಿತ್ತು" ಎಂದು ಆರಂಭವಾಗುವ ಪದ್ಯದಲ್ಲಿ ನಿರೂಪಿಸಿದ್ದಾನೆ. ಜಕ್ಕಿಯಬ್ಬೆಯು ಸಂಸಾರಭೋಗವು ನಿಸ್ಸಾರವೆನ್ನುವುದನ್ನು ಅರಿತು, ತನ್ನ ಇಳಿ ವಯಸ್ಸಿನಲ್ಲಿ ಮಗಳಿಗೆ ಜವಾಬ್ದಾರಿಯನ್ನು ಕೊಟ್ಟು ತಾನು ಜೀವನ್ಮುಕ್ತಿ ಪಡೆದ ವಿಚಾರವು ಸವಿಸ್ತಾರವಾಗಿ ಇಲ್ಲಿ ಬಣ್ಣಿತವಾಗಿದೆ.

**ಕವಿ ನಾಗವರ್ಮ್ಮ:** ಜಕ್ಕಿಯಬ್ಬೆಯ ಅಂತ್ಯಕಾಲದಲ್ಲಿ ಅಥವಾ ಅವಳ ಮಗಳ ಆಳ್ವಿಕೆಯ ಕಾಲದಲ್ಲಿ ರಚಿತವಾಗಿರುವ ಈ ಶಾಸನವನ್ನು ಬರೆದ ಕವಿ ತನ್ನನ್ನು "ಬರೆದೊಂ ನಾಗವರ್ಮ್ಮ" ಎಂದಷ್ಟೇ ಪರಿಚಯಿಸಿಕೊಂಡಿದ್ದಾನೆ. ಹತ್ತನೆಯ ಶತಮಾನದಲ್ಲಿ 'ಕರ್ಣಾಟಕ ಕಾದಂಬರಿ' ಕೃತಿ ರಚನಕಾರ ನಾಗವರ್ಮ ಇದೇ ಕಾಲದವನಾದರೂ ಇವರಿಬ್ಬರೂ ಒಬ್ಬನೇ ಎಂಬುದಕ್ಕೆ ಆಧಾರವಿಲ್ಲ.

೩೩ಸಾಲಿನ ಈ ಪುಟ್ಟ ಶಾಸನಪದ್ಯವು ಚಂಪೂ ಶೈಲಿಯಲ್ಲಿ ರಚಿತವಾಗಿದೆ. ಇಲ್ಲಿ ಎರಡು ಚಂಪಕಮಾಲಾವೃತ್ತ ಹಾಗೂ ಒಂದು ಮಲ್ಲಿಕಾಯುತಮಾಲಾವೃತ್ತದ ರಚನೆಗಳಿವೆ. ಜಕ್ಕಿಯಬ್ಬೆಯನ್ನು ಬಣ್ಣಿಸುವ ಪದ್ಯವೊಂದು ಕನ್ನಡದ ಕಾವ್ಯಗಳಲ್ಲಿ ಅಪರೂಪವಾಗಿ ಕಂಡುಬರುವ ಮಲ್ಲಿಕಾಯುತಮಾಲಾ ವೃತ್ತದಲ್ಲಿ ರಚಿತವಾಗಿದೆ. ನಾಲ್ಕುಸಾಲಿನ ಈ ವೃತ್ತದ ಪ್ರತಿ ಸಾಲಿನಲ್ಲಿನ ೧೮ ಅಕ್ಷರಗಳಲ್ಲಿ 'ರಸಜಜಭರ' ಮಾತ್ರಾಗಣಗಳು ಬರುವಂತೆ ರಚಿಸುವುದು ಮಲ್ಲಿಕಾಯುತಮಾಲಾವೃತ್ತದ ನಿಯಮವಾಗಿದೆ. "ರಂಸಜಂಜಭರಂ ಬರಲ್ ಮಲ್ಲಿಕಾಯುತಮಾಲೆಯಪ್ಪುದು"[೧೩] ಜಕ್ಕಿಯಬ್ಬೆಯ ಸಂಕ್ಷಿಪ್ತ ಪರಿಚಯ ನೀಡಿರುವ ಈ ಶಾಸನವು ಹತ್ತನೆಯ ಶತಮಾನದ ಕನ್ನಡ ಭಾಷೆಯನ್ನೂ ಕೆಲವೆಡೆ ಪೂರ್ವದ ಹಳಗನ್ನಡವೆಂದು ಗುರುತಿಸುವ ಮೋಹಸನ್ದೊಂ, ಮುದ್ದನ್ನಿಟಿಸಿದೊಂ, ಕೊಟ್ಟೊಳ್ ಮೊದಲಾದ ಶಬ್ದಪ್ರಯೋಗಗಳನ್ನು ಈ ಶಾಸನದಲ್ಲಿ ಗುರುತಿಸಬಹುದು.

## ಜಕ್ಕಿಯಬ್ಬೆ

ರಾಷ್ಟ್ರಕೂಟರ ಸಾಮಂತನಾದ ಮಂದಿಗನು ಕದಂಬಳಿಗೆ ಸಾವಿರವನ್ನು ಆಳ್ವಿಕೆ ನಡೆಸುತ್ತಿದ್ದ ಸಂದರ್ಭದಲ್ಲಿ ಈತನ ಅರಸಿ ಜಕ್ಕಿಯಬ್ಬೆಯು ಕಾಕಂಬಾಳ ಎಂಬಲ್ಲಿ ಬಸದಿಯೊಂದನ್ನು ನಿರ್ಮಿಸಿ, ದಾನ ನೀಡಿ ಶಾಸನವನ್ನು ಹಾಕಿಸಿದ್ದಾಳೆ[೧೪]. ಚಿತ್ರದುರ್ಗದ ತುರವನೂರಿನ ಬೇವಿನಹಳ್ಳಿ ಗ್ರಾಮದಲ್ಲಿನ ಶಾಸನವು ಸರಳ ಕಂದಪದ್ಯ ಹಾಗೂ ಎರಡು ವೃತ್ತಗಳಿಂದ ಕೂಡಿದ ಚಂಪೂ ಪ್ರಕಾರದ ಕಾವ್ಯವಾಗಿದೆ. ಈ ಶಾಸನವನ್ನು **ಸುಭಗ** ಎಂಬ ಕವಿಯು ರಚಿಸಿದ್ದಾನೆ.

ಶಾಸನವು ಜಕ್ಕಿಯಬ್ಬೆಯ ಪತಿ ಮಂದಿಗನನ್ನು ಪರಿಚಯಿಸಿ ಮುಂದಿನ ಎರಡು ಕಂದ ಪದ್ಯದಲ್ಲಿ ಅರಸಿಯನ್ನು ಕುರಿತು ಹೀಗೆ ಬಣ್ಣಿಸಿದೆ.

**ಆತನ ಸತಿ ಸಕಳ ಜಗ । ನ್ನೂತೆಗುಣವಂತೆ ಜಕ್ಕಿಸುನ್ದರಿ ನೆಗಟ್ದಾ**
**ಖ್ಯಾತಿಯ ಕಾಕಂಬಾಟಿಗೊ । ಳ್ಮಾತೆಯೊಳೊಳ್ವೆಸೆಯೆ ಬಸದಿಯಂ ಮಾಡಿಸಿದಳ್ ॥**
**ಅನ್ತು ಸಮಸ್ತ ಗುಣಗಣಾಳಂ**
**ಕ್ರಿತೆ ಸಮ್ಯಕ್ತ ಧವಳೆ ಸುಜನವೆಡಂಗಿ ಸಹಜ ಸರ**
**ಸ್ವತಿ ವಿಳಾಸ ವಿದ್ಯಾದರಿ ಶ್ರೀ**
**ಮತ್ ಜಕ್ಕಿ ಸುಂನ್ದರಿಯರ್ಮ್ಮಾಡಿಸಿದ ಬಸದಿಗೆ ॥**

ಮಂದಿಗನ ಸತಿಯಾದ ಜಕ್ಕಿಸುಂದರಿಯು ಕಾಕಂಬಾಳದಲ್ಲಿ ಸುಂದರವಾದ ಬಸದಿಯನ್ನು ನಿರ್ಮಿಸಿದಳೆಂಬ ವಿಚಾರವನ್ನು ಈ ಮೊದಲನೆಯ ಕಂದಪದ್ಯ ತಿಳಿಸಿದೆ. ಮುಂದಿನ ಪದ್ಯದಲ್ಲಿ ಅರಸಿಯನ್ನು ಕವಿಯು ಗುಣಗಣಾಳಂಕ್ರಿತೆ, ಸಮ್ಯಕ್ತ ಧವಳೆ, ಸುಜನವೆಡಂಗಿ, ಸಹಜ ಸರಸ್ವತಿ, ವಿದ್ಯಾಧರಿ, ಸುಂದರಿ ಎಂದು ಕರೆದು ಅವಳ ಗುಣ, ವಿದ್ಯೆ, ಸೌಂದರ್ಯ, ಧಾರ್ಮಿಕ ಆಸಕ್ತಿಗಳನ್ನು ಬಣ್ಣಿಸಿದ್ದಾನೆ.

ಅರಸಿ ಜಕ್ಕಿಯಬ್ಬೆಯು ತಾನು ನಿರ್ಮಿಸಿದ ಬಸದಿಯನ್ನೂ ಅದರೊಂದಿಗೆ ಕೆಲವು ಭೂಮಿಯನ್ನೂ ರಾಮಚಂದ್ರ ಭಟ್ಟರ್‌ಗೆ ಸಕವರ್ಷ ೮೯೦ರ (ಕ್ರಿ.ಶ.೯೬೮) ಪ್ರಭವ ಸಂವತ್ಸರದ ಪುಷ್ಯ ಮಾಸದಲ್ಲಿ ನೀಡಿದ್ದಾಳೆ. ಈ ದಾನದ ವಿವರ ಅದಕ್ಕೆ ಹಾಕಿರುವ ಒಪ್ಪ, ಶಾಪಾಶಯ ಮೊದಲಾದವುಗಳನ್ನು ಕವಿಯು ಒಂದು ಕಂದ ಪದ್ಯ, ಎರಡು ಸಂಸ್ಕೃತ ಶ್ಲೋಕ ಹಾಗೂ ಗದ್ಯದಲ್ಲಿ ವಿವರಿಸಿದ್ದಾನೆ.

**ಕವಿ ಸುಭಗ:** ಈ ಶಾಸನದ ಕಡೆಯ ಒಂದು ಸಾಲಿನಲ್ಲಿ 'ಶ್ರೀ ಕುಮಾರ ಕೀರ್ತ್ತಿದೇವರ ಗುಡ್ಡಂ ಸುಬಗಂ ಬರೆದಂ' ಎಂದು ಕವಿಯು ತನ್ನ ಹೆಸರನ್ನು ನಮೂದಿಸಿದ್ದಾನೆ. ಈತ ತನ್ನನ್ನು ಕೀರ್ತ್ತಿದೇವರ ಗುಡ್ಡಂ ಎಂದು ಕರೆದುಕೊಂಡಿರುವುದು ಇವನು ಜೈನ ಮತಾನುಯಾಯಿ ಹಾಗೂ ಕೀರ್ತ್ತಿದೇವರ ಶಿಷ್ಯನಾಗಿದ್ದ ಎನ್ನುವುದು ತಿಳಿದು ಬರುತ್ತದೆ. ಶಾಸನದಲ್ಲಿ ಕಾಲವನ್ನು ನಮೂದಿಸಿರುವುದರಿಂದ ಈತನು ೧೦ನೆಯ ಶತಮಾನದಲ್ಲಿದ್ದವನು. ಇವಿಷ್ಟನ್ನುಳಿದು ಕವಿಯ ಮತ್ಯಾವ ವಿಚಾರವೂ ತಿಳಿದು ಬರುವುದಿಲ್ಲ.

**ಕಂಚಿಕಬ್ಬೆ**

ಬೆಳಗಾವಿ ಜಿಲ್ಲೆಯ ಸವದತ್ತಿ ತಾಲ್ಲೂಕಿನ ಸೊಗಲದ ಕ್ರಿ.ಶ.ಸು.೯೮೦ಕ್ಕೆ ಸೇರಿದ ಶಾಸನವು[೧೫] ಬೆಳವಾಡಿಯ ಪ್ರದೇಶವನ್ನು ಪಾಲಿಸುತ್ತಿದ್ದ ಕರಿಯ ಕೇತಿಮಯ್ಯನ ಅರಸಿ ಕಂಚಿಕಬ್ಬೆಯು ದಾನ ನೀಡಿರುವ ವಿಚಾರವನ್ನು ತಿಳಿಸುತ್ತದೆ. ಕಂಚಿಕಬ್ಬೆಯ ಈ ಶಾಸನವನ್ನು ಕಮಲಾದಿತ್ಯನೆಂಬ ಕವಿಯು ರಚಿಸಿದ್ದಾನೆ.

ಕವಿಯು ಕಂಚಿಕಬ್ಬೆಯನ್ನು ಗಂಗರಾಶಿಯ ಗುಡ್ಡಿ (ಶಿಷ್ಯೆ) ಎಂದು ಕರೆದಿರುವುದರಿಂದ ಗಂಗರಾಶಿಯು ಕಂಚಿಕಬ್ಬೆಯ ಗುರುವಾಗಿದ್ದನೆಂದು ತಿಳಿದುಬರುತ್ತದೆ. ಕಂಚಿಕಬ್ಬೆಯು ಪರಹಿತಗುಣಚರಿತೆ, ಮಾತಾರತ್ನ ಎಂದು ಹೊಗಳಲ್ಪಟ್ಟಿದ್ದಾಳೆ.

ಕಂಚಿಕಬ್ಬೆಯ ವರ್ಣನೆ: ಕಂಚಿಕಬ್ಬೆಯು, ಕಪಟ ಮೊದಲಾದ ದುರ್ಗುಣಗಳಿಲ್ಲದ ನಿರ್ಮಲ ಮನಸ್ಸುಳ್ಳವಳೂ, ದಯೆ–ದಾನ–ಧರ್ಮ ಗುಣವನ್ನೂ ಹೊಂದಿದವಳೂ, ಗುರು–ದೈವಗಳ ಮೇಲೆ ಅಪಾರ ಭಕ್ತಿಯನ್ನು ಹೊಂದಿದವಳೆಂದು ಸಮಸ್ತ ಧರೆಯ ಜನರು ಹೊಗಳುತ್ತಿದ್ದಾರೆ ಎಂದು ಕವಿ ಕಮಲಾದಿತ್ಯನು ಬಣ್ಣಿಸಿರುವ ಚಂಪಕಮಾಲಾ ವೃತ್ತದ ಪದ್ಯ ಈ ಪ್ರಕಾರವಾಗಿದೆ

**ಹರಚರಣಾಬ್ಜಭೃಂಗಿ ಕಪಟೋದಯವರ್ಜ್ಜಿತ ನಿರ್ಮ್ಮಲಾಂಗಿ ಭಾ**
**ಸುರತರ ಮೂರ್ತ್ತಿ ನಿರ್ಮ್ಮಳಿನಕೀರ್ತ್ತಿ ದಯಾಪರೆ ದಾನಧರ್ಮ್ಮತ**
**ತ್ಪರಗುಣಯುಕ್ತೆ ದೇವಗುರುಭಕ್ತೆ ಸುಗೋತ್ರಪವಿತ್ರೆಯೆಂದು ವಿ**
**ಸ್ತರದೊಳೆ ಕೀರ್ತ್ತಿಕುಂ ವಸುಧೆ ಸಂತಸದಿಂದಮೆ ಕಂಚಿಕಬ್ಬೆಯ ॥**

**ಮಾರಾಜನ ಬೆಳವಾಡಿಯ**
**ಚಾರುಗುಣಂ ಕರಿಯ ಕೇತಿಮಯ್ಯನವಳು ವಿ**
**ಸ್ತಾರಗುಣಾಂಬುಧಿ ಧರ್ಮ್ಮದ**
**ಮೇರುವನಾ ಕಂಚಿಕಬ್ಬೆಯಂ ಪೊಗಳದರಾರ್ ॥ ಕಂ॥**

ಬೆಳವಾಡಿಯ ಪ್ರದೇಶವನ್ನು ಪಾಲಿಸುತ್ತಿದ್ದ ಕರಿಯ ಕೇತಿಮಯ್ಯನ ಅರಸಿ ಕಂಚಿಕಬ್ಬೆಯು ಗುಣದಲ್ಲಿ ವಿಸ್ತಾರವಾದ ಸಾಗರ, ಧರ್ಮದಲ್ಲಿ ಮೇರು ಪರ್ವತ, ಇಂತಹ ಕಂಚಿಕಬ್ಬೆಯನ್ನು ಹೊಗಳದವರು ಯಾರು ಎಂದು ಈ ಮೇಲಿನ ಪದ್ಯದಲ್ಲಿ ಹೊಗಳಿರುವ ಕವಿಯು ಇವಳ ಗೋತ್ರ, ಪರಹಿತಗುಣಗಳ ಪರಿಚಯವನ್ನು ಮತ್ತೊಂದು ಪದ್ಯದಲ್ಲಿ ಈ ಪ್ರಕಾರವಾಗಿ ತಿಳಿಸಿದ್ದಾನೆ.

**ಪರಹಿತಗುಣಚರಿತದ ಧನ**
**ಗರಗೋತ್ರದ ಕಂಚಿಯಬ್ಬೆ ಮಾತಾರತ್ನಂ**
**ಧರೆಗೆಸೆವ ದಾನಧರ್ಮದ**
**ಪರಿಣತಿಕೆಯೆ ಪಿರಿದು ಪರಮಮಾಹೇಶ್ವರಿಯೆ ॥ಕಂ**

ಸಾಧಾರಣವಾಗಿ ಶಾಸನವು ಪ್ರಾರ್ಥನಾ ಪದ್ಯದ ನಂತರ ಚಕ್ರವರ್ತಿಯನ್ನು ಸ್ತುತಿಸಿ, ಆ ನಂತರ ಅವನ ಕೈಕೆಳಗಿನ ದೊರೆ, ಸಾಮಂತ, ಪ್ರಾಂತಾಧಿಕಾರಿಯನ್ನು ಹೊಗಳಿ ಶಾಸನವನ್ನು ಹಾಕಿಸಿರುವ ಉದ್ದೇಶವನ್ನು ತಿಳಿಸುತ್ತದೆ. ಆದರೆ ಸೋಗಲದ ಈ ಶಾಸನದಲ್ಲಿ ಪ್ರಾರ್ಥನಾ ಪದ್ಯದ ನಂತರ ಕ್ಷೇತ್ರಪುರಾಣದ ವಿವರಣೆಯ ನಂತರ ಅರಸಿ ಕಂಚಿಕಬ್ಬೆಯ ಬಣ್ಣನೆ ಇದೆ. ಇದಾದ ನಂತರ ಅಂದಿನ ಚಕ್ರವರ್ತಿ ಕಲ್ಯಾಣಿ ಚಾಲುಕ್ಯ ತೈಲಪನನ್ನೂ, ಅವನ ಅಧೀನದಲ್ಲಿ ಆಳ್ವಿಕೆ ನಡೆಸುತ್ತಿದ್ದ ರಟ್ಟದೊರೆ ಕಾರ್ತವೀರ್ಯನನ್ನು ಸ್ತುತಿಸಿದೆ. ರಟ್ಟ ಕಾರ್ತವೀರ್ಯನ ಕೈಕೆಳಗೆ ಬೆಳವಾಡಿ ಪ್ರಾಂತ್ಯವನ್ನು ಪಾಲಿಸುತ್ತಿದ್ದ ಕರಿಯ ಕೇತಿಮಯ್ಯನನ್ನು ಕೇವಲ ಹೆಸರಿಸಿ ಈತನ ಅರಸಿ ಕಂಚಿಕಬ್ಬೆಯನ್ನು ಮಾತ್ರ ಕವಿ ಕೊಂಡಾಡಿರುವುದು ವಿಶೇಷವೆನಿಸುತ್ತದೆ.

"ಸ್ವಸ್ತಿ ಶಕವರ್ಷ ೯೦೨ನೆಯ ವಿಕ್ರಮ ಸಂವತ್ಸರದ ಆಷಾಡದಮವಾಸ್ಯೆ ಆದಿವಾರ ಸುರ್ಯಗ್ರಹಣ ನಿಮಿತ್ತದೊಳ್..... ಧನಗರ ಕಂಚಿಯಬ್ಬೆ" ಯು ಸೋಗಲದ ದೇವಸ್ಥಾನಕ್ಕೆ ನೀಡಿರುವ ದಾನದ ವಿವರವನ್ನು ತಿಳಿಸುವ ಈ ಶಾಸನವು ಒಂದು ಪುಟ್ಟ ಕಾವ್ಯದಂತಿದೆ. ಇದು ಕೇವಲ ದತ್ತಿ ಬಿಟ್ಟ ವಿಚಾರ ಮಾತ್ರ ತಿಳಿಸದೆ ಈ ಕ್ಷೇತ್ರ ಪುರಾಣವನ್ನೂ ಕಾವ್ಯರೂಪದಲ್ಲಿ ತಿಳಿಸುತ್ತದೆ.

ತ್ರೇತಾಯುಗದ ಕೊನೆಯಲ್ಲಿ ರಾವಣನ ನಚ್ಚಿನವರಾದ ಮಾಲಿ ಸುಮಾಲಿ ಎಂಬ ದೈತ್ಯರು ಇಲ್ಲಿ ದೇವರನ್ನು ಪ್ರತಿಷ್ಠಾಪಿಸಿ, ಸೋಲು (ಸೊಗಲ)–೩೦ನ್ನು ದೇವರಿಗೆ ದತ್ತಿಕೊಟ್ಟರೆಂದೂ ಅವರಿಂದಲೇ ದೇವರಿಗೆ 'ಸುವರ್ಣ ಮಹಾಕ್ಷಿದೇವ' ಎಂದೂ, ಊರಿಗೆ 'ಸುಮಾಲಿ' ಎಂದೂ ಹೆಸರಾಯಿತೆಂಬ ಸ್ಥಳಪುರಾಣದ ಕಥೆಯ ಉಲ್ಲೇಖ ಇಲ್ಲಿ ಬಂದಿದೆ. ಇಲ್ಲಿಯ ತಪೋವನ ವರ್ಣನೆ ಮನೋಹರವಾಗಿದೆ. 'ಪುಗಲ್' ಎಂಬ (ಪಾಪಿ ಮೊದಲಾದವರನ್ನು ಒಳಕ್ಕೆ ಬರಬೇಡಿ) ಕೋಗಿಲೆಯ ಕುಕಿಲಿನ ವರ್ಣನೆ ಆದಿಪಂಪನು ಮಾಡಿದ ವರ್ಣನೆಯನ್ನು ನೆನಪಿಸುತ್ತದೆ. ಹುಲಿಗಳು ಧರ್ಮಶ್ರವಣವನ್ನು ಎವೆ ಮಿಟುಕಿಸದೆಯೆ ಆಲಿಸುತ್ತಿವೆ ಎಂಬ ಬಣ್ಣನೆಯಿಂದ ಆ ಕ್ಷೇತ್ರದ ಮಹಿಮೆಯನ್ನು ಕವಿ ಉತ್ಪ್ರೇಕ್ಷೆಯಿಂದ ಕೊಂಡಾಡಿದ್ದಾನೆ.

ಕಂಚಿಕಬ್ಬೆಯ ದಾನಗುಣವನ್ನು ವಿಶೇಷವಾಗಿ ಕೊಂಡಾಡಿರುವ ಈ ಶಾಸನದಲ್ಲಿ 'ನಾಯಿಯ ಮಾಂಸವನ್ನು ಹೆಂಡದೊಡನೆ ತಲೆಬುರುಡೆಯಲ್ಲಿ ಬೇಯಿಸಿ ತಿನ್ನುವವರು ನೀಚರಲ್ಲ, ದತ್ತಾಪಹಾರ ಮಾಡುವವರು ನೀಚರು' ಎಂದು ಚಾಂಡಾಲೆ ಇಂದ್ರನಿಗೆ ತಿಳಿಹೇಳುವ ವಿಭಿನ್ನ ನಿರೂಪಣೆಯ ಶಾಪಾಶಯ ಈ ಶಾಸನ ಪದ್ಯದಲ್ಲಿ ಉತ್ತಮವಾಗಿ ಮೂಡಿಬಂದಿದೆ.

**ಮೇಳಿಸಿ ನಾಯಡಗಂ ಚಾಂ**
**ಡಾಳೆ ಕಪಾಳದೊಳೆ ಕಳ್ಳನೆಱೆದಡುತಂ ತ**
**ತ್ಕಾಳದೆ ಕೆರ್ಪ್ಪಿಂ ಮುಚ್ಚೆ ಸ**
**ಮಾಳೋಕದೊಳಿಂದ್ರನಾಕೆಯಂ ಬೆಸಗೊಣ್ಡಂ**

**ದೇವಸ್ವಂ ಬ್ರಹ್ಮಸ್ವಮ**
**ನಾವು...ನ್ದ ಪಾತಕನ ಪಾದರಜಂ**
**ಭಾವಿಸಲಭೋಜ್ಯಮೆನಲಾ**
**ದೇವಸ್ವಮನಳಿವನಿಂ ನಿಕೃಷ್ಟರುಮೊಳರೇ**

**ಕವಿ ಕಮಲಾದಿತ್ಯ:** ಈ ಶಾಸನ ಕಾವ್ಯವನ್ನು ರಚಿಸಿದವನು 'ಕವಿ ಕಮಲಾದಿತ್ಯ' ತನ್ನನ್ನು ಶಾಸನದಲ್ಲಿ ಈ ರೀತಿ ಪರಿಚಯಿಸಿಕೊಂಡಿದ್ದಾನೆ.

**ಭುವನಂ ವನನಿಧಿ ಸುರಗಿರಿ**
**ದಿವಕುಳಮಿನಚಂದ್ರರುಳ್ಳಿನಂ ಧರ್ಮ್ಮಮಿದು**
**ದ್ಧವಮಾಗಿ ನಡೆಗೆ ಶಾಸನ**
**ಕವಿಕಮಳಾದಿತ್ಯ ರಚಿತಕಾವ್ಯಾದೇಶಂ॥**

ಈತ ತನ್ನನ್ನು 'ಕವಿತೇಶಮತ ಪ್ರಭಂಜನ' ಎಂದು ಕರೆದುಕೊಂಡಿದ್ದಾನೆ. ಇದು ಇವನಿಗಿದ್ದ ಬಿರುದಿರಬಹುದು. ಇದನ್ನು ಕುರಿತು ಮೇವುಂಡಿ ಮಲ್ಲಾರಿಯವರು "ಈತ ತನ್ನ ಸಮಕಾಲೀನ ಕವಿಯಾಗಿದ್ದಿರಬಹುದಾದ 'ಕವಿತೇಶ' ಎಂಬುವವನ ಮದಭಂಜಿಸಿ, ಹತಪ್ರಭವನಾಗಿ ಮಾಡಿ ಈ ಬಿರುದನ್ನು ಪಡೆದಿರಬಹುದು" ಎಂದು ಅಭಿಪ್ರಾಯ ಪಟ್ಟಿದ್ದಾರೆ[೧೬]. ಈ ಕವಿಯ ಇತರ ಕಾವ್ಯಗಳಾವುವೂ ದೊರೆತಿಲ್ಲ. ಕರ್ಣಾಟಕ ಕವಿಚರಿತೆಯಲ್ಲಿಯೂ ಕೂಡ ಈತನನ್ನು ಸೋಗಲದ ಸುವರ್ಣಾಕ್ಷಿ ದೇವಾಲಯದ ಶಾಸನ ರಚಿಸಿದ ಕವಿಯೆಂದಷ್ಟೇ ಪರಿಚಯಿಸಲಾಗಿದೆ[೧೭].

ಈ ಶಾಸನ ಪದ್ಯದಲ್ಲಿಯೇ ತನ್ನ ಪ್ರೌಢ ಕವಿತಾ ಸಾಮರ್ಥ್ಯವನ್ನು ತೋರಿರುವ ಈತ ಯಾವುದೇ ಪ್ರಸಿದ್ಧ ದೊರೆಯ ಆಸ್ಥಾನ ಕವಿಯಾಗಿದ್ದಂತೆ ತಿಳಿದುಬರುವುದಿಲ್ಲ. ಈ ವಿಚಾರವಾಗಿ ಗೋವಿಂದ ಪೈ ಅವರು "ಸೊಗಲದ ಶಾಸನದಲ್ಲಿ ಕಂಚಿಯಬ್ಬೆ.... ಶಾಸನವು ಆಗ್ಗೆ ಆ ನಾಡೊಡೆಯನಾಗಿದ್ದ... ರಟ್ಟ ಕಾರ್ತವೀರ್ಯನ ಹಾಗೂ ಅವನ ಅಧಿರಾಜನಾದ ಚಕ್ರವರ್ತಿ ಚಾಳುಕ್ಯ ತೈಲಪನ ಹೆಸರುಗಳನ್ನು ವಾಡಿಕೆಯ ಮೇರೆಗೆ ಹೇಳಿದೆಯಲ್ಲದೆ ... ಶಾಸನವು ಮೊದಲನೆಯ ಕಾರ್ತವೀರ್ಯನ ಸ್ವೀಯ ಶಾಸನವಲ್ಲ.... ಆದ ಕಾರಣ ಪ್ರೌಢಕವಿತಾಬದ್ಧವಾದ ಆ ಕನ್ನಡ ಶಾಸನವನ್ನು ರಚಿಸಿದ ಕವಿ ಕಮಲಾದಿತ್ಯನು ಸೊಗಲದತ್ತಣ ಯಾವೊಬ್ಬ ಹೆಸರುವಾಸಿಯಾದ ಕವಿಯಾಗಿರಬಹುದಲ್ಲದೆ, ಮೊದಲನೆಯ ಕಾರ್ತವೀರ್ಯನ ಆಸ್ಥಾನಕವಿಯಲ್ಲ"[೧೮] ಎಂದಿದ್ದಾರೆ. ರಾಜಮನ್ನಣೆಗಳಿಸದ, ಆಸ್ಥಾನ ಕವಿಯಲ್ಲದ ಕಮಲಾದಿತ್ಯನು ಸ್ಥಳೀಯ ಮಾಂಡಳೀಕನ ಅರಸಿಯೋರ್ವಳಿಂದ ನಿಯೋಜಿತನಾಗಿ, ಶಾಸನವನ್ನು ರಚಿಸಿ ತನ್ನ ಪ್ರೌಢಕವಿತಾ ಪ್ರದರ್ಶನಕ್ಕೆ ಅವಕಾಶ ಪಡೆದು ಪ್ರಾಚೀನ ಕನ್ನಡ ಕವಿಗಳ ಸಾಲಿನಲ್ಲಿ ನಿಂತಿದ್ದಾನೆ.

## ಅತ್ತಿಮಬ್ಬೆ

ದಾನಚಿಂತಾಮಣಿ, ಕವಿವರಕಾಮಧೇನು ಎಂಬ ಬಿರುದನ್ನು ಹೊಂದಿದ್ದ ಅತ್ತಿಮಬ್ಬೆಯು ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಬೀಳುವೃತ್ತಿಯಿಂದ ಆಳ್ವಿಕೆ ನಡೆಸುತ್ತಿದ್ದ ಮನೆತನಕ್ಕೆ ಸೇರಿದವಳಾಗಿದ್ದಾಳೆ. ಧಾರ್ಮಿಕ ಕಾರ್ಯ, ದಾನ–ದತ್ತಿ ನೀಡುವುದರಲ್ಲಿ ಕೊಡುಗೈ ಎನಿಸಿದ್ದಷ್ಟೇ ಅಲ್ಲದೆ ಯುದ್ಧಸಾಹಸಗಳಲ್ಲಿ, ಸೈನ್ಯವನ್ನು ಮುನ್ನಡೆಸುವಲ್ಲಿ ಸಹ ಇವಳ ಕಾರ್ಯ ವೈಖರಿ ಅಮೋಘವಾದುದೆನಿಸಿದೆ. ಈ ಎಲ್ಲಕ್ಕಿಂತ ಮುಖ್ಯವೆನಿಸುವ ವಿಚಾರವೆಂದರೆ, ಇವಳು ಪ್ರಾಚೀನ ಕನ್ನಡದ ತ್ರಿರತ್ನಗಳಲ್ಲೊಬ್ಬನಾದ ರನ್ನ ಕವಿಗೆ ಆಶ್ರಯ ನೀಡಿದವಳೂ ಹಾಗೂ 'ಅಜಿತನಾಥ ಪುರಾಣ' ಮಹಾಕಾವ್ಯ ರಚನೆಗೆ ಕಾರಣಳಾದವಳೂ ಆಗಿದ್ದಾಳೆ.

ಅತ್ತಿಮಬ್ಬೆಯು ಕ್ರಿ.ಶ.೯೫೦–೧೦೧೮ರವರೆಗೆ ಸುಮಾರು ೬೮ ವರ್ಷ ಬದುಕಿದ್ದಳೆಂದು ಹಂಪನಾ ಅವರು ವಿವಿಧ ಶಾಸನಗಳ ಆಧಾರದಿಂದ ತೋರಿಸಿದ್ದಾರೆ[೧೯]. ಇವಳ ಈ ಅವಧಿಯಲ್ಲಿ ಚಾಳುಕ್ಯ ಚಕ್ರವರ್ತಿಗಳಾದ ತೈಲಪ (೯೭೩–೯೭), ಇಜಿವಬೆಡಂಗ ಸತ್ಯಾಶ್ರಯ (೯೯೭–೧೦೦೮) ದಶವರ್ಮ, ಐದನೆಯ ವಿಕ್ರಮಾದಿತ್ಯ (೧೦೦೮–೧೦೧೪), ವಸುಧೈಕಮಲ್ಲ ಅಯ್ಯಣದೇವ ೨ (೧೦೧೪–೧೫), ಜಗದೇಕಮಲ್ಲ ಜಯಸಿಂಹ (೧೦೧೬–೧೦೪೨) ಇಷ್ಟೂಜನ ಚಕ್ರವರ್ತಿಗಳ ಗೌರವಕ್ಕೂ ಪಾತ್ರಳಾಗಿದ್ದಳು.

ಅತ್ತಿಮಬ್ಬೆ ಕಟ್ಟಿಸಿದ ಲಕ್ಕುಂಡಿಯ ಬ್ರಹ್ಮಜಿನಾಲಯಕ್ಕೆ ಕ್ರಿ.ಶ.೧೦೦೭–೦೮ರಲ್ಲಿ ಇರಿವ ಬೆಡಂಗ ಸತ್ಯಾಶ್ರಯ ಆಹವಮಲ್ಲನು ಚಕ್ರವರ್ತಿ ದತ್ತಿಯನ್ನು ನೀಡಿರುವುದಲ್ಲದೆ, ಸುವರ್ಣ ಕಳಶವನ್ನು ನೀಡಿದ್ದಾನೆ ಎಂಬ ವಿಚಾರವನ್ನು ಶಾಸನವು "ಸಕಳ ಗೂರ್ಜ್ಜರ ವಿಜಯಾನನ್ತರಂ ಶ್ರೀಮದಾಹವಮಲ್ಲದೇವಂಗೆ ಬಿನ್ನಪಂಗೆಯ್ದು ಚಕ್ರವರ್ತ್ತಿ ಪ್ರಖ್ಯಾತಮಪ್ಪ ಶಾಸನಮಂ ಪೊನ್ನ ಕಳಸಂ ಬೆರಸು ಪಡೆದಳು" ಎಂದು ತಿಳಿಸಿದೆ. ರನ್ನನು ತನ್ನ ಕಾವ್ಯದಲ್ಲಿ ಅತ್ತಿಮಬ್ಬೆಯನ್ನು ಕುರಿತು ತಿಳಿಸುತ್ತಾ, ಚಕ್ರವರ್ತಿ ತೈಲಪನಿಗೆ ಅತ್ತಿಮಬ್ಬೆಯು ತಾಯಿಯಂತಿದ್ದಳು ಎಂದಿದ್ದಾನೆ (ಅಜಿತ ಪು.೧–೫೧,೫೬,೫೮).

**ಕಾವ್ಯ ಹಾಗು ಶಾಸನ ತಿಳಿಸುವ ಅತ್ತಿಮಬ್ಬೆಯ ವಿಚಾರ :** ಅತ್ತಿಮಬ್ಬೆಗೆ ದಾನಚಿಂತಾಮಣಿ ಎಂಬ ಬಿರುದಿನೊಂದಿಗೆ ಘಟಾಂತಿಕೆ, ಗುಣದಂಕಕಾರ್ತಿ, ಜಿನಧರ್ಮ ಪತಾಕೆ, ಕವಿವರ ಕಾಮಧೇನು ಮೊದಲಾದ ಬಿರುದುಗಳೂ ಪ್ರಖ್ಯಾತವಾಗಿದ್ದವು. ಈ ಅನೇಕ ಬಿರುದಾವಳಿಗಳನ್ನೂ, ಇವಳ ಪವಾಡ ಸದೃಶ ಜೀವನವನ್ನು ಬೇರೆಲ್ಲ ಶಾಸನಗಳಿಗಿಂತಲೂ ಲಕ್ಕುಂಡಿಯ ಶಾಸನ ಅತಿಶಯವಾಗಿ ಬಣ್ಣಿಸಿದೆ. ಲಕ್ಕುಂಡಿಯ ಶಾಸನ ಒಂದು ಪುಟ್ಟ ಕಾವ್ಯದಂತಿದೆ. ರನ್ನನೇ ರಚಿಸಿರುವನೆಂದು ವಿದ್ವಾಂಸರು ಅಂತರ್ಸಾಕ್ಷಿಗಳಿಂದ ದೃಢಪಡಿಸಿದ್ದಾರೆ. ಈ ಶಾಸನವು ಎರಡು ಪ್ರತಿಗಳಲ್ಲಿ ಶಿಲೆಯಲ್ಲಿ ದೊರಕುವುದೊಂದು ವಿಶೇಷ. ಮೂಲ ಪಾಠವಿರುವ ಶಾಸನವು ತ್ರುಟಿತವಾದ ಕಾರಣ ಮತ್ತೊಂದು ಶಿಲೆಯ ಮೇಲೆ ಬಾಹುಬಲಿ ಎಂಬುವವನು ಅದರ ನಕಲನ್ನು ರಚಿಸಿ ಅದರೊಂದಿಗೆ ಮತ್ತಷ್ಟು ವಿಚಾರವನ್ನು ತಿಳಿಸಿ, ತನ್ನ ಶಾಸನವು ಪ್ರಾಚೀನ ಶಾಸನ ಪಾಠದ ನಕಲೆಂಬುದನ್ನೂ ತಿಳಿಸಿದ್ದಾನೆ.

ಕವಿ ರನ್ನನೇ ರಚಿಸಿದ್ದಾನೆಂದು ಚರ್ಚಿಸಲಾಗುವ ಲಕ್ಕುಂಡಿ ಶಾಸನವು ಅತ್ತಿಮಬ್ಬೆಯ ಗುಣಗಾನ ಮಾಡುವುದಲ್ಲದೆ, ಅವಳ ಪವಾಡ ಸದೃಶ ಜೀವನದ ಚಿತ್ರಣವನ್ನು ನೀಡಿದೆ. ಪುರಾಣ ಪ್ರಸಿದ್ಧರಾದ ಮರುದೇವಿ, ವಿಜಯಸೇನೆ, ಸುಷೇಣೆ, ಶಿವದೇವಿ, ಸುಶೀಲೆ, ರುಕ್ಮಿಣಿ, ಸತ್ಯಭಾಮೆ, ರೋಹಿಣಿ, ಅರುಂಧತಿಯರು ಮಾತ್ರ ಅತ್ತಿಮಬ್ಬೆಗೆ ಸಮಾನರು. ಗುಣದ ಅಂಕಕಾರ್ತಿಯಾದ ಅವಳಿಗೆ ಉಳಿದ ಹೆಣ್ಣುಗಳು ಸಮಾನರಾಗುತ್ತಾರೆಯೇ ಎಂದು ಕವಿ ಉದ್ಗರಿಸಿದ್ದಾನೆ.

ಶಾಸನವು ಅತ್ತಿಮಬ್ಬೆಯ ಮಹಾಪ್ರಭಾವವನ್ನೂ ಪವಾಡ ಸದೃಶ ಜೀವನವನ್ನು ನಿರೂಪಿಸಿದೆ. ರನ್ನನು ಅತ್ತಿಮಬ್ಬೆಯನ್ನು ಅಜಿತಪುರಾಣದಲ್ಲಿ ರೋಹಿಣಿ ಯಕ್ಷಿಗೆ ಹೋಲಿಸಿದ್ದಾನೆ (೧–೧೪). ಅದೇರೀತಿ ಲಕ್ಕುಂಡಿ ಶಾಸನದಲ್ಲಿಯೂ[೨೦] ರೋಹಿಣಿ ಶಾಸನದೇವಿಗೆ ಹೋಲಿಕೆ ಮಾಡಲಾಗಿದೆ. ಜೈನ ಪುರಾಣದಲ್ಲಿ ರೋಹಿಣಿಯು ಎರಡನೆಯ ತೀರ್ಥಂಕರ ಅಜಿತನಾಥನ ಯಕ್ಷಿ. ಅತ್ತಿಮಬ್ಬೆಯು ಅಜಿತನಾಥ ತೀರ್ಥಂಕರನ ಭಕ್ತೆಯಾಗಿದ್ದು, ರನ್ನನಿಂದ ಅಜಿತನಾಥ ಪುರಾಣವನ್ನು ಬರೆಸಿದ್ದಾಳೆ.

ಅತ್ತಿಮಬ್ಬೆಯ ಕಾಲಾನಂತರದಲ್ಲಿದ್ದ ಕವಿ ಬ್ರಹ್ಮಶಿವ ಕೂಡ ತನ್ನ ಕಾವ್ಯದಲ್ಲಿ ಅತ್ತಿಮಬ್ಬೆಯ ಕುರಿತಾಗಿ ತಿಳಿಸಿದ್ದಾನೆ.

**ಕಾವ್ಯರಚನೆಗೆ ಪ್ರೋತ್ಸಾಹ:** ಅತ್ತಿಮಬ್ಬೆಯು ಕವಿಗಳಿಗೆ, ಪಂಡಿತರಿಗೆ ಆಶ್ರಯ ನೀಡಿ ಕವಿವರಕಾಮಧೇನು, ಬುಧಜನವಂದಿತೆ ಎಂಬ ಅಭಿದಾನಗಳನ್ನು ಪಡೆದಿದ್ದಳು. ರನ್ನಕವಿಯು ಚಾಲುಕ್ಯರ ಆಶ್ರಯಕ್ಕೆ ಬರುವ ಮೊದಲು ಚಾವುಂಡರಾಯನ ಆಶ್ರಯದಲ್ಲಿದ್ದು, ಆನಂತರ ಅತ್ತಿಮಬ್ಬೆಯ ಪೋಷಣೆಯಲ್ಲಿ ಬೆಳೆದಂಥ ಕವಿ. 'ಸಾಹಸ ಭೀಮ

ವಿಜಯಂ' ದಂಥ ಮೇರು ಕೃತಿಯನ್ನು ರನ್ನನು ಚಾಲುಕ್ಯ ಚಕ್ರವರ್ತಿಗಳ ಆಶ್ರಯಕ್ಕೆ ಬಂದ ನಂತರ ರಚಿಸಿದ್ದಾನೆ. ಚಾಲುಕ್ಯರ ಆಶ್ರಯಕ್ಕೆ ರನ್ನನನ್ನು ಕರೆದೊಯ್ದುದೇ ಅತ್ತಿಮಬ್ಬೆ. ರನ್ನನ ಮಹತ್ಕೃತಿಯಾದ 'ಸಾಹಸಭೀಮ ವಿಜಯಂ' ಕೃತಿಗೆ ಪರೋಕ್ಷವಾಗಿ ಅತ್ತಿಮಬ್ಬೆ ಕಾರಣಳಾದರೆ, ಈತನ ಮತ್ತೊಂದು ಮೇರು ಕೃತಿ 'ಅಜಿತ ತೀರ್ಥಂಕರ ಪುರಾಣಂ' ಕೃತಿಯನ್ನು ನೇರವಾಗಿ ಅತ್ತಿಮಬ್ಬೆಯೇ ರನ್ನನಿಂದ ಬರೆಯಿಸಿದ್ದಾಳೆ. ಇದನ್ನು ಸ್ವಯಂ ರನ್ನನೇ ಅತ್ತಿಮಬ್ಬೆಯು "ಕವಿರತ್ನನಿಂದಿದಂ ಪೇಟಿಸಿದಳ್" ಎನ್ನುತ್ತಾ ತನ್ನ ಕೃತಿ ಅಜಿತನಾಥನ ಪುರಾಣವನ್ನು "ಆಶ್ರಿತ ಚಿಂತಾಮಣಿಗತ್ತಿಮಬ್ಬೆಗಟ್ಟೆಯೆ ಪೇಟಿವ್ಪೆ" ಎಂದು ಆರಂಭಿಸಿದ್ದಾನೆ.

ಕವಿ ರನ್ನನು ತನ್ನ ಕಾವ್ಯರಚನೆಗೆ ಮೂಲ ಕಾರಣಳಾದ ಅತ್ತಿಮಬ್ಬೆಯ ಸಂಕ್ಷೇಪ ಜೀವನ ಚರಿತ್ರೆಯನ್ನು ತಿಳಿಸಿದ್ದಾನೆ. ಅತ್ತಿಮಬ್ಬೆಯ ಗುಣಗಾನ ಮಾಡಿ, ಅವಳ ತವರುಮನೆ ಹಾಗೂ ಮಾವನಮನೆಯನ್ನು ಪರಿಚಯಿಸಿದ್ದಾನೆ. ಅವಳ ತಂದೆ-ಚಿಕ್ಕಪ್ಪ ಕೂಡ ಕವಿಗಳಿಗೆ ಪಂಡಿತರಿಗೆ ಆಶ್ರಯ ನೀಡಿದವರು. ಇವರು ಪೊನ್ನನಿಂದ ಶಾಂತಿಪುರಾಣ ಬರೆಯಿಸಿದ ಹಾಗೆ ಅತ್ತಿಮಬ್ಬೆಯು ತನ್ನಿಂದ ಈ ಕೃತಿಯನ್ನು ಬರೆಯಿಸಿದ್ದಾಳೆ ಎಂದು ಈ ರೀತಿ ತಿಳಿಸಿದ್ದಾನೆ:

**ಪೊನ್ನಿಗನಿಂ ಮಲ್ಲಪನುಂ**
**ಪೊನ್ನನುಮರ್ತಿಯೆ ಪುರಾಣ ಚೂಡಾಮಣಿಯಂ**
**ಮುನ್ನಂ ಪೇಟಿಸಿದಂತೆ ಗು**
**ಣೋನ್ನತ ಕವಿರತ್ನನಿಂದಿದಂ ಪೇಟಿಸಿದಳ್॥**

ಅತ್ತಿಮಬ್ಬೆಯ ತಂದೆ ಮಲ್ಲಪಯ್ಯನನ್ನು ಪೊನ್ನನು 'ಬುಧಜನ ವೃಂದಾರಕನನ್ ಈ ಪೊನ್' ಎಂದು ಹೊಗಳಿದ್ದಾನೆ (ಶಾಂತಿನಾಥ ಪುರಾಣ (೧೨-೬೨). ಇದನ್ನೇ ಅನುಸರಿಸುವಂತೆ ರನ್ನನು ಅತ್ತಿಮಬ್ಬೆಯನ್ನು 'ಬುಧಜನ ಪ್ರೀಣನಾಗ್ರೇಸರಗ್ರಾಮಣಿ' ಎಂದೂ ಅವರ ಮನೆಯನ್ನು 'ಪಂಡಿತ ಮಂಡಳಿಗೆ ತವರ್ಮನೆ' ಯಾಗಿತ್ತೆಂದೂ ಬಣ್ಣಿಸಿದ್ದಾನೆ (೧೨-೪೫, ೧-೨೮). ವಿದ್ವಾಂಸರಿಗೆ ಆನಂದವನ್ನು (ಪ್ರೀಣನ) ಉಂಟು ಮಾಡುವ ಅತಿ ಶ್ರೇಷ್ಠರಲ್ಲಿ (ಅಗ್ರೇಸರ) ಅತ್ತಿಮಬ್ಬೆಯು ಪ್ರಧಾನಳಾಗಿದ್ದಳು. ಹೀಗೆ ಅತ್ತಿಮಬ್ಬೆಯು ಅಂದಿನ ಕವಿವರರಿಗೆ ಕಾಮಧೇನುವಾಗಿದ್ದಳು, ಮತ್ತು ಬುಧಜನವಂದಿತೆಯಾಗಿದ್ದಳು (ಅಜಿತಪು: ೧-೫೪).

ಅತ್ತಿಮಬ್ಬೆಯ ಅಪ್ಪ ಚಿಕ್ಕಪ್ಪಂದಿರು ಪೊನ್ನಕವಿಯಿಂದ ಬರೆಯಿಸಿದ ಶಾಂತಿಪುರಾಣವನ್ನು ಅತ್ತಿಮಬ್ಬೆಯು ಒಂದು ಸಾವಿರ ಪ್ರತಿಗಳನ್ನಾಗಿ ಲಿಪಿಮಾಡಿಸಿ ಶಾಸ್ತ್ರದಾನ ಮಾಡಿದಳು.

ರನ್ನನು ಇಜೆವಬೆಡಂಗ ಸತ್ಯಾಶ್ರಯನನ್ನು ತಗುಳ್ಚಿ ರಚಿಸಿದ ಗದಾಯುದ್ಧವನ್ನು ಕ್ರಿ.ಶ.೯೮೨ರಲ್ಲಿ ಹಾಗೂ ಅಜಿತನಾಥ ಪುರಾಣವನ್ನು ಕ್ರಿ.ಶ.೯೯೩ರಲ್ಲಿ ರಚಿಸಿದ್ದಾನೆ. ಅಜಿತನಾಥ ಪುರಾಣವನ್ನು ರಚಿಸುವ ವೇಳೆಗಾಗಲೇ ರನ್ನನು ಚಾಲುಕ್ಯ ಚಕ್ರವರ್ತಿ ಇಜೆವಬೆಡಂಗ ಸತ್ಯಾಶ್ರಯನ ಆಸ್ಥಾನ ಕವಿಯಾಗಿದ್ದನು. ಆಸ್ಥಾನಕವಿಯಾಗಿದ್ದೂ, ತನ್ನ ಕೃತಿಯನ್ನು ದೊರೆಯ ಮಂತ್ರಿಯಾಗಿದ್ದ ಪಡೆವಳ ತೈಲನ ತಾಯಿ ಅತ್ತಿಮಬ್ಬೆಗೆ ಸಮರ್ಪಿಸಿ, ಕಾವ್ಯದಲ್ಲಿ ಮಿಗಿಲಾಗಿ ಅವಳ ಪ್ರಶಂಸೆಯನ್ನು ಮಾಡಿರುವುದು ಅತ್ತಿಮಬ್ಬೆಗೆ ರನ್ನನು ನೀಡಿದ ಸ್ಥಾನ ಹಾಗು ಅಂದಿನ ಸಮಾಜದಲ್ಲಿ ಅವಳಿಗಿದ್ದ ಪ್ರತಿಷ್ಠೆಯನ್ನು ತಿಳಿಸುತ್ತದೆ.

**ಅಜಿತನಾಥಪುರಾಣ**

ರನ್ನಕವಿ ವಿರಚಿತ 'ಅಜಿತ ತೀರ್ಥಂಕರ ಪುರಾಣತಿಲಕಂ' ಕೃತಿಯಲ್ಲಿ ಕವಿ ರನ್ನನು "ಆಶ್ರಿತ ಚಿಂತಾಮಣಿಗತ್ತಿಮಬ್ಬೆಗಟ್ಟೆಯೆ ಪೇಟಿವ್ಪೆ" ಎನ್ನುತ್ತಾ ತನ್ನ ಆಶ್ರಯದಾತಳು ಅತ್ತಿಮಬ್ಬೆ ಎಂಬುದನ್ನು ಸ್ಪಷ್ಟವಾಗಿ

ತಿಳಿಸಿದ್ದಾನೆ. ಅಲ್ಲದೆ ಅಂತ್ಯದಲ್ಲಿ "ಶ್ರೀ ದಾನಚಿಂತಾಮಣಿ ವಿನಿರ್ಮಾಪಿತ" ಎಂದು ತನ್ನ ಕೃತಿಯನ್ನು ಅವಳಿಗೆ ಅರ್ಪಿಸಿದ್ದಾನೆ. ಇಷ್ಟೇ ಅಲ್ಲದೆ ರನ್ನನು ತನ್ನ ಆಶ್ರಿತದಾತೆಗೆ ಕೃತಜ್ಞತೆ ಸಮರ್ಪಿಸುತ್ತಾ "ನೆಗಟ್ದಿವರಿರ್ವರ ಪೆಸರ್ಗಂ ನೆಗಟ್ಟುವು ತನ್ನೆರಡು ಮುದ್ದುಕೃತಿಗಳ್ ರಾಯಂ ಮಗನತ್ತಿಮಬ್ಬೆ ಮಗಳೆನೆ" ತನ್ನ ಮಗನಿಗೆ ರಾಯ ಹಾಗೂ ಮಗಳಿಗೆ ಅತ್ತಿಮಬ್ಬೆ ಎಂಬ ಹೆಸರಿಟ್ಟಿದ್ದಾನೆ.

ಚಾರಿತ್ರಿಕ ವ್ಯಕ್ತಿಗಳನ್ನು ಗುಣಾತ್ಮಕ ನೆಲೆಯಲ್ಲಿ ವರ್ಣಿಸುವ ಸಂದರ್ಭಗಳು ಬಂದಾಗಲೆಲ್ಲಾ ಪ್ರಸಿದ್ಧಪುರಾಣ ಪಾತ್ರಗಳಿಗೆ ಹೋಲಿಸಿ ಹೇಳುವುದು ವಾಡಿಕೆ. ಆದರೆ ಅತ್ತಿಮಬ್ಬೆಯ ನಂತರದ ಕಾಲದಲ್ಲಿ ಈ ಲೋಕರೂಢಿಯು ಅತ್ತಿಮಬ್ಬೆಯೊಂದಿಗೆ ಹೋಲಿಸುವ ಪರಿಪಾಟವೊಂದು ಪ್ರಾರಂಭವಾಯಿತು. ಇಂಥ ನೂತನ ಶಕೆಯೊಂದನ್ನು ಅತ್ತಿಮಬ್ಬೆಯಿಂದ ಆರಂಭವಾಯಿತು. ಜಿನಭಕ್ತಿಗಾಗಲಿ, ಪತಿಭಕ್ತಿಗಾಗಲಿ, ದಾನಕ್ಕಾಗಲಿ, ಜಿನಗೃಹ ನಿರ್ಮಾಣಕ್ಕಾಗಲಿ, ಶೀಲ–ಗುಣ ಸಂಪನ್ನತೆಗಾಗಲಿ, ಶುದ್ಧಚಾರತ್ರೆಗಾಗಲಿ, ಸವತಿಮದ ಭಂಜನೆಗಾಗಲಿ ಅತ್ತಿಮಬ್ಬೆಯದೇ ಹೋಲಿಕೆ ನೀಡಿರುವುದನ್ನು ಕಾಣುತ್ತೇವೆ.

ಅತ್ತಿಮಬ್ಬೆಗೆ ದಾನಚಿಂತಾಮಣಿ, ಘಟಾಂತಕಿ ಬಿರುದಾವಳಿಗಳನ್ನಿತ್ತ ಚಾಳುಕ್ಯ ಚಕ್ರವರ್ತಿ ಮನೆತನದವರೇ ಅದನ್ನು ಮತ್ತಷ್ಟು ಬಳಸಿ ತಮ್ಮ ರಾಣಿಯರಿಗೇ ಅನ್ವಯಿಸಿ ಜನಪ್ರಿಯಗೊಳಿಸಿರುವುದನ್ನು ಇತರ ಶಾಸನಗಳಲ್ಲಿ ಕಾಣಬಹುದು. ಅತ್ತಿಮಬ್ಬೆಗೆ ರಾಣಿಯರನ್ನು ಹೋಲಿಸಿ ಹೇಳುವುದೇ ಮುಂದಿನ ರಾಣಿಯರ ಘನತೆಯನ್ನೂ, ಸುಗುಣಗಳನ್ನೂ ತಿಳಿಸುವ ಪ್ರಶಸ್ತಿಯಂತಾಯಿತು.

ಸಾಂತರ ಬಾಚಲದೇವಿಯನ್ನು 'ನೂತ್ನಾತ್ತಿಮಬ್ಬೆ, ಅಭಿನವ ಅತ್ತಿಮಬ್ಬೆ' ಎಂದೂ, ಏಚಬ್ಬೆಯನ್ನು "ದಾನಮನೇಚಬ್ಬೆಯತ್ತಿಮಬ್ಬರಸೆಯ ವೋಲ್" ಎಂದೂ "ಘಟಾನ್ತಕಿಯೆಂಬುದು ಗೊಜ್ಜಿಯಕ್ಕನಂ" ಎಂದೂ ಕರೆದಿರುವ ಶಾಸನಗಳು, ತ್ರೈಲೋಕ್ಯ ಮಲ್ಲನ ರಾಣಿ ಮೈಳಲಾದೇವಿ, ಹರಿಗನರ್ಧಾಂಗಿ ಲಚ್ಚಲದೇವಿ, ವಿಕ್ರಮಾದಿತ್ಯನ ಅರಸಿ ಲಕ್ಷ್ಮೀದೇವಿ, ಬಾಚಲದೇವಿ, ಅಮಾತ್ಯ ಬೇತನ ಸತಿ, ವಿಷ್ಣುವರ್ಧನನ ರಾಣಿ ಶಾಂತಲದೇವಿ, ಸಿಂಗಿಮಯ್ಯನ ವಧು ಶ್ರೀಯಾದೇವಿ, ಮಹದೇವ ಮಂತ್ರಿಯರಸಿ ಮೊದಲಾದವರನ್ನು ದಾನಚಿನ್ತಾಮಣಿ, ಸವತಿಮದ ಭಂಜನಿ ಎಂದು ಕರೆದು ಅತ್ತಿಮಬ್ಬೆಗೆ ಹೋಲಿಸಿರುವ ಕೆಲವು ಉದಾಹರಣೆಗಳನ್ನು ಕಾಣಬಹುದು.

ಸಾಮಂತ ಮನೆತನದವಳಾದ ಅತ್ತಿಮಬ್ಬೆಯು ಸಮಾಜದಲ್ಲಿ ಪಡೆದಿದ್ದ ಸ್ಥಾನಮಾನ, ಗೌರವ, ಊರಜನತೆಗೆ ನೀಡಿದ ಕೊಡುಗೆ, ಕವಿಗಳ ಪೋಷಣೆ, ಸೈನ್ಯದೊಂದಿಗಿನ ಇವಳ ಒಡನಾಟ ಇವೇ ಮೊದಲಾದ ವಿಚಾರವನ್ನು ಕುರಿತಂತೆ ಶಾಸನ, ಕಾವ್ಯಗಳಲ್ಲಿನ ಉಲ್ಲೇಖಗಳು ಇವಳನ್ನು ಸಾಮ್ರಾಜ್ಞಿ ಎಂಬಂತೆ ಬಿಂಬಿಸಿವೆ. ಕವಿಗಳಿಗೆ ಕಾಮಧೇನುವಿನಂತಿದ್ದ ಅತ್ತಿಮಬ್ಬೆಯು ಕನ್ನಡನಾಡಿಗೆ, ಕನ್ನಡ ಸಾಹಿತ್ಯಕ್ಕೆ ವರದಾನ, ಅನರ್ಘ್ಯ ಚಿಂತಾಮಣಿ ಎನಿಸಿದ್ದರಲ್ಲಿ ಅತಿಶಯೋಕ್ತಿಯಿಲ್ಲ.

**ದೀವಳಾಂಬೆ**

ಕದಂಬ ರಾಜಕುಮಾರಿಯಾದ ದೀವಬ್ಬರಸಿಯು ನೊಳಂಬ ಪೊಳಲ್ಚೋರನನ್ನು ವರಿಸಿದ್ದಳು. ಇವಳನ್ನು ದೀವಲಾಂಬೆಯೆಂದೂ ಶಾಸನಗಳು ಉಲ್ಲೇಖಿಸಿವೆ.

ದೀವಬ್ಬರಸಿಯು ಕೋಲಾರದ ಬಳಿಯ ಆವನಿಯಲ್ಲಿ ದೇವಾಲಯ, ಕೊಳ, ಅಗ್ರಹಾರವನ್ನು ನಿರ್ಮಿಸಿ ತನ್ನ ಹೆಸರಿನಲ್ಲಿ ದೀವಬ್ಬೆ ಸಮುದ್ರವೆಂಬ ಕೆರೆಯನ್ನು ಕಟ್ಟಿಸಿ, ತಾನು ಮಾಡಿದ ಈ ಕಾರ್ಯಗಳನ್ನು ತಿಳಿಸುವ ಶಾಸನವೊಂದನ್ನು ಕವಿ ನಾಮಯ್ಯ ಕೈಯಲ್ಲಿ ಬರೆಯಿಸಿದ್ದಾಳೆ[೨೧].

ಪದ್ಯ ರೂಪದಲ್ಲಿ ರಚಿತವಾಗಿರುವ ಈ ದೀವಬ್ಬರಸಿಯ ಶಾಸನವು ತನ್ನ ಕಾವ್ಯಗುಣದಿಂದ ಮನಸೆಳೆಯುತ್ತದೆ. ಇಲ್ಲಿಯ ತಟಾಕ ವರ್ಣನೆಯು ಸುಂದರವಾಗಿ ಮೂಡಿಬಂದಿದೆ.

**ದೀವಬ್ಬರಸಿಯ ವರ್ಣನೆ**

**ಶ್ರೀವಧುಧರೆ ಪೊಳಲ್ಚೋ**
**ರಾವನಿಪಂಗಗ್ರಮಹಿಷಿ ಭುವನಾಂಬಿಕೆ ವಾಕ್**
**ದೇವಿಯರ ದೊರೆಯರೆನಿಸಿದ**
**ದೀವಬ್ಬರಸಿಯರ ದೊರೆಗೆಟ್ಟಿದ್ರ್‌ಪೆಱರೊಳರೇ ॥**

ಪೊಳಲ್ಚೋರ ದೊರೆಯ ಪಟ್ಟದರಾಣಿಯೆಂದು ದೀವಬ್ಬರಸಿಯನ್ನು ಪರಿಚಯಿಸಿರುವ ಕವಿಯು ಇವಳನ್ನು ಭುವನಾಂಬಿಕೆ ಎಂದು ಕರೆದು ಭೂದೇವಿಗೂ, ವಾಗ್ದೇವಿ ಎಂದು ಕರೆದು ಸರಸ್ವತೀದೇವಿಗೂ ಹೋಲಿಸಿ ಈಕೆಗೆ ಸರಿಸಮಾನರು ಯಾರೂ ಇಲ್ಲವೆಂದು ಹೊಗಳಿದ್ದಾನೆ.

**ಅತಿಶಯಮಾಗೆ ತಮ್ಮಪೆಸರೊಳ್ನಿಱಿೆ ತತ್ಪತಿನಾಮದಿಂ ಯಶೋ**
**ರ್ಜ್ಜಿತಮೆನಿಪಗ್ರಹಾರಮ ವಿನಾಶಿ ನಮಸ್ಯಮೆ ಮಾಡಿ ರಾಜ್ಯದೊಳ್**
**ಸ್ಸುತನನುಕೂಳನಾಗಿ ಬೆಸಕೆಯ್ಯೆ ಗುಣೋನ್ನತಿಯೊಪ್ಪಿನಿಂದರು**
**ನ್ಧತಿ ದೊರೆ ದೀವಳಬ್ಬರಸಿಯರ್ಜ್ಜಗತೀತಳಕೇಂ ಪವಿತ್ರರೋ ॥**

ನಾಶವಾಗದೆ ಬಹುಕಾಲ ಉಳಿಯುವಂತಹ, ಅತಿಶಯವೆನಿಸುವಂತೆ ಅಗ್ರಹಾರವನ್ನೂ ಪತಿಯ ಹೆಸರಿನಲ್ಲಿ ನಿರ್ಮಿಸಿರುವ ದೀವಬ್ಬರಸಿಗೆ ರಾಜ್ಯದಲ್ಲಿ ತನ್ನ ಆಣತಿ ಆದೇಶಗಳನ್ನು ಅನುಸರಿಸುವ ತನ್ನ ಕಿರಿಯಮಗನ ಸಹಕಾರವಿತ್ತೆನ್ನುವುದನ್ನು "ಸುತನನುಕೂಲನಾಗಿ ಬೆಸಕೆಯ್ಯೆ" ಎಂಬ ಇಲ್ಲಿನ ಹೇಳಿಕೆಯಲ್ಲಿ ಗಮನಿಸಬಹುದು. ಉತ್ತಮ ಗುಣದಿಂದ ಕೂಡಿ, ಅರುಂಧತಿಗೆ ಸಮಾನಳೆನಿಸಿರುವ ದೀವಬ್ಬರಸಿಯು ಈ ಜಗತ್ತಿನಲ್ಲಿ ಅದೆಷ್ಟು ಪವಿತ್ರಳು ಎಂದು ಬಣ್ಣಿಸಿರುವ ಕವಿಯು ಇವಳು ಅರುಂಧತಿಗೆ ಹೋಲಿಸಬಹುದಾದ ಉತ್ತಮ ಗುಣವನ್ನೂ ಹೊಂದಿರುವುದರಿಂದಲೇ ಇಂತಹ ಸತ್ಕಾರ್ಯವನ್ನು ಮಾಡಿದಳೆಂಬುದನ್ನು ತಿಳಿಸಿದ್ದಾನೆ.

**ನೆಟ್ಟನೆ ಕದಂಬ ವಂಶಂ**
**ಪುಟ್ಟಿದ ಮನೆ ಪಲ್ಲವೇನ್ದ್ರನಿಜೆವನೊಟಿಂಬಂ**
**ಪುಟ್ಟಿದ ಮಗನಿಗೆ ಮುಗಿಲಂ**
**ಮುಟ್ಟಿಪುದುಂ ಪೆಂಪು ದೀವಳಬ್ಬರಿಸಿಯರಾ ॥**

ನೊಳಂಬಪಲ್ಲವ ದೊರೆಯನ್ನು ವರಿಸಿದ, ಕದಂಬ ರಾಜಕುಮಾರಿ ದಿವಳಬ್ಬೆಯು ಪತಿಯ ಮರಣಾನಂತರ ಸಿಂಹಾಸನವನ್ನೇರಿದ ತನ್ನ ಮಗ ಇರಿವ ನೊಳಂಬನ ಕೀರ್ತಿಯು ಆಕಾಶವನ್ನು ಮುಟ್ಟುವಂತೆ, ಪ್ರಖ್ಯಾತಿ ಪಡೆಯುವಂತೆ ಅವನ ಆಳ್ವಿಕೆಯಲ್ಲಿ ಸಹಕರಿಸಿ, ಕೀರ್ತಿಗೆ ಭಾಜನಳಾಗಿದ್ದಾಳೆ.

**ಸ್ವಸ್ತಿ ಶ್ರೀಮದನೇಕ ದಿವ್ಯಗುಣ ಸೌಂದರ್ಯಾಲಯಾ ಸಾಯತಾ**
**ಭೂಲೋಕಾಗ್ರ್ಯ ಕದಂಬ ವಂಶ ತಿಲಕಾ ಸದ್ಭಿಸ್ಸದಾವನ್ದಿತಾ**
**ಶ್ರೀಮದ್ರಾಜ ಮನೋಜ ಭೂಪ ಮಹಿಷೀ ದೀವಾಂಬಿಕಾ ವಿಶ್ರುತಾ**
**ಪೂತಾನೂತ ಪತಿವ್ರತಾ ಸ್ತುತಗುಣಾ ದೇದಿಪ್ಯಮಾನಾಂಜನಿ॥**

ಮೇಲಿನ ಪದ್ಯವು ಕದಂಬ ವಂಶಕ್ಕೆ ತಿಲಕಪ್ರಾಯಳಂತಿರುವ ದೀವಳಬ್ಬರಸಿಯು ರೂಪ ಹಾಗೂ ದಿವ್ಯಗುಣಗಳಿಂದಾಗಿ ಭೂಲೋಕದ ಅಗ್ರಸ್ಥಾನವನ್ನು ಪಡೆದು ಸದಾ ಆರಾಧಿಸಲ್ಪಡುವ (ವಂದಿತಳಾಗಿ) ಅರಸಿಯಾಗಿದ್ದಾಳೆ. ಶ್ರೇಷ್ಠ ಸುಮಂಗಲಿಯರಿಂದ ಸದಾ ಹೊಗಳಲ್ಪಟ್ಟು ಉಜ್ವಲವಾಗಿ ಬೆಳಗುತ್ತಿದ್ದಾಳೆ ಎಂದು ಬಣ್ಣಿಸಿದೆ. ಹಿಂದಿನ ಪದ್ಯದಲ್ಲಿ ನೊಳಂಬಪಲ್ಲವ ಕುಲದ ಕೀರ್ತಿಯನ್ನು ಉತ್ತುಂಗಕ್ಕೇರಿಸಿದವಳೆಂದು ಬಣ್ಣಿಸಲ್ಪಟ್ಟ ದೀವಳಬ್ಬೆಯು ಇಲ್ಲಿ ತಾನು ಹುಟ್ಟಿದ ರಾಜಮನೆತನವಾದ ಕದಂಬ ಕುಲಕ್ಕೂ ಕೀರ್ತಿ ತಂದಿರುವ ರಾಜಕುಮಾರಿ ಎಂಬ ಹೊಗಳಿಕೆಗೆ ಪಾತ್ರಳಾಗಿದ್ದಾಳೆ.

ಅರಸಿಯನ್ನು ಬಣ್ಣಿಸಿರುವ ಮತ್ತೊಂದು ಸಂಸ್ಕೃತ ಪದ್ಯವನ್ನೂ ಕಾಣಬಹುದು

**ಸದ್ವಿತೀರ್ಣ್ಣನ....... ಶಶೀಕತಿಮನೋಹಾರಿಣೀ**
**ಸನ್ಮಾರ್ಗ್ಗಾರ್ಗ್ಗಳ ಭೇದಿನೀ ನಿರುಪಮಾ ಸತ್ಪಾತ್ರ ದಾನಾನ್ವಿತ**
**ಸತ್ಕಾದಂಬ ಮಹಾನ್ವಯೇ ಸಮಭವದ್ದೇವೀಹ ದೀವಾಂಬಿಕಾ**
**ಕಿನ್ಧಾತ್ರೀ ಮಕುಟಾಗ್ರ ಮಣ್ಣನ ಮಣೀಃ ಕಿಂ ಕಾಮದೇ ... ॥**

ಇಲ್ಲಿ ದೀವಾಂಬಿಕೆ ಎಂದು ಕರೆಯಲ್ಪಟ್ಟಿರುವ ರಾಣಿಯ ದಾನ ಗುಣವಿಶೇಷತೆಯನ್ನು ಕಾಣಬಹುದು. ಸತ್ಪಾತ್ರರಿಗೆ ದಾನ ನೀಡುವ ಇವಳ ನ್ಯಾಯಪರ ಗುಣವನ್ನು ಎತ್ತಿ ಹಿಡಿದು, ಭೂಮಂಡಲದ ಕಿರೀಟದ ಉತ್ತುಂಗ ಭಾಗವನ್ನೇರಿದ ರತ್ನವೆಂದು ಕವಿಯು ಹೊಗಳಿದ್ದಾನೆ.

ದೀವಳಬ್ಬೆಯನ್ನು ಬಣ್ಣಿಸಿರುವ ಎಲ್ಲ ಪದ್ಯಗಳಲ್ಲಿಯೂ ಇವಳು ಕದಂಬ ಹಾಗೂ ನೊಳಂಬ ಉಭಯಕುಲಕ್ಕೂ ಕೀರ್ತಿತಂದವಳೆನ್ನುವುದಕ್ಕೇ ಕವಿಯು ಹೆಚ್ಚು ಒತ್ತು ನೀಡಿರುವುದನ್ನು ಗಮನಿಸಬಹುದು. ಇವಳು ತವರುಮನೆಗೆ ನೀಡಿದ ಸಹಕಾರ, ಅಲ್ಲಿ ಗಳಿಸಿರುವ ಸತ್ಕೀರ್ತಿ, ಅವರೊಂದಿಗಿನ ಉತ್ತಮ ಬಾಂಧವ್ಯವು, ಮಗನ ರಾಜ್ಯಾಡಳಿತ ಕಾಲದಲ್ಲಿಯೂ ತವರು ಮನೆಯ ಕೀರ್ತಿಯೊಂದಿಗೆ ಇವಳನ್ನು ಗುರುತಿಸುವಂತಾಗಿದೆ.

ತನ್ನ ಮಗ ನೊಳಿಪಯ್ಯನ ಆಳ್ವಿಕೆಯ ಕಾಲದಲ್ಲಿ ದೀವಳಾಂಬೆಯು ನೊಟಂಬ ಗತಿಸಿದ ಮಗ (ಮಲಮಗ) ಮಹೇಂದ್ರನ ಪರೋಕ್ಷ ವಿನಯದಲ್ಲಿ ಮಾಡಿಸಿದ ತಟಾಕ ಹಾಗು ಮುಕುಂದ ಭವನದ ಉಲ್ಲೇಖವನ್ನು ಕವಿಯು ಈ ಕೆಳಗಿನ ಚಂಪಕಮಾಲಾ ವೃತ್ತದ ಪದ್ಯದಲ್ಲಿ ತಿಳಿಸಿದ್ದಾನೆ. ಇಲ್ಲಿ ರಾಜ್ಯಮನೀಕ್ಷಿಸುವ ಎಂಬ ಮಾತು ಆಡಳಿತದಲ್ಲಿ ಸಲಹೆ–ಸೂಚನೆ ನೀಡುತ್ತಾ ಭಾಗಿಯಾಗಿದ್ದಳೆನ್ನುವುದನ್ನು ಸೂಚಿಸುತ್ತದೆ. ಹಿಂದಿನ ಪದ್ಯದಲ್ಲಿಯೂ ಮಗನ ಹಿರಿಮೆಯನ್ನು ಹೆಚ್ಚಿಸುವುದರಲ್ಲಿ ಗಮನ ಹರಿಸಿದ ಇವಳ ಗುಣವನ್ನು ಕವಿ ಹೊಗಳಿರುವುದನ್ನು ಕಾಣಬಹುದು.

**ಮನುಚರಿತಂ ಮ್ಮಹೇನ್ದ್ರ ನೃಪನಿನ್ದೆ ಪರೋಕ್ಷದೊಳಾ ಮಹಾತ್ಮ್ಯನಾ**
**ಜನನಿ ಮಹೇನ್ದ್ರನಾಮದೆ ಕೊಳಂ ನಿಜನಾಮದೊಳಿನ್ತಟಾಕಮೀ**
**ಶನ ಭವನಮ್ಮುಕುನ್ದ ಭವನಂಗಳನಿಂಬಿನಿ ಮಾಡಿಧರ್ಮ್ಮವ**
**ರ್ದ್ಧನದೆ ಕನೀಯ ನನ್ದನನ ರಾಜ್ಯಮನೀಕ್ಷಿಸುಗಾವಕಾಲಮುಂ॥**

**ಕೃತ್ವಾ ದೇವಾಯತನಂ ಮಹೇಶ್ವರಾರ್ಪ್ಪಣಂ ಅನಂತ ಪಾಪ ವಿನಾಶಾ**
**ಘಂಟಾ ದೀಪಾಂಬಿಕಯಾ ನೊಟಂಬ ನಾರಾಯಣೇಶ್ವರಾಯ ಸುದತ್ತಾ॥**
**ಸ್ವಸ್ತಿ ಸಮಧಿಗತಪಞ್ಚ ಮಹಾಶಬ್ದಪಲ್ಲವಾನ್ವಯ ಶ್ರೀಪೃಥ್ವೀವಲ್ಲಭಪಲ್ಲವಕುಲತಿಲಕಂ**
**ಪಲ್ಲವಾಭರಣನಾಹವದುರ್ಗನಹಿತರಜವನಮೋಘ ವಾಕ್ಯನ್ನೊಟಂಬನಾರಾಯಣ**
**ಶ್ರೀವೀರಮಹೇನ್ದ್ರ ನೊಟಂಬಾಧಿರಾಜನ ಪರೋಕ್ಷದೊಳ್ ದೀವಬ್ಬರಸಿಯಪ್ಪೊಱರ**
**ಮಂಗಲದೊಳ್ದೀವಬ್ಬೆ ಸಮುದ್ರವಂ ಕಟ್ಟಿಸಿಯಲ್ಲಿ ವಿಷ್ಣುಗ್ರಿಹಮಮ್ಮಾಡಿಸಿಯಾವನ್ಯದೊಳ್ನೊಟಂಬ**
**ನಾರಾಯಣೇಶ್ವರ ಮಮ್ಮಾಡಿಸಿ ಯೀದೇವರ್ಗ್ಗೆಳ ನಗರಮಂ ಸರ್ಬ್ಬಬಾಧಾ ಪರಿಹಾರಮಾಗಿ ಕೊಟ್ಟರ್**

ದೀವಬ್ಬರಸಿಯು ಮಹೇಂದ್ರನ ಪರೋಕ್ಷಾರ್ಥವಾಗಿ ಆವನ್ಯದ (ಆವನಿಯ)ಲ್ಲಿ ನೊಳಂಬನಾರಾಯಣೇಶ್ವರ ದೇವಾಲಯವನ್ನೂ, ಮಹೇಂದ್ರ ಕೊಳವನ್ನೂ, ಪತಿಯ ಹೆಸರಿನಲ್ಲಿ ಪೊಱಲ್ಪೋರ ಮಂಗಲವೆಂಬ ಅಗ್ರಹಾರವನ್ನೂ ಅಲ್ಲಿ ತನ್ನ ಹೆಸರಿನಲ್ಲಿ ದೀವಬ್ಬೆ ಸಮುದ್ರವನ್ನೂ ಕಟ್ಟಿಸಿ, ಅಲ್ಲಿ ವಿಷ್ಣುಗೃಹವನ್ನೂ ಮಾಡಿಸಿದಳು.

**ಶಾಸನ ಕವಿ:** ಈ ಸುಂದರವಾದ ಚಂಪೂ ಪ್ರಕಾರದ ಶಾಸನ ಪದ್ಯವನ್ನು ರಚಿಸಿರುವ ಕವಿಯ ಕುರಿತಾಗಿ ಯಾವ ಮಾಹಿತಿಯೂ ಲಭಿಸುವುದಿಲ್ಲ. ಶಾಸನದ ಕಡೆಯ ಭಾಗದಲ್ಲಿ **ಬರೆದನ್ನಾಮಯ್ಯಂ** ಎಂಬ ಒಂದೇ ಪದದಲ್ಲಿ ತಿಳಿಸಿರುವ ಹೆಸರು ಶಾಸನ ರಚಿಸಿರುವ ಕವಿಯದಾಗಿದೆ ಎಂದು ಡಾ.ಎಂ.ಎಂ.ಕಲಬುರ್ಗಿ ಅವರು ಅಭಿಪ್ರಾಯ ಪಡುತ್ತಾರೆ[೨೨]. ಆದರೆ, ನಾಮಯ್ಯ ಕವಿಯಲ್ಲ ಕಂಡರಣೆಕಾರ (ಲಿಪಿಕಾರ) ಎಂದು ಡಾ.ಕೆ.ಆರ್.ಗಣೇಶ್ ಅವರು ಅಭಿಪ್ರಾಯ ಪಡುತ್ತಾರೆ[೨೩].

ಸಾಧಾರಣವಾಗಿ, ತಾಳೆಯಗರಿಯ ಮೇಲೆ ಕವಿಗಳು ರಚಿಸಿದ ಶಾಸನಪದ್ಯವನ್ನು ಕಲ್ಲಿನ ಮೇಲೆ ಬರೆಯುವಾತ 'ಬರೆದವ' ಎಂದು ತನ್ನನ್ನು ಗುರುತಿಸಿಕೊಳ್ಳುತ್ತಾನೆ. ಈತ ಕಲ್ಲಿನಮೇಲೆ ಬರೆದದ್ದನ್ನು ಹಾಗೇ ಕೇತ್ತುವವನು ಓಜ ಅಥವಾ ಶಿಲ್ಪಿ. ಕೆಲವೊಂದು ಶಾಸನಗಳಲ್ಲಿ ಶಾಸನದ ಕಂಡರಣೆಕಾರ, ಓಜ ತಮ್ಮ ಹೆಸರನ್ನೂ ಹೇಳಿಕೊಂಡಿರುತ್ತಾರೆ. ದೀವಳಬ್ಬೆಯ ಈ ಶಾಸನದಲ್ಲಿ ಬರೆದನ್ನಾಮಯ್ಯ ಎಂಬ ಹೆಸರು ಶಾಸನ ರಚಿಸಿದವನೋ ಅಥವಾ ಕಲ್ಲಿನ ಮೇಲೆ ಬರೆದವನೋ ಸ್ಪಷ್ಟವಾಗುವುದಿಲ್ಲ. ಆದರೆ, ಅರಸಿಕೆರೆಯ ಕೆಲವು ಶಾಸನಗಳನ್ನು ರಚಿಸಿದ ಕವಿ ತ್ರಿವಿಕ್ರಮ ಪಂಡಿತ "ಬರೆದಂ ತ್ರಿವಿಕ್ರಮಾಂಕನೀ ಶಾಸನಮಂ" ಎಂದು ತನ್ನ ಹೆಸರನ್ನು ಹೇಳಿಕೊಂಡಿದ್ದಾನೆ. ಇಂಗಳಿಗೆಯ ಶಾಸನ ಕವಿಯೂ ಕೂಡ ತನ್ನನ್ನು 'ವಾಗ್ವಧೂನನ್ದನಂ ಜಿನಪಾದಾಂಭೋಜಭೃಂಗಂ ನಾಗಾರ್ಜುನಪಣ್ಡಿತಂ ಬರೆದಂ' ಎಂಬ ಒಂದೇ ಸಾಲಿನಲ್ಲಿ 'ಬರೆದಂ' ಎಂದೇ ತಿಳಿಸಿದ್ದಾನೆ. ಇಂತಹ ಉದಾಹರಣೆಗಳನ್ನು ಗಮನಿಸಿದಾಗ ಪ್ರಸ್ತುತ ಶಾಸನದಲ್ಲಿ ಉಲ್ಲೇಖಿಸಿರುವ ನಾಮಯ್ಯ ಕವಿಯಾಗಿರುವ ಸಾಧ್ಯತೆ ಇದೆ. ಈ ಸುಂದರ ಪದ್ಯ ರಚಿಸಿರುವ ಕವಿ ಯಾರೇ ಆದರೂ ಪ್ರಶಂಸೆಗೆ ಅರ್ಹನಾಗಿದ್ದಾನೆ. ಈತನು "ಈ ಶಾಸನದಲ್ಲಿ ಮಾಡಿರುವ ತಟಾಕದ ವರ್ಣನೆ ಮುಂದಣ ಕಾವ್ಯಗಳಲ್ಲಿಯ ತಟಾಕ ವರ್ಣನೆಗೆ ಮಾದರಿ ಎನಿಸಿದೆ"[೨೪].

**ಮೋಚಬ್ಬರಸಿ**

ಹತ್ತನೆಯ ಶತಮಾನದ ಕಾಸರಗೋಡಿನ ರಾಣಿ ಮೋಚಬ್ಬರಸಿಯ ಉದಾರತೆಯನ್ನು ಸಾರುವ ತಳಂಗೆರೆಯ ಶಾಸನ[೨೫], ಮೋಚಬ್ಬರಸಿಯ ಪ್ರಕೃತಿ ಪ್ರೇಮ, ಕ್ಷಮಾದಾನ, ಜನಹಿತ ಗುಣಗಳನ್ನು ಬಣ್ಣಿಸುತ್ತದೆ.

ದೊರೆ ಜಯಸಿಂಹ ಮೋಚಬ್ಬರಸಿಗೆ 'ಕನ್ಯಾದಾನವಾಗಿ' ಭೂಮಿಯನ್ನು ಕೊಡಲು ಬಯಸಿದಾಗ, ಯಾರಿಗೂ ಬೇಡವಾದ ಊರಾಚೆಯ ಕಲ್ಲಿನ ಕಾಡಾಗಿದ್ದ ಬೆಟ್ಟಪ್ರದೇಶವನ್ನು ಬೇಡಿ ಪಡೆಯುತ್ತಾಳೆ. ಈ ಪ್ರದೇಶವನ್ನು ಸಮತಟ್ಟುಗೊಳಿಸಿ ಹೆಂಚಿನಮನೆಗಳು, ತೋಟವನ್ನು ಮಾಡಿಸುತ್ತಾಳೆ, ಪ್ರವಾಹವನ್ನು ಸೆರೆಯಿಟ್ಟು, ಕೆರೆಗಳನ್ನು ನಿರ್ಮಿಸಿ ನೀರಾವರಿವ್ಯವಸ್ಥೆ ಮಾಡುತ್ತಾಳೆ. ಅತ್ಯಂತ ಶ್ರಮವಹಿಸಿ ಆ ಬರಡು ನೆಲವನ್ನು ಸುಕ್ಷೇತ್ರವನ್ನಾಗಿಸುತ್ತಾಳೆ. ವಿಶೇಷವಾದ ಸತ್ಕಾರಕ್ಕಾಗಿ ನಿರ್ಮಿಸಲಾದ ಈ ಸ್ಥಳದಲ್ಲಿ ಎಂಥ ತಪ್ಪು ಮಾಡಿ ಬಂದವರಿಗೂ, ಕೊಲೆಗಡುಕರಿಗೂ ಮೂರುದಿನದ 'ಸರ್ವಪರಿಹಾರಂ ಕಾದು ಕಳಿಸುವುದು' ಮೋಚಬ್ಬರಸಿಯ ಆದೇಶವಾಗಿತ್ತು. ಈ ಮೂಲಕ ಅಪರಾಧಿಗಳ ಮನಃ ಪರಿವರ್ತನೆ ಮಾಡುವ ಸದುದ್ದೇಶವನ್ನು ಇಲ್ಲಿ ಕಾಣಬಹುದು. "೧೦ನೆಯ ಶತಮಾನದಲ್ಲಿ ಪಾತಕಿಗಳಿಗೂ ಒಂದು ತಾತ್ಪೂರ್ತಿಕ ಅಭಯಾಶ್ರಮ ಮಾಡಿದ ಶ್ರೇಯ ಮೋಚಬ್ಬೆಗೆ ಸಲ್ಲುತ್ತದೆ"[೨೬].

ಶಾಸನವು ಇಲ್ಲಿ ಆಳ್ವಿಕೆ ನಡೆಸುತ್ತಿದ್ದ ದೊರೆ ಜಯಸಿಂಹನನ್ನು ಉಲ್ಲೇಖಿಸುತ್ತದೆಯಾದರೂ, ಅವನ ಹಾಗೂ ಮೋಚಬ್ಬರಸಿಯ ಸಂಬಂಧದ ಕುರಿತು ಯಾವ ವಿಚಾರವನ್ನೂ ತಿಳಿಸುವುದಿಲ್ಲ. ದೊರೆ ಜಯಸಿಂಹ ಹಾಗೂ ಮೋಚಬ್ಬರಸಿಯರ ಸಂಬಂಧ ಕುರಿತಾಗಿ ಸಾಕಷ್ಟು ಚರ್ಚೆಗಳು ನಡೆದಿವೆ. ಇಲ್ಲಿ ಮೋಚಬ್ಬೆಯನ್ನು ಅರಸಿ ಎಂದು ಕರೆದಿರುವುದರಿಂದ ಇವಳು ಜಯಸಿಂಹನ ರಾಣಿ ಎಂದು ಭಾವಿಸಬಹುದಾದರೆ, ಕನ್ಯಾದಾನಂಗೊಟ್ಟ ಭೂಮಿಯ ವಿಚಾರ ಇರುವುದರಿಂದ ಇವಳು ಮಗಳು ಅಥವಾ ಸಹೋದರಿ ಇರಬೇಕೆಂಬ ಅನುಮಾನವೂ ಬರುತ್ತದೆ.

ಆದರೆ ಮೋಚಬ್ಬರಸಿಯು ಜಯಸಿಂಹನ ಮಡದಿ, ಈಕೆಯು ಬಲ್ಲಾಳ ವಂಶದ ರಾಜಕುಮಾರಿಯಾಗಿದ್ದು, ಮಗಳ ಜೊತೆಯಲ್ಲಿ ಅವಳ ತಂದೆತಾಯಾಯಿಯರೂ ಮಂಗಳೂರು ಕಡೆಯಿಂದ ಕುಂಬಳೆಸೀಮೆಗೆ ಬಂದು ನೆಲೆಸಿದರೆಂದೂ, ಜಯಸಿಂಹನು ಅವರಿಗೆ ತಕ್ಕ ವಸತಿ ಭೂಮಿಯನ್ನು ಒದಗಿಸಿಕೊಟ್ಟನೆಂದೂ ಆ ಭಾಗದಲ್ಲಿ ಜನಜನಿತವಾದ ಕಥೆಯೊಂದರಲ್ಲಿ ಹೇಳಲಾಗುತ್ತದೆ. ಅವರು ತಮ್ಮ ಹುಟ್ಟೂರಿನಿಂದ ಕುಂಬಳೆ ಸೀಮೆಗೆ ಬರುವಾಗ ಅವರು ಆರಾಧಿಸುತ್ತಿದ್ದ ಧೂಮಾವತಿ ದೈವದ ಭಂಡಾರವನ್ನು ಸಹ ಜೊತೆಗೆ ತಂದರೆಂದೂ, ಈಗಲೂ ಪಡ್ಡೈದೂಮಾವತಿ ಎಂಬ ಹೆಸರಿನಿಂದ ಆ ದೈವವು ಕುಂಬಳೆ ಸೀಮೆಯಲ್ಲಿ ಆರಾಧಿಸಲ್ಪಡುತ್ತದೆಂದೂ ಐತಿಹ್ಯಗಳಿವೆ[೨೭].

ಮೋಚಬ್ಬರಸಿಯ ಹಿನ್ನೆಲೆಗಿಂತಲೂ ಈ ಶಾಸನದಲ್ಲಿ ತಿಳಿದುಬರುವ ಅವಳ ಮನೋಭಾವ, ಪ್ರಕೃತಿ ಪ್ರೇಮ, ಪ್ರಜಾಪರಕಾಳಜಿ ಹೆಚ್ಚು ಗಮನ ಸೆಳೆಯುತ್ತದೆ. ಹೆಣ್ಣುಮಕ್ಕಳಿಗೆ ಆಸ್ತಿಯ ಹಕ್ಕು ಹಸ್ತಾಂತರವಾಗಬೇಕೆಂಬ ಅರಸಿ ಮಾಡಿದ ನಿಯಮ. ಈ ಶಾಸನದಲ್ಲಿ ಕಂಡುಬರುವ ಮತ್ತೊಂದು ವಿಶೇಷವಾಗಿದೆ. ಹೆಣ್ಣುಮಕ್ಕಳಿಲ್ಲದೆ ಹೋದರೆ ಮಾತ್ರ ಮೊದಲನೆಯ ಗಂಡುಮಗನಿಗೆ ಆ ಅಧಿಕಾರ ದೊರಕುವುದೆಂದು ತಿಳಿಸಲಾಗಿದೆ.

ರಾಣಿಯ ಮನೋಭಾವವನ್ನು ಅಧ್ಯಯನ ಮಾಡಲು ಈ ಶಾಸನವು ಉತ್ತಮ ಆಕರವನ್ನು ಒದಗಿಸುತ್ತದೆ. ಬರಡು ಭೂಮಿಯನ್ನು ಸುಂದರ ಉದ್ಯಾನವನವನ್ನಾಗಿ ಮಾರ್ಪಡಿಸಿದ ಅವಳ ಕೆಚ್ಚು, ಸಾಧನೆಗಳು ಪ್ರಶಂಸನೀಯ ಹಾಗೂ ಅನುಕರಣೀಯ.

ಶಾಸನವು ಕನ್ನಡ ಗದ್ಯ ಮತ್ತು ಪದ್ಯ ಮಿಶ್ರಿತ ಚಂಪೂಪ್ರಕಾರದಲ್ಲಿದೆ. ಕಾಲದ ಉಲ್ಲೇಖವಿಲ್ಲದಿದ್ದರೂ ಲಿಪಿಶಾಸ್ತ್ರ ದೃಷ್ಟಿಯಿಂದ ಈ ಶಾಸನವು ೧೦–೧೧ನೆಯ ಶತಮಾನದ ಸಂಧಿಕಾಲದ್ದೆಂದು ಪಂಡಿತರು ಖಚಿತವಾಗಿ ಹೇಳಿದ್ದಾರೆ.

ಕನ್ಯಾದಾನವನ್ನಾಗಿ ಭೂಮಿಯನ್ನು ಕೊಡಬಂದ ಜಯಸಿಂಹನಿಗೆ 'ಮೋಚಬ್ಬರಸಿ ಸನ್ತೋಸಂಬಟ್ಟಿನ್ತೆನ್ದಡೆ .... "ಆರುಂ ಮನ್ನಿಸದೂರಂ ಗುಣಸಂಪನ್ನ ಸಮನ್ತೀವುದೆನಗೆ ಕನ್ಯಾದಾನಂ॥ ಅಕ್ಕುಮೆಂದು" ಮೋಚಬ್ಬರಸಿಯು ಸಂತೋಷಗೊಂಡು ಕನ್ಯಾದಾನವನ್ನು ನೀಡುವುದಾದಲ್ಲಿ ಯಾರಿಗೂ ಬೇಡದ (ಬಂಜರು ಭೂಮಿ) ಊರನ್ನು ನನಗೆ ನೀಡು ಎಂದು ಕೇಳಿ ಪಡೆಯುತ್ತಾಳೆ.

**ಊರಕಡೆಯ ತೊಱೆಯ ತಡಿಯ ಕರಿಕಲ್ಲ ಮೋಱದಿಂ ಪು**
**ತ್ತೂರ ಪೊಲೆಯರಿಪ್ಪ ಕೇರಿಯೊವಟ ನೀರ ಭೂಮಿಯಂ**
**ಸಾರ ಭೂರುಹಂಗಳೋಳಿಯೊಳಗೆ ನಱೆದ ಕಱೆಯನಂ**
**ಭೋರುಹಾಕ್ಷಿ ತನ್ನ ಧನದಿನೊಪ್ಪೆ ಮಾಡಿಸಿಟ್ಟುದಂ ॥ಉತ್ಸಾಹಂ॥**

ಪುತ್ತೂರ ಹೊಲೆಯರ ಕೇರಿಗೆ ತಾಗಿದಂತಿದ್ದ ಯಾವ ಕೆಲಸಕ್ಕೂ ಬಾರದ ಚೌಳು ಭೂಮಿಯನ್ನು ಪಡೆದುಕೊಂಡು, ಆ ಭೂಮಿಯೊಳಗೆ ಅವಳು ತನ್ನದೇ ಹಣವನ್ನು ಖರ್ಚುಮಾಡಿ ನೀರು ನೆರೆದ ಕೆರೆಯೊಂದನ್ನು ಕಟ್ಟಿಸಿದಳು.

ಈ ಮೇಲಿನ ಪದ್ಯ ಕನ್ನಡ ಛಂದಸ್ಸುಗಳ ಕ್ಷೇತ್ರದಲ್ಲಿ ಅನುಪಮವಾದುದು. ಈ ಪದ್ಯವನ್ನು ರಚಿಸುವಲ್ಲಿ ಬಳಸಲಾಗಿರುವ ವಿಶಿಷ್ಟ ಉತ್ಸಾಹ ವೃತ್ತವು ಕನ್ನಡ ಸಾಹಿತ್ಯ ಕೃತಿಗಳಲ್ಲಾಗಲಿ, ಬೇರಾವ ಕನ್ನಡ ಶಾಸನದಲ್ಲಾಗಲಿ ಕಾಣಸಿಗುವುದಿಲ್ಲ. ಏಳೇಳು ಬ್ರಹ್ಮಗಣಗಳು ಮತ್ತು ಒಂದು ಗುರು ಅಕ್ಷರದಿಂದ ಕೂಡಿದ ನಾಲ್ಕುಸಾಲುಗಳ ಪದ್ಯ. "ಪದ್ಯದ ಉತ್ತಮ ತರಂಗ ಧಾಟಿಯು, ಛಂದಸ್ಸಿನ ಓಟವು ತಳಂಗೆರೆ ಶಾಸನದ ಅನಾಮಿಕ ಕವಿಯ ಪ್ರತಿಭೆಗೆ ಸಾಕ್ಷಿಯಾಗಿದೆ"[೨೮].

**॥ಇನ್ತಾರುಮೊಲ್ಲದ ಕಲ್ಕಾಡಬೆಟ್ಟಂ ಸವತಳಂ ಮಾಡಿ ಯೋಡಿಲ ಮನೆಯುಮಂ ನನ್ದನವನವುಮಂ ಮಾಡಿಸಿ, ಕೆಱೆಯಂ ಕಟ್ಟಿಸಿ, ತೊಱೆಯ ಸೆಱೆಯಿಟ್ಟೊವಟ ನೆಲನಂ ಪಿರಿದುಮಾಯಾಸದಿಂ ಸುಕ್ಷೇತ್ರಂ ಮಾಡಿಸಿದುದದು ಮುನ್ನಮೂಡೆಯಿಕ್ಕುವೊವಟುಪ್ಪು ನೆಲದಾ ಭೂಮಿಯ ನೊಳಕೊಣ್ಡು ಗಟಿನಗಟಿಸಿ, ಆಸನ್ನಚಾವುಗಾಮಿಗಳಜೆಯೆ"** ಈ ಗದ್ಯಭಾಗವು ಮೋಚಬ್ಬರಸಿಯು ಯಾರಿಗೂ ಬೇಕಿರದ ಆ ಕಲ್ಲುಕಾಡ ಬೆಟ್ಟವನ್ನು ಸಮತಟ್ಟಾಗಿಮಾಡಿ, ಓಡಿನ (ಹೆಂಚಿನ) ಮನೆ ಹಾಗೂ ನಂದನವನಗಳನ್ನು ನಿರ್ಮಿಸಿ, ಕೆರೆಯನ್ನು ಕಟ್ಟಿಸಿ, ಹತ್ತಿರ ಹರಿಯುತ್ತಿದ್ದ ತೊರೆ‌ಯ ನೀರನ್ನು ಅಣೆಕಟ್ಟಿನಲ್ಲಿ ಸೆರೆಹಿಡಿದು, ಅತಿಪರಿಶ್ರಮದಿಂದ ಹಾಳು ಚೌಳುನೆಲವನ್ನು ಫಲವತ್ತಾಗಿ ಮಾಡಿದಳು ಎಂಬ ವಿವರಣೆ ನೀಡುತ್ತದೆ.

**ಆರಾದೊಡಕ್ಕೆ ಧಾತ್ರೀ**
**ಭಾರಮನಾರಾನ್ತೊರಾನ್ತರ ಕಯ್ಯಾನ್ತಾ**
**ಬೀರರನಿರದಾಂ ಬೇಡಿದೆ**
**ನೋರಂತಿರೆ ಕಾವುದೀ ವ್ಯವಸ್ಥೆಯಿನೂರಂ ॥ ಕಂ॥**

**ವಚನ॥ ಅದೆನ್ತೆನ್ದೊಡೆ ಅರಸಾಳ್ಗಳೂರಂ ಪೊಕ್ಕನ್ದು ಪುಲ್ಲಡಕ್ಕನೆತ್ತುವೊಡಮೇನಾನುವಂ ಬಿಡದೊಡಂ ಕೊಲೆಗೆ ಸಾಲ್ತರೆನ್ತಪ್ಪ ದ್ರೋಹಂಗೆಯ್ದು ಬನ್ದೂರಂ ಪೊಕ್ಕೊಡವನಂ ಮೂಱುದಿವಸಂ ಸರ್ವ್ವಪರಿಹಾರಂ ಕಾದು ಕಟಿಪುವುದು. ಊರ್ಮ್ಮೆಜೋಗವ್ವೆಯ ವಂಶದೊಳ್ಪೆಣ್ಗೂಸುಗಳಲ್ಲದೆ ಗಣ್ಡುಗೂಸುಗಳ ವಂಶಕ್ಕಡಿಹಾರಮಲ್ಲದೆ ಸಲ್ಲದು. ಪೆಣ್ಗೂಸುಗಳಿಲ್ಲದೊಡೆ ಗಣ್ಡುಮಕ್ಕಳ್ಗೆ ಸಲ್ಕುಂ.**

ಇಲ್ಲಿ ಮೂರು ನಿಯಮಗಳನ್ನು ರೂಪಿಸಿರುವುದನ್ನು ಕಾಣಬಹುದು ೧. ಅರಸನ ಆಳುಗಳು ಯಾರಾದರೂ ಆ ಕನ್ಯಾದಾನದ ಗ್ರಾಮವನ್ನು ಪ್ರವೇಶಿಸಿ ಅಲ್ಲಿಯ ಹುಲ್ಲು ರಾಶಿಗಳನ್ನು ಕೊಂಡೊಯ್ವರಾದರೆ, ಇನ್ನಾವುದೇ

ವಸ್ತುವನ್ನು ಬಲಪ್ರಯೋಗದಿಂದ ವಶಪಡಿಸಿಕೊಳ್ಳುವರೇ ಆದರೆ, ಅವರನ್ನು ಮರಣದಡನೆಗೆ ಗುರಿಪಡಿಸಬೇಕು. ೨. ಯಾವುದೇ ರೀತಿಯ ದ್ರೋಹಕಾರ್ಯವನ್ನೆಸಗಿದ ಯಾವನಾದರೂ ಮನುಷ್ಯ ಜೀವಭಯದಿಂದ ಆ ಗ್ರಾಮವನ್ನು ಮರೆಹೊಕ್ಕನಾದರೆ ಅವನನ್ನು ಮೂರುದಿನಗಳ ಕಾಲ ಸಕಲ ವಿಧವಾದ ಆಪತ್ತುಗಳಿಂದಲೂ ಕಾಪಾಡಿ ಅನಂತರ ಗ್ರಾಮದಿಂದ ಹೊರಕ್ಕೆ ಕಳುಹಿಸಿಕೊಡಬೇಕು. ೩. ಮೇಲಿನ ಕನ್ಯಾದಾನವನ್ನು ಭೋಗಿಸುವ ಹಕ್ಕು ಜೋಗವ್ವೆಯ ಹೆಣ್ಣುಸಂತಾನದವರಿಗೇ ಸೇರಿದ್ದು. ಹೆಣ್ಣು ಸಂತಾನವಿಲ್ಲದೇ ಹೋದಲ್ಲಿ ಗಂಡು ಸಂತಾನದವರು ಅದನ್ನು ಅನುಭವಿಸತಕ್ಕದ್ದು.

ಈ ಶಾಸನವು ತಿಳಿಸುವಂತೆ ಮೋಚಬ್ಬರಸಿಯು ವಿಶೇಷ ಆದರ್ಶಗುಣವನ್ನುಳ್ಳ ಅರಸಿಯಾಗಿ ಕಂಡುಬರುತ್ತಾಳೆ. ಬರಡು ನೆಲವನ್ನು ಹಸನುಗೊಳಿಸಿ, ಯೋಗ್ಯ ಭೂಮಿಯನ್ನಾಗಿಸಿದ್ದಲ್ಲದೆ, ಪರಿಶ್ರಮದಿಂದ ಪರಿವರ್ತಿಸಿದ ಆ ಭೂಮಿಯನ್ನು ಹಾಳಾಗಲು ಬಿಡದಂತೆ ರಕ್ಷಿಸಲು ರೂಪಿಸಿದ ನಿಯಮಾವಳಿಗಳೂ ವಿಶಿಷ್ಟವಾಗಿದೆ. ಅಲ್ಲಿನ ಹುಲ್ಲನ್ನು ಸಹ ಯಾರೂ ಅಪಹರಿಸಬಾರದೆಂದು ಕೋರಿರುವ, ಅಪಹರಿಸಿದವರಿಗೆ ಮರಣದಂಡನೆಯಂಥ ಕ್ರೂರ ಶಿಕ್ಷೆಯಾಗಬೇಕೆಂದು ಕೋರಿರುವ ಮೋಚಬ್ಬರಸಿಗೆ ಅದರ ಬಗೆಗಿದ್ದ ಕಾಳಜಿಯನ್ನು ತಿಳಿಸುತ್ತದೆ. ಅವಳು ಕೇವಲ ಬಂಜರು ನೆಲವನ್ನಷ್ಟೇ ಪರಿವರ್ತಿಸುವ ಮನೋಭಾವದವಳಾಗಿರದೆ, ತನ್ನ ನೆಲದೊಳಗೆ "ಎನ್ತಪ್ಪ ದ್ರೋಹಂಗೆಯ್ದು ಬನ್ದೊರಂ ಪೊಕ್ಕೊಡವನಂ ಮೂಱುದಿವಸಂ ಸರ್ವ್ವಪರಿಹಾರಂ ಕಾದು ಕಟಿಪುವುದು" ಎಂತಹ ದ್ರೋಹಿಗೂ ಕೂಡ ಮೂರುದಿವಸನ ಆತಿಥ್ಯ ನೀಡಿ ಕಳಿಸಬೇಕೆಂಬ ಇವಳ ನಿಯಮವು, ಪಾಪಿಗಳ ಮನಸ್ಸನ್ನೂ ಪರಿವರ್ತಿಸುವ ಚಿಂತನೆ ನೆಡಸಿದ ಇವಳ ಗುಣವನ್ನು ಪರಿಚಯಿಸುತ್ತದೆ.

ಮೋಚಬ್ಬರಸಿಯ ಮೂರನೆಯ ನಿಯಮದಂತೆ ಇವಳ ಈ ಭೂಮಿಯು ಮುಂದೆ ಜೋಗವ್ವೆಯ ಹೆಣ್ಣುಸಂತಾನದವರಿಗೇ ಸೇರಿದ್ದು. ಹೆಣ್ಣು ಸಂತಾನವಿಲ್ಲದೇ ಹೋದಲ್ಲಿ ಗಂಡು ಸಂತಾನದವರು ಅದನ್ನು ಅನುಭವಿಸತಕ್ಕದ್ದು. ಇಲ್ಲಿ ಉಕ್ತವಾಗಿರುವ ಜೋಗವ್ವೆಯು ಯಾರೆಂಬುದು ಶಾಸನದಿಂದ ತಿಳಿದು ಬರುವುದಿಲ್ಲ. ಅವಳು ಬಹುಶಃ ಮೋಚಬ್ಬರಸಿಯ ತಾಯಿಯಿದ್ದಿರಬಹುದು.

**ಜೋಗಬ್ಬರಸಿ**

ಜೋಗಬ್ಬೆ ಅಥವಾ ಜೋಗಲದೇವಿಯು ಬನವಾಸಿ ಪನ್ನೀರ್ಚ್ಛಾಸಿರವನ್ನು ಪಾಲಿಸುತ್ತಿದ್ದ ಕುಂದರಾಜನ ಅರಸಿ. ಇವಳು ಇಂದಿನ ಹಾವೇರಿ ಜಿಲ್ಲೆಗೆ ಸೇರಿದ ಕಲ್ಲಿಹಾಳದ ಅಜ್ಜಡಿಯಲ್ಲಿ ಆಳ್ವಿಕೆ ನಡೆಸುತ್ತಿದ್ದಳು[೨೯]. ಜೋಗಬ್ಬರಸಿಯು ತನ್ನ ಆಳ್ವಿಕೆಯ ಊರಾದ ಅಜ್ಜಡಿಯಲ್ಲಿನ ಸಹದೇವೇಶ್ವರ ದೇವಸ್ಥಾನಕ್ಕೆ ಕ್ರಿ.ಶ.೧೦೮೯ರಲ್ಲಿ ಭೂಮಿಯನ್ನು ದಾನಮಾಡಿ, ಆ ವಿವರ ತಿಳಿಸುವ ಸಲುವಾಗಿ ಶಾಸನವನ್ನು ಹಾಕಿಸಿದ್ದಾಳೆ. ಚಂಪೂ ಶೈಲಿಯಲ್ಲಿ ರಚಿತವಾದ ಈ ಶಾಸನದಲ್ಲಿ "ಶ್ರೀ ಕಂದರ್ಪನ ಕಾವ್ಯಂ" ಎಂಬ ಉಲ್ಲೇಖವಿದೆ.

**ಕುಂದನ ಕುಲಲನೆ ಜಗ**
**ದ್ವಂದಿತೆ ಜೋಗಬ್ಬೆ ರೂಪವತಿ ಗುಣವತಿ ಪೂ**
**ರ್ಣೇಂದುಮುಖಿ ಸಂದ ಬರ್ಮನ**
**ನಂದನೆ ವಿಭುರಾಜಮಲ್ಲನ(ನು)ಸುತೆ ನೆಗಳ್ದಳ್ ॥**

ಜೋಗಬ್ಬೆಯನ್ನು ಕುರಿತು ರಚಿಸಲಾಗಿರುವ ಕಂದಪದ್ಯವೊಂದು ಅವಳ ರೂಪ, ಗುಣವನ್ನು ಬಣ್ಣಿಸಿ, ಇವಳು ಬರ್ಮನ ನಂದನೆ ಹಾಗೂ ಪ್ರಭು ರಾಜಮಲ್ಲನ ಅನುಸುತೆ (ಸಹೋದರಿ) ಎಂದು ಇವಳ ತಂದೆ ಹಾಗೂ ಸಹೋದರರನನ್ನು ಉಲ್ಲೇಖಿಸಿದೆ.

**ನೆಟ್ಟನೆ ರೂಪವಿಭ್ರಮಕೆ ದಾನದ ಧರ್ಮದ ರೂಢಿಗುಂತೆ ಬಾ**
**ಯ್ವಿಟ್ಟು ನಿರಂತರಂ ಪದೆವ ಕಾಂತೆಯರಾ ವಧುಕೊಟ್ಟ ದಾನಮಂ**
**ಕೊಟ್ಟರೊ ಪುಟ್ಟುವಂದೊಡನೆ ಪುಟ್ಟಿದರೊ ಸತಿ ಪಟ್ಟ ತೊಟ್ಟಿಲೊಳ್**
**ಪಟ್ಟರೊ ನೋನ್ತರೋ ನೆಗಟ್ಟ ಜೋಗಲ ದೇವಿಯ ನೋಂತ ನೋಂಪಿಯಂ॥**

ಅರಸಿ ಜೋಗಲ ದೇವಿಯ ರೂಪು, ದಾನಗುಣವನ್ನು ಹೊಗಳಿದ ಕವಿಯು, ಅವಳು ನೀಡುವ ದಾನವನ್ನು ಪಡೆವ ಕಾಂತೆಯರು ಏನು ಪುಣ್ಯ ಮಾಡಿದ್ದರೋ ಜೋಗಲದೇವಿಯು ಮಾಡಿದ ವ್ರತವನ್ನೇ, ಪೂಜೆಯನ್ನೇ ಮಾಡಿದರೋ ಎನ್ನುತ್ತಾ ಜೋಗಲದೇವಿಯ ಪುಣ್ಯವನ್ನು, ಅವಳಿಂದ ಪ್ರಭಾವಿತರಾದವರ ಮೂಲಕ ಬಣ್ಣಿಸಿದ್ದಾನೆ.

ಸಹೋದರ ರಾಚಮಲ್ಲನ ಹಾಗೂ ಅಜ್ಜಡಿಯ ಸೆಟ್ಟಿವಾಳ ಸಹದೇವರ ಕೋರಿಕೆಯ ಮೇರೆಗೆ ಈಕೆಯು ಸಹದೇವೇಶ್ವರ ದೇವಾಲಯಕ್ಕೆ ಶಕ.೯೪೧ (ಕ್ರಿ.ಶ.೧೦೧೯) ಉತ್ತರಾಯನ ಸಂಕ್ರಮಣದಂದು ದಾನ ನೀಡಿದ್ದಾಳೆ[೩೦]. ಹಾವೇರಿಯ ಕಳ್ಳಹಾಳಿನಲ್ಲಿನ ದುರ್ಗಾ ಪರಮೇಶ್ವರಿ ದೇವಸ್ಥಾನದ ಬಳಿಯಿರುವ ಈ ಶಾಸನವು ಕ್ರಿ.ಶ.೧೦೧೯ರ ಕಾಲಕ್ಕೆ ಸೇರುತ್ತದೆ.

**ಕವಿ ಕಂದರ್ಪ:** ಶಾಸನದ ಫಲಶೃತಿಯನ್ನು ಹೇಳುವಾಗ 'ಶ್ರೀ ಕಂದರ್ಪನ ಕಾವ್ಯಂ' ಎಂದು ಉಲ್ಲೇಖಿಸಿರುವುದರಿಂದ ಈ ಕೃತಿಕಾರನ ಹೆಸರು ಕಂದರ್ಪ ಎಂದು ತಿಳಿದು ಬರುತ್ತದೆ. ಇವನು ಶಾಸನವು ತಿಳಿಸುವ ಕಾಲವಾದ ಕ್ರಿ.ಶ.೧೦೧೯ರಲ್ಲಿ ಇದ್ದವನು. ಇದೇ ಕಾಲದಲ್ಲಿದ್ದ 'ಮನಸಿಜ' ಎಂಬ ಕವಿಯನ್ನು ಶ್ರೀಧರಾಚಾರ, ದುರ್ಗಸಿಂಹ ಮೊದಲಾದ ಕವಿಗಳು ಉಲ್ಲೇಖಿಸಿದ್ದಾರೆ. ಈಶ್ವರಕವಿಯು ತನ್ನ ಕವಿಜಿಹ್ವಾಬಂಧನದಲ್ಲಿ 'ಚಿತ್ತಜ' ಎಂಬ ಕವಿಯೊಬ್ಬನನ್ನು ಹೆಸರಿಸಿರುವುದನ್ನು ಕವಿಚರಿತೆಕಾರರು ಚಿತ್ತಜ, ಮನಸಿಜರಿಬ್ಬರೂ ಒಬ್ಬನೇ ಇರಬಹುದೆಂದು ತಿಳಿಸಿರುವರಲ್ಲದೆ[೩೧] ಕರ್ಣಾಟಕ ಕವಿಚರಿತೆಯ ಮೊದಲನೆಯ ಸಂಪುಟದ ಅನುಬಂಧದಲ್ಲಿ ಕವಿ ಮನಸಿಜನೇ ಕಂದರ್ಪನೆಂಬ ಹೆಸರಿನಿಂದ ಬರೆದಿರಬಹುದೆಂಬ ಅನುಮಾನವನ್ನೂ ವ್ಯಕ್ತಪಡಿಸಿದ್ದಾರೆ.

## ಕದಂಬ ಮಾಳಲದೇವಿ

ಹಾನುಗಲ್ಲು ಕದಂಬ ವಂಶದ ಕೀರ್ತಿವರ್ಮನ ಪಟ್ಟಮಹಾದೇವಿ ಮಾಳಲದೇವಿಯು ಸೊರಬ ತಾಲ್ಲೂಕಿನ ಕುಪ್ಪಟೂರಿನಲ್ಲಿ ಕ್ರಿ.ಶ.೧೦೭೫ರಲ್ಲಿ ಮಕರ ತೋರಣ, ಮಾನಗಂಬಗಳೊಂದಿಗೆ ಪಾರ್ಶ್ವನಾಥ ಚೈತ್ಯಾಲಯ ನಿರ್ಮಿಸಿದ್ದಾಳೆ. ಬ್ರಹ್ಮಜಿನಾಲಯ ಎಂದು ಕರೆಯಲಾದ ಈ ಜಿನಾಲಯದ ಪೂಜಾದಿಗಳಿಗಾಗಿ ಎಡೆನಾಡಿಗೆ ಸೇರಿದ ಸಿಡ್ಡಣಿ ಎಂಬ ಗ್ರಾಮವನ್ನು ತನ್ನ ಪತಿಯಿಂದ ಪಡೆದುಕೊಂಡು ದತ್ತಿಯಾಗಿ ನೀಡಿದ್ದಾಳೆ. ಈ ಕುರಿತಾದ ವಿವರವನ್ನು ತಿಳಿಸಿರುವ ಶಾಸನ ಪದ್ಯವು ಚಂಪೂ ಶೈಲಿಯಲ್ಲಿ ರಚಿತವಾಗಿದೆ. ಶಾಸನವು ಬಹಳಷ್ಟು ತ್ರುಟಿತವಾಗಿದ್ದು ಕೆಲವು ಪದ್ಯಭಾಗಗಳು ನಷ್ಟವಾಗಿವೆ[೩೨].

ಈ ಶಾಸನಪದ್ಯದಲ್ಲಿ ಮಾಳಲದೇವಿಯನ್ನು ಎರಡು ಕಂದಪದ್ಯ ಹಾಗೂ ಎರಡು ವೃತ್ತಗಳಲ್ಲಿ ಕವಿಯು ಬಣ್ಣಿಸಿದ್ದಾನೆ.

ವ ॥ಆ ಕೀರ್ತಿ ದೇವನ ಅಗ್ರಮಮಹಿಷಿ ॥

**ಪರಿವಾರ ಸುರಭಿ ಜಿನಮತ । ಶರಧಿ ಸುಧಾಕಿರಣ ಲೇಖೆ ಸುಚರಿ (ತ) (ದಿವ್ಯಾ)**
**ಭರಣೆಯೆನೆ ನೆಗಳ್ದ ನೃಪ ಸುಂ । ದರಿ ಮಾಳಲ ದೇವಿಯೆಣೆಗೆ ರಾಣಿಯರೆಣೆಯೇ ॥**

**ಪುರು ಜಿನಪತಿ ಕುಲದೈವಮ್**
**ಗುರು ಬೆಟ್ಟದ . . . . ಮುನಿ ಕೀರ್ತಿ ನೃಪೇ**
**ಶ್ವರನಾತ್ಮ ಕಾಂತನೆನೆ ಬಾ**
**ಪ್ಪುರೆ ಮಾಳಲ ದೇವಿ ರಾಣಿಯೆಣೆ ಯಾರ್ಸ್ವತಿಯರ್ ॥**

ಬಂಧು–ಬಾಂಧವರಿಗೆ ನಚ್ಚಿನ ಜನತೆಗೆ ಕಾಮಧೇನುವಿನಂತಿರುವ, ಉತ್ತಮ ಚರಿತ್ರೆಯೂ ದಿವ್ಯಾಭರಣೆಯೂ, ಸೌಂದರ್ಯವತಿಯೂ ಆದ ರಾಜಮನೆತನದ ಮಾಳಲದೇವಿಗೆ ಮತ್ಯಾವ ರಾಣಿಯರೂ ಸಾಟಿ ಇರಲು ಸಾಧ್ಯವಿಲ್ಲವೆಂದು ಬಣ್ಣಿಸಿರುವ ಕವಿಯು ರಾಜಮನೆತನದ ಪರಮ ಜಿನನು ಕುಲದೈವವಾಗಿರಲು, ಜೊತೆಗೆ ಶ್ರೇಷ್ಠರಾದ ಗುರು, ಕೀರ್ತಿಪಡೆದ ನೃಪನನ್ನು ಪತಿಯನ್ನಾಗಿ ಪಡೆದ ಮಾಳಲದೇವಿಗೆ ಯಾರು ಸಮಾನರು ಎಂದಿದ್ದಾನೆ. ಅಲ್ಲದೆ ಇವಳನ್ನು ಪರಿವಾರ ಸುರಭಿ ಎಂದು ಕರೆದು ರಾಜಮನೆತನದ ಈಕೆಯು ಗುಣವನ್ನು ತಿಳಿಸಿದ್ದಾನೆ.

**ಸಿರಿ ಗಿರಿಜಾತೆ ಸೀತೆ ರತಿ ಭಾ(ರತಿ) ರುಕ್ಮಿಣಿ ದೇವಿ ರೂಪ ಸೌಂ**
**ದರತೆಗೆ ಪೆರ್ಮೆ ಗುಧ್ಧ . . ತಕ್ಕಧಿಕಂ ಸೊಬಗಿಂಗೆ ಸತ್ಕಳಾ**
**ಕರತೆಗಣಮ್ ಜಿನೇಂದ್ರ ಪದಭಕ್ತಿಗೆ ಪಾಸ ಟಿವ . . . .**
**ಸರಿ ಕಲಿ ಕೀರ್ತಿದೇವನ ಕುಲಾಂಗನೆ ಮಾಳಲದೇವಿ ರಾಣಿಯೊಳ್ ॥**

ಲಕ್ಷ್ಮಿ, ಪಾರ್ವತಿ, ಸೀತೆ, ರತಿ, ಭಾರತಿ, ರುಕ್ಮಿಣಿದೇವಿಯರ ರೂಪ, ಸೌಂದರ್ಯ, ಔನ್ನತ್ಯವನ್ನು ಹೊಂದಿರುವುದಲ್ಲದೆ ಸತ್ಕಳಾವಲ್ಲಭೆಯೂ ಆಗಿರುವ ಕೀರ್ತಿದೇವನ ರಾಣಿ ಮಾಳಲದೇವಿಯು ಜಿನಪದಭಕ್ತೆ ಯಾಗಿರುವುದನ್ನು ಈ ಚಂಪಕಮಾಲಾ ವೃತ್ತದಲ್ಲಿ ಕವಿಯು ಬಣ್ಣಿಸಿದ್ದಾನೆ.

**ಮಿಳಿರ್ವ ಪತಾಕೆಗಳ್ ಮಕರ ತೋರಣ ಮಂಡಲಿ ಮಾನಗಂಭ (ಮ)ಂ ಅ**
**ಗ್ಗಳಿಸಿರೆ . . . . . ದ ಚೈತ್ಯ ಗೃಹಾವಳಿ ಲೆಕ್ಕಿಪಂಗೆ ಸಂ**
**ಗಳಿಪಡೆ ಲಕ್ಕೆಗಂ ಮಿಗಿಲಶೇಷ ಜನಮ್ ತಣಿವಂತು ಕೊಳ್ವ ಪೂ**
**ಮಳೆಯೊಳೆ ನೋಂಪ ನೋಂಪಿ ಶತಕೋಟಿಯೆ ಮಾಳ ಲ(ದೇವಿ) . . ಯಾ ॥**

ಮಾಳಲಾದೇವಿಯು ನಿರ್ಮಿಸಿರುವ ಚೈತ್ಯಾಲಯವು ಹಾರಾಡುವ ಪತಾಕೆಗಳು – ಮಕರತೋರಣಗಳಿಂದ ಆಲಂಕೃತಗೊಂಡು, ಮುಂಭಾಗದಲ್ಲಿ ಮಾನಸ್ಥಂಭವನ್ನು ಹೊಂದಿದ್ದು, ಎಲ್ಲರಿಂದಲೂ ಮೆಚ್ಚುಗೆ ಗಳಿಸಿದೆ ಎಂಬ ವಿವರಣೆ ನೀಡುವ ಕವಿಯು ಈ ಜಿನಾಲಯದ ವಿಸ್ತೀರ್ಣವನ್ನು ಕುರಿತು ಒಮ್ಮೆಲೆ ಲಕ್ಷಕ್ಕೂ ಅಧಿಕ ಸಂಖ್ಯೆಯಲ್ಲಿ ಜನರಿಗೆ ಆಶ್ರಯ ನೀಡುವಷ್ಟು ಹಿರಿದಾಗಿದೆ ಎಂದು ಬಣ್ಣಿಸಿದ್ದಾನೆ. ಸಾಮಾನ್ಯ ಮಾನವರಿಗೆ ನಿರ್ಮಿಸಲು ಅಸಾಧ್ಯವಾದುದನ್ನು ಮಾಳಲದೇವಿ ಸಾಧಿಸಿದ್ದಾಳೆ ಎಂಬುದನ್ನು, ಮಾಳಲದೇವಿಯು ಶತಕೋಟಿ ಪುಷ್ಪಗಳಿಂದ ವ್ರತವನ್ನು ಮಾಡಿ ಇಂತಹ ಜಿನಾಲಯವನ್ನು ಕಟ್ಟಿಸಿದ್ದಾಳೆ ಎಂಬ ಉದ್ಗಾರವನ್ನು ತೆಗೆದಿದ್ದಾನೆ. ಕವಿಯು, ಹಾನುಗಲ್ಲು ಕದಂಬರ ಶೌರ್ಯಗುಣ, ಮಾಳಲದೇವಿಯ ಪತಿಯ ಸಾಹಸಗಳನ್ನು ಬಣ್ಣಿಸಿ, ಸುಂದರವಾದ ನಗರ ಬಣ್ಣನೆಯನ್ನು ಮಾಡಿದ್ದಾನೆ. ನಗರವರ್ಣನೆ ಕುರಿತಾದ ಒಂದು ಪದ್ಯ ಈ ಪ್ರಕಾರವಾಗಿದೆ.

**ಬೆಳೆದ ಸುಗಂಧಿಶಾಲಿವನದಿಂದೊಳಗೊಪ್ಪುವ ನಾರಿಕೇಳ ಕಾ**
**ದಳ ನವಪೂಗ ನಾಗಲತಿಕಾವನದಿಂ ಪಸರಿಪ ಪರಿಮಳದಿಂ**
**ವಳಯಿತಮಾಗಿ ವಿಪ್ರ ಸುರ ಚಿತ್ರನಿಕೇತನಮಾಲೆಯಿಂದೆ ಕ**
**ಣ್ಗೊಗ್ಗಿಪುದು ಕಪ್ಪಟೂರ್ ಸಕಳವಿದ್ಯೆಗೆ ತಾನೆನೆ ಜನ್ಮಭೂತಳಂ ॥**

ಕಣ್ಣೊಳಿಸುವ ಕುಪ್ಪಟೂರಿನ ಸುಂದರ ನೋಟದ ವರ್ಣನೆ ನೀಡಿರುವ ಕವಿಯು ಅಲ್ಲಿನ ವನ, ವನದಲ್ಲಿನ ಫಲಭರಿತ ಗಿಡ–ಮರಗಳು, ಅವುಗಳ ಪರಿಮಳ, ಸಕಲವಿದ್ಯಾ ಪಾರಂಗತರಾದ ಅಲ್ಲಿನ ಜನ ಎಲ್ಲವನ್ನೂ ಕವಿಯು ಈ ಒಂದು ವೃತ್ತದಲ್ಲಿ ತಿಳಿಸಿದ್ದಾನೆ.

**ಕವಿ ಬಮ್ಮರ ಹರಿಯಣ್ಣ:** ಕವಿಯು ಈ ಶಾಸನದ ಕಡೆಯಲ್ಲಿ **"**ಬಮ್ಮರ ಹರಿಯಣ್ಣ ಹೇಟ್ದಿ ಶಾಸನ**"** ನೆಂದು ತನ್ನನ್ನು ಹೆಸರಿಸಿಕೊಂಡಿದ್ದಾನೆ. ಗದ್ಯ ಪದ್ಯ ಸಂಮಿಶ್ರವಾದ ಚಂಪೂ ಪ್ರಕಾರದಲ್ಲಿ ನಿರೂಪಣೆ ನೀಡಿರುವ ಈ ಶಾಸನದಲ್ಲಿ ಕಂದ ಪದ್ಯ, ಉತ್ಪಲಮಾಲೆ, ಮತ್ತೇಭವಿಕ್ರೀಡಿತ, ಚಂಪಕಮಾಲೆ, ಶಾರ್ದೂಲವಿಕ್ರೀಡಿತ, ಇಂದ್ರವಜ್ರ ಹಾಗೂ ಶಾಲಿನೀ ವೃತ್ತಗಳೊಂದಿಗೆ ಸಂಸ್ಕೃತ ಶ್ಲೋಕಗಳನ್ನೂ ಸೇರಿಸಿ ಕವಿಯು ತನ್ನ ಉಭಯಭಾಷಾ ಪಾಂಡಿತ್ಯ ತೋರಿದ್ದಾನೆ. ಈ ಶಾಸನದಲ್ಲಿ ಬರುವ ಕುಪ್ಪಟೂರಿನ ವರ್ಣನೆಯು ಮುಂದಿನ ಕೆಲವು ಕನ್ನಡ ಕಾವ್ಯಗಳಲ್ಲಿನ ನಗರ ವರ್ಣನೆಯ ಪದ್ಯಗಳಿಗೆ ಪ್ರೇರಣೆಯನ್ನೊದಗಿಸಿದೆ.

## ಚಾಲುಕ್ಯ ಜಾಕಲದೇವಿ

ಚಾಲುಕ್ಯ ಅರಸಿ ಜಾಕಲದೇವಿಯು ಅಜಿಲ್ ಮುನ್ನೂರರೊಳಗಿನ ಇಂಗುಣಿಗೆಯಲ್ಲಿ ಆಳ್ವಿಕೆ ನಡೆಸುತ್ತಿದ್ದಳು. ಅರಸಿಯು ಕ್ರಿ.ಶ.೧೦೯೪ರಲ್ಲಿ ಇಂಗಳಿಗೆಯಲ್ಲಿ ಬಸದಿಯನ್ನು ನಿರ್ಮಿಸಿದ ವಿಷಯವನ್ನು ಚಂಪೂ ಶೈಲಿಯ ಶಾಸನ ಪದ್ಯವೊಂದು ನಿರೂಪಿಸಿದೆ[೩೩].

ಕಲುಬುರ್ಗಿ ಜಿಲ್ಲೆಯ ವಾಡಿ ಬಳಿಯ ಇಂಗಳಗಿಯಲ್ಲಿ ಜಾಕಲದೇವಿಯಿಂದ ನಿರ್ಮಿತವಾದ ಜಿನಾಲಯವು ಇಂದಿಗೆ ನಾಶವಾಗಿದ್ದರೂ, ಸುಸ್ಥಿತಿಯಲ್ಲಿರುವ ಇವಳು ಹಾಕಿಸಿದ ಶಾಸನವು ಜಾಕಲದೇವಿಯ ಧರ್ಮ ಕಾರ್ಯಗಳನ್ನೂ, ಗುಣವಿಶೇಷಗಳನ್ನು ಬಣ್ಣಿಸಿದೆ[೩೪].

ಸಾಧಾರಣವಾಗಿ ಚಕ್ರವರ್ತಿಗಳ, ಮಹಾರಾಜರ ಶಾಸನಗಳಲ್ಲಿ ಅವರ ಜಯ ಪ್ರಶಸ್ತಿಯನ್ನು ಹಾಡಿ ಹೊಗಳುವುದನ್ನು ಕಾಣುತ್ತೇವೆ. ಅದೇ ಧಾಟಿಯಲ್ಲಿ ಈ ಶಾಸನ ಕವಿಯು ಜಾಕಲದೇವಿಯ ಪ್ರಶಸ್ತಿಯನ್ನು ರಚಿಸಿರುವುದು ಈ ಶಾಸನದ ವಿಶೇಷವಾಗಿದೆ. ಜಾಕಲದೇವಿಯನ್ನು – **ಸಮಸ್ತಾನ್ತಃಪುರ ನಿತಂಬಿನೀ, ಕದಂಬಚೂಡಾಮಣಿ, ಚತುರ್ವ್ವಿಧದಾನ ಚಿನ್ತಾಮಣಿ, ರಂಭಾವಿಳಾಸೋಪಹಸಿತಸನ್ಮೂರ್ತ್ತಿ, ದಿಗ್ವಿಜಯವಿಳಸಿತೋಜ್ಜವಳಕೀರ್ತಿ, ಕಲಿಕಾಲಪಾರ್ವ್ವತಿ, ಅಭಿನವಸರಸ್ವತಿ, ರಾಯಚೇತೋವಶೀಕರಣ, ವಿದ್ಯಾಧರಿ, ಸಕಳಕಳಾಧರಿ, ಸೀತಾದ್ಯನೇಕ ಮಹಾಸತೀಜನ ಪತಿಬ್ರತಾಚಾರ ಶೀಳೋದಾರ ವರ್ಣನಕಥಾಪ್ರಸಂಗ, ಜಿನಗನ್ಧೋದಕ ಪವಿತ್ರೀಕೃತೋತ್ತಮಾಂಗೆ, ಶ್ರೀಮದರ್ಹತ್ ಪರಮೇಶ್ವರ ಚಾರುಚರಣಾರ್ಚ್ಚನವಿನೋದೆ, ಮೃಗಮದಾಮೋದೆ, ಸಹಜಬೆಡಂಗಿ, ತಿಕ್ಕಣನಣುಂಗಿ, ಶ್ರೀಮತ್ರಿಭುವನಮಲ್ಲದೇವ ವಿಶಾಳವಕ್ಷಸ್ಥಳ ನಿವಾಸಿನಿಯರಪ್ಪ ಶ್ರೀಮಜ್ಜಾಕಳದೇವಿಯರ್ ಅಜಿಲ್ಮೂನೂಱಱ್ಱೋಳಗಣಿಂಗಣಿಗೆಯಂ ತ್ರಿಭೋಗಾಭ್ಯನ್ತರ ಸಿದ್ಧಿಯಿಂದಾಳುತ್ತಮಿರೆ** ಎಂದು ಕವಿಯು ಬಣ್ಣಿಸಿದ್ದಾನೆ.

ಅರಸಿ ಜಾಕಳದೇವಿಯ ಸೌಂದರ್ಯ, ಸ್ಫೂರ್ತಿಯುತ ಹಸನ್ಮುಖ, ರಾಜಮನೆತನಕ್ಕೆ ತಕ್ಕುದಾದ ತೇಜಸ್ಸು, ವಿದ್ಯಾಸಂಪನ್ನೆಯಾಗಿ ಪಡೆದ ಅಭಿನವ ಸರಸ್ವತಿ, ವಿದ್ಯಾಧರಿ, ಸಕಳಕಳಾಧರಿ ಎಂಬ ಮೊದಲಾದ ಬಿರುದು, ಶಕ್ತಿಗೆ ಹೆಸರಾದ ಪಾರ್ವತಿ, ವಿದ್ಯೆಗೆ ಅಧಿದೇವತೆಯಾದ ಸರಸ್ವತಿಯನ್ನು ಹೋಲಿಸಿರುವುದಲ್ಲದೆ ಇವಳ ಪತಿವ್ರತಾಗುಣವನ್ನು ಬಣ್ಣಿಸುತ್ತಾ, ಸೀತೆ ಮೊದಲಾದ ಅನೇಕ ಮಹಾಸತೀಜನರ ಪತಿವ್ರತಾಚಾರವನ್ನು ಪಾಲಿಸಿ **'**ಶೀಳೋದಾರವರ್ಣನ ಕಥಾಪ್ರಸಂಗ**'**ಕ್ಕೆ ಕಾರಣಳಾದವಳು ಎನ್ನುತ್ತಾ ಕವಿಯು ಜಾಕಲೆಯು ಮಾಡಿದ ಯಾವುದೋ ವ್ರತದ ಘಟನೆಯನ್ನು ಸೂಚ್ಯವಾಗಿ ತಿಳಿಸಿದ್ದಾನೆ. ಬಹುಶಃ ಇವಳು ಮಾಡಿದ ಯಾವುದೋ ವ್ರತವು ಸಾರ್ವಜನಿಕರಿಂದ ಹೊಗಳಲ್ಪಟ್ಟಿರಬಹುದು. ಈ ಗುಣಗಳೊಂದಿಗೆ ಕವಿಯು ಇವಳ ದಾನಗುಣ, ಜಿನಭಕ್ತಿಗಳನ್ನು ಕುರಿತು ಬಣ್ಣಿಸಿದ್ದಾನೆ. ಅರಸಿ ಜಾಕಲಾದೇವಿಯ ರೂಪ, ಗುಣ ಸ್ವಭಾವಗಳೊಂದಿಗೆ ಕದಂಬಚೂಡಾಮಣಿ,

ತಿಕ್ಕಣನಣುಗಿ ಎಂದು ಕರೆದು ಜಾಕಲದೇವಿಯು ಕದಂಬ ಕುಲಕ್ಕೆ ಸೇರಿದ ತಿಕ್ಕಣನೆಂಬುವವನ ಮಗಳೆನ್ನುವುದನ್ನೂ ಕವಿ ಉಲ್ಲೇಖಿಸಿದ್ದಾನೆ.

ರಾಜ್ಯ ಪರಿಪಾಲಿಸುವಲ್ಲಿ ಜಾಕಲೆಯ ಮಹತ್ವವನ್ನು ಕುರಿತು "..ಜಿನಶಾಸನ ಪರಿಪಾಳನಸಮಯದೊಳ್ ಶಾಸನ ಲಕ್ಷ್ಮಿಯುಂ ಚಾಳುಕ್ಯ ಚಕ್ರೇಶ್ವರನ ದಿಗ್ವಿಜಯ ಸಮಯದೊಳ್ ಕೀರ್ತಿಲಕ್ಷ್ಮಿಯುಂ ಮದವದರಿರಾಯ ಮದ ಮರ್ಧನ ಸಮಯದೊಳ್ ವಿಜಯ ಲಕ್ಷ್ಮಿಯುಂ ಎನಿಸಿ ನೆಗರ್ತೆಗಂ ಪೊಗರ್ತೆಗಂ ನೆಲೆಯಾಗಿ ವರ್ತಿಸುತ್ತಂ.." ಎನ್ನುತ್ತಾ ಜಿನವ್ರತವನ್ನು ಪಾಲಿಸುವಾಗ ಶಾಸನ ಲಕ್ಷ್ಮಿಯಂತೆಯೂ, ಪತಿಯ ದಿಗ್ವಿಜಯ ಸಮಯದಲ್ಲಿ ಕೀರ್ತಿಲಕ್ಷ್ಮಿಯಂತೆಯೂ, ಶತ್ರುಗಳ ಮದವನ್ನು ಭಂಜಿಸುವ ಸಮಯದಲ್ಲಿ ವಿಜಯ ಲಕ್ಷ್ಮಿಯೂಎನಿಸಿ ಸದಾ ಸಂಭ್ರಮ, ಉತ್ಸಾಹದಿಂದಿರುವ ಇವಳ ಗುಣವನ್ನು ಇಲ್ಲಿ ತಿಳಿಸಲಾಗಿದೆ.

ಕವಿಯು, ಈ ಕೆಳಗಿನ ಪದ್ಯದಲ್ಲಿ ಜಾಕಲದೇವಿಯನ್ನು ಸೀತೆಯಂತೆ ಸುಚರಿತೆ, ಪಾರ್ವತಿಯಂತೆ ಪತಿಯ ಅರ್ಧಾಂಗಿಯಾಗಿ, ಭೂದೇವಿಯ ಕ್ಷಮಾಗುಣ, ರಂಭೆಯ ಸೌಂದರ್ಯ, ಕಾಮಧೇನುವಿನ ದಾನಗುಣಗಳನ್ನು ಹೊಂದಿರುವ ಜಾಕಲದೇವಿಯು ಕಾಮನ ಬಾಣ ಭೂಮಿಯಲ್ಲಿ ಹುಟ್ಟಿಬಂದ ಹಾಗಿದ್ದಾಳೆ ಎಂದು ಬಣ್ಣಿಸಿದ್ದಾನೆ.

**ಜನಕಜೆಯಂತೆ ಸಜ್ಜನಜನಸ್ತುತೆ ಪಾರ್ವ್ವತಿಯಂತೆ ಜೀವಿತೇ**
**ಶನೊಳವಿಕಳ್ಪಭಾವೆ ಧರೆಯಂತೆ ಧೃತಕ್ಷಮೆ ರಂಭೆಯಂತೆ ರೂ**
**ಪಿನ ನೆಲೆ ಪೆಂಪುವೆತ್ತಮರ ಧೇನುವಿನಂತನಿಮಿತ್ತ ದಾನಿ ಕಾ**
**ಮನಸರಲಂತಿರೈಯ್ದೆ ಪರಿಭಾವಿಸೆ ಜಾಕಲದೇವಿ ಧಾತ್ರಿಯೊಳ್ ॥**

ಮುಂದಿನ ಪದ್ಯದಲ್ಲಿ ಕವಿಯು, ಅರಸಿಗೆ ಸಂಬಂಧಿಸಿದ ಎರಡು ಪ್ರಸಂಗಗಳನ್ನು ತಿಳಿಸಿದ್ದಾನೆ.

**ಬ್ರತಮಂ ಚಾಳುಕ್ಯ ಕ್ಷಿತಿ**
**ಪತಿ ಕಿಡಿಸುವೆನೆಂದು ಪೂಣ್ದಡಂ ಕಿಡಿಸದಡಂ**
**ಪ್ರತಿಪಾಳಿಸಿದೊಂದು ಮಹೋ**
**ನ್ನತಿ ಜಾಕಲದೇವಿಗೆಕ್ಕ ಲಾವಣಮಲ್ತೆ ॥**

ಜಾಕಲದೇವಿಯು ಆಚರಿಸುತ್ತಿರುವ ವ್ರತವನ್ನು ಭಂಗಪಡಿಸುವೆನೆಂದು ಪಣತೊಟ್ಟ ಚಕ್ರವರ್ತಿಯು ಹಾಗೆ ಮಾಡಲಾರದೆ ಸೋತನೆಂಬ ಸ್ವಾರಸ್ಯಕರವಾದ ಪ್ರಸಂಗವನ್ನು ಬಣ್ಣಿಸುತ್ತಾ ಅರಸಿಯ ದೃಢತೆಯನ್ನು ಕುರಿತು ತಿಳಿಸಿದ್ದಾನೆ. ಕವಿಯು ತಿಳಿಸಿರುವ ಮತ್ತೊಂದು ಪ್ರಸಂಗವೆಂದರೆ:– ಒಮ್ಮೆ ಓಲಗದಲ್ಲಿದ್ದ ಇವಳ ಪತಿ ವಿಕ್ರಮಾದಿತ್ಯನಿಗೆ, ಶ್ರೇಷ್ಠಿಯೊಬ್ಬ ಒಂದು ಸುಂದರ ಜಿನಪ್ರತಿಮೆಯನ್ನು ತಂದು ಕೊಡುತ್ತಾನೆ. ಆ ಸುಂದರ ಪ್ರತಿಮೆಯನ್ನು ಜಿನಧರ್ಮಪಾರಾಯಣೆಯಾದ ತನ್ನ ಮೆಚ್ಚಿನ ರಾಣಿ ಜಾಕಲೆಗೆ 'ನಿನ್ನಾಳಿಕೆಯ ಊರೊಳಗೆ ಪ್ರತಿಷ್ಠಿಸು' ಎಂದು ಹೇಳುತ್ತಾನೆ. ಈ ಎರಡೂ ಪ್ರಸಂಗಗಳನ್ನು ಪೂರಕವಾಗಿ ನೋಡುವುದಾದರೆ ಜಿನವ್ರತವನ್ನು ಭಂಗಪಡಿಸಲಾಗದ ದೊರೆಯು ತನಗೆ ದೊರಕಿದ ರತ್ನಖಚಿತವಾದ ಜಿನಬಿಂಬವನ್ನು ರಾಣಿಗೆ ಕೊಟ್ಟು ಅದನ್ನು ಅವಳ ಆಳ್ವಿಕೆಯ ಊರಿನಲ್ಲಿಯೇ ಪ್ರತಿಷ್ಠಾಪಿಸಲು ತಿಳಿಸಿದ್ದು, ಅವಳ ಗೆಲುವಿಗೆ ನೀಡಿದ ಬಹುಮಾನ ದಂತೆಯೂ, ಜಿನವ್ರತಾನಿಷ್ಠೆಯಾದ ಜಾಕಲೆಗೆ ಚೈತ್ಯಾಲಯವನ್ನು ನಿರ್ಮಿಸಲು ನೀಡಿದ ಸವಾಲಿನಂತೆಯೂ ತೋರುವುದು. ಅದನ್ನು ವಿಜೃಂಭಣೆಯಿಂದ ನೆರವೇರಿಸಿದ ಜಾಕಲೆಗೆ, ಆ ಜಿನಬಿಂಬದ ಪ್ರತಿಷ್ಠಾಪನಾ ವಿಚಾರವನ್ನು ದಾಖಲಿಸುವುದೇ ಪ್ರಸ್ತುತ ಶಾಸನವನ್ನು ಹಾಕಿಸಲು ಮುಖ್ಯ ಕಾರಣವಾಗಿದೆ.

**ಜಿನಬಿಂಬಂ ಪ್ರತಿಬಿಂಬಮಿಲ್ಲೆನಿಪ ಚೆಲ್ವಂ ತಾಳ್ದಿತೀದೇಯ್ವಮಂ। ನಿನಗೆಂತುಂ ಕುಲದೆಯ್ವಮೀ ಪ್ರತಿಮೆಯಂ ನಿಂನಾಳ್ಕೆಯೂರೊಳ್ಬಿನೇ**
**ಯನಿಕಾಯಂ ಬಗೆಗೊಳ್ವಿನಂ ನಿಲಿಸೆನಲ್ಚಾಳುಕ್ಯ ಚಕ್ರೇಶ ಶಾ । ಸನದಿಂ ತಜ್ಜಿನಬಿಂಬಮಂ ನಿಲಿಸಿದಳ್ತಂನೊಳ್ಪು ನಿಲ್ವನ್ನೆಗಂ॥**

ಅರಸಿ ಜಾಕಲೆಯ ಕುಲದೈವವಾದ ಆ ಅಪ್ರತಿಮ ಬಿಂಬವೆನಿಸಿದ ಜಿನವಿಗ್ರಹವನ್ನು, 'ನೀನು ಆಳುವ ಊರಿನಲ್ಲಿಯೇ ಸಜ್ಜನರ ಸಂಘವು ಮೆಚ್ಚುವಂತೆ ಪ್ರತಿಷ್ಠಾಪಿಸು' ಎಂದ ದೊರೆಯ ವಾಕ್ಯಕ್ಕೆ ಪ್ರತಿಯಾಗಿ ತನ್ನ ಕೀರ್ತಿ ಶಾಶ್ವತವಾಗಿ ನಿಲ್ಲುವಂತೆ ಜಿನಬಿಂಬವನ್ನು ನಿಲ್ಲಿಸಿದಳು (ಪ್ರತಿಷ್ಠಾಪಿಸಿದಳು) ಎಂಬ ಈ ವಿಚಾರವನ್ನು ಕವಿಯು ಈ ಮೇಲಿನ ಪದ್ಯದಲ್ಲಿ ತಿಳಿಸಿದ್ದಾನೆ.

**ಎಸೆವಿನೆಗಂ ಸಮನ್ತು ಮಹುಮಾಣಿಜಿನೇಶ್ವರ ಬಿಂಬಮಂ ಪ್ರತಿ**
**ಷ್ಠಿಸಿದೆನಿದತ್ಯಪೂರ್ವ್ವಮೆನೆ ತಜ್ಜಿನಗೇಹಮನರ್ತ್ತಿಯಿಂದೆ ಮಾ**
**ಡಿಸಿದೆನದಕ್ಕೆ ತಕ್ಕ ತಳವೃತ್ತಿಯುಮಂ ಸಮಕಟ್ಟಿದೆಂ ಪ್ರಸಾ**
**ದಿಸಿ ಮನಮೊಲ್ದು ಕಯ್ಕೊಳುವುದೂರ್ಜ್ಜಿತಮಾಗಿರೆ ಮಾಳ್ಪುದಿಂತಿದಂ ॥**

ಕವಿಯು ಅರಸಿಯ ಬಿನ್ನಪದ ಹಾಗೂ ಆಣತಿಯ ನುಡಿಗಳನ್ನು ನೇರವಾಗಿ ಪದ್ಯರೂಪದಲ್ಲಿ ತಿಳಿಸಿದ್ದಾನೆ. ಜಾಕಲದೇವಿಯು, ತನ್ನ ನಾಡಿಗೇ ಶೋಭೆಯೆನಿಸುವಂತಹ ಜಿನಾಲಯವನ್ನು ನಿರ್ಮಿಸಿ, ಅದಕ್ಕೆ ತಳವೃತ್ತಿಯನ್ನು ವ್ಯವಸ್ಥೆ ಮಾಡಿ, ಅದನ್ನು ತನ್ನ ಗುರುಗಳಾದ ಇಂದ್ರಸೇನ ಭಟ್ಟಾರಕರ್ಗೆ ನೀಡಿದ್ದಾಳೆ. ಇವಳು ದತ್ತಿಯಾಗಿ ನೀಡಿದ ಭೂಮಿಯ ವಿವರಣೆಯನ್ನು ವಿವರವಾಗಿ ಗದ್ಯದಲ್ಲಿ ನೀಡಲಾಗಿದೆ.

**ಕವಿ ನಾಗಾರ್ಜುನ:** ಈ ಶಾಸನ ಪದ್ಯದ ಕಡೆಯ ಸಾಲಿನ, 'ವಾಗ್ವಧೂನನ್ದನಂ ಜಿನಪಾದಾಂಭೋಜಭೃಂಗಂ ನಾಗಾರ್ಜುನಪಣ್ಡಿತಂ ಬರೆದಂ' ಎಂಬ ಒಂದೇ ಸಾಲಿನಲ್ಲಿ ಕವಿ ತನ್ನ ಹೆಸರನ್ನು ಮಾತ್ರ ತಿಳಿಸಿದ್ದಾನೆ. ಇದರಿಂದ ಈ ಶಾಸನವನ್ನು ಬರೆದಿರುವ ಕವಿಯ ಹೆಸರು ನಾಗಾರ್ಜುನ ಪಂಡಿತ ನೆಂದೂ, ಈತನಿಗೆ 'ವಾಗ್ವಧೂನಂದನ' ಎಂಬ ಬಿರುದು ಇತ್ತೆಂಬುದೂ ತಿಳಿದು ಬರುತ್ತದೆ. ಕವಿಗೆ ಈ ಬಿರುದು ರಾಜಾಶ್ರಯದಲ್ಲಿ ದೊರಕಿರಬಹುದು. ಆದರೆ ಈತ ರಚಿಸಿರುವ ಮತ್ತಾವ ಕಾವ್ಯವೂ ದೊರೆತಿಲ್ಲ.

ಕ್ರಿ.ಶ.೧೧೨೫ರಲ್ಲಿ ರಚಿತವಾಗಿರುವ ಮತ್ತೊಂದು ಶಾಸನದಲ್ಲಿ[೩೪] ನಾಗಾರ್ಜುನ ಪಂಡಿತ ವಿರಚಿತವೆಂಬ ಉಲ್ಲೇಖವಿರುವುದನ್ನು ಗುರುತಿಸಿರುವ ಕವಿಚರಿತೆಕಾರರು ಈ ಎರಡೂ ಶಾಸನಗಳು ಏಕವ್ಯಕ್ತಿ ಕೃತವೆಂದು ಅಭಿಪ್ರಾಯ ಪಡುತ್ತಾರಾದರೂ[೩೫] ಆ ಶಾಸನದಲ್ಲಿ 'ವಾಗ್ವಧೂನಂದನ'ಎಂಬ ತನ್ನ ಬಿರುದನ್ನು ತಿಳಿಸಿಲ್ಲವಾದ್ದರಿಂದ ಇದೇ ಹೆಸರಿನ ಬೇರೊಬ್ಬ ಕವಿ ಇರಬಹುದೋ, ಎಂಬ ಅನುಮಾನವನ್ನೂ ವ್ಯಕ್ತಪಡಿಸಿದ್ದಾರೆ.

**ರಾಣಿ ಶಾಂತಲಾದೇವಿ**

ಹೊಯ್ಸಳ ರಾಜವಂಶದ ಪ್ರಸಿದ್ಧ ಅರಸಿ ಶಾಂತಲದೇವಿಯ ವಿಚಾರ ಹಲವಾರು ಶಾಸನಗಳಲ್ಲಿ ಉಕ್ತವಾಗಿದೆ. ಶಾಂತಲೆಯು ಬಸದಿ, ದೇವಾಲಯಗಳನ್ನು ನಿರ್ಮಿಸಿರುವುದಲ್ಲದೆ ತನ್ನ ಹೆಸರಿನ ಶಾಂತಿಗ್ರಾಮವನ್ನೂ ನಿರ್ಮಿಸಿದ್ದಾಳೆ. ಈ ವಿಚಾರಗಳನ್ನು ತಿಳಿಸುವ ಶಾಸನಗಳು ಶಾಂತಲೆಯ ಬಣ್ಣನೆಯನ್ನು ನೀಡುತ್ತವೆ.

**ಧುರದೊಳ್ ವಿಷ್ಣುನೃಪಾಳಕಂಗೆ ವಿಜಯಶ್ರೀವಕ್ಷದೊಳ್ ಸಂತತಂ**
**ಪರಮಾನಂದದಿನೋತು ನಿಲ್ವ ವಿಪುಳಶ್ರೀ ತೇಜದುದ್ದಾನಿಯಂ**
**ವರದಿಗ್ಭಿತ್ತಿಯನೆಯ್ದಿಸಲ್ನೞ್ವ ಕೀರ್ತಿಶ್ರೀಯೆನುತ್ತಿರ್ಪುದೀ**
**ಧರೆಯೊಳ್ ಶಾಂತಲದೇವಿಯಂ ನೆಱೆಯೆ ಬಣ್ಣಿಪ್ಪಾತನೇವಣ್ಣಿಪಂ॥**[೩೬]

ಚಂಪೂ ಶೈಲಿಯಲ್ಲಿ ರಚಿತವಾಗಿರುವ ಶ್ರವಣಬೆಳಗೊಳದ ಕ್ರಿ.ಶ.೧೧೨೩ರ ಶಾಸನವು, ಶಾಂತಲದೇವಿಯು ಶ್ರವಣ ಬೆಳಗೊಳದಲ್ಲಿ ಸವತಿಗಂಧವಾರಣ ಬಸ್ತಿಯನ್ನು ಕಟ್ಟಿಸಿ, ನಿತ್ಯ ಪೂಜೆಗೋಸ್ಕರ ಒಂದು ಹಳ್ಳಿಯನ್ನೇ ದತ್ತಿಯಾಗಿ ಬಿಟ್ಟುಕೊಟ್ಟಳೆಂಬ ವಿಚಾರವನ್ನೊಳಗೊಂಡಿದೆ. ಈ ಶಾಸನದಲ್ಲಿರುವ ಮೇಲಿನ ಪದ್ಯವು, ಶಾಂತಲೆಯು ಯುದ್ಧದಲ್ಲಿ

ವಿಜಯಲಕ್ಷ್ಮಿ, ಕೀರ್ತಿಲಕ್ಷ್ಮಿಯಾಗಿ, ವಿಷ್ಣುವರ್ಧನನ ಎಲ್ಲ ಯಶಸ್ಸಿಗೂ ಕಾರಣಳಾದವಳು ಎಂದು ಬಣ್ಣಿಸಿದೆ. ಮತ್ತೇಭವಿಕ್ರೀಡಿತ ವೃತ್ತದಲ್ಲಿ ರಚಿತವಾಗಿರುವ ಮತ್ತೊಂದು ಪದ್ಯವು ಅರಸಿಯನ್ನು ಖಡ್ಗದೇವತೆ, ಭೂಮಿದೇವತೆ, ಪುಣ್ಯದೇವತೆ, ವಾಗ್ದೇವತೆ, ಮಂತ್ರದೇವತೆ ಎಂದು ಈ ಪ್ರಕಾರವಾಗಿ ಬಣ್ಣಿಸಿದೆ.

**ಸತತಂ ನೋಟಕ್ಕೊಡೆ ಲಕ್ಷ್ಮಿ ದೇವತೆ ರಣವ್ಯಾಪಾರದೊಳ್ ಖಡ್ಗದೇ**
**ವತೆ ಬಿಣ್ಪಿಂದಮೆ ಭೂಮಿದೇವತೆ ಜನಕ್ಕೆಲ್ಲಂದದಿಂ ಪುಣ್ಯದೇ**
**ವತೆ ವಾಗ್ದೇವತೆ ವಿದ್ಯೆಯೊಳ್ ಸಕಲಕಾರ್ಯೋದ್ಯೋಗದೊಳ್ ಮಂತ್ರದೇ**
**ವತೆ ನಾಥಂಗೆನೆ ಶಾಂತಿದೇವಿಯನದಿನ್ನೇವಣ್ಣಿಪಂ ಬಣ್ಣಿಪಂ॥**

ಅರಸಿ ಶಾಂತಲೆಯ ದಾನ ಗುಣವನ್ನು ಶಾಸನಕವಿಯು ಕಂದ ಪದ್ಯದಲ್ಲಿ ಈ ರೀತಿಯಾಗಿ ಹೊಗಳಿದ್ದಾನೆ.

**॥ ಶಾಂತಲದೇವಿಯ ಗುಣಮಂ**
**ಶಾಂತಲದೇವಿಯ ಸಮಸ್ತ ದಾನೋನ್ನತಿಯಂ**
**ಶಾಂತಲದೇವಿಯ ಶೀಳಮ**
**ಚಿಂತ್ಯಂಭುವನಯ್ಕದಾನಚಿಂತಾಮಣಿಯಂ ।**

**ಪತಿಯ ಕಳಂಕಮನಾತ್ಮ**
**ದ್ಯುತಿಯಿಂದಪಹರಿಸಳೆಂದು ಸಲೆ ರೋಹಿಣಿಯಂ**
**ಪತಿಹಿತೆ ಶಾಂತಲದೇವಿಯ**
**ಸಿತಕೀರ್ತಿಜ್ಯೋತ್ಸ್ನೆಸಂತತಂ ನಗುತಿರ್ಕುಂ ॥**[೩೭]

ಪತಿಯ ಹಿತವನ್ನೇ ಬಯಸುವ ಶಾಂತಲೆಯ ಶುಭ್ರವಾದ ಕೀರ್ತಿ ಎಂಬ ಬೆಳದಿಂಗಳು, ಚಂದ್ರನ ಮಡದಿಯಾದ ರೋಹಿಣಿಯನ್ನು, ಪತಿಯ ಕಳಂಕವನ್ನು (ಕಲೆಯನ್ನು) ಪರಿಹಾರಮಾಡಲು ಸಾಧ್ಯವಾಗುತ್ತಿಲ್ಲವೆಂದು ಎಂದು ಅಪಹಾಸ್ಯ ಮಾಡುತ್ತಿದೆ ಎಂದು ಕವಿಯು ಉತ್ಪ್ರೇಕ್ಷೆಯಿಂದ ಬಣ್ಣಿಸಿದ್ದಾನೆ.

ಶ್ರವಣಬೆಳಗೊಳ, ಹಾಸನ ಹಾಗೂ ಬೇಲೂರಿನ ಶಾಸನಗಳಲ್ಲಿನ ಶಾಂತಲೆಯ ಪ್ರಶಸ್ತಿಯು, ಅವಳ ವ್ಯಕ್ತಿತ್ವವನ್ನು ಪರಿಚಯಿಸುತ್ತದೆ. ವಿಷ್ಣುವರ್ಧನನ ಪಿರಿಯರಸಿ ಪಟ್ಟದರಾಣಿಯಾಗಿದ್ದ ಇವಳನ್ನು ಶ್ರೀಮದ್ವಿಷ್ಣುವರ್ದ್ಧನ ಹೊಯ್ಸಳ ಮಹೀಪಾಳ ಪಾದಾಬ್ಜಭಕ್ತೆ, ವಿಷ್ಣುವರ್ಧನ ಮನೋರಾಗಸಾಗರಾಭಿವರ್ದ್ಧನ ಚಂದ್ರಲೇಖೆ, ಪತಿವಿನಯಾವಿದಿತಾರುಂಧತಿ, ಅಭಿನವಾರುನ್ಧತಿ, ಎಂದು ಮೊದಲಾಗಿ ಕರೆದ, "ಅಭಿನವರುಗ್ಮಿಣೀದೇವಿಯುಂ, ಪತಿಹಿತಸತ್ಯಭಾಮೆ" ಎಂದು ಪುರಾಣದ ಸ್ತ್ರೀಯರಿಗೆ ಹೋಲಿಸಲಾಗಿದೆ. "ಸಕಳ ಸಮಯ ರಕ್ಷಾಮಣಿ, ಮುನಿಜನವಿನೇಯ ಜನವಿನೀತೆ, ಸಮ್ಯಕ್ತಚೂಡಾಮಣಿ, ಚತುಸ್ಸಮಯಸಮುದ್ಧರಕರಣಕಾರಣೆ, ನಿಜಕುಳಾಭ್ಯುದಯ ದೀಪಕೆ, ಜಿನಸಮಯ ಸಮುದಿತ ಪ್ರಾಕಾರೆ.." ಎಂದು ಮೊದಲಾಗಿ ಇವಳ ಧಾರ್ಮಿಕತತ್ಪರತೆಯನ್ನೂ ಬಣ್ಣಿಸಿವೆ.

ಇವಳ ದಾನಗುಣವನ್ನು ಕುರಿತು "ಮಹಾರಾಭಯ ಭೈಷಜ್ಯಶಾಸ್ತ್ರದಾನವಿನೋದೆ, ಸಕಳವಂದಿತ ಜನಚಿಂತಾಮಣಿ, ಅನೂನದಾನಾಭಿಮಾನಾವಳಂಬೆ" ಎಂದು ಬಣ್ಣಿಸಿರುವ ಶಾಸನ ಪದ್ಯವು, ಜೈನಧರ್ಮಾನುಯಾಯಿಯಾಗಿದ್ದ ಶಾಂತಲೆಯು ಶಾಸ್ತ್ರದಾನದ ಸಲುವಾಗಿ ಹಲವಾರು ಕೃತಿಗಳನ್ನು ಲಿಪಿ ಮಾಡಿಸಿ ದಾನ ನೀಡಿರುವುದರ ಕುರಿತು ಬೆಳಕು ಚೆಲ್ಲುತ್ತದೆ.

"ಮನೋಜರಾಜ ವಿಜಯಪತಾಕೆ, ಕಳಾಪಕಮನೀಯನೇತ್ರೆ, ಶ್ಯಾಮಳ ಕೋಮಳ ಭ್ರೂವಿಡಂಬಜಿತ ಶಚಿ, ಅಗಣ್ಯ ಲಾವಣ್ಯ ಸಂಪನ್ನೆ, ಕದಂಬಲಂಬಾಳ ಕಾಲಂಬಿಚರಣ ನಖ ಕಿರಣ ಕಳಾಪೆಯುಂ" ಎಂದು ಇವಳ ರೂಪ–ಲಾವಣ್ಯವನ್ನೂ "ಪಂಚಲಕಾರ ಪಂಚರತ್ನಯುಕ್ತೆ, ವಿನಯವಿನಮದ್ವಿಳಾಸಿನೀ, ದಯಾರಸಾಮೃತಾಪೂರ್ಣವದನ

ವಿಧುಬಿಂಬೆಯುಂ" ಮ್ರಿದುಮಧುರವಚನಪ್ರಸನ್ನೆ.. ಸವತಿಗಂಧಹಸ್ತಿ, ಮುದ್ವಿತ್ತ ಸವತಿ ಗಂಧವಾರಣಿ" ಎಂದು ಹೊಗಳಿ ಇವಳ ಗುಣವನ್ನೂ ಬಣ್ಣಿಸಿದೆ. ಅಂತೆಯೆ ಇವಳ ಪತಿವ್ರತಾಶೀಲ ಗುಣಗಳನ್ನು ಕುರಿತು "ಪತಿಬ್ರತಾಪ್ರಭಾವಪ್ರಸಿದ್ದಶೀತೆಯುಂ, ಪುಣ್ಯಬ್ರತಾಚರಣವಿಮಳೆಯು...... ಯಶಃ ಪ್ರಸರಪಾಣ್ದುರಿತದಿಕ್ಪಾಳ ಚೂಡಾಮಣಿಯು" ಎಂದು ಬಣ್ಣಿಸಿವೆ.

ಶಾಂತಲೆಯನ್ನು "ಬಲಿಪುರವರಕ್ಷೀರವಾರಾಶಿ ಜನಿತ.. ವಿಮಳೆ" ಎಂದು ಕರೆದು ಇವಳು ಜನಿಸಿದ ಊರನ್ನೂ, "ಶ್ರೀಮದ್ಧರ್ಮ್ಮೇಶ್ವರ ದೇವಲಬ್ಧವರಪ್ರಸಾದೆ, ಈಶಪುರರಚಿತ ರಾಮೇಶ್ವರ ಪ್ರಾಸಾದೆ, ನಗರಾಜನಂದನ ಪದಾರವಿಂದವಂದನವರ್ದ್ಧಿತಾ ನಂದೆಯುಂ" ಎಂದು ಕರೆದು ಜೈನಧರ್ಮಿಯಳಾದ ಇವಳ ತವರುಮನೆಯಲ್ಲಿನ ಶೈವಧರ್ಮದ ಪ್ರಭಾವವನ್ನೂ ತಿಳಿಸುತ್ತದೆ.

ಮುಖ್ಯವಾಗಿ ಶಾಸನಗಳು ಇವಳ ಕಲಾಪ್ರೌಢಿಮೆಯನ್ನು ಕುರಿತು "ಸಂಗೀತವಿದ್ಯಾಸರಸ್ವತಿಯುಂ, ಭರತಾಗಮಭವನನಿಹಿತ ಮಹನೀಯಮತಿ ಪ್ರದೀಪೆಯುಂ, ಸದರ್ತ್ಥ ಸರಸ ಸಮಯೋಜಿತ ವಚನ ಮಧುರ ಸಸ್ಯಂದಿ ವದನಾರವಿಂದೆಯುಂ, ವಿಚಿತ್ರನರ್ತ್ತನ ಪ್ರವರ್ತ್ತನಪಾತ್ರ ಶಿಖಾಮಣಿಯುಂ, ಸಂಗೀತಸಂಗತ ಸರಸ್ವತಿಯುಂ" ಎಂದು ಮೊದಲಾಗಿ ಹೊಗಳಿ ಇವಳ ಸಂಗೀತ ನೃತ್ಯದ ಪಾಂಡಿತ್ಯವನ್ನು ಪರಿಚಯಿಸಿದೆ ಇದರೊಂದಿಗೆ ಇವಳು ಗಾಯನ ಹಾಗೂ ನೃತ್ಯದ ಸಂಯೋಜಕಿಯಾಗಿ ಹಲವರ ಪ್ರದರ್ಶನಕ್ಕೆ ಅವಕಾಶ ನೀಡುತ್ತಿದ್ದಳೆನ್ನುವಂತೆ ಇವಳನ್ನು "ಗೀತವಾದ್ಯನ್ರಿತ್ಯ ಸೂತ್ರಧಾರೆಯುಂ" ಎಂದು ಹೊಗಳಿರುವುದು ವಿಶೇಷವೆನಿಸುತ್ತದೆ. ಇವಳನ್ನು ವಿವೇಕಯ್ಕಬ್ರಿಹಸ್ಪತಿಯುಂ, ಪ್ರತ್ಯುತ್ಪನ್ನವಾಚಸ್ಪತಿಯುಂ ಎಂದು ಕರೆದಿರುವುದು ಉತ್ತಮ ವಾಗ್ಮಿಯೂ ಆಗಿದ್ದಳೆಂದು ತಿಳಿಸುತ್ತದೆ.

ಶಾಂತಲೆಯ ರೂಪ, ಗುಣ ಸ್ವಭಾವ, ಕಲೆ, ಅಭಿರುಚಿ, ಪಾಂಡಿತ್ಯ, ಶೌರ್ಯವನ್ನು ಬಣ್ಣಿಸಿ ಶಾಂತಲೆಯ ಸುಂದರ ಚಿತ್ರಣ ಕಟ್ಟಿಕೊಟ್ಟಿರುವ ಶಾಸನ ಕವಿಯು ಕಳೆದ ಶತಮಾನದಲ್ಲಿ ಶಾಂತಲೆಯ ಕುರಿತಾಗಿ ಬಂದಿರುವ ಅನೇಕ ಕತೆ–ಕಾದಂಬರಿಗಳ ರಚನೆಗೆ ಆಕರ ವಸ್ತುವನ್ನೊದಗಿಸಿ ಕೊಟ್ಟಿದ್ದಾನೆ.

ಈ ಶಾಸನಗಳನ್ನು ರಚಿಸಿದ ಕವಿಗಳು ಎಲ್ಲಿಯೂ ತಮ್ಮನ್ನು ಹೆಸರಿಸಿಕೊಂಡಿಲ್ಲ. ಆದರೆ ಶಾಂತಲೆಯು ಹಾಕಿಸಿರಬಹುದಾದ ಶ್ರವಣಬೆಳಗೊಳ, ಹಾಸನದ ಶಾಂತಿಗ್ರಾಮ ಹಾಗೂ ಬೇಲೂರಿನ ಈ ಶಾಸನಗಳ ರಚನೆಕಾರ ಒಬ್ಬನೇ ಇರಬಹುದೆಂದು ಇಲ್ಲಿನ ಪದ್ಯ ಹಾಗೂ ಪದಬಳಕೆಯ ಪುನರಾವರ್ತನೆಯಿಂದ ತಿಳಿದುಬರುತ್ತದೆ. "ಸ್ವಸ್ತ್ಯನವರತ ಪರಮ ಕಲ್ಯಾಣಾಭ್ಯುದಯ ಸಹಸ್ರ ಫಳಭೋಗಭಾಗಿನೀ ದ್ವಿತೀಯ ಲಕ್ಷ್ಮೀಸಮಾನೆ.." ಎಂದು ಆರಂಭವಾಗುವ ಶಾಂತಲೆಯ ಪ್ರಶಸ್ತಿಯು ಈ ಮೂರೂ ಶಾಸನಗಳಲ್ಲಿಯೂ ಒಂದೇ ರೂಪದಲ್ಲಿ ಕಂಡುಬರುತ್ತದೆ.

**ಬೆಸನಂ ಪತಿಹಿತದಲ್ಲಿಯೆ**
**ಬೆಸನಂ ದ್ವಿಜದೇವಪೂಜೆಯಲ್ಲಿಯೆ ನೆಗಟ್ದಾ**
**ಬೆಸನಂ ನೋಂಪಿಗಳಲ್ಲಿಯೆ**
**ಬೆಸನಂಗಳ್ ಶಾಂತಿದೇವಿಯೊಳ್ ಪೆಱವೊಳವೇ॥**[೩೮]

ಶಾಂತಲೆಗೆ ಪತಿಯಹಿತದಲ್ಲಿ, ಗುರು–ದೈವ ಪೂಜೆಗಳಲ್ಲಿ, ವ್ರತಗಳಲ್ಲಿ ಇರುವ ಕಾಳಜಿಯನ್ನು ಕುರಿತು ತಿಳಿಸುವ ಈ ಮೇಲಿನ ಕಂದಪದ್ಯವು ಶ್ರವಣಬೆಳಗೊಳ ಹಾಗೂ ಬೇಲೂರು ಎರಡೂ ಶಾಸನದಲ್ಲಿ ಯಾವುದೇ ವ್ಯತ್ಯಾಸವಿಲ್ಲದೆ ಒಂದೇ ರೀತಿಯಲ್ಲಿ ರಚಿತವಾಗಿರುವುದು ಈ ಶಾಸನಪದ್ಯಗಳು ಏಕ ಕವಿ ಕೃತವೆಂದು ತೋರುತ್ತದೆ.

ಈ ಶಾಸನಕವಿಯು ಪಂಪನ ವಿಕ್ರಮಾರ್ಜುನ ವಿಜಯದಿಂದ ಪ್ರಭಾವಿತನಾಗಿರುವುದಕ್ಕೆ ಈ ಒಂದು ನಿದರ್ಶನವನ್ನು ಕಾಣಬಹುದು.

**ಆ ನೆಗಟ್ದವಿಷ್ಣು ನೃಪನ ಮ**
**ನೋ ನಯನ ಪ್ರಿಯೆ ಚಳಾಳಿನೀಲಾಳಕಿ ಚಂ**
**ದ್ರಾನನೆ ಕಾಮನ ರತಿಯೊಳ್**
**ತಾನೆಣೆ ತೊಣೆ ಸರಿ ಸಮಾನೆ ಶಾಂತಲದೇವಿ ॥**

ಶಾಂತಲೆಯ ಸೌಂದರ್ಯವನ್ನು ಬಣ್ಣಿಸಿರುವ ಈ ಪದ್ಯವು ಪಂಪನ ವಿಕ್ರಮಾರ್ಜುನ ವಿಜಯದ ಪದ್ಯವೊಂದರಲ್ಲಿ ಅರಿಕೇಸರಿಯ ತಾಯಿ ಜಾಕವ್ವೆಯ ಕುಲ, ಶೀಲವನ್ನು ಕುರಿತು ಬಣ್ಣಿಸುವ ಪದ್ಯದ ಅನುಕರಣೆಯಂತಿದೆ ಎಂಬುದನ್ನು ಆರ್.ನರಸಿಂಹಾಚಾರ್ಯರು ಶಾಸನಪದ್ಯಮಂಜರಿಯಲ್ಲಿ ಗುರುತಿಸಿದ್ದಾರೆ.

**ಆ ನರಸಿಂಹ ಮಹೀಶ ಮ**
**ನೋ ನಯನ ಪ್ರಿಯೆ ವಿಳೋಳ ನೀಳಾಳಕೆ ಚಂ**
**ದ್ರಾನನೆ ಜಾಕವ್ವೆ ದಲಾ**
**ಜಾನಕಿಗಗ್ಗಳಮೆ ಕುಲದೊಳಂ ಶೀಲದೊಳಂ ॥ (ಪಂಪಭಾರತದ (೧.೩೯))**

ಶಾಸನಗಳು ಇವಳ ವ್ಯಕ್ತಿತ್ವವನ್ನು ಚಿತ್ರಿಸಿರುವುದಲ್ಲದೆ, ಶಿಲ್ಪದಲ್ಲಿಯೂ ಶಾಂತಲೆಯನ್ನು ಕಂಡರಿಸಲಾಗಿದೆ. ಬೇಲೂರಿನ ಚೆನ್ನಕೇಶವ ದೇವಾಲಯದ ಮುಂದಿನ ಭಕ್ತಶಿಲ್ಪಗಳು ಈಕೆ ಹಾಗೂ ಇವಳ ಪತಿ ವಿಷ್ಣುವರ್ಧನರೆಂದು ಹೇಳಲಾಗುತ್ತದೆ. ಅಲ್ಲದೆ ಒಡ್ಡೋಲಗದಲ್ಲಿ ಕುಳಿತಿರುವ ಇವಳ ಶಿಲ್ಪವನ್ನೂ ಈ ದೇವಾಲಯದ ಭಿತ್ತಿಯಲ್ಲಿ ಕಾಣಬಹುದು.

**ರಾಣಿ ಕಮಲಾದೇವಿ**

ಕಿತ್ತೂರಿನ ಸಮೀಪದ ದೇಗಾಂವಿಯ ಕಮಲನಾರಾಯಣ ದೇವಾಲಯದಲ್ಲಿ ದೊರಕಿರುವ ಕ್ರಿ.ಶ.೧೧೭೪ರ ಶಾಸನವು ಉಲ್ಲೇಖಿಸುವಂತೆ ಈ ದೇವಾಲಯವು ಕದಂಬ ವಂಶದ ಶಿವಚಿತ್ತ ಪೆರ್ಮಾಡಿದೇವನ ಹಿರಿಯ ರಾಣಿ ಕಮಲಾದೇವಿಯ ಆದೇಶದ ಮೇರೆಗೆ ಕಟ್ಟಲ್ಪಟ್ಟಿತು. ಈ ರಾಣಿಯ ತಂದೆಯು ಸೂರ್ಯವಂಶದ ರಾಜನಾದ ಕಾಮ ತಾಯಿ ಚಟ್ಟಲದೇವಿ. ಈ ಶಾಸನವು ರಾಣಿ ಕಮಲಾದೇವಿಯ ನಿರೂಪಣೆಯ ಮೇರೆಗೆ ಅಗ್ರಹಾರವನ್ನಾಗಿ ಪರಿವರ್ತಿಸಿ ದಾನನೀಡಲಾದ ಭೂವಿವರಗಳನ್ನೂ ತಿಳಿಸಿದೆ. ೧೧೭೪ರ ವೇಳೆಗೆ ಸಂಪೂರ್ಣವಾಗಿ ಕಟ್ಟಲಾಗಿದ್ದ ಈ ದೇವಾಲಯದ ರೂವಾರಿಗಳಾರೆಂಬುದನ್ನು ಶಾಸನ ಕವಿ ತಿಳಿಸಿದ್ದಾನೆ. ವಿಶೇಷವೆಂದರೆ ಈ ರೂವಾರಿ ತಿಪ್ಪಣ್ಣೋಜನೇ ಈ ಶಾಸನವನ್ನು ಬರೆದ ಕವಿಯಾಗಿದ್ದಾನೆ[೩೯].

ಕವಿಯು ತನ್ನನ್ನು ಕುರಿತು

**ಭರತಾಗಮಶಾಸ್ತ್ರಕಳಾ। ಪರಿಣತಿಯೊಳ್ ವರ್ಣಕವಿತೆಯೊಳ್ ದಾನಗುಣೋ**
**ತ್ಕರದೊಳ್ ಸರಿಯಾರ್ ವಂಕೇ । ಶ್ವರದೇವರ ತಿಪ್ಪಣ್ಣೋಜನೊಳ್ ಭೂತಲದೊಳ್॥**

ಕವಿ ತಿಪ್ಪಣ್ಣೋಜನು ಹೂವಿನಬಾಗೆಯವನು, ಈತನ ತಂದೆ ಹೊಲ್ಲೋಜ. ಈ **ತಿಪ್ಪಣ್ಣೋಜ** ಮಗ ಬಾಗೋಜ. ಇವನೂ ಸಹ ತನ್ನ ತಂದೆಗೆ ದೇವಾಲಯದ ಮಂಟಪವನ್ನು ಕಳಸ ಸಹಿತ ನಿರ್ಮಾಣ ಮಾಡಲು ಸಹಕರಿಸಿದ್ದಾನೆ. ಇವರಲ್ಲದೆ ಹರಿಗೆಯ, ಹರಿಪೋಜ, ಕರಿಯ, ಬೋಗ್ಗಯ್ಯ ಮತ್ತು ನಾಗಯ್ಯ ಇವರು ಇಲ್ಲಿನ

ಕಂಬ ಮತ್ತಿತರ ಶಿಲ್ಪಗಳ ರೂವಾರಿಗಳು. ತಿಪ್ಪೋಜನು ತಾನು ಕಾವ್ಯಕಲೆ, ಶಿಲ್ಪಕಲೆಗಳಲ್ಲಷ್ಟೇ ಅಲ್ಲದೆ ಭರತನ ನಾಟ್ಯಶಾಸ್ತ್ರದಲ್ಲಿಯೂ ಪರಿಣತನಾಗಿದ್ದೆನೆಂದು ತಿಳಿಸಿದ್ದಾನೆ. ಜೊತೆಗೆ ಇವನು ಬಂಕೇಶ್ವರನ ಕಡುಭಕ್ತನೂ, ದಾನಿಯೂ ಆಗಿದ್ದು ಈತನಿಗೆ ದೇಸಿಯ ಬಗೆಕಾರ, ಬಲ್ಲವರ ಬೆಲ್ಲ, ಯಾಚಕೋದ್ಧಾರ ಎಂಬ ಬಿರುದುಗಳಿದ್ದವೆಂದು ತಿಳಿಸಿದ್ದಾನೆ.

ಅನೇಕ ಕಲೆಗಳಲ್ಲಿ ಪರಿಣತನಾಗಿದ್ದ ತಿಪ್ಪೋಜನಿಗೆ ರಾಣಿ ಕಮಲಾದೇವಿ ದೇವಾಲಯದ ಸಮಸ್ತ ಉಸ್ತುವಾರಿಯ ಹೊಣೆ ಇತ್ತು, ಆತನ ಅದ್ಭುತ ಕಾರ್ಯ ಇಂದಿನವರೆಗೂ ಉಳಿದು ಬರಲು ಕಾರಣಳಾಗಿದ್ದಾಳೆ.

**ಹರಿಯಬ್ಬರಸಿ**

ಹರಿಯಬ್ಬರಸಿಯು ಕುಣಿಂಗಲು ನಾಡು ಎಂಟುನೂರರರ ಅಧಿಪತಿ ಮಹಾಸಾಮಂತ ಸಿಂಗರಸನರಾಣಿ. ಇವಳು ವಿಷ್ಣುವರ್ಧನ ಹಾಗೂ ಶಾಂತಲೆಯರ ಮಗಳು[೪೦]. ಹರಿಯಬ್ಬರಸಿಯು ಜೈನಧರ್ಮೀಯಳಾದರೆ ಅವಳ ಪತಿ ಸಿಂಘರಸನು ಶೈವಭಕ್ತನಾಗಿದ್ದ.

ಸಿಂಘರಸನ ಶೈವನಿಷ್ಠೆಯು ಅರಸಿಕೆರೆಯ ಇತರ ಶಾಸನಗಳಲ್ಲಿ[೪೧] ತಿಳಿದು ಬರುವಂತೆಯೇ ಹಂತಿಯೂರಿನ ಶಾಸನವು ಜೈನ ಮುನಿ 'ವಿಮುಕ್ತ ಸಿದ್ಧಾಂತದೇವರ ಗುಡ್ಡಿ(ಶಿಷ್ಯೆ) ಹರಿಯಬ್ಬರಸಿ' ಎಂದು ಇವಳನ್ನು ಕರೆದು, ಹರಿಯಬ್ಬೆಯು ಜೈನ ಧಾರ್ಮಿಕ ಕೈಂಕರ್ಯಗಳಲ್ಲಿ ತೊಡಗಿಕೊಂಡಿದ್ದುದನ್ನು ತಿಳಿಸುತ್ತದೆ. ವಿಭಿನ್ನ ಧರ್ಮಗಳನ್ನನುಸರಿಸುತ್ತಿದ್ದರೂ ಈ ಸತಿ–ಪತಿಗಳು ಅನ್ಯೋನ್ಯದಿಂದಿದ್ದರು.

"ಪರಬಳದಾನವ ಸಂಹಾರಾರುಣ ಜಳ ಲಿಪ್ತಖರ್ಗ್ಗನುನ್ನತ ತೇಜಂ ವರ ವಿಬುಧ ವಿಭವಂ ಹರಿಕಾನ್ತಾ ಕಾನ್ತನೆಸೆದಪಂ ವಿಭುಸಿಂಗ" ನೆಂದು ಈ ಶಾಸನವು ಶತ್ರುಗಳ ಅರುಣ ಜಲ (ರಕ್ತ)ತುಂಬಿದ ಖಡ್ಗದ ತೇಜಸ್ಸಿನಿಂದ ಹರಿಕಾನ್ತಾ ಕಾನ್ತನ ಯಶಸ್ಸನ್ನೂ ಹರಿಕಾಂತೆಯ (ಲಕ್ಷ್ಮಿ) ಸಂಪತ್ತನ್ನೂ ಹೊಂದಿದ್ದನೆಂದು ಹರಿಯಬ್ಬೆಯ ಕಾಂತ ವೀರಸಿಂಘರಸನನ್ನು ಪರಿಚಯಿಸುತ್ತದೆ.

ಹರಿಯಬ್ಬರಸಿಯು ಚಿಕ್ಕಮಗಳೂರಿನ ಹಂತಿಯೂರಿ (ಹಂತೂರು)ನಲ್ಲಿ ನಿರ್ಮಾಣಮಾಡಿದ ಚೈತ್ಯಾಲಯ, ಅದಕ್ಕೆ ನೀಡಿದ ದತ್ತಿ, ಜೈನಮುನಿ ಸಿದ್ಧಾಂತದೇವರ ವಿಚಾರ ಮೊದಲಾದವುಗಳ ಕುರಿತಾಗಿ ಶಾಸನವನ್ನು ಹಾಕಿಸಿದ್ದಾಳೆ (E.C.ಸಂ.VI ಮೂಡಿಗೆರೆ ೨೨). ಈ ಶಾಸನವನ್ನು ಕವಿ **ಮಲ್ಲಿನಾಥ**ನು ಚಂಪೂ ಶೈಲಿಯಲ್ಲಿ ರಚಿಸಿದ್ದಾನೆ.

ಕವಿ ಮಲ್ಲಿನಾಥನು **ಹರಿಯಬ್ಬರ**ಸಿಯನ್ನು "ಸರಸ್ವತಿಯಂತೆ ಸತ್ಕಳಾನ್ವಿತೆ, ಸೀತೆಯಂತೆ ವಿನೀತೆ, ಸುಸೀಮಾ ದೇವಿಯಂತೆ ಸುಶೀಲೆ, ರುಕ್ಮಿಣಿಯಂತೆ ಗುಣಾಗ್ರಣಿ.., ಜನಮನ ಪುಳಕೆಯುಂ, ಚಾತುರ್ವರ್ಣ ವರ್ಣಿತಾಗಣ್ಯ ಪುಣ್ಯಜನ ಶಿಖಾಮಣಿಯುಂ, ಸಮ್ಯಕ್ತ್ವ ಚೂಡಾಮಣಿಯುಂ ಎನಿಸಿ" ಶೋಭಿಸುತ್ತಿದ್ದಳು ಎಂದು ಬಣ್ಣಿಸಿ, ಜೈನಧರ್ಮದಲ್ಲಿನ ಚತುರ್ವಿಧ ದಾನವೆನಿಸಿದ ಆಹಾರ, ಅಭಯ, ಔಷಧ, ಶಾಸ್ತ್ರದಾನಗಳನ್ನು ಕೈಕೊಂಡ ಹರಿಯಬ್ಬರಸಿಯ ಪರಹಿತಗುಣಾಸಕ್ತಿಯನ್ನು ಈ ಕೆಳಗಿನ ಪದ್ಯದಲ್ಲಿ ಬಣ್ಣಿಸಿದ್ದಾನೆ.

**ಧರೆಯೊಳನನ್ತ ದಿವ್ಯಯತಿಸನ್ತತಿಗನ್ನಮನಾದ ಭೀತಿಯಿಂ**
**ಬರೆ ಪಲರಂಜದಿರೆಂಬ ಭಯ ವಾಕ್ಯಮನಾತುರರಾಗಿ ಬೇರ್ಪ್ಪವ**
**ರ್ಗಿರದೆ ಶರೀರ ರಕ್ಷಣಮನೋದಲು ಶಾಸ್ತ್ರಮನ್ ಈವ ಪೆಂಪಿನಿಂ**
**ಹರಿಯವೆ ತಾಳ್ದಿದಳ್ ಪರಹಿತೋಕ್ತ ಚತುರ್ವ್ವಿಧ ದಾನಶಕ್ತಿಯಂ** ॥

ಪರಹಿತಬಯಸುವ ನಿರ್ಮಲಗುಣದಿಂದ ಇಳೆಯಲ್ಲಿ ಯಶಸ್ಸನ್ನು ಗಳಿಸಿದ್ದ ಹರಿಯಬ್ಬೆಯ ಸರಿಸಮಾನವಾಗಿ ಹರಿಯ ಕಾನ್ತೆಯಾದ ಲಕ್ಷ್ಮಿಯೂ ಬಾರಳು ಎನ್ನುತ್ತಾ ಲಕ್ಷ್ಮಿಗಿಂತಲೂ ಮಿಗಿಲಾದ ಹರಿಯಬ್ಬೆಯನ್ನು ಈ ಕೆಳಗಿನ ಕಂದಪದ್ಯದಲ್ಲಿ ಕವಿಯು ಬಣ್ಣಿಸಿದ್ದಾನೆ.

**ಹರಿಕಾನ್ತೆಯುಮೀ ಕಾನ್ತೆಯ**
**ದೊರೆಗೆ ವರಲು ಕೋಱಳೆಂಬ ನಿಮ್ಮದದ ಗುಣೋ**
**ತ್ಕರಮನೊಳಕೊಣ್ಡು ಹರಿಯಬೆ**
**ಪರಹಿತದಿಂ ಧರೆಯೊಳೈದೆ ಜಸಮಂ ತಳೆದಳ್॥**

ಸಮ್ಯಕ್ತ್ವ ಚೂಡಾಮಣಿಯೆನಿಸಿದ ಹರಿಯಬ್ಬೆಯು ಹನ್ತಿಯೂರಿನಲ್ಲಿ ಅನೇಕ ರತ್ನಖಚಿತ ರುಚಿರಮಣಿ ಕಳಶ... ಗಳಿಂದೊಳಗೊಂಡ ಉತ್ತುಂಗ ಚೈತ್ಯಾಲಯವನ್ನು ಮಾಡಿಸಿ ದಾನ–ದತ್ತಿಗಳನ್ನು ನೀಡಿರುವುದನ್ನು ವಿವರವಾಗಿ ಈ ಚಂಪೂ ಪದ್ಯದಲ್ಲಿ ಕವಿಯು ನಿರೂಪಿಸಿದ್ದಾನೆ[೪೨].

**ಕವಿ ಮಲ್ಲಿನಾಥ :** "ಶ್ರೀಮನ್ಮಲ್ಲಿನಾಥಂ ಬಿರುದ ಲೇಖಕ ಮದನಮಹೇಶ್ವರಂ ಬರೆದಂ । ನಾಗರಾದಿನಾಗರಿಕದ್ರಾವಿಳ ಸಮುದ್ಧರಣನಪ್ಪ ಮಾಣಿ ಮೋಜನಮಗಂ" ಎಂದು ತನ್ನನ್ನು ಪರಿಚಯಿಸಿಕೊಂಡಿರುವ ರೀತಿಯಿಂದ ಈ ಶಾಸನಕವಿ ಮಲ್ಲಿನಾಥನಿಗೆ ಮದನ ಮಹದೇಶ್ವರ ಎಂಬ ಬಿರುದು ಇದ್ದಂತೆ ತಿಳಿದು ಬರುತ್ತದೆ. ಶ್ರವಣ ಬೆಳಗೊಳದಲ್ಲಿ ಮಲಧಾರಿ ದೇವರು ಎಂಬ ಮುನಿ ಸಲ್ಲೇಖನ ದೀಕ್ಷೆಯ ಮೂಲಕ ಸಮಾಧಿ ಮರಣ ಪಡೆದದ್ದನ್ನು ಸುದೀರ್ಘವಾಗಿ ವರ್ಣಿಸುವ ಸಂಸ್ಕೃತ ಶಾಸನವನ್ನು ರಚಿಸಿರುವ ಮಲ್ಲಿನಾಥ ಕವಿ ಇವನೇ ಎಂದು ಬಿ.ರಾಜಶೇಖರಪ್ಪ ಅವರು ಅಭಿಪ್ರಾಯ ಪಡುತ್ತಾರೆ[೪೩]. ಅಲ್ಲಿ ತನ್ನನ್ನು ಮಲಧಾರಿ ದೇವರ ಶಿಷ್ಯನೆಂದು ಕರೆದುಕೊಂಡಿದ್ದಾನೆ ಅಲ್ಲದೆ ತನ್ನ 'ಮದನಮಹದೇಶ್ವರ'ನೆಂಬ ಬಿರುದನ್ನೂ ಹೇಳಿಕೊಂಡಿದ್ದಾನೆ.

'ಅನಲ್ಪಕಲ್ಪಲತಾಶಾಖಾನೀಕದಂತ ನೂನದಾನಜನಿತ ಜನಮನಪುಳಕೆಯುಂ, ಭಗವದರ್ಹತ್ಪರಮೇಶ್ವರ ಚರಣನಖ ಮಯೂಖಲೇಖಾವಿಳಸಿತ ಲಲಾಟಪಳಕೆಯುಂ, ಚಾತುರ್ವರ್ಣವರ್ಣಿತಾಗಣಯ ಪುಣ್ಯಜನಶಿಖಾಮಣಿಯುಂ, ಸಮ್ಯಕ್ತ್ವಚೂಡಾಮಣಿಯುಮೆನಿಸಿ' ಎಂದು ಹರಿಯಬ್ಬೆಯನ್ನು ಬಣ್ಣಿಸಿರುವ ಈ ಶಾಸನಪದ್ಯದ ಸಾಲುಗಳು ಸಂಸ್ಕೃತ ಭೂಯಿಷ್ಠವಾಗಿರುವುದನ್ನು ಕಾಣಬಹುದು. ಕವಿಯ ಉಭಯ ಭಾಷಾ ಪಾಂಡಿತ್ಯವೂ ಈ ಶಾಸನದಲ್ಲಿ ಕಂಡುಬರುತ್ತದೆ.

### ರಾಣಿ ಉಮಾದೇವಿ

ಹೊಯ್ಸಳ ಬಲ್ಲಾಳನ ರಾಣಿ ಉಮಾದೇವಿಯು ಅರಸನೊಂದಿಗೆ ರಾಜಧಾನಿಯಲ್ಲಿ ಆಳ್ವಿಕೆ ನಡೆಸುತ್ತಿದ್ದಳಲ್ಲದೆ, ಅರಸಿಕೆರೆಯ ಸುತ್ತಮುತ್ತಲ ಪ್ರದೇಶ ಇವಳ ನೇರ ಆಳ್ವಿಕೆಗೆ ಒಳಪಟ್ಟಿತ್ತು. ಸಾಹಸಿಯೂ ಯುದ್ಧಪ್ರಿಯಳೂ ಆದ ಇವಳು, ದೇವಾಲಯ ನಿರ್ಮಾಣ, ಅವುಗಳಿಗೆ ನೀಡಿದ ದತ್ತಿ, ತೆರಿಗೆ ವಿನಾಯಿತಿ, ಕೆರೆ ನಿರ್ಮಾಣ ಮೊದಲಾದ ವಿಚಾರಗಳನ್ನು ತಿಳಿಸುವ ಶಾಸನಗಳನ್ನು ಹಾಕಿಸಿದ್ದಾಳೆ.

ಇಷ್ಟಲ್ಲದೆ ಇವಳು ಹಲವಾರು ಯುದ್ಧಗಳಲ್ಲಿಯೂ ಭಾಗವಹಿಸಿದ್ದಾಳೆ. ಬೆಳಗುತ್ತಿಯ ಮೇಲೆ ಮೂರುಬಾರಿ ಧಾಳಿನಡೆಸಿ ಸಾಮಂತರ ಅಧಿಕಾರವನ್ನು ನಿಯಂತ್ರಿಸಿರುವುದನ್ನು ಶಾಸನಗಳು ಉಲ್ಲೇಖಿಸುತ್ತವೆ[೪೪].

**ಕವಿ ತ್ರಿವಿಕ್ರಮ ಪಂಡಿತ:** ಅರಸಿ ಉಮಾದೇವಿಯ ಕುರಿತಾದ ಕೆಲವು ಶಾಸನಗಳನ್ನು ಕವಿ ತ್ರಿವಿಕ್ರಮ ಪಂಡಿತನೆಂಬುವವನು ರಚಿಸಿದ್ದಾನೆ[೪೫]. ಕರ್ಣಾಟಕ ಕವಿಚರಿತೆಯ ಮೊದಲನೆಯ ಸಂಪುಟದಲ್ಲಿ ಉಕ್ತನಾಗಿರುವ

ಈತನಿಗೆ, **"ಈ** ಶಾಸನಗಳ ಬಂಧವನ್ನು ನೋಡಿದರೆ ಈತನು ಒಳ್ಳೆಯ ಕವಿಯೆಂಬುದರಲ್ಲಿ ಆವ ಸಂಶಯವೂ ಇಲ್ಲ" ಎಂಬ ಪ್ರಶಂಸೆ ಸಂದಿದೆ[೪೬].

ಕವಿ ತ್ರಿವಿಕ್ರಮ ಪಂಡಿತನು ಉಮಾದೇವಿಯನ್ನು ಸ್ತುತಿಸಿರುವ ಕೆಲವು ಪದ್ಯಗಳು ಹಲವಾರು ಶಾಸನಗಳಲ್ಲಿ ಪುನರುಲ್ಲೇಖವಾಗಿದೆ.

**ಲಲನಾನಿರ್ಮಿತ ಕೌಶಲಂ ಪಲವು ಕಾಲಕ್ಕಬ್ಜಜಂಗಿಂದು ಸತ್**
**ಫಲವಾಯ್ತುತ್ತಮ ರೂಪೆಯಂ ವಿಮಳೆಯಂ ಬಲ್ಲಾಳವಿಶ್ವಂಭರೇ**
**ಶ ಲಸತ್ಕಾಮಿನಿಯಂ ಬುಧಾಳಿಗನಿಶಂ ಕೂರ್ತಿ ವುಮಾದೇವಿಯಂ**
**ಲಲನಾ ರತ್ನಮನುದ್ಧ ಕೀರ್ತಿಯುತೆಯಂ ಪೆತ್ತುತ್ತಮ ಪ್ರೌಢಿಯಿಂ॥**[೪೭]

ಹಲವು ಕಾಲದ ಕೌಶಲ ಫಲದಿಂದ ಬ್ರಹ್ಮನಿಗೆ ಉಮಾದೇವಿಯಂತಹ ಲಲನೆಯನ್ನು ಸೃಷ್ಟಿಸಲು ಸಾಧ್ಯವಾಯಿತು ಎಂದು ಇಲ್ಲಿ ಕವಿಯು, ಅತಿಶಯೋಕ್ತಿಯಿಂದ ಬಣ್ಣಿಸಿದ್ದಾನೆ. ಉಮಾದೇವಿಯನ್ನು ಕುರಿತು ಮತ್ತೇಭವಿಕ್ರೀಡಿತ ವೃತ್ತದಲ್ಲಿ ರಚಿಸಲಾಗಿರುವ ಇದೇ ಪದ್ಯವು ಅರಸೀಕೆರೆಯ (E.C.ಸಂ.V) ೯೦, ೯೩, ೨೦೫ ಸಂಖ್ಯೆಯ ಶಾಸನಗಳಲ್ಲಿಯೂ ಕಂಡುಬರುತ್ತದೆ.

**ಕುಮುದದಳನಯನೆ ಕೋಮಳೆ**
**ಕುಮುದಾನನೆಯೆನಿಸಿ ನೆಗಟ್ದುಮಾದೇವಿಗೆ ವಿ**
**ಕ್ರಮ ಸೋಮವಂಶ ಬಲ್ಲಾ**
**ಳ ಮಹೀಶಂ ಕೂರ್ಪನೆಂಬುದದು ತಕ್ಕುದೆ ದಲ್॥ (ಅರಸಿಕೆರೆ ೯೩)**

ಉಮಾದೇವಿಯ ನಯನ, ಮೊಗವನ್ನು ನೈದಿಲೆಗೆ ಹೋಲಿಸಿ, ಚಂದ್ರೋದಯವಾದಮೇಲೆ ನೈದಿಲೆ ಅರಳುವುದೆಂಬ ಕವಿಸಮಯದ ವರ್ಣನೆಗೆ ಅನುಗುಣವಾಗಿ ಇವಳಿಗೆ ಚಂದ್ರವಂಶದ ದೊರೆಯಾದ ಬಲ್ಲಾಳನೇ ಪ್ರಿಯಕರನೆಂಬುದು ತಕ್ಕುದಾಗಿದೆ ಎಂದು ಕವಿ ಬಣ್ಣಿಸಿದ್ದಾನೆ. ಇದೇ ಪದ್ಯವು "ಕಮನೀಯ ಚಕೋರೇಕ್ಷಣೆ" ಎಂಬ ಮೊದಲನೆಯ ಸಾಲಿನ ಬದಲಾವಣೆಯೊಂದಿಗೆ ಮತ್ತೊಂದು ಶಾಸನದಲ್ಲಿ ಕಂಡು ಬರುತ್ತದೆ.

ಕವಿಯು ತನ್ನನ್ನು ಕುರಿತು ಅರಸಿಕೆರೆಯ ೨೨ನೆಯ ಶಾಸನದ ಕಂದಪದ್ಯದಲ್ಲಿ ಈ ರೀತಿಯಾಗಿ ತಿಳಿಸಿದ್ದಾನೆ.

**ಬುಧನಿಧಿ ವಿವೇಕನಿಧಿ ಗುಣ**
**ನಿಧಿಯಾದಿತ್ಯಾನುಜಂ ತದಂತೇವಾಸಂ।**
**ಬುಧನಿಧಿ ವಿವೇಕನಿಧಿ ಗುಣ**
**ನಿಧಿ ಬರೆದಂ ತ್ರಿವಿಕ್ರಮಾಂಕನೀ ಶಾಸಸಮಂ** ॥ ಎಂದು ತಿಳಿಸಿದ್ದಾನೆ.

ಕ್ರಿ.ಶ.೧೧೯೪ರಲ್ಲಿ ಅರಸಿಕೆರೆಯ ೧೧೮ನೆಯ ಶಾಸನವನ್ನು ರಚಿಸಿದ ಹರಿಹರಸೂರಿಯು ತನ್ನ ಪದ್ಯವೊಂದರಲ್ಲಿ ಈ ತ್ರಿವಿಕ್ರಮಪಂಡಿತನನ್ನು ಸ್ಮರಿಸಿದ್ದಾನೆ.

**ಹರಿಹರಸೂರಿ ಸೀಗುರಿಯ ಕಾಮನ ತಮ್ಮನುಮೇಶದತ್ತವಾ।**
**ಗ್ವಿರಚಿಸಿದಂ ತ್ರಿವಿಕ್ರಮ ಕವೀಶ್ವರನೂರ್ಜಿತವಾಣಿ ತಿರ್ದಿ ತಾಂ ಬರೆದಂ॥**

ತನ್ನ ಕೃತಿಯನ್ನು ತ್ರಿವಿಕ್ರಮ ಕವೀಶ್ವರನು ತಿದ್ದಿಕೊಟ್ಟನೆಂದು ಶಾಸನಕವಿ ಹರಿಹರಸೂರಿಯು ಸ್ಮರಿಸಿರುವ ಈ ಉಲ್ಲೇಖವು ಕವಿತ್ರಿವಿಕ್ರಮನು ಪ್ರೌಢಿಮೆ–ಪಾಂಡಿತ್ಯಗಳನ್ನೂ, ಆತನು ಗಳಿಸಿದ್ದ ಪ್ರಸಿದ್ಧಿಯನ್ನೂ ಕುರಿತು ತಿಳಿಸುತ್ತದೆ.

**ಕವಿ ಮಾದಯ್ಯ:** ಕಣಿಕಟ್ಟೆಯಲ್ಲಿನ ಉಮಾದೇವಿಯ ಶಾಸನವನ್ನು ಮಾದಯ್ಯನೆಂಬುವವನು ರಚಿಸಿದ್ದಾನೆ. ವೃತ್ತಿಯಲ್ಲಿ ಈತ ಸೇನಬೋವನಾಗಿದ್ದನೆಂದೂ, ಜೊತೆಗೆ ದೇವಾಲಯದ ಸ್ಥಾನಪತಿಯೂ ಆಗಿದ್ದನೆಂದು ತಿಳಿದು ಬರುತ್ತದೆ[೪೮].

**ಬಲ್ಲಾಳನ ಬಲಭುಜದೊಳು**
**ಬಲ್ಲಿದಳಾ ವೀರಲಕ್ಷ್ಮಿನೆಲಸುವ ತೆಱದಿಂ**
**ಬಲ್ಲಾಳನ ವಾಮಾಂಗದ**
**ವಲ್ಲಭೆ ಉಮಾದೇವಿಯೀ ಧಾತ್ರಿಯೊಳು ಪೆಸರುವಡೆದಳು॥ (ಎಕ ೫ ಅರಸಿಕೆರೆ ೪೦ ಕಣಿಕಟ್ಟೆ(೧೨೦೯))**

ವೀರಲಕ್ಷ್ಮಿಗೆ ಸಮಾನಳಾಗಿ ಪ್ರಖ್ಯಾತೆಯಾಗಿರುವಳೆಂದು ಉಮಾದೇವಿಯನ್ನು ಈ ಕಂದಪದ್ಯದಲ್ಲಿ ಸ್ತುತಿಸಿದ್ದಾನೆ. ಶೌರ್ಯಕ್ಕೆ ಹೆಸರಾದ ವೀರಬಲ್ಲಾಳನಿಗೆ ಬಲಭುಜದಲ್ಲಿ ನೆಲೆಸಿದ ವೀರಲಕ್ಷ್ಮಿಯು ಹೆಸರು ತಂದು ಕೊಟ್ಟಿರುವಂತೆಯೇ, ಎಡಭಾಗದಲ್ಲಿ ನೆಲೆಸಿದ ಉಮಾದೇವಿಯೂ ಲೋಕದಲ್ಲಿ ಕೀರ್ತಿಗಳಿಸಿದ್ದಾಳೆ.

ಅರಸಿ ಉಮಾದೇವಿಯು ಶಾಸನ ಪದ್ಯಗಳಲ್ಲಲ್ಲದೆ, ಮಹಾಕಾವ್ಯವೊಂದರಲ್ಲಿ ಸ್ತುತಿಸಲ್ಪಟ್ಟಿದ್ದಾಳೆ. ಬಲ್ಲಾಳನಿಗೆ ಅಷ್ಟಮಹಿಷಿಯರಿದ್ದರೂ, ಈತನ ಆಸ್ಥಾನ ಕವಿ ರುದ್ರಭಟ್ಟನು ತನ್ನ 'ಜಗನ್ನಾಥ ವಿಜಯ'ದಲ್ಲಿ 'ಉಮಾಕಾಮಿನೀಜೀವಿತೇಶಂ' ಎಂದು ಅರಸಿ ಉಮಾದೇವಿಯನ್ನು ಮಾತ್ರ ಸ್ಮರಿಸಿರುವುದು ಈಕೆಯ ವಿಖ್ಯಾತಿಯನ್ನು ತಿಳಿಸುತ್ತದೆ.

**ರಾಣಿ ಬೈಚಲಾದೇವಿ** (ಕ್ರಿ.ಶ.೧೨೧೭)

ಮಗರೆ ಮುನ್ನೂರರ ಪ್ರದೇಶದಲ್ಲಿ ಆಳ್ವಿಕೆ ನಡೆಸುತ್ತಿದ್ದ ಹೊಯ್ಸಳರಾಣಿ **ಬೈಚಲದೇವಿ**ಯು ವೀರಬಲ್ಲಾಳನ ಅರಸಿ. ಇವಳು ತನ್ನ ತಾಯಿ ಮಾದಿಯಕ್ಕನಿಗೆ ತೋರುವ ಗೌರವಸೂಚಕವಾಗಿ ಕಡೂರು ತಾಲ್ಲೂಕಿನ ಕೇಸಿಯ ಹಳ್ಳಿಗೆ ಪ್ರಸನ್ನ ಮಾಧವಪುರವೆಂದು ಪ್ರತಿನಾಮಧೇಯವನ್ನಿಟ್ಟು, ಆ ಮಾದಾಪುರ (ಮಾಧವಪುರ) ಗ್ರಾಮದಲ್ಲಿ ಮಾಧವ ದೇವಸ್ಥಾನವನ್ನು ನಿರ್ಮಿಸಿ, ಪ್ರಸನ್ನ ಮಾಧವದೇವರ ಅಮೃತಪಡಿ ಹಾಗೂ ಇತರ ಸೇವೆಗಳಿಗಾಗಿ ದಾನವನ್ನು ನೀಡಿದ್ದಾಳೆ. ಅರಸಿಯು ಈ ವಿಚಾರವನ್ನು ತಿಳಿಸಲು ಹಾಕಿಸಿರುವ ಶಾಸನವನ್ನು ಕವಿ **ನಾಗದೇವ** ನಿಂದ ಬರೆಯಿಸಿದ್ದಾಳೆ.

**ಬೈಚಲಾದೇವಿಯ ವರ್ಣನೆ:** "ವೀರಬಲ್ಲಾಳನ ನಚ್ಚಿನಗ್ರಮಹಿಶೀ ಪದಮಂ ಪಡೆದಳು ವಿನೀಳ ಭ್ರಿಂಗಾಳ ಪೂರ್ಣಚಂದ್ರಮುಖಿ ಬೈಚಲದೇವಿ.." ಎಂದು ಅರಸಿ ಬೈಚಲಾದೇವಿಯನ್ನು ನುತಿಸಿರುವ ಕವಿಯು, ಮತ್ತೇಭವಿಕ್ರೀಡಿತ ವೃತ್ತದಲ್ಲಿ ರಚಿಸಿರುವ ಈ ಕೆಳಗಿನ ಪದ್ಯದಲ್ಲಿ ರತಿ–ಪುಷ್ಪಶರ (ಮನ್ಮಥ), ಗಿರಿಜಾ–ಶಿವ, ಲಕ್ಷ್ಮಿ–ವಿಷ್ಣುವಿನ ಹಾಗೆ ಅನ್ಯೋನ್ಯರಾಗಿರುವ ಬೈಚಲಾದೇವಿ ಹಾಗೂ ಬಲ್ಲಾಳರನ್ನು, ಅವರ ಸೌಭಾಗ್ಯ ಸಂಪತ್ತನ್ನು ಏನೆಂದು ಹೊಗಳುವುದೋ ಎಂಬ ಉದ್ಗಾರದಿಂದ ಬಣ್ಣಿಸಿದ್ದಾನೆ.

**ರತಿಯಂ ಬೈಚಲದೇವಿ ಪುಚ್ಪಶರನಂ ಬಲ್ಲಾಳನಾ ಭೂಮಿಭ್ರಿತ್**
**ಸುತೆಯಂ ಬೈಚಲದೇವಿ ಚಂದ್ರಧರನಂ ಬಲ್ಲಾಳನಂಭೋರುಹಿ**
**ಸ್ತಿತೆಯಂ ಬೈಚಲದೇವಿ ಚಕ್ರಧರನಂ ಬಲ್ಲಾಳನಂನ್ಯೋನ್ಯ ಸಂ**
**ಗತಿಯಿಂ ಪೋಲರೆನಲ್ಕದೇ ವೊಗಳ್ವುದೊ ಸೌಭಾಗ್ಯಸಂಪತ್ತಿಯಂ ॥**

ತನ್ನ ತಾಯಿಯ ಹೆಸರಿನಲ್ಲಿ ಪ್ರಸನ್ನ ಮಾಧವ ದೇವಾಲಯವನ್ನು ಮಾಡಿಸಿದ ಅರಸಿಯ ವಿಚಾರವನ್ನು ಚಂಪಕಮಾಲಾ ವೃತ್ತದ ಪದ್ಯವೊಂದರಲ್ಲಿ ಕವಿಯು ಈ ರೀತಿ ಹೇಳಿದ್ದಾನೆ.

**ಸುವಿದಿತ ಮಾದಿಯಕ್ಕನ ತನೂಭವೆ ಬೈಚಲದೇವಿ ಸಂದ ಮಾ**
**ಧವಪುರದೊಳ್ ನಿಜಾಂಬಿಕೆಯ ನಾಮದಿನ್ ಎತ್ತಿಸಿದಳ್ ಪ್ರಸಂನ ಮಾ**
**ಧವಗೃಹಮಂ ಸಮುಂನತ ವಿಳಾಸ ವಿಡಂಬಿತ ಹೇಮ ಭೂಧರಾ**
**ಪ್ರವರಮನ್ ಉದ್ಧ ಶೃಂಗ ಹಸಿತಾಖಿಲ ದಿಬ್ಯ ವಿಮಾನ ಶೋಭಮಂ ॥**

**ಕ್ಷೀರಾಂಭೋ ನಿಧಿಯಂ ತಟಾಕ ನಿಕರಂ ಕಳ್ಪಾಂಘ್ರಿಪೋದ್ಯಾನವಂ**
**ಚಾರೂದ್ಯಾನವನಂ ಮುನಿಪ್ರಕರಮಂ ವಿಪ್ರಬ್ರಜಂ ಲಕ್ಷ್ಮಿಯಂ**
**ಪೌರಸ್ತ್ರೀ ನಿವಹಂ ಕುಳಾದ್ರಿ ಕುಳಮಂ ಪ್ರಾಸಾದ ಸಂದೋಹ ವಿ**
**ಸ್ತಾರಂ ಪೋಲ್ತಿಗೆ ಸಂದ ಮಾಧವಪುರಂ ಸಂತಂ ಬಸಂತಂ ಕರಂ ॥**

ಕೆರೆ–ತಟಾಕಗಳಿಂದ, ಕಲ್ಪವೃಕ್ಷಗಳಿಂದ ಶೋಭಿತವಾದ ನೆಲ, ಸುಂದರವನ, ಮುನಿಜನ, ಪ್ರಸಿದ್ಧ ಮನೆತನದವರು, ಮಹಲುಗಳಿಂದ ತುಂಬಿದ ಕೇಸಿಹಳ್ಳಿ ಅಥವಾ ಮಾಧವಪುರವನ್ನು ಬಣ್ಣಿಸಿರುವ ಈ ಪದ್ಯವು 'ಪೌರಸ್ತ್ರೀ ನಿವಹಂ' ಎಂಬ ಮಾತಿನಿಂದ ನಾಗರೀಕ ಸ್ತ್ರೀಯರ ಸಮೂಹವನ್ನು ಕುರಿತು ಹೇಳಿದೆ. ನಗರವರ್ಣನೆಯಲ್ಲಿ ಸ್ತ್ರೀಯರ ಇರುವಿಕೆಯನ್ನು ವಾರಾಂಗನೆಯರು, ನರ್ತಕಿಯರ ಗುಂಪಿನಿಂದ ಗುರುತಿಸುವ ಇತರ ಪದ್ಯಗಳಿಗಿಂತ ಈ ಪದವು ಭಿನ್ನವಾಗಿರುವುದನ್ನು ಗಮನಿಸಬಹುದು.

ಇತಿಹಾಸ–ಪುರಾಣಗಳಲ್ಲಿ ಮಾತೃಭಕ್ತಿ ಪಾರಾಯಣರಾದ ಪುರುಷರನ್ನು ಕಾಣುವಂತೆ, ಮಹಿಳೆಯರನ್ನು ಕಾಣುವುದು ಅಪರೂಪ. ಇಂಥ ಅಪರೂಪದ ಪ್ರಕರಣ ಇಲ್ಲಿ ದಾಖಲಾಗಿದೆ. ತಾಯಿಯ ಮೇಲಿನ ಗೌರವದಿಂದಾಗಿ ಅವಳ ಹೆಸರನ್ನು ಹಳ್ಳಿಯೊಂದಕ್ಕೆ ಇರಿಸಿದ ಅರಸಿ ಬೈಚಲಾದೇವಿಯ ವಿಚಾರದೊಂದಿಗೆ ದೇವಾಲಯದ ನಿರ್ಮಾಣ, ಪ್ರಸನ್ನ ಮಾಧವ ದೇವರನ್ನು ಪ್ರತಿಷ್ಠಾಪಿಸಿದ ದಿನ, ನೀಡಿದ ದಾನ–ದತ್ತಿಗಳು, ನಗರ ವರ್ಣನೆ, ಹೊಯ್ಸಳ ವಂಶದ ವಿವರವನ್ನು ಒಳಗೊಂಡ ಈ ಶಾಸನ ಪದ್ಯವು ಪುಟ್ಟ ಚಂಪೂಕಾವ್ಯವಾಗಿದೆ.

**ಕವಿ ನಾಗದೇವ:** ಈ ಶಾಸನಕವಿ ತನ್ನ ಕುರಿತಾದ ವಿಚಾರವನ್ನು ಒಂದು ಸ್ರಗ್ದರಾವೃತ್ತ ಛಂದಸ್ಸಿನ ಪದ್ಯದಲ್ಲಿ ರಚಿಸಿದ್ದಾನೆ.

**ಶ್ರೀಮಚ್ಚಾಮವ್ವೆಗಂ ವಿಶ್ರೂತವಿಮಳಯಶಂ ನಾಗದೇವಂಗವಾದ**
**ಭೂರ್ಮಿತ್ರರ್ಪುತ್ರರಾರೆಂದಡೆ ಕವಿತಿಳಕಂ ನಾಗದೇವಂ ಗಭೀರೋ**
**ದ್ದಾಮಂ ಶ್ರೀಸೋಮನಾಥಂ ಜನವಿನುತವಚೋವಲ್ಲಭಂ ಮಲ್ಲನೆಂದಂ**
**ತೀ ಮೂವರ್ಗೋತ್ರ ಚಿಂತಾಮಣಿಗಳನುಪಮ ಗೌಪಮಾಂಕಪ್ರಗೋತ್ರರ್॥**[೪೯]

'ಕವಿತಿಳಕಂ' ಎಂಬ ಬಿರುದನ್ನು ಪಡೆದಿದ್ದ ಕವಿ ನಾಗದೇವನ ತಂದೆಯ ಹೆಸರೂ ಕೂಡ ನಾಗದೇವನೆಂದು ಇಲ್ಲಿ ಉಕ್ತವಾಗಿದೆ, ತಾಯಿ ಚಾಮವ್ವೆ. ಸೋಮನಾಥ ಮತ್ತು ಮಲ್ಲ ಎಂಬುವವರು ಈತನ ಇಬ್ಬರು ಸಹೋದರರು. ಇವರದು ಗೌತಮಗೋತ್ರವೆಂದು ಈ ಮೇಲಿನ ಪದ್ಯದಲ್ಲಿ ತಿಳಿಸಿದ್ದಾನೆ.

ಈ ಶಾಸನವನ್ನು ರಚಿಸುವ ವೇಳೆಗೆ 'ಕವಿತಿಳಕಂ' ಎಂಬ ಬಿರುದಿಗೆ ಭಾಜನನಾಗಿರುವ ಕವಿಯು ಇನ್ನೂ ಕೆಲವು ಕಾವ್ಯಗಳನ್ನು ರಚಿಸಿದ್ದಾನೆನ್ನುವುದು ಸ್ಪಷ್ಟವಾಗುವುದಾದರೂ, ಈತನು ರಚಿಸಿರುವ ಯಾವ ಕಾವ್ಯವೂ ದೊರೆತಿಲ್ಲ. ಬೈಚಲದೇವಿಯು ಹಾಕಿಸಿರುವ ಈ ಶಾಸನದಿಂದ ಕವಿ ಕುರಿತಾದ ಅಲ್ಪ ವಿಚಾರ ತಿಳಿದು ಬಂದಿದೆ.

**ಸಾಹಿತ್ಯ ಕೃತಿಗಳ (ಹಸ್ತಪ್ರತಿ) ಲಿಪಿಕರಣಕ್ಕೆ ಅರಸಿಯರ ಕೊಡುಗೆ**

ಸಾವಿರಾರು ವರ್ಷಗಳ ಶಾಸನಗಳು ಇಂದಿಗೂ ಉಪಲಬ್ದವಾಗಿ ನಮಗೆ ಅನೇಕ ಮಾಹಿತಿಗಳನ್ನು ಒದಗಿಸಿಕೊಟ್ಟಿರುವಂತೆ, ನೂರಾರು ವರ್ಷಗಳಿಂದ ಉಳಿದುಬಂದಿರುವ ತಾಳೆಗರಿಗಳೂ ಸಹ ನಮಗೆ ಅನೇಕ ಮಹತ್ವದ ಸಂಗತಿಗಳನ್ನು ಕೊಟ್ಟಿವೆ. ಕಾವ್ಯ ರಚನೆಗೆ ನೀಡಿರುವ ಪ್ರೋತ್ಸಾಹದಷ್ಟೇ ಮಹತ್ವ ಆ ಕಾವ್ಯವನ್ನು ಮುಂದಿನ ಪೀಳಿಗೆಗಾಗಿ ಉಳಿಸಿಕೊಂಡು ಬರುವ ಕಾರ್ಯಕ್ಕೂ ಇದೆ. ರಚಿತವಾದ ಕಾವ್ಯಗಳ ಪ್ರತಿಗಳನ್ನು ಮಾಡಿಸುವ ಇಂತಹ ಮಹತ್ವದ ಕಾರ್ಯಗಳೂ ಸಹ ಅರಸಿಯರಿಂದ ನಡೆದಿದೆ. ಜೈನ ಧರ್ಮವನ್ನು ಅನುಸರಿಸಿರುವ ರಾಜಮನೆತನದವರು ಇಂಥ ಕಾರ್ಯವನ್ನು ಹೆಚ್ಚಾಗಿ ನಡೆಸಿದ್ದಾರೆ. ಜೈನಧರ್ಮದಲ್ಲಿ ಆಹಾರ, ಅಭಯ, ಭೈಷಜ ಶಾಸ್ತ್ರದಾನಗಳನ್ನು ಚತುರ್ವಿಧ ದಾನವೆಂದು ಕರೆಯುವರು. ಗೃಹಸ್ಥರಾದ ಜೈನರು ಪಾಲಿಸುವ ಕೆಲವು ಧರ್ಮಗಳಲ್ಲಿ ಇವು ಸೇರಿವೆ. ಅನೇಕ ಸಂದರ್ಭಗಳಲ್ಲಿ ಇವರು ಮಾಡುವ ಸತ್ಕಾರ್ಯಗಳೊಂದಿಗೆ ಗ್ರಂಥಗಳನ್ನು ಪ್ರತಿಮಾಡಿಸಿ ದಾನ ನೀಡುವ ಈ ಸಂಪ್ರದಾಯವು ಇಂದಿಗೆ ಅನೇಕ ಕೃತಿಗಳು ಉಳಿದುಬರಲು ಕಾರಣವಾಗಿದೆ.

ಹೊಯ್ಸಳ ವಿಷ್ಣುವರ್ಧನನ ರಾಣಿ ಶಾಂತಲೆಯನ್ನು ಶ್ರವಣ ಬೆಳಗೊಳದ ೧೭೬ನೆಯ ಸಂಖ್ಯೆಯ ಶಾಸನವು **'ಶಾಸ್ತ್ರದಾನ ವಿನೋದೆ'** ಎಂದು ಬಣ್ಣಿಸಿದೆ. ಇದು ಈಕೆಯು ಹಲವು ಕಾವ್ಯಗಳನ್ನು ಪ್ರತಿಮಾಡಿಸಿ ಹಂಚಿರುವ ವಿಚಾರವನ್ನು ತಿಳಿಸುತ್ತದೆ. ಇವಳಂತೆ ಇವಳ ಮಗಳು ಹರಿಯಬ್ಬರಸಿ (ಹರಿಯಲದೇವಿ) ಕೂಡ ಗ್ರಂಥಗಳನ್ನು ಪ್ರತಿಮಾಡಿಸಿ ಹಂಚಿರುವ ವಿಚಾರ ತಿಳಿದುಬರುತ್ತದೆ.

ಚಂದಲದೇವಿ (ಗಂಗಮಹಾದೇವಿ) ಹಾಗೂ ಬಾಚಲದೇವಿಯರು ಉತ್ತರಕಾಲೀನ ಮಂಡಲಿಯ ಗಂಗರಾಜ ಬುಜಬಲಗಂಗನ ರಾಣಿಯರು. ಕಿರಿಯರಸಿ ಬಾಚಲದೇವಿಯು ತುಂಗಾನದಿ ದಂಡೆಯ ಬನ್ನಿಕೆರೆಯಲ್ಲಿ ಪಾರ್ಶ್ವನಾಥ ಚೈತ್ಯಾಲಯವನ್ನು ನಿರ್ಮಿಸಿದ್ದಳು. ಇವಳು ನಿರ್ಮಿಸಿದ ಈ ಜಿನಾಲಯದಲ್ಲಿ ಪಿರಿಯರಸಿ ಚಂದಲದೇವಿಯ ತಾಯಿ ರವಿದೇವಿಯಕ್ಕ ಶ್ರುತ ಪಂಚಮಿನೋಂಪಿಯನ್ನು ಆಚರಿಸಿ ಅದರ ಉದ್ಯಾಪನೆಯಂದು ಮುನಿ ಮಾಘನಂದಿ ಸಿದ್ಧಾಂತ ದೇವರಿಗೆ ಸಮರ್ಪಿಸಲು ಷಟ್-ಖಂಡ ಆಗಮ ಸಿದ್ಧಾಂತ ಗ್ರಂಥಕ್ಕೆ ಬರೆದ ಅಪೂರ್ವ ಟೀಕಾ ಗ್ರಂಥವಾದ ದವಲ ಗ್ರಂಥವನ್ನು ಪ್ರತಿ ಮಾಡಿಸಿ ಸಮರ್ಪಿಸಿದಳು.

ಆರನೆಯ ವಿಕ್ರಮಾದಿತ್ಯನ ಪಿರಿಯರಸಿ ಪಟ್ಟಮಹಾದೇವಿ ಚಂದಲದೇವಿಯ ಸಾಮಂತ ಪ್ರಭುವಾಗಿದ್ದ ಚೌಧುರೆ ರಕ್ಕಸಯ್ಯನ ಮಗ ಶಾಂತಿವರ್ಮನ ಮಡದಿ ಮಲ್ಲಿಕಬ್ಬೆಯೂ ಶ್ರುತಪಂಚಮಿ ನೋಂಪಿಯನ್ನು ಆಚರಿಸಿ ಮಹಾಧವಲಗ್ರಂಥವನ್ನು ಪ್ರತಿ ಮಾಡಿಸಿ ಮಾಘನಂದಿ ಸಿದ್ಧಾಂತ ದೇವರಿಗೆ ಸಮರ್ಪಿಸಿದಳು.

ಈ ಕಾರ್ಯಕ್ಕಾಗಿ ರವಿಯಕ್ಕ ಹಾಗೂ ಮಲ್ಲಿಕಬ್ಬೆಯರು ಜಿನ್ನಪಯ್ಯ ಮತ್ತು ಉದಯಾದಿತ್ಯರೆಂಬ ಲಿಪಿಕಾರರನ್ನು ಕೊಪ್ಪಳದಿಂದ ಬರಮಾಡಿಕೊಂಡು, ಅವರಿಗೆ ಆಶ್ರಯವಿತ್ತು ಅವರಿಂದ ಈ ಮಹಾನ್ ಗ್ರಂಥಗಳನ್ನು ಪ್ರತಿ ಮಾಡಿಸಿಕೊಂಡರು. ಧವಲಾದ ಪ್ರತಿಕಾರನಾದ ಜಿನ್ನಪ್ಪಯ್ಯ ಈ ಕೃತಿಯಲ್ಲಿ ತನ್ನ ವಿಚಾರವಾಗಿ ಒಂದು ವೃತ್ತ ಹಾಗೂ ಎರಡು ಕಂದಪದ್ಯಗಳನ್ನು ರಚಿಸಿದ್ದಾನೆ. ಈ ಪ್ರತಿಕಾರರು ಅಸಾಮಾನ್ಯರು, ಕವಿಗಳು ಪ್ರೌಢ ವಿದ್ವಾಂಸರೂ, ಭಾಷಾಮರ್ಯಾದೆಯನ್ನೂ ಅಕ್ಷರ ಸೌಷ್ಠವವನ್ನೂ ಆಗಮ ಪರಂಪರೆಯನ್ನೂ ಬಲ್ಲವರಾಗಿದ್ದು, ಕನ್ನಡ ಸಂಸ್ಕೃತ, ಪ್ರಾಕೃತ ಭಾಷೆಗಳಲ್ಲಿ ಸಮದಂಡಿಯಾದ ಪ್ರಭುತ್ವ ಪಡೆದಿದ್ದರು. ಮಿಗಿಲಾಗಿ ಚಿತ್ರಕಲೆಯಲ್ಲೂ ಪರಿಶ್ರಮ ಉಳ್ಳವರಾಗಿದ್ದು ತಮ್ಮ ಕಲಾ ನೈಪುಣ್ಯವನ್ನು ತಾಡೆಯೋಲೆಗಳ ಮೇಲೆ ಸುಂದರವಾಗಿ ಮೂಡಿಸಿದ್ದಾರೆ. ಉದಯಾದಿತ್ಯನು ಮಹಾಧವಲದ ಕಡೆಯಲ್ಲಿನ ಪ್ರಶಸ್ತಿ ಪದ್ಯಗಳಲ್ಲಿ ಮಲ್ಲಿಕಬ್ಬೆಯ ಉದಾರತೆಯನ್ನು ಕೊಂಡಾಡಿದ್ದಾನೆ.

ಜೈನಧರ್ಮದ ಷಟ್‌ಖಂಡಾಗಮಕ್ಕೆ ಕೊಂಡಕುಂದ, ಶ್ಯಾಮಕುಂದ, ತುಂಬಲೂರ, ಸಮಂತಭದ್ರ ಮತ್ತು ಬಪ್ಪದೇವರೆಂಬ ಆಚಾರ್ಯರು ಬರೆದಿರುವ ಟೀಕಾಗ್ರಂಥಗಳು ಈ ವರೆಗೆ ಉಳಿದು ಬಂದಿಲ್ಲ. ಈಗ ಸಿಕ್ಕಿರುವ ಏಕೈಕ ಟೀಕಾಗ್ರಂಥವೇ ಧವಲ. ೭೨ ಸಾವಿರ ಶ್ಲೋಕಗಳುಳ್ಳ ಈ ಗ್ರಂಥವನ್ನು ಕ್ರಿ.ಶ.೮೧೬ರಲ್ಲಿ ರಚಿಸಲಾಗಿತ್ತು. ಆನಂತರ ಇದರ ಪ್ರತಿಗಳು ಶ್ರವಣಬೆಳಗೊಳ, ಕೊಪ್ಪಳ, ಬಂಕಾಪುರ ಮೊದಲಾದ ಪ್ರಮುಖ ಶ್ರುತ ಭಂಡಾರ ಸೇರಿದವು. ಶ್ರವಣಬೆಳಗೊಳದ ಪ್ರತಿಯನ್ನಾಧರಿಸಿ ಪ್ರಸ್ತುತ ದೊರಕಿರುವ ಏಕೈಕ ಪ್ರತಿಯನ್ನು ರವಿಯಕ್ಕ ಲಿಪಿ ಮಾಡಿಸಿದಳು. ಆದರೆ ಕಾಲಾಂತರದಲ್ಲಿ ಶ್ರವಣಬೆಳಗೊಳದ ಪ್ರತಿಯೂ ನಾಶವಾಗಿ ರವಿಯಕ್ಕ ಪ್ರತಿಮಾಡಿಸಿರುವ ಏಕೈಕ ಗ್ರಂಥ ಮಾತ್ರ ಉಳಿದು ಬಂದಿದೆ. ಸಾವಿರದ ಮುನ್ನೂರು ವರ್ಷಗಳ ಹಿಂದಿನ ಆಗಮ ಗ್ರಂಥ ಇವಳಿಂದ ಇಂದಿನವರಿಗೆ ಲಭಿಸುವಂತಾಗಿದೆ.

ಧವಲಾ, ಜಯಧವಲಾ ಮತ್ತು ಮಹಾಧವಲಾ ಗ್ರಂಥಗಳನ್ನು ಧವಲತ್ರಯ ಎಂದು ಕರೆಯಲಾಗಿದೆ. ಇವು ಜೈನಧರ್ಮದ ಶ್ರೇಷ್ಠ ಕೃತಿಗಳಾಗಿ ಭಾರತಾದ್ಯಂತ ಪ್ರಸಿದ್ಧವಾಗಿದೆ. ಕರ್ನಾಟಕದ ವಿಪುಲ ಜೈನಸಾಹಿತ್ಯ ರಾಶಿಗೆ ಮುಕುಟಪ್ರಾಯವಾಗಿದೆ ಎಂದರೂ ಉತ್ಪ್ರೇಕ್ಷೆಯಲ್ಲ. ಜಯಧವಲಾ ಟೀಕಾ ಕೃತಿಯು ವೀರಸೇನಾಚಾರ್ಯರು ಮತ್ತು ಜಿನಸೇನಾಚಾರ್ಯರಿಂದ ಬರೆಯಲ್ಪಟ್ಟಿದೆ. ಇವರಿಬ್ಬರೂ ರಾಷ್ಟ್ರಕೂಟ ಚಕ್ರವರ್ತಿಗಳಾದ ಜಗತ್ತುಂಗ ಮತ್ತು ಅಮೋಘವರ್ಷರ ಕಾಲದಲ್ಲಿದ್ದವರು. ಇಂದು ಧವಲಾ, ಜಯಧವಲಾ ಮತ್ತು ಮಹಾಧವಲಾಗಳ ಕವಿಯ ಸ್ವಹಸ್ತ ಮೂಲಪ್ರತಿಗಳು ಲಭ್ಯವಿಲ್ಲ. ಈಗ ಲಭ್ಯವಿರುವುದು ಮೂಲಗ್ರಂಥಗಳಿಂದ ನಕಲು ಮಾಡಿಸಿದ ಪ್ರತಿಗಳಾಗಿವೆ. ಈ ಪ್ರತಿಗಳು ಇಂದು ಉಳಿದು ಬಂದಿರುವುದಕ್ಕೆ ಅಂದಿನ ರಾಜಮನೆತನದ ಮಹಿಳೆಯರ ಧಾರ್ಮಿಕ ಮನೋಭಾವವೇ ಕಾರಣವಾಗಿದೆ[೫೦].

ನಗರಿಯ **ಮಲ್ಲಿರಾಯ ಅರಸಿನ ಪಟ್ಟಮಹಾದೇವಿ ಲಲಿತಾದೇವಿಯವರು** ತಮಗೆ ಕೇವಲಜ್ಞಾನ ಕಾರಣವಾಗಿ ಅಯ್ಯಗಳ ಶಿಷ್ಯರು ಗುಂಮಣ್ಣಗಳಿಗೆ ಬರೆಸಿಕೊಟ್ಟ ಕ್ರಿಯಾವ್ಯಾಖ್ಯಾನ ಗ್ರಂಥಕ್ಕೆ ಮಂಗಲ ಮಹಾಶ್ರೀ" ಎಂದು ಸು.೧೧೦೦ರಲ್ಲಿ ರಚಿತವಾಗಿದ್ದ ಪ್ರಾಕೃತ ಗ್ರಂಥ ಪ್ರಭಾಚಂದ್ರರ ಕ್ರಿಯಾವ್ಯಾಖ್ಯಾ ಎಂಬ ಟೀಕು ಗ್ರಂಥವನ್ನು ಪ್ರತಿಮಾಡುವಾಗ ಲಿಪಿಕಾರ ತಿಳಿಸಿದ್ದಾನೆ. ಇಲ್ಲಿ ಉಲ್ಲೇಖವಾಗಿರುವ ಮಲ್ಲಿರಾಯ ಗೋರುಸೊಪ್ಪೆಯನ್ನು ಕ್ರಿ.ಶ.೧೪೭೧–೮೦ರ ಅವಧಿಯಲ್ಲಿ ಆಳ್ವಿಕೆ ನಡೆಸುತ್ತಿದ್ದವನು. ಈತನ ರಾಣಿ ಲಲಿತಾದೇವಿ ಈ ಗ್ರಂಥವನ್ನು ಪ್ರತಿಮಾಡಿಸಿ ಗುಮ್ಮಣ್ಣಗಳಿಗೆ ಶಾಸ್ತ್ರದಾನ ಮಾಡಿದ್ದಾಳೆ.

ಪ್ರಸ್ತುತ ಅಧ್ಯಯನದಲ್ಲಿ ಗಮನಿಸಿದಂತೆ ಸಾಹಿತ್ಯಕ್ಕೆ ಅರಸಿಯರು ನೀಡಿರುವ ಕೊಡುಗೆ ಬಹಳ ವಿಶಿಷ್ಟವೂ, ವ್ಯಾಪಕವೂ ಆಗಿದೆ. ಅರಸಿಯರು ಹೊರಡಿಸಿರುವ ಶಾಸನವು ವೈವಿದ್ಯಮಯವಾಗಿದ್ದು, ಅವುಗಳಲ್ಲಿ ಹೆಚ್ಚಿನವು ದಾನ ಶಾಸನಗಳೇ ಆಗಿದ್ದರೂ, ವಿಷಯ ನಿರೂಪಣೆ, ಸಂದರ್ಭ, ಆ ದಾನಕ್ಕೆ ವಿಧಿಸಿದ ನಿಯಮಗಳಲ್ಲಿ ಅಂದಿನ ಅರಸಿಯರ ಮನೋಭಾವ ಪ್ರಕಟವಾಗಿವೆ. "ಗ್ರಂಥಸ್ಥ ಕಾವ್ಯಗಳ ರಚನೆಕಾರರು ಸ್ವಯಂ ಪ್ರೇರಿತರಾಗಿ ಕಾವ್ಯ ರಚಿಸಿರುವ ಉದಾಹರಣೆಗಳಿದ್ದರೂ ಶಾಸನಗಳನ್ನು ರಚಿಸಿದ ಕವಿಗಳೆಲ್ಲಾ ಆಸ್ಥಾನದಲ್ಲಿ ಆಶ್ರಯ ಪಡೆದವರೇ ಆಗಿರುತ್ತಿದ್ದರು"[೫೧]. ಇಲ್ಲಿ ಅರಸಿಯರೇ ಹೊರಡಿಸಿರುವ ಶಾಸನಗಳನ್ನು ಗಮನಿಸಲಾಗಿದ್ದು, ಇಲ್ಲಿ ಗುರುತಿಸಲಾಗಿರುವ ಶಾಸನಕವಿಗಳು ಅರಸಿಯರ ಪೋಷಣೆಯಲ್ಲಿ ಶಾಸನ ಪದ್ಯಗಳನ್ನು ರಚಿಸಿದವರಾಗಿದ್ದಾರೆ.

ಶಾಸನಗಳು ತಮ್ಮ ಕಾಲದ ರಾಜಕೀಯ ಮತ್ತು ಸಾಂಸ್ಕೃತಿಕ ವಿಚಾರಗಳಮೇಲೆ ಬೆಳಕು ಬೀರುವುದಷ್ಟೇ ಅಲ್ಲ, ಕಾವ್ಯಾಂಶಗಳನ್ನೊಳಗೊಂಡ ಅವುಗಳ ರಚನೆಗೆ ಮೂಲ ಪ್ರೇರಣೆ, ಪ್ರಭಾವ ಪೋಷಣೆಗಳ ವಿಚಾರವನ್ನೂ ತಿಳಿಸುತ್ತವೆ.

ಸಾಹಿತ್ಯಪೋಷಣೆಯಷ್ಟೇ ಅಲ್ಲದೆ ವಿದ್ಯಾಭ್ಯಾಸಕ್ಕೂ ಅರಸಿಯರು ವಿಶೇಷ ಕಾಳಜಿ ವಹಿಸಿದ್ದನ್ನು ಗಮನಿಸಬಹುದು.

ಈ ಅಧ್ಯಯನದಲ್ಲಿ ಉಲ್ಲೇಖಿಸಿರುವ ಶಾಸನ ಕವಿಗಳಾದ ನಾಗದೇವ, ನಾಗವರ್ಮ, ಸುಭಗ, ಕಮಲಾದಿತ್ಯ, ಕಂದರ್ಪ, ಮಲ್ಲಿನಾಥ, ಬಮ್ಮರಹರಿಯಣ್ಣ, ನಾಗಾರ್ಜುನ ಪಂಡಿತ ಮೊದಲಾದವರ ಉಲ್ಲೇಖ ಕೇವಲ ಶಾಸನಗಳಲ್ಲಿ ಮಾತ್ರ ದೊರಕುತ್ತದೆ. ಇವರಲ್ಲಿ ಅನೇಕರ ಶಾಸನ ಪದ್ಯಗಳ ಬಂಧ ಇವರ ಕವಿತಾ ಸಾಮರ್ಥ್ಯವನ್ನು ಕುರಿತು ತಿಳಿಸುತ್ತವೆ. ಇದು, ಇವರು ಶಾಸನ ಪದ್ಯಗಳನ್ನು ಹೊರತು ಗ್ರಂಥಗಳನ್ನು ರಚಿಸಿರುವ ಸಾಧ್ಯತೆಗಳಿರುವ ಸುಳಿವನ್ನು ತಿಳುಹಿದರೂ ಇವರುಗಳು ರಚಿಸಿರಬಹುದಾದ ಗ್ರಂಥಗಳು ದೊರಕದೆ ಇವರು ಕೇವಲ ಶಾಸನಕವಿಗಳೆಂದೇ ಗುರುತಿಸಲ್ಪಟ್ಟಿದ್ದಾರೆ.

"ಶಾಸನ ಕ್ಷೇತ್ರ ನಮಗೆ ದ್ವಿತೀಯ ವರ್ಗದ ಸಾಮಾನ್ಯ ಶಕ್ತಿಯ ಕವಿಗಳನ್ನು ಕಾಣಿಸಬಲ್ಲದೇ ಹೊರತು ಮಹಾಕವಿಗಳನ್ನಲ್ಲ. ಈ ಶಾಸನ ಕವಿಗಳಲ್ಲಿ ಸಾಮಾನ್ಯವಾಗಿ ಪ್ರತಿಭೆಗಿಂತ ಪಾಂಡಿತ್ಯ ಹಾಗೂ ಅನುಕರಣ ಪ್ರವೃತ್ತಿ ಅಧಿಕವಾಗಿರುತ್ತದೆ"[೫೨] ಎಂಬ ಹಾ.ಮಾ.ನಾಯಕರ ಹೇಳಿಕೆಯನ್ನು ಈ ಮೇಲಿನ ಕೆಲವು ಶಾಸನ ಪದ್ಯಗಳು ಪ್ರಶ್ನಿಸುವಂತಿದೆ. ಪ್ರಾಚೀನ ಕನ್ನಡದ ಪ್ರಸಿದ್ಧ ಕವಿಗಳಾದ ರನ್ನ, ಪೊನ್ನ, ಜನ್ನ ಮೊದಲಾದವರು ಶಾಸನಪದ್ಯಗಳನ್ನು ರಚಿಸಿದ್ದಾರೆ.

ಚೋಳರ ವಿರುದ್ಧ ಮೂರನೆಯ ಕೃಷ್ಣನ ಗೆಲುವನ್ನು ಸಾರುವ ಆತಕೂರು ಶಾಸನವನ್ನೂ ಹಾಗೂ ಜುರಾಪ್ರಶಸ್ತಿ ಶಾಸನವನ್ನೂ ಈತನ ಆಸ್ಥಾನಕವಿಯಾಗಿದ್ದ ಪೊನ್ನ ರಚಿಸಿರುವನೆಂದು ಗುರುತಿಸಲಾಗಿದೆ[೫೩].

ಜನ್ನನೂ ಕೂಡ ತನ್ನೆರಡು ಮಹಾಕಾವ್ಯಗಳ ರಚನೆಗೂ ಮೊದಲು ಕ್ರಿ.ಶ.೧೧೯೦ರ ಚನ್ನರಾಯಪಟ್ಟಣದ ೧೭೬ನೆಯ ಸಂಖ್ಯೆಯ ಶಾಸನವನ್ನೂ, ೧೧೯೭ರಲ್ಲಿ ತರೀಕೆರೆಯ ೪೫ನೆಯ ಶಾಸನವನ್ನೂ ರಚಿಸಿದ್ದಾನೆ. ಹೊಯ್ಸಳ ವೀರಬಲ್ಲಾಳನ ಆಸ್ಥಾನಕವಿಯಾಗಿದ್ದ ಇವನು ಕ್ರಿ.ಶ.೧೨೦೯ರಲ್ಲಿ ಅನಂತನಾಥಪುರಾಣವನ್ನೂ, ಬಲ್ಲಾಳನ ಮಗ ವೀರನರಸಿಂಹನ ಕಾಲದಲ್ಲಿ ಕ್ರಿ.ಶ.೧೨೩೦ರಲ್ಲಿ ಯಶೋಧರ ಚರಿತಯನ್ನೂ ಬರೆದಿದ್ದಾನೆ. ಇವನು ಮಹಾಕವಿಯಾಗಿ ರೂಪುಗೊಳ್ಳುವ ಮುನ್ನ ಶಾಸನಕವಿಯಾಗಿದ್ದನೆನ್ನುವುದನ್ನು ಇಲ್ಲಿ ಗಮನಿಸಬಹುದು.

ಪಾರ್ಶ್ವನಾಥ ಪುರಾಣ ರಚಿಸಿರುವ ಪಾರ್ಶ್ವಪಂಡಿತನು ಸೌದತ್ತಿಯ ರಟ್ಟರ ಆಸ್ಥಾನ ಕವಿ. ಈತನು ಕ್ರಿ.ಶ.೧೨೦೫ರ ಕಲ್ಹೊಳೆಯಲ್ಲಿ ಶಾಸನವನ್ನು ರಚಿಸಿದ್ದಾನೆ[೫೪]. ಜನ್ನನ ಪ್ರಶಂಸೆಗೊಳಗಾದ ಬಾಳಚಂದ್ರಕವಿ ಕಂದರ್ಪ ಕ್ರಿ.ಶ.೧೨೦೪ರ ಬೆಳಗಾವಿಯ ಶಾಸನವನ್ನು ರಚಿಸಿದ್ದಾನೆ[೫೫]. ಹೀಗೆ ಕನ್ನಡದ ಅನೇಕ ಸುಪ್ರಸಿದ್ಧ ಕವಿಗಳು ಶಾಸನವನ್ನು ರಚಿಸಿದ್ದಾರೆ, ಶಾಸನ ಪದ್ಯ ರಚಕರನ್ನು ಎರಡನೆಯ ದರ್ಜೆಯ ಕವಿಗಳು ಎಂದು ಹೀಗಳೆಯುವಂತಿಲ್ಲ. ಕರ್ನಾಟಕದ ಅರಸಿಯರು ಬರೆಯಿಸಿರುವ ಅನೇಕ ಶಾಸನ ಪದ್ಯಗಳೂ ಕೂಡ ಉತ್ಕೃಷ್ಟ ಕಾವ್ಯಗುಣಗಳನ್ನು ಹೊಂದಿದ್ದು, ಅದರ ಕರ್ತೃಗಳು ಉತ್ತಮ ಕವಿತಾ ಶಕ್ತಿಯನ್ನು ಹೊಂದಿದವರಾಗಿದ್ದರು.

**ಅಧ್ಯಯನದ ಫಲಿತ**

ಈ ಅಧ್ಯಾಯದಲ್ಲಿ ಕರ್ನಾಟಕದ ಪ್ರಾಚೀನ ಅರಸಿಯರು ಕವಿಗಳಿಗೆ ಆಶ್ರಯ, ಪ್ರೋತ್ಸಾಹ ನೀಡುವುದರ ಮೂಲಕ ಸಾಹಿತ್ಯ ರಚನೆಗೆ ಕಾರಣರಾದ ಹಿನ್ನೆಲೆಯಲ್ಲಿ ಸಾಹಿತ್ಯಕ್ಕೆ ಅವರು ನೀಡಿರುವ ಕೊಡುಗೆಯನ್ನು ಗುರುತಿಸುವ ಪ್ರಯತ್ನ ನಡೆಸಲಾಗಿದೆ. ಇಲ್ಲಿ ಅರಸಿಯರು ಸಾಹಿತ್ಯ ರಚನೆಗಷ್ಟೇ ಅಲ್ಲದೆ ಪ್ರಾಚೀನ ಕಾವ್ಯಗಳ ಲಿಪೀಕರಣಕ್ಕೂ ಕಾರಣರಾಗಿರುವುದನ್ನು ಗಮನಿಸುತ್ತೇವೆ.

ಗ್ರಂಥಸ್ಥಕಾವ್ಯಗಳು ಉಪಲಬ್ಧವಿಲ್ಲದ ಕಾರಣ, ಇಲ್ಲಿನ ಕವಿಗಳ ವೈಯಕ್ತಿಕ ವಿಚಾರವಾಗಲೀ, ಕಾವ್ಯ ರಚನಾ ಚಾತುರ್ಯವನ್ನಾಗಲೀ ಶಾಸನಪದ್ಯಗಳಿಂದಲೇ ಗುರುತಿಸಲಾಗಿದೆ. ರನ್ನಕವಿಗೆ ಆಶ್ರಯ ನೀಡಿದ ಅತ್ತಿಮಬ್ಬೆಯ

ಉದಹರಣೆಯೊಂದನ್ನುಳಿದು ಮಿಕ್ಕೆಲ್ಲ ಅರಸಿಯರ ಸಾಹಿತಿಗಳ ಪೋಷಣೆ ಗಮನಿಸಿ, ವಿಶ್ಲೇಷಿಸಲು ಶಾಸನವೇ ಮೂಲ ಆಧಾರವಾಗಿದೆ.

ಈ ಮೇಲಿನ ಕೆಲವು ಉದಾಹರಣೆಗಳಲ್ಲಿ ಕಂಡುಬರುವಂತೆ ಅನೇಕ ಶಾಸನಕವಿಗಳು ತಮ್ಮ ವಿಚಾರವನ್ನು ಶಾಸನದ ಕಡೆಯಲ್ಲಿ ತಿಳಿಸಿದ್ದಾರೆ. ಕೆಲವು ಕವಿಗಳು ಯಾವ ವಿವರಣೆಯನ್ನೂ ನೀಡದೆ ಕೇವಲ ಹೆಸರನ್ನು ಮಾತ್ರ ಒಂದು ಸಾಲಿನಲ್ಲಿ ತಿಳಿಸಿದ್ದಾರೆ. ಕವಿ ನಾಗದೇವನು ಒಂದು ವೃತ್ತದಲ್ಲಿ ತನ್ನ ವಿಚಾರವನ್ನು ತಿಳಿಸಿದರೆ, ಕವಿ ತಿಪ್ಪಣ್ಣೋಜ, ತ್ರಿವಿಕ್ರಮ, ಕಮಲಾದಿತ್ಯ, ಮಲ್ಲಿನಾಥರು ಒಂದೊಂದು ಕಂದಪದ್ಯದಲ್ಲಿ ತಮ್ಮ ವಿಚಾರವನ್ನು ತಿಳಿಸಿದ್ದಾರೆ. ಕವಿ ನಾಗಾರ್ಜುನ ತನ್ನ ಬಿರುದಿನೊಂದಿಗೆ ಹೆಸರನ್ನು ಉಲ್ಲೇಖಿಸಿದ್ದರೆ, ಕವಿ ಕಂದರ್ಪ, ನಾಮಯ್ಯ, ನಾಗವರ್ಮ ಮೊದಲಾದವರು ಕೇವಲ ಒಂದೊಂದು ಪದದಲ್ಲಿ ತಮ್ಮ ಹೆಸರುಗಳನ್ನು ಉಲ್ಲೇಖಿಸಿದ್ದಾರೆ. ಆದರೆ ಹೆಸರನ್ನೇ ತಿಳಿಸದ ಅನೇಕ ಶಾಸನ ಪದ್ಯಗಳು ದೊರಕುತ್ತವೆ. ಕಾವ್ಯ ದೃಷ್ಟಿಯಿಂದ ಅಂತಹ ಒಂದೆರಡು ಶಾಸನಗಳನ್ನೂ ಇಲ್ಲಿ ಗಮನಿಸಲಾಗಿದೆ. ಹೊಯ್ಸಳ ರಾಣಿ ಶಾಂತಲೆಯ ಕೆಲವು ಪ್ರಸಿದ್ಧ ಶಾಸನಗಳಂತೆಯೇ ವಿಶಿಷ್ಟ ವಸ್ತುವನ್ನು ಹೊಂದಿರುವ ಮೋಚಬ್ಬರಸಿಯ ಶಾಸನವೂ ವಿಶೇಷ ಕಾವ್ಯಬಂಧಗಳಿಂದ ರಚಿತವಾದ ಶಾಸನ ಪದ್ಯವಾಗಿರುವುದನ್ನು ಇಲ್ಲಿ ಗಮನಿಸಲಾಗಿದೆ.

ಕೆಲವು ಕವಿಗಳು ತಮ್ಮ ಸ್ವವಿಚಾರಗಳನ್ನು ಚುಟುಕುಗೊಳಿಸಿದ್ದರೂ, ತಾವು ಹೇಳಲಿರುವ ಅರಸಿಯ ಸಾಧನೆಯನ್ನಾಗಲಿ, ತಮಗೆ ಆಶ್ರಯವಿತ್ತ ಅರಸಿಯರ ಗುಣಗಾನ ವರ್ಣನೆಗಳನ್ನಾಗಲೀ ಪುಟ್ಟ ಶಾಸನ ಪದ್ಯಗಳಲ್ಲಿಯೇ ಸಮರ್ಥವಾಗಿ ರಚಿಸಿ ತಮ್ಮ ಕಾವ್ಯನೈಪುಣ್ಯ, ಭಾಷಾ ಪಾಂಡಿತ್ಯಗಳನ್ನು ಮೆರೆದಿದ್ದಾರೆ.

ಕರ್ನಾಟಕದ ಅರಸಿಯರು ಮಾಡಿಸಿದ ಚೈತ್ಯಾಲಯ, ದೇವಾಲಯ, ತಟಾಕಗಳು ಕಾಲಾಂತರದಲ್ಲಿ ಅಳಿವಿನ ಅಂಚಿಗೆ ಬಂದಿದ್ದರೂ, ಅದರೊಂದಿಗೆ ಹಾಕಿಸಿದ ಶಿಲಾಶಾಸನಗಳು ಉಳಿದು ಬಂದು ಅವರ ಹೆಸರನ್ನು ಶಾಶ್ವತವಾಗಿಸಿವೆ. ಇದರೊಂದಿಗೆ ಶಾಸನ ಕವಿಗಳಿಗೆ ಅವಕಾಶವಿತ್ತು ಬರೆಯಿಸಿದ ಪದ್ಯಗಳು ಅರಸಿಯರ ಸಾಹಿತ್ಯ ಪ್ರೇಮವನ್ನೂ, ಕವಿಗಳಿಗಿತ್ತ ಮನ್ನಣೆ–ಪ್ರೋತ್ಸಾಹಗಳನ್ನೂ ಕುರಿತು ತಿಳಿಸುತ್ತವೆ. ಹಸ್ತಪ್ರತಿಯೊಂದಿಗೆ ಮರೆಯಾಗಿರುವ ಹಲವಾರು ಸಂಗತಿಗಳು ಇಂಥ ಶಾಸನಗಳಿಂದಾದರೂ ಬೆಳಕಿಗೆ ಬರುವಂತಾಗಿದೆ.

**ಟಿಪ್ಪಣಿಗಳು ಹಾಗೂ ಆಕರಗ್ರಂಥಗಳು**


೧. ಶೆಟ್ಟರ್.ಷ, ೨೦೧೪, ***ಹಳಗನ್ನಡಲಿಪಿ, ಲಿಪಿಕಾರ, ಲಿಪಿ ವ್ಯವಸಾಯ***, ಅಭಿನವ, ಬೆಂಗಳೂರು,
೨. Sii ix(i) no.೧೭
೩. E.I IV ಸಂಖ್ಯೆ, ೫೦, ಪು.೩೫೧
೪. SII ಸಂ XVII ಪು.೪೭–೪೯ ಕುಂಬಳೂರು ತಾಮ್ರಪಟ
೫. ಶೆಟ್ಟರ್.ಷ, ಪೂರ್ವೋಕ್ತ
೬. ಕ.ವಿ.ಶಾ.ಸಂ–೭ ರಾಯಚೂರು ಮಾನ್ವಿ ೮೮
೭. ಲಕ್ಷ್ಮಣ್ ತೆಲಗಾವಿ & ಎಂ.ವಿ.ಶ್ರೀನಿವಾಸ್ (ಸಂ), ೧೯೯೫, ***ಹುಲ್ಲೂರು ಶೀನಿವಾಸ ಜೋಯಿಸರ ಸಂಶೋಧನ ಲೇಖನಗಳು***, ಹುಲ್ಲೂರು ಶೀನಿವಾಸ ಜೋಯಿಸ ಗ್ರಂಥ ಪ್ರಕಟಣ ಸಮಿತಿ, ಚಿತ್ರದುರ್ಗ, ಪು.೪೫೧
೮. ಹನುಮಾಕ್ಷಿ ಗೋಗಿ(ಸಂ) ***ಕಲಬುರ್ಗಿ ಜಿಲ್ಲೆಯ ಶಾಸನಗಳು***, ಶಾಸನ ಸಂಖ್ಯೆ ೩೧, ನಿಪ್ಪಾಣಿ (ಕ್ರಿ.ಶ.೧೦೩೭)

೯. ಹನುಮಾಕ್ಷಿ ಗೋಗಿ, ***ಗುಲ್ಬರ್ಗಾ ಜಿಲ್ಲೆಯ ಶಾಸನ ಕವಿಗಳು*** 'ಶಾಸನಕವಿಗಳು' ವಿಚಾರ ಸಂಕಿರಣ ಕರ್ನಾಟಕ ಇತಿಹಾಸ ಅಕಾದೆಮಿ, ಪ್ರೊ.ಎಂ.ವಿ.ಸೀ ಸಭಾಂಗಣ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ , ಬೆಂಗಳೂರು. ದಿನಾಂಕ:೨೯.೧೨.೨೦೧೩

೧೦. ಗಣೇಶ್.ಕೆ.ಆರ್, ***ಆಂಧ್ರಪ್ರದೇಶದ ಕನ್ನಡ ಶಾಸನಗಳು – ಒಂದು ಅಧ್ಯಯನ***, ಕಸಾಪ ೧೯೯೬, ಪು.೨೩೪

೧೧. ಭೋಜರಾಜಪಾಟೀಲ, ***ನಾಗರಖಂಡ-೭೦ ಒಂದು ಅಧ್ಯಯನ***, ಆನಂದಪುರಂ, ೧೯೯೫, ಪು.೪೪

೧೨. E.C. VI ಶಿಕಾರಿಪುರ, ಬಂದಳಿಕೆ ೨೧೯

೧೩. ***ಕನ್ನಡ ಕೈಪಿಡಿ***, ಸಂಪುಟ-೧, ಮೈಸೂರು ವಿಶ್ವವಿದ್ಯಾನಿಲಯ, ೨೦೧೧, ಪು.೮೬

೧೪. E.C. XI ಚಿತ್ರದುರ್ಗ, ಬೇವಿನಹಳ್ಳಿ-೭೪

೧೫. E.I XVI ಸಂ.೧, ಪು.೩

೧೬. ಮೇವುಂಡಿ ಮಲ್ಲಾರಿ, ***ಕನ್ನಡನಾಡಿನ ಕೆಲವು ಶಾಸನ ಕವಿಗಳು***, ೧೯೭೪ ದ್ವಿ.ಮು, ಪು.೨೮

೧೭. ನರಸಿಂಹಾಚಾರ್.ಆರ್., ೨೦೧೧, ಕರ್ಣಾಟಕ ಕವಿಚರಿತೆ ಸಂ-೧, ಕಸಾಪ, ಬೆಂಗಳೂರು ಪುಟ ೫೬

೧೮. ಹೆರಂಜೆ ಕೃಷ್ಣ ಭಟ್ಟ & ಮುರಳೀಧರ ಉಪಾಧ್ಯ ಹಿರಿಯಡಕ (ಸಂ), ೧೯೯೫, ***ಗೋವಿಂದ ಪೈ ಸಂಶೋಧನ ಸಂಪುಟ***, ಉಡುಪಿ, ಪು.೧೯೮

೧೯. ಹಂಪ.ನಾ, ದಾನಚಿಂತಾಮಣಿ, ೧೯೯೬, ***ದಾನಚಿಂತಾಮಣಿ ಅತ್ತಿಮಬ್ಬೆ***, ಐಬಿಎಚ್ ಪ್ರಕಾಶನ, ಬೆಂಗಳೂರು

೨೦. B.K.I – 1 ಭಾಗ-೧, ಸಂಖ್ಯೆ ೫೨

೨೧. E.C. X ಮುಳಬಾಗಿಲು ೩೭, (ಕ್ರಿ.ಶ. ೯೮೨)

೨೨. ಕಲಬುರ್ಗಿ.ಎಂ.ಎಂ., ೧೯೭೩, ***ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ***, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪು.೧೪೪

೨೩. ಗಣೇಶ್.ಕೆ.ಆರ್, ವಿಶೇಷ ಉಪನ್ಯಾಸ, ಹಳಗನ್ನಡ ಕಾವ್ಯಾಭ್ಯಾಸ ಶಿಬಿರ, ಬಿ.ಎಂ.ಶ್ರೀ ಪ್ರತಿಷ್ಠಾನ, ಬೆಂಗಳೂರು

೨೪. ಕಲಬುರ್ಗಿ.ಎಂ.ಎಂ., ಪೂರ್ವೋಕ್ತ, ಪು.೧೪೫

೨೫. E.I xxix ಪು.೨೦೩-೨೧೯

೨೬. ಜ್ಯೋತ್ಸ್ನಾ ಕಾಮತ, ೨೦೦೮, **ಕೈಗನ್ನಡಿಯಲ್ಲಿ ಕನ್ನಡಿತಿ,** ಕರ್ನಾಟಕ ಇತಿಹಾಸ ಸಂಶೋಧನ ಮಂಡಲ, ಧಾರವಾಡ, ಪು.೨೧

೨೭. ಲಕ್ಷ್ಮೀ.ಜಿ.ಪ್ರಸಾದ್, ಭೂತಗಳ ಅದ್ಭುತ ಜಗತ್ತು – ಸಾವಿರದೊಂದು ಗುರಿಯೆಡೆಗೆ, ತುಳುನಾಡ ದೈವಗಳು, ೨೧೯

೨೮. ರಮೇಶ.ಕೊ.ವ್ಯಾ., ೧೯೯೦, ***ಜಯಸಿಂಹನ ತಳಂಗೆರೆ ಶಿಲಾಶಾಸನ***, ಗಡಿನಾಡಿನ ಕಿಡಿ, ಕಾಸರಗೋಡು,

೨೯. A.R.S.I.E. 1932-33. No.124

೩೦. Srinivasa Ritti, Some Women Administrators of Medieval Karnataka, Quarterly Journal of the Mythic Society, (QJMS) Vol.XLVIII - 1957-58, pg.52

೩೧. ನರಸಿಂಹಾಚಾರ್.ಆರ್., ೨೦೧೧, ಕರ್ಣಾಟಕ ಕವಿಚರಿತೆ ಸಂ-೧, ಕಸಾಪ, ಬೆಂಗಳೂರು, ಪು.೮೦

೩೨. E.C. VIII ಸೊರಬ ೧೬೪

೩೩. Desai.P.B. Jainism in South India & Some Jain Epigraphs, Pg.229

೩೪. SII ಸಂ XI ಭಾಗ-೨ ಸಂಖ್ಯೆ.೧೭೭

೩೫. ನರಸಿಂಹಾಚಾರ್.ಆರ್., ಕರ್ಣಾಟಕ ಕವಿಚರಿತೆ ಸಂ-೧, ಕಸಾಪ, ಬೆಂಗಳೂರು ೨೦೧೧ ಅನುಬಂಧ-೧ ಪು.೧೦

೩೬. E.C. II ಶ್ರವಣಬೆಳ್ಗೊಳ ೧೬೨

೩೭. E.C. V ಹಾಸನ ೧೧೬, ಗ್ರಾಮ ಕ್ರಿ.ಶ.೧೧೨೨

೩೮. E.C. V ಹಾಸನ ೧೬, ಬೇಲೂರು ಕ್ರಿ.ಶ.೧೧೨೦

೩೯. ಜೆ.ಬಿ.ಬಿ.ಆರ್.ಎ.ಎಸ್. ಸಂ.೯, ಪು. ೨೯೪

೪೦. E.C. XI (ಪರಿ), ಚಿ.ಮ ಶಾ.ಸಂ ೧೮ ಮೂಡಿಗೆರೆ, ಕ್ರಿ.ಶ.೧೧೨೯

೪೧. E.C. XI (ಪರಿ) ಅ.ಕೆ ೮೫, ಕಣಕಟ್ಟೆ, ಕ್ರಿ.ಶ.೧೧೩೨

೪೨. E.C. VI ಮೂಡಿಗೆರೆ ಶಾ.ಸಂ.೨೨ ಹಂತಿಯೂರು

೪೩. ಚಿಕ್ಕಮಗಳೂರು ಜಿಲ್ಲೆಯ ಶಾಸನ ಕವಿಗಳು, ಚಿಕ್ಕಮಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು ೨೦೦೩

೪೪. E.C. VII ಹೊನ್ನಾಳಿ ನಂ೨೮, ೩೭, ೩೮, ೪೦

೪೫. E.C. V ಅರಸಿಕೆರೆ ೯೦, ೯೩ & ೨೦೫

೪೬. ನರಸಿಂಹಾಚಾರ್.ಆರ್., ಪೂರ್ವೋಕ್ತ, ಪು. ೩೨೪, ೫೨೮

೪೭. E.C. V ಅರಸಿಕೆರೆ ೯೦ (ಕ್ರಿ.ಶ.೧೧೮೯)

೪೮. E.C. V ಅರಸಿಕೆರೆ ೪೦ ಕಣಿಕಟ್ಟೆ (೧೨೦೯)

೪೯. E.C. VI. ಕಡೂರು ೧೨೯ (ಕ್ರಿ.ಶ.೧೨೧೭)

೫೦. ಭಾರತಿ.ಬಿ.ಆರ್, ೨೦೧೨, ***ಸಂಸ್ಕೃತ ಭಾಷೆ ಸಾಹಿತ್ಯಕ್ಕೆ ರಾಷ್ಟ್ರಕೂಟರ ಕೊಡುಗೆ***, ಸಂಸ್ಕೃತ ಭಾಷೆ–ಸಾಹಿತ್ಯಕ್ಕೆ ಕರ್ನಾಟಕದ ರಾಜಮನೆತನಗಳ ಕೊಡುಗೆ, ಶ್ರೀಜಯರಾಮ ಸೇವಾ ಮಂಡಳಿ, ಬೆಂಗಳೂರು

೫೧. ಗಣೇಶ್.ಕೆ.ಆರ್, ವಿಶೇಷ ಉಪನ್ಯಾಸ, ಹಳಗನ್ನಡ ಕಾವ್ಯಾಭ್ಯಾಸ ಶಿಬಿರ, ಬಿ.ಎಂ.ಶ್ರೀ ಪ್ರತಿಷ್ಠಾನ, ಬೆಂಗಳೂರು

೫೨. ಕನ್ನಡ ಸಾಹಿತ್ಯ ಚರಿತ್ರೆ ಸಂ.೨ ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ಪು.೪೫೮

೫೩. ವೆಂಕಟಾಚಲಶಾಸ್ತ್ರಿ.ಟಿ.ವಿ., ಪ್ರಾಕ್ತನ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ., ೧೯೮೬, ಪು.೯೫

೫೪. ಜೆ.ಬಿ.ಬಿ.ಆರ್.ಎಸ್ x ಕಲ್ಲೋಳಿ

೫೫. E.I xiii ೩ ಬೆಳಗಾವ ಪು.೧೮, ೨೮

# ಅಧ್ಯಾಯ – ೬

## ಮಧ್ಯಕಾಲೀನ ಕರ್ನಾಟಕದ ಅರಸಿಯರ ಸಾಹಿತ್ಯ ಪೋಷಣೆ

ಪ್ರಾಚೀನ ಅರಸಿಯರಿಗಿಂತ ಮಧ್ಯಕಾಲೀನ ಅರಸಿಯರ ಕಾಲಕ್ಕೆ ರಾಜಕೀಯ ಸ್ಥಿತಿ–ಗತಿಗಳು ಬಹಳ ಭಿನ್ನವಾಗಿದ್ದವು. ಬಹುತೇಕ ಪ್ರಾಚೀನ ಕಾಲದ ಅರಸಿಯರು ಅರಸರ ಅಧೀನದಲ್ಲಿ ಆಳ್ವಿಕೆ ನಡೆಸುತ್ತಿದ್ದರು. ಮಧ್ಯಕಾಲೀನ ಕರ್ನಾಟಕದ ಬಹುತೇಕ ಅರಸಿಯರು ಪತಿಯ ಮರಣಾನಂತರ, ಕಿರಿಯವಯಸ್ಸಿನ ಮಗನ ಪರವಾಗಿ ಆಳ್ವಿಕೆ ನಡೆಸಿದವರು. ಚಕ್ರಾಧಿಪತಿಗಳ ಸಹಕಾರ, ನೆರವುಗಳಿಲ್ಲದೆಯೇ ರಾಜ್ಯಾಡಳಿತ ನಡೆಸಿದ ಹಿರಿಮೆ ಅವರದು. ಆದರೂ ಕಲೆ–ಸಾಹಿತ್ಯ ಪೋಷಣೆಗೆ ಪ್ರಾಚೀನ ಅರಸಿಯರಿಗಿಂತ ಕಡಿಮೆಯೆನಿಸದ ಕೊಡುಗೆಯನ್ನಿತ್ತಿದ್ದಾರೆ. ಈ ಅವಧಿಯಲ್ಲಿ ಕಾವ್ಯಮಯವಾದ ಶಾಸನಗಳು ಹೆಚ್ಚಾಗಿ ಸಿಗುವುದಿಲ್ಲ. ಈ ಅರಸಿಯರು ಸಾಹಿತ್ಯಕ್ಕೆ ನೀಡಿದ ಪ್ರೋತ್ಸಾಹ ಗ್ರಂಥಸ್ಥ ಕಾವ್ಯಗಳಲ್ಲಿ ಹೆಚ್ಚಾಗಿ ಗುರುತಿಸ ಬಹುದಾಗಿದೆ. ಈ ಅವಧಿಯಲ್ಲಿ ಅರಸಿಯರು ಕಾವ್ಯ ರಚನೆಯ ಜೊತೆಗೆ ಪ್ರಾಚೀನ ಕೃತಿಗಳ ಲಿಪೀಕರಣದ ಕಡೆಗೂ ಗಮನ ಹರಿಸಿದ್ದಾರೆ.

ಈ ಅಧ್ಯಾಯದಲ್ಲಿ ಒಂದು ರಾಜಮನೆತನಕ್ಕೆ ಸೇರಿದ ಎಲ್ಲ ಅರಸಿಯರ ಕೊಡುಗೆಗಳನ್ನು ಒಟ್ಟಿಗೆ ಅಧ್ಯಯನ ಮಾಡಲಾಗಿದೆ. ಹಾಗಾಗಿ ಒಂದರ ನಂತರ ಮತ್ತೊಂದು ಅರಸುಮನೆತನಗಳನ್ನು ಸಾಹಿತ್ಯ ಪೋಷಣೆಗೆ ಕೊಡುಗೆ ನೀಡಿದ ಅರಸಿಯರ ಮಾಹಿತಿಗಳೊಂದಿಗೆ ವಿಶ್ಲೇಷಿಸಲು ಅನುಕೂಲವಾಗಿದೆ.

### ಸಾಳ್ವಮನೆತನದ ರಾಣಿಯರು

ನಗಿರೆ, ಹಾಡುವಳ್ಳಿ (ಸಂಗೀತಪುರ), ಭಟ್ಕಳ, ಗೇರುಸೊಪ್ಪೆ, ಬಾರ್ಕೂರು ಮೊದಲಾದ ಪ್ರದೇಶಗಳಲ್ಲಿ ಆಳ್ವಿಕೆ ನಡೆಸುತ್ತಿದ್ದ ಸಾಳ್ವ ಮನೆತನದ ಅರಸರು, ಹೊಯ್ಸಳರ ಅವನತಿಯ ಕಾಲದಲ್ಲಿ ತಮ್ಮದೇ ಆದ ಸ್ವತಂತ್ರ ರಾಜ್ಯ ಸ್ಥಾಪನೆ ಮಾಡಿ, ವಿಜಯನಗರದ ಅರಸರ ಕಾಲದಲ್ಲಿ ಮಹಾಮಂಡಳೇಶ್ವರರೆನಿಸಿಕೊಂಡಿದ್ದರು. ಈ ಮನೆತನದಲ್ಲಿ ಅನೇಕ ಅರಸಿಯರು ಆಳ್ವಿಕೆ ನಡೆಸಿದ್ದಾರೆ. ಪದುಮಲದೇವಿ, ಭೈರಾದೇವಿ, ಚೆನ್ನಾದೇವಿ, ಚೆನ್ನಭೈರಾದೇವಿ ಮೊದಲಾದವರು ಪ್ರಸಿದ್ಧ ರಾಣಿಯರಾಗಿದ್ದಾರೆ.

### ಭೈರಾದೇವಿ

ಹದಿನಾಲ್ಕನೆಯ ಶತಮಾನದ ಉತ್ತರಾರ್ಧದಲ್ಲಿ ಗೇರುಸೊಪ್ಪೆಯಲ್ಲಿ ಆಳ್ವಿಕೆ ನಡೆಸುತ್ತಿದ್ದ ಸಾಳ್ವಮನೆತನದ ಅರಸಿ ಭೈರಾದೇವಿಯು ಬ್ರಹ್ಮಸೂರಿ ಎಂಬ ಪಂಡಿತನಿಂದ ವೈದ್ಯಗ್ರಂಥವೊಂದನ್ನು ಬರೆಯಿಸಿದ್ದಾಳೆ.

ಬ್ರಹ್ಮಸೂರಿ ಹಾಗೂ ಭೈರಾದೇವಿಯರು ವಿಭಿನ್ನ ವೈದ್ಯಸಂಪ್ರದಾಯಗಳನ್ನು ಕುರಿತು ಚರ್ಚಿಸಿದ್ದಾರೆ[೧]. ಈ ರಾಜಮನೆತನದವರು ಜೈನಧರ್ಮಾವಲಂಬಿಗಳಾಗಿದ್ದು, ಧಾರ್ಮಿಕ ಸಂಪ್ರದಾಯವಾದ ಅಹಿಂಸಾ ತತ್ತ್ವಕ್ಕೆ ಬೆಲೆ ಕೊಟ್ಟ ಅರಸಿಯು ಹಲವಾರು ವೈದ್ಯ ಸಂಪ್ರದಾಯದಲ್ಲಿ ಬಳಸಲಾಗುತ್ತಿದ್ದ ಮದ್ಯ–ಮಾಂಸಗಳ ಬಳಕೆಯನ್ನು ಬಿಟ್ಟು ಶುದ್ಧ ಸಾತ್ವಿಕ ರೀತಿಯ ವೈದ್ಯ ವಿಚಾರಗಳನ್ನು ಕುರಿತು ಗ್ರಂಥ ರಚಿಸುವಂತೆ ಬ್ರಹ್ಮಸೂರಿಯಲ್ಲಿ ಕೋರಿಯನ್ನಿಡುತ್ತಾಳೆ. ರಾಣಿಗೆ ಬ್ರಹ್ಮಸೂರಿಯು ವೈದ್ಯಸಂಪ್ರದಾಯದ ಬಗ್ಗೆ ತನ್ನ ಅಭಿಮತವನ್ನು ಈ ಪ್ರಕಾರವಾಗಿ ತಿಳಿಸುತ್ತಾನೆ :

**ಬಾಹಟಂ ಕೋಹಟಂ ಚೈವ ಚರಕಂ ನರಕಂ ತಥಾ**
**ಸಿದ್ಧಾಸಾರಂ ಅಸಾರಂವಾ ಸಾರಂ ಕಲ್ಯಾಣಕಾರಕಂ ॥**

ಈತನ ಪ್ರಕಾರ ಹಿಂದಿನ ಬಾಹಟ, ಚರಕ, ಸಿದ್ಧಸಾರ ಮೊದಲಾದ ಎಲ್ಲ ವೈದ್ಯಗ್ರಂಥಗಳಿಗಿಂತಲೂ ಪೂಜ್ಯಪಾದರ ಕಲ್ಯಾಣಕಾರಕವೇ ಉತ್ತಮವಾದ ವೈದ್ಯಗ್ರಂಥವಾಗಿದೆ. ಏಕೆಂದರೆ ಇದು ಅಹಿಂಸಾ ಪ್ರಧಾನವಾದ ಜೈನವೈದ್ಯದ ಪ್ರಕಾರ. ಸು.ಕ್ರಿ.ಶ.೧೧೭೫ರಲ್ಲಿದ್ದ ಜಗದ್ದಳ ಸೋಮನಾಥನು ಪೂಜ್ಯಪಾದರ ಕಲ್ಯಾಣಕಾರಕವನ್ನು ಕನ್ನಡದಲ್ಲಿ 'ಕರ್ಣಾಟಕ ಕಲ್ಯಾಣಕಾರಕ' ಎಂಬ ಹೆಸರಿನಿಂದ ರಚಿಸಿದ್ದಾನೆ. ಇದರಲ್ಲಿ ಮಧು, ಮದ್ಯ, ಮಾಂಸಗಳನ್ನು ಬಳಸದ ಔಷಧಪದ್ಧತಿಯನ್ನು ಹೇಳಲಾಗಿದೆ. ಹೀಗೆ ತನ್ನ ಮೆಚ್ಚುಗೆಯನ್ನು ವ್ಯಕ್ತಪಡಿಸಿದ ಬ್ರಹ್ಮಸೂರಿಗೆ, ತಾನು ಅರಸಿಯ ಆಶ್ರಯದಲ್ಲಿ ರಚಿಸಿದ ವೈದ್ಯಗ್ರಂಥಕ್ಕೆ ಪೂಜ್ಯಪಾದರ ಕೃತಿಯೇ ಆಧಾರಗ್ರಂಥವಾಗಿದೆ.

ದೇವಚಂದ್ರನ ರಾಜಾವಳಿ ಕೃತಿಯು ಉಲ್ಲೇಖಿಸುವ ಬ್ರಹ್ಮಸೂರಿಯ ಈ 'ವೈದ್ಯ ಗ್ರಂಥ' ವನ್ನು ಬ್ರಹ್ಮಸೂರಿಯ ಮೊಮ್ಮಗನಾದ ಪದ್ಮರಸ ಕೂಡ ತನ್ನ 'ಶೃಂಗಾರ ಕಥೆ' ಗ್ರಂಥದಲ್ಲಿ ಉಲ್ಲೇಖಿಸಿದ್ದಾನೆ. 'ರಾಜಪೂಜಿತನಾಗಿದ್ದ ತನ್ನ ತಾತ ಬ್ರಹ್ಮಸೂರಿಪಂಡಿತ ತರ್ಕಶಾಸ್ತ್ರ ಪಂಡಿತನಾಗಿದ್ದ ಹಾಗೂ 'ಜೈನಸಂಹಿತ' ಗ್ರಂಥದ ಕರ್ತೃ'ವೆಂದು ತಿಳಿಸಿದ್ದಾನೆ[೨].

**ಕವಿ ಬ್ರಹ್ಮಸೂರಿ:** ರಾಜಾವಳಿ ಕಥಾಸಾರದಲ್ಲಿ ದೇವಚಂದ್ರನು ಭೈರಾದೇವಿಯ ಪೋಷಣೆಯಲ್ಲಿದ್ದ ಬ್ರಹ್ಮಸೂರಿಯ ವಿಚಾರವನ್ನು ಉಲ್ಲೇಖಿಸಿದ್ದಾನೆ. ಉಮ್ಮತ್ತೂರಿನ ಸೂರಿಪಂಡಿತನು ಭಲ್ಲಾತಕೀಪುರಕ್ಕೆ (ಗೇರುಸೊಪ್ಪೆ) ಬಂದು ಬಂಧುಗಳ ಮನೆಯಲ್ಲಿದ್ದುಕೊಂಡು ವಿದ್ಯಾಭ್ಯಾಸ ಮುಂದುವರೆಸುವ ಸಂದರ್ಭದಲ್ಲಿ ರಾಜನರಮನೆಯವರು ಈತನನ್ನು ಕರೆಯಿಸಿಕೊಂಡು "ಈ ಹಿಂದೆ ಅರಸಿ ಭೈರಾದೇವಿಯವರು ನಿಮ್ಮ ವಂಶಜರಿಂದ ಅನೇಕ ವೈದ್ಯವನ್ನು ಗ್ರಂಥಗಳನ್ನು ಬರೆಯಿಸಿದ್ದರು, ನೀವೂ ಸಹ ವೈದ್ಯಶಾಸ್ತ್ರವನ್ನೇ ಕಲಿಯಬೇಕು" ಎಂದು ತಿಳಿಸಲು, ಸೂರಿ ಪಂಡಿತನು ತನಗೆ ವೈದ್ಯಶಾಸ್ತ್ರದ ಮೇಲಿರುವ ಆಸಕ್ತಿಯನ್ನು ತಿಳಿಸಿ, ರಾಜಾಶ್ರಯ ಪಡೆಯುತ್ತಾನೆ[೩]. ಈ ಸಂದರ್ಭದಲ್ಲಿ ಸೂರಿಪಂಡಿತನ ಪೂರ್ವಜನಾದ ಬ್ರಹ್ಮಸೂರಿಯು ಭೈರಾದೇವಿಯೊಡನೆ ವೈದ್ಯಸಂಪ್ರದಾಯದ ಕುರಿತಾಗಿ ತನ್ನ ಅಭಿಮತವನ್ನು ತಿಳಿಸಿರುವ ವಿಚಾರ ಹಾಗೂ ಅವಳ ಕೋರಿಕೆಯ ಮೇರೆಗೆ ಗ್ರಂಥವನ್ನು ರಚಿಸಿರುವ ವಿಚಾರ 'ರಾಜಾವಳಿ' ಗ್ರಂಥದಲ್ಲಿ ಉಕ್ತವಾಗಿದೆ[೪]. ಬ್ರಹ್ಮಸೂರಿಯು ಪ್ರಸಿದ್ಧ ಕವಿ ಹಸ್ತಿಮಲ್ಲನ ವಂಶದವನು. ಇವನು ಕೆಲಕಾಲ ಹೊಯ್ಸಳರ ಆಸ್ಥಾನದಲ್ಲಿದ್ದ ವಿಚಾರ ತಿಳಿದು ಬರುತ್ತದೆ[೫]. ಬಹುಶಃ ಹೊಯ್ಸಳರ ರಾಜ್ಯ ಪತನಾನಂತರ ಆಶ್ರಯವನ್ನರಸಿ ಸಾಳ್ವ ಭೈರಾದೇವಿಯಲ್ಲಿಗೆ ತನ್ನ ಇಳಿವಯಸ್ಸಿನಲ್ಲಿ ಬಂದಿದ್ದಾನೆಂದು ತೋರುತ್ತದೆ.

ಸಾಳ್ವಮನೆತನದ ಅರಸಿ ಭೈರಾದೇವಿಯು ತನ್ನ ಪತಿ ಸಾಳುವೇಂದ್ರ (ಹೈವಭೂಪ)ನ ಮರಣಾನಂತರ ಅಧಿಕಾರ ವಹಿಸಿಕೊಂಡಳು. ಇವಳು ಹದಿನಾಲ್ಕನೆಯ ಶತಮಾನದ ಉತ್ತರಾರ್ಧದಲ್ಲಿ ಆಳ್ವಿಕೆ ನಡೆಸಿದವಳು. ಬ್ರಹ್ಮಸೂರಿಯಿಂದ ಅಹಿಂಸಾ ತತ್ವಕ್ಕೆ ಒಗ್ಗುವಂತಹ ವೈದ್ಯಗ್ರಂಥವನ್ನು ಬರೆಯಿಸಿರುವ ಇವಳ ಅಭಿಲಾಶೆಯ ಹಿಂದಿನ ಧಾರ್ಮಿಕ ಮನೋಭಾವ ಕಾಣಬಹುದು. ಕ್ರಿ.ಶ.೧೪೦೮ರ ಕಾಲದ, ಇವಳಿಗೆ ಸಂಬಂಧಿಸಿದ ಶಾಸನವೊಂದು ಭಟ್ಕಳದ ಪಾರ್ಶ್ವನಾಥ ಬಸದಿಯಲ್ಲಿ ದೊರೆತಿದೆ. ಈ ಶಾಸನವು ಈಕೆ ತನ್ನ ಕಡೆಯ ದಿನಗಳಲ್ಲಿ ಕೈಗೊಂಡ ಸಲ್ಲೇಖನದ ಕುರಿತಾಗಿ ತಿಳಿಸುತ್ತದೆ. ಭೈರಾದೇವಿ ಹಾಗೂ ಅವಳ ಮಗ ಮಲ್ಲಿರಾಯ ಒಂದೆರಡು ದಿನಗಳ ಅಂತರದಲ್ಲಿ ಸಮಾಧಿಮರಣ ಹೊಂದಿದರೆಂದು ಇದರಿಂದ ತಿಳಿದುಬರುತ್ತದೆ[೬]. ಮಲ್ಲಿರಾಯನ ಅಕಾಲಿಕ ಮರಣದಿಂದಾಗಿ ಪಟ್ಟಕ್ಕೆ ಬಂದ ಆತನ ಸೋದರ ಸಂಗೀರಾಯ, ತಾಯಿ ಭೈರಾದೇವಿಯ ಸ್ಮರಣಾರ್ಥ ಪಟ್ಟಣದ ಪರಿಜನರ ಸಮುದಾಯವೆಂಬ ಸಭೆ ಕರೆದು ಎಲ್ಲರ ಒಮ್ಮತದಿಂದ ನಿಸಿದಿಕಲ್ಲನ್ನು ನೆಡಿಸಿದನೆಂಬ ವಿಚಾರ ಈ ಶಾಸನದಲ್ಲಿದೆ.

**ಚೆನ್ನಭೈರಾದೇವಿ**

ಪೋರ್ಚುಗೀಸರಿಂದ **'ಕಾಳುಮೆಣಸಿನ ರಾಣಿ'** ಎಂದು ಕರೆಸಿಕೊಳ್ಳುತ್ತಿದ್ದ ಚೆನ್ನ ಭೈರಾದೇವಿಯು ಸಾಳ್ವ ಅರಸುಮನೆತನದ ಪ್ರಸಿದ್ಧ ಅರಸಿ. ಇವಳು ದಕ್ಷ ಆಡಳಿತ, ವ್ಯಾಪಾರ, ಯುದ್ಧಗಳಲ್ಲಿ ಪ್ರೌಢತೆ ಮೆರೆದಂತೆ, ದೇವಾಲಯ–ಬಸದಿಗಳನ್ನು ನಿರ್ಮಿಸಿ ಧರ್ಮಸಾಮರಸ್ಯವನ್ನೂ ತೋರಿದ್ದಾಳೆ. ಇವಳ ಕಾಲದಲ್ಲಿ ಮಠದ ವ್ಯವಹಾರದಲ್ಲಿ ತೋರಿದ ಬಿಕ್ಕಟ್ಟನ್ನು ಸರಿಪಡಿಸಿದ ಕುರಿತಾಗಿ ಶಾಸನ ವಿವರಣೆ ನೀಡುತ್ತದೆ. ಇವಳು ಸಾಹಿತ್ಯ ಕಲೆಗಳಿಗೂ ಪ್ರೋತ್ಸಾಹ ನೀಡಿ, ಹಲವಾರು ಕವಿಗಳಿಗೆ ಆಶ್ರಯವಿತ್ತಿದ್ದಳು. ಸಾಳ್ವ, ವಾದಿ ವಿದ್ಯಾನಂದ, ವರ್ಧಮಾನ ಮೊದಲಾದ ಕವಿಗಳು ಇವಳ ಆಶ್ರಯದಲ್ಲಿದ್ದರು.

ಶಾಸನವೊಂದು ಇವಳನ್ನು **"ವಿದ್ವದ್ರಾಜಕವೀಂದ್ರ ಸಂಸ್ತುತಗುಣಾ** ಸರ್ವಾವನೀವಲ್ಲಭೈಃ ಪೂಜ್ಯಾ ರಾಜತಿ ಚೆನ್ನಭೈರವಮಹಾದೇವೀ ಯಶೋಭೂಷಿತಾ**"**[೭] ಎಂದು ಸ್ತುತಿಸಿದೆ. ಇಲ್ಲಿ ರಾಣಿ ಚೆನ್ನಭೈರಾದೇವಿಯನ್ನು **'**ವಿದ್ವದ್ರಾಜ ಕವೀಂದ್ರ ಸಂಸ್ತುತಗುಣಾ**'** ಎಂದು ಕರೆದಿರುವುದು, ಇವಳ ಆಸ್ಥಾನದಲ್ಲಿದ್ದಿರಬಹುದಾದ ವಿದ್ವಾಂಸರು ಹಾಗೂ ಕವಿಗಳನ್ನು ಸೂಚಿಸುತ್ತದೆ. ಮತ್ತೊಂದು ಶಾಸನವು[೮] ಇವಳ ಆಸ್ಥಾನದಲ್ಲಿದ್ದ ವೀರಯೋಧರು ಹಾಗೂ ಪಂಡಿತರನ್ನು ಕುರಿತು ತಿಳಿಸುತ್ತಾ, **ವಿದ್ವತ್ಕವೀಂದ್ರ ದ್ರುಮಃ** ಎಂಬ ಬಿರುದನ್ನು ಗಳಿಸಿದ್ದ ವೀರಣ್ಣನಾಯಕನನ್ನು ಉಲ್ಲೇಖಿಸಿದೆ. ಇಂತಹ ಹಲವಾರು ಉಲ್ಲೇಖಗಳು ಅರಸಿ ಚೆನ್ನಭೈರಾದೇವಿಯ ಕಾಲದಲ್ಲಿ ಕವಿಗಳಿಗೆ ಉತ್ತಮ ಪೋಷಣೆ ದೊರಕುತ್ತಿತ್ತೆನ್ನುವುದನ್ನು ತಿಳಿಸುತ್ತದೆ. ಪದ್ಮರಸ ಎಂಬ ಕವಿಯೂ ಇವಳ ಆಳ್ವಿಕೆಯ ಕಾಲದಲ್ಲಿಯೇ **'ಶೃಂಗಾರಕಥ'** ಎಂಬ ಕೃತಿಯನ್ನು ೧೫೯೯ರಲ್ಲಿ ರಚಿಸಿದ್ದಾನೆ[೯].

ಇವಳ ಕೆಲವು ಶಾಸನಗಳನ್ನು ರಚಿಸಿರುವ ವರ್ಧಮಾನ ಕವಿಯು ಕನ್ನಡ ಹಾಗೂ ಸಂಸ್ಕೃತ ಭಾಷೆಯಲ್ಲಿ ಪಾಂಡಿತ್ಯ ಪಡೆದವನಾಗಿದ್ದನು. ಇವಳನ್ನು ಕೀರ್ತಿಸುವ ಒಂದು ಪದ್ಯವು **"ಚೆನ್ನಭೈರವದೇವ್ಯಾಃ ... ಸಂಗ್ರಾಮಾಗತ ವೀರವೈರಿವನಿತಾ ದಾನ ಕ್ಷಮೋಭಾಸ್ವದ್ವಿಕ್ರಮಕೀರ್ತಿ ಭೂಷಿತ ಧರಾಚಕ್ರೋ ಜಯತ್ಯನ್ವಹಂ"**[೧೦] ಚೆನ್ನಭೈರವಮಹಾದೇವಿಯು ಶೌರ್ಯ, ಯಶಸ್ಸಿನಿಂದಲೂ ದಾನ, ಕ್ಷಮಾಗುಣ– ದಿಂದಲೂ ಭೂಷಿತಳಾಗಿದ್ದಾಳೆಂದು ಬಣ್ಣಿಸಿದೆ.

ಇದೇ ಶಾಸನ ಕವಿಯು ತನ್ನ ಕೃತಿ 'ವಿದ್ಯಾನಂದಸ್ತುತಿ' ಯಲ್ಲಿ, ಆ ಕಾಲದ ಪ್ರಸಿದ್ಧ ಕವಿ ಹಾಗೂ ಯತಿಯಾಗಿದ್ದ ಅಭಿನವ ವಾದಿವಿದ್ಯಾನಂದನು ಈಕೆಯ ಆಸ್ಥಾನದಲ್ಲಿದ್ದುದನ್ನು ತಿಳಿಸುತ್ತಾನೆ. **"ನಗಿರೀ ರಾಜ್ಯದ ರಾಜರ ಮಿಗಿಲೆನಿಸುವ ಸಭೆಗಳಲ್ಲಿ ವಿಬುಧವ್ರಾತಕ್ಕಗಣಿತ ವಾಕ್ಕಾಮೃತಮಂ ಸೊಗಸಿಂದೀಟಿಸಿದೆ ವಾದಿವಿದ್ಯಾನಂದಾ"** ಎಂಬ ಈ ಸಾಲಿನಲ್ಲಿ ಚೆನ್ನಭೈರಾದೇವಿಯ ನಗಿರೆ ರಾಜ್ಯದಲ್ಲಿ ಆಶ್ರಯ ಪಡೆದಿದ್ದ ವಿದ್ವಜ್ಜನರನ್ನೂ, ವಾದಿವಿದ್ಯಾನಂದರನ್ನೂ ಉಲ್ಲೇಖಿಸಿದೆ. ಅಭಿನವ ವಾದಿವಿದ್ಯಾನಂದರು ವಿದ್ವಾಂಸ, ಕವಿ ಅಷ್ಟೇ ಅಲ್ಲದೆ ಮುನಿಯೂ ಆಗಿದ್ದುದರಿಂದ ತನ್ನ ಕಾಲದ ಅನೇಕ ರಾಜರುಗಳಿಂದ ಪೂಜಿತರಾಗಿದ್ದಾರೆ'. ಅಂತೆಯೇ ಇವರನ್ನು **"**ನಗಿರೆ ರಾಜ್ಯದ ಚೆನ್ನಭೈರಾದೇವಿಯ ಪ್ರೇಮದ ಗುರು**"** ಕರೆಯಲಾಗಿದೆ[೧೧]. ರಾಣಿ ಭೈರಾದೇವಿಯು ಅಭಿನವ ವಾದಿವಿದ್ಯಾನಂದರಿಗೆ ಆಶ್ರಯ ನೀಡಿದ್ದಷ್ಟೇ ಅಲ್ಲದೆ, ಅವರ **'ಕಾವ್ಯಸಾರ'** ಗ್ರಂಥದ ಪ್ರತಿಯನ್ನು ಅವರಿಂದಲೇ ಪಡೆದಿದ್ದಾಳೆ (ಸ್ವತಃ ವಾದಿವಿದ್ಯಾನಂದರೇ ಪ್ರತಿಮಾಡಿಸಿ ಕೊಟ್ಟಿದ್ದಾರೆ) ಎಂಬ ವಿಚಾರವೂ ಹಸ್ತಪ್ರತಿಗಳಿಂದ ತಿಳಿದು ಬರುತ್ತದೆ[೧೨].

ಚೆನ್ನಭೈರಾದೇವಿಯು ವಿದ್ವಜ್ಜನರ ಹಾಗೂ ಕವಿಗಳ ಪೋಷಕಳಾಗಿದ್ದಷ್ಟೇ ಅಲ್ಲದೆ, ಇವಳ ಕಾಲದಲ್ಲಿ ಹಸ್ತಪ್ರತಿಗಳು ಲಿಪಿಗೊಳ್ಳುವ ಕೆಲಸವು ಅಧಿಕವಾಗಿ ನಡೆಯಿತು[೧೩]. ಚಾಮರಾಜನಗರದ ಕಾಮಗೆರೆ, ಉಮ್ಮತ್ತೂರು ಮೊದಲಾದ ಕಡೆಗಳಲ್ಲಿಂದ ಭೈರಾದೇವಿಯ ಈ ಕ್ಷೇಮಪುರಕ್ಕೆ ಲಿಪಿಕಾರರು ಬಂದರುತ್ತಿದ್ದರು ಎನ್ನುವುದು, ಹಸ್ತಪ್ರತಿಯ ಪುಷ್ಪಿಕೆಗಳಲ್ಲಿ ಲಿಪಿಕಾರರು ತಮ್ಮ ವಿವರ ತಿಳಿಸಿರುವಲ್ಲಿಂದ ತಿಳಿದು ಬರುತ್ತದೆ.

ಇವಳ ಕಾಲದಲ್ಲಿ ನಿರ್ಮಾಣವಾದ ಬಸದಿಗಳ ವಿಚಾರ ತಿಳಿಸುವ ಶಾಸನಗಳಲ್ಲಿ ಉಕ್ತಳಾಗಿರುವ ಅರಸಿ ಚೆನ್ನಭೈರಾದೇವಿಯು ಹಲವಾರು ದಾನಶಾಸನ, ವೀರಗಲ್ಲುಗಳನ್ನು ಹಾಕಿಸಿದ್ದಾಳೆ[೧೪], ಇಲ್ಲಿನ ಹಲವು ಶಾಸನಗಳಲ್ಲಿ ಇವಳ ನ್ಯಾಯ ತೀರ್ಮಾನ, ತೆರಿಗೆ ನೀತಿಗಳನ್ನೂ ಕಾಣಬಹುದು.

**ಕದಿರೇ ರಾಯರ ಪೂರ್ವವೃತ್ತಾಂತ** ಹಾಗೂ **ಪೂರ್ವರಾಯರ ವೃತ್ತಾಂತ** ಎಂಬ ಎರಡು ಕೃತಿಗಳು ರಾಣಿ ಚೆನ್ನಭೈರಾದೇವಿಯ ಕುರಿತಾದ ಕೆಲವು ವಿಚಾರಗಳನ್ನು ತಿಳಿಸುತ್ತವೆ. ಕೈಫಿಯತ್ತಿನ ಮಾದರಿಯಲ್ಲಿ ರಚಿತವಾಗಿರುವ, ಕರ್ತೃವಿಚಾರ ತಿಳಿಯದ ಈ ಎರಡು ಕೃತಿಗಳನ್ನು ವೈ.ಸಿ.ಭಾನುಮತಿಯವರು ಕುವೆಂಪು ಅಧ್ಯಯನ ಸಂಸ್ಥೆಯ ಕೆ.ಎ.೧೨೬ನೇ ಸಂಖ್ಯೆಯ ಕಾಗದದ ಪ್ರತಿಯಿಂದ ಸಂಪಾದಿಸಿದ್ದಾರೆ[೧೫]. ಕದಿರೇರಾಯರ ಪೂರ್ವವೃತ್ತಾಂತ ಕೃತಿಯು ತಿಳಿಸುವಂತೆ, ಸಾಳುವ ಕೃಷ್ಣದೇವರಸರಿಗೆ ಗಂಡು ಸಂತಾನ ಇಲ್ಲದ ಕಾರಣ ಹಿರೇ ಭೈರಾದೇವಿಗೆ ಪಟ್ಟಕಟ್ಟಲಾಗುತ್ತದೆ, ಈಕೆಯ ಬಳಿಕ ಇಮ್ಮಡಿ ಭೈರಾದೇವಿ ಉತ್ತರಾಧಿಕಾರಿಣಿ ಆಗುತ್ತಾಳೆ. ಆನಂತರ ಕುಂಟಭೈರಾದೇವಿ, ಚಿಕ್ಕಭೈರಾದೇವಿಯರು ಕ್ರಮವಾಗಿ ಆಳ್ವಿಕೆ ನಡೆಸಿದರು ಎಂದು ಇಲ್ಲಿ ತಿಳಿಸಿದೆ. ಈ ಪುಟ್ಟ ಕೃತಿಯಲ್ಲಿ ಚಿಕ್ಕ ಭೈರಾದೇವಿಯ ವಿಚಾರ ವಿಸ್ತೃತವಾಗಿದೆ, ಇಲ್ಲಿ ತಿಳಿಸಿರುವಂತೆ ಈಕೆ ರಾಜ್ಯವಾಳುವಾಗ ಬಂಕಾಪುರದ ಗಾಣಿಗ ಲಿಂಗಣ್ಣಶಟ್ಟಿ ವಸ್ತ್ರದ ವ್ಯಾಪಾರಿಯಾಗಿ ಬಂದವನು ಈಕೆಯ ನಿಕಟವರ್ತಿಯಾಗಿ ತನ್ನ ಪತ್ನಿಯರ ಸಹಿತ ಆಡಳಿತದಲ್ಲಿಯೂ ಹಸ್ತಕ್ಷೇಪಮಾಡುತ್ತಾನೆ. ಈತ 'ಲಿಂಗಣ್ಣ ವಡೇರು' ಎನಿಸಿಕೊಂಡದ್ದನ್ನು ಕೃತಿಯು ರೋಚಕವಾಗಿ ಬಣ್ಣಿಸಿದೆ. ಅನಂತರ ವೆಂಕಟಪ್ಪನಾಯಕರು ಇಕ್ಕೇರಿಯಿಂದ ಬಂದು ರಾಣಿಯನ್ನು ನಿಯಂತ್ರಣದಲ್ಲಿರಿಸುತ್ತಾನೆ ಅಲ್ಲದೆ ಗೇರುಸೊಪ್ಪೆಯ ಆಡಳಿತವನ್ನು ಈರಾದೇವಿ ಮತ್ತು ಲಕ್ಷ್ಮಾದೇವಿ ಎಂಬುವವರಿಗೆ ವಹಿಸಿದ ಎಂಬ ಹೊಸ ವಿಚಾರವನ್ನು ಈ ಕೃತಿ ತಿಳಿಸುತ್ತದೆ.  ಹದೆನೆಂಟನೆಯ ಶತಮಾನದಲ್ಲಿ ಸೂರಿ ಪಂಡಿತ ಭಲ್ಲಾತಕೀಪುರಕ್ಕೆ ಬಂದಾಗ ಅರಮನೆಯವರು ಅವನನ್ನು ಕರೆದು 'ನಿಮ್ಮ ಪೂರ್ವಜರು ನಮ್ಮ ಅರಮನೆಯ ಆಶ್ರಯದಲ್ಲಿದ್ದರು' ಎಂಬ ವಿಚಾರ ತಿಳಿಸಿ ಅವನನ್ನು ಆದರಿಸಿದರು ಎಂದು ದೇವಚಂದ್ರ ರಾಜಾವಳಿ ಕಥಸಾರದಲ್ಲಿ ಹೇಳಿದ್ದಾನೆ. (ಆಶ್ವಾಸ ೧೧) ವೆಂಕಟಪ್ಪ ನಾಯಕ ಭೈರಾದೇವಿಯನ್ನು ಬಂಧಿಸಿದ ನಂತರವೂ ಇಲ್ಲಿ ಸಾಳ್ವ ರಾಜಮನೆತನದವರು ಆಳ್ವಿಕೆ ನಡೆಸುತ್ತಿದ್ದರೆಂಬ ವಿಚಾರಕ್ಕೆ ಇದು ಪುಷ್ಟಿ ನೀಡುತ್ತದೆ.

**ಪೂರ್ವರಾಯರ ವೃತ್ತಾಂತ**ದಲ್ಲಿಯೂ ಈ ಮೇಲೆ ತಿಳಿಸಿರುವ ಕೆಲವು ಸಂಗತಿಗಳು ಪ್ರಸ್ತಾಪಗೊಂಡಿವೆ. ಕದಿರೆಯ ಮಲ್ಲೋಜಿನಾಯಕ ಮತ್ತು ರಾಮನಾಯಕ ದೇಸಾಯಿ ಮುಂತಾದವರು ಪುಂಡತನ ಮಾಡಿದ್ದರಿಂದ ಆ ವಲಯ ಅಶಾಂತಿಯ ಬೀಡಾಗಿತ್ತು. ಇದರಿಂದ ಗೋರುಸೊಪ್ಪೆಯ ಭೈರಾದೇವಿಯು ಲಕ್ಷ್ಮೀದೇವಿಯವರಲ್ಲಿ ಬಿನ್ನವಿಸಿಕೊಂಡಾಗ ಅವರು ಕೆರವಡಿ ಕೋಟೆ ಆಳ್ವೇರಿಗಳನ್ನು ಭದ್ರಪಡಿಸಲು ವ್ಯವಸ್ಥೆ ಮಾಡಿದರು. ಭೈರಾದೇವಿ ಮತ್ತು ಲಿಂಗಣ್ಣನ ಸಂಬಂಧದ ಬಗ್ಗೆ ಇಲ್ಲಿಯೂ ಪ್ರಸ್ತಾಪಿಸಲಾಗಿದೆ. ವಿಷಯ ಬಹಿರಂಗವಾದಾಗ ಹೆದರಿದ ಲಿಂಗಣ್ಣ ತನ್ನ ಹೆಂಡತಿಯರೊಡನೆ ಕೊರಳು ಕತ್ತರಿಸಿಕೊಂಡು ಸಾವಿಗೆ ಶರಣಾಗುತ್ತಾನೆ.

ಸಾಳ್ವಮನೆತನದ ಅರಸಿಯರು ಧಾರ್ಮಿಕ ಭಾವನೆಗಳಿಗೆ ಹೆಚ್ಚು ಒತ್ತು ನೀಡಿರುವುದನ್ನು ಕಾಣುತ್ತೇವೆ. ಈ ಮನೆತನದ ಸಾಂತಲೆ, ಭೈರಾದೇವಿ ಮೊದಲಾದ ಅರಸಿಯರ ನಿಸಿದಿಸ್ಮಾರಕಗಳು, ಈ ಅರಸಿಯರು ನಿರ್ಮಿಸಿದ ಬಸದಿ, ನೀಡಿರುವ ದಾನ–ದತ್ತಿಗಳು, ಇವರು ಮಾಡಿದ ನೋಂಪಿ ಹಾಗೂ ಇದರ ಅಂಗವಾಗಿ ನೀಡಿರುವ ಶಾಸ್ತ್ರದಾನಕ್ಕಾಗಿ ಹಲವಾರು ಕೃತಿಗಳನ್ನು ಲಿಪಿಮಾಡಿಸಿರುವುದು ಇವರ ಧಾರ್ಮಿಕ ಶ್ರದ್ಧೆಯನ್ನು ತೋರುತ್ತದೆ. ಭೈರಾದೇವಿಯರ ಮಗ ಮಲ್ಲಿರಾಯ ಅರಸನ ಪಟ್ಟಮಹಾದೇವಿ **ಲಲಿತಾದೇವಿಯವರು** ಪ್ರಭಾಚಂದ್ರರಿಂದ ಸು.೧೧೦೦ರಲ್ಲಿ ರಚಿತವಾಗಿದ್ದ ಕ್ರಿಯಾವ್ಯಾಖ್ಯಾ ಟೀಕು ಎಂಬ ಪ್ರಾಕೃತ ಗ್ರಂಥವನ್ನು ಹದಿನೈದನೆಯ ಶತಮಾನದಲ್ಲಿ ಶಾಸ್ತ್ರದಾನಕ್ಕಾಗಿ ಪ್ರತಿಮಾಡಿಸಿದ್ದಾಳೆ.

## ಮೂಲ್ಕಿ ಅರಸುಮನೆತನದ ರಾಣಿ ಚನ್ನಾಂಬಿಕೆ

ಕರಾವಳಿ ತೀರದ ಮೂಲ್ಕಿ ಸುತ್ತಮುತ್ತಲಿನ ಪ್ರದೇಶವನ್ನು ಸಾವಂತ ಮನೆತನದವರು ಆಳ್ವಿಕೆ ನಡೆಸುತ್ತಿದ್ದರು. ಹದಿನೇಳನೆಯ ಶತಮಾನದಲ್ಲಿ (ಕ್ರಿ.ಶ.೧೬೮೦) ಈ ಮನೆತನದ ಪಟ್ಟವನ್ನೇರಿದವಳು ರಾಣಿ ಚನ್ನಾಂಬಿಕೆ(ಚನ್ನಮ್ಮ). ಇವಳ ಕುರಿತಾದ ಕೆಲವು ವಿಚಾರಗಳನ್ನು ಒಂದೆರಡು ಶಾಸನಗಳು ಹಾಗೂ ವಿದೇಶಿಯರ ಬರಹಗಳು ತಿಳಿಸುತ್ತವೆ. ಮತ್ತೆ ಕೆಲವು ವಿಚಾರ ಇವಳ ಆಶ್ರಿತ ಕವಿ ಪದ್ಮನಾಭನು ರಚಿಸಿರುವ ಕಾವ್ಯದಿಂದ ದೊರಕುತ್ತದೆ[೧೫೮].

ಕವಿ ಪದ್ಮನಾಭನು ಚನ್ನಾಂಬಿಕೆಯ ಆಸ್ಥಾನದ ಕವಿಯಾಗಿದ್ದು, 'ಜಿನದತ್ತರಾಯಚರಿತೆ' ಎಂಬ ಕೃತಿಯನ್ನು ರಚಿಸಿದ್ದಾನೆ. ಕವಿಯು ತನ್ನ ಕೃತಿಯನ್ನು 'ಪದ್ಮಾವತಿ ಚರಿತ್ರೆ' ಎಂದೂ 'ಅಮ್ಮನವರ ಚರಿತ್ರೆ' ಎಂದೂ ಕರೆದಿದ್ದಾನೆ. ಇದು ಪದ್ಮಾವತಿ ಯಕ್ಷಿ ಹಾಗೂ ಹೊಂಬುಜ ಕ್ಷೇತ್ರಮಹಿಮೆ ಕುರಿತಾದ ವಸ್ತುವನ್ನು ಹೊಂದಿರುವ ಕೃತಿಯಾಗಿದೆ. ರಾಣಿ ಚನ್ನಾಂಬಿಕೆಯು ಪದ್ಮಾವತಿ ಯಕ್ಷಿಯ ಅನನ್ಯ ಭಕ್ತೆಯಾಗಿದ್ದು, ಇವಳ ಕೋರಿಕೆಯ ಮೇರೆಗೆ ಕವಿಯು ಈ ಕೃತಿಯನ್ನು ರಚಿಸಿದ್ದಾನೆ. ಪೌರಾಣಿಕ ಕೃತಿಯಾದರೂ, ಅರಸಿ ಚನ್ನಾಂಬಿಕೆಯ ಮನೆತನದ ಹಲವು ಐತಿಹಾಸಿಕ ವಿಚಾರಗಳು ಈ ಕೃತಿಯಲ್ಲಿ ಉಲ್ಲೇಖಿತವಾಗಿವೆ.

**ಕವಿ ಪದ್ಮನಾಭ:** ಅರಸಿ ಚನ್ನಾಂಬಿಕೆಯು ಈ ಹಿಂದೆ ತನ್ನ ಸಹೋದರ ತಿರುಮಲ ಸಾವಂತನ ಆಳ್ವಿಕೆಯಲ್ಲಿ ಕೋಶಾಧ್ಯಕ್ಷನಾಗಿದ್ದ ಪದ್ಮನಾಭನ ಕವಿತಾ ಶಕ್ತಿಯನ್ನು ಮನಗಂಡು ಆತನಿಂದ ಕಾವ್ಯವನ್ನು ಬರೆಯಿಸಿದ್ದಾಳೆ. ಈ ವಿಚಾರವನ್ನು ಸ್ವತಃ ಕವಿಯೇ ಹೇಳಿಕೊಂಡಿದ್ದಾನೆ. ಈ ಕಾವ್ಯದ ಕೊನೆಯ ಸಂಧಿಯಲ್ಲಿ ಕಥಾಂಶವು ಸಾಕಷ್ಟು ಇರುವುದಾದರೂ, ಹಿಂದಿನ ಕಥಾಭಾಗವನ್ನು ವರ್ಣಿಸಿದಂತೆ ಸವಿಸ್ತಾರವಾಗಿ ಹೇಳದೆ, ಅವಸರದಲ್ಲಿ ಮುಗಿಸಿಬಿಟ್ಟಿರುವುದರಿಂದ ಕೃತಿಯನ್ನು ರಚಿಸುವ ವೇಳೆಗೆ ಇವನು ಅಪರವಯಸ್ಸಿನವನಾಗಿರಬಹುದೆಂದು ಈ ಕೃತಿಯ ಸಂಪಾದಕರು ಅಭಿಪ್ರಾಯ ಪಡುತ್ತಾರೆ. ಕವಿ ಪದ್ಮನಾಭನು ತನ್ನ ಕುರಿತಾದ ಯಾವುದೇ ವಯಕ್ತಿಕ ವಿವರಗಳನ್ನು ಕಾವ್ಯದಲ್ಲಿ ಹೇಳಿಲ್ಲ.

**ಧರೆಗತಿ ಸೇವ್ಯವೆನಿಪ ಕಾರಸ್ಕರ । ಪುರದ ಭವ್ಯರವನು ಪಾಲಿಸುವ ॥**
**ವರವರ್ಧಮಾನಸ್ವಾಮಿಯ ಕೃಪೆಯಿಂದಲಿ । ಬರೆದೆ ನಾನೀ ಸತ್ಕೃತಿಯ ॥**

ಎನ್ನುತ್ತಾ ಕವಿಯು ಕಾರಸ್ಕರಪುರದ ದೇವರನ್ನು ಸ್ಮರಿಸಿಕೊಂಡಿರುವುದರಿಂದ ಈತನು ಮೂಲಿಕೆಯ ಅರಸರ ಅಧೀನದಲ್ಲಿಯೇ ಇದ್ದ ಕಾರಸ್ಕಾರ ಪುರದವನಾಗಿರಬಹುದೆಂದು ತಿಳಿಯಬಹುದು.

ಕವಿಯು ತಾನು **"ಭಾವವರಿತವನಲ್ಲ ಕಾವ್ಯವೋದಿದವನಲ್ಲ। ಆವುದು ಪ್ರಾಸೆಂಬುದರಿಯೆ.. ಛಂದಸ್ಸು ಅಭಿಧಾನ ಕಾವ್ಯ ಮುಂತಾದವರಂದವನರಿತವನಲ್ಲ"** ಎಂಬ ವಿನೀತ ಭಾವವನ್ನು ವ್ಯಕ್ತಪಡಿಸಿದ್ದಾನೆ.

**ಛಂದಸ್ಸಲಂಕಾರಗಳು ಮುಂತಾದುದ। ರಂದವನರಿತವನಲ್ಲ**
**ಅಂದದಿ ನಿಮ್ಮ ಮಕ್ಕಳ ತಿದ್ದುವಂತೆನ್ನ । ಚಂದದಿ ತಿದ್ದಿ ಲಾಲಿಪುದು ॥**

**ಜಾತಿವೈರವ ಬಿಟ್ಟು ರೀತಿ ಮತ್ಸರ ಬಿಟ್ಟು । ಪಾತಕ ಪರಿವುದಿದೆಂದು**
**ಪ್ರೀತಿಯಿಂದಲಿ ಕೇಳ್ಪುದು ಪುಣ್ಯಕಥೆಯನು । ಮಾತಿನತ್ತಲು ನೋಡಬೇಡಿ ॥**

ಆದರೆ ಕವಿಯು ತಕ್ಕಮಟ್ಟಿಗೆ ಕಾವ್ಯಗಳನ್ನು ಓದಿಕೊಂಡಿದ್ದಾನೆಂದೂ, ಕಾವ್ಯ ಸಂಪ್ರದಾಯದ ಪರಿಚಯ ಹೊಂದಿದ್ದವನೆಂಬುದೂ ಅವನ ಕಾವ್ಯವನ್ನು ಓದಿದವರಿಗೆ ಮನವರಿಕೆಯಾಗುತ್ತದೆ. ಕವಿಯೇ ಹೇಳಿರುವಂತೆ "ಬೆಲ್ಲ ಮುರಿದರೇನು ಸೀತಪ್ಪಲರಿಯದು" ಎಂಬಂತೆ ಕೆಲವೆಡೆಗಳಲ್ಲಿ ಪ್ರಾಸ ತಪ್ಪಿದರೂ ಕಾವ್ಯಕ್ಕೆ ಭಂಗವಿಲ್ಲ.

**ಅರಸಿ ಚನ್ನಮ್ಮ (ಚನಾಂಬಿಕೆ):** ಕಾವ್ಯವು ಅರಸಿ ಚನ್ನಮ್ಮನ ಹಾಗೂ ಅವಳ ಮನೆತನವನ್ನು ಕುರಿತಂತೆ ಕೆಲವು ವಿಚಾರಗಳನ್ನು ತಿಳಿಸುತ್ತದೆ. ತುಳುನಾಡಿನ ಮೂಲ್ಕಿಯ ಸಾವಂತ ರಾಜಮನೆತನದವರು, ಇಲ್ಲಿನ ಬಹುತೇಕ ರಾಜಮನೆತನಗಳ ಪದ್ಧತಿಯಂತೆ ಅಳಿಯಸಂತಾನ ಕಟ್ಟಿನವರಾಗಿದ್ದರು.

**ಸಾಮಂತರಾಯನನುಜೆ ಸೊಬಗಿನಸೋನೆ । ಕೋಮಲೆಯರ ತಲೆರನ್ನೆ**
**ಸೋಮವದನೆ ದೇವಪೂಜೆಯೆಂದೆಂಬಾ । ನಾಮದಿಂದೊಪ್ಪಿರುತಿಹಳು॥**

**ಸತ್ಯವಂತನು ಪಶ್ಚಿಮ ವೇಣುಪುರಪತಿ । ಯುತ್ತಮ ಮಾಲಿಂಗ ನೃಪತಿ ।**
**ಮತ್ತಾಜವ್ವನ ದೇವಮ್ಮಗೆ ಪತಿಯಾಗಿ । ಅತ್ಯಂತ ಲೀಲೆಯೊಳಿಹರು॥**

ಅರಸಿ ಚನ್ನಾಂಬಿಕೆಯ ತಾಯಿ ದೇವಮ್ಮಾಜಿ, ತಂದೆ ವೇಣುಪುರದ ನೃಪತಿ ಮಾಲಿಂಗ. ಅಳಿಯ ಸಂತಾನ ಪರಂಪರೆಯಂತೆ, ಮದುವೆಯಾದಮೇಲೆ ದೇವಮ್ಮಾಜಿ ಮೂಲಿಕೆಯಲ್ಲಿಯೇ ಇದ್ದುದರಿಂದ, ಚನ್ನಮ್ಮಾಜಿಯ ವಿದ್ಯಾಭ್ಯಾಸಕ್ಕೆ ತಕ್ಕ ಏರ್ಪಾಡನ್ನು ಅವಳ ಮಾವ ದುಗ್ಗಣ ಸಾವಂತ ಮೂಲ್ಕಿಯಲ್ಲಿಯೇ ಮಾಡುತ್ತಾನೆ.

**ಕಿನ್ನಿಗ ಸಾಮಂತನನುಜ ತಿರುಮಲರಾಯ । ಮನ್ನೆಯಕಿನ್ನಿರಿಯಾತ**
**ಚೆನ್ನಿಗಸಂಕರನೃಪನನಂತರದೊಳು । ಚನ್ನಾಂಬಿಕೆ ಜನಿಸಿದಳು ॥**

ಪಶ್ಚಿಮ ವೇಣುಪುರದ ನೃಪತಿ ಮಾಲಿಂಗ ಹಾಗೂ ಮೂಲ್ಕಿಯ ರಾಜಕುಮಾರಿ ದೇವಮ್ಮಾಜಿಯ ಮಗಳಾದ ಚನ್ನಮ್ಮ, ಇಬ್ಬರು ಗಂಡುಮಕ್ಕಳ ನಂತರ ಜನಿಸಿದ ಹಿರಿಯ ಮಗಳು.

**ತಿರುಮಲಸಾಮಂತರಾಯನ ನಂತರದೊಳು ಸರಸಿಜಮುಖಿ ಚನ್ನಮ್ಮಾಜಿ ।**
**ಧರೆಯ ಪಾಲಿಸಿದಳು ನರಲೋಕ ಸುರಲೋಕ । ಮೊರೆಯುತ ಪೊಗಳುವಂದದೊಳು ॥**

**ಹರಿಮಧ್ಯದ ನೀರೆ ಹಸುರುವರ್ಣಾಕಾರೆ । ಕರಿಗಮನದ ಶೃಂಗಾರೆ**
**ಪರಮದಯಾಪರೆ ಪುಣ್ಯಜನಾದರೆ । ಗರುವೆ ಚನ್ನಮ್ಮದೇವಮ್ಮ**

ಮೂಲ್ಕಿಯ ರಾಜಮನೆತನವು ಅಳಿಯಸಂತಾನ ಪರಂಪರೆಯನ್ನು ಹೊಂದಿದ್ದರಿಂದ, ದೇವಮ್ಮಾಜಿಯ ಮಗ (ಚನ್ನಮ್ಮಳ ಅಣ್ಣ) ತಿರುಮಲಸಾಮಂತರಾಯ ಯುವರಾಜ ಪದವಿಯನ್ನು ಪಡೆದಿರುತ್ತಾನೆ. ಕಾವ್ಯವು ತಿಳಿಸಿರುವಂತೆ ತಿರುಮಲ ಸಾಮಂತನ ನಂತರ ಚನ್ನಮ್ಮಾಜಿ ಆಳ್ವಿಕೆ ನಡೆಸಿದಳು.

ಈ ಕಾವ್ಯದಲ್ಲಿ ಚನ್ನಮ್ಮನನ್ನು ಹಲವಾರು ಬಾರಿ 'ಚನ್ನಮ್ಮದೇವಮ್ಮ' ಎಂದು ಕರೆದಿರುವುದು ವಿಶೇಷವೆನಿಸುತ್ತದೆ. ಸಾಧಾರಣವಾಗಿ ಮಕ್ಕಳನ್ನು ತಂದೆಯ ಹೆಸರಿನೊಂದಿಗೆ ಉಲ್ಲೇಖಿಸುವ ಪರಂಪರೆಯನ್ನು ಕಾಣುತ್ತೇವೆ. ಆದರೆ ಇಲ್ಲಿ ತಾಯಿಯ ಹೆಸರಿನೊಂದಿಗೆ ಗುರುತಿಸುವುದನ್ನು ಅನೇಕಬಾರಿ ಕಾಣುತ್ತೇವೆ.

ಅರಸಿ ಚನ್ನಮ್ಮಳನ್ನು ಹಲವಾರು ಪದ್ಯಗಳಲ್ಲಿ ಬಣ್ಣಿಸಿರುವ ಕವಿಯು ಇವಳ ಪತಿ ಸಂಕರಸನನ್ನು ಹಾಗೂ ಮಗ ಚಿಕ್ಕರಾಯರ ಬಣ್ಣನೆಯನ್ನು ಒಂದು ಪದ್ಯದಲ್ಲಿ ಸೀಮಿತಗೊಳಿಸಿದ್ದಾನೆ. ಅರಸನ ಪ್ರಾಧಾನ್ಯತೆ ಇರುವ ಇತರ ಐತಿಹಾಸಿಕ ಕಾವ್ಯಗಳಿಗೆ ತದ್ವಿರುದ್ಧವಾದ ಕ್ರಮವನ್ನು ಇಲ್ಲಿ ಕಾಣುತ್ತೇವೆ. ಇದು ಇಲ್ಲಿನ ಅರಸಿಯ ಪ್ರಾಧಾನ್ಯತೆಯನ್ನು ಸೂಚಿಸುತ್ತಿದೆ.

**ಚನ್ನಮ್ಮದೇವಮ್ಮನ ಪತಿ ಬಲುಗುಣ । ರನ್ನನೆನಿಪ ಸಂಕರಸ**
**ಚೆನ್ನಿಗರರಸ ಚದುರರ ಚಿಂತಾಮಣಿ । ಹೊನ್ನ ಬಣ್ಣದ ದಿವ್ಯಕಾಯ ॥**

**ವನಜಾಕ್ಷಿ ಚನ್ನಮ್ಮ ದೇವಮ್ಮನದೊಂದು । ಜಿನಭಕ್ತಿಯನು ಕಡುಮೆಚ್ಚಿ ।**
**ಘನಕೃಪೆಯಿಂದ ಪದ್ಮಾವತಿ ದೇವಿ ತಾ । ನನುದಿನ ಬಿಡದೆ ರಕ್ಷಿಪಳು ॥**

**ವೀರಜಿನೇಶನ ಕಾರುಣ್ಯದಿಂದಲಿ । ವಾರಿಜಾನನೆ ಚನ್ನಾಂಬೆ ।**
**ಸಾರಿ ನಂಬಿದ ಭವ್ಯಜನರ ರಕ್ಷಿಸುತಲಿ । ಧಾರಿಣಿಯನು ಪಾಲಿಸುವಳು ॥**

ಕಾವ್ಯದಲ್ಲಿ **"ದೇವ ಪೂಂಜೆ"** (೧-೫೬) ಎಂದು ಕರೆಯಲ್ಪಟ್ಟ ರಾಣಿ ಚನ್ನಾಂಬಿಕೆಯು ಪದ್ಮಾವತೀ ಯಕ್ಷಿಯ ಪರಮಭಕ್ತೆ. ಇದೇ ಕಾರಣಕ್ಕೆ ಇವಳು ತನ್ನ ಆಸ್ಥಾನದಲ್ಲಿದ್ದ ಕವಿ ಪದ್ಮನಾಭನಿಂದ ಈ ಪದ್ಮಾವತಿ ಚರಿತ್ರೆ ಕೃತಿಯನ್ನು ರಚಿಸುವಂತೆ ಕೋರಿದ್ದಾಳೆ. ಸಾವಂತರ ಆಸ್ಥಾನದಲ್ಲಿ ಇನ್ನೂ ಹಲವು ಕವಿಗಳಿಗೆ ಪ್ರೋತ್ಸಾಹವಿತ್ತೆಂಬ ವಿಚಾರ ತಿಳಿದು ಬರುತ್ತದೆ. ಅರಸಿಯ ಕಾಲದಲ್ಲಿ ಮೂಲ್ಕಿಯ ಬಳಿಯಿರುವ ಪಡುಪಣಂಬೂರು ಜೈನಶಾಸ್ತ್ರ ಅಧ್ಯಯನ ಕೇಂದ್ರವಾಗಿತ್ತೆಂಬುದಕ್ಕೆ ಈ ಕಾವ್ಯದಲ್ಲಿ ಕೆಲವು ಆಧಾರಗಳು ದೊರಕುತ್ತವೆ. (ಪ್ರಥಮಸಂಧಿ ೫೦-೫೧, ಪು.೫)

ಚನ್ನಾಂಬಿಕೆಯನ್ನು ಕುರಿತಂತೆ ಇನ್ನೂ ಕೆಲವು ವಿಚಾರಗಳು ಶಾಸನ ಹಾಗೂ ಮತ್ತಿತರ ಆಕರಗಳಿಂದಲೂ ತಿಳಿದುಬರುತ್ತದೆ. ಚನ್ನಾಂಬಿಕೆಯು ಕೇವಲ ಪದ್ಮಾವತಿಯ ಭಕ್ತೆಯಷ್ಟೇ ಅಲ್ಲದೆ, ಒಂದು ನಾಡಿನ ರಾಣಿಯಾಗಿ ಧರ್ಮ ಸಮನ್ವತೆ ಕಾಯ್ದುಕೊಂಡಿದ್ದಾಳೆ. ಬಸದಿಗಳಿಗಷ್ಟೇ ಅಲ್ಲದೆ ದೇವಾಲಯಗಳಿಗೂ ದಾನ ನೀಡಿದ್ದಾಳೆ. ಕೆ.ಜಿ.ವಸಂತ ಮಾಧವರು ಗುರುತಿಸಿರುವ ಶಾ.ಶ.೧೫೩೨ರ ಶಾಸನ ತಿಳಿಸುವಂತೆ ಇವಳು ಕೊಡೆತ್ತೂರಿನ ಕಾಂತೇಶ್ವರ ದೇವರ ಒಕ್ಕಲಿಗೆ ಈ ದೇವಾಲಯಕೊಡುವ ಗೇಣಿಯನ್ನು ನಿರ್ಧರಿಸುತ್ತಾಳೆ. ಈ ಶಾಸನದಲ್ಲಿ ವ್ಯಕ್ತವಾಗಿರುವ ವೈಷ್ಣವ, ಜೈನ ಮತ್ತು ಶೈವ ಸಂಪ್ರದಾಯದ ಸಮನ್ವಯವನ್ನು ಕಾಣಬಹುದು.

ಇವಳು ತನ್ನ ನಾಡಿನ ರೇವುಪಟ್ಟಣವಾದ ಕಾರ್ನಾಟಿನ ಮುಖಾಂತರ ಸಮುದ್ರವ್ಯಾಪಾರ ನಡೆಸಿ ವಿದೇಶಿಯರಲ್ಲಿ ಕಾರ್ನಾಟುರಾಣಿ ಎಂದೇ ಕರೆಯಲ್ಪಡುತ್ತಿದ್ದಳು. ಇಟಲಿಯ ಪ್ರವಾಸಿ ಪಿಯತ್ರೊ ದೆಲ್ಲಾವೆಲ್ಲೆಯ ಹೇಳಿಕೆಯ ಪ್ರಕಾರ ಚನ್ನಾಂಬಿಕೆಯು ಪೋರ್ಚುಗೀಸರೊಂದಿಗೆ ವ್ಯಾಪಾರ ಸಂಬಂಧವನ್ನಿರಿಸಿಕೊಂಡಿದ್ದಳಲ್ಲದೆ, ಉಲ್ಲಾಳದ ರಾಣಿ ಹಾಗೂ ಕೆಳದಿ ಅರಸರೊಂದಿಗೆ ವಿರೋಧವನ್ನು ಕಟ್ಟಿಕೊಂಡಿದ್ದಳು. ಗಡಿ ಪ್ರದೇಶದ ರಾಜರೊಂದಿಗೆ ಆಗಾಗ ಯುದ್ಧಗಳಾಗುತ್ತಿದ್ದುದು ಸಾಧಾರಣವಾಗಿತ್ತು[೧೬]. ಈ ಪ್ರವಾಸಿಗ ಉಲ್ಲಾಳದ ರಾಣಿಯನ್ನು ಭೇಟಿ ಮಾಡಿದ ನಂತರ **"**ಕರ್ನಾಟಿ ರಾಣಿಯನ್ನು (Queen of Carnate) ನೋಡಬೇಕೆಂದು ನಿರ್ಧರಿಸಿದೆ, ಎಂದು ಹೇಳಿ ಇವಳನ್ನು ಭೇಟಿಯಾದ ವಿಚಾರ ತಿಳಿಸಿದ್ದಾನೆ.

ಅಂತೋನಿಯೊ ಬೊಕೆರಾ ಎಂಬುವವನು ಕ್ರಿ.ಶ.೧೬೧೫ ರಿಂದ ೧೬೩೮ರ ವರೆಗೆ ಪೋರ್ಚುಗೀಸರ ಸರ್ಕಾರದ ಗೋವೆಯ ಪತ್ರಾಗಾರನಾಗಿ ಸೇವೆ ಸಲ್ಲಿಸಿದವನು. ಈತನು ಬರೆದ 'Decade 13 Da Historia Da India' ಎಂಬ ಗ್ರಂಥದಲ್ಲಿ ಕಾರ್ನಾಡಿನ ರಾಣಿ, ಬಂಗರಸ, ಪೋರ್ತುಗೀಸ ಮತ್ತು ಕೆಳದಿ ವೆಂಕಟಪ್ಪನಾಯಕ ಇವರುಗಳ ರಾಜಕೀಯ ಸಂಬಂಧ ಮತ್ತು ಕ್ರಿ.ಶ.೧೬೧೮ರಲ್ಲಿ ನಡೆದ ಘರ್ಷಣೆಗಳ ವಿವರವಿದೆ. ಇವಳು ಬಂಗರಸ ಹಾಗೂ ಪೋರ್ಚುಗೀಸರೊಂದಿಗೆ ಸೇರಿಕೊಂಡು ಕೆಳದಿಯ ವೆಂಕಟಪ್ಪ ಹಾಗೂ ಚೌಟ ಅಬ್ಬಕ್ಕಳೊಂದಿಗೆ ಸೆಣಸಾಡಬೇಕಿದ್ದ ಪರಿಸ್ಥಿತಿ ಎದುರಾಗುತ್ತಿತ್ತು[೧೭ & ೧೮].

**ಕೃತಿ:** ಮೂಲ್ಕಿ ಪ್ರದೇಶದ ಸುಂದರ ವರ್ಣನೆಯನ್ನೂ, ಸ್ಥಳ ಪುರಾಣವನ್ನೂ ನೀಡುವ ಈ ಕಾವ್ಯವು ೧೨ ಸಂಧಿ, ೧೬೭೧ ಸಾಂಗತ್ಯ ಪದ್ಯದಿಂದ ಕೂಡಿದೆ. ಈ ಕೃತಿಯ ಸಂಪಾದಕರು ತಿಳಿಸಿರುವಂತೆ ಇಲ್ಲಿ ಪದ್ಮಾವತಿ ಚರಿತೆ ಎಂಬ ಹೆಸರಿನಲ್ಲಿ ಚರಿತೆಯು ಚರಿತ್ರೆ ಎಂಬ ಅರ್ಥದಲ್ಲಿಲ್ಲ. ಸಾಂಗತ್ಯವೆಂಬ ಛಂದೋ ಬಂಧಕ್ಕೆ ಚರಿತೆ ಎಂಬ ಹೆಸರು ಒಂದು ಕಾಲದಲ್ಲಿ ರೂಢಗತವಾಗಿತ್ತು.

**ಕಾವ್ಯದ ಕಥಾಭಾಗ:** ಉತ್ತರ ಮಧುರೆಯ ದೊರೆ ಸಹಕಾರರಾಜೇಂದ್ರ, ಆತನ ಪಟ್ಟದರಸಿ ಶ್ರೀಯಲದೇವಿಯರು ಜಿನಭಕ್ತರಾಗಿದ್ದರು. ದೊರೆಯು, ಪದ್ಮಿನಿ ಬೇಡತಿಯೊಬ್ಬಳ ಸೌಂದರ್ಯಕ್ಕೆ ಮನಸೋತು, ಮುಂದೆ ಅವಳ ಮಗನಿಗೇ

ಪಟ್ಟ ಕಟ್ಟುವುದಾಗಿ ಭಾಷೆ ಕೊಟ್ಟು ಪ್ರತ್ಯೇಕ ಗೃಹವನ್ನು ನಿರ್ಮಿಸಿ ಆ ಶಬರಿಯೊಂದಿಗೆ ಇರುತ್ತಿದ್ದನು. ಅವಳಿಗೊಬ್ಬ ಮಗನು ಜನಿಸಲು ಮಾರಿದತ್ತನೆಂಬ ಹೆಸರನ್ನಿಟ್ಟರು. ಆ ಬೇಡತಿಯ ಸಹವಾಸದಿಂದ ದೊರೆಯು ಮಾಂಸಾಹಾರಿಯಾಗಿದ್ದಲ್ಲದೆ, ನರಮಾಂಸವನ್ನೂ ಭಕ್ಷಿಸತೊಡಗಿದನು. ಅಡುಗೆಯ ಭಟನ ಬಳಿಗೆ ದೊರೆಯು ಯಾರ ಕೈಯಲ್ಲಿ ನಿಂಬೆಯಹಣ್ಣನ್ನು ಕೊಟ್ಟು ಕಳಿಸುವನೊ ಆ ವ್ಯಕ್ತಿಯನ್ನು ಕೊಂದು, ಅವನ ಮಾಂಸದಿಂದ ಅಂದಿನ ಪಾಕವನ್ನು ಅಡಿಗೆಯವನು ಸಿದ್ಧಪಡಿಸುತ್ತಿದ್ದನು.

**ಬಕಪಕ್ಷಿಯಂದದಿ ಸುಮ್ಮನೆ ಕುಳಿತಿವ । ಸಕಲರ ಕೊಂದು ಭಕ್ಷಿಸುವ।**
**ಬಕನಾಮನಿವನೆಂದು ಸಕಲರುಲಿಯುತಿರೆ । ಅಕಲಂಕಚರಿತೆ ಕೇಳಿದಳು॥**

ಒಂದು ದಿನ "ಪಟ್ಟದಾನೆಯನೇರಿ ಚತ್ರಚಾಮರಗೂಡಿ ಪಟ್ಟಣದೊಳು" ಬರುವ ಜಿನದತ್ತನನ್ನು ಕಂಡ ಬೇಡತಿಯು ಮನದಲ್ಲಿ "ಅವನ ಕೊಂದಲ್ಲದೆ ಉಳುಹಿಲ್ಲ" ವೆಂಬ ದುಷ್ಟ ಯೋಚನೆ ನಡೆಸಿದಳು. ದೊರೆಯೊಂದಿಗೆ ವಿಪರೀತವಾಗಿ ಹೋರಾಡಿ, ಕೆಟ್ಟ ಹಟ ಮಾಡಿದಳು. ಕಡೆಗೂ ಅವಳಿಗೆ ಸೋತ ದೊರೆಯು 'ಮಗನನ್ನು ಕೊಲ್ಲುವ ಉಪಾಯವೇನೆಂದು' ಅವಳೊಡನೆ ಚಿಂತಿಸಿದನು. ಅದಕ್ಕೆ ಬೇಡತಿಯು "ನೀವು ನಂಬಿಸಿಯವನ ಹಸ್ತದೊಳು ನಿಂಬೆಹಣ್ಣನು ಕೊಟ್ಟುಸೂಪಕನೆಡೆಗಟ್ಟಿ ಹಂಬಲಿಸದೆ ಹತಿಸುವನು" ಎನ್ನುತ್ತಾ ಅವನಕೈಯಲ್ಲಿ ನಿಂಬೇಹಣ್ಣನ್ನು ಕೊಟ್ಟು ಅಡುಗೆಯವನ ಬಳಿಗೆ ಕಳಿಸಲು ಸೂಚಿಸಿದಳು. ಅತಿ ಪಾಪಿ ಸತಿಯ ಮೋಹವ ಬಿಡಲಾರದೆ ಮಗನನು ಕೊಲ್ಲಲು ನಿಶ್ಚಯಿಸಿ "ಈ ಹಣ್ಣ ಬಾಣಸಿಗನ ಕೈಗೆ । ಗಮ್ಮನೆ ಕೊಟ್ಟು ಬಾ ಯೆನಲು" ಸಂತೋಷದಿಂದ ಹೊರಟ ಜಿನದತ್ತರಾಯನಿಗೆ ದಾರಿಯಲ್ಲಿ ಮಾರಿದತ್ತನು ಎದುರಾಗಿ, ಆ ನಿಂಬೆಯ ಹಣ್ಣನ್ನು ತಾನೇ ತೆಗೆದುಕೊಂಡು ಹೋಗುತ್ತಾನೆ. ಬಾಣಸಿಗನು ಅವನನ್ನು ಕೊಂದು ಅಡಿಗೆ ತಯಾರಿಸುತ್ತಾನೆ. ವಿಷಯ ತಿಳಿದ ಬೇಡತಿಯು ಕ್ರೋಧದಿಂದ ಆರ್ಭಟಿಸಿ ಕೂಡಲೇ ಜಿನದತ್ತರಾಯನನ್ನು ಕೊಲ್ಲಲು ಆಜ್ಞಾಪಿಸುತ್ತಾಳೆ.

ಈ ವಿಚಾರವನ್ನು ತಿಳಿದ ಶ್ರೀಯಲದೇವಿ ಬಹಳವಾಗಿ ಹೆದರಿ, ಗುರುವಿನ ಬಳಿಗೆ ಬಂದು ತನ್ನ ಮಗನ ಪ್ರಾಣ ಉಳಿಸಲು ಪ್ರಾರ್ಥಿಸಿಕೊಳ್ಳುತ್ತಾಳೆ. ಹಾಗೂ ಗುರುಗಳು ಹೇಳಿದಂತೆ ಮನೆದೇವತೆ ಪದ್ಮಾವತಿಯ ಪ್ರತಿಮೆಯನ್ನು ಅವನ ಕೈಯಲ್ಲಿ ಕೊಟ್ಟು ಹಯಶಾಲೆಯಲ್ಲಿದ್ದ ಕನಕವರ್ಣದ ಕುದುರೆಯನ್ನು ಹತ್ತಿಸಿ ದಕ್ಷಿಣಾಭಿಮುಖವಾಗಿ ಕಳುಹಿಸುತ್ತಾಳೆ. ಶತ್ರುಗಳು ಬೆಂಬತ್ತಿ ಬಂದಾಗ ಅವರಿಗೆ ಆ ಯಕ್ಷಿಯ ಪ್ರತಿಮೆಯನ್ನು ತೋರಿಸಿದರೆ ಅವರೆಲ್ಲ ಹೆದರಿ ಓಡಿಹೋಗುವರೆಂದು ತಿಳಿಸಿದ ಗುರುವಿನ ನುಡಿಯಂತೆ, ತನ್ನನ್ನು ಮುತ್ತಲು ಬಂದ ಶತ್ರುಗಳನ್ನು ಪ್ರತಿಮೆ ತೋರಿಸಿ ಒಂದು ಯೋಜನದಷ್ಟು ಹಿಂದಕ್ಕೆ ಅಟ್ಟುತ್ತಾ ಅವರಿಂದ ಪಾರಾಗಿ ಮುಂದೆ ನಡೆದನು. ಕಡೆಗೆ ಆ ಸೈನಿಕರು ಜಿನದತ್ತನಿಗೆ ಶರಣಾಗಿ ಊರಿಗೆ ಹಿಂದಿರುಗಲೊಲ್ಲದೆ ಅವನೊಡನೆಯೆ ಇರುತ್ತಾರೆ.

ಜಿನದತ್ತನು ತನಗೆ ವಶವಾದ ಸೈನ್ಯದೊಡನೆ ಸಿಂಹರಥನೆಂಬುವ ಸ್ಥಳೀಯ ಅರಸನನ್ನೂ ಸೋಲಿಸಿ, ಮುಂದುವರೆಯುತ್ತಾನೆ. ಅಡವಿಯಲ್ಲಿ ಸಂಚರಿಸುತ್ತಾ ಒಮ್ಮೆ ಬಾಯಾರಿ ನೀರನ್ನರಸಿ ಬರಲು, ಒಂದು ಕೊಳವನ್ನು ಕಂಡು ಅದರ ಬಳಿಯಿದ್ದ ಲೊಕ್ಕಿಯ ಮರಕ್ಕೆ ಕೈಯಲ್ಲಿದ್ದ ಪ್ರತಿಮೆಯನ್ನು ತೂಗುಹಾಕಿ ನೀರು ಕುಡಿದು ನೆರಳಲ್ಲಿ ಮಲಗಿದನು. ಆಗ ಅವನಿಗೆ ಕನಸಾಯಿತು, ನಾನು ಇನ್ನು ಬರಲೊಲ್ಲೆ ಇಲ್ಲಿಯೇ ನೆಲೆಸುತ್ತೇನೆ ಎಂದು ಆ ಯಕ್ಷಿಯ ಪ್ರತಿಮೆ ನುಡಿದಂತಾಯ್ತು. ಕೂಡಲೆ ಎದ್ದು ಆ ಪ್ರತಿಮೆಯನ್ನು ತೆಗೆದುಕೊಳ್ಳಲು ಪ್ರಯತ್ನಿಸಿದರೆ ಅದು ಬಾರದೆ ಅಲ್ಲಿಯೇ ನಿಂತಿತು. ಕಡೆಗೆ ಆ ದೇವಿ ಸೂಚಿಸಿದಂತೆ ಆ ಕಾಡನ್ನು ನಾಡಾಗಿ ಪರಿವರ್ತಿಸಲು ತೊಡಗಿದನು. ಆ ಪ್ರತಿಮೆಗೆ ಸೋಕಿಸಿದ ಲೋಹವೆಲ್ಲಾ ಬಂಗಾರವಾಗಿ, ದೇವಿಯು ಇವನಿಗೆ ರಾಜ್ಯ ಕಟ್ಟಲು ಸಹಾಯ ಮಾಡಿದಳು. ಮೊದಲು ಆ ಸ್ಥಳದಲ್ಲಿ ಜಿನಗೇಹ ದೇಹಾರಗಳನ್ನು ನಿರ್ಮಿಸಿ ಅನಂತರ ಪುರವನ್ನು ಕಟ್ಟಿ ಅದಕ್ಕೆ ಪೊಂಬುಚ್ಚವೆಂದು ಹೆಸರಿಟ್ಟನು.

ಧಾರ್ಮಿಕ ವಸ್ತುವನ್ನು ಹೊಂದಿದ್ದರೂ ಈ ಕಾವ್ಯವು ಐತಿಹಾಸಿಕವಾದ ಹಲವಾರು ಮಹತ್ವದ ಸಂಗತಿಗಳನ್ನು ಸಾರುತ್ತದೆ. ಜಿನದತ್ತರಾಯನ ಚರಿತ್ರೆಯನ್ನು ತಿಳಿಸುವ ಈ ಕಾವ್ಯವು ಅಲ್ಲಲ್ಲಿ ಮೂಲಿಕೆಯ ಭೌಗೋಳಿಕ ಸ್ವರೂಪ, ಸಾವಂತರಸರ ವಂಶಾವಳಿ, ಅನುಸರಿಸಲಾಗುತ್ತಿದ್ದ ಜೈನಧರ್ಮದ ವಿಚಾರಗಳು, ಸಾಮಾಜಿಕ ರೂಢಿ ನಿಯಮಗಳು ಮೊದಲಾದ ಮಾಹಿತಿ ನೀಡಿದೆ.

ಈ ಕೃತಿಯ ಹಸ್ತಪ್ರತಿಯು ಕರಾವಳಿ ತೀರಪ್ರದೇಶದಲ್ಲಿ ಹೆಚ್ಚಾಗಿ ದೊರಕುತ್ತದೆ. ಆ ಕಾಲದಲ್ಲಿ 'ಪದ್ಮಾವತಿ ಚರಿತೆ'ಯ ಕೃತಿ ಬಹುಶಃ ಇದೊಂದೇ ಇದ್ದುದರಿಂದ, ಮನೆಮನೆಗಳಲ್ಲಿ ಪಾರಾಯಣ ಮಾಡಲು ಈ ಕೃತಿಯನ್ನು ಹೆಚ್ಚಿನ ಸಂಖ್ಯೆಯಲ್ಲಿ ಲಿಪಿಮಾಡಿಕೊಳ್ಳಲು ಕಾರಣವಾಗಿದೆ ಎಂದು ಈ ಕೃತಿಯ ಸಂಪಾದಕರು ಅಭಿಪ್ರಾಯ ಪಡುತ್ತಾರೆ. ಈ ಕೃತಿಯು ಹಾಡುವ ಮಟ್ಟಿನ ಸಾಂಗತ್ಯದಲ್ಲಿ ರಚನೆಯಾಗಿರುವುದು ಇದರ ಜನಪ್ರಿಯತೆಗೆ ಕಾರಣವಾಗಿದೆ. ಇಂತಹ ಜನಮನ್ನಣೆಗಳಿಸುವ ಧಾರ್ಮಿಕ, ಐತಿಹಾಸಿಕ ಮಹತ್ವ ಉಳ್ಳ ಈ ಕೃತಿಯ ರಚನೆಗೆ ಪ್ರೇರಣೆ ನೀಡಿ, ಕವಿಯ ಪೋಷಕಳಾದ ರಾಣಿ ಚೆನ್ನಾಂಬಿಕೆಯ ಹೆಸರು ಕೃತಿಯ ಮುಖಾಂತರ ದೀರ್ಘಕಾಲ ಉಳಿಯುವಂತಾಯಿತು.

## ಕೆಳದಿ ಸಂಸ್ಥಾನದ ಅರಸಿಯರು

ಕೆಳದಿ ಸಂಸ್ಥಾನವು, ವಿಜಯನಗರ ಸಾಮ್ರಾಜ್ಯದ ಆಳ್ವಿಕೆಯ ಕಾಲದಲ್ಲಿ ಸ್ಥಾಪನೆಯಾಗಿ, ವಿಜಯನಗರೋತ್ತರ ಕಾಲದಲ್ಲಿಯೂ ಮುಂದುವರಿದು ಪಶ್ಚಿಮ ಕರಾವಳಿಯಲ್ಲಿ ಗೋವೆಯಿಂದ ದಕ್ಷಿಣದ ಕೇರಳದ ವರೆಗೆ ಹಬ್ಬಿದ ವಿಶಾಲವಾದ ರಾಜ್ಯ ಇದಾಗಿತ್ತು. ಇಕ್ಕೇರಿ, ಕೆಳದಿ ಬಿದನೂರು, ಭುವನಗಿರಿಗಳನ್ನು ಕ್ರಮವಾಗಿ ತಮ್ಮ ರಾಜಧಾನಿಗಳನ್ನಾಗಿಸಿಕೊಂಡು ಸುಮಾರು ೨೭೪ ವರ್ಷ ಈ ಮನೆತನದ ನಾಯಕರು ಆಳ್ವಿಕೆ ನಡೆಸಿದರು. ಕೆಳದಿ ಅರಸು ಮನೆತನದಲ್ಲಿ ಹಲವಾರು ರಾಣಿಯರೂ ಪ್ರಮುಖರಾಗಿದ್ದಾರೆ, ಇವರಲ್ಲಿ ಕೆಳದಿಯ ಚನ್ನಮ್ಮ ಹಾಗೂ ವೀರಮ್ಮಾಜಿಗಳು ಸ್ವತಂತ್ರವಾಗಿ ಆಳ್ವಿಕೆ ನಡೆಸಿದವರು. ಈ ಮನೆತನದ ಕೆಲವು ರಾಣಿಯರು ಧಾರ್ಮಿಕ, ಸಾಮಾಜಿಕ ತಾಣಗಳಲ್ಲಿ ತಮ್ಮ ಕೊಡುಗೆಯನ್ನು ನೀಡಿದ್ದಾರೆ.

### ಬಸವರಾಜೇಂದ್ರನ ಅರಸಿ ಚನ್ನಮ್ಮ

ಕ್ರಿ.ಶ.೧೬೯೮–೧೭೧೪ರಲ್ಲಿ ಕೆಳದಿಯನ್ನಾಳಿದ ಬಸವಪ್ಪನಾಯಕ ಅಥವಾ ಬಸವರಾಜೇಂದ್ರನ ಅರಸಿ ಚನ್ನಮ್ಮ. ಇವಳು ಕೆಳದಿಯ ಪ್ರಸಿದ್ಧ ಅರಸಿ ಚೆನ್ನಮ್ಮಾಜಿಯ ಸೊಸೆ. ಈಕೆಯು ಕೆಳದಿಯ ಕವಯತ್ರಿ ಗಂಗಾದೇವಿಯಿಂದ ಕಾವ್ಯವನ್ನು ಬರೆಯಿಸಿದ್ದಾಳೆ.

ಗಂಗಾದೇವಿ ಎಂಬ ಕವಯತ್ರಿಯು ಕೆಳದಿಯ ಪ್ರಸಿದ್ಧರಾಣಿ ಚನ್ನಮ್ಮಾಜಿಯ ಮಗ ಬಸವಪ್ಪನಾಯಕನ ಆಳ್ವಿಕೆಯ ಕಾಲದಲ್ಲಿದ್ದವಳು. ಈಕೆಯು ಕೆಳದಿ ಅರಸರ ರಾಜಗುರು ಚೆನ್ನವೀರ ಶಿವಾಚಾರ್ಯರ ಪತ್ನಿ. ಈಕೆಯು ಕಾವ್ಯ ರಚನೆಗೆ ತೊಡಗಿದ್ದರೂ ಬೆಳಕಿಗೆ ಬಾರದ ಕವಯತ್ರಿಯಾಗಿದ್ದಾಳೆ. ಇವಳು ರಚಿಸಿರುವ ಒಂದು ಕೃತಿ ಮಾತ್ರ ಈ ವರೆಗೆ ಲಭಿಸಿದೆ. ಲಭ್ಯವಿರುವ ಇವಳ ಏಕೈಕ ಕೃತಿ ಕೆಳದಿ 'ರಾಜ್ಯಾಭ್ಯುದಯಮ್' ಕೂಡ ಅಪೂರ್ಣವಾಗಿದೆ. ಕೃತಿ ರಚನೆಯೇ ಅಪೂರ್ಣವೋ ಅಥವಾ ದೊರಕಿರುವುದು ಮಾತ್ರ ಅಪೂರ್ಣವಾಗಿಯೋ ತಿಳಿದು ಬಂದಿಲ್ಲ. ಆದರೆ ಕವಯತ್ರಿಯು ತನಗೆ ಕರ್ಣಾಟಕ ಕವಿಪರಮೇಶ್ವರಿ, ವಿದ್ವತ್ಸಭಾಸರಸ್ವತಿ, ಮೊದಲಾದ ಬಿರುದುಗಳಿದ್ದುದನ್ನು ತಿಳಿಸಿದ್ದಾಳೆ, ಈ ಬಿರುದುಗಳು ಈಕೆ ಇನ್ನು ಯಾವುದಾದರೂ ಕೃತಿ ರಚಿಸಿದ್ದಿರಬೇಕೆಂಬ ಸಂಶಯಕ್ಕೀಡುಮಾಡುತ್ತದೆ. ಆದರೆ ಕೆಳದಿ ರಾಜ್ಯಾಭ್ಯುದಯವನ್ನು ಬಿಟ್ಟು ಮತ್ತಾವ ಕೃತಿಯೂ ದೊರಕಿಲ್ಲ. ಅಲ್ಲದೆ ಬೇರಾವ ಕವಿಯೂ ಇವಳನ್ನಾಗಲೀ ಇವಳ ಕಾವ್ಯವನ್ನಾಗಲೀ ಕುರಿತು ಉಲ್ಲೇಖಿಸಿಲ್ಲ[೧೯].

ಕೆಳದಿಯ ಬಸವರಾಜೇಂದ್ರ ಅರಸು ತಮ್ಮ ಗುರುಗಳಾದ ಚನ್ನವೀರಸ್ವಾಮಿಗೆ ಕೊಟ್ಟ ಭೂದಾನ ತಾಮ್ರ ಶಾಸನದಲ್ಲಿ ಗುರುವನ್ನು ಕುರಿತು **"ಸ್ಕಂದಗೊತ್ರ ಸಮುತ್ಪನ್ನಃ ಶಿವಸಿದ್ಧಾಂತ ಕೋವಿದ:" "ಗಂಗಾದೇವೀ**ತಿ ಯಸ್ಯಾಸ್ತಿ ಭಾತಿ ವಿದ್ಯಾವತೀ ಸತೀ ತಯಾ ವಿನೀತಯಾ ಯುಕ್ತೋ ಧರ್ಮಾಚಾರ ಪರಾಯಣ**"** ಎಂದು ಸ್ತುತಿಸುವಲ್ಲಿ ವಿದ್ಯಾವತಿ ಯೆನಿಸಿದ ಗಂಗಾದೇವಿಯನ್ನು ಉಲ್ಲೇಖಿಸಿರುವುದಲ್ಲದೆ, ಹುಲಿಕೆರೆ ಮಠಕ್ಕೆ ಕೊಟ್ಟ ದಾನಶಾಸನದಲ್ಲಿ ಅರಸು ಬಸವರಾಜೇಂದ್ರನು, ಗುರುಪತ್ನಿಯಾದ ಕವಯತ್ರಿ ಗಂಗಾಂಬಿಕೆಯನ್ನು ಪಾರ್ವತಿಗೆ ಹೋಲಿಸಿ ಸ್ತುತಿಸಿದ್ದಾನೆ.

**ಗಂಗಾದೇವಿ:** ಕವಯತ್ರಿ ಗಂಗಾದೇವಿಯು ಈ ಮೇಲೆ ತಿಳಿಸಿರುವಂತೆ ಕೆಳದಿ ಅರಸರ ರಾಜಗುರು ಚೆನ್ನವೀರ ಶಿವಾಚಾರ್ಯರ ಪತ್ನಿ. ಕೃತಿಯಲ್ಲಿ ತನ್ನ ತಂದೆ–ತಾಯಿಯರನ್ನು ಸ್ಮರಿಸಿದ್ದಾಳೆ. ತಾಯಿ ಗೌರೀದೇವಿ, ತಂದೆ ಶಿವಪ್ಪ. ಇವರಿಗೆ ತಾನೊಬ್ಬಳೇ ಮಗಳೆಂತಲೂ, ತನ್ನ ತಾಯಿಯೇ ತನಗೆ ಗುರುವೆಂತಲೂ ಅಂತಹ 'ಖ್ಯಾತವಿದ್ಯಾದಾತೆಯುಂ ನಿಜಮಾತೆಯುಂ ತಾನಾದ ದೇವಿಗೆ' ಅತ್ಯಂತ ಪ್ರೀತಿಯಿಂದ ತನ್ನ ನವಕಾವ್ಯಕುಸುಮವನ್ನು ಅರ್ಪಿಸುವುದಾಗಿಯೂ ಹೇಳಿಕೊಂಡಿದ್ದಾಳೆ.

ತನ್ನನ್ನು **"**ಇಳೆಯೊಳಿದನೊರೆದವಳದಾರೆನೆ ಕೆಳದಿ ರಾಜಾನ್ವಯದ ನಿಜಗುರು ಕೆಳದಿ ವರಮಠ ಚೆನ್ನವೀರಾಚಾರ್ಯನರ್ಧಾಂಗಿ**"** ಎಂದು ಪರಿಚಯಿಸಿಕೊಂಡಿದ್ದಾಳೆ. ಅಲ್ಲದೆ ಸೋಪಾನದ ಕಡೆಯಲ್ಲಿ **"**ಇದು ವೇದಾಗಮ ಸಾಧಿತ ಶ್ರೀಮದ್ವೀರಶೈವ ಷಟಸ್ಥಲೈಕಮೇವಾದ್ವಿತೀಯ ಪರಶಿವ ಬ್ರಹ್ಮ ಪಾದಾರವಿಂದ ಮದುಕರಿ ಶ್ರೀಮತ್ ಕೆಳದೀರಾಯ ರಾಜಗುರು ಶ್ರೀ ಚೆನ್ನವೀರ ಶಿವಾಚಾರ್ಯ ಪುಣ್ಯವಲ್ಲಭೆ ಕವಿ ಪರಮೇಶ್ವರಿ ಗಂಗಾದೇವಿ ವಿರಚಿತಮಪ್ಪ ಕೆಳದಿ ರಾಜ್ಯಾಭ್ಯುದಯ ಪ್ರಬಂಧದೊಳ್... ಎಂದು ಮುಗಿಸಿದ್ದಾಳೆ.

ಗಂಗಾದೇವಿಯು ಕೆಳದಿಯ ಅರಸು ಬಸವರಾಜನ ಕಾಲದಲ್ಲಿದ್ದಳೆಂಬುದು ಸ್ಪಷ್ಟವಾಗಿರುವುದರಿಂದ, ಈಕೆಯ ಕಾಲವು ಬಸವಪ್ಪನಾಯಕನ ಆಳ್ವಿಕೆಯ ಕಾಲವಾದ ಕ್ರಿ.ಶ.೧೬೯೮ – ೧೭೧೪ರ ಸುಮಾರಿನಲ್ಲಿಯೇ ಎಂದು ತಿಳಿಯಬಹುದು.

**ಕೃತಿಗೆ ಪ್ರೇರಣೆ ಹಾಗು ಆಕರ** : ತಾನು ಕೃತಿ ರಚಿಸಲು ಕಾರಣವನ್ನು ಸ್ವತ ಗಂಗಾದೇವಿಯೇ ತಿಳಿಸಿದ್ದಾಳೆ. ಒಂದುದಿನ ಕೆಳದಿ ಬಸವರಾಜೇಂದ್ರನು ತನ್ನರಸಿ ಚನ್ನಮ್ಮ ಹಾಗೂ ಪುತ್ರರನ್ನೊಡಗೂಡಿ ಕೆಳದಿ ಮಹಾಮಠಕ್ಕೆ ಗುರುಸಂದರ್ಶನಾರ್ಥವಾಗಿ ಬರುತ್ತಾನೆ. ಗುರುಪೂಜೆ ಮುಗಿಸಿ, ಶ್ರೀಮಠದ ಶಿವಪ್ರಸಾದವನ್ನು ಸ್ವೀಕರಿಸಿ ಕೆಲಕಾಲ ರಾಜಗುರುಗಳೊಂದಿಗೆ ಸಂಭಾಷಿಸುತ್ತಿರುವಾಗ, ರಾಣಿಯಾದ ಚೆನ್ನಮ್ಮಳು 'ಗುರುವರನೊಡತಿಯಡಿದಾವರೆಯೊಳ್, ವಿದ್ಯಾವಿಭವೆ ಕೆಳದೀ ರಾಜಕೃತಿಯಂ ವಿರಚಿಪುದು ನೀವು' ಎಂದು ಬೇಡಿಕೊಳ್ಳುತ್ತಾಳೆ. ಬಸವರಾಜನೂ ಸಹ ಮಂದ ಹರ್ಷದಿಂದ 'ಹಿಂದಣವರೀ ಕೃತಿಯನಾರುಂ ಪೇಳ್ದರಿಲ್ಲ ದಿಟ ಇಂದದಕ್ಕಂ ರಾಣಿ ಪ್ರಾರ್ಥಿಸುತೆಂದಳ್' ಎನ್ನುತ್ತಾ ತನ್ನ ರಾಣಿಯ ಮನೋಭಿಲಾಶೆಯನ್ನು ಈಡೇರಿಸುವಂತೆ ಪ್ರಾರ್ಥಿಸಿಕೊಳ್ಳುತ್ತಾನೆ. ಪತ್ನಿಯ ಆಸೆಯಂತೆ ಕಾವ್ಯವನ್ನು ರಚಿಸುವಂತೆ ಕೇಳಿದ ದೊರೆ ಬಸವರಾಜನ ಮಾತನ್ನು ಕೇಳಿದ ಗಂಗಾದೇವಿಯ ಪತಿ ಚೆನ್ನವೀರಸ್ವಾಮಿಯವರೂ ಸಹ ತಮ್ಮ ಪತ್ನಿಗೆ 'ನೀನಿವರೆಂದ ಕೃತಿಯಂ ವಿರಚಿಸುವುದುಚಿತ' ಎನ್ನುತ್ತಾ ಮಕ್ಕಳ ಸಂತೋಷವೇ ತಾಯಿಗೆ ತೃಪ್ತಿ ಎಂಬ ಮಾತಿಂದ ಗಂಗಾದೇವಿ ರಚನೆಗೆ ತೊಡಗಿದಳಂತೆ.

ತನ್ನ ಈ ಕೃತಿಗೆ ಆಕರ ಬಸವದೇವರಾಜನೇ ಒದಗಿಸಿದ ವಿಚಾರವನ್ನು **"**ನೆಲನಾಳ್ದ ತಮ್ಮ ಪೂರ್ವದ ಕುಲ ಕಥೆಯಂ ಬಸವರಾಜನೆನಗಿತ್ತಂ**"** ಎಂದು ದ್ವಿತೀಯ ಸೋಪಾನದ ಆರಂಭದಲ್ಲಿ ತಿಳಿಸಿದ್ದಾಳೆ. ಬಸವರಾಜ ರಚಿಸಿರುವ ಶಿವತತ್ವ ರತ್ನಾಕರ ಹಾಗೂ ಗಂಗಾದೇವಿಯ ಈ ಕೃತಿಯಲ್ಲಿ ಕೆಲವೊಂದು ಸಾಮ್ಯತೆಗಳನ್ನು ಗುರುತಿಸಬಹುದು.

**ಕಾವ್ಯಕ್ಕೆ ಪ್ರೋತ್ಸಾಹ ನೀಡಿದ ರಾಣಿ:**

ಬಸವರಾಜೇಂದ್ರನ ರಾಣಿ ಚನ್ನಮ್ಮಳು ತನ್ನನ್ನು ಕೃತಿರಚಿಸಲು ಯಾವ ರೀತಿಯಲ್ಲಿ ಬಿನ್ನಹ ಗೈಯ್ದಳು ಎಂದು ತಿಳಿಸಿರುವಲ್ಲಿಯೇ ರಾಣಿಯ ಸ್ವಭಾವದ ಪರಿಚಯವನ್ನು ಕವಯತ್ರಿಯು ತಿಳಿಸಿಕೊಟ್ಟಿದ್ದಾಳೆ. ರಾಣಿಯನ್ನು 'ಒಡತಿಯಹ ಮಹರಾಣಿ ಮನ್ನಣೆವಡೆದ ಚೆನ್ನಮ್ಮಾಜಿ' ಎಂದು ಕರೆದಿರುವ ಕವಯತ್ರಿಯು ಆಕೆಯ ಸರಳ ಗುಣ ಹಾಗೂ ಸೌಜನ್ಯತೆಯನ್ನು ಉಲ್ಲೇಖಿಸಿದ್ದಾಳೆ. ಕಾವ್ಯ ರಚನೆಯ ಹಂಬಲ ವ್ಯಕ್ತಪಡಿಸಿದ ಸತಿಯ ಮನದಿಚ್ಛೆಗೆ ಬೆಂಬಲ ನೀಡಿದ' ದೊರೆ ಬಸವರಾಜೇಂದ್ರ ಸ್ವತಃ ಕವಿಯಾಗಿದ್ದು, ವಿಶ್ವಕೋಶದ ಮಾದರಿಯಲ್ಲಿ ರಚಿಸಿದ ಈತನ 'ಶಿವತತ್ವ ರತ್ನಾಕರ' ಸಂಸ್ಕೃತದ ಅದ್ವಿತೀಯ ಗ್ರಂಥವೆನಿಸಿದೆ. ಅಲ್ಲದೆ ಇವನು ರಚಿಸಿರುವ 'ಕಾಳಿಕಾ ಕಾಂಡ' ಕಾವ್ಯವು ಕನ್ನಡದಲ್ಲಿ ರಚಿತವಾದ ಅತಿ ದೀರ್ಘವಾದ ವಾರ್ಧಕಷಟ್ಪದಿ ಕಾವ್ಯವೆಂಬ ಮನ್ನಣೆಗೆ ಪಾತ್ರವಾಗಿದೆ. ಈತ ತನ್ನ ಆಸ್ಥಾನದಲ್ಲಿ ಅನೇಕ ಕವಿಗಳಿಗೆ ಆಶ್ರಯ ನೀಡಿದ್ದನು. ಇವನ ಅರಸಿಯೂ ಕಾವ್ಯ ರಚಿಸಲು ಗಂಗಾದೇವಿಗೆ ಪ್ರೋತ್ಸಾಹ ನೀಡುವುದರ ಮೂಲಕ ಪತಿಗೆ ತಕ್ಕ ಸತಿಯೆನಿಸಿದ್ದಾಳೆ.

ಈ ಅಪೂರ್ಣವಾದ ಕೃತಿಯಲ್ಲಿ ರಾಣಿಯನ್ನು ಕುರಿತಾದ ಹೆಚ್ಚಿನ ವಿಚಾರಗಳು ದೊರೆತಿಲ್ಲ. ಆದರೆ ಲಿಂಗಣ್ಣಕವಿ ವಿರಚಿತ 'ಕೆಳದಿನೃಪ ವಿಜಯಂ' ಕೃತಿಯ ದಶಮಾಶ್ವಾಸದಲ್ಲಿ[30] ಇವಳು ಕುಟರಹಳ್ಳಿ ಚನ್ನವೀರವೊಡೆಯರ ಮಗ ಬಸವಪ್ಪ ಹಾಗೂ ಆತನ ಪತ್ನಿ ಪುಟ್ಟವ್ವನ ಮಗಳೆಂದು ತಿಳಿದು ಬರುತ್ತದೆ. ಬಸವಪ್ಪನಾಯಕ ಕೆಳದಿಯ ರಾಜನಾಗಿ ವೇಣುಪುರದಲ್ಲಿ ಪಟ್ಟಾಭಿಷೇಕಗೊಂಡ ನಂತರ ಅದೇ ಈಶ್ವರ ಸಂವತ್ಸರದ ಮಾಘಮಾಸದಲ್ಲಿ ಇವಳನ್ನು ವರಿಸಿದ. ವಿಕ್ರಮನಾಮ ಸಂವತ್ಸರದಲ್ಲಿ ಇವಳು ವೀರಭದ್ರನಾಯಕನ ತಾಯಿಯಾದಳು. ಬಸವರಾಜೇಂದ್ರನ ಅರಸಿ ಚನ್ನಮ್ಮಳು ಅಧಿಕಾರದ ಚುಕ್ಕಾಣಿ ಹಿಡಿದು ರಾಜ್ಯವಾಳದಿದ್ದರೂ ಗಂಗಾದೇವಿಯಂಥ ಕವಯತ್ರಿಯನ್ನು ಕನ್ನಡ ಕಾವ್ಯ ಪ್ರಪಂಚಕ್ಕೆ ಪರಿಚಯಿಸಿದ ಅರಸಿಯಾದಳು.

ಕೃತಿಯ ಪರಿಚಯ: ಈ ಕೃತಿಯಲ್ಲಿ ಅಧ್ಯಾಯಗಳನ್ನು ಸೋಪಾನವೆಂದು ಕರೆಯಲಾಗಿದೆ. ಮೊದಲ ಸೋಪಾನ ಭಾಮಿನಿ ಷಟ್ಪದಿಯಲ್ಲಿ ರಚಿತವಾಗಿದೆ. ಆರಂಭದಲ್ಲಿ ಶಿವಸ್ತುತಿ, ಗೌರೀಸ್ತುತಿ, ಷಣ್ಮುಖಸ್ತುತಿ, ವಿಶ್ವೇಶ್ವರ, ನಂದಿ, ಭೃಂಗಿ ಹಾಗೂ ವೀರಶೈವ ಪಂಚಾಚಾರ್ಯರುಗಳ ಸ್ತುತಿ ಮಾಡಲಾಗಿದೆ, ಮುಂದಿನ ಪದ್ಯದಲ್ಲಿ ವೀರಶೈವ ಭಾಷ್ಯಕಾರರಾದ ಶಿವಮತಾಂಬುಧಿ ಪೂರ್ಣಚಂದ್ರರಾದ ಶ್ರೀಪತಿ ಹಾಗೂ ನೀಲಕಂಠಶಿವಾಚಾರ್ಯರ ಮೊದಲಾದವರಿಗೆ ನಮಿಸಿ, ಬಸವೇಶ್ವರರಿಗೆ ವಂದಿಸಿ, ಚೆನ್ನ ಕನ್ನಡಜಾಣ ಹರಿಹರದೇವನಿಗೆ ನಮಸ್ಕರಿಸಿ, ರಾಘವಾಂಕಾದಿಗಳ ಕಾವ್ಯಶಕ್ತಿ ತನಗೆ ಬರಲೆಂದು ಬೇಡಿ, ನಿಜಗುಣ ಶಿವಯೋಗಿಗಳನ್ನು ಭಕ್ತಿಯಿಂದ ಪ್ರಾರ್ಥಿಸಿ ಕಥೆಗೆ ನಾಂದಿ ಹಾಡಿದ್ದಾಳೆ.

ಮೊದಲನೆಯ ಸೋಪಾನ ಇಷ್ಟದೇವತಾಸ್ತುತಿ, ಕವಿಪ್ರಸ್ತಾಪಕ್ಕೆ ಮೀಸಲಿಟ್ಟರೆ ಎರಡನೆಯ ಸೋಪಾನದಿಂದ ಕೆಳದಿ ಅರಸರ ಚರಿತ್ರೆ ಆರಂಭಗೊಂಡಿದೆ. ಎರಡನೆಯ ಸೋಪಾನ ಗದ್ಯದಲ್ಲಿದೆ. ಆದರೆ ಆರಂಭದಲ್ಲಿ ಒಂದು ಕಂದ ಪದ್ಯವಿದೆ.

ಕೆಳದಿ ನಾಡಿನ ಮೇರೆಯನ್ನು 'ಕೊಡಚಾದ್ರಿಯಿಂ ಬನವಸೆ ಪರ್ಯಂತಮಿರ್ಪಾ ಒಳನಾಂಡಿಂಗೆ ಮಲ್ಲದೇಶಮೆಂಬ ಸಲ್ಲಲಿತ ನಾಮಂ ಸಂದುದು' ತಿಳಿಸುತ್ತಾ, ಈ ನಾಡಿಗೆ ಮಲ್ಲದೇಶವೆಂಬ ಹೆಸರಿದ್ದುದನ್ನು ತಿಳಿಸಿದ್ದಾಳೆ.

ನಾಡಿನ ವಣ್ಣನೆ: "ಬನಸಿರಿ ಚೆಲುವಿಂಗೆ ನಿಲವಿಂಗೆ ನೆಲಯೆನಿಪ್ಪಾ ಸಲ್ಲಲಿತಮಾದ ಮಲ್ಲದೇಶದೊಳೆಲ್ಲಿ ನೋಡಿದೊಡಂ ಎತ್ತರ ಬಿತ್ತರಂಗಳ ಸೊಂಪಿಂ ರವಿಶಶಿ ಮಂಡಳಮಂ ಸ್ಪರ್ಧಿಪ ಘನೋತ್ತುಂಗ ಗಿರಿ ಕಾನನ ಶ್ರೇಣಿಗಳ ಲೋಕೇಶನಾಕಾಶ ಭಿತ್ತಿಯೊಳ್ ಬಣ್ಣಿಸಿದ ಚೆಲ್ವ ಚಿತ್ತಾರ ದಂತಿರ್ಕಡೆಯೊಳ್ ರಮ್ಯಮಾಗಿರಲ್…" "ವಿಭವ ಪ್ರಭಾವಂ ಬೆತ್ತ ನಾಡಿನ ಕಾಡುಕಣಿವೆ ಸರುವು ಘಟ್ಟಂಗಳೊಳ್ ಬೀಳುತೇಳುತ ಸುತ್ತಿ ಸುಳಿದು ಇಳಿದು

ಹೊಳೆದು ಜುಳುಜುಳು ಸಳಸಳ ಕಳಕಳನಾದಮಂ ಪಸರಿಸುತ್ತಂ ಪರಿವ ಮೆರೆವ ವರದಾ ನದಿ" "ಇವುಗಳ ನಡುವಣ ಸರವು ದಾಣಂಗಳೊಳ್.." ಇರುವ ಕೆಳದಿ ನಾಡನ್ನು ಬಣ್ಣಿಸಿದ್ದಾಳೆ.

ಕರ್ಣಾಟಕದಲ್ಲಿರುವ ಮಲ್ಲದೇಶ ಅದರಲ್ಲಿರುವ ಕೆಳದಿಪುರ ಬಸವಪ್ಪ ಮತ್ತು ಬಸವಾಂಬೆಯರ ದಾಂಪತ್ಯ, ಪತಿ ತೀರಿಕೊಂಡದ್ದರಿಂದ ದುಃಖಿತೆಯಾದ ಬಸವಾಂಬೆಯನ್ನು ಹೊರಗುಡಿಗೆಯ ಪಟ್ಟದ ರುದ್ರಮುನಿಸ್ವಾಮಿಗಳು ತಮ್ಮ 'ಪುಣ್ಯಸತಿ' ರುದ್ರಾಂಬೆಯ ಸಮೇತರಾಗಿ ಬಂದು ಸಾಂತ್ವನಗೊಳಿಸುತ್ತಾರೆ. ಚೌಡಪ್ಪ ಭದ್ರಪ್ಪರೆಂಬ ಅವಳ ಇಬ್ಬರು ಪುತ್ರರೂ ಜಗತ್ತಿನಲ್ಲಿ 'ಜಸವಡೆದಪ್ಪುದು, ತಪ್ಪದು' ಎಂದು ಭವಿಷ್ಯ ನುಡಿದ ಮೇಲೆ ಸಮಾಧಾನಿಯಾದ ಬಸವಾಂಬೆಯು ತನ್ನ ಎರಡೂ ಮಕ್ಕಳುಗಳ ಕೂಡೆ ಗುರುವಿಗೆ ನಮಸ್ಕರಿಸಲು ಗುರು ಆಶೀರ್ವದಿಸುತ್ತಾನೆ. 'ಇತ್ತಲ್ ಬಸವಾಂಬೆಯನುದಿನಂ ಮನೆಗೆಲಸಮಂ ಸಾಗಿಸುತ್ತುಂ ಮಠದಯ್ಯನವರಿಂ ಮಕ್ಕಳ್ಗಳನೋದಿಸುತ್ತುಂ ಶಿವಾಚಾರ ಸಂಪನ್ನೆ, ಸಚ್ಚಾರಿತ್ರದಿನಚ್ಚಳಿಯದೆ ನಿಚ್ಚಂ ನಡೆವುತ್ತ ಮಿಂತು ಕೆಲವುಂ ಬರಿಸಂ ಪೋಗೆವೋಗೆ' ಎಂಬಲ್ಲಿಗೆ ಕೃತಿ ನಿಂತಿದೆ. ಇದೊಂದು ಅಪೂರ್ಣ ಐತಿಹಾಸಿಕ ಕಾವ್ಯ.

ಗಂಗಾದೇವಿಯು ತನ್ನ ಸಂಕೋಚ ಮಿಶ್ರಿತ ವಿನೀತ ಭಾವವನ್ನು "ಕನ್ನಡದ ಕಬ್ಬಂಗಳೆನಿತೋ ಉನ್ನತಿಯೊಳನುಪಮತೆ ಪಡೆದಿರೆ ಇನ್ನಿವಳ ನವಕೃತಿಯು ಮನ್ನಣೆವಡೆವುದೇನವರೊಳ್। ಎನ್ನದಿರಿ ಕವಿಕೀರ್ತಿ ಕಾಮಿತವೆನ್ನ ಹವಣಿಕೆಯಲ್ಲವಿದು ಸಂಪನ್ನ ಕೆಳದೀ ರಾಜಚರಿತಮಪೂರ್ವಮೆಂದೊರೆವೆಂ॥ ಎಂದು ವ್ಯಕ್ತಪಡಿಸಿದ್ದಾಳೆ.

**ಸ್ವೇಷ್ಟವಹ ಹೆಣ್ಣಿಂಗೆ ಮಣ್ಣಿಗೆ**
**ಕಷ್ಟಪಟ್ಟುರು ಕಾದುಮಡಿದ**
**ಭ್ರಷ್ಟ ಭವಿಗಳ ಪೊಗಳ್ದ ಕೃತಿ ತಾನಲ್ಲವೀಕೃತಿಯು।**
**ಸೃಷ್ಟಿಯೊಳಗಿಹ ಸಕಲ ಧರ್ಮ ಪ್ರ**
**ತಿ ಷ್ಠೆಗಾಗಿಯೆ ನಾಡಪೊರೆವ ವ**
**ರಿಷ್ಠ ಅವರತಿ ಶೀಲ ಕೆಳದೀ ರಾಜರಾಚರಿತೆ॥**

ಹೀಗೆ ಶ್ರೇಷ್ಠ ಕೆಳದ ರಾಜರಾಜಚರಿತೆಯನ್ನು ಕುರಿತು ಹೇಳಿರುವ ತನ್ನ ಕೃತಿಯು ಮತಿಹೀನರಿಗಲ್ಲ ಎಂದಿದ್ದಾಳೆ.

**ಕೃತಿಯು ಮತಿಹೀನಂಗೆ ಪೊಲ್ಲಂ**
**ಸತಿಯು ರತಿಹೀನಂಗೆ ಸಲ್ಲಂ**
**ಸ್ಥಿತರುಮಪ್ಪೊಡೆ ತಜ್ಞರವರೀರ್ಷ್ಯೆಯೊಳೆ ಬಾಳ್ವರಹ।**
**ಕೃತಿ ಸತಿಗೆ ಗತಿಯೆಂತೆನಲ್ ಕೇಳ್**
**ನುತ ವಿಮತ್ಸರನೊರ್ವನೆಲ್ಲಿಯೊ**
**ಕ್ಷಿತಿಯೊಳಿಹನಾ ರಸಿಕನೇ ಕೃತಿಸತಿಗೆ ಗತಿಯು ಕಣಾ॥**

ಕವಯಿತ್ರಿ ಗಂಗಾದೇವಿಯು ತನ್ನ ಕೃತಿಯ ಶ್ರೇಷ್ಠತೆಯನ್ನು ಹೇಳುತ್ತಾ, ತನ್ನ ಕಾವ್ಯಕ್ಕೆ ಅಷ್ಟಾದಶವರ್ಣನೆಯ ಅವಶ್ಯಕತೆ ಇಲ್ಲವೆಂದು "ದೊರೆವಡೆದ ಪದಿನೆಂಟು ಬಣ್ಣನೆ ಗಿರವನೀಯದೆ ವಿಮಲ ಕಥೆಯನೆ ಬರೆಯಲಾಂ ಮನದಂದು ಕೃತಿಯಿದನೆಸಗತೊಡಗಿದೆನು।" ಹದಿನೆಂಟು ವರ್ಣನೆಗಳಿಗೆ ಅವಕಾಶಕೊಡದೆ ತನ್ನ ಕೃತಿಯಲ್ಲಿ ಕೇವಲ ಪವಿತ್ರವಾದ ಕೆಳದೀ ರಾಜರ ಕಥೆಯನ್ನು ಬರೆಯಲು ತೀರ್ಮಾನಿಸಿದಳಂತೆ. ಇವಳ ಪ್ರಕಾರ "ಸರಸ ಸುಂದರ ಸತ್ಯಕಥೆಗೇತಕ್ಕೆ ವರ್ಣನೆ" (೧–೩೧)

ನವರಸದ ಫಲವನ್ನು ವಿದ್ವಜ್ಜನರಿಗೆ ಉಣಬಡಿಸುವ ಕಾವ್ಯವೆಂಬ ವೃಕ್ಷವು ಪ್ರತಿಭೆಯೆಂಬ ಬೀಜದಿಂದ ಮೊಳೆತು ಬೆಳೆಯುವುದು. ಇದಕ್ಕೆ ಭವ್ಯಭಾಷೆ ಯೆಂಬ ಹದವಾದ ನೆಲೆ, ಸುಸಂಸ್ಕೃತಿಯ ಮಳೆನೀರು ಅಗತ್ಯವೆನ್ನುತ್ತಾ,

ಭೂಮಿ, ಮಳೆ, ದಿವ್ಯ ಬೀಜ ಒಂದು ಮರಕ್ಕೆ ಹೇಗೆ ಅವಶ್ಯಕವೋ ಕಾವ್ಯಕ್ಕೆ ಭಾಷೆ, ಸಂಸ್ಕೃತಿ, ಪ್ರತಿಭೆಯ ಅತ್ಯಗತ್ಯವನ್ನು ಸೊಗಸಾಗಿ ತಿಳಿಸಿದ್ದಾಳೆ.

**ಭವ್ಯಭಾಷಾ ಭೂಮಿಯೊಳ್ ಸಂ**
**ಭಾವ್ಯಶೀಲ ಸುವೃಷ್ಟಿಗರೆಯಲು**
**ದಿವ್ಯ ಪ್ರತಿಭಾಬೀಜವದರಿಂ ಮೊಳೆತು ಸಸಿಯಾಗಿ**
**ಕಾವ್ಯ ಕಲ್ಪದ್ರುಮಮದೆನಿಪುದು**
**ನವ್ಯನವರಸ ಫಲಮನೀವುದು**
**ಭಾವ್ಯ ವಿಬುಧರ್ಗೆಂದುವುಂ ತಾಂ ಸೇವ್ಯಮಾಗಿಹುದು॥**

ಕಾವ್ಯಪ್ರತಿಭೆ ಎಂಥದೆಂದು ತಿಳಿಸುತ್ತಾ ಕಥೆಗೆ ಒಪ್ಪುವಂಥ ವಸ್ತುಚಿತ್ರ ಹೆಣೆಯುವ ಜಾಣ್ಮೆ, ಅರ್ಥೋಚಿತ ಶಬ್ದಗಳ ಪ್ರಯೋಗ, ರಸ ಅಲಂಕಾರಾದಿಗಳಿಂದ ಕೂಡಿದ ಭಾವಾಭಿವ್ಯಕ್ತಿ ಇವೆಲ್ಲ ಕೂಡಿರುವುದೇ ಪ್ರತಿಭೆ ಎಂದು ತಿಳಿಸಿದ್ದಾಳೆ.

**ಕಥನಕೊಪ್ಪುವ ವಸ್ತುಚಿತ್ರೋ**
**ಚಿತ ಸುಶಬ್ದಾರ್ಥಂಗಳಂ ಕವಿ**
**ಮತ ರಸಾಲಂಕಾರ ಭಾವಾದಿಗಳನಾಕ್ಷಣಕೆ ।**
**ಕಥಿಸುವನೊಳು ಮಿಂಚಿನಂತುರೆ**
**ಪ್ರತಿಫಲಿಸಿ ಭಾಸಿಸುವುದಾವುದೊ**
**ಪ್ರತಿಭೆಯದು ಕವಿಜನರ ಕಾಮಿತವೀವ ಸುರತರುವು॥**

ಭಾಮಿನಿಯು ಆಕೆಗೆ ಸಿದ್ಧಿಸಿಲ್ಲ ಎಂದು ವಿಮರ್ಶಿಸಿರುವ ಸಾ.ಶಿ.ಮ ಅವರು "ಗದ್ಯವು ಮಾತ್ರ ಸೊಗಸಾದ ಪ್ರೌಢವಾದ ಶೈಲಿಯಲ್ಲಿ ರಚಿತವಾಗಿದೆ" ಎಂಬ ಮೆಚ್ಚುಗೆ ಸೂಸಿದ್ದಾರೆ (ಪು.೪೫೨)

ಕಾವ್ಯದಲ್ಲಿ "ಆನೆಯಾ ಘನರೂಪ ಕಾಣುತೆ ಹೀನ ಶ್ವಾನವು ಬೊಗುಳೆ ಬಳಲ್ವುದು ಆನೆಗದರಿಂದಾದ ಹಾನೆಯದೇನು" ; "ಪುರದ ಗೌಡನು ಮಾಡದುದನವ ನುರುವ ಕಂಬಳಿ ಮಾಳ್ಪುದೇ" ಎಂಬ ಮೊದಲಾದ ನಾಣ್ನುಡಿಗಳನ್ನು ಕಾಣಬಹುದಲ್ಲದೆ, ಸಾಧಾರಣವಾಗಿ ಮನೆಯ ಹೆಂಗಸರು ಹಳಿವಂತೆ "ಹಾಳ್ ವಿಧಿಗೆ ದಯೆಯಿಲ್ಲ ದಾಕ್ಷಿಣ್ಯಮಿಲ್ಲ" ಎಂಬ ಆಡುಮಾತಿನ ಬಳಕೆಯಿದೆ. ಬಸವಾಂಬೆಗೆ ರುದ್ರಮುನಿಸ್ವಾಮಿಗಳು ಧೈರ್ಯಗೊಟ್ಟಮೇಲೆ "ಹಿಮವುಡುಗಿದ ಕಮಲದಂತೆ, ತಮವಡಗಿದ ನಯನದಂತೆ, ನೇಸರ್ ತೊಲಂಗಿದ ನಕ್ಷತ್ರದಂತೆ, ರಾಹುವೋಸರಿಸಿದ ರೋಹಿಣೀ ಪ್ರಿಯನಂತೆ" ಪ್ರಸನ್ನವದನಳಾದಳು ಎಂಬ ಮೊದಲಾದ ಸಾಲಿನಲ್ಲಿ ಬಳಕೆಯಾದ ಅಲಂಕಾರ ಸೊಗಸಾಗಿದೆ.

'ಕೆಳದಿ ರಾಜಾಭ್ಯುದಯಮೆಂಬೀ ಲಲಿತ ನಾಮಂ, ಕೃತಿಪತಿ ಕೆಳದಿ ರಾಜಕುಲಾಬ್ಜರವಿ ರಾಮೇಶ ಲಿಂಗಕಣಾ, ಇಳೆಯೊಳಿದನೊರೆದವಳದಾರೆನೆ' ಕೆಳದಿ ರಾಜಾನ್ವಯದ ನಿಜಗುರು ಕೆಳದಿ ವರ ಮಠದ ಚೆನ್ನವಿರಾಚಾರ್ಯನರ್ಧಾಂಗಿ' ಎಂದಿದ್ದಾಳೆ.

ಈ ಕೃತಿಯನ್ನು ಕುರಿತು ಇದರ ಸಂಪಾದಕರಾದ ಸಾ.ಶಿ.ಮರುಳಯ್ಯನವರು "ಕೆಳದಿ ರಾಜಾಭ್ಯುದಯಮ್ ಒಂದು ಐತಿಹಾಸಿಕ ಗ್ರಂಥ. ಅಪೂರ್ಣಗ್ರಂಥವಾಗಿದ್ದರೂ, ಕೃತಿಕಾರ್ತಿಯ ಬಗ್ಗೆ ಸಂದೇಹವಿದ್ದರೂ, ಪ್ರಕಟವಾದ ಕೃತಿಯ ಬಗೆಗೆ ತಿರಸ್ಕಾರ ತೋರುವಂತಿಲ್ಲ. ಏಕೆಂದರೆ ಸಿಕ್ಕಿರುವ ಸ್ವಲ್ಪವೇ ಭಾಗದಲ್ಲಿ ಉತ್ತಮ ಕಾವ್ಯಗುಣಗಳು ಮೆರೆದಿವೆ" (ಪು.೪೫೧) ಎಂದಿದ್ದಾರೆ.

ಕೃತಿಯ ಆರಂಭದ ಕೆಲವು ಪದ್ಯಗಳೂ ಲುಪ್ತವಾಗಿರಬಹುದು. ಸಾಧಾರಣವಾಗಿ ಕನ್ನಡದ ಕಾವ್ಯಗಳೆಲ್ಲ 'ಶ್ರೀ' ಯಿಂದ ಆರಂಭ ವಾಗುವಂತೆ ಈ ಕೃತಿಯು ಆರಂಭವಾಗಿಲ್ಲ. ಅಲ್ಲದೆ ಆರಂಭದಲ್ಲಿ ಕಂಡುಬರುವ ಗಣಪತಿಯ ಸ್ತುತಿಯೂ ಇಲ್ಲ. ಶಿವ, ಗೌರಿ, ಷಣ್ಮುಖ, ವಿಶ್ವೇಶ, ಭೃಂಗಿ, ಗುರುಪರಂಪರೆಯನ್ನು ಸ್ತುತಿಸಿರುವ ಕವಯತ್ರಿಯು ಗಣಪತಿಯನ್ನು ಸ್ತುತಿಸದಿರಳು.

ಗಂಗಾದೇವಿಯ ಈ ಕೃತಿಯನ್ನು ಮತ್ತಾವ ಕವಿಯು ಉಲ್ಲೇಖಿಸಿಲ್ಲ ವೆಂಬುದೆ ಇದರ ಪ್ರಾಚೀನತೆಯ ಕುರಿತದ ಅನುಮಾನಕ್ಕೆ ಕಾರಣವಾಗಿದೆ[೨೧]. ಈ ಕೃತಿಯನ್ನು ಇತರರು ಉಲ್ಲೇಖಿಸಿಲ್ಲವೆಂಬುದು ಮಾನದಂಡವಾಗಲಾರದು. ಇತ್ತೀಚೆಗೆ ದೊರೆತ ಕೆಳದಿಯ ಅರಸು ಬಸವಪ್ಪನಾಯಕನ ಕೃತಿ 'ಕಾಳಿಕಾ ಕಾಂಡ' ಕಾವ್ಯವನ್ನು ಕುರಿತಾಗಿಯೂ ಮಿಕ್ಕಾವ ಕೆಳದಿ ಅರಸರ ಕಾಲದ ಕೃತಿಗಳೂ ಉಲ್ಲೇಖಿಸಿಲ್ಲ. ಅಲ್ಲದೆ ಸಾಹಿತ್ಯ ಚರಿತ್ರೆಗಳಲ್ಲಿಯೂ ಇದರ ಪ್ರಸ್ತಾಪವಿಲ್ಲ. ೨೦೦೧ರಲ್ಲಿ ಮುದ್ರಣಗೊಂಡಿರುವ ಸಾ.ಶಿ.ಮ ಅವರ ಪಿಹೆಚ್.ಡಿ ಕೃತಿ 'ಕೆಳದಿಯ ಅರಸರು ಮತ್ತು ಕನ್ನಡ ಸಾಹಿತ್ಯ' ಸಂದರ್ಭದಲ್ಲಿಯು ಕೂಡ 'ಕಾಳಿಕಾ ಕಾಂಡ' ಬೆಳಕಿಗೆ ಬಂದಿರಲಿಲ್ಲ. ಹೊಸ ಸಂಶೋಧನೆಗಳಿಂದ ಲಭಿಸುವ ಮಾಹಿತಿಗಳನ್ನು ಸಾಹಿತ್ಯ ಚರಿತ್ರೆ ಹಾಗೂ ಆ ಸಂಬಂಧಿತ ಮತ್ತಿತರ ಕೃತಿಗಳಲ್ಲಿ ಉಲ್ಲೇಖಿಸುವ ಮೂಲಕವಷ್ಟೇ ಪ್ರಸಿದ್ಧಿಗೆ ತರಲು ಸಾಧ್ಯ.

ಗಂಗಾದೇವಿಯ ಈ ಕೃತಿಯು ಅಪೂರ್ಣಗೊಳ್ಳಲು ಅನೇಕ ಕಾರಣಗಳನ್ನು ಊಹಿಸಬಹುದು. ಬಸವಪ್ಪನಾಯಕ ಹಾಗೂ ಅವನ ಪತ್ನಿಯ ಅಪೇಕ್ಷೆಯನ್ನು 'ಮಕ್ಕಳ ಸಂತೋಷ' ಎಂದು ಹೇಳಿರುವುದರಿಂದ ಈಕೆ ಬಸವಪ್ಪನಾಯಕನ ತಾಯಿ ಚನ್ನಮ್ಮಾಜಿಯ ಪ್ರಾಯದವಳಿದ್ದಿರಬೇಕು. ಈ ಕಾವ್ಯ ರಚನೆಗೆ ತೊಗಡುವಾಗಲೇ ಇಳಿವಯಸ್ಸಿನವಳಿದ್ದು, ಅರ್ಧದಲ್ಲಿ ಮರಣಸಂಭವಿಸಿದ್ದು ಕಾವ್ಯ ಅಪೂರ್ಣವಾಗಿಯೇ ಉಳಿದಿರಬಹುದು. ದೊರೆತಿರುವ ಏಕೈಕ ಪ್ರತಿಯು ಕಾಗದದ ಪ್ರತಿಯಾಗಿರುವುದರಿಂದ ಇದು ಕವಯಿತ್ರಿಯ ಸ್ವಹಸ್ತಾಕ್ಷರದ ಕೃತಿಯಲ್ಲ. ಇದರ ಮೂಲ ಕೃತಿಯನ್ನು ಲಿಪಿಕಾರ ಸಂಪೂರ್ಣವಾಗಿ ಪ್ರತಿಮಾಡದೆ ಅರ್ಧದಲ್ಲಿಯೇ ನಿಲ್ಲಿಸಿರಬಹುದು. ಆದರೆ ಇವಳ ಉಲ್ಲೇಖವು ಮಠಕ್ಕೆ ಸಂಬಂಧಿಸಿದ ದಾನಪತ್ರ, ಶಾಸನದಲ್ಲಿ ದೊರಕುವುದರಿಂದ ಹಾಗೂ ಇವಳು ಕೆಳದಿಯ ಅರಸು ಬಸವರಾಜೇಂದ್ರನ ರಾಜಗುರುವಿನ ಪತ್ನಿ ಎಂಬುದು ಸ್ಪಷ್ಟವಾಗಿರುವುದು ಹಾಗೂ ಅಪೂರ್ಣವಾದರೂ ದೊರಕಿರುವ ಇವಳ ಕೃತಿಯಲ್ಲಿನ ಇವಳ ಕೆಲವು ವಿಚಾರಗಳು, ಈಕೆಯು ಕೆಳದಿ ಅರಸರಕಾಲದ ಅಪೂರ್ವ ಕವಯತ್ರಿ ಎಂಬುದನ್ನು ತಿಳಿಸುತ್ತದೆ.

ಗಂಗಾದೇವಿಯ ಈ ಅಪೂರ್ಣವಾದ ಕೃತಿಯು ಮುಂದೊಂದುದಿನ ಸಮಗ್ರವಾಗಿ ದೊರೆತು ಪ್ರಕಟವಾದಲ್ಲಿ ಕೆಳದಿಯ ಇತಿಹಾಸ ಹಾಗೂ ಕವಯತ್ರಿ ಗಂಗಾದೇವಿಯ ಕುರಿತಂತೆ ಮತ್ತಷ್ಟು ಹೊಸ ವಿಚಾರಗಳು ದೊರಕುವ ಸಾಧ್ಯತೆ ಇದೆ.

### ಕೆಳದಿ ಚೆನ್ನಮ್ಮಳ ಕಾಲದ ಸಾಹಿತ್ಯ

ಕೆಳದಿಯ ಹಿರಿಯ ಸೋಮಶೇಖರ ನಾಯಕನ ಮಡದಿ ಚೆನ್ನಮ್ಮ. ಶಾ.ಶ ೧೫೯೪ರಿಂದ ಶಾ.ಶ೧೬೨೦ರ ವರೆಗೆ (ಕ್ರಿ.ಶ.೧೬೭೨–೧೬೯೭) ಕೆಳದಿಯನ್ನು ಸಾಂಪ್ರದಾಯಿಕವಾಗಿ ಪಟ್ಟಾಭಿಷಿಕ್ತಳಾಗಿ ಆಳ್ವಿಕೆ ನಡೆಸಿದ ರಾಣಿ.

ಆಡಳಿತ, ವ್ಯಾಪಾರ, ಯುದ್ಧ ಎಲ್ಲ ಕ್ಷೇತ್ರದಲ್ಲಿಯೂ ಚಾತುರ್ಯ ಮೆರೆದು ದಕ್ಷ ಆಡಳಿತಗಾರ್ತಿಯಾದ ರಾಣಿ ಚೆನ್ನಮ್ಮ ವಿದ್ವಾಂಸರು ಹಾಗೂ ಕವಿಗಳ ಪೋಷಣೆಗೂ ಹೆಸರುವಾಸಿಯಾಗಿದ್ದಳು. ಬುಧಜನಾಶ್ರಿತ ರಾಣಿಯ ಕೀರ್ತಿಯು ಅನ್ಯರಾಜ್ಯಗಳಲ್ಲಿಯೂ ಹಬ್ಬಿತ್ತು. ಗೋಲ್ಕೊಂಡದ ನವಾಬರ ಆಸ್ಥಾನದಲ್ಲಿದ್ದ **ಪೆದ್ದೂರ ಲಿಂಗಪ್ಪನು** ರಾಣಿ ಚನ್ನಮ್ಮಾಜಿಯ ಕೀರ್ತಿಯನ್ನು ಕೇಳಿ ಗೋಲ್ಕೊಂಡವನ್ನು ತ್ಯಜಿಸಿ, ಆಶ್ರಯಬೇಡಿ ಕೆಳದಿ ರಾಜ್ಯಕ್ಕೆ ಬರುತ್ತಾನೆ. ಈ ಪ್ರಕರಣವನ್ನು ಕೆಳದಿ ನೃಪವಿಜಯವು ದಾಖಲಿಸಿದೆ. "ಪೆದೂರ ಲಿಂಗಪ್ಪಂ ಬಿಗಡಿಸಿ ಬಂದಿರಲಾತನಂ

ಬಸವಾಪಟ್ಟಣದೊಳಿಟ್ಟು ಸಂತಸಂ ಬಡಿಸಿ" (ನಮಮಾಶ್ವಾಸ) ಎಂದು ತಿಳಿಸುತ್ತಾ ಕವಿಯು, ಆಶ್ರಯ ಬೇಡಿ ಬಂದಾತನನ್ನು ರಾಣಿಯು ಬಹು ಪ್ರಸನ್ನತೆಯಿಂದ ಬರಮಾಡಿಕೊಂಡು ಬಸವಾಪಟ್ಟಣದಲ್ಲಿ ನೆಲೆಗೊಳಿಸಿದಳೆಂದು ವಿವರಣೆ ನೀಡಿದ್ದಾನೆ.

'ಶುಕಸಪ್ತತಿ' ಕೃತಿಯನ್ನು ರಚಿಸಿರುವ **ಶರಜಾನಾಗಪ್ಪಯ್ಯ** ಕೂಡ ಅರಸಿ ಚೆನ್ನಮ್ಮಳ ಕಾಲದಲ್ಲಿ ಅಧಿಕಾರಿಯಾಗಿದ್ದವನು. ಕೆಳದಿ ನೃಪವಿಜಯದಲ್ಲಿ ಚೆನ್ನಮ್ಮಳ ಕಾಲದಲ್ಲಿದ್ದವರ ಪಟ್ಟಿಯನ್ನು ನೀಡಲಾಗಿದೆ[೨೨]. ಅದರಲ್ಲಿ ಶರಜಾನಾಗಪ್ಪಯ್ಯನ ಹೆಸರು ಉಕ್ತವಾಗಿದೆ. ಅಲ್ಲದೆ ಕೆಳದಿ ನೃಪವಿಜಯ ತಿಳಿಸುವಂತೆ "ಉಭಯ ಸಂಸ್ಥಾನಗಳ್ಗಮನ್ಯೋನ್ಯ ವಿರೋಧಂ ಪುಟ್ಟಿ ವರ್ತಿಸದಂತು ನಿಯೋಗಿ ಶರಜಾನಾಗಪ್ಪಯ್ಯನ ಮುಖದೊಳ್ ಕ್ರಿಯಾಪೂರ್ವಕಮಾಗಿ ಭಾಷಾಪತ್ರಿಕೆಯಂ ರಚಿಯಿಸಿ ನಿರ್ವೈರಮಂ ನಿರ್ಮಿಸಿದನ್" (ಪು೧೫೧) ಎಂದು ತಿಳಿಸಿರುವಂತೆ ಶರಜಾನಾಗಪಯ್ಯನು ಅರಮನೆಯ ನಿರೂಪ ಮೊದಲಾದ ರಚನೆಗಳಲ್ಲಿ ಸಹಾಯಕನಾಗಲು ನಿಯೋಜಿತನಾಗಿದ್ದವನು. ಈತನು ಚೆನ್ನಮ್ಮಳ ಮಗ ಬಸವಭೂಪಾಲನ ಆಳ್ವಿಕೆಯ ಕಾಲದಲ್ಲಿ 'ಶುಕಸಪ್ತತಿ' ಎಂಬ ಷಟ್ಪದಿಕಾವ್ಯವನ್ನು ರಚಿಸಿದ್ದಾನೆ.

ಸಾಹಿತ್ಯ ಕ್ಷೇತ್ರಕ್ಕೆ ಕೆಳದಿ ಚೆನ್ನಮ್ಮಳ ಅಮೂಲ್ಯ ಕೊಡುಗೆ ಎಂದರೆ ಅವಳ ಸಾಕುಮಗ ಬಸವಪ್ಪನಾಯಕ. ಇವನು ಕನ್ನಡ–ಸಂಸ್ಕೃತ ಎರಡೂ ಭಾಷೆಯಲ್ಲಿ ಪಂಡಿತನಾಗಿದ್ದು, ಸಾಹಿತ್ಯ ರಚಿಸಿದ್ದಾನೆ. ಶಿವತತ್ವ ರತ್ನಾಕರ, ಸುಭಾಷಿತ ಸುರದ್ರುಮ ಎಂಬ ಸಂಸ್ಕೃತ ಕೃತಿಗಳೊಂದಿಗೆ, ಸೂಕ್ತಿ ಸುಧಾಕರ, ಕರ್ನಾಟಕ ಕಾಳಿಕಾಕಾಂಡ ವೆಂಬ ಕನ್ನಡ ಕೃತಿಗಳನ್ನೂ ರಚಿಸಿದ್ದಾನೆ.

ಬಸವಪ್ಪನಾಯಕನ 'ಕರ್ನಾಟಕ ಕಾಳಿಕಾ ಕಾಂಡ' ಕೃತಿಯು ಪುರಾಣದಲ್ಲಿ ಉಕ್ತವಾಗಿರುವ ಕಾಳಿಕಾದೇವಿಯ ಕಥೆಯನ್ನು ವಸ್ತುವನ್ನಾಗಿರಿಸಿಕೊಂಡಿದ್ದರೂ ರಾಣಿ ಚೆನ್ನಮ್ಮಳನ್ನು ಕಾಳಿಕಾದೇವಿಗೆ ಸಮೀಕರಿಸಿ ರಚಿತವಾಗಿರುವ ವಿಶಿಷ್ಟವಾದ ಕಾವ್ಯವಾಗಿದೆ. ಇದರೊಂದಿಗೆ ಈತನೇ ರಚಿಸಿರುವ 'ಶಿವತತ್ವ ರತ್ನಾಕರ' ಕೃತಿಯಲ್ಲಿಯೂ ಕೂಡ ಚೆನ್ನಮ್ಮಳನ್ನು ಕುರಿತಾಗಿ ಕೆಲವು ಅಪೂರ್ವ ಮಾಹಿತಿಯನ್ನು ತಿಳಿಸಿಕೊಟ್ಟಿದ್ದಾನೆ.

**ಕವಿ ಬಸವಪ್ಪನಾಯಕ :** ಕವಿ ಬಸವಪ್ಪನಾಯಕ ಕೆಲವೆಡೆ ಬಸವಭೂಪ, ಬಸವರಾಜೇಂದ್ರ, ಬಸವರಾಜ ಎಂದೂ ಉಲ್ಲೇಖಿತನಾಗಿದ್ದಾನೆ. ಇವನು ಅರಸಿ ಚೆನ್ನಮ್ಮಳ ದತ್ತು ಪುತ್ರ. ಇವನು ತನ್ನ ಕೃತಿಯಲ್ಲಿ "ಅಸ್ಮಾಕಂ ಸರ್ವವಿದ್ಯಾಸು ಕಾರಯಂತಾ ಪರಿಶ್ರಮಮ್" ಎನ್ನುತ್ತಾ ತನಗೆ ಎಲ್ಲಾ ವಿದ್ಯೆಗಳಲ್ಲಿಯೂ ಪರಿಣತೆಯನ್ನು ಕೊಡಿಸಿದಳೆಂದು ಚೆನ್ನಮ್ಮನನ್ನು ಕೃತಜ್ಞತೆಯಿಂದ ಸ್ಮರಿಸಿದ್ದಾನೆ.

ದಕ್ಷ ನಾಯಕ ಹಾಗೂ ವಿದ್ವತ್ಪೂರ್ವಕವಾದ ಹಲವಾರು ಕೃತಿಗಳನ್ನು ರಚಿಸಿರುವ ಬಸವಪ್ಪನಾಯಕನಿಗೆ ಸ್ಫೂರ್ತಿ ಹಾಗೂ ಮಾರ್ಗದರ್ಶಿ ಆತನ ಸಾಕುತಾಯಿ ಕೆಳದಿಯ ರಾಣಿ ಚೆನ್ನಮ್ಮ. ಈ ವಿಚಾರವನ್ನು ಸ್ವತಃ ಬಸವಪ್ಪನಾಯಕನೇ ಶಿವತತ್ತ್ವರತ್ನಾಕರದ ಎಂಟನೆಯ ಕಲ್ಲೋಲದಲ್ಲಿ ಈ ರೀತಿಯಾಗಿ ತಿಳಿಸಿದ್ದಾನೆ. "**ಉಕ್ತಂ ತ್ವಂ ನಾನ್ಯಥಾ ಬ್ರೂಯಾಃ ಕ್ವಾಪಿ ರೌರ್ಯಂ ನ ಸಂತ್ಯಜ। ಮಾ ಮುಂಚ ಮಧುರಾಲಾಪಂ ನ ಬ್ರೂಯಾದ್ ಧೃದಯಂ ಕಠೇ॥ ಅಮಾರ್ಗೇ ನಪದಂ ಕುರ್ಯಾಃ ಸ್ನೇಷು ಭೇದಂ ನ ಕಾರಯ। ಪಾಪಂ ವಿಮುಂಚ ಸುಕೃತಂ ಕುರುಂ ಶಂಭೋಃ ಪದಂ ಭಜ॥...**" ಇದರ ಕನ್ನಡಾನುವಾದ ಹೀಗಿದೆ "ನುಡಿದದ್ದನ್ನು ಬದಲಿಸದಿರು, ಎಂದಿಗೂ ಎಲ್ಲಿಯೂ ಕರ್ತವ್ಯಚ್ಯುತನಾಗದಿರು. ಸರ್ವರೂ ಮಧುರವಾಗಿ ಮಾತನಾಡುವಂತೆ ಎಚ್ಚರವಹಿಸು, ದುಷ್ಟರಿಗೆ ನಿನ್ನ ಹೃದ್ಗತವನ್ನು ತೋರದಿರು. ದುರ್ಮಾರ್ಗ ಹಿಡಿಯದಿರು, ಸ್ವಜನರಲ್ಲಿ ಭೇದವೆಣಿಸದಿರು, ಪಾಪಕಾರ್ಯ ಮಾಡದಿರು, ಸತ್ಕಾರ್ಯಗಳನ್ನು ಮಾಡು, ಸದಾ ಶಂಭುವಿನ ಪಾದಗಳನ್ನು ಧ್ಯಾನಿಸು, ಸಕಲಜೀವಿಗಳಲ್ಲಿ ದಯೆತೋರು. ಆಶ್ರಯ ಬಯಸಿ ಬಂದವರಿಗೆ ರಕ್ಷಣೆ ನೀಡು. ಪರರನ್ನು ನಿಂದಿಸದಿರು, ಪ್ರಪಂಚದಲ್ಲಿ ಆತ್ಮ ಸಂಯಮ ಇಲ್ಲದೆ ನಡೆಯದಿರು, ಕಾಮಾದಿ ದೋಷಗಳನ್ನು ಜಯಿಸು ಮತ್ತು ಹುಟ್ಟುಸಾವುಗಳಿಂದ ಮುಕ್ತಿ ಪಡೆ, ವಿಪತ್ಕಾಲದಲ್ಲಿ ಕೂಡ ಧೃತಿಗೆಡದಿರು, ಸಿರಿತನ

ಬಂದಾಗ ಸೊಕ್ಕದಿರು, ತತ್ವವನ್ನು ಕುರಿತು ಚಿಂತಿಸು, ಅದ್ವೈತ ತತ್ವದ ತಿರುಳನ್ನು ತಿಳಿದುಕೊ, ಸುಸಂಧಿಯನ್ನು ಕಳೆದುಕೊಳ್ಳದಿರು, ವೇದಜ್ಞರನ್ನು ಸನ್ಮಾನಿಸು, ಜೀವನವನ್ನು ಕನಸೆಂದು ತಿಳಿ, ನಾನು ಯಾರು? ಎಂಬ ಪ್ರಶ್ನೆಯನ್ನು ವಿವೇಚಿಸು, ನೀನು ನಗೆಗೀಡಾಗದಂತೆ ನಗು, ಉತ್ತಮವಾಗಿ ಮಾತನಾಡು, ಜನಸ್ತುತಿ ಮಾಡುವ ಹಾಗೆ ನಡೆ, ಪುನರ್ಜನ್ಮತಾವಾದ ಮಾರ್ಗವನ್ನು ಅನುಸರಿಸು, ಶಿವನನ್ನು ವಿವಿಧ ರೀತಿಯಲ್ಲಿ ಪೂಜಿಸು ಮತ್ತು ಅನಂತ ಆನಂದವನ್ನು ಅನುಭವಿಸು" ಎಂದು ಹಲವು ಬಗೆಯಲ್ಲಿ ತಾಯಿ ಚೆನ್ನಮ್ಮಳು ಉಪದೇಶಿಸಿದಂತೆ ಧರ್ಮ ಪಾಲಿಸಿದ್ದನೆಂದು ಹೇಳಿಕೊಂಡಿದ್ದಾನೆ.

**ಶಿವತತ್ತ್ವರತ್ನಾಕರ:** ವಿಶ್ವಕೋಶದ ಮಾದರಿಯಲ್ಲಿ ರಚಿತವಾದ ಈ ಕೃತಿಯು, ಸಾಮಾನ್ಯ ಲೌಕಿಕದ ಸಂಗತಿಯಿಂದ ಹಿಡಿದು ಅಧ್ಯಾತ್ಮ, ಆಗಮ ವಿಚಾರದವರೆಗೂ ಎಲ್ಲ ಮಾಹಿತಿಯನ್ನೂ ಒಳಕೊಂಡಿದೆ. ಇಲ್ಲಿನ ಅಧ್ಯಾಯಗಳನ್ನು ಕಲ್ಲೋಲಗಳೆಂದೂ, ಅಧ್ಯಾಯದ ಕಿರು ಘಟಕಗಳನ್ನು ತರಂಗಗಳೆಂದೂ ಕವಿ ಬಸವಪ್ಪನಾಯಕ ಹೆಸರಿಸಿದ್ದಾನೆ. ಈ ಕೃತಿಯು ಒಟ್ಟು ೯ ಕಲ್ಲೋಲ, ೧೦೮ ತರಂಗಗಳಲ್ಲಿ ಸುಮಾರು ೧೩೦೦೦ ಶ್ಲೋಕಗಳಿಂದ ರಚಿತವಾಗಿರುವ ಬೃಹದ್ಗ್ರಂಥ. ಇದರಲ್ಲಿ ಐತಿಹಾಸಿಕ ವಿಚಾರವೂ ಸೇರಿದ್ದು ೮ನೆಯ ಕಲ್ಲೋಲದ ಐದನೆಯ ತರಂಗದಿಂದ ಎಂಟನೆಯ ತರಂಗದವರೆಗೂ ರಾಣಿ ಚೆನ್ನಮ್ಮಳ ಕುರಿತಾದ ವಿವರಗಳು ರಚಿತವಾಗಿದೆ.

**ಮೂಕಾಂಬಿಕಾಂಶಸಂಭೂತಾಂ ಚನ್ನಾಂಬಾಖ್ಯಾಂ ಮನೋಹರಾಮ್ ।**
**ಭೂಷಿತಾ ಸಾ ದ್ವಿತೀಯೇದ ರಾಜ್ಯಶ್ರೀಃ ಹೃದ್ಯತಾಮಗಾಗತ್** । ಮೂಕಾಂಬಿಕೆಯ ಅಂಶದಿಂದ ಹುಟ್ಟಿದ, ಮನೋಹರಿಯಾದ ಚೆನ್ನಾಂಬೆಯು ದ್ವಿತೀಯ ರಾಜ್ಯಲಕ್ಷ್ಮಿಯಂತೆಯೇ ಶೋಭಿಸಿದಳು.

ಶಿವತತ್ತ್ವ ರತ್ನಾಕರದ ಎಂಟನೆಯ ಕಲ್ಲೋಲದ ಎಂಟನೆಯ ತರಂಗದಲ್ಲಿ ಚೆನ್ನಮ್ಮಳ ವಿವಾಹ, ಪತಿ ಸೋಮಶೇಖರನಿಂದ ರಾಜಕೀಯ ವಿಚಾರಗಳ ಕುರಿತಾದ ಹಿತವಚನ, ಚೆನ್ನಮ್ಮಳು ಅಧಿಕಾರ ವಹಿಸಿಕೊಂಡದ್ದು, ಶತ್ರುಗಳನ್ನೂ, ಉದ್ಧಿತರಾದ ಸಾಮಂತರನ್ನು ನಿಗ್ರಹಿಸಿ ತನ್ನ ಆಡಳಿತದ ಅಧೀನಕ್ಕೆ ಒಳಪಡಿಸಿಕೊಂಡದ್ದು ಇವೇ ಮೊದಲಾದ ವಿಚಾರಗಳು ಬಣ್ಣಿತವಾಗಿವೆ. ಮುಂದೆ ಸುಮಾರು ಹತ್ತುಶ್ಲೋಕಗಳಲ್ಲಿ ಶಿವಾಜಿಯ ಮಗ ರಾಮರಾಜನಿಗೆ ಚೆನ್ನಮ್ಮಳು ಆಶ್ರಯ ನೀಡಿದ ವಿಚಾರ ಹಾಗೂ ಈ ಕಾರಣಕ್ಕಾಗಿ ಔರಂಗಜೇಬನ ಸೈನ್ಯವನ್ನು ಎದುರಿಸಿದ ಸಂದರ್ಭದ ವಿವರಣೆ ಇದೆ. ಮುಂದಿನ ಹತ್ತು ಶ್ಲೋಕಗಳಲ್ಲಿ ಚೆನ್ನಮ್ಮಳ ದಾನ ಹಾಗೂ ಧಾರ್ಮಿಕ ಕಾರ್ಯಗಳ ಕುರಿತಾದ ವರದಿಯನ್ನು ಕವಿ ನೀಡಿದ್ದಾನೆ. ಇದರೊಂದಿಗೆ ತನ್ನನ್ನು ಸಲಹಿದ ವಿಚಾರ ಹಾಗೂ "ವಿವಾಹಮಂಗಲಮಪಿ ಸವೈಭವಮಕಾರಯತ್" ಎನ್ನುತ್ತಾ ತನ್ನ ವಿವಾಹವನ್ನೂ ವೈಭವದಿಂದ ಮಾಡಿಸಿ ವಿವರವನ್ನೂ ನೀಡಿದ್ದಾನೆ.

**ಕರ್ನಾಟಕ ಕಾಳಿಕಾಕಾಂಡ:** ಕನ್ನಡದ ಆದಿಕವಿ ಪಂಪನು ತನ್ನ ಆಶ್ರಯದಾತ ಅರಸ ಅರಿಕೇಸರಿಯನ್ನು ಕಾವ್ಯ ನಾಯಕನಿಗೆ ಸಮೀಕರಿಸಿ, ಪುರಾಣವೊಂದರ ನಾಯಕನಂತೆ ಚಿತ್ರಿಸಿರುವಂತೆ ಕರ್ನಾಟಕದ ರಾಣಿಯರಾರೂ ನಾಯಕಿಯ ಪಾತ್ರದಲ್ಲಿ ಕಾವ್ಯವೊಂದರಲ್ಲಿ ಬಿಂಬಿತರಾಗಿಲ್ಲ ಎನ್ನುವ ಕೊರತೆಯನ್ನು ಈ ಕಾವ್ಯ ನೀಗಿಸಿದೆ. 'ಕಾಳಿಕಾ ಕಾಂಡ' ಎಂಬ ಈ ಕಾವ್ಯದ ಶೀರ್ಷಿಕೆ ತಿಳಿಸುವಂತೆ ಇದು ಸ್ತ್ರೀ ಪ್ರಧಾನ ಕಾವ್ಯ. ಇಲ್ಲಿ ಪ್ರಧಾನ ಪಾತ್ರ ಕಾಳಿಕೆಯನ್ನು ಚೆನ್ನಮ್ಮಳಿಗೆ ಕವಿಯು ಹೋಲಿಸಿ, ನಾಯಕಿಯ ಪಟ್ಟವನ್ನು ನೀಡಿದ್ದಾನೆ[೨೩].

ಸೋಮಶೇಖರನು ಶಿವನ ಅವತಾರವೆಂದೂ, ಚನ್ನಮ್ಮಳು ಕಾಳಿ (ಪಾರ್ವತಿ)ಯ ಅವತಾರ ವೆಂದೂ, ಸಮೀಕರಿಸಿ ರಚಿಸಲಾದ ಈ ಕಾವ್ಯದಲ್ಲಿ ತನ್ನದೂ ಪಾತ್ರವಿದೆ, ಇಲ್ಲಿ ತನ್ನನ್ನು ಬಸವನ ಅವತಾರವೆಂಬಂತೆ ಚಿತ್ರಿಸಿಕೊಂಡಿದ್ದಾನೆ.

ಈ ಕೃತಿಯ ಪ್ರತಿಸಂಧಿಯ ಅಂತ್ಯದಲ್ಲಿ "ಸರಸಕವಿ ಕೆಳದಿ ಬಸವಂ ರಚಿಸಿದ ಸ್ಕಾಂಧ ಸನತ್ಕುಮಾರ ಸಂಹಿತೆಯೊಳಮಾದರ ಕಾಳಿಕಾಕಾಂಡದುತ್ತರದೊಳ್" ಎನ್ನುತ್ತಾ ಸಂಧಿಯ ಸಂಖ್ಯೆನನ್ನು ನಿರ್ದೇಶಿಸಿದ್ದಾನೆ. ಪ್ರತಿ ಸಂಧಿಯ ಆರಂಭದಲ್ಲಿ ಸೂಚನಾ ಪದ್ಯವನ್ನೂ ಆನಂತರ ಒಂದು ಪದ್ಯದಲ್ಲಿ ಕಾಳಿಕಾದೇವಿಯ ಸ್ತೋತ್ರವನ್ನೂ

ಮಾಡಿದ್ದಾನೆ. ಈತನ ಸಂಸ್ಕೃತ ಪಾಂಡಿತ್ಯ ಕಾವ್ಯದುದ್ದಕ್ಕೂ ಮೈಳೈಸಿರುವಂತೆಯೇ ಬರೀ ಲಘು ಮಾತ್ರೆಗಳನ್ನೇ ಬಳಸಿ ಕನ್ನಡ ಪದಗಳಿಂದ ಸ್ತೋತ್ರಪದ್ಯ ರಚಿಸಬಲ್ಲನೆಂಬುದನ್ನೂ ಕವಿ ಕೆಲವೆಡೆ ತೋರಿಸಿದ್ದಾನೆ.

ವಾರ್ಧಕ ಷಟ್ಪದಿಯಲ್ಲಿ ರಚಿತವಾಗಿರುವ ಈ ಕೃತಿಯು, ಉಪಲಬ್ಧವಿರುವ ವಾ.ಷಟ್ಪದಿ ಗ್ರಂಥಗಳಲ್ಲೆಲ್ಲಾ ಹಿರಿದು ಸು.೧೭೩ ಅಧ್ಯಾಯಗಳಲ್ಲಿ ಸು.೭೧೫೦ ಪದ್ಯಗಳಿವೆ. ಈ ಅಪ್ರಕಟಿತ ಕೃತಿಯನ್ನು ದೇವರಕೊಂಡಾ ರೆಡ್ಡಿ ಅವರು ಏಕೈಕ ಹಸ್ತಪ್ರತಿಯಿಂದ ಸಂಪಾದಿಸುತ್ತಿದ್ದಾರೆ.

ಕರ್ನಾಟಕ ಕಾಳಿಕಾಕಾಂಡವೆಂಬ ಹೆಸರು ಇದು ಸಂಸ್ಕೃತ ಕಾವ್ಯವೊಂದರ ಅನುವಾದ ಎಂಬುದನ್ನು ತಿಳಿಸುತ್ತದೆ. ಉದಾಹರಣೆಗೆ ಕರ್ನಾಟಕ ರಘುವಂಶ, ಕರ್ನಾಟಕ ಪಂಚತಂತ್ರ, ಕರ್ನಾಟಕ ಕಾದಂಬರಿ ಮೊದಲಾದವು ಸಂಸ್ಕೃತಗ್ರಂಥಗಳ ಕನ್ನಡ ಅನುವಾದವಾಗಿವೆ. ಆದರೆ ಈ ಕೃತಿಯು ಸಂಪೂರ್ಣವಾಗಿ ಸಂಸ್ಕೃತದ ಅನುವಾದವಾಗಿರದೆ, ಕವಿಯ ಸಮಕಾಲೀನ ಇತಿಹಾಸವನ್ನೂ ಒಳಕೊಂಡಿದೆ. ಈ ಕಾವ್ಯದಲ್ಲಿ ಬರುವ ರಾಕ್ಷಸರು ಪುರಾಣಕಾಲದ ರಾಕ್ಷಸರಾಗಿಲ್ಲ, ಅವರು ಚನ್ನಮ್ಮನೊಡನೆ ಹೋರಾಡಿದ ಶತ್ರುಗಳು. ಸೋಮಶೇಖರನಾಯಕ ನನ್ನು ಈಶ್ವರನಿಗೂ, ಚನ್ನಮ್ಮಳನ್ನು ಪಾರ್ವತಿ ಅರ್ಥಾತ್ ಕಾಳಿಕಾದೇವಿಗೂ ತಗುಳ್ಚಿ ಕಾವ್ಯ ರಚಿಸಿದ್ದಾನೆ. ಕಾವ್ಯದ ವರ್ಣನೆಗಳಲ್ಲಿ, ಯುದ್ಧವಿವರಣೆಗಳಲ್ಲಿ, ಉಲ್ಲೇಖವಾಗಿರುವ ಆಯುಧಗಳು ಹಾಗೂ ಅವುಗಳ ಬಳಕೆಯ ರೀತಿ ಎಲ್ಲವೂ ಕವಿಯ ಸಮಕಾಲೀನವೇ ಆಗಿದೆ.

ಈ ಕೃತಿಯಲ್ಲಿ ಐತಿಹಾಸಿಕ ಅಂಶಗಳನ್ನು ಪುರಾಣದ ಅಂಶಗಳಿಂದ ಸ್ಪಷ್ಟವಾಗಿ ಬೇರ್ಪಡಿಸಿ ಹೇಳುವುದು ಕಷ್ಟವಾಗಿ ತೋರುತ್ತದೆ ಎನ್ನುವುದು ಇದರ ಸಂಪಾದಕರ ಅಭಿಮತ.

**"ಸೋಮಶೇಖರನ ಮಾನಿನಿಯ ಕಾಳಿಕಾದೇವಿಯಂಶದ ಕೆಳದಿಚೆನ್ನಾಜಿ ॥ (೪೭-೩೫) ಚೆನ್ನಾಜಿಯಾಗಿ ಕೆದಿಯರನಾಳಲ್ಪೋಪ ಬಿನ್ನಣವೋ॥ (೩೭-೩೪) "..ಯೊಕಾಳಿಕಾ ಭವಾನಿಯೆ ನಂದಿಯಂವೆರಸಿ ಜನಿಸಿಬಂದೂ। ಮಿರುಪ ಚೆನ್ನಮ್ಮಾಜಿ ಬಸವರಸನೆಂಬ ಬಂಧುರನಾಮದಿಂದೆಮ್ಮ ಸಿಂಹಾಸನವನೇಜಿ ತುರುಕರಂ ಕೊಲ್ವಳೆಂದುಸಿರೋ..." (೭೬-೩೪) ; "ದೇವದೇವ ಸೋಮಶೇಖರನ ರಾಣಿಯೀ ಕೆಳದಿ ಚೆನ್ನಮ್ಮಾಜಿಯಂ"** (೭೮-೩೭) ಹೀಗೆ ಚನ್ನಮ್ಮಾಜಿಯನ್ನು ಕಾರಣ ಸ್ತ್ರೀಯೆಂಬಂತೆ ಚಿತ್ರಿಸಿದ್ದಾನೆ[೨೪].

ಬಸವರಾಜನೇ ರಚಿಸಿರುವ ಶಿವತತ್ತ್ವ ರತ್ನಾಕರದಲ್ಲಿಯೂ ಮೂಕಾಂಬಿಕೆಯ ಅಂಶದಿಂದ ಹುಟ್ಟಿದ ಚೆನ್ನಾಂಬಿಕೆ (ಚೆನ್ನಮ್ಮ) ಯು ಕಾರಣೀಪುರುಷಳು ಎಂದು ತಿಳಿಸಿದ್ದಾನೆ. ಕಾಳಿಕಾ ಕಾಂಡದ ಸಂಕ್ಷಿಪ್ತ ಭಾಗದಂತೆ ಇಲ್ಲಿನ (೮-೮-೧೫-೨೨) ಕೆಲವು ಶ್ಲೋಕಗಳು ಚೆನ್ನಮ್ಮಳ ಪತಿ ಸೋಮಶೇಖರನು, ಚೆನ್ನಮ್ಮಳಿಗೆ "ಶಿವನ ಕೃಪೆಯಿಂದ, ಮೂಕಾಂಬಿಕೆಯು ರಾಕ್ಷಸರನ್ನು ಸಂಹರಿಸಿದಂತೆಯೇ, ನೀನು ಈ ರಾಜ್ಯಕ್ಕೆ ಬಂದು ನೆಲೆಸಿರುವ ಮ್ಲೇಚ್ಛರನ್ನು ಸೋಲಿಸಿ ಲೋಕಕ್ಕೆ ಅಭಯವನ್ನುಂಟುಮಾಡು" ಎಂದು ಹೇಳುತ್ತಾನೆ. ಎಲ್ಲೆಲ್ಲಿ ಶಿವ-ಪಾರ್ವತಿಯರ ಉಲ್ಲೇಖವಿದೆಯೋ ಅಲ್ಲೆಲ್ಲಾ ಸೋಮಶೇಖರನಾಯಕ-ಚನ್ನಮ್ಮರನ್ನು ಹೆಸರಿಸಿದ್ದಾನೆ.

**ಕಾವ್ಯ ವಸ್ತು :** ಇದು ಸ್ಕಾಂದ ಪುರಾಣದಲ್ಲಿ ಉಕ್ತವಾಗಿರುವ ಕಾಳಿಕಾದೇವಿಯ ಕಥಾವಸ್ತುವನ್ನು ಹೊಂದಿದೆ. ಇಲ್ಲಿ ಕಾಳಿಕಾದೇವಿಯು ದುಷ್ಟಶಕ್ತಿ ಅಸುರರನ್ನು ವಧೆಮಾಡಲೆಂದೇ ಅವತರಿಸುತ್ತಾಳೆ.

ಚೆನ್ನಮ್ಮಳ ಆಳ್ವಿಕೆಯ ಕಾಲದಲ್ಲಿ ರಚಿತವಾದ ಕಾಳಿಕಾಕಾಂಡವು ಕಾಳಿಯು ದುಷ್ಟಶಕ್ತಿ ಅಸುರರನ್ನು ವಧೆಮಾಡಿದ ಪುರಾಣದ ಕಥಾವಸ್ತುವನ್ನು ಹೊಂದಿದ್ದರೂ, ಇವಳ ಕಾಲದ ಯುದ್ಧದ ವಿವರಣೆಯನ್ನು ನೀಡುವಂತಿದೆ. ಇದರ ಸನ್ನಿವೇಶಗಳನ್ನು ಐತಿಹಾಸಿಕ ವಿಚಾರಗಳೊಂದಿಗೆ ಹೋಲಿಸಿ ನೋಡಬಹುದಾಗಿದೆ.

ಈ ರಾಕ್ಷಸರ ಆಗಮನದಿಂದ ದೇಶದ ಮೇಲೆ ಅನೇಕ ಪರಿಣಾಮಗಳಾಗುತ್ತವೆ. "... ಯವನಾರಭಕರ ಲಿಪಿಯನುರ್ವಿಯೊಳ್ಪರಪಿ ಗೀರ್ವಾಣ ಶಾಸ್ತ್ರಂಗಳ ಧಿಕ್ಕರಿಸಿ ಸುಟ್ಟು ಬಿಸುಟೂ॥ (೬೦-೭೦) ದೇವತಾಮೂರ್ತಿ

ಪ್ರತಿಷ್ಠಾಪನಂಗಳಂ ಡಾವರಿಸಿ ಕಿಳ್ತೊಡೆದು ಶೂನ್ಯಾಲಯಂಗಳಂ ಕಾವಿಸಿ ಪಕೀರರಂ ನೆಲೆಗೊಳಿಸತುಂ ಮನೋಧನಂಗಳನರ್ಚಿಸೀ ದೇವದೇವಂ ಕುದಂ ಕರ್ತಾರನಲ್ಲ ನೆಂಬೋವಿದ" (೬೦-೮) "ಅಶ್ವಮಹಮೆಂಬಮರ ಭಾಷೆಯ ಬಿಟ್ಟು ಅಸುರರಾಡುವಾ ತುಮೆಹಮೆ ಪಸರಿಸುತೆ..... (೧೨-೧೨) "... ವೇದಾಗಮ ಪುರಾಣ ಪಾಠವುಂ ನಿರ್ಮೂಲವಾಗಿ ಗೀರ್ವಾಣ ಭಾಷೆಯೇ ಹೋಗಿ ಹಮೆತುಮೆಯೆನಿಪ ಭಾಷೆಯೇ.." (೭-೫೮) "..ಎಲ್ಲಿಯುಂ ದೇವ ವಿಗ್ರಹ ಪೂಜೆಯಳಿದು ಶೂನ್ಯಪರ್ಟಿತೂ (೭-೬೦)

ಹೀಗೆ ತಮಗಾಗದುದನ್ನು ನಾಶ ಮಾಡುತ್ತಾ, ಶಿವನ ಮೇಲೆ ಯುದ್ಧಮಾಡಲು ರಾಕ್ಷಸ ರಾಜ ತನ್ನ ರಾಜ್ಯದ ಎಲ್ಲ ಸೇನಾನಾಯಕರನ್ನು ಕರೆಸುತ್ತಾನೆ. ಇಂಥ ರಾಕ್ಷಸರನ್ನು ನಾಶಪಡೆಸಲೆಂದೇ ಚನ್ನಮ್ಮಾಜಿ ಮತ್ತು ಬಸವರಾಜ ಜನಿಸಿರುವುದು (೭೬-೩೪)

ಮುಸಲ್ಮಾನರಬಗ್ಗೆ ಅಂದಿನಕಾಲದ ಜನರಲ್ಲಿ ಕೆಲವು ನಂಬಿಕೆಗಳಿದ್ದವು. ಅವುಗಳಲ್ಲಿ ಸುಂದರ ಸ್ತ್ರೀಯರನ್ನು ಕಂಡರೆ ಬಿಡುವವರಲ್ಲ, ಧರ್ಮದ ಕಾರ್ಯಗಳಲ್ಲಿ ತೊಡಗಿರುವವರನ್ನು ಕೊಲ್ಲುತ್ತಾರೆ (೮೯-೫೬) ಅಲ್ಲದೆ ಅವರು, ಮುಕುಳಿ ದಿಮ್ಮಿ ಕಳಚುವ ಹಾಗೆ ಬಡೆಯುತ್ತಿದ್ದರು (೫೦-೨೩) ಶಿವಗಣಗಳನ್ನು (ಚನ್ನಮ್ಮಳ ಕಡೆಯ ಸೈನಿಕರನ್ನು) ಕಾಪರಿರಾ (ಕಾಫೀರರು) ಎಂದೂ, ಹಿಂದೂ ಜಂಗಮರ ಪೋರರಿರ, (೯೫-೨), ಸತತವುಂ ಹುಳಿಬೋನಮಂ ತಿಂಬ ಜಂಗಮರ ಜಟ್ಟಿಗರಿರಾ (೮೯-೯) ಎಂದು ಕರೆಯುತ್ತಿದ್ದುದನ್ನು ಕಾವ್ಯವು ತಿಳಿಸುತ್ತದೆ.

**ಇತಿಹಾಸ:** ಬಿಜಾಪುರದ ಆದಿಲ್‌ಶಾಹಿ ಅರಸರ ಒಳಸಂಚಿನಿಂದಲೇ ಸೋಮಶೇಖರನಾಯಕ ಕೊಲೆಯಾದನೆಂದು ಕೆಳದಿ ನೃಪವಿಜಯ ಮೊದಲಾದ ಕಾವ್ಯಗಳಿಂದ ತಿಳಿದುಬರುತ್ತದೆ. ಅಧಿಕಾರ ವಹಿಸಿಕೊಂಡ ಮೇಲೆ ಚೆನ್ನಮ್ಮ ಇವರ ಹಾವಳಿಯನ್ನು ತಡೆದು, ತನ್ನ ರಾಜ್ಯದ ಗಡಿಯಾಚೆಗೆ ಹಿಮ್ಮೆಟ್ಟಿಸಿದಳಲ್ಲದೆ, ಹೊನ್ನಾಳಿ, ತವನಿಧಿ ಕೋಟೆಗಳನ್ನು ವಶಪಡಿಸಿಕೊಂಡಳು. ಶಿವಾಜಿಯ ಮಗ ರಾಜಾರಾಮನನ್ನು ಮೊಗಲರು ಬೆನ್ನಟ್ಟಿ ಬಂದಾಗ ಚೆನ್ನಮ್ಮ ಅವನಿಗೆ ಆಶ್ರಯ ಕೊಟ್ಟು, ಅವನನ್ನು ಸುರಕ್ಷಿತವಾಗಿ ಜಿಂಜಿಯನ್ನು ತಲುಪಲು ಸಹಾಯಮಾಡಿ ಮೊಗ'ಲರ ಸೈನ್ಯವನ್ನೆದುರು ಹಾಕಿಕೊಂಡಳು. ರಾಜಾರಾಮನಿಗೆ ಸಹಾಯ ಮಾಡಿದುದರ ಪರಿಣಾಮವಾಗಿ ಔರಂಗಜೇಬನ ಕಡೆಯ ಅಬ್ದುಲ್‌ಖಾನನು ದೊಡ್ಡ ಸೈನ್ಯದೊಂದಿಗೆ ಬಿದನೂರಿಗೆ ಲಗ್ಗೆ ಹಾಕಿದರು. ಆದರೆ ಇದರ ಮುನ್ಸೂಚನೆಯನ್ನರಿತಿದ್ದ ಚನ್ನಮ್ಮ ಬಿದನೂರನ್ನು ಬಿಟ್ಟ ಭುವನಗಿರಿಯ ಮಾರ್ಗದಲ್ಲಿ ಅಪರಿಮಿತ ಕಾಲಾಳುಗಳನ್ನು ಸೇರಿಸಿ ಕೋಟೆಯನ್ನು ರಕ್ಷಿಸಿ ಶತ್ರುಪಡೆಯನ್ನು ಹಿಮ್ಮೆಟ್ಟಿಸುವಲ್ಲಿ ಯಶಸ್ವಿಯಾದಳು. ಬಯಲುಸೀಮೆಯ ಯುದ್ಧಗಳಲ್ಲಿ ಪರಿಣಿತರಾಗಿದ್ದ ಮೊಘಲರ ಸೈನ್ಯ ಘಟ್ಟ ಪ್ರದೇಶದ ಕಣಿವೆ, ಕಂದಕಗಳಲ್ಲಿ ಸಿಲುಕಿಹಾಕಿಕೊಂಡು ಹೋರಾಡಲು ಸಾಧ್ಯವಾಗದೆ ಸೋಲನ್ನನುಭವಿಸಿದರು. ರಾಜಾರಾಮನನ್ನು ಮೊಗಲರಿಂದ ಪಾರುಮಾಡಿದ ಘಟನೆಯು ಲಿಂಗಣ್ಣ ಕವಿ ವಿರಚಿತ ಕೆಳದಿನೃಪ ವಿಜಯಂ ಹಾಗೂ ಈ ಕಾಳಿಕಾಕಾಂಡದ ಕರ್ತೃ ಬಸವಪ್ಪನಾಯಕನ ಪ್ರಸಿದ್ಧ ಕೃತಿ ಶಿವತತ್ವರತ್ನಾಕರದಲ್ಲಿಯೂ ಬಣ್ಣಿತವಾಗಿವೆ.

**ವರ್ಣನೆ:** ಈ ಕೃತಿಯಲ್ಲಿ ಯುದ್ಧ ವರ್ಣನೆಯು ಪುರಾಣದ ಯುದ್ಧವರ್ಣನೆಗಿಂತಲೂ ಸಮಕಾಲೀನ ಯುದ್ಧದ ಚಿತ್ರಣವೇ ರಂಜಿಸಿದೆ. ಕವಿಯು ತನ್ನ ಕಾಲದಲ್ಲಿ ನಡೆಯುತ್ತಿದ್ದ ಕೋಟೆ ಕಾಳಗದ ವಿವರಣೆಯನ್ನು ಕಣ್ಣಿಗೆ ಕಟ್ಟುವಂತೆ ಬಣ್ಣಿಸಿದ್ದಾನೆ. ಯುದ್ಧಾರಂಭ ಹಾಗೂ ಅಂತ್ಯಗಳಲ್ಲಿ ಮೊಳಗುತ್ತಿದ್ದ ಕಹಳೆ, ಯುದ್ಧಕ್ಕೆ ಬಳಸುತ್ತಿದ್ದ ಆಯುಧಗಳು, ಸೈನಿಕರು ನಾಯಕರ ಆಜ್ಞೆಯ ಮೇರೆಗೆ ಕೈಗೊಳ್ಳುತ್ತಿದ್ದ ಕಾರ್ಯಗಳು. ಯುದ್ಧಾರಂಭದಲ್ಲಿ ಫಿರಂಗಿಗಳ ಆರ್ಭಟ, ಸಮಕಾಲೀನ ಯುದ್ಧದ ಸ್ಪಷ್ಟಚಿತ್ರಣ ನೀಡುತ್ತದೆ.

ಯುದ್ಧದ ಈ ವಿವರಣೆ ರಾಮರಾಯನಿಗೆ ಆಶ್ರಯನೀಡಿ ಚನ್ನಮ್ಮಳು ಮೊಗ'ಲರನ್ನು ಎದುರಿಸಿದ ಸಂದರ್ಭದಂತೆ ತೋರುತ್ತದೆ. ಅಲ್ಲದೆ "..ಯವನರಿತ ದಿತಿಯ ಮಕ್ಕಳಿರ.. ತುರುಷ್ಕರಿರ.. ನಿಮಗಂಜುವರೆ.. ಮುಸಲಮಾನರ ಕೂಡೆ.. ನೆಪ್ಪುಗಾಣದೆ ಬಂದು ಸಿಲುಕಿಗೊಡೆ ಮುಮ್ಮಾಯಮಂ ಮಾಡಿಕೊಂಡು .." ಇವೇ ಮೊದಲಾದ

ಸಾಲುಗಳಲ್ಲಿ ಇದು ಸ್ಪಷ್ಟವಾಗುತ್ತದೆ. ಇಲ್ಲಿನ ರಾಕ್ಷಸರನ್ನು "ಖುರಾಶನರುಮರಬಿಗಳುಂ ... ಹಬ್ಬಿಸಿಗಳುಂ ಗರೀಬ, ಪಟಾಣ, ಮೊಗಲ, ಖನರು, ಗೋಡಾಮುಖ, ಏಂಗಲೇಚರು ಘನಿಬರು, ಖಾನರು, ಪರಂಗಿಗಳು, ಶೇಖು, ಖೀಲ್ಲ ಭಾಶಮುಖಿ, ಪಾರ್ಶ್ವಮುಖ, ಸಮಂತಭದ್ರ, ದೌಲತಾಬಾದಿಚರರು, ಮುಸ್ತಾಪ, ಸುರತಾಳ" ಮೊದಲಾಗಿ ಕರೆಯಲಾಗಿದೆ.

ಕಾಳಿಕಾಕಾಂಡದಲ್ಲಿನ ಅಂಧಕಾಸುರನು ಚನ್ನಮ್ಮನನ್ನು ಪದಚ್ಯುತಿಗೊಳಿಸಲು ಪ್ರಯತಿಸಿದ ಅಂಧಕ ವೆಂಕಟಯ್ಯನಿರಬಹುದು.

ಈ ಪ್ರಕಾರವಾಗಿ ಕಾವ್ಯ–ಇತಿಹಾಸ ಎರಡನ್ನೂ ಮಿಶ್ರಣ ಮಾಡಿ ರಚಿಸಿದ ಕೃತಿ ಕೆಳದಿ ಹಿರಿಯ ಬಸವರಾಜ ಕೃತ 'ಕರ್ನಾಟಕ ಕಾಳಿಕಾ ಕಾಂಡ' ಚನ್ನಮ್ಮನನ್ನು ಶಿವನ ಪತ್ನಿ ಕಾಳಿಯೆಂದೂ, ಸೋಮಶೇಖರ ನಾಯಕನನ್ನು ಈಶ್ವರನೆಂದೂ ಸಬುನೀಸ ಕೃಷ್ಣಪ್ಪನನ್ನು ವಿಷ್ಣುವೆಂದೂ, ಹಿರಿಯ ಬಸಪ್ಪ ನಾಯಕನನ್ನು ಬಸವನೆಂದೂ, ಮುಸಲ್ಮಾನರು ರಾಕ್ಷಸರೆಂದೂ ಅಬೇಧ ಕಲ್ಪನೆ ಮಾಡಿ ಕಾವ್ಯ ರಚಿಸಿರುತ್ತಾನೆ. ಕೃತಿ ಅಚ್ಚಾಗಿ ಹೊರಬಂದಮೇಲೆ, ಈ ಸಂಪೂರ್ಣ ಕೃತಿಯಿಂದ ಇತಿಹಾಸದ ಮತ್ತಷ್ಟು ವಿಚಾರ ಬೆಳಕಿಗೆ ಬರಲಿದೆ.

## ಸಾಹಿತ್ಯ ರಚನೆಗೆ ಮೈಸೂರು ಅರಸಿಯರ ಪ್ರೋತ್ಸಾಹ

ಮೈಸೂರು ಅರಸು ಮನೆತನದ ಆಶ್ರಯದಲ್ಲಿ ಸಂಗೀತ, ಸಾಹಿತ್ಯಕ್ಕೆ ಸಾಕಷ್ಟು ಪ್ರೋತ್ಸಾಹ ದೊರೆತು, ಸಾಹಿತ್ಯ ಕೃಷಿಯು ಹುಲುಸಾಗಿ ಬೆಳೆದು ಬಂದಿದೆ. ಈ ಪ್ರೋತ್ಸಾಹದಲ್ಲಿ ಅರಸಿಯರ ಪಾತ್ರವೂ ಇದೆ. ಮೈಸೂರಿನ ಅರಸಿಯರು ವಿದ್ಯಾವಂತೆಯರಾಗಿದ್ದು, ಅಗತ್ಯವಿದ್ದಾಗ ಸಮರ್ಥರೀತಿಯಲ್ಲಿ ರಾಜ್ಯ ನಡೆಸುವುದಕ್ಕೂ ಸೈ ಎನಿಸಿದ್ದರು. ಸಣ್ಣವಯಸ್ಸಿನಲ್ಲಿಯೇ ಮದುವೆಯಾಗಿದ್ದರೂ ಮದುವೆಯ ನಂತರ ವಿದ್ಯಾಭ್ಯಾಸಕ್ಕೆ ಅವಕಾಶ ಇರುತ್ತಿತ್ತೆನ್ನುವುದು ಚಿಕ್ಕದೇವರಾಯನ ರಾಣಿ ದೇವಾಜಮ್ಮನ ಕುರಿತು ತಿಳಿದುಬರುವ ಮಾಹಿತಿಯಿಂದ ವೇದ್ಯವಾಗುತ್ತದೆ. ಅಲ್ಲದೆ ಜ್ಞಾನಾರ್ಜನೆಗಾಗಿ, ಸಾಹಿತ್ಯ ಓದುವ ಹವ್ಯಾಸದಿಂದಾಗಿ ಅನೇಕ ಕೃತಿಗಳನ್ನು ಪ್ರತಿಮಾಡಿಸಿಕೊಂಡಿದ್ದ ವಿಚಾರಗಳೂ ಹಸ್ತಪ್ರತಿಗಳಿಂದ ತಿಳಿದು ಬರುತ್ತದೆ.

ಕೇವಲ ಸಾಹಿತ್ಯವನ್ನು ಪ್ರತಿಮಾಡಿಸಿಕೊಂಡು ಓದುವುದಷ್ಟೇ ಅಲ್ಲದೆ, ಹೊಸ ಸಾಹಿತ್ಯ ಸೃಷ್ಟಿಗೂ ಮೈಸೂರಿನ ಅರಸಿಯರು ಕಾರಣಕರ್ತರಾಗಿದ್ದಾರೆ ಎನ್ನುವ ವಿಚಾರವೂ ಕುತೂಹಲ ಹುಟ್ಟಿಸುತ್ತದೆ. ಈ ನಿಟ್ಟಿನಲ್ಲಿ ಅಮೃತಾಜಮ್ಮಣ್ಣಿ, ದೇವಾಜಮ್ಮಣ್ಣಿ, ದೇವೀರಾಂಬೆಯರ ಕೊಡುಗೆ ಅಪಾರವಾದದ್ದು.

### ರಾಣಿ ಅಮೃತಾಂಬೆ

ಮೈಸೂರಿನ ಪ್ರಸಿದ್ಧ ಅರಸು ಚಿಕ್ಕದೇವರಾಜನ (ಕ್ರಿ.ಶ.೧೬೭೨–೧೭೦೪) ತಾಯಿ ಅಮೃತಾಂಬೆಯು ಮೂಲತಃ ಯಳಂದೂರಿನವಳು. ಮಹಾರಾಜನನ್ನು ವರಿಸಿ, ಶ್ರೀರಂಗಪಟ್ಟಣಕ್ಕೆ ಬಂದ ಮೇಲೆ ಈಕೆಯು ತನ್ನ ತವರುಮನೆಯ ಗುರುವಾಗಿದ್ದ ಆರಾಧ್ಯರ ಪುತ್ರ ಷಡಕ್ಷರಿಯನ್ನು ಯಳಂದೂರಿನಿಂದ ಬರಮಾಡಿಕೊಂಡು ಆತನಿಂದ ರಾಜಶೇಖರ ವಿಲಾಸವನ್ನು ಬರೆಯಿಸಿದ್ದಾಳೆ. ತನ್ನ ಕೋರಿಕೆಯ ಮೇರೆಗೆ ಕಾವ್ಯ ರಚಿಸಿದ ಷಡಕ್ಷರಿಗೆ ಗೌರವಾದರಗಳನ್ನು ನೀಡಿರುವ ವಿಚಾರ ದಾಖಲಾಗಿದೆ.

ಅಮೃತಾಂಬೆಯು, ತನ್ನ ತವರುಮನೆಯ ಗುರುವಾಗಿದ್ದ ಆರಾಧ್ಯರ ಪುತ್ರ ಷಡಕ್ಷರಿಗೆ ಬಾಲ್ಯದಲ್ಲಿ ಉಚಿತವಾದ ವಿದ್ಯಾಭ್ಯಾಸಕ್ಕೆ ಅನುಕೂಲ ಕಲ್ಪಿಸಿ, ಆನಂತರ ತನ್ನ ಆಹ್ವಾನದ ಮೇರೆಗೆ ಅರಮನೆಗೆ ಬಂದ ಷಡಕ್ಷರಿಯಿಂದ, ಕೆಲಕಾಲ ತನ್ನ ಮಗ ಚಿಕ್ಕದೇವರಾಯನಿಗೆ ವಿದ್ಯಾಭ್ಯಾಸವನ್ನೂ ಮಾಡಿಸಿದ್ದಾಳೆ, ಮುಂದೆ ಯಳಂದೂರಿನಲ್ಲಿ

ಮಠವನ್ನು ಕಟ್ಟಿಸಿಕೊಟ್ಟು ಕೆಲವು ದತ್ತಿಗಳನ್ನೂ ಕೊಟ್ಟಿದ್ದಾಳೆ. (ಹಿರೇಮಠ.ಆರ್.ಸಿ. & ಎಂ.ಎಸ್.ಸುಂಕಾಪುರ: ೧೯೬೨) ಈ ವಿಚಾರ ಕವಿ ದೇವಚಂದ್ರನ ರಾಜಾವಳಿ ಕಥಾಸಾರ ಹಾಗೂ 'ಶ್ರೀಮನ್ಮಹಾರಾಜರ ವಂಶಾವಳಿ' ಕೃತಿಗಳಲ್ಲಿಯೂ ಉಕ್ತವಾಗಿದೆ.

ಚಿಕ್ಕದೇವರಾಯನ ಆಳ್ವಿಕೆಗೂ ಮುನ್ನವೇ ರಚಿಸಲಾದ ರಾಜಶೇಖರ ವಿಲಾಸದ ರಚನಾ ಕಾಲವನ್ನು ಕುರಿತು ಚರ್ಚಿಸಿರುವ ಗೋವಿಂದ ಪೈ ಅವರು ರಾಣಿ ಅಮೃತಾಂಬೆಯು ಈ ಕೃತಿರಚನಾ ಕಾಲದಲ್ಲಿ ೩೦–೩೫ ವರ್ಷ ಪ್ರಾಯದವಳಾಗಿದ್ದಳೆಂದು ಅಭಿಪ್ರಾಯಪಡುತ್ತಾರೆ[೨೫].

ದೇವಚಂದ್ರ ತನ್ನ ರಾಜಾವಳೀಕಥೆಯಲ್ಲಿ ಮೈಸೂರಿನ ಅರಸು ಚಿಕ್ಕದೇವರಾಯನ ತಾಯಿಯಾದ ಯಳಂದೂರು ಅಮೃತಾಂಬೆ ತನ್ನ ತವರುಮನೆಗೆ ಗುರುವಾಗಿದ್ದ ಆರಾಧ್ಯರ ಪುತ್ರನಾದ ಷಡಕ್ಷರಿಯನ್ನು ಅರಮನೆಗೆ ಕರಿಸಿಕೊಂಡು 'ಲೀಲಾವತಿ, ಕಾದಂಬರಿ ಮೊದಲಾದ ಅನೇಕ ವಸ್ತುಕ ಕಾವ್ಯದೊಳ್ ನಿಪುಣನೆನಿಸಿ ಕವಿಯಾದುದರಿಂ ರಾಜಶೇಖರಮೆಂದು ಪೊಸತೊಂದು ಕೃತಿಯಂ ಮಾಡಿ ಮೆಚ್ಚಿಸಿ ಕೆಲಕೆಲವು ಮಠಂಗಳಂ ಮಾನ್ಯಮಂ ಬಿಡಿಸಿ... " (ಏಕಾದಶಾಧಿಕಾರ, ಪು.೨೮೫) ಎಂದು ತಿಳಿಸಿರುವಲ್ಲಿ, ವಸ್ತುಕ ಕಾವ್ಯಗಳಲ್ಲಿ ನಿಪುಣನಾಗಿ 'ಕವಿಶೇಖರ'ನೆನಿಸಿದ್ದ ಕವಿ ಷಡಕ್ಷರಿಯಿಂದ ಅರಸಿಯು ರಾಜಶೇಖರ ವಿಲಾಸವೆಂಬ ಹೊಸತೊಂದು ಕಾವ್ಯವನ್ನು ಬರೆಯಿಸಿ, ಅದಕ್ಕಾಗಿ ರಾಣಿಯು ಕವಿ ಷಡಕ್ಷರಿಗೆ ಯಳಂದೂರಿನಲ್ಲಿ ಮಠವನ್ನು ಕಟ್ಟಿಸಿ ಕೊಟ್ಟು ಮಾನ್ಯಬಿಟ್ಟು ಸನ್ಮಾನಿಸಿದ್ದಾಳೆ[೨೬].

'ಅರಸಿಯು ಷಡಕ್ಷರಿಯಿಂದ ರಾಜಶೇಖರ ವಿಳಾಸವೆಂಬ ಹೊಸತೊಂದು ಕಾವ್ಯವನ್ನು ಮಾಡಿಸಿದಳು' ಎಂಬ ಇಲ್ಲಿನ ಹೇಳಿಕೆಯಿಂದ ರಾಜಶೇಖರ ವಿಳಾಸ ಕೃತಿಯು ಅರಸಿಯ ಕೋರಿಕೆಯ ಮೇಲೆ ರಚಿತವಾಯಿತು ಎಂಬುದು ಸ್ಪಷ್ಟವಾಗುತ್ತದೆ. ಇದಲ್ಲದೆ ದೇವಚಂದ್ರನು ಹೇಳಿರುವಂತೆ ಷಡಕ್ಷರಿಯು "ಲೀಲಾವತಿ ಕಾದಂಬರಿ ಮೊದಲಾದ ವಸ್ತುಕ ಕಾವ್ಯಗಳಲ್ಲಿ ನಿಪುಣನಾಗಿ ಕವಿಶೇಖರನೆನಿಸಿದ್ದ" ಎಂಬ ಈ ಹೇಳಿಕೆಯು ಷಡಕ್ಷರಿಯು ರಾಜಶೇಖರ ವಿಳಾಸದ ರಚನೆಗೂ ಮುನ್ನ ಕೆಲವು ವಸ್ತುಕ ಕಾವ್ಯಗಳನ್ನೂ ರಚಿಸಿದ್ದಾನೆ ಅಲ್ಲದೆ 'ಕವಿಶೇಖರ' ಎಂಬ ಬಿರುದನ್ನೂ ಕೂಡ ಗಳಿಸಿದ್ದ ಎಂಬ ವಿಚಾರವನ್ನು ಸ್ಪಷ್ಟವಾಗಿ ತಿಳಿಸುತ್ತದೆ.

ಇಲ್ಲಿಯವರೆಗೂ ತಿಳಿದಿರುವಂತೆ ರಾಜಶೇಖರವಿಲಾಸವೇ ಷಡಕ್ಷರಿಯ ಮೊದಲ ಕೃತಿಯಾಗಿದೆ[೨೭]. "ನೆರೆದೇಕಾದಶ ವರ್ಷದ ಹರೆಯದೊಳಭವ ಪ್ರಸಾದಬಲದಿಂ ಕವಿತಾತರುಣಿ ಷಡಕ್ಷರಿದೇವನ ನೆರವಿಲ್ಲದೆ ವರಿಯಿಸಿರ್ದಳ್.." ಎನ್ನುತ್ತಾ ತಾನು ಹನ್ನೊಂದು ವರ್ಷ ವಯಸ್ಸಿನಿಂದಲೇ ಕವಿತೆ ರಚಿಸುವ ಸಾಮರ್ಥ್ಯವನ್ನು ಹೊಂದಿದ್ದೆನೆಂದೂ ತಿಳಿಸಿರುವ ಷಡಕ್ಷರಿಯ ಹೇಳಿಕೆಯಲ್ಲಿ ರಾಜಶೇಖರ ವಿಳಾಸ ಮಹಾಕಾವ್ಯದ ರಚನೆಗೂ ಮುನ್ನ ಈತ ಕೆಲವೊಂದು ರಚನೆಯಲ್ಲಿ ತೊಡಗಿದ್ದನೆನ್ನುವುದನ್ನು ಸ್ವತಃ ಷಡಕ್ಷರಿಯೇ ತಿಳಿಸಿದ್ದಾನೆ. ರಾಜಶೇಖರ ವಿಳಾಸಕ್ಕೂ ಮುನ್ನ ವಸ್ತುಕ ಕಾವ್ಯದಲ್ಲಿ ಪರಿಣಿತನಾಗಿದ್ದನೆನ್ನುವ ದೇವಚಂದ್ರನ ಹೇಳಿಕೆ ಇದು ಪುಷ್ಟಿ ದೊರಕಿಸುತ್ತದೆ.

ದೇವಚಂದ್ರನು "ಲೀಲಾವತಿ, ಕಾದಂಬರಿ ಮೊದಲಾದ ವಸ್ತುಕ ಕಾವ್ಯಗಳಲ್ಲಿ ನಿಪುಣನಾಗಿ.." ಎಂದು ಹೇಳಿರುವುದರಿಂದ ಎಳೆಯ ವಯಸ್ಸಿಯ ಷಡಕ್ಷರಿಯ ಸಾಹಿತ್ಯ ರಚನಾ ಸಾಮರ್ಥ್ಯವನ್ನರಿತ ಅಮೃತಾಜಮ್ಮಣ್ಣಿ ಅಂತಃಪುರದವರ ಕೋರಿಕೆಯ ಮೇರೆಗೆ, ಆತನಿಂದ ಸಂಸ್ಕೃತ ಕೃತಿಗಳ ಗದ್ಯಾನುವಾದ (ವಸ್ತುಕ ಕಾವ್ಯ) ಮಾಡಿಸಿರುವ ಸಾಧ್ಯತೆ ಇಲ್ಲಿ ಎದ್ದು ಕಾಣುತ್ತದೆ. "ಗದ್ಯಕಥೆಗಳನ್ನು 'ವಸ್ತುಕ ಕಾವ್ಯ' ಎನ್ನಲಾಗುತ್ತಿತ್ತು" [೨೮].

ಮುಂದೆ ಅಮೃತಾಂಬೆಯ ಮೊಮ್ಮಗಳು (ಚಿಕ್ಕದೇವರಾಯನ ಮಗಳು) ಚಿಕ್ಕ ಅಮೃತಾಜಮ್ಮಣ್ಣಿಯು ಚನ್ನರಾಜಯ್ಯನವರ ಮಗ ಮರ್ರೈಯ ಎನ್ನುವ ಲಿಪಿಕಾರನಿಂದ 'ಕಾದಂಬರಿಯ ಕನ್ನಡ ಗದ್ಯಾನುವಾದ ಕೃತಿಯನ್ನು ಪ್ರತಿಮಾಡಿಸಿಕೊಂಡಳೆಂಬ ವಿಚಾರ ತಿಳಿದು ಬರುತ್ತದೆ[೨೯]. ಬಹುಶಃ ಇವಳು ಪ್ರತಿ ಮಾಡಿಸಿಕೊಂಡ ಕೃತಿ ಇದೇ ಇರಬಹುದು.

ಮದ್ರಾಸ್ ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ ಲೈಬ್ರರಿಯಲ್ಲಿ ದೊರಕಿದ 'ವಚನ ಕಾದಂಬರಿ' (ಮತ್ತೊಂದು ಹೆಸರು ಕಾದಂಬರಿ ವ್ಯಾಖ್ಯಾನ) ಎಂಬ ಗದ್ಯ ಕೃತಿಯನ್ನು ಪೂರ್ವಕಾದಂಬರಿಯ ಕೊನೆಯವರೆಗೆ ಎಂದರೆ ಕಥಾನಾಯಕ ಚಂದ್ರಾಪೀಡನು ಕಾದಂಬರಿ ಮಹಾಶ್ವೇತೆಯರ ಅನುಮತಿ ಪಡೆದು ತಂದೆಯ ಆಜ್ಞಾನುಸಾರ ತನ್ನ ರಾಜಧಾನಿಗೆ ಸೇರಿದನು ಎನ್ನುವವರೆಗಿನ ಭಾಗವನ್ನು ರಾಮಾನುಜಯ್ಯಂಗಾರರು ೧೯೦೧ರಲ್ಲಿ ಪ್ರಕಟಿಸಿದ್ದಾರೆ. ರಚನಕಾರರ ಹೆಸರು ತಿಳಿದು ಬಂದಿಲ್ಲ ಎಂದು ಈ ಮುದ್ರಣದ ಮುನ್ನುಡಿಯಲ್ಲಿ ತಿಳಿಸಿರುವ ಈ ಕೃತಿಯೇ ಅಂತಃಪುರದವರ ಕೋರಿಕೆಯ ಮೇರೆಗೆ ಅಮೃತಾಂಬೆ ಷಡಕ್ಷರಿಯಿಂದ ಬರೆಯಿಸಿರುವ ವಸ್ತುಕ ಕಾವ್ಯವೆನಿಸಿದ 'ಕಾದಂಬರಿ' ಕೃತಿ ಆಗಿರುವ ಸಾಧ್ಯತೆ ಇದೆ. ಅರಸಿಯ ಕೋರಿಕೆಯ ಮೇರೆಗೆ ಷಡಕ್ಷರಿ ರಚಿಸಿರಬಹುದಾದ ಈ ಗದ್ಯ ಕೃತಿಗಳ ಕುರಿತಾಗಿ ಅಧ್ಯಯನ ನಡೆಯುವ ಅವಶ್ಯಕತೆ ಇದೆ.

ಷಡಕ್ಷರಿಯನ್ನು ಹದಿನಾಡಿನ ದೊರೆ ಮುದ್ದರಾಜನ ಕುಲಗುರು ಎಂದು ಕೆಲವು ಕಾವ್ಯಗಳಲ್ಲಿ ಉಲ್ಲೇಖಿಸಲಾಗಿದೆ. ಮುದ್ದರಾಜನು ತನ್ನ ಮಡದಿಯ ಅಪೇಕ್ಷೆಯಂತೆ ದನುಗೂರಿನಲ್ಲಿದ್ದ ಷಡಕ್ಷರಿಯನ್ನು ಯಳಂದೂರಿಗೆ ಕರೆಯಿಸಿಕೊಂಡು ಮಠ ಕಟ್ಟಿಸಿಕೊಟ್ಟನೆಂಬ ವಿಚಾರ ಪ್ರಸ್ತಾಪವಾಗಿದೆ[೩೦]. ಆದರೆ, ರಾಜಶೇಖರವಿಲಾಸ ರಚಿತವಾದದ್ದು ಕ್ರಿ.ಶ.೧೬೫೪ಕ್ಕೂ ಮೊದಲೆಂದು ಕಾಲ ನಿರ್ಧಾರವಾಗಿದೆ. ಈ ಸಂದರ್ಭದಲ್ಲಿ ಮುದ್ದರಾಜ ಇನ್ನೂ ಅಧಿಕಾರಕ್ಕೆ ಬಂದಿರಲಿಲ್ಲ. ಹಾಗಾಗಿ ಮುದ್ದರಾಜನು ಕವಿ ಷಡಕ್ಷರಿಗೆ ಆಶ್ರಯ ನೀಡುವ ಮುನ್ನವೇ ರಾಣಿ ಅಮೃತಾಜಮ್ಮಣ್ಣಿ ಷಡಕ್ಷರಿಯಿಂದ ಕಾವ್ಯ ರಚನೆ ಮಾಡಿಸಿ, ಆತನಿಗೆ ಮಾನ್ಯತೆಗಳನ್ನು ನೀಡಿದ್ದಾಳೆ. ಈ ಮಾತಿಗೆ ಪುಷ್ಟಿ ನೀಡುವ ಮತ್ತೊಂದು ವಿಚಾರವು ಕಾವ್ಯದಿಂದ ವೇದ್ಯವಾಗುತ್ತದೆ.

ರಾಜಶೇಖರ ವಿಲಾಸದಲ್ಲಿ ತನ್ನನ್ನು 'ಇಳಾಪತಿ ಪೂಜಿತ ಪಾದಪಂಕಜ'ನೆಂದು (೧.೭೨) ಕರೆದುಕೊಂಡಿದ್ದಾನೆ. ಅಲ್ಲದೆ "ಕೃತಿಕಾದಂಬಿನಿರಸಮಂ ಕ್ಷಿತಿಪಸಭಾಕ್ಷಿತಿಗೆ ಸುರಿಪ ಸಮಯದೆ" ಎಂಬ ಸಾಲು (೧.೩೭) ಈ ಕೃತಿಯನ್ನು ಅರಸನ ಆಸ್ಥಾನದಲ್ಲಿ ಓದಿರುವಂತೆ ತಿಳಿಸುತ್ತದೆ. ಇದು ಷಡಕ್ಷರಿ ಮುದ್ದರಾಜನಿಗಿಂತಲೂ ಮೊದಲು ಬೇರಾವುದೋ ರಾಜನ ಆಶ್ರಯದಲ್ಲಿದ್ದನೆನ್ನುವುದನ್ನು ಸ್ಪಷ್ಟವಾಗಿ ತಿಳಿಸುತ್ತದೆ. ಇಲ್ಲಿ ತಿಳಿಸಿರುವ ಇಳಾಪತಿ, ಕ್ಷಿತಿಪ ಮೈಸೂರರಸನೇ ಆಗಿದ್ದಾನೆ[೩೧].

ರಾಣಿ ಅಮೃತಾಂಬೆ ರಾಜಶೇಖರ ವಿಲಾಸ ಕಾವ್ಯವನ್ನು ರಚಿಸಲು ಪ್ರೇರೇಪಿಸಿ, ರಚಿತವಾದ ಆ ಕೃತಿಯನ್ನು ಮೆಚ್ಚಿ ಕವಿ ಷಡಕ್ಷರಿದೇವನಿಗೆ ಯಳಂದೂರಿನಲ್ಲಿ ಮಠವನ್ನು ಕಟ್ಟಿಸಿ ಕೊಟ್ಟು ಮಾನ್ಯಬಿಟ್ಟಿದ್ದಾಳೆ. ಆನಂತರದ ಕಾಲದಲ್ಲಿ ಹದಿನಾಡಿನ ದೊರೆಯಾದ ಮುದ್ದರಾಜನು ಈತನನ್ನು ಗುರುಗಳ ಸ್ಥಾನದಲ್ಲಿ ಗೌರವಿಸಿ ತಾನೂ ಕೆಲವು ಮಾನ್ಯಗಳನ್ನು ನೀಡಿರಬಹುದು.

ಈ ಹಿಂದಿನ ವಿದ್ವಾಂಸರು ತಿಳಿಸಿರುವಂತೆ ಕವಿ ಷಡಕ್ಷರಿ ರಚಿಸಿರುವ ರಾಜಶೇಖರ ವಿಳಾಸ ಕೃತಿ ರಚನೆಗೆ ಅರಸಿ ಅಮೃತಾಂಬೆಯ ಕೋರಿಕೆಯೇ ಮುಖ್ಯ ಕಾರಣ ಎನ್ನುವುದು ಸ್ಪಷ್ಟವಾಗಿದೆ. ಅಲ್ಲದೆ ಕೆಂಪುನಾರಾಯಣನ ಮುದ್ರಾಮಂಜೂಷಕ್ಕು ಪೂರ್ವದಲ್ಲಿಯೇ ಷಡಕ್ಷರಿ ಕವಿಯಿಂದ ಗದ್ಯಕೃತಿಗಳು ರಚಿತವಾಗಿವೆ ಹಾಗೂ ಈ ಕೃತಿಗಳ ರಚನೆಗೂ ಅರಸಿ ಅಮೃತಾಂಬೆಯೇ ಕಾರಣಳಾಗಿದ್ದಾಳೆ ಎನ್ನುವುದು ಈ ಅಧ್ಯಯನದಿಂದ ಹೊರಬಂದ ಹೊಸ ವಿಚಾರವಾಗಿದೆ.

**ದೇವಾಜಮ್ಮಣ್ಣಿ**

ದೇವಾಜಮ್ಮಣ್ಣಿಯು ಕ್ರಿ.ಶ.೧೬೭೨-೧೭೦೪ರಲ್ಲಿ ಆಳ್ವಿಕೆ ನಡೆಸಿದ ಮೈಸೂರು ರಾಜಮನೆತನದ ಚಿಕ್ಕದೇವರಾಜ ಒಡೆಯರ ಪಟ್ಟದರಸಿ. ದೇವಾಜಮ್ಮಣ್ಣಿಯೂ ಸಹ ಚಿಕ್ಕದೇವರಾಯನ ತಾಯಿ ಅಮೃತಾಜಮ್ಮಣ್ಣಿಯ ಊರಾದ ಎಳಂದೂರಿನಿಂದ ವಧುವಾಗಿ ಅರಮನೆಗೆ ಬಂದವಳು. ಮಲಯೂರು ದೇವಚಂದ್ರನು ತನ್ನ ರಾಜಾವಳಿ ಕೃತಿಯಲ್ಲಿ (ದ್ವಾದಶಾಧಿಕಾರ) ಇವಳು ಚಿಕ್ಕದೇವರಾಯನ ಸೋದರಮಾವನ ಮಗಳೆಂದು ತಿಳಿಸಿದ್ದಾನೆ. ತಕ್ಕಮಟ್ಟಿಗೆ ವಿದ್ಯಾಭ್ಯಾಸ ಹೊಂದಿದ್ದ ದೇವಾಜಮ್ಮಣ್ಣಿ ಪತಿಯೊಂದಿಗೆ ಓಲಗದಲ್ಲಿ ಕೂರುತ್ತಿದ್ದ ವಿಚಾರ ಕಾವ್ಯದಲ್ಲಿ ಉಲ್ಲೇಖವಾಗಿದೆ. ದೇವಾಜಮ್ಮಳು ನೇರವಾಗಿ ಸಿಂಹಾಸನವನ್ನೇರದಿದ್ದರೂ, ಪತಿ ಚಿಕ್ಕದೇವರಾಜ ಒಡೆಯರ ನಂತರ ತನ್ನ ಮಗ ಇಮ್ಮಡಿ ಕಂಠೀರವ ನರಸರಾಜ ಒಡೆಯನನ್ನು ಪಟ್ಟಕ್ಕೆ ತಂದಳು. ಹುಟ್ಟು ಮೂಕ ಮತ್ತು ಕಿವುಡನಾಗಿದ್ದ ತನ್ನ ಮಗನ ಬೆಂಗಾವಲಿಗೆ ನಿಂತು, ಪ್ರಧಾನಿಯಾಗಿದ್ದ ತಿರುಮಲಯ್ಯಂಗಾರ್ಯರ ಸಹಾಯದಿಂದ ರಾಜ್ಯಾಡಳಿತದಲ್ಲಿ ಪ್ರಧಾನ ಪಾತ್ರವಹಿಸಿದ ದಿಟ್ಟ ರಾಣಿಯಾಗಿದ್ದಳು.

ದೇವಾಜಮ್ಮಣ್ಣಿಯನ್ನು ಹೊನ್ನಮ್ಮ ತನ್ನ 'ಹದಿಬದೆಯ ಧರ್ಮ' ಕೃತಿಯಲ್ಲಿ ಈ ರೀತಿಯಾಗಿ ಬಣ್ಣಿಸಿದ್ದಾಳೆ.

**ಚಿಕ್ಕದೇವರಾಜ ಚಂದ್ರಮನ ಪಟ್ಟದ ರಾಣಿ**
**ಸಕಲ ಸದ್ಗುಣ ಸಂಪನ್ನೆ**
**ಅಕಲುಷೆಯೆಳವಂದೂರ ದೇವಮ್ಮನು**
**ಸಕಲ ಸಂಪದದೊಡನಿಹಳು** (೧-೧೪)

**ಕಾವ್ಯರಚನೆಗೆ ರಾಣಿಯ ಪ್ರೋತ್ಸಾಹ:** ಚಿಕ್ಕದೇವರಾಯನು ಓಲಗದಲ್ಲಿ ಒಮ್ಮೆ ತನ್ನ ರಾಣಿ ದೇವಾಜಮ್ಮಣ್ಣಿಯನ್ನು ಕುರಿತು, ಹೊನ್ನಮ್ಮಳು ಕಾವ್ಯ ನಾಟಕ ರಚನಾ ಸಾಮರ್ಥ್ಯವನ್ನು ಹೊಂದಿರುವಳೆಂದು ಗುರು ಸಿಂಗಾರಾರ್ಯನು ಆಡಿದ ಮೆಚ್ಚುಗೆಯ ಮಾತನ್ನು ತಿಳಿಸುತ್ತಾ, ಹೊನ್ನಮ್ಮಳಿಂದ 'ಕವಿತೆಯೊಂದನು ಪೇಳಿಸಿಂದು' ರಾಣಿಯಲ್ಲಿ ಹೇಳುತ್ತಾನೆ, ರಾಯನ ನುಡಿಕೇಳುತ್ತಲೇ ಹೊನ್ನಮ್ಮ ಹಿಂದಡಿಯಿಡಲು (ಪಿಂದೆಗೆದಿರೆ), ದೇವಾಜಮ್ಮಣ್ಣಿಯು ಅವಳನ್ನು 'ಕಂದ ಬಾರೆನ್ನ ಕಟ್ಟಾಣಿ ಪೆಣ್ಮಣಿಯೆ ಬಾರೆಂದು' ಮುಂದಕ್ಕೆ ಕರೆದು, ಕರವಿಡಿದು ತನ್ನೊತ್ತಿಗೆ ಬರೆಸಿ ಅವಳನ್ನು ಪ್ರೀತಿ ವಾತ್ಸಲ್ಯದಿಂದ ಕಂಡು ಕವಿತೆ ರಚಿಸುವಂತೆ ಸವಿನುಡಿಯಿಂದ ತಿಳಿಯ ಹೇಳುತ್ತಾಳೆ.

ರಾಣಿಯು ಆಜ್ಞೆ ಮಾಡಲಿಲ್ಲ, ಬಲವಂತದಿಂದ ಹೇಳಲಿಲ್ಲ ಬದಲಿಗೆ "ಹೊನ್ನಿ ಬಾ ಹೊನ್ನಕ್ಕ ಬಾರೆಂದು ಕರವಿಡಿದೆನ್ನ ತನ್ನೊತ್ತಿಗೆ ಬರಿಸಿ, ಎನ್ನೊಳು ನೆವಮಿನಿತಿಲ್ಲದೆರಕಗೂಡಿ ಮನ್ನಿಸಿ ನುಡಿದಳು" ಪ್ರೀತಿ, ವಾತ್ಸಲ್ಯ ತುಂಬಿದ ನುಡಿಯಲ್ಲಿ ಅವಳಿಗೆ ಹೀಗೆ ಹೇಳುತ್ತಾಳೆ "ಕಲಿತ ಬಿಜ್ಜೆಯ ಬಲ್ಲರಿಗೆ ಕೇಳಿಪುದೈಸೆ ಫಲವಿದನರಿತು.." ಕಲಿತ ವಿದ್ಯೆಯನ್ನು ವ್ಯರ್ಥಮಾಡಿಕೊಳ್ಳದೆ, ನಾಲ್ಕುಜನರು ಅರಿತುಕೊಳ್ಳುವಂತೆ ವಿನಿಯೋಗಿಸು ಎಂಬ ಬುದ್ಧಿಮಾತನ್ನು ಹೇಳಿದ್ದಲ್ಲದೆ "ನೀನಿಂದು ಅಲಸದೆ, ನಾಣ್ಚದಂಜದೆ, ಅಳುಕದೆ ಪೇಳು ಕಬ್ಬದೊಳ್ಪುಗಳ" ಎಂದು ಧೈರ್ಯ ತುಂಬುತ್ತಾಳೆ. (೧-೨೮, ೨೯)

ಇಲ್ಲಿ ದೊರೆಯಾಗಲೀ, ಗುರುವಾಗಲಿ ನೇರವಾಗಿ ಹೊನ್ನಮ್ಮಳಲ್ಲಿ ಕಾವ್ಯ ರಚಿಸುವಂತೆ ಕೇಳುವುದಿಲ್ಲ. ರಾಣಿಯ ಮಾತಿಂದ ಧೈರ್ಯಗೊಂಡ ಹೊನ್ನಮ್ಮ, ಅವಳ ಮಾತಿಗೆ ಬೆಲೆಗೊಟ್ಟು ಧೈರ್ಯ ತಂದುಕೊಂಡು, ತಾನು ಪದ್ಯ ರಚಿಸುವುದಾಗಿ "ಇಂತು ನುಡಿದ ರಾಣಿಯ ನುಡಿಗೇಳಿ ಓರಂತೆ ಚಿತ್ತವ ಬಲಿವಿಡಿದು ಸಂತಸಮಿಗೆ ಸಭೆಯೊಳು ರಾಯಗೆ ಮಾರಾಂತು ಭಿನ್ನವಿಸಿದೆನ್" (೧-೩೦) ದೊರೆಯಲ್ಲಿ ನಿವೇದಿಸಿಕೊಂಡಿದ್ದಾಳೆ.

ಪಟ್ಟದರಸಿ ದೇವಾಜಮ್ಮಳು ಚಿಕ್ಕದೇವರಾಯನನ್ನು ವರಿಸಿ ಯಳಂದೂರಿನಿಂದ ಶ್ರೀರಂಗಪಟ್ಟಣದ ಅರಮನೆಗೆ ಬಂದವೇಳೆಯಲ್ಲಿ ಊಳಿಗದವಳಾಗಿ ಅವಳೊಡನೆಯೇ ಸಂಚಿ ಹೊನ್ನಮ್ಮಳು ಅರಮನೆ ಸೇರಿದ್ದಾಳೆ. ಚಿಕ್ಕ

ಪ್ರಾಯದ ದೇವಾಜಮ್ಮಳು ಮದುವೆಯಾದ ನಂತರ ತನ್ನ ವಿದ್ಯಾಭ್ಯಾಸ ಮುಂದುವರೆಸುವ ಸಲುವಾಗಿ ಗುರು ಸಿಂಗಾರಾರ್ಯನಲ್ಲಿ ವಿದ್ಯೆ ಕಲಿಯುವಾಗಲೂ ದೇವಾಜಮ್ಮಳೊಡನೆ ಸಂಚಿಯ ಹೊನ್ನಮ್ಮಳೂ ಸಹ ಜೊತೆಗಿರುತ್ತಿದ್ದು, ಅವಳಿಗೂ ವಿದ್ಯೆ ಕಲಿಯಲು ಅವಕಾಶ ದೊರಕಿದೆ. ಈ ಯಾವ ವಿಚಾರಗಳೂ ನೇರವಾಗಿ ಕಾವ್ಯದಲ್ಲಿ ಪ್ರಸ್ತಾಪವಾಗಿರದಿದ್ದರೂ ಇದರ ಸೂಚನೆ ಕೆಲವೊಂದು ಸಾಲುಗಳಲ್ಲಿ ವ್ಯಕ್ತವಾಗಿದೆ.

ಹೊನ್ನಮ್ಮ ತನ್ನ ಕಾವ್ಯದಲ್ಲಿ ತಿಳಿಸಿರುವಂತೆ (ಹದಿಬದೆಯ ಧರ್ಮ, ೧-೧೬) ಚಿಕ್ಕದೇವರಾಜನ ಓಲಗದಲ್ಲಿ "ಪಾಡುವ ಕುಣಿವ ಬಾಜಿಪ ವಾತಾಡುವ ಪರಿಹಾಸಗೈವ ಗಾಡಿಕಾತಿಯರು ಗಣನೆಯಿಲ್ಲದೆ ಜೋಡು ಗೂಡಿರುವರು ಕೂರ್ಮೆಯೊಳು", ಅಷ್ಟೇ ಅಲ್ಲದೆ "ಚತುಷಷ್ಠಿ ಕಲೆಗಳು ಪೆಣ್ಬರಿಜಾಂತು.... ಸರಸವಿದ್ಯಾ ಸಿದ್ಧಾಂತವೇದಿನಿಯರೊಪ್ಪಿಹರು", ಎನ್ನುತ್ತಾ ದೊರೆಯ ಆಸ್ಥಾನದಲ್ಲಿ ೬೪ ಕಲೆಯಲ್ಲಿ ಪರಿಣತಿ ಪಡೆದಿದ್ದ ಮಹಿಳಾಬಳಗವಿದ್ದುದ'ನ್ನು ಕುರಿತು ತಿಳಿಸಿದ್ದಾಳೆ. ಅಷ್ಟೇ ಅಲ್ಲದೆ "ಪಲರಾಣಿಯರೂಳಿಗದ ಪೆಣ್ಗಳುಮಿಕ್ಕೆಲದೊಳು" ಓಲಗದಲ್ಲಿ ನಿಂತಿದ್ದರೂ, ಇವರಾರಿಗೂ ದೊರಕದ ಅವಕಾಶ ಸಂಚಿ ಹೊನ್ನಮ್ಮಳಿಗೆ ಮಾತ್ರ ದೊರಕಿರುವುದಕ್ಕೆ ಕಾರಣ, ದೇವಾಜಮ್ಮಣ್ಣಿಯ ಪ್ರೋತ್ಸಾಹವೇ ಆಗಿದೆ.

**ಕವಯತ್ರಿ ಹೊನ್ನಮ್ಮ:** ಹದಿನೇಳನೆಯ ಶತಮಾನದಲ್ಲಿ ಕಂಡುಬರುವ ಕೆಲವೇ ಕವಯಿತ್ರಿಯರಲ್ಲಿ ಪ್ರಮುಖಳಾದವಳು ಸಂಚಿಯ ಹೊನ್ನಮ್ಮ. ಮೊಟ್ಟಮೊದಲಿಗೆ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಸ್ಥಾನ ಪಡೆದವಳು ಇವಳೇ ಎಂಬುದನ್ನು ಇದೇ ಪ್ರಬಂಧದ ಎರಡನೆಯ ಅಧ್ಯಾಯದಲ್ಲಿ ತಿಳಿಸಲಾಗಿದೆ. 'ಹದಿಬದೆಯ ಧರ್ಮ'ವು ಹೊನ್ನಮ್ಮಳು ರಚಿಸಿರುವ ಏಕೈಕ ಕೃತಿಯಾಗಿದೆ. ಇದರಲ್ಲಿ ತನ್ನ ಕುರಿತಾದ ಒಂದೆರಡು ವಿಚಾರಗಳನ್ನು ತಿಳಿಸಿದ್ದಾಳೆ. 'ಆನಾವಳೆನ್ನ ಮುನ್ನಿರವಾವುದು' (೧-೩೮) ಎಂಬ ಸಾಲು ಈ ಹಿಂದಿನ ಇವಳ ಸ್ಥಿತಿ ಉತ್ತಮವಾದುದಾಗಿರಲಿಲ್ಲ ಎಂಬುದನ್ನು ತಿಳಿಸುತ್ತದೆ. ಅಲ್ಲದೆ ಇವಳು ಎಳೆಯ ವಯಸ್ಸಿನಿಂದಲೂ ಊಳಿಗದಲ್ಲಿಯೇ ಬೆಳೆದಳೆಂಬುದನ್ನು 'ಪಾದದೂಳಿಗದೊಳು ಬೆಳೆದ ಬಾಲಕಿ' (೧-೪೫) ಎಂಬ ಮಾತಿನಿಂದ ವ್ಯಕ್ತಪಡಿಸಿದ್ದಾಳೆ. ಕಿರಿಯ ಪ್ರಾಯದಿಂದಲೂ ದೇವಾಜಮ್ಮಣ್ಣಿಯ ಪರಿಚಾರಕಿಯಾಗಿದ್ದ ಹೊನ್ನಮ್ಮ ಇವಳ ಮದುವೆಯಾದಮೇಲೆಯೂ ಅವಳ ಗಂಡನ ಮನೆಗೂ ಹಿಂಬಾಲಿಸಿ ಬಂದು, ಅಲ್ಲಿಯೂ ಪರಿಚಾರಿಕೆಯನ್ನು ಮುಂದುವರೆಸಿದ್ದಾಳೆ. ಆದರೆ ಇವಳ ಒಡೆಯರಾದ ದೇವಾಜಮ್ಮಣ್ಣಿ ರಾಜದಂಪತಿಗಳು, ಇವಳ ಆಸಕ್ತಿಯನ್ನು ಗಮನಿಸಿ, ವಿದ್ಯಾಭ್ಯಾಸವನ್ನು ನೀಡಿದುದಲ್ಲದೆ, ಕಾವ್ಯ ರಚನೆಗೆ ಪ್ರೋತ್ಸಾಹವನ್ನೂ ನೀಡಿ, ಹೊನ್ನಮ್ಮಳೇ ಹೇಳಿರುವಂತೆ 'ಕರ್ಬೊನ್ನು ಚೆಂಬೊನ್ನಾದಂತೆ' ಇವಳ ಜೀವನ ಉತ್ತಮಗೊಳ್ಳಲು ಕಾರಣರಾಗಿದ್ದಾರೆ.

ಇವಳಿಗೆ ವಿದ್ಯೆ ಕಲಿಸಿದ ಗುರುವಿನ ಪ್ರಭಾವವನ್ನೂ ಹೊನ್ನಮ್ಮನ ಕಾವ್ಯದಲ್ಲಿ ಗುರುತಿಸಬಹುದು. ಗುರುವಿನ ಪ್ರಭಾವದಿಂದ ಹೊನ್ನಮ್ಮ ಶ್ರೀವೈಷ್ಣವ ಧರ್ಮಾನುಯಾಯಿಯಾಗಿದ್ದಳು ಎಂಬುದು ಇವಳ ಕಾವ್ಯದಿಂದ ಸ್ಪಷ್ಟವಾಗಿ ತಿಳಿಯುತ್ತದೆ. ಹೊನ್ನಮ್ಮ ಸಾಮಾನ್ಯ ಊಳಿಗದ ಹೆಣ್ಣಾಗಿರದೆ, ತನಗೆ ದೊರೆದ ಅವಕಾಶವನ್ನು ವ್ಯರ್ಥವಾಗಿಸದೆ ವಿದ್ಯೆ ಕಲಿಯುವಲ್ಲಿ ಶ್ರದ್ಧೆ ತೋರಿ ಗುರುವಿನಿಂದ ಪ್ರಶಂಸೆ ಪಡೆದಿದ್ದಾಳೆ. ಇವಳು "ಕಾವ್ಯಾಲಂಕಾರ ನಾಟಕ ಪವಣಿಗೆ (ರಚನೆ)ಗಳಲ್ಲಿ ಪರಿಣತೆ" ಗಳಿಸಿದ್ದಳೆಂಬ ವಿಚಾರವನ್ನು(೧-೨೫) ಇವಳ ಗುರು ಆಳಸಿಂಗಾರಾರ್ಯನು ಅರಸನಲ್ಲಿ ತಿಳಿಸಿ ಈಕೆಯನ್ನು "ಸರಸಸಾಹಿತ್ಯದ ವರದೇವತೆ" ಎಂದು ಪರಿಪರಿಯಾಗಿ ಹೊಗಳಿದ್ದಾನೆ (೧-೨೩). ಸ್ವತಃ ಗುರುವೇ ಶಿಷ್ಯೆಯ ಪ್ರಶಂಸೆ ಮಾಡಿದುದನು ಕಂಡು ದೊರೆಯು "ಓದುಗಲಿಸುವರೊಲಿದು ಪೊಗಳಿದೊಡಾ ವೋದುಗಲಿವರೋದುಗಳು ಮೇದಿನಿಯೊಳು ಮೇಲೆನಿಪುವು" ಎಂಬ ಲೋಕೋಕ್ತಿಯನ್ನು ನುಡಿಯುತ್ತಾನೆ (೧-೨೪)

ಹೊನ್ನಮ್ಮಳು ರಾಜನ ಉಪಪತ್ನಿಯರಲ್ಲೊಬ್ಬಳಾಗಿದ್ದಳೆಂಬ ಸೂಚನೆ ಕಾವ್ಯದ ಹಲವೆಡೆಗಳಲ್ಲಿ ಕಂಡುಬರುತ್ತದೆ. "ನಿನ್ನಾಣತಿಗೇಳಿ ನಿನ್ನ ಬಳಿಗೆ ಸಂದು ನಿನ್ನೂಳಿಗಗಳನೆಸಗಿ ನಿನ್ನವಳೆನಿಸಿ ನಿನ್ನೆಡೆ ವಿಡದಿರ್ಪೆನ್" (೧-೩೭);

"ಸುತ್ತಣ ದೇಶದರಸಿಯರ ಬೈತಲೆಗುತ್ತಮ ಭೂಷಣವೆನಿಪ ಮುತ್ತಿನ ಸರವೆನ್ನ ರನ್ನವಾವುಗೆಗಳ ಸುತ್ತ ಲಂಬಣಮಾದುದಿಂದು" (೧-೪೨) ಎಂಬ ಮೊದಲಾದ ಕಾವ್ಯದ ಸಾಲುಗಳನ್ನು ಗಮನಿಸಬಹುದು.

ಸಂಚಿ ಹೊನ್ನಮ್ಮಳು ತನ್ನ ಬಂಧುಗಳ ಕುರಿತಾಗಿ "ಒಲಿದು ತನ್ನೊಡವುಟ್ಟು ಸೊಸೆ ಮಗಳೆಂದೆಂಬ ಪಲರು ಮುನ್ನಿನ ಬಾಂಧವರು ಕುಲದೇವತೆಯೆಂದು ಕೂರ್ತು ತಂತಮ್ಮಿಷ್ಟ ಫಲವ ಪಡೆವರೆನ್ನಿಂದ" (೧-೪೧) ಎಂದು ಹೇಳಿಕೊಂಡಿದ್ದಾಳೆ. ಇವಳು ಅರಮನೆಯಲ್ಲಿರುವುದರಿಂದ ತಾವು ಸಹಾಯ ಕೋರಿ ಪಡೆದಿದ್ದಾರೆ, ಆದರೆ ಉತ್ತಮ ಬಾಂಧವ್ಯ ಪ್ರೀತಿ ಆದರಗಳು ಅವರಿಂದ ಇವಳಿಗೆ ದೊರೆತಿಲ್ಲ.

ರಾಣಿ ದೇವಾಜಮ್ಮಣ್ಣಿಯು ಇವಳನ್ನು "ಕಂದ ಕಟ್ಟಾಣಿ ಪೆಣ್ಮಣಿ" ಎಂದು ಕರೆದು ಅಕ್ಕರೆಯ ಮಾತನಾಡಿದಳು ಎಂದು ಇವಳು ಕಾವ್ಯದಲ್ಲಿ ತಿಳಿಸಿದ್ದಾಳೆ. ಹೊನ್ನಮ್ಮಳನ್ನು ಉದ್ದೇಶಿಸಿ 'ಕಂದ ಕಟ್ಟಾಣಿ' ಎಂದು ಕರೆಯಬೇಕಿದ್ದಲ್ಲಿ ಇವಳು ರಾಣಿಯ ಸಮವಯಸ್ಕಳಾಗಿರಲು ಸಾಧ್ಯವಿಲ್ಲ, ಇವಳು ರಾಣಿಗಿಂತಲೂ ಸಾಕಷ್ಟು ಕಿರಿ ಪ್ರಾಯದವಳಿದ್ದಿರಬೇಕು.

**ಕಾವ್ಯ:** ಹೊನ್ನಮ್ಮಳ ಹದಿಬದೆಯಧರ್ಮ ೪೭೯ ಸಾಂಗತ್ಯ ಪದ್ಯಗಳಿಂದ ಕೂಡಿದ್ದು ಒಂಬತ್ತು ಸಂಧಿಗಳಲ್ಲಿ ವರ್ಣಿತವಾಗಿದೆ. ಮೊದಲನೆಯ ಸಂಧಿಯಲ್ಲಿ ಮೈಸೂರು ದೊರೆಗಳ ಚರಿತ್ರೆ, ಅವರಿಗಿದ್ದ ದೈವಬಲ, ತನ್ನ ಒಡತಿ ಮತ್ತು ರಾಜನ ಪಟ್ಟದರಸಿ ಎಳಂದೂರು ದೇವಮ್ಮಳ ಗುಣಗಾನ, ತನ್ನ ಕಾವ್ಯಕ್ಕೆ ದೇವಮ್ಮಳು ನೀಡಿದ ಪ್ರೋತ್ಸಾಹ ಹಾಗೂ ತನ್ನ ನಿಷ್ಟೆಗಳನ್ನು ಕುರಿತು ಹೇಳಿದ್ದಾಳೆ. ಎರಡನೆಯ ಸಂಧಿಯಲ್ಲಿ ಪತಿವ್ರತೆಯ ಶ್ರೇಷ್ಠತೆಯನ್ನು ವಿವರಿಸಿದ್ದಾಳೆ. ಇದಕ್ಕೆ ದೃಷ್ಟಾಂತವಾಗಿ ಪುರಾಣ ಪುಣ್ಯಕಥೆಗಳಿಂದ ನಿದರ್ಶನಗಳನ್ನು ನೀಡಿದ್ದಾಳೆ. ಮೂರನೆಯ ಸಂಧಿಯಲ್ಲಿ ಪತಿಯ ಶುಶ್ರೂಶೆಯ ಬಗೆಗಳು, ಹೇಳಿದ್ದಾಳೆ. ನಾಲ್ಕನೆಯ ಸಂಧಿಯಲ್ಲಿ ಹಿರಿಯರು, ಬಂದು-ಬಾಂಧವರೊಂದಿಗಿನ ವರ್ತನೆ, ಐದನೆಯ ಸಂಧಿಯಲ್ಲಿ ಹೆಣ್ಣನ್ನು ಹೇಗೆ ಕಾಣಬೇಕೆಂಬ ವಿಚಾರವನ್ನು ತಿಳಿಸಿದ್ದಾಳೆ ಆರನೆಯ ಸಂಧಿಯಲ್ಲಿ ಪುರುಷರು ತಿಳಿದುಕೊಳ್ಳಬೇಕಾದ ಪತಿಧರ್ಮವನ್ನು ತಿಳಿಸಿದ್ದಾಳೆ, ಏಳನೆಯ ಸಂಧಿಯಲ್ಲಿ ಪತಿಯು ದೂರದೂರಿನಲ್ಲಿರುವ ಸಂದರ್ಭದಲ್ಲಿ ಸಾಧ್ವಿಯು ನಡೆದುಕೊಳ್ಳ ಬೇಕಾದ ವಿಧಾನವನ್ನು ತಿಳಿಸಿದ್ದಾಳೆ. ಎಂಟನೆಯ ಸಂಧಿಯಲ್ಲಿ ಪತಿವ್ರತೆಯರ ದಿನಚರಿಯನ್ನು ತಿಳಿಸಿದ್ದಾಳೆ. ಒಂಬತ್ತನೆಯ ಸಂಧಿಯಲ್ಲಿ ಅಹಿಂಸಾ ಪ್ರವೃತ್ತಿ, ವಿಷ್ಣುವಿನ ಆರಾಧನೆ, ನಿಷ್ಕಾಮಕರ್ಮ ಮೊದಲಾದ ವಿಚಾರಗಳನ್ನು ತಿಳಿಸಿ, ವಿದ್ಯಾಗುರುವನ್ನು ಸ್ಮರಣೆ ಮಾಡಿ ಪತಿವ್ರತೆಯರ ಮಹಿಮೆ ಆಚಂದ್ರಾರ್ಕವಾಗಿರಲಿ, ಪ್ರಭು ಚಿಕ್ಕದೇವರಾಯರ ಧರ್ಮ ಪರಿಪಾಲನೆಯಲ್ಲಿ ದೇಶ ಸುಭಿಕ್ಷವಾಗಿರಲಿ, ಕನ್ನಡಿಗರು ಘನವಂತರಾಗಲಿ ಎಂದು ಮಂಗಳ ಹಾಡಿದ್ದಾಳೆ.

ಹದಿನೇಳನೆಯ ಶತಮಾನದ ಸಾಮಾಜಿಕ ಸ್ಥಿತಿಗತಿಗಳಿಗನುಗುಣವಾಗಿ ರಚಿಸಿರುವ ಈ ಕೃತಿಯನ್ನು ಇಪ್ಪತ್ತೊಂದನೆಯ ಶತಮಾನದಲ್ಲಿ ನಿಂತು ಪ್ರತಿ ವಾಕ್ಯವನ್ನು ಪ್ರಸ್ತುತ ಸ್ಥಿತಿಯಲ್ಲಿ ತೂಗಿನೋಡುವುದು ಉಚಿತವೆನಿಸುವುದಿಲ್ಲ. 'ಹದಿಬದೆಯ ಧರ್ಮ'ವು ಒಂದು ಪ್ರಸಂಗ ಅಥವಾ ಕತೆಯ ವರ್ಣನೆಯಲ್ಲ, ಒಬ್ಬ ಮಹಿಳೆಯ ಕುರಿತಾದ ವಿಚಾರವಲ್ಲ ಇದು ಒಂದು ಸಮಾಜದ ಪತಿ-ಪತ್ನಿಯರಿಗೆ ಕಿವಿಮಾತು, ಇಲ್ಲಿನ ಕೆಲ ವಿಚಾರಗಳು ಸಾರ್ವತ್ರಿಕ-ಸಾರ್ವಕಾಲಿಕವಾಗಿವೆ.

**ದೇವೀರಾಂಬೆ**

ದೇವೀರಾಂಬೆಯು ಹದಿನೆಂಟನೆಯ ಶತಮಾನದಲ್ಲಿದ್ದ ಮೈಸೂರಿನ ಅರಸಿ. ಮೈಸೂರು ದೊರೆ ಚಾಮರಾಜೇಂದ್ರನೃಪನ ರಾಣಿ ಹಾಗೂ ಮಹಿಸೂರು ರತ್ನಸಿಂಹಾಸನಾರೂಢ ಕೃಷ್ಣರಾಜೇಂದ್ರ ಮಹಾಪ್ರಭುವಿನ ಮಹಾಮಾತೋಶ್ರೀ. ಇವಳು 'ರಾಜಾವಳಿ ಕಥೆ'ಯನ್ನು ರಚಿಸಿದ ಕವಿ ದೇವಚಂದ್ರನನ್ನು ಆದರಿಸಿ, ಅಪೂರ್ಣವಾಗಿದ್ದ 'ರಾಜಾವಳಿ ಕಥೆ' ಗ್ರಂಥವನ್ನು ಸಂಪೂರ್ಣಗೊಳಿಸಲು ಪ್ರೇರಣೆ ನೀಡಿದವಳು. ಕವಿಯು

ಇವಳನ್ನು ಮಹಾಮಾತೂಶ್ರೀ ಎಂದು ಸಂಬೋಧಿಸಿದ್ದಾನೆ. ಇವಳು "ರಾಜಾವಳಿಕಥೆಯಂ ಚೆನ್ನಾಗಿ ಪರಾಂಬರಿಸಿ ಯದುಕುಲಾಗ್ರಗಣ್ಯರಪ್ಪ ಈ ಮಹಿಸೂರ ರಾಜಪರಮೇಶ್ವರರುಗಳ ವಂಶ ಪರಂಪರೆಯಂ ಆಮೂಲವಾಗಿ ಎಡೆಬಿಡದೆ ಸಹಜವಾಗಿ ಬರೆದು ಒಪ್ಪಿಸುವುದೆಂದು" ಹೇಳಿ ದೇವಚಂದ್ರನು ರಚಿಸಿದ ರಾಜಾವಳಿಕಥೆಯನ್ನು ಒಮ್ಮೆ ಓದಿ (ಓದಿಸಿ ಕೇಳಿ) ಅದರಲ್ಲಿ ಮೈಸೂರು ಅರಸರ ವಂಶಾವಳಿಯನ್ನು ಸೇರಿಸಿ, ತಂದು ಒಪ್ಪಿಸಲು ಸೂಚಿಸಿದಳು.

ತನ್ನ ಕೃತಿಗೆ ಮನ್ನಣೆಯಿತ್ತು, ತನ್ನನ್ನು ಪೋಷಿಸಿದ ದೇವೀರಾಂಬೆಯನ್ನು ಕುರಿತು ದೇವಚಂದ್ರನು ಈ ರೀತಿಯಾಗಿ ಬಣ್ಣಿಸಿದ್ದಾನೆ.

**ಚಾಮರಾಜೇಂದ್ರನೃಪಸತಿ ಭಾಮಿನಿಯರಿಗಧಿಕ ಸುಗುಣೆ ಜ್ಞಾನಾಭರಣೆ**
**ಸೋಮೆ ಸದ್ಧರ್ಮವಾರ್ಧಿಗೆಈ ಮಹಿಸೂರೀಶನಂಬೆ ದೇವೀರಾಂಬೇ॥**

**ರೂಪ: ಅತಿಶಯ ರೂಪಲಿ ರತಿ ಭಾರತಿ ವಿದ್ಯದಿ ಸೊಬಗಿನಿಂದ ರೋಹಿಣಿಯೆನಿಸಿದ**
**ಪತಿಭಕ್ತೆ ಸಜ್ಜನಸ್ತುತೆ ಮತಿಮಾನ್ವಿತೆಲೋಕದಾಂಬೆ ದೇವೀರಾಂಬೆ॥**

**ಗುಣ: ಆಚಾರ ಶೀಲ ನಿರ್ಮಲ ಶ್ರೀ ಚೆಲುವಿಕೆ ಸತ್ಯವಾಣಿ ಸದ್ಗುಣಮಣಿಯುಂ**
**ಯಾಚಕಜನಚಿಂತಾಮಣಿ ಭೂಚಕ್ರದಿ ಕೀರ್ತಿಬಿಂಬೆ ದೇವೀರಾಂಬೇ॥**

**ವಿದ್ಯೆ: ಆವೊಂ ಪೊಗಳುವನಪ್ರತಿ ದೇವೀರಾಂಬಿಕೆಯ ಕುಶಲಮತಿ ಅತಿಶಯಮಂ**
**ಸಾವದ್ಯವುಳಿದಂ ತತ್ವದ ಭಾವವ ಶಾಸ್ತ್ರದೊಳೆ ತಿಳಿದು ನಿಶ್ಚಯವಾಂತಳ್॥**

**ಕ್ಷಮೆ: ರೂಪಿಗೆ ಗುಣಮಾಭರಣಂ ರೂಪು ಗುಣಂಗಳಿಗೆ ಜ್ಞಾನ ತಾನಾಭರಣಂ**
**ರೂಪು ಗುಣ ಜ್ಞಾನ ಮೂರಕೆ ತಾ ಪಿರಿದಾಭರಣ ಕ್ಷಮೆಯು ನೆಲೆಗೊಂಡಿಪ್ಪವು॥**

ಈ ರೂಪ ಗುಣ ವಿದ್ಯೆ ಮೂರಕ್ಕೂ ಹಿರಿದಾದ ಕ್ಷಮೆಯು ಇವಳಲ್ಲಿ ನೆಲೆಗೊಂಡಿದೆ ಎಂದು ಬಣ್ಣಿಸಿದ ಪರಿ ಸೊಗಸಾಗಿದೆ.

**ಕರ್ಮೋಪಶಮದಿ ಸುಮತಿಯು ನಿರ್ಮಲಮಾಗುದಿಸೆ ನಯದಿ ತತ್ವಾರ್ಥಂಗಳ**
**ವೊರ್ಮೊದಲೊಳೆ ತಿಳಿದು ನೆರೆ ಸದ್ಧರ್ಮವ ಪಿಡಿವಧಿಕ ಬುದ್ಧಿ ತಾ ನೆಲೆಗೊಂಡುದು**

**ತಾರಾ ಮಂಡೋದರಿ ಸೀತಾ ರೇವತಿ ಸುಪ್ರಭಾ ಯಶಸ್ವಿ ಸುನಂದಾ**
**ನಾರಿಯರ ಗುಣಮೆ ತಾ ದೇವೀರಾಂಬೆಯ ದೇಹದೊಳಗೆ ನೆಲೆಯಾಗಿರ್ಪುದು॥** ಎಂಬ ಪದ್ಯದಲ್ಲಿ ಸುಪ್ರಭಾ, ಯಶಸ್ವಿ, ಸುನಂದಾ ಮೊದಲಾದ ಜೈನ ಪುರಾಣ ಸ್ತ್ರೀಯರಿಗೂ ದೇವೀರಾಂಬೆಯನ್ನು ಹೋಲಿಸಿದ್ದಾನೆ.

**ಶ್ರೀಯಂ ವಿತರಣದೊಳ್ ವಾಕ್**
**ಶ್ರೀಯಂ ಸೌಜನ್ಯವೃತ್ತಿಯೊಳ್ ದಿಗ್ವಿಜಯ**
**ಶ್ರೀಯಂ ಭುಜಜಲದೊಳ್ ಸ್ವ**
**ಶ್ರೀಯಂ ಸಮಂತಾಳ್ದ ಕೃಷ್ಣರಾಜನರೇಂದ್ರಂ**

ತಾನು ರಚಿಸಿರುವ ಕಾವ್ಯವು ದೊರೆಯಿಂದ ಮಾನ್ಯತೆ ಪಡೆಯಲಿಲ್ಲವೆಂದು ಅಳುಕಿದ್ದ ದೇವಚಂದ್ರನು, ದೇವೀರಾಂಬೆಯ ಕೃಪೆ ದೊರೆತದ್ದಕ್ಕೆ ಸಂತಸಪಟ್ಟು ಅವಳನ್ನು ನಾನಾ ಪರಿಯಲ್ಲಿ ಸ್ತುತಿಸಿ, ಅವಳ ಕುರಿತಾದ ಪದ್ಯ ರಚಿಸಿರುವುದನ್ನಿಲ್ಲಿ ಕಾಣುತ್ತೇವೆ.

**ಕವಿ ದೇವಚಂದ್ರ :** ಕೃತಿಯಲ್ಲಿ ಸ್ವತಃ ಕವಿಯೇ ತನ್ನ ಕುರಿತಾಗಿ ತಿಳಿಸಿರುವ ಕೆಲವು ವಿಚಾರಗಳನ್ನು ಗಮನಿಸಬಹುದು, ಈತನ ಊರು ಚಾಮರಾಜನಗರ ಜಿಲ್ಲೆಯ ಮಲೆಯೂರು. ಈತನ ತಾತ ದೇವಚಂದ್ರ, ತಂದೆ ದೇವಯ್ಯ, ತಾಯಿ ಕುಸುಮಾಜಮ್ಮ, ಇವರ ಮೂವರು ಮಕ್ಕಳೂ ಅನೇಕ ಶಾಸ್ತ್ರಾವಲೋಕನದಿಂ ಲೌಕಿಕ ಪಾರಮಾರ್ಥಿಕಮಂ ತತ್ವ ನೀತಿ ವೈದ್ಯ ಜ್ಯೋತಿಷ ಮಂತ್ರವಾದಾದಿ ವಿದ್ಯಂಗಳನ್ನು ಕಲಿತಿದ್ದರು. ಇವರಲ್ಲಿ ಕಡೆಯವನಾದ ದೇವಚಂದ್ರನು ಪುಟ್ಟಿ ಪದಿನಾಲ್ಕು ವರ್ಷಾರಭ್ಯದಿ ಕರಣಿಕಾಗ್ರಗಣ್ಯನೆನಿಸಿ ಕವಿ ಗಮಕಿ ವಾಗ್ಮಿತ್ವದಿಂ ಸಜ್ಜನನೆನಿಸಿ ಬಾಳಿದವನು (ಪು.೩೧೪). ಇವನು ಹೇಳುವ ಪ್ರಕಾರ ಇವನು ಹುಟ್ಟಿದ್ದು ಕ್ರಿ.ಶ.೧೭೭೦ರಲ್ಲಿ. ಕವಿಯು ತನ್ನನ್ನು ತ್ರಿದಶೇಂದು, ವಿಬುಧೇಂದು ಎಂದು ಮೊದಲಾಗಿ ಕರೆದುಕೊಂಡಿದ್ದಾನೆ.

"ರಾಜಾವಲಿ ಕಥೆಯನ್ನು ಸಂಗ್ರಹಿಸಿ ಹನ್ನೊಂದಧ್ಯಾಯವನ್ನು ಮಹಾರಾಜಾಧಿರಾಜ ಮಹಿಸೂರ ಕೃಷ್ಣರಾಜ ಒಡೆಯರ್ಗೆ ಒಪ್ಪಿಸಲು ಮೂರು ನಾಲ್ಕು ವರುಷದಿಂ ಕೂಡಿಬರಲಿಲ್ಲಾ. ಆದರೆ ಪ್ಲವಸಂವತ್ಸರದ ಆಶ್ವೀಜದೊಳು ಮಹಾಮಾತುಶ್ರೀ ದೇವೀರಾಂಬಿಕೆಯವರು ಮೊದಲಿಂ ಕಡೆಯವರೆಗೆ ಪರಾಂಬರಿಸಿದರು" ಎಂಬ ವಿಚಾರವನ್ನು ಸ್ವತಃ ದೇವಚಂದ್ರನೇ ತಿಳಿಸಿದ್ದಾನೆ.

'ತಾನು ಪಂಡಿತನಾಗಿದ್ದೂ, ಅರಮನೆಯ ಪೂಜಾಕಾರ್ಯಗಳಿಗೆ ಬರುತ್ತಿದ್ದೂ, ತನ್ನ ಕೃತಿಯನ್ನು ಮಹಾರಾಜರಿಗೆ ಒಪ್ಪಿಸಲಿಕ್ಕೆ ಆಗಿರಲಿಲ್ಲ' ಎಂಬುದು ದೇವಚಂದ್ರನ ಅಳಲಾಗಿತ್ತು. ಹಾಗಾಗಿ ಅವನು ರಾಜಮಾತೆ ದೇವೀರಾಂಬೆಯನ್ನು ಭೇಟಿಯಾಗಿ ಬಿನ್ನವಿಸಿಕೊಂಡೆನೆಂದು ತನ್ನ ಕೃತಿಯಲ್ಲಿ ತಿಳಿಸಿದ್ದಾನೆ.

ಸಕಲ ಸದ್ಗುಣಾಭರಣೆ ಲೋಕಮಾತೆ ಸಮ್ಯಕ್ತ್ವಚೂಡಾಮಣಿಯಪ್ಪ ದೇವೀರಾಂಬಿಕೆಯು ಈ ಸತ್ಯವಾಕ್ಯಮಾದ ರಾಜಾವಲಿ ಕಥಾಸಾರಮೆಲ್ಲಮಂ ಮೊದಲಿಂ ಕಡೆವರಂ ಚೆನ್ನಾಗಿ ಲಾಲಿಸಿ ಸಂತೋಷಂ ತಾಳ್ದು ಕಥಕಂಗೆ (ದೇವಚಂದ್ರನಿಗೆ) ಅತಿಶಯಮಾದ ವಸ್ತ್ರ ತಾಂಬೂಲಾದಿಗಳನ್ನಿತ್ತು ಮನ್ನಿಸಿ ಈ ಮಹಿಸೂರ ಮಹಾಪರಮೇಶ್ವರರುಗಳ ಅನ್ವಯ ಪರಂಪರೆಯುಮಿದರೊಳಿರ್ದುದಂ ತೆಗೆದು ಆ ವಂಶದಾಮೂಲ ಪರಂಪರೆಯಂ ವ್ಯಕ್ತಮಪ್ಪಂತು ಸಂಕ್ಷೇಪದಿಂ ಬೇರೆ ಬರೆದು ಒಪ್ಪಿಸುವುದೆಂದು ನಿರೂಪಿಸಲಾ ಪರಂಪರೆಯಂ ನಾಮಮಾತ್ರದಿಂ ಬರೆದೊಪ್ಪಿಸಿದೆ" (ದ್ವಾದಶಾಧಿಕಾರಂ). ಹೀಗೆ ದೇವಚಂದ್ರನು ಮೊದಲು ರಚಿಸಿದ ಕೃತಿಯನ್ನು ದೇವೀರಾಂಬೆಯು ಪರಾಂಬರಿಸಿ, ದೇವಚಂದ್ರನನ್ನು ಸತ್ಕರಿಸಿದಳಲ್ಲದೆ ಮೈಸೂರ ಚರಿತ್ರೆಯನ್ನು ರಚಿಸಬೇಕೆಂದು ಆದೇಶಿಸುತ್ತಾಳೆ. ಅದರಂತೆ ಪುನಃ ದೇವಚಂದ್ರನು ಮತ್ತೆರಡು ಅಧಿಕಾರಗಳನ್ನು ಬರೆದು ಇದರೊಂದಿಗೆ ಸೇರಿಸಿ ತರುತ್ತಾನೆ.

ದೇವಚಂದ್ರನು "ಈ ಕರ್ನಾಟ ದೇಶದೊಳು ನಡೆದ ಪ್ರಪಂಚುಗಳನೆಲ್ಲಾ ಕ್ರೋಡೀಕರಿಸಿ ಬರೆದು ನಾವು ಇದ್ದಲ್ಲಿಗೆ ತೆಗೆದುಕೊಂಡು ತಿಂಗಳು ಒಳಗೆ ಬಂದರೆ ಭಾರಿ ಸಂಬಳವನ್ನು ಮಾಡಿಸಿಕೊಡುತ್ತೇವೆ (ಪು.೩೧೬) ಎಂದು ಹೇಳಿದ ಮೆಕೆಂಜಿ ಈ ಕೃತಿಯನ್ನು ಆರಂಭಿಸಲು ಕಾರಣವಾದರೆ, ಈ ಕೃತಿಯನ್ನು ಸಂಪೂರ್ಣ ಗೊಳಿಸಲು, ಅರಸಿ ದೇವೀರಾಂಬೆಯೇ ಕಾರಣವೆಂಬುದನ್ನೂ ಸ್ಪಷ್ಟವಾಗಿ ತಿಳಿಸಿದ್ದಾನೆ.

**ರಾಜಾವಳಿ:** ಗದ್ಯರೂಪದ ಈ ಕೃತಿಯಲ್ಲಿ ವಿಷಯ ನಿರೂಪಣೆಗೆ ಪೂರಕವಾಗಿ ಸಂಸ್ಕೃತ ಶ್ಲೋಕಗಳನ್ನೂ, ಪ್ರಾಕೃತ ಗಾಹೆಗಳನ್ನು, ಕೆಲವು ಕನ್ನಡ ಪದ್ಯಗಳನ್ನೂ ಬಳಸಿಕೊಂಡಿದ್ದಾನೆ. ತನ್ನ ಈ ಕೃತಿಯನ್ನು ಆರಂಭದಲ್ಲಿ ರಾಜಾವಳಿ ಕಥಾವತಾರ' (ಪು.೩) ಎಂದೂ ಕಡೆಯಲ್ಲಿ ರಾಜಾವಲಿ ಕಥಾಸಾರ' ಎಂದೂ ಮತ್ತೆ ಕೆಲವೆಡೆ ರಾಜಾವಳಿ ಕಥೆ' ಎಂದೂ ಕರೆದಿದ್ದಾನೆ.

**ಹಳಗನ್ನಡ ಬೆಳುಗನ್ನಡ**
**ವಳಗನ್ನಡ ವಚ್ಚಗನ್ನಡಂಗಬ್ಬದೊಳುಂ**
**ತಿಳಿದೆಲ್ಲ ಮಿಶ್ರಮಾಗಿಯು**

**ಮಿಳೆಗರವಂದದೊಳೆ ಪೇಳ್ದೆ ರಾಜಾವಲಿಯಂ॥** ಎಂದು ಕವಿ ತನ್ನ ಕಾವ್ಯವು ಮಿಶ್ರ ಭಾಷೆಯಿಂದ ರಚಿತವಾಗಿದೆ ಎಂದು ತಿಳಿಸಿದ್ದಾನೆ.

ಇತಿಹಾಸ, ಪುರಾಣ, ಸಾಹಿತ್ಯ ಎಲ್ಲವನ್ನೂ ಒಳಗೊಂಡಿರುವ ಈ ಕೃತಿಯನ್ನು ಒಟ್ಟು ಹದಿಮೂರು ಅಧಿಕಾರಗಳಲ್ಲಿ (ಅಧ್ಯಾಯ) ರಚಿಸಲಾಗಿದೆ. ಕರ್ನಲ್ ಮೆಕೆಂಝಿಯ ಕೋರಿಕೆಯಂತೆ ದೇವಚಂದ್ರನು ಈ ಕೃತಿಯನ್ನು ರಚಿಸಲು ಆರಂಭಿಸಿದ್ದಾನೆ. ಆದರೆ ಅತ್ಯಲ್ಪಕಾಲದಲ್ಲಿ ಮೆಕೆಂಝಿಯು ಮೈಸೂರಿನಿಂದ ನಿರ್ಗಮಿಸಿದ್ದಾನೆ. ಆನಂತರ ಮೈಸೂರು ಅರಸರ ಪೋಷಣೆ ದೊರಕೀತೆಂಬ ಆಸೆಯಿಂದ ಹಲವು ವರ್ಷಗಳಕಾಲ ಪ್ರಯತ್ನಿಸಿ, ದೊರೆಯನ್ನು ಸಂಧಿಸಲು ಆತನಿಗೆ ಸಾಧ್ಯವಾಗಿಲ್ಲ. ಕಡೆಗೆ ರಾಜಮಾತೆ ದೇವೀರಾಂಬೆಯನ್ನು ಭೇಟಿಮಾಡಿ ತನ್ನನ್ನು ಪರಿಚಯಿಸಿಕೊಂಡು, ತನ್ನ ಅಪೂರ್ಣ ಕೃತಿಯನ್ನು ಅವಳಿಗೆ ಒಪ್ಪಿಸಿದ್ದಾನೆ. ಆನಂತರ ಮೈಸೂರು ಅರಸಿ ದೇವೀರಾಂಬೆಯ ಅಜ್ಞಾನುಸಾರ ಮೈಸೂರರಸರ ವಿಚಾರವನ್ನೊಳಗೊಂಡಂತೆ ಮತ್ತೆರಡು ಅಧಿಕಾರವನ್ನೂ ರಚಿಸಿರುವುದಾಗಿ ಕವಿ ತಿಳಿಸಿದ್ದಾನೆ.

ಈ ಕೃತಿಯಲ್ಲಿನ ಹಲವಾರು ಐತಿಹಾಸಿಕ ಅಂಶಗಳು ಇತಿಹಾಸಕಾರರಿಗೆ ಉತ್ತಮ ಮಾಹಿತಿ ನೀಡಿವೆ, ಆದರೆ ಇದರೊಂದಿಗೆ ಐತಿಹ್ಯಗಳೂ ಹೇರಳವಾಗಿ ಸೇರಿಕೊಂಡಿವೆ. ವಿಷಯ ನಿರೂಪಣೆಗೆ ನೀಡಿರುವ ಹಲವಾರು ಜನಪದ ಧಾಟಿಯ ಕಥೆಗಳು ಉತ್ತಮವಾಗಿವೆ. ದುರ್ಬುದ್ಧಿಯ ಮಗ, ಅವಿವೇಕಿ ಗೌಡ, ಪರರ ಕಷ್ಟ ತಿಳಿಯಲಾರದ ಸುಖಿಗಳು, ಅನ್ಯೋನ್ಯ ಪ್ರೇಮಿಗಳು, ಹೆಂಗಸರ ನೀಚ ಸ್ವಭಾವವನ್ನು ನಿರೂಪಿಸುವ ಜಾರ ಸ್ತ್ರೀ ಕಥೆ, ಹೀಗೆ ಅನೇಕ ಕಥೆಗಳ ಉದಾಹರಣೆ ಇದೆ. ಸಂದರ್ಭಕ್ಕೆ ತಕ್ಕಂತೆ ಪಡೆನುಡಿಗಳ ಬಳಕೆ ದೇಸಿ ಸೊಗಡನ್ನು ನೀಡಿದ್ದಾನೆ.

ಕವಿ ದೇವಚಂದ್ರನು ತಾನು ರಚಿಸಿರುವ ಹಲವು ಕೃತಿಗಳ ಪಟ್ಟಿ ನೀಡಿದ್ದಾನೆ. ಆದರೆ ಅವುಗಳಲ್ಲಿ ಹಲವಾರು ಕೃತಿಗಳು ಇಂದಿಗೆ ಅಲಭ್ಯವಾಗಿದೆ. ಬಹುಶಃ ರಾಜಾವಳಿ ಕಥಾಸಾರ ಕೃತಿಯು ಉಳಿದು ಬಂದಿರುವುದಕ್ಕೆ ದೇವೀರಾಂಬೆಯ ಕೃಪೆಯು ಕವಿಗೆ ದೊರೆತಿದ್ದುದೇ ಕಾರಣವಾಗಿದೆ.

### ಗೌರಮ್ಮಣ್ಣಿ

ಗೌರಮ್ಮಣ್ಣಿಯು ಮೈಸೂರಿನ ರಾಜ ಕೃಷ್ಣರಾಜೇಂದ್ರನ ರಾಣಿ. ಇತಿಹಾಸದಲ್ಲಿ ಮೊದಲನೆ ಕೃಷ್ಣರಾಜ ಅಥವಾ ದೊಡ್ಡ ಕೃಷ್ಣರಾಜಒಡೆಯರ್ ಎಂದು ಕರೆಯಲಾಗುವ ಕೃಷ್ಣರಾಜೇಂದ್ರ ಕ್ರಿ.ಶ.೧೭೧೩ರಲ್ಲಿ ಪಟ್ಟಕ್ಕೆ ಪಟ್ಟಕ್ಕೆ ಬಂದು ಸುಮಾರು ೧೮ ವರ್ಷಗಳ ಕಾಲ ಆಳ್ವಿಕೆ ನಡೆಸಿದ ಅರಸ. ಈ ಆಧಾರದಿಂದ ಗೌರಮ್ಮಣ್ಣಿಯೂ ಕೂಡ ಹದಿನೆಂಟನೆಯ ಶತಮಾನದ ಪೂರ್ವಾರ್ಧದವಳೆಂದು ಗುರುತಿಸಬಹುದು.

ಗೌರಮ್ಮಣ್ಣಿಯು ಕಾವ್ಯ-ನಾಟಕಗಳನ್ನು ಅಧ್ಯಯನ ಮಾಡಿದವಳಾಗಿದ್ದಳು. ಇವಳು ಕೆಲವು ಕೃತಿಗಳನ್ನು ಪ್ರತಿಮಾಡಿಸಿಕೊಂಡಿರುವುದಕ್ಕೆ ಹಸ್ತಪ್ರತಿ ಪುಷ್ಪಿಕೆಗಳಲ್ಲಿ ಆಧಾರ ದೊರಕುತ್ತದೆ. 'ದಿವಿಯ ಮಹಾಸೂರಿ ಪ್ರಬಂಧ'ದ ಹಸ್ತಪ್ರತಿಯಲ್ಲಿ "ಅರಸಿ ಚೆಲುವ ಗೌರಮ್ಮಣ್ಣಿಂದಾಜ್ಞೆವೆತ್ತೀ ವರದಿವಿಯ ಮಹಾಸೂರಿ ಪ್ರಬಂಧಂ ವಿರೋಧಿಕರ ಬರಿಸದ ರಾಧಾಮಾಸದೊಳ್ ಗ್ರಂಥಮೆಲ್ಲಂ ಬರೆದುದು ಶ್ರೀ ತತಿ ಮೈಂಗಾರರಿಂ" ಎಂಬ ಉಲ್ಲೇಖ ಕಂಡು ಬರುತ್ತದೆ[೩]. ಇಲ್ಲಿ ತಿಳಿಸಿರುವಂತೆ ಅರಸಿ ಗೌರಮ್ಮಣ್ಣಿಯು 'ದಿವಿಯ ಮಹಾಸೂರಿ' ಪ್ರಬಂಧದ ಪ್ರತಿಯನ್ನು ಆಜ್ಞೆನೀಡಿ ಬರೆಯಿಸಿದ್ದಾಳೆ.

ಗೌರಮ್ಮಣ್ಣಿಯು ಕೇವಲ ಕಾವ್ಯಗಳನ್ನು ಪ್ರತಿಮಾಡಿಸಿಕೊಂಡು ಅಧ್ಯಯನ ಮಾಡುತ್ತಿದ್ದುದಷ್ಟೇ ಅಲ್ಲದೆ, ಕವಿಗೆ ಆಶ್ರಯ ನೀಡಿ ಕಾವ್ಯರಚನೆಗೆ ಕಾರಣಳಾದವಳಾಗಿದ್ದಾಳೆ. ೧೮ನೆಯ ಶತಮಾನದಲ್ಲಿದ್ದ ಕೇಶವ ಎಂಬ ಕವಿ

ಪಟ್ಟದರಸಿ ಗೌರಮ್ಮಣ್ಣಿಯನ್ನು ಕುರಿತಂತೆ ಕಾವ್ಯವೊಂದನ್ನು ರಚಿಸಿ, ಇವಳನ್ನು ಕುರಿತ ಕೆಲವು ಹಾಡುಗಳನ್ನೂ ರಚಿಸಿದ್ದಾನೆ.

ಅರಸಿಯೋರ್ವಳನ್ನು ಕುರಿತಂತೆ ಈ ಪ್ರಕಾರವಾದ ಕೃತಿಯೊಂದು ರಚಿತ'ವಾಗಿರುವುದು ವಿಶೇಷವೆನಿಸಿದೆ. ಅರಸಿ ಗೌರಮ್ಮಣ್ಣಿಯ ರೂಪ, ಸ್ವಭಾವ, ದಿನಚರಿಗಳನ್ನು ಮೂರು ಸಂಧಿಗಳಲ್ಲಿ ಸುಮಾರು ೧೪೪ ಪದ್ಯಗಳಲ್ಲಿ ಬಣ್ಣಿಸಿರುವ ಈ ಕೃತಿಯನ್ನು ಕವಿಯು 'ಗೌರಮ್ಮಣ್ಣಿಯವರ ಚರಿತ್ರೆ' ಎಂದು ಹೆಸರಿಸಿದ್ದಾನೆ. ಜಿ.ಜೆ.ಮಂಜುನಾಥನ್ ಅವರ ಸಂಪಾದನೆಯಲ್ಲಿ ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಯಿಂದ ಈ ಕೃತಿಯು ಪ್ರಕಟವಾಗಿದೆ[೩೩]. ಈ ಕೃತಿಯ ಹಸ್ತಪ್ರತಿಯು ಸಾಕಷ್ಟು ತ್ರುಟಿತವಾಗಿದ್ದು ಮೊದಲನೆಯ ಸಂಧಿಯ ೪೬ನೆಯ ಪದ್ಯದ ನಂತರ ಕೆಲವು ಪದ್ಯಗಳು ಹಾಗೂ ಎರಡನೆಯ ಸಂಧಿಯ ಆರಂಭದ ೪೧ ಪದ್ಯಗಳು ಲುಪ್ತವಾಗಿವೆ.

ಕೃತಿಯು, ಅರಸಿ ಗೌರಮ್ಮಣ್ಣಿಯನ್ನು ಯಾವುದೇ ಪೌರಾಣಿಕ ವ್ಯಕ್ತಿಗೂ ಹೋಲಿಸಿ ರಚನೆಯಾಗಿರದೆ, ನೇರವಾಗಿ ಗೌರಮ್ಮಣ್ಣಿಯ ಸೌಂದರ್ಯದ ಬಣ್ಣನೆ ನೀಡಿದೆ. ಆರಂಭದ ೭ ಪದ್ಯಗಳು ದೇವತಾ ಸ್ತುತಿಗೆ ಮೀಸಲಾಗಿವೆ. ಉಳಿದ ಪದ್ಯಗಳು ಅರಸಿಯ ದಾನಗುಣ, ದೈವಭಕ್ತಿ, ದೈನಂದಿನ ಬದುಕು, ಅರಸನೊಂದಿಗಿನ ಸರಸ, ವಿಲಾಸ, ವೈಭವ, ಸೌಂದರ್ಯ, ಅಲಂಕಾರ ವಿಶೇಷವಾಗಿ ಅರಸಿಯ ಸ್ವಭಾವ ಹಾಗೂ ವಿದ್ಯೆಯನ್ನು ಕುರಿತು ಬಣ್ಣಿಸಲಾಗಿದೆ.

**ಸರಸಸಂಗೀತ ಸಾಹಿತ್ಯಕೋವಿದ ವಿದ್ಯಾ**
**ಶರಧಿ ಶ್ರೀಕೃಷ್ಣಭೂಮಿಪನ**
**ತರುಣಿ ಗೌರಮ್ಮನ... (೩-೧೬)**

**ಸರಸಸಂಗೀತ ವೀಣಾವಾದ್ಯ ಮೊದಲಾದ**
**ಪರಿಪರಿಗಾನ ವಿದ್ಯದಲಿ**
**ನೆರೆಜಾಣೆ ಶಾಸ್ತ್ರ ಕವಿತ್ವ ಸಾಹಿತ್ಯದಿ**
**ತರುಣಿ ಗೌರಮ್ಮಗೆ... (೩-೩೨)**

**ಸುರನಾರಿಯರು ಸಮವಲ್ಲ ಗೌರಮ್ಮಗೆ**
**ಭರತಶಾಸ್ತ್ರದೊಳು ನಿಪುಣೆ**
**ಪರಿಪರಿ ಪುಸ್ತಕದೋದುಗಾರಿಕೆಯಲ್ಲಿ**
**ಧರೆಯೊಳಾರು ಸಾಟಿಯುಂಟೆ (೩-೩೪)**

**ಚದುರಂಗ ಪಗಡೆ ದಾಯಗಳಾಡುವುದರಲ್ಲಿ**
**ಸುದತಿಗೆ ಸಮವಿಲ್ಲವೆಂದು**
**ಹೃದಯದಿ ಕಡುಮೆಚ್ಚಿ ಶ್ರೀಕೃಷ್ಣರಾಯನು**
**ಮುದದಿಂದಲೊಲಿದು ಕೈವಿಡಿದ (೩-೪೧)**

**ಎನಿತು ದಿನದ ತಪಸಿನ ಫಲವಿರ್ಪುದೊ**
**ತನಗೆಂದು ಬಹಳ ಸಂತಸದಿ**
**ದಿನನ ಸಮದ ಕೃಷ್ಣರಾಯನೊಲಿದನೆಂದು**
**ವನಿತೆ ಗೌರಮ್ಮನೊಪ್ಪಿದಳೂ॥**

**"ಅರುಣೋದಯದೊಳೆದ್ದು ದೇವಾದಿದೇವರ**
**ಸ್ಮರಣೆಯ ಮಾಡಿ ಭಕ್ತಿಯಲಿ॥** ಎಂಬ ಮೊದಲಾದ ಅರಸಿಯ ಕುರಿತಾದ ಪದ್ಯಗಳನ್ನು ಕಾಣಬಹುದು.

ಈ ಕೃತಿಯೊಂದಿಗೆ ಗೌರಮ್ಮಣ್ಣಿಯ ಕುರಿತಾದ ಆರು ಹಾಡುಗಳು ರಚಿತವಾಗಿವೆ. ಇವುಗಳಿಗೆ ರಾಗ ಹಾಗೂ ತಾಳದ ನಿರ್ದೇಶನವಿದೆ. ಇವು ಕ್ರಮವಾಗಿ ಕಲ್ಯಾಣಿರಾಗ ಝುಂಪೇತಾಳ, ಸಾವೇರಿ ರಾಗ ಅಟ್ಟತಾಳ, ತೋಡಿ ರಾಗ

ಆದಿತಾಳ, ಶ್ರೀರಾಗ, ಕಾಂಬೋಧಿ ರಾಗ ಝಂಪೆತಾಳಗಳಲ್ಲಿ ರಚಿತವಾಗಿವೆ. ಇಲ್ಲಿಯೂ ಕೂಡ ಅರಸಿಯ ರೂಪು, ಲಾವಣ್ಯ, ವೈಭವ, ವಿದ್ಯೆ, ಗುಣಗಳನ್ನು ಹೊಗಳಲಾಗಿದೆ.

ಕವಿಯು, ಅರಸಿಯ ದಾನಗುಣವನ್ನು ಈ ಸಾಂಗತ್ಯ ಕೃತಿಯಲ್ಲಿ ಹಾಡಿ ಹೊಗಳಿರುವನಲ್ಲದೆ, ಬಿಡಿ ಕೀರ್ತನೆಗಳಲ್ಲಿಯೂ ಇವಳು ಹಲವರನ್ನು ಪೋಷಿಸಿದವಳೆಂದು ಹಲವಾರು ಬಗೆಯಲ್ಲಿ ಈ ರೀತಿ ತಿಳಿಸಿದ್ದಾನೆ:

**ಕವಿ ಕೇಶವ :** ಸಾಂಗತ್ಯದಲ್ಲಿ ರಚಿತವಾಗಿರುವ ಈ ಕೃತಿಯನ್ನು ರಚಿಸಿದ ಕವಿ ಕೇಶವ ತನ್ನ ಹೆಸರನ್ನು 'ಶ್ರೀ ವೇಲಾಪುರಿವಾಸಂ ಶ್ರೀವನಿತಾಧೀಶ ಸೌಮ್ಯ ಕೇಶವರಾಯ' ಎಂದು ಹೇಳಿಕೊಂಡಿದ್ದಾನೆ. ಅರಸಿಯನ್ನು ಕುರಿತು ರಚಿಸಿರುವ ಕೀರ್ತನೆಯೊಂದರಲ್ಲಿ ತನ್ನನ್ನು ಶ್ರೀವೈಷ್ಣವ ವಿದ್ವಾಂಸನೆಂದು ಕರೆದುಕೊಂಡಿದ್ದಾನೆ. ಅಲ್ಲದೆ ವೈಕುಂಠದಾಸರ ಮೊಮ್ಮಗನೆಂದು ಪರಿಚಯಿಸಿಕೊಂಡಿದ್ದಾನೆ.

ಹದಿನೆಂಟನೆಯ ಶತಮಾನದ ಕೇಶವನೆಂಬ ಕವಿಯನ್ನು ಕವಿಚರಿತೆಕಾರರು ಕರ್ಣಾಟಕ ಕವಿಚರಿತೆಯ ಮೂರನೆಯ ಸಂಪುಟದಲ್ಲಿ ಉಲ್ಲೇಖಿಸಿದ್ದಾರೆ[೩೪]. ಇಲ್ಲಿ ಈ ಕವಿಯು ರಚಿಸಿರುವ 'ತಿರುವೇಂಗಡಾಚಾರ್ಯ ಶತಕ ಎಂಬ ಶತಕಪಂಚಕ ಕೃತಿಯನ್ನು ಪರಿಚಯಿಸುತ್ತಾ ಈತನ ಕಾಲವನ್ನು ಕ್ರಿ.ಶ.೧೭೫೦ ಎಂದು ತಿಳಿಸಿದ್ದಾರೆ, ಅರಸಿ ಗೌರಮ್ಮಣ್ಣಿಯ ಕಾಲವೂ ಇದೇ ಆಗಿದೆ. ಅಲ್ಲದೆ ಕವಿಚರಿತೆಕಾರರು ತಿಳಿಸಿರುವ ಕೇಶವ ಕವಿಯು ಕೂಡ ಮೇಲುಕೋಟೆಯವನಾದ್ದರಿಂದ ಗೌರಮ್ಮಣ್ಣಿ ಚರಿತೆಯನ್ನು ರಚಿಸಿರುವ ಕವಿ ಇವನೇ ಆಗಿದ್ದಾನೆ. ಕವಿಯು ತನ್ನನ್ನು 'ಆದಿಕೇಶವ ಪಾದಪದ್ಮಮಧುಕರ' ಎಂದು ಕರೆದುಕೊಂಡಿದ್ದಾನೆ.

ರಾಣಿಯೋರ್ವಳನ್ನು ಕುರಿತಾಗಿ ರಚಿಸಿರುವ ಅಪರೂಪದ ಕೃತಿ ಇದಾಗಿದೆ. ರಾಣಿ ಗೌರಮ್ಮಣ್ಣಿಯು ಸಾಹಿತ್ಯಕ್ಕೆ ಪ್ರೋತ್ಸಾಹ ನೀಡಿ, ಕೃತಿರಚನೆಗೆ ಪ್ರೇರಣೆಯಾಗಿರುವುದಲ್ಲದೆ ಅವಳ ಬಣ್ಣನೆ ಹಾಗೂ ದೈನಂದಿಕ ವಿಚಾರವೇ ಕಾವ್ಯದ ವಸ್ತುವಾಗಿದೆ. ರಾಜನನ್ನು ನಾಯಕನ್ನಾಗಿಸಿ ಕಾವ್ಯ ರಚಿಸಿರುವುದರ ಉದಾಹರಣೆಗಳು ಸಾಕಷ್ಟು ದೊರಕುತ್ತವೆ. ಆದರೆ ರಾಣಿಯೋರ್ವಳನ್ನು ಕುರಿತಾಗಿ ರಚಿತವಾಗಿರುವ ಕಾವ್ಯ ಬಹಳ ಅಪರೂಪವಾಗಿದೆ. ಶಾಸನ ಸಾಹಿತ್ಯಗಳಲ್ಲಿ ಒಂದೆರಡು ವೃತ್ತ ಅಥವಾ ಕಂದಪದ್ಯಗಳಲ್ಲಿ ಅರಸಿಯರನ್ನು ವರ್ಣಿಸಿರುವುದು ಕಂಡುಬರುತ್ತದೆ. ಆದರೆ ಇಷ್ಟು ಸುದೀರ್ಘವಾದ ಕೃತಿ ಅರಸಿಯ ಬಣ್ಣನೆಗಾಗಿಯೇ ರಚಿತವಾಗಿರುವುದು ಇದೊಂದೆ ಕಾವ್ಯ ಎನ್ನಬಹುದು.

**ಚೆಲುವಾಜಮ್ಮಣ್ಣಿ ಹಾಗೂ ದೇವಾಜಮ್ಮಣ್ಣಿ**

ಚೆಲುವಾಜಮ್ಮಣ್ಣಿ ಹಾಗೂ ಸೀತಾವಿಲಾಸದ ದೇವಾಜಮ್ಮಣ್ಣಿಯರು ಕ್ರಿ.ಶ.೧೭೯೪ ರಿಂದ ಕ್ರಿ.ಶ.೧೮೬೮ರ ಕಾಲಾವಧಿಯಲ್ಲಿ ಆಳ್ವಿಕೆ ನಡೆಸಿದ ಮುಮ್ಮಡಿ ಕೃಷ್ಣರಾಜ ಒಡೆಯರ ಅರಸಿಯರು. ಮುಮ್ಮಡಿಯವರ ಕಾಲದಲ್ಲಿ ಸಾಹಿತ್ಯ ಕೃಷಿ ಬಲು ಹುಲುಸಾಗಿ ಬೆಳೆದು ಬಂದಿದೆ. ಇದು ರಾಜಕೀಯ, ಸಾಮಾಜಿಕ, ಔದ್ಯೋಗಿಕ, ವಿದ್ಯಾಕ್ಷೇತ್ರ ಮೊದಲಾದ ರಂಗಗಳಲ್ಲಿ ಬದಲಾವಣೆಗೆ ತೆರೆದುಕೊಳ್ಳುತ್ತಿದ್ದಂತ ಸಂಧಿಕಾಲ. ಈ ಸಮಯದಲ್ಲಿ ಭಾಗವತ ಕೃಷ್ಣಸ್ವಾಮಿಯು ೧೮೪೯ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ ಮಹಿಷಿಯರಾದ ರಮಾವಿಲಾಸದ ಚೆಲುವಾಜಮ್ಮಣ್ಣಿ, ಸೀತಾವಿಲಾಸದ ದೇವಾಜಮ್ಮಣ್ಣಿಯವರ ಆಜ್ಞಾನುಸಾರ 'ವಾಸಿಷ್ಠರಾಮಾಯಣ ಟೀಕೆ'ಯನ್ನು ಬರೆದಿರುವುದಾಗಿ ತಿಳಿಸಿದ್ದಾರೆ[೩೫].

ಕುಮಾರವ್ಯಾಸನು "ತಿಣುಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ ತಿಂತಿಣಿಯ ರಘುವರ ಚರಿತೆಯಲಿ ಕಾಲಿಡಲು ತೆರಪಿಲ್ಲ" ಎಂದು ಕನ್ನಡದಲ್ಲಿ ಈಗಾಗಲೇ ಸಾಕಷ್ಟು ರಾಮಾಯಣ ಕೃತಿಗಳಿವೆ ಎಂದು ಹೇಳಿರುವ ಗ್ರಂಥಗಳ ಸಾಲಿಗೆ ಈ ವಾಸಿಷ್ಠರಾಮಾಯಣ ಟೀಕೆಯು ಮತ್ತೊಂದು ಸೇರ್ಪಡೆಯಾಗಿದೆ. ಆದರೂ

ನಿರೂಪಣೆ, ಕಥಾಶೈಲಿ ಮೊದಲಾದ ತಂತ್ರಗಾರಿಕೆಯಿಂದ ಒಂದೇ ವಸ್ತುವನ್ನು ಹೊಂದಿದ ವಿಭಿನ್ನ ಕೃತಿಗಳು ತಮ್ಮದೇ ಆದ ಮಹತ್ವವನ್ನು ಹೊಂದಿರುವಂತೆ ಈ ಕೃತಿಯೂ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿರುತ್ತದೆ. ಎಲ್ಲಕ್ಕಿಂದ ಮುಖ್ಯವಾಗಿ ಅರಸಿಯರ ಆದೇಶದಂತೆ, ಅವರ ಪೋಷಿತ ಕವಿಯಿಂದ ರಚಿತವಾಗಿರುವುದು ಪ್ರಸ್ತುತ ಮುಖ್ಯವಾದ ಸಂಗತಿ ಎನಿಸಿದೆ.

**ಹಸ್ತಪ್ರತಿಗಳು:** ಕೃತಿಗಳನ್ನು ಬರೆಸುವುದಷ್ಟೇ ಅಲ್ಲದೆ, ಈಗಾಗಲೇ ರಚಿತವಾದ ಕೃತಿಗಳನ್ನು ಪ್ರತಿಮಾಡಿಸುವ ಕೆಲಸವನ್ನೂ ಅರಸಿಯರು ಮಾಡುತ್ತಿದ್ದರೆಂಬುದು ಈ ಹಿಂದೆಯೇ ಕಂಡಿದ್ದೇವೆ. ಜೈನ ಧರ್ಮೀಯ ಅರಸಿಯರು ಇಂಥ ಕೃತಿಗಳನ್ನು ಪ್ರತಿಮಾಡಿಸಿ ಶಾಸ್ತ್ರದಾನ ಮಾಡಿದರೆ, ಜೈನೇತರರು ತಮ್ಮ ಅಭ್ಯಾಸಕ್ಕಾಗಿ ಪ್ರತಿಮಾಡಿಸಿಕೊಳ್ಳುತ್ತಿದ್ದರು. ಅಂಥದ್ದೊಂದು ಕೃತಿ ದಿವ್ಯಸೂರಿಚರಿತೆ. ಇದರ ಒಂದು ಹಸ್ತಪ್ರತಿಯಲ್ಲಿ **'ಚಿಕ್ಕದೇವರಾಯನ** ಮಹಿಷಿಯಾದ **ಗೌರಮ್ಮಣ್ಣಿಯ** ಆಜ್ಞಾನುಸಾರ ತಿಮ್ಮಯ್ಯಂಗಾರ್ಯನಿಂದ ವಿರೋಧಿ ಕೃತುವರ್ಷದಲ್ಲಿ ಪ್ರತಿಮಾಡಲ್ಪಟ್ಟಿತೆಂದು' ತಿಳಿಸಿದೆ. ಇವಳು ಈ ಹಿಂದೆ ಹೇಳಿದ ಕೃಷ್ಣರಾಜೇಂದ್ರನ ಅರಸಿ ಗೌರಮ್ಮಣ್ಣಿಗಿಂತ ಭಿನ್ನವಾದವಳು. ಇವಳು ಪ್ರಸಿದ್ಧ ಅರಸು ಚಿಕ್ಕದೇವರಾಯನ ಕಿರಿಯರಸಿ.

ಇದೇ ಪ್ರಕಾರ ಅರಸು ಚಿಕ್ಕದೇವರಾಯನ ಮಗಳು ಅಮೃತಾಜಮ್ಮಣ್ಣಿಯು ಅಧ್ಯಯನಕ್ಕೆಂದು ಕೆಲವು ಕೃತಿಗಳನ್ನು ಪ್ರತಿಮಾಡಿಸಿಕೊಂಡಿರುವ ವಿಚಾರವೂ ತಿಳಿದು ಬರುತ್ತದೆ.

ಚಿಕ್ಕ ಅಮೃತಾಜಮ್ಮಣ್ಣಿ ಎಂದು ಕರೆಯಲ್ಪಟ್ಟಿರುವ ಇವಳು ಚನ್ನರಾಜಯ್ಯನವರ ಮಗ ಮರ್ರೆಯ ಎಂಬುವ ಲಿಪಿಕಾರನಿಂದ ಬಾಣಭಟ್ಟನ ಸಂಸ್ಕೃತ 'ಕಾದಂಬರಿ'ಯ ಕನ್ನಡ ಗದ್ಯನುವಾದ ಕೃತಿಯನ್ನೂ, ಭಾಮಿನಿ ಷಟ್ಪದಿಯಲ್ಲಿನ ಭಾಗವತದ ಒಂದು ಭಾಗ 'ಗಜೇಂದ್ರ ಮೋಕ್ಷ'ವನ್ನೂ ಪ್ರತಿ ಮಾಡಿಸಿಕೊಂಡಿದ್ದಾಳೆ[೩೬].

ಎಸ್.ಜಿ.ನರಸಿಂಹಾಚಾರ್ ಮತ್ತು ಮಂ.ಆ.ರಾಮಾನುಜ ಅಯ್ಯಂಗಾರ್ ಅವರು ಕರ್ಣಾಟಕ ಕಾವ್ಯಕಲಾನಿಧಿ ಮಾಲೆಯ ಮೂರನೆಯ ಕೃತಿಯಾಗಿ ೧೯೦೧ರಲ್ಲಿ ಮೈಸೂರಿನಿಂದ ಪ್ರಕಟಿಸಿದ 'ಕನ್ನಡ ವಚನ ಕಾದಂಬರಿ' ಇದೇ ಆಗಿದೆ (೧೯೨೩ ರಲ್ಲಿ ದ್ವಿತೀಯ ಮುದ್ರಣ ಪ್ರಕಟವಾಗಿದೆ). ಕನ್ನಡ ಗದ್ಯ ಕಾದಂಬರಿಯ ರಚನೆಯ ಕಾಲವನ್ನು ಇಲ್ಲಿ ಹೇಳಿಲ್ಲ. ಇದು ಅನುವಾದಿತ ಕೃತಿಯಾದರೂ ಮುದ್ರಾರಾಕ್ಷಸನಿಗಿಂತಲೂ ಪೂರ್ವದ ಗದ್ಯ ಕೃತಿಯಾಗಿದೆ ಎನ್ನುವುದನ್ನು ಯಾರೂ ಗಮನಿಸಿಲ್ಲ. ಪ್ರಾಚೀನ ಸಾಹಿತ್ಯದಲ್ಲಿ ಗದ್ಯಕೃತಿಗಳೇ ಕಡಿಮೆ ಎಂಬ ಹೇಳಿಕೆ ಇರುವಾಗ ರಾಜಕುಮಾರಿಯೋರ್ವಳ ಸಾಹಿತ್ಯ ಪ್ರೇಮದಿಂದ ಇಂಥ ಒಂದು ಕೃತಿಯು ಇಂದಿಗೆ ಉಳಿದು ಬಂದಿರುವುದು ಗಮನಾರ್ಹವೂ ಉಲ್ಲೇಖಾರ್ಹವೂ ಆಗಿದೆ.

ಅಮೃತಾಜಮ್ಮಣ್ಣಿಯು ಕಾದಂಬರಿಯ ಗದ್ಯಾನುವಾದ, ಗಜೇಂದ್ರಮೋಕ್ಷ ಕೃತಿಗಳಲ್ಲದೆ, ರಾಮನ ಸಾಂಗತ್ಯ ಹಾಗೂ ಅಪ್ರತಿಮವೀರಚರಿತೆ ಕೃತಿಗಳನ್ನೂ ಲಿಪಿಮಾಡಿಸಿಕೊಂಡಿದ್ದಾಳೆ ಎಂದು ಇನ್ನೂ ಕೆಲವು ಹಸ್ತಪ್ರತಿಗಳ ಪುಷ್ಪಿಕೆಗಳಿಂದ ತಿಳಿದು ಬರುತ್ತದೆ[೩೭]. ಮದ್ರಾಸಿನ ಗೌರ್ನಮೆಂಟ್ ಓರಿಯಂಟಲ್ ಮ್ಯಾನುಸ್ಕ್ರಿಪ್ಟ್ಸ್ ಲೈಬ್ರರಿಯ ಭಂಡಾರದಲ್ಲಿ ರಾಜಕುಮಾರಿ ಅಮೃತಾಜಮ್ಮಣ್ಣಿಗೆ ಬರೆದಿರುವ ಬಿನ್ನಹ ಪತ್ರ ಒಂದು ದೊರೆತಿದೆ. ಈ ಪತ್ರದಲ್ಲಿ ಅಪ್ರತಿಮ (ವೀರ ಚರಿತೆ) ಹಾಗೂ ಕನ್ನಡ ಕಾದಂಬರಿಯನ್ನು ಲಿಪಿಮಾಡಿಕೊಟ್ಟದ್ದಕ್ಕಾಗಿ ತನಗೆ ಈ ವರೆಗೆ ಸಂದಾಯವಾದ ಹಣ ಹಾಗೂ ಬಾಕಿ ಇರುವ ಹಣದ ಕುರಿತಾಗಿ ಲಿಪಿಕಾರನೊಬ್ಬ ಬಿನ್ನಹ ಮಾಡಿಕೊಂಡಿದ್ದಾನೆ[೩೮].

ಅಂತಃಪುರದ ಮಹಿಳೆಯರು ಕಾವ್ಯಾಭ್ಯಾಸ ನಡೆಸುತ್ತಿದ್ದುದು ಹಾಗೂ ಪ್ರಾಚೀನ ಕೃತಿಗಳನ್ನು ಪ್ರತಿಮಾಡಿಸಿಕೊಳ್ಳುತ್ತಿದ್ದ ಹಲವಾರು ಪ್ರಕರಣಗಳು ಹಸ್ತಪ್ರತಿ ಪುಷ್ಪಿಕೆಗಳಿಂದ ತಿಳಿದುಬರುತ್ತದೆ. ಈ ಮೇಲೆ ಉಲ್ಲೇಖಿಸಿರುವ ಅಮೃತಾಜಮ್ಮಣಿಗೆ ಬರೆದ ಬಿನ್ನಹ ಪತ್ರದಲ್ಲಿ ಲಿಪಿಕಾರ "ವರದಮ್ಮನವರ ಕೂಡೆಹೇಳಿಯಿದ್ದೇನೆ" ಎಂದು ತಿಳಿಸಿದ್ದಾನೆ. ಬಹುಶಃ ಈಕೆ ಮೇಲ್ವಿಚಾರಕಿ ಇರಬಹುದು. ಲಿಪಿಕಾರರಿಂದ ಪ್ರತಿಮಾಡಿಸುವ, ಅದನ್ನು

ನೋಡಿಕೊಳ್ಳುವ ವ್ಯವಸ್ಥೆ ಹಾಗು ಅದರ ಮೇಲ್ವಿಚಾರಕರು ಮೊದಲಾದ ವಿಚಾರಗಳ ಮೇಲೂ ಹಸ್ತಪ್ರತಿಯ ಪುಷ್ಪಿಕೆಯ ಕೆಲವು ಮಾಹಿತಿಗಳು ಬೆಳಕು ಚೆಲ್ಲುತ್ತವೆ.

**ಮುದ್ರಣ:** ೧೯ನೆಯ ಶತಮಾನದ ಅಂತ್ಯದಲ್ಲಿದ್ದ ಮೈಸೂರಿನ ಅರಸಿ ವಾಣಿವಿಲಾಸ ಸನ್ನಿಧಾನ – **ಕೆಂಪುನಂಜಮ್ಮಣ್ಣಿ**ಯವರು ಅಪ್ರಾಪ್ತವಯಸ್ಕ ಮಗ ನಾಲ್ವಡಿ ಕೃಷ್ಣರಾಜ ಒಡೆಯರ್‌ನ ಪರವಾಗಿ ೧೮೯೫–೧೯೦೧ರ ವರೆಗೂ ಆಡಳಿತ ನಡೆಸಿ, ಇಂದಿಗೂ ಸ್ಮರಿಸಿಕೊಳ್ಳುವಂತಹ ಹಲವಾರು ಸಮಾಜೋಪಯೋಗಿ ಕೆಲಸಗಳನ್ನು ನಡೆಸಿದವಳು. ಮಹಿಳೆಯರಿಗಾಗಿ ಪ್ರತ್ಯೇಕ ಶಾಲಾ–ಕಾಲೇಜು (ಮಹಾರಾಣಿ ಕಾಲೇಜು, ಮೈಸೂರು ಹಾಗೂ ಬೆಂಗಳೂರು) ವಿದ್ಯಾರ್ಥಿ ವಸತಿಗೃಹ ನಿರ್ಮಾಣ, ಚಿತ್ರದುರ್ಗದ ಬಳಿ ವಾಣಿವಿಲಾಸ ಸಾಗರ ಅಣೆಕಟ್ಟು, ವಿಶ್ವದ ಪ್ರಸಿದ್ಧ ವಿಜ್ಞಾನ ಸಂಸ್ಥೆಗಳಲ್ಲೊಂದಾದ ಬೆಂಗಳೂರಿನ ಟಾಟಾ ಇನ್ಸ್ಟಿಟ್ಯೂಟ್ ಸ್ಥಾಪನೆಗೆ ಧನಸಹಾಯ, ಆಸ್ಪತ್ರೆ, ಭೀಕರ ಸಾಂಕ್ರಾಮಿಕ ರೋಗ ಪ್ಲೇಗ್ ನಿವಾರಣೆಗೆ ಹಲವಾರು ಚಟುವಟಿಕೆ, ನಗರ ಪ್ರದೇಶಗಳಲ್ಲಿ ಹೊಸ ಬಡಾವಣೆಗಳ ನಿರ್ಮಾಣ, ಬೀರೂರು–ಶಿವಮೊಗ್ಗಗಳ ನಡುವೆ ರೈಲು ಸಂಚಾರಕ್ಕೆ ಅನುವು, ಕಾವೇರಿ ವಿದ್ಯುಚ್ಛಕ್ತಿ ಯೋಜನೆ, ಬೆಂಗಳೂರಿನ ವಿಕ್ಟೋರಿಯಾ ಆಸ್ಪತ್ರೆ ನಿರ್ಮಾಣ, ಇವುಗಳೊಂದಿಗೆ ಕೆಲವೊಂದು ಕಾವ್ಯಗಳ ಮುದ್ರಣಕ್ಕೆ ಕಾರಣರಾಗಿ ಆ ಮೂಲಕ ಸಾಹಿತ್ಯ ಪೋಷಣೆ ನಡೆಸಿದವರು. ಇವರ ಆಜ್ಞಾನುಸಾರ ಮುದ್ರಣಕಂಡ ಕೆಲವು ಗ್ರಂಥಗಳಲ್ಲಿ ಮೈಸೂರಿನ ಅರಸಿ ಚೆಲುವಾಂಬೆಯ ಕೃತಿಗಳೂ ಸೇರಿದ್ದು ಇದರ ಮುನ್ನುಡಿಯಲ್ಲಿ ವಾಣಿವಿಲಾಸದ ಮಹಾರಾಣಿಯವರನ್ನು ಮಹಾಮಾತೃಶ್ರೀ ಮಹಾರಾಜ್ಞಿ ಎಂದು ಕರೆದು ಅವರ ಆಜ್ಞಾನುಸಾರ ಅರಮನೆಯ ವಿದ್ವಾಂಸರಾದ ಜಯರಾಯಾಚಾರ್ಯ ಎಂಬುವವರು ಚೆಲುವಾಂಬೆಯ ಕೃತಿ ವರನಂದಿಕಲ್ಯಾಣ ಮತ್ತು ವೆಂಕಟಾಚಲ ಮಹಾತ್ಮಂ ಲಾಲಿಪದ ಕೃತಿಗಳನ್ನು ಪರಿಷ್ಕರಿಸಿ ಗ್ರಾಜುಯೇಟ್ಸ ಪ್ರೆಸ್‌ನಲ್ಲಿ ಅಚ್ಚು ಹಾಕಿಸಲಾಯಿತು ಎಂದು ತಿಳಿಸಿದೆ. ಶಾ.ಶ.೧೮೨೨ರಲ್ಲಿ ನಡೆದ ಈ ಮುದ್ರಣದ ಮುನ್ನುಡಿಯಲ್ಲಿ ಮಹಾರಣಿಯವರನ್ನು ಕುರಿತು

**ಶ್ರುತಿಗಗನಗಗನಭೂತೋ**
**ನ್ಮಿತ ಕಲ್ಯಾಷಾಢ ಕೃಷ್ಣ ಹರಿವಾಸರದೊಳ್**
**ಕೃತಿಯಿದು ಮಹಾರಾಣಿಯರಾ**
**ಣತಿಯಿಂದಾದತ್ತು ಮುದ್ರಿತಂ ವಿಶ್ರುತಮುಂ॥**

ಎಂದು ಈ ಕೃತಿ ಮುದ್ರಣಕ್ಕೆ ಕಾರಣರಾದ ಮಹಾರಾಣಿಯವರನ್ನು ಕುರಿತು ಶ್ರೀಜಯರಾಯಾಚಾರ್ಯರೆಂಬ ವಿದ್ವಾಂಸರು ಕಂದಪದ್ಯವನ್ನು ರಚಿಸಿದ್ದಾರೆ.

**ಕಿತ್ತೂರಿನ ರಾಣಿ ಚೆನ್ನಮ್ಮ – ಕಿತ್ತೂರಿನ ಆಸ್ಥಾನ ಕವಿಗಳು**

ಸುಮಾರು ೧೬ನೆಯ ಶತಮಾನದಲ್ಲಿ ಸ್ಥಾಪಿತವಾದ ಕಿತ್ತೂರು ಸಂಸ್ಥಾನವು ಮೊದಲು ವಿಜಾಪುರದ ಸುಲ್ತಾನರು, ಆನಂತರ ಮರಾಠರು, ಸವಣೂರಿನ ನವಾಬರು, ಹೈದರಾಲಿ ಮತ್ತು ಟಿಪ್ಪು ಮೊದಲಾದವರ ಒಡೆತನವನ್ನು ಒಪ್ಪಿಕೊಂಡು ಕೆಲಕಾಲ ಅಧೀನದಲ್ಲಿ, ಕೆಲಕಾಲ ಸ್ವತಂತ್ರವಾಗಿ ಆಳ್ವಿಕೆ ನಡೆಸಿತು.

ಈ ಮನೆತನದ ಪ್ರಸಿದ್ಧರಾಣಿ ಚೆನ್ನಮ್ಮ. ಕಾಕತಿಯ ದೇಸಾಯಿ ಧೂಳಪ್ಪ ಗೌಡರ ಮಗಳು ಚೆನ್ನಮ್ಮ ಜನಿಸಿದ್ದು ಕ್ರಿ.ಶ.೧೭೭೮ರಲ್ಲಿ. ಕಿತ್ತೂರು ಚೆನ್ನಮ್ಮ ಪತಿಯ ಅನುಪಸ್ಥಿತಿಯಲ್ಲಿ (ಮೊದಲು ಟಿಪ್ಪುವಿನ ಆನಂತರ ಮರಾಠರ ಬಂಧಿಯಾಗಿದ್ದ ಸಂದರ್ಭದಲ್ಲಿ) ಆಳ್ವಿಕೆ ನಡೆಸುತ್ತಿದ್ದು, ಪತಿಯ ಮರಣಾನಂತರ ಮಲಮಗ ರುದ್ರಸರ್ಜನ ಆಳ್ವಿಕೆಯಲ್ಲಿಯೂ ಸಲಹಾಗಾರ್ತಿಯಾಗಿದ್ದು, ಅವನ ಮರಣಾನಂತರ ಅವನ ದತ್ತುಮಗನ ಪರವಾಗಿ ಕೆಲವು ತಿಂಗಳು ನೇರ ಆಳ್ವಿಕೆ ನಡೆಸಿದ್ದಾಳೆ. ಅಪಾರ ಸಂಖ್ಯೆಯಲ್ಲಿ ರಚಿತವಾಗಿರುವ ಇವಳ ಕುರಿತಾದ ಸಾಹಿತ್ಯ ಇವಳ ಜನಪ್ರಿಯತೆಯನ್ನು ಸಾರುತ್ತದೆ. ಇವುಗಳಲ್ಲಿ ಅನೇಕ ಕೃತಿಗಳು ಇವಳ ಜೀವಿತಾವಧಿಯಲ್ಲಿಯೇ ರಚಿತವಾಗಿವೆ.

ಕೆಲವು ಅನಾಮಧೇಯ ಕವಿಗಳಿಂದ ರಚಿತವಾಗಿದ್ದರೆ, ಮತ್ತೆ ಕೆಲವು ಪ್ರಸಿದ್ಧ ಕವಿಗಳ ರಚನೆಗಳಾಗಿವೆ. ಕಿತ್ತೂರಿನ ಆಸ್ಥಾನದಲ್ಲಿ ಅನೇಕ ಕವಿಗಳಿದ್ದುದನ್ನು ಗುರುತಿಸಬಹುದು.

ಕಿತ್ತೂರು ಸಂಸ್ಥಾನದ ಕವಿಗಳಲ್ಲಿ ರುದ್ರಕವಿ, ಅಮೃತೇಶ, ಜವಳಿ ಚನ್ನಬಸವ, ಕೊಳ್ಳಿ ರಂಗಾಚಾರ್ಯ, ವೆಂಗಿ ಚನ್ನಬಸಪ್ಪ, ಮಾಗಡಿ (ಮಾಗುಂಡಿ)ಬಸವ, ದೇವರ ಶೀಗಿಹಳಿ, ರುದ್ರಗೌಡ ಬೆಡಗೇರಿ, ಶಿವಲಿಂಗ ಶಾಸ್ತ್ರಿ, ಚೌಬಾರಿ ಅಡಿವೆಪ್ಪ, ಹೊಂಗಲದ ಬಸವ ಮುಂತಾದ ಕವಿ, ವಿದ್ವಾಂಸರಿದ್ದರೆಂದು ತಿಳಿದುಬರುತ್ತದೆ. ಇವರಲ್ಲಿ ಕರಬಸಪ್ಪ ಎಂಬಾತ ವಚನಸಾರ ವೇದಾಂತ ಪಂಡಿತನೆನಿಸಿದ್ದ. "ಕಿತ್ತೂರಿನ ಆಸ್ಥಾನದಲ್ಲಿ ೨೨ ಜನ ಕವಿಗಳಿದ್ದರೆಂದು ದಾಖಲೆಯೊಂದು ತಿಳಿಸುತ್ತದೆ"[೩೯]

ಈ ಕವಿಗಳು ರಚಿಸಿರುವ ಲಾವಣಿ ದುಂದುಭಿ, ದುಂದುಮೆ, ಹೋಳಿಪದ, ಚೌಪದಿ ಮೊದಲಾದ ಪ್ರಕಾರದ ಸಾಹಿತ್ಯ ಕಾಣಬಹುದು. ಚೆನ್ನಮ್ಮ ಒಂದು ಸಣ್ಣ ಪ್ರಾಂತ್ಯದ ರಾಣಿಯಾಗಿದ್ದು, ಅವಳು ಸ್ವತಂತ್ರವಾಗಿ ಆಳ್ವಿಕೆ ನಡೆಸಿದ್ದು ಕೆಲವೇ ತಿಂಗಳಾಗಿದ್ದರೂ, ಇತಿಹಾಸದಲ್ಲಿ ಅವಳ ಹೆಸರು ಚಿರಸ್ಥಾಯಿಯಾಗಿ ಉಳಿಯಲು, ಬ್ರಿಟಿಶರೊಂದಿಗೆ ಇವಳ ಹೋರಾಟದ ವೀರ ಕಥೆಯನ್ನು ಮನಮುಟ್ಟುವಂತೆ ವಿಧವಿಧವಾಗಿ ಬಣ್ಣಿಸಿರುವ ಈ ಕವಿಗಳ ಕೃತಿಗಳೇ ಕಾರಣವಾಗಿದೆ ಎನ್ನಬಹುದು.

**ಕಿತ್ತೂರಿನ ಕವಿಗಳು**

**ರುದ್ರಕವಿ** ಮುಧೋಳದ ಲೋಕಾಪುರದವನು. ಈತ ಹುಟ್ಟುಕವಿಯಾಗಿದ್ದ. ಕಿತ್ತೂರು ಮಲ್ಲಸರ್ಜನ ಲಾವಣಿ, ಸೂಳೆ–ಸರ್ಜರ ಪ್ರಣಯ ಕೃತಿಗಳನ್ನೂ ಈತ ಬರೆದಿದ್ದಾನೆ.

ಕಿತ್ತೂರು ಮಲ್ಲಸರ್ಜನ ಲಾವಣಿಯು ೯೩ ಪದ್ಯಗಳನ್ನೊಳಗೊಂಡಿದೆ. ಮಲ್ಲಸರ್ಜನ ಜೀವನದ ವಿಚಾರಗಳನ್ನು ೫೫ ಚೌಕಗಳ ಲಾವಣಿಯಲ್ಲಿ ವರ್ಣಿಸಲಾಗಿದೆ. ಲಾವಣಿಯ ಮುಂದಿನ ಭಾಗದಲ್ಲಿ ಚೆನ್ನಮ್ಮನ ವೃತ್ತಾಂತ ವರ್ಣಿಸಲಾಗಿದೆ.

ಮಲ್ಲಸರ್ಜನ ಮರಣಾ ನಂತರ ೭ ವರ್ಷಗಳಲ್ಲಿ ಅವನ ಮೂವರೂ ಮಕ್ಕಳೂ ಅವನನ್ನೇ ಹಿಂಬಾಲಿಸುತ್ತಾರೆ. ವಾರಸುದಾರರಿಲ್ಲದ ಈ ಸಂದರ್ಭದಲ್ಲಿ ಚೆನ್ನಮ್ಮ ರಾಜ್ಯಭಾರ ನಡೆಸುತ್ತಾಳೆ. ಈ ನಡುವೆ ಅತ್ತೆ ಸೊಸೆಯರಲ್ಲಿ ಮನಸ್ತಾಪ ಆರಂಭವಾಗುತ್ತದೆ. ಬ್ರಿಟೀಶರು ಅಪುತ್ರಕ ರಾಜ್ಯವನ್ನು ನುಂಗುವ ಹೊಂಚುಹಾಕುತ್ತಾರೆ. "ರಾಜ್ಯವನ್ನು ನಾವು ಆಳುತ್ತೇವೆ, ಅರಸು ಮನೆತನದವರು ಉಂಬಳಿ ಪಡೆದು ಸುಖವಾಗಿರುವುದು" ಎಂದು ಹೇಳಿದ ಬ್ರಿಟೀಶರ ಮಾತನ್ನು ಸರದಾರರೊಂದಿಗೆ ಸಮಾಲೋಚನೆಯ ಮೇರೆಗೆ ತಿರಸ್ಕರಿಸಿದ ಪರಿಣಾಮ ಯುದ್ಧವನ್ನು ಎದುರಿಸುತ್ತಾಳೆ. ಕಿತ್ತೂರನ್ನು ಮುತ್ತಿ ಕೋಟೆಯನ್ನು ನಾಶಪಡಿಸಿ ಅರಮನೆಯನ್ನು ಪ್ರವೇಶಿಸಿದ ಆಂಗ್ಲರ ಸೇನೆ ಅತ್ತೆ ಚೆನ್ನಮ್ಮ, ಸೊಸೆ ವೀರಮ್ಮನನ್ನು ಬಂಧಿಸಿ ಸೆರೆಮನೆಯಲ್ಲಿಡುತ್ತಾರೆ. ಆರು ತಿಂಗಳವರೆಗೆ ಅರಮನೆಯ ಅಪಾರ ಸಂಪತ್ತನ್ನು ಬೆಳಗಾವಿಗೆ ಸಾಗಿಸುತ್ತಾರೆ ಎಂಬ ವಿವರಣೆಯನ್ನು ರುದ್ರಕವಿಯು ನೀಡಿದ್ದಾನೆ.

**ಮುನಿಪುರದ ನೀಲಕಂಠಾರ್ಯ**. ಈತನನ್ನು ಸಣ್ಣಾಟಗಳ ಜನಕನೆಂದು ಕರೆಯಲಾಗಿದೆ. ಈತನಿಗೆ ಸಣ್ಣಾಟ ಕಲಿಸಿದ ಗುರು ಬೈಲವಾಡದ ರಾಯಪ್ಪ. ಜಾನಪದ ಸಾಹಿತ್ಯದ ರುಚಿ ಹುಟ್ಟಿಸಿ ಕವನ ಕಟ್ಟಲು ಪ್ರೇರಣೆ ನೀಡಿದವರು ಗಂದಿಗವಾಡದ ಭಟ್ಟರು. ಸಂಸ್ಥಾನಕ್ಕೆ ಸಂಬಂಧಿ 'ಮಲ್ಲೇಂದ್ರ ಪೂಜಾವಿಲಾಸ, ಮಲ್ಲೇಂದ್ರ ಪೂಜಾವಿಲಾಸ ತಾರಾವಳಿ, ಮಲ್ಲೇಂದ್ರ ವಿಜಯ ಹಾಗೂ ಗಣೇಶೋತ್ಸವ ಎಂಬ ಐದು ದೊಡ್ಡಕಾವ್ಯಗಳಲ್ಲದೆ ಸುಮಾರು ೧೫೦ ಕವನಗಳನ್ನು ರಚಿಸಿದ್ದಾನೆ. ಇವನ ಹೆಸರಿನಲ್ಲಿ ೩೫ ಸಣ್ಣಾಟಗಳು ನೂರಾರು ಡೊಳ್ಳಿನ ಹಾಡು, ಮಹದೇವಿಯಕ್ಕ ಶ್ವೇತರಾಜ, ದಾಸಾರ್ಯರಾಜನ ಚರಿತೆ, ಪಂಚಾಕ್ಷರಿ ಮಹಾತ್ಮೆ, ಶ್ರೀನಿವಾಸ ದೇವಸೇನ, ಚೂಡಾಲಿ, ವೀರಸಂಗಮಾರ್ಯ, ತಿಲಕಾಂಬೆ, ಗುರುಭಕ್ತಭಂಡಾರಿ, ನಿಜಗುಣಶಿವಯೋಗಿ, ಧರ್ಮಸಾಮ್ರಾಜ್ಯ, ಸೌಂದರನಂಬಿ

ಮೌನೇಶ್ವರ ಚರಿತೆ, ಭಕ್ತ ಧ್ರುವಚರಿತೆ, ತಿರಕಾಂಬೆ ಚರಿತೆ, ಮೇದಾರ ಕೇತಯ್ಯ ಮೊದಲಾದವು ಜನಪ್ರಿಯ ಕೃತಿಗಳಾಗಿವೆ. ಕಿತ್ತೂರು ಸಂಸ್ಥನ ಸುಖ ಶಾಂತಿ ಸಮೃದ್ಧಿಯಿಂದ ಇದ್ದಂತ ಸಂದರ್ಭದಲ್ಲಿ ಶಾಶ.೧೭೩೬ (ಸಪ್ತಾದಶ ಶತದ ಮೇಲೆ ಮೂವತ್ತಾರನೆಯ ಭಾವದ) ಮಧುಕಾಲ ಸ್ಥಿತದ ದಶಮಿ ಶನಿವಾರ ಶುಭ ಮಹೂರ್ತದಲ್ಲಿ ೧೫೦ ಕಿತ್ತೂರು ಸಂಸ್ಥಾನದ ಹಾಡುಗಳನ್ನು ಈತ ರಚಿಸಿದುದಾಗಿ ತಿಳಿಸಿದ್ದಾನೆ[೮೦].

ಮಲ್ಲೇಂದ್ರ ಭಕ್ತಿ ತರಂಗಿಣಿ ಕೃತಿಯಲ್ಲಿ ಕಿತ್ತೂರು ಸಂಸ್ಥಾನದ ಧಾರ್ಮಿಕ ಆಚರಣೆಗಳನ್ನು ಕುರಿತು ೩೧೪ ಪದ್ಯಗಳಲ್ಲಿ ರಚಿಸಿದ್ದಾನೆ. ಮಲ್ಲೇಂದ್ರ ಪೂಜಾವಿಲಾಸ, ೧೬೫ ಪರಿವರ್ಧಿನಿ ಷಟ್ಪದಿಯಲ್ಲಿ ರಚಿತವಾದ ಈ ಕೃತಿ ಕೂಡ ಧಾರ್ಮಿಕ ವಿಧಿಗಳನ್ನು ಕುರಿತು ಹೇಳುತ್ತದೆ. ಮಲ್ಲೇಂದ್ರ ಪೂಜಾವಿಲಾಸ ತಾರಾವಳಿಯೂ ಗುರುಪೂಜೆ, ಜಂಗಮರಪೂಜಾ ವಿವರಗಳನ್ನು ನೀಡುತ್ತದೆ. ಮಲ್ಲೇಂದ್ರ ಮಾನಸೋಲ್ಲಾಸ ಕೃತಿಯು ಅರಮನೆಯ ವಿಚಾರಗಳನ್ನೂ, ರಾಜಮನೆತನದ ಧಾರ್ಮಿಕ ವಿಧಿಗಳನ್ನೂ, ಪುರಾಣದ ಶೈಲಿಯಲ್ಲಿ ನಿರೂಪಿತವಾಗಿರುವ ಕಿತ್ತೂರು ಸಂಸ್ಥಾನದ ಪೂರ್ವೇತಿಹಾಸದ ವಿಚಾರಗಳನ್ನು ತಿಳಿಸುತ್ತದೆ.

ಮಲ್ಲೇಂದ್ರ ವಿಜಯ ಕೃತಿಯು ಐತಿಹಾಸಿಕ ವಿಚಾರಗಳನ್ನು ತಿಳಿಸುತ್ತದೆ. ಟಿಪ್ಪು ಸುಲ್ತಾನನು ಮಲ್ಲಸರ್ಜನನ್ನು ಸೆರೆಹಿಡಿದು ಶ್ರೀರಂಗಪಟ್ಟಣದಲ್ಲಿ ಬಂಧಿಸಿಡುತ್ತಾನೆ. ಸೆರೆಯಿಂದ ಮಡಿವಾಳೆಪ್ಪನೆಂಬುವನೊಡನೆ ಹೊರಬರುತ್ತಾನೆ. ಈ ಸಂದರ್ಭದಲ್ಲಿ ಅರಸಿಯರು ಕೈಗೊಂಡ ಕಾರ್ಯ, ಅವರ ವ್ರತ–ಪೂಜಾದಿಗಳ ವಿವರಣೆಯೂ ಇಲ್ಲಿದೆ.

ಇದೇ ವಿಚಾರವನ್ನು ಮುನಿಪುರದ ನೀಲಕಂಠಾಚಾರ್ಯ ರಚಿಸಿರುವ ಗಣೇಶೋತ್ಸವ ಕಾವ್ಯದಲ್ಲಿಯೂ ಕಾಣುತ್ತೇವೆ. ಗಣೇಶೋತ್ಸವದ ವೈಭವವನ್ನು ವರ್ಣಿಸುವ ಈ ಕೃತಿಯು ಟಿಪ್ಪುವನ್ನು ಒಂದುಬಾರಿ ಹಿಮ್ಮೆಟ್ಟಿಸಿದರೂ ೧೭೮೫ರಲ್ಲಿ ಮತ್ತೊಮ್ಮೆ ಮುತ್ತಿಗೆ ಹಾಕಿದ ಟಿಪ್ಪು ಮಲ್ಲಸರ್ಜನನ್ನು ಸೆರೆಹಿಡಿದು ಕೊಪ್ಪಳದುರ್ಗಕ್ಕೆ ಒಯ್ದು ಬಂಧಿಸುತ್ತಾನೆ. ಅಲ್ಲಿದ್ದವರಿಗೆಲ್ಲಾ ಪ್ರತಿದಿವಸ ಅಚ್ಚೇರು ರಾಗಿಗೆ ಅಚ್ಚೇರು ಬೂದಿ ಸೇರಿಸಿ ಊಟ ಹಾಕಿಸುತ್ತಾನೆ. ಒಂದು ದಿನ ಮಧ್ಯಾಹ್ನ ಅಲ್ಲಿದ್ದ ನಾಲ್ಕಾರು ಪಹರೆಯವರನ್ನು ಕೊಂದು ಮಡಿವಾಳಪ್ಪನೊಂದಿಗೆ ಮಲ್ಲಸರ್ಜ ತಪ್ಪಿಸಿಕೊಂಡು ನದಿ ದಾಟಿ ಕೊಯಿಮತ್ತೂರು, ಶ್ರೀಶೈಲ, ಬಬಲೇಶ್ವರ ಮಾರ್ಗವಾಗಿ ಬಯಲುಹೊಂಗಲ ಕಿತ್ತೂರಿಗೆ ಬರುತ್ತಾನೆ.

ಕಿತ್ತೂರು ಅರಸರ ಕೋಲುಪದದಲ್ಲಿಯೂ ಮಡಿವಾಳಪ್ಪನೆಂಬ ನೆಚ್ಚಿನ ಬಂಟನ ಸಹಾಯದಿಂದ ಟಿಪ್ಪುವಿನ ಸೆರೆಯಲ್ಲಿದ್ದ ಮಲ್ಲಸರ್ಜ ಪಾರಾಗಿ ಬಂದ ವಿಚಾರವನ್ನೇ ವಿವರಿಸಲಾಗಿದೆ.

"ಒಡೆಯಳ ಚೆನ್ನವ್ವ ನಿನ್ನ.." ಎಂದು ಆರಂಭವಾಗುವ ಹಾಡಿನ ಸಾಲುಗಳು ಮಲ್ಲಸರ್ಜನ ಜೀವಿತಾವಧಿಯಲ್ಲಿಯೇ ಚೆನ್ನವ್ವನನ್ನು ಒಡೆಯಳೆಂದು ಕರೆದಿರುವುದನ್ನು ಕಾಣಬಹುದು.

**ಲೋಕೇಶ** ನೆಂಬ ಕವಿಯು ತನ್ನನ್ನು ಭೂನಾಥಕವಿ ಎಂದು ಕರೆದುಕೊಂಡಿರುವನು. ಈತ ಹಲವಾರು ಲಾವಣಿ, ದುಂದುಮೆಗಳನ್ನು ರಚಿಸಿದ್ದಾನೆ. ಅರಮನೆಯೊಂದಿಗೆ ಆತ್ಮೀಯ ನಿಕಟ ಸಂಬಂಧ ಹೊಂದಿದ್ದನೆಂಬುದು ಈತನ ಕೃತಿಗಳಿಂದ ತಿಳಿಯುತ್ತದೆ.

**(ಮಾಗುಂಡಿ) ಮಾಗಡಿ ಬಸವ:** ಈತ ೪೬ ಚೌಪದಗಳಿಂದ ಕೂಡಿದ ದುಂದುಮೆಯನ್ನು ರಚಿಸಿದ್ದಾನೆ. ಈತನ **'**ಕಿತ್ತೂರು ಕದನಗೀತೆ'ಯು ಕಿತ್ತೂರು ಕಾಳಗದ ಹೋಳಿ ಪದವೆಂದು ಖ್ಯಾತಿಗೊಂಡಿದೆ. ಕಿತ್ತೂರು ಕಾಳಗದ ಸಮಗ್ರ ಇತಿಹಾಸ ಇಲ್ಲಿ ರಚಿತವಾಗಿದೆ.

ಈ ಕದನಗೀತೆಯ ಪ್ರಕಾರ ಕಿತ್ತೂರು ರಾಜ್ಯ ನಮ್ಮದೆಂದು ನಿನ್ನ ಗಂಡ ಓಲೆ ಬರೆದು ಕೊಟ್ಟಿರುವನೆಂದು ಥ್ಯಾಕರೆ ಚೆನ್ನಮ್ಮನಿಗೆ ಹೇಳಿದ ಕೂಡಲೆ ಚೆನ್ನಮ್ಮ **"**ಇವನನ್ನು ಹೊರಗೆ ನೂಕಿರಿ**"** ಎಂದು ಹೇಳಿ ಅಗಸಿ ಬಾಗಿಲು ಹಾಕಿಸಿದ

ಬಳಿಕ ಯುದ್ಧ ಜರುಗಿತು. ಆ ಯುದ್ಧದಲ್ಲಿ ಥ್ಯಾಕರೆ ಮಡಿದ. ಈ ಸುದ್ದಿ ವಿಲಾಯತಿಗೆ ಮುಟ್ಟಿತು. ಇದನ್ನು ತಿಳಿದ ರಾಣಿ ಚೆನ್ನಮ್ಮ

**ಮುಚ್ಚಗ್ಯಾವಿಯ ಚಣ್ಣಾ ಮುಂಗೈಯ್ಯ ಸರಪಳಿ**
**ಬಿಚ್ಚಗತ್ತಿ ಸಾರವರಿಯವರು ಮಾ**
**ಹೆಚ್ಚಿನ ಮುಂಡಾಸ ಮೇಲೆ ಉಮ್ಮೆಗಂ**
**ಹೆಚ್ಚಿನ ಬಂಟರ ಕರಸಿ ಹೇಳಿದಳಾಗ॥**

ತನ್ನ ವೀರ ಬಂಟರಿಗೆ ಬಗೆಬಗೆಯ ಉಡುಗೊರೆ ಇತ್ತು ಸನ್ಮಾನಿಸಿದಳು. ಈ ವೇಳೆ ಹತ್ತು ಸಾವಿರ ದಂಡು ಒಟ್ಟುಗೂಡಿತು.

ಜಾರ್ಜ್ ಮಂಡೇಲ್ ಸಾಹೇಬರ ನೇತೃತ್ವದಲ್ಲಿ ಮಂಗಳವಾರ ಸಂಜೆ ಕಿತ್ತೂರಿಗೆ ಮುತ್ತಿಗೆ ಹಾಕಿತು. ಕಿತ್ತೂರು ಸೈನ್ಯದ ಆಟಾಟೋಪ ಪರಾಕ್ರಮದ ಎದುರು ಆಂಗ್ಲಸೈನ್ಯ ಮುಂದು ಓಟಕಿತ್ತಿತು. ಜಾರ್ಜ್ ಮಂಡೇಲ ಸಾಹೇಬ ಗಾಯಗೊಂಡನು. ಚೆನ್ನಮ್ಮನನ್ನು ಎದುರಿಸಿ ಗಾಯಗೊಂಡ ಜಾರ್ಜ್ ಮಂಡೇಲನನ್ನು ಜಾನಮಂಡೇಲ ಎಂದು ಕಿತ್ತೂರು ಪ್ರಜೆಗಳು ಕರೆದಿರುವರು. ಜಾರ್ಜ್ ಮಂಡೇಲ ಗಾಯಗೊಂಡ ಸುದ್ದಿ ಧಾರವಾಡಕ್ಕೆ ತಲುಪಲು ಮೈಸೂರು ದಂಡಿನೊಡನೆ ಚಾಪ್ಲಿನ್ ಸಾಹೇಬ ಕೋಟೆಗೆ ಮುತ್ತಿಗೆ ಹಾಕಿದ. ಕೋಟೆಯನ್ನು ಕೆಡವಿ ಕಿತ್ತೂರು ಮೇಲೆ ವಿಜಯ ಸಾಧಿಸಿದ. ಕಿತ್ತೂರಿನ ವೀರ ಗಜವೀರನ ಶೌರ್ಯಕ್ಕೆ ತತ್ತರಿಸಿದ. ಚಾಪ್ಲೆನ್ ತನ್ನ ಎಲ್ಲ ಬಲವನ್ನು ಒಗ್ಗೂಡಿಸಿ ಮೇಲುಗೈಯಾಗಿ ಅರಮನೆ ಪ್ರವೇಶಿಸಿದ. ರಾಣಿ ಚೆನ್ನಮ್ಮಳಿಂದ ರಾಜ್ಯವನ್ನು ಬರೆಯಿಸಿಕೊಂಡು ಹೊಂಗಲಕ್ಕೆ ಅವಳನ್ನು ಸಾಗಿಸಿದ ವರೆಗಿನ ಚಿತ್ರಣ ಈ ಗೀತೆಯಲ್ಲಿ ದಾಖಲಾಗಿದೆ.

ಚೆನ್ನಮ್ಮನ ಜೀವನವನ್ನು ತೀರ ಹತ್ತಿರದಿಂದ ಬಲ್ಲ ಕವಿಯು ರಚಿಸಿರುವ ಈ ಕೃತಿಯು ಸಾಕಷ್ಟು ವಿಮರ್ಶೆಗೆ ಒಳಪಟ್ಟು, ೧೮೨೪ರಲ್ಲಿಯೇ 'ಬಾಂಬೆ ಕೋರಿಯಾ' ಎಂಬ ಸಾಪ್ತಾಹಿಕ ವರ್ತಮಾನ ಪತ್ರಿಕೆಯಲ್ಲಿ ಈ ಕೃತಿಯಲ್ಲಿನ ಐತಿಹಾಸಿಕ ಸತ್ಯಾಂಶ ಬಹುವಿದ್ವಾಂಸರಿಂದ ಒಪ್ಪಿತವಾಗಿದೆ.

ಕವಿ ತನ್ನ ಕುರಿತಾದ ಕೆಲವು ವಿಚಾರಗಳನ್ನು ಕೃತಿಯಲ್ಲಿ ತಿಳಿಸಿದ್ದಾನೆ.

**ಕುಸುಮಬಾಣನಮೇಲೆ ಪೆಸರಿನ ಗ್ರಾಮದಿ**
**ವಶವಾದ ಮಾಗುಂಡಿ ಬಸವನು ಮಾ**
**ವಸುಧೆಯೊಳು ತಾನು ಕುಶಲದಿ ಪಾಡುತ**
**ಉಸುರಿದ ಕವಿತೆ ಹಸನಾಗಿ ಕೇಳಿರಿ॥**

ಈ ಪದ್ಯದಲ್ಲಿ ಕವಿಯು ತನ್ನ ಊರಿಯ ಹೆಸರನ್ನು ಚಮತ್ಕಾರಯುತವಾಗಿ ತಿಳಿಸಿದ್ದಾನೆ. ಕುಸುಮಬಾಣ ಎಂದರೆ ಮನ್ಮಥ. ಈ ಹೆಸರಿನ ಗ್ರಾಮ ಎಂದರೆ ಮದನಭಾವಿ ತನ್ನ ಊರೆಂದು ತಿಳಿಸಿದ್ದಾನೆ.

**ಹೆಬ್ಬಳ್ಳಿ ಪುಂಡ ಬಸವ:** ಇವನು ಕಿತ್ತೂರಿಗೆ ಮುತ್ತಿಗೆ ಎಂಬ ಪದವನ್ನು ಬರೆದಿದ್ದಾನೆ. ತನ್ನ ಪದದಲ್ಲಿ 'ಪದ ಬರೆದವನು ಹೆಬ್ಬಳ್ಳಿ ಪುಂಡ ಬಸವ' ಎಂದು ಹೇಳಿಕೊಂಡಿದ್ದಾನೆ. ಇದರಲ್ಲಿ ಥ್ಯಾಕರೆ ಮರಣದ ನಂತರ ನಡೆದ ಎರಡನೆಯ ಯುದ್ಧವನ್ನು ಬಣ್ಣಿಸಿದ್ದಾನೆ. 'ಕಂಡು ಕವಿ ಮಾಡಿದ ವಿಸ್ತಾರ' ಎಂದು ಹೇಳಿರುವಂತೆ ಸವಸ್ತಾರವಾಗಿ ಬಣ್ಣಿಸಿ ಹೇಳಿದ್ದಾನೆ. ಕಿತ್ತೂರು ರಾಣಿ ಚೆನ್ನಮ್ಮಳು ಸರದಾರನ ತಲೆ ಹೊಡಿಸಿ ನೆತ್ತರ ಕಾವಲಿ ಹರಿಯಿಸಿದಳು. ಕರ್ನಲ್ ಹಲ್ಲು ಮಸೆಯುತ್ತಿದ್ದ. ಎರಡನೆಯ ಬಾರಿ ಮಾದನಭಾವಿ ಹತ್ತಿರ ಕಾಳಗ ಏರ್ಪಟ್ಟಿತು. ಚೆನ್ನಮ್ಮ ಅವರಾದಿಯಿಂದ ಈರಪ್ಪನ ಕರೆಸಿದಳು. ನಿಪ್ಪಾಣಿಗೆ ಪತ್ರ ಬರಿಸಿದಳು. ಒಕ್ಕುಂದ, ಬಳ್ಳೋಡಿ, ದೇಮಟ್ಟಿ, ಎಡಾಳ

ಸಾಣಿಕೊಪ್ಪ, ನಾವಲಗಟ್ಟಿ, ತಪಗುಂದ, ಕಾದರೊಳ್ಳಿ, ಕರ್ಚಗಟ್ಟಿ, ಹಣ್ಣಿಕೋರಿ, ಬನ್ನಿಕೊಪ್ಪಿ, ಅಂಬಡಗಟ್ಟಿ, ದೇಮಟ್ಟಿ, ಖೋದಾನಪುರ, ನಂದಿಹಳ್ಳಿ, ಬೆಳ್ಳಿಗಟ್ಟಿ, ಕರಿಯಾತಿ ಗ್ರಾಮಗಳ ದಂಡು ಬರಬೇಕೆಂದು ತಿಳಿಸಿದಳು. ಚೆನ್ನಮ್ಮನ ಕರೆಯನ್ನು ಮನ್ನಿಸಿ ಹತ್ತು ಸಾವಿರ ದಂಡು ಸಿದ್ಧವಾಯಿತು. ಕಾಮನಮಡ್ಡಿ ತೆಗೆದುಕೊಂಡು ಯುದ್ಧ ಮುಂದುವರೆಸಿದಳು. ಎಂಬ ಮೊದಲಾದ ವಿಚಾರಗಳು ಈ ಕಾವ್ಯದಿಂದ ತಿಳಿದುಬರುತ್ತದೆ.

'ಕಿತ್ತೂರು ಚೆನ್ನವ್ವನ ಸೊಸಿ' ಎಂಬ ಈತನ ಮತ್ತೊಂದು ಕೃತಿಯಲ್ಲಿ ಒಂಬತ್ತು ನುಡಿಗಳಲ್ಲಿ ಕಿತ್ತೂರು ಚೆನ್ನಮ್ಮನ ಸೊಸೆ ವೀರಮ್ಮನ ದುರಂತ ಮರಣದ ಮನಕಲಕುವ ಪ್ರಸಂಗದ ಚಿತ್ರಣವಿದೆ.

**ನೇಸರಗಿ ಚೌಬಾರಿ ಅಡೆವೆಪ್ಪ ಗೌಡ:** ಈತ ಕಿತ್ತೂರಿನ ಇತಿಹಾಸದಲ್ಲಿ ಬಹಳ ರೋಚಕವೂ, ಸಾಹಸಮಯವೂ, ಚೆನ್ನಮ್ಮಳ ವೀರಾವೇಶವನ್ನು ಬಣ್ಣಿಸುವ ಕಿತ್ತೂರಿನ ಯುದ್ಧದ ವಿವರವನ್ನೊಳಗೊಂಡ ವಿಚಾರಗಳನ್ನು 'ಕಿತ್ತೂರಿನ ಕೊನೆಯ ಕಾಳಗ' ಎಂಬ ಹೆಸರಿನಿಂದ ರಚಿಸಿದ್ದಾನೆ.

**ಕರಿಯಾತಿ ಕಾಳಗ:** ಇದೊಂದು ಕೋಲು ಪದ. ಅರಾಜಕತ್ವದ ಸಮಯದಲ್ಲಿ ನೆರೆಯ ಬೆಳವಡಿ ಸಂಸ್ಥಾನದ ಮನೆತನಕ್ಕೆ ಸಂಬಂಧ ಪಟ್ಟ ಬೊಮ್ಮಪ್ಪ ದೇಸಾಯಿ ಎಂಬುವನು ಸೈನ್ಯ ಸಮೇತ ಮತ್ತೆ ಮತ್ತೆ ಕಿತ್ತೂರ ಮೇಲ ದಂಡೆತ್ತಿ ಬರುತ್ತಾನೆ.

ಈ ದಂಗೆಯನ್ನು ಸದೆಬಡಿಯಲು ಚೆನ್ನಮ್ಮ ಕಿತ್ತೂರು ರಾಜ್ಯದ ಸೈನ್ಯಾಧಿಕಾರಿ ರಾಮಯ್ಯ ಎಂಬುವವರ ಮುಖಂಡತ್ವದಲ್ಲಿ ಸೈನ್ಯವನ್ನ ಕಳಿಸುತ್ತಾಳೆ. ಆದರೆ ರಾಮಯ್ಯ ವೈರಿಗಳಿಗೆ ಸೆರೆಯಾಳಾಗುತ್ತಾನೆ. ಕಡೆಗೆ ಸ್ವತಃ ಚೆನ್ನಮ್ಮನೇ ಅವರನ್ನು ಎದುರಿಸಲು ಹೊರಡುತ್ತಾಳೆ. ಕರಿಯಾತಿ ಗ್ರಾಮದ ಸಮೀಪ ಯುದ್ಧಮಾಡಿ ಎದುರಾಳಿಗಳನ್ನು ಹಿಮ್ಮೆಟ್ಟಿಸಿ, ರಾಮಸ್ವಾಮಿಯನ್ನೂ ಬಿಡಿಸಿಕೊಂಡು ಬರುತ್ತಾಳೆ. ಕರಿಯಾತಿ ಗ್ರಾಮದಬಳಿಯ ಯುದ್ಧವಾದ್ದರಿಂದ ಇದನ್ನುಕರಿಯಾತಿ ಕಾಳಗವೆಂದು ಕರೆಯಲಾಗುತ್ತದೆ.

**ಸೆರೆಯ ಹಿಡಿದವರನ್ನು ತರಿದಾಳೊ ರುಂಡವ**
**ಭರದಿಂದ ಬಿಡಿಸಿ ತರತಾಳೊ**
**ಕರಿಸ್ಯಾಳೋ ಮಂದಿನ್ನ ಕೊರಿಸ್ಯಾಳೋ ಕಕಾಲು**
**ತ್ವರದಿಂದ ಕಿತ್ತೂರಕ ಸಾಗ್ಯಾಳೋ ॥**

ಚೆನ್ನಮ್ಮ ಕೇವಲ ಬ್ರಿಟಿಶ್‌ರ ಮೇಲೆ ಮಾತ್ರ ಯುದ್ಧ ಮಾಡಿಲಿಲ್ಲ. ಈ ಹಿಂದೆಯೂ ಯುದ್ಧದಲ್ಲಿ ಭಾಗವಹಿಸಿದ್ದಳು ಎನ್ನುವುದಕ್ಕೆ ಇದೊಂದು ಆಧಾರವಾಗಿದೆ.

**ಬಂಗ ಅರಸುಮನೆತನದ ರಾಣಿ ಚಂದ್ರಮತಿ**

ಸುಮಾರು ಹದಿಮೂರನೆಯ ಶತಮಾನದಿಂದ ಕರ್ನಾಟಕದ ಕರಾವಳಿ ಪ್ರದೇಶಗಳಲ್ಲಿ ಆಳ್ವಿಕೆ ನಡೆಸುತ್ತಿರುವ ಬಂಗ ಅರಸರು ಅನೇಕ ಕವಿಗಳನ್ನೂ, ಪಂಡಿತರನ್ನೂ ಪೋಷಿಸಿದವರು. ಧರಣೇಂದ್ರ ಎಂಬ ಕವಿಯು ತಾನು ರಾಣಿ ಚಂದ್ರಮತಿಯ ಕೋರಿಕೆಯ ಮೇಲೆ ಗ್ರಂಥ ರಚಿಸಿರುವುದಾಗಿ ತಿಳಿಸಿದ್ದಾನೆ.

ಕವಿ: ಕವಿ ಧರಣಿಗ ಅಥವಾ ಧರಣೇಂದ್ರನು ಪದುಮಣ್ಣನ ಮಗ, ಈ ಕೃತಿಯನ್ನು ನಂದಾವರದ ಅರಮನೆಯ ರಾಣಿ ಚಂದ್ರಮತಿಯ ಕೋರಿಕೆಯ ಅನುಸಾರ ಕೆಲವು ಕೃತಿಗಳನ್ನು ರಚಿಸಿರುವುದಾಗಿ ತಿಳಿಸಿದ್ದಾನೆ[೪೧]. ಈತನ ಕೃತಿಗಳು: ಸ್ತುತಿ ಸಂಗ್ರಹ, ಪದ್ಮಾವತಿ ಶೋಭಾನೆ ೨೫ ಪದ್ಯಗಳು , ಶ್ರೀ ಶಾಂತಿನಾಥ ಶೋಭಾನೆ ೧೨೫ ಗೀತೆಗಳು, ಸುವ್ವಾಲಿ ಪದಗಳು' ೩೩ ಹಾಡುಗಳು, ನೇಮೀಶ್ವರನ ತೊಟ್ಟಿಲ ಪದ ೪೦ ಜೋಗುಳದ ಹಾಡುಗಳು.

ಈ ಕೃತಿಗಳ ಹೆಸರೇ ಸೂಚಿಸುವಂತೆ ಇದು ಧಾರ್ಮಿಕ ಕೃತಿಗಳು. ಇನ್ನೂ ಹಸ್ತಪ್ರತಿಯಲ್ಲಿಯೆ ಇರುವ ಈ ಕೃತಿಗಳು ಸಂಪಾದನೆಗೊಂಡು ಪ್ರಕಟವಾಗಬೇಕಾಗಿದೆ.

## ಅಲಭ್ಯ ಕೃತಿಗಳು

ಅರಸಿಯರ ಪೋಷಣೆಯಲ್ಲಿದ್ದ ಕವಿಗಳು ರಚಿಸಿರುವ ಇನ್ನೂ ಹಲವಾರು ಕೃತಿಗಳು ಇಂದಿಗೆ ಅಲಭ್ಯವಾಗಿವೆ. ಇಪ್ಪತ್ತನೆಯ ಶತಮಾನದ ಆರಂಭದ ಕಾಲದಲ್ಲಿ ಕಾಗದ ಅಥವಾ ತಾಳೆಗರಿಯ ಹಸ್ತಪ್ರತಿಯ ರೂಪದಲ್ಲಿದ್ದ ಈ ಕೆಲವು ಕೃತಿಗಳ ಕುರಿತಾದ ಕಿರುಪರಿಚಯ ಕರ್ಣಾಟಕ ಕವಿಚರಿತ್ರೆ ಹಾಗು ಇತರೆಡೆಗಳಲ್ಲಿ ಉಲ್ಲೇಖವಾಗಿವೆ. ಪ್ರಕಟಣೆ ಕಾಣದೆ, ಕಣ್ಮರೆಯಾಗಿರುವ ಇಂತಹ ಹಸ್ತಪ್ರತಿಗಳಲ್ಲಿದ್ದ ಕಾವ್ಯಗಳ ಲಭ್ಯಮಾಹಿತಿಯಲ್ಲಿ ಕೆಲವು ಅರಸಿಯರ ವಿಚಾರ ದೊರಕುತ್ತದೆ.

### ಚೌಟರಾಣಿ ಅಬ್ಬಕ್ಕದೇವಿ

ಸುಮಾರು ಹನ್ನೆರಡನೆಯ ಶತಮಾನದಿಂದ ಹದಿನೆಂಟನೆಯ ಶತಮಾನದವರೆಗೂ ತುಳುನಾಡಿನ ಹಲವು ಭಾಗಗಳಲ್ಲಿ ಆಳ್ವಿಕೆ ನಡೆಸಿದ ಚೌಟ ಅರಸು ಮನೆತನದಲ್ಲಿ ಅಬ್ಬಕ್ಕದೇವಿ ಹೆಸರಿನ ಮೂವರು ರಾಣಿಯರು ವಿಭಿನ್ನ ಶತಮಾನಗಳಲ್ಲಿ ಕಂಡುಬರುತ್ತಾರೆ. ಅವರಲ್ಲಿ ಕ್ರಿ.ಶ.೧೨೮೩–೧೩೧೬ರ ವರೆಗೂ ಆಳ್ವಿಕೆ ನಡೆಸಿದ ಮೊದಲನೆಯ ಅಬ್ಬಕ್ಕ ಪ್ರಾಚೀನಳು. ಮುಂದೆ ಕ್ರಿ.ಶ.೧೫೪೪ರಿಂದ ೧೫೮೨ರ ವರೆಗಿನ ಕಾಲದಲ್ಲಿ ಆಳ್ವಿಕೆ ನಡೆಸಿದ ಎರಡನೆಯ ಅಬ್ಬಕ್ಕದೇವಿ ಬಹಳ ಪ್ರಭಾವಿ ರಾಣಿಯಾಗಿದ್ದು ಪೋರ್ಚುಗೀಸರನ್ನೆದುರಿಸಿದ ದಿಟ್ಟ ಅರಸಿ ಎಂಬ ಖ್ಯಾತಿಯಿಂದ ದೇಶ ವಿದೇಶಗಳಲ್ಲಿ ಪ್ರಸಿದ್ಧಳಾದವಳು. ಮೂರನೆಯ ಅಬ್ಬಕ್ಕದೇವಿಯು ಕ್ರಿ.ಶ.೧೭೨೬ ರಿಂದ ೧೭೪೯ರ ವರೆಗೂ ಆಳ್ವಿಕೆ ನಡೆಸಿದವಳು.

ಈ ಮನೆತನದ ಅರಸರು ಕೆಲವು ಕವಿಗಳಿಗೆ ಆಶ್ರಯ ನೀಡಿರುವುದು ತಿಳಿದು ಬರುತ್ತದೆ. **'ಲೋಭದತ್ತ ಚರಿತೆ'**, **'ಸುದರುಸನ ಚರಿತೆ'** ಕೃತಿಗಳನ್ನು ರಚಿಸಿದ ಹದಿನೈದನೆಯ ಶತಮಾನದ 'ನೇಮರಸ**"** ಎಂಬ ಕವಿಯು ತಾನು ಚೌಟರ ಧರ್ಮಸಾಮ್ರಾಜ್ಯದಲ್ಲಿದ್ದವನೆಂದು ತನ್ನ ಕೃತಿಯಲ್ಲಿ ತಿಳಿಸಿದ್ದಾನೆ. ಅಬ್ಬಕ್ಕದೇವಿಯ ಆಸ್ಥಾನದಲ್ಲಿ ಇದ್ದಿರಬಹುದಾದ ಕವಿ ಪಟ್ಟಾಭಿರಾಮನು ತನ್ನ ಕೃತಿಯಲ್ಲಿ ಅಬ್ಬಕ್ಕದೇವಿಯನ್ನು ಸ್ಮರಿಸಿದ್ದಾನೆ. ಕವಿಯ ಕಾಲದ ಗಣನೆಯಿಂದ ಈ ಅಬ್ಬಕ್ಕ ರಾಣಿಯು ಮೇಲೆ ತಿಳಿಸಿದ ಕ್ರಿ.ಶ.೧೭೨೬ ರಿಂದ ೧೭೪೯ರಲ್ಲಿ ಆಳ್ವಿಕೆ ನಡೆಸಿದವಳಾಗಿದ್ದಾಳೆ. ಕವಿಚರಿತೆಕಾರರು ಕವಿ ಪಟ್ಟಾಭಿರಾಮನ ಕೃತಿಯಲ್ಲಿ ಅಬ್ಬಕ್ಕದೇವಿಯ ಕುರಿತಾದ ಉಲ್ಲೇಖವನ್ನು ದಾಖಲಿಸಿದ್ದಾರೆ.

**ಕವಿ ಪಟ್ಟಾಭಿರಾಮ:** ಅಬ್ಬಕ್ಕದೇವಿಯ ಮಂತ್ರಿ ಕೋದಂಡರಾಮನ ಇಬ್ಬರು ಮಕ್ಕಳು ಪಟ್ಟಾಭಿರಾಮ ಹಾಗು ರಾಮಕವೀಂದ್ರರೆಂಬುವರು ಪ್ರಸಿದ್ಧ ಕವಿಗಳಾಗಿದ್ದರು[೪೨]. ಕವಿ ಪಟ್ಟಾಭಿರಾಮ ತನ್ನ ಕೃತಿ **ರತ್ನಶೇಖರ ಚರಿತ್ರೆಯ** ಆಶ್ವಾಸಾಂತ್ಯದಲ್ಲಿ "ಸಕಲ **ಸುಕವಿಜನಮನೋವನವಸಂತ** ವಿವಿಧಭಾಷಾ ವಿಶೇಷ ಪ್ರಬಂಧಬಂಧುರ **ವಾಙ್ಮಾಧುರ್ಯ**ಧುರೀಣನಪ್ಪ **ರಾಮ ಕವಿಸಹಭವ** ಪಟ್ಟಾಭಿರಾಮವಿರಚಿತ ರತ್ನಶೇಖರೋಪಾಖ್ಯಾನ ಮಹಾಪುರಾಣಚರಿತದೊಳ್**"** ಎಂದು ಹೇಳಿರುವಲ್ಲಿ ತನಗೆ **'**ಸಕಲ ಸುಕವಿಜನಮನೋವನವಸಂತ**'** ನೆಂಬ ಬಿರುದು ಇದ್ದುದನ್ನೂ, ತಾನು ವಿವಿಧಭಾಷೆಯಲ್ಲಿ ಪಡೆದಿದ್ದ ಪಾಂಡಿತ್ಯವನ್ನೂ, ತಾನು ರಾಮಕವಿ ಎಂಬುವವನ ಅನುಜನೆಂದೂ ತಿಳಿಸಿದ್ದಾನೆ. ಅಲ್ಲದೆ ಇವನಿಗೆ ಕವಿಕುಲರನ್ನ ಎಂಬ ಬಿರುದೂ ಇತ್ತೆಂದು ಈ ಕಾವ್ಯದಲ್ಲಿ ತಿಳಿಸಿದ್ದಾನೆ.

ಈ ಕೃತಿಯಲ್ಲಿ ತಿಳಿಸಿರುವಂತೆ ಈತನ ತಾಯಿ ಸೋಮಾಂಬೆ, ತಂದೆ ಕೋದಂಡರಾಮ. ಈತನ ತಂದೆ ಕೋದಂಡರಾಮ ಚೌಟರ ಅರಮನೆಯಲ್ಲಿ ಮಂತ್ರಿಯಾಗಿದ್ದ. ಕವಿ ತನ್ನ ಕೃತಿಯಲ್ಲಿ ತಮ್ಮ ರಾಮಕವೀಂದ್ರನನ್ನು 'ಧೀಮಣಿ, ಸಕಲ ಕಲಾಭಿಜ್ಞಮಣಿ' ಎಂದೂ 'ಸಾರ್ವಭೌಮ ಹಾಗೂ ವಾಗ್ವೈಭವ' ಎಂದೂ ವರ್ಣಿಸಿದ್ದಾನೆ. ಅಣ್ಣತಮ್ಮಂದಿರಿಬ್ಬರೂ ಮಹಾನ್ ಕವಿಪುಂಗವರಾಗಿದ್ದರೆಂದು ತಿಳಿದುಬರುತ್ತದೆ ಆದರೆ ರಾಮಕವೀಂದ್ರನ ಯಾವ ಕೃತಿಗಳು ದೊರೆತಿಲ್ಲ. ಅಲ್ಲದೆ ಕವಿ ಪಟ್ಟಾಭಿರಾಮನೂ ಸಹ 'ರತ್ನಶೇಖರ ಚರಿತ್ರೆ' ಅಲ್ಲದೆ ಇತರ ಕೃತಿಗಳನ್ನು ರಚಿಸಿರುವುದಾಗಿ ತಿಳಿದು ಬಂದರೂ, ಈ ಕೃತಿಯನ್ನುಳಿದು ಬೇರೆ ಯಾವ ಗ್ರಂಥವೂ ದೊರೆತಿಲ್ಲ.

**ಕವಿಯ ಕಾಲ:** ಕವಿ ಪಟ್ಟಾಭಿರಾಮನು ತನ್ನ ಕೃತಿಯಲ್ಲಿ ಪ್ರಭಾಚಂದ್ರ ಮುನಿಯನ್ನು ಸ್ಮರಿಸಿದ್ದಾನೆ. 'ರಾಮಚಂದ್ರ ಚರಿತ್ರೆ' ಎಂಬ ಕೃತಿಯನ್ನು ರಚಿಸಿರುವ ಕವಿ ಪದ್ಮನಾಭ'ಕೂಡ ತಾನು ಪ್ರಭಾಚಂದ್ರ ಮುನಿಯ ಶಿಷ್ಯನೆಂದು ತಿಳಿಸಿರುವುದರಿಂದ ಈತ ಪಟ್ಟಾಭಿರಾಮನ ಸಮಕಾಲೀನನೆಂಬುದು ತಿಳಿದುಬರುತ್ತದೆ. ಕವಿ ಪದ್ಮನಾಭನ ಕಾಲದ ಆಧಾರದಿಂದ ಪಟ್ಟಾಭಿರಾಮ ಕೂಡ ಕ್ರಿ.ಶ.೧೭೪೦ರ ಆಸುಪಾಸಿನಲ್ಲಿದ್ದವನೆನ್ನುವುದು ಖಚಿತವಾಗುತ್ತದೆ. ಅಲ್ಲದೆ ಪಟ್ಟಾಭಿರಾಮನು ಕಾವ್ಯದಲ್ಲಿ ಉಲ್ಲೇಖಿಸಿರುವ ಅಬ್ಬಕ್ಕನನ್ನು ಚಿಕ್ಕರಾಯ ಚೌಟರಾಜನ ವಂಶಜೆ ಎಂದಿದ್ದಾನೆ. ಉಲ್ಲಾಳದಲ್ಲಿ ಚಿಕ್ಕರಾಯ ಚೌಟ ಕ್ರಿ.ಶ.೧೬೮೭ ರಿಂದ ೧೭೧೫ವರೆಗೂ ಆಳ್ವಿಕೆ ನಡೆಸಿದ ರಾಜ. ಇವನ ನಂತರ ಸುಮಾರು ೧೧ ವರ್ಷಗಳ ಕಾಲ ಪದುಮಲದೇವಿ ಆಳ್ವಿಕೆ ನಡೆಸಿದ್ದಾಳೆ. ಆನಂತರ ಕವಿಯು ಉಲ್ಲೇಖಿಸಿರುವ ರಾಣಿ ಅಬ್ಬಕ್ಕದೇವಿಯು ಕ್ರಿ.ಶ.೧೭೨೬ ರಿಂದ ೧೭೪೯ರ ವರೆಗೂ ಆಳ್ವಿಕೆ ನಡೆಸಿದವಳಾದ್ದರಿಂದ ಕವಿಯ ಕಾಲವೂ ಇದೇ ಸುಮಾರೆಂದು ತಿಳಿಯಬಹುದು. ಕವಿಚರಿತೆಕಾರರೂ ಸಹ ಈತನ ಕಾಲವನ್ನು ಕ್ರಿ.ಶ.೧೭೨೫ ಎಂದೇ ಸೂಚಿಸಿದ್ದಾರೆ[೪೩].

ಈ ಕಾವ್ಯ ರಚನೆಗೂ ಮುನ್ನ ಕವಿ ಪಟ್ಟಾಭಿರಾಮನಿಗಿದ್ದ ಬಿರುದು, ಹಾಗೂ ಈತನ ತಮ್ಮನ ಕಾವ್ಯ ಹಾಗೂ ಆತನ ಬಿರುದುಗಳು ಇವರು ಪಂಡಿತ ಮನೆತನದವರೆನ್ನುವುದೂ, ರಾಜಮನೆತನದಿಂದ ಬಿರುದಾವಳಿಗಳನ್ನೂ, ಪ್ರತಿಷ್ಠೆ ಗೌರವಗಳನ್ನು ಪಡೆದ ಕವಿಗಳೆನ್ನುವುದು ವೇದ್ಯವಾಗುತ್ತದೆ. ಅಲ್ಲದೆ ಕವಿ ಪಟ್ಟಾಭಿರಾಮನ ತಂದೆ ಕೋದಂಡರಾಮ ಚೌಟರ ಅರಮನೆಯಲ್ಲಿ ಮಂತ್ರಿಯಾಗಿದ್ದ ವಿಚಾರ ಅಬ್ಬಕ್ಕರಾಣಿ ಈತನ ಪೋಷಕಳಾಗಿದ್ದಳೆನ್ನುವುದಕ್ಕೆ ಪುಷ್ಟಿ ನೀಡುತ್ತದೆ.

ರತ್ನಶೇಖರನೆಂಬ ರಾಜನು ಪುಷ್ಪಾಂಜಲಿಯ ನೋಂಪಿಯನ್ನ ಆಚರಿಸಿ ಮುಕ್ತಿಯನ್ನು ಪಡೆದ ಜೈನ ಧಾರ್ಮಿಕ ವಸ್ತುವನ್ನು ಹೊಂದಿರುವ ಈ ಕಾವ್ಯವು ೫ ಆಶ್ವಾಸಗಳು ಹಾಗೂ ೧೫ ಸಂಧಿಗಳಲ್ಲಿ ಕೃತಿ ರಚಿತವಾಗಿದೆ. ಧಾರ್ಮಿಕ ಕಾವ್ಯವಾದರೂ ಇದನ್ನು ತಾನು "ಸರಸಾಲಂಕಾರಭಾವಗಳಿಂ" ರಚಿಸಿದ್ದೇನೆಂದು ಕವಿ ಹೇಳಿಕೊಂಡಿದ್ದಾನೆ.

ಕವಿಚರಿತೆಯ ರಚನೆಯ ಕಾಲದಲ್ಲಿ ಲಭ್ಯವಿದ್ದ ಈ ಕೃತಿಯು ಉಪೇಕ್ಷೆಗೆ ಒಳಗಾಗಿ, ಇಂದಿಗೆ ಅಲಭ್ಯ ಕೃತಿಯಾಗಿದೆ. ಕವಿಯ ಬಿರುದಾವಳಿಗಳನ್ನು ಗಮನಿಸಿದರೆ ಈತ ಇನ್ನೂ ಹಲವು ಕಾವ್ಯಗಳನ್ನು ರಚಿಸಿದ್ದಾನೆಂದು ತೋರುವುದಲ್ಲದೆ, ಈತನ ಸಹೋದರ ರಾಮಕವಿಯೂ ಕೂಡ ಕಾವ್ಯಗಳನ್ನು ರಚಿಸಿರುವುದು ಖಚಿತವಾಗುತ್ತದೆ. ಆದರೆ ದುರದೃಷ್ಟದಿಂದಾಗಿ ಇವರ ಯಾವ ಕಾವ್ಯವೂ ಲಭ್ಯವಿಲ್ಲದೆ ಹೋಗಿದೆ.

**ಕಾವ್ಯದ ವಸ್ತು:** ಇದೊಂದು ಜೈನ ಪುರಾಣ ಗ್ರಂಥವಾದ್ದರಿಂದ, ಈ ಕೃತಿಯಲ್ಲಿ ಪ್ರಭಾಚಂದ್ರನ ಅನುಜ್ಞೆಯಿಂದ "ಸರಸಾಲಂಕಾರಭಾವಗಳಿಂ" ಈ ಗ್ರಂಥವನ್ನು ರಚಿಸಿದಂತೆ ಕವಿ ಹೇಳಿದ್ದಾನೆ. ಅಲ್ಲದೆ ಗ್ರಂಥಾರಂಭದಲ್ಲಿ ವೀರಜಿನಸ್ತುತಿ, ಪಾರ್ಶ್ವನಾಥ, ಸಿದ್ಧಾದಿಗಳು, ಗಣಧರರು, ಕೊಂಡಕುಂದ, ಅಕಲಂಕ, ಪದ್ಮಾವತಿಯಕ್ಷಿಯರ ಸ್ತುತಿಯಿದೆ. ಅನಂತರ ಪೂರ್ವಕವಿಗಳನ್ನು ಸ್ಮರಿಸಿದ್ದಾನೆ.ಆದಿಕವಿ ಪಂಪನನ್ನು ಕುರಿತು "ಭೂತಲದೊಳಗಾದಿನಾಥನ

ಚರಿತವ ಖ್ಯಾತಿಯಿಂದಲಿ ವಿರಚಿಸಿದ ಚಾತುರ್ಯಶಾಲಿಯೆಂದೆನಿಸಿದ ಪಂಪನ ರೀತಿಯ ಕೊಂಡಾಡುವೆನು" ಎಂದಿದ್ದಾನೆ.

**ಘನತರಚಂದ್ರನಾಥನ ಚರಿತ್ರವನು ಘನವಾಗಿ ರಚಿಸಿದಗ್ಗಳನ**
**ವಿನುತಕವಿತ್ವದ ಗೌರವದೇಟಿಗ್ಗೆಯ ಮನವೊಲಿದಾಂ ಪೊಗಟುವೆನು॥**

**ಶೃಂಗಾರಕವಿರಾಜಪುಂಗವನೆನಿಸಿ ಬೆಡಂಗಾಂತ ನೇಮಿಚಂದ್ರಮನ**
**ತುಂಗವಿಖ್ಯಾತಪ್ರಸಂಗಗಜಾಂಕುಶರಿಂಗೆ ನಾಂ ಕೈವಾರಿಸುವೆ ॥**

**ತ್ರಿಜಗನ್ನುತಿವೆತ್ತ ಭುಜಗಾಧಿಪತಿಯಂತೆ ನಿಜವಾಗ್ವಿಳಾಸಿಗಳಾದ**
**ಸುಜನಮನೋಜನ ಗಜಗನ ಪ್ರಚುರಶ್ರೀ ವಿಜಯನ ನಾ ಪೊಗಟುವೆನು** ॥ ಎನ್ನುತ್ತಾ ಅಗ್ಗಳ, ನೇಮಿಚಂದ್ರ, ಗಜಾಂಕುಶ, ಸುಜನಮನೋಜ ಮೊದಲಾದ ಕೆಲವು ಪೂರ್ವಕವಿಗಳನ್ನು ಕವಿ ಪಟ್ಟಾಭಿರಾಮನ ಸ್ಮರಿಸಿದ್ದಾನೆ.

ಈ ಜೈನ ಧಾರ್ಮಿಕ ಗ್ರಂಥವನ್ನು ಸಾಂಗತ್ಯದಲ್ಲಿ ರಚಿಸಲಾಗಿದೆ. ೫ ಆಶ್ವಾಸಗಳು ಹಾಗೂ ೧೫ ಸಂಧಿಗಳಲ್ಲಿ ಕೃತಿ ರಚಿತವಾಗಿದೆ.

**ಮಂಗಳಕರಪುರಾಣಂಗಳ ಕಥೆಗಳ**
**ಪಿಂಗದೆ ಧರೆಗೆ ಬಿತ್ತರಿಸಿ**
**ಕಂಗೊಳಿಸುವ ಕವಿಪರಮೇಷ್ಠಿ ಮುಖ್ಯವೀ**
**ರಾಂಗಮುನಿಗಳಿಗೆಱರುವೆ॥**

ಕವಿ ತನ್ನನ್ನು 'ಭಾವಜ್ಞ ಪ್ರಚಂಡ ಛಂದೋವಿದ' ಎಂದು ಕರೆದು ಕೊಂಡಿರುವುದಲ್ಲದೆ 'ಮೃದು ಕವಿತಾವಿಶಾರದ' ಎಂದೂ ಹೇಳಿಕೊಂಡಿದ್ದಾನೆ. ಜೊತೆಗೆ ತಾನು 'ವಿವಿಧ ಭಾಷಾವಿಶೇಷ ಪ್ರಬಂಧ ಬಂಧುರ ವಾಙ್ಮಧುರಧುರೀಣ' ಎಂದು ಹೇಳಿಕೊಂಡಿರುವುದರಿಂದ ಕನ್ನಡವಲ್ಲದೆ ಸಂಸ್ಕೃತದಲ್ಲಿಯೂ ಗ್ರಂಥ ರಚಿಸಿದಂತೆ ತೋರುತ್ತದೆ. 'ಸಕಲ ಸುಕವಿಜನ ಮನವನೋವಸಂತ' ಎಂಬುದೂ ಈತನ ಬಿರುದು. ಇಷ್ಟೊಂದು ಬಿರುದುಗಳನ್ನು ಧರಿಸಿರುವ ಈ ಕವಿಯ ಇತರ ಕೃತಿಗಳು ಹಾಗೂ ಇವನ ತಮ್ಮ ರಾಮಕವೀಂದ್ರನ ಕೃತಿಗಳು ಲಭ್ಯವಾದಲ್ಲಿ ಇವರ' ಕಾಲದ ಮತ್ತಷ್ಟು ವಿಚಾರಗಳನ್ನು ಅರಿಯಲು ಸಹಕಾರಿಯಾಗಬಹುದು.

ರಾಣಿ ಅಬ್ಬಕ್ಕಳ ವಿಚಾರಗಳನ್ನು ವಿದೇಶಿ ಬರಹಗಾರರ ಕೃತಿಯಿಂದಲೇ ತಿಳಿದುಕೊಳ್ಳಬೇಕಾಗಿರುವುದೊಂದು ದುರಂತ.ಅಲ್ಲದೆ ಈ ಕೆಲವು ಕೃತಿಗಳು ಹಾಗು ದೊರೆತಿರುವ ಕೆಲವು ಕೈಫಿಯತ್ತುಗಳು ಅಬ್ಬಕ್ಕಳ ಕುರಿತಾಗಿ ಹಲವು ಗೊಂದಲಗಳನ್ನು ಉಂಟುಮಾಡಿವೆ. ಅಬ್ಬಕ್ಕಳ ಸಮಕಾಲೀನರಾದ ಈ ಕವಿಗಳ ಕೃತಿಗಳು ದೊರಕಿದಲ್ಲಿ ಅಬ್ಬಕ್ಕಳ ಕುರಿತಾಗಿ ಇರುವ ಅನೇಕ ಅನುಮಾನಗಳನ್ನು ಪರಿಹರಿಸಲು ಸಹಾಯಕವಾಗಬಹುದು.

**ಚೌಟ ರಾಣಿ ಚನ್ನಮ್ಮ – ಕವಿ ಸುರಾಲ**

ಪುತ್ತಿಗೆಯಿಂದ ಆಳ್ವಿಕೆ ನಡೆಸುತ್ತಿದ್ದ ಚೌಟವಂಶದ ಚಂದ್ರಶೇಖರ ಚಿಕ್ಕರಾಯಚೌಟನ ರಾಣಿ ಚೆನ್ನಮ್ಮದೇವಿ ಸುರಾಲ ಎಂಬ ಕವಿಯಿಂದ 'ಪದ್ಮಾವತೀ ಚರಿತೆ'ಯನ್ನು ಬರೆಸಿದಳೆಂದು ತಿಳಿದು ಬರುತ್ತದೆ.

ಈ ಕೃತಿಯು ಅಪ್ರಕಟಿತವಾಗಿದ್ದು ಕವಿಯ ವಿಚಾರವಾಗಲೀ, ರಾಣಿ ಚೆನ್ನಮ್ಮದೇವಿಯ ವಿಚಾರವಾಗಲೀ ತಿಳಿದುಬರುವುದಿಲ್ಲ. ಕವಿಚರಿತೆಯ ಮೂರನೆಯ ಸಂಪುಟದಲ್ಲಿ ಈ ಕುರಿತಾಗಿ ಮಾಹಿತಿ ದೊರಕುತ್ತದೆಯಾದರೂ,

ಈ ಕೃತಿಯನ್ನು ಕವಿಚರಿತೆಕಾರರು ನೇರವಾಗಿ ನೋಡಿಲ್ಲ, ರೈಸ್‌ರು ಬರೆದಿರುವ ಕೆಲವೊಂದು ವಿಚಾರವನ್ನು ಇಲ್ಲಿ ಉಲ್ಲೇಖಿಸಿರುವುದಾಗಿ ತಿಳಿಸಿದ್ದಾರೆ[೪೪].

ಕವಿ ಹಾಗೂ ಕೃತಿಯ ಕಾಲವನ್ನು ಕ್ರಿ.ಶ.೧೭೬೧ ಎಂದು ಕವಿಚರಿತೆಯಲ್ಲಿ ಹೇಳಿದೆ. ಕವಿಯನ್ನು ಕುರಿತು ಜೈನಕವಿ ಎಂದಷ್ಟೇ ತಿಳಿಸಿದ್ದಾರೆ. ಸಾಂಗತ್ಯದಲ್ಲಿ ಬರೆಯಲಾದ ಈ ಕೃತಿಯು ೧೨ ಸಂಧಿ ಹಾಗೂ ೧೬೭೧ ಪದ್ಯಗಳಿಂದ ರಚಿತವಾಗಿದೆ. "ಪುತ್ತಿಕಾಪುರದ ಚಂದ್ರಶೇಖರ ಚಿಕ್ಕರಾಯಚೌಟನ ರಾಣಿವಾಸದ ಚೆನ್ನಮ್ಮದೇವಿಯ ಇಷ್ಟಾನುಸಾರವಾಗಿ" ಬರೆದೆನೆಂದು ಹೇಳಿರುವ ವಿಚಾರವಲ್ಲದೆ, ಈ ಕೃತಿಯ ಮತ್ಯಾವ ವಿಚಾರವಾಗಲೀ, ಪದ್ಯವಾಗಲೀ ಉಲ್ಲೇಖಗೊಂಡಿಲ್ಲ.

ಪುತ್ತಿಗೆಯಲ್ಲಿ ಆಳಿದ ಚೌಟ ಅರಸರ ಕುರಿತಾಗಿ ಹೆಚ್ಚು ಅಧ್ಯಯನ ನಡೆದಿಲ್ಲ. ಆರ್.ನರಸಿಂಹಾಚಾರ್ಯರಿಗೂ ಪೂರ್ವದಲ್ಲಿ ರೈಸರಿಗೆ ದೊರೆತಿದ್ದ ಸುರಾಲ ಕವಿಯ 'ಪದ್ಮಾವತೀ ಚರಿತೆ' ಕೃತಿ ಲಭ್ಯವಾದಲ್ಲಿ, ಈ ಮನೆತನದ ಚೆನ್ನಮ್ಮ ರಾಣಿಯ ಕುರಿತಾದ ಮಾಹಿತಿ ದೊರಕುವ ಸಾಧ್ಯತೆಯಿದೆ.

**ಹಸ್ತಪ್ರತಿ ಲಿಪೀಕರಣ:** ಕವಿಯ ಮೂಲ ಹಸ್ತಪ್ರತಿಗಳು ಇಂದಿನವರೆಗೂ ಉಳಿದು ಬರಲು ಸಾಧ್ಯವಿಲ್ಲ. ಮುದ್ರಣ ಕಲೆ ಗೊತ್ತಿರದ ಕಾಲದಲ್ಲಿ ಜನರಿಗೆ ಸಾಹಿತ್ಯ ತಲಪಿಸುವ, ಹಾಗೂ ಮುಂದಿನ ಪೀಳಿಗೆಗೆ ಕಾಪಾಡುವ ಸಲುವಾಗಿ ಮೂಲ ಕೃತಿಗಳನ್ನು ನಕಲು ಮಾಡಿಸಲಾಗುತ್ತಿತ್ತು. ಅರಸಿಯರೂ ಇಂತಹ ಕೆಲಸವನ್ನು ನಡೆಯಿಸಿ, ಆ ಮೂಲಕ ಸಾಹಿತ್ಯ ಸೇವೆಯನ್ನು ನಡೆಸಿದ್ದಾರೆ. ಮೈಸೂರಿನ ಅರಸಿಯರು, ಸಾಳ್ವ ಮನೆತನದ ಅರಸಿಯರು ನಡೆಸಿರುವ ಇಂತಹ ಕಾರ್ಯಗಳನ್ನು ಈ ಹಿಂದೆ ಉಲ್ಲೇಖಿಸಲಾಗಿದೆ. ಅಂತೆಯೇ ಪ್ರಾಚೀನ ಕಾಲದ ಅರಸಿಯರು ಲಿಪೀಕರಣಕ್ಕೆ ನೀಡಿರುವ ಕಾಣಿಕೆಯನ್ನು ಹಿಂದಿನ ಅಧ್ಯಾಯದಲ್ಲಿ ಗುರುತಿಸಲಾಗಿದೆ. ಸಾಹಿತ್ಯ ಕೃತಿಗಳನ್ನು ಉಳಿಸುವಂತಹ ಇಂತಹ ಕಾರ್ಯ ನಡೆಸಿರುವ ಇನ್ನೂ ಕೆಲವು ಅರಸಿಯರನ್ನು ಕಾಣಬಹುದು.

ಚಿಕ್ಕನಾಯಕನ ಹಳ್ಳಿಯ ನಾಗತಿ ಚೆನ್ನಾಜಮ್ಮ ಎನ್ನುವವಳು ಸರ್ವಜ್ಞನ ವಚನಗಳನ್ನು ಪ್ರತಿಮಾಡಿಸಿರುವ ವಿಚಾರ ತಿಳಿದುಬರುತ್ತದೆ[೪೫]. "ಚಿಗನಾಯಕನಗಳ್ಳಿ ಲಿಂಗಪ್ಪನು **ಮಹಾರಾಜೇಶ್ರೀ ಚೆನ್ನಾಜಮ್ಮ**ನವರಿಗೆ ಪಾರಮಾರ್ಥಿಕವಾಗಿ ಬರೆದು ಒಪ್ಪಿಸಿದಂಥಾ..." ಕೃತಿ ಎಂದು ಇಲ್ಲಿ ತಿಳಿಸಲಾಗಿದೆ. ಮಹಾರಾಜೇಶ್ರೀ ಚೆನ್ನಾಜಮ್ಮನವರು ಚಿಗನಾಯಕನಹಳ್ಳಿ ಲಿಂಗಪ್ಪನಿಂದ ತ್ರಿಪದಿರೂಪದ ಪಾರಮಾರ್ಥಿಕ ಪುಸ್ತಕ (ಸರ್ವಜ್ಞನ ವಚನಗಳು)ವನ್ನು ಬರೆಯಿಸಿರುವುದು ಎಂಬ ಉಲ್ಲೇಖವು ಇವಳು ಲಿಂಗಪ್ಪನೆಂಬ ಲಿಪಿಕಾರನಲ್ಲಿ ಹೇಳಿ ಬರೆಯಿಸಿರುವ ಪ್ರತಿ ಇದೆಂದು ತಿಳಿದುಬರುತ್ತದೆ. ಇದೇ ಪ್ರಕಾರ ವಿಜಯನಗರದ ಸಾಮಂತ ಮಹಾನಾಡ ಪ್ರಭು ಇಮ್ಮಡಿ **ಚಿಕ್ಕಭೂಪಾಲನ ಮಡದಿ ಚೆನ್ನಾಜಮ್ಮ 'ಪಾರಮಾರ್ಥಿಕ ಪುಸ್ತಕ'** ವನ್ನು ಯಜ್ಞನಾರಾಯಣ ದೀಕ್ಷಿತರ ಮಗ ವಿಶ್ವನಾಥನಿಂದ ಪ್ರತಿಮಾಡಿಸಿದ್ದಾಳೆ.

ಚಿಕ್ಕಬಳ್ಳಾಪುರ ಸಂಸ್ಥಾನದ ಆವತಿ ಗೌಡರ ಕೊನೆಯ ಸಂತತಿ ಅನಂತರಾಮಸ್ವಾಮಿಯ ಮಗಳಾದ ಪುಟ್ಟಪಾರ್ವತಿ ಅಮ್ಮಣ್ಣಿ ಕ್ರಿ.ಶ.೧೮೯೫ರಲ್ಲಿ 'ನಂದಿಮಹಾತ್ಮ್ಯ' ಎಂಬ ಗ್ರಂಥವನ್ನು ತೆಲುಗು ಲಿಪಿಯಲ್ಲಿ ಅಚ್ಚುಮಾಡಿಸಿ ಪ್ರಕಟಿಸಿದ್ದಾಳೆ. ಈ ಕೃತಿಯ ಪೀಠಿಕೆಯಲ್ಲಿ ಇವರ ಪೂರ್ವಜರ ಕುರಿತಾದ ವಿಶೇಷ ಮಾಹಿತಿಗಳು ಉಕ್ತವಾಗಿವೆ. ಯಲಹಂಕ ನಾಳ್ಪ್ರಭುಗಳು ಮೂಲತಃ ಆವತಿ ನಾಡಪ್ರಭು ವಂಶದವರೇ ಆಗಿದ್ದು, ಮುಂದೆ ಇವರನ್ನು ಅವರ ದಾಯಾದಿಗಳಾದ ಇವರನ್ನು ಆವತಿ ನಾಡಪ್ರಭುವೆಂದು ಗುರುತಿಸದೆ ಕೇವಲ ಯಲಹಂಕ ನಾಳ್ಪ್ರಭು ಎಂದೇ ಹೆಸರಿಸಲಾಯಿತು.

ಹಿಂದೆ ರಾಜಮನೆತನದ ಮಹಿಳೆಯರು ಲಿಪಿಕಾರರಿಂದ ಪ್ರತಿಗಳನ್ನು ಮಾಡಿಸುತ್ತಿದ್ದರು, ಪಾಶ್ಚಾತ್ಯರ ಪ್ರಭಾವದಿಂದ ಮುದ್ರಣ ಕಲೆ ಭಾರತಕ್ಕೆ ಬಂದ ನಂತರವೂ ಸಾಹಿತ್ಯ ಪೋಷಣೆ ನಡೆದಿರುವುದಕ್ಕೆ ಈ ಮೇಲಿನ

ಉದಾಹರಣೆಗಳೊಂದಿಗೆ ಈ ಹಿಂದೆ ತಿಳಿಸಿರುವಂತೆ ವಾಣಿವಿಲಾಸ ಸನ್ನಿಧಾನದ ಕೆಂಪುನಂಜಮ್ಮಣ್ಣಿಯವರೂ ಕೆಲವು ಗ್ರಂಥಗಳು ಮುದ್ರಣಗೊಳ್ಳಲು ಕಾರಣರಾಗಿರುವರೆನ್ನುವ ವಿಚಾರವನ್ನು ಗಮನಿಸಬಹುದು.

**ಅಧ್ಯಯನದ ಫಲಿತ**

ಪ್ರಾಚೀನ ಕಾಲದ ಅರಸಿಯರಿಗಿಂತ ಮಧ್ಯಕಾಲೀನ ಅರಸಿಯರು, ರಾಜಕೀಯ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಭಿನ್ನವಾಗಿ ತೋರುವುದಷ್ಟೇ ಅಲ್ಲದೆ ಸಾಹಿತ್ಯಿಕ ಕೊಡುಗೆ ನೀಡುವಲ್ಲಿಯೂ ಭಿನ್ನವಾಗಿ ಕಂಡುಬರುತ್ತಾರೆ. ಪ್ರಾಚೀನ ಕಾಲದ ಅರಸಿಯರ ಸಾಹಿತ್ಯ ಪೊಷಣೆಯನ್ನು ಶಾಸನಗಳ ಆಧಾರದಲ್ಲಿಯೇ ಗಮನಿಸಬೇಕಿದೆ, ಆದರೆ ಮಧ್ಯಕಾಲೀನ ಅರಸಿಯರು ಪ್ರೋತ್ಸಾಹ ನೀಡಿ ಬರೆಯಿಸಿರುವ ಕಾವ್ಯಗಳು ಗ್ರಂಥಸ್ಥಕಾವ್ಯಗಳಾಗಿವೆ.

ಇಲ್ಲಿ ವೈವಿದ್ಯಮಯವಾದ ವಿಚಾರಗಳ ಮೇಲೆ ರಚನೆಯಾದ ಕೃತಿಗಳು ದೊರಕುತ್ತವೆ. ವೈದ್ಯ, ಐತಿಹಾಸಿಕ, ಧಾರ್ಮಿಕ ವಿಚಾರಗಳಲ್ಲಿ ಜೈನ, ವೈದಿಕ ಪೌರಾಣಿಕಗ್ರಂಥಗಳು, ಪತಿಧರ್ಮಗಳಲ್ಲದೆ ವಸ್ತುಕ, ವರ್ಣಕ ಕಾವ್ಯಗಳನ್ನೂ ಗಮನಿಸಬಹುದು.

ಈ ಅಧ್ಯಾಯದಲ್ಲಿ ಹಲವಾರು ಹೊಸ ವಿಚಾರಗಳನ್ನು ಗುರುತಿಸಲಾಗಿದೆ. ಒಂದೇ ಅರಸುಮನೆತನದ ಹಲವಾರು ಅರಸಿಯರು ಸಾಹಿತ್ಯ ರಚನೆಗೆ ಕಾರಣರಾಗಿರುವುದನ್ನು ಒಂದೆಡೆ ಗಮನಿಸಲಾಗಿದೆ. ಸಾಳ್ವ ಅರಸಿಯರು, ಮೂಲ್ಕಿ ಮನೆತನದ ಅರಸಿ, ಕೆಳದಿ ಅರಸಿಯರು, ಮೈಸೂರಿನ ಅರಸಿಯರು, ಕಿತ್ತೂರಿನ ರಾಣಿ, ಬಂಗ ಅರಸಿ, ಚೌಟ ಅರಸಿಯರು ಮೊದಲಾದ ಅರಸುಮನೆತನದವರ ಸಾಹಿತ್ಯ ಪೋಷಣೆಯನ್ನು ಪ್ರತ್ಯೇಕವಾಗಿ ಗುರುತಿಸಲಾಗಿದೆ. ಜೊತೆಗೆ ಹಸ್ತಪ್ರತಿ ಲಿಪಿಕರಣಕ್ಕೆ ಹಾಗೂ ಗ್ರಂಥ ಮುದ್ರಣಕ್ಕೆ ಕಾರಣರಾದ ಆಧುನಿಕ ಕಾಲದ ಅರಸಿಯರ ಕೊಡುಗೆಗಳನ್ನೂ ಗುರುತಿಸಲಾಗಿದೆ.

ಹಲವಾರು ವಿಚಾರಗಳ ಮೇಲೆ ಹಿಂದಿನ ವಿದ್ವಾಂಸರು ಬೆಳಕು ಚೆಲ್ಲಿರುವರಾದರೂ, ಮುಂದಿನ ಸಾಹಿತ್ಯ ಚರಿತ್ರೆಗಳು ಒಳಗೊಳ್ಳದ ಕೆಲವು ವಿಚಾರಗಳನ್ನು ಇಲ್ಲಿ ಗಮನಿಸಿದೆ. ರಾಣಿ ಅಮೃತಾಂಬೆಯು ಷಡಕ್ಷರಿಗೆ ರಾಜಾಶ್ರಯವಿತ್ತು, ಆತನ ಮೊದಲ ಕೃತಿ ರಚನೆಗೆ ಕಾರಣಳಾದ ಸಂದರ್ಭವನ್ನು ಈ ಹಿಂದಿನ ಕೆಲವು ವಿದ್ವಾಂಸರು ಗಮನಿಸಿದ್ದಾರೆ. ಆದರೆ ಷಡಕ್ಷರಿ ಅದಕ್ಕೂ ಪೂರ್ವದಲ್ಲಿ ರಚಿಸಿರುವ ಗದ್ಯಕೃತಿಯನ್ನು ಮೊಟ್ಟಮೊದಲ ಬಾರಿಗೆ ಈ ಅಧ್ಯಯನದಲ್ಲಿ ಗುರುತಿಸಲಾಗಿದೆ.

ಈ ಅಧ್ಯಾಯದಲ್ಲಿ, ಚರ್ಚೆಗೆ ಒಳಗಾಗದ ಕೆಲವು ಸಾಹಿತ್ಯಗಳ ಮೇಲೆ ಬೆಳಕುಚೆಲ್ಲುವ ಪ್ರಯತ್ನ ನಡೆಸಲಾಗಿದೆ. ಕೆಳದಿ ಅರಸಿಯ ಪ್ರೇರಣೆಯ ಮೇರೆಗೆ ಕಾವ್ಯ ರಚಿಸಿರುವ ಗಂಗಾದೇವಿ ಎಂಬ ಕವಯತ್ರಿಯ ಕುರಿತಾದ ವಿಚಾರವೂ ಹೆಚ್ಚು ಚರ್ಚೆಗೆ ಒಳಗಾಗದೆ ನಿರ್ಲಕ್ಷಮಾಡಲ್ಪಟ್ಟಿದೆ. ಮಧ್ಯಕಾಲೀನ ಸಂದರ್ಭಗಳಲ್ಲಿ ಮಹಿಳಾ ಸಾಹಿತಿಗಳ ಸಂಖ್ಯೆ ಕಡಿಮೆಯಾಗಿದೆ ಎಂಬ ವಿಚಾರವು ಸಾಹಿತ್ಯ ಚರಿತ್ರೆಗಳಲ್ಲಿ ಕಂಡುಬರುತ್ತದೆ. ಆದರೆ ಮಹಿಳೆಯರ ಕಾವ್ಯಗಳನ್ನು ಒಂದೆಡೆ ಗಮನಿ, ಚರ್ಚೆಗೆ ಗುರಿಪಡಿಸುವ ಅಗತ್ಯವಿದೆ ಎನ್ನುವ ವಿಚಾರವನ್ನು ಈ ಅಧ್ಯಯನವು ತಿಳಿಸುತ್ತದೆ. ಅದೇ ರೀತಿ ಕಿತ್ತೂರಿನ ಆಸ್ಥಾನದಲ್ಲಿ ೨೨ ಕವಿಗಳು ಆಶ್ರಯ ಪಡೆದಿದ್ದು, ಹಲವಾರು ಉತ್ತಮ ಕೃತಿಗಳು ಹೊರಬರಲು ಕಾರಣವಾಗಿದೆ. ಈ ಕೃತಿಗಳ ಮೇಲೆ ಹೆಚ್ಚು ಚರ್ಚೆಗಳು, ಸಂವಾದಗಳು ನಡೆಯದೆ ಬೆಳಕಿಗೆ ಬಾರದೆ ಹೋಗಿವೆ. ಹೀಗೆ ಗಮನ ಹರಿಸದ ಹಲವಾರು ಕೃತಿಗಳನ್ನು ಕುರಿತು ಈ ಅಧ್ಯಾಯದಲ್ಲಿ ಗಮನಿಸಲಾಗಿದೆ.

ವಿಭಿನ್ನ ಮನೆತನಕ್ಕೆ ಸೇರಿದ ಕರ್ನಾಟಕದ ಪ್ರಾಚೀನ, ಮಧ್ಯಕಾಲೀನ ಅರಸಿಯರು ಎಲ್ಲ ಪ್ರಕಾರದ ಸಾಹಿತ್ಯಕ್ಕೂ ಪ್ರೋತ್ಸಾಹ ನೀಡಿ, ಸಾಹಿತ್ಯ ಕ್ಷೇತ್ರಕ್ಕೆ ಉತ್ತಮ ಕೊಡುಗೆಯನ್ನು ನೀಡಿದ್ದಾರೆ ಎನ್ನುವುದನ್ನು ಈ ಅಧ್ಯಯವು ನಿರೂಪಿಸಿದೆ.

**ಆಕರ ಗ್ರಂಥಗಳು ಹಾಗೂ ಟಿಪ್ಪಣಿಗಳು**


೧. ಹರೀಶ್.ಜಿ.ಬಿ., ೨೦೧೧, ***ದೇವಚಂದ್ರ ಕನ್ನಡ ಭಾಷೆ ಮತ್ತು ಸಂಸ್ಕೃತಿ***, ತುಮಕೂರು ವಿಶ್ವವಿದ್ಯಾನಿಲಯ, ಪು.೧೨೫

೨. ನರಸಿಂಹಾಚಾರ್.ಆರ್., ೨೦೧೧, ***ಕರ್ಣಾಟಕ ಕವಿಚರಿತೆ,*** ಸಂ–೨, ಕ.ಸಾ.ಪ., ಬೆಂಗಳೂರು ಪು.೨೬೮

೩. ಸಣ್ಣಯ್ಯ.ಬಿ.ಎಸ.(ಸಂ), ೧೯೮೮, ***ದೇವಚಂದ್ರ, ರಾಜಾವಳಿ ಕಥಾಸಾರ***, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿವಿ ಪು.೨೭೫

೪. ಹರೀಶ್.ಜಿ.ಬಿ., ೨೦೧೧, ***ದೇವಚಂದ್ರ ಕನ್ನಡ ಭಾಷೆ ಮತ್ತು ಸಂಸ್ಕೃತಿ***, ತುಮಕೂರು ವಿಶ್ವವಿದ್ಯಾನಿಲಯ, ಪು.೧೨೫

೫. ವಿಘ್ನರಾಜ ಎಸ್.ಆರ್., ೨೦೦೮, ***ಕರ್ನಾಟಕದ ಸಂಸ್ಕೃತ ಜೈನಕವಿಗಳು***, ಕಸಾಪ, ಬೆಂಗಳೂರು, ಪು.೧೭೫

೬. ಶೈಲ.ಯು, ೨೦೦೪, ***ತುಳುನಾಡಿನ ನಿಸಿದಿ ಸ್ಮಾರಕಗಳು***, ತುಳುನಾಡಿನ ಶಾಸನಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ ಪು.೫೯

೭. KI III part 1, No.17

೮ KI III part 1, No.16

೯. ನರಸಿಂಹಾಚಾರ್.ಆರ್., ಪೂರ್ವೋಕ್ತ ಪು.೨೬೬–೨೬೮

೧೦. KI III part 1, No.16

೧೧. ಉಮಾನಾಥ ಶಣ್ಯೈ.ವ್ಯೆ, ೨೦೦೩, ***ಮೂಡುಬಿದಿರೆಲೇಖಕರ ಕೊಡುಗೆ***, ಕಸಾಪ, ಬೆಂಗಳೂರು, ಪು.೧೮

೧೨. ನರಸಿಂಹಾಚಾರ್.ಆರ್., ಪೂರ್ವೋಕ್ತ, ಪು.೧೭೮

೧೩. ಭಾನುಮತಿ.ವೈ.ಸಿ., ೨೦೦೯, ***ಸಂಸ್ಕೃತ ಹಸ್ತಪ್ರತಿಗಳು ಮತ್ತು ಕನ್ನಡ ಲಿಪಿಕಾರರು***, ಗ್ರಂಥಸಂಪಾದನೆ ಎಳೆಗಳು, ಮೈಸೂರು

೧೪. ನರಸಿಂಹಮೂರ್ತಿ.ಪಿ.ಎನ್., ೨೦೦೭, ಕುಂದನಾಡಿನ ಶಾಸನಗಳು, ಕನ್ನಡ ಸಾಹಿತ್ಯ ಸಮ್ಮೇಳನ, ಉಡುಪಿ

೧೫. ಭಾನುಮತಿ.ವೈ.ಸಿ. ೨೦೧೧, ಅರಸರ ಚರಿತ್ರೆಗಳು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು

೧೫ಅ. ಪುಟ್ಟಸ್ವಾಮಿ.ಡಿ.(ಸಂ) ೧೯೫೦, ಪದ್ಮನಾಭ, ***ಪದ್ಮಾವತಿ ಮಹಾತ್ಮ್ಯಾ ಅಥವಾ ಜಿನದತ್ತರಾಯ ಚರಿತ್ರೆ,*** ವೀರಭವನ, ಮಂಗಳೂರು

೧೬. ನಾಗೇಗೌಡ.ಎಚ್.ಎಲ್, ೨೦೦೭, ***ಪ್ರವಾಸಿ ಕಂಡ ಇಂಡಿಯಾ,*** ಐಬಿಎಚ್ ಪ್ರಕಾಶನ, ಬೆಂಗಳೂರು, ಪು.೨೫೫

೧೭. ಶಾಸ್ತ್ರಿ.ಬಿ.ಎಸ್., ೧೯೬೯, *The Portuguese in Kanara* ಅಪ್ರಕಟಿತ ಪಿ.ಹೆಚ್.ಡಿ ಪ್ರಬಂಧ ಬೊಂಬಾಯಿ ವಿಶ್ವವಿದ್ಯಾಲಯ

೧೮. ಮುದ್ದು ಮೂಡುಬೆಳ್ಳೆ, ೨೦೧೧, ***ಮೂಲ್ಕಿಯ ಸಾವಂತ ಅರಸರು ಐತಿಹಾಸಿಕ ಸಾಂಸ್ಕೃತಿಕ ನೋಟ***, ಮೂಲ್ಕಿ ಸೀಮೆ ಅರಮನೆ ಅಭಿವೃದ್ಧಿ ಸಮಿತಿ, ಪಡುಪಣಂಬೂರು

೧೯. ಮರುಳಯ್ಯ.ಸಾ.ಶಿ., ೨೦೦೧, ***ಸಾಶಿಮ.ಸಂಶೋಧನೆ***, ಸಪ್ನ ಬುಕ್‌ಹೌಸ್, ಬೆಂಗಳೂರು

೨೦. ಶಾಮಶಾಸ್ತ್ರಿ.ಆರ್(ಸಂ), ೧೯೭೩, ಲಿಂಗಣ್ಣ, ***ಕೆಳದಿನೃಪ ವಿಜಯಂ,*** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿವಿ,

೨೧. ಮರುಳಯ್ಯ.ಸಾ.ಶಿ., ಪೂರ್ವೋಕ್ತ, ಪು.೩೯೧

೨೨. ಶಾಮಶಾಸ್ತ್ರಿ.ಆರ್(ಸಂ) ಪೂರ್ವೋಕ್ತ, ಪು. ೧೪೭

೨೩. ದೇವರ ಕೊಂಡಾರೆಡ್ಡಿ, ೨೦೦೧, ***ಕೆಳದಿ ಬಸವರಾಜ ವಿರಚಿತ ಕರ್ನಾಟಕ ಕಾಳಿಕಾಕಾಂಡದಲ್ಲಿನ ಐತಿಹಾಸಿಕ ಅಂಶಗಳು***, ಗೌರವ, ಜಿ.ಎಸ್.ಎಸ್.ಅಭಿನಂದನಾ ಗ್ರಂಥ, ಅಂಕಣ, ಮಲ್ಲೇಶ್ವರಂ, ಬೆಂಗಳೂರು, ಪು.೧೮೬

೨೪. ದೇವರ ಕೊಂಡಾರೆಡ್ಡಿ, ೧೯೮೪, ***ಕೆಳದಿ ಬಸವರಾಜ ವಿರಚಿತ ಕಾಳಿಕಾಕಾಂಡದ ಪ್ರಾರ್ಥನಾ ಪದ್ಯಗಳು,*** ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಸಂ.೬೯, ಸಂಚಿಕೆ ೨

೨೫. ಹೆರಂಜೆ ಕೃಷ್ಣ ಭಟ್ಟ & ಮುರಳೀಧರ ಉಪಾಧ್ಯ ಹಿರಿಯಡಕ, ೧೯೯೫, ***ಗೋವಿಂದ ಪೈ ಸಂಶೋಧನ ಸಂಪುಟ,*** ಉಡುಪಿ, ಪು.೪೧೮

೨೬. ನರಸಿಂಹಾಚಾರ್.ಆರ್., ಪೂರ್ವೋಕ್ತ, ಪು.೪೦೩

೨೭. ಹೆರಂಜೆ ಕೃಷ್ಣ ಭಟ್ಟ & ಮುರಳೀಧರ ಉಪಾಧ್ಯ ಹಿರಿಯಡಕ, ಪೂರ್ವೋಕ್ತ, ಪು.೪೧೫

೨೮. ಕಲಬುರ್ಗಿ.ಎಂ.ಎಂ. ೧೯೭೩, ***ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ,*** ಕರ್ನಾಟಕ ವಿವಿ ಧಾರವಾಡ, ಪು.೫೧

೨೯. ***ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ***, ಸಂ.೫ ಕ್ರ.ಸಂ.೩೩೨, ಮೈಸೂರು ವಿವಿ, ಮೈಸೂರು

೩೦. ನರಸಿಂಹಾಚಾರ್.ಆರ್., ಪೂರ್ವೋಕ್ತ, ಪು.೪೪೨

೩೧. ಹೆರಂಜೆ ಕೃಷ್ಣಭಟ್ಟ, ಮುರಳೀಧರ ಉಪಾಧ್ಯ ಹಿರಿಯಡಕ, ಪೂರ್ವೋಕ್ತ, ಪು.೪೧೯

೩೨. ಹಸ್ತಪ್ರತಿ ಸೂಚಿ, ಓರಿಯಂಟಲ್ ಮಾನ್ಯುಸ್ಕ್ರಿಪ್ಟ್ ಲೈಬ್ರರಿ, Vol. VI ಕ್ರಮ ಸಂಖ್ಯೆ. ೧೧೩೮ ಮದ್ರಾಸು

೩೩. ಮಂಜುನಾಥ್.ಜಿ.ಜೆ., ೨೦೦೭, ***ರಾಣಿ ಗೌರಮ್ಮನ ಚರಿತೆ ; ರಾಣಿ ಗೌರಮ್ಮನ ಮೇಲಿನ ಬಿಡಿ ಪದಗಳು,*** ಮೈಸೂರು

ಒಡೆಯರ ಆಕರ ಸಾಹಿತ್ಯ, ಪತ್ರಾಗಾರ ಇಲಾಖೆ, ಬೆಂಗಳೂರು

೩೪. ನರಸಿಂಹಾಚಾರ್.ಆರ್., ಪೂರ್ವೋಕ್ತ, ಸಂಪುಟ–೩, ೨೦೦೫, ಪು.೭೧

೩೫. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ, ಪೂರ್ವೋಕ್ತ

೩೬. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ, ಪೂರ್ವೋಕ್ತ, ಸಂ.೫ ಕ್ರ.ಸಂ.೩೩೨

೩೭. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ, ಪೂರ್ವೋಕ್ತ, ಓಲೆ ಪ್ರತಿ ಸಂಖ್ಯೆ– ಕೆ ೮೩೮, ೧–೭೪ ಪತ್ರಗಳು

೩೮. ಕಾರ್ತಿಕ್.ಎಸ್., ೨೦೧೬, ***ಹಸ್ತಪ್ರತಿ ಪುಷ್ಪಿಕೆಯಲ್ಲಿನ ಕಂಠೀರಾಯ ಗದ್ಯಾಣದ ಉಲ್ಲೇಖ ಮತ್ತು ಹಸ್ತಪ್ರತಿಯ ಕಾಲ: ಸಂಕ್ಷಿಪ್ತ ವಿಶ್ಲೇಷಣೆ,*** ಸಂಶೋಧನ ಸಂಭಾವನೆ, ಮಂಗಳೂರು ವಿವಿ., ಪು.೧೩೮

೩೯. ತಲ್ಲೂರು ರಾಯನಗೌಡರು, ೧೯೪೬, ***ಕಿತ್ತೂರು ಕದನಗೀತೆ,*** ಕಿತ್ತೂರುರಾಣಿ ಚೆನ್ನಮ್ಮ ಇತಿಹಾಸಮಂಡಲ, ಬೈಲಹೊಂಗಲ

೪೦. ಚೆನ್ನಕ್ಕ ಪಾವಟೆ, ***ಕಿತ್ತೂರು ಕಥನ,*** ಚೆನ್ನಗಂಗಾ ಪ್ರಕಾಶನ, ಧಾರವಾಡ, ೨೦೦೨

೪೧. ಉಮಾನಾಥ ಶಣೈ, ***ಬಂಗರಸರ ಕಾಲದ ಸಾಹಿತ್ಯ,*** ತುಳುಕರ್ನಾಟಕದ ಅರಸುಮನೆತನಗಳು, ಕನ್ನಡ ವಿವಿ, ಹಂಪಿ. ೨೦೦೦

೪೨. ಉಮಾನಾಥ ಶಣೈ.ವೈ, ***ಮೂಡುಬಿದಿರೆ ಲೇಖಕರ ಕೊಡುಗೆ,*** ಕನ್ನಡ ಸಾಹಿತ್ಯ ಪರಿಷತ್ತು, ಬೆಂ. ೨೦೦೩

೪೩. ನರಸಿಂಹಾಚಾರ್.ಆರ್., ಪೂರ್ವೋಕ್ತ, ಸಂಪುಟ – ೩

೪೪. ನರಸಿಂಹಾಚಾರ್.ಆರ್., ಪೂರ್ವೋಕ್ತ, ಸಂಪುಟ – ೩, ಪು.೧೧೨

೪೫. ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ, ಪೂರ್ವೋಕ್ತ, ಸಂ.೯, ಕ್ರ.ಸಂ.೭೬

# ಅಧ್ಯಾಯ – ೭

## ಕರ್ನಾಟಕದ ಅರಸಿಯರು ರಚಿಸಿರುವ ಕನ್ನಡ ಸಾಹಿತ್ಯ

ಕನ್ನಡದ ಅರಸಿಯರು ಸಾಹಿತ್ಯ ರಚನೆಗೆ ಪ್ರೋತ್ಸಾಹ ನೀಡುತ್ತಿದ್ದುದಷ್ಟೇ ಅಲ್ಲದೆ ಕೆಲವರು ಸ್ವತಃ ಕಾವ್ಯರಚನಾ ಸಾಮರ್ಥ್ಯವನ್ನೂ ಹೊಂದಿದ್ದರು. ಶಾಸನಗಳು ಕೆಲವು ರಾಣಿಯರನ್ನು ಉತ್ತಮ ವಾಙ್ಮಿಗಳೆಂದೂ, ಚತುರೆಯರೆಂದು, ವಿದ್ಯಾವಿಳಾಸಿನಿಯರೆಂದೂ, ಮೊದಲಾಗಿ ಬಣ್ಣಿಸಿವೆ. ಪಲ್ಲವ ದೀವಬ್ಬರಸಿ 'ವಾಗ್ದೇವಿಯರ ದೊರೆ'[೧], ಮಹಾಸಾಮಂತ ಶೂಕ್ರಕಾಂಕನ ಮಡದಿ ಜಕ್ಕಿಸುಂದರಿ 'ಸಹಜಸರಸ್ವತಿ ವಿಳಾಸ ವಿದ್ಯಾಧರಿ'[೨], ಚಾಲುಕ್ಯ ಜಗದೇಕಮಲ್ಲದೇವನ ಮಡದಿ ಸುಗ್ಗಲದೇವಿ 'ಕಲಿಕಾಲ ಸರಸ್ವತಿ'[೩], ಚಾಲುಕ್ಯ ತ್ರೈಲೋಕ್ಯಮಲ್ಲ ಸೋಮೇಶ್ವರನ ಮಡದಿ ಮೈಳಲದೇವಿ 'ವಿಳಾಸ ವಿದ್ಯಾಧರಿ' (SII ಸಂ.I-I, ೮೩ ಬಾಗೇವಾಡಿ), ಸೋವರಸ ದಂಡನಾಥನ ಮಡದಿ 'ಭಾರತೀ ಕರ್ಣಾವತಂಸೆ', ಚಾಲುಕ್ಯ ಭುವನೈಕಮಲ್ಲನ ಮಡದಿ ಕಂಚಲಮಹಾದೇವಿ 'ಶೃಂಗಾರ ವಿದ್ಯಾಧರಿ', 'ಸಕಳಕಳಾಧರಿ'[೪], ಭುಮನೈಕಮಲ್ಲದ ತಂಗಿ ಸುಗ್ಗಲದೇವಿ 'ಅಭಿನವ ಸರಸ್ವತಿ', ವೀರನೊಳಂಬನ ಪತ್ನಿ ಮಾಳಲದೇವಿ 'ವಿದ್ಯಾಧರಿ'[೫], ಕದಂಬ ಕುಲದ ರಾಣಿ ಮೇಚಲದೇವಿ 'ಅತಿಚತುರೋಕ್ತಿಯೊಳೆ ಸರಸ್ವತಿಗಂ ಮಿಗಿಲು'[೬] ಮಲ್ಲಿದೇವ ಅರಸನ ರಾಣಿ ಸೀತಾದೇವಿಯನ್ನು 'ಶ್ರವ್ಯಕಾವ್ಯದಿವ್ಯ ಗೀತವಾದ್ಯ ನೃತ್ಯಾದಿವಿದ್ಯಾಪ್ರವೀಣೆ'[೭] ಎಂದು ಮೊದಲಾಗಿ ಬಣ್ಣಿಸಿರುವುದು ಅರಸಿಯರ ವಿದ್ಯಾಪ್ರಾವಿಣ್ಯತೆಯನ್ನು ಕುರಿತು ಹೇಳಿರುವ ಕೆಲವು ಉದಾಹರಣೆಗಳಾಗಿವೆ. ಈ ಬಿರುದಾವಳಿಗಳು ಕೇವಲ ಮುಖಸ್ತುತಿಯಾಗಿರದೆ ಅವರ ವಿದ್ವತ್ತಿಗೆ, ಕಾರ್ಯಸಾಧನೆಗೆ ಸಂದ ಪ್ರಶಸ್ತಿಗಳಾಗಿದ್ದವು ಎನ್ನುವುದನ್ನು ಈ ಹಿಂದಿನ ಅಧ್ಯಾಯಗಳಲ್ಲಿ ಗಮನಿಸಿದ್ದೇವೆ. ನ್ಯಾಯ ತೀರ್ಮಾನಗಳಲ್ಲಾಗಲೀ, ವಿದ್ವತ್ಸಭೆಯಲ್ಲಿಯಾಗಲೀ ತಮ್ಮ ಚಾತುರ್ಯತೆಯನ್ನು ಮೆರೆಯುತ್ತಿದ್ದ ಅರಸಿಯರು, ಅರಸರಿಗೆ ಸರಿಸಮಾನವಾದ ವಿದ್ಯಾಭ್ಯಾಸವನ್ನೂ ಪಡೆದಿರುತ್ತಿದ್ದರು.

ವಿದ್ಯಾಭ್ಯಾಸಗಳು ಗುರುಕುಲ ಪದ್ಧತಿಯಲ್ಲಿ, ಘಟಿಕಾಸ್ಥಾನಗಳಲ್ಲಿ ನಡೆಯುತ್ತಿದ್ದರೂ, ಅದು ಪುರುಷರಿಗೆ ಮಾತ್ರ ಸೀಮಿತವಾಗಿದ್ದು, ಸ್ತ್ರೀ ಶಿಕ್ಷಣ ಹೆಚ್ಚಾಗಿ ಮನೆಯಲ್ಲಿಯೇ ನಡೆಯುತ್ತಿತ್ತೆಂದು ಹೇಳಬಹುದು. ಪಂಪನ ಆದಿ ಪುರಾಣದಲ್ಲಿ ತ್ರಿಲೋಕ ಗುರುವಾದ ಆದಿನಾಥನು ತನ್ನ ಹೆಣ್ಣುಮಕ್ಕಳಾದ ಬ್ರಾಹ್ಮಿ ಮತ್ತು ಸೌಂದರಿಯರಿಗೆ ಸಿದ್ಧಂ ನಮಃ ಎಂಬ ಮುಖ್ಯ ಅಕ್ಷರಗಳನ್ನು ಬರೆದು ತಿಳಿಸಿ ಆನಂತರ ಕ್ರಮವಾಗಿ ಅವರಿಬ್ಬರಿಗೆ ಲಿಪಿ ಮತ್ತು ಗಣಿತ (ಲೆಕ್ಕ) ವನ್ನು ಹೇಳಿಕೊಟ್ಟನೆಂಬ ವಿವರಣೆ ಇದೆ[೮]. ಸುಮಾರು ಹನ್ನೆರಡನೆಯ ಶತಮಾನದ ಅಂತ್ಯದಲ್ಲಿದ್ದ ಅರ್ಹದ್ದಾಸ ಒಬ್ಬ ಸಾಮಂತರಾಜನಾಗಿದ್ದು ರಟ್ಟಮತ ಎಂಬ ಕೃತಿ ರಚನೆ ಮಾಡಿದ್ದಾನೆ[೯]. ತನ್ನ ಕೃತಿಯಲ್ಲಿ "ನೆಗಟ್ದಿಭಯಾಂಬುಧಿ ನಿಜಸುತೆಗೆ ಚಂದ್ರಲೇಖೆಗೆ ಪೇಟ್ದಿಪಂ ಕನ್ನಡದಿಂ" ಎನ್ನುತ್ತಾ ಮಳೆಯ ಕುರಿತಾದ ಭವಿಷ್ಯವನ್ನು ತಿಳಿಸುವ ಈ ಜ್ಯೋತಿಷ್ಯ ಕೃತಿಯನ್ನು ಮಗಳಿಗೆ ಬೋಧಿಸುತ್ತಲೇ ನಿರೂಪಿಸಿದ್ದಾನೆ. ಶಿಕಾರಿ ಪುರದ ಶಾಸನವೊಂದು ತಿಳಿಸುವಂತೆ ಹರಿಯಲೆ ಎಂಬುವವಳು ತಂದೆಯಂತೆ ಕುಸ್ತಿ ಪಟುವಾಗಿದ್ದು, ತನ್ನ ತಂದೆಯನ್ನು ಮೋಸದಿಂದ ಕೊಂದವರ ವಿರುದ್ಧ ಸೇಡು ತೀರಿಸಿಕೊಳ್ಳುತ್ತಾಳೆ. ಇವಳು ರಾಜಮನೆತನದವಳಲ್ಲವಾದರೂ, ತಂದೆಯ ವಿದ್ಯೆಯನ್ನು ಹೆಣ್ಣುಮಕ್ಕಳೂ ಕಲಿಯುತ್ತಿದ್ದ ವಾಡಿಕೆ ಅಂದಿನ ದಿನಗಳಲ್ಲಿತ್ತೆನ್ನುವುದಕ್ಕೆ ಉತ್ತಮ ಉದಾಹರಣೆಯಾಗಿದೆ. ಪುತ್ರಿಯರಿಗಾಗಿ ತಂದೆಯರು ಹಸ್ತಪ್ರತಿ ಲೇಖನ ಕಾರ್ಯ ಮಾಡಿಸಿದ ಅನೇಕ ಉದಾಹರಣೆಗಳು ದೊರಕುತ್ತವೆ. ಜಿನಚಂದ್ರನು ತನ್ನ ಪುತ್ರಿತ್ರಯಂಗಳನೋದಿಸಲೆಂದು ಅಮರೇಂದ್ರ ವಂದಿತ ಶ್ರೀ ಸುಕುಮಾರನ ಚಾರುಚರಿತವನ್ನು ಪ್ರತಿಮಾಡಿದ್ದಾನೆ[೧೦].

ಸ್ವತಃ ತಂದೆ ವಿದ್ಯಾಭ್ಯಾಸ ಹೇಳಿಕೊಡುತ್ತಿದ್ದುದಲ್ಲದೆ, ಅರಮನೆಯಲ್ಲಿ ವಿದ್ಯಾಭ್ಯಾಸಕ್ಕಾಗಿ ವಿದ್ವಾಂಸರನ್ನು ನೇಮಿಸುತ್ತಿದ್ದ ಕುರಿತಾಗಿ ಕೆಲವು ವಿಚಾರಗಳು ತಿಳಿದು ಬರುತ್ತದೆ. ಚಾಲುಕ್ಯ ವಿಕ್ರಮಾದಿತ್ಯ ತನ್ನ ಮಗಳು

ಚಂಪಾವತಿ (ಲೀಲಾವತಿ) ಯ ವಿದ್ಯಾಭ್ಯಾಸಕ್ಕಾಗಿ ಕಾಶ್ಮೀರ ಮೂಲದ ವಿದ್ವಾಂಸ ಹಾಗು ಕವಿಯಾಗಿದ್ದ ಬಿಲ್ಹಣನನ್ನು ನೇಮಿಸಿದ್ದನೆಂದು ಬಿಲ್ಹಣನ ಸಂಸ್ಕೃತ ಕಾವ್ಯ "ಚೋರ ಪಂಚಶಿಖಾ" ಕೃತಿಯಿಂದ ತಿಳಿದು ಬರುತ್ತದೆ. ಮಹಿಳೆಯರಿಗೆ ಗುರುಮುಖೇನ ವಿದ್ಯಾಭ್ಯಾಸ ನಡೆಯುತ್ತಿದ್ದುದಕ್ಕೆ ಇನ್ನೂ ಕೆಲವು ಉದಾಹರಣೆಗಳನ್ನು ಕಾಣಬಹುದು. ಬಸವಣ್ಣನ ಅಕ್ಕ ನಾಗಮ್ಮ ಜಾತವೇದಸ್ವಾಮಿಯಲ್ಲಿ ಸಕಲ ವಿದ್ಯೆಗಳನ್ನೂ ಅಭ್ಯಾಸಮಾಡಿ, ಚೆನ್ನಬಸವಣ್ಣನಂತಹ ಮಹಾಪುರುಷನಿಗೆ ತಾಯಿಯಾಗಿ, ಅನುಭವ ಮಂಟಪದ ಒಂದು ಆಧಾರಸ್ಥಂಭವಾದವಳು. ಕವಿ ಜನ್ನನ ಪತ್ನಿ ಲಕುಮಾದೇವಿಗೆ ಬಾಳಚಂದ್ರ ಗುರುವಾಗಿದ್ದನೆಂದು ಜನ್ನನ ಅನಂತನಾಥಪುರಾಣ ಹಾಗೂ ಪಾರ್ಶ್ವಕವಿಯ ಹೇಳಿಕೆಗಳಿಂದ ತಿಳಿಯುತ್ತದೆ. ವಿಜಯನಗರದ ಅರಸಿ, ಬುಕ್ಕರಾಯನ ಸೊಸೆ ಗಂಗಾದೇವಿಯು ಸಂಸ್ಕೃತದಲ್ಲಿ ಕಾವ್ಯ ರಚಿಸುವ ಪರಿಣತಿ ಪಡೆದಿದ್ದಳು ಅಲ್ಲದೆ ಈಕೆ ವಿಶ್ವನಾಥ ಎಂಬ ತನ್ನ ಗುರುವನ್ನು ಸ್ತುತಿಸಿದ್ದಾಳೆ[೧೧]. ಮೈಸೂರು ಅರಸಿ ದೇವಮ್ಮ ಮದುವೆಯಾಗಿ ಬಂದ ಮೇಲೆ ಅಳಸಿಂಗಾರಾರ್ಯನಲ್ಲಿ ವಿದ್ಯಾಭ್ಯಾಸ ಮಾಡಿದ್ದಾಳಲ್ಲದೆ, ಇವಳ ಊಳಿಗದವಳಾಗಿದ್ದ ಸಂಚಿಯ ಹೊನ್ನಮ್ಮ ಕೂಡ ಅಳಸಿಂಗಾರಾರ್ಯನಲ್ಲಿ ವಿದ್ಯಾಭ್ಯಾಸ ಪಡೆದುಕೊಂಡವಳೇ ಆಗಿದ್ದಾಳೆ[೧೨].

ಜೈನಧರ್ಮೀಯರು ಪ್ರಾಚೀನ ಕಾಲದಲ್ಲಿ ಸ್ತ್ರೀಯರ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿದವರಾಗಿದ್ದಾರೆ. ನಿಸಿದಿ ಶಾಸನಗಳಲ್ಲಿ ವ್ರತಧಾರಿಯ ಸನಿಹದಲ್ಲಿ ಆರಾಧನಾ ಗ್ರಂಥಗಳಂಥ ಜೈನ ಶಾಸ್ತ್ರಗ್ರಂಥಗಳನ್ನು ಇಟ್ಟುಕೊಂಡಿರುವ ಶಿಲ್ಪಗಳು ಇರುವುದನ್ನು ಗಮನಿಸಬಹುದು. ನಾಗಾರ್ಜುನಯ್ಯ ಮತ್ತು ದಿಂಬಿಕಬ್ಬೆಯರ ಮಗಳಾದ ಸರ್ವಶಾಸ್ತ್ರ ಪ್ರಸಿದ್ಧೆಯಾದ ಸಾವಿನಿರ್ಮ್ಮಡಿಯು ಈಕೆ ಸಕಲಶಾಸ್ತ್ರ ಪಾರಂಗತಳಾಗಿದ್ದಳು, ಶಿಲ್ಪದಲ್ಲಿ ಇವಳು 'ಹರಸಿದ್ಧಿ' ಎಂಬ ಬರವಣಿಗೆಯನ್ನೊಳಗೊಂಡ ತಾಳೆಗರಿ ಹಿಡಿದಂತೆ ಕಂಡರಿಸಲಾಗಿದೆ. ಬೋಧನ ಭಂಗಿಯಲ್ಲಿ ಆಸೀನಳಾದ ಈಕೆಯ ಎಡಭಾಗದಲ್ಲಿ ವ್ಯಾಸಪೀಠವಿದೆ. ಎಡಗೈಯಲ್ಲಿ ಓಲೆಗರಿ ಗ್ರಂಥ ಹಿಡಿದಿದ್ದಾಳೆ.

ಅರಮನೆಯ ಮಹಡಿಯಲ್ಲಿ ಸ್ತ್ರೀಯರ ಶಿಕ್ಷಣಕ್ಕಾಗಿಯೇ 'ನಾಗವಾಸ' 'ಕನ್ನೆ ಮಾಡ'ವನ್ನು ರಚಿಸಲಾಗುತ್ತಿತ್ತು ಹಾಗೂ ಅಲ್ಲಿ ರಾಜಕುಮಾರಿಯರಿಗೂ ಪರಿವಾರದ ಇತರ ಹುಡುಗಿಯರಿಗೂ "ಕುಶಲಶಾಸ್ತ್ರ ವಿದ್ಯಾನಿಕವನ್ನು ಕಲಿಸಿ.." ಪರಿಣತೆಯರಾಗುವ ಅವಕಾಶಗಳನ್ನು ಒದಗಿಸಲಾಗುತ್ತಿತ್ತು ಎಂಬ ವಿವರಣೆ ಚಾಮರಸನ ಪ್ರಭುಲಿಂಗಲೀಲೆಯಲ್ಲಿ ದೊರಕುತ್ತದೆ. ಚೆಲುವಾಂಬೆಯ ಕೃತಿ 'ವರನಂದಿ ಕಲ್ಯಾಣ'ದಲ್ಲಿ ರಾಜಕುಮಾರಿ ವರನಂದಿಗೆ ಅವಳ ತಂದೆ ವಿದ್ಯಾಭ್ಯಾಸಕ್ಕಾಗಿ ಮಾಡುವ ಏರ್ಪಾಟು ಅಂದಿನ ಅರಮನೆಯ ವಿದ್ಯಾಭ್ಯಾಸದ ಚಿತ್ರಣವೇ ಆಗಿದೆ. ರಾಜಮನೆತನದ ಮಹಿಳೆಯರು ಗ್ರಂಥಗಳನ್ನು ಪ್ರತಿ ಮಾಡಿಸಿ ಅಧ್ಯಯನಕ್ಕಾಗಿ ಬಳಸಿಕೊಳ್ಳುತ್ತಿದ್ದರು. ಬೆಳವಡಿ ಮಲ್ಲಮ್ಮನ ತಂದೆ ಇವಳಿಗೆ ವಿದ್ಯಾಭ್ಯಾಸ ಒದಗಿಸಿದ ವಿಚಾರ ಇವಳ ಕಾಲದಲ್ಲಿಯೇ ರಚಿತವಾಗಿರುವ ಕೃತಿ 'ಬೆಳವಡಿ ಮಲ್ಲಮ್ಮ ಸಮರೋತ್ಸವ' ದಲ್ಲಿ ವಿವರವಾಗಿ ದೊರಕುತ್ತದೆ.

ವಿದ್ಯಾವತಿಯರಾಗಿರುತ್ತಿದ್ದ ಅರಸಿಯರು ಕಾವ್ಯರಚನೆಯಲ್ಲಿಯೂ ತೊಡಗಿದ್ದರು. ಅರಸಿಯರು ರಚಿಸಿದ ವಿಭಿನ್ನ ಪ್ರಕಾರದ ಕೃತಿಗಳನ್ನು ಇಲ್ಲಿ ಗಮನಿಸಬಹುದು. ಅರಸಿಯರು ರಚಿಸಿರುವ ಕೃತಿಗಳನ್ನು ಕನ್ನಡ ಸಾಹಿತ್ಯ ಹಾಗೂ ಸಂಸ್ಕೃತ ಸಾಹಿತ್ಯ ಎಂದು ವಿಭಾಗಿಸಿ ವಿಭಿನ್ನ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ.

ಕನ್ನಡ ಸಾಹಿತ್ಯದಲ್ಲಿ ಚಂಪು, ವಚನ, ಸಾಂಗತ್ಯ, ಷಟ್ಪದಿ ಮೊದಲಾದ ಪ್ರಕಾರಗಳು ಕಂಡುಬರುತ್ತವೆ. ಈ ಎಲ್ಲ ಪ್ರಕಾರಗಳಲ್ಲಿಯೂ ಅರಸಿಯರು ಕಾವ್ಯ ರಚಿಸಿರುವುದನ್ನು ಕಾಣಬಹುದು. ಸಾಳ್ವ ಮನೆತನದ ನಾಗಲಾಂಬೆಯು ಚಂಪೂ ಪ್ರಕಾರದಲ್ಲಿ ಕಾವ್ಯ ರಚಿಸಿದ್ದರೆ, ಚೆಲುವಾಂಬೆ ಸಾಂಗತ್ಯದಲ್ಲಿ, ಗದ್ಯದಲ್ಲಿ, ಕೀರ್ತನೆ ಪ್ರಕಾರದಲ್ಲಿ ಕೃತಿಗಳನ್ನು ರಚಿಸಿದ್ದಾಳೆ. ಇವಳಂತೆ ಸುರಪುರ ಅರಸಿ ರಂಗಮ್ಮ ಕೀರ್ತನೆ ಪ್ರಕಾರದಲ್ಲಿ ಕೃತಿಗಳನ್ನು ರಚಿಸಿದ್ದಾಳೆ.

## ವಚನಸಾಹಿತ್ಯ

ಕರ್ನಾಟಕದಲ್ಲಿನ ವಚನ ಚಳುವಳಿಯ ಸಂದರ್ಭವು ಸಾಮಾಜಿಕ, ಧಾರ್ಮಿಕ, ಭಾಷಿಕ ಮೊದಲಾದ ವಲಯದಲ್ಲಿ ಹೊಸ ಅಲೆಯನ್ನು ಸೃಷ್ಟಿಸಿದ ಸಂಕ್ರಮಣಕಾಲ. ಇದರ ಪ್ರಭಾವ ರಾಜಕೀಯ ಕ್ಷೇತ್ರದಲ್ಲಿಯೂ ಕಂಡುಬರುತ್ತದೆಯಾದರೂ ರಾಜಾಶ್ರಯವನ್ನು ಬಯಸದ, 'ಕಾಯಕವೇ ಕೈಲಾಸ'ವೆನ್ನುವ ದುಡಿಯುವ ಶ್ರಮಿಕ ವರ್ಗದಿಂದಲೇ ವಚನ ಸಾಹಿತ್ಯ ಬೆಳೆದು ಬಂದದ್ದು ಗಮನಾರ್ಹ. ಸಾಮಾಜಿಕ ವಲಯದಲ್ಲಿ ಎಲ್ಲ ವರ್ಗ, ಪಂಗಡದವರಿಗೂ ಮುಕ್ತವಾತಾವರಣ ಏರ್ಪಟ್ಟಿದ್ದ ಈ ಕಾಲದಲ್ಲಿ ಅನೇಕ ಮಹಿಳೆಯರೂ ವಚನಸಾಹಿತ್ಯ ರಚನೆಗೆ ತೊಡಗಿದ್ದು ಕಂಡುಬರುತ್ತದೆ. ಈ ಕೆಲವು ಮಹಿಳೆಯರಿಗೆ ರಾಜಮನೆತನದ ಸಂಬಂಧವಿರುವುದನ್ನು ಇಲ್ಲಿ ಗುರುತಿಸಬಹುದು. ಇವರಲ್ಲಿ ಅಕ್ಕಮಹಾದೇವಿ, ಬಸವಣ್ಣನ ಮಡದಿ ನಾಗಲಾಂಬೆ, ಗಂಗಾಂಬಿಕೆ, ಚೋಳ ರಾಜಕುಮಾರಿಯರೆನ್ನಲಾದ ರೇಣುಕಾಚಾರ್ಯರ ಮಡದಿಯರು ಮೊದಲಾದವರನ್ನು ಹೆಸರಿಸಬಹುದು. ಆದರೆ ಇವರು ರಾಜಮನೆತನದಲ್ಲಿ ಹುಟ್ಟಿ ಬೆಳೆದರೂ, ರಾಜಭೋಗಜೀವನದಿಂದ ದೂರವಾಗಿ ಸಾಮಾನ್ಯರಂತೆ ಜೀವನ ನಡೆಸಿದವರು.

### ಅಕ್ಕಮಹಾದೇವಿ:

ಕನ್ನಡಸಾಹಿತ್ಯದಲ್ಲಿನ ಪ್ರಥಮ ಕವಿಯತ್ರಿ ಎಂಬ ಕೀರ್ತಿಗೆ ಭಾಜನಳಾದ ಅಕ್ಕಮಹಾದೇವಿಯು ಹಲವಾರು ವಚನಗಳನ್ನು ರಚಿಸಿದ್ದಾಳಲ್ಲದೆ ಯೋಗಾಂಗ ತ್ರಿವಿಧಿ, ಸೃಷ್ಟಿಯವಚನ, ಮಂತ್ರಗೋಪ್ಯಗಳೆಂಬ ಲಘುಕೃತಿಗಳನ್ನು ಬರೆದಿದ್ದಾಳೆ[೧೩]. ಅಕ್ಕಮಹಾದೇವಿಯ ಕುರಿತಾಗಿ ಹಲವಾರು ಕಾವ್ಯಗಳೇ ರಚಿತವಾಗಿವೆ. ಆದರೂ, ಇವಳ ಲೌಕಿಕ ಜೀವನಚರಿತ್ರೆಯ ಸ್ಪಷ್ಟ ಚಿತ್ರಣ ಸಿಗುವುದಿಲ್ಲ. ವೈರಾಗ್ಯವನ್ನು ತಾಳಿ ಸರ್ವಸಂಗ ಪರಿತ್ಯಾಗಿಯಾಗಿ, ಆಧ್ಯಾತ್ಮಸಾಧನೆಯಲ್ಲಿ ತೊಡಗಿದ ಈಕೆ, ಕಾರಣಾಂತರಗಳಿಂದ ಕೌಶಿಕನೆಂಬ ಅರಸನನ್ನು ಮದುವೆಯಾಗಿರುತ್ತಾಳೆ. ಇವಳ ಜೀವನ ಚರಿತ್ರೆಯನ್ನು ಚಿತ್ರಿಸಿವ ಹರಿಹರನ ಮಹಾದೇವಿಯಕ್ಕನ ರಗಳೆ ಕೃತಿಯಲ್ಲಿ ಇವಳ ಪತಿಯನ್ನು 'ಕೌಶಿಕನೆನಿಪ್ಪ ಮನ್ನೆಯ.. ದೇಶದೊಳಗೊಪ್ಪುವುಡುತಡಿಯೆಂಬ ಪಟ್ಟಣದ" ಅರಸು ಎಂದು ಪರಿಚಯಿಸಿದ್ದಾನೆ. ಇವಳನ್ನು ಕುರಿತು ರಚಿತವಾಗಿರುವ ಇತರ ಕಾವ್ಯಗಳಲ್ಲಿಯೂ ನೃಪ, ಅರಸು, ಪೊಡವೀಶ, ಇತ್ಯಾದಿಯಾಗಿ ಕರೆದಿರುವುದರಿಂದ ಕೌಶಿಕನು ಉಡುತಡಿ ಪ್ರದೇಶದ ಸಾಮಂತ ದೊರೆಯಾಗಿದ್ದನೆನ್ನುವುದು ಸ್ಪಷ್ಟವಾಗುತ್ತದೆ.

ಹನ್ನೆರಡನೆಯ ಶತಮಾನದ ತಾಳಗುಂದ, ಬಳ್ಳಿಗಾವೆ ಮತ್ತು ಹರಿಹರ ಶಾಸನಗಳ ಆಧಾರದಿಂದ ತಿಳಿಸಿರುವಂತೆ ಹನ್ನೆರಡನೆಯ ಶತಮಾನದ ಉತ್ತರಾರ್ಧದಲ್ಲಿ ಚಾಲುಕ್ಯ ಅರಸನ ಒಡೆತನದಲ್ಲಿದ್ದ ಬನವಾಸೆ ೧೨೦೦ ಪ್ರದೇಶಕ್ಕೆ ಚಾಲುಕ್ಯ ಸಾಮಂತ ಕಸಪಯ್ಯನಾಯಕನು ಸ್ಥಾನಿಕ ಆಡಳಿತಾಧಿಕಾರಿಯಾಗಿದ್ದನು. ಇವನ ಆಳ್ವಿಕೆಯ ಕಾಲದ ಬಳ್ಳಿಗಾವೆ ೧೧೬೨ರ ಶಾಸನ ಇವನನ್ನು ಶಿವಭಕ್ತನೆಂದು ಹೊಗಳಿದ್ದರೂ, ಕ್ರಿ.ಶ.೧೧೭೨ರ ಹರಸೂರ್ ಶಾಸನದಲ್ಲಿ ಕಸಪಯ್ಯನನ್ನು ದುರ್ಮಂತ್ರಿಯೆಂದು ಹೇಳಲಾಗಿದೆ. ದುರಾಡಳಿತದ ಕಾರಣವಾಗಿ ಬಿಜ್ಜಳನಿಂದ ಅಧಿಕಾರ ಚ್ಯುತನಾಗಿ, ನಂತರ ಪ್ರತೀಕಾರವಾಗಿ ಮೊಮ್ಮಗ ಕರ್ಣನನ್ನು ಬೆಂಬಲಿಸಿ, ರಾಜ್ಯಾಪಹಾರದ ಪ್ರಯತ್ನ ಮಾಡಿದಂತೆ ಹರಸೂರ್ ಶಾಸನದಿಂದ ತಿಳಿದುಬರುತ್ತದೆ. ಹೀಗೆ ಅಕ್ಕನ ಜೀವಿತಾವಧಿಯಲ್ಲಿ ಉಡುತಡಿಯ ಆಡಳಿತಾಧಿಕಾರಿಯಾಗಿದ್ದ ಕಸಪಯ್ಯನೇ ಕೌಶಿಕನಾಗಿರುವ ಸಾಧ್ಯತೆಯಿರಬಹುದೆಂದು ಡಾ.ಎಂ.ಚಿದಾನಂದಮೂರ್ತಿ ಅವರು ಅಭಿಪ್ರಾಯ ಪಡುತ್ತಾರೆ. ವಿವಾಹಸಂಬಂಧಿ ಘಟನೆಯ ತರುವಾಯ ಕಲ್ಯಾಣಕ್ಕೆ ಹೋದ ಮಹಾದೇವಿ ಬಿಜ್ಜಳನಿಗೆ ಕಸಪಯ್ಯನ ದುರ್ವ್ಯವಹಾರದ ಬಗೆಗೆ ದೂರು ಕೊಟ್ಟಿರಬೇಕೆಂದೂ, ಕಸಪಯ್ಯನು ಅಧಿಕಾರ ಚುತನಾಗಲೂ ಇದೂ ಒಂದು ಪ್ರಭಲ ಕಾರಣವಾಗಿರುವ ಸಾಧ್ಯತೆಯಿರಬಹುದೆಂದು ತಿಳಿಸಿದ್ದಾರೆ. ಅಕ್ಕಮಹಾದೇವಿಯ ಜನ್ಮಸ್ಥಳವೆಂದು ನಂಬಲಾಗಿರುವ ಇಂದಿನ ಉಡುಗಣಿ ಪ್ರದೇಶದಲ್ಲಿರುವ ಹಾಳುಕೋಟೆಯ

ಅವಶೇಷವನ್ನು ಅಲ್ಲಿಯ ಜನರು ಕೌಶಿಕನ ಕೋಟೆ ಎಂದು ಕರೆಯುತ್ತಿರುವುದು ಕೌಶಿಕನ ಐತಿಹಾಸಿಕತೆಯ ಶೋಧನದಲ್ಲಿ ಒಂದು ಪ್ರಮುಖ ಸಂಗತಿಯಾಗಿದೆ.

೧೩-೧೬ನೆಯ ಶತಮಾನದ ಕಾಲದಲ್ಲಿ ಮಹಾದೇವಿಯನ್ನು ಕುರಿತು ಮೂರು ಸ್ವತಂತ್ರ ಕಾವ್ಯ ಪುರಾಣ ಕನ್ನಡದಲ್ಲಿ ರಚಿತವಾಗಿವೆ, ಅಲ್ಲದೆ ಈ ಅವಧಿಯ ವೀರಶೈವ ಕಾವ್ಯ, ಪುರಾಣ ಹಾಗೂ ಶೂನ್ಯಸಂಪಾದನೆಗಳಲ್ಲಿ ಮಹಾದೇವಿಯಕ್ಕನ ವೃತ್ತಾಂತವನ್ನು ಸಾಂದರ್ಭಿಕವಾಗಿ ಪ್ರಸ್ತಾಪಿಸಲಾಗಿದೆ. ಪ್ರಭುದೇವ, ಬಸವಣ್ಣ, ಚೆನ್ನಬಸವಣ್ಣ, ಸಿದ್ಧರಾಮ, ಮಡಿವಾಳಮಾಚಯ್ಯ ಮೊದಲಾದ ಇವಳ ಸಮಕಾಲೀನ ಶರಣರ ವಚನಗಳಲ್ಲಿರುವ ಮಹಾದೇವಿಯಕ್ಕನ ಅನುಭಾವಿ ವ್ಯಕ್ತಿತ್ವದ ಪ್ರಸ್ತಾಪಗಳನ್ನೂ ಇಲ್ಲಿ ಗಮನಿಸಬಹುದು. ಕೇವಲ ಕನ್ನಡ ಸಾಹಿತ್ಯವಲ್ಲದೆ ತೆಲುಗು ಸಾಹಿತ್ಯದಲ್ಲಿಯೂ ಇವಳ ವ್ಯಕ್ತಿತ್ವ, ಜೀವನ ವೃತ್ತಾಂತಗಳನ್ನು ಕುರಿತ ರಚನೆಗಳಿವೆ. ಪಾಲ್ಕುರಿಕೆ ಸೋಮನಾಥನ 'ಪಂಡಿತಾರಾಧ್ಯ ಚರಿತ್ರೆ' ಕವಿಬಾಲಾಪಾಪಾಂಬಾ ರಚಿಸಿರುವ 'ಮಹಾದೇವಿ ಬೋಧೋಲ್ಲಾಸ' ಅಕ್ಕನನ್ನು ಕುರಿತ ಸ್ವತಂತ್ರ ತೆಲುಗುಕಾವ್ಯವಾಗಿದೆ. ಈ ಕೃತಿಗಳೆಲ್ಲ ಅಕ್ಕಮಹಾದೇವಿಗಿದ್ದ ಜನಪ್ರಿಯತೆ, ಜನತೆಯ ಮೇಲಾದ ಇವಳ ಜೀವನದ ಹಾಗೂ ವಚನದ ಪ್ರಭಾವವನ್ನು ಕುರಿತು ತಿಳಿಸುತ್ತದೆ. ಇವಳು ಸಾಮಾನ್ಯ ಜನರ ನಡುವೆ ಇದ್ದ ಅಸಾಮಾನ್ಯ ಮಹಿಳೆಯಾಗಿದ್ದಳು.

ಅಕ್ಕಮಹಾದೇವಿಯು ಅರಸು ಕೌಶಿಕನ ಬಲವಂತಕ್ಕೆ ಕಟ್ಟುಬಿದ್ದು ಆತನನ್ನು ವರಿಸಬೇಕಾಗಿ ಬಂದಾಗ, ಕೆಲವು ಶರತ್ತುಗಳನ್ನು ಒಡ್ಡಿ ಮದುವೆಗೆ ಸಮ್ಮತಿ ನೀಡಿರುತ್ತಾಳೆ. ಅವಳ ಧಾರ್ಮಿಕ ಸ್ವಾತಂತ್ರಕ್ಕೆ ಅಡ್ಡಿ ಬರುವುದಿಲ್ಲವೆಂದು ಅವಳ ಶರತ್ತುಗಳಿಗೆ ಒಪ್ಪಿ ಮದುವೆಯಾಗಿದ್ದ ಅರಸು ಆರಂಭದಲ್ಲಿ ಅವಳ ಯಾವ ಕಾರ್ಯಗಳಿಗೂ ಅಡ್ಡಿಪಡಿಸಿರಲಿಲ್ಲ ಎಂಬುದು ಈ ಕಾವ್ಯಗಳಲ್ಲಿ ಬಣ್ಣಿತವಾಗಿವೆ. ಅಲ್ಲದೆ ಇವಳು ಮದುವೆಯಾದನಂತರ ಕೆಲಕಾಲ ರಾಜ್ಯಭಾರವನ್ನು ನಡೆಸುತ್ತಿದ್ದಳೆಂದು ಚೆನ್ನಬಸವಾಂಕನು ತನ್ನ 'ಮಹದೇವಿಯಕ್ಕನ ಪುರಾಣ'ದಲ್ಲಿ ತಿಳಿಸಿದ್ದಾನೆ. ಒಬ್ಬ ಅರಸಿಯಾಗಿ ತನಗೆ ದೊರಕಬೇಕಿದ್ದ ಅಧಿಕಾರವನ್ನು ಇವಳು ಪಡೆದಿದ್ದಳು. ಭಂಡಾರವನ್ನು ಬಳಸಿಕೊಳ್ಳುವ ಅಧಿಕಾರವನ್ನು ಹೊಂದಿದ್ದ ಇವಳು ಯಥೇಚ್ಚವಾಗಿ ದಾನ-ಧರ್ಮಮಾಡುತ್ತಿದ್ದ ವಿವರಣೆಗಳು ಕಾವ್ಯಗಳಲ್ಲಿ ಬಂದಿದೆ[೧೪].

ತನ್ನ ಸ್ವಾತಂತ್ರಕ್ಕೆ ಅಡ್ಡಿಪಡಿಸಬಾರದೆಂದೂ, ಹಾಗೆ ಮಾಡಿದರೆ ಮೂರು ತಪ್ಪುಗಳವರೆಗೆ ಸಹಿಸುವುದಾಗಿ ತಿಳಿಸಿದ್ದ ಮಹಾದೇವಿಯು, ಪತಿ ಕೌಶಿಕನು ಮೂರನೆಯ ತಪ್ಪನ್ನು ಎಸಗಿದ ನಂತರ ಅರಮನೆಯನ್ನು ತೊರೆದು, ಸರ್ವಸ್ವವನ್ನೂ ಬಿಟ್ಟು ಕೇಶಾಂಬರಧಾರಿಯಾಗಿ ಶ್ರೀಶೈಲದ ಕಡೆಗೆ ಹೊರಡುತ್ತಾಳೆ. ಮಾರ್ಗದಲ್ಲಿ ಕಲ್ಯಾಣಕ್ಕೆ ಬಂದು ಕೆಲಕಾಲ ಇರುತ್ತಾಳೆಂಬ ವಿಚಾರವನ್ನು ಕಾವ್ಯಗಳು ತಿಳಿಸುತ್ತವೆ.

ಅಕ್ಕಮಹಾದೇವಿಯ ಕುರಿತಾಗಿ ರಚಿತವಾಗಿರುವ ಕಾವ್ಯಗಳು ತಿಳಿಸುವ ಅವಳ ಜೀವನದ ಘಟನೆಗಳನ್ನು ಅವಳ ವಚನಗಳಲ್ಲಿ ಹುಡುಕುವ ಪ್ರಯತ್ನ ನಡೆಸಲಾಗಿದೆ. ಇವಳ ಕೆಲವೊಂದು ವಚನಗಳು ಕೆಲಮಟ್ಟಿಗೆ ಸಾದೃಶ್ಯವನ್ನೂ ಕಲ್ಪಿಸುತ್ತವೆ. ಅರಸಿಯಾಗಿದ್ದ ಅಕ್ಕಮ್ಮನಿಗೆ ವೀರಪಡೆಗಳ ಪ್ರಭಾವವೂ ಇದ್ದೀತೆನ್ನುವುದರ ಸುಳಿವನ್ನು ಅವಳ ವಚನಗಳು ನೀಡುತ್ತವೆ.

**ಮುಂಗೈಯಲ್ಲಿ ವೀರಗಂಕಣವಿಕ್ಕಿ**
**ಮುಂಗಾಲಲ್ಲಿ ತೊಡರು ಬಾವುಲಿ ಕಟ್ಟಿದೆ**
**ಗಂಡುಡಿಗೆಯನುಟ್ಟೆನೆಂಬ ಮಾತಿನ ಬಿರಿದ ನುಂಗಿದನು**
**ಚೆನ್ನಮಲ್ಲಿಕಾರ್ಜುನಾ ನಿಮ್ಮಾಣೆಗೆ ಊಣಯವ ತಂದೆನಾದಡೆ**
**ನಿಮ್ಮ ತೊತ್ತಿನ ಮಗಳಲ್ಲಯ್ಯ**

ಇಲ್ಲಿ ವೀರ ಯೋಧನ ಪ್ರತಿಮೆಯನ್ನು ತಂದು ಹೋರಾಟದ ಬದುಕಿನ ಕುರಿತಾಗಿ ಹೇಳುತ್ತಿದ್ದರೂ, ಇದೊಂದು ಹೆಣ್ಣಿನ ಚಿತ್ರ. ಗಂಡುಡಿಗೆಯನ್ನುಟ್ಟಿಹೆ ಎನ್ನುತ್ತಾ ತನ್ನ ಛಲವನ್ನು ಹೊರಹಾಕಿದ್ದಾಳೆ. ಇಂತಹ ಹೋರಾಟದ

ಚಿತ್ರಣದಲ್ಲಿಯೂ ಅಲೌಕಿಕ ಭಾವವನ್ನು ತಂದು ಚೆನ್ನಮಲ್ಲಿಕಾರ್ಜುನನ ಆಣಗಿ ಮೀರದೆ ಅವನಿಗೆ ತೊತ್ತಾಗಿದ್ದೇನೆ ಎಂದಿದ್ದಾಳೆ.

ಗುರುವನ್ನು ಕುರಿತು ತಿಳಿಸುವ ಇವಳ ಹಲವಾರು ವಚನಗಳು ಇವಳು ಸೂಕ್ತ ಗುರುವಿನಿಂದ ವಿದ್ಯಾಭ್ಯಾಸ, ಆಧ್ಯಾತ್ಮದ ಮಾರ್ಗವನ್ನು ಪಡೆದಿದ್ದಳೆನ್ನುವುದನ್ನು ತಿಳಿಸುತ್ತವೆ.

**ಗುರುವಿನ ಕರುಣದಿಂದ ಲಿಂಗಜಂಗಮವ ಕಂಡೆ**
**ಗುರುವಿನ ಕರುಣದಿಂದ ಪಾದೋದಕ ಪ್ರಸಾದವಕಂಡೆ**
**ಗುರುವಿನ ಕರುಣದಿಂದ ಸಜ್ಜನ ಸದ್ಭಕ್ತರ ಗೋಷ್ಠಿಯ ಕಂಡೆ**
**ಚೆನ್ನಮಲ್ಲಿಕಾರ್ಜುನಯ್ಯ, ನಾಹುಟ್ಟಿನೊಡನೆ ವಿಭೂತಿಯ ಪಟ್ಟವ ಕಟ್ಟಿ,**
**ಸದ್ಗುರುಸ್ವಾಮಿ ಲಿಂಗಸ್ವಾಯತವ ಮಾಡಿದನಾಗಿ ಧನ್ಯಳಾದೆನು ॥**

ಅಕ್ಕಮಹಾದೇವಿಯ ವಚನಗಳನ್ನು ಅವುಗಳ ಭಾವಾಭಿವ್ಯಕ್ತಿಗೆ ಅನುಗುಣವಾಗಿ ಸಂಸಾರ ನಿರಾಕರಣೆ, ಆಧ್ಯಾತ್ಮ ಸಾಧನೆ, ಶರಣಸತಿ–ಲಿಂಗಪತಿ ಭಾವ, ಸಾಮಾಜಿಕ ವಿಡಂಬನೆ ಮೊದಲಾದ ಬಗೆಗಳಾಗಿ ವಿಭಾಗಿಸಿ ನೋಡಬಹುದು. ಇಂತಹ ಕೆಲವೊಂದು ವಚನಗಳು ಇವಳ ಜೀವನದ ಘಟನೆಗಳ ದೃಶ್ಯಗಳನ್ನು ಕಟ್ಟಿಕೊಡುತ್ತವೆ.

**ಹುಟ್ಟಿದೆ ಶ್ರೀ ಗುರುವಿನ ಹಸ್ತದಲ್ಲಿ**
**ಬೆಳೆದೆನು ಅಸಂಖ್ಯಾತರ ಕುರಣದಲ್ಲಿ**
**ಸುಜ್ಞಾನವೆಂಬ ತುಪ್ಪ**
**ಪರಮಾರ್ಥವೆಂಬ ಸಕ್ಕರೆಯನಿಕ್ಕಿದಿರಿ ನೋಡಾ**
**ಇಂತಪ್ಪ ತ್ರಿವಿಧಾಮೃತವ ದಣಿಯಲೆರೆದು ಸಲಹಿದಿರಿ**
**ಎನ್ನ ವಿವಾಹವ ಮಾಡಿದಿರಿ**
**ಸಯವಪ್ಪ ಗಂಡಂಗೆ ಕೊಟ್ಟಿರಿ**
**ಕೊಟ್ಟ ಮನೆಗೆ ಕಳುಹಲೆಂದು ಅಸಂಖ್ಯಾತರೆಲ್ಲರು ನೆರೆದು ಬಂದಿರಿ**
**ಬಸವಣ್ಣ, ಮೆಚ್ಚಲು ಒಗೆತನವ ಮಾಡುವೆ**
**ಚೆನ್ನಮಲ್ಲಿಕಾರ್ಜುನನ ಕೈವಿಡಿದು**
**ನಿಮ್ಮ ಮಂಡೆಗೆ ಹೂವ ತಹೆನಲ್ಲದೆ ಹುಲ್ಲತಾರೆನು**
**ಅವಧರಿಸಿ ನಿಮ್ಮಡಿಗಳೆಲ್ಲರು**
**ಮರಳಿ ಬಿಜಯಂಗೈವುದು ಶರಣುಶರಣಾರ್ಥಿ**

ಇದು ಕಲ್ಯಾಣದ ಮಹಾಮನೆಯನ್ನು ತೊರೆದು ಶ್ರೀಶೈಲಕ್ಕೆ ಹೊರಟಾಗ, ಅವಳ ಬೀಳ್ಕೊಡುಗೆಯ ದೃಶ್ಯವನ್ನು ತಂದುಕೊಡುತ್ತದೆ.

ಇವಳ ವಚನಗಳಲ್ಲಿ ಸಾಹಿತ್ಯಿಕ ಗುಣಗಳನ್ನು ಗಮನಿಸಬಹುದು. ರೂಪಕ, ಉಪಮೆ, ದೃಷ್ಟಾಂತ ಮೊದಲಾದ ಅಲಂಕಾರಗಳನ್ನು ಹೇರಳವಾಗಿ ಬಳಸಿಕೊಂಡಿದ್ದಾಳೆ. ಇವಳ ಚಿತ್ರಕ ಶಕ್ತಿ ರೂಪಕಗಳಾಗಿ, ಸಣ್ಣ ಸಣ್ಣ ಉಪಮೆಗಳು ಒಂದೊಂದು ಸ್ವತಂತ್ರ ಅನುಭವವನ್ನು ಕಟ್ಟಿಕೊಡುವ ಪರಿಯನ್ನು ಕಾಣಬಹುದು. ಕಾವ್ಯಮಯವಾದ, ವಾಸ್ತವದ ವಿವರಣೆಗಳಿಂದ, ತತ್ವ ಚಿಂತನೆಗಳಿಂದ ಕೂಡಿರುವ ವಚನಗಳಂತೆ, ಬೆಡಗಿನ ವಚನಗಳನ್ನೂ ಇವಳ ರಚನೆಗಳಲ್ಲಿ ಕಾಣಬಹುದು. ಅಲ್ಲಿ ಅಮೂರ್ತವಾದ ಅನುಭಾವದ ವಿಷಯಗಳನ್ನು ಸಂಕೇತ, ಪ್ರತಿಮೆಗಳ ಮೂಲಕ ಚಿತ್ರಿಸಿದ್ದಾಳೆ.

**ಜಲದ ಮಂಟಪದ ಮೇಲೆ ಉರಿಯ ಚಪ್ಪರವನಿಕ್ಕಿ**
**ಆಲಿಕಲ್ಲ ಹಸೆಯವಾಸಿ ಭಾಸಿಗವ ಕಟ್ಟಿ**

**ಕಾಲಿಲ್ಲದ ಹೆಂಡತಿಗೆ ತಲೆಯಿಲ್ಲದ ಗಂಡ ಬಂದು ಮದುವೆಯಾದನು**
**ಎಂದೆಂದೂ ಬಿಡದೆ ಬಾಳುವೆಗೆ ಕೊಟಟರೆನ್ನ**
**ಚೆನ್ನಮಲ್ಲಿಕಾರ್ಜುನ ಗಂಡಗೆನ್ನ ಮದುವೆಯ................**

ವಿದ್ಯೆ, ಧೈರ್ಯ, ಛಲ, ಸ್ವಾಭಿಮಾನವನ್ನು ಮೈಗೂಡಿಸಿಕೊಂಡಿದ್ದ ಅಕ್ಕಮಹಾದೇವಿಯು ಆಧ್ಯಾತ್ಮವಲಯದಲ್ಲಿ ಉತ್ತುಂಗಕ್ಕೇರಿದವಳು. ಪುರುಷರಿಗೆ ಮಾತ್ರ ಸೀಮಿತವೆನಿಸಿದ್ದ ವಲಯಕ್ಕೆ ದಿಟ್ಟತನದಿಂದ ಕಾಲಿರಿಸಿ, ಮುಂದೆ ಹಲವಾರು ಮಹಿಳೆಯರಿಗೆ ಆದರ್ಶವೆನಿಸಿದಳು. ಸಾಂಪ್ರದಾಯಿಕ ಸಮಾಜಒಪ್ಪಿತ ವಿವಾಹದ ನಿಯಮಗಳನ್ನು ಧಿಕ್ಕರಿಸಿ, ವಿವಾಹಬಂಧನದಲ್ಲಿ ಸ್ವಾತಂತ್ರ್ಯಕ್ಕೆ ಚ್ಯುತಿಬಂದಾಗ ದಿಟ್ಟತನದಿಂದ ಪ್ರತಿಭಟಿಸಿ ಬಂಧನವನ್ನೇ ಕಿತ್ತು ಹೊರಬಂದದ್ದು ಇವಳ ಸಾಧನೆಯಾಗಿದೆ. ಸಾಮಾಜಿಕ ವ್ಯವಸ್ಥೆಯನ್ನಷ್ಟೇ ಅಲ್ಲದೆ ರಾಜಪ್ರಭುತ್ವವನ್ನೂ ಧಿಕ್ಕರಿಸಿನಿಂತು ಜೀವನಪೂರ್ತಿ ಆಧ್ಯಾತ್ಮ ಸಾಧನೆಯಲ್ಲಿ ತೊಡಗಿಸಿಕೊಳ್ಳಲು ತನ್ನದೇ ಮಾರ್ಗವನ್ನು ಅರಸಿ ಹೊರಡುತ್ತಾಳೆ.

ಅಕ್ಕಮಹಾದೇವಿಗೂ ಪೂರ್ವದಲ್ಲಿ ಕೆಲವು ವಚನಕಾರ್ತಿಯರು ಕಂಡುಬಂದರೂ ಸತ್ವ ಮತ್ತು ಸಂಖ್ಯೆಯ ದೃಷ್ಟಿಯಿಂದ ಈಕೆಯ ವಚನಗಳಿಗೆ ಅಗ್ರಸ್ಥಾನ ನೀಡಲಾಗಿದೆ. ಈಕೆಯ ವಚನಗಳು ಚೆನ್ನಮಲ್ಲಿಕಾರ್ಜುನ, ಶ್ರೀಶೈಲಮಲ್ಲಿಕಾರ್ಜುನ, ಶ್ರೀಗಿರಿಮಲ್ಲಿಕಾರ್ಜುನ, ವಿವಿಧ ಅಂಕಿತಗಳಲ್ಲಿ ಕಂಡುಬರುತ್ತವೆ. ಇವಳ ಕಾವ್ಯದಲ್ಲಿ ವೇದನೆ-ನಿವೇದನೆಗಳು ಪ್ರತಿಪಾದಿತವಾಗಿವೆ. ತೀನಂಶ್ರೀ ಅವರು ಹೇಳುವಂತೆ "ಅವಳ ವಚನಗಳ ಬಹುಭಾಗ ರಸಾರ್ದ್ರವದಿಂದ ಕೂಡಿದೆ. ಉಪಮಾನ, ಚಿತ್ರಕಲ್ಪನೆಗಳಿಂದ ಮನೋಹರವಾಗಿವೆ"

ಅಕ್ಕನೆಂದೇ ಪ್ರಸಿದ್ಧಿಯಾಗಿದ್ದ ಇವಳು ಅರಸನೊಬ್ಬನ 'ಮಹಾದೇವಿ' ಆಗಿದ್ದಳೆಂಬುದರ ಕುರುಹಾಗಿ ಅಕ್ಕಮಹಾದೇವಿ ಎಂಬುದೇ ಇವಳ ನಾಮಧೇಯವಾಯಿತು. ಅರಸನೊಬ್ಬನ ಮಡದಿಯಾಗಿ, ಸಾಮಾನ್ಯ ಜನತೆಯಿಂದಾದಿಯಾಗಿ ಸಾಹಿತ್ಯ-ಧಾರ್ಮಿಕ ಎಲ್ಲ ವಲಯದಲ್ಲೂ ಶತಶತಮಾನಗಳ ಕಾಲ ಪ್ರಭಾವ ಬೀರಿದ ಅನಭಿಷಿಕ್ತ ಸಾಮ್ರಾಜ್ಞಿಯಾದವಳು ಅಕ್ಕಮಹಾದೇವಿ. ಮಹಾದೇವಿಯಕ್ಕನ ನೂರಾರು ವಚನಗಳು ಆಕೆಯ ಆತ್ಮಾಭಿವ್ಯಕ್ತಿಯ ಫಲಿತವಾಗಿದ್ದರೂ ಕನ್ನಡ ಸಾಹಿತ್ಯಕ್ಕೆ ಬಹುಮೌಲ್ಯಯುತ ಕೊಡುಗೆಯಾಗಿದೆ.

**ನೀಲಾಂಬಿಕೆ**

ಅಕ್ಕಮಹಾದೇವಿಯ ನಂತರ ಅತಿ ಹೆಚ್ಚು ವಚನಗಳ ಕರ್ತೃ ಎನಿಸಿದ ಕವಯತ್ರಿ ನೀಲಾಂಬಿಕೆ ಕೂಡ ಅರಸು ಮನೆತನದ ಮಹಿಳೆಯೇ ಆಗಿದ್ದಾಳೆ. ಬಸವಣ್ಣನ ಇಬ್ಬರು ಮಡದಿಯರಲ್ಲಿ ಗಂಗಾಂಬಿಕೆ ಒಬ್ಬಳಾದರೆ ಮತ್ತೊಬ್ಬಳು ಈ ನೀಲಾಂಬಿಕೆ. ಇವಳು ಕಳಚೂರಿ ರಾಜಮನೆತನದ ಬಿಜ್ಜಳನ ಕಿರಿಯ ಸೋದರಿ. ಬಿಜ್ಜಳನು "ತನ್ನನುಜೆ ಕಿರಿಯಾಣಾತರುಣಿ ನೀಲಾಂಬಿಕೆಯನೊಲಿದಿತ್ತು ಬಸವಗಂ ಹಿರಿದು ವಿಭವದಿಂ ಮದುವೆಯಂ ಮಾಡಿ" ಎಂದು ಶಿವತತ್ವ ಚಿಂತಾಮಣಿಯಲ್ಲಿ ಸಂಧಿ ೩೧-೬೭ರಲ್ಲಿ ತಿಳಿಸಲಾಗಿದೆ. ಆದರೆ ಇವಳು ಬಿಜ್ಜಳನ ಸ್ವಂತ ಸಹೋದರಿಯಾಗಿರಲಿಲ್ಲ ಎನ್ನುವುದು ತಿಳಿದುಬರುತ್ತದೆ. ಇವಳ ತಂದೆ ಸಿದ್ಧರಸ ಮಂತ್ರಿ. ಆದರೆ ಇವಳು ಬಿಜ್ಜಳನ ಸಾಕುತಂಗಿಯಾಗಿದ್ದಾಳೆ. ಕವಿ ಸಿದ್ಧನಂಜೇಶ ತನ್ನ 'ಗುರುರಾಜಚಾರಿತ್ರ'ದಲ್ಲಿ ಈ ಕುರಿತ ವಿವರಣೆ ನೀಡಿದ್ದಾನೆ. ಬಿಜ್ಜಳನ ತಂದೆ ಪೆರ್ಮಾಡಿ ವೀರಮರಣವನ್ನಪ್ಪಿದಾಗ ಬಿಜ್ಜಳನ ತಾಯಿ ಚವಲಾದೇವಿ ಗಂಡನೊಡನೆ ಸತಿಹೋಗಲು ನಿರ್ಧರಿಸಿ ತನ್ನ ಕಿರಿಯ ಮಗ ಕರ್ಣದೇವನ ಪಾಲನೆಯನ್ನು ಸಿದ್ಧರಸ ಪದ್ಮಗಂಧಿಯರಿಗೆ ಒಪ್ಪಿಸುತ್ತಾಳೆ. ಇವರು ಬಿಜ್ಜಳನ ಸಹೋದರನಾದ ಕರ್ಣದೇವನನ್ನು ತಮ್ಮ ಮಗಳು ನೀಲಲೋಚನೆ (ನೀಲಾಂಬಿಕೆ) ಯೊಂದಿಗೆ ಸಾಕಿಸಲಹುತ್ತಾರೆ. ಈ ಕಾರಣದಿಂದ ನೀಲಾಂಬಿಕೆ ಬಿಜ್ಜಳನ ಕಿರಿಯ ಸಹೋದರಿಯಾಗಿ ಬೆಳೆಯುತ್ತಾಳೆ.

ನೀಲಾಂಬಿಕೆಯು ಬಹುಜನ ಶರಣರ ಗೌರವಾದರಗಳಿಗೆ ಪಾತ್ರಳಾಗಿದ್ದಾಳೆ. ಇವಳನ್ನು ಕುರಿತು 'ನೀಲಮ್ಮನ ಸ್ತೋತ್ರ', 'ನೀಲಾಂಬಿಕಾ ಪಂಚವಿಂಶತಿ', 'ನೀಲಮ್ಮನ ತ್ರಿವಿಧಿ'ಗಳು ರಚಿತವಾಗಿವೆ. ಸ್ವತಃ ಕವಯತ್ರಿಯಾದ ಇವಳು ಸುಮಾರು ೨೮೮ ವಚನಗಳನ್ನು ರಚಿಸಿದ್ದಾಳೆ ಅಲ್ಲದೆ 'ಕಾಲಜ್ಞಾನ', 'ಪ್ರಸಾದ ಸಂಪಾದನೆ' ಎಂಬ ಕೃತಿಗಳನ್ನೂ ರಚಿಸಿದ್ದಾಳೆ[೧೫].

ರಾಜಮನೆತನದಲ್ಲಿ ಬೆಳದವಳಾದ್ದರಿಂದ ಉತ್ತಮ ವಿದ್ಯಾಭ್ಯಾಸವನ್ನು ಹೊಂದಿದ್ದಳೆಂಬುದನ್ನು ಇವಳು ರಚಿಸಿರುವ ಕೃತಿಗಳಿಂದ ತಿಳಿದುಬರುತ್ತದೆ. ಇವಳ ರಚನೆಗಳಲ್ಲಿ ಷಟ್ಪದಿ, ಆದಿಪ್ರಾಸ ಛಂದೋಬಂಧಗಳಿರುವುದು ಇವಳ ಶಾಸ್ತ್ರಜ್ಞಾನವನ್ನು ತಿಳಿಸುತ್ತದೆ. ನಿರ್ದಿಷ್ಟ ರಾಗಸೂಚನೆಗಳಿರುವ ಇವಳ ಸ್ವರವಚನಗಳು ಇವಳ ಸಂಗೀತ ಜ್ಞಾನವನ್ನು ತಿಳಿಸುತ್ತದೆ. ಇವಳು ಅಕ್ಕಮಹಾದೇವಿಯ ಹಾಗೆ ವೈರಾಗ್ಯ ಜೀವನವನ್ನು ನಡೆಸದೆ, ಸಂಸಾರಿಯಾಗಿ ಜೀವನವನ್ನು ನಡೆಸಿದವಳು. ಇವಳಿಗೆ ಬಾಲಸಂಗಯ್ಯನೆಂಬ ಮಗನಿದ್ದುದನ್ನೂ ಕಾವ್ಯಗಳು ತಿಳಿಸುತ್ತವೆ. ಸಾಮಾಜಿಕಸುಧಾರಣೆ, ಧಾರ್ಮಿಕ ಜಾಗ್ರತೆಯ ಮಹಾಮಣಿಹವನ್ನು ಹೊತ್ತ ಬಸವಣ್ಣನಿಗೆ ಹಿನ್ನೆಲೆ ಮುನ್ನೆಲೆಯಾಗಿ ಸಹಧರ್ಮಿಣಿಯಾಗಿ ಹೆಜ್ಜೆಹಾಕಿದ ಈಕೆ, ಕಲ್ಯಾಣಕ್ರಾಂತಿಯ ಸಂದರ್ಭದಲ್ಲಿ ತಂಗಡಿಗಿಯಲ್ಲಿ ಐಕ್ಯಳಾದಳೆಂದು ಪ್ರತೀತಿಯಿದೆ. ರಾಜಮನೆತನದ ಸಂಬಂಧವಿದ್ದು, ಅರಮನೆಯಲ್ಲಿ ಬೆಳೆದವಳಾದರೂ, ಶಿವಶರಣೆಯಾಗಿ ಸಾಮಾನ್ಯರಂತೆ ಜೀವನವನ್ನು ನಡೆಸಿ ಆದರ್ಶನಾರಿ ಎನಿಸಿದ್ದಾಳೆ.

ಕೂಡಲಸಂಗಮ ಕ್ಷೇತ್ರಕ್ಕೆ ಬಂದು ಐಕ್ಯವಾಗಬೇಕೆಂದು ಬಸವಣ್ಣ ಹಡಪದ ಅಪ್ಪಣ್ಣನ ಮೂಲಕ ಹೇಳಿಹಳುಹಿಸಿದಾಗ ನೀಲಾಂಬಿಕೆ ಉತ್ತರದ ರೂಪದಲ್ಲಿ ಹೇಳಿದ ವಚನವೊಂದು ಅವಳ ಆಧ್ಯಾತ್ಮದ ಎತ್ತರವನ್ನು ತೋರಿಸುತ್ತದೆ.

**ನಾನಾರ ಸಾರುವೆನೆಂದು ಚಿಂತಿಸಲೇಕಯ್ಯ?**
**ನಾನಾರ ಹೊಂದುವುನೆಂದು ಭ್ರಮೆಪಡಲೇಕಯ್ಯ?**
**ನಾನಾರ ಇರವನರಿಯೆನೆಂದು ಪ್ರಳಾಪಿಸಲೇಕಯ್ಯ?**
**ಪರಿಣಾಮಮೂರ್ತಿ ಬಸವನ ರೂಪು ಕರಸ್ಥಲದಲ್ಲಿ ಬೆಳಗಿದ ಬಳಿಕ ಸಂಗಯ್ಯನ ಹಂಗು ನಮಗೇತಕೆ ಅಪ್ಪಣ್ಣಾ?**

ಇವಳು ಕೆಲವು ವಚನಗಳನ್ನು ರಚಿಸಿದ್ದಾಳಲ್ಲದೆ ಕಾಲಜ್ಞಾನವನ್ನೂ ರಚಿಸಿದ್ದಾಳೆ. ಇವಳ ವಚನಗಳಲ್ಲಿ ಆಧ್ಯಾತ್ಮದ ಸಾಧನೆ, ಬೋಧನೆಗಳನ್ನು ಕಾಣಬಹುದು. ಇವಳ ರಚನೆಗಳು ಈಕೆಯ ಆಳವಾದ ಅರಿವು, ವೈಚಾರಿಕತೆಗಳನ್ನು ಪರಿಚಯಿಸುತ್ತವೆ.

**ಶಾಂಭವಿ:** ಶಾಂಭವೀಲಿಂಗ ಅಂಕಿತದಲ್ಲಿ ಕೆಲವು ವಚನಗಳನ್ನು ರಚಿಸಿರುವ ಈಕೆ ಸಿಂಹವಿಕ್ರಮ ಚೋಳನ ಮಗಳು. ಇವಳ ಶಿವಯೋಗದ ಔನ್ನತ್ಯವನ್ನು ಪ್ರಭುದೇವ ಮತ್ತು ಸಿದ್ಧರಾಮ ಶಿವಯೋಗಿಗಳು ಮೆಚ್ಚಿ ಕೊಂಡಾಡಿದ ಪ್ರಸಂಗವು ಮುಕ್ತಿ ಕಂಠಾಭರಣದಲ್ಲಿದೆ. ಈಕೆಯ ತಂದೆ ಸಿಂಹವಿಕ್ರಮ ಚೋಳನು ಸಾಮಂತ ಅರಸನಾಗಿರಬೇಕೆಂದು ಗುರುತಿಸಲಾಗುತ್ತದೆ. ಅರಮನೆಯಲ್ಲಿ ಬೆಳೆದ ಶಾಂಭವಿಯು ವೀರಶೈವಾಚಾರ್ಯರೆನಿಸಿದ ರೇವಣಸಿದ್ದೇಶ್ವರರನ್ನು ಮದುವೆಯಾಗಿ, ಶಿವಶರಣೆಯಾಗಿ ತನ್ನ ಭಕ್ತಿಭಾವಗಳನ್ನು ವಚನದ ಮೂಲಕ ವ್ಯಕ್ತಗೊಳಿಸಿದ್ದಾಳೆ.

**ಸೌಂದರೀ ದೇವಿ:** ಇವಳು ರಾಜೇಂದ್ರ ಚೋಳನ ಮಗಳು. 'ಶ್ರೀಗುರು ಸೋಮಲಿಂಗ' ಅಂಕಿತದಲ್ಲಿರುವ ಈಕೆಯ ವಚನಗಳು ದೊರೆತಿವೆ. ಸೌಂದರೀದೇವಿ, ಶಾಂಭವಿಯರೊಂದಿಗೆ ವೇದಕಂಚುಕಿ, ಆಗಮಮೋಹಿನಿಯರು ನಾಲ್ವರು ರಾಜಕುಮಾರಿಯರು ವೀರಶೈವಾಚಾರ್ಯರೆನಿಸಿದ ರೇವಣ ಸಿದ್ದೇಶ್ವರರ ಧರ್ಮಪತ್ನಿಯರೆನ್ನುವ ವಿವರ ಮುಕ್ತಿ ಕಂಠಾಭರಣದಲ್ಲಿ ದೊರಕುತ್ತದೆ. ಚಾರಿತ್ರೆಕಾರರು ಇವರ ಕುರಿತಾದ ಹೆಚ್ಚಿನ ವಿಚಾರ ಹೊರಹಾಕುವತ್ತ ಗಮನಹರಿಸದೆ, ಇವರ ಕುರಿತಾದ ಉಲ್ಲೇಖಗಳನ್ನು ಸಂಶಯಾಸ್ಪದವಾಗಿ ಕಾಣುವಂತಾಗಿದೆ.

**ಪಾಳೆಗಾರ ವಂಶದ ಕವಯತ್ರಿ:** ಹಾಗಲವಾಡಿ ಮನೆತನದಲ್ಲಿ ಕ್ರಿ.ಶ.೧೭೨೦–೪೦ರವರೆಗೆ ಆಳ್ವಿಕೆ ನಡೆಸಿದ ಇಮ್ಮಡಿ ಮುದ್ವೀರಪ್ಪನಾಯಕನು ಧರ್ಮಸಹಿಷ್ಣುವೂ ವಿದ್ಯಾವಂತನೂ ಆಗಿದ್ದು 'ರಾಜರ್ಷಿ'ಎಂಬ ಬಿರುದನ್ನು ಸಹ ಪಡೆದಿದ್ದನು. ಇವನ ವಂಶದಲ್ಲಿ ಕಂಡುಬರುವ ಇತರ ಕವಿಗಳಂತೆ ಈತನೂ ಸಾಹಿತ್ಯ ರಚನೆ ಮಾಡಿದ್ದಾನೆ ಅಲ್ಲದೆ ಇವನ ಮಗಳು ಸಹ ಅನೇಕ ಸ್ವರವಚನಗಳನ್ನು ರಚಿಸಿದ್ದಾಳೆ.

ಈಕೆ ಹಲವಾರು ಸ್ವರವಚನಗಳನ್ನು ರಚಿಸಿದ್ದು, ವಿಭಿನ್ನ ಅಂಕಿತಗಳಲ್ಲಿ ಇವಳ ವಚನಗಳು ದೊರಕುತ್ತವೆ. ಗುರುಸಂಗಮೇಶ್ವರ ಲಿಂಗವೇ ಎಂಬ ಅಂಕಿತದಲ್ಲಿನ ಇವಳ ವಚನಗಳನ್ನು ಸಿ.ನಾಗಭೂಷಣ ಅವರು ಗುರುತಿಸಿದ್ದಾರೆ[೧೬]. 'ಗುರುಹುಚ್ಚಾರ್ಯ' ಎಂಬ ಅಂಕಿತದಲ್ಲಿ ಇವಳು ರಚಿಸಿರುವ ಮತ್ತೊಂದು ವಚನವು ಶಿವಾನುಭವದಲ್ಲಿ ಉಲ್ಲೇಖವಾಗಿದೆ, ಅಲ್ಲದೆ 'ಗರಿ' ಎಂಬ ಹಸ್ತಪ್ರತಿಯಲ್ಲಿ 'ಗುರುಧೀರ ಹುಚ್ಚಾರ್ಯ' ಎಂಬ ಅಂಕಿತದಲ್ಲಿನ ಇವಳ ಸ್ವರವಚನವೊಂದು ದೊರೆತಿದೆ[೧೭]. ಹೀಗೆ ಇವಳು ಮೂರು ವಿಭಿನ್ನ ಅಂಕಿತಗಳಲ್ಲಿ ಸ್ವರವಚನವನ್ನು ರಚಿಸಿದ್ದಾಳೆಂದು ತಿಳಿದುಬರುವುದಾದರೂ, ಇವಳ ವಚನಗಳು ಪ್ರಕಟವಾಗಿಲ್ಲ. ಅಲ್ಲದೆ ಇಲ್ಲಿ ಇವಳನ್ನು ಇಮ್ಮಡಿ ಮುದಿಯಪ್ಪನಾಯಕನ ಮಗಳೆಂದೇ ಗುರುತಿಸಲಾಗಿದೆ, ಇವಳ ಕುರಿತಾದ ಬೇರಾವ ವಿಚಾರವೂ ತಿಳಿದುಬರುವುದಿಲ್ಲ.

ಅರಸು ಮನೆತನದ ಮಹಿಳೆಯರಲ್ಲದೆ, ಅರಸುಮನೆತನದೊಂದಿಗೆ ಸಂಪರ್ಕ ಹೊಂದಿದ ಅಧಿಕಾರಿವರ್ಗದವರು, ಶ್ರೀಮಂತ ಮನೆತನದ ಹಲವಾರು ಮಹಿಳೆಯರು ಹನ್ನೆರಡನೆಯ ಶತಮಾನದಲ್ಲಿ ವಚನಕಾರ್ತಿಯರಾಗಿ ಕೆಲವು ವಚನಗಳನ್ನು ರಚಿಸಿರುವುದನ್ನು ಕಾಣುತ್ತೇವೆ. ಸಮಾಜದ ಮೇಲೆ ಇವರಿಂದ ಆದ ಪರಿಣಾಮ, ಇವರ ಪ್ರಭಾವಗಳನ್ನು ಗಮನದಲ್ಲಿರಿಸಿಕೊಂಡು ಇಂತಹ ಕೆಲವು ಮಹಿಳೆಯರನ್ನು ಇಲ್ಲಿ ಗುರುತಿಸಲಾಗಿದೆ. ಅವರಲ್ಲಿ ಬಸವಣ್ಣನ ಹಿರಿಯ ಪತ್ನಿ **ಗಂಗಾಂಬಿಕೆ** ಪ್ರಮುಖಳಾದವಳು. ಇವಳು ಮಂತ್ರಿ ಬಲದೇವನ ಮಗಳು ಎಂದು ತಿಳಿದುಬರುತ್ತದೆ. ಅರಸು ಮನೆತನದವಳಲ್ಲದಿದ್ದರೂ, ಅರಮನೆಯ ಒಡನಾಡಿಯಾಗಿದ್ದು, ಸಮಾಜದ ಗಣ್ಯವ್ಯಕ್ತಿ ಎಂಬ ಸ್ಥಾನಕ್ಕೆ ಪಾತ್ರನಾದ ಮನೆತನದಲ್ಲಿ ಸಹಜವಾಗಿ ಉತ್ತಮ ವಿದ್ಯಾಭ್ಯಾಸ, ಶ್ರೀಮಂತಿಕೆಯ ಲೌಕಿಕ ಬದುಕನ್ನು ಹೊಂದಿದ್ದ ಗಂಗಾಂಬಿಕೆ ಬಸವಣ್ಣನನ್ನು ವರಿಸಿ ಶಿವಶರಣೆಯಾಗಿ, ಕೆಲವು ವಚನಗಳನ್ನು ರಚಿಸಿದ್ದಾಳೆ.

ಹರಿಹರನ ಬಸವರಾಜದೇವರ ರಗಳೆ, ಭೀಮಕವಿಯ ಬಸವಪುರಾಣ, ಸಿಂಗಿರಾಜನ ಸಿಂಗಿರಾಜಪುರಾಣ, ಸಿದ್ಧನಂಜೇಶನ ಗುರುರಾಜಚಾರಿತ್ರ, ಷಡಕ್ಷರದೇವನ ಬಸವರಾಜವಿಜಯ, ಶಾಂತಲಿಂಗದೇಶಿಕನ ಭೈರವೇಶ್ವರಕಾವ್ಯದ ಕಥಾಮಣಿಸೂತ್ರರತ್ನಾಕರ ಮುಖಬೋಳು ಸಿದ್ಧಲಿಂಗನ ಷಟ್‌ಸ್ಥಲತಿಲಕ, ಚೆನ್ನಪ್ಪಕವಿಯ ಶರಣಲೀಲಾಮೃತ ಮೊದಲಾದ ಕೃತಿಗಳಲ್ಲಿ ಈಕೆಗೆ ಸಂಬಂಧಿಸಿದ ಕೆಲವು ಸಂಗತಿಗಳು ಉಕ್ತವಾಗಿವೆ. ಹರಿಹರ 'ಸತ್ಕುಲ ಸಾದೃಶ್ಯಮಪ್ಪ ಸುಶೀಲೆ' ಎಂದು ಇವಳನ್ನು ಬಣ್ಣಿಸಿದ್ದಾನೆ. ಭೀಮಕವಿಯು ಇವಳ ಧೃತಿ, ಸಿರಿಪ್ರಭೆ, ಜಾಣ್ಮೆ ರೂಪು, ಉನ್ನತಿ, ಪತಿವ್ರತಾಚರಣೆ, ಪವಿತ್ರತೆ, ತೇಜಗಳೆಲ್ಲ ದೇವಕುಲ ಸ್ತ್ರೀಯರಿಗಿಂತ ನೂರುಮಡಿ ಮಿಗಿಲಾಗಿದ್ದವು ಎಂದು ವರ್ಣಿಸಿದ್ದಾನೆ. ಕಲ್ಯಾಣಕ್ರಾಂತಿಯ ನಂತರ ಬಸವಣ್ಣ ಕೂಡಲಸಂಗಮದತ್ತ ಸಾಗಲು, ಈಕೆ ಶರಣಸಮೂಹದ ಜೊತೆ ಬೆರೆತು, ಚೆನ್ನಬಸವಣ್ಣ, ಅಕ್ಕನಾಗಮ್ಮರೊಂದಿಗೆ ಉಳುವೆಯತ್ತ ನಡೆದು, ಕಾದ್ರೊಳ್ಳಿ ಎಂಬ ಗ್ರಾಮದಲ್ಲಿ ಲಿಂಗೈಕ್ಯಳಾದಳೆಂದು ತಿಳಿದುಬರುತ್ತದೆ. ಹುಬ್ಬಳ್ಳಿಯ ಸಮೀಪ ಮಲಪ್ರಭಾನದಿ ಎಡದಂಡೆಯ ಮೇಲೆ ಈಕೆಯ ಸಮಾಧಿ ಕಂಡುಬರುತ್ತದೆ. ಇವಳಿಗೆ ಸಿದ್ಧರಸನೆಂಬ ಮಗನಿದ್ದನೆಂದು ತಿಳಿದುಬರುತ್ತದೆ. ಮಗುವನ್ನು ಕಳೆದುಕೊಂಡು ಕೊರಗುವ ವೇದನೆ ಇವಳ ಕೆಲವು ವಚನಗಳಲ್ಲಿ ನಿರೂಪಿತವಾಗಿದೆ. ಇವಳು 'ಗಂಗಾಪ್ರಿಯ ಕೂಡಲಸಂಗ' ಎಂಬ ಅಂಕಿತದಲ್ಲಿ ಕೆಲವು ವಚನಗಳನ್ನು ರಚಿಸಿದ್ದಾಳೆ.

ಗಂಗಾಂಬಿಕೆಯಂತೆ ಸಮಾಜದ ಶ್ರೀಮಂತವರ್ಗದವಳಾಗಿ ಅನುಭವಮಂಟಪದ ಸದಸ್ಯೆಯಾಗಿ, ಸಮಾಜದ ಸಾಮಾನ್ಯವರ್ಗಕ್ಕೆ ಅನುಕರಣೀಯಳೆನಿಸಿದ ಮತ್ತೋರ್ವ ವಚನಕಾರ್ತಿ **ರಾಯಮ್ಮ**. ಈ ಕಾಲದಲ್ಲಿ ರಾಯಮ್ಮನ ಹೆಸರಿನ ಇಬ್ಬರು ವಚನಕಾರ್ತಿಯರು ಕಂಡುಬರುತ್ತಾರೆ. ಅವರಲ್ಲಿ ಒಬ್ಬಳು ಅಮುಗೆರಾಯಮ್ಮ, ಮತ್ತೊಬ್ಬಳು

ರಾಯಸದ ಮಂಚಣ್ಣಗಳ ಪುಣ್ಯಸ್ತ್ರೀ ರಾಯಮ್ಮ. ರಾಯಸದ ಮಂಚಣ್ಣ ಅರಮನೆಯ ನಿಕಟ ಸಂಪರ್ಕವನ್ನಿಟ್ಟುಕೊಂಡವನಾಗಿರುತ್ತಾನೆ. ಅರಮನೆಯ ಸಚಿವನಾಗಿದ್ದ ಈತ, ಬಸವಣ್ಣನ ಪತ್ರವ್ಯವಹಾರವನ್ನು ನೋಡಿಕೊಳ್ಳುವ ಆಪ್ತಕಾರ್ಯದರ್ಶಿಯಾಗಿರುತ್ತಾನೆ. ಶ್ರೀಮಂತ ಕುಟುಂಬದ ರಾಯಮ್ಮ ಪತಿಯೊಡನೆ ಶರಣರ ಸಂಪರ್ಕಕ್ಕೆ ಬಂದು ಅನುಭವಮಂಟಪದ ಸದಸ್ಯೆಯಾಗಿ ಭಾಗವಹಿಸಿ, ವಚನಗಳನ್ನು ರಚಿಸಿದ್ದಾಳೆ. ಇವಳು ರಚಿಸಿರುವ ವಚನಗಳು ಅಮುಗೆ ರಾಯಮ್ಮನ ಹೆಸರಿನಡಿಯಲ್ಲಿ ಸೇರಿಹೋಗಿರುವುದನ್ನು ಕೆಲವು ವಚನಸಂಪಾದಕರು ಗುರುತಿಸಿದ್ದಾರೆ[೧೮].

ಕರ್ನಾಟಕದ ಅರಸಿಯರ ಸಾಹಿತ್ಯ ಕೃಶಿಗೆ ಕರ್ನಾಟಕದವರಲ್ಲದ ಅರಸು ಮನೆತನದ ಮಹಿಳೆಯರ ಕೊಡುಗೆಯು ಸೇರಿದೆ. ಹೊರನಾಡಿನಿಂದ ಕರ್ನಾಟಕ್ಕೆ ಬಂದು ಕನ್ನಡದಲ್ಲಿ ವಚನ ರಚಿಸಿದವರಲ್ಲಿ **ಬೊಂತಾದೇವಿ** ಹಾಗೂ **ಮೋಳಿಗೆ ಮಹದೇವಿ** ಇಬ್ಬರು ವಿಶೇಷ ಸ್ಥಾನವನ್ನು ಪಡೆದವರಾಗಿದ್ದಾರೆ. ಬೊಂತಾದೇವಿಯು ಕಾಶ್ಮೀರ ದೇಶದ ಮಾಂಡವ್ಯಪುರದ ಅರಸನ ಮಗಳು ಎಂದು ತಿಳಿದುಬರುತ್ತದೆ. ಚಿಕ್ಕಂದಿನಲ್ಲಿಯೇ ಶಿವಭಕ್ತಿ, ವೈರಾಗ್ಯಗಳು ಇವಳಲ್ಲಿ ಮನೆಮಾಡಿ ರಾಜ್ಯ-ಸುಖಭೋಗಗಳನ್ನು ತೊರೆಯುವಂತೆ ಮಾಡಿತು. ಕಲ್ಯಾಣದ ಶಿವಭಕ್ತರ ವಿಚಾರ ತಿಳಿದು ಸರ್ವಸ್ವವನ್ನೂ ಪರಿತ್ಯಾಗಮಾಡಿ ನಿರ್ವಾಣಳಾಗಿ ಕಲ್ಯಾಣದತ್ತಾ ಬರುತ್ತಿರುವಾಗ ಶಿವನು ಇವಳನ್ನು ಪರೀಕ್ಷಿಸಿ, ಇವಳಿಗೆ ಬೊಂತೆಯನ್ನು ಹೊದ್ದುಕೊಂಡು ಹೋಗಲು ತಿಳಿಸುತ್ತಾನೆ. ಇದರಿಂದ ಇವಳನ್ನು ಬೊಂತಾದೇವಿ ಎಂದು ಗುರುತಿಸಲಾಗುತ್ತದೆ. ಕಲ್ಯಾಣಕ್ಕೆ ಬಂದು ಕೊನೆಯವರೆಗೂ ಶಿವಶರಣರೊಂದಿಗಿದ್ದು, 'ಬಿಡಾಡಿ' ಅಂಕಿತದಲ್ಲಿ ಕೆಲವು ವಚನಗಳನ್ನು ರಚಿಸಿದ್ದಾಳೆ. ಸೋಮನಾಥಪುರಾಣ, ಭೈರವೇಶ್ವರಕಾವ್ಯದ ಕಥಾಮಣಿ ಸೂತ್ರರತ್ನಾಕರ, ಚೆನ್ನಬಸವಪುರಾಣ ಮೊದಲಾದ ಕಾವ್ಯಗಳಲ್ಲಿ ಇವಳ ವಿಚಾರ ಉಕ್ತವಾಗಿದೆ.

ಬೊಂತಾದೇವಿಯಂತೆ ಮೋಳಿಗೆ ಮಹಾದೇವಿಯೂ ಕೂಡ ಕಾಶ್ಮೀರದಿಂದ ಬಂದವಳು. ಅರಸಿಯಾಗಿದ್ದ ಇವಳು ವೈರಾಗ್ಯತಾಳಿ, ಸಾಮಾನ್ಯರಂತೆ ಜೀವನ ನಡೆಸಿ ಪತಿ ಮೋಳಿಗೆಮಾರಯ್ಯನೊಡನೆ ಕಲ್ಯಾಣಕ್ಕೆ ಬಂದಿರುತ್ತಾಳೆ. ಬಸವಣ್ಣನು ಈ ದಂಪತಿಗಳನ್ನು ಪರೀಕ್ಷಿಸಿ ಇವರ ದಾಸೋಹನಿಷ್ಠೆ, ನಿರಪೇಕ್ಷ ಭಾವವನ್ನು ಕಂಡು ಗೌರವದಿಂದ ಇರಿಸಿಕೊಳ್ಳುತ್ತಾನೆ. ಮೋಳಿಗೆ ಮಹಾದೇವಿಯು 'ಎನ್ನಯ್ಯ ಪ್ರಿಯ ನಿಃಕಳಂಕ ಮಲ್ಲಿಕಾರ್ಜುನ' ಎಂಬ ಅಂಕಿತದಲ್ಲಿ ರಚಿಸಿರುವ ಸುಮಾರು ೬೯ ವಚನಗಳು ದೊರಕಿವೆ[೧೯]. ಇವಳನ್ನು ಉಲ್ಲೇಖಿಸಿರುವ ಇತರ ವಚನಕಾರರು 'ರಾಣಿ ಮಹಾದೇವಿ' ಎಂದೇ ಸಂಬೋಧಿಸಿದ್ದಾರೆ. ಅರಮನೆಯನ್ನು ತೊರೆದು ಬಂದಿದ್ದರೂ ಇವಳು ರಾಣಿಯೆಂದೇ ಗುರುತಿಸಿಕೊಳ್ಳುತ್ತಿದ್ದಳು. ಇವಳ ಕೆಲವೊಂದು ವಚನಗಳು ತನ್ನ ಪತಿಗೆ ಆಧ್ಯಾತ್ಮದ ಸ್ವರೂಪವನ್ನು ವಿವರಿಸಿರುವ ಪರಿಯನ್ನು ತಿಳಿಸುತ್ತದೆ. ಇವಳು ಜ್ಞಾನಿಯಾದರೂ ಸೌಜನ್ಯಯುತವಾದ ನಡವಳಿಕೆ ಇವಳ ವಚನಗಳಲ್ಲಿ ವೇದ್ಯವಾಗುತ್ತದೆ.

**ಪೂಜಿಸಿ ಕಂಡಿಹೆನೆಂದೊಡೆ ಪೂಜೆಗೆ ತನ್ನಯ ಮೂರ್ತಿ ನೀನು**
**ನೆನಹಿನಲ್ಲಿ ಆತುರಿಸಿ ಕಂಡಿಹೆನೆಂದೊಡೆ ಆ ನೆನಹಿಂಗೆ ಆತ್ಮಸ್ವರೂಪ ನೀನು**
**ಎಲ್ಲ ಎಡೆಯಲ್ಲಿ ಭಿನ್ನವ ಮಾಡಿ ಕಂಡಿಹೆನೆಂದೊಡೆ ಅಣೋರಣೀಯಾ಼ ಮಹತೋ ಮಹೀಯ ನೀನು**
**ಸತ್ಯವೆಲ್ಲಿದ್ದಿತ್ತು ಅಲ್ಲಿ ತಪ್ಪದಿಪ್ಪೆ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನು ವಿಶ್ವಾಸವೆಲ್ಲಿಪ್ಪುದಲ್ಲಿ ತಪ್ಪದಿಪ್ಪನು॥**

**ಸಂಸಾರ ಸಾಗರದಿಂದುದಿಸಿದ ಸುಖವೆ ದುಃಖವೆಂದರಿಯದೆ ಆ ಸುಖವನೆ ಮೆಚ್ಚಿ ಭವದುಃಖವೆಂಬ ಕ್ರೂರ ಜನ್ಮಚಕ್ರಕ್ಕೀಡಾಗಿ ಅಲ್ಲಿ ತನ್ನ ಮಱೆದು ತನಗಿಲ್ಲದ ಭ್ರಮೆಯ ತನ್ನದೆಂದು ಅಂತಪ್ಪ ಘೋರದೊಳಗೋಲಾಡುತಿಪ್ಪ ಮುಟುಗಾಡುತಿಪ್ಪ ಅಜ್ಞಾನಿ ಜೀವಿಗಳು ನಿಮ್ಮ ನ್ನೆತ್ತ ಬಲ್ಲರಯ್ಯ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ ॥**

ಕನ್ನಡ ಸಾಹಿತ್ಯಕ್ಕೆ ವಿಶೇಷ ಸ್ಥಾನವನ್ನು ತಂದುಕೊಟ್ಟಿರುವ ವಚನ ಸಾಹಿತ್ಯ ಪ್ರಕಾರಕ್ಕೆ ರಾಜಮನೆತನದ ಮಹಿಳೆಯರ ಕೊಡುಗೆ ಇದೆ ಎನ್ನುವುದನ್ನು ಈ ಮೇಲಿನ ಕೆಲವು ವಿಚಾರಗಳು ಸ್ಪಷ್ಟಪಡಿಸುತ್ತವೆ. ಅನುಕೂಲ

ಪರಿಸ್ಥಿತಿಯಲ್ಲಿ ಬೆಳೆದ ಈ ಮಹಿಳೆಯರು ಉತ್ತಮ ವಿದ್ಯಾಭ್ಯಾಸವನ್ನು ಹೊಂದಿದವರಾಗಿದ್ದರು. ಉತ್ತಮ ಸಂಸ್ಕಾರವನ್ನು ಹೊಂದಿದ್ದ ಈ ಮಹಿಳೆಯರು ಪುರುಷ ಪ್ರಧಾನ ಸಮಾಜದಲ್ಲಿ ತಮ್ಮನ್ನು ವಿಶಿಷ್ಟ ರೀತಿಯಿಂದ ಗುರುತಿಸಿಕೊಳ್ಳುವ ಯತ್ನವನ್ನು ಮಾಡಿದ್ದಾರೆ. ಸರ್ವರಿಗೂ ಮುಕ್ತ ಪ್ರವೇಶವಿದ್ದ ಅನುಭವಮಂಟಪವನ್ನು ಪ್ರವೇಶಿಸಿ ಸಾಮಾನ್ಯ ಮಹಿಳೆಯರಿಗೆ ಅನುಕರಣೀಯರೆನಿಸಿವರು.

ಈ ವಚನಕಾರ್ತಿಯರು ಅರಸುಮನೆತನದವರಾದರೂ ಸಾಮಾನ್ಯರಂತಿದ್ದು, ಸಾಮಾನ್ಯ ಜನತೆಯನ್ನು ಕಡಿಮೆ ಅಂತರದಿಂದ ಬಲ್ಲವರಾಗಿದ್ದರು. ಹಾಗಾಗಿ ಇವರ ವಚನಗಳಲ್ಲಿ ಜನಪರ ಆಶಯಗಳು, ಸಾಮಾಜಿಕ ಕಳಕಳಿಗಳು ಹೆಚ್ಚಾಗಿ ಕಂಡುಬಂದು, ಒಂದು ಕಾಲಘಟ್ಟದ ವಿಚಾರಗಳನ್ನು ವಿವಿಧ ಆಯಾಮಗಳಲ್ಲಿ ತೋರಿಸಿಕೊಡುತ್ತವೆ.

## ಸಾಳ್ವ ಅರಸಿ ನಾಗಲದೇವಿ (ಚಂಪು ಪ್ರಕಾರ)

ನಾಗಲದೇವಿಯು ಗೇರುಸೊಪ್ಪೆಯ ಸಾಳ್ವಮನೆತನದ ಭೈರವರಸನ ರಾಣಿ. ಹದಿನೈದನೆಯ ಶತಮಾನದಲ್ಲಿ ಚಂಪು ಪ್ರಕಾರದಲ್ಲಿ ಕಾವ್ಯ ರಚಿಸಿದ ಏಕೈಕ ಕನ್ನಡ ಕವಯತ್ರಿ. ಅರಸಿ ನಾಗಲದೇವಿಯು ಮೂಡಬಿದಿರೆಯ ತ್ರಿಭುವನ ಚೂಡಾಮಣಿ ಬಸದಿಯ ಮುಂದಿನ ಮಾನಸ್ತಂಭ ಹಾಗೂ ಮುಖಮಂಟಪಗಳನ್ನು ಮಾಡಿಸಿದಳೆಂಬ ವಿಷಯವನ್ನು ಮೂಡಬಿದಿರೆಯ ಶಾಸನಗಳು ತಿಳಿಸುತ್ತವೆ[೨೦]. ಈ ಶಾಸನಗಳಿಂದ ಇವಳ ಕೆಲವು ವೈಯಕ್ತಿಕ ವಿಚಾರಗಳು ತಿಳಿದು ಬರುತ್ತವೆ.

ಇವಳು ತಿಳುವಳ್ಳಿ ಪುರವರಾಧೀಶನಾದ ತಾಯಪ್ಪರಸನ ಸಹೋದರಿ ಬೊಮ್ಮರಸಿಯ ಮಗಳು. ಹಾಗೂ ಕ್ರಿ.ಶ.೧೪೩೧–೬೨ರ ವರೆಗೆ ನಗಿರೆನಾಡನ್ನು ಆಳಿದ ಸಾಳ್ವ ದೊರೆ ಭೈರವರಾಯನ (ಭೈರವೇಂದ್ರ) ಅರಸಿ.

'ಸಾಳ್ವಭಾರತ' ರಚಿಸಿದ ಕವಿ ಸಾಳ್ವನು ತನ್ನ ಕೃತಿಯಲ್ಲಿ ನಾಗಲದೇವಿಯನ್ನು ಈ ಪ್ರಕಾರವಾಗಿ ಸ್ತುತಿಸಿದ್ದಾನೆ.

**ಖ್ಯಾತೆ ಪಟ್ಟದರಾಣಿಯಭಿನವ**
**ಸೀತೆಯೆನಿಸಿದ ನಾಗಲಾಂಬಿಕೆ**
**ಯಾತನೂಭವ ನವಮನೋಭವ ಸಂಗನೃಪವೆರಸೆ**
**ಪ್ರೀತಿಯಿಂ ಪಲಕಾಲವಾ ರಘು**
**ಜಾತನೆನೆ ಧರ್ಮಾರ್ಥ ಕಾಮವ**
**ನೋತು ಸಾಧಿಸಿ ಭೈರವೇಶ್ವರನರಸುಗೆಯದನದಾ॥ (ಸಾಳ್ವಭಾರತ)**

ಮೂಡುಬಿದಿರೆಯ ಶಾಸನವು ನಾಗಲದೇವಿಯನ್ನು ಕುರಿತು ಈ ರೀತಿಯಾಗಿ ಹೊಗಳಿದೆ:

**ದ್ವಿಗುಣಂ ಭಾರತಿಯಿಂದ ಸತ್ಕಳೆಯೊಳಂ ಸೌಭಾಗ್ಯದಿಂ ಗೌರಿಯಿಂ**
**ತ್ರಿಗುಣಂ ಸಚ್ಚರಿತಕ್ಕೆ ರೇವತಿಯೊಳಂ ಚಾತುರ್ಗುಣಂ ದೇವಪೂ**
**ಜೆಗಮಿಂದ್ರಾಣಿಗೆ ತಾನದೈವಡಿ ಮಿಗಿಲ್ಸತ್ಪಾತ್ರದಾನಕ್ಕಮಾ**
**ವಗ ಸಾದೃಶ್ಯರ ಕಾಣೆ ನಾನಿಳೆಯೊಳಂ ಶ್ರೀ ನಾಗಲದೇವಿಗಂ**

ಪುರಾಣದ ಭಾರತಿ, ಗೌರಿ, ರೇವತಿ, ಇಂದ್ರಾಣಿಯರಿಗೆ ಹೋಲಿಸಿ ನಾಗಲದೇವಿಗೆ ಸಾದೃಶ್ಯರಾದವರನ್ನು ಹೋಲಿಕೆಯಾಗುವವರನ್ನು ಈ ಭೂಮಿಯಮೇಲೆ ಮತ್ತ್ಯಾರನ್ನೂ ಕಾಣಲು ಸಾಧ್ಯವಿಲ್ಲವೆಂದು ಹೊಗಳಿದೆ.

ಮೂಡುಬಿದಿರೆಯ ಬಸದಿಯಲ್ಲಿ ನಾಗಲದೇವಿಯು ಮಾಡಿಸಿದ ಧರ್ಮಕಾರ್ಯವನ್ನು ಕುರಿತು ಶಾಸನವು ಈ ರೀತಿಯಾಗಿ ತಿಳಿಸಿದೆ **ಭೈರವಾಧೀಶ್ವರನ ಪಟ್ಟದರಸಿ ನಾಗಲದೇವಿ ಮಾಡಿಸಿದ ಧರ್ಮಮೆಂತೆಂದೊಡೆ ॥ ಭೂನಾಥಾಧಿಕ**

**ಭೈರವಾಧಿಪ ಮಹಾದೇವೀ ಪದಪ್ರಾಪ್ತಿಯುಂ ಜ್ಞಾನಂ ನಾಗಲದೇವಿಯೊಳ್ನೆಲಸಿರಲ್ಸೌಭಾಗ್ಯಮುಂ ಭಾಗ್ಯಮುಂ ದಾನೇಜ್ಞಾವಿಧಿಶೀಲೆ ಶೀಲವತಿ ಯಂತೊಪ್ಪಿಪ್ಪಳಾರಾಜ್ಞಿ ತಾಂ ಮಾನಸ್ತಂಭಮನೊಲ್ದು ಮಾಡಿಸಿದಳೀ ಶ್ರೀ ಚೈತ್ಯಗೇಹಾಗ್ರದೊಳ್ ॥**

ವಿದ್ಯೆ-ಐಶ್ವರ್ಯ ಎರಡನ್ನೂ ಹೊಂದಿದ್ದ ಅರಸಿಯು, ಜಿನಾಲಯದ ಮುಂದಿನ ಮಾನಸ್ತಂಭವನ್ನು ಮಾಡಿಸಿದಳೆಂದು ಹೊಗಳುತ್ತಾ ಶಾಸ'ನದ ಈ ಸಾಲು ನಾಗಲದೇವಿಯಲ್ಲಿ ಜ್ಞಾನವೂ ಸೌಭಾಗ್ಯವೂ ನೆಲೆಸಿದೆಯೆಂದು ಕೀರ್ತಿಸಿದೆ.

**ಮಾನಾನೂನಮದಭ್ರಮಭ್ರಪಥಮಂ ಮೀಱೆತ್ತಿದಯ್ಯಯ್ಯ ತದ್ಧಾನುಸ್ಥಾನಮೆನೆಯ್ದಿ ದತ್ತ ಮದುಚಲ್ಯೋಹೋಯೆನಲ್ತತ್ಪರಿ ಜ್ಞಾನರ್ನ್ನಾಗಲದೇವಿ ಮಾಡಿಸಿದಳತ್ಯಾಶ್ಚರ್ಯ್ಯಮಪ್ಪಂದದಿಂ ಮಾನಸ್ತಂಭಮನೆಂದಡೇ ಪೊಗಳ್ವನಾಪುಣ್ಯಾಂಗನಾ ಪುಣ್ಯಮಂ**

**ಮನಸಿಜ ಜಯದೊಳ್ನಿಲಿಸಿದ ಜಿನನ ಜಯಸ್ತಂಭದಂತೆ ಜಿನಸನ್ನಿಧಿಯೊಳ್ ಘನತರಮಾನಸ್ತಂಭಂ ಜನನುತ ನಾಗರಸಿಯಿಂದೆ ಕಾರಿತಮೆಸೆಗುಂ ॥**

ಮನ್ಮಥನು ಜಯದಿಂದ ಜಿನನ ಮುಂದೆ ಜಯಸ್ತಂಭವನ್ನು ನಿಲ್ಲಿಸಿದಂತೆ ಜಿನಸನ್ನಿಧಿಯಲ್ಲಿ ನಾಗರಸಿಯು ಘನತರವಾದ ಮಾನಸ್ತಂಭವನ್ನು ನಿಲ್ಲಿಸಿದಳು ಎಂದು ಬಣ್ಣಿಸಿರುವ ಈ ಸಾಲು ಜನನುತೆ ನಾಗರಸಿ ಎಂದು ತನ್ನ ಪ್ರಜೆಗಳ ಮನವನ್ನು ಗೆದ್ದ ಅರಸಿಯ ಕೀರ್ತಿಯನ್ನು ತಿಳಿಸಿದೆ.

**ಕಾವ್ಯವಸ್ತು:** ನಾಗಲಾಂಬೆ ರಚಿಸಿರುವ 'ಷೋಡಶಭಾವನೆಯ ನೋಂಪು' ಚಂಪೂ ಪ್ರಕಾರದ ಕೃತಿಯಾಗಿದೆ. ಪಂಪನ ಆದಿಪುರಾಣ, ರನ್ನನ ಅಜಿತ ತೀರ್ಥಂಕರ ಪುರಾಣ ಮೊದಲಾದ ಕಾವ್ಯಗಳಲ್ಲಿಯೂ ಜೈನಾಗಮಶಾಸ್ತ್ರಗ್ರಂಥಗಳಲ್ಲಿಯೂ ಪ್ರಾಸ್ತಾವಿಕವಾಗಿ ಬಂದಿರುವ ಷೋಡಷಭಾವನೆಯ ನೋಂಪನ್ನು ಕುರಿತಂತೆ ನಾಗಲದೇವಿಯು ಪ್ರತ್ಯೇಕವಾದ ಪುಟ್ಟ ಕಾವ್ಯವನ್ನಾಗಿ ರಚಿಸಿದ್ದಾಳೆ. ತೀರ್ಥಂಕರ ನಾಮಕರ್ಮ ಉದಯವಾಗಲು ಕಾರಣವಾದ ಈ ೧೬ ಭಾವನೆಗಳ ಸಂಬಂಧ ವ್ರತಕಥೆಗಳು ಪ್ರಾಕೃತ, ಸಂಸ್ಕೃತ ಕನ್ನಡ ಭಾಷೆಗಳಲ್ಲಿ ರಚಿತವಾಗಿವೆ. ಹೀಗೆ ರಚಿತವಾಗಿರುವ ಹಲವಾರು ನೋಪಿಯ ಕಥೆಗಳಲ್ಲಿ "ಷೋಡಶಭಾವನೆ ಕಾವ್ಯ ಉತ್ಕೃಷ್ಟವಾಗಿದೆ"[೨೧]

ಜೀವಂಧರ ತೀರ್ಥಂಕರರ ಹಿಂದಿನ ಭವಾವಳಿ ಹಾಗೂ ತೀರ್ಥಂಕರ ಭವದ ಪಂಚಕಲ್ಯಾಣಗಳ ವಿಚಾರವನ್ನೊಳಗೊಂಡ ಈ ಕಾವ್ಯವು ಬಹಳ ಸಂಕ್ಷಿಪ್ತವಾಗಿ ರಚಿತವಾಗಿದೆ. ಎಲ್ಲಿಯೂ ಬೇಸರ ತರಿಸದ ರೀತಿಯಲ್ಲಿ ಕಥೆ ಓಡುತ್ತಾ ಸಾಗಿದೆ. ಕೆಲವೊಮ್ಮೆ ಕಥೆ ಹೇಳುವುದಷ್ಟೇ ಕವಯತ್ರಿಗೆ ಮುಖ್ಯವಾಗಿದೆ ಎನಿಸುತ್ತದೆ. ವರ್ಣನೆಗಳ ಕಡೆಗೆ ಹೆಚ್ಚು ಗಮನ ಹರಿಸಿಲ್ಲದಿರುವುದು ಇವಳ ಧಾರ್ಮಿಕ ಮನೋಭಾವನೆ ಕಾರಣವಿರಬಹುದು.

ಕವಯತ್ರಿಯು ಈ ಕಾವ್ಯವನ್ನು ಯಾವುದೇ ರೀತಿಯಲ್ಲಿ ವಿಂಗಡಿಸಿಲ್ಲ. ಇಲ್ಲಿ ಸರ್ಗ, ಅಧ್ಯಾಯ ಯಾವುದೇ ರೀತಿಯ ಪರಿಚ್ಛೇದಗಳಿಲ್ಲ. ಆದರೆ ಕಾವ್ಯದ ವಸ್ತುವನ್ನಾದರಿಸಿ ಸಂಪಾದಕರಾದ ಕಮಲಾ ಹಂಪನಾ ಅವರು ಇದನ್ನು ನಾಲ್ಕು ಭಾಗಗಳನ್ನಾಗಿ ವಿಂಗಡಿಸಿದ್ದಾರೆ. ಮೊದಲ ಭಾಗದಲ್ಲಿ ಜೀವಂಧರ ತೀರ್ಥಂಕರರ ಹಿಂದಿನ ಭವಾವಳಿ, ಆ ಒಂದು ಭವದಲ್ಲಿ ಮಾಡಿದ ಹೀನಕಾರ್ಯದ ಪಾಪ ಫಲವನ್ನನುಭವಿಸುವ ಮುಂದಿನ ಹೀನ ಜನ್ಮಗಳು ಹಾಗೂ ಚಾರಣಮುನಿಗಳ ಹಿತೋಪದೇಶಗಳ ವಿಚಾರವನ್ನು ಕಾಣಬಹುದು.

ಎರಡನೆಯ ಭಾಗದಲ್ಲಿ ಮಾಡಿದ ಪಾಪಕರ್ಮಗಳನ್ನನುಭವಿಸುವ ಭವದಲ್ಲಿ ಪಶ್ಚಾತಾಪದ ಭಾವನೆಗಳು ಹಾಗೂ ಪ್ರಾಯಶ್ಚಿತ್ತದ ಮಾರ್ಗಗಳ ವಿಚಾರವಿದೆ. ಇಲ್ಲಿ 'ಷೋಡಶಭಾವನೆ' ನೋಂಪಿಯ ಆಚರಣೆ, ವಿಧಿ-ವಿಧಾನಗಳನ್ನು ಕವಯತ್ರಿಯು ವಿವರವಾಗಿ ತಿಳಿಸಿಕೊಟ್ಟಿದ್ದಾಳೆ.

ಮೂರನೆಯ ಭಾಗದಲ್ಲಿ ಚಂಡಕುಮಾರಿಯು 'ಷೋಡಶಭಾವನೆ'ಯ ನೋಂಪಿಯ ಆಚರಣೆಯಿಂದ ಪಾಪಕರ್ಮ ಕಳೆದುಕೊಳ್ಳುವ ಪರಿಯನ್ನು ತಿಳಿಸಿದೆ. ಪಾಪಕಾಳಿಕೆಯಿಂದ ಹೊರಬಂದು, ಮಹರ್ಧಿಕ ದೇವನಾಗಿ ಹುಟ್ಟಿ, ಸ್ವರ್ಗವಾಸದಲ್ಲಿ ವೈಭವೋಪೇತ ಸಂಸಾರಸುಖವನ್ನು ಭವಿಸುವ ವಿವರಗಳಿವೆ.

ನಾಲ್ಕನೆಯ ಹಾಗೂ ಕಡೆಯ ಭಾಗದಲ್ಲಿ ತೀರ್ಥಂಕರತ್ವ ಪಡೆಯುವ ಕಟ್ಟಕಡೆಯ ಭವದ ವಿಚಾರವನ್ನು ಕಾಣಬಹುದು. ಇಲ್ಲಿ ಪಂಚಕಲ್ಯಾಣದ ವಿವರಣೆಗಳು ಸೊಗಸಾಗಿ ಮೂಡಿಬಂದಿವೆ.

ವರ್ಣನೆಗೆ ಸಾಕಷ್ಟು ಅವಕಾಶಗಳಿದ್ದರೂ, ಕವಯತ್ರಿಯು ಇದನ್ನೊಂದು ವಸ್ತುಕಕಾವ್ಯವನ್ನಾಗಿಸಿದ್ದಾಳೆ. ಕಾವ್ಯವನ್ನೋದಿದವರಿಗೆ "ಇವಳು ವಿಸ್ತಾರಪ್ರಿಯಳಲ್ಲ" ಎಂಬ ಕಮಲಾಹಂಪನಾ ಅವರ ಮಾತು ಮನವರಿಕೆಯಾಗುತ್ತದೆ. "ಪುಟಗಟ್ಟಲೆ ವರ್ಣಿಸಬಹುದಾದ ಅನೇಕ ಗಣನೀಯ ವಿವರ್ಗಳನ್ನೆಲ್ಲ ಪುಟ್ಟ ಕಥೆಯಲ್ಲಿ ಹಾಸುಹೊಕ್ಕಾಗಿ ನೆಯ್ದಿರುವ ಕವಯತ್ರಿಯ ಸಂಗ್ರಹಕಲೆ ಪರಿಭಾವನಾರ್ಹವಾದುದಾಗಿದೆ."[೨೨]

ನಾಗಲಾದೇವಿಯು ತನ್ನ ಕೃತಿಯಲ್ಲಿ ಜೀವಂಧರ ತೀರ್ಥಂಕರನ ಹಿಂದಿನ ನಾಲ್ಕು ಭವಗಳ ಭವಾವಳಿಗಳಲ್ಲಿ ಮೂರನ್ನು ಮಾತ್ರ ನಿರೂಪಿಸಿ, ಶ್ರೀಪಾಲ ಭವದ ವಿಚಾರವನ್ನು ಕೈಬಿಟ್ಟಿದ್ದಾಳೆ.

**ವರ್ಣನೆ:** ಪಂಚಕಲ್ಯಾಣಗಳ ವರ್ಣನೆಯಲ್ಲಿ ಪಂಪನ ಪ್ರಭಾವವನ್ನು ಗುರುತಿಸಬಹುದು. ಪಂಪನ ಆದಿಪುರಾಣದಲ್ಲಿ ಶಚಿದೇವಿಯು ಸೂಕ್ಷ್ಮ ಶರೀರೆಯಾಗಿ ಮರುದೇವಿಯ ಪ್ರಸೂತಿ ಗೃಹವನ್ನು ಹೊಕ್ಕು ಮಾಯಾ ಶಿಶುವನ್ನು ಅವಳ ಪಕ್ಕದಲ್ಲಿರಿಸಿ ಜಿನನಾಗಲಿರುವ ಶಿಶುವನ್ನು ಕೈಗೆತ್ತಿಕೊಂಡ ವರ್ಣನೆ ಯಥಾವತ್ತಾಗಿ ನಾಗಲದೇವಿಯು ತಂದಿದ್ದಾಳೆ. ಈ ಸಂದರ್ಭದಲ್ಲಿನ ಪಂಪನ ಪದ್ಯವೊಂದು:

**ಪಡೆಯಲ್ಕಾಗದ ನಿಧಿಯಂ । ಬಡವಂ ಪಡೆವಂತೆ ಕಮಳದಳಕರತಳದಿಂ**
**ಪಿಡಿದೆತ್ತಿಕೊಂಡ ಸಂತಸ । ದೊಡಮೆಯನಾಂ ಪೊಗಟಲಱಿಯೆನಿಂದ್ರಾಂಗನೆಯಾ ॥**

ಎಂಬ ಕಂದಪದ್ಯವನ್ನು ನಾಗಲದೇವಿಯು ಬಳಸಿಕೊಂಡಿದ್ದಾಳೆ. ಶಚಿದೇವಿಯು ಮಗುವನ್ನು ತಂದು ದೇವೇಂದ್ರನ ಕೈಯೊಳಿಟ್ಟಾಗ "ಸಹಸ್ರ ಲೋಚನನಾದಂ...." ಎಂಬ ಬಣ್ಣನೆಯೂ ಪಂಪನದೇ ಆಗಿದೆ.

ಜನ್ಮಾಭಿಷೇಕದಲ್ಲಿ ಇಂದ್ರನ ಐರಾವತವು "ತಾನುಮಾಸನ್ನ ಭವ್ಯನಪ್ಪುದರಿಂದ ತ್ರಿಲೋಕಸ್ವಾಮಿಯ ಸೇವೆಯಂ ಮಾಳ್ಪ ಸುಕೃತದಿಂದ... ನಲಿವುದು" ಐರಾವತದ ದಂತದಮೇಲೆ ಸಾವಿರಾರು ದಿವಿಜಸ್ತ್ರೀಯರು ಆನಂದದಿಂದ ನರ್ತನಮಾಡುವ ವಿವರಣೆಗಳಲ್ಲೆಲ್ಲಾ ಪಂಪನ ಪಡಿಯಚ್ಚನ್ನು ಕಾಣಬಹುದು.

ಕವಯತ್ರಿಯು ಶಬ್ದಾಡಂಬರಗಳಿಲ್ಲದ ಸರಳ ಭಾಷೆಯನ್ನು ಬಳಸಿದ್ದಾಳೆ. ಗದ್ಯದಲ್ಲಿರಬೇಕಾದ ಕೆಲವು ಅಲಂಕಾರಗಳನ್ನು ಸಮಯೋಚಿತವಾಗಿ ತಂದಿದ್ದಾಳೆ. "ಜರೆಯೆಂಬ ರಕ್ಕಸಿ ಜವ್ವನಮಂ ತಿನ್ನಳನ್ನೆವರಂ", "ಮೃತ್ಯು ವ್ಯಾಘ್ರಂ ಪ್ರಾಣಮನಪಹರಿಸದಂದು" ಎಂಬ ಉಪಮೆಯನ್ನು ರೂಪಕಗಳನ್ನೂ ಇಲ್ಲಿ ಕಾಣಬಹುದು

ಇವಳ ಕಾವ್ಯಮಯ ಗದ್ಯದ ಶೈಲಿಗೆ ಈ ಕೆಲವೊಂದು ಸಾಲುಗಳನ್ನು ಗಮನಿಸಬಹುದು "ಪದ್ಮಾಕರಮೆಂತು ಜಲಮಿಲ್ಲದೆ ಕಮಲಂಗಳಂ ಪಡೆಯದಂತು ಗುರುವಿಲ್ಲದೆ ಭವ್ಯಾತ್ಮನಪ್ಪ ಶಿಷ್ಯನೊಪ್ಪಲರಿಯಂ" – ನೀರಿಲ್ಲದೆ ಕಮಲದ ಹೂಗಳನ್ನು ಪಡೆಯಲು ಹೇಗೆ ಸಾಧ್ಯವಿಲ್ಲವೋ ಹಾಗೇ ಗುರುವಿಲ್ಲದೆ ಭವ್ಯಾತ್ಮನಾದ ಶಿಷ್ಯನಾಗಲು ಸಾಧ್ಯವಿಲ್ಲ.

"ಚಂದ್ರನಿಲ್ಲದ ರಾತ್ರಿಯೆಂತು ಸೂರ್ಯನಿಲ್ಲದ ದಿವಸಮೆಂತು ಮತ್ತಂ ಪುಣ್ಯದಿಂ ಪೃಥ್ವೀಪತಿಯೆಂತು ಶೀಲದಿಂ ಪ್ರಮದಾಜನಮೆಂತು ಗುರುವಿಂದಲ್ಲದೆ ಶಿಷ್ಯನೊಪ್ಪಲರಿಯನು"

ನಾಗಲದೇವಿಯು ಈ ಕೃತಿಯನ್ನು ಚಂಪೂ ಶೈಲಿಯಲ್ಲಿ ರಚಿಸಿರುವಳಾದರೂ, ಇದರಲ್ಲಿ ಗದ್ಯವೇ ಹೇರಳವಾಗಿದೆ. ಆರಂಭದಲ್ಲಿ ಜಿನ ಹಾಗೂ ಸರಸ್ವತಿಯರನ್ನು ಎರಡು ಕಂದಪದ್ಯಗಳಲ್ಲಿ ಸ್ತುತಿಸಿದ್ದಾಳೆ. ಪಂಚಕಲ್ಯಾಣವನ್ನು ವಿವರಿಸುವ ಪದ್ಯವನ್ನು ವೃತ್ತದಲ್ಲಿ ರಚಿಸಿರುವ ಕಯವತ್ರಿಯು ಇಡೀ ಕಾವ್ಯದಲ್ಲಿ ಒಟ್ಟು ೧೧ ಕಂದಪದ್ಯಗಳನ್ನಷ್ಟೇ

ತಂದಿದ್ದಾಳೆ. ಇವಳ ಪದ್ಯರಚನೆಯನ್ನು ಗಮನಿಸಿದರೆ ಇವಳ ಕವಿತಾ ಸಾಮರ್ಥ್ಯದ ಅರಿವು ಉಂಟಾಗುತ್ತದೆ. ಆದರೆ ಕಾವ್ಯದಲ್ಲಿ ಷೋಡಶಭಾವನಾ ನೋಂಪಿನ ವಿವರಣೆಗಳನ್ನು ತಿಳಿಸುವಲ್ಲಿ, ಮಂತ್ರಗಳ ಪ್ರಾಮುಖ್ಯತೆಯನ್ನು ಮನದಟ್ಟು ಮಾಡಿಸುವಲ್ಲಿ ಕವಯತ್ರಿಗೆ ಗದ್ಯವೇ ಸೂಕ್ತವೆಂದೆನಿಸಿರಬಹುದು.

ಅಂತ್ಯದ ಐದು ಕಂದಪದ್ಯಗಳನ್ನು ನಾಗಲದೇವಿಯು ರಚಿಸಿದಂತೆ ತೋರುವುದಿಲ್ಲ. ಇಲ್ಲಿ "ನಾಗಲದೇವಿ ಮಹಾವಿನೆಯಾನ್ವಿತೆ ಷೋಡಶಾಖ್ಯ ಕಾರಣ ವಿಧೇಯಂ" ಎಂಬ ಸಾಲುಗಳು ಹಾಗೂ "ಭವ್ಯರ ಮನದಾಜ್ಞಾನತಮೋ ಹರಣಮನಾಗಿಸಿದಳೇಂ ವಿದಗ್ಧೆಯೊ ಜಗದೊಳ್" ಎಂಬ ಸಾಲುಗಳಲ್ಲಿ, ಈ ಕಾವ್ಯವನ್ನು ಪರಿಶೀಲಿಸಿದವರಾರೋ ಇದರ ಕುರಿತಾದ ತಮ್ಮ ಅಭಿಪ್ರಾಯವನ್ನಿಲ್ಲಿ ಹೇಳಿರಬಹುದು ಎನಿಸುವಂತಿದೆ.

ಹಂಪಿ ಕನ್ನಡ ವಿಶ್ವವಿದ್ಯಾಲಯ ಪ್ರಕಟಣೆಯಲ್ಲಿ ಹೊರಬಂದ 'ನೋಂಪಿಯ ಕಥೆಗಳು' ಕೃತಿಯಲ್ಲಿ ನಾಗಲದೇವಿ ವಿರಚಿತ 'ಷೋಡಶಭಾವನಾ ಕಾವ್ಯ'ವನ್ನು ಮೊತ್ತಮೊದಲಿಗೆ ೨೦೦೧ರಲ್ಲಿ ಹಂಪ.ನಾ ಅವರು ಸಂಪಾದಿಸಿ ಹೊರತಂದರು. ಶ್ರವಣಬೆಳಗೊಳದ ಜೈನಧ್ಯಯನ ಸಂಸ್ಥೆಯಿಂದ ೨೦೦೪ರಲ್ಲಿ ಈ ಕಾವ್ಯವು ಕಮಲಾ ಹಂಪನಾ ಅವರಿಂದ ಸಂಪಾದನೆಗೊಂಡು ಮರುಮುದ್ರಣಗೊಂಡು ಹೊರಬಂತು.

ಧಾರ್ಮಿಕ ವಿಚಾರಗಳನ್ನು ಕಥೆಯ ಮುಖಾಂತರ ವಿರಚಿಸಿ, ಸರಳ ಭಾಷೆಯಲ್ಲಿ ಸಾಮಾನ್ಯರಿಗೂ ಅರ್ಥವಾಗುವಂತೆ ತಿಳಿಸಿರುವ ನಾಗಲದೇವಿಯು ಸಾಕಷ್ಟು ಗ್ರಂಥಗಳನ್ನು ಅಧ್ಯಯನ ಮಾಡಿದ್ದಳೆಂದು ಈ ಕೃತಿಯಲ್ಲಿ ತಿಳಿದು ಬರುತ್ತದೆ. ಅಲ್ಲದೆ ಪಂಪ ಮೊದಲಾದ ಮಹಾಕವಿಗಳ ಪ್ರಭಾವ ಇಲ್ಲಿ ಗುರುತಿಸಬಹುದು.

ಕಾವ್ಯದ ಶೈಲಿ ಉನ್ನತ ಮಟ್ಟದ್ದಾಗಿರದಿದ್ದರೂ, "ಪರಸುಖಭಾಷಾಮಯಮಂ ಸುರಚಿರ ಕರ್ನಾಟ ಭಾಷೆಯಿಂ ವಿರಚಿಸಿ" ಎಂಬ ಕಾವ್ಯದ ಸಾಲು ನಾಗಲದೇವಿಯ ಕನ್ನಡ ಭಾಷಾ ಪ್ರೇಮವನ್ನು, ಇವಳ ಧಾರ್ಮಿಕ ಮನೋಭಾವದ ಆಶಯವನ್ನು ಎತ್ತಿ ಹಿಡಿಯುತ್ತದೆ.

**ಜಕ್ಕಲಾಂಬೆ (ಸಂಪ್ರಬಂಧ)**

ಹೊಯ್ಸಳರ ಸಾಮಂತರಾಗಿ ಶಿಕಾರಿಪುರದ ಚಿಕ್ಕ ಮಾಗಡಿಯಲ್ಲಿ ಆಳ್ವಿಕೆ ನಡೆಸುತ್ತಿದ್ದ ಮನೆತನದಲ್ಲಿನ ಜಕ್ಕಲಾಂಬೆಯು ಹದಿಮೂರನೆಯ ಶತಮಾನದ ಆರಂಭದ ಕಾಲದಲ್ಲಿದ್ದವಳು. ಇವಳು 'ಗುಣಾಂಕಮಾಲೆ ಚರಿತೆ' ಎಂಬ ಕೃತಿಯನ್ನು ರಚಿಸಿರುವುದಾಗಿ ತಿಳಿದು ಬರುತ್ತದೆ.

ಇವಳ ಜೀವನದ ಕಡೆಯ ದಿನಗಳನ್ನು ಶಿಕಾರಿ ಪುರದ ಶಾಸನವೊಂದು ಕಾವ್ಯಮಯವಾಗಿ ಬಣ್ಣಿಸಿದೆ[೨೩]. ಈ ಶಾಸನವು ವೀರಬಲ್ಲಾಳನ ೨೩ನೆಯ ವರ್ಷದ ಆಳ್ವಿಕೆಯ ಕಾಲದ ಆಂಗೀರಸ ಸಂವತ್ಸರದಲ್ಲಿ ರಚಿತವಾದುದಾಗಿ ಕಾಲ ನಮೂದಿಸಿದೆ. ಹನ್ನೆರಡನೆಯ ಶತಮಾನದ ಉತ್ತರಾರ್ಧ ಹಾಗೂ ೧೩ನೆಯ ಶತಮಾನದ ಆದಿ ಭಾಗದಲ್ಲಿ ಆಳ್ವಿಕೆ ನಡೆಸಿದ ಹೊಯ್ಸಳ ವೀರಬಲ್ಲಾಳನ ಆಳ್ವಿಕೆಯಲ್ಲಿ ಕ್ರಿ.ಶ.೧೨೧೨ರಲ್ಲಿ ಆಂಗೀರಸ ಸಂವತ್ಸರ ಬರುವುದಾದ್ದರಿಂದ ಜಕ್ಕಲಾಂಬೆಯ ಈ ಶಾಸನದ ಕಾಲ ಇದೇ ಆಗಿದೆ.

ಜಕ್ಕಲಾಂಬೆಯು ಬರೆದಿರುವ ಕೃತಿ 'ಚರಿತ್ರ ಗುಣಾಂಕ ಮಾಲೆ'ಯು ಉಪಲಬ್ಧವಿಲ್ಲ. ಆದರೆ ಈ ಕೃತಿಯ ಕುರಿತಾದ ಕೆಲವೊಂದು ಮಾಹಿತಿ ಶಾಸನದಿಂದ ತಿಳಿದು ಬರುತ್ತದೆ.

**ಪರಿಕಿಸಿ ಸದ್ಬುಧರ್ ಪೊಗಳೆ ತನ್ನ ಚರಿತ್ರ ಗುಣಾಂಕ ಮಾಲೆಯಂ**
**ವಿರಚಿಸಿ ಸುಪ್ರಬನ್ಧಮೆನೆ ದಿಕ್ಕುಳ ಭಿತ್ತಿ ಗಳೊಳ್ತೆರಳ್ಚಿ ಮುಂ**
**ಬರೆದುದನೀಗಳಾ ದಿವಿಜಲೋಕದೊಳೊಪ್ಪುವ ಲೇಖಜಾಳದೊ**
**ಳ್ಬರೆಯಿದೆನೆನ್ದು ಜಕ್ಕಲೆ ಮಹಾಸತಿಯೇ ಜಿದಳಲ್ತೆ ಸಗ್ಗಮಂ ॥**

ಇವಳ ಈ ಕಾವ್ಯವನ್ನು ವಿದ್ವಾಂಸರು ಪರಾಮರ್ಶಿಸಿ ಹೊಗಳಿದರೆಂದು ಶಾಸನ ಕವಿಯ ಈ ಮೇಲಿನ ಪದ್ಯದಿಂದ ತಿಳಿದು ಬರುತ್ತದೆ. ಅಲ್ಲದೆ ಇವಳ ಕಾವ್ಯವನ್ನಿಲ್ಲಿ ಸಂಪ್ರಬಂಧವೆಂದು ಕರೆಯಲಾಗಿದೆ. ಪ್ರಬಂಧ ಎಂಬುದು ಆಧ್ಯಾತ್ಮಕ್ಕೆ ಸಂಬಂಧಿಸಿದ ಗ್ರಂಥವಾಗಿದೆ ಅಲ್ಲದೆ "ಸಂಗೀತಕ್ಕೆ ಅಳವಟ್ಟ ಆಧ್ಯಾತ್ಮಿಕ ವಿಚಾರವನ್ನು ಸಂಪ್ರಬಂಧ ಎಂದು ಕರೆಯಲಾಗುತ್ತದೆ"[೨೪] ಎಂಬ ಅರ್ಥದಲ್ಲಿ ನೋಡಿದಾಗ ಜಕ್ಕಲೆಯು ಸಂಗೀತ–ಸಾಹಿತ್ಯಗಳನ್ನು ಬಲ್ಲವಳಾಗಿದ್ದಳೆನ್ನುವುದು ತಿಳಿದು ಬರುತ್ತದೆ. ಇವಳ ಈ ಕೃತಿಯು ಬಹು ಪ್ರಖ್ಯಾತಿ ಪಡೆದಿತ್ತೆನ್ನುವುದು ಶಾಸನದ ಈ ಉಲ್ಲೇಖಗಳಿಂದ ತಿಳಿದು ಬರುತ್ತದೆ.

ಇಂತಹ ಕೃತಿಯನ್ನು ರಚಿಸಿದ ಇವಳ ಜೀವನವೇ ದೇವಲೋಕದ ಲೇಖನಿಯಿಂದ ಬರೆಯ ಬೇಕಾದ ಕಾವ್ಯವಾಯಿತೆಂದು ಇವಳ ಅಂತ್ಯಕಾಲದ ಸಾಧನೆಯನ್ನು ಶಾಸನಕವಿ ಇಲ್ಲಿ ಹೊಗಳಿದ್ದಾನೆ.

ಕಮಲಾ ಹಂಪನಾ ಅವರು ಜಕ್ಕಲಾಂಬೆಯ ಕೃತಿ ಷಟ್ಪದಿ ಛಂದಸ್ಸಿನಲ್ಲಿ ಇರಬಹುದೆಂದು ಊಹಿಸಿದ್ದಾರೆ[೨೫]. ಆದರೆ ಈ ಕುರಿತ ಮಾಹಿತಿಯು ಇವಳ ಕುರಿತಾದ ಏಕೈಕ ಆಕರ ವೆನ್ನಲಾದ ಶಾಸನದಲ್ಲಿ ದೊರಕುವುದಿಲ್ಲ.

ಜಕ್ಕಲಾಂಬೆಯ ಸಂಬಂಧಿಕರನ್ನು ಶಾಸನವು ಈ ರೀತಿಯಾಗಿ ಪರಿಚಯಿಸಿದೆ

**ವನಿತಾಭೂಷಣೆ ಸಚ್ಚರಿತ್ರವತಿ ತಾಯ್ಲಚ್ಚವ್ವೆ ಸಾಮನ್ತ ಮ**
**ಣ್ಡನ ಮುದ್ದಂಜನಕಂ ವಿನೂತ ಚರತಂ ಕಾನ್ತಂ ಸುತತ್ವೋಪದೇ**
**ಶನನಾ ಶ್ರೀಮದನನ್ತಕೀರ್ತ್ತಿ ಮುನಿಪಂ ಪೂಜ್ಯಂ ಜಿನಸ್ವಾಮಿಯೆ**
**ನ್ದೆನೆ ಜಕ್ಕ (ಬ್ಬೆಯ) ವಂಶ ಶೀಲ . . ಸಮ್ಯಕ್ತ್ವಂ ಜಗತ್ಪಾವನ ॥**

ಸಚ್ಚರಿತ್ರವತಿ ಎನಿಸಿದ ಇವಳ ತಾಯಿ ಲಚ್ಚವ್ವೆ, ಸಾಮಂತ ಮಂಡಣಮುದ್ದ ಇವಳ ತಂದೆ. ಇವಳ ಪತಿಯನ್ನು ಕುರಿತಾಗಿ ಕಾಂತ 'ವಿನೂತ ಚರತಂ' ಎಂದಷ್ಟೇ ಪರಿಚಯಿಸಿರುವ ಶಾಸನವು ಹೆಚ್ಚಿನ ವಿಚಾರವನ್ನು ತಿಳಿಸಿಲ್ಲ. ಶ್ರೀಮದನಂತ ಕೀರ್ತಿ ಇವಳಿಗೆ ತತ್ವ ಉಪದೇಶಿಸದ ಗುರುವೆಂದು ಇಲ್ಲಿ ತಿಳಿಸಿದೆ. ಮಲ್ಲವ್ವೆ ಎಂಬುವ ಈಕೆಯ ತಂಗಿಯೂ ಕೂಡ ಅಕ್ಕನ ದಾರಿ ತುಳಿದ ಸಮಾಧಿ ಮರಣ ಪಡೆದಳು ಎಂಬ ಉಲ್ಲೇಖ ದೊರಕುತ್ತದಾದರೂ[೨೬] ಮಲ್ಲೆಗವುಂಡಿಯ ಸಮಾಧಿ ಮರಣ ತಿಳಿಸುವ ಶಿಕಾರಿ ಪುರದ ೨೦೨ ನೆಯ ಶಾಸನವಾಗಲಿ, ಜಕ್ಕಲಾಂಬೆಯ ವಿಚಾರ ತಿಳಿಸುವ ೧೯೬ನೆಯ ಸಂಖ್ಯೆಯ ಶಾಸನವಾಗಲಿ ಇವರಿಬ್ಬರನ್ನು ಸಹೋದರಿಯರೆಂದು ತಿಳಿಸಿಲ್ಲ. ಅಲ್ಲದೆ ಮಲ್ಲೆಗಾವುಂಡಿಯ ಶಾಸನದ ಕಾಲವನ್ನು ವೀರಬಲ್ಲಾಳದೇವರ ವರುಷದ ೨೧ನೆಯ ಪ್ರಜಾಪತಿ ಸಂವತ್ಸರ ಎಂದು ಕಾಲ ತಿಳಿಸಿದೆ. ಇದು ಬಲ್ಲಾಳದೇವನ ಕಾಲದ ೨೩ನೆಯ ಆಳ್ವಿಕೆ ಎಂದು ತಿಳಿಸಿರುವ ಜಕ್ಕಲಾಂಬೆಯ ಸಮಾಧಿ ಮರಣಕ್ಕೂ ಪೂರ್ವದಲ್ಲಿ ನಡೆದುದಾಗಿದೆ.

ಜಕ್ಕಲಾಂಬೆಯ ಗುಣವನ್ನು ಕವಿಯು **"ದಾನಾನ್ವಿತೇತಿ ಗುಣರತ್ನ ವಿಭೂಷಿತೇತಿ ಶಾನ್ತೇತಿ ಸರ್ವ್ವಜನತಾ ಸುದಯಾಪರೇತಿ ಜೈನಾಗಮೋಕ್ತ ಚರಿತಾನುಗತೇತಿ ಭವ್ಯಾಃಕೇನಸ್ತುವನ್ತಿ ಭುವಿಜಕ್ಕಲಯೋಷಿತಂನ್ತೇ॥** – ಇಲ್ಲಿ ದಾನ ನಿರತೆಯಾದ ಇವಳನ್ನು ಗುಣರತ್ನ ವಿಭೂಷಿತೆ ಎಂದು ಕರೆದಿರುವ ಕವಿಯು ಜೈನಧರ್ಮ ನಿಷ್ಠಳಾದ ಇವಳ ಶಾಂತ ಸ್ವಭಾವ, ಎಲ್ಲ ಜನರಲ್ಲಿಯೂ ದಯೆಯನ್ನು ಹೊಂದಿದಗುಣಗಳನ್ನು ಹೊಗಳಿದ್ದಾನೆ. ಈ ಶಾಸನವು ಜಕ್ಕಲಾಂಬೆಯ ಸಮಾಧಿಮರಣವನ್ನು ಸವಿಸ್ತಾರವಾಗಿ ಬಣ್ಣಿಸಿದೆ. **"ಶುದ್ಧ ಧ್ಯಾನ ವಿಶೋಧಿ ಬೋಧಿತ ಮನಃಪ್ಪೂರ್ವ್ವಂಸಮಾಧಿ ಕ್ರಮೈಸ್ಸಾಶ್ಚರ್ಯ್ಯಂತ್ಯಜತಿ ಸ್ವದೇಹಮಣುವ ಚ್ಛ್ರೀಜಕ್ಕಲಾಂಬಾಸತೀ ॥**

**ತಳರ್ದಿರದೇಕ ಪಾರ್ಶ್ವನಿಯಮ ಸ್ಥಿತಿ ದೃಷ್ಟಿ ಸುನಾಸಿಕಾಗ್ರದಿಂ**
**ಕಳಿವೆಡೆ ಬಲ್ಪು ಬಳ್ಕಿರದೆ ಮೆಯ್ಮಿಡುಕಾಡದೆ ಜೈನ ಭಕ್ತಿ ಸಂ**
**ಚಳಿಸದೆ ಮಾಣದುಚ್ಚರಿಸಿ ಪಂಚ ಪದಂಗಳನಾತ್ಮ ತತ್ವದೊಳ್**
**ನೆಲಸಿದ ಸತ್ಸಮಾಧಿ ಬಿಧಿ ಜಕ್ಕಲೆ ನಾರಿಗೆ ದೀಕ್ಷಲಾವಣಂ॥**

ಒಂದೇ ಪಾರ್ಶ್ವದ ಸಮಸ್ಥಿತಿಯಲ್ಲಿ ನಿಂತು, ದೃಷ್ಟಿಯನ್ನು ನಾಸಿಗಾಗ್ರ (ಮೂಗಿನ ತುದಿ) ದಿಂದ ಕದಲಿಸದೆ, ಸಾಮರ್ಥ್ಯ ಕುಗ್ಗಿದರೂ ದೇಹ ಮಿಸುಕಾಡದೆ, ಜಿನಭಕ್ತಿ ಚಂಚಲಗೊಳ್ಳದೆ, ಪಂಚಪದಗಳನ್ನು ಬಿಡದೆ ಉಚ್ಚರಿಸುತ್ತಾ (ಪಂಚನಮಸ್ಕಾರವನ್ನು ನಿಲ್ಲಿಸದೆ) ಆತ್ಮ ತತ್ವದಲ್ಲಿ ನೆಲಸಿದ ಸಮಾಧಿ ವಿಧಿಯು ಜಕ್ಕಲೆ ನಾರಿಗೆ ದೀಕ್ಷೆಯ ಲಾವಣ್ಯ ನೀಡಿತು ಎಂಬ ಕವಿಯ ಬಣ್ಣನೆಯು ಇವಳ ಏಕಾಗ್ರತೆ, ಛಲ, ಸಾಧನೆಯನ್ನು ಕುರಿತು ತಿಳಿಸುತ್ತದೆ. ಸಾಮಂತ ಅರಸು ಮನೆತನದ ಮಹಿಳೆಯೊಬ್ಬಳು ವೈರಾಗ್ಯಪರಳಾಗಿ ಸಮಾಧಿ, ಮೋಕ್ಷಸಾಧನೆಗಳನ್ನು ಸಾಧಿಸಿದ ಚಿತ್ರಣವನ್ನಿಲ್ಲಿ ಕಾಣಬಹುದು.

ಕಮಲಾಹಂಪನಾ ಅವರು 'ಶ್ರೀಮತಿ' ಎಂಬುದು ಜಕ್ಕಲಾಂಬೆಯ ಕಾವ್ಯನಾಮ ಎಂದು ತಿಳಿಸಿದ್ದಾರೆ[೨೭]. ಆದರೆ ಈ ಶಾಸನದಲ್ಲಿ, ಶಾಸನಕವಿಯು ಇವಳನ್ನು ಜಕ್ಕಲಾಂಬೆ, ಜಕ್ಕವ್ವೆ, ಜಕ್ಕಲೆ, ಜಕ್ಕಲಾಂಬಿಕೆ, ಜಕ್ಕಲಾಂಬಾಸತಿ, ಎಂದು ಮೊದಲಾಗಿ ಕರೆದಿರುವನಲ್ಲದೆ ಪತಿವ್ರತಾ ಜಕ್ಕಲಾಂಬೆ ಎಂಬ ವಿಶೇಷಣವನ್ನೂ ಸೇರಿಸಿ ಕರೆದಿದ್ದಾನೆ. ಇದೇ ಪ್ರಕಾರ ಶ್ರೀಮತಿ ಜಕ್ಕಲಾಂಬೆ ಎಂದೂ ಇವಳನ್ನು ಒಂದು ಬಾರಿ ಉಲ್ಲೇಖಿಸಿದ್ದಾನೆ. ಆದ್ದರಿಂದ ಶ್ರೀಮತಿ ಎಂಬುದು ಇವಳ ಕಾವ್ಯನಾಮವಾಗಿರಲಾರದು.

ಕವಿ ರಾಘವಾಂಕನ ಪೂರ್ವದಲ್ಲಿದ್ದ 'ಶ್ರೀಮತಿ' ಎಂಬ ಜೈನಧರ್ಮಿಯಳ ಉಲ್ಲೇಖವೊಂದು ದೊರಕುತ್ತದೆ. ರಾಘವಾಂಕ ತನ್ನ ಸೋಮನಾಥ ಚರಿತೆಯಲ್ಲಿ ಇವಳನ್ನು ಉಲ್ಲೇಖಿಸಿದ್ದಾನೆ. ಇಲ್ಲಿ ಕವಿಯು ಕೆಲವು ಜೈನರನ್ನು ಹೆಸರಿಸಿ ಅವರನ್ನು ವೀರಶೈವರು ಯಾವರೀತಿಯಲ್ಲಿ ಹಿಂಸಿಸಿರಬಹುದೆಂಬ ಚಿತ್ರಣವನ್ನು ನೀಡಿದ್ದಾನೆ.

**ನೇಮಿಯಂ ಕೆಡುಕುತ್ತಿ ಮಲಧಾರಿಗಳ ನಿಜೆದು**
**ಹೇಮಚಂದ್ರನನೊರಸಿ ಮಾಘನಂದಿಯ ಕೊಂದು**
**ಶ್ರೀಮತಿಗಳಂ ಪಿಡಿದು ತ್ರೈವಿದ್ಯರಂ ತರಿದು ತಾರ ಕುಂಡೆಯ ಹಾಯಿಸಿ**
**ಭೂಮಿಗೊರಗಿಸಿ ವರ್ಧಮಾನರಂ ಶ್ರುತಿಕೀರ್ತಿ**
**ನಾಮಮಂ ಕೊಡೆದು ಪಾರಿಸಮಾನನೆಂದು ಕಾ**
**ಯ್ದ ಮೂಲಸಂಘ ಜಾಪುಲಿ ಸಂಘವೆಂಬುಭಯ ಸಂಘಮಂ ಭಂಗಿಸಿದನು॥**

ಈ ಪದ್ಯವು, ನೇಮಿಯನ್ನು ಕೆಡಹಿ, ಮಲಧಾರಿಗಳನ್ನು ಇರಿದು, ಹೇಮಚಂದ್ರ, ಮಾಘನಂದಿ, ತ್ರೈವಿದ್ಯರು, ವರ್ಧಮಾನ, ಶ್ರುತಿಕೀರ್ತಿಯರನ್ನು ಕೊಂದದ್ದಲ್ಲದೆ, ಮೂಲಸಂಘ – ಜಾಪುಲಿ ಸಂಘಗಳನ್ನು ಭಂಗಿಸಿದ ವಿಚಾರವನ್ನು ತಿಳಿಸಿದೆಯಲ್ಲದೆ, ಶ್ರೀಮತಿಯನ್ನೂ ಹಿಂಸಿಸಿದ ವಿಚಾರವೂ ಇಲ್ಲಿ ತಿಳಿದು ಬರುತ್ತದೆ.

ಇಲ್ಲಿ ತಿಳಿಸಿರುವ ಶ್ರೀಮತಿಯೇ ಜಕ್ಕಲಾಂಬೆ ಎಂದು ಕಮಲಾ ಹಂಪನಾ ಅವರು ಅಭಿಪ್ರಾಯಪಟ್ಟಿದ್ದಾರೆ. ಇದಕ್ಕೆ ಇರುವ ಆಧಾರ ಶಾಸನದಲ್ಲಿ ಒಂದು ಬಾರಿ ಇವಳನ್ನು ಶ್ರೀಮತಿ ಎಂದು ಕರೆದಿರುವುದೇ ಆಗಿದೆ. ಅಲ್ಲದೆ ಪತ್ನಿಗಾದ ಅಪಮಾನವನ್ನು ತಡೆಯಲು ಹೋಗಿ ಇವಳ ಪತಿ ಹತನಾಗಿರಬಹುದೆಂದು ಇವರು ಊಹಿಸಿದ್ದಾರೆ. ಆದರೆ ಶಾಸನವು ಇಂತಹ ಯಾವುದೇ ಅನುಮಾನವನ್ನು ಹುಟ್ಟಿಸುವಂತಹ ವಿಚಾರವನ್ನು ತಿಳಿಸಿಲ್ಲ.

ಶ್ರೀಮತಿ ಎಂಬ ಕವಯತ್ರಿ ಇದ್ದುದಕ್ಕೆ ೧೫ನೆಯ ಶತಮಾನದ ಕವಿ ನೇಮರಸನ ಲೋಭದತ್ತ ಚರಿತೆಯಲ್ಲಿ ಮತ್ತೊಂದು ಉಲ್ಲೇಖವೂ ದೊರಕುತ್ತದೆ.

**ಶ್ರೀಮತಿಯನು ಹಂಪನ ನಾಗಚಂದ್ರನ**

**ನೇಮಿಯನಗ್ಗಳಯಯ್ಯನನು**
**ರಾಮಶೀಯದ ಪೊನ್ನ ರನ್ನ ಜನ್ನರನೆನೆನೆ**
**ದೀ ಮಹಾಕೃತಿಯನು ಪೇಳುವೆನಾ ॥**

ಇಲ್ಲಿ ಕವಿಯು ಹಂಪ, ನಾಗಚಂದ್ರ, ನೇಮಿ, ಅಗ್ಗಳ ಮೊದಲಾದವರೊಂದಿಗೆ ಶ್ರೀಮತಿಯನ್ನು ಹೆಸರಿಸಿರುವುದರಿಂದ ಇವಳೂ ಕೂಡ ಕಾವ್ಯವನ್ನು ರಚಿಸಿರುವಳೆಂದು ತಿಳಿದು ಬರುತ್ತದೆ. ಆದರೆ ಕಮಲಾ ಹಂಪನಾ ಅವರನ್ನುಳಿದು ಶ್ರೀಮತಿಯನ್ನು ಈ ವರೆಗೆ ಯಾವುದೇ ಸಾಹಿತ್ಯ ಚರಿತೆಕಾರರು ಹೆಸರಿಸಿಲ್ಲ.

ಶ್ರೀಮತಿಯ ಕುರಿತಂತೆ ಮತ್ತೊಂದು ಉಲ್ಲೇಖ ದೊರಕುತ್ತದೆ. ಶ್ರುತಕೀರ್ತಿ ರಚಿಸಿರುವ 'ವಿಜಯಕುಮಾರಿ ಚರಿತೆ'ಯಲ್ಲಿ ವೀರಶೈವ ಧರ್ಮಿಯ ಸೋದರಮಾವ ಮಹದೇವಸೆಟ್ಟಿಯ ಮಗನನ್ನು ಮದುವೆಯಾಗಲು ನಿರಾಕರಿಸಿದ ವಿಜಯಕುಮಾರಿಯನ್ನು ಮದುವೆಗೆ ಬಹಳವಾಗಿ ಒತ್ತಾಯಿಸುತ್ತಾರೆ. ಬೇಸತ್ತ ಇವಳು ಕಡೆಗೆ ಜಿನೇಂದ್ರಸಾಕ್ಷಿಯಲ್ಲಿ ಬ್ರಹ್ಮಚರ್ಯವ್ರತ ಸ್ವೀಕರಿಸಿದೆನೆಂದು ಘೋಷಿಸಿ ಚೈತನ್ಯಮಂದಿರಕ್ಕೆ ತೆರಳಿ ಜಿನದೀಕ್ಷೆಯನ್ನು ಪಡೆಯುತ್ತಾಳೆ. ಇವಳ ಹಟಕ್ಕೆ ಮಣಿದ ತಂದೆತಾಯಿಗಳು ಜಿನಾಲಯಕ್ಕೆ ಬಂದು ಸ್ನಾನವಮಾಡಿಸಿ ಗಂಧೋದಕ ತಳೆಯುತ್ತಾರೆ. ದೀಕ್ಷಾಗ್ರಂಥಗಳನ್ನು ಓದುವ ಮುಮುಕ್ಷುಗಳು ಆಕೆಗೆ ದೀಕ್ಷೆ ನೀಡಿ **'ಶ್ರೀಮತಿ'** ಯೆಂದು ಹೆಸರಿಡುತ್ತಾರೆ. ವಿಜಯಕುಮಾರಿ ಶ್ರೀಮತಿಯಾಗಿ ಭೂಮಿಯಲ್ಲಿ ಸಂಚರಿಸಿ ಪಾತಕಗಳನ್ನು ಪರಿಹರಿಸಿ ಸಲ್ಲೇಖನ ವಿಧಿಗಳನ್ನು ತಳೆದಳು. ಎಂಬ ವಿಚಾರ ಈ ಕೃತಿಯಲ್ಲಿ ದೊರಕುತ್ತದೆ.

ಜೈನಧರ್ಮೀಯ ತಂದೆ–ತಾಯಿಯರೊಂದಿಗೆ, ಮುಂದೆ ಶ್ರೀಮತಿ ಎಂಬ ಹೆಸರನ್ನು ಪಡೆದ ವಿಜಯಕುಮಾರಿಯು ಕೂಡ ಜೈನಧರ್ಮದಲ್ಲಿ ನಿಷ್ಠೆಯನ್ನು ಹೊಂದಿದವಳಾಗಿರುತ್ತಾಳೆ. ಅಲ್ಲದೆ ಇವಳಿಗೆ ವೀರಶೈವ ಧರ್ಮದ ಮೇಲಿದ್ದ ಅಸಮಾಧಾನವನ್ನೂ ಕೂಡ ಕವಿ ಚಿತ್ರಿಸಿದ್ದಾನೆ. ಇವಳು ಬಸವಣ್ಣ–ಬಿಜ್ಜಳರ ಸಮಕಾಲೀನಳಾಗಿರುವಂತೆ ಈ ಕಾವ್ಯದಲ್ಲಿ ಚಿತ್ರಿಸಲಾಗಿದೆ. ವೀರಶೈವರೊಂದಿಗೆ ವಾದಕ್ಕಿಳಿಯುವ ವಿಜಯಕುಮಾರಿ (ಶ್ರೀಮತಿ)ಯ ಕೆಲವು ಪ್ರಸಂಗಗಳನ್ನು ಕವಿಯು ಕಾವ್ಯದಲ್ಲಿ ಬಣ್ಣಿಸಿದ್ದಾನೆ.

ಕವಿ ರಾಘವಾಂಕ ಉಲ್ಲೇಖಿಸಿರುವ ಶ್ರೀಮತಿಯು ಈ ವಿಜಯಕುಮಾರಿಯೇ ಆಗಿರುತ್ತಾಳೆ. ಶ್ರೀಮತಿ ಎಂಬ ನಾಮಧೇಯವನ್ನು ಹೊಂದಿದ ವಿಜಯಕುಮಾರಿಯು ಐತಿಹಾಸಿಕ ವ್ಯಕ್ತಿಯಾಗಿದ್ದಳೆಂದು ಈ ಕೃತಿಯ ಸಂಪಾದಕರಾದ ಭಾನುಮತಿಯವರು ಅಭಿಪ್ರಾಯ ಪಟ್ಟಿದ್ದಾರೆ. "ವಿಜಯಕುಮಾರಿ ಚಾರಿತ್ರಿಕ ವ್ಯಕ್ತಿಯಾಗಿರುವ ಸಾಧ್ಯತೆಯಿದೆ.. ಆಕೆಯ ಕಾಲವನ್ನು ೧೨ನೆಯ ಶತಮಾನವೆಂದು ಊಹಿಸಬಹುದು"[೨೮]. ಶ್ರೀಮತಿ ಎಂದು ಪ್ರತಿನಾಮ ಪಡೆದ ವಿಜಯಕುಮಾರಿಯ ಚರಿತೆಯ ಕುರಿತಾದ ನಾಲ್ಕು ಕಾವ್ಯಗಳು ಕನ್ನಡದಲ್ಲಿ ದೊರಕುತ್ತದೆ. ಈ ಕೃತಿಗಳೆಲ್ಲಾ ಹದಿನೈದನೆಯ ಶತಮಾನದ ನಂತರ ರಚಿತವಾದವು[೨೯].

ಶಾಸನ ಕವಿಯು ತಿಳಿಸಿರುವಂತೆ ಮಿಥ್ಯಾಜೀವನದಿಂದ ವಿರಕ್ತಿ ಹೊಂದಿದ ಜಕ್ಕಲಾಂಬೆಯು ಜಿನೋಪದೇಶವನ್ನು ಕೇಳಿ ಆತ್ಮಸಾಧನೆಗಾಗಿ ಸಮಾಧಿಮರಣವನ್ನು ಸ್ವೀಕರಿಸಿದಳೆ ಹೊರತು ವೀರಶೈವರೊಂದಿಗೆ ಸಂಘರ್ಷಕ್ಕಿಳಿದು ಬೇಸತ್ತು ಸಮಾಧಿ ಮರಣವನ್ನು ಸ್ವೀಕರಿಸಿದಳೆಂದು ತೋರುವುದಿಲ್ಲ. ಇಂತಹ ವೈರಾಗ್ಯಪರಳಾದ ಜಕ್ಕಲಾಂಬೆಯ ಕೃತಿಯು ದೊರಕಿದಲ್ಲಿ ಇವಳ ಕುರಿತಾದ ಹೆಚ್ಚಿನ ಮಾಹಿತಿಯು ತಿಳಿದು ಬರುತ್ತದೆ.

ಲೋಭದತ್ತ ಚರಿತೆಯಲ್ಲಿ ಉಕ್ತಳಾಗಿರುವ 'ಶ್ರೀಮತಿ' ಎಂಬ ಕವಯತ್ರಿಯ ಕುರಿತಾದ ವಿಚಾರ ಹಾಗೂ ಇವಳು ರಚಿಸಿರಬಹುದಾದ ಕೃತಿಗಳ ವಿಚಾರದ ಕುರಿತಾಗಿ ಹೆಚ್ಚಿನ ಸಂಶೋಧನೆ ನಡೆಯುವ ಅಗತ್ಯವಿದೆ.

**ಮೈಸೂರಿನ ಅರಸಿ ಚೆಲುವಾಂಬೆ (ಸಾಂಗತ್ಯ, ಚೌಪದಿ, ಗದ್ಯ)**

ಮೈಸೂರಿನ ಅರಸಿ ಚೆಲುವಾಂಬೆಯು ೧೭೧೪-೧೭೩೨ರವರೆಗೆ ಆಳ್ವಿಕೆ ನಡೆಸಿದ ಮೈಸೂರು ಅರಸು ದೊಡ್ಡ ಕೃಷ್ಣರಾಜ ಒಡೆಯರ್‌ನ (೧೭೧೩-೩೧)ಕಿರಿಯ ರಾಣಿ. ಹಾಗೂ ಕಳಲೆ ಕಾಂತನೃಪ (ಕಳಲೆ ಕಾಂತಯ್ಯ)ನ ಮಗಳು. ಹಲವಾರು ಕೃತಿಗಳನ್ನು ರಚಿಸಿರುವ ಚೆಲುವಾಂಬೆಯು ತನ್ನ ವೈಯಕ್ತಿಕ ವಿಚಾರಗಳನ್ನು ಕುರಿತಾಗಿ ಹೆಚ್ಚಿನ ಮಾಹಿತಿಗಳನ್ನು ತಿಳಿಸಿಲ್ಲ. ಇವಳ ರಚನೆಗಳಿಂದ ಇವಳ ವಿದ್ವತ್ತು, ಕನ್ನಡ-ಸಂಸ್ಕೃತ ಭಾಷೆಗಳ ಮೇಲಿನ ಪ್ರೌಢತ್ವ ತಿಳಿದುಬರುತ್ತದೆ. ಚೆಲುವಾಂಬೆಯು ತನ್ನ ಕೃತಿ 'ವರನಂದಿ ಕಲ್ಯಾಣ'ದಲ್ಲಿ[೩೦] **"ಜನಪತಿಯೆನಿಸುವಪ್ರತಿಮಕೃಷ್ಣೇಂದ್ರನ ವನಿತೆ ಚೆಲ್ವಾಂಬೆ ಈ ಕೃತಿಯ ಅನುಗೊಳಿಸಿದಳ್..."** (೧-೨), **"ಕಳಲೆಕಾಂತನೃಪನಣುಗಿ ಚೆಲುವಾಂಬೆ ಪೇಳ್ದೀ ಕೃತಿ"** (೭-೧೪೪) ಎಂದು ತನ್ನ ಹೆಸರನ್ನು ಉಲ್ಲೇಖಿಸಿದ್ದಾಳೆ. ಇದೇ ಪ್ರಕಾರ 'ತುಲಾಕಾವೇರಿ ಮಹಾತ್ಮಂ' ಕೃತಿಯ ಆರಂಭದಲ್ಲಿ ತನ್ನನ್ನು ಕುರಿತು "ಕೃಷ್ಣರಾಜೇಂದ್ರನ ಧರ್ಮಕಾಂತೆಯಾಗಿ... ಆಶ್ರಿತ ಮನೋರಥವಿತರಣದಲ್ಲಿ ಮಹಾಲಕ್ಷ್ಮಿಯಾಗಿ, ಸೇನಾಧ್ಯಕ್ಷ ಕಳಲೆ ದೊಡ್ಡಮಹಾರಾಜನಿಗೆ ಪೌತ್ರಿಯಾಗಿ, ಕಾಂತಮಹಾರಾಜನಿಗೆ ಪುತ್ರಿಯಾಗಿರುವ ಚೆಲುವಾಂಬಿಕೆ" ಎಂದು ಇವಳು ತನ್ನ ತಂದೆ ಹಾಗೂ ತಾತನ ಹೆಸರನ್ನು ತಿಳಿಸಿದ್ದಾಳೆ. ಇವಳು ರಚಿಸಿರುವ ಮಂಗಳಾರತಿ ಪದಕ್ಕೆ ರಾಗ, ತಾಳಗಳನ್ನು ನಿರ್ದೇಶಿಸಿರುವುದು, ಇವಳಿಗಿದ್ದ ಸಂಗೀತ ಜ್ಞಾನವನ್ನು ತಿಳಿಸುತ್ತದೆ.

ಚೆಲುವಾಂಬೆಯು ವರನಂದೀ ಕಲ್ಯಾಣ, ವೆಂಕಟಾಚಲಮಹಾತ್ಮ್ಯಂ ಲಾಲಿಪದ, ಅಲುಮೇಲುಮಂಗೆ ಲಾಲಿಪದ, ಮಂಗಳಾರತಿಪದ, ಕೃಷ್ಣಕರ್ಣಾಮೃತಟೀಕೆ, ತುಲಾಕಾವೇರಿ ಮಹಾತ್ಮ್ಯಂ ಎಂಬ ಆರು ಕೃತಿಗಳನ್ನು ರಚಿಸಿದ್ದಾಳೆ. ಇವಳ ಕೃತಿಗಳೆಲ್ಲಾ ಪೌರಾಣಿಕ ವಸ್ತುವನ್ನೇ ಹೊಂದಿವೆ. ಅಲ್ಲದೆ ಇವುಗಳಲ್ಲಿ ಶ್ರೀವೈಷ್ಣವ ಧರ್ಮದ ಪ್ರಭಾವವಿರುವುದು ಕಂಡುಬರುತ್ತದೆ. "ಇವಳ ಎಲ್ಲ ಕೃತಿಗಳೂ ಭಕ್ತರಸಪ್ರಧಾನವಾಗಿಯೇ ಇವೆ! ಶ್ರೀವೈಷ್ಣವ ಪರಭಕ್ತ ಕೃತಿಗಳಲ್ಲಿ ಎದ್ದು ಕಾಣುತ್ತದೆ. ಕೃತಿಯಲ್ಲಿ ಶೃಂಗಾರರಸ ಬಂದರೂ ಭಕ್ತಿಯ ಹಿನ್ನೆಲೆಯಲ್ಲಿಯೇ ಮೂಡಿದೆ"[೩೧]

**ವರನಂದೀ ಕಲ್ಯಾಣ** ಕೃತಿಯು ಚೆಲುವಾಂಬೆ ರಚಿಸಿರುವ ಮೊದಲ ಕೃತಿ ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಇದು ಏಳು ಸಂಧಿ ೮೮೧ ಪದ್ಯಗಳ ಸಾಂಗತ್ಯ ಕೃತಿ. ಕಾವ್ಯಾರಂಭದಲ್ಲಿ ವೆಂಕಟೇಶ, ಲಕ್ಷ್ಮಿ, ಹಾಗೂ ಗುರುಗಳಿಗೆ ವಂದಿಸಿ, ಸಜ್ಜನರು ಸಂತಸದಿಂದ ಕೇಳಬೇಕೆಂದು ಬಿನ್ನವಿಸಿಕೊಂಡಿದ್ದಾಳೆ. ಈ ಕೃತಿಯಲ್ಲಿ ವರನಂದಿಯೇ ನಾಯಕಿ, ಚೆಲುವರಾಯನೇ ನಾಯಕ.

ಈ ಕೃತಿಯನ್ನು "ಯದುಗಿರಿಯೊಡೆಯನ ಚಾರಿತ್ರ್ಯ"ವೆಂದು ಕರೆದು ತನ್ನರಸನ ಕೋರಿಕೆಯ ಮೇರೆಗೆ ತಾನು ಈ ಕತೆಯನ್ನು ಹೇಳಲು ತೊಡಗಿದೆನೆಂದು ತಿಳಿಸಿ (೧-೩) ತನ್ನ ಕಾವ್ಯಕಥೆಯನ್ನು ಪ್ರಾರಂಭಿಸಿದ್ದಾಳೆ.

**ಉನ್ನತಿವಡೆದಚ್ಚಕನ್ನಡದಿನಿವಾತ**
**ಚೆನ್ನತೆಗೊಳಿಸಿ ವರ್ಣಕದಿ**
**ಬನ್ನಣೆಗಳವಟ್ಟ ವರನಂದೀ ದೇವಿಯ**
**ಸನ್ನುತಚರಿತವ ಪೇಳ್ವೆ – ಎಂದು**

ಕವಯತ್ರಿಯು ತಾನೇ ಹೇಳಿರುವಂತೆ ಈ ವರ್ಣಕ ಕಾವ್ಯವನ್ನು ಇನಿವಾತಿನಲ್ಲಿಯೇ ರಚಿಸಿದ್ದಾಳೆ. ಅಲ್ಲದೆ, ಸರಳ ಭಾಷೆಯಲ್ಲಿ ಪ್ರೌಢ ಕಾವ್ಯವನ್ನು ರಚಿಸುವ ಜಾಣ್ಮೆ ತೋರಿದ್ದಾಳೆ. ಧೀರ್ಘಸಮಾಸ ಪದಗಳಾಗಲೀ, ಪದಗುಚ್ಛಗಳಾಗಲೀ ಇವಳ ಕಾವ್ಯದಲ್ಲಿ ತೊಡಕಾಗಿ ಸಿಗುವುದಿಲ್ಲ. ಇವಳು ಸಂಸ್ಕೃತವನ್ನು ಚೆನ್ನಾಗಿ ಬಲ್ಲವಳಾದರೂ ಅನಗತ್ಯವಾಗಿ ಸಂಸ್ಕೃತ ಪದಗಳನ್ನು ಕಾವ್ಯದಲ್ಲಿ ತಂದಿಲ್ಲ. ಆಸ್ಥಾನದಲ್ಲಿ ಪಂಡಿತರ ನಡುವೆ ಇದ್ದರೂ, ಪಾಂಡಿತ್ಯ ಮೆರೆಯುವ ಚಪಲ ಕಾವ್ಯದಲ್ಲಿ ಕಂಡುಬರುವುದಿಲ್ಲ. ತಿಳಿಗನ್ನಡದಲ್ಲಿ ಸಾಮಾನ್ಯರಿಗೂ ಅರ್ಥವಾಗುವಂತಹ ಸರಳ

ಭಾಷೆಯಲ್ಲಿ ಕಾವ್ಯ ರಚಿಸಿರುವ ಚೆಲುವಾಂಬೆ ತನ್ನ ಕನ್ನಡ ಭಾಷಾ ಪ್ರೇಮವನ್ನು ಕಾವ್ಯದಲ್ಲಿ ಹಲವೆಡೆ ಹೊರಸೂಸಿದ್ದಾಳೆ. ಅಚ್ಚಗನ್ನಡದಿನಿವಾತಿನೊಂದಿಗೆ ಸಂಸ್ಕೃತದ ಪ್ರೌಢಪದಗಳು, ತದ್ಭವಗಳು, ಫೌಜು, ಸಲ್ಲಾಮು ಮೊದಲಾದ ಕೆಲವು ಅರಬ್ಬೀ ಶಬ್ದಗಳನ್ನೂ ಬಳಸಿಕೊಂಡಿದ್ದಾಳೆ.

ಕಾವ್ಯದ ನಡುವೆ ಸಂಭಾಷಣೆಗಳನ್ನು ಜಾಣ್ಮೆಯಿಂದ ಹೆಣೆದಿರುವುದಕ್ಕೆ ಕೆಲವು ಉದಾಹರಣೆಗಳನ್ನು ಗಮನಿಸಬಹುದು: "ಎನ್ನಮ್ಮ ಕೇಳು ನಿನ್ನಯ ಮನ ಬರ್ಪಂತೆ ಚಿನ್ನತೆವಡೆದ ಬೊಂಬೆಗಳ ಇನ್ನು ಬೇಕಾದುದ ತಂದೀವೆ" ; ಮಗಳನ್ನು ಕರೆದು "ಚೆನ್ನಿಗ ಚೆಲುವನ ತಂದಿರ್ಪೆ ನೋಡೆಂದು" ಬೊಂಬೆಯನ್ನು ಕೈಗಿತ್ತನು ; ರಾಮಾನುಜರ ಕನಸಿನಲ್ಲಿ ಬಂದ ಚೆಲುವರಾಯ "ಯದುಗಿರಿಯೊಳು ಸೂರೆಗೈದೆನ್ನ ಸೆರೆಗೈದರು ದಿಲ್ಲಿಯೊಳಗೆ॥ ತರಬರದೊಳು ವೈಷ್ಣವರನು ನೆರವಿಗೊಂಡಿರದ್ಯೆತಂದೊಡನೆನ್ನ ಕರೆದೊಯ್ಯು ...." ಎಂದು ನುಡಿಯುತ್ತಾನೆ. ಚೆಲುವರಾಯನನ್ನು ಹುಡುಕಿಕೊಂಡು ಬಂದ ರಾಮಾನುಜರಿಗೆ ಅರಸನು "ಪಿರಿಯರೆ ನಿಮ್ಮದೇವರು ನಮ್ಮ ಕಣ್ಗೆ ಗೋಚರಿಸಲೊಲ್ಲ ನೀವೆ ಪೇಳುವುದು" ಎಂದೆನಲು ; "ನಿಮ್ಮ ತನುಜೆಯ ಸಜ್ಜೆವನೆಯೊಳು ಮಿನಿಗುವ ರನ್ನಮಂಚದ ಮೇಲೆ ಮಲಗಿರ್ಪರ್"ಎನೆ.. ಹೀಗೆ ಕಾವ್ಯದುದ್ದಕ್ಕೂ ನಾಟಕೀಯ ಸಂಭಾಷಣೆಗಳನ್ನು ಕಾಣಬಹುದು.

ಇವಳ ಕಾವ್ಯದಲ್ಲಿನ ಮತ್ತೊಂದು ಗುಣವೆಂದರೆ ಸಂಕ್ಷಿಪ್ತತೆ. ನಾಲ್ಕಾರು ಪದ್ಯಗಳಲ್ಲಿ ಹೇಳಬಹುದಾದುದನ್ನು ಇವಳು ಒಂದೆರಡು ಸಾಲು ಅಥವಾ ಒಂದು ಪದ್ಯದ ಮಿತಿಯಲ್ಲಿ ಹೇಳಿ ಮುಗಿಸುತ್ತಾಳೆ.

"ವರನಂದೀ ಕಲ್ಯಾಣವು ಸುಖಾಂತವಾಗಿಯೇ ಇದೆ! ರೂಢಿಗತ'ವಾದ ಬೀಬಿ ನಾಚ್ಚಿಯಾರಳ ಕಥೆಯಂತೆ ದುಃಖಾಂತವಾಗಿಲ್ಲ. ಚೆಲುವರಾಯನನ್ನು ಮೋಹಿಸಿದ ಬೀಬಿ ನಾಚ್ಚಿಯಾರ್ ಮೇಲುಕೋಟೆಗೆ ಬಂದವಳೇ ದೇವರಲ್ಲಿ ಐಕ್ಯಹೊಂದುತ್ತಾಳೆ".

ಕಾವ್ಯ ಪ್ರತಿಪಾದಿಸುವ ರಸಭಾವಗಳು: ಕಾವ್ಯದಲ್ಲಿ ಸಂದರ್ಭಕ್ಕೆ ತಕ್ಕಂತೆ ವಿಭಿನ್ನ ಭಾವಗಳನ್ನು ಹೊಮ್ಮಿಸುವಲ್ಲಿ ಕವಯತ್ರಿಯು ನಾನಾ ರಸಗಳನ್ನು ತಂದಿದ್ದಾಳೆ. ರಾಮಾನುಜರು ಹತ್ತು ಅವತಾರಗಳ ಸ್ತುತಿಗೈದು, ಚೆಲುವರಾಯನನ್ನು ಹೊರಗೆ ಬರಬೇಕೆಂದು ಬೇಡಿಕೊಂಡರು....... ಇತ್ತ ಭಕ್ತರ ಮೊರೆಯನ್ನು ಕೇಳಬೇಕೋ ! ಅತ್ತ ವರನಂದಿಯ ವಿರಹದುಃಖವನ್ನು ನೋಡಬೇಕೋ! ಚೆಲುವರಾಯನಿಗೆ ತಿಳಿಯದಾಯ್ತು.. ಕರುಣೆ, ಶೋಕಗಳು ಸಮ್ಮಿಶ್ರಭಾವ ನಯವಾಗಿ ಇಲ್ಲಿ ಚಿತ್ರಿತವಾಗಿದೆ.

ಕಾವ್ಯದಲ್ಲಿ ಭಕ್ತಿಯೇ ಮೇಳೈಸಿದ್ದರೂ ಯಥೋಚಿತ ಶೃಂಗಾರರಸವನ್ನೂ ತಂದಿದ್ದಾಳೆ. ಚೆಲುವರಾಯನನ್ನು ಬಿಟ್ಟಿರಲಾರದ ವರನಂದಿಯ ವಿಪ್ರಲಂಬ ಶೃಂಗಾರ ಸೊಗಸಾಗಿ ಮೂಡಿಬಂದಿದೆ. "ನಿಟ್ಟುಸಿರುಡುವಳು, ಕಂಬನಿಗರೆವಳು ನಿಟ್ಟಿಸುವಳು ಕೆಲಬಲನ ಇಟ್ಟಿದಿರೊಳು ಕಂಡಂತಾಗಲಲ್ಲೆ ಮುದವಟ್ಟು....."ಕಂಬನಿ ಮಿಡಿಯುವ ವರನಂದಿಯು ವಿರಹದುಃಖಾತಿರೇಕದಿಂದ ಕಾಮನನ್ನೇ ಶಪಿಸುವಳು:

**ಕುಸುಮ ಬಾಣಗಳೆಂದು ನಿನ್ನ ಶರಗಳಿಗೆ ಪೆಸರಿಟ್ಟವರಾರೋ ತಿಳಿಯೆ।**
**ಮಸೆದು ಕಿತ್ತಡಿಸಿ ನುಂಗುವ ಮಾರಿಯ ಬಾಯ ಬಿಸದ ದಾಡೆಯೊಲು ತೋರುವವು (೫–೨೫)**

**ಕುಸುಮವೆಂದಳಿಗಳು ಮುಸುಕಲು ಗರಿ ಸೀದು ಮಸಿಯಂತೆ ಕರುಕುವಡೆದವು**
**ಬಿಸದ ಗುಳಿಗೆಗಿಂತೊಳುವೆಸರಿಟ್ಟು ಮಾನಿಸರ ಕೊಲ್ಲುವನಂಕತನು** (೫–೨೬)ಎಂದು ನಿಂದಿಸುತ್ತಾಳೆ. ಯುದ್ಧದಲ್ಲಿ ಶೂರರಾದವರು ತಮ್ಮ ಶತ್ರು ಹಲ್ಲುಕಚ್ಚಿದರೆ ಮರಯೇರಿದರೆ ಅವರನ್ನು ಕೊಲ್ಲದೆ ಕಾಯುತ್ತಾರೆ. ಅವರು ಹೆಣ್ಣುಗಳ ಮೇಲೆ ಎಂದಿಗೂ ಕೈ ಮಾಡುವುದಿಲ್ಲ. ಆದರೆ ಈ ಮದನನು ಹೆಂಗೊಲೆಗೆಂದೇ ಪುಟ್ಟಿದನು ಎಂದು ಜರಿಯುತ್ತಾಳೆ.

**ನಿಟ್ಟುಸಿರಿಡುವಳು ಕಂಬನಿಗರೆವಳು ನಿಟ್ಟಿಸುವಳು ಕೆಲಬಲನ**
**ಇಟ್ಟಿದಿರೊಳು ಕಂಢಂತಾಗಳತಿ ಮುದವಟ್ಟು ಮೇಲುದ ನೇರಿಟ್ಟು॥ (೫–೩೩)**

**ಸಡಿಲಿಸಿದ ನಿರಿಯನು ಸವನಿಸಿ ಜಾರಿದ ನಿಡಿಗುರುಲನು ನೇವರಿಸಿ**
**ಕಡುವೇಗದಿಂದೆಳ್ದು ಚೆಂಬೊನ್ನಪಾವುಗೆ ಪಿಡಿದು ಕಾಣದೆ ತಡಕುವಳು (೫–೩೪)**

ಸುರತಾಳನು ದಿಗ್ವಿಜಯಕ್ಕೆ ಹೊರಟಾಗಿನ ವರ್ಣನೆ ಅತಿಶಯೋಕ್ತಿಯಿಂದ ಕೂಡಿದರೂ ವೀರರಸದ ಚಿತ್ರಣ ರೂಪಿಸಿದೆ

**ಶರಧಿಯನೊರೆಯನು ಕೆದರುತೆಣ್ದೆಸೆಗಳಿಗೆ ಪರಿವತರಂಗಗಳೆನಲು ।**
**ಸುರಿವ ಜೊಲ್ಲುಗಳಿಂ ತುರಂಗಮಗಳ ಫೌಜು ಧರೆಯನೆಲ್ಲ ಮುಸುಕಿದವು ॥**
**ಪಡೆಯನು ಹೊರಲಾರದೆ ಭೂತಳವಾಗ ಕಡುವೇಗದಿಂದಾಗಸಕೆ ।**
**ಬಿಡದಡರುವದನೆ ಕೆಂಧೂಳ್ಮುಸುಗಲು ಪಡೆದರು ಕಣ್ಗೆ ಕೌತುಕವ ॥**

ಮಗಳನ್ನು ಕಳಿಸುವಾಗ ಪಾದಶಹ "ತಂದೆ–ತಾಯಿಗಳು ಯತಿರಾಜರಿಂನೆಂದು ಭಾವಿಸು ಕಂದ ನೀನು। ಕಂದರ್ಪ ಜನಕನು ಪೊರೆವನು ಸೊಗವಾಳ್ದು ಮಂದಭಾಗ್ಯರು ಪೋದಪೆವು।" ಎಂಬ ಮಾತು, "ಚೆನ್ನಿಗ ಚೆಲುವರಾಯನೊಳು ಮನ್ನಣೆವಡೆದು ಚಂದ್ರಾರ್ಕತಾರೆಗಳುನ್ನಗಮಂ ಸೊಗವಾಳು. ಅತ್ತೆಮಾವಂದಿರ ಭಾವಮೈದುನರೊಲವೆತ್ತು ಲಜ್ಜಾಭಾರದಿಂದ ವೊತ್ತಿನೊಳಗೆ ನಿಲ್ಲದುತ್ತರವನು ಕುಡದುತ್ತಮಳೆನಿಸಿಕೊಳ್ಳಮ್ಮ" ಎಂದು ಮಗಳಿಗೆ ಉಪದೇಶ ಮಾಡುವ ತಾಯಿ, ಅಳಿಯನನ್ನು ಕುರಿತು "ಶ್ರೀಯುವತಿಗೆ ಸರಿಯಾಗಿ ಕಾಂಬುದು ಜೀಯ, ನಿನ್ನನೇ ನಂಬಿಹಳು" ಎಂದು ಕಂಬನಿದುಂಬಿ ಹೇಳುವ ಅತ್ತೆಯ ನುಡಿ, ಕಣ್ಣೀರು ಸುರಿಸುತ್ತಾ ಮಗಳನ್ನು ಕಳಿಸಿ ಕೊಟ್ಟ ಸಂದರ್ಭವು ಹೆಣ್ಣುಮಕ್ಕಳನ್ನು ಮದುವೆ ಮಾಡಿ ಕಳಿಸಿ ಕೊಡುವ ತಂದೆ–ತಾಯಿಯರ ದುಃಖದ ನೈಜ ಚಿತ್ರಣವನ್ನು ಕಣ್ಮುಂದೆ ತರಿಸುವುದು.

ಇವರ ಒಲವಿನೊಸಗೆಯನ್ನು ಕಂಡು ದೇವತೆಗಳು "ವರನಂದಿಯ ಪೂರ್ವದ ಕಥೆಯೇನೆಂದು ಅಜನನ್ನು ಬೆಸಗೊಂಡರು. ಅಜನು ಆ ಕಥೆಯನ್ನು ಹೇಳಿದನು.

ಅಲಂಕಾರ, ಉಪಮಾದಿಗಳು ಕಾವ್ಯದಲ್ಲಿ ಸಹಜಸುಂದರವಾಗಿ ಬಂದಿದೆ. ಗಂಡುಮಕ್ಕಳಿದ್ದರೂ ಹೆಣ್ಣುಮಗುವಿಲ್ಲ ಎನ್ನುವ ಕೊರತೆಯನ್ನು ಬಣ್ಣಿಸುವಾಗ:

**ನಳಿನಿಯಿಲ್ಲದ ತಣ್ಗೊಳದಂತೆ ಪೆಣ್ ದುಂಬಿ ಬಳಸದ ಪೂದೋಂಟದಂತೆ।**
**ತಳಪಾಂಸವಿಲ್ಲದ ಕಮಳದಂತೆ ಮಿಗೆ ಕಂಗೊಳಿಸದು ಸುತೆಯಿಲ್ಲದಿರಲು ॥**

ವರನಂದಿಯ ಜನನ ಸಂದರ್ಭದಲ್ಲಿ ನೀಡಿದ ಉಪಮೆ

**ಕೆಸರೊಳು ತಾವರೆ ಶುಕ್ತಿಯೊಳಗೆ ಮುತ್ತು ಮಿಸುಗುತೆ ಪುಟ್ಟುವ ತೆರದಿ।**
**ಎಸೆವ ಪೆಣ್ಮಣಿಯುದರದೊಳು ಜನಿಸಿದಳು ಮಿಸುನಿವಣ್ಣದ ಬಾಲಕಿಯು॥**

**ನೋಡುವ ನೈದಿಲೆಗಳೋ ಕಂಗಳೋ ಮಾತಾಡುವ ಮುಕುರವೋ ಮೊಗವೋ।**
**ಪಾಡುತಿರುವ ಪೊಂಬಂಣದ ಶಂಖವೋ ಗಾಡಿಕಾತಿಯ ನುಣ್ಗೊರಲೋ॥** (೧–೯) ಎಂದು ವರನಂದಿಯ ಕಣ್ಣು, ಮುಖ, ಧ್ವನಿಗಳನ್ನು ಬಣ್ಣಿಸಿ

**ನಡೆವೆಳಮಿಂಚೋ ಪೊಂಜೆಳೆಮೆಯ್ಯೊ ಬಿಡದುಸುರಿಡುವ ಸಂಪಿಗೆಯೊ ನಾಸಿಕವೋ।**
**ಕಡುಸವಿಯೇರಿ ಮಿಡುಕುತಿರ್ಪ ಪವಳವೊ ಬೆಡಗಿಯ ಚೆಂಬಣ್ಣದುಟಿಯೋ॥** (೧–೨೦) ಎಂದಿದ್ದಾಳೆ ಕವಯತ್ರಿ.

ಶಬ್ದಾಲಂಕಾರ

**ಇಂದಿರಾಮಂದಿರಾಯತವಕ್ಷ ಪಾದಾರವಿಂದ ಮಿಲಿಂದಾಯಮಾನ।**
**ವಂದಾರುಮಂದಾರ ವೃಷಭಧರಾಧರಮಂದಿರ ಮತಿಯ ಕೊಡೆನಗೆ ॥**
**ಪರಿಪೂರ್ಣಕಾಮ ನಿರ್ಜಿತದನುಜಸ್ತೋಮ ಸುರುಚಿರಮುಖಜಿತಸೋಮ।**
**ವರಶೇಷಭೂಧರಧಾಮ ಸನ್ಮತಿಯನು ಕರುಣಿಸು ಸುಗುಣಾಭಿರಾಮ॥**

ವಿರಹವೇದನೆಯಿಂದ ನೊಂದ ವರನಂದಿಯ ಸ್ಥಿತಿಯನ್ನು "ಮೊಗವೆಲ್ಲ ಬಾಡಿತು ಮೈ ಕಂದಿತು ಪಗಲಿನ ನೈದಿಲೆಯಂತೆ" ಎಂದು ಬಣ್ಣಿಸಿದ್ದಾಳೆ.

**ಚೆಂದಳಿರಿನಂದವಸುನಿಂದಿಸುತ್ತಿರುವ ಪೊಂದಾವರೆಗಳ ಚೆಲ್ವನು ನೀಳ್ಕರಿಸುವ।**
**ಪೊಂದಿದಂದುಗೆ ಗೆಜ್ಜೆಯಿಂದ ದನಿಗುಡುವ ಇಂದಿರೆಯ ಮೆಲ್ಲಡಿಯ ಪೊಗಳಿದರು ॥** – ಎಂಬಲ್ಲಿ ಶಬ್ದಾಲಂಕಾರ, ಅರ್ಥಾಲಂಕಾರಗಳೆರಡೂ ಜೊತೆಗೂಡಿವೆ.

ಚೆಲುವಾಂಬೆಯ ಈ ಕಾವ್ಯವು ಅವಳೇ ಹೇಳಿರುವಂತೆ ಸರಸಕಾವ್ಯ; ಅವಳ ಕಾವ್ಯದಿಂದ ಅವಳ ಪಾಂಡಿತ್ಯ, ಸಹೃದಯತೆ, ಸಾಹಿತ್ಯರಸಿಕತೆಗಳು ವ್ಯಕ್ತವಾಗುತ್ತವೆ; ಅವಳ ಕಾವ್ಯಗಳಿಂದ ಕನ್ನಡ ಸಾಹಿತ್ಯಸಿರಿ ಹೆಚ್ಚಿದೆ ಎಂಬ ಸರೋಜಿನಿ ಮಹಿಷಿ ಅವರ ಮಾತಿನಲ್ಲಿ ಅತ್ಯುಕ್ತಿಯಿಲ್ಲ.

**ಕಥಾವಸ್ತು:** ದಿಲ್ಲಿಯ ಪಾದಶಾಹನ ಮಗಳಾಗಿ ಹುಟ್ಟಿದ ವರನಂದಿಯು, ದಿಗ್ವಿಜಯದ ವೇಳೆಯಲ್ಲಿ ತನ್ನ ತಂದೆಯು ಯದುಗಿರಿಯಿಂದ (ಮೇಲುಕೋಟೆ) ಕೊಂಡೊಯ್ದ ಚೆಲುವನಾರಾಯಣನ ವಿಗ್ರಹವನ್ನು ತನ್ನರಮನೆಯಲ್ಲಿ ಇರಿಸಿಕೊಳ್ಳುತ್ತಾಳೆ. ತನ್ನ ಸಖಿಯರಿಂದ ಆತನನ್ನು ಪೂಜಿಸುವ ವಿಧಾನ ಕಲಿತು, ಅವನನ್ನು ಒಲಿಸಿಕೊಳ್ಳುತ್ತಾಳೆ. ದೇವತೆಗಳ ಸಮ್ಮುಖದಲ್ಲಿ ಮದುವೆಯೂ ಆಗುತ್ತದೆ. ಕೆಲದಿನಗಳ ನಂತರ ಚೆಲುವನಾರಾಯಣ ಮರಳಿ ಹೋಗಬೇಕೆಂದು ಚಿಂತಿಸಿ, ರಾಮಾನುಜರ ಕನಸಿನಲ್ಲಿ ಕಾಣಿಸಿಕೊಂಡು ಕರೆದೊಯ್ಯುವಂತೆ ಹೇಳುತ್ತಾನೆ. ಹಲವರನ್ನೊಡಗೊಂಡು ದಿಳ್ಳಿಗೆ ಬಂದ ರಾಮಾನುಜರನ್ನು ಪಾದಶಹನು ಸ್ವಾಗತಿಸಿ, ಅವರ ಸೂಚನೆಯ ಮೇರೆಗೆ ಚೆಲುವನಾರಾಯಣನನ್ನು ಕಳಿಸಿಕೊಡಬೇಕೆಂದು ಮಗಳನ್ನು ಕೇಳುತ್ತಾನೆ. ತನ್ನನ್ನು ಕಳಿಸಲು ನಿರಾಕರಿಸಿದ ವರನಂದಿಯನ್ನು ನಾರಾಯಣನೇ ಸಮಾಧಾನ ಪಡಿಸಿ, ತಂದೆಯನ್ನೊಪ್ಪಿಸಿ ಅವಳೂ ಯದುಗಿರಿಗೆ ಬರಬಹುದೆಂದು ಸೂಚಿಸಿ ಹೊರಡುತ್ತಾನೆ.

ಚೆಲುವನಾರಾಯಣನನ್ನು ಕಳುಹಿಸಿ, ವೇದನೆ ಪಡುವ ಮಗಳನ್ನು ಸಂತೈಸಲಾರದೆ ತಂದೆ ದುಃಖಿಸುತ್ತಾನೆ. ದೈವ ಸಂಕಲ್ಪದಂತೆ ಈಗಾಗಲೇ ಇವರಿಬ್ಬರಿಗೆ ಮದುವೆಯಾಗಿರುವುದನ್ನು ಅರಿತು, ತನ್ನ ಮಗಳನ್ನು ರಾಮಾನುಜರ ಬಳಿಗೆ ಕರೆತರುತ್ತಾನೆ. ರಾಮಾನುಜರು ವರನಂದಿಯನ್ನು ಚೆಲುವರಾಯನ ಒಡ್ಡೋಲಗಕ್ಕೆ ಕರೆತಂದು ಇಬ್ಬರಿಂದಲೂ ತಿರುಮಾಲೆಗಳನ್ನು ಹಾಕಿಸಲು, ದಿವ್ಯಾಸನಗಳಲ್ಲಿ ಕುಳಿತ ಇವರಿಗೆ ಸುಮಂಗಲೆಯರು ಆರತಿ ಎತ್ತುತ್ತಾರೆ. ಸುರತಾಳನು ಅಳಿಯನಿಗೆ ನಾನಾ ಬಳುವಳಿಯನ್ನು ಕೊಟ್ಟು ಹಿಂದಿರುಗುತ್ತಾನೆ. ಯದುಗಿರಿಯಲ್ಲಿ ಇವರೀರ್ವರನ್ನು ಪಲ್ಲಕ್ಕಿಯಲ್ಲಿ ಕೂರಿಸಿ ಮೆರವಣಿಗೆ ಮಾಡಲಾಗುತ್ತದೆ. ಶ್ರೀದೇವಿಯು ತಂಗಿ ಬಾರೆಂದು ಕರೆದುಕೊಂಡು ಹೋಗಿ ಸಿಂಗರಿಸುತ್ತಾಳೆ. ಚೆಲುವರಾಯನು "ಉರದೊಳಗೆ ಸಿರಿಯೆಂತು ನೆಲಸಿರ್ಪಳಂತೆನ್ನ ಸಿರಿಯಡಿಗಳ ಮಧ್ಯದೊಳು ನಿರುತಮಾಗಿರ್ದು ಭಕ್ತರ ಪೊರೆ" ಎಂದು ಅವಳನ್ನು ಕುಳ್ಳರಿಸುತ್ತಾನೆ.

ದ್ವಾಪರಯುಗದ ಸತ್ಯಭಾಮೆಯೇ ವರನಂದಿಯಾಗಿ ಜನಿಸಿಬಂದಳಲ್ಲದೆ, ಸತ್ರಾಜಿತನೇ ಸುರತಾಳನಾಗಿ ಜನ್ಮವೆತ್ತಿದನು ಎಂಬ ಹಿಂದಿನ ಜನ್ಮದ ವೃತ್ತಾಂತವೂ ಇಲ್ಲಿದೆ. ಇದರೊಂದಿಗೆ ಯದುಗಿರಿ ಕ್ಷೇತ್ರ ಮಹಿಮೆ ಹಾಗೂ ಅಲ್ಲಿನ ತೀರ್ಥಗಳ ಮಹಿಮೆಯನ್ನೂ ಕವಯತ್ರಿಯು ತಿಳಿಸಿದ್ದಾಳೆ.

**"ಯದುಗಿರಿ ನಿಳಯದ ನೆಲೆಗೈವ ನಿರುಪಮಗೆ ॥ ಸುರತಾಳನು ಕೊಂಡೊಯ್ದು ತನ್ನೂರೊಳು ಸೆರೆಗೈಯ್ಯಲವನ ಕುವರಿಯೆನಿಪ ವರನಂದಿಯೊಡಗೂಡಿ ರಾಮಾನುಜಾಚಾರ್ಯರಿಂ ತಿರುನಾರಾಯಣಪುರಿಗೈತಂದಗೆ ಮಂಗಳಂ । ... ಚೆಲ್ವಾಜಮ್ಮನು ಪೇಳ್ದ ಸರಸ ಕವಿತೆ ಕೇಳ್ದು ಸಲಹುವಗೇ ಮಂಗಳಂ ॥**

ಈ ಎಲ್ಲ ಕಾವ್ಯಗುಣಗಳಿಂದಲೇ ಹದಿನೆಂಟನೆಯ ಶತಮಾನದ ಪ್ರಮುಖ ಕವಯತ್ರಿ ಎನಿಸಿದ ಚೆಲುವಾಂಬೆಯ ಕೃತಿಗಳಲ್ಲಿ 'ವರನಂದೀ ಕಲ್ಯಾಣ'ಕ್ಕೆ ಪ್ರಥಮ ಸ್ಥಾನ ಎನ್ನಬಹುದು. ಕಾವ್ಯ ಚಿಕ್ಕದಾದರೂ, ಕಾವ್ಯಸತ್ವದ ದೃಷ್ಟಿಯಿಂದ ಇದೊಂದು ಅಪೂರ್ವ ಕಾವ್ಯವೆನಿಸಿದೆ. ಈ ಕೃತಿಯು ಹಲವಾರು ದೃಷ್ಟಿಯಿಂದ ಮಹತ್ವದ್ದೆನಿಸಿದೆ. ಮಹಿಳೆಯೋರ್ವಳು ರಚಿಸಿರುವ ದೀರ್ಘಕಾವ್ಯವೆನಿಸಿದೆ. ಸಂಪ್ರದಾಯವನ್ನನುಸರಿಸಿ ರಚಿಸಲಾಗಿದ್ದರೂ ಇದರಲ್ಲಿ ನವೀನತೆ ಮೇಳೈಸಿದೆ. "ವರನಂದಿಯ ಬಾಲಕ್ರೀಡೆ, ವಿರಹ ಮತ್ತು ಶೃಂಗಾರ, ಮದುವೆ ಮುಂತಾದ ಸಂದರ್ಭಗಳಲ್ಲಿ ಚೆಲುವಾಂಬೆಯ ಕಾವ್ಯಪ್ರೌಢಿಮೆಯನ್ನು ಕಾಣಬಹುದು" (ಮಂಜಪ್ಪಶೆಟ್ಟಿ : 1984)

ಶ್ರೀವೈಷ್ಣವ ಮತಪ್ರವರ್ತಕರಾದ ರಾಮಾನುಜರೇ ವೆಂಕಟೇಶನನ್ನು ಯದುಗಿರಿಗೆ ತಂದವರು ಎಂಬ ಐತಿಹಾಸಿಕ ವಾಸ್ತವಾಂಶ, ಕಾವ್ಯಮಯವಾಗಿ ವ್ಯಕ್ತವಾಗಿದೆ. ಹೊಯ್ಸಳ ವಿಷ್ಣುವರ್ಧನನ ಸಹಾಯ, ಪ್ರೋತ್ಸಾಹಗಳಿಂದ ರಾಮಾನುಜರು ಮೇಲುಕೋಟೆ (ಯದುಗಿರಿ)ಯಲ್ಲಿ 'ತಿರುನಾರಾಯಣಪೆರುಮಾಳ್' ದೇವಾಲಯವನ್ನು ಕಟ್ಟಿಸಿದ್ದು ಇತಿಹಾಸಪ್ರಸಿದ್ಧವಾದ ಮಾತು (ಡಾ.ಟಿ.ಎಂ.ಪಿ.ಮಹಾದೇವನ್: ಸಂತರಚರಿತೆ, ಪು.೭೭) ಅದನ್ನೇ ಕಾವ್ಯದಲ್ಲಿ ಕವಯಿತ್ರಿ ಬಳಸಿಕೊಂಡಿದ್ದಾಳೆ. ದೇಸಿ ಛಂದಸ್ಸಿನ ಸಾಂಗತ್ಯವನ್ನೇ ಬಳಸಿಕೊಂಡು ಹಾಡುಗಬ್ಬವನ್ನು ಭಕ್ತಿರಸ ಪ್ರಧಾನವಾಗಿ ರಚಿಸಿದ್ದು ಈ ಕಾಲದ ವೈಶಿಷ್ಟ್ಯ ಚೆಲುವಾಂಬೆ ತನ್ನ ಕಾಲದ ಪ್ರಸಿದ್ಧ ಹಾಡಿನ ಮಟ್ಟನ್ನು ಪರಿಣಾಮಕಾರಿಯಾಗಿ ಬಳಸಿಕೊಂಡಿದ್ದಾಳೆ. (ಸರೋಜಿನಿ ಮಹಿಷಿ:೧೯೬೫) ಇವಳ ಮತ್ತೊಂದು ಕೃತಿ **ಅಮ್ಮನವರ ಲಾಲಿಪದದಲ್ಲಿ** ಸೌಕುಮಾರ್ಯದ ವರ್ಣನೆ ಸುಕುಮಾರ ಸುಲಲಿತ ಪದಗಳಿಂದಲೇ ಮೂಡಿಬಂದಿದೆ. ಸಂದರ್ಭಕ್ಕೆ ತಕ್ಕ ಭಾವ ಕಾವ್ಯದಲ್ಲಿ ತರುವ ಚಾತುರ್ಯತೆ ಇವಳಿಗೆ ಸಿದ್ಧಿಸಿದೆ.

**ವೆಂಕಟಾಚಲ ಮಹಾತ್ಮ್ಯಂ ಲಾಲಿಪದ**: ಚೆಲುವಾಂಬೆಯ ಎರಡನೆಯ ಕೃತಿಯಾದ ವೆಂಕಟಾಚಲ ಮಹಾತ್ಮ್ಯಂ ಲಾಲಿಪದವು ಸುಂದರವಾದ ನೀಳ್ಗವಿತೆ. ವೆಂಕಟಗಿರಿ ಮತ್ತು ವಂಕಟೇಶನ ಮಹಿಮೆ ಜೊತೆಗೆ ವಿಷ್ಣುವಿನ ಹತ್ತು ಅವತಾರಗಳು ಇಲ್ಲಿ ವರ್ಣಿತವಾಗಿದೆ. ವೆಂಕಟಗಿರಿಯ ಮಹಿಮೆ, ಅಲ್ಲಿಯ ಸ್ಥಳಪುರಾಣ, ಹತ್ತಾರು ತೀರ್ಥಗಳ ಮಹಿಮೆಯನ್ನು ಸಂಕ್ಷಿಪ್ತವಾಗಿ ಮತ್ತು ಸ್ವಾರಸ್ಯಪೂರ್ಣವಾಗಿ ವರ್ಣಿಸಿದ್ದಾಳೆ. ಮಾತ್ರಾಗಳ ಚೌಪದಿಯಲ್ಲಿ ರಚಿತವಾಗಿರುವ ಈ ಕೃತಿಯಲ್ಲಿ ಒಟ್ಟು ೨೦೩ ಲಾಲಿಪದಗಳಿವೆ.

ವೃಷಭಗಿರಿಯಲ್ಲಿ ನೆಲೆಸಿರುವ ವೆಂಕಟೇಶನನ್ನು ಗಿರಿಯೆಂಬ ತೊಟ್ಟಿಲಲ್ಲಿ ಮಲಗಿರುವ ಶಿಶುವೆಂದು ಭಾವಿಸಿ ಲಾಲಿ ಹಾಡುವ ಮೂಲಕ ವೆಂಕಟಗಿರಿಯ ಮಹಿಮೆಯನ್ನು ಬಣ್ಣಿಸಿದ್ದಾಳೆ:

**ಶ್ರೀವಾಸುದೇವ ನಿನ್ನನ್ನು ತೊಟ್ಟಿಲೊಳಗೆ**
**ಭಾವಿಸುತೆ ಶಿಶುವೆಂದು ಮಲಗಿರುವೆ ಮೊಳಗೆ**
**ದೇವದುಂದುಭಿನೃತ್ಯವಚ್ಚರಿಯರೆಸಗೆ**
**ದೇವಸುದತಿಯರು ತಂದಾರತಿಯ ಬೆಳಗೆ॥**

ವೆಂಕಟೇಶನ ಮಹಿಮೆಯನ್ನು ತಿಳಿಸುವ ಈ ಕೃತಿಯಲ್ಲಿ ಸಂಧಿ, ಆಶ್ವಾಸಗಳೆಂಬ ವಿಭಾಗಗಳಿಲ್ಲ. ಕಾವ್ಯಾರಂಭದಲ್ಲಿ ಜೋಜೋ ಎಂದು ಆರಂಭವಾಗುವ ಪಲ್ಲವಿ ಇದೆ. ನಂತರದ ಪದ್ಯಗಳು ಕ್ರಮವಾಗಿ ಒಂದು ಪದ್ಯ ಜೋ ಜೋ ಎಂದು ಕೊನೆಯಾದರೆ, ಮುಂದಿನದು ಲಾಲಿ ಎಂದು ಕೊನೆಯಾಗುತ್ತದೆ.

ಪೂರ್ವದಲ್ಲಿ ಸ್ವಯಂ ನಾರಾಯಣನೇ ಭೂದೇವಿಗೆ ತಿಳಿಸಿದ ಕಥೆಯನ್ನು ನಾರದರು ಭೃಗುಮುನಿಗೆ ಹೇಳಿದಂತೆ ಇಲ್ಲಿ ಕಥೆ ನಿರೂಪಿತವಾಗಿದೆ. ನಾರದನು ಭೃಗುಮುನಿಗೆ ಹೇಳಿದ ವೆಂಕಟಗಿರಿಯ ಮಹಿಮೆಯನ್ನು ತಾನು

ಕನ್ನಡದಲ್ಲಿ ಹೇಳುತ್ತಿರುವುದಾಗಿ ಚೆಲುವಾಂಬೆಯು, ತಿಳಿಸಿದ್ದಾಳೆ. ಈ ಕೃತಿಯನ್ನು ಸಂಪ್ರದಾಯದಂತೆ ಕುಲದೈವ, ಗುರು–ಹಿರಿಯರಾರ ಸ್ತುತಿಯೂ ಇಲ್ಲದೆ ನೇರವಾಗಿ ಆರಂಭಿಸಿದ್ದಾಳೆ.

"ನಾನಾಪುರಾಣೋಕ್ತವಾದ ಕಥೆಗಳನು ಆನಂದದಿಂ ಪೇಳ್ವೆ ತಚ್ಚರಿತ್ರವನು" ಎಂದು ಸ್ವಯಂ ಕವಯತ್ರಿಯೇ ತನ್ನ ಈ ಕೃತಿಗೆ ಅನೇಕ ಪುರಾಣಗಳು ಆಕರವಾಗಿವೆ ಎಂಬುದನ್ನು ತಿಳಿಸಿದ್ದಾಳೆ.

ವೆಂಕಟೇಶ್ವರನು ನೆಲೆಸಿರುವ ಪರ್ವತಕ್ಕೆ ಶೇಷಾದ್ರಿ, ವೃಷಭಾದ್ರಿ, ನಾರಾಯಣಾದ್ರಿ, ಅಂಜನಾದ್ರಿ, ವೇಂಕಟಗಿರಿ, ವರಾಹಕ್ಷೇತ್ರ, ಗರುಡಾದ್ರಿ ಮೊದಲಾದ ಹೆಸರುಗಳು ಬರಲು ಕಾರಣವಾದ ಪುರಾಣಗಳನ್ನೂ, ವೆಂಕಟೇಶ್ವರನ ಮಹಿಮೆಗಳನ್ನೂ, ಈ ಗಿರಿಯ ತಪ್ಪಲಲ್ಲಿರುವ ತೀರ್ಥಗಳ ಮಹಿಮೆಯನ್ನೂ, ಸ್ವಯಂವರದಲ್ಲಿ ಅಲರ್ಮೇಲುಮಂಗೆಯನ್ನು ವರಿಸಿದ ವಿಷ್ಣುವಿನ ಕಥೆ, ವೇದಾವತಿಯು ಮುಂದಿನ ಜನ್ಮದಲ್ಲಿ ಪದ್ಮಾವತಿಯಾಗಿ ವೆಂಕಟೇಶ್ವರನನ್ನು ವರಿಸಿದ ಕಥೆಗಳನ್ನು ಈ ೨೦೩ ಚೌಪದಗಳಲ್ಲಿ ಚೆಲುವಾಂಬೆಯು ಬಣ್ಣಿಸಿದ್ದಾಳೆ.

**ಪಸೆಯೊಳಗೆ ಕುಳ್ಳಿರ್ದ ಕುಸುಮನೇತ್ರನನು**
**ವಸುಮತೀಶ್ವರನೆನಿಸುವಾಕಾಶನೃಪನು**
**ಒಸಗೆ ಮಿಗೆ ಕಣ್ಗೊಳಿಸಿ ತನ್ನ ತನುಜೆಯನು**
**ಪೊಸವಿಭವದಿಂ ಧಾರೆಯೆರೆದು ಪೆರ್ಚಿದನು – ಜೋ ಜೋ (೧೨೦)**

**ನೆಲದಾಣ್ಮ ಕೃಷ್ಣರಾಜೇಂದ್ರನರ್ಧಾಂಗಿ**
**ಚೆಲುವಾಂಬೆ ತನ್ನೆಡೆಗೆ ಹರಿಯೈದಲಾಗಿ**
**ಪಲವಗೆಯ ದಿವ್ಯೋತ್ಸವಂಗಳನುವಾಗಿ**
**ಸೆಲೆ ವಿರಚಿಸುತ್ತಿಹಳು ಭಕ್ತಿಪರಳಾಗಿ – ಜೋ ಜೋ (೨೦೦)**

**ಶ್ರೀ ಕಾಂತನೃಪನುದರವಾರ್ಧಿಯೊಳು ಬಂದು**
**ಶ್ರೀ ಕೃಷ್ಣರಾಜೇಂದ್ರನರ್ಧಾಂಗಿಯೆಂದು**
**ಲೋಕವಿಶ್ರುತೆಯಾದ ಚೆಲ್ವಾಂಬೆಗಿಂದು**
**ಬೇಕಾದಭೀಷ್ಟಗಳ ಕೊಡು ದಯಾಸಿಂಧು – ಜೋ ಜೋ (೨೦೨)**

"ಪರಮಾತ್ಮನನ್ನು ತೊಟ್ಟಿಲೊಳಿಟ್ಟು ತೂಗಬೇಕೆನ್ನುವ ಕವಯಿತ್ರಿಗೆ ಬ್ರಹ್ಮಾಂಡವೇ ಮಂಟಪ, ವೃಷಭಾದ್ರಿಯೇ ತೊಟ್ಟಿಲು ಎಂಬ ರೂಪಕ ಕವಯತ್ರಿಯ ಕಲ್ಪನಾಶಕ್ತಯ ದ್ಯೋತಕವಾಗಿದೆ" (ಸರೋಜಿನಿ ಮಹಿಷಿ: ೧೯೬೫) ಬ್ರಹ್ಮಾಂಡಮಂಟಪದೊಳೆಸೆವ ಫಣಿರಾಜನೆನಿಪ ನರಫಣಿಯ ಕಟ್ಟಿರುವ ಅಣಿಯರದ ವೃಷಭಾದ್ರಿಯ ತೊಟ್ಟಿಲೊಳು ಮೆರೆವ ಗುಣಿ ನಿನ್ನ ತೂಗುವರು– ಪೌರಾಣಿಕ ಚೌಕಟ್ಟಿನೊಳಗೆತನ್ನ ಕವಿತಾ ಪ್ರೌಢಿಮೆಯನ್ನು ತೋರಿದ್ದಾಳೆ. ಬ್ರಹ್ಮಾಂಡವನ್ನೇ ಮಂಟಪವೆಂದು, ಶ್ರೀನಿವಾಸನುನೆಲೆಸಿರುವ ಗಿರಿಯನ್ನು ತೊಟ್ಟಿಲೆಂದು ಭಾವಿಸಿಕೊಳ್ಳುವಂತಹ ಇವಳ ಕಲ್ಪನೆಯ ಹಿಂದೆ ದಾಸಸಾಹಿತ್ಯದ ಪ್ರಭಾವ ಇರುವುದನ್ನು ಗಮನಿಸಬಹುದು. ಇದೇ ಪ್ರಕಾರದ ಪದ್ಯಗಳ ಅಮ್ಮನವರ ಲಾಲಿಪದದಲ್ಲಿಯೂ ಗಮನಿಸಬಹುದು.

**ಅಮ್ಮನವರ ಲಾಲಿಪದ:** ತಿರುಪತಿಯ ವೆಂಕಟರಮಣಸ್ವಾಮಿಯ ಮಡದಿಯಾದ ಲಕ್ಷ್ಮೀದೇವಿಯನ್ನು ಅಲಮೇಲಮ್ಮ ಎಂದು ಸ್ತುತಿಸಲಾಗಿದೆ. ಹಾಗಾಗಿ ಇದನ್ನು ಅಲರ್ಮೇಲುಮಂಗೆ ಲಾಲಿಪದ ಎಂದೂ ಕರೆಯಲಾಗಿದೆ. ಅಲರ್ಮೇಲುಮಂಗೆಯನ್ನು ಅಡಿಯಿಂದ ಮುಡಿಯವರೆಗೆ ಸುಂದರವಾಗಿ ವರ್ಣಿಸಿದ್ದಾಳೆ. ಈ ಕೃತಿಯಲ್ಲಿ ಶಕ್ತಿಯ ವರ್ಣನೆಯೇ ಹೆಚ್ಚಾಗಿದೆ. ಮಾತ್ರಾ ಚೌಪದಿರಲ್ಲಿ ರಚಿತವಾದ ಈ ಕೃತಿಯಲ್ಲಿ ಒಟ್ಟು ೩೫ ಚೌಪದಿಗಳಿವೆ.

**ನಳನಳಿಪ ಸಿರಿಯೊಡಲ ಸಿರಿವೆಳಗೆನಿಸುವ**
**ತಿಳಿಗೊಳದೊಳಗಲದಿರುವೆಣೆವಕ್ಕಿಯಿರವ**

**ತಳೆದಿರುವ ಬಟ್ಟಜವ್ವನದ ಸೊಬಗೆಸೆವ**
**ನಳಿನಲೋಚನೆಯು ಸೋಲಿಪಳು ಕಣ್ಮನವ – ಲಾಲಿ (೧೭)**

**ಕುಸುಮಮಯ ಕಾರ್ಮುಕನ ಮಸೆದಲಗಿವೆನಿಪ**
**ಪೊಸಮಾಂದಳಿರ್ಗಳನು ತುಂಬಿ ಕಣ್ಗೊಳಿಪ**
**ಎಸೆವ ಪೊಂದಾವರೆಗಳನುರೆ ನೀಳ್ಕರಿಪ**
**ಮಿಸುಪ ಹಸ್ತಗಳನೇವಣ್ಣಿಪೆವು ಪೊಳಪ – ಜೋ ಜೋ (೨೨)**

ಈ ರಚನೆಯಲ್ಲಿ ಭಕ್ತಿಯೇ ಮೇಳೈಸಿದ್ದರೂ, ಕವಯತ್ರಿ ಚೆಲುವಾಂಬೆಯು ವರ್ಣನೆಯಲ್ಲಿ ಅಲಂಕಾರಗಳನ್ನು ತಂದು ಕಾವ್ಯಮಯವನ್ನಾಗಿಸಿದ್ದಾಳೆ.

**ಛಂದಸ್ಸು :** ಈ ಎರಡೂ ಕೃತಿಗಳನ್ನು ಚೆಲುವಾಂಬೆಯು ಚೌಪದಿಯಲ್ಲಿ ರಚಿಸಿದ್ದಾಳೆ. ಮಾತ್ರಾಚೌಪದಿಯ ಛಂದಸ್ಸಿಗೆ ಒಳಪಡುವ ಈ ಪದ್ಯಗಳು ನಾಲ್ಕುಸಾಲುಗಳು, ಪ್ರತಿ ಸಾಲಿನಲ್ಲಿಯೂ ೫+೫+೫+೩ ಎಂಬ ಗಣವಿನ್ಯಾಸದ ಒಟ್ಟು ನಾಲ್ಕು ಗಣಗಳಿಂದ ಕೂಡಿವೆ. 'ಛಂದೋಂಬುದಿ'ಯ ಕೆಲವು ಪ್ರತಿಗಳಲ್ಲಿ ಮಾತ್ರಾಚೌಪದಿಯ ಲಕ್ಷಣಗಳು ತಿಳಿದು ಬಂದಿವೆಯಾದರೂ, ವಿದ್ವಾಂಸರು ಇದನ್ನು ಪ್ರಕ್ಷಿಪ್ತವೆಂದೂ, ನಾಗವರ್ಮನ ಈ ಕಾಲದಲ್ಲಿ ಇದು ಪ್ರಚಲಿತವಾಗಿರಲಿಲ್ಲದ ಕಾರಣ ಆತ ಉಲ್ಲೇಖಿಸಿಲ್ಲವೆಂದು ತಿಳಿಸಿದ್ದಾರೆ.

ಪ್ರಕ್ಷಿಪ್ತ ಪಾಠದಲ್ಲಿ ತಿಳಿದುಬರುವ ಚೌಪದಿಯ ಲಕ್ಷಣ ಈ ಪ್ರಕಾರವಾಗಿದೆ

**ಎಸೆವ ಚೌಪದಿಗೆ ಪದಿನೆಂಟು ಮಾತ್ರೆಗಳು**
**ಸಸಿನೆ ಯತಿ ಯೆಂಟಱಗೊಳು ಪಸರಿಸುತಲಿರಲು**
**ಹಸನಾಗಿ ನಾಲ್ಕು ಪದಸಮನಾಗಿ ಬರಲು**
**ಬಿಸಜಾಕ್ಷಿ ಪ್ರಾಸು ತಿಳಿ ಮೊದಲು ಕಡೆಯಿರಲು॥**

ಇಲ್ಲಿ ತಿಳಿಸಿರುವಂತೆ ಮಾತ್ರಾಗಣಬಂಧದ ಈ ನಾಲ್ಕೂ ಸಮಪಾದ ಹೊಂದಿರುವ ಪದ್ಯದ ಪ್ರತಿಪಾದದಲ್ಲಿ ೧೮ ಮಾತ್ರೆಗಳಿರುತ್ತವೆ. ಪ್ರತಿಪಾದದ ೮ನೆಯ ಮಾತ್ರೆಯ ನಂತರ ಯತಿ ಬರುತ್ತದೆ. ಆದಿ–ಅಂತ್ಯ ಎರಡೂ ಪ್ರಾಸಗಳು ಬರುತ್ತವೆ. ಈ ಚೌಪದಿಯ ಪ್ರತಿಪಾದದಲ್ಲಿ ೩ ಪಂಚಮಾತ್ರಾಗಣ + ೧ ತ್ರಿಮಾತ್ರಾಗಣ ಬರುತ್ತವೆ.

"ಈ ಮಾತ್ರಾಚೌಪದಿಯ ಉಗಮದ ಬಗ್ಗೆ ಭಿನ್ನಾಭಿಪ್ರಾಯಗಳಿದ್ದರೂ ಅಂಶಗಣ ಬಂಧವಾದ ಛಂದೋವಸಂತವೇ ಮುಂದೆ ಮಾತ್ರಾಗಣಕ್ಕೆ ತಿರುಗಿ ಚೌಪದಿಯಾಗಿದೆ"[೩೨].

ಕನ್ನಡದಲ್ಲಿ ಈ ಚೌಪದಿಯಲ್ಲಿ ಬಿಡಿಪದ್ಯಗಳು ರಚನೆಯಾಗಿದ್ದರೂ, ದೊಡ್ಡಕೃತಿಯೊಂದು ರಚನೆಯಾಗಿಲ್ಲ. ಚೆಲುವಾಂಬೆಯ 'ವೆಂಕಟಾಚಲಮಹಾತ್ಮ್ಯಂ ಲಾಲಿಪದ'ವೇ ವಿಸ್ತೃತವಾದುದೆಂದು ಹೇಳಬಹುದು. ಅಮ್ಮನವರೂ ವೆಂಕಟೇಶನ ಜೊತೆಗೆ ಯದುಗಿರಿಗೆ ಬಂದು ನೆಲೆಸಿದ ಕಥೆ ಲಾಲಿಪದದಲ್ಲಿ ಬರುತ್ತದೆ. ಕೃತಿಯ ಕಡೆಯ ಪದ್ಯದಲ್ಲಿ "ವಿರಚಿಸಿದವಳು ಚೆಲ್ವಮಾಂಬೆ ಕವನವನು" ಎಂದು ತನ್ನ ಅಂಕಿತವನ್ನು ಹಾಕಿದ್ದಾಳೆ.

**ಮಂಗಳಾರತಿ ಪದ:** ಚೆಲುವಾಂಬೆಯು ಇಲ್ಲಿ ಕೇವಲ ಐದು ಪದ್ಯಗಳಲ್ಲಿ ಮೇಲುಕೋಟೆಯ ಚೆಲುವನಾರಾಯಣ ಸ್ವಾಮಿಯ ಸ್ತುತಿರೂಪದ ಪದವನ್ನು ರಚಿಸಿದ್ದಾಳೆ. ವರನಂದೀ ಕಲ್ಯಾಣದಲ್ಲಿನ ಚೆಲುವನಾರಾಯಣನ ಕಥೆಯನ್ನು ಇಲ್ಲಿ ಬಹಳ ಚುಟುಕಾಗಿ ವರ್ಣಿಸಿದ್ದಾಳೆ. ಪಲ್ಲವಿ ಹಾಗೂ ಚರಣಗಳನ್ನೊಳಗೊಂಡ ಈ ರಚನೆಯು ಹಾಡಿನ ಮಟ್ಟಿನಲ್ಲಿ ರಚಿಸಿರುವುದೊಂದು ವಿಶೇಷ. "ಚೆಲ್ವಾಜಮ್ಮನು ಪೇಳ್ದ ಸರಸಕವಿತೆಗೇಳ್ದು ಸಲುವಗೆ" ಎಂದು ಕೊನೆಯಾಗುವ ಈ ಮಂಗಳಾರತಿ ಪದಕ್ಕೆ ರಾಗ ಹಾಗೂ ತಾಳವನ್ನೂ ಕವಯತ್ರಿಯೇ ನಿರ್ದೇಶಿಸಿದ್ದಾಳೆ.

**ಕೃಷ್ಣ ಕರ್ಣಾಮೃತವ್ಯಾಖ್ಯೆ:**

ಅರಸಿ ಚೆಲುವಾಂಬೆಯ ಮತ್ತೊಂದು ಕೃತಿ 'ಕೃಷ್ಣಕರ್ಣಾಮೃತವಾಖ್ಯೆ'. ಗ್ರಂಥದ ಹೆಸರೇ ಸೂಚಿಸುವಂತೆ ಇದೊಂದು ಸ್ವತಂತ್ರ ಕೃತಿಯಾಗಿರದೆ, ಸಂಸ್ಕೃತಿ ಕೃತಿಯೊಂದಕ್ಕೆ ರಚಿಸಲಾದ ಟೀಕಾಗ್ರಂಥವಾಗಿದೆ. ಅಪ್ರಕಟಿತವಾದ ಈ ಕೃತಿಯ ಕುರಿತಾಗಿ ಹೆಚ್ಚಿನ ಮಾಹಿತಿಯು ದೊರಕುವುದಿಲ್ಲ.

೧೯೮೪ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಿಂದ, 'ಚಲುವಾಂಬೆಯ ಕೃತಿಗಳು' ಒಂದೆಡೆ ಪ್ರಕಟಗೊಂಡವು, ಆದರೆ 'ಕೃಷ್ಣಕರ್ಣಾಮೃತವಾಖ್ಯೆ'ಯ ಹಸ್ತಪ್ರತಿಯು ಅನಪಲಬ್ದವಾದ ಕಾರಣ ಇಲ್ಲಿ ಸೇರಿಲ್ಲವೆಂದು ಇದರ ಸಂಪಾದಕರು ಮುನ್ನುಡಿಯಲ್ಲಿ ತಿಳಿಸಿದ್ದಾರೆ. ಕವಿಚರಿತೆಯಲ್ಲಿಯೂ ಈ ಕೃತಿಯ ಕುರಿತಾದ ಉಲ್ಲೇಖ ದೊರಕುವುದಿಲ್ಲ.

ಸರೋಜಿನಿ ಮಹಿಷಿಯವರು 'ಕರ್ನಾಟಕದ ಕವಯಿತ್ರಿಯರು' ಕುರಿತಾಗಿ ನಡೆಸಿದ ಸಂಶೋಧನೆಯ ಸಂದರ್ಭದಲ್ಲಿ, ಮೈಸೂರು ಪ್ರಾಚ್ಯ ಸಂಶೋಧನ ಸಂಸ್ಥೆಯಲ್ಲಿ ೨೪೮ ಪುಟಗಳ ಈ ಓಲೆ ಕೃತಿಯನ್ನು ನೋಡಿರುವುದಾಗಿ ತಿಳಿಸಿದ್ದಾರೆ[೩೩]. ಆದರೆ  ಇವರು ನೋಡುವ ವೇಳೆಗಾಗಲೇ ಕೃತಿಯು ಬಹುತೇಕ ನಷ್ಟವಾಗಿದ್ದು, "ತಮಗೆ ದೊರೆತ ಪ್ರತಿಯು ಸಮಗ್ರವಾಗಿಲ್ಲ" ಎಂದು ಉಲ್ಲೇಖಿಸಿದ್ದಾರೆ.

ಈ ಗ್ರಂಥದಲ್ಲಿ ಚೆಲುವಾಂಬೆಯು, ಸಂಸ್ಕೃತದಲ್ಲಿನ ಕೃಷ್ಣ ಕರ್ಣಾಮೃತಕ್ಕೆ ಶಬ್ದಶಃ ಕನ್ನಡ ಟೀಕೆಯನ್ನು ರಚಿಸಿದ್ದಾಳೆ ಎನ್ನಲಾಗಿದೆ. ಸರೋಜಿನಿ ಮಹಿಷಿ ಅವರು "ಈ ಕೃತಿಯಲ್ಲಿ ಚೆಲುವಾಂಬೆಯ ಕನ್ನಡ ಸಂಸ್ಕೃತ ದ್ವಿಭಾಷಾಪಾಂಡಿತ್ಯ ವ್ಯಕ್ತವಾಗಿದೆ" ಎಂದು ಶ್ಲಾಘಿಸಿದ್ದಾರೆ[೩೪].

**ಶ್ರೀಕೃಷ್ಣಕ್ಷಿತಿಮಂಡಲೇಶ್ವರ ದಯಾಮೂರ್ತ್ಯಾ ರಮಾವಲ್ಲಭ ।**
**ನ್ಯಸ್ತಸ್ವಾಂತಭುವಾ ಕಲಾಕಮಲಿನೀ ಬಾಲಾತಪಶ್ರೀಮುಷಾ ॥**
**ಶ್ರೀ ಚೆಲ್ವಾಂಬಿಕಯಾ ಮುದಾ ಪರಮಯಾ ಶ್ರೀಕೃಷ್ಣ ಕರ್ಣಾಮೃತ**
**ವ್ಯಾಖ್ಯಾರಂಜಿತ ಸರ್ವಲೋಕಹೃದಯಾ ಕಾರ್ಣಾಟಿಕಾ (ಕ್ರಿಯ) ಕೀರ್ಯತೆ ॥**

ಕೃಷ್ಣರಾಜನ ಕೃಪೆಯಿಂದ ಸುಂದರೆ ಚೆಲ್ವಾಂಬಿಕೆ ಹರುಷದಿಂದ 'ಕೃಷ್ಣ ಕರ್ಣಾಮೃತಕ್ಕೆ ವ್ಯಾಖ್ಯೆಯನ್ನು ಬರೆದ ವಿಷಯ ಈ ಪದ್ಯದಿಂದ ಗೊತ್ತಾಗುತ್ತದೆ. ವ್ಯಾಖ್ಯಾರಂಭದಲ್ಲಿ ಚೆಲ್ವಾಂಬಿಕೆ ತನ್ನ ವಿಷಯವನ್ನು ಹೇಳಿಕೊಂಡು ಗುರುಗಳಿಗೆ ವಂದಿಸಿ ಮುಂದುವರಿಯುತ್ತಾಳೆ.

ದೊರೆತಿರುವ ಈ ಕೃತಿಯ ಅಸಮಗ್ರ ಓಲೆಗರಿಯ ಕೊನೆಯ ಭಾಗದಲ್ಲಿ ಈಶಾನದೇವನ ಚರಣಾಭರಣಗಳ ವರ್ಣನೆ ಕಂಡುಬರುತ್ತದೆ. 'ವ್ಯಾಖ್ಯೆ'ಯೆಂದು ಇದನ್ನು ಕರೆದಿದ್ದರೂ, ವ್ಯಾಖ್ಯೆಯಲ್ಲಿರಬೇಕಾದ ಲಕ್ಷಣ ಇದರಲ್ಲಿಲ್ಲ. ಇದು ಟೀಕೆಮಾತ್ರ' ಎಂದು "ಕೈಬರಹದ ಗ್ರಂಥಗಳ ವರ್ಣನಾತ್ಮಕ ಪಟ್ಟಿ"ಯಲ್ಲಿ ಹೇಳಲಾಗಿದೆ[೩೫].

**ತುಲಾ ಕಾವೇರೀ ಮಹಾತ್ಮ್ಯಂ:** ಇದೊಂದು ಗದ್ಯ ಗ್ರಂಥ. ಇದು ಆಗ್ನೇಯ ಪುರಾಣದಲ್ಲಿ ಉಕ್ತವಾಗಿರುವ ತುಲಾಕಾವೇರಿ ಮಹಾತ್ಮ್ಯಕ್ಕೆ ಬರೆದ ಕನ್ನಡ ವ್ಯಾಖ್ಯಾನವಾಗಿದೆ. ಈ ಗ್ರಂಥಕ್ಕೆ 'ಚೆಲುವಾಂಬಿಕಾ ವಾಣೀ ವಿಲಾಸ' ಎಂಬ ಮತ್ತೊಂದು ಹೆಸರೂ ಇದೆ. ಮೂವತ್ತು ಅಧ್ಯಾಯಗಳಲ್ಲಿ ರಚಿತವಾಗಿರುವ ಈ ಕೃತಿಯಲ್ಲಿ, ಗ್ರಂಥದ ಶೀರ್ಷಿಕೆಯೇ ಸೂಚಿಸುವಂತೆ ಕಾವೇರಿ ನದಿಯ ಮಹತ್ತ್ವ ವಿಶೇಷವಾಗಿ ವರ್ಣಿತವಾಗಿದೆ.

ಈ ಕೃತಿಯ ಅಂತ್ಯದಲ್ಲಿ ದೊರಕಿರುವ ಪದ್ಯವೊಂದು ತಿಳಿಸುವಂತೆ "ಮೌದ್ಗಲ ಗೋತ್ರದ ವೆಂಕಟಾರ್ಯನ ಮಗ ಶ್ರೀನಿವಾಸ ಎಂಬುವನು ಈ ಟೀಕೆಯನ್ನು ಬರದಂತೆ ತೋರುತ್ತದೆ" ಎಂದು ಕವಿಚರಿತೆಕಾರರು ಅಭಿಪ್ರಾಯ ಪಡುತ್ತಾರೆ[೩೬].

**ಮೌದ್ಗಲ್ಯಾನ್ವಯ ದುಗ್ಧ ಸಿಂಧು ರಜನೀಕಾಂತೇನ ಪುಣ್ಯಾತ್ಮನಾ**
**ಶ್ರೀ ವಾಸಾಖ್ಯ ವಿಪಶ್ಚಿತಾಜನಿಜುಷಾ ಶ್ರೀ ವೆಂಕಟಾರ್ಯಾದ್ಭುವಿ**
**ವ್ಯಾಖ್ಯಾನಂ ಚ ತುಲಾಕವೇರನೃಪಜಾ ಲೀಲಾ ಮಹಿಮ್ನಃ ಕೃತಂ**
**ಕರ್ನಾಟೋಕ್ತಿ ಮಯಂ ಪರಂ ವಿಜಯತಾಮಾಸೇತು ಹೇಮಾಚಲಂ**

ಈ ಮೇಲಿನ ಪದ್ಯದಿಂದ, ಚೆಲುವಾಂಬೆಯ ಅಂಕಿತದಲ್ಲಿ ಶ್ರೀನಿವಾಸನೆಂಬುವವನು ಈ ಕೃತಿಯನ್ನು ಬರೆದಂತೆ ತೋರುತ್ತದೆ ಎಂದು ಈ ಕೃತಿಯ ಸಂಪಾದಕರಾದ ಎಂ.ಪಿ.ಮಂಜಪ್ಪಶೆಟ್ಟಿಯವರು ಅಭಿಪ್ರಾಯ ಪಡುತ್ತಾರೆ[೩೭].

ಈ ಕಾವ್ಯದ ಆದಿಯಲ್ಲಿ ಮೈಸೂರಿನ ಅರಸ, ಚೆಲುವಾಂಬೆಯ ಪತಿ, ಕೃಷ್ಣರಾಜನನ್ನು ಸ್ತುತಿಸಿ, ಚೆಲುವಾಂಬೆಯ್ನನು ಕುರಿತು "ಆತನ ಧರ್ಮಕಾಂತೆಯಾಗಿ ಪತಿದೇವತಾ ವ್ರತದಲ್ಲಿ ವಿದೇಹರಾಜನಂದಿನಿಯಾಗಿ, ಭಕ್ತಿಯಲ್ಲಿ ಶಬರಿಯಾಗಿ, ಪಾವನಚರಿತ್ರದಲ್ಲಿ ಭಾಗೀರಥಿಯಾಗಿ, ಆಶ್ರಿತಮನೋರಥವಿತರಣದಲ್ಲಿ ಮಹಾಲಕ್ಷ್ಮಿಯಾಗಿ, ಸೇನಾಧ್ಯಕ್ಷ ಕಳಲೆ ದೊಡ್ಡಮಹಾರಾಜನಿಗೆ ಪೌತ್ರಿಯಾಗಿ, ಕಾಂತಮಹಾರಾಜನಿಗೆ ಪುತ್ರಿಯಾಗಿರುವ ಚೆಲುವಾಂಬಿಕೆಯು ಕರ್ನಾಟಕ ಭಾಷೆಯಿಂದ ವಿರಚಿಸುವ ಆಗ್ನೇಯಪುರಾಣೋಕ್ತವಾದ ತುಲಾಕಾವೇರಿ ಮಹಾತ್ಮ್ಯದ ಅರ್ಥಕ್ಕೆ ಮಂಗಳಮಹಾಶ್ರೀ" ಎಂದು ಕೃತಿ ಆರಂಭವಾಗಿದೆ. ಅಲ್ಲದೆ ಮುಂದಿನ ಪ್ರತೀ ಅಧ್ಯಾಯಗಳು "ಚೆಲುವಾಂಬಿಕೆಯಿಂದ ಕರ್ನಾಟಭಾಷಾ ರೂಪವಾಗಿ ವಿರಚಿತವಾದ ಚೆಲುವಾಂಬಿಕಾ ವಾಣೀವಿಲಾಸವೆಂಬ ಆಗ್ನೇಯಪುರಾಣೋಕ್ತ ತುಲಾಕಾವೇರಿ ಮಹಾತ್ಮ್ಯದಲ್ಲಿ......" ಎಂದು ಮುಕ್ತಾಯವಾಗುತ್ತದೆ. ಈ ಕೃತಿಯ ಎಲ್ಲ ಅಧ್ಯಾಯಾಂತ್ಯಗಳಲ್ಲಿ 'ಚೆಲುವಾಂಬಿಕೆಯಿಂದ ವಿರಚಿತವಾದ' ಎಂಬ ಸ್ಪಷ್ಟ ಉಲ್ಲೇಖಗಳಿವೆ.

'ತುಲಾ ಕಾವೇರೀ ಮಹಾತ್ಮ್ಯಂ' ಕೃತಿಯು ಪೂರ್ಣವಾಗಿ ಗದ್ಯ ರೂಪವಾಗಿದ್ದು, ಆದಿಯಲ್ಲಿ ಮಾತ್ರ ಒಂದು ಸ್ರಗ್ಧರಾವೃತ್ತದ ಪದ್ಯವಿದೆ. ಪ್ರತಿಯೊಂದು ಅಧ್ಯಾಯದ ಅಂತ್ಯದಲ್ಲಿಯೂ ಚೆಲುವಾಂಬೆಯ ಇತಿವೃತ್ತವನ್ನು ಹೇಳಿದೆ. ಗ್ರಂಥದಲ್ಲಿ ಪುನುರುಕ್ತಿಗಳು ವಿಶೇಷವಾಗಿದ್ದು ಭಾಷೆ ಸರಳವಾಗಿದೆ.

**ಕಥಾವಸ್ತು:** ಅಗಸ್ತ್ಯರಿಂದ ಹರಿಶ್ಚಂದ್ರನಿಗೆ ಹೇಳಲಾದ ತುಲಾಕಾವೇರಿ ಮಾಹತ್ಮ್ಯೆಯನ್ನು ಧರ್ಮವರ್ಮನೆಂಬ ಚೋಳರಾಜನಿಗೆ ಆತನ ಗುರು ದಾಲ್ಭ್ಯಮಹಾ ಋಷಿಯು ಹೇಳಿದಂತೆ ಇಲ್ಲಿನ ಕಥೆಗಳು ನಿರೂಪಿತವಾಗಿವೆ. ಕಾವೇರಿ ತೀರ್ಥದ ಮಹಿಮೆಯನ್ನು ಪ್ರಚುರಪಡಿಸುವುದೇ ಈ ಕೃತಿಯ ಉದ್ದೇಶ. ಸಕಲ ಜೀವಜಂತುಗಳೂ, ಎಲ್ಲಾವರ್ಗದವರಿಗೂ ಸುಖಸಂಪದವೂ, ಮೋಕ್ಷಪ್ರದವೂ ಆಗಿ ಕಾವೇರಿಯು ಲೋಕೋದ್ಧಾರ ಗೈಯುತ್ತಿರುವ ವಿಚಾರ ಈ ಕೃತಿಯಲ್ಲಿದೆ. ಜೊತೆಗೆ ಅಗಸ್ತ್ಯರನ್ನು ಮದುವೆಯಾದ ಕವೇರರಾಜನ ಮಗಳು ಕಾವೇರಿಯು ನದಿಯಾಗಿ ಹರಿದ ಕಥೆಯೂ ಇಲ್ಲಿ ಬಣ್ಣಿತವಾಗಿದೆ.

ಕೃತಿಯ ವೈಶಿಷ್ಟ್ಯ: ಈ ಕೃತಿಯ ಗದ್ಯದ ಭಾಷೆಯು ತುಂಬಾ ಸರಳವಾಗಿದೆ. ದೀರ್ಘ ಸಮಾಸಪದ, ಅಲಂಕಾರಗಳಾವುವೂ ಇಲ್ಲಿ ಕಂಡುಬರುವುದಿಲ್ಲ. ಚಲುವಾಂಬೆಯ ಉಳಿದ ಕೃತಿಗಳಲ್ಲಿ ಕಂಡುಬರುವ ನಡುಗನ್ನಡ ಭಾಷಾವೈಶಿಷ್ಟ್ಯ ಈ ಗದ್ಯ ಕೃತಿಯಲ್ಲಿ ಕಾಣಸಿಗುವುದಿಲ್ಲ. ಇಲ್ಲಿನ ಕತೆಯು ಸ್ಪಷ್ಟ, ಸರಳ ನಿರೂಪಣೆಯಿಂದ ಕೂಡಿದೆ. ಬಹುಶಃ ಮೂವತ್ತು ಅಧ್ಯಾಯಗಳಷ್ಟು ದೀರ್ಘ ವಸ್ತುವನ್ನು ಆರಿಸಿಕೊಂಡಿರುವ ಕಾರಣ ಚಲುವಾಂಬೆಯು ವ್ಯಾಖ್ಯಾನವನ್ನು ಚುಟುಕಾಗಿಯೂ, ವೇಗವಾಗಿಯೂ ನಿರೂಪಿಸಿದ್ದಾಳೆ.

ಕಾವೇರೀ ಮಹಾತ್ಮೆಯ ಕುರಿತಾದ ಇನ್ನೂ ಹಲವಾರು ಗ್ರಂಥಗಳು ಕನ್ನಡದಲ್ಲಿ ರಚಿತವಾಗಿವೆಯಾದರೂ, ಈ ಎಲ್ಲ ಗ್ರಂಥಗಳಿಗಿಂತಲೂ ಚೆಲುವಾಂಬೆ ರಚಿಸಿರುವ ಈ 'ತುಲಾಕಾವೇರೀ ಮಹಾತ್ಮ್ಯಂ' ಕೃತಿಯೇ ಪ್ರಾಚೀನವಾದುದಾಗಿದೆ.

೧೭ನೆಯ ಶತಮಾನದಲ್ಲಿ ಪ್ರಚುರವಾಗಿದ್ದ ಶ್ರೀವೈಷ್ಣವಪರ ಭಕ್ತಿಯ ಪ್ರಭಾವ ಚೆಲುವಾಂಬೆಯ ಎಲ್ಲ ಕೃತಿಗಳಲ್ಲಿಯೂ ಕಂಡುಬರುತ್ತದೆ. ಸರಳತೆ ಇವಳ ಕಾವ್ಯದ ಮುಖ್ಯ ಲಕ್ಷಣ. ಪದಗುಚ್ಛಗಳಾಗಲೀ ದೀರ್ಘಸಮಾಸಪದಗಳಾಗಲೀ ಸಂಸ್ಕೃತ ಭೂಯಿಷ್ಠತೆಯಾಗಲೀ ಇವಳ ಕಾವ್ಯಗಳಲ್ಲಿ ಕಾಣುವುದಿಲ್ಲ. ಇವಳು ರಾಣಿಯಾಗಿದ್ದು, ಘನ ಪಂಡಿತರ ನಡುವೆಯಿದ್ದೂ, ತಿಳಿಗನ್ನಡದಲ್ಲಿ ಸಾಮಾನ್ಯರಿಗೂ ಅರ್ಥವಾಗುವ ರೀತಿಯಲ್ಲಿ ಕಾವ್ಯಗಳನ್ನು ರಚಿಸಿರುವುದು ಇವಳ ಅಗ್ಗಳಿಕೆ.

ಇವಳ ಕಾವ್ಯಗಳಲ್ಲಿ ಕಾಣುವ ಮತ್ತೊಂದು ಗುಣ ಅಂಶವೆಂದರೆ ಸಂಕ್ಷಿಪ್ತತೆ. ಸಾಮಾನ್ಯ ಕವಿಯೊಬ್ಬ ನಾಲ್ಕಾರು ಪದ್ಯಗಳಲ್ಲಿ ಹೇಳಬಹುದಾದುದನ್ನು ಇವಳು ಒಂದೆರಡು ಪಾದಗಳಲ್ಲಿ ಹೆಚ್ಚೆಂದರೆ ಒಂದು ಪದ್ಯಗಳಲ್ಲಿ ಹೇಳಿ ಮುಗಿಸಿಬಿಡುತ್ತಾಳೆ.

ಮೈಸೂರು ರಾಜವಂಶದ ಕೆಲವು ಸಂಪ್ರದಾಯಗಳು, ಅರಮನೆಯ ರೀತಿ ರಿವಾಜುಗಳನ್ನು ತಿಳಿದುಕೊಳ್ಳುವುದಕ್ಕೂ ಇವಳ ಕಾವ್ಯಗಳು ಸಹಾಯಕವಾಗಿವೆ. ರಾಜರ ಅಲಂಕಾರಗಳು, ಅವರ ಧರಿಸುತ್ತಿದ್ದ ಉಡುಗೆ ತೊಡುಗೆಗಳು, ಅವರು ಮಕ್ಕಳನ್ನು ಬೆಳೆಸುತತಿದ್ದ ರೀತಿ, ಅವರ ಆಟಪಾಠಗಳು, ಮದುವೆಯ ಸಂಪ್ರದಾಯಗಳು ಮುಂತಾದವುಗಳ ಸಂಕ್ಷಿಪ್ತ ವಿವರಗಳು ಇಲ್ಲಿ ದೊರೆಯುತ್ತವೆ. ಒಟ್ಟಿನಲ್ಲಿ ಚೆಲುವಾಂಬೆಯು ಹದಿನೆಂಟನೆಯ ಶತಮಾನದ ಕನ್ನಡದ ಹೆಮ್ಮೆಯ ಕವಯಿತ್ರಿ. ಇವಳು ದೀರ್ಘಕಾವ್ಯವನ್ನು ರಚಿಸಿರುವ ಹೆಗ್ಗಳಿಕೆಗೆ ಪಾತ್ರಳಾಗಿದ್ದಾಳೆ. ರಾಣಿಯೊಬ್ಬಳು ಇಂಥ ಕಾವ್ಯಗಳನ್ನು ರಚಿಸಿರುವುದು ವಿಶೇಷವಾಗಿದೆ. ಕನ್ನಡ ಸಾಹಿತ್ಯದಲ್ಲಿ ವಿಶೇಷ ಸ್ಥಾನಕ್ಕೆ ಅರ್ಹಳಾದ ಕವಿಯತ್ರಿಯಾಗಿದ್ದಾಳೆ.

**ಸುರಪುರದ ರಾಣಿ ರಂಗಮ್ಮ** (ಕೀರ್ತನೆ)

ಸುರಪುರದ ಮುಮ್ಮಡಿ ವೆಂಕಟಪ್ಪ ನಾಯಕ ಕ್ರಿ.ಶ.೧೮೧೮–೧೮೨೭ ವರೆಗೂ ಈ ಮನೆತನದಲ್ಲಿ ಆಳ್ವಿಕೆ ನಡೆಸಿದ ಅರಸ. ಈತನ ಪಟ್ಟದರಸಿ ರಾಣಿರಂಗಮ್ಮ. ಸುರಪುರದ ಬಳಿಯ ರಂಗಂಪೇಟೆಯು ಕ್ರಿ.ಶ.೧೮೨೨ರಲ್ಲಿ ಇವಳ ಹೆಸರಿನಿಂದಲೇ ಸ್ಥಾಪಿತವಾದುದು. ಇವಳಿಗೆ ಲಕ್ಷ್ಮಿ ಅಥವಾ ಲಕ್ಷ್ಮಮ್ಮಾ ಎಂಬ ಮತ್ತೊಂದು ಹೆಸರೂ ಇದ್ದಂತೆ ತೋರುವುದು.

ತೆಲುಗು ಹಾಗೂ ಕನ್ನಡಭಾಷೆಗಳಲ್ಲಿ ಪ್ರೌಢತ್ವವನ್ನು ಹೊಂದಿದ್ದ ರಾಣಿ ರಂಗಮ್ಮ ಈ ಎರಡೂ ಭಾಷೆಗಳಲ್ಲಿ ಕೀರ್ತನೆಗಳನ್ನು ರಚಿಸಿದ್ದಾಳೆ. ಶೀಲರಂಗಾಂಬ ಎಂಬುದು ಇವಳ ಅಂಕಿತ. ಆದರೆ ಇವಳಿಗೆ ಅಂಕಿತವನ್ನು ನೀಡಿದ ಗುರುಗಳ ಕುರಿತಾಗಲೀ, ಇವಳ ವಿದ್ಯಾಭ್ಯಾಸದ ವಿಚಾರವಾಗಲೀ ತಿಳಿದುಬರುವುದಿಲ್ಲ. ಇವಳ ತವರುಮನೆ ರತ್ನಗಿರಿ ಎಂದು ತಿಳಿದು ಬರುವುದರಿಂದ, ಇವಳ ಬಾಲ್ಯ ವಿದ್ಯಾಭ್ಯಾಸಗಳು ಇಲ್ಲಿಯೇ ನಡೆದಿರಬಹುದು. ಸುರಪುರದ ಅರಸರು ಪೂಜಿಸುವ ವೇಣುಗೋಪಾಲಸ್ವಾಮಿ ದೇವಸ್ಥಾನದಲ್ಲಿ ಶ್ರೀವೈಷ್ಣವ ಪಂಥದ ಪ್ರಕಾರ ಪೂಜಾದಿಗಳು ವಂಶಪಾರಂಪರ್ಯವಾಗಿ ಇಂದಿಗೂ ನಡೆದುಕೊಂಡು ಬಂದಿರುವುದರಿಂದ, ಸುರುಪುರದ ಅರಸು ಮನೆತನದವರಮೇಲೆ ಶ್ರೀವೈಷ್ಣವ ಧರ್ಮದ ಪ್ರಭಾವವನ್ನು ಗುರುತಿಸಬಹುದು. ಇದೇ ಮನೆತನದವಳಾದ ಅರಸಿ ರಂಗಮ್ಮಳ ಮೇಲೆಯೂ ಶ್ರೀವೈಷ್ಣವ ಪ್ರಭಾವ ವಿರುವುದನ್ನು ಅವಳ ಕೀರ್ತನೆಗಳಲ್ಲಿ ಗುರುತಿಸಬಹುದಾಗಿದೆ.

ಸುರಪುರ ಸಂಸ್ಥಾನದ ಬಹುತೇಕ ಅರಸರು ಸಾಹಿತ್ಯ ಪೋಷಣೆಯಲ್ಲಿ ಮುಂದಾಗಿದ್ದರಲ್ಲದೆ ಕೆಲವರು ಸ್ವತಃ ಕವಿಗಳೂ ಆಗಿದ್ದರು. ಅಂತೆಯೇ ಅರಸಿ ರಂಗಮ್ಮನ ಪತಿ ಮುಮ್ಮಡಿ ವೆಂಕಟಪ್ಪ ನಾಯಕ ಕೂಡ ಸಾಹಿತ್ಯಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡುವ ಸಲುವಾಗಿ ವಿಶೇಷ ಸ್ಪರ್ಧೆಯೊಂದನ್ನು ಏರ್ಪಡಿಸಿದ್ದ ಕುರಿತಾಗಿ ಕೈಫಿಯತ್ತಿನಲ್ಲಿ ಮಾಹಿತಿ ದೊರಕುತ್ತದೆ. ಈ ಸಭೆಯಲ್ಲಿ ಪಾಲ್ಗೊಳ್ಳಲು ತಂಜಾವೂರು ಮೊದಲಾದ ಸ್ಥಳಗಳಿಂದ ಪ್ರಸಿದ್ಧ

ವಿದ್ವಾಂಸರು ಬಂದಿದ್ದರು, ಅಲ್ಲದೆ ಹರಪ್ಪನ ಹಳ್ಳಿಯ ಪಾಳೆಯಗಾರನು ಸುರಪುರ ಸಂಸ್ಥಾನದ ವಿದ್ವಾಂಸರುಗಳನ್ನು ಮಣಿಸಲೆಂದು ಬೇರೆಡೆಗಳಿಂದ ಪಂಡಿತರುಗಳನ್ನು ಕರೆದುಕೊಂಡು ಬಂದಿದ್ದು ವಿಶೇಷವಾಗಿ ವರ್ಣಿತವಾಗಿದೆ. ಸಿದ್ಧನ ತೋಟದಲ್ಲಿ ಮೂರು ತಿಂಗಳುಗಳ ಕಾಲ ನಡೆದ ಈ ಸ್ಪರ್ಧೆಯಲ್ಲಿ ಸುರಪುರದ ವಿದ್ವಾಂಸರು ಪ್ರಶಸ್ತಿಗಳನ್ನು ಗೆದ್ದು, ತಮ್ಮನಾಡಿಗೆ ಗೌರವ ತಂದುಕೊಟ್ಟಿದ್ದಾರೆ[೩೮]. ಈ ಪ್ರಕರಣವು ಸುರಪುರ ಸಂಸ್ಥಾನ ಸಾಹಿತ್ಯ ಹಾಗೂ ಸಾಂಸ್ಕೃತಿಕ ವಲಯಕ್ಕೆ ನೀಡುತ್ತಿದ್ದ ಪ್ರೋತ್ಸಾಹದ ವಿಚಾರವನ್ನು ತಿಳಿಸುತ್ತದೆ. ಅಲ್ಲದೆ ಈ ಘಟನೆಯು ಅರಸಿ ರಂಗಮ್ಮನ ಕಾಲದಲ್ಲಿ ನಡೆದುದಾಗಿದೆ. ಈ ಕಾರ್ಯಕ್ಕಾಗಿ ಮೂರು ಲಕ್ಷ ಹಣ ಖರ್ಚಾಯಿತೆಂದು ಅರಮನೆಯ ಲೆಕ್ಕಪತ್ರದಿಂದ ತಿಳಿದು ಬರುತ್ತದೆ.

ಅರಸಿ ರಂಗಮ್ಮಳು ತಿರುಪತಿಯ ವೆಂಕಟರಮಣನ ಅನನ್ಯಯ ಭಕ್ತೆ. ತಿರುಪತಿ ತಿಮ್ಮಪ್ಪ ಈ ಮನೆತನದವರ ಕನಸಿನಲ್ಲಿ ಕಾಣಿಸಿಕೊಂಡು ನೀವು ನನ್ನ ದರ್ಶನಕ್ಕೆ ತಿರುಪತಿಗೆ ಬರುವುದು ಬೇಡ ನಾನೇ ನಿಮ್ಮ ಸಂಸ್ಥಾನದಲ್ಲಿ ನೆಲೆ ನಿಲ್ಲುವೆ ಎಂದುಹೇಳಿ, ಸುರಪುರದ ಬಳಿಯ ವಾಗಣಗೆರೆ ಕೋಟೆಯಲ್ಲಿರುವ ಕಲ್ಲಿನ ಗವಿಯಲ್ಲಿ ವೇಣುಗೋಪಾಲಸ್ವಾಮಿಯಾಗಿ ನೆಲೆನಿಂತನೆಂಬ ಐತಿಹ್ಯವಿದೆ. ಸುರಪುರದಲ್ಲಿ ನೆಲೆಗೊಂಡಿರುವ ಸತ್ಯಭಾಮಾ ರುಕ್ಮಿಣಿ ಸಹಿತ ಶ್ರೀ ವೇಣುಗೋಪಾಲಸ್ವಾಮಿಯು ತಿರುಪತಿ ತಿಮ್ಮಪ್ಪನ ಬಾಲ್ಯಾವತಾರ ಎಂಬುದು ಇಲ್ಲಿನವರ ನಂಬಿಕೆ. ಇದನ್ನು ರಂಗಮ್ಮಳ ಕೀರ್ತನೆಗಳಲ್ಲಿ ಕಾಣಬಹುದು.

ಅರಸಿ ರಂಗಮ್ಮನ ಕಾಲದಲ್ಲಿ ಈ ಮನೆತನದವರು, ಮೂರು ವರ್ಷಕ್ಕೊಮ್ಮೆ ರೇಷ್ಮೆಯ ನವಾರ (ಮಂಚಕ್ಕೆ ಉಪಯೋಗಿಸುವ ಪಟ್ಟಿ) ವನ್ನು ತಿರುಪತಿಗೆ ಕಳಿಸುವ ಸಂಪ್ರದಾಯ ನಡೆಸುತ್ತಿದ್ದು, ಇಂದಿಗೂ ಮುಂದುವರೆಸಲಾಗುತ್ತಿದೆ. ತಿರುಪತಿಯಲ್ಲಿ ನಡೆಯುವ ಬ್ರಹ್ಮರಥೋತ್ಸವದಲ್ಲಿ ಸುರಪುರದ ಅರಮನೆಯಿಂದ ಉಡಿಯಕ್ಕಿ ಬಾಗಿನವನ್ನು ಕೊಟ್ಟು ಪ್ರಥಮ ಪೂಜೆಯನ್ನು ಈ ಮನೆತನದ ಪ್ರತಿನಿಧಿಗಳು ನಡೆಸಿದ ನಂತರವೇ ಕಲ್ಯಾಣೋತ್ಸವಕ್ಕೆ ಚಾಲನೆ ದೊರಕುತ್ತದೆ. ಇಂದಿಗೂ ನಡೆದುಕೊಂಡು ಬಂದಿರುವ ಈ ಪದ್ಧತಿಯ ನಂತರ, ಸುರಪುರದ ಆರತಿ ಎಂಬ ದೊಡ್ಡ ಘೋಷಣೆಯೊಂದಿಗೆ ಮಂಗಳಾರತಿ ಮಾಡಲಾಗುತ್ತದೆ[೩೯].

**ರಂಗಮ್ಮನ ರಚನೆಗಳು**

**ಶ್ರೀ ಸುರಪುರೀಶ ಶ್ರೀಶ ಪೋಷಿಸು**
**ಶ್ರೀ ಸುರಪುರೀಶ**

**ಕುಂಜರಪಾಲನೆ ಕಂಜವಿಲೋಚನ**
**ಕುಂಜಿತ ಸದ್ಗುಣ ಕುಂಜ ವಿಜಯನು ॥೧॥**

**ಗೋವರ್ಧನಧರ ಗೋವರ್ಧನನುತ**
**ಗೋಧರ ಗೋಧರ ಗೋಪ ಗೋಪಿಸುತ ॥೨॥**

**ಶೀಲರಂಗಾಂಬ ಬಾಲಕೃಷ್ಣೇಂದ್ರ**
**ಬಾಲಗೋಪಾಲ ಕರುಣಾ ಪಾಲನು ॥೩॥**
**ಮಂಗಲವೆನ್ನಿರೆ ಮಾಧವಗೀಗ ಶೃಂಗಾರದಿ ಶ್ರೀ**
**ಅಂಗಜಪಿತಗೆ ಅಂಬುಜಾಕ್ಷಗೆ ಸಂಭ್ರಮದಿಂದಲಿ**

**ಯದುಕುಲ ತಿಲಕಗೆ, ಮಥುರಾನಾಥಗೆ**
**ಮಾವನ ವೈರಿಗೆ, ಶ್ರೀ ರಘುರಾಮಗೆ**

ಕೃಷ್ಣನ ಬಾಲ ಲೀಲೆಗಳನ್ನು ಬಣ್ಣಿಸುವ, ಆತನ ಮಹಿಮೆಯನ್ನು ಹೊಗಳುವ ಕೀರ್ತನೆಗಳು, ಮಂಗಳಾರತಿ ಪದ, ಇವಳ ರಚನೆಗಳಲ್ಲಿ ಹೆಚ್ಚಾಗಿ ಕಾಣಬಹುದು. ಇವಳ ಕೃತಿಗಳೆಲ್ಲಾ ಭಕ್ತಿಪ್ರಧಾನ ಕೀರ್ತನೆಗಳೇ ಆಗಿವೆ.

ದೊರಕಿರುವ ಇವಳ ಕೃತಿಗಳೆಲ್ಲಾ ವೆಂಕಟೇಶ್ವರ, ಕೃಷ್ಣ, ಗೋಪಾಲನ ಕುರಿತಾದ ವಿಷ್ಣುಸ್ತುತಿಗಳೇ ಆಗಿವೆ. ಇವಳು ಅಂಕಿತವನ್ನು ಪಡೆದು ಕೀರ್ತನೆಗಳನ್ನು ರಚಿಸಿರುವುದರಿಂದ ಇವಳ ಕೀರ್ತನೆಗಳನ್ನು ಹರಿದಾಸ ಸಾಹಿತ್ಯಕ್ಕೆ ಸೇರಿಸಬಹುದಾಗಿದೆ. ಇವಳ ತೆಲುಗು ರಚನೆಗಳಲ್ಲಿಯೂ ರಂಗಮಾಂಬ ಎಂಬ ಇವಳ ಅಂಕಿತವನ್ನು ಗಮನಿಸಬಹುದು.

**ಮಂಗಳಮನಿ ಪಾಡರೆ ಅಂಗನುಲಾರ**
**ರಂಗುಗನು ಸುರಪುರ ಮುನೇಲಿನ**
**ಕುರಂಗ ಲೋಚನುಡೈನ ಮನಶ್ರೀ**
**ರಂಗಮಾಂಬನು ಬ್ರೋಚು ಗರುಡ**
**ತುರಂಗುಡೌ ಗೋಪಾಲ ಸ್ವಾಮಿಕಿ**

**ಕರಿರಾಜ ವರದುನಕು, ಕರುಣಾ ಸಾಗರುಡನ ಬಿರುದನಕು**
**ಸರಸ ಕೌಲಿಕ ಕಂಠಿ ಚಾಮರ ಮುಲಿಚ್ಚಿನ ರಂಗಮಾಂಬನು**
**ತಿರುಪತೀ ಶುಂಡಗುಚು ಬ್ರೋಚಿನ, ಮುರಲಿಧರುನ ಕುದುದಿತಕ**
**ಹರುನಕು ಮಂಗಳ ಮನಿ**

ಸುರಪುರ ಸಂಸ್ಥಾನದ ಅರಸರಿಗೆ ಗೋಸಲ ವಂಶದವರೆಂದು ಕರೆಯುವ ರೂಢಿಯಿದೆ. ಗೋವುಗಳನ್ನು ಸಲಹುತ್ತಿದ್ದುದರಿಂದ ಇವರಿಗೆ ಈ ಹೆಸರು ಬಂದಿದೆ ಯೆಂಬುದು ಇವರ ಕುರಿತಾದ ಕೈಫಿಯತ್ತುಗಳಿಂದ ತಿಳಿದು ಬರುತ್ತದೆ ಇದನ್ನು ರಂಗಮ್ಮನ ಕೀರ್ತನೆಗಳಲ್ಲಿಯೂ ಕಾಣಬಹುದು

**ಗೋಸಲವಂಶಾಧೀಶರ ಪಾಲಿಪ**
**ಶ್ರೀಸುರಪುರದೊಳ್ ವೇಣುಗೋಪಾಲಗೆ..**

ದಾಸಸಾಹಿತ್ಯದ ಇತರ ಕೀರ್ತನೆಗಳಂತೆ ಸರಳ ಭಾಷೆ ಇವಳ ಕೀರ್ತನೆಗಳಲ್ಲಿಯೂ ಕಂಡುಬರುತ್ತವೆ. ಜೊತೆಗೆ ಇವಳ ಸಂಸ್ಕೃತ ಪಾಂಡಿತ್ಯ ಪ್ರಕಟಿಸುವ ಕೀರ್ತನೆಗಳು ಇವಳ ಭಾಷಾ ಪ್ರಾವೀಣ್ಯವನ್ನು ತಿಳಿಸುತ್ತವೆ. "ನಂದಗೋಪಸುತಾಯ ನವನೀತ ಚೋರಾಯ" ಎಂದು ಆರಂಭವಾಗುವ ಮಂಗಳಾರತಿ ಪದವು ಸಂಪೂರ್ಣ ಸಂಸ್ಕೃತದಲ್ಲಿಯೇ ರಚಿತವಾಗಿರುವುದನ್ನಿಲ್ಲಿ ಗಮನಿಸಬಹುದು.

**ಭವಕಾಯ ಪ್ರಹತ ನತ ವಿಪದಾಯ**
**ಪಲ್ಲವೀರಾಜಾಯ ವಾಮನಾಯ**
**ಮಲ್ಲ ವಿಧ್ವಂಸಾಯ, ಮರ್ದಿತ ಕಂಸಾಯ**
**ಸಲ್ಲಲಿತ ಹೃದಯಾಯ ಮಂಗಲಂ – ನಿತ್ಯ ಶುಭಮಂಗಲಂ॥**

**ಗರುಡ ತುರಂಗಾಯ ಕರುಣಾಂತರಂಗಾಯ**
**ದ್ರುಪದಪುತ್ರಿ ಮಾನ ರಕ್ಷಕಾಯ**
**ನೀರದ ನಿಭಾಂಗಾಯ ನಿಹತ ಸಾರಂಗಾಯ**
**ಸೂರಿಜನ ಸಂಗಾಯ ಮಂಗಲಂ ನಿತ್ಯ ಶುಭಮಂಗಲಂ ॥**

ಹೀಗೆ ಕನ್ನಡ, ತೆಲುಗು, ಸಂಸ್ಕೃತ ಭಾಷೆಗಳಲ್ಲಿ ಪಾಂಡಿತ್ಯ ಪಡೆದು ಕೀರ್ತನೆಗಳನ್ನು ರಚಿಸಿ, ಸಾಹಿತ್ಯಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡಿರುವ ಅರಸಿ ರಂಗಮ್ಮಳ ಕೀರ್ತನೆಗಳು ಸಮಗ್ರವಾಗಿ ಸಂಗ್ರಹಗೊಂಡು ಒಂದೆಡೆ ಪ್ರಕಟವಾಗುವ ಕಾರ್ಯ ನಡೆಯಬೇಕಿದೆ.

ಪ್ರಸಿದ್ಧ ಸಂಸ್ಥಾನ ಒಂದರ ಅರಸಿಯಾಗಿದ್ದು, ಹಲವಾರು ಪ್ರೌಢ ರಚನೆಗಳನ್ನು ಮಾಡಿರುವ ಈ ಕವಯತ್ರಿಯ ಕುರಿತಾದ ವಿಚಾರ ಈ ವರೆಗಿನ ಯಾವುದೇ ಸಾಹಿತ್ಯ ಚರಿತ್ರೆಗಳಲ್ಲಿ ಉಲ್ಲೇಖ ವಿಲ್ಲದಿರುವುದು ಆಶ್ಚರ್ಯ

ಮೂಡಿಸುತ್ತದೆ. ಜೊತೆಗೆ ಈ ವರೆಗೂ ಹಲವಾರು ಕೀರ್ತನ ಸಂಪುಟಗಳು ಪ್ರಕಟವಾಗಿವೆಯಾದರೂ, ಇವಳ ರಚನೆಯೊಂದೂ ಇದರಲ್ಲಿ ಸೇರ್ಪಡೆಯಾಗದಿರುವುದು ಈ ಕವಯತ್ರಿಗೆಸಗಿದ ಅಪಚಾರವಾಗಿದೆ.

**ಅಧ್ಯಯನದ ಫಲಿತ**

ಕನ್ನಡ ಸಾಹಿತ್ಯಕ್ಕೆ ಅರಸಿಯರ ಕೊಡುಗೆಯನ್ನು ಒಟ್ಟಾಗಿ ಗಮನಿಸಿದಾಗ, ಅರಸಿಯರು ರಚಿಸಿರುವ ಸಾಹಿತ್ಯ ಸಂಖ್ಯೆಯಲ್ಲಿ ಬಹಳ ಕಡಿಮೆ ಎನಿಸುತ್ತದೆ. ಆದರೆ, ಕನ್ನಡದ ಎಲ್ಲ ಪ್ರಕಾರಗಳಲ್ಲಿಯೂ ಇವರ ರಚನೆಗಳು ಕಂಡುಬರುತ್ತವೆ. ಅಲ್ಲದೆ ಎಲ್ಲ ಕಾಲದಲ್ಲಿಯೂ ಅರಸಿಯರ ಸಾಹಿತ್ಯಿಕ ಕೊಡುಗೆ ಕಂಡುಬರುತ್ತವೆ. ವಚನ, ಚಂಪು, ಸಾಂಗತ್ಯ, ಚೌಪದಿ, ಗದ್ಯ, ಕೀರ್ತನೆ ಈ ಎಲ್ಲ ಪ್ರಕಾರಗಳಲ್ಲಿಯೂ, ಜೈನ, ವೀರಶೈವ, ವೈಷ್ಣವ ಧರ್ಮದ ಧಾರ್ಮಿಕ ಆಶಯ ಹೊಂದಿರುವ ಕೃತಿಗಳನ್ನು ಅರಸಿಯರು ರಚಿಸಿದ್ದಾರೆ. ಆಶ್ಚರ್ಯವೆಂದರೆ ಈ ಎಲ್ಲ ಕೃತಿಗಳೂ ಭಕ್ತಿಗೆ ಪ್ರಾಧಾನ್ಯತೆ ನೀಡಿರುವ ಕೃತಿಗಳಾಗಿವೆ. ಅರಸಿಯರಿಗಿರುತ್ತಿದ್ದ ಸಾಹಿತ್ಯಿಕ ಜ್ಞಾನ, ಭಾಷಾ ಪ್ರೌಢಿಮೆ, ವಿದ್ಯಾಭ್ಯಾಸ, ಧಾರ್ಮಿಕ ಸ್ವಾತಂತ್ರ, ಮೊದಲಾದವುಗಳನ್ನು ಅರಸಿಯರು ರಚಿಸಿರುವ ಸಾಹಿತ್ಯ ಕೃತಿಗಳಲ್ಲಿ ಗುರುತಿಸಬಹುದು. ಜೊತೆಗೆ ಅಂದಿನ ಸಾಮಾಜಿಕ ಸ್ಥಿತಿಗತಿಗಳ ಮೇಲೆ ಈ ಕೃತಿಗಳು ಬೆಳಕು ಚೆಲ್ಲುತ್ತವೆ.

ಈ ಅಧ್ಯಾಯದಲ್ಲಿ ಸಾಹಿತ್ಯ ಚರಿತ್ರೆಗಳಲ್ಲಿ ಉಕ್ತವಾಗಿರದ ಜಕ್ಕಲಾಂಬೆ ಹಾಗೂ ಸುರಪುರದ ರಾಣಿ ರಂಗಾಂಬೆಯ ಕುರಿತಾದ ಮಾಹಿತಿಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಜಕ್ಕಲಾಂಬೆಯ ಕುರಿತಾದ ಮಾಹಿತಿಗೆ ಏಕೈಕ ಆಕರವೆನಿಸಿದ ಶಿಕಾರಿಪುರದ ಶಾಸನವನ್ನು ಅಧ್ಯಯನಕ್ಕೆ ಬಳಸಿಕೊಂಡು ಅಲ್ಲಿ ಜಕ್ಕಲಾಂಬೆಯ ಕುರಿತಾದ ಮಾಹಿತಿಗಳನ್ನು ವಿಶ್ಲೇಷಿಸಲಾಗಿದೆ. ಈ ವರೆಗೂ ಅಜ್ಞಾತ ಕವಯತ್ರಿಯಾಗಿದ್ದ 'ಶ್ರೀಮತಿ'ಯ ಜೀವನದ ಮೇಲೆ ಬೆಳಕು ಚೆಲ್ಲುವ ಕಾರ್ಯ ಈ ಅಧ್ಯಯನದಲ್ಲಿ ನಡೆದಿದೆ. ಶ್ರೀಮತಿಯನ್ನು ಹೆಸರಿಸಿರುವ ಜಯಚಂದ್ರ ಹಾಗೂ ಕಮಲಾ ಹಂಪನಾ ಅವರು ಭಾವಿಸಿರುವಂತೆ ಜಕ್ಕಲಾಂಬೆ ಹಾಗೂ ಶ್ರೀಮತಿಯರು ಒಬ್ಬಳೇ ಆಗಿರದೆ ಈ ಇಬ್ಬರೂ ಭಿನ್ನರೆನ್ನುವ ವಿಚಾರ ಹಾಗೂ ಶ್ರೀಮತಿಯ ಕುರಿತಾದ ಸಮಗ್ರ ವಿಚಾರವು 'ವಿಜಯಕುಮಾರಿ ಚರಿತೆ' ಕಾವ್ಯದಲ್ಲಿ ಉಕ್ತವಾಗಿರುವುದರ ಕುರಿತಾಗಿ ಈ ಅಧ್ಯಯನದಲ್ಲಿ ಮೊದಲಬಾರಿಗೆ ಪ್ರತಿಪಾದಿಸಲಾಗಿದೆ.

ಸಾಹಿತ್ಯ ಚರಿತ್ರೆಗಳಲ್ಲಿ ಹೆಸರಿಸದ ಅರಸಿ ರಂಗಮ್ಮಳ ಕುರಿತಾದ ಲಭ್ಯಮಾಹಿತಿಗಳನ್ನು ದಾಖಲಿಸುವ ಪ್ರಯತ್ನ ಇಲ್ಲಿ ನಡೆಸಲಾಗಿದೆ ಜೊತೆಗೆ ಅರಸಿ ರಚಿಸಿರುವ ಕೆಲವು ಕೀರ್ತನೆಗಳನ್ನು ಸಂಗ್ರಹಿಸುವ ಕಾರ್ಯವನ್ನೂ ನಡೆಸಲಾಗಿದೆ.

**ಆಕರ ಗ್ರಂಥಗಳು ಹಾಗೂ ಟಿಪ್ಪಣಿಗಳು**

೧. E.C ಸಂ.X ಮುಳಬಾಗಿಲು, ೩೮

೨. E.C. ಸಂ XI. ಬೇವಿನಹಳ್ಳಿ ೭೪

೩. SII ಸಂ.XX, ೨೩ ದೇವೂರು (ತಾ) ಸಿಂದಗಿ

೪. SII ಸಂ IX-I, ೧೩೪ ನಂದಿಕೋಟಕೂರು

೫. SII ಸಂ XX, ೪೯, ಹಾನಗಲ್ಲ

೬. ಎ.ಕ.೧೦ (ಪರಿ) ಅ.ಕೆ.ಶಾ.ಸಂ.೩೨೧ ಕಾಟಿಕೆರೆ (ಕ್ರಿ.ಶ.೧೧೦೦)

೭. E.C. ಸಂ.xii ನಂ ೨೩ ಶಿರಾ

೮. ನರಸಿಂಹಶಾಸ್ತ್ರಿ.ಕೆ.ಎಲ್., ೧೯೮೦, ***ಆದಿಪುರಾಣಂ: ಗದ್ಯಾನುವಾದ***, ಕಸಾಪ, ಬೆಂಗಳೂರು

೯. ನರಸಿಂಹಾಚಾರ್.ಆರ್., ೨೦೧೧, ***ಕರ್ನಾಟಕ ಕವಿಚರಿತೆ*** ಸಂಪುಟ–೧, ಕಸಾಪ, ಬೆಂಗಳೂರು, ಪು.೪೬೫

೧೦. ***ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ***, ಸಂ.೪, ಮೈಸೂರು ವಿವಿ, ಮೈಸೂರು
೧೧. ಕುಶಾಲಪ್ಪ ಗೌಡ.ಕೆ (ಅನು)., ೨೦೧೧, ***ಮಧುರಾವಿಜಯಂ*** ಕನ್ನಡ ವಿಶ್ವವಿದ್ಯಾಲಯ, ಹಂಪಿ
೧೨. ಚಂಪಾಬಾಯಿ.ಡಿ.(ಸಂ), ೧೯೯೯, ಸಂಚಿಹೊನ್ನಮ್ಮ, ***ಹದಿಬದೆಯಧರ್ಮ***, ಪ್ರಸಾರಾಂಗ, ಮೈಸೂರು ವಿವಿ.
೧೩. ವೀರಣ್ಣ ರಾಜೂರ (ಸಂ), ೧೯೯೩, ಪ್ರಸ್ತಾವನೆ, ***ಶಿವಶರಣೆಯರ ವಚನಸಂಪುಟ,*** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ಪು.೧೫
೧೪. ದೇವೀರಪ್ಪ.ಎಚ್ (ಸಂ) ೧೯೭೩, ***ಹರಿಹರ ವಿರಚಿತ ಉಡುತಡಿಯ ಮಹಾದೇವಿಯರ ರಗಳೆ***, ಶಿವಕುಮಾರ ಪ್ರಕಾಶನ, ಬೆಂಗಳೂರು
೧೫. ***ಕನ್ನಡ ಸಾಹಿತ್ಯ ಚರಿತ್ರೆ***–೪, ೧೯೭೭, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಪು ೬೫೪
೧೬. ನಾಗಭೂಷಣ.ಸಿ, ೧೯೯೯, ***ಕನ್ನಡ ಸಾಹಿತ್ಯ ಸಂಸ್ಕೃತಿ ಶೋಧನೆ***, ಸಂಡೂರು, ಪು.೨೩೦
೧೭. ಶ್ಯಾಮಲ.ಸಿ.ಆರ್., ೨೦೦೮, ***ಪೂರ್ವಕರ್ನಾಟಕದ ಪಾಳೆಯಗಾರರು ಒಂದು ಅಧ್ಯಯನ***, ಕಸಾಪ, ಬೆಂ ಪು.೨೧೩
೧೮. ವೀರಣ್ಣ ರಾಜೂರ (ಸಂ), ೧೯೯೩, ಶಿವಶರಣೆಯರ ವಚನಸಂಪುಟ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂ
೧೯. ವೀರಣ್ಣ ರಾಜೂರ, ಪೂರ್ವೋಕ್ತ
೨೦. SII Vol VII No 202
೨೧. ಕಮಲಾ ಹಂಪನಾ, ೨೦೦೮, ***ನಾಗಲದೇವಿ,*** ಕನ್ನಡ ಸಾಹಿತ್ಯ ಚರಿತ್ರೆ, ಮೈಸೂರು ವಿಶ್ವವಿದ್ಯಾನಿಲಯ, ಪು.೩೩೩
೨೨. ಕಮಲಾ ಹಂಪನಾ, ೨೦೦೪, ಮುನ್ನುಡಿ–***ಷೋಡಶಭಾವನಾ ಕಾವ್ಯ,*** ಜೈನ ಅಧ್ಯಯನ ಸಂಸ್ಥೆ, ಶ್ರವಣಬೆಳಗೊಳ,
೨೩. E.C. ಸಂ VII ಶಿಕಾರಿಪುರ ೧೯೬
೨೪. ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
೨೫. ಕಮಲಾ ಹಂಪನಾ, ೨೦೦೩, ***ಬೊಗಸೆ (ಮಹಿಳೆ ಸುತ್ತ–ಮುತ್ತ)***, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು. ಪು.೯೨
೨೬. ಭೋಜರಾಜ ಪಾಟೀಲ, ೨೦೦೧, ***ಬಂದಳಿಕೆಯ ಅರಸರು,*** ಮಲೆಕರ್ನಾಟಕದ ಅರಸುಮನೆತನಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೯೧
೨೭. ಕಮಲಾ ಹಂಪನಾ, ಪೂರ್ವೋಕ್ತ
೨೮. ಭಾನುಮತಿ.ವೈ.ಸಿ., ೧೯೮೧, ***ವಿಜಯಕುಮಾರಿ ಚರಿತೆ***, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿವಿ, ಪು.೪೨
೨೯. ಸಣ್ಣಯ್ಯ.ಬಿ.ಎಸ್., ೨೦೦೨, ***ಪ್ರಾಚೀನ ಕನ್ನಡ ಗ್ರಂಥ ಸಂಪಾದನೆ***, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು
೩೦. ಮಂಜಪ್ಪಶೆಟ್ಟಿ, (ಸಂ) ೧೯೮೪, ***ಚೆಲುವಾಂಬೆ ಕೃತಿಗಳು,*** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿವಿ. ಮೈಸೂರು.
೩೧. ಸರೋಜಿನಿ ಮಹಿಷಿ, ೧೯೬೫, ***ಕರ್ನಾಟಕದ ಕವಯಿತ್ರಿಯರು,*** ಕ.ಸ.ಸಾಹಿತ್ಯಸಂಘ, ಧಾರವಾಡ, ಪು.೨೧೭
೩೨. ಮಂಜಪ್ಪಶೆಟ್ಟಿ.ಎಂ.ಪಿ., ೧೯೯೨, ***ಕನ್ನಡ ಛಂದಸ್ಸಿನ ಚರಿತ್ರೆ***, ಕನ್ನಡ ಅಧ್ಯಯನ ಸಂಸ್ಥೆ, ಸಂಪುಟ ೧, ಪು.೬೨೭
೩೩. ಸರೋಜಿನಿ ಮಹಿಷಿ, ಪೂರ್ವೋಕ್ತ, ಪು.೨೨೪
೩೪. ಸರೋಜಿನಿ ಮಹಿಷಿ ಪೂರ್ವೋಕ್ತ, ಪು.೨೨೪
೩೫. A Descriptive Catalogue of the Kanarese Manuscripts In the Government Oriental Manuscripts Library, Madras, Vol-4 1946, pg.948-949
೩೬. ನರಸಿಂಹಾಚಾರ್.ಆರ್., ಪೂರ್ವೋಕ್ತ, ಸಂಪುಟ–೩, ಪು.೨೫
೩೭. ಮಂಜಪ್ಪಶೆಟ್ಟಿ, ಪೂರ್ವೋಕ್ತ, ಪು.೪೩
೩೮. ಕಪಟರಾಳ ಕೃಷ್ಣರಾಯರು, ೨೦೦೯, ***ಸುರಪುರ ಸಂಸ್ಥಾನದ ಇತಿಹಾಸ***, ಅನಂತ ಪ್ರಕಾಶನ, ಪು.೧೫೦
೩೯. ಅಮರೇಶ ಯತಗಲ್, ***ಸುರಪುರ ಸಂಸ್ಥಾನದ ರಾಣಿಯರು***, ಇತಿಹಾಸ ದರ್ಶನ ಸಂ.೨೬, ಪು.೩೩೨

# ಅಧ್ಯಾಯ – ೮

## ಕರ್ನಾಟಕದ ಅರಸಿಯರು ರಚಿಸಿರುವ ಸಂಸ್ಕೃತ ಸಾಹಿತ್ಯ

ಕನ್ನಡದ ಪ್ರಾಚೀನಕವಿಗಳೆಲ್ಲ ಉಭಯಭಾಷಾ ಪಂಡಿತರಾಗಿರುತ್ತಿದ್ದರು. ತಮ್ಮ ಪಾಂಡಿತ್ಯವನ್ನು ತೋರಿಸಿಕೊಳ್ಳಲು ಕಾವ್ಯಗಳಲ್ಲಿ ಸಮಾಸಭೂಯಿಷ್ಠ ಪದಗಳನ್ನು ಬಳಸಿ, ಸಂಸ್ಕೃತ ಪದಗಳಿಂದ ಕೂಡಿದ ವೃತ್ತಗಳನ್ನು ತಮ್ಮ ಕನ್ನಡ ಕಾವ್ಯಗಳಲ್ಲಿ ಅಲ್ಲಲ್ಲಿ ತಂದಿರುವುದನ್ನು ಕಾಣುತ್ತೇವೆ. ದೇಸಿಯಷ್ಟೇ ಸುಲಲಿತವಾಗಿ ಮಾರ್ಗವನ್ನೂ ಬಳಸಿರುವ ಕನ್ನಡ ಕವಿಗಳ ಕವಿತಾ ಸಾಮರ್ಥ್ಯವನ್ನು ಆದಿಕವಿ ಪಂಪನ ಕಾಲದಿಂದಲೂ ಗುರುತಿಸುತ್ತೇವೆ. ಅಂದಿನ ವಿದ್ಯಾಭ್ಯಾಸ ಪದ್ಧತಿಯಲ್ಲಿಯೂ ಕೂಡ ಸಂಸ್ಕೃತಭಾಷೆಗೆ ಹೆಚ್ಚಿನ ಪ್ರಾಮುಖ್ಯತೆ ಇತ್ತೆನ್ನುವುದಕ್ಕೆ ಘಟಿಕಾಸ್ಥಾನಗಳಲ್ಲಿನ ಶಾಸನಗಳು ಆಧಾರ ಒದಗಿಸುತ್ತವೆ.

ಕರ್ನಾಟಕದ ಅರಸಿಯರು ಕೂಡ ಬಹುಭಾಷಾ ವಿದ್ವಾಂಸರಾಗಿದ್ದರು. ಕನ್ನಡದಲ್ಲಿ ಇವರ ರಚನೆಗಳಿರುವಂತೆ, ಕನ್ನಡದ ಅರಸಿಯರು ಸಂಸ್ಕೃತದಲ್ಲಿಯೂ ಕೆಲವು ರಚನೆಗಳನ್ನು ಮಾಡಿದ್ದಾರೆ. ವಿದ್ವಾಂಸರಿಂದ ಹೊಗಳಿಕೆ, ಮೆಚ್ಚುಗೆ ಪಡೆದಂತಹ ಕೃತಿಗಳನ್ನು ರಚಿಸಿರುವ ಕರ್ನಾಟಕದ ಅರಸಿಯರು ಉನ್ನತ ಮಟ್ಟದ ವಿದ್ಯಾಭ್ಯಾಸವನ್ನು ಹೊಂದಿರುತ್ತಿದ್ದರೆಂಬುದನ್ನು ಹಿಂದಿನ ಅಧ್ಯಾಯದಲ್ಲಿ ಗಮನಿಸಲಾಗಿದೆ. ಅರಸಿಯರ ಸಂಸ್ಕೃತ ಸಾಹಿತ್ಯ ರಚನೆಗಳು ಕ್ರಿ.ಶ.೭ನೆಯ ಶತಮಾನದಿಂದಲೇ ಕಂಡುಬರುತ್ತವೆ. ಮುಕ್ತಕಗಳು, ನಾಟಕ, ಐತಿಹಾಸಿಕ ಕಾವ್ಯ ಮೊದಲಾದ ಪ್ರಕಾರಗಳಲ್ಲಿ ಅರಸಿಯರು ತಮ್ಮ ಕೊಡುಗೆಗಳನ್ನು ನೀಡಿರುವುದನ್ನಿಲ್ಲಿ ಗಮನಿಸಬಹುದು. ಲಭ್ಯವಿರುವ ಅರಸಿಯರ ಕೃತಿಗಳಲ್ಲಿ ಸಂಸ್ಕೃತ ರಚನೆಗಳೆ ಪ್ರಾಚೀನವೆನಿಸಿವೆ. ಹತ್ತನೆಯ ಶತಮಾನದ ಪ್ರಸಿದ್ಧ ಕವಿ ಹಾಗೂ ಲಾಕ್ಷಣಿಕ ರಾಜಶೇಖರ ಕನ್ನಡಿಗರ ಉಚ್ಚರಣೆ ಠೇಂಕಾರದಿಂದ ಕೂಡಿರುತ್ತದೆ ಎಂದು ವಿಮರ್ಶಾತ್ಮಕವಾಗಿ ಹೇಳಿದ್ದಾನೆ. ಈ ಕಾಲದ ಕನ್ನಡಿಗರ ಪಾಂಡಿತ್ಯ ದೇಶದಲ್ಲಿಯೇ ಪ್ರಸಿದ್ಧವಾಗಿತ್ತೆನ್ನುವುದನ್ನು ಗಮನಿಸಬಹುದು. ಅಲ್ಲದೆ ವಿಜ್ಜಿಕಾ ಅಥವಾ ವಿಜಯಭಟ್ಟಾರಿಕಾ ಎಂಬ ಅರಸಿ ರಾಜಶೇಖರನಿಂದ ಹೊಗಳಿಕೆಗೆ ಪಾತ್ರಳಾದ ಕನ್ನಡತಿಯಾಗಿದ್ದಾಳೆ. ಎಂಟನೆಯ ಶತಮಾನದಲ್ಲಿದ್ದ ವಿಜ್ಜಿಕಾಳನ್ನು ಹತ್ತನೆಯ ಶತಮಾನದ ಉತ್ತರ ಭಾರತದ ಪ್ರಸಿದ್ಧ ಲಾಕ್ಷಣಿಕನಿಂದ ಸ್ತುತಿಸಲ್ಪಟ್ಟಿರುವುದು, ವಿಜ್ಜಿಕಾಳ ಸಾಹಿತ್ಯ ಹಾಗೂ ಕೀರ್ತಿ ಈ ಕಾಲದಲ್ಲಿ ಹೇಗೆ ಪಸರಿಸಿತ್ತೆನ್ನುವುದನ್ನು ತಿಳಿಸುತ್ತದೆ.

ವಿಜ್ಜಿಕಾಳಂತೆಯೇ ಇವಳ ನಂತರದ ಕಾಲದಲ್ಲಿದ್ದ ಎಂಟನೆಯ ಶತಮಾನದ ರಾಷ್ಟ್ರಕೂಟ ಅರಸಿ ಶೀಲಭಟ್ಟಾರಿಕೆಯನ್ನು ಲಾಕ್ಷಣಿಕ ಜಲ್ಹಣ ಬಾಣನಿಗೆ ಹೋಲಿಸಿದ್ದಾನೆ. ಸಂಸ್ಕೃತದಲ್ಲಿ ಪದ್ಯಗಳನ್ನು ರಚಿಸಿದ ಕನ್ನಡದ ಕವಯತ್ರಿಯರು ಕಾಳಿದಾಸ, ಬಾಣರ ಸಾಲಿನಲ್ಲಿ ನಿಲ್ಲಬಲ್ಲರೆಂಬ ಪ್ರಶಂಸೆಯನ್ನು ಪಡೆದು, ಹತ್ತನೆಯ ಶತಮಾನಕ್ಕೂ ಪೂರ್ವದಲ್ಲಿಯೇ ಕನ್ನಡನಾಡಿನ ಕೀರ್ತಿಯನ್ನು ಭಾರತದಾದ್ಯಂತ ಹರಡಿದ ವಿಷಯ ಹೆಮ್ಮೆ ಎನಿಸದಿರದು.

ಪ್ರಾಚೀನ ಭಾರತದಲ್ಲಿ ಸಂಸ್ಕೃತ ಕವಿಯತ್ರಿಯರು ಬೆರಳೆಣಿಕೆಯಷ್ಟು ಕಂಡುಬರುತ್ತಾರೆ. ಅವರಲ್ಲಿ ಕರ್ನಾಟಕದಲ್ಲಿನ ಮಹಿಳೆಯರೇ ಹೆಚ್ಚು ಗುರುತಿಸಲ್ಪಟ್ಟಿರುವುದೊಂದು ನಮ್ಮ ನಾಡಿನ ಹೆಗ್ಗಳಿಕೆಯಾಗಿದೆ. ಕನ್ನಡನಾಡಿನ ಅರಸಿಯರು ಎಲ್ಲ ಪ್ರಕಾರಗಳಲ್ಲಿಯೂ ಸಾಹಿತ್ಯವನ್ನು ರಚಿಸಿರುವುದೊಂದು ವಿಶೇಷವೆನಿಸುತ್ತದೆ. ಸಂಸ್ಕೃತ ಮುಕ್ತಕಗಳು, ನಾಟಕ, ಐತಿಹಾಸಿಕ ಕಾವ್ಯ, ಚಂಪೂ ಕಾವ್ಯ, ಅಷ್ಟಕ, ಪಂಚಕ ಹೀಗೆ ನಾನಾ ಪ್ರಕಾರಗಳನ್ನು ಇವರ ಕಾವ್ಯಗಳಲ್ಲಿ ಗುರುತಿಸಬಹುದು.

ಈ ಅಧ್ಯಾಯದಲ್ಲಿ ಅರಸಿಯರು ರಚಿಸಿರುವ ಸಾಹಿತ್ಯಗಳನ್ನು ಮುಕ್ತಕಗಳು, ನಾಟಕ, ಕಾವ್ಯ ಎಂಬ ಪ್ರಕಾರದ ಅಡಿಯಲ್ಲಿ ವಿಭಾಗಿಸಿಕೊಂಡು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅರಸಿ ವಿಜ್ಜಿಕಾಳ ರಚನೆಯಲ್ಲಿ ಮುಕ್ತಕಗಳು

ಹಾಗೂ ನಾಟಕ ಎರಡೂ ಪ್ರಕಾರಗಳೂ ಕಂಡುಬರುತ್ತದೆ. ಕವಯತ್ರಿ ಒಬ್ಬಳೇ ಆದರೂ ಇವಳ ಕೃತಿಗಳನ್ನು ಪ್ರತ್ಯೇಕವಾಗಿ ವಿಭಿನ್ನ ಪ್ರಕಾರದ ವಿಭಾಗಗಳಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ಸಂಸ್ಕೃತ ಮುಕ್ತಕಗಳು**

ಸಂಸ್ಕೃತದಲ್ಲಿ ಗೀತಕಾವ್ಯವು ಮುಕ್ತಕ ಮತ್ತು ಪ್ರಬಂಧ ಎರಡೂ ಪ್ರಕಾರಗಳಿಂದ ಉಪಲಬ್ಧವಾಗುತ್ತದೆ. ವರ್ಣ್ಯ ವಿಷಯಕ ವೈಚಿತ್ರ್ಯದಿಂದ ಗೀತಕಾವ್ಯಗಳು ಕಾವ್ಯ(ಮುಕ್ತಕ)ದ ಅನೇಕ ಪ್ರಕಾರಗಳನ್ನು ಸಂಸ್ಕೃತ ಸಾಹಿತ್ಯದಲ್ಲಿ ನೋಡಬಹುದಾಗಿದೆ. "ಸೌಂದರ್ಯದ ಬಾಹ್ಯ ಉಪಕರಣಗಳಿಂದ ಮುಕ್ತವಾಗಿ ಸ್ವಯಂ ರಸಪೇಶಲವಾಗುವುದು ಮುಕ್ತದ ಮುಖ್ಯ ಲಕ್ಷಣ"[೧]. ಸಂಸ್ಕೃತ ಸಾಹಿತ್ಯದಲ್ಲಿ ಹೆಚ್ಚಾಗಿ ಕಂಡುಬರುವುದು ಶೃಂಗಾರಮಯವಾದ ಮುಕ್ತಕಗಳು. ಇವುಗಳಲ್ಲಿ ಪ್ರಕೃತಿ ಮತ್ತು ಶೃಂಗಾರದ ಎರಡೂ ಚಿತ್ರಣಗಳನ್ನೂ ಗುರುತಿಸಬಹುದು. ಪ್ರಕೃತಿ ವರ್ಣನೆಯಲ್ಲಿ ಸೂರ್ಯೋದಯ, ಮಳೆ, ಚಂದ್ರೋದಯ, ಪರ್ವತ, ನದಿ ಮೊದಲಾದವುಗಳ ಬಣ್ಣನೆ ಕಂಡುಬಂದರೆ, ಶೃಂಗಾರ ಮುಕ್ತಕಗಳಲ್ಲಿ ಶೃಂಗಾರಿಕ ಸ್ಥಿತಿಗಳ ಹಾಗೂ ಭಾವಗಳ ಸೂಕ್ಷ್ಮ ಚಿತ್ರಣವಿರುತ್ತದೆ. ಶೃಂಗಾರದ ಭಿನ್ನ ಅವಸ್ಥೆಯ ಮಾರ್ಮಿಕ ಚಿತ್ರಣವು ಈ ಕಾವ್ಯದ ಮಹತಿ ವಿಶೇಷತೆಯಾಗಿರುತ್ತದೆ.

ಗೀತಕಾವ್ಯದ ಅನ್ಯ ಪ್ರಕಾರಗಳಲ್ಲಿ ಸ್ತೋತ್ರ ಮತ್ತು ಧಾರ್ಮಿಕ ಮುಕ್ತಕಗಳೂ ದೊರೆಯುತ್ತವೆ. ಇವುಗಳಲ್ಲಿ ದೇವತೆಗಳ ಕಾರ್ಯಗಳ, ಶಕ್ತಿಗಳ ಮತ್ತ ಕರುಣಾದಿಗಳ ಚಿತ್ರಣವಿರುತ್ತದೆ. ಗೀತಿ ಮುಕ್ತಕಗಳಲ್ಲಿ ಸದಾಚಾರ, ರಾಜನೀತಿ, ಪಾರಂಪರಿಕ ವ್ಯವಹಾರ, ಧರ್ಮ ಮತ್ತು ದರ್ಶನಾದಿಗಳ ಮೇಲೆ ಉಪದೇಶಾತ್ಮಕ ವಾಕ್ಯಗಳಿರುತ್ತವೆ.

ಕರ್ನಾಟಕದ ಅರಸಿಯರು ರಚಿಸಿರುವ ಮುಕ್ತಕಗಳು ಇಲ್ಲಿ ಸೂಚಿಸಿರುವ ಮೊದಲನೆಯ ಪ್ರಕಾರದ ಮುಕ್ತಕಗಳಾಗಿವೆ. ಇವುಗಳಲ್ಲಿ ಪ್ರಕೃತಿ ಮತ್ತು ಶೃಂಗಾರದ ಎರಡೂ ಚಿತ್ರಣಗಳು ಚಿತ್ರಿತವಾಗಿರುವುದನ್ನು ಕಾಣುತ್ತೇವೆ.

**ವಿಜ್ಜಿಕಾ, (ವಿಜಯಭಟ್ಟಾರಿಕಾ)**

ಬಾದಾಮಿ ಚಲುಕ್ಯ ಅರಸಿ ವಿಜಯಭಟ್ಟಾರಿಕಾ ಸಂಸ್ಕೃತ ಸಾಹಿತ್ಯಕ್ಕೆ ಮಹತ್ವದ ಕೊಡುಗೆಯನ್ನು ನೀಡಿ, ಅದ್ವಿತೀಯ ಸಂಸ್ಕೃತ ಕವಯತ್ರಿ ಎನಿಸಿದ್ದಾಳೆ. ಹತ್ತನೆಯ ಶತಮಾನದ ಪೂರ್ವದಲ್ಲಿದ್ದ ಕೆಲವೇ ಕವಯತ್ರಿಯರಲ್ಲಿ ಪ್ರಮುಖಸ್ಥಾನಗಳಿಸಿದ ಇವಳು ಪ್ರಸಿದ್ಧ ಪ್ರಾಚೀನ ಕವಿ, ವಿದ್ವಾಂಸರುಗಳಿಂದ ಪ್ರಶಂಸೆಗಳಿಸಿದ್ದಾಳೆ. ಸಂಸ್ಕೃತದಲ್ಲಿ ಹಲವಾರು ಮುಕ್ತಕಗಳನ್ನು ರಚಿಸಿರುವುದಲ್ಲದೆ 'ಕೌಮುದೀ ಮಹೋತ್ಸವ' ಎಂಬ ನಾಟಕವನ್ನೂ ರಚಿಸಿದ್ದಾಳೆ.

ಇವಳ ರಚನಾಶೈಲಿ, ಪ್ರೌಡಿಮೆಗಳನ್ನು ಹೊಗಳಿರುವ ಹತ್ತನೆಯ ಶತಮಾನದ ರಾಜಶೇಖರನು ಇವಳ ವೈದರ್ಭೀರೀತಿಯನ್ನು ಕಾಳಿದಾಸನ ಶೈಲಿಗೆ ಹೋಲಿಸಿದ್ದಾನೆ.

**ಸರಸ್ವತೀ ವ ಕರ್ಣಾಟೀ ವಿಜಯಾಂಕಾ ಜಯತ್ಯಸೌ**
**ಯಾ ವೈದರ್ಭಗಿರಾವಾಸಮ್ ಕಾಳಿದಾಸಾದನಂತರಮ್ ॥**[೨]

ಕಾಳಿದಾಸನ ನಂತರ ವೈದರ್ಭಿ ಶೈಲಿಯನ್ನು ಯಶಸ್ವಿಯಾಗಿ ರೂಢಿಸಿಕೊಂಡ ಕವಯತ್ರಿ ಎಂಬ ಹೆಗ್ಗಳಿಕೆಗೆ ಪಾತ್ರಳಾದವಳು. ಕಾಳಿದಾಸನ ನಂತರದ ಸ್ಥಾನವನ್ನು ಮಹಿಳೆಯೋರ್ವಳು ಪಡೆದುಕೊಂಡು ಮುಕ್ತಕಂಠದಿಂದ ಹೊಗಳಿಸಿಕೊಂಡಿರುವುದು ಇವಳ ವಿದ್ವತ್ತು, ಕಾವ್ಯರಚನಾ ಸಾಮರ್ಥ್ಯವನ್ನು ಕುರಿತು ಹೇಳುತ್ತದೆ.

ಇವಳನ್ನು ವಿಜಯಾ, ವಿಜ್ಜಿಕಾ, ವಿಜಯಭಟ್ಟಾರಿಕಾ, ವಿದ್ಯಾ, ಎಂಬ ವಿವಿಧ ಹೆಸರಿನಿಂದ ಕರೆಯಲಾಗಿದೆ. ಪ್ರಾಚೀನ ಸುಭಾಷಿತ ಸಂಗ್ರಹಕಾರರು ವಿಜ್ಜಿಕಾ ಎಂದು ಉಲ್ಲೇಖಿಸಿದರೆ, ರಾಜಶೇಖರನು ಈಕೆಯ ಹೆಸರನ್ನು 'ವಿಜಯಾ'

ಎಂದು ಬಳಸಿದ್ದಾನೆ. ವಿಜ್ಜಿಕಾ ಎಂಬುದನ್ನು ಸಂಸ್ಕೃತಕ್ಕೆ ರೂಪಾಂತರಿಸಿರುವುದು ಈ ಬದಲಾವಣೆಗೆ ಕಾರಣವೆಂದು ಪ್ರೊ.ಕಾಣೆಯವರು ಅಭಿಪ್ರಾಯಪಡುತ್ತಾರೆ[೩]. ಆದರೆ, ಸದುಕ್ತಿ ಕರ್ಣಾಮೃತದಲ್ಲಿ ಶ್ರೀಧರದಾಸನು ಇವಳನ್ನು ವಿದ್ಯಾ ಎಂದು ಕರೆದಿರುವುದನ್ನು ಡಾ.ರಾಘವನ್ ಅವರು ಸಂಸ್ಕೃತ ಕವಿ–ಕಾವ್ಯ ದರ್ಶನದಲ್ಲಿ, ಪ್ರಾಕೃತ ಪದವಾದ 'ವಿಜ್ಜಿಕಾ'ಎಂಬುದರ ಸಂಸ್ಕೃತರೂಪ ವಿದ್ಯಾ ಎಂಬುದಾಗಿರುವುದರಿಂದ ಶ್ರೀಧರದಾಸನು ಈ ಹೆಸರನ್ನು ಬಳಸಿರಬಹುದು ಎಂದು ಅಭಿಪ್ರಾಯ ಪಟ್ಟಿದ್ದಾರೆ. ಅಲ್ಲದೆ ಇವಳ ಶ್ರೇಷ್ಠಕಾವ್ಯ ಪ್ರತಿಭೆಯನ್ನು ಸೂಚಿಸುವುದು ಕೂಡ ವಿದ್ಯಾ ಎಂದು ಸಂಬೋಧಿಸುವುದಕ್ಕೆ ಕಾರಣವಾಗಿದೆ ಎಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಇಲ್ಲಿ ಕವಯತ್ರಿಯ ಹೆಸರು ಭಿನ್ನವಾಗಿ ಗುರುತಿಸಿರುವುದು ಪ್ರಾದೇಶಿಕ ಭಿನ್ನತೆಯಿಂದ ಎಂಬುದು ಗಮನಾರ್ಹ. ಏನೇ ಆದರು ಪ್ರಶಂಸೆ ಸಂದಿರುವುದು ಮಾತ್ರ ವಿಜ್ಜಿಕಾಳ ಕೃತಿಗೆ ಮಾತ್ರವೇ.

**ಕಾಲ – ದೇಶ**

ವಿಜ್ಜಿಕಾ ಎಂದೇ ಪ್ರಸಿದ್ಧಳಾದ ವಿಜಯಭಟ್ಟಾರಿಕೆಯು ಕರ್ನಾಟಕದ ಅರಸು ಮನೆತನದವಳು ಎಂಬುದು ನಿರ್ವಿವಾದವಾಗಿದೆ. ಇವಳನ್ನು ಉಲ್ಲೇಖಿಸಿರುವ ರಾಜಶೇಖರ ಕಾರ್ನಾಟೀ ವಿಜಯಾ ಎಂದು ಕರೆದಿದ್ದಾನೆ[೪] ಅಲ್ಲದೆ, ಸ್ವತಃ ಈಕೆಯೇ ತನ್ನನ್ನು ಕರ್ನಾಟರಾಜಪ್ರಿಯಾ ಎಂದು ಕರೆದುಕೊಂಡಿದ್ದಾಳೆ.

ಇವಳ ಪದ್ಯಗಳನ್ನು ಹಲವಾರು ಲಾಕ್ಷಣಿಕರು, ಸುಭಾಷಿತ ಸಂಗ್ರಹಕಾರರು ತಮ್ಮ ಗ್ರಂಥಗಳಲ್ಲಿ ಉದಾಹರಿಸಿದ್ದಾರೆ. ಅವರಲ್ಲಿ ಪ್ರಾಚೀನನೆನಿಸಿದ ಮುಕುಲಭಟ್ಟನ ಕಾಲ ಕ್ರಿ.ಶ.೭೧೦–೭೫೦ ಎಂದು ನಿರ್ಧರಿಸಿರುವುದರಿಂದ ವಿಜ್ಜಿಕಾ ಈತನಿಗಿಂತಲೂ ಪೂರ್ವದಲ್ಲಿದ್ದಳೆನ್ನುವುದು ದೃಢಪಡುತ್ತದೆ. ದಂಡಿಯ ಪದ್ಯಕ್ಕೆ ಈಕೆ ಸವಾಲೆಸೆಯುವಂತೆ ಪದ್ಯಗಳನ್ನು ರಚಿಸಿರುವುದರಿಂದ ದಂಡಿಗಿಂತ ಈಚಿನವಳು ಅಥವಾ ದಂಡಿಯ ಕಿರಿಯ ಸಮಕಾಲೀನಳೆಂದು ತರ್ಕಿಸಬಹುದು.

ಬಾದಾಮಿ ಚಲುಕ್ಯ ಅರಸಿಯಾದ ಇವಳು ಎರಡು ತಾಮ್ರಪಟಗಳನ್ನು ಹೊರಡಿಸಿದ್ದು, ಅವುಗಳಲ್ಲಿ ಒಂದಾದ ನೇರೂರು ತಾಮ್ರಪಟವು ಕಾಲನಮೂದಿತ ಶಾಸನವಾಗಿದೆ. ಅದರಲ್ಲಿ ನಮೂದಾಗಿರುವ ಶಕವರ್ಷವು ಕ್ರಿ.ಶ.೬೫೯ಕ್ಕೆ ಸಮವಾಗುವುದರಿಂದ, ಇವಳ ಕಾಲವು ೭ನೆಯ ಶತಮಾನ ಎಂಬ ಖಚಿತ ತೀರ್ಮಾನಕ್ಕೆ ಬರಲು ಸಾಧ್ಯವಾಗಿದೆ.

**ರಾಜ್ಯಾಡಳಿತ:** ಇಮ್ಮಡಿ ಪುಲಿಕೇಶಿಯ ಮಗ ಚಂದ್ರಾದಿತ್ಯನ ಮಡದಿಯಾದ **ವಿಜಯ ಭಟ್ಟಾರಿಕೆ**ಯು ತನ್ನ ಪತಿಯ ಆಳ್ವಿಕೆಯಲ್ಲಿಯೇ ರಾಜ್ಯಾಡಳಿತ ನಿರ್ವಹಿಸುತ್ತಿದ್ದಳೆಂದು ತಿಳಿದು ಬರುತ್ತದೆ. ಈಕೆಯು ತನ್ನ ಪತಿಯ ಮರಣಾನಂತರ, ಆತನ ತಮ್ಮ ವಿಕ್ರಮಾದಿತ್ಯನ ಆಳ್ವಿಕೆಯಲ್ಲಿಯೂ ಈಗಿನ ಸಾವಂತವಾಡಿ ಪ್ರದೇಶವನ್ನು ಮಾಂಡಳಿಕಳಾಗಿ ರಾಜ್ಯಭಾರ ನಡೆಸಿರುವ ವಿಚಾರ ಶಾಸನಗಳಿಂದ ಸ್ಪಷ್ಟವಾಗಿದೆ.

ವಿಜಯಭಟ್ಟಾರಿಕೆಯು, ವೈಶಾಖ ಶುದ್ಧ ದ್ವಾದಶಿಯ ದಿನದಲ್ಲಿ ವತ್ಸಗೋತ್ರದ ಬ್ರಾಹ್ಮಣನಿಗೆ ವಾಕುಲಕಚ್ಛಕ್ಷೇತ್ರದ ಕೊಚ್ಚೂರಕ (ಕೋಚ್ರೆ – ರತ್ನಾಗಿರಿ ಜಿಲ್ಲೆ) ಎಂಬ ಗ್ರಾಮವನ್ನು ದಾನವಾಗಿ ಕೊಟ್ಟಿರುವುದನ್ನು ತಿಳಿಸುವ ಶಾಸನವೊಂದು ಚಂದ್ರಾದಿತ್ಯನ ಕಾಲಕ್ಕೆ ಸೇರಿದುದಾಗಿದೆ. ಇದರಲ್ಲಿ ವಿಕ್ರಮಾದಿತ್ಯನ ಶೌರ್ಯ ಸಾಹಸಗಳನ್ನು ಹೇಳಿದ ಮೇಲೆ ಅವನ ಅಣ್ಣನಾದ ಮಹಾರಾಜಾಧಿರಾಜ ಚಂದ್ರಾದಿತ್ಯನ ಹೆಂಡತಿ ವಿಜಯ ಮಹಾದೇವಿಯೆಂದು ಬರೆಯಲಾಗಿದೆ.

ಪತಿಯ ಮರಣಾನಂತರ ಸ್ವತಂತ್ರ ಆಳ್ವಿಕೆ ನಡೆಸಿದ್ದಳೆನ್ನುವುದನ್ನು ತಿಳಿಸುವ[೫] ತಾಮ್ರಪಟದಲ್ಲಿ **"**ಸ್ವರಾಜ್ಯ ಪಂಚಮ ಸಂವತ್ಸರ**"** ಎಂದು ಇವಳ ಆಡಳಿತವನ್ನು ಕುರಿತು ಹೇಳಿದೆ. ಈ ತಾಮ್ರಶಾಸನವು ನೇರೂರು (ಸಾವಂತವಾಡಿ ಸಂಸ್ಥಾನ) ವಿಜಯಭಟ್ಟಾರಿಕೆ ಸ್ವರಾಜ್ಯ ಐದನೆಯ ವರ್ಷದ ಆಶ್ವಯುಜ, ಶುದ್ಧ ಬಿದಿಗೆ ವಿಷುವದಲ್ಲಿ ಆಯಸ್ವಾಮಿ

ದೀಕ್ಷಿತನಿಗೆ ತರಕಾಗ್ರಾಹಾರ ಗ್ರಾಮದಲ್ಲಿ ಭೂಮಿಯನ್ನು ಕೊಟ್ಟಂತೆ ಹೇಳಿದೆ. ಇದು ಸೆಪ್ಟೆಂಬರ್ ೨೩, ಕ್ರಿ.ಶ.೬೫೯ಕ್ಕೆ ಸರಿಹೊಂದುತ್ತದೆ. ಈ ನೇರೂರು, ಕೋಚ್ರೇಂ ತಾಮ್ರಶಾಸನಗಳು ವಿಜಯಭಟ್ಟಾರಿಕೆಯ ಆಳ್ವಿಕೆಯನ್ನು ಕುರಿತು ತಿಳಿಸುತ್ತದೆ[೬].

ಈ ಕೋಚ್ರೆ ತಾಮ್ರ ಶಾಸನದಲ್ಲಿ "ಚಂದ್ರಾದಿತ್ಯ ಪ್ರಿಥಿವೀವಲ್ಲಭ ಮಹಾರಾಜಾಧಿರಾಜಸ್ಯ ಪ್ರಿಯಮಹಿಷಿ ಕಲಿಕಾಲ ಪ್ರತಿಪಕ್ಷ ಭೂತಾ ಶ್ರೀವಿಜಯ ಮಹಾದೇವಿ ಬೊಡ್ಡಿ ಪೊದ್ದಿ ಸರ್ವಾನಾ ಜ್ಞಾಪಯತಿ"[೭] ಎಂದು ಹೇಳಿರುವುದರಿಂದ ಈತನ 'ಪ್ರಿಯ ಮಹಿಷಿಯಾಗಿದ್ದ ವಿಜಯ ಭಟ್ಟಾರಿಕೆಯು ಬೊಡ್ಡಿ ಪೊದ್ದಿ ವಂಶದವಳಾಗಿರಬೇಕು. 'ಬೊಡ್ಡಿ' ಪೊದ್ದಿ'ಗಳು ಆ ಕಾಲದ ಸೂಳೆಯರ ಕುಲನಾಮಗಳಾಗಿರುವುದರಿಂದ ವಿಜಯಭಟ್ಟಾರಿಕೆಯು ವೇಶ್ಯೆ ವಂಶದವಳಾಗಿರುವ ಸಾಧ್ಯತೆಗಳಿವೆ[೮]. ಅಂದಿನ ಸಮಾಜದಲ್ಲಿ ವೇಶ್ಯೆಯರಿಗಿದ್ದ ಸ್ಥಾನಮಾನಗಳು, ರಾಜಮನ್ನಣೆಗಳು ಹಿರಿದಾಗಿದ್ದು, ಇವರು ವಿದ್ಯಾವಂತೆಯರಾಗಿರುತ್ತಿದ್ದರಲ್ಲದೆ, ಸಮಾಜಮುಖಿ ಕೆಲಸಗಳನ್ನು ನಿರ್ವಹಿಸುತ್ತಿದ್ದುದಕ್ಕೆ ಹಲವಾರು ನಿದರ್ಶನಗಳು ದೊರಕುತ್ತದೆ. ಅಲ್ಲದೆ ಬಾದಾಮಿ ಚಲುಕ್ಯರ ಮನೆತನದ ದೊರೆ ವಿಜಯಾದಿತ್ಯನ ಅರಸಿ ವಿನಾಪೋಟಿ ಎಂಬುವವಳೂ ಕೂಡ ವೇಶ್ಯಾ ಕುಲದವಳಾಗಿದ್ದಾಳೆ ಎನ್ನುವುದನ್ನು ಸ್ಮರಿಸಬಹುದು. ಅಂದಿನ ಅರಸು ಮನೆತನದವರು ವೇಶ್ಯಾಕುಲದವರೊಡನೆ ವೈವಾಹಿಕ ಸಂಬಂಧಗಳನ್ನು ನಡೆಸುತ್ತಿದ್ದರು.

ವಿಜ್ಜಿಕಾ, ತನ್ನನ್ನು 'ನೀಲೋತ್ಪಲದಂಶ್ಯಾಮಾಂ ವಿಜ್ಜಿಕಾಂ' ಎಂದು ಕರೆದುಕೊಂಡಿದ್ದಾಳೆ. ತನ್ನದು ಕಪ್ಪುಬಣ್ಣದವಳೆಂದು ಹೇಳಿಕೊಳ್ಳಲು ಅಂಜದ ವಿಜ್ಜಿಕಾ, ತಾನು ಶಾಮಲವರ್ಣದ ಸರಸ್ವತಿ ಎಂದು ಹೇಳುವ ದಿಟ್ಟತನ ತೋರಿದ್ದಾಳೆ. ಹೀಗೆ ಸ್ವತಃ ಕವಯತ್ರಿಯೇ ತನ್ನ ವ್ಯಕ್ತಿತ್ವವನ್ನು ತಿಳಿಸಿದ್ದಾಳೆ.

**ಮಾಧುರ್ಯವ್ಯಂಜಕೈರ್ವರ್ಣೈಃ ರಚನಾ ಲಲಿತಾತ್ಮಿಕಾ।**
**ನಾತಿಧೀರ್ಘಸಮಾಸಾ ಚ ವೈದರ್ಭೀ ರೀತಿರಿಷ್ಯತೇ** ॥ ಎಂಬುದು ವೈದರ್ಭಿರೀತಿಯ ಲಕ್ಷಣವಾಗಿದೆ, ಇಂತಹ ಲಲಿತವಾದ ರಚನಾಬಂಧ ಹಾಗೂ ಮಾಧೂರ್ಯದಿಂದ ಕೂಡಿದ ವೈದರ್ಭರೀತಿಯಲ್ಲಿ ಸಿದ್ಧಹಸ್ತಳಾಗಿದ್ದಳೆಂಬುದು ವಿಜ್ಜಿಕೆಯ ಹಿರಿಮೆಯಾಗಿತ್ತು. ಇವಳಿಗೆ ತನ್ನ ಪಾಂಡಿತ್ಯವನ್ನು ಕುರಿತಂತೆ ಅಪಾರ ಹೆಮ್ಮೆ, ಆತ್ಮವಿಶ್ವಾಸ ವಿದ್ದುದರಿಂದಲೇ ತನ್ನನ್ನು ಸರಸ್ವತಿಗೆ ಹೋಲಿಸಿಕೊಂಡಿದ್ದಾಳೆ.

**ಚತುರ್ಮುಖಮುಖಾಂಭೋಜವನ ಹಂಸವಧೂರ್ಮಮ।**
**ಮಾನಸೇ ರಮತಾಂ ನಿತ್ಯಾಂ ಸರ್ವಶುಕ್ಲಾ ಸರಸ್ವತೀ॥** ಎಂಬ ಕಾವ್ಯಾದರ್ಶದಲ್ಲಿನ ದಂಡಿಯ ಪ್ರಥಮ ಶ್ಲೋಕಕ್ಕೆ ವಿಜಯಭಟ್ಟಾರಿಕೆಯು ಈ ರೀತಿ ಉತ್ತರಿಸಿದ್ದಾಳೆ –

**ನೀಲೋತ್ಪಲದಲಶ್ಯಾಮಾಂ ವಿಜ್ಜಿಕಾಂ ಮಾಮಜಾನತಾ।**
**ವೃಥೈವ ದಂಡಿನಾ ಪ್ರೋಕ್ತಾ ಸರ್ವಶುಕ್ಲಾ ಸರಸ್ವತೀ** ॥ ಶ್ಯಾಮಲವರ್ಣದ ವಿಜ್ಜಿಕೆಯನ್ನರಿಯದೆಯೇ, ದಂಡಿಯು ಸರಸ್ವತಿಯು ಗೌರವರ್ಣದವಳೆಂದು ಸುಮ್ಮನೆ ವರ್ಣಿಸಿದ್ದಾನೆ. ತಾನೇ ಸರಸ್ವತಿಯ ಅವತಾರವೆಂಬ ಸ್ವಪ್ರಶಂಸೆ! ಮಾಡಿಕೊಂಡಿರುವ ಇವಳ ಧೈರ್ಯವನ್ನೂ ವಿದ್ವಾಂಸರು ಮೆಚ್ಚಿದ್ದಾರೆ. ಇದು ಅತಿಶಯೋಕ್ತಿಯಲ್ಲ ಎನ್ನುವುದು ಮುಂದಿನ ಕೆಲವು ಶಾಸ್ತ್ರಕಾರರೂ, ಲಾಕ್ಷಣಿಕರೂ ಇವಳನ್ನು ಹೊಗಳಿರುವ ಶ್ಲೋಕಗಳಿಂದ ತಿಳಿದುಬರುತ್ತದೆ.

ವಿಜ್ಜಿಕಾಳ ಮತ್ತೊಂದು ಪದ್ಯ ಈ ಪ್ರಕಾರವಾಗಿದೆ.

**ಏಕೋಽಭೂತ್ ನಲಿನಾತ್ ತತಶ್ಚ ಪುನಿನಾತ್ ವಲ್ಮೀಕತಶ್ಚಾಪರಃ**
**ತೇ ಸರ್ವೇ ಭವಂತಿ ಕವಯಸ್ತೇಭ್ಯೋ ನಮಸ್ಕುರ್ಮಹೆ ॥**
**ಅರ್ವಾಂಚೋ ಯದಿ ಗದ್ಯಪದ್ಯರಚನೈಶ್ಚೇತಶ್ಚಮತ್ಕುರ್ವತೆ ।**
**ತೇಷಾಂ ಮೂರ್ಧ್ನಿ ದದಾಮಿ ವಾಮಚರಣಂ ಕರ್ಣಾಟರಾಜಪ್ರಿಯಾ ॥**

**"ಕಮಲದಿಂದ ಹುಟ್ಟಿದ ಬ್ರಹ್ಮ, ಮಳಲಿನಿಂದ ಹುಟ್ಟಿದ ವ್ಯಾಸ, ಹುತ್ತದಿಂದ ಹುಟ್ಟಿದ ವಾಲ್ಮೀಕಿ ಇವರೇ ಕವಿಗಳು! ಅವರಿಗೆ ನಮ್ಮ ವಂದನೆ; ಉಳಿದವರು ಗದ್ಯ-ಪದ್ಯ ರಚನಾ ಚಾತುರ್ಯವನ್ನು ತೋರಿಸಹೋದರೆ ಕರ್ಣಾಟಕರಾಜಪ್ರಿಯೆಯಾದ ನಾನು ಅವರ ತಲೆಯ ಮೇಲೆ ಎಡಗಾಲನ್ನಿರಿಸುತ್ತೇನೆ"** ಎಂಬ ಈ ಮಾತು ನಿಂದೆಯಂತೆ ಕಂಡರೂ ಅನ್ವಯಭೇದದಿಂದ ವರ್ಣನೆಯೂ ಆಗಿದೆ. **'ತೇಷಾಮ್ ಮೂರ್ಧ್ನಿ'** ಎಂಬಲ್ಲಿ ತೇಷಾಮ್ ವಾಮಚರಣಂ ಮೂರ್ಧ್ನಿ ದದಾಮಿ ಎಂದು ಅನ್ವಯ ಮಾಡಿಕೊಂಡರೆ, ಈಗಿನವರಾರಾದರೂ ಗದ್ಯಪದ್ಯವನ್ನು ರಚಿಸುವ ಚಾತುರ್ಯವನ್ನು ತೋರಿಸಿದರೆ ಅವರ ಎಡಗಾಲನ್ನು ಕರ್ನಾಟಕ ರಾಜಪ್ರಿಯೆ ನಾನು ತಲೆಯಮೇಲಿಟ್ಟುಕೊಳ್ಳುವೆ – ಎಂದರ್ಥವಾಗುವುದು[೯].

ವಿಜ್ಜಿಕಾಳ ಈ ಹೇಳಿಕೆಯೂ ಕೂಡ ದಂಡಿಯನ್ನೇ ಕುರಿತದ್ದು ಎಂಬುದು ಹಲವರ ಅಭಿಮತ. ದಂಡಿಯು ಇವಳ ಹಿರಿಯ ಸಮಕಾಲೀನನಾಗಿದ್ದಾನೆ. ದಾಕ್ಷಿಣಾತ್ಯನೇ ಆಗಿದ್ದ ದಂಡಿಯು, ಇವಳ ಕಾಲದಲ್ಲಿ ಬಾದಾಮಿ ಚಳುಕ್ಯರ ರಾಜಕೀಯ ಶತ್ರುಗಳೆನಿಸಿದ್ದ ಪಲ್ಲವ ದೊರೆ ನರಸಿಂಹವರ್ಮನ ಆಶ್ರಯದಲ್ಲಿ ಆಸ್ಥಾನ ಕವಿಯಾಗಿದ್ದ. ಇವಳು ತನ್ನ ಶ್ಲೋಕದಲ್ಲಿ ಹೇಳಿರುವಂತೆ ಇವಳಿಗೆ ಅರ್ವಾಚೀನನೇ ಆಗಿದ್ದಾನೆ. ಅಲ್ಲದೆ ಗದ್ಯ-ಪದ್ಯಗಳಲ್ಲಿ ಬರೆದವನೂ ಆತನೇ ಆಗಿದ್ದಾನೆ. ಜೊತೆಗೆ ದಂಡಿಯು ತನ್ನನ್ನು ವ್ಯಾಸ-ವಾಲ್ಮೀಕಿಗಳ ಸಾಲಿನಲ್ಲಿ ಹೊಗಳಿಕೊಂಡ ಪದ್ಯವೊಂದು ಈ ರೀತಿಯಾಗಿದೆ

**ಜಾತೇ ಜಗತಿ ವಾಲ್ಮೀಕೌ ಶಬ್ದಃ ಕವಿರಿತಿ ಸ್ಮೃತಃ**
**ಕವೀ ಇತಿ ತತೋ ವ್ಯಾಸೇ ಕವಯಶ್ಚೇತಿ ದಂಡಿನಿ॥**

ಕರ್ನಾಟಕದ ಅರಸಿಯಾಗಿ, ದಂಡಿಗೆ ಸವಾಲೆಸೆಯುವಂತಹ ಪದ್ಯಗಳನ್ನು ರಚಿಸುವ ದಿಟ್ಟತನವನ್ನೂ, ಪಾಂಡಿತ್ಯ-ಸ್ವಶಕ್ತಿಯ ಕುರಿತಾದ ಆತ್ಮವಿಶ್ವಾಸವನ್ನೂ ಗಾಂಭೀರ್ಯ, ದಾರ್ಷ್ಟ್ಯದಿಂದ ಪ್ರಕಟಿಸಿದ್ದಾಳೆ. ಅಲ್ಲದೆ ಶ್ಲೇಷೆಯನ್ನು ತರುವ ಮೂಲಕ ಚಮತ್ಕಾರಯುತವಾದ ರಚನೆ ಮಾಡಿದ್ದಾಳೆ.

**ವಿಜ್ಜಿಕಾಳ ಮುಕ್ತಕಗಳು**

ವಿಜ್ಜಿಕಾಳು ಹಲವಾರು ಬಿಡಿ ಮುಕ್ತಕಗಳನ್ನು ರಚಿಸಿದ್ದು, ಅವು ಅಲಂಕಾರವಿನ್ಯಾಸದಿಂದಲೂ, ಅರ್ಥವತ್ತಾಗಿರುವುದರಿಂದಲೂ ಬಹಳ ಆಕರ್ಷಕವಾಗಿವೆ. ಮಮ್ಮಟ, ಭೋಜ, ವಿಶ್ವನಾಥ, ಧನಂಜಯ ಮೊದಲಾದ ಪ್ರಸಿದ್ಧ ಮೀಮಾಂಸಕರು ಇವಳ ಪದ್ಯಗಳನ್ನು ತಮ್ಮ ಗ್ರಂಥಗಳಲ್ಲಿ ಉದಾಹರಣೆಯಾಗಿ ನೀಡಿದ್ದಾರೆ.

ಅಲಂಕಾರಿಕರಲ್ಲದೆ ಸುಭಾಷಿತ ಸಂಕಲನಕಾರರಾದ ೧೦ನೆಯ ಶತಮಾನದ ವಲ್ಲಭದೇವ[೧೦] ೧೪ನೆಯ ಶತಮಾನದ ಶಾರ್ಙ್ಗದೇವ[೧೧], ೧೨ನೆಯ ಶತಮಾನದ ಶ್ರೀಧರದಾಸ ಮುಂತಾದವರು ತಮ್ಮ ಗ್ರಂಥಗಳಲ್ಲಿ ಈಕೆಯ ಮುಕ್ತಕಗಳನ್ನು ಸಂಗ್ರಹಿಸಿದ್ದಾರೆ.

ವಿಜಯಭಟ್ಟಾರಿಕ ೨೯ ಮುಕ್ತಕಗಳನ್ನು ರಚಿಸಿದ್ದಾಳೆನ್ನುವುದನ್ನು ಚೌದರಿ.ಜೆ.ಬಿ ಅವರು ತಮ್ಮ 'ಸಂಸ್ಕೃತ್ ಪೊಯಟಸ್' ಕೃತಿಯಲ್ಲಿ ತಿಳಿಸಿದ್ದಾರೆಂದು ಪಿ.ವಿ.ಕಾಣೆಯವರು ಉಲ್ಲೇಖಿಸಿದ್ದಾರೆ[೧೨]. ಆದರೆ ಎಲ್ಲ ಮುಕ್ತಕಗಳು ಒಂದೆಡೆ ಪ್ರಕಟವಾಗಿರದೆ, ಹಲವು ಮುಕ್ತಕಗಳು ಇಂದಿಗೆ ಅಲಭ್ಯವಾಗಿವೆ.

ಇವಳು ರಚಿಸಿರುವ ಕೆಲವು ಮುಕ್ತಕಗಳು ಇವಳ ಕಾವ್ಯಶಕ್ತಿ, ಸ್ವಾಭಿಮಾನ, ಸ್ವಪ್ರಶಂಸೆ, ವಿಡಂಬನೆ ಮತ್ತು ಜನಪದದ ಜೀವನದ ಬಗೆಗಿದ್ದ ಸೂಕ್ಷ್ಮ ವಿಚಾರಗಳನ್ನು ಅಭಿವ್ಯಕ್ತ ಗೊಳಿಸುತ್ತವೆ. ಇಷ್ಟಲ್ಲದೆ ಕೆಲವು ಮುಕ್ತಕಗಳು ಒಂದೊಂದು ಪ್ರತಿಮಾಚಿತ್ರವನ್ನೇ ನೀಡುತ್ತದೆ. ಸೂರ್ಯೋದಯ, ಕಾಮನಬಿಲ್ಲಿನ ವರ್ಣನೆ, ಪುಷ್ಪವರ್ಣನೆಗಳಷ್ಟೇ

ಅಲ್ಲದೆ ಸೂಚ್ಯವಾಗಿ ಪ್ರೇಯಸಿಯ ಮನದ ಭಾವನೆಯನ್ನು ತಿಳಿಸುವ ಚಾತುರ್ಯತೆ ಇವಳ ಮುಕ್ತಕಗಳಲ್ಲಿ ಕಾಣಬಹುದು. ಇವಳ ಮುಕ್ತಕಗಳು ಆಧ್ಯಾತ್ಮದ ವಿಚಾರಗಳನ್ನೂ ಸಾರುತ್ತವೆ.

**ಸೂರ್ಯೋದಯದ ವರ್ಣನೆ**

**ಉನ್ನಿದ್ರಕೋಕನದರೇಣು ಪಿಶಂಗಿತಾಂಗಾಃ**
**ಗಾಯಂತಿ ಮಂಜು ಮಧುಪಾ ಗೃಹದೀರ್ಘಿಕಾಸು ।**
**ಏತಚ್ಚಕಾಸ್ತಿ ಚ ರವೇರ್ನವಬಂಧು ಜೀವ**
**ಪುಷ್ಪಚ್ಛದಾಭಮುದಯಾಚಲ ಚುಂಬಿಬಿಂಬಮ್॥**[೧೩]

"ಮನೆಯಂಗಳದ ಬಾವಿಯಲ್ಲಿ ಅರಳಿದ ಕನ್ನೈದಿಲೆಯ ಪರಾಗದಿಂದ ಹೊಂಬಣ್ಣಕ್ಕೆ ತಿರುಗಿರುವ ದುಂಬಿಗಳ ಮಧುರ ಗಾಯನ ಮಾಡುತ್ತಿವೆ. ಪೂರ್ವಾಚಲವನ್ನು ಸ್ಪರ್ಷಿಸಿರುವ ಈ ರವಿಬಿಂಬವು ಹೊಸದಾದ ದಾಸವಾಳದ ಹೂವಿನಂತೆ ಹೊಳೆಯುತ್ತಿದೆ". ಸೂರ್ಯೋದಯದ ಸುಂದರವರ್ಣನೆಯನ್ನು ಈ ಪದ್ಯ ನೀಡುತ್ತಿದೆ. ಉದಯಕಾಲದ ನಸುಕಿನ ಚಿತ್ರಣ ನೀಡಲು ಕವಯತ್ರಿಯು ರಾತ್ರಿ ವೇಳೆಯಲ್ಲಿ ಅರಳುವ ನೈದಿಲೆಯನ್ನಿಲ್ಲಿ ತಂದಿದ್ದಾಳೆ.

**ಪುಷ್ಪವರ್ಣನೆ :** ಪ್ರಕೃತಿವರ್ಣನೆಯ ಇವಳ ಮುಕ್ತಕಗಳಲ್ಲಿ ಪುಷ್ಪವರ್ಣನೆಯೂ ಒಂದು. ಇವಳು ಇಲ್ಲಿ ಮುತ್ತುಗದ ಹೂವನ್ನು ಬಣ್ಣಿಸುತ್ತಿದ್ದಾಳೆ. ಚಂದ್ರನ ಕಲೆಯೊಂದಿಗೆ ಸ್ಪರ್ಧಿಸುತ್ತಿರುವಂತೆ ಕಿಂಶುಕದ (ಮುತ್ತುಗದ) ಕೇಸರ ಕಾಣಿಸುತ್ತಿದೆ ಎಂದು ಉಪಮಾಲಂಕಾರದಲ್ಲಿ ಈ ಪದ್ಯ ರಚಿತವಾಗಿದೆ.

**ಕಿಂಶುಕ ಕಲಿಕಾಂತರ್ಗತಂ ಇಂದುಕಲಾಸ್ಪರ್ಧಿ ಕೇಸರಂ ಭಾತಿ।**
**ರಕ್ತನಿಚೋಲಕವಿಹಿತಂ ಧನುರಿವ ಜಾತಮುದ್ರಿತಂ ವಿತನೋ॥**

ಧನುಸ್ಸಿನ ಆಕಾರ ಹೊಂದಿರುವ ಮುತ್ತುಗದ ಮೊಗ್ಗು ಬೆಳ್ಳಗಿರುತ್ತದೆ. ಅರೆಬಿರಿದ ಮೊಗ್ಗಿನೊಳಗಿನ ಕೇಸರವು ಕೆಂಪಾಗಿರುತ್ತದೆ. ಇದನ್ನು ಕವಯತ್ರಿಯು ಚಂದ್ರಕಲೆಯೊಡನೆ ಸ್ಪರ್ಧಿಸುತ್ತಿರುವಂತಿದೆ ಎಂದು ಹೋಲಿಸಿದ್ದಾಳೆ. ಸಾಧಾರಣ ಹೂವನ್ನು ಅಸಾಧಾರಣವಾಗಿ ಬಣ್ಣಿಸುವ ಇವಳ ಕವಿಹೃದಯವನ್ನಿಲ್ಲಿ ಕಾಣಬಹುದು.

**ಅಸ್ಥಿರಮನೇಕರಾಗಮ್ ಗುಣರಹಿತಮ್ ನಿತ್ಯವಕ್ರ ದುಷ್ಪ್ರಾಪಮ್।**
**ಪ್ರಾವೃಷಿ ಸುರೇಂದ್ರ ಚಾಪಮ್ ವಿಭಾವ್ಯತೇ ಯುವತಿಚಿತ್ತಮಿವ ॥**

ಈ ಮೇಲಿನ ಪದ್ಯದಲ್ಲಿ ಯುವತಿಯರ ಮನಸ್ಸನ್ನು ಕಾಮನಬಿಲ್ಲಿಗೆ ಹೋಲಿಸಿದ್ದಾಳೆ. ಅಲ್ಲದೆ ಅಸ್ಥಿರವೂ, ಗುಣರಹಿತವೂ, ವಕ್ರಾಕಾರವನ್ನು ಹೊಂದಿರುವ ಹಾಗೂ ಅನೇಕ ಬಣ್ಣಗಳಿಂದ ಕೂಡಿರುವ ಕಾಮನಬಿಲ್ಲನ್ನು ವಿಭಿನ್ನ ರೀತಿಯಲ್ಲಿ ಬಣ್ಣಿಸಿದ್ದಾಳೆ.

ವಿಜ್ಜಿಕಾಳ ಪದ್ಯಗಳು ಕೇವಲ ಪ್ರಕೃತಿಸೌಂದರ್ಯ, ಜೀವನಸೌಂದರ್ಯಗಳ ಕುರಿತಾಗಿರದೆ, ಆಧ್ಯಾತ್ಮವನ್ನೂ ಬೋಧಿಸುತ್ತವೆ. ಈ ಕೆಳಗಿನ ಮುಕ್ತಕದಲ್ಲಿ ರೂಪಕ, ಉಪಮಾಲಂಕಾರಗಳ ಮೂಲಕ ಮಾನವರು ವಿಧಿಯ ಕೈಗೆ ಸಿಕ್ಕಿದ ಗೊಂಬೆಗಳು ಎಂಬ ವಿಚಾರವನ್ನು ಸಖಿಯೋರ್ವಳಲ್ಲಿ ಹೇಳಿಕೊಳ್ಳುತ್ತಿರುವ ರೀತಿ ವಿಶೇಷವಾಗಿದೆ.

**ಪ್ರಿಯಸಖಿ ವಿಪದ್ದಂಡಪ್ರಾಂತಪ್ರಪಾತಪರಂಪರಾ**
**ಪರಿಚಯಚಲೇ ಚಿಂತಾಚಕ್ರೇ ನಿಧಾಯ ವಿಧಿಃ ಖಲಃ ।**
**ಮೃದುಮಿವ ಬಲಾತ್ಪಿಂಡೀಕೃತ್ಯ ಪ್ರಗಲ್ಭಕುಲಾಲವದ್**
**ಭ್ರಮಯತಿ ಮನೋ ನೋ ಜಾನೀಮಃ ಕಿಮತ್ರ ವಿಧಾಸ್ಯತಿ ॥**

ಪ್ರಿಯಗೆಳತಿ, ವಿಪತ್ತೆಂಬ ದಂಡದ ತುದಿಯಿಂದ ಹೊಡೆಯಲ್ಪಟ್ಟು, ಚಿಂತೆಯೆಂಬ ಚಕ್ರದಮೇಲೆ ನನ್ನ ಮನಸ್ಸನ್ನು ಮಣ್ಣಿನ ಮುದ್ದೆಯಂತೆ ಇಟ್ಟು, ಕ್ರೂರವಾದ ವಿಧಿಯು ಪ್ರೌಢನಾದ ಕುಂಬಾರನಂತೆ ತಿರುಗಿಸುತ್ತಿದೆ. ಅದು ಮುಂದೆ ಏನು ಮಾಡಬೇಕೆಂದಿರುವುದೋ ಯಾರಿಗೆ ಗೊತ್ತು !

ಮತ್ತೊಂದು ಪದ್ಯದಲ್ಲಿ ತತ್ವನಿಷ್ಠರಾಗಿ ವಿಪತ್ತಿಗೆ ಅಂಜದ ಧೀರರ ಸ್ವಭಾವವನ್ನು ವ್ಯತಿರೇಕಾಲಂಕಾರದಲ್ಲಿ ವರ್ಣಿಸಿದ್ದಾಳೆ.

**ವಿರಮ ವಿಫಲಾಯಾಸಾದಸ್ಮಾದ್ದುರಧ್ಯವಸಾಯತೋ**
**ವಿಪದಿ ಮಹತಾಂ ಧೈರ್ಯಭ್ರಂಶಂ ಯದೀಕ್ಷಿತುಮೀಹಸೇ ।**
**ಅಯಿ ಜಡವಿಧೇ ಕಲ್ಪಾಪಾಯವ್ಯಪೇತನಿಜಕ್ರಮಾಃ**
**ಕುಲಶಿಖರಿಣಃ ಕ್ಷುದ್ರಾ ನೈತೇ ನ ವಾ ಜಲರಾಶಯಃ ॥**

ಜಡವಿಧಿಯೇ, ವಿಪತ್ತಿನಲ್ಲಿ ಶ್ರೇಷ್ಠವ್ಯಕ್ತಿಗಳ ಧೈರ್ಯನಾಶವನ್ನು ನೀನು ನೋಡಬಯಸುವಿಯಾದರೆ, ಅಂತಹ ವಿಫಲವಾದ ಆಯಾಸವುಳ್ಳ ನಿನ್ನ ಕೆಟ್ಟ ಪ್ರಯತ್ನವನ್ನು ನಿಲ್ಲಿಸು; ಏಕೆಂದರೆ ಇವರು ಪ್ರಳಯಕಾಲದಲ್ಲಿ ತಮ್ಮ ಸ್ಥಾನವನ್ನು ಪಲ್ಲಟಗೊಳಿಸಿಕೊಳ್ಳುವ ಕ್ಷುದ್ರವಾದ ಕುಲಪರ್ವತಗಳಂತೆಯೂ ಅಲ್ಲ ಅಥವಾ ಬತ್ತಿಹೋಗುವ ಜಲರಾಶಿಯೂ ಅಲ್ಲ. ಬೆಟ್ಟಗಳಾದರೂ ಕದಲಿಯಾವು, ಕಡಲು ಕೂಡ ಬತ್ತಬಹುದು ಆದರೆ ಶ್ರೇಷ್ಠವ್ಯಕ್ತಿಗಳು ಕಷ್ಟಗಳಿಗಾಗಿ ಅಂಜಿ ತಮ್ಮ ತತ್ವ ನಿಷ್ಠೆಯನ್ನು ಬಿಡುವುದಿಲ್ಲ ಎಂಬ ವಿಚಾರವನ್ನು ಸುಂದರವಾಗಿ ಹೆಣೆದಿದ್ದಾಳೆ.

**ಕೇನಾಪಿ ಚಂಪಕತರೋ ಬತ ರೋಪಿತೋಽಸಿ ಕುಗ್ರಾಮಪಾಮರ ಜನಾಂತಿಕ ವಾಟಿಕಾಯಾಮ್।**
**ಯತ್ರ ಪ್ರರೂಢನವಶಾಕ ವಿವೃದ್ಧ ಲೋಭಾದ್ಗೋಭಗ್ನವಾಟಘಟನೋಚಿತಪಲ್ಲವೋಽಸಿ ॥**

ಯೋಗ್ಯತಾವಂತನಾದ ಕವಿ ಅಥವಾ ವಿದ್ವಾಂಸರು ಯೋಗ್ಯತೆಯನ್ನರಿಯದವನ ಆಶ್ರಯದಲ್ಲಿದ್ದು ನಿರ್ಲಕ್ಷಿಸಲ್ಪಟ್ಟಿರುವರು ಎಂಬ ಅಂಶವನ್ನು "ಸಂಪಿಗೆ ಮರವೆ, ಈ ಹಾಳು ಕೊಂಪೆಯಲ್ಲಿನ ಮೂರ್ಖನ ಮನೆಯಂಗಳದಲ್ಲಿ ನಿನ್ನನ್ನು ಯಾರೋ ನೆಟ್ಟಿದ್ದಾರಲ್ಲ! ಇಲ್ಲಿ ಬೆಳೆಯುತ್ತಿರುವ ಗಿಡಗಂಟಿಗಳ ಮೇಲೆಯೇ ಲೋಭವು ಹೆಚ್ಚಾಗಿ, ಬೇಲಿಯಂತೆ ಬಳಸುತ್ತಾ, ಅಲಕ್ಷಿಸಲ್ಪಟ್ಟ ನಿನ್ನ ಎಲೆಗಳೆಲ್ಲ ಹಾಳು ತೋಟಗಳಲ್ಲಿದ್ದಂತಾಗಿವೆ". ಎಂಬ ಚಂಪಕಾನ್ಯೋಕ್ತಿಯಲ್ಲಿ ಅರ್ಥವತ್ತಾಗಿ ಚಿತ್ರಿಸಿರುವಳು. ಕವಿಯ ಪ್ರತಿಭೆಯು ಅರಳಲು ಯೋಗ್ಯ ಪರಿಸರವು ಅತ್ಯಂತ ಮುಖ್ಯವೆಂಬುದು ಇಲ್ಲಿಯ ಧ್ವನಿಯಾಗಿದೆ.

ಸಂಸ್ಕೃತ ಶಾಸ್ತ್ರಗ್ರಂಥಗಳಲ್ಲಿ ವಿಜ್ಜಿಕಾ ರಚನೆಗಳ ಉಲ್ಲೇಖ ಹಾಗೂ ಉದಾಹೃತ ಮುಕ್ತಕಗಳು

ಇವಳ ಮುಕ್ತಕಗಳು ಕಾವ್ಯಾಂಶಗಳ ದೃಷ್ಟಿಯಿಂದ ಅತ್ಯಾಕರ್ಷಕವಾಗಿವೆ. ಆದ್ದರಿಂದಲೇ ಸಂಸ್ಕೃತ ವಾಙ್ಮಯದ ಅಲಂಕಾರಿಕರು ಅವನ್ನು ತಮ್ಮ ಗ್ರಂಥಗಳಲ್ಲಿ ಉಲ್ಲೇಖಿಸಿದ್ದಾರೆ. ಮುಮ್ಮಟ, ಧನಂಜಯರಂತಹ ಲಾಕ್ಷಣಿಕರು ತಾವು ಪ್ರತಿಪಾದಿಸುವ ಅಲಂಕಾರ ಧ್ವನಿಗಳಿಗೆ ಇವಳ ಪದ್ಯಗಳನ್ನು ಉದಾಹರಣೆಯಾಗಿ ನೀಡಿದ್ದಾರೆ. ತೀನಂಶ್ರೀ ಅವರೂ ಕೂಡ ತಮ್ಮ ಮೇರುಗ್ರಂಥ ಭಾರತೀಯ ಮೀಮಾಂಸೆ ಕೃತಿಯಲ್ಲಿ ಇವಳ ಪದ್ಯವನ್ನು ಉದಾಹರಣೆಯಾಗಿ ಬಳಸಿದ್ದಾರೆ.

**ಧನ್ಯಾಸಿ ಯಾ ಕಥಯಸಿ ಪ್ರಿಯಸಂಗಮೇಽಪಿ**
**ವಿಸ್ರಬ್ಧಚಾಟುಕಶತಾನಿ ರತಾಂತರೇಷು ।**
**ನೀವಿಂ ಪ್ರತಿ ಪ್ರಣಿಹಿತೇ ತು ಕರೇ ಪ್ರಿಯೇಣ**
**ಸಖ್ಯಃ ಶಪಾಮಿ ಯದಿ ಕಿಂಚಿದಪಿ ಸ್ಮರಾಮಿ ॥**

ವಿಜ್ಜಿಕಾಳ ಈ ಶ್ಲೋಕವು ಮಮ್ಮಟನ ಕಾವ್ಯಪ್ರಕಾಶದ ನಾಲ್ಕನೆಯ ಉಲ್ಲಾಸದಲ್ಲಿ (ಅಧ್ಯಾಯ–೪, ಕಾರಿಕೆ–೩೯ ರ ಉದಾಹರಣೆ) ಅರ್ಥಮೂಲಕ ವಸ್ತು ಪ್ರತಿಪಾದ್ಯ ಅಲಂಕಾರ ಧ್ವನಿಗೆ ಉದಾಹರಣೆಯಾಗಿ ಕೊಟ್ಟಿದೆ[೧೪] ಅಲ್ಲದೆ ಕವೀಂದ್ರವಚನ ಸಮುಚ್ಚಯದ ೨೯೮ನೆಯ ಶ್ಲೋಕವಾಗಿ ಸಂಗ್ರಹಗೊಂಡಿದೆ.

ಮಮ್ಮಟನ ಕಾವ್ಯಪ್ರಕಾಶದ ನಾಲ್ಕನೆಯ ಉಲ್ಲಾಸದಲ್ಲಿ ಧ್ವನಿಯ ಭೇದಗಳ ನೀಡಲಾಗಿದೆ. ಇದರಲ್ಲಿ ಎರಡನ್ನು ಹೋಲಿಸುವಾಗ ಒಂದಕ್ಕಿಂತ ಇನ್ನೊಂದು ಹೆಚ್ಚು ಎಂದು ಚಮತ್ಕಾರಯುತವಾಗಿ ವರ್ಣಿಸುವಾಗ ವ್ಯತಿರೇಕ ಹುಟ್ಟುತ್ತದೆ ಎಂಬ ವಿಚಾರಕ್ಕೆ ವಿಜ್ಜಿಕಾಳ ಈ ಮುಕ್ತಕವನ್ನು ಉದಾಹರಣೆಯನ್ನಾಗಿ ನೀಡಲಾಗಿದೆ. ನೀನು ಅಧನ್ಯೆ, ನಾನು ನಿಜವಾಗಿಯೂ ಧನ್ಯೆ ಎಂಬ ವ್ಯತಿರೇಕಾಲಂಕಾರವನ್ನು ಇಲ್ಲಿ ಕಾಣಬಹುದು.

ಕೆ.ಕೃಷ್ಣಮೂರ್ತಿಯವರು ವಿಜ್ಜಿಕಾಳ ಈ ಮೇಲಿನ ಮುಕ್ತಕವನ್ನು ಕನ್ನಡದಲ್ಲಿ ಈ ರೀತಿ ಅನುವಾದ ಮಾಡಿದ್ದಾರೆ :

**ರತದೊಳ್ ಪ್ರಿಯನೊಡನಾಡಿದ**
**ಸವಿವಾತಂ ನುಡಿವೆ ಧನ್ಯೆನೀನಹೆ ನಿರುತಂ**
**ಕೈ ನೀಡರೆ ನೀವಿಗವಂ**
**ನಾನೊಂದಂ ಸಖಿಯರಾಣೆ ನೆನೆಯಲ್ಕಾರೆಂ**[೧೫]

**ಅಭಿಸಾರಿಕೆ**

**ದೃಷ್ಟಿಂ ಹೇ ಪ್ರತಿವೇಶಿನಿ ಕ್ಷಣಮಿಹಾಪ್ಯಸ್ಮಿನ್ಗೃಹೇ ದಾಸ್ಯಸಿ**
**ಪ್ರಾಯೇಣಾಸ್ಯ ಶಿಶೋಃ ಪಿತಾ ನ ವಿರಸಾಃ ಕೌಪೀರಪಃ ಪಾಸ್ಯತಿ ।**
**ಏಕಾಕಿನ್ಯಪಿ ಯಾಮಿ ತದ್ವರಮಿತಃ ಸ್ರೋತಸ್ತಮಾಲಾಕುಲಂ**
**ನೀರಂಧ್ರಾಸ್ತನುಮಾಲಿಖಂತು ಜರಠಚ್ಛೇದಾನಲಗ್ರಂಥಯಃ ॥**[೧೬]

"ನೆರೆಮನೆಯವಳೇ ನಮ್ಮ ಮನೆಯಕಡೆಗೆ ತುಸು ನೋಡಿಕೊಂಡಿರು. ಈ ನನ್ನ ಮಗುವಿನ ತಂದೆ ಬಾವಿಯ ಉಪ್ಪು ನೀರನ್ನು ಕುಡಿಯುವುದಿಲ್ಲ. ತಮಾಲ ವೃಕ್ಷಗಳ ಅಡಿಯಲ್ಲಿ ಹರಿಯುವ ಝರಿಯ ನೀರು ಉತ್ತಮವಾಗಿದೆ. ಆದುದರಿಂದ ಒಬ್ಬಂಟಿಗಳಾದರೂ ಚಿಂತೆಯಿಲ್ಲ ಅಲ್ಲಿಗೆ ಹೋಗುವೆನು. ಅಲ್ಲಿ ದಟ್ಟವಾಗಿ ಬೆಳೆದಿರುವ ಮುಳ್ಳು ಕಂಟಿಗಳು ಮೈಯನ್ನು ಪರಚಿದರೂ ಪರಚಲಿ" ಎಂಬ ವಾಚ್ಯಾರ್ಥವಿರುವ ಈ ಮುಕ್ತಕವು ತನ್ನ ಪತಿಯಲ್ಲದೆ ಬೇರೊಬ್ಬನನ್ನು ಒಲಿದು ಅವನಲ್ಲಿಗೆ ಹೋಗುವಾಗ ಮಾನಿನಿಯೊಬ್ಬಳು ಜಾಣ್ಮೆಯಿಂದ ನೀರು ತರುವ ನೆಪಹೇಳಿ, ಮುಂದೆ ಬರಬಹುದಾದ ಸಂಶಯಗಳನ್ನು ಮೊದಲೇ ಚಾತುರ್ಯದಿಂದ ನಿವಾರಿಸಿದ್ದಾಳೆ.

ಧನಂಜಯ ವಿರಚಿತ ದಶರೂಪಕದಲ್ಲಿ ಇವಳ ಮತ್ತೊಂದು ಮುಕ್ತಕ ಉದಾಹೃತವಾಗಿದೆ. ಧನಂಜಯನ ದಶರೂಪಕಕ್ಕೆ ಧನಂಜಯನ ತಮ್ಮನಾದ ಧನಿಕನು ಬರೆದಿರುವ ವ್ಯಾಖ್ಯಾನದಲ್ಲಿ ದೊರಕುತ್ತದೆ. ದನಂಜಯನ ಕೃತಿಯಲ್ಲಲ್ಲದೆ, ಮುಕುಲಭಟ್ಟನ 'ಅಭಿಧಾವೃತ್ತಿ ಮಾತೃಕೆ'ಯಲ್ಲಿ ಹಾಗೂ ಮಮ್ಮಟ ಶಬ್ದವ್ಯಾಪಾರವನ್ನು ವಿಚಾರಮಾಡುವ ಪ್ರಸಂಗದಲ್ಲಿ ಉದಾಹೃತವಾಗಿದೆ ಅಲ್ಲದೆ 'ಕವೀಂದ್ರವಚನ ಸಮುಚ್ಚಯ'ವೆಂಬ ಸಂಗ್ರಹದಲ್ಲಿನ ೫೦೦ನೆಯ ಶ್ಲೋಕವಾಗಿ ವಿಜ್ಜಿಕೆಯ ಈ ಮುಕ್ತಕ ಸಂಗ್ರಹ ಗೊಂಡಿದೆ.

ಧನಂಜಯನು ಅನ್ಯಾಭೇದಗಳನ್ನು ತಿಳಿಸುತ್ತಾ, ವಿವಾಹಿತಳಾದ ಅನ್ಯಸ್ತ್ರೀಯಳ ಪ್ರೇಮವನ್ನು ಪ್ರಧಾನ ಅಥವಾ ಸಹಾಯಕ ರಸಗಳಲ್ಲಿ ಒಮ್ಮೆಯೂ ತರಬಾರದೆಂಬ ನಿಯಮವನ್ನು ತಿಳಿಸುತ್ತಾ, ಚಮತ್ಕಾರಯುತವಾಗಿ ಹೇಳಲು ಅವಕಾಶವಿದೆ ಎಂಬುದಕ್ಕೆ ಇದನ್ನು ಉದಾಹರಣೆಯಾಗಿ ನೀಡಿದ್ದಾನೆ.

## ಸಹೃದಯ

ಕೇವಲ ರಸವತ್ತಾದ ಪದಗಳಲ್ಲಿ ಸ್ಫುರಿಸುತ್ತಿರುವ ಕವಿಯ ಅಭಿಪ್ರಾಯವು, ಶಬ್ದಕ್ಕೆ ನಿಲುಕದ್ದು; ಅದರಿಂದುಂಟಾಗುವ ಆನಂದವನ್ನು ತಮ್ಮ ತನುವಿನ ರೋಮಾಂಚನದಿಂದಲೇ ತಿಳಿಯಪಡಿಸಬಲ್ಲ ರಸಿಕ ಶ್ರೇಷ್ಠರಿಗೆ, ಇಗೋ ನನ್ನ ನಮನ.

**ಕವೇರಭಿಪ್ರಾಯಮಶಬ್ದಗೋಚರಂ ।**
**ಸ್ಫುರಂತಮಾರ್ದ್ರೇಷು ಪದೇಷು ಕೇವಲಮ್ ॥**
**ವರದ್ಭಿರಂಗೈಃ ಕೃತರೋಮವಿಕ್ರಿಯೈ**
**ರ್ಜನಸ್ಯ ತೂಷ್ಣೀಂ ಭವತೋಯಮಂಜಲಿಃ ॥**

ತೀನಂಶ್ರೀ ಅವರು ತಮ್ಮ ಭಾರತೀಯ ಕಾವ್ಯ ಮೀಮಾಂಸೆ ಕೃತಿಯಲ್ಲಿ ಸಹೃದಯ ವಿಚಾರವನ್ನು ಚರ್ಚಿಸುವಾಗ ವಿಜ್ಜಿಕಾಳ ಈ ಮುಕ್ತಕವನ್ನು ಉದಾಹರಿಸಿದ್ದಾರೆ. ಕೆಲವರು ಮೆಚ್ಚುಗೆಯನ್ನು "ಭಲಾ, ಭೇಷ್, ಆಹಾ!" ಎಂಬ ಉದ್ಗಾರಗಳಿಂದ ತಿಳಿಸಿದರೆ ಮತ್ತೆ ಕೆಲವರು ಅಪ್ರಯತ್ನವಾಗಿ ಮೈಯಲ್ಲಿ ಹುರಿಗೊಂಡ ಪುಳಕದಿಂದ, ಅರಳಿದ ಕಣ್ಣುಗಳಿಂದ ಮೌನವಾಗಿಯೇ ವ್ಯಕ್ತಪಡಿಸುತ್ತಾರೆ. ಈ ಎರಡನೆ ರೀತಿಯ ಸಹೃದಯರ ಕುರಿತಾಗಿ ತಿಳಿಸುವಾಗ ವಿಜ್ಜಿಕಾಳ ಈ ಮುಕ್ತಕವನ್ನು ಉದಾಹರಣೆಯಾಗಿ ನೀಡಿರುವುದಲ್ಲದೆ, ತಮ್ಮ ಬಿಡಿಮುತ್ತು ಕೃತಿಯಲ್ಲಿ ಇದರ ಕನ್ನಡ ಅನುವಾದವನ್ನು ಪದ್ಯರೂಪದಲ್ಲಿ ನೀಡಿದ್ದಾರೆ.

**ನುಡಿಗೆ ನಿಲುಕದ ಕವಿಯ ಬಗೆಯ ಭಾವವನು**
**ದ್ರವಿಸುತಿಹ ಪದಗಳಲಿ ತನಿ ಮಿಂಚುವುದನು**
**ಪುಳಕನೆಸೆದಂಗಗಳು ಮಾರ್ನುಡಿಯುತಿರಲು**
**ಮೌನವನು ತಳೆವನಿಗೆ ಕರವನಿದೋ ಮುಗಿವೆ!**[೧೭]

ಮಹಾಕವಿಯು ತನ್ನ ಭಾವನೆಗಳನ್ನು ಅಭಿಧೇಯದ (ವಾಚ್ಯಾರ್ಥದ) ಮೂಲಕ ಪ್ರಕಟಿಸದೆ, ವ್ಯಂಜನಾವೃತ್ತಿಯಿಂದಲೇ ಪ್ರಕಟಿಸುತ್ತಾರೆ. ಶಬ್ದಗಳ ಮೂಲಕ ಅಭಿಪ್ರಾಯಗಳು ಅಭಿವ್ಯಕ್ತವಾಗುವುದಿಲ್ಲ; ಆದರೆ, ರಸಯುಕ್ತವಾದ ಮನೋಹರವಾದ ಪದಗಳ ಮುಖೇನ ಭಾವನೆಗಳು ಅಭಿವ್ಯಕ್ತವಾಗುತ್ತದೆ. ಇಂತಹ ಮಹಾಕವಿಯ ಗೂಢವಾದ ವ್ಯಂಜನಾವೃತ್ತಿಯಿಂದ ದ್ಯೋತಿತವಾದ ಅಭಿಪ್ರಾಯಗಳನ್ನು ತಿಳಿದುಕೊಂಡು, ಯಾವ ರಸಿಕನು ಶಬ್ದದ ಮೂಲಕ ಕಾವ್ಯಾನಂದದ ಸೂಚನೆಯನ್ನೂ ಕೊಡದಿದ್ದರೂ, ಹೃದಯದ ಆನಂದ ಲಹರಿಯ ಕಾರಣದಿಂದ ರೋಮಾಂಚಿತನಾಗುತ್ತಾನೋ, ಅವನೇ ಸತ್ಯವಾಗಿಯೂ ರಸಿಕ. ಅಂತಹ ಸಹೃದಯ ಶಿರೋಮಣಿಗೆ ನಾನು ನಮಸ್ಕಾರ ಮಾಡುತ್ತೇನೆ.

"ಈ ಶ್ಲೋಕವು ರಸಿಕನ ಸುಂದರವಾದ ವರ್ಣನೆಯಾಗಿರುತ್ತದೆ. ಹೇಗೆ, ಧ್ವನಿಯ ಮೂಲಕ ಭಾವನೆಗಳನ್ನು ಅಭಿವ್ಯಕ್ತಿಗೊಳಿಸುವುದು ಶ್ರೇಷ್ಠಕವಿಯ ಕಾರ್ಯವೋ, ಅದೇ ವಿಧದಲ್ಲಿ ವ್ಯಂಜನಾವೃತ್ತಿಯ ಮೂಲಕ ಅದನ್ನು ಪ್ರಶಂಸೆ ಮಾಡುವುದು ಭಾವುಕನ ಕರ್ತವ್ಯ"[೧೮].

**ಕೋಶಃ ಸ್ಫೀತತರಃ ಸ್ಥಿತಾನಿ ಪರಿತಃ ಪಂತ್ರಾಣಿ ದುರ್ಗಂ ಜಲಂ**
**ಮೈತ್ರಂ ಮಂಡಲಮುಜ್ವಲಂ ಚಿರಮಧೋ ನೀತಾಸ್ತಥಾ ಕಂದಕಾಃ**
**ಇತ್ಯಾ ಕೃಷ್ಟ ಶಿಲೀಮುಖೇನ ರಚನಾ ಕೃತ್ವಾ ತದಪ್ಯದ್ಭುತಂ**
**ಯಸ್ಪದ್ಮೇನ ಜಿಗೀಷುಣಾಪಿ ನ ಜಿತಂ ಮುಗ್ಧೆ ಸ್ವದೀಯಂ ಮುಖಂ ॥**

ರಾಜಮಂಡಲ, ಕೋಟೆ ಗಿರಿ–ಕಂದಕಗಳನ್ನೆಲ್ಲ ಗೆದ್ದು, ಕಂಠಕೋಪಾದಿಯ ಬಾಣಗಳನ್ನೆದುರಿಸಿ ದಿಗ್ವಿಜಯ ಸಾಧಿಸಿದರೂ ನಿನ್ನ ಮುಖ ಕಮಲದ ಮುಂದೆ ಸೋತೊ ಹೋದೆ ಎಂದು ಪ್ರಿಯಕರನು ತನ್ನ ಸಾಹಸವನ್ನೂ, ಪ್ರೇಯಸಿಯ ಮುಂದೆ ಸೋಲನ್ನೂ ಒಪ್ಪಿಕೊಳ್ಳುತ್ತಿದ್ದಾನೆ.

**ನಾರ್ಯಾ ಸಾ ರತಿಶೂನ್ಯತಾ ನಯನಯೋರ್ಥ ದೃಷ್ಟಿ ಪಾತೆ ಸ್ಥಿತಃ**
**ಕಾಮೀ ಪ್ರಾಪ್ತರತಾರ್ಥ ಏವ ನ ಭವತ್ಯಾಲಿಂಗಿತಂ ವಾಂಛತಿ**
**ಆಶ್ಲೇಷಾಲಪಿ ಯಾಪರಂ ಮೃಗಯತೆ ದಿಕ್ಕಾಮಯೋಗ್ಯಾಂ ಸ್ತ್ರಿಯಂ**
**ಶ್ರೇಣೀಗೋಚರಮಾಗತೋ ರತಿಫಲಂ ಪ್ರಾಪ್ನೋತಿ ತಿರ್ಯಂಕಂ ಕಿಂ ॥**

**ಪಾತುಂ ಪದ್ಮಸುಗಂಧಿ ಲೋಲನಯನಂ ರೋಮಾಂಚಿತಂ ಗಂಡಯೋ**
**ರ್ಯಾವದ್ವದುಮಪಾಟಲಾಧರಪುಟಂ ವಕ್ತ್ರಂ ಮಯೋನ್ನಾಮಿತಮ್**
**ವೈಲಕ್ಷ್ಯಪ್ರತಿಷೇಧವಿಕ್ಲವಗಿರಾ ತನ್ವ್ಯಾ ತಯಾ ಮುಗ್ಧಯಾ**
**ಪಶ್ಚಾತ್ತಾಮ್ರರುಚಾ ಕರೇಣ ಮಮ ತು ಪ್ರಚ್ಛಾದಿತೇ ಲೋಚನೇ ॥**

**ಉನ್ನಮಯ್ಯ ಸಕಚಗ್ರಹಮಾಸ್ಯಂ ಚುಂಬತಿ ಪ್ರಿಯತಮೇ ಹಠವೃತ್ತ್ಯಾ|**
**ಹುಂ ಮಮೇತಿ ವದನಾಂತರಲೀನಂ ಜಲ್ಪಿತಂ ಜಯತಿ ಮಾನವತೀನಾಮ್ ॥**

ಕಾಮನೇ ನಿನ್ನನ್ನು ಶಿವನು ಮೊದಲು ಜಯಿಸಿದನು ಬಳಿಕ ಬುದ್ಧನು ಸೋಲಿಸಿದನು. ನನ್ನನ್ನು ಬಿಟ್ಟು ಪ್ರವಾಸದಲ್ಲಿರುವ ನನ್ನ ಕಾಂತನೂ ನಿನ್ನನ್ನು ಜಯಿಸಿರುವನು . ಅವರೆಲ್ಲರನ್ನು ಬಿಟ್ಟು ಅಬಲೆಯಾದ ನನ್ನನ್ನು ಹಿಂಸಿಸುವೆಯಲ್ಲ! ಆದುದರಿಂದ "ಧಿಕ್ ತ್ವಾಮ್ ಧಿಕ್ ತವ ಪೌರುಷಮ್ ಧಿಉದಯಮ್ ಧಿಕ್ ಕಾರ್ಮುಕಮ್ ಧಿಕ್ ಶರಾನ್" ಎಂದು ವಿರಹಿಣಿಯ ವ್ಯಥೆಯನ್ನು ಮನಸ್ಸು ಕರಗುವಂತೆ ಚಿತ್ರಿಸಿರುವಳು.

**ಒನಕೆವಾಡು**

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ 'ಒನಕೆವಾಡು' ಅಥವಾ 'ಓವನಿಗೆ' ಎಂಬುದೊಂದು ಪ್ರಾಕಾರವಾಗಿತ್ತೆನ್ನುವ ಉಲ್ಲೇಖ ದೊರಕುತ್ತದೆ. ಆದರೆ ಇದರ ಸ್ವರೂಪ ಹೇಗಿತ್ತೆನ್ನುವ ವಿಚಾರ ತಿಳಿದು ಬರುವುದಿಲ್ಲ. ಒನಕೆವಾಡಿನ ಉಲ್ಲೇಖಗಳು ದೊರಕುವುದು ಹನ್ನೆರಡನೆಯ ಶತಮಾನದ ನಂತರದ ಕಾಲದಲ್ಲಿ. ಎಂಟನೆಯ ಶತಮಾನದ ಶಿವಮಾರನ ಒಂದು ಅಷ್ಟಕ ಕೃತಿಯು ಒನಕೆವಾಡಿನಂತೆ ಪ್ರಸಿದ್ಧಿ ಪಡೆಯಿತೆನ್ನುವ ವಿಚಾರವನ್ನು ಕ್ರಿ.ಶ.೧೧೭೭ರ ಶಾಸನ ತಿಳಿಸುತ್ತದೆ. ಪ್ರಾಚೀನ ಛಂದಸ್ಸಿನ ಗ್ರಂಥಗಳು ಜನಪದ ರೂಪಕವಿರಬಹುದಾದ ಈ 'ಒನಕೆವಾಡು' ಕುರಿತಂತೆ ಯಾವ ವಿಚಾರವನ್ನೂ ತಿಳಿಸಿಲ್ಲ. ಆದರೆ ವಿಜ್ಜಿಕಾಳ ಮುಕ್ತಕವೊಂದು ಸಂಸ್ಕೃತದಲ್ಲಿ ಕನ್ನಡದ ಈ ಪ್ರಕಾರದ ಕುರಿತಂತೆ ತಿಳಿಸುತ್ತದೆ.

**ವಿಲಾಸಮಸೃಣೋಲ್ಲಸನ್ಮುಸಲ ಲೋಕದೋಃ ಕಂದಲೀ**
**ಪರಸ್ಪರಪರಿಸ್ಖಲದ್ ವಲಯನಿಸ್ವನೋದ್ ಬಂಧುರಾಃ ।**
**ಲಸಂತಿ ಕಲಹುಂಕೃತಿ ಪ್ರಸಭಕಂಪಿತೋರಸ್ಥಲತೃಟಿ**
**ದ್ಗಲದ್ಗಮಕಸಂಕುಲಾಃ ಕಲಮಕಂಡಿನೀಗೀತಯಃ ॥**

"ವಿಲಾಸದಿಂದ ಭತ್ತಕುಟ್ಟುವ ಯುವತಿಯರ ವರ್ಣನೆ ಮಾಡುತ್ತಾ, ಒನಕೆಯನ್ನು ಮೇಲಕ್ಕೆತ್ತುವ ಪುಷ್ಟವಾದ ತೋಳುಗಳ ಚಲನೆಗನುಸರಿಸಿ ಮೇಲೆ ಕೆಳಗೆ ಸರಿಯುವ ಬಳೆಗಳ ನಿನಾದ ಮತ್ತು ವಿಶಾಲವಾದ ಉರಃಸ್ಥಲಗಳ ಏರಿಳಿತಗಳಿಗನುಸಾರವಾಗಿ ಬರುವ ಹುಂಕಾರಗಳೆಂಬ ಪಕ್ಕವಾದ್ಯಗಳಿಂದ ಕೂಡಿದ ಭತ್ತ ಕುಟ್ಟುವ ಹಾಡುಗಳು ಮನಸ್ಸನ್ನು ಸೆಳೆಯುತ್ತದೆ" ಎಂದು ವಿಜ್ಜಿಕಾಳ ಮುಕ್ತಕ ಒಂದು ಬಣ್ಣನೆ ನೀಡುತ್ತದೆ.

ಈ ಪದ್ಯದಲ್ಲಿ ಅನುಪ್ರಾಸದ ಕುಶಲ ಪ್ರಯೋಗದಿಂದ ಭತ್ತಕುಟ್ಟುವ ಸುಕುಮಾರಿಗಳ ಶ್ರಮದ ದೀರ್ಘನಿಶ್ವಾಸ ಇವುಗಳನ್ನು ಕೇಳುವಂತೆ ಮಾಡಿ ಭತ್ತಕುಟ್ಟುವ ಸುಂದರಿಯರನ್ನು ನಮ್ಮ ಕಣ್ಣಮುಂದೆ ನಿಲ್ಲಿಸಿದ್ದಾಳೆ. ನಾದ ಸೌಂದರ್ಯವನ್ನು ತನ್ನ ಪದ್ಯದಲ್ಲಿ ಸಾಕಾರಪಡಿಸುವ ಸಾಮರ್ಥ್ಯ ಈಕೆಯ ಪದ್ಯಗಳಲ್ಲಿವೆ. ಜಾನಪದ ಹಾಡುಗಳ ಮಟ್ಟನ್ನು ಇವಳು ಗಮನಿಸುತ್ತಿದ್ದ ರೀತಿಯನ್ನಿಲ್ಲಿ ಕಾಣಬಹುದು. ಗ್ರಾಮೀಣ ಹಾಡುಗಳ ಅರಿವೂ ಇವಳಿಗಿತ್ತು.

ಬಳೆಗಳ ನಿನಾದ, ಹುಂಕಾರ, ಒನಕೆಯ ಸಪ್ಪಳ ಎಲ್ಲವೂ ತಾಳಲಯ ಬದ್ಧ!, ಇಂತಹ ಮೇಳವಾದ್ಯದಿಂದ ಕೂಡಿದ ಗೀತೆಯ ವಿವರಣೆ ನೀಡಿರುವ ವಿಜ್ಜಿಕಾ ಇದನ್ನು ಒನಕೆವಾಡು ಎಂದು ಹೆಸರಿಸಿಸದೆಯೇ ಈ ಪ್ರಕಾರದ ಗೀತೆಯ ವಿಚಾರವನ್ನು ತಿಳಿಸಿದ್ದಾಳೆ.

ಒನಕೆವಾಡಿನ ವಿಚಾರ ಅಲ್ಲಲ್ಲಿ ತಿಳಿದು ಬಂದರೂ ಅದರ ಲಕ್ಷಣಗಳನ್ನು ಯಾರೂ ತಿಳಿಸಿಲ್ಲ. ಆದರೆ ಸೋಮೇಶ್ವರನ (ಕ್ರಿ.ಶ.೧೧೨೯) ಮಾನಸೋಲ್ಲಾಸ ಕೃತಿಯಲ್ಲಿ ಒನಕೆವಾಡುಗಳು ತ್ರಿಪದೀ ರೂಪವಾಗಿರುತ್ತಿತ್ತೆನ್ನುವ ಉಲ್ಲೇಖ ದೊರಕುತ್ತದೆ. ನೇಮಿಚಂದ್ರನ ಲೀಲಾವತಿ (೧೧೭೦)ಕೃತಿಯೂ ಕೂಡ ಒನಕೆವಾಡುಗಳು ತ್ರಿಪದಿಗಳಲ್ಲಿರುತ್ತಿದ್ದವೆನ್ನುವುದನ್ನು ಸ್ಪಷ್ಟಪಡಿಸುತ್ತದೆ. ಇದೇ ಪ್ರಕಾರ ಕವಿ ಸುರಂಗ (ಕ್ರಿ.ಶ.೧೪೫೦-೧೫೦೦) ಕೂಡ, ಇದು ತ್ರಿಪದಿಯಲ್ಲಿರುತ್ತದೆನ್ನುವುದನ್ನು ಹೇಳಿದ್ದಾನೆ. ಸಿದ್ಧನಂದೇಶನ ಗುರುರಾಜ ಚಾರಿತ್ರೆಯಲ್ಲಿ "ಸುವ್ವಿ ಎಂದೊನಕೆವಾಡ ಹಾಡುತ್ತ ಕುಟ್ಟುತ್ತಿರಲ್" ಎಂಬ ಉಲ್ಲೇಖವು ಒನಕೆವಾಡು ಕುಟ್ಟುವ ಪದ ಎಂಬುದನ್ನು ತಿಳಿಸುತ್ತದೆ.

ಗಂಗದೊರೆ ಸೈಗೊಟ್ಟ ಶಿವಮಾರನ 'ಗಜಾಷ್ಟಕ'ವನ್ನು ಕುರಿತು ಶಾಸನವೊಂದು "ಏವೇಳ್ವುದೊ ಶಿವಮಾರ ಮಹೀವಳಯಾಧಿಪನ ಸುಭಗಕವಿತಾ ಗುಣಮಂ । ಭೂವಳಯದೊಳ್ ಗಜಾಷ್ಟಕಮೋವನಿಗೆಯುಮೊನಕೆವಾಡು ಮಾದುದೆ ಪೇಟ್ಗುಂ"[೧೯] ಎಂದು ಗಜಾಷ್ಟಕ ಕೃತಿಯು ಓವನಿಗೆ, ವೊನಕೆವಾಡಿನಷ್ಟು ಪ್ರಸಿದ್ಧಿ ಪಡೆಯಿತೆಂದು ಶ್ಲಾಘಿಸಿದೆ. ಇದನ್ನು ಕುರಿತು ಚಿದಾನಂದ ಮೂರ್ತಿಯವರು "ಒಂದು ಕೃತಿಯು ಒನಕೆವಾಡಾಗಿ ಪರಿಣಮಿಸುವುದು ಅದರ ಶ್ರೇಷ್ಠತ್ವದೊರೆಗಲ್ಲು" ಎಂದಿದ್ದಾರೆ[೨೦].

ಬಹುಶಃ ಹನ್ನೊಂದನೆಯ ಶತಮಾನದ ವೇಳೆಯಲ್ಲಿ 'ಮನೆಮನೆಯಲ್ಲಿ ಜನಪ್ರಿಯತೆ ಪಡೆಯಿತು' ಎನ್ನುವ ಅರ್ಥದ ಪಡೆನುಡಿಯಾಗಿ 'ಒನಕೆವಾಡು'ಪದ ಬಳಕೆಯಾಗುತ್ತಿದ್ದಿರಬೇಕು. ದುರ್ಗಸಿಂಹನ ಪಂಚತಂತ್ರದಲ್ಲಿ (೧೦೩೧)ಯೂ ಕೂಡ "ಸಮಸ್ತಾವನಿಯ ಜನಮೊನಕೆವಾಡಪ್ಪಿನೆಗಂ ಸಲೆ ನುಡಿದ ನುಡಿ...." ಎಂದು ತಿಳಿಸಿದೆ. ಭೀಮಕವಿ (೧೩೬೯) ಸಿರಿಯಾಳನ ಕೀರ್ತಿಯನ್ನು ಹೊಗಳುತ್ತಾ "ಮನೆಮನೆಗಳಲ್ಲಿ ಸ್ತ್ರೀಯರು ಒನಕೆವಾಡಾಗಿ ಹಾಡುವರು" ಎಂದು ತಿಳಿಸಿದ್ದಾನೆ.

"ಒನಕೆವಾಡಾಗಿ ಪರಿಣಮಿಸುವುದು ಅದರ ಜನಪ್ರಿಯವಾಯಿತು ಎಂದು ವ್ಯಾಖ್ಯಾನಿಸಬೇಕಾಗುತ್ತದೆ"[೨೧]

ತಿರುಮಲಾರ್ಯನ 'ಕರ್ಣವೃತ್ತಾಂತ ಕಥೆ' (೧೦.೨೩)ರಲ್ಲಿ "ಒನಕೆವಾಡುಡುಗಿ ವೊಲೆಯೊಳುರಿಯಡಗಿ ಭೋಜನಭಿಕ್ಷೆ ಕಳೆದ ಕಾಲದೊಳು....." ಎಂಬ ಸಾಲು ಒನಕೆವಾಡು ಅಡಗಲು ಭೋಜನವೇನೂ ಇರುವುದಿಲ್ಲ ,,...... ಎಂದು ತಿಳಿಸಿರುವಲ್ಲಿ ಕುಟ್ಟುವ ಕೆಲಸವು ಒನಕೆವಾಡಿನ ಗಾಯನವಿಲ್ಲದೆ ನಡೆಯುವುದೇ ಇಲ್ಲ ಅಥವಾ ಒನಕೆ ಕುಟ್ಟುವ ಸದ್ದಿಗೇ, ಲಯಕ್ಕೇ ಒನಕೆವಾಡು ಎಂದು ಕರೆದಿದ್ದು, ಕುಟ್ಟುವ ಸದ್ದು ಅಡಗಿರುವುದರಿಂದ ಊಟವಿಲ್ಲ ಎಂಬ ವಿಚಾರವನ್ನು ಇದು ಹೇಳುತ್ತಿದೆ.

ಒನಕೆವಾಡು ಧಾನ್ಯವನ್ನು ಕುಟ್ಟುವಾಗ ಹಾಡುತ್ತಿದ್ದ ಹಾಡು, ಇಂದು ಸಿಗುವ ಬೀಸೋಕಲ್ಲಿನ ಪದಗಳಂತೆ ಇದೊಂದು ಜಾನಪದಗೀತೆಯ ಪ್ರಾಕಾರವಾಗಿದ್ದಿರಬಹುದು. ಜಾನಪದ ಗೀತೆಗಳಲ್ಲಿ ಬಹುಪಾಲು ತ್ರಿಪದೀ

ರೂಪವಾಗಿವೆ. ಯಾವುದೋ ಒಂದು ಸಂಗತಿಯನ್ನು, ಒಂದು ಕತೆಯನ್ನು ತೆಗೆದುಕೊಂಡು ಅದನ್ನು ತ್ರಿಪದಿಗಳಲ್ಲಿ ಕಟ್ಟಿ ಧಾನ್ಯ ಕುಟ್ಟುವಾಗ ಹಾಡುತ್ತಿದ್ದರು.

ಕನ್ನಡಿಗಳೇ ಆದ ವಿಜಯಭಟ್ಟಾರಿಕೆಯ ಕಾಲದಲ್ಲಿ ಬಹು ಪ್ರಸಿದ್ಧವಾಗಿದ್ದ ಈ ಜನಪದ ಗೀತೆಯನ್ನು ಮೆಚ್ಚಿ ಸಂಸ್ಕೃತದಲ್ಲಿ ಇದರ ಕುರಿತಾಗಿ ರಚಿಸಿದ್ದಾಳೆ. ಒನಕೆವಾಡು ಆ ಕಾಲದಲ್ಲಿ ಸಾಮಾನ್ಯರಿಂದ ಅರಸರವರೆಗೂ ಮನಸೆಳೆದ ಜನಪದ ಪ್ರಕಾರವಾಗಿತ್ತು. ಇಂತಹ ಜನಪದ ಪ್ರಕಾರವನ್ನು ಛಂದೋಗ್ರಂಥಗಳು ಉಲ್ಲೇಖಿಸದಿದ್ದರೂ ಅರಸಿಯಾದ ವಿಜಯಭಟ್ಟಾರಿಕೆ ಈ ಕುರಿತು ರಚಿಸಿರುವುದು ಗಮನಾರ್ಹವಾಗಿದೆ.

ಒನಕೆವಾಡನ್ನು ಕುರಿತು ಚರ್ಚಿಸಿರುವ ಇಪ್ಪತ್ತನೆಯ ಶತಮಾನದ ನಂತರದ ಕೆಲವೇ ಗ್ರಂಥಗಳಲ್ಲಿ, ವಿಜಯಭಟ್ಟಾರಿಕೆ ತಿಳಿಸಿರುವ ಈ ಮುಕ್ತಕವನ್ನು ಯಾರೂ ಗಮನಿಸಿಲ್ಲ.

**ಪ್ರೇರಣೆ**

**ಏಕೋಭೂನ್ನಲಿನಾತ್ತ ತಶ್ಚ ಪುನಿನಾದ್ವಾಲ್ಮೀಕತಶ್ಚಾಪರ**
**ಸ್ತೇ ಸರ್ವೇ ಕವಯೋ ಭವಂತಿ ಗುರುವಸ್ತೇಭ್ಯೋ ನಮಸ್ಕುರ್ಮಹೆ ॥**
**ಅರ್ವಾಂಚೋ ಯದಿ ಗದ್ಯಪದ್ಯರಚನೈಶ್ಚೇತಶ್ಚಮತ್ಕುರ್ವತೆ ।**
**ತೇಷಾಂ ಮೂರ್ಧ್ನಿ ದದಾಮಿ ವಾಮಚರಣಂ ಕರ್ಣಾಟರಾಜಪ್ರಿಯಾ ॥**

ಈ ಪದ್ಯವು ವಿದ್ವತ್ವಲಯದಲ್ಲಿ ಸಾಕಷ್ಟು ಕುತೂಹಲವನ್ನೂ, ಚರ್ಚೆಯನ್ನೂ ಉಂಟುಮಾಡಿದೆ. ಬ್ರಹ್ಮ, ವಾಲ್ಮೀಕಿ, ವ್ಯಾಸರನ್ನುಳಿದು ಮಿಕ್ಕವರು ಕವಿಗಳೇ ಅಲ್ಲ, ಚಾತುರ್ಯವನ್ನು ತೋರದ ಇತ್ತೀಚಿನ ಕವಿಗಳ ತಲೆಯಮೇಲೆ ನನ್ನ ಎಡಗಾಲು ಎನ್ನುವ ಉದ್ಧಟತನವನ್ನು ತೋರಿದ ವಿಜ್ಜಿಕೆಯನ್ನು ಪಾಂಡಿತ್ಯ ಮದಾಂಧಳೆಂದು ಕರೆದಿದ್ದಾರೆ. ಆದರೆ ಈ ಪದ್ಯವನ್ನು ಮೆಚ್ಚಿದವರು ಇಲ್ಲದಿಲ್ಲ. ಈ ರೀತಿಯ ಪದ್ಯವನ್ನು ಬರೆದ ಇವಳ ಧೈರ್ಯವನ್ನು ಹೊಗಳಿದವರೂ ಇದ್ದಾರೆ. ಅಲ್ಲದೆ ಶಾಕಮಲ್ಲನೆಂಬುವನು ಇದೇ ಪದ್ಯವನ್ನು ಅನುಕರಿಸಿ ಈ ರೀತಿಯಾಗಿ ರಚಿಸಿದ್ದಾನೆ

**ಏಕೋಭೂತ್ಪಲಿನಾತ್ತತಶ್ಚ ನಲಿನಾಚ್ಚಾನ್ಯೋಪಿ ನಾಕೋರಭಾತ್**
**ಪ್ರಾಚ್ಯಸ್ತೇ ತ್ರಯಯೇವ ದಿವ್ಯ ಕವಯೋ ದಿವ್ಯಂತು ದೇವ್ಯಾಸಿರಾ ॥**
**ಅರ್ವಾಚೋ ಯದಿ ಗದ್ಯಪದ್ಯರಚನಾ ಚಾತುರ್ಯವಾಗುದ್ಧ ತಾ**
**ಸ್ತೇ ಸರ್ವಾನತಿಶೈಯ ಖೇಲತಿತರಾನ್ ಶಾಕಲ್ಲ ಮಲ್ಲಃ ಕವಿಃ ॥**

ಈ ಮಲ್ಲಕವಿ ಯಾರಿರಬಹುದು ಎಂದು ಖಚಿತವಾಗಿ ತಿಳಿದಿಲ್ಲ. ಸಂಸ್ಕೃತ ಕವಿಚರಿತೆ ರಚಿಸಿರುವ ಎಂ.ಎನ್.ಶ್ರೀನಿವಾಸ ಅಯ್ಯಂಗಾರ್ ಅವರು "ಮಲ್ಲಶಬ್ದವು ಕರ್ನಾಟಕ ರಾಜರ ಹೆಸರಿಗೆ ಹೊಂದಿರುತ್ತದೆ. ಉದಾಹರಣೆಗೆ ತ್ರಿಭುವನಮಲ್ಲದೇವ ಮುಂತಾದ ಹೆಸರುಗಳು ಇತಿಹಾಸದಲ್ಲಿ ದೊರಕುತ್ತದೆ"[೨೨] ಎಂದಿದ್ದಾರೆ. ಕಲ್ಯಾಣದ ಚಾಲುಕ್ಯರಲ್ಲಿ ಹಸ್ತಿಮಲ್ಲ, ಆಹವಮಲ್ಲ, ತ್ರೈಲೋಕ್ಯಮಲ್ಲ ಮೊದಲಾದವರು ಬರುತ್ತಾರೆ ಅಲ್ಲದೆ ಈ ಮನೆತನದಲ್ಲಿ ಮಾನಸೋಲ್ಲಾಸ ಮೊದಲಾದ ಮಹಾನ್ ಕೃತಿಗಳನ್ನು ರಚಿಸಿದ ಅರಸರೂ ಇದ್ದಾರೆ. ಬಾದಾಮಿ ಚಾಲುಕ್ಯರ ವಂಶಜರೇ ಎಂದು ಹೇಳಿಕೊಳ್ಳುವ ಕಲ್ಯಾಣಿ ಚಾಲುಕ್ಯ ಅರಸು ತಮ್ಮ ಪೂರ್ವಜಳಾದ ವಿಜ್ಜಿಕೆಯನ್ನು ಅನುಸರಿಸಿರುವುದರಲ್ಲಿ ಆಶ್ಚರ್ಯ ಎನಿಸುವುದಿಲ್ಲ.

ಮಹಾಕವಿಗಳು ತಾವು ಹೇಳಲಿರುವ ವಿಷಯಗಳನ್ನು ವಾಚ್ಯಾರ್ಥದಲ್ಲಿ ಸ್ಫೂರಿಸದೆ ಧ್ವನಿಯಲ್ಲಿ ಅಡಕಗೊಳಿಸಿರುತ್ತಾರೆ. ಕಿರಿದರಲ್ಲಿ ಪಿರಿದರ್ಥವನ್ನು ಎಂಬಂತೆ ಇವರ ರಚನೆಗಳಿರುತ್ತದೆ. ಇಂತಹ ರಚನೆಗಳನ್ನು ವಿಜಯಭಟ್ಟಾರಿಕೆಯ ಲಲಿತವೂ, ಮಧುರವೂ, ದೀರ್ಘಸಮಾಸ ಪದಗಳಿಂದ ಕೂಡಿರದ ಸರಳ ಪದಗಳ ಬಂಧದಿಂದ ಕೂಡಿರುವ ಪದ್ಯಗಳಲ್ಲಿ ಕಾಣಬಹುದು. ಇವಳ ಪದ್ಯಗಳು ಚಮತ್ಕಾರಯುತವಾಗಿಯೂ

ಅರ್ಥಶ್ಲೇಷೆಯಿಂದಲೂ ಕೂಡಿರುವಂಥದ್ದೆನ್ನುವುದನ್ನೂ ನಾವಿಲ್ಲಿ ಗಮನಿಸಿದ್ದೇವೆ. ಕಾಳಿದಾಸನ ನಂತರ ವೈದರ್ಭಿ ಶೈಲಿಯನ್ನು ಸಮರ್ಥವಾಗಿ ರೂಢಿಸಿಕೊಂಡವಳೆಂಬ ಹೆಮ್ಮೆಗೆ ಭಾಜನಳಾದ ವಿಜಯಭಟ್ಟಾರಿಕೆಯನ್ನು ಕುರಿತು ದೇಶದಾದ್ಯಂತ ಸಂಸ್ಕೃತ ವಿದ್ವಾಂಸರಷ್ಟೇ ಅಲ್ಲದೆ ವಿದೇಶೀ ವಿದ್ವಾಂಸರೂ ಕೂಡ ಮುಕ್ತಕಂಠದಿಂದ ಶ್ಲಾಘಿಸಿದ್ದಾರೆ.

ವಿಜಯಭಟ್ಟಾರಿಕೆ ಸಂಸ್ಕೃತ ನಾಟಕವನ್ನು ರಚಿಸಿದ್ದಾಳಲ್ಲದೆ ಒಂದು ಕನ್ನಡ ಶಾಸನವನ್ನೂ ರಚಿಸಿದ್ದಾಳೆ. ಇದೇ ಅಧ್ಯಾಯದ ಮುಂದಿನ ಭಾಗದಲ್ಲಿ ಅವುಗಳನ್ನು ಕುರಿತು ಚರ್ಚಿಸಲಾಗಿದೆ.

## ಶೀಲ ಭಟ್ಟಾರಿಕಾ

ಸಂಸ್ಕೃತದಲ್ಲಿ ಮುಕ್ತಕಗಳನ್ನು ರಚಿಸಿದ ಮತ್ತೋರ್ವ ಕರ್ನಾಟಕದ ಅರಸಿ ಶೀಲಭಟ್ಟಾರಿಕಾ. ಎಂಟನೆಯ ಶತಮಾನದಲ್ಲಿದ್ದ ಇವಳು ರಾಷ್ಟ್ರಕೂಟ ಮನೆತನದ ಪ್ರಭಾವಿ ಅರಸು ಧ್ರುವನ ಅರಸಿ. ಪೂರ್ವಚಾಲುಕ್ಯರೆಂದು ಕರೆಯುತ್ತಿದ್ದ ವೆಂಗಿಚಾಳುಕ್ಯ ವಿಷ್ಣುವರ್ಧನನ ರಾಜಕುಮಾರಿ. ಶೀಲಭಟ್ಟಾರಿಕೆಯು ವೆಂಗಿಚಾಳುಕ್ಯ ಹಾಗೂ ರಾಷ್ಟ್ರಕೂಟ ರಾಜಮನೆತನಗಳ ನಡುವೆ ನಡೆಯಲಿದ್ದ ಯುದ್ಧವನ್ನು ತಪ್ಪಿಸಿ, ಸ್ನೇಹ ಬಾಂಧವ್ಯವನ್ನು ವೃದ್ಧಿಸಲೆಂದು ಧ್ರುವನನ್ನು ವರಿಸುತ್ತಾಳೆ.

ಶಾಸನಗಳಲ್ಲಿ ಇವಳನ್ನು ಶೀಲಮಹಾದೇವಿಯನ್ನು ಶೀಲಭಟ್ಟಾರಿಕಾ, ಪರಮಭಟ್ಟಾರಿಕಾ, ಪರಮೇಶ್ವರಿ ಎಂದು ಸಂಭೋಧಿಸಲಾಗಿದೆ. ಈ ಸಂಬೋಧನೆಯೆ ರಾಣಿಯರಿಗಿದ್ದ ಪರಮಾಧಿಕಾರವನ್ನು ಸೂಚಿಸುತ್ತದೆ. ಕ್ರಿ.ಶ.೭೮೮ರ ಜಿತ್ವಾಯ್ ತಾಮ್ರಪಟಶಾಸನವು, ಇವಳು ತನ್ನ ಹೆಸರಿನಲ್ಲೇ ರಾಜ್ಯದ ಅಧಿಕಾರಿಗಳಾದ ವಿಷಯಪತಿ, ರಾಷ್ಟ್ರಪತಿ, ಗ್ರಾಮಕೂಟ, ನಿಯುಕ್ತ, ಮಹತ್ತರತಿಗೆ ನಂದಪುರಿದ್ವಾರಿ ವಿಷಯದೊಳಗಿನ ಕೊಳಪದ್ರ ಗ್ರಾಮವನ್ನು ದಾನವಾಗಿ ಕೊಟ್ಟು, ಇದನ್ನು ನಡೆಸಿಕೊಡಲು ದುರ್ಗಾದಿತ್ಯನೆಂಬುವನಿಗೆ ಆದೇಶಿಸಿರುವುದನ್ನು ತಿಳಿಸುತ್ತದೆ[೨೩]. ಈ ದಾನಶಾಸನವನ್ನು ರಾಜನ ಸಾಂಪ್ರದಾಯಿಕ ಅನುಮತಿಯನ್ನು ಪಡೆಯದೆಯೇ ಸ್ವತಂತ್ರವಾಗಿ ತನ್ನ ಹೆಸರಿನಲ್ಲೇ ಹೊರಡಿಸಿದ್ದಾಳೆ[೨೪]. ಕ್ರಿ.ಶ.೭೮೬ರ ಇಂದೋರ್ ಜಿಲ್ಲೆಯ ಜೇಥ್ವಾಯ್ ತಾಮ್ರಪಟಗಳು ಇವಳು ಅಧಿಕಾರಿಗಳಿಗೆ ತನ್ನ ಆದೇಶವನ್ನು ನೀಡಿರುವುದನ್ನು ಸ್ಪಷ್ಟವಾಗಿ ಉಲ್ಲೇಖಿಸುತ್ತದೆ.

ದೂತಕ ಸೋಮದೇವ ಶಂಖಯ್ಯನು ತಂದ ಆದೇಶದಂತೆ ಖಡ್ಗಸೇನನ ಪುತ್ರ ಮಹಾಸನ್ಧಿವಿಗ್ರಹಾಧಿಕಾರಿ ವಸುದೇವನು ೭೮೬ರಲ್ಲಿ ಇದನ್ನು ಬರೆದನು. ದೂತಕ ಮತ್ತು ಸಕ್ಷಿವಿಗ್ರಹಾಧಿಕಾರಿಯನ್ನು ಜೇಥ್ವಾಯ್ ತಾಮ್ರಪಟವು ಈ ಪ್ರಕಾರವಾಗಿ ಉಲ್ಲೇಖಿಸುತ್ತದೆ. “ಶ್ರೀ ಪೃಥುವೀವಲ್ಲಭ ಮಹಾದೇವಿ ಸಮಾದಿಷ್ಟ ಸೋಮಯಾಜಿ ಶಂಖಯ್ಯ ದೂತಕಂ ಲಿಖಿತಂ ಚ ಪರಮೇಶ್ವಯೋಜ್ಞಯಾ ಖಡ್ಗಸೇನ ಸೂನುನಾ ಮಹ ಸಕ್ಷಿವಿಗ್ರಹಾಧಿಕೃತೇನ ಗುಣಾಭರಾಪರನಾಮ್ನಾ ವಸುದೇವೇನೇತಿ.” ಇಲ್ಲಿ ದೂತಕನು ‘ಮಹಾದೇವಿ ಸಮಾಧಿಷ್ಟ’ (ಉಪಾಸಕ) ನೆಂದು ಕರೆದುಕೊಂಡಿದ್ದಾನೆ. ಮಳಖೇಡದ ರಾಷ್ಟ್ರಕೂಟರು ಮಧ್ಯಪ್ರದೇಶದಲ್ಲಿ ಬರೆಸಿದ ಮೊದಲ ತಾಮ್ರಪಟ ಇದಾಗಿದೆ. ಈ ಸಂದರ್ಭದಲ್ಲಿ ಅರಸಿ ಪರಮಭಟ್ಟಾರಿಕಾ ಶೀಲಮಹಾದೇವಿಯೊಡನೆ ದೊರೆ ಧ್ರುವ ಕೂಡ ಕುರುಗೋಟದಲ್ಲಿರುತ್ತಾನೆ.

ಕಲ್ಹಣನು ತನ್ನ ರಾಜತರಂಗಿಣಿಯಲ್ಲಿ ಕಾಶ್ಮೀರದ ಅರಸು ಲಲಿತಾದಿತ್ಯನ ದಿಗ್ವಿಜಯವನ್ನು ಅತಿಶಯವಾಗಿ ಬಣ್ಣಿಸುತ್ತಾ ಪೂರ್ವಸಮುದ್ರದವರೆಗಿನ ರಾಜ್ಯಗಳನ್ನೆಲ್ಲಾ ಗೆದ್ದು, ಗೌಡದೇಶದ ಅಧಿಪತಿಯನ್ನು ಪರಾಭವಗೊಳಿಸಿ ದಕ್ಷಿಣದ ಮೇಲೆ ದಂಡೆತ್ತಿ ಹೋಗುತ್ತಾನೆಂಬ ಬಣ್ಣನೆ ನೀಡಿದ್ದಾನೆ. ಆ ಸಂದರ್ಭದಲ್ಲಿ ದಕ್ಷಿಣದಲ್ಲಿ ‘ರಟ್ಟಾ’ ಎಂಬ ಕರ್ನಾಟಕದ ರಾಣಿಯು ರಾಜ್ಯವಾಳುತ್ತಿದ್ದಳೆಂಬ ವಿಚಾರವನ್ನು ಕಲ್ಹಣನು ತಿಳಿಸಿದ್ದಾನೆ. ಕಲ್ಹಣನು ರಾಷ್ಟ್ರಕೂಟರನ್ನು ರಟ್ಟರೆಂದು ಗುರುತಿಸಿದ್ದಾನೆ. ಆ ಕಾಲದ ರಾಷ್ಟ್ರಕೂಟ ಮನೆತನದ ಪ್ರಸಿದ್ಧ ಅರಸಿ ಶೀಲಭಟ್ಟಾರಿಕೆಯೇ ಆಗಿದ್ದಾಳೆ.

ಕಲ್ಹಣನು ಬಣ್ಣಿಸಿರುವ ಲಲಿತಾದಿತ್ಯನ ದಿಗ್ವಿಜಯ ಉತ್ಪ್ರೇಕ್ಷೆಯಿಂದ ಕೂಡಿದೆ ಎಂಬುದನ್ನು ವಿದ್ವಾಂಸರು ಗುರುತಿಸಿದ್ದಾರೆ. ಲಲಿತಾದಿತ್ಯನು ಕಾವೇರಿ ತೀರದವರೆಗೆ ದಂಡಯಾತ್ರೆ ಮಾಡಿರುವ ಸಾಧ್ಯತೆಯೇ ಇಲ್ಲ ಎಂದು ಜಿ.ಎಸ್.ಗಾಯಿಯವರು ವಾ.ವಿ.ಮಿರಾಶಿಯವರ ಅನುವಾದಕೃತಿ ಭವಭೂತಿಯ ಪ್ರಸ್ತಾವನೆಯಲ್ಲಿ ತಿಳಿಸಿದ್ದಾರೆ[೨೫]. ಆದರೆ ಕಾಶ್ಮೀರದ ಕಲ್ಹಣ ರಾಷ್ಟ್ರಕೂಟ (ರಟ್ಟ) ಸಾಮ್ರಾಜ್ಯದಲ್ಲಿ ಆಳ್ವಿಕೆ ನಡೆಸುತ್ತಿದ್ದ ಪ್ರಭಾವಿ ಅರಸಿ ಎಂದು ಉಲ್ಲೇಖಿಸಿರುವುದು, ಆ ಕಾಲದಲ್ಲಿ ಆಳ್ವಿಕೆ ನಡೆಸುತ್ತಿದ್ದ ಶೀಲಭಟ್ಟಾರಿಕೆಯ ಹಿರಿಮೆ ಹಾಗೂ ಪ್ರಖ್ಯಾತಿಯನ್ನು ಕುರಿತು ತಿಳಿಸುತ್ತದೆ.

**ಶೀಲಮಹಾದೇವಿಯ ಮುಕ್ತಕಗಳು**

ಶೀಲಮಹಾದೇವಿಯನ್ನು ಹಲವು ಪ್ರಾಚೀನ ಕವಿಗಳು ಉಲ್ಲೇಖಿಸಿದ್ದಾರೆ. ಕೆಲವರು ತಮ್ಮ ಶಾಸ್ತ್ರಗ್ರಂಥಗಳಲ್ಲಿ ವಿವರಣೆಗಾಗಿ ನೀಡುವ ಉದಾಹರಣಾ ಪದ್ಯಗಳಾಗಿ ಇವಳ ಪದ್ಯಗಳನ್ನು ಬಳಸಿಕೊಂಡಿದ್ದಾರೆ. ಮತ್ತೆ ಕೆಲವು ಸುಭಾಷಿತಗಳಲ್ಲಿ ಸಂಗ್ರಹಗೊಂಡಿವೆ. ವಿಜಯಭಟ್ಟಾರಿಕೆಯ ಮುಕ್ತಕಗಳಂತೆ ಇವಳ ಮುಕ್ತಕಗಳೂ ಒಂದೆಡೆ ಪ್ರಕಟವಾಗಿಲ್ಲ. ಅಲ್ಲದೆ ಇವಳು ಎಷ್ಟು ಮುಕ್ತಕಗಳನ್ನು ರಚಿಸಿರುವಳೆಂಬುದೂ ಸ್ಪಷ್ಟವಾಗಿ ತಿಳಿದು ಬರುವುದಿಲ್ಲ.

ಶಾರ್ಙ್ಗಧರ ಪದ್ಧತಿಯಲ್ಲಿ ಧನದೇವನ ಒಂದು ಶ್ಲೋಕದಲ್ಲಿ ಕೆಲವು ಸಂಸ್ಕೃತ ಕವಯತ್ರಿಯರನ್ನು ಉಲ್ಲೇಖಿಸಿದ್ದಾನೆ. ಇಲ್ಲಿ ಕರ್ನಾಟಕದವಳೇ ಆದ ವಿಜ್ಜಿಕಾಳೊಂದಿಗೆ ಶೀಲಾಳ ಹೆಸರೂ ಸೇರಿರುವುದನ್ನು ಕಾಣುತ್ತೇವೆ. ಇವಳೂ ಕೂಡ ವಿಜ್ಜಿಕಾಳಂತೆಯೇ ವಿದ್ವಾಂಸರಿಂದ ಪ್ರಶಂಸೆಯನ್ನು ಪಡೆದಿದ್ದಳು.

**"ಶೀಲಾ ವಿಜ್ಞಾ ಮಾರುಲಾ ಮೋರಿಕಾದ್ಯಾಃ ।**
**ಕಾವ್ಯಂ ಕರ್ತುಂ ಸಂತಿ ವಿಜ್ಞಾಃ ಸ್ತ್ರೀ ಯೋಪಿ"॥**

ಜಲ್ಹಣನ ಸೂಕ್ತಿಮುಕ್ತಾವಳಿಯಲ್ಲಿ ಪಾಂಚಾಲೀ ಲಕ್ಷಣವನ್ನು ಹೇಳುವ ಪದ್ಯವೊಂದು ಈ ರೀತಿ ಉದ್ಧೃತವಾಗಿದೆ

**ಶಬ್ದಾರ್ಥಯೋಸ್ಸಮೋ ಗುಮ್ಮಃ ಪಾಞ್ಚಾಲೀ ರೀತಿರಿಷ್ಯತೇ ।**
**ಶೀ(ಶಿ)ಲಾಭಟ್ಟಾರಿಕಾವಾಚಿ ಬಾಣೋಕ್ತಿಷು ಚ ಸಾ ಯದಿ ॥** [೨೬]

"ಶಬ್ದ ಅರ್ಥ ಇವೆರಡೂ ಸಮಪ್ರಮಾಣದಲ್ಲಿ ಮಾಲೆ ಕಟ್ಟಲ್ಪಡುವುದು 'ಪಾಂಚಾಲೀ' ರೀತಿ" ಎಂದು ಇದರ ಲಕ್ಷಣವನ್ನು ತಿಳಿಸಿರುವ ಜಲ್ಹಣ "ಶೀ(ಶಿ?)ಲಾಭಟ್ಟಾರಿಕೆ ಹಾಗೂ ಬಾಣ ಇವರಿಬ್ಬರ ಸಾಹಿತ್ಯದಲ್ಲಿ ಮಾತ್ರ ಅದು ಕಾಣಿಸುತ್ತದೆ" ಎಂದಿದ್ದಾನೆ.

ಇಲ್ಲಿ ಜಲ್ಹಣನು ಶೀಲಭಟ್ಟಾರಿಕೆಯ ರಚನೆಗಳು 'ಪಾಂಚಾಲೀ' ರೀತಿಯಲ್ಲಿರುವುದೆಂದು ಶ್ಲಾಘಿಸಿದ್ದಾನೆ. ಅಲ್ಲದೆ ಪ್ರಸಿದ್ಧ ಕವಿ ಬಾಣನೊಂದಿಗೆ ಹೋಲಿಸಿರುವುದು ಇವಳ ಕವಿತಾ ಪ್ರೌಢಿಮೆಯನ್ನು ತಿಳಿಸುತ್ತದೆ.

ಭೋಜನು ತನ್ನ ಲಕ್ಷಣ ಗ್ರಂಥದಲ್ಲಿ ಪಾಂಚಾಲಿ ರೀತಿಯನ್ನು ಕುರಿತು

**ಸಮಸ್ತ ಪಂಚಷಪದಾಮೋಜುಕನ್ತಿ ಸಮನ್ವಿತಾಮ್ ।**
**ಮಧುರಾಂ ಸುಕುಮಾರಾಂ ಚ ಪಾಞ್ಚಾಲೀಂ ಕವಯೋ ವಿದುಃ ॥**[೨೭] ಐದಾರು ಪದಗಳನ್ನು ಮಾತ್ರ ಸೇರಿಸಿರುವ ಸಮಾಸಗಳಿಂದ ತುಂಬಿ, ಓಜಸ್ (=ಗಾಢಬಂಧ ಅಥವಾ ಅರ್ಥದ ಪ್ರೌಢಿಮೆ), ಕಾಂತಿ (=ಶೈಲಿಯ ಶ್ರೀಮಂತಿಕೆ ಅಥವಾ ಆಕರ್ಷಕತೆ) ಈ ಗುಣಗಳನ್ನು ಹೆಚ್ಚು ಸಮಾಸಗಳಿಲ್ಲದೇ ಮೃದುವಾದ ಶಬ್ದಗಳಿರುವ ರೀತಿಯನ್ನು 'ಪಾಂಚಾಲಿ' ಎಂದು ಕವಿಗಳು ತಿಳಿದಿದ್ದಾರೆ" ಎಂದಿದ್ದಾನೆ. ಇಂತಹ ಮಧುರ ಬಂಧದಲ್ಲಿ ಶೀಲಭಟ್ಟಾರಿಕೆಯ ಮುಕ್ತಕಗಳು ರಚಿತವಾಗಿವೆ.

ಬಾಣನ ಕಾದಂಬರಿಯನ್ನು ಆಧರಿಸಿದ ಕನ್ನಡ ಅವತರಣಿಕೆಯ 'ಪುಂಡರೀಕ'ದ ಕರ್ತೃ ಎಸ್.ಜಗನ್ನಾಥ ಅವರು ಮುನ್ನುಡಿಯಲ್ಲಿ ಈ ಕುರಿತು "ಪಾಂಚಾಲಿ ರೀತಿಯನ್ನು ನಿರ್ವಹಿಸಿರುವವರ ಪೈಕಿ ಬಾಣ ಹಾಗೂ ಶೀಲಾಭಟ್ಟಾರಿಕೆ ಇಬ್ಬರೂ ಶ್ರೇಷ್ಠರು" ಎಂಬುದಾಗಿ ಜಲ್ಹಣ ಅಭಿಪ್ರಾಯ ಪಟ್ಟಿರುವುದೇನೋ ಈ ಶ್ಲೋಕದಿಂದ ಗೊತ್ತಾಗುತ್ತದೆ. ಆದರೆ "ಬಾಣ ಹಾಗೂ ಶೀಲಾಭಟ್ಟಾರಿಕೆಯರ ಕೃತಿಗಳಿರುವುದೆಲ್ಲಾ ಒಂದೇ ಶೈಲಿ, ಅದರ ಹೆಸರುಪಾಂಚಾಲಿ' ಎಂದು ಹೇಳಲಾಗದು....." ಎಂದಿದ್ದಾರೆ. ಶೀಲಭಟ್ಟಾರಿಕೆಯ ಸಮಗ್ರ ಮುಕ್ತಕಗಳು ದೊರಕದೆ ಇಂತಹ ಹೇಳಿಕೆಗಳನ್ನು ನೀಡಲು ಸಾಧ್ಯವಾಗುವುದಿಲ್ಲ. ದೊರಕಿರುವ ಒಂದೆರಡು ಮುಕ್ತಕಗಳಿಂದ ಕವಯತ್ರಿಯ ಕವಿತಾ ಸಾಮರ್ಥ್ಯವನ್ನು ಅಳೆಯುವುದು ಸಾಧ್ಯವಿಲ್ಲ. ಶೀಲಭಟ್ಟಾರಿಕೆಯನ್ನು ಬಾಣಕವಿಯ ಸಮನಾಗಿ ಕಂಡಿರುವ ಜಲ್ಹಣನಿಗೆ ಈಕೆಯ ಸಮಗ್ರ ಪದ್ಯಗಳು ದೊರಕಿರುವ ಸಾಧ್ಯತೆಗಳಿವೆ.

ಸಂಸ್ಕೃತ ಕವಯತ್ರಿ ಶೀಲಭಟ್ಟಾರಿಕ ಕಾಶ್ಮೀರದವಳು ಎಂಬ ವಾದವೂ ಇದೆ. ಆದರೆ ಭಟ್ಟಾರಿಕೆ ಎಂಬ ಅಭಿಧಾನ ರಾಜಮನೆತನದವರದು, ಅಲ್ಲದೆ ಇವಳನ್ನು ಉಲ್ಲೇಖಿಸಿರುವ ಶಾಙ್ಗದೇವ, ಜಲ್ಹಣರಿಗಿಂತ ಪ್ರಾಚೀನ ಕಾಲದಲ್ಲಿದ್ದ ಶೀಲಭಟ್ಟಾರಿಕೆ ಕರ್ನಾಟಕದವಳೇ ಆಗಿರುವುದರಿಂದ ಬಹುಮತದ ವಿದ್ವಾಂಸರು ಇವಳು ಕರ್ನಾಟಕದ ಪ್ರಸಿದ್ಧ ರಾಜಮನೆತನವಾದ ರಾಷ್ಟ್ರಕೂಟ ಮನೆತನದವಳೆಂಬ ಅಭಿಪ್ರಾಯವನ್ನೇ ವ್ಯಕ್ತಪಡಿಸಿದ್ದಾರೆ.

ಜಲ್ಹಣ ಉಲ್ಲೇಖಿಸಿರುವ ಮೂರು ಮುಕ್ತಕಗಳಲ್ಲೊಂದು ಕಾವ್ಯಪ್ರಕಾಶದಲ್ಲಿಯೂ ಉದಾಹೃತವಾಗಿದೆ.

**ಯಃ ಕೌಮಾರಹರಃ ಸ ಏವ ಹಿ ವರಸ್ತಾ ಏವ ಚೈತ್ರ ಕ್ಷಪಾ**
**ಸ್ತೇಚೋನ್ಮೀಲಿತ ಮಾಲತೀ ಸುರಭಯಃ ಪ್ರೌಢಾಃ ಕದಂಬಾನಿಲಾಃ।**
**ಸಾ ಚೈವಾಸ್ಮಿ ತಥಾಪಿ ಚೌರ್ಯ ಸುರತವ್ಯಾಪಾರಲೀಲಾವಿಧೌ**
**ರೇವಾರೋಧಸಿ ವೇತಸೀತರುತಲೇ ಚೇತಃ ಸಮುತ್ಕಂಠತೇ ॥**

ಶೀಲಭಟ್ಟಾರಿಕೆಯ ಈ ಮುಕ್ತಕವನ್ನು ತೀನಂಶ್ರೀ ಅವರು ಈ ಪ್ರಕಾರವಾಗಿ ಕನ್ನಡದಲ್ಲಿ ಅನುವಾದಿಸಿದ್ದಾರೆ.

**ನನ್ನ ಕೌಮಾರವನದಾರು ಕಸಿದನೋ ಅವನೆ ವಲ್ಲಭನು, ಅದೆ ವಸಂತದ ನಿಶೆಗಳು**
**ಮಾಲತಿಯ ಪರಿಮಳದ ಸೆರೆಯ ಬಿಡಿಸಿ ಕದಂಬ ವನದ ಮೇಲ್ಮೆತಂದ ಅದೆ ಸಮೀರ**
**ಅದೆ ನಾನು ಮತ್ತೆ ; ಈ ಎಲ್ಲವಿಂತಿರಲೇನು ಅಲ್ಲಿ ರೇವಾನದಿಯ ತೀರದಲ್ಲಿ**
**ಹಬ್ಬೆಗಿಡದಡಿಯಲ್ಲಿ ಆ ರಹಸ್ಯ ಪ್ರಣಯ ಕೇಳಿಯನು ಬಗೆದು ತುಡಿವುದು ಹೃದಯವು॥**[೨೮]

ಎಸ್.ಜಗನ್ನಾಥ್ ಅವರು ಹೇಳಿರುವಂತೆ ದೊರೆತಿರುವ ಶೀಲಭಟ್ಟಾರಿಕೆಯ ಒಂದೆರಡು ಮುಕ್ತಕಗಳು ಪೋಲಿ ಪದ್ಯಗಳೇ ಆಗಿವೆ. ಆದರೆ, ಶೀಲಭಟ್ಟಾರಿಕೆ ರಚಿಸಿರುವ ಮುಕ್ತಕಗಳ ಸಂಖ್ಯೆ ನಿಖರವಾಗಿ ತಿಳಿದು ಬಂದಿಲ್ಲ. ಆದರೆ ಪ್ರಸಿದ್ಧ ಅಲಂಕಾರಿಕರು ಇವಳ ಮುಕ್ತಕವನ್ನು ಉದಾಹರಣೆಯಾಗಿ ಬಳಸಿರುವುದರಿಂದ ಇವಳ ರಚನೆಗಳಲ್ಲಿ ಮೂರು ಪದ್ಯಗಳು ಮಾತ್ರ ದೊರಕಿವೆ. ಅಗಾಧ ಸಂಸ್ಕೃತ ಕಾವ್ಯಗಳ ರಾಶಿಯಲ್ಲಿ ಮರೆಯಾಗಿರುವ ಇವಳ ಮುಕ್ತಕಗಳನ್ನು ಹೊರತೆಗೆದು ಒಂದೆಡೆ ಸಂಕಲಿಸುವ ಕೆಲಸವಾದಾಗ ಮಾತ್ರ ಇವಳ ಪಾಂಡಿತ್ಯವನ್ನು ಸರಿಯಾಗಿ ತೂಗಿನೋಡಲು ಸಾಧ್ಯವಾಗುತ್ತದೆ.

## ಜಗನ್ಮೋಹಿನಿ (ತುಕ್ಕಾರಾಣಿ)

ವಿಜಯನಗರದ ಪ್ರಸಿದ್ಧ ಅರಸು ಕೃಷ್ಣದೇವರಾಯನನ್ನು ವರಿಸಿದ ಕಳಿಂಗ ರಾಜಕುಮಾರಿ ತುಕ್ಕಾರಾಣಿ. ಇವಳು ಅತ್ಯಂತ ಸುಂದರಿಯಾದ್ದ ಕಾರಣ ಜಗನ್ಮೋಹಿನಿ ಎಂದು ಇವಳನ್ನು ಕರೆಯಲಾಗುತ್ತಿತ್ತು. ವಿಜಯನಗರ ಕಾಲದ ಕೆಲವು ಕೃತಿಗಳಲ್ಲಿ ಇವಳು ಉಕ್ತಳಾಗಿದ್ದಾಳೆ. ಅವುಗಳಲ್ಲಿ ಕುಮಾರ ದೂರ್ಜಟಿ ರಚಿಸಿರುವ ಕೃಷ್ಣದೇವರಾಯ

ವಿಜಯಮ್ ಕೃತಿಯಲ್ಲಿ ಇವಳನ್ನು ತುಕ್ಕಾರಾಣಿ ಎಂದು ಕರೆದಿದ್ದರೆ, 'ರಾಜವಾಚಕಮ್' ಕೃತಿಯಲ್ಲಿ ಇವಳನ್ನು ಜಗನ್ಮೋಹಿನಿ ಎಂದು ಕರೆಯಲಾಗಿದೆ. ಆದರೆ ಕೃಷ್ಣದೇವರಾಯನ ದಿನಚರಿ'ಯಲ್ಲಿ ಇವಳನ್ನು ಕೇವಲ 'ಗಜಪತಿ ಕೌಮಾರಿತಿ' ಎಂದು ಕರೆದಿದೆ[೨೯]. ಸಂಗೀತಸೂರ್ಯೋದಯಮು ಗ್ರಂಥದಲ್ಲಿಯೂ ಕೂಡ ಇವಳನ್ನು 'ಗಜಪತಿಸುತಾ' ಎಂದೇ ಕರೆಯಲಾಗಿದೆ. ಇದಲ್ಲದೆ ಇನ್ನೂ ಹಲವಾರು ತೆಲುಗು ಕೃತಿಗಳಲ್ಲಿ ಇವಳು ಉಲ್ಲೇಖಗೊಂಡಿದ್ದಾಳೆ. ಕೃಷ್ಣದೇವರಾಯನ ಪ್ರಧಾನ ಅರಸಿಯರಲ್ಲಿ ಇವಳೂ ಒಬ್ಬಳಾಗಿದ್ದಳೆನ್ನುವುದನ್ನು ಈ ಕೃತಿಗಳು ತಿಳಿಸುತ್ತವೆ. ಸಂಗೀತ, ನರ್ತನ ಮೊದಲಾದ ಲಲಿತ ಕಲೆಗಳಲ್ಲಿ ನೈಪುಣ್ಯತೆ ಪಡೆದಿದ್ದ ಇವಳು ಉತ್ತಮ ಕವಯತ್ರಿಯೂ ಆಗಿದ್ದಳು.

ಸಂಸ್ಕೃತದಲ್ಲಿ ಇವಳು ರಚಿಸಿರುವ ಐದು ಮುಕ್ತಕಗಳು ತುಕ್ಕಾಪಂಚಕವೆಂದೇ ಪ್ರಸಿದ್ಧವಾಗಿವೆ. ತುಕ್ಕಾ ಎಂದರೆ ದುಂಬಿ ಎಂಬ ಅರ್ಥವಿದೆ. ದುಂಬಿ-ತುಂಬಿಯು ಪ್ರಾಕೃತದಲ್ಲಿ ತುಕ್ಕಾ ಆಗಿದೆ[೩೦]. ಈ ತುಕ್ಕಾ ಪಂಚಕವು ದುಂಬಿಯನ್ನು ಕುರಿತು ಹೇಳುವುದಾದ್ದರಿಂದ ಇದನ್ನು 'ಭೃಂಗ ಪಂಚಕಮ್' ಎಂದೂ ಕರೆಯಲಾಗುತ್ತದೆ.

**ಅರಸಿಯ ಕುರಿತಾದ ಐತಿಹ್ಯ:** ಕೃಷ್ಣದೇವರಾಯನು ಕಳಿಂಗರಾಜ್ಯದಮೇಲೆ ಜಯಸಾಧಿಸಿದಾಗ ಒರಿಸ್ಸಾದ ಅರಸು ಗಜಪತಿ ತನ್ನ ಮಗಳು ಜಗನ್ಮೋಹಿನಿಯನ್ನು ಕೃಷ್ಣದೇವರಾಯನಿಗೆ ಮದುವೆ ಮಾಡಿಕೊಟ್ಟು ಸಂಬಂಧ ಬೆಳೆಸುತ್ತಾನೆ. ಆದರೆ ಒರಿಸ್ಸಾದ ರಾಜಕುಮಾರನೊಬ್ಬನ ಚಿತಾವಣೆಯಿಂದ ತುಕ್ಕಾದೇವಿಯು ಕೃಷ್ಣದೇವರಾಯನನ್ನು ಕೊಲ್ಲುವ ಪ್ರಯತ್ನ ಮಾಡಿದಳೆಂದೂ, ಮಹಾಮಂತ್ರಿ ತಿಮ್ಮರಸನ ಮುಂಜಾಗರೂಕತೆಯಿಂದ ರಾಯನು ಪಾರಾದನೆಂದೂ, ಇದರಿಂದ ಕುಪಿತನಾದ ಕೃಷ್ಣದೇವರಾಯ ಇವಳನ್ನು ಪರಿತ್ಯಾಗ ಮಾಡಿದನೆಂಬ ಐತಿಹ್ಯ ಕೇಳಿಬರುತ್ತದೆ. ಮತ್ತೊಂದು ಐತಿಹ್ಯದ ಪ್ರಕಾರ, ಹಂಪಿಯ ವಿಜಯವಿಟ್ಠಲ ದೇವಾಲಯದಲ್ಲಿನ ಸಂಗೀತ ಸ್ಥಂಭಗಳನ್ನು ನಿರ್ಮಿಸುವುದರಲ್ಲಿ ಬಹಳ ಆಸಕ್ತಿ ತೋರಿದ ಇವಳು, ಒರಿಸ್ಸಾದಿಂದ ಹಲವು ಶಿಲ್ಪಿಗಳನ್ನು ಕರೆಸಿಕೊಂಡು ಕೃಷ್ಣದೇವರಾಯ ಮೆಚ್ಚುವಂತಹ ನಿರ್ಮಾಣ ಕಾರ್ಯ ನಡೆಸುತ್ತಿದ್ದಳು. ಆದರೆ, ಇವಳ ಸೌಂದರ್ಯ, ನೈಪುಣ್ಯತೆಗಳನ್ನು ಸಹಿಸದ ಅರಮನೆಯ ಕುತಂತ್ರಿಗಳ ಕಿವಿಮಾತಿಗೆ ಕಟ್ಟುಬಿದ್ದು ಅರಸು ಕೃಷ್ಣದೇವರಾಯನು ಇವಳನ್ನು ರಾಜಧಾನಿಯಿಂದ ದೂರದಲ್ಲಿರಿಸಿದನೆಂದು ತಿಳಿದು ಬರುತ್ತದೆ. ಇವು ಯಾವುದೇ ಆಧಾರವಿಲ್ಲದ ದಂತಕಥೆಗಳಾಗಿವೆ. ಆದರೆ ವಾಸ್ತವವಾಗಿಯೂ ಇವಳು ತನ್ನ ಜೀವಿತಕಾಲದಲ್ಲಿ ವಿಜಯನಗರದ ರಾಜಧಾನಿ ಹಂಪಿಯಲ್ಲಿ ಇರದೆ, ದೂರದ ಕರ್ನೂಲು ಜಿಲ್ಲೆಯ ಕಂಬಂ ಗ್ರಾಮದಲ್ಲಿ ನೆಲೆಸಿದ್ದಳು ಎಂಬುದು ವಿಜಯನಗರ ಇತಿಹಾಸದಲ್ಲಿ ದಾಖಲಾದ ವಿಚಾರವಾಗಿದೆ. ಅಲ್ಲಿ ಇವಳು ತನ್ನ ಕಟ್ಟಿಸಿದ ಕೆರೆಯೊಂದು ಇಂದಿಗೂ ಬಳಕೆಯಾಗಿತ್ತಿದೆ. ಇವಳು ಕಂಬಂಗೆ ಹೋಗುವುದಿಕ್ಕಿಂತ ಮೊದಲು ವಿಜಯನಗರದಲ್ಲಿ ಇದ್ದಳೆನ್ನುವುದಕ್ಕೆ ವಿದೇಶಿ ಪ್ರವಾಸಿಗರ ಉಲ್ಲೇಖದಲ್ಲಿ ಆಧಾರ ಸಿಗುತ್ತದೆ. ಕ್ರಿ.ಶ.೧೫೨೦-೨೧ರ ಸುಮಾರಿನಲ್ಲಿ ಪೇಯಸ್ ಎಂಬುವ ಪ್ರವಾಸಿ ಬರೆದಿರುವ ವರದಿಯಲ್ಲಿ ಕಳಿಂಗ ರಾಜಪುತ್ರಿಯ ಅರಮನೆಯ ಉಲ್ಲೇಖ ಸಿಗುತ್ತದೆ. ಬಹುಶಃ ಈ ಕಾಲದ ನಂತರ ಇವಳು ಕಂಬಂ ಗ್ರಾಮಕ್ಕೆ ತೆರಳಿರಬಹುದು. ಇವಳು ಪ್ರಸಿದ್ಧ ರಾಜಮನೆತನದ ಕುಮಾರಿಯಾಗಿ ಬಂದಿದ್ದರೂ ಸಹ ತಿರುಪತಿಯಲ್ಲಿ ಕ್ರಿ.ಶ.೧೫೨೧ರಲ್ಲಿ ಸ್ಥಾಪಿಸಲಾದ ಕೃಷ್ಣದೇವರಾಯ, ತಿರುಮಲದೇವಿ ಹಾಗೂ ಚಿನ್ನಾದೇವಿಯರ ಪ್ರಸಿದ್ಧ ಕಂಚಿನ ವಿಗ್ರಹಗಳೊಂದಿಗೆ ಇವಳ ವಿಗ್ರಹಕ್ಕೆ ಸ್ಥಾನ ಸಿಗದೆ ಇರುವುದು, ಕೃಷ್ಣದೇವರಾಯ ಯಾವುದೋ ಘಟನೆಯ ಹಿನ್ನೆಲೆಯಲ್ಲಿ ಇವಳನ್ನು ಉಪೇಕ್ಷಿಸುತ್ತಿದ್ದುದೇ ಕಾರಣವಾಗಿರಬಹುದು.

**ತುಕ್ಕಾಪಂಚಕ**

ಕೃಷ್ಣದೇವರಾಯನಿಂದ ಪರಿತ್ಯಕ್ತಳಾದ ತುಕ್ಕಾದೇವಿಯು, ತನ್ನ ಅಳಲನ್ನು, ಮನದ ಭಾವನೆಗಳನ್ನು ಪದ್ಯರೂಪದಲ್ಲಿ ಹೊರಹಾಕಿದ್ದಾಳೆ. ಇವಳು ರಚಿಸಿರುವ ಪದ್ಯಗಳಲ್ಲಿ ಕೃಷ್ಣದೇವರಾಯನನ್ನು ಭ್ರಮರಕ್ಕೆ, ಹೋಲಿಸಿ, ಆ ಭ್ರಮರದಿಂದ ನಿರ್ಲಕ್ಷೆಗೊಳಗಾದ (ಉಪೇಕ್ಷಿಸಲ್ಪಟ್ಟ) ಹೂವು ತಾನು ಎಂಬಂತೆ ಚಿತ್ರಿಸಿದ್ದಾಳೆ.

**ವನಾನ್ತೇ ನವಮಂಜರೀಷು ಚರನ್ ಷಟ್ಪದ:**
**ಗಂಧಫಲೀಮ್ ನ ಅಜಿಘ್ರತ್**
**ಸಾ ಕಿಂ ರಮ್ಯಾ ನ ಸ ಚ ರಂಸ್ತಾ ನ**
**ಕೇವಲಂ ಈಶ್ವರಾಜ್ಞಾವಲೀಯಸೀ ॥**

"ಭ್ರಮರವೆ, ನೀನು ಕಾಡುಗಳಲ್ಲಿ ಸುತ್ತುತ್ತ ಬಳ್ಳಿಗಳ ಮೇಲೂ ಸಂಚರಿಸುತ್ತೀಯೆ. ನೀನು ಗಂಧಫಲ ಹೂವನ್ನು ಆಸ್ವಾದಿಸದೆ ಇರುತ್ತೀಯೇನು? ಆ ಬಳ್ಳಿ ರಮ್ಯವಾಗಿಲ್ಲವೆ? ಭ್ರಮರವು ರಸಿಕವಲ್ಲವೆ? ಈಶ್ವರನ ಆಣತಿಯು ಯಾವಾಗಲೂ ಬಲವಾದುದು". ಎಂದು ತಿಳಿಸುವ ಈ ಪದ್ಯದಲ್ಲಿ ಯುವತಿಯೋರ್ವಳು ಯಾವ ಕೊರತೆಯು ಇಲ್ಲದಿದ್ದಾಗ್ಯೂ ಪ್ರಿಯನು ತನ್ನನ್ನು ನಿರ್ಲಕ್ಷಿಸುತ್ತಿರುವುದಕ್ಕೆ ಕಾರಣವೇನೆಂದು ತಿಳಿಯದೆ ಚಡಪಡಿಸುತ್ತಿರುವುದು ವ್ಯಕ್ತವಾಗುತ್ತದೆ. ಆದರೆ ಕಡೆಗೆ ಈಶ್ವರನ ಇಚ್ಛೆಯಂತೆಯೇ ಎಲ್ಲವೂ ನಡೆಯುವುದೆಂಬ ಸಮಾಧಾನವನ್ನೂ ಹೇಳಿಕೊಂಡಿದ್ದಾಳೆ.

**ಕಿಂಶುಕ! ಆತ್ಮನಿಮೇಷಮಾತ್ರಂ ಮಾಪ್ರಕಟಯ ಯತ್ ಮನ್ಮಸ್ತಕೇ**
**ಅಯಂ ಮಧುವ್ರತಃ ವಿಹರೇತಿ ಇತಿ ।**
**ಕಿಂ ಮೂಲತೇ ವಿರಹವಾದನಯಾ ತ್ವದಾದು**
**ಪ್ರಸೂನಮ್ ದೃಷ್ಟ್ವಾ ಅಚಿರಾತ್ ಅನಲ ಭ್ರಮೇಣ॥**

"ಮುತ್ತುಗದ ಹೂವೆ ನಿನ್ನ ತಲೆಯ ಮೇಲೆ ದುಂಬಿಯು ಕ್ಷಣಕಾಲ ಸುತ್ತುತ್ತಿದೆಯೆಂದು ದುರಹಂಕಾರ ಪಡಬೇಡ. ನಿನ್ನ ಹೂವನ್ನು ನೋಡಿದ ತಕ್ಷಣ ಬೆಂಕಿಯೆಂಬ ಭ್ರಮೆಯಿಂದ ನಿನ್ನನ್ನು ಬಿಟ್ಟುಬಿಡುತ್ತದೆ. ಆಮೇಲೆ ದುಂಬಿಯು ಮಾಲತೀ ಕುಸುಮದ ಕಡೆ ಹೋಗುತ್ತದೆ. ಅಲ್ಲಿಯೇ ರಮಿಸುತ್ತದೆ". ಇಲ್ಲಿ ಪ್ರಾಸಂಗಿಕವಾಗಿ ಮುತ್ತುಕದ ಹೂವಿನ ಬಣ್ಣನೆ ಬಂದಿರುವುದನ್ನು ಗಮನಿಸಬಹುದು. ಮುತ್ತುಗದ ಹೂವು ಬೆಳ್ಳಗಿದ್ದರೂ ಅದರ ಒಳಭಾಗ ಕೆಂಪಾಗಿರುವುದು. ದುಂಬಿಯು ಒಂದು ಕ್ಷಣ ಮುತ್ತುಗದ ಹೂವಿನಿಂದ ಆಕರ್ಷಿತವಾದರೂ, ಹತ್ತಿರ ಹೋದಮೇಲೆ ಅದನ್ನು ಬೆಂಕಿ ಎಂದು ಭಾವಿಸುತ್ತದೆ ಎಂಬ ಕಲ್ಪನೆ ಸೊಗಸಾಗಿದೆ.

ಇಲ್ಲಿ ತುಕ್ಕಾರಾಣಿಯು ಮುತ್ತುಗದ ಹೂವಿಗೆ ಯಾರನ್ನು ಹೋಲಿಸುತ್ತಿದ್ದಾಳೆನ್ನುವುದು ಸ್ಪಷ್ಟವಾಗುವುದಿಲ್ಲ. ಬೆಂಕಿ ಎಂದು ಭ್ರಮಿಸಿ, ಅರಸನು ತನ್ನಿಂದ ದೂರವಾದನೆಂದಿರಬಹುದೆ ಅಥವಾ ತನ್ನ ಸವತಿಯರಲ್ಲಾರಿಂದಲಾದರೂ ದೂರವಾಗುತ್ತಾನೆಯೇ ತಿಳಿಯುವುದಿಲ್ಲ.

**ಭ್ರಮರ ದಿಗಂತರಾಲೇ ಭ್ರಮತಾ ಕ್ವಚಿತ್**
**ಯದಿ ಜಾತಿ ಕುಸುಮಾನುಕಾರಿ ಪುಷ್ಪಮ್**
**ಅಸ್ವಾದಿತಮ್ ಈಕ್ಷಿತಂ ಶೃತ್ವಾ ವಾ ಪಕ್ಷಪಾತಂ**
**ಅತಾಸ್ಯ ಸತ್ಯಂ ವದ**

ಭ್ರಮರವೆ, ಜಾತಿ ಕುಸುಮಕ್ಕೆ ಸಮನಾದ ಹೂವಿದೆಯೆಂದು ಕೇಳಿರುವಿಯೇನು? ಅಥವಾ ನೋಡಿರುವಿಯೇನು, ಕೇಳಿರುವೆಯೇನು ಪಕ್ಷಪಾತವಿಲ್ಲದೆ ನಿಜ ಹೇಳು. ಎಂದು ಕೇಳುತ್ತಿರುವ ಈ ಮುಕ್ತಕದಲ್ಲಿ ಅರಸನಿಗೆ ನೇರವಾಗಿ ಪ್ರಶ್ನೆಯನ್ನು ಕೇಳುವಂತಿದೆ. ತನ್ನ ಶ್ರೇಷ್ಠಗುಣಗಳನ್ನು ಅರಿತೂ ಅರಿಯದವನಂತೆ ಇರುವ ಅರಸನಿಗೆ ಪಕ್ಷಪಾತವಿಲ್ಲದೆ ಹೇಳು ಎಂದು ಕೇಳುತ್ತಿದ್ದಾಳೆ.

**ಕತಿಚಿತ್ ಕರು ವಿಶೇಷರೂಡ ಶಿಕ್ಷಾಃ**
**ಚಿತ್ರೆ ಕುಸುಮಾನಿ ಲಿಖಿಂತಿ ನಾಮ ಕಿಮು ಚ**
**ಸುಪ್ತೇಷು ಭೃಂಗಾಃ ಸುರಭಿತ್ವಂ ಲಭಂತೇ**
**ಕಿಮು ಚೈತೇಷು ರಸಂ ಮಿಬಾನ್ತಿ?**

ಕೆಲವುವೇಳೆ ಶಿಲ್ಪಿಯ ವಿಶೇಷ ಕಲಾ ಶಿಕ್ಷಣದಿಂದ ಹೂವು ಅಂದವಾಗಿ ರಚಿಸಲ್ಪಡುತ್ತವೆ. ಮನಸ್ಸಿನಲ್ಲಿಯೇ ಬರೆಯುತ್ತವೆಯೇನೋ? ಇವುಗಳಲ್ಲಿ ಪರಿಮಳ ಇರಲಾರವೆಯೇನು? ದುಂಬಿಗಳೆಲ್ಲ ಒಂದೇ ಹೂವಿನಲ್ಲಿ ರಸಾಸ್ವಾದನ ಮಾಡುತ್ತದೆಯೆ? ಎಂದು ಕೇಳುತ್ತಿರುವ ಈ ಮುಕ್ತಕದಲ್ಲಿಯೂ ತನ್ನ ಶ್ರೇಷ್ಠಗುಣಗಳ ಕುರಿತಾಗಿ ಹೆಮ್ಮೆ ಇರುವುದನ್ನು ಪ್ರಕಟಿಸಿದ್ದಾಳೆ. ವಿಶೇಷ ಕಲಾ ನೈಪುಣ್ಯದಿಂದ ರಚಿತವಾದ ಹೂವು. ಆದರೆ ತನ್ನೆಡೆಗೆ ಬಾರದಿರುವ ದುಂಬಿ(ಪ್ರಿಯ)ಯನ್ನು ಕುರಿತು ಬೇಸರವನ್ನೂ ವ್ಯಕ್ತಪಡಿಸಿದ್ದಾಳೆ.

**ಕಿಂ ಮಾಲತಿ ಮಲಯಸಿ ಇಮಾನ್ ವಿಹಾಯ**
**ತುಮ್ಬೀಕುಸುಮಂ ಷಡಂಗಿಃ ಚುಚುಂಬ**
**ಲೋಕೇ ಚತುರ್ಥಃ ಚರಣೇಃ ಪಶುಃ ಸ್ಯಾತ್**
**ನ ಸದ್ಭಿಃ ಅತ್ಯಾರ್ಥ ಪಶುಃ**

ಈ ಪದ್ಯದ ಇದೇ ಅರ್ಥದಲ್ಲಿನ ಭಿನ್ನ ಪಾಠದೊಂದಿಗೆ ದೊರಕುತ್ತದೆ.

**ಕಿಂ ಮಾಲತಿ ಮಲಯಸಿ ಇಮಾನ್ ವಿಹಾಯ**
**ಕುಕುಂಬಾ ತುಂಬಿ ಕುಸುಮಾನ್ ಸದಾನ್‌ಗೃಹಿಃ**
**ಲೋಕೆ ಕತುಬೃಹಿಸ್ ಕರನೈಃ ಪಷುಸ್ಯತ್**
**ಸ ಸದ್ಭಿರ್ ಅತ್ಯಾರ್ಥ ಪಷುರ್ ನ ಕಿಂ ಸ್ಯಾ**

ನೀನು ನನ್ನನ್ನು ಬಿಟ್ಟು ಹೋಗುವುದಾದರೂ ಎಲ್ಲಿಗೆ? ನೀನು ಮಾಲತೀ ಕುಸುಮವನ್ನು ಅರಸಿ ಹೋಗಿರುವುದು ಏಕೆಂದು ನಿಜ ತಿಳಿಯೆನು! ದುಂಬಿಯು ತುಂಬೆ ಹೂವನ್ನು ಚುಂಬಿಸಿತು. ಜಗತ್ತಿನಲ್ಲಿ ನಾಲ್ಕು ಕಾಲುಗಳು ಇರುವವು ಪಶುಗಳು ತಾನೆ? ಅದರಂತೆ ಆರುಕಾಲುಗಳು ಇರುವವೆಲ್ಲ ದುಂಬಿಗಳೇ ಆಗಿರಬೇಕಲ್ಲ? ಎಂದು ಕೇಳುತ್ತಿರುವ ಈ ಪದ್ಯದ ಪ್ರಕಾರ ದುಂಬಿಯು ತುಂಬೇ ಹೂವಿನ ಬಳಿ ಹೋಗುವುದಿಲ್ಲ! ಇಲ್ಲಿ ಮಾಲತೀ ಹೂವನ್ನು ಸವತಿಗೆ ಹೋಲಿಸಿ ಹೇಳಿದ್ದಾಳೆ ಆದರೆ, ತುಂಬೆ ಹೂವನ್ನು ಯಾರಿಗೆ ಹೋಲಿಸಿದ್ದಾಳೆ ಎನ್ನುವುದು ತಿಳಿದು ಬರುವುದಿಲ್ಲ. ಅರಸನು ತನಗೆ ಉಚಿತವಾಗದವರೊಂದಿಗೆ ಇದ್ದಾನೆ ಎಂಬ ಭಾವ ಇಲ್ಲಿದೆ.

ಈ ಪಂಚಕವು ದುಂಬಿಯ ಸ್ವಭಾವವನ್ನು ಹೇಳುತ್ತಿದ್ದರೂ ಇದರ ಒಳಾರ್ಥ ಬೇರೆಯಾಗಿದೆ ಎಂದು ಮೇಲುನೋಟದಲ್ಲಿಯೇ ತಿಳಿದು ಬರುತ್ತದೆ. ಇತಿಹಾಸದ ಕೆಲವು ದಾಖಲೆಗಳಿಂದ ಕೃಷ್ಣದೇವರಾಯನು ಕಳಿಂಗ ರಾಜಕುಮಾರಿಯನ್ನು ಸೇಡಿನಿಂದಲೇ ವರಿಸಿದ ಎಂಬ ವಿಚಾರ ತಿಳಿದು ಬರುತ್ತದೆ. ರಾಜಕೀಯ ದ್ವೇಷದಿಂದ ವರಿಸಿದ ಅರಸಿಯನ್ನು ದೂರಮಾಡಿರಬಹುದಾದ ಕುರಿತಾಗಿ ಹಲವು ವಿದ್ವಾಂಸರೂ ಅಭಿಪ್ರಾಯ ಪಟ್ಟಿದ್ದಾರೆ[೩೧].

ಕವಿಯತ್ರಿಯು ತನ್ನನ್ನು ಇಲ್ಲಿ ಯಾವ ಅರ್ಥದಿಂದ ದುಂಬಿಯು ಬಯಸದ ಚಂಪಕ (ಸಂಪಿಗೆ) ಹೂವು ತಾನಾಗಿದ್ದೇನೆಂದು ಭಾವಿಸಿದ್ದಾಳೋ ತಿಳಿಯದು. ಇವಳ ಕುರಿತಾದ ಐತಿಹ್ಯಗಳು ತಿಳಿಸುವಂತೆ ಇವಳು ಹತಭಾಗ್ಯಳೇ ಇರಬಹುದೆಂಬುದನ್ನು ಇಲ್ಲಿನ ಕೆಲವು ಸಾಲುಗಳು ತಿಳಿಸುತ್ತಿವೆ. ಇವಳು ಅರಸನಿಂದ ಪರಿತ್ಯಕ್ತಳಾದವಷ್ಟೇ ಅಲ್ಲ, ಇಂದಿಗೂ ಇವಳನ್ನು ಕವಯತ್ರಿಯಾಗಿ ಗುರುತಿಸುವುದು ಬಹಳ ಅಪರೂಪ. ಇವಳ ಈ ಮುಕ್ತಕಗಳನ್ನು ಕುರಿತು ಸಂಸ್ಕೃತ ಸಾಹಿತ್ಯ ವಲಯದಲ್ಲಿ ಚರ್ಚೆಗಳು ನಡೆದಿಲ್ಲ. ಅಷ್ಟೇ ಅಲ್ಲ, ಸಂಸ್ಕೃತ ಕವಿಚರಿತೆ, ಸಾಹಿತ್ಯ ಚರಿತ್ರೆಗಳಲ್ಲಿ ತುಕ್ಕಾರಾಣಿ ಅಥವಾ ಜಗನ್ಮೋಹಿನಿಯ ಹೆಸರು ಕೂಡ ಉಲ್ಲೇಖವಾಗಿಲ್ಲದಿರುವುದು ಆಶ್ಚರ್ಯವೆನಿಸುತ್ತದೆ.

ಇವಳ ಮುಕ್ತಕಗಳನ್ನು ಓದಿದವರು ಮಾತ್ರ ಅದರಲ್ಲಡಗಿರುವ ಭಾವನೆ, ಇವಳ ಕವಿತಾ ಚಾತುರ್ಯವನ್ನು ಹೊಗಳದೆ ಇರಲು ಸಾಧ್ಯವಿಲ್ಲ. ಜೊತೆಗೆ ಶ್ಲೇಷಾರ್ಥಗಳಲ್ಲಿ ಮುಕ್ತಕಗಳನ್ನು ರಚಿಸುವ ಜಾಣ್ಮೆ ಸಿದ್ಧಿಸಿರುವ ಈ ಕವಯತ್ರಿಯು ಕೇವಲ ಐದು ಮುಕ್ತಕಗಳನ್ನು ಮಾತ್ರ ರಚಿಸಿರುವಳೇ ಎಂಬ ಅನುಮಾನ ಕಾಡದಿರದು.

## ಸಂಸ್ಕೃತ ನಾಟಕ

ಪ್ರಾಚೀನ ಸಂಸ್ಕೃತ ಕವಿಗಳು ನಾಟಕ ಪ್ರಕಾರಕ್ಕೆ ಬಹಳ ಮಹತ್ವವಿತ್ತಿದ್ದರೆನ್ನುವುದನ್ನು ಗಮನಿಸಬಹುದು. ಕಾಳಿದಾಸ, ಭಾಸ ಮೊದಲಾದವರು ತಮ್ಮ ನಾಟಕ ರಚನೆಗಳಿಂದಲೇ ಪ್ರಸಿದ್ಧಿ ಪಡೆದವರು. "ಕಾವ್ಯೇಷು ನಾಟಕಂ ರಮ್ಯಂ" ಎಂಬ ಭರತಮುನಿಯ ಹೇಳಿಕೆಯು, ನಾಟಕವನ್ನು ಕಾವ್ಯವೆಂದು ಪರಿಗಣಿಸುತ್ತಿದ್ದರೆನ್ನುವುದು ತಿಳಿದುಬರುತ್ತದೆ. ಸುಮಾರು ಹತ್ತು–ಹನ್ನೊಂದನೆಯ ಶತಮಾನದವರೆಗೂ ಸಂಸ್ಕೃತದಲ್ಲಿ ನಾಟಕಗಳರಚನೆ ಬಹಳವಾಗಿಯೇ ಬೆಳೆದು ಬಂದಿದೆ. ಇಂತಹ ವಾತಾವರಣದಲ್ಲಿ ಕನ್ನಡದಲ್ಲಿ ನಾಟಕರಚನೆಗಳಾದುದು ಮಾತ್ರ ಕಂಡುಬರುವುದಿಲ್ಲ. ಇದಕ್ಕೆ ಕಾರಣವೇನೇ ಇರಬಹುದು, ಆದರೆ ಇದೊಂದು ದೊಡ್ಡ ಕೊರತೆಯಾಗಿಯೇ ಉಳಿದಿದೆ. ಆದರೆ ಕನ್ನಡ ನಾಡಿನ ಅರಸಿಯೋರ್ವಳು ಈ ಕಾಲದಲ್ಲಿ ನಾಟಕ ರಚನೆಗೆ ತೊಡಗಿದ್ದಳೆನ್ನುವುದು ಸಮಾಧಾನ ತರಿಸುತ್ತದೆ. ಆದರೆ ಇವಳು ರಚಿಸಿರುವ ನಾಟಕ ಸಂಸ್ಕೃತದಲ್ಲಿದೆ. ಆದರೂ ಕನ್ನಡ ನಾಡಿನಲ್ಲಿ ನಾಟಕ ರಚನೆ ನಡೆದಿತ್ತೆನ್ನುವ ವಿಚಾರವೇ ಸಮಾಧಾನಕರ ಸಂಗತಿಯಾಗಿದೆ.

ಏಳನೆಯ ಶತಮಾನದಲ್ಲಿದ್ದ ವಿಜಯಭಟ್ಟಾರಿಕೆ ಮುಕ್ತಕಗಳನ್ನು ರಚಿಸಿದ್ದಾಳೆನ್ನುವುದನ್ನು ಈ ಹಿಂದೆ ಗಮನಿಸಲಾಗಿದೆ, ಇವಳು ನಾಟಕವನ್ನೂ ರಚಿಸಿರುವುದು ಹೆಮ್ಮೆಯ ವಿಚಾರವಾಗಿದೆ. ಈ ಅಧ್ಯಾಯದ ಆರಂಭದಲ್ಲಿ ಇವಳ ಕಾಲ–ದೇಶ, ಆಳ್ವಿಕೆ ಮೊದಲಾದ ಕೆಲವು ವಿಚಾರಗಳನ್ನು ಗಮನಿಸಲಾಗಿದೆ.

ಆದರೆ ಮುಕ್ತಕಗಳನ್ನೂ ರಚಿಸಿರುವ ವಿಜ್ಜಿಕಾ ನಾಟಕ ರಚಿಸಿರುವ ವಿಜ್ಜಿಕಾ ಇಬ್ಬರೂ ಭಿನ್ನರೆಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ವಿಜ್ಜಿಕಾಳದೆಂದು ಉಪಲಬ್ಧವಿರುವ ಯಾವ ಮುಕ್ತಕವನ್ನೂ ಈ ನಾಟಕದಲ್ಲಿ ಬಳಸಿಲ್ಲದಿರುವುದು ಈ ಅನುಮಾನಕ್ಕೆ ಮುಖ್ಯ ಕಾರಣವಾಗಿದೆ. ಅಲ್ಲದೆ ಈ ನಾಟಕದ ಯಾವುದೇ ಪದ್ಯವನ್ನು ಅಲಂಕಾರಿಕರಾಗಲೀ, ಸುಭಾಷಿತಕಾರರಾಗಲಿ ಉದಾಹರಿಸುವುದಿಲ್ಲ. ಆದರೆ ಇಲ್ಲಿ ಪ್ರಯೋಗವಾಗಿರುವ 'ಕರ್ನಾಟಕ ರಾಜಪ್ರಿಯಾ' ಎಂಬ ಸಂಬೋಧನೆ ಇದು ಬಾದಾಮಿ ಚಳುಕ್ಯ ವಿಜ್ಜಿಕಾಳ ಕೃತಿ ಎಂಬ ವಿಚಾರಕ್ಕೆ ಹೆಚ್ಚು ಪುಷ್ಟಿ ನೀಡುತ್ತದೆ.

ಕೇರಳದ ರಾಮಕೃಷ್ಣಕವಿಗಳು ತಮಗೆ ದೊರೆತ ಚೌಮುದೀ ಮಹೋತ್ಸವ ನಾಟಕದ ಏಕೈಕ ಹಸ್ತಪ್ರತಿಯಿಂದ ಈ ಕೃತಿಯನ್ನು ಕ್ರಿ.ಶ.೧೯೨೯ರಲ್ಲಿ ಸಂಪಾದಿಸಿದ್ದಾರೆ. ಹಸ್ತಪ್ರತಿಯಲ್ಲಿ ಕರ್ತೃವಿನ ಹೆಸರಿದ್ದ ಭಾಗವು ಹುಳುತಿಂದು ಹೋಗಿ 'ಕಯಾನಿಬದ್ಧಮ್' ಎಂದು ಮಾತ್ರ ಕಾಣುತ್ತಿತ್ತೆಂದು ಇವರು ತಿಳಿಸಿದ್ದಾರೆ. ಇದರಿಂದ ಈ ಕೃತಿಯ ರಚನೆಕಾರ್ತಿ ಒರ್ವ ಮಹಿಳೆ ಎಂಬುದು ಸ್ಪಷ್ಟವಾಗಿದೆಯಷ್ಟೇ ಹೆಸರು ತಿಳಿದು ಬರುವುದಿಲ್ಲ ಆದರೆ ಆದರೆ ಸೂಕ್ಷ್ಮವಾಗಿ ನೋಡಿದರೆ 'ಜ' ಒತ್ತಕ್ಷರವು ಕಾಣುತ್ತದೆ ಅಲ್ಲದೆ ನಾಟಕದ "ಜಯತಿ ಪ್ರಥಮಮ್ ವಿಜಯಾ" ಎಂಬ ಸಾಲಿನ ಶ್ಲೇಷಾರ್ಥವು ವಿಜ್ಜಿಕಾಳ ಹೆಸರನ್ನು ಸೂಚಿಸುತ್ತಿರುವುದರಿಂದ, ಸಂಪಾದಕರು 'ವಿಜ್ಜಿಕಾಯಾ' ಎಂದು ಹೊಂದಿಸಿರುವುದಾಗಿ ತಿಳಿಸಿದ್ದಾರೆ.

ನಾಟಕದಲ್ಲಿ ಬಳಸಲಾದ ವೈದರ್ಭೀಶೈಲಿ, ಇಲ್ಲಿನ ಕಾಳಿದಾಸನ ಪ್ರಭಾವ, ಮೊದಲಾದ ಅಂಶಗಳನ್ನು ಗಮನಿಸಿ ಇದು ವಿಜ್ಜಿಕಾಳದೇ ರಚನೆ ಎಂಬ ತೀರ್ಮಾನಕ್ಕೆ ಬರಲಾಗಿದೆ ಎಂದು ಇದರ ಸಂಪಾದಕರು ಕೃತಿಯ ಪೀಠಿಕಾಭಾಗದಲ್ಲಿ ತಿಳಿಸಿದ್ದಾರೆ.

**ಜಯತಿ ಪ್ರಥಮಂ ವಿಜಯಾ ಜಯಂತಿ ದೇವಾಃ ಸ್ವಯಂ ಮಹಾದೇವಃ ।**
**ಶ್ರೀಮಂತೌ ಭಗವಂತಾವನಂತನಾರಾಯಣೌ ಜಯತಃ ॥**

ಈ ಶ್ಲೋಕವನ್ನು ವಿಶ್ಲೇಷಿಸುತ್ತಾ ಪಿ.ವಿ.ಕಾಣೆಯವರು “ಇದರಲ್ಲಿ ಬರುವ ವಿಜಯಾ ಎಂಬ ಪದವು ಶರತ್ಕಾಲದಲ್ಲಿ ನಡೆಯುವ ಕೌಮುದೀ ಮಹೋತ್ಸವದ ದೇವತೆಯಾದ ವಿಜಯೆಯನ್ನು ಮೇಲ್ನೋಟಕ್ಕೆ ಸೂಚಿಸಿದರೂ, ಕರ್ತೃವಿನ ಬಗೆಗೆ ಗುಪ್ತವಾದ ಸೂಚನೆ ಇರಲು ಸಾಧ್ಯ”[೩೨] ಎಂಬ ಅಭಿಪ್ರಾಯ ಪಡುತ್ತಾರೆ.

**ಕೌಮುದೀ ಮಹೋತ್ಸವ:** ಕೌಮುದೀ ಮಹೋತ್ಸವವು ಐದು ಅಂಕದ ನಾಟಕ. ಭಾಸ – ಕಾಲಿದಾಸರ ಪ್ರಭಾವವು ನಾಟಕದ ಮೇಲೆ ಬಹಳವಾದಂತಿದೆ. ರತ್ನಾವಳಿ ನಾಟಕದ ಪ್ರಭಾವವೂ ಇದೆ. ರಾಜಕೀಯ ಘಟನೆಗಳಲ್ಲಿ ‘ಮುದ್ರಾರಾಕ್ಷಸ’ದ ಪ್ರಭಾವವಿದೆ; ಇದು ಕವಯತ್ರಿಯ ಅಧ್ಯಯನದ ಹರಹನ್ನು ತಿಳಿಸುತ್ತದೆ

**ವಿರಸಾಪಿ ಕೃತಿಃ ಪ್ರಪತ್ಸ್ಯತೆ ಮಧುನಿಷ್ಯಂದಮಯೀಂ ದಶಾಂತರಂ ।**
**ಯದಿ ನಾಮ ಸತಾಮನುಗ್ರಹಃ ಶಿಶಿರಃ ಪ್ರಾಪ್ಯರವೇರಿವಾತಪಮ್ ॥**

ಕೃತಿಯು ನೀರಸವಾಗಿದ್ದರೂ, ಸಹೃದಯರ ಕೃಪೆಯಿದ್ದರೆ, ಚಳಿಗಾಲದ ಬಿಸಿಲಿನಂತೆ ಸುಖಕರವಾಗಿಯೇ ಇರುವುದು ಎನ್ನುವ ಕವಯತ್ರಿಯ ಮಾತು ಅವಳ ನಮ್ರತೆಯನ್ನು ತೋರಿಸುತ್ತದೆ. ಅಂದಿನ ಸಂಸ್ಕೃತ ನಾಟಕದ ನಿಯಮಗಳನ್ನೆಲ್ಲ ನಾಟಕಕಾರ್ತಿಯು ಅನುಸರಿಸಿದ್ದಾಳೆ. ನಾಟಕವು ಸಂಪ್ರದಾಯವನ್ನನುಸರಿಸಿದ್ದರೂ ನಾಟಕದ ಕೊನೆ ಮಾತ್ರ ಸಂಪ್ರದಾಯಕ್ಕೆ ಒಳಗಾಗಿಲ್ಲ. ಕೊನೆಯಲ್ಲಿ ಬರಬೇಕಿದ್ದ ಭರತವಾಕ್ಯ ಕಂಡುಬರುವುದಿಲ್ಲ, ಕೆಲವು ಮುಖ್ಯ ಪಾತ್ರಗಳು ಅಂತ್ಯಕಾಣಿಸುವಲ್ಲಿ ಕಣ್ಮರೆಯಾಗುತ್ತಾರೆ, ಪಟ್ಟಾಭಿಷೇಕ ಮತ್ತು ವಿವಾಹಗಳಲ್ಲಿ ಕತೆ ಪರ್ಯವಸನವಾಗುವುದಿಲ್ಲ. ಆದರೂ ನಾಟಕವು ಇತರ ಅಂಶಗಳಿಂದ ಪ್ರಶಂಸೆಗೆ ಒಳಗಾಗಿದೆ. ಇದರಲ್ಲಿನ ಪಾತ್ರಗಳ ರಚನೆ, ರಸನಿರೂಪಣೆ ಆಕರ್ಷಕವಾಗಿವೆ. ಅನುಭವದ ಆಣಿಮುತ್ತುಗಳು ಅಲ್ಲಲ್ಲಿ ಮೂಡಿಬಂದಿವೆ. ಪದ್ಯಗಳ ಸಂಖ್ಯೆ ಬೇಸರ ಬರುವಷ್ಟು ಅಧಿಕವಾಗಿಲ್ಲ, ಸಂಭಾಷಣೆಗಳು ಚುರುಕಾಗಿವೆ. ಪ್ರಾಸಂಗಿಕವಾದ ಯಾವುದೇ ದೃಶ್ಯವೂ ಬೇಸರ ತರಿಸುವುದಿಲ್ಲ. ಪಾತ್ರಗಳ ಪ್ರವೇಶವೂ, ನಿರ್ಗಮನವೂ ಆಕಸ್ಮಿಕವೆನಿಸುವುದಿಲ್ಲ.

ಪ್ರೇಮ ಹಾಗೂ ರಾಜಕೀಯ ಘಟನೆಗಳಿಂದ ಕೂಡಿದ ನಾಟಕವಿದು. ನಾಯಕನಾದ ಕಲ್ಯಾಣವರ್ಮನಿಗೆ ರಾಜ್ಯಪ್ರಾಪ್ತಿ ಮತ್ತು ಕೀರ್ತಿಮತಿಯ ಸಮಾಗಮಗಳಿಂದ ಮುಕ್ತಾಯವಾಗುತ್ತದೆ. ಮಂತ್ರಿ ಮಂತ್ರಗುಪ್ತನ ಯೋಜನೆಯಿಂದಾಗಿ ರಾಜಕುಮಾರ ಕಲ್ಯಾಣವರ್ಮನು ಬದುಕಿ, ಬೆಳೆದು ರಾಜ್ಯವನ್ನೂ ಕೀರ್ತಿಮತಿಯನ್ನೂ ಪಡೆಯುವುದು ಸಾಧ್ಯವಾಗುತ್ತದೆ. ಹಾಸ್ಯ ವೀರ, ಶೃಂಗಾರ ಎಲ್ಲ ರಸಗಳ ಚಿತ್ರಣಕ್ಕೂ ಯಥಾವಕಾಶ ದೊರೆತಿದೆ.

ನಾಟಕದಲ್ಲಿ ಶೃಂಗಾರರಸುವು ಮುಖ್ಯವಾಗಿ, ವೀರರಸವು ಅಂಗರಸವಾಗಿ ಇನ್ನುಳಿದ ರಸಗಳು ಔಚಿತ್ಯವನ್ನರಿತು ಬಂದಿವೆ. ಸಂಭಾಷಣೆಗಳು ಸುದೀರ್ಘವಾಗಿಲ್ಲದೆ ಚುರುಕಾಗಿವೆ. ಅಲ್ಲಲ್ಲಿ ಗಾದೆಯ ಮಾತಿನಂತಹ ಪಡೆನುಡಿಗಳು ಬಂದಿವೆ. “ಕೆಲವು ವಿಶಿಷ್ಟ ಸನ್ನಿವೇಶಗಳು ಅನಿವಾರ್ಯವೋ ಎನ್ನುವಂತೆ ಇಲ್ಲಿಯೂ ಬಂದಿವೆ; ಬಲಭುಜ ಹಾರುವದು, ಮೊದಲಾದ ಶಕುನಗಳು, ಸೀರೆಯ ಸೆರಗು ಬಳ್ಳಿಗೆ ಸಿಕ್ಕಿಕೊಳ್ಳುವ ಸಾಧಾರಣ ಪ್ರಸಂಗ, ಕೆಲವು ಪ್ರೇಮದ ಕಥಾವಸ್ತುವುಳ್ಳ ಸಂಸ್ಕೃತ ನಾಟಕಗಳಲ್ಲಿ ಬರಲೇಬೇಕಾದ ಪ್ರಸಂಗಗಳಾಗಿದ್ದಿರಬೇಕು”[೩೩].

“ಶಿಕ್ಷಣದಿಂದ ಬುದ್ಧಿವಂತನ ಮಾತು ಹೇಗೋ ಹಾಗೆ ತಾರುಣ್ಯದಿಂದ ಯುವತಿಯರು ಶೋಭಿಸುತ್ತಾರೆ’ ; “ನೆರಳು ಬಿಸಿಲನ್ನು ಬೆನ್ನುಹತ್ತುವಂತೆ ವಿಪತ್ತುಗಳು ತೇಜಸ್ವಿಯ ಬೆನ್ನು ಹತ್ತುತ್ತವೆ” ; “ಪ್ರಮಾದದ ಅಂಜಿಕೆಯಿಂದ ವಿವೇಕಿಗಳ ಕಾರ್ಯಸಿದ್ಧಿಯು ತಡವಾಗಿ ಫಲಿಸುತ್ತದೆ” ಇತ್ಯಾದಿಯಾಗಿ ಅನುಭವದ ಮಾತುಗಳು ನಾಟಕದ ತುಂಬೆಲ್ಲ ಕಂಡುಬರುತ್ತದೆ. ಹೀಗೆ ಅಲ್ಲಲ್ಲಿ ಬರುವ ಅನೇಕ ಮಾತುಗಳಿಂದ ಕವಯತ್ರಿಯ ಲೋಕಾನುಭವವೂ ಮಾತಿನ ಜಾಣ್ಮೆಯೂ ತಿಳಿದು ಬರುತ್ತದೆ.

**ಪ್ರಭಾವ:** ವಿಜ್ಜಿಕಾಳು ಅಂದಿನ ಹಲವಾರು ಪ್ರಸಿದ್ಧ ನಾಟಕಕಾರರಿಂದ ಪ್ರೇರಿತಳಾಗಿರುವುದನ್ನು ಗುರುತಿಸಬಹುದು. ಕಾಳಿದಾಸನ ಪ್ರೇರಣೆ ಇವಳ ನಾಟಕದ ಮೇಲಾಗಿರುವುದು ಮೇಲು ನೋಡದಲ್ಲಿಯೇ ಸಾಬೀತಾಗುತ್ತದೆ.

ಕಲ್ಯಾಣವರ್ಮನು ಗುರುಗಳ ಆಶ್ರಮದಿಂದ ಹೊರಡುವಾಗಿನ ವರ್ಣನೆಯು ಶಕುಂತಲೆಯು ಆಶ್ರಮ ಬಿಡುವಾಗಿನ ವರ್ಣನೆಯನ್ನು ಹೋಲುತ್ತದೆ. ನಾಯಕ–ನಾಯಕಿಯರ ಪ್ರಥಮ ದರ್ಶನದ ದೃಶ್ಯವೂ ಸಾಮಾನ್ಯವಾಗಿ ಕಾಳಿದಾಸನ ಮಾದರಿಯನ್ನೇ ಅನುಸರಿಸಿದೆ. "ಆದರೆ ಅಮರಕವಿಯ ಜಾಣ್ಮೆಯ ಅನುಕರಣೆಯೂ ಕೂಡ ದುಸ್ತರವಾದ ಕೆಲಸ"[೩೪].

ಸಂದರ್ಭಗಳ ವರ್ಣನೆಗಳಷ್ಟೇ ಅಲ್ಲದೆ "ಕೀರ್ತಿಮತಿಯು ಬ್ರಹ್ಮನ ಸೃಷ್ಟಿಯಲ್ಲ", "ತದನಯೋರ್ವಾಗರ್ಥಯೋರಿವ ಸಮವಾಯಂ ಕರಿಷ್ಯಾಮಿ (ವಾಗರ್ಥಗಳಂತೆ ಇವರಿಬ್ಬರನ್ನು ಕೂಡಿಸುವೆನು)", "ಶೈಲೇಯಗಂಧಿನಿ ಶಿಲಾತಲೇ" ಮೊದಲಾದ ಮಾತುಗಳು ರಘುವಂಶದ ಅನುಕರಣೆಗಳಾಗಿವೆ. "ಮಿಥ್ಯೈವ ಪ್ರತಿಭಾತಿ ಶೈಶವಕಥಾ ಸ್ವಪ್ನೋ ನು ಮಾಯಾ ನು ಮೇ" (ಕೌಮ ೧–೧೦) ಎಂಬ ಸಾಲಿನ ಮೇಲೆ ಶಾಕುಂತಲದ "ಸ್ವಪ್ನೋನು ಮಾಯಾ ನು ಮತಿಭ್ರಮೋ ನು" (ಅಭಿಜ್ಞಾನ ಶಾಕುಂತಲಮ್ ೬–೧೦) ಎಂಬ ಸಾಲಿನ ಪ್ರಭಾವವನ್ನು ಗುರುತಿಸಲಾಗಿದೆ.

**ಇದಂ ಕಿಲಾವಿಷ್ಕೃತ ಕಾಂತಿ ವಿಪ್ಲವಂ ತುಷಾರವಾತಾತಪದರ್ಶನೇಷ್ವಪಿ ।**
**ಶರೀರಮುದ್ಯಾನಶಿರೀಷಪೇಲವಂ ತಪೋವನಕ್ಲೇಶ ಸಹಂ ಭವಿಷ್ಯತಿ ॥ (ಕೌಮ ೧–೨೩)**

**ಇದಂ ಕಿಲಾವ್ಯಾಜ ಮನೋಹರಂ ವಪುಃ ತಪಃ ಕ್ಷಮಂ ಸಾಧಯಿತುಂ ಯ ಇಚ್ಛತಿ।**
**ಧ್ರುವಂ ಸ ನೀಲೋತ್ಪಲ ಪತ್ರಧಾರಯಾ ತಮೀಲತಾಃ ಛೇತ್ತುಮೃಷಿರ್ವ್ಯವಸ್ಯತಿ ॥ (ಅಶಾ–೧–೧೭)**

**ತಪ್ತಸ್ಯ ಸೋಯಮನಘಸ್ತಪಸೋ ವಿಷಾಕಃ (ಕೌಮ ೧–೧೫) ತಪ್ತೇನ ತಪ್ತಮಯಸಾ ಘಟನಾಯ ಯೋಗ್ಯಮ್ (ವಿಕ್ರಮೋರ್ವಶಿಯ ೨–೧೫)**

ಸಂಭಾಷಣೆಗಳಲ್ಲಷ್ಟೇ ಅಲ್ಲದೆ, ಕಲ್ಪನೆ, ಸನ್ನಿವೇಷವನ್ನು ಹೆಣೆಯುವುದರಲ್ಲಿಯೂ ಕೂಡ ಕಾಳಿದಾಸನ ಅನುಕರಣೆ, ಪ್ರಭಾವ ಸ್ಪಷ್ಟವಾಗಿ ಗೋಚರಿಸುತ್ತದೆ.

ಕೀರ್ತಿಮತಿಯು ಕಲ್ಯಾಣವರ್ಮನ ಪ್ರೇಮಕ್ಕೆ ಪಾತ್ರಳಾಗಿ ತೆರಳುವಾಗ ಮಾರ್ಗದಲ್ಲಿ ಕಾಲಿಗೆ ಬಳ್ಳಿಯು ತೊಡರಿದ ಘಟನೆಯು ಶಾಕುಂತಲದಲ್ಲಿರುವ ಇದೇ ಸನ್ನಿವೇಶವನ್ನು ನೆನಪಿಗೆ ತರುತ್ತದೆ.

ನಾಟಕದಲ್ಲಿ ಕಾಳಿದಾಸನ ಪ್ರಭಾವದಂತೆಯೇ ಇತರ ಪ್ರಸಿದ್ಧ ನಾಟಕಕಾರರಾದ ಶ್ರೀಹರ್ಷ, ವಿಶಾಖದತ್ತ, ಭವಭೂತಿ, ಭಾಸ ಮೊದಲಾದವರ ಪ್ರಭಾವಗಳನ್ನೂ ಗುರುತಿಸಬಹುದು. ನಾಯಕಿ ಚಿತ್ರವನ್ನು ಬರೆಯುವುದು, ಅದನ್ನು ಕಳೆದುಕೊಳ್ಳುವುದು, ನಾಯಕಿ ದೇವತಾ ದರ್ಶನಕ್ಕೆ ಬಂದಾಗ ನಾಯಕ–ನಾಯಕಿಯರ ಪ್ರಥಮ ದರ್ಶನವಾಗುವುದು ಮೊದಲಾದ ಕೆಲವು ಅಂಶಗಳಲ್ಲಿ ಶ್ರೀ ಹರ್ಷನ ರತ್ನಾವಳಿ ಮತ್ತು ನಾಗಾನಂದ ನಾಟಕಗಳ ಆರಂಭ ಭಾಗಗಳ ಪ್ರಭಾವವು ಕಂಡುಬರುತ್ತದೆ.

ರಾಜಕೀಯ ಘಟನೆಗಳ ಚಿತ್ರಣದಲ್ಲಿ ವಿಶಾಖದತ್ತನ ಮುದ್ರಾರಾಕ್ಷಸದ ಪ್ರಭಾವವೂ ಕಂಡುಬರುತ್ತದೆ. ವೇಷಧಾರಿಗಳಲ್ಲಿ ಸಂದೇಶ ಕಳಿಸುವುದು, ಜನಾಭಿಪ್ರಾಯವನ್ನು ಅಳೆದು ನೋಡುವುದು, ಜನರಲ್ಲಿ ಶತ್ರುಗಳ ಕುರಿತಂತೆ ಜಾಗ್ರತೆ ಮೂಡಿಸುವುದು, ಇವೇ ಮೊದಲಾದವುಗಳನ್ನು ಅನುಸರಿಸಲಾಗಿದೆ. ಮಂತ್ರಗುಪ್ತನು ಅಮಾತ್ಯರಾಕ್ಷಸನಲ್ಲಿರುವ ಸ್ವಾಮಿಭಕ್ತಿ ಮತ್ತು ಉದಾರ ಹೃದಯವನ್ನು ಪಡೆದಿರುವ ಪಾತ್ರವಾಗಿದೆ. ಚಾಣಕ್ಯನ ನೀತಿಕುಶಲತೆಯೂ ಅವನಲ್ಲಿದೆ. ಅವನ ಸಮೀಪದ ಸೇವರಕಲ್ಲಿಯೇ ಒಬ್ಬನಿಗೆ ತಿಳಿದ ಗುಟ್ಟು ಇನ್ನೊಬ್ಬನಿಗೆ ತಿಳಿದಿರುವುದಿಲ್ಲ. ರಾಜಕೀಯ ರಹಸ್ಯಗಳನ್ನು ಕಾಪಾಡುವುದರಲ್ಲಿ ದಕ್ಷತೆಯನ್ನು ತೋರಿಸುವನು. ಕೌಮುದೀ ಮಹೋತ್ಸವದ ಮೂಲ ಕಲ್ಪನೆಯನ್ನು ಮುದ್ರಾರಾಕ್ಷಸನಿಂದಲೇ ತೆಗೆದುಕೊಂಡಂತಿದೆ. ಗೂಢಚಾರರು ಇಲ್ಲಿ ಪಾಶುಪತ ವೇ಼ಷದಲ್ಲಿರುವರು. ಮುದ್ರಾರಾಕ್ಷಸದಲ್ಲಿ ಅರ್ಹಂತರ ವೇಷದಲ್ಲಿರುತ್ತಾರೆ.

ಸನ್ಯಾಸಿನಿ ಯೋಗಸಿದ್ಧಿಯು ಭವಭೂತಿಯ ಮಾಲತೀಮಾಧವದಲ್ಲಿಯ ಕಾಮದಂತಿಯನ್ನು ನೆನಪಿಗೆ ತರುತ್ತಾಳೆ.

ಭಾಸನ ನಾಟಕದ ಕಥೆಯು ಇಲ್ಲಿ ಉಲ್ಲೇಖಿಸಲ್ಪಟ್ಟಿದೆ. ಭಾಸನ ನಾಟಕಗಳಂತೆ "ಪ್ರಸ್ತಾವನಾ" ಎನ್ನುವುದರ ಬದಲು "ಸ್ಥಾಪನಾ" ಎಂದಿದೆ. "ನಾಂದ್ಯಂತೇ ತತಃ ಪ್ರವಿಶತಿ ಸೂತ್ರಧಾರಃ" ಎಂಬುದು ಮಂಗಲ್ಕಿಂತ ಮೊದಲೇ ಬಂದಿದೆ. "ಟಂಕಚ್ಛೇದ್ಯೈರಂಧಕಾರ ಪಟಲೈಃ ಎಂಬುದು ಮೃಚ್ಛಕಟಿಕದ ಸೂಚೀಭೇಧ್ಯಮ್ ತಮಃ" ಎಂಬುದನ್ನು ಹೋಲುತ್ತದೆ.

ತನ್ನ ಕಾಲದಲ್ಲಿ ಉಪಲಬ್ದವಿದ್ದ ಎಲ್ಲ ಉತ್ತಮ ಕೃತಿಗಳಲ್ಲಿಯ ಉತ್ತಮ ಅಂಶಗಳನ್ನು ತೆಗೆದುಕೊಂಡು ಕೇವಲ ಅನುಕರಣೆ ಎನಿಸದಂತೆ ಅವುಗಳನ್ನು ಪ್ರಕೃತ ಕಥಾವಸ್ತುವಿಗೆ ಹೊಂದಿಸಿಕೊಂಡು ಸೊಗಸಾದ ನಾಟಕ ಬರೆದಿದ್ದಾಳೆ.

**ನಾಟಕದ ಪಾತ್ರಗಳು:** ವಿದೂಷಕನ ಪಾತ್ರವು ಸಂಸ್ಕೃತ ನಾಟಕಗಳಲ್ಲಿ ಹಾಸ್ಯ ಪಾತ್ರ. ವೇಷ ಮತ್ತು ಮಾತಿನಿಂದ ಅವನು ಹಾಸ್ಯವನ್ನುಂಟುಮಾಡಬೇಕೆಂದು ಲಕ್ಷಣಕಾರರು ಹೇಳಿದ್ದಾರೆ. ಇಲ್ಲಿ ವಿದೂಷಕನು ರಂಗಕ್ಕೆ ಬಂದೊಡನೆ ಅವನನ್ನು ನೋಡಿ ನಾಯಕಿಯ ಗೆಳತಿ ನಿಪುಣಿಕೆಯು "ಕ ಏಷ ಆಕೃತ್ಯಾ ಮರ್ಕಟಃ ವಾಚಾ ಗರ್ದಭಃ" ನೋಡಲು ಮಂಗ, ಮಾತನಾಡಿದರೆ ಕತ್ತೆಯಂತಿರುವ ಇವನಾರು? ಎಂದು ಕೇಳುತ್ತಾಳೆ. ಈ ವಾಕ್ಯದಲ್ಲಿಯೇ ವಿದೂಷಕನ ಹಾಸ್ಯಭರಿತ ರೂಪ ಕಣ್ಮುಂದೆ ಬರುತ್ತದೆ[೩೫].

ವಿದೂಷಕನು ರಾಜನ ಆಪ್ತ ಸಲಹೆಗಾರನೂ ಆಗಿರುತ್ತಾನೆ. ಅಂತೆಯೇ ಇಲ್ಲಿ ಪ್ರೇಮಪಾಶಕ್ಕೆ ಸಿಲುಕಿದ ನಾಯಕ ಕಲ್ಯಾಣವರ್ಮನನ್ನು ಕಂಡು ವಿದೂಷಕನು 'ಅಂಧಸ್ಯ ಕೂಪಪತನಮ್ ಸಂವೃತ್ತಮ್, ಪೂರ್ವಂ ರಾಜ್ಯನಾಶಃ ತತಃ ಸ್ತ್ರೀ ತಂತುನಾ ಬಂಧನಂ' ಎನ್ನುತ್ತಾ ಇದು ಕುರುಡನು ಭಾವಿಗೆ ಬಿದ್ದಂತಾಯಿತು. ಈಗಾಗಲೇ ರಾಜ್ಯವನ್ನು ಕಳೆದುಕೊಂಡಿರುವಿ, ಈಗ ಸ್ತ್ರೀ ಎಂಬ ಹಗ್ಗದಿಂದ ಬಿಗಿದುಕೊಳ್ಳುತ್ತಿರುವಿ' ಎಂಬ ನೀತಿ ಮಾತನ್ನು ಹೇಳುತ್ತಾನೆ.

ಹೊರಡುವ ಅವಸರದಲ್ಲಿದ್ದ ನಾಯಕಿ ಕೀರ್ತಿಮತಿಯ ಹಾರವು ಕೆಳಗೆ ಬಿದ್ದಾಗ ನಾಯಕನಿಗೆ ಅದು ಅವಳ ಹೃದಯದಂತೆ ಭಾಸವಾಗುತ್ತದೆ. ಆದರೆ, ಹೊಟ್ಟೆಬಾಕ ವಿದೂಷಕನಿಗೆ ಅದು ಅನ್ನದ ರಾಶಿಯಂತೆ ಕಾಣುತ್ತದೆ. ಹಾರವನ್ನು ಮರಳಿಸುವ ನೆಪದಿಂದ ತನ್ನ ಗೆಳೆಯನ ಪ್ರೇಮಸಂದೇಶವನ್ನು ಹೊತ್ತು ತಂದ ವಿದೂಷಕ ಯೋಗಸಿದ್ಧಿ ಹಾಗೂ ನಿಪುಣಿಕೆಯರ ಸಂಭಾಷಣೆಯನ್ನು ಮರೆಯಲ್ಲಿ ನಿಂತು ಕೇಳುತ್ತಾನೆ. ಕೀರ್ತಿಮತಿಯು ಕಲ್ಯಾಣವರ್ಮನಲ್ಲಿ ಅನುರಕ್ತಳಾಗಿರುವ ವಿಷಯವನ್ನು ನಿಪುಣಿಕೆಯಿಂದ ಕೇಳಿತಿಳಿದ ಯೋಗಸಿದ್ಧಿಯು ಅವರೀರ್ವರನ್ನು ಒಂದುಗೂಡಿಸುವುದರಲ್ಲಿ ಆಸ್ಥೆ ತೋರುತ್ತಾಳೆ. ನಾಯಕಿಗೆ ತನ್ನ ಮಿತ್ರನಲ್ಲಿ ಪ್ರೇಮ ಉಂಟಾಗಿರುವುದನ್ನೂ, ಯೋಗಸಿದ್ಧಿಯು ಇವರಿಬ್ಬರನ್ನೂ ಸೇರಿಸುವುದರಲ್ಲಿ ಆಸಕ್ತಿ ತೋರುತ್ತಿರುವುದನ್ನು ಕೇಳಿದ ವಿಧೂಷಕನು "ಭಿಕ್ಷೆಗೆ ಹೊರಟವನಿಗೆ ಮೃಷ್ಟಾನ್ನ ದೊರೆಯುವಂತಾಯಿತು" ಎಂದು ಹೇಳುತ್ತಾ ಮುಂದೆ ಬಂದು ಯೋಗಸಿದ್ಧಿಗೆ ನಮಸ್ಕರಿಸುತ್ತಾನೆ.

ತನ್ನನ್ನು ಕಂಡೊಡನೆ "ನೋಡಲು ಮಂಗನಂತೆ, ಮಾತನಾಡಿದರೆ ಕತ್ತೆಯಂತಿರುವ ನೀನಾರು" ಎಂದು ಅಪಹಾಸ್ಯ ಮಾಡಿದರೂ, ನಿಪುಣಿಕೆಯನ್ನು ಕುರಿತು ವಿದೂಷಕನು "ಕೀರ್ತಿಮತಿಯು ಕಲ್ಯಾಣವರ್ಮನ ಚಿತ್ರವನ್ನು ಬರೆದಿದ್ದಾಳೆ, ನೀನು ನನ್ನ ಚಿತ್ರವನ್ನು ರಚಿಸು" ಎಂದು ಹೇಳುತ್ತಾನೆ.

ರಾಜ್ಯವನ್ನು ಮರಳಿ ಗಳಿಸಿದಮೇಲೆ ಕಲ್ಯಾಣವರ್ಮನು ನಾಯಕಿಯನ್ನು ಕುರಿತು ಚಿಂತಿಸುತ್ತಿದ್ದಾಗ ವಿದೂಷಕ "ವಯಸ್ಯ ಏಕಮ್ ರಾಜಕಾರ್ಯಮ್ ಮಂತ್ರಯಾಮಿ" ಎಂದು "ಗೆಳೆಯಾ, ಒಂದು ರಾಜಕಾರ್ಯವನ್ನು ಹೇಳುವೆನು" ಎಂದು ಗಂಭೀರವಾಗಿ ತನಗೆ ಹೊಳೆದ ರಾಜಕಾರ್ಯವನ್ನು ಈ ರೀತಿಯಾಗಿ ತಿಳಿಸುತ್ತಾನೆ. "ಅಶಿತ್ವಾ ಪೀತ್ವಾ ತಿಷ್ಠತಾಮ್ ಕಿಮ್ ತೇನ ಅತಿಕ್ರಾಂತೇನ ಸ್ತ್ರೀವೃತ್ತಾಂತೇನ" – "ತಿಂದು ಕುಡಿದು ಸುಖವಾಗಿರು, ಆ ಹೆಣ್ಣಿನ ಸುದ್ದಿ ಹಾಳಾಗಲಿ" ಎಂದು ಹೇಳುವ ಇವನ ರಾಜರಹಸ್ಯಕ್ಕೆ ನಿಪುಣಿಕೆಯು "ನೀನು ರಾಜನಾದಾಗ ಹಾಗೆ ಮಾಡು" ಎಂದು ಅಪಹಾಸ್ಯ ಮಾಡುತ್ತಾಳೆ.

ಸನ್ಯಾಸಿನಿ ಯೋಗಸಿದ್ಧಿಯು, ನಾಟಕದ ವಸ್ತುವು ತ್ವರಿತಗತಿಯಿಂದ ವಿಕಾಸಹೊಂದಲು ಸಹಾಯಕಾರಿಯಾಗಿದ್ದಾಳೆ. "ಮಾಲತೀ ಮಾಧವ"ದ ಕಾಮಂದಕಿಯನ್ನು ಇವಳು ಹೋಲುತ್ತಾಳೆ. ಇದರಲ್ಲಿಯ ಕೌಮುದೀ ಮಹೋತ್ಸವದ ಕಲ್ಪನೆ "ಮುದ್ರಾರಾಕ್ಷಸ"ದಿಂದ ಬಂದಂತಿದೆ. ಒಟ್ಟಿನಲ್ಲಿ ಉಪಲಬ್ದವಿರುವಿದ್ದ ನಾಟಕಗಳಲ್ಲಿಯ ಎಲ್ಲ ಒಳ್ಳೆಯ ಅಂಶಗಳನ್ನೂ ತೆಗೆದುಕೊಳ್ಳಲು ನಾಟಕಕಾರ್ತಿಯು ಯತ್ನಿಸಿದ್ದಾಳೆ. ಮೇಲೆ ತನ್ನದೇ ಆದ ಪ್ರತಿಭೆಯ ಮೆರುಗನ್ನೂ ನೀಡಿ ನಾಟಕಕ್ಕೆ ಹೊಸ ಕಳೆಯನ್ನು ತಂದಿದ್ದಾಳೆ.

ಕಾಲ್ಪನಿಕ ಪಾತ್ರಗಳ ರಚನೆಯೂ ತುಂಬಾ ಆಕರ್ಷಕವಾಗಿದೆ. ಕಥೆಯ ವಿಕಾಸಕ್ಕೂ, ರಂಗಪೋಷಣೆಗೂ ಅನುಕೂಲವಾದ ಪಾತ್ರಗಳ ಸೃಷ್ಟಿ ಮಾಡಲ್ಪಟ್ಟಿದೆ. ಉಚಿತವಾದ ಹೆಸರುಗಳನ್ನು ಕೊಟ್ಟಿದ್ದಾಳೆ. ಪಾತ್ರಗಳಿಗೆ ಅವರವರು ಮಾಡುವ ಕೆಲಸಕ್ಕೆ ಉಚಿತವಾದ ಹೆಸರುಗಳನ್ನು ಕೊಟ್ಟಿದ್ದಾಳೆ. ಸಂತೋಷ ಸಮಾಚಾರವನ್ನು ತಂದ ಸೇವಕ ನಂದಕ, ಜನಾಭಿಪ್ರಾಯವನ್ನು ತಿಳಿದುಕೊಳ್ಳಲು ನಿಯಮಿಸಿದ ಗುಪ್ತಚರ ಲೋಕಾಕ್ಷಿ, ಸೇನಾಪತಿಯ ಹೆಸರು ಕುಂಜರಕ,

ಅನ್ಯೋಕ್ತಿ ಹಾಗೂ ಇನ್ನಿತರ ಅಲಂಕಾರಗಳಿಗೆ ಅವಳು ಕೊಡುವ ಉದಾಹರಣೆಗಳು ಮಾರ್ಮಿಕವಾಗಿವೆ. ಹಳೆಯ ಮಸ್ತುವೇ ಆದರೂ ನೋಡುವ ದೃಷ್ಟಿಕೋನ ಹೊಸದಾಗಿದೆ." ಕಾಮವನ್ನು ಶಂಕರನು ಜಯಿಸಿದನು, ಬುದ್ಧನು ಜಯಿಸಿದನು. ಪ್ರವಾಸದಲ್ಲಿರುವ ಪತಿಯೂ ಜಯಿಸಿದನು, ಹೀಗಾಗಿ ಕಾಮನು ದಿಕ್ಕುಗಾಣದೆ ಮನೆಯಲ್ಲಿದ್ದ ಅಬಲೆಯನ್ನು ಹಿಂಸಿಸುತ್ತಾನೆ" ಎನ್ನುವ ಕವಯಿತ್ರಿಯು ಕವಿಸಮಯದಲ್ಲಿಯೂ ನಾವಿನ್ಯವನ್ನು ತರಲೆತ್ನಿಸಿದ್ದಾಳೆ.[೩೬]

ನಾಲ್ಕನೆಯ ಅಂಕದ ಮುಖ್ಯ ದೃಶ್ಯದ ಘಟನೆ ರಾತ್ರಿಯಲ್ಲಿ ನಡೆಯುವುದು ವೀರಸೇನನೆಂಬ ಚಾರನು ರಾತ್ರಿಯಲ್ಲಿ ಮಂತ್ರಗುಪ್ತನನ್ನು ಸಂಧಿಸುವನು. ವೀರಸೇನನು ಬಂದೊಡನೆ ಅವನನ್ನು ಕೈಹಿಡಿದು ಬರಮಾಡಿಕೊಳ್ಳುವುದು, ತನ್ನ ಹಾಸಿಗೆಯ ಮೇಲೆಯೇ ಕುಳಿತುಕೊಳ್ಳಲು ಹೇಳುವುದೂ, ಆದರೂ ಅವನು ನೆಲದಮೇಲೆ ಕುಳಿತು ಕೊಳ್ಳುವುದು, ಮಂತ್ರಿ ಮಂತ್ರಗುಪ್ತನು ತನ್ನ ಸಹಾಯಕರೊಂದಿಗೆ ಎಷ್ಟು ಗೌರವದಿಂದ ನಡೆದುಕೊಳ್ಳುತ್ತಿದ್ದನೆಂಬುದನ್ನೂ, ಸಹಕಾರಿಗಳ ಶಿಸ್ತು ಮತ್ತು ವಿನಯಶೀಲತೆಯನ್ನೂ ತೋರಿಸುತ್ತವೆ. ಈ ಅಂಕದ ತುಂಬೆಲ್ಲ ಕಂಡುಬರುವ ರಾಜನೀತಿಯಲ್ಲಿಯ ಕೌಶಲ್ಯ ಮತ್ತು ರಾಜಕೀಯದಲ್ಲಿಯ ರಾಜನೀತಿಗಳ ಸೂಕ್ಷ್ಮ ಪರಿಚಯವನ್ನು ಪರಿಶೀಲಿಸಿದರೆ ಕವಯತ್ರಿಗೆ ಈ ವಿಷಯಗಳ ಪ್ರತ್ಯಕ್ಷ ಸಂಬಂಧವಿರಬೇಕೆಂಬುದು ಭಾಸವಾಗುತ್ತದೆ.

**ಉನ್ನಿದ್ರಾಶೋಕ ಚೂತಪ್ರಸವ ಪರಿಮಲೋದ್ಗಂಧಯೋ ಗಂಧವಾಹಾಃ**
**ಪ್ರೇಂಖದ್ವಾಲಾಪಮಾಲಾ ಶತಶಬಲಮುಖಃಪ್ರಾವೃಷೇಣ್ಯೋಂಧಕಾರಃ ।**
**ಸೌಧೋತ್ಸಂಗ ಪ್ರಸಂಗೀ ನವಶಶಿವಿಶದಃ ಶಾರದೋ ವಾ ಪ್ರದೋಷೋ**
**ಯದ್ಯಸ್ತ್ರಂ ನ ಸ್ಯುರೇತೇ ಸ್ವಯಮತನುರಸೌ ಕಾತರಃ ಕಿಂ ಕರೋತಿ ॥ (ಚೌಮುದೀ ಮಹೋತ್ಸವ ೩–೩)**

ಅರಳಿದ ಅಶೋಕ ಹಾಗೂ ಮಾವಿನ ಹೂಗಳ ಪರಿಮಳದಿಂದ ಸುಗಂಧಿತವಾದ ಗಾಳಿ, ಆಕಾಶದಲ್ಲಿ ಹಾರಾಡುತ್ತಿರುವ ಬೆಳ್ಳಕ್ಕಿಗಳ ನೂರಾರು ಸಾಲಿನಿಂದ ಚಿತ್ರವರ್ಣಕ್ಕೆ ತಿರುಗಿದ ಮೋಡಗಳುಳ್ಳ ಈ ಮಳೆಗಾಲದ ಸಂಜೆ ಉಪ್ಪರಿಗೆಯ ಮಡಿಲಲ್ಲಿ ನಲಿದಾಡುವ, ಉದಯಿಸುತ್ತಿರುವ ಚಂದ್ರನಿಂದ ಸ್ವಚ್ಛವಾದ ಈ ಶರತ್ಕಾಲದ ಪ್ರದೋಷ, ಶರೀರವಿಲ್ಲದ ಆ ಮದನನು ಈ ಅಸ್ತ್ರಗಳನ್ನು ಹೊಂದಿಲ್ಲದೆ ಇದ್ದರೆ ಏನು ತಾನೆ ಮಾಡುತ್ತಿದ್ದ?

ನಾಟಕದಲ್ಲಿ ಅಪರೂಪದ ಛಂದಸ್ಸಿನ ಬಳಕೆಯನ್ನು ಕಾಣಬಹುದು. ಒಟ್ಟಾರೆ ನಾಟಕದಲ್ಲಿ ೧೧೩ ಪದ್ಯಗಳನ್ನು ವಿವಿಧ ಛಂದಸ್ಸುಗಳಲ್ಲಿ ರಚಿಸಿದ್ದಾಳೆ. ೨೩ ಪದ್ಯಗಳನ್ನು ಶಾರ್ದೂಲವಿಕ್ರೀಡಿತದಲ್ಲಿ ರಚಿಸಿದ್ದಾಳೆ ಪುಷ್ಪಿತಾಗ್ರ, ಗೀತಿ, ಸುಂದರಿ, ಕೇತುಮತಿ, ರಥೋದ್ದಾತ, ಮೊದಲಾದ ಅಪರೂಪದ ಛಂದಸ್ಸುಗಳನ್ನು ಇವಳು ಬಳಸಿದ್ದಾಳೆ.

**ನಾಟಕದ ಕಥಾವಸ್ತು:** ಪಾಟಲೀಪುತ್ರದಲ್ಲಿ ಸುಂದರವರ್ಮನೆಂಬ ರಾಜನಿದ್ದನು. ಅವನ ಆಶ್ರಯದಿಂದಲೇ ದೊಡ್ಡವನಾದ ಚಂಡಸೇನನೆಂಬ ಸೇನಾಪತಿಯು ಮಗಧಕುಲವೈರಿಗಳಾದ ಲಿಚ್ಛವಿಗಳೊಡನೆ ಸೇರಿಕೊಂಡು ರಾಜಧಾನಿಯನ್ನು ಆಕ್ರಮಿಸುವನು. ಆರಂಭದಲ್ಲಿ ಯುದ್ಧವು ರಾಜನಿಗೆ ಅನುಕೂಲವಾಗಿ ಕಂಡರೂ ಕೊನೆಯ ಗಳಿಗೆಯಲ್ಲಿ ರಾಜನು ಸಾಯುವನು. ಮಂತ್ರಿ ಮಂತ್ರಗುಪ್ತನು ರಾಜಕುಮಾರ ಕಲ್ಯಾಣವರ್ಮನನ್ನು ವಿಂಧ್ಯಪರ್ವತದಲ್ಲಿ ಗುಪ್ತವಾಗಿಟ್ಟು, ರಾಜ್ಯವನ್ನು ತಿರುಗಿ ಪಡೆಯಲು ನೀತಿಜಾಲವನ್ನು ಹರಡುವನು. ಕಲ್ಯಾಣವರ್ಮನು ಕುಂಜರಕನೆಂಬ ಸೇನಾಧಿಪತಿಯ ನಿರೀಕ್ಷಣೆಯಲ್ಲಿ ದೊಡ್ಡವನಾಗುವನು. ಮಥುರೆಯ ಅಧಿಪತಿ ಕೀರ್ತಿಷೇಣನು ಕೀರ್ತಿಮತಿ ಎಂಬ ತನ್ನ ಮಗಳನ್ನು ವಿಂಧ್ಯವಾಸಿನೀ ದೇವಿಯ ಸೇವೆಗಾಗಿ ವಿಂಧ್ಯಾಟವಿಗೆ ಕಳಿಸುವನು.

ಅಲ್ಲಿ ಕಲ್ಯಾಣವರ್ಮನಿಗೂ ದೇವಸ್ಥಾನದಿಂದ ಹಿಂತಿರುಗಿ ಬರುವ ಕೀರ್ತಿಮತಿಗೂ ಆದ ಪ್ರಥಮ ದರ್ಶನ ಮತ್ತು ಪ್ರೇಮಾಂಕುರಗಳೇ ನಾಟಕದ ಮೊದಲನೆಯ ಅಂಕದ ವಿಷಯವಾಗಿವೆ. ಪ್ರಥಮ ದರ್ಶನದ ರೀತಿಯು ಸಾಮಾನ್ಯವಾಗಿ ಕಾಳಿದಾಸನ ರೀತಿಯನ್ನು ಹೋಲುತ್ತದೆ, ಇಲ್ಲಿ ನಾಯಿಕೆಯ ಭಾವವನ್ನು ಚಿತ್ರಿಸುವಲ್ಲಿ ಕವಯತ್ರಿಯ ಕೌಶಲವನ್ನು ಗಮನಿಸಬಹುದು.

ನಾಯಕಿಯನ್ನು ಕಂಡಾಗ ನಾಯಕನ ಮನಸೆಳೆದ ನಾಯಕಿಯ ಸೌಂದರ್ಯವನ್ನು ಕಂಡು "ಇವಳು ಬ್ರಹ್ಮನ ಸೃಷ್ಟಿಯಾಗಿರಲಾರಳು, ಶಂಕರನನ್ನು ಜಯಿಸಲು ಮದನನು ಮಾಡಿದ ತಪಸ್ಸಿನ ಫಲವೇ ಇವಳಿರಬೇಕು" ಎಂದು ನಾಯಕನು ತರ್ಕಿಸುವನು. "ನವವಧೂರೇಷಾ ವಧೂಲಕ್ಷಣಮ್" ಉತ್ತಮ ಸ್ತ್ರೀಲಕ್ಷಣವೇ ರೂಪತಾಳಿ ಬಂದಂತಿದೆ ಎಂಬ ಉದ್ಗಾರ ತೆಗೆಯುವನು.

ಕಲ್ಯಾಣವರ್ಮನು ತಾನು ಇದ್ದ ಜಾಗಕ್ಕೆ ಬಂದರೆಂಬ ಕಾರಣದಿಂದ ರಾಜಕುಮಾರಿ ಹಾಗೂ ಅವಳೊಡನೆ ಬಂದ ವೃದ್ಧ ಕಂಚುಕಿ ಹಾಗೂ ನಿಪುಣೆಯೆಂಬ ದಾಸಿಯರನ್ನು ಅತಿಥಿಗಳೆಂದು ಬರಮಾಡಿಕೊಳ್ಳುವನು. ಕಂಚುಕಿಯಿಂದ ನಾಯಕಿಯ ವಿಚಾರವನ್ನು ನೇರವಾಗಿ ಕೇಳಿ ತಿಳಿದುಕೊಂಡು, ಜನನಿಬಿಡ ಅಡವಿಗೆ ಕೋಮಲೆಯನ್ನು ಕಳಿಸಿದ್ದು ತಪ್ಪೆಂದು ತಿಳಿಸುತ್ತಾನೆ.

ನಾಯಕ ನಾಯಕಿಗೆ ಮನಸೋತಂತೆ, ನಾಯಕಿಯೂ ಸೋಲುತ್ತಾಳೆ ಅದನ್ನವಳು "ಜನಪ್ರತಿಷಿದ್ಧ ಪ್ರಸರಾಪಿ ಪುನಃ ಪುನಸ್ತತ್ರೈವ ದೃಷ್ಟಿಃ ಪ್ರಸರತಿ" ಎನ್ನುತ್ತಾ "ಜನರಿರುವುದರಿಂದ ತಡೆದುಕೊಂಡರೂ ನನ್ನ ದೃಷ್ಟಿಯು ಮತ್ತೆ ಮತ್ತೆ ಅವನ ಕಡೆಗೇ ಹರಿಯುತ್ತಿದೆ" ಎಂದು ಸ್ವಗತದಲ್ಲಿ ಹೇಳಿಕೊಂಡು ಪ್ರೇಕ್ಷಕರಿಗೆ ತನ್ನ ಭಾವನೆಯನ್ನು ತಿಳಿಸುತ್ತಾಳೆ. ವಿಶ್ರಾಂತಿಗಾಗಿ ಕುಟೀರವೊಂದನ್ನು ರಚಿಸಿದ ಸಿಂಹಲಕನು ಕರೆಯಲು ಬಂದಾಗ ಇವರೀರ್ವರು ಅಗಲಬೇಕಾಗುತ್ತದೆ.

**ಯಾತಾ ನಿತಂಬಗುರ್ವೀಯಾವದ್ಯಾವನ್ಮೃಗೇಕ್ಷಣಾ ದೂರಮ್।**
**ಬಿಂಬಿತರಾತ್ರೀ ವಾಂನಃ ತಾವತ್ತಾವದವಗಾಢಾ ಮೇ॥**

"ಕನ್ನಡಿಯಲ್ಲಿಯ ಪ್ರತಿಬಿಂಬದಂತೆ ಅವಳು ದೂರ ದೂರ ಹೋದಷ್ಟೂ ನನ್ನಲ್ಲಿ ಆಳವಾಗಿ ಸೇರಿಕೊಂಡಳು" ಎಂದು ನಾಯಕ ಕಲ್ಯಾಣವರ್ಮನು ತನ್ನ ಚಿತ್ರದಲ್ಲಿ ಅವಳು ಗಾಢವಾಗಿ ಸೇರಿಕೊಂಡದ್ದನ್ನು ಹೇಳುವನು.

ರಾಜಕುಮಾರನ ಮನಃಸ್ಥಿತಿಯನ್ನರಿತ ವಿಧೂಷಕನು "ಮೊದಲೇ ರಾಜ್ಯವನ್ನು ಕಳೆದುಕೊಂಡಿರುವಿ, ಈಗ ಹೆಣ್ಣೆಂಬ ಹಗ್ಗದಿಂದ ಬಿಗಿದುಕೊಳ್ಳುತ್ತಿರುವೆ" ಎಂದು ಎಚ್ಚರಿಸುತ್ತಾನೆ. ನಾಯಕಿಯು ಅವಸರದಿಂದ ತಿರುಗಿ ಹೋಗುವಾಗ ಬಳ್ಳಿಗೆ ಸಿಕ್ಕ ಸೆರಗನ್ನು ಬಿಡಿಸಿಕೊಳ್ಳುವ ಭರದಲ್ಲಿ ಕೆಳಗೆ ಬಿದ್ದ ಅವಳ ಹಾರವು ಹೊಟ್ಟೆಬಾಕ ವಿದೂಷಕನಿಗೆ ಅನ್ನದ

ರಾಶಿಯಂತೆ ಕಂಡರೆ ನಾಯಕನಿಗೆ ತನಗಾಗಿ ಬಿಟ್ಟುಹೋದ ಅವಳ ಹೃದಯದಂತೆ ಭಾಸವಾಗುತ್ತದೆ. ಪ್ರೀತಿಯಿಂದ ಅದನ್ನು ಎತ್ತಿಕೊಂಡು, ಸೇವಕರ ಸೂಚನೆಯಂತೆ ಹೊರಡುತ್ತಾನೆ.

ಎರಡನೆಯ ಅಂಕದಲ್ಲಿ ಕೀರ್ತಿಮತಿಯು ಮದನಭಾದೆಯಿಂದ ಪರಿತಪಿಸುವಳು. ಇವಳು ಬಿಡಿಸಿದ ನಾಯಕನ ಚಿತ್ರವನ್ನು ಪಕ್ಷಿಯೊಂದು ಅವಳ ಸಾಕುತಾಯಿ ಯೋಗಸಿದ್ಧಿಯಿದ್ದಲ್ಲಿಗೆ ತಂದು ಹಾಕುವುದು. ಈ ಮೊದಲು ಯೋಗಸಿದ್ಧಿಯು ಮಗಧದೇಶದ ರಾಜ ಸುಂದರವರ್ಮನ ಅರಮನೆಯಲ್ಲಿ ಕೆಲಸಕ್ಕಿದ್ದವಳು. ಇವಳು ಅಲ್ಲಿ ಕಲ್ಯಾಣವರ್ಮನ ದಾಯಿಯಾಗಿದ್ದಳು, ಚಂಡಸೇನನ ಆಕ್ರಮಣದ ನಂತರ ಕಲ್ಯಾಣವರ್ಮನು ಕಳೆದುಹೋಗಲು, ಜೀನವದಲ್ಲಿ ನಿರಾಶೆ ತಾಳಿ ಸನ್ಯಾಸಿನಿಯಾಗಿ ದೇಶ–ದೇಶವನ್ನು ಅಲೆಯುತ್ತಿದ್ದಾಗ ಕೀರ್ತಿಮತಿಯ ತಾಯಿಯ ಆಗ್ರಹದಿಂದ ಅವಳ ಅರಮನೆಯಲ್ಲಿದ್ದು, ನಾಯಕಿಯ ಬೆಂಗಾವಲಿಗಾಗಿ ಅವಳೊಂದಿಗೆ ಅಡವಿಗೆ ಬಂದಿರುತ್ತಾಳೆ. ರಾಜಕುಮಾರಿ ಬಿಡಿಸಿದ ಚಿತ್ರವನ್ನು ಕಂಡ ಯೋಗಸಿದ್ಧಿಗೆ ಆ ಚಿತ್ರದಲ್ಲಿರುವವನು ತಾನು ಸಾಕಿದ ಕಲ್ಯಾಣವರ್ಮನೇ ಎಂಬುದು ತಿಳಿದು ಬರುತ್ತದೆ. ಅಲ್ಲದೆ ಕೀರ್ತಿಮತಿಗೆ ಅವನಲ್ಲಿ ಅನುರಾಗ ಉಂಟಾಗಿರುವ ವಿಚಾರವನ್ನು ನಿಪುಣಿಕೆಯಿಂದ ತಿಳಿದು ಸಂತೋಷಗೊಳ್ಳುತ್ತಾಳೆ. ಈ ಸಂದರ್ಭದಲ್ಲಿ ಹಾರವನ್ನು ಹಿಂದಿರುಗಿಸುವ ನೆಪದಿಂದ ನಾಯಕನ ಪರವಾಗಿ ಪ್ರೇಮಸಂಧಾನ ಮಾಡಲು ಬಂದ ವಿಧೂಷಕ ಮರೆಯಲ್ಲಿ ನಿಂತು ನಿಪುಣಿಕೆ ಹಾಗೂ ಯೋಗಸಿದ್ಧಿಯರ ಸಂಭಾಷಣೆಯನ್ನು ಕೇಳಿಸಿಕೊಂಡು, ನಾಯಕಿಗೆ ತನ್ನ ಗೆಳೆಯನಲ್ಲಿ ಪ್ರೇಮ ಉಂಟಾಗಿರುವುದನ್ನು ಅರಿತುಕೊಳ್ಳುತ್ತಾನೆ. ಅಂತೆಯೇ ಅವರಿಬ್ಬರನ್ನು ಮಾತನಾಡಿಸಿ ಹಾರವನ್ನು ಕೊಟ್ಟು ಚಿತ್ರಪಟನ್ನು ತೆಗೆದುಕೊಂಡು ಹೊರಡುತ್ತಾನೆ.

ಮೂರನೆಯ ಅಂಕದಲ್ಲಿ ಕೀರ್ತಿಮತಿ ಬರೆದ ತನ್ನ ಚಿತ್ರವನ್ನು ಕಂಡು ಕಲ್ಯಾಣವರ್ಮನು ಪುಳಕಿತನಾಗುತ್ತಾನೆ. ಜೊತೆಗೆ ತನ್ನ ಸಾಕುತಾಯಿ ಯೋಗಸಿದ್ಧಿಯ ವಿಚಾರವನ್ನು ತಿಳಿದು ಸಂತೋಷಗೊಳ್ಳುತ್ತಾನೆ.

ನಾಲ್ಕನೆಯ ಅಂಕದಲ್ಲಿ ಪ್ರೇಮದ ಕಥೆಯು ಹಿಂದೆ ಸರಿದು ರಾಜಕೀಯ ಘಟನೆಗಳು ಪ್ರಾಮುಖ್ಯ ಪಡೆಯುತ್ತವೆ. ರಾಜಕುಮಾರ ಕಲ್ಯಾಣವರ್ಮನನ್ನು ಅಡವಿಯಲ್ಲಿಟ್ಟು ಬೆಳೆಸುತ್ತಿದ್ದ ಮಂತ್ರಿ ಮಂತ್ರಗುಪ್ತನು ಪಾಶುಪತನ ವೇಷದಲ್ಲಿದ್ದು, ರಾಜ್ಯ ಹಿಂಪಡೆಯಲು ಸಂಚುರೂಪಿಸುತ್ತಾನೆ. ಆರ್ಯರಕ್ಷಿತ, ವರ್ಧಮಾನ ಮೊದಲಾದವರು ಈತನ ಗುಪ್ತಚಾರರು. ಇವರ ಸಂಭಾಷಣೆಯಲ್ಲಿ ಕೆಲವೊಂದು ರಾಜಕೀಯ ಸನ್ನಿವೇಷಗಳು ತಿಳಿದುಬರುತ್ತವೆ. ಮಂತ್ರಗುಪ್ತನ ಪ್ರಚೋದನೆಯಿಂದ ಗಡಿರಕ್ಷಕರು ದಂಗೆಯೇಳಲು ಅವರನ್ನು ಬಗ್ಗುಬಡಿಯಲೆಂದು ಚಂಡಸೇನನು ರಾಜಧಾನಿಯನ್ನು ಬಿಟ್ಟು ಹೊರಹೋಗಿರುವ ವಿಚಾರ ಹಾಗೂ ರಾಜಕುಮಾರ ಕಲ್ಯಾಣವರ್ಮನ ಕುರಿತಂತೆ ಜನಾಭಿಪ್ರಾಯವೂ ಅನುಕೂಲಕರವಾಗಿರುವ ವಿಚಾರಗಳನ್ನು ಆ ಗುಪ್ತಚರರು ತಿಳಿಸುತ್ತಾರೆ.

ವೀರಸೇನನೆಂಬ ಚಾರನು ರಾತ್ರಿಯಲ್ಲಿ ಮಂತ್ರಗುಪ್ತನನ್ನು ಸಂಧಿಸಿ, ರಾಜಕುಮಾರನು ಪರಿಮಿತ ಸೈನ್ಯದೊಡನೆ ಹೊರಟಿರುವುದಾಗಿಯೂ, ಬೆಳಗಿನ ಹೊತ್ತಿಗೆ ರಾಜಧಾನಿಯನ್ನು ಮುಟ್ಟಬಹುದೆಂದೂ ತಿಳಿಸುತ್ತಾನೆ. ರಾಜಕೀಯ ಉದ್ದೇಶಕ್ಕಾಗಿಯೇ ಪ್ರೇಮದ ನಾಟಕವನ್ನು ಹೂಡುವ ಸಲುವಾಗಿ ಅಡವಿಯಲ್ಲಿ ರಾಜಕುಮಾರ ಹಾಗೂ ಕೀರ್ತಿಮತಿಯರು ಭೇಟಿಯಾಗುವಂತೆ ವ್ಯವಸ್ಥೆ ಮಾಡಿದ್ದ ಮಂತ್ರಗುಪ್ತನಿಗೆ, ಪ್ರೇಮದ ಗೊಂದಲದಲ್ಲಿ ಸಿಲುಗಿ ರಾಜಕುಮಾರನೆಲ್ಲಿ ರಾಜಕೀಯದ ಕಡೆಗೆ ಉದಾಸೀನನಾಗುವನೋ ಎಂಬ ಆತಂಕವಿರುತ್ತದೆ. ಆದರೆ ರಾಜ್ಯವನ್ನು ಮರಳಿ ಪಡೆಯುವುದರಲ್ಲಿ ಉತ್ಸಾಹಿತನಾಗಿರುವುದನ್ನು ಕಂಡು ಸಂತೋಷಗೊಳ್ಳುವನು. ರಾಜಕುಮಾರನು ನಗರಕ್ಕೆ ಬಂದು ಮುಟ್ಟಿದ ಗದ್ದಲ ಕೇಳುವುದು, ಸೂರ್ಯೋದಯವಾಗುವುದು.

ಐದನೆಯ ಅಂಕದಲ್ಲಿ ನಾಯಕಿ ಕೀರ್ತಿಮತಿ ಹಾಗೂ ಅವಳ ಸಂಗಡಿಗರು ತಮ್ಮ ಅರಮನೆಗೆ ಮರಳುವರು. ಯೋಗಸಿದ್ಧಿಯು ಭವಾನಿಯು ಸ್ವಪ್ನದಲ್ಲಿ ಕಲ್ಯಾಣವರ್ಮನೊಂದಿಗೆ ಕೀರ್ತಿಮತಿಯ ವಿವಾಹವಾಗಬೇಕೆಂಬ

ಆಜ್ಞೆಯನ್ನು ನೀಡಿರುವುದಾಗಿ ತಿಳಿಸಿ ಕೀರ್ತಿಮತಿಯ ತಂದೆ–ತಾಯಿಯರನ್ನು ಒಪ್ಪಿಸುವಳು. ಅಷ್ಟರಲ್ಲಿ ಮಂತ್ರಗುಪ್ತನು ವಿವಾಹಸಂಬಂಧದ ಮಾತುಗಳನ್ನಾಡಲೆಂದು ಕಳಿಸಿದ ಪುರೋಹಿತರು ಬರುತ್ತಾರೆ.

ಉದ್ಯಾನವನದಲ್ಲಿ ಕಲ್ಯಾಣವರ್ಮ–ಕೀರ್ತಿಮತಿಯರು ಮತ್ತೊಮ್ಮೆ ಸಂಧಿಸುತ್ತಾರೆ. ತಾವು ಈ ರೀತಿ ಸಂಧಿಸಲು ಮಂತ್ರಗುಪ್ತನೇ ಕಾರಣ ಎಂಬುದನ್ನು ಅರಿತ ರಾಜಕುಮಾರ ಕೃತಜ್ಞತೆ ಅವನಿಗೆ ಸಲ್ಲಿಸುತ್ತಾನೆ. ಅಷ್ಟರಲ್ಲಿ ಮುಗಿಲಲ್ಲಿ ಸಂಜೆಯಮೋಡಗಳು ಕಟ್ಟಿ ಗರ್ಜಿಸಲು ಆರಂಭಿಸುತ್ತದೆ, ಗಾಬರಿಗೊಂಡ ನಾಯಕಿಯನ್ನು ಸಂತೈಸುತ್ತಾ ನಾಯಕನು ಮಳೆಗಾಲದ ಆರಂಭದ ವರ್ಣನೆಮಾಡುತ್ತಾನೆ. ಕೊನೆಯ ನೀಲಕಂಠನ ಸ್ತುತಿಯೊಂದಿಗೆ ನಾಟಕದ ಸಮಾಪ್ತಿಯನ್ನು ಸೂಚಿಸುವುದು.

ನಾಟಕದ ಕೊನೆಯು ಮಾತ್ರ ಸಾಂಪ್ರದಾಯಿಕವಾಗಿಲ್ಲ ಎನ್ನುವುದೊಂದು ಕೊರತೆಯಾಗಿದೆ. ಕೊನೆಗೆ ಭರತವಾಕ್ಯವಿಲ್ಲ, ರಾಜ್ಯಪ್ರಾಪ್ತಿಗೂ, ಕೀರ್ತಿಮತಿ ಪ್ರಾಪ್ತಿಗೂ ಕಾರಣರಾದ ಮಂತ್ರಗುಪ್ತ, ಯೋಗಸಿದ್ಧಿಯರು ಅಲ್ಲಿರುವುದಿಲ್ಲ. ಕೇವಲ ಪ್ರಮದವನದಲ್ಲಿ ನಾಯಕ ನಾಯಕಿಯರು ಭೇಟಿಯಾಗುವರೇ ಹೊರತು ಪಟ್ಟಾಭಿಷೇಕ ಮತ್ತು ವಿವಾಹಗಳಲ್ಲಿ ಕತೆ ಪರ್ಯವಸನವಾಗುವುದಿಲ್ಲ. ಇಂತಹ ಬೆರಳೆಣಿಕೆಯ ಲೋಪದೋಷಗಳನ್ನು ಮೀರಿ ಪ್ರಶಂಸೆಗೆ ಕಾರಣವಾಗುವ ನಾಟಕದ ಇತರ ವಿಚಾರಗಳು ಹಲವಾರು ಇವೆ.

ಈ ನಾಟಕದ ವಸ್ತುವು ಅಂದಿನ ಸಂಸ್ಕೃತ ಸಾಹಿತ್ಯದಲ್ಲಿ ಪ್ರಚಲಿತವಿದ್ದ ಕಥಾಹಂದರವನ್ನು ಒಳಗೊಂಡಿದೆ. ಪೌರಾಣಿಕ ವಸ್ತುವನ್ನು ಆರಿಸಿಕೊಳ್ಳದೆ ರಾಜನೀತಿ, ಯುದ್ಧತಂತ್ರ, ಅರಸನ ಸುತ್ತಲಿನ ಸಚಿವರು ಮೊದಲಾದ ರಾಜಕೀಯ ವಿಚಾರಗಳನ್ನೊಳಗೊಂಡ ಕತೆಯನ್ನು ಆರಿಸಿಕೊಂಡಿರುವುದು ವಿಜ್ಜಿಕಾಳ ಅಭಿರುಚಿ, ಆಸಕ್ತಿಯನ್ನು ಕುರಿತು ತಿಳಿಸುತ್ತದೆ.

ಈ ಕೃತಿಯು ಪೂರ್ವ–ಪಶ್ಚಿಮದ ವಿದ್ವಾಂಸರಿಂದ ವಿಮರ್ಶಿಸಲ್ಪಟ್ಟಿದೆ. ಡಾ.ಕೆ.ಪಿ.ಜಯಸ್ವಾಲ್ ಅವರು ನಾಟಕದಲ್ಲಿನ ಐತಿಹಾಸಿಕ ವಿಚಾರವನ್ನು ಕುರಿತು ಐತಿಹಾಸಿಕ ಆಧಾರದಿಂದ ಚರ್ಚಿಸಿ, ಇಲ್ಲಿನ ಚಂದಸೇನನನ್ನು ಗುಪ್ತವಂಶದ ಸ್ಥಾಪಕ ಚಂದ್ರಗುಪ್ತನಿಗೆ ಹೋಲಿಸಲು ಯತ್ನಿಸಿದ್ದಾರೆ. ಆದರೆ, ಡಾ.ವಿಂಟರ್‌ನಿಟ್ಸ್ ಇದೊಂದು ಸಂಪೂರ್ಣ ಕಾಲ್ಪನಿಕ ಕತೆಯಾಗಿದ್ದು, ಇದರಲ್ಲಿ ಯಾವುದೇ ಐತಿಹಾಸಿಕ ವಿಚಾರಗಳಿಲ್ಲ ಎಂಬ ವಾದವನ್ನು ಮಂಡಿಸಿದ್ದಾರೆ.

ಇದು ಹಲವಾರು ನಾಟಕಗಳ ಪ್ರೇರಣೆಯಿಂದ ಮೂಡಿದ ಸ್ವತಂತ್ರ ನಾಟಕವಾಗಿದೆ. ವಿದ್ವಾಂಸರು ಗುರುತಿಸಿರುವಂತೆ ಈ ನಾಟಕದಲ್ಲಿ ಭಾಸ, ಕಾಳಿದಾಸ, ಹರ್ಷ ಮೊದಲಾದ ಸಂಸ್ಕೃತ ನಾಟಕಕಾರರ ಪ್ರಭಾವವಿದೆ. ಇದು ವಿಜ್ಜಿಕಾಳ ಅಧ್ಯಯನ ಹಾಗೂ ಸೋಪಜ್ಞತೆಯನ್ನು ತಿಳಿಸುತ್ತದೆ. ನಾಟಕವು ಹಾಸ್ಯ, ವೀರ, ಶೃಂಗಾರ ರಸಗಳಿಂದ ಕೂಡಿದೆ.

ಇವಳ ವಿದ್ಯೆ, ಸಂಸ್ಕೃತ ಸಾಹಿತ್ಯಾಭ್ಯಾಸ, ಸಮಾಜವನ್ನು ನೋಡುವ–ಗ್ರಹಿಸುವ ಇವಳ ಗುಣ, ಜೊತೆಗೆ ವಿಜ್ಜಿಕೆಯ ರಾಜಕೀಯ ಮತ್ತು ಸಾಂಸ್ಕೃತಿಕ ಹಿನ್ನೆಲೆಯನ್ನು ಈ ನಾಟಕ ಪರಿಚಯಿಸುತ್ತದೆ. ಇಂಥ ಪ್ರತಿಭಾನ್ವಿತ ಕವಯತ್ರಿ ವಿಜ್ಜಿಕೆ ಕರ್ನಾಟಕದವಳೆಂಬುದು ಅಭಿಮಾನದ ವಿಷಯವಾಗಿದೆ.

## ಸಂಸ್ಕೃತ ಕಾವ್ಯಗಳು (ಐತಿಹಾಸಿಕ)

ಕರ್ನಾಟಕದ ಅರಸಿಯರು ಬಿಡಿ ಮುಕ್ತಕಗಳು, ಪಂಚಕ, ನಾಟಕಗಳನ್ನು ರಚಿಸಿರುವಂತೆ ಕಾವ್ಯಗಳನ್ನೂ ರಚಿಸಿ ತಮ್ಮ ಪಾಂಡಿತ್ಯ ಪ್ರಕಟಿಸಿದ್ದಾರೆ. ಈ ಮೇಲೆ ಕಂಡಂತೆ ಮುಕ್ತಕಗಳೆಲ್ಲಾ ಒಂದೆಡೆ ದೊರಕದೆ ಕೆಲವನ್ನು ಮಾತ್ರ ಗುರುತಿಸಿ ಒಂದೆಡೆ ಸೇರಿಸುವ ಪ್ರಯತ್ನ ಮುದ್ರಣ ತಂತ್ರಜ್ಞಾನ ಬಂದಮೇಲೆ ನಡೆಯುತ್ತಿರುವಂತೆಯೇ, ಅರಸಿಯರು ರಚಿಸಿರುವ ಕಾವ್ಯಗಳೂ ಕೂಡ ಸಮಗ್ರವಾಗಿ ದೊರೆತಿಲ್ಲ. ಗಂಗಾದೇವಿ ರಚಿಸಿರುವ ಮಧುರಾವಿಜಯಂ ಕೃತಿಯ ಏಕೈಕ ಹಸ್ತಪ್ರತಿ ದೊರೆತಿದ್ದು, ಅದೂ ಕೂಡ ಸಮಗ್ರವಾಗಿಲ್ಲ. ಕೆಲ ಭಾಗಗಳು ತೃಟಿತವಾಗಿದ್ದರೂ, ಐತಿಹಾಸಿಕವಾಗಿ ಮಹತ್ವ ಉಳ್ಳ ಈ ಕೃತಿಯನ್ನು ದೊರೆತಷ್ಟೇ ಭಾಗವನ್ನು ಅಚ್ಚಿಗೆ ಸಿದ್ಧಪಡಿಸಿ ಪ್ರಕಟಿಸಲಾಗಿದೆ. ಇಲ್ಲಿ ಅಧ್ಯಯನಕ್ಕೆ ಬಳಸಿರುವ ಮಧುರಾವಿಜಯಂ ಹಾಗು ವರದಾಂಬಿಕಾ ಪರಿಣಯ ಚಂಪೂ ಎರಡೂ ಕೃತಿಗಳೂ ಐತಿಹಾಸಿಕ ಕಾವ್ಯಗಳಾಗಿವೆ.

### ಗಂಗಾದೇವಿ

ಗಂಗಾದೇವಿಯು ವಿಜನಗರವನ್ನಾಳಿದ ಸಂಗಮ ವಂಶದ ಬುಕ್ಕರಾಯನ ಸೊಸೆ. ಕಂಪಣನ ಅರಸಿ. ತನ್ನ ಪತಿಯನ್ನು ಕುರಿತು ರಚಿಸಿರುವ ಕಾವ್ಯಕ್ಕೆ 'ಮಧುರಾವಿಜಯಂ' ಎಂದು ಹೆಸರಿಸಿದ್ದರೂ ಅದನ್ನು 'ವೀರಕಂಪರಾಯ ಚರಿತೆ' ಎಂದು ಕರೆದಿದ್ದಾಳೆ. ಈ ಹೆಸರುಗಳೇ ಸೂಚಿಸುವಂತೆ ಇದು ವೀರಕಂಪಣನ ಕುರಿತದ್ದಾಗಿದೆ ಜೊತೆಗೆ ಆತನು ಮಧುರೆಯಮೇಲೆ ಸಾಧಿಸಿದ ವಿಜಯದ ವಿಚಾರವನ್ನು ಕುರಿತಾಗಿ ರಚಿಸಿರುವ ಕಾವ್ಯವಾಗಿದೆ. ಸಾಧಾರಣವಾಗಿ ಆಸ್ಥಾನ ಕವಿಗಳು ಅರಸನ ಶೌರ್ಯ-ಸಾಹಸ ಯಶೋಗಾಥೆಗಳನ್ನು ಕುರಿತು ರಚಿಸುವುದನ್ನು ಕಾಣುತ್ತೇವೆ. ಇಲ್ಲಿ ಸ್ವತಃ ಅರಸಿಯೇ ತನ್ನ ಪತಿಯ ಯುದ್ಧಸಾಹಸಗಳನ್ನು ಕಣ್ಣಾರೆ ಕಂಡು ಅದನ್ನು ಕಾವ್ಯರೂಪದಲ್ಲಿ ಬಣ್ಣಿಸಿದ್ದಾಳೆ.

ಗಂಗಾದೇವಿಯು ಕಾವ್ಯದಲ್ಲಿ ತನ್ನ ಕುರಿತಾದ ಹೆಚ್ಚಿನ ವಿವರಗಳನ್ನು ನೀಡಿಲ್ಲ. ಕಂಪಣನ ತಂದೆ ಬುಕ್ಕನು ಮಗನಿಗೆ ಅನೇಕ ರಾಜಕನ್ಯೆಯರನ್ನು ತಂದು ಮದುವೆ ಮಾಡಿದನು ಎಂದು ಹೇಳಿ ಮುಂದಿನ ಪದ್ಯದಲ್ಲಿ ಅವರಲ್ಲಿ ಓರ್ವಳು ಇಂದ್ರನಿಗೆ ಶಚಿಯಂತೆಯೂ, ವಿಷ್ಣುವಿಗೆ ರಮೆಯಂತೆಯೂ, ಶಿವನಿಗೆ ಸತಿಯಂತೆಯೂ ಎಂದು ಹೇಳುವ ಭಾಗವು ಹಸ್ತಪ್ರತಿಯಲ್ಲಿ ತ್ರುಟಿತವಾಗಿದೆ. ಬಹುಶಃ ಇಲ್ಲಿ ತನ್ನ ಕುರಿತಾಗಿಯೇ ಹೇಳಿರಬಹುದು. ಈ ವಿಚಾರವಾಗಿ ವಿದ್ವಾಂಸರಿಗೆ ಕೆಲವು ಅನುಮಾನಗಳಿವೆ. ಇಲ್ಲಿ ಗಂಗಾದೇವಿ ತನ್ನನ್ನು ಕುರಿತು ಹೇಳಿದ್ದಾಳೆಯೇ? ಇವಳು ಹಲವರು ರಾಣಿಯರಲ್ಲಿ ಒಬ್ಬಳೇ ಅಥವಾ ಕೇಲವ ಪ್ರಿಯೆಯಾಗಿದ್ದಳೆ? ಇವಳು ತನ್ನ ತವರಿನ ವಿಷಯವನ್ನೂ ತಿಳಿಸಿಲ್ಲ. ಅಲ್ಲದೆ ತಾನು ಪಟ್ಟದರಾಣಿ ಅಥವಾ ಪಿರಿಯರಸಿ ಎಂಬ ಮಾತಾಗಲೀ ಬಾರದಿರುವುದು "ಅವಳು ಸಾಮಾನ್ಯ ಕುಲದವಳಿದ್ದರು ವಿದ್ವತ್ತೆ ಮತ್ತು ರಸಿಕತೆಯಿಂದ ರಾಜಕುಲ ಸಂಬಂಧವನ್ನು ಪಡೆದಿರಬಹುದೆಂಬ ಊಹೆಗೆ ಅವಕಾಶ ಕೊಡುತ್ತದೆ"[೩೭]. ಆದರೆ ರಾಜನೀತಿ ಮತ್ತು ರಾಜಕಾರ್ಯವನ್ನು ನಿರ್ವಹಿಸುವ ವಿಷಯದಲ್ಲಿ ಅವಳಾಡುವ ಮಾತು, ಅವಳ ರಾಜಕೀಯ ಪರಿಜ್ಞಾನಗಳು, ಅವಳಿಗಿರುವ ನಿಕಟವಾದ ರಾಜಕುಲ ಸಂಬಂಧವನ್ನು ಸೂಚಿಸುತ್ತವೆ. ಅಷ್ಟೇಅಲ್ಲದೆ "ಗಂಗಾದೇವಿಯು ರಾಜಕೀಯ ವಿದ್ಯಮಾನಗಳನ್ನು ಅರಿತವಳಾಗಿದ್ದ ಕಾರಣದಿಂದಲೇ ಬುಕ್ಕರಾಯ ಕಂಪಣನಿಗೆ ಮಾಡುವ ಉಪದೇಶಗಳನ್ನು ಗ್ರಹಿಸಿ, ಗ್ರಥಿಸಬಲ್ಲವಳಾಗಿದ್ದಳು"[೩೮].

ಮೊದಲೆರಡು ಸರ್ಗದ ಕೊನೆಯಲ್ಲಿ "ಇತಿ ಶ್ರೀಗಂಗಾದೇವ್ಯಾ ವಿರಚಿತ ಮಧುರಾವಿಜಯನಾಮ್ನೇ ವೀರಕಂಪರಾಯಚರಿತೆ" ಎಂದು ತನ್ನ ಹೆಸರನ್ನು ತಿಳಿಸಿದ್ದಾಳೆ. ಮುಂದೆ ಏಳನೆಯ ಸರ್ಗದಲ್ಲಿ ಕಂಪಣನು ತನ್ನ ಪ್ರಿಯೆ ಗಂಗಾದೇವಿಯನ್ನು ಕುರಿತು ಚಂದ್ರೋದಯದ ವರ್ಣನೆ ಮಾಡಲು ಹೇಳಿದನೆಂಬ ವಿಚಾರ ತಿಳಿಸಿದ್ದಾಳೆ. ಕೆಲವು ವರ್ಣನೆಗಳು ಇವಳು ತನ್ನ ಪ್ರೌಢವಯಸ್ಸಿನಲ್ಲಿ ಈ ಕಾವ್ಯವನ್ನು ರಚಿಸಿದ್ದಾಳೆನ್ನುವುದನ್ನು ತಿಳಿಸುತ್ತದೆ.

ಜೊತೆಗೆ ಇವಳ ರಸಿಕತೆ, ಸೌಂದರ್ಯ ಪ್ರಿಯತೆ, ರಾಜನೀತಿ, ವೀರವೃತ್ತಿ, ದೇಶಪ್ರೇಮ ಮೊದಲಾದ ಇವಳ ಗುಣಗಳು ಕಾವ್ಯದಲ್ಲಿ ಅಭಿವ್ಯಕ್ತಿಗೊಂಡಿದೆ.

ಕಾವ್ಯಾರಂಭದಲ್ಲಿ ಕವಯಿತ್ರಿಯು ದೇವತಾ ವಂದನೆಯ ನಂತರ ಕಾಳಾಮುಖ ಸಂಪ್ರದಾಯದ ಕ್ರಿಯಾಶಕ್ತ ಆಚಾರ್ಯರಿಗೆ ನಮಸ್ಕರಿಸಿರುವಳು. ವಾಲ್ಮೀಕಿ, ವ್ಯಾಸ, ಕಾಳಿದಾಸ, ಭಾಣ, ಭಾರವಿ, ದಂಡಿ, ಭವಭೂತಿಯರ ಕೃತಿಗಳ ಮಹಿಮೆ ಹೊಗಳಿರುವಳು. ಜೊತೆಗೆ ಕವಿ ಕರ್ಣಾಮೃತ, ಅಗಸ್ತ್ಯ, ಗಂಗಾಧರ, ವಿಶ್ವನಾಥ ಕವಿಗಳನ್ನು ಹೊಗಳಿದ್ದಾಳೆ. ಅಗಸ್ತ್ಯನು ಎಪ್ಪತ್ತುನಾಲ್ಕು ಕಾವ್ಯಗಳನ್ನು ರಚಿಸಿದ್ದಾನೆಂದು ತಿಳಿಸಿದ್ದಾಳೆ. ಗಂಗಾಧರನು ಭಾರತದ ಕಥೆಯನ್ನು ನಾಟಕರೂಪದಲ್ಲಿ ಬರೆದಿರುವುದಾಗಿಯೂ, ವಿಶ್ವನಾಥ ಕವಿಯನ್ನು ಹೊಗಳಿ 'ಆತನ ಕೃಪೆಯಿಂದ ತನಗೆ ಸಾರ್ವಜ್ಞ್ಯವು ದೊರೆಯಿತು' ಎಂದು ಹೇಳಿದ್ದಾಳೆ. ಇದರಿಂದ ವಿಶ್ವನಾಥ ಕವಿಯು ಇವಳ ವಿದ್ಯಾಗುರುವಾಗಿದ್ದಿರಬಹುದೆಂದು ಊಹಿಸಬಹುದಾಗಿದೆ. ಅಗಸ್ತ್ಯನು ವಿದ್ಯಾನಾಥನೆಂದು ಪ್ರಸಿದ್ಧನಾಗಿ, ಬಾಲಭಾರತ, ಪ್ರತಾಪರುದ್ರ ಯಶೋಭೂಷಣ, ಕೃಷ್ಣಚರಿತ ಮೊದಲಾದವುಗಳನ್ನು ಬರೆದ ಕವಿ. ಈತ ವಾರಂಗಲ್ಲಿನ ಕಾಕತೀಯ ಅರಸು ಪ್ರತಾಪರುದ್ರನ ಆಸ್ಥಾನ ಹಾಗೂ ವಿಜಯನಗರದ ಬುಕ್ಕನ ಆಸ್ಥಾನಗಳಲ್ಲಿದ್ದವನು. ಈ ವಿದ್ಯಾನಾಥನ ತಂಗಿಯ ಮಗ ಗಂಗಾಧರ, ಈ ಗಂಗಾಧರನ ಮಗನೇ ಗಂಗಾದೇವಿಯ ಗುರುವಾದ ವಿಶ್ವನಾಥ. ಹೀಗೆ ಗುರುಪರಂಪರೆಯನ್ನೂ ತನ್ನ ಸಮಕಾಲೀನ ಕವಿಗಳನ್ನೂ ತನ್ನ ಕಾವ್ಯದಲ್ಲಿ ಸ್ಮರಿಸಿದ್ದಾಳೆ.

**ಚರಿತ್ರೆಗೆ ಪೂರಕವಾಗುವ ಕಾವ್ಯ ವಿಚಾರ :** ರಾಜಕೀಯ ಘಟನೆಗಳನ್ನು ಕುರಿತಂತೆ ಮಹಿಳೆಯೊಬ್ಬಳು ರಚಿಸಿರುವ ಚಾರಿತ್ರಿಕ ಕಾವ್ಯವೆಂಬ ಹೆಗ್ಗಳಿಕೆಗೆ ಪಾತ್ರವಾದ ಈ ಕಾವ್ಯದಲ್ಲಿನ ಚಾರಿತ್ರಿಕ ಅಂಶಗಳನ್ನು ಗುರುತಿಸಿ ವಿಶ್ಲೇಷಿಸುವ ಅಗತ್ಯವಿದೆ.

ಕಾವ್ಯವು ವಿಜಯನಗರದ ಆಸ್ಥಾನ ಗುರುಗಳನ್ನು ಸ್ತುತಿಸಿದ್ದಾಳೆ. "ಸರ್ವಜ್ಞಗುರು ಅಭಿನವ ಶಿವಕ್ರಿಯಾಶಕ್ತಿಗುರು"ವಿಗೆ ಗಂಗಾದೇವಿ (೧–೪) ಗೌರವಸಲ್ಲಿಸಿದ್ದಾಳೆ. ವಿದ್ಯಾರಣ್ಯರು ಹಾಗೂ ವಿದ್ಯಾಶಂಕರರಂತೆ ಕ್ರಿಯಾಶಕ್ತಿ ಪಂಡಿತರು ಕೂಡ ವಿಜಯನಗರ ಸ್ಥಾಪನೆಗೆ ಮಾರ್ಗದರ್ಶನ ನೀಡಿದ ನಾಥಪಂಥೀಯ ಗುರುಗಳು. ಸಂಗಮವಂಶದ ಅರಸರು ತಮ್ಮ ಶಾಸನಗಳಲ್ಲಿ ಗುರುಗಳಾದ ಕ್ರಿಯಾಶಕ್ತಿಯನ್ನು ಸ್ಮರಿಸಿದ್ದಾರೆ. ಕ್ರಿ.ಶ.೧೩೭೮ರ ಚೆನ್ನರಾಯಪಟ್ಟಣದ ಶಾಸನವು "ವಿರೂಪಾಕ್ಷ ಸಾಕ್ಷತ್ ಕುಲಪರಮ ದೈವಂ ಕುಲಗುರು ಕ್ರಿಯಾಶಕ್ತಾಚಾರ್ಯ…" ಎಂದೂ, ಕ್ರಿ.ಶ.೧೩೯೮ರ ಹರಿಹರದ ತಾಮ್ರಶಾಸನವು "ರಾಯರಾಜಗುರು ಪಿತಾಮಹ ಕ್ರಿಯಾಶಕ್ತಿದೇವ ಎಂದೂ…" ಕರೆದಿರುವಂತೆ ಇವಳೂ ಕೂಡ

**ಅಸಾಧಾರಣ ಸಾರ್ವಜ್ಞಂ ವಿಲಸಿತ್ ಸರ್ವಮಂಗಲ**
**ಕ್ರಿಯಾಶಕ್ತಿ ಗುರುಂ ವಂದೇ ತ್ರಿಲೋಚನೆ ಮಿವಾಪರಂ** ॥ ಎಂದು ಕುಲಗುರುಗಳನ್ನು ಸ್ತುತಿಸಿದ್ದಾಳೆ.ಆದರೆ ಇವಳು ವಿದ್ಯಾರಣ್ಯರನ್ನಾಗಲಿ, ವಿದ್ಯಾಶಂಕರರನ್ನಾಗಲೀ ಉಲ್ಲೇಖಿಸಿಲ್ಲ ಎನ್ನುವುದು ಗಮನಾರ್ಹ ವಿಚಾರವಾಗಿದೆ.

ವಿಜಯನಗರ ಸಂಸ್ಥಾಪಕರು ಆಂಧ್ರ ಮೂಲದವರಲ್ಲ ಕರ್ನಾಟಕದ ಮೂಲದವರು ಎಂಬ ಸಿದ್ಧಾಂತಕ್ಕೆ ಪೂರಕವಾದ ಉಲ್ಲೇಖಗಳು ಈ ಕಾವ್ಯದಲ್ಲಿವೆ. ಬುಕ್ಕನನ್ನು 'ಕರ್ನಾಟಲೋಕ ನಯನೋತ್ಸವ ಪೂರ್ಣಚಂದ್ರ' (೧–೭೪) ಎಂದು ಕವಯತ್ರಿ ಬಣ್ಣಿಸಿದ್ದಾಳೆ. ಕಂಪಣನು ಕರ್ಣಾಟ ಕುಲ ಪ್ರದೀಪ" (೯–೩೭) ನಾಗಿದ್ದನು. ಅಂತಃಪುರದ ಸ್ತ್ರೀಯರ ವರ್ಣನೆಯನ್ನು ಮಾಡುವಾಗ ಕುಂತಳದ ನಾರಿಯರೆಂದೇ ಕರೆದಿದ್ದಾಳೆ (೫–೨೦, ೨೧ ೨೨ ೫೩ ೫೪ ೫೫ ೫೮ ೭೪ ೭೫). ಕಂಪಣನು ಆಂಧ್ರರೆಂಬ ಅಂಧಕಾರವನ್ನು ನಾಶಮಾಡುವ ಸೂರ್ಯನು (೯–೩೦)ವಿಜಯನಗರದ ಸಂಸ್ಥಾಪಕರು ಆಂಧ್ರಮೂಲದವರಾಗಿದ್ದರೆ ಈ ವಿಶೇಷವಾದ ಬಳಕೆ ಸಾಧ್ಯವಿರುತ್ತಿರಲಿಲ್ಲ

ಎನ್ನುವುದು ವಿದ್ವಾಂಸರ ಅನಿಸಿಕೆ. ಕಂಪಣನ ಸೈನ್ಯದ ಬಗ್ಗೆ ಹೇಳುವಾಗಲೆಲ್ಲ ಕರ್ಣಾಟಕಸೇನೆ ಎಂದೇ ಹೇಳಿದ್ದಾಳೆ. ಕಂಪಣನನ್ನು 'ಕರ್ನಾಟಕ ಕುಲದೀಪ' ನೆಂದು ಕರೆದಿದ್ದಾಳೆ.

ಈ ಕಾವ್ಯದ ನಾಯಕನಾದ ಕಂಪಣನ ಕುರಿತಂತೆ ಕ್ರಿ.ಶ.೧೩೫೧ ರಿಂದ ೧೩೭೫ರ ಕಾಲದಲ್ಲಿ ಸುಮಾರು ೧೫ ಕ್ಕೂ ಹೆಚ್ಚಿನ ಶಾಸನಗಳು ಲಭಿಸುತ್ತದೆ. ಕಂಪಣನು ತುಂಡೀರಮಂಡಲದ ಮೇಲೆ ದಂಡೆತ್ತಿ ಹೋಗುವ ವೇಳೆಗಾಗಲೆ ಕೋಲಾರದ ಪ್ರದೇಶಗಳಲ್ಲಿ ಆಳ್ವಿಕೆ ನಡೆಸುತ್ತಿದ್ದ ವಿಚಾರ ಶಾಸನಗಳಲ್ಲಿ ತಿಳಿದು ಬರುತ್ತದೆ[೩೯]. ಕ್ರಿ.ಶ.೧೩೪೩–೬೧ರ ವೇಳೆಯಲ್ಲಿ ಈ ಭಾಗಗಳಲ್ಲಿ ಕಂಪಣನ ಶಾಸನಗಳು ಕಂಡುಬರುತ್ತವೆ. ಆದರೆ ಗಂಗಾದೇವಿ ಈ ಪ್ರದೇಶಗಳಲ್ಲಿನ ಇವನ ಆಳ್ವಿಕೆಯ ವಿಚಾರವನ್ನು ಗುರುತಿಸಿಲ್ಲ. ಬಹುಶಃ ಮಧುರಾ ವಿಜಯದ ವಿಚಾರ ಮಾತ್ರ ಇವಳಿಗೆ ಮುಖ್ಯವಾಗಿ ತೋರಿರಬೇಕು.

ನಾಲ್ಕನೆಯ ಸರ್ಗದಲ್ಲಿ ಯುದ್ಧಕ್ಕೆ ಹೊರಡುವ ಚಿತ್ರಣವನ್ನು ನೀಡುವಾಗ ಕವಯತ್ರಿಯು ಕಂಪಣನಿಗೆ ಚೋಳ, ಕೇರಳ ಪಾಂಡ್ಯರೆಲ್ಲರೂ ತಲೆಬಾಗಿದರು ಎಂದು ಉತ್ಪ್ರೇಕ್ಷೆಯಿಂದ ಹೇಳಿದ್ದಾಳೆ. ಈ ಸಂದರ್ಭದಲ್ಲಿ ಪಾಂಡ್ಯರ ತುಂಡರಸರಿದ್ದರೂ, ಚೋಳರು ಇರಲಿಲ್ಲ.

ಈ ಕಾವ್ಯದಲ್ಲಿ ಬರುವ ತುಂಡೀರಮಂಡಲದ ಚಂಪ ಯಾರಿರಬಹುದೆಂದು ಇತಿಹಾಸಕಾರರು ಸಾಕಷ್ಟು ಚರ್ಚೆ ನಡೆಸಿದ್ದಾರೆ. ಕ್ರಿ.ಶ.೧೩೩೮–೩೯ರಲ್ಲಿ 'ಶಂಬುವರಾಯ' ಎಂಬುವವನು ಚಿಂಗಲ್ಪಟ, ಆರ್ಕಾಟ್ ಸುತ್ತಮುತ್ತಲ ಪ್ರದೇಶಗಳನ್ನೊಳಗೊಂಡ ರಾಜ್ಯವನ್ನಾಳುತ್ತಿರುತ್ತಾನೆ. ಶಾಸನದಲ್ಲಿ ಇವನು 'ವೀರಚಂಪನ ಶಂದಿ' ಎಂದೂ, ಇವನು ಹೊರಡಿಸಿರುವ ನಾಣ್ಯದಲ್ಲಿ 'ವೀರಚಂಪನಕುಳಿಗೈ' ಎಂಬ ಉಲ್ಲೇಖವಿರುವುದರಂದ ಕಂಪಣನು ಹೋರಾಡಿದ್ದು ಈತನ ವಿರುದ್ಧವೇ ಎಂಬ ತೀರ್ಮಾನಕ್ಕೆ ಇತಿಹಾಸಕಾರರು ಬರುತ್ತಾರಾದರೂ, ಯುದ್ಧದಲ್ಲಿ ಇವನು ಸೋತು ಶರಣಾದನೇ ವಿನಃ ಗಂಗಾದೇವಿಯು ಹೇಳಿರುವಂತೆ ಯುದ್ಧದಲ್ಲಿ ಸಾಯುವುದಿಲ್ಲ[೪೦]. ಈ ಯುದ್ಧವು ಕ್ರಿ.ಶ.೧೩೬೧ರಲ್ಲಿ ನಡೆದಿರಬೇಕೆಂದು ತರ್ಕಿಸಲಾಗಿದೆ. ಆದರೆ ಈ ಕಾಲದ ನಂತರವೂ ವೀರಚಂಪನ ಶಂದಿಯ ದಾನ ಶಾಸನಗಳು ಈ ಭಾಗದಲ್ಲಿ ಲಭಿಸುತ್ತದೆ. ಬಹುಶಃ ಯುದ್ಧಾನಂತರ ಕಂಪಣನಿಗೆ ಸಾಮಂತರಾಗಿ ಈತ ಆಳ್ವಿಕೆ ನಡೆಸುತ್ತಿರಬೇಕು. ಕಂಪಣನ ಪ್ರತಾಪವನ್ನು ಪರಾಕಾಷ್ಠೆಗೊಯ್ಯಲು ಗಂಗಾದೇವಿಯು ಚಂಪನು ಈ ಯುದ್ಧದಲ್ಲಿ ಸತ್ತನೆಂದು ತಿಳಿಸಿರಬಹುದು.

ಎಂಟನೆಯ ಸರ್ಗದಲ್ಲಿ ಗಂಗಾದೇವಿಯು ನೀಡಿರುವ ಯವನರ ದಾಳಿಯ ಪರಿಣಾಮದ ಚಿತ್ರಣವು ಅಲ್ಲಿನ ಸ್ಥಿತಿಗತಿಗಳಿಗೆ ಹಿಡಿದ ಕೈಗನ್ನಡಿಯಂತಿದೆ. ಶಾಸನಗಳಲ್ಲಿ ಸೂಚ್ಯವಾಗಿ ಸಿಗುವ ಈ ಅಂಶಗಳು ಕಾವ್ಯದಲ್ಲಿ ಒಂದು ಸರ್ಗದಷ್ಟು ವಿಸ್ತಾರವಾಗಿದೆ.

ಈ ಕಾವ್ಯದ ಮುಖ್ಯ ವಸ್ತು ಮಧುರೆಯ ಯುದ್ಧವನ್ನು ಕುರಿತದ್ದಾಗಿದ್ದರೂ, ಈ ಯುದ್ಧಕ್ಕೂ ೧೦ ವರ್ಷ ಪೂರ್ವದಲ್ಲಿ ಕಂಪಣನು ತೊಂಡೈಮಂಡಲವನ್ನು ಸ್ವಾಧೀನ ಪಡೆಸಿಕೊಂಡು (ಕ್ರಿ.ಶ.೧೩೬೦) ಹತ್ತು ವರ್ಷ ರಾಜ್ಯಭಾರ ನಡೆಸಿದ ವಿಚಾರ ಸುದೀರ್ಘವಾಗಿ ಬಂದಿದೆ. ಕ್ರಿ.ಶ.೧೩೭೧ರಲ್ಲಿ ಮಧುರೆಯ ಸುಲ್ತಾನನನ್ನು ನಿರ್ಮೂಲಮಾಡಿದ ವಿಚಾರ ಕಾವ್ಯದ ಹೆಸರು ಸಾರ್ಥಗವಾಗುವ ಘಟನೆ ಎಂಟು ಹಾಗೂ ಒಂಬತ್ತನೆಯ ಸರ್ಗದಲ್ಲಿ ಬಣ್ಣಿತವಾಗಿದೆ. ಈ ಕಾವ್ಯದಲ್ಲಿ ಬಣ್ಣಿತವಾಗಿರುವ ಘಟನೆಗಳು ಕ್ರಿ.ಶ.೧೩೬೦ ರಿಂದ ೧೩೭೧ರ ವರೆಗಿನವು ಎಂದು ಹೇಳಬಹುದು.

ಗಂಗಾದೇವಿಯು ಪ್ರತ್ಯಕ್ಷದರ್ಶಿಯಂತೆ ಮಧುರಾವಿಜಯದ ಪ್ರಸಂಗವನ್ನು ಕಾವ್ಯಮಯವಾಗಿ ಬಣ್ಣಿಸಿದ್ದಾಳೆ. ನಾಲ್ಕು, ಎಂಟು, ಬಂಬತ್ತನೆಯ ಸರ್ಗಗಳು ಐತಿಹಾಸಿಕ ವಿಚಾರಗಳನ್ನೊಳಗೊಂಡಿದೆ. ನಾಲ್ಕನೆಯ ಸರ್ಗದಲ್ಲಿ ಕಂಪನು ತುಂಡೀರ ಮಂಡಲದ ಚಂಪನೊಂದಿಗೆ ಹೋರಾಡಿದ ವಿಚಾರ, ಎಂಟನೆಯ ಸರ್ಗದಲ್ಲಿ ಯವನರ ದಾಳಿಯಿಂದ

ಶ್ರೀರಂಗಂನ ದೇವಾಲಯ ಹಾಳಾಗಿದ್ದು ಹಾಗೂ ಅವರ ಧಾಳಿಯ ಒಟ್ಟಾರೆ ಪರಿಣಾಮದ ಚಿತ್ರಣವಿದೆ. ಒಂಬತ್ತನೆಯ ಸರ್ಗದಲ್ಲಿ ವೀರಕಂಪರಾಯ ಮಧುರೆಯ ಸುಲ್ತಾನರನ್ನು ಸೋಲಿಸಿ, ನಗರವನ್ನು ಅವರ ಮುಷ್ಟಿಯಿಂದ ಬಿಡುಗಡೆ ಗೊಳಿಸಿದ ವಿಚಾರ ಬಂದಿದೆ. "ಇಲ್ಲಿ 'ತಾಪವಳಿಯಲಿ ಶಾಂತಿಯಾಳಲಿಳೆಯ' ಎಂಬ ಇವಳ ಮಹಾ ಆಶಯ ಕೈಗೂಡುತ್ತದೆ"[೪೧].

ಯುದ್ಧವು ಮಧುರೆಯಲ್ಲಿ ನಡೆದುದರಿಂದ ಅಲ್ಲಿರುವ ವೈಗೈ ನದಿಯ ಉಲ್ಲೇಖ ಕಾವ್ಯದಲ್ಲಿ ಬರಬೇಕಿತ್ತು. ಆದರೆ ಈ ಕಾವ್ಯದಲ್ಲಿ ಆರಂಭದಿಂದಲೂ ತಾಮ್ರಪರ್ಣಿ ನದಿಯ ಉಲ್ಲೇಖವೇ ಕಂಡುಬರುತ್ತದೆ. ಇದಕ್ಕೆ ಕಾರಣ ಈ ನದಿಯು ಪುರಾಣ ಪ್ರಸಿದ್ಧವಾದದ್ದು, ನದಿಯ ಬಣ್ಣ ಕೆಂಪಾಗಿದ್ದು, ವೀರಭಾವಗಳ ವರ್ಣನೆಗೆ ಅನ್ವರ್ಥಕವಾಗಿದೆ, ಅಲ್ಲದೆ ತಾಮ್ರಪರ್ಣಿಯಿರುವ ತಿರುನೆಲ್ವೇಲಿ ಇನ್ನೂ ದೂರದ ಪ್ರದೇಶವಾಗಿರುವುದರಿಂದ ಅಲ್ಲಿಯವರೆಗೂ ಅರಸನು ದಂಡಯಾತ್ರೆ ವಿಸ್ತರಿಸಿತ್ತೆಂದು ಬಣ್ಣಿಸುವ ಚಪಲವೂ ಇದ್ದಿರಬಹುದು.

ತಾನು ಗೆದ್ದ ಪ್ರದೇಶದಲ್ಲಿ ಕಂಪನು ಆಳ್ವಿಕೆನಡೆಸಿದ ವೈಖರಿಯ ಪರಿಚಯ ಮಾಡಿಕೊಟ್ಟಿದ್ದಾಳೆ. ಚಂಪರಾಯನನ್ನು ಸದೆಬಡಿದು ಕಾಂಚೀನಗರದಲ್ಲಿ ಜಯಪ್ರಶಸ್ತಿಯನ್ನು ಕೆತ್ತಿಸಿ ಕಂಪನು ಮರಕತನಗರದಲ್ಲಿ ಕೆಲಕಾಲ ರಾಜ್ಯವಾಳಿದನು. ಇಲ್ಲಿನ ಇವನ ರಾಜ್ಯಭಾರವನ್ನು ಕುರಿತು 'ಶತ್ರುಗಳ ದೇಶದಲ್ಲಿ ರಾಜ್ಯಭಾರವನ್ನಾರಂಭಿಸಿದ ಕಂಪಣನು ಜನಪ್ರಿಯನಾದನು. ಆದರೆ ಜಾಗರೂಕನಾಗಿದ್ದನು. ಅವನು ಹೇರಿದ ಕರಭಾರಗಳು ಸೌಮ್ಯವಾಗಿದ್ದವು. ದೇಶವೆಲ್ಲ ಸಸ್ಯಗಳಿಂದ ತುಂಬಿ ಸಂವೃದ್ಧಿಯಿಂದ ಪುಲಕಿತವಾದಂತೆ ಕಂಡುಬರುತ್ತಿತ್ತು. ಅನೇಕ ಸಾಮಂತರಾಜರು ಇವನ ಭೇಟಿಗಾಗಿ ಕಾದಿರುತ್ತಿದ್ದರು. ಕವಿಗಳು ಗಮಕಿಗಳು ಇವನ ಆಸ್ಥಾನದಲ್ಲಿದ್ದರು. ನೃತ್ಯಗೀತ ಮೊದಲಾದ ಲಲಿತಕಲೆಗಳಲ್ಲಿ ವಿರೋಚಿತವಾದ ವಿನೋದಗಳಲ್ಲಿ ಕಾಲ ಕಳೆಯುತ್ತಿದ್ದನು.

**ಕಾವ್ಯವಸ್ತು:** ಮೊದಲನೆಯ ಸರ್ಗದಲ್ಲಿ ವಿಜಯನಗರದ ಅರಸು ಬುಕ್ಕರಾಜನು ವಿಜಯನಗರವನ್ನು ವೈಭವೋಪೇತವಾಗಿ ಆಳ್ವಿಕೆ ನಡೆಸುತ್ತಿದ್ದ. ತುಂಗಭದ್ರಾನದಿ ದಂಡೆಯ ಮೇಲಿನ ಈ ನಗರದ ಸುಂದರವರ್ಣನೆಯನ್ನು ಇಲ್ಲಿ ನೀಡಲಾಗಿದೆ. ಎರಡನೆಯ ಸರ್ಗದಲ್ಲಿ ಬುಕ್ಕರಾಯನ ಮಡದಿ ದೇವಾಯಿಯು ತಾಮ್ರಪರ್ಣಿಯಲ್ಲಿ ಸ್ನಾನಮಾಡಬೇಕೆಂಬ ಬಯಕೆಯನ್ನು ಪತಿ ನೆರವೇರಿಸುತ್ತಾನೆ. ತಂಪಾಗಿ ಹರಿಯುತ್ತಿದ್ದ ತುಂಗಭದ್ರೆಯನ್ನು ಬಿಟ್ಟು ಸೇನಾಸಾಗರದ ತರಂಗಗಳಿಂದ ತುಂಬಿದ ತಾಮ್ರಪರ್ಣಿಯಲ್ಲಿ ಮೀಯಲು ಇಚ್ಛಿಸಿದ ಇವಳ ಬಯಕೆಯಲ್ಲಿಯೇ, ವೀರ ಕುಮಾರ ಹುಟ್ಟುವ ಸೂಚನೆಗಳನ್ನು ಕವಯತ್ರಿಯು ತಂದಿದ್ದಾಳೆ. ಶತ್ರುಗಳೆದೆಯಲ್ಲಿ ಭೀತಿಯನ್ನು ಉಂಟುಮಾಡುವವನೆಂಬ ಅರ್ಥದಲ್ಲಿ ಮಗುವಿಗೆ ಕಂಪಣ ಎಂದು ಹೆಸರಿಡಲಾಗುತ್ತದೆ ಎಂದು ಅವನ ಹೆಸರನ್ನು ಅನ್ವರ್ಥವಾಗಿ ಬಳಸಿಕೊಂಡಿರುವ ಕುಶಲತೆಯನ್ನಿಲ್ಲಿ ಕಾಣಬಹುದು. ಕಂಪಣನೂ ಸೇರಿದಂತೆ ದೇವಾಯಿಯಲ್ಲಿ ಒಟ್ಟು ಮೂವರು ಮಕ್ಕಳು ಜನಿಸುತ್ತಾರೆ.

ಮೂರನೆಯ ಸರ್ಗದಲ್ಲಿ ಕಂಪಣನ ಚೌಲಕರ್ಮ ಸಂಸ್ಕಾರ, ಶಸ್ತ್ರಾಸ್ತ್ರ ವಿದ್ಯೆಗಳಲ್ಲಿ ಶಿಕ್ಷಣ ಮೊದಲಾದ ವಿವರಣೆಗಳಿವೆ. ಇಲ್ಲಿ ಕಂಪಣನ ವಿವಾಹ ವಿಚಾರವಿದೆ. ಹಸ್ತಪ್ರತಿಯಲ್ಲಿ ತೃಟಿತವಾಗಿರುವ ಭಾಗದಲ್ಲಿ ಗಂಗಾದೇವಿಯ ಹೆಸರಿರಬೇಕೆನ್ನುವುದು ವಿದ್ವಾಂಸರ ಅಭಿಪ್ರಾಯ. ಕಂಪಣನ ಶಾಸನವೊಂದರಲ್ಲಿ ಇವನ ಅರಸಿ ರಾಮಾಯಿ ಎಂಬುವವಳ ಏನಾಡಿ ಸೂಡೂರಿನ ಶಾಸನದಲ್ಲಿ ಉಲ್ಲೇಖ ಸಿಗುತ್ತದೆ ಆದರೆ ಗಂಗಾದೇವಿ ಅವಳನ್ನು ಹೆಸರಿಸಿಲ್ಲ[೪೨] ಮತ್ತು ರಾಜನೀತಿಯನ್ನೂ ಒಳಗೊಂಡಂತೆ ಹಲವಾರು ಉತ್ತಮ ವಿಚಾರಗಳನ್ನು ಕುರಿತಂತೆ ಮಗನಿಗೆ ತಂದೆ ಬುಕ್ಕನ ಉಪದೇಶ. ತುಂಡೀರಮಂಡಲದ ಚಂಪರಾಯನ ಮೇಲೆ ದಂಡೆತ್ತಿಹೋಗುವಂತೆ ಆದೇಶ, ರಾಜ್ಯವು ಸುಭದ್ರವಾಗಿರುವಾಗಲೇ ತುರುಷ್ಕರ ಭದ್ರಕೋಟೆಯಂತಿದ್ದ ಮಧುರೆಯ ಮೇಲೆ ಆಕ್ರಮಣ ಮಾಡುವ ಸೂಚನೆ ಇಲ್ಲಿ ಬಂದಿದೆ.

ನಾಲ್ಕನೆಯ ಸರ್ಗದಲ್ಲಿ ವಿಜಯಯಾತ್ರೆಗೆ ಹೊರಟ ಸುದೀರ್ಘ ವರ್ಣನೆಯಿದೆ. ತುಂಡೀರ ರಾಜನ ಮೇಲೆ ಆನೆ. ಆಶ್ವ, ಪದಾತಿಯನ್ನೊಳಗೊಂಡ ಬೃಹತ್ಸೇನೆಯೊಡನೆ ಜೈತ್ರಯಾತ್ರೆಗೆ ಹೊರಟು ಕರ್ನಾಟಕದ ಗಡಿಯನ್ನು ದಾಟಿದ ರೋಚಕ ವಿವರಣೆಯನ್ನು ನೀಡಿದ್ದಾಳೆ. ರೌದ್ರ ರಣಭೇರಿಯ ಘೋರ ಶಬ್ದವು ಪರ್ವತದ ಗುಹೆಯನ್ನೇ ಆವರಿಸಿರುವಾಗ ವೈರಿಗೆ ಇನ್ನು ಆಶ್ರಯವೆಲ್ಲಿ (೪–೫) ಎಂದು ಜೈತ್ರಯಾತ್ರೆಗೆ ಇವನು ಹೊರಟ ಪರಿಯನ್ನು ಬಣ್ಣಿಸಿದ್ದಾಳೆ. ವಿರಿಂಚಿಪುರದಲ್ಲಿ ಬಿಡಾರವನ್ನು ಹೂಡಿ, ದ್ರಾವಿಡ ರಾಜನೊಡನೆ ಹೋರಾಟ ಮಾಡಿದುದು, ಚಂಪರಾಯನ ಪರಾಜಯ, ಆತನ ಮರಣ, ವಿಜಯದೊಡನೆ ಕಾಂಚಿಯ ಕಡೆಗೆ ಪ್ರಯಾಣ, ತುಂಡೀರ ಮಂಡಲವನ್ನು ತನ್ನಾಳ್ವಿಕೆಗೆ ವಶಪಡಿಸಿಕೊಂಡುದು ಮೊದಲಾದ ವಿಷಯಗಳು ಈ ಸರ್ಗದಲ್ಲಿ ವರ್ಣಿತವಾಗಿವೆ.

ಐದನೆಯ ಸರ್ಗದಲ್ಲಿ ಹೊಸದಾಗಿ ರಾಜ್ಯವನ್ನು ಗೆದ್ದ ತರುವಾಯ ಆ ಪ್ರದೇಶದಲ್ಲಿ ಎಲ್ಲಾ ಜನರ ಮೆಚ್ಚುಗೆಗೆ ಪಾತ್ರನಾಗಿ, ಮರಾಟಕವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಮಗಧ, ಮಾಳ್ವ, ಸೇವು, ಕೇರಳ, ಗೌಡ ಮುಂತಾದ ಪ್ರದೇಶಗಳ ರಾಜರ ಮನ್ನಣೆಗೆ ಕಂಪಣನು ಪಾತ್ರನಾದ ವಿಷಯ ನಿರೂಪಿತವಾಗಿದೆ.

ಆರನೆಯ ಸರ್ಗದಲ್ಲಿ ಕಂಪಣನು ಜಲಕ್ರೀಡೆ ಹಾಗೂ ವನವಿಹಾರದಲ್ಲಿ ಕಳೆದ ಸನ್ನಿವೇಶಗಳು ಚಿತ್ರಿತವಾಗಿವೆ.

ಏಳನೆಯಸರ್ಗದಲ್ಲಿರಾಜಕುಮಾರನಾದ ಕಂಪಣನಿಗೂ, ಆತನ ನೆಚ್ಚಿನ ಮಡದಿ ಗಂಗಾದೇವಿಗೂ ನಡೆದ ಸಂಭಾಷಣೆಯ ವಿವರಗಳ ಜೊತೆಗೆ ಕಂಪಣನು ವಸಂತಋತುವನ್ನು ವರ್ಣಿಸುವಂತೆ ಗಂಗಾದೇವಿಯನ್ನು ಕೇಳಿಕೊಂಡುದು ಹಾಗೂ ಸೂರ್ಯೋದಯ, ಚಂದ್ರೋದಯ ವರ್ಣನೆಗಳು ಪ್ರಕೃತಿಯ ಹಿನ್ನೆಲೆಯ ವಿವರಣೆಯಲ್ಲಿ ಮೂಡಿ ಬಂದಿದೆ.

ಪಾಂಡ್ಯರಾಜ್ಯಲಕ್ಷ್ಮೀಯು ಕಂಪಣನ ಕನಸಿನಲ್ಲಿ ಬಂದು ದಕ್ಷಿಣದೇಶದಲ್ಲಿ ಮುಸಲ್ಮಾನರಿಂದ ಆಗುತ್ತಿದ್ದ ಅನ್ಯಾಯ, ಅತ್ಯಾಚಾರಗಳನ್ನು ಮತ್ತು ದೇವಾಲಯಗಳ ದುಸ್ಥಿತಿಯನ್ನು ವರ್ಣಿಸಿ, ಅವರ ಮೇಲೆ ದಂಡೆತ್ತಿ ಹೋಗಿ ದಕ್ಷಿಣ ದೇಶವನ್ನು ದುಷ್ಟರಿಂದ ವಿಮೋಚನೆಗೊಳಿಸಬೇಕೆಂದು ಆದೇಶ ನೀಡಿ ಆ ಕಾರ್ಯಕ್ಕಾಗಿ ಒಂದು ದಿವ್ಯ ಖಡ್ಗವನ್ನು ನೀಡಿದ ವಿಷಯವು ಎಂಟನೆಯ ಸರ್ಗದಲ್ಲಿ ಪ್ರಸ್ತಾಪಿತವಾಗಿದೆ. ಒಂಬತ್ತನೆಯ ಸರ್ಗದಲ್ಲಿ ಕಂಪಣ ಅನಂತರ ಮಧುರೆಯ ಮೇಲೆ ದಂಡೆತ್ತಿಹೋಗುವ ವರ್ಣನೆ ಇದೆ. ಇಲ್ಲಿ ಮದವೇರಿದ ಆನೆ, ಯುದ್ಧರಂಗದಲ್ಲಿ ಮಡಿದ ವೀರರು, ಅಲ್ಲಿ ಹರಿಯುವ ಆನೆಗಳ ರಕ್ತವನ್ನು ಕಂಡಾಗ 'ಒಂದಲ್ಲ ಹರಿಯುತಿವೆ ನೂರಾರು ತಾಮ್ರಪರ್ಣಿಗಳು' (೯–೧೭)ಎಂಬ ಚಿತ್ರಣಕೊಡುತ್ತಾಳೆ. ಕಡೆಗೆ ಕಂಪನು ದಿವ್ಯಸ್ತ್ರೀ ನೀಡಿದ ಖಡ್ಗದಿಂದ ವೈರಿಯ ರುಂಡವನ್ನು ಬೀಸಿ ಚಂಡಾಡುತ್ತಾನೆ. (೯–೧೮) 'ಕರ್ನಾಟಕ ಕುಲದ ದೀಪ ಬೆಳಗುತ್ತದೆ' ಇವನ ವಿಜಯದಿಂದ 'ಕಾಳ್ಗಿಚ್ಚು ನಂದಿದ ವನದಂತೆ, ಗ್ರಹಣದಿಂದ ಮೋಕ್ಷಪಡೆದ ಬಾನಿನಂತೆ' ಮಧುರೆಯು ದುಷ್ಟರ ಮುಷ್ಟಿಯಿಂದ ಬಿಡುಗಡೆ ಗೊಂಡಿತೆಂದು ಬಣ್ಣಿಸಿದ್ದಾಳೆ. ಇಷ್ಟಾದರೂ ಕಂಪಣನು ವಿಜಯೋನ್ಮತ್ತನಾಗದೆ, 'ಅಳಿದುಳಿದ ವೈರಿಗಳ ರಕ್ಷಿಸುವೆನೆಂಬ ಭರವಸೆಯ ಡಂಗುರವನ್ನು ಹೊಡೆಸಿ.. ದೇಗುಲವನ್ನು ಸಂರಕ್ಷಿಸಿ ಅದಕ್ಕೆ ಅನೇಕ ದತ್ತಿಗಳನ್ನು ಬಿಟ್ಟ ವಿವರಗಳು ಬಂದಿವೆ. ಇಲ್ಲಿಗೆ ಕಾವ್ಯ ಮುಕ್ತಾಯಗೊಳ್ಳುತ್ತದೆ.

**ಕಾವ್ಯಾಂಶ**

ಕಾವ್ಯದಲ್ಲಿ ಅಲಂಕಾರ, ಪ್ರಕೃತಿ ವರ್ಣನೆ, ಕಾವ್ಯಪ್ರಯೋಜನ, ಸಹೃದಯ ಗುಣ–ದೋಷ ಮೊದಲಾದ ವಿಚಾರಗಳನ್ನು ಯತೋಚಿತವಾಗಿ ತಂದಿದ್ದಾಳೆ. ಇಲ್ಲಿನ ಕೆಲವು ಹಿತವಚನಗಳು ಸೊಗಸಾಗಿವೆ ಮದಾಂಧರಾದವರು ಮಾತ್ರ ಮದವೇರಿದ ಆನೆಗಳಂತೆ ನಿಯಂತ್ರಕರ ಮಾತು ಕೇಳುವುದಿಲ್ಲ. ಅಹಂಕಾರಿಗಳ ದೃಷ್ಟಿಯು ನಿರ್ದುಷ್ಟವಾದುದನ್ನು ಕಾಣದು; ಅಂಥವರನ್ನು ಆಪತ್ತುಗಳು ಆವರಿಸುವವು; ಸ್ತ್ರೀ ಮೃಗಯಾ, ಮದಿರೆಗಳು ಸರ್ವಸ್ವವನ್ನು ಹಾಳುಮಾಡುವುದು. ಪ್ರಜೆಗಳಿಗೆ ನಿಷ್ಠುರ ಮಾತುಗಳನ್ನಾಡಬಾರದು; ಪ್ರಜೆಗಳ ಮೇಲೆ

ಅತಿಯಾದ ದಂಡೋಪಾಯವನ್ನು ಪ್ರಯೋಗಿಸುವುದೆಂದರೆ ತಾನು ಹತ್ತಿದ ಗಿಡದ ಟೊಂಗೆಯನ್ನು ತಾನೇ ಕಡಿದುಕೊಂಡಂತೆ; ಅಯೋಗ್ಯರಾದವರಿಗೆ ರಾಜಾನುಗ್ರಹವನ್ನು ತೋರಿಸುವುದು ಯಜ್ಞಾಗ್ನಿಕುಂಡದಲ್ಲಿ ಹಾಕಬೇಕಾದ ಹವಿಸ್ಸನ್ನು ಸ್ಮಶಾನಚಿತೆಯಲ್ಲಿ ಹಾಕಿದಂತೆ ಎಂಬ ಮೊದಲಾದ ಲೋಕೋಕ್ತಿಗಳಿಗೆ ಕಾವ್ಯರೂಪ ನೀಡಿದ್ದಾಳೆ.

ಕಾವ್ಯದಲ್ಲಿ ಉಪಮೆ, ರೂಪಕ ಮೊದಲಾದ ಅಲಂಕಾರಗಳನ್ನು ತಂದಿದ್ದಾಳೆ. ಈ ಕೆಳಗಿನ ಪದ್ಯದಲ್ಲಿ ಅತಿಶಯೋಕ್ತ್ಯಲಂಕಾರವನ್ನು ಗಮನಿಸಬಹುದು.

**ವಿಹಾಯಮಧ್ಯಂ ಯದಿ ಲಕ್ಷ್ಮರೇಖಯಾ ಬಹಿಃ ಪ್ರಸಾರ್ಯೇತ ಸುಧಾಂಶುಮಂಡಲಮ್**
**ದರೋದಿತಶ್ಮಶ್ರುಧೃತಶ್ರಿಯಸ್ತದಾ ತದಾನನೇಂದೋರುಪಮಾನತಾಂ ವ್ರಜೇತ್ ॥** (3–12)

ಇಲ್ಲಿ ಇವಳು ಕಂಪಣನನ್ನು ಚಂದ್ರನಿಗೆ ಹೋಲಿಸಿಲ್ಲ ಬದಲಿಗೆ ಚಂದ್ರನನ್ನೇ ಕಂಪಣನಿಗೆ ಹೋಲಿಸಿ, ಚಂದ್ರನಲ್ಲಿರುವ ಕಪ್ಪುಕಲೆ ನಡುವಿನಲ್ಲಿದ್ದು, ತುಸು ನೀಳವಾಗಿ ಹೊರಚಾಚಿದ್ದಿದ್ದರೆ ಕುಡಿಮೀಸೆಯ ಕಂಪಣನ ಮುಖವನ್ನು ಸ್ವಲ್ಪಮಟ್ಟಿಗೆ ಹೋಲಬಹುದಿತ್ತೆಂದಿದ್ದಾಳೆ. ಸೌಂದರ್ಯಕ್ಕೆ ಚಂದ್ರನ ಹೋಲಿಕೆ ನೀಡುವುದು ಸಾಮಾನ್ಯ ಸಂಗತಿ, ಆದರೆ ಇಲ್ಲಿ ಕವಯತ್ರಿಯು ಚಂದ್ರನ ಕಲೆಯನ್ನು ಕಲಾತ್ಮಕವಾಗಿ ಬಳಸಿಕೊಂಡು ಚಾತುರ್ಯ ತೋರಿದ್ದಾಳೆ.

'ಅರಳುತ್ತಿರುವ ಕಮಲಗಳ ನಾಲ್ಕು ದಿಕ್ಕುಗಳಲ್ಲಿಯೂ ಚಲಿಸುತ್ತಿರುವ ಭ್ರಮರವನ್ನು ಕಾವಲುಗಾರನಿಗೆ ಹೋಲಿಸಿರುವಲ್ಲಿ ಇವಳ ಕಲ್ಪನಾ ಸಾಮರ್ಥವನ್ನು ಕಾಣಬಹುದು.

**ಘಟಮಾನದಲಾರರೀಪುಟಂ ನಲಿನಂ ಮಂದಿರಮಿಂದಿರಾಸ್ಪದಮ್।**
**ಪರಿಪಾಲಯತಿ ಸ್ಮ ನಿಕ್ವಣನ್ ಪರಿತೋಯಾಮಿಕವನ್ಮಧುವ್ರತಃ ॥**

ಯಾವ ರೀತಿಯಲ್ಲಿ ಕಾವಲುಗಾರನು ಅಮೂಲ್ಯವಾದ ನಿಧಿಯ ನಾಲ್ಕೂ ದಿಕ್ಕಿನಲ್ಲಿಯೂ ಸುತ್ತುತ್ತಾ, ಮಧ್ಯದಲ್ಲಿ ಗೊಣಗುಟ್ಟುತ್ತಲಿರುತ್ತಾನೋ, ಅದೇ ರೀತಿಯಲ್ಲಿ ಕಮಲದಲ್ಲಿ ಅಡಗಿರುವ ಮಧುವನ್ನು ರಕ್ಷಿಸುತ್ತಾ ಭ್ರಮರವು ನಾಲ್ಕು ಕಡೆಯಲ್ಲಿಯೂ ಸುತ್ತುತ್ತಾ ಗುಯ್‌ಗುಡುತ್ತಲಿದೆ. ಉಪಮಾನದ ಔಚಿತ್ಯವು ಸಹೃದಯತೆಯನ್ನು ಸೂಚಿಸುತ್ತದೆ.

ಇದು ವರ್ಣನಾಪ್ರಧಾನವಾದ ಕಾವ್ಯ. ಇಲ್ಲಿನ ಐದು, ಆರು ಹಾಗೂ ಏಳನೆಯ ಸರ್ಗಗಳು ಮಹಾಕಾವ್ಯದ ಲಕ್ಷಣಗಳಾದ ಜೈತ್ರಯಾತ್ರೆ, ಋತುಗಳು, ಪುಷ್ಪಾಪಚಯ, ಸೂರ್ಯೋದಯ, ಚಂದ್ರೋದಯ, ಜಲಕ್ರೀಡೆ, ಮೊದಲಾದ ವರ್ಣನೆಗೆ ಮೀಸಲಾಗಿದೆ. ಪ್ರತಿ ಸರ್ಗದ ಅಂತ್ಯದಲ್ಲೂ ಮುಂದಿನ ಸರ್ಗದಲ್ಲಿನ ವಿಷಯಸೂಚನೆ ದೊರಕುತ್ತದೆ. ಏಳನೆಯ ಸರ್ಗದಲ್ಲಿ ಬರುವ ಸೂರ್ಯಾಸ್ತ, ಕತ್ತಲು ಕವಿಯುವುದು ಮತ್ತು ಚಂದ್ರೋದಯ ವರ್ಣನೆಗಳು ಇಡೀ ಕಾವ್ಯದಲ್ಲಿಯೇ ತುಂಬಾ ಆಕರ್ಷಕವಾದ ಸನ್ನಿವೇಶಗಳು ಎನಿಸಿವೆ.

ಕೆಲವು ವರ್ಣನೆಗಳನ್ನು ವೈಭವೋಪೇತವಾಗಿ ತಂದಿದ್ದಾಳೆ. ಇಂದ್ರನ ಅಮರಾವತಿಗೆ ಹೋಲಿಸುವ ನಗರವರ್ಣನೆ ಸೊಗಸಾಗಿ ಮೂಡಿಬಂದಿದೆ. ರಾಜಧಾನಿಯಾದ ವಿಜಯನಗರವೂ ತುಂಗಭದ್ರೆಯಿಂದ ಸುತ್ತುವರಿದ ಅಮರಾವತಿಯನ್ನು ಹೋಲುವ ಸ್ವರ್ಗ, ಮೇರುಪರ್ವತದಂಥ ಗೋಪುರಗಳು, ವಸಂತದ ಆವಾಸಗಳಂತಿದ್ದ ತೋಟಗಳು, ಕ್ರೀಡಾ ಪರ್ವತಗಳು, ಸರೋವರಳು, ಕಣ್ಣಿಗೆ ಹಬ್ಬ, ಸಕಲ ಸಂಪತ್ತುಗಳ ತವರುಮನೆ ಎಲ್ಲಾ ಶ್ರೇಷ್ಠವಸ್ತುಗಳ ಮಾಲೆ, ಸೂರ್ಯಮಂಡಲವು ಇಲ್ಲಿಯ ಎತ್ತರವಾದ ಅರಮನೆಯ ಮೇಲಿನ ಕಳಸದಂತೆ, ಚಂದ್ರ ಮಂಡಲ ಮಾಳಿಗೆಯ ಮೇಲೆ ಆಟವಾಡುವ ರಮಣೀಯರಿಗೆ ಆಡದ ಚಂಡು ಎಂಬ ಕೆಲವು ಸಾಂಪ್ರದಾಯಿಕ

ವರ್ಣನೆಗಳಿದ್ದರೂ ವಿಜಯನಗರ ಹಾಗೂ ಇದರ ಶಾಖಾನಗರಿ ಯಾದ ವಿರೂಪಾಕ್ಷನ ಆವಾಸ ಸ್ಥಳ ಪಂಪಾನಗರಗಳ ವರ್ಣನೆ ಅಭಿಮಾನ ಉಕ್ಕೇರಿಸುವಂತೆ ವರ್ಣಿತವಾಗಿದೆ.

ಕೆಲವು ವರ್ಣನೆಗಳು ಸಹಜವಾಗಿ ಬಂದಿವೆ. ಬುಕ್ಕರಾಯನ ಮಡದಿ ದೇಪಾಯಿಯು ಗರ್ಭಿಣಿಯಾದಾಗ, ರಾಣಿಯಾದರೂ ಸ್ತ್ರೀಸಹಜ ಬಯಕೆಗಳು ಅವಳಿಗೂ ಹೊರತಲ್ಲ ಎನ್ನುವುದನ್ನು ರಾಜಮನೆತನದ ಕವಯತ್ರಿ ಸಹಜವಾಗಿ ಬಣ್ಣಿಸಿದ್ದಾಳೆ. ಮಣ್ಣುತಿನ್ನುವ ಅವಳ ಬಯಕೆಯನ್ನು ಗಂಗಾದೇವಿಯು ಕಾವ್ಯಮಯವಾಗಿ ವರ್ಣಿಸಿರುವುದು ಅವಳ ಅಮೋಘ ಕಲ್ಪನೆಗೆ ಸಾಕ್ಷಿಯಾಗಿದೆ. "ಗರ್ಭಸ್ತಿತಸ್ಯೇವ ಶಿಶೋರ್ವಿಧಾತುಮ್ ವಸುಂಧರಾಮಂಡಲ ಭಾರಶಿಕ್ಷಾಮ್ ಅರೋಚಯತ್" ಎನ್ನುತ್ತಾ ಮಗು ಗರ್ಭದಲ್ಲಿರುವಾಗಲೇ ಭೂಮಂಡಲದ ಭಾರವನ್ನು ವಹಿಸುವುದನ್ನು ಕಲಿಸಲು ರಾಣಿಯು ಮಣ್ಣುತಿನ್ನಲು ಮನಸ್ಸು ಮಾಡಿದಳು ಎಂದು ಬಣ್ಣಿಸಿದ್ದಾಳೆ.

ನವಜಾತ ಮಗುವಿನ ದರ್ಶನಕ್ಕೆ ಕಾತರಿಸಿ ಕೋಣೆಯನ್ನು ಪ್ರವೇಶಿಸಿದ ಬುಕ್ಕರಾಯ ಬಾಡಿದ ಶರೀರದ ರಾಣಿಯ ತೊಡೆಯಮೇಲಿನ ಮಗುವನ್ನು ಕಂಡಾಗ "ಶರತ್ಕಾಲದಲ್ಲಿ ಸೊರಗಿದ ನದಿಯ ದಂಡೆಯಮೇಲಿನ ಹಂಸವನ್ನು ಕಂಡಂತಾಯಿತು" ಎಂಬ ಹೋಲಿಕೆ ಮನೋಜ್ಞವಾಗಿದೆ.

ಚಿಗುರೆಲೆಗಳಂತಿರುವ ಮುಷ್ಟಿಗೈಗಳನ್ನು ಎಳೆದುಕೊಳ್ಳುತ್ತಿರುವ ಮಗು ಶತ್ರು ಲಕ್ಷ್ಮಿಯ ಕೂದಲುಗಳನ್ನು ಎಳೆಯುವುದನ್ನು ಕಲಿಯುತ್ತಿರುವಂತೆ ಕಂಡಿತು. 'ಮುದ್ದಾದ ಮಗುವಿನ ಮುಖವನ್ನು ಇನ್ನಷ್ಟು ನೋಡಲು ಆನಂದ ಭಾಷ್ಪಗಳು ಅಡ್ಡಿಯಾದವು' ಎಂಬುದು ಸಹಜವಾಗಿ ಮೂಡಿಬಂದಿದೆ.

ಸಂಸಾರದ ಸಣ್ಣಪುಟ್ಟ ಘಟನೆಗಳಿಗೆ ಮಹಿಳೆಯರು ಸ್ಪಂದಿಸುವ ಹಾಗೆ ಪುರಷರು ಸ್ಪಂದಿಸಲಾರರು, ಪ್ರತಿಯೊಂದು ಘಟನೆಯನ್ನು ಹೆಣ್ಣು ಅನುಭವಿಸುವ ಪರಿ ಪುರುಷರ ಅನುಭವಕ್ಕಿಂತ ಭಿನ್ನವಾದದ್ದು. ಕಾವ್ಯ ನಿರ್ಮಾಣ ಶಕ್ತಿಯಿರುವ ಮಹಿಳೆಯರು ತಮ್ಮ ಅನುಭವಗಳನ್ನು ಆಕರ್ಶಕವಾಗಿ ವ್ಯಕ್ತಪಡಿಸಲು ಸಾಧ್ಯ ಎಂಬುದನ್ನು ಗಂಗಾದೇವಿಯ ಈ ಕಾವ್ಯ ತಿಳಿಸುತ್ತದೆ. ಈ ಕೃತಿಯ ದ್ವಿತೀಯ ಮುದ್ರಣದ ಮುನ್ನುಡಿಯಲ್ಲಿ ಹರಿಹರಶಾಸ್ತ್ರಿಯವರು 'ಕೆಲವು ವಿದ್ವಾಂಸರು ಈ ಕೃತಿ ಮಹಿಳಿಯೋರ್ವಳಿಂದ ರಚಿತವಾಗಿರುವುದನ್ನು ಅನುಮಾನ ವ್ಯಕ್ತಪಡಿಸಿ, ಆಸ್ಥಾನ ಕವಿಯಿಂದ ರಚಿತವಾಗಿ ರಾಣಿ ಗಂಗಾದೇವಿ ಅಂಕಿತ ಗೊಳಿಸಿರಬಹುದೆಂದು ಭಾವಿಸುತ್ತಾರೆ' ಎಂದು ತಿಳಿಸಿದ್ದಾರೆ. ಆದರೆ ಮೇಲೆ ಉಲ್ಲೇಖಿಸಿರುವ ಕೆಲವೊಂದು ಸೂಕ್ಮ ಮಸಸ್ಥಿತಿಯ ಮಹಿಳೆಯರ ಭಾವನೆಗಳನ್ನು ಪುರುಷ ಕವಿಗಳು ವ್ಯಕ್ತಪಡಿಸಲು ಸಾಧ್ಯವಿಲ್ಲವೆನ್ನುವುದು ಸ್ಪಷ್ಟವಾಗುತ್ತದೆ.

ಸ್ತ್ರೀಯರ ವರ್ಣನೆ ಕಾವ್ಯಗಳಲ್ಲಿ ಸಾಮಾನ್ಯ, ಆದರೆ ಸ್ತ್ರೀಯೋರ್ವಳು ಪುರುಷನ ವರ್ಣನೆ ಮಾಡಿರುವುದ ವಿರಳ ಹಾಗಾಗಿ ಗಂಗಾದೇವಿ ವರ್ಣಿಸಿರುವ ಕಂಪಣನ ವರ್ಣನೆ ವಿಭಿನ್ನ ಎನಿಸುತ್ತದೆ.

**ಋತುವರ್ಣನೆ:** ಮಹಾಕಾವ್ಯದ ಲಕ್ಷಣಗಳಲ್ಲೊಂದಾದ ಋತುವರ್ಣನೆಗೆ ಐದನೆಯ ಸರ್ಗದಲ್ಲಿ ಮೂಡಿಬಂದಿದೆ. ಇಲ್ಲಿ ಕೆಲವು ಸಾಂಪ್ರದಾಯಿಕ ವರ್ಣನೆಗಳು ಕಂಡುಬಂದರೂ ಕೆಲವು ಕವಯತ್ರಿಯ ಕಲ್ಪನೆ, ಸ್ವಂತಿಕೆಯೂ ಅವಕಾಶ ಗಳಿಸಿಕೊಂಡಿವೆ. ಗೆಳತಿಯರು ಒಬ್ಬರಿಗೊಬ್ಬರು ಗೇಲಿಮಾಡುವ ಮಾತುಗಳು ಸೊಗಸಾಗಿವೆ.

**ಸೂರ್ಯಾಸ್ತ:** ಸಂಧ್ಯಾಕಾಲದಲ್ಲಿ ಸಮುದ್ರದಲ್ಲಿ ಕಳಚಿಬಿದ್ದ ಸೂರ್ಯಮಂಡಲವನ್ನು ವರುಣಲೋಕದ ಸ್ತ್ರೀಯರು ದಿನಲಕ್ಷ್ಮಿಯ ಕರ್ಣಕುಂಡಲವೆಂದು ಭಾವಿಸಿದರಂತೆ

**ಕಮಲೋದರಸಂಭೃತಂ ಕರೈರ್ಮಧು ಪೀತ್ವಾ ರವಿರುಜ್ಜಿತಾಂಬರಃ ।**
**ಸ್ಪೃಶತಿ ಸ್ಮ ದಿಶಂ ಪ್ರಚೇತಸೋ ನ ಮದಃ ಕಸ್ಯ ವಿಕಾರಕಾರಣಮ್ ॥** **(7–5)**

ಕಮಲಗಳ ಉದರದಲ್ಲಿದ್ದ ಮಧುವನ್ನು ಹೀರಿದ ರವಿಯು ಅಂಬರ (ಬಟ್ಟೆ)ವನ್ನು ಬಿಟ್ಟು ಪಶ್ಚಿಮ ದಿಗ್ವಧುವಿನ ಕಡೆಗೆ ಸಾಗಿದನು. ಮದವು ಯಾರಿಗೆ ವಿಕಾರವನ್ನುಂಟುಮಾಡುವುದಿಲ್ಲ? ಎಂದು ಹೇಳುವ ಈ ಪದ್ಯದ ಮುಂದಿನ ಭಾಗವೆಂಬಂತೆ ಮೂಡಿಬಂದ ಪದ್ಯದಲ್ಲಿ ಪೂರ್ವದಿಗ್ವಧುವನ್ನು ಬಿಟ್ಟು ದೂರ ಸರಿದಂತೆ ಸೂರ್ಯನ (ವಿರಹ) ತಾಪವು ಹೆಚ್ಚಿತು. ಆದರೆ ಪಶ್ಚಿಮ ದಿಗ್ವಧುವಿನ ಹತ್ತಿರ ಸರಿದಂತೆ ಅದು ಮರೆಯಾಯಿತು. ಕಾಮಿಗಳ ಹೃದಯದ ನೆಲೆಯನ್ನು ಯಾರು ಬಲ್ಲರು? ಎಂಬ ಕಲ್ಪನೆ ಸೊಗಸಾಗಿದೆ. ಸೂರ್ಯಾಸ್ತದ ಮತ್ತೊಂದು ಪದ್ಯವು ಸಂಜೆಗೆ ಮುದುಡಿಕೊಂಡ ಕಮಲದ ಮೊಗ್ಗೆಗಳಿಂದ ಕಮಲಿನಿಯು ಹೊರಟುನಿಂತ ಸೂರ್ಯನಿಗೆ ಮತ್ತೆ ಬೇಗನೆ ಬರಬೇಕೆಂದು ಕೈ ಜೋಡಿಸಿದಳು ಎಂಬ ಪ್ರೇಯಸಿಯ ಭಾವ ವ್ಯಕ್ತವಾಗಿದೆ.

**ಚಂದ್ರೋದಯ:** ರಾತ್ರಿಯು ಚಂದ್ರಮಂಡಲವೆಂಬ ಚಿಕ್ಕಪೆಟ್ಟಿಗೆಯಿಂದ ತೆಗೆದು ಕೊಟ್ಟ ಬಿಳಿ ರೇಶಿಮೆಯ ಪತ್ತಲವನ್ನು ದಿಗ್ವಧು ಧರಿಸುತ್ತಿರುವಳು ; ದಿಗ್ವಧುವನ್ನು ಅಪ್ಪಿಕೊಂಡಿರುವ ಈ ಚಂದ್ರನು ಕುಮುದಿನಿಯ ಕಡೆಗೂ ಕೈಚಾಚುತ್ತಿರುವನು; ಕಾಮಿಗಳು ನಂಬಿಕೆಗೆ ಅರ್ಹರಲ್ಲ ; ಕಾಮಿ ಚಂದ್ರನು ತನ್ನ ಕರಗಳನ್ನು ಎಷ್ಟೇ ಚಾಚಿದರೂ ಸೂರ್ಯ ವಿಕಾಸಿನೀ ಕಮಲಿನಿಯು ಮುಖವನ್ನು ಮುದುಡಿಕೊಂಡೇ ಇರುವಳು ; ಕಾಲನೆಂಬ ರೈತನು ಕತ್ತಲು ಕವಿದ ಮುಗಿಲೆಂಬ ಮರುಭೂಮಿಯಲ್ಲಿ ತಿಂಗಳ ಬೆಳಕಿನ ಪೈರು ಬೆಳೆದುಕೊಳ್ಳಲು ತಾರೆಗಳನ್ನು ಬಿತ್ತಿರುವನು.

**ಸಂಧ್ಯಾಕಾಲದ ವರ್ಣನೆ:** ಹಗಲಿನ (ಪುರುಷ) ವೇಷವನ್ನು ಕಳಚಿ ರಾತ್ರಿ (ಸ್ತ್ರೀ) ವೇಷದಿಂದ ನರ್ತನ ಮಾಡಲು ಸಿದ್ಧನಾದ ಕಾಲನಟನ ಕೆಂಪಾದ ತೆರೆಯಂತೆ ಲೋಕವು ಸಂಧ್ಯಾಕಾಲವನ್ನು ನೋಡಿತು ಎಂದು ಈ ರೀತಿ ಹೇಳದ್ದಾಳೆ.

**ದಿನವೇಷಮಪಾಸ್ಯ ಯಾಮಿನೀ ವಪುಷಾ ಕಾಲನಟಸ್ಯ ನೃತ್ಯತಃ ।**
**ದದೃಶೇ ಜಗತಾ ಪಿತೃಪ್ರಸೂರ್ದಿವಿ ನೇಪಥ್ಯಪಟೀವ ಪಾಟಲಾ ॥** **(7–19)**

ಸಾಯಂಸಂಧ್ಯೆಯು ರಕ್ತವರ್ಣದಿಂದ ಶೋಭಿಸುತ್ತಿದೆ. ಹಗಲು ರಾತ್ರಿಗಳೆರಡೂ ಕಾಲಪುರುಷನ ಎರಡು ಒಡಲುಗಳು. ಅವೆರಡರ ವ್ಯವಧಾನವನ್ನು ನಟ ಹಾಗೂ ಸಾಮಾಜಿಕರ ಮಧ್ಯದಲ್ಲಿದ್ದು ವೇಷಾಂತರಧಾರಿಯಾದ ನಟನನ್ನು ನೇಪಥ್ಯವು ಮರೆಮಾಡುವಂತೆ ಸಂಧ್ಯೆಯು ನೆರವೇರಿಸುತ್ತಿದೆ.

**ವರ್ಷಕಾಲದ ವರ್ಣನೆ:** ಹಸಿರು, ಕೆಂಪು ಮತ್ತು ಬಿಳುಪುಳ್ಳ ಇಂದ್ರಧನುಸ್ಸಿನ ರೇಖೆಯು ಪಚ್ಚೆ, ಹವಳ ಮತ್ತು ಮುತ್ತಿನಿಂದ ಮಾಡಿದ ಆಕಾಶಲಕ್ಷ್ಮಿಯ ಒಡ್ಯಾಣದಂತೆ ಶೋಭಿಸಿತು.

**ಹರಿತಲೋಹಿತಪಾಂಡುರರಾಜತತ್ರಿ ದಶರಾಜಶರಾಸನಲೇಖಿಕಾ ।**
**ಮರತಕೋಪಲ ವಿದ್ರುಮ ಮೌಕ್ತಿಕೈರ್ವಿರಚಿತಾ ರಶನೇವ ನಭಶ್ರೀಯಃ ॥(5–27)**

**ಕಾವೇರಿ ನದಿಯ ವರ್ಣನೆ:** 'ತುರುಷ್ಕರ ಅಡ್ಡಾದಿಡ್ಡಿಯ ಕಾರ್ಯಗಳಂತೆ, ಕಾವೇರಿಯೂ, ತನ್ನ ಪಾತ್ರವನ್ನೂ ತೊರೆದು ಅಡ್ಡಾದಿಡ್ಡಿಯಾಗಿ ಪ್ರವಹಿಸಿ, ಜನರಿಗೆ ಬೆದರಿಕೆಯನ್ನುಂಟುಮಾಡಿದಳಂತೆ. ಆಗ ತುರುಷ್ಕರನ್ನು ನಿರ್ಬಂಧಿಸಿದಂತೆ, ಕಾವೇರಿ ನದಿಗೂ ವಿಜಯನಗರದ ಅರಸರು ಅಣೇಕಟ್ಟುಗಳನ್ನು ನಿರ್ಮಿಸಿ, ನಿರ್ಬಂದಿಸಿದರಂತೆ.[೪೩]

**ಯುದ್ಧವರ್ಣನೆ:** ಗಂಗಾದೇವಿಯು ಶೃಂಗಾರ, ಕರುಣಾರಸ ಪ್ರಧಾನವಾದ ಸನ್ನಿವೇಶಗಳನ್ನು ವರ್ಣಿಸಿರುವಷ್ಟೇ ಕೌಶಲ್ಯವನ್ನು ವೀರರಸ ಪ್ರಧಾನವಾದ ಯುದ್ಧದ ಸನ್ನಿವೇಶವನ್ನು ವರ್ಣಿಸುವುದರಲ್ಲಿಯೂ ತೋರಿಸಿದ್ದಾಳೆ. ಕಾವ್ಯದಲ್ಲಿ ವರ್ಣಿಸಿರುವ ಯುದ್ಧದ ದೃಶ್ಯಗಳು ಯುದ್ಧವನ್ನು ಪ್ರತ್ಯಕ್ಷವಾಗಿ ಕಂಡು ವರ್ಣಿಸಿರುವಂತೆ ತೋರುತ್ತದೆ. ಯುದ್ಧಕ್ಕೆ ಹೊರಡುವಾಗಿನ ಸನ್ನಿವೇಶವನ್ನು ನಾಲ್ಕನೆಯ ಸರ್ಗ ಕಟ್ಟಿಕೊಡುತ್ತದೆ. ಆನೆ, ಕುದುರೆ, ಕಾಲಾಳುಪಡೆಯ ಸೇನೆ ಹೊರಡಲು ಸಜ್ಜುಗೊಂಡಿರುತ್ತದೆ. ಸಾಮಂತ ಅರಸುಗಳು ಕಂಪಣನನ್ನು ಕಾಯುತ್ತಾ ಹೊರಗೆ ನಿಂತಿದ್ದರು, ಜೋಯಿಸರು ಹೇಳಿದ್ದ ಪ್ರಶಸ್ತ ಕಾಲವನ್ನೆದುರು ನೋಡುತ್ತ ಕಂಪಣ ನಿಂತಿದ್ದ. ವಿಜಯದ ಪೂರ್ವ

ಸೂಚನೆಯಾದಂತೆ ಅವನಿಗೆ ಬಲಭುಜ ಸ್ಫುರಿಸಿತು, ವಿಪ್ರರು ಅಥರ್ವ ವೇದವನ್ನು ಪಠಿಸುತ್ತಿರಲು, ಹೋಮಾಗ್ನಿಯು ಹವಿಸ್ಸನ್ನುಂಡು ಪ್ರಜ್ವಲಿಸುತ್ತಿತ್ತು. ತನ್ನ ವಿಜಯತುರುಗವನ್ನೇರಿ ಕಂಪಣನು ತಲೆಬಾಗಿಲನ್ನು ದಾಟಿ ಬಂದಾಗ ಸಾಮಂತರು ಗೌರವದಿಂದ ನಡೆದರು, ಪುರವನಿತೆಯರು ಲಾಜಾಕ್ಷತೆಗಳನ್ನು (ಅರಳು, ಅಕ್ಷತೆ) ಸುರಿದರು. ಆಕಾಶದವರೆಗೂ ಧೂಳೆಬ್ಬಿಸಿ ಸಾಗರೋಪಾದಿಯ ಸೈನ್ಯ ನಡೆದ ಸಂಭ್ರಮವನ್ನು ಗಂಗಾದೇವಿಯು ಕಲಾತ್ಮಕವಾಗಿ ಬಣ್ಣಿಸಿದ್ದಾಳೆ.

**ಪಾದಾತಪ್ರಾಪ್ತಪಾದಾತಮ್ ಹಾಸ್ತಿಕಾಕ್ರಾಂತ ಹಾಸ್ತಿಕಮ್**
**ಆಶ್ವೀಯಮಿಲಿತಾಶ್ವೀಯಾಮಾಸೀದಾಯೋಧನಮ್ ತಯೋಃ॥**

ಎರಡು ಪಕ್ಷಗಳ ಕಾಲಾಳು, ಆನೆ ಕುದುರೆಗಳ ಸೈನ್ಯಗಳು ಪರಸ್ಪರ ಸಂಧಿಸಿದವು; ರಕ್ತರಂಜಿತವಾದ ಖಡ್ಗಗಳ ಅಲೆಗಳು ಯಮನ ನಾಲಿಗೆಗಳಂತೆ ಮುಂದೆ ಬಂದವು; ಕತ್ತರಿಸಿ ಬಿದ್ದ ವೀರರ ತೋಳುಗಳನ್ನು ಹಾವುಗಳೆಂದು ಗಿಡಗಳು ಭಾವಿಸಿದವು, ಬಾಣಗಳ ಗುರಿಗೆ ತುತ್ತಾಗಿ ಮಡಿದು ಆನೆಗಳ ತಲೆಗಳ ಮೇಲೆ ಒರಗಿದ ಶತ್ರು ಸೈನಿಕರು ಸ್ವರ್ಗ ಕಂಡು ಕಣ್ಣು ತೆರೆದು ನೋಡಿದಾಗ ಅಪ್ಸರೆಯರ ಮೇಲೆ ಒರಗಿದ್ದರು. ಕಂಪಣರಾಯನ ಸೈನಿಕರ ಬಲಕ್ಕೆ ತಡೆಯದೆ ಕ್ರಮಿಡ ಸೈನ್ಯವು ದಿಕ್ಕೆಟ್ಟು ಓಡಿತು.

**ಛಾಯಾಮೇವಾತ್ಮನಃ ಕೇಚಿತ್ ಧಾವಂತೋ ಭೀತಿಭಾವಿತಾಃ**
**ಆರಾತಿ ಶಂಕಯಾ ಕಷ್ಟಮ್ ದಷ್ಟಾಂಗುಲಿ ವವಂದಿರೇ**

ಓಡುತ್ತಿದ್ದ ಸೈನಿಕರು ತಮ್ಮ ನೆರಳನ್ನೇ ಶತ್ರುಗಳೆಂದು ಭಾವಿಸಿ ಬೆಟ್ಟುಕಚ್ಚಿಕೊಂಡು ಸಮಸ್ಕರಿಸಿದರು. ಕಂಪರಾಯನು ಶತ್ರುಗಳನ್ನು ಬೆನ್ನಟ್ಟಿ ಅವರು ಆಶ್ರಯಿಸಿದ ರಾಜಗಂಭಿರಕ್ಕೆ ಮುತ್ತಿಗೆ ಹಾಕಿದನು.

ಚಂಪನ ರೂಪ ಕಂಪನ ಖಡ್ಗದಲ್ಲಿ ಗೋಚರಿಸುತ್ತಿರಲು (೪–೮೧) ಕಂಪನು ಚಂಪನನ್ನು ದೇವೇಂದ್ರನ ಆತಿಥ್ಯಕ್ಕೆ ಕಳುಹಿದನು (೪–೮೨)

ಕುದುರೆಯ ಸವಾರನು ಆನೆಯ ತಲೆಗೆ ಖಡ್ಗವನ್ನು ಚುಚ್ಚಿ ದೂರ ಸರಿಸುತ್ತಿರುವಷ್ಟರಲ್ಲಿಯೇ ಆನೆಯು ಅವನ ಕುದುರೆಯನ್ನು ಹಿಡಿದೆಳೆದು ನೆಲಕ್ಕೆ ಅಪ್ಪಳಿಸುತ್ತಿತ್ತು. ; ಆನೆಯಿಂದ ಮೇಲಕ್ಕೆಸೆಯಲ್ಪಟ್ಟ ಓರ್ವ ವೀರನು ಅದರ ಬೆನ್ನ ಮೇಲೆರಗಿ ಮಾವುತನನ್ನು ನೆಲಕ್ಕುರುಳಿಸಿ ತಾನೇ ಗಜಾರೋಹಿಯಾದನು. ; ಬಹಳಹೊತ್ತಿನಿಂದ ಖಡ್ಗ ಯುದ್ಧವನ್ನು ಮಾಡುತ್ತ ಕಲಹದಲ್ಲಿ ತೊಡಗಿದ ಇಬ್ಬರು ವೀರರು ಒಂದೇ ಕ್ಷಣದಲ್ಲಿ ಪರಸ್ಪರರ ರುಂಡಹಾರಿಸಿ ಸ್ನೇಹಿತರಂತೆ ಜೊತೆಯಾಗಿ ಸ್ವರ್ಗಸೇರಿದರು. ಎಂದು ಮೊದಲಾಗಿ ಯುದ್ಧದ ಚಿತ್ರವು ಕಣ್ಣಮುಂದೆ ಕಟ್ಟುವಂತೆ ಬಣ್ಣಿಸಿದ್ದಾಳೆ.

**ಪ್ರಶಾಂತದಾವೇವ ವನಾಂತ ಲಕ್ಷ್ಮೀಃ ಗತೋಪರಾಗಾ ಗಣನಸ್ಥಲೀವ**
**ಕಲಿಂದಜಾಮರ್ದಿತ ಕಾಲಿಯೇವ ದಿಗ್ ದಕ್ಷಿಣಾಸೀತ್ ಕ್ಷತಪಾರಸೀಕಾ॥**
"ದಾವಾಗ್ನಿಯು ಶಾಂತವಾದ ಅಡವಿಯಂತೆ, ಗ್ರಹಣವು ಬಿಟ್ಟಮೇಲಿನ ಆಕಾಶದಂತೆ, ಕಾಲಿಯ ಮರ್ದನವಾದ ನಂತರದ ಯಮುನೆಯಂತೆ, ದಕ್ಷಿಣದೇಶವು ಪಾರಸಿಕರ ಹಾವಳಿಯಿಂದ ಮುಕ್ತವಾಯಿತು" ಎಂದು ಕಾವ್ಯವನ್ನು ಮುಗಿಸಿದ್ದಾಳೆ.

ಸುಂದರವಾದ ಪ್ರಕೃತಿಯ ವರ್ಣನೆ ಮಾಡಿರುವಂತೆ, ಅಂದಿನ ಮಧುರಾನಗರದ ಚಿತ್ರಣವನ್ನೂ ಮನಃ ಕಲಕುವಂತೆ ಚಿತ್ರಿಸಿದ್ದಾಳೆ. ಮುಸಲ್ಮಾನರ ಧಾಳಿಯಿಂದಾದ ದಕ್ಷಿಣಭಾರತದಲ್ಲಿಯ ಪ್ರಸಿದ್ಧ ಕ್ಷೇತ್ರಗಳ, ಅಗ್ರಹಾರಗಳ ಮತ್ತು ದೇವಾಲಯಗಳ ದುರವಸ್ಥೆಯನ್ನು ವರ್ಣಿಸಿದ್ದಾಳೆ. ಮಧುರೆಯ ದುರ್ದೆಶೆಯ ಚಿತ್ರಣವನ್ನು ಮಧುರೆಯ ಅಧಿದೇವತೆಯು ಕಂಪಣನಿಗೆ ಸ್ವಪ್ನದಲ್ಲಿ ವಿವರಿಸುತ್ತಾಳೆ. ಮಧುರೆಯ ಉದ್ಯಾನಗಳಲ್ಲಿನ ತೆಂಗಿನ ಮರಗಳೆಲ್ಲ

ಕಡಿಯಲ್ಪಟ್ಟು ತಲೆಬುರುಡೆಗಳು ಜೋತಾಡುವ ಶೂಲದ ಕಂಬಗಳಿಂದ ತುಂಬಿದೆ. ರಾಜಬೀದಿಗಳಲ್ಲಿ ಕೇಳಿಬರುತ್ತಿದ್ದ ರಮಣಿಯರ ಕಾಲ್ಗೆಜ್ಜೆಯ ಸದ್ದಿಗೆ ಬದಲಾಗಿ ನಾಗರಿಕರಿಗೆ ಹಾಕಿದ ಕೈಬೇಡಿಗಳ ಸಪ್ಪಳ ಕಿವಿಗೆ ಅಪ್ಪಳಿಸುತ್ತದೆ ಎಂಬ ಭೀಭತ್ಸ ವರ್ಣನೆ ನೀಡಿದ್ದಾಳೆ.

**ನ ತಥಾ ಕಟುಘೂತ್ ಕೃತಾದ್ ವ್ಯಥಾ ಮೇಹೃದಿ ಜೀರ್ಣೋಪವನೇಷು ಘೂಕಲೋಕಾತ್**
**ಪರಿಶೀಲಿತ ಪಾರಸೀಕ ವಾಗ್ಭ್ಯೋಯವನಾನಾಮ್ ಭವನೇ ಯಥಾ ಶುಕೇಭ್ಯಃ** ಹಾಳು ತೋಟಗಳಲ್ಲಿ ಕೂಗುತ್ತಿರುವ ಗೂಗೆಗಳ ಧ್ವನಿಗಿಂತ ಯವನರ ಮನೆಯಂಗಳದಲ್ಲಿಯ ಗಿಳಿಗಳಾಡುವ ಪಾರಸಿಕ ಮಾತುಗಳಿಂದ ನನಗೆ ಹೆಚ್ಚು ವ್ಯಥೆಯಾಗುತ್ತದೆ.

ತರುಣಿಯರ ಮೈಗಂಧದಿಂದ ಸುವಾಸನೆಗೊಳ್ಳುತ್ತಿದ್ದ ತಾಮ್ರಪರ್ಣೀ ನದಿಯ ಪ್ರವಾಹವು ರಕ್ತ ಮಾಂಸಗಳಿಂದ ತುಂಬಿ ಹರಿಯುತ್ತಿದೆ. ವಿದ್ಯೆ, ನೀತಿ, ಧರ್ಮ, ಶೀಲ, ಸುಕೃತ ಮತ್ತು ಕುಲೀನತೆ ಎಲ್ಲವೂ ಹಾಳಾಗಿದೆ. ಕಲಿಕಾಲದ ತಾಂಡವ ನೃತ್ಯ ನಡೆದಿದೆ. ಹೀಗೆ ಮಧುರೆಯ ಶೋಚನೀಯ ಸ್ಥಿತಿಯನ್ನು ಬಣ್ಣಿಸಿದ ಮಧುರೆಯ ಅಧಿದೇವತೆಯು ಒಂದು ಹೊಳೆಯುವ ಖಡ್ಗವನ್ನು ಕಂಪಣನಿಗೆ ನೀಡುತ್ತಾ

**ನರನಾಥ ಪುರಾ ಕೃಪಾಣಮೇನಮ್ವಿರಚಯ್ಯಾಖಿಲ ದೇವತಾಯುಧಾಂಶೈಃ**
**ಉಪದೀಕೃತವಾನ್ ಪಿನಾಕಪಾಣೇಃ ದನುಜಾನಾಮ್ ವಿಜಯಾಯ ವಿಶ್ವಕರ್ಮಾ**

ಈ ಖಡ್ಗವನ್ನು ವಿಶ್ವಕರ್ಮನು ಎಲ್ಲ ದೇವತೆಗಳ ಆಯುಧ ಶಕ್ತಿಯ ಅಂಶಗಳಿಂದ ಪರಶಿವನು ದಾನವರನ್ನು ಗೆಲ್ಲುವುದಕ್ಕೆಂದು ರಚಿಸಿರುವನು. ಶಿವನು ಇದನ್ನು ಪಾಂಡ್ಯರಜನಿಗೆ ಕೊಟ್ಟನು. ಇದೀಗ ಪಾಂಡ್ಯರಾಜರು ಗತವೀರ್ಯರಾದ ಮೇಲೆ ಅಗಸ್ತ್ಯನು ನಿನಗೆ ಕಳಿಸಿಕೊಟ್ಟಿರುವನು. ಇದರಿಂದ ಯವನರನ್ನು ತುಂಡರಿಸು ಮಧುರೆಯನ್ನು ಪುನಃ ವಶಪಡಿಸಿಕೊಂಡು ದಕ್ಷಿಣಭಾರತದಿಂದ ಯವನರನ್ನಟ್ಟಿ ರಾಮಸೇತುವಿನಮೇಲೆ ವಿಜಯಸ್ತಂಭವನ್ನು ನಿಲ್ಲಿಸು ಎಂದು ಆದೇಶಿಸಿದಳು.

ಗಂಗಾದೇವಿ ಕವಿ, ಸಹೃದಯ ಮತ್ತು ಕಾವ್ಯಗಳ ಬಗ್ಗೆ ಕೆಲವು ವಿಚಾರಪೂರ್ಣವಾದ ಮಾತುಗಳನ್ನು ಹೇಳಿರುವುದನ್ನು ಗಮನಿಸಬಹುದು.

**ಕ್ವಚಿದರ್ಥಃ ಕ್ವಚಿಚ್ಛಬ್ದಃ ಕ್ವಚಿದ್ಭಾವಃ ಕ್ವಚಿದ್ರಸಃ**
**ಯತ್ರೈತೇ ಸಂತಿ ಸರ್ವೇಪಿ ಸ ನಿಬಂಧೋ ನ ವಿದ್ಯತೇ॥**

ಕೆಲವು ಕೃತಿಗಳಲ್ಲಿ ಅರ್ಥನಿರೂಪಣೆ ಚೆನ್ನಾಗಿರುವುದು, ಕೆಲವೆಡೆ ಶಬ್ದಯೋಜನೆ ಚೆನ್ನಾಗಿರುವುದು, ಕೆಲವು ರಚನೆಗಳಲ್ಲಿ ಭಾವವೂ ರಸವೂ ಸೊಗಸಾಗಿರುವುದು. ಆದರೆ ಅವೆಲ್ಲವೂ ಒಂದೆಡೆಗೆ ದೊರೆಯುವ ಕೃತಿಗಳು ದುರ್ಲಭ.

ಕಾವ್ಯದಲ್ಲಿ ಗುಣವಿದ್ದರೂ ಅದನ್ನು ಗಮನಿಸದೆ ಕೇವಲ ದೋಷವನ್ನೇ ಅನ್ವೇಷಿಸುವ ದುಷ್ಟರನ್ನು ಮಾವಿನ ಮರವನ್ನು ಬಿಟ್ಟು ಬೇವನ್ನು ಹುಡುಕುವ ಕಾಗೆಗೆ ಹೋಲಿಸಿದ್ದಾಳೆ (೧–೨೦)

**ನಿರ್ದೋಷಾಪ್ಯಗುಣಾ ವಾಣೀ ನ ವಿದ್ವಜ್ಜನ ರಂಜಿನೀ**
**ಪ್ರತಿವ್ರತಾಪ್ಯರೂಪಾ ಸ್ತ್ರೀ ಪರಿಣೇತ್ರೇ ನ ರೋಚತೇ** **(1–19)**

"ಕಾವ್ಯದಲ್ಲಿ ಕೇವಲ ದೋಷಗಳಿಲ್ಲದಿದ್ದರೆ ಸಾಲದು, ಗುಣಗಳಿಲ್ಲದೆ ಅದು ವಿದ್ವಜ್ಜನರ ಮನಸ್ಸನ್ನು ಸೆಳೆಯಲಾರದು. ನಿಷ್ಠೆಯಿಂದಿದ್ದರೂ ರೂಪವತಿಯಲ್ಲದ ಪತ್ನಿ ಗಂಡನ ಮನಸ್ಸನ್ನು ಆಕರ್ಷಿಸಲಾರಳು" ಎಂಬ ಈ ಮಾತಿನಲ್ಲಿ ಕಾವ್ಯಸತ್ಯಕ್ಕಿಂತಲೂ ಜೀವನಸತ್ಯವನ್ನು ಕಾಣಬಹುದು.

**ನ ಪ್ರಾರ್ಥನೀಯಃ ಸತ್‌ಕಾವ್ಯಶ್ರುತ್ಯೈ ಸಹೃದಯೋ ಜನಃ**
**ಸ್ವಾದು ಪುಷ್ಪರಸಾಸ್ವಾದೇ ಕಃ ಪ್ರೇರಯತಿ ಷಟ್ಪದಮ್**

ಒಳ್ಳೆಯ ಕಾವ್ಯವನ್ನು ಕೇಳಲು ಸಹೃದಯರನ್ನು ಕರೆದು ತರುವ ಅವಶ್ಯಕತೆಯಿಲ್ಲ. ಮಧುರವಾದ ಪುಷ್ಪರಸವನ್ನು ಸೇವಿಸಲು ಭ್ರಮರಗಳನ್ನು ಯಾರು ಪ್ರಚೋದಿಸುವರು?' ಎಂಬ ಮಾತಿನಲ್ಲಿ ಗಂಗಾದೇವಿಗೆ ತನ್ನ ಕಾವ್ಯದ ಯೋಗ್ಯತೆಯ ಬಗೆಗಿರುವ ಆತ್ಮವಿಶ್ವಾಸ ಮತ್ತು ಸಹೃದಯ ವಾಚಕರಲ್ಲಿರುವ ಆದರಗಳು ವ್ಯಕ್ತವಾಗುತ್ತವೆ.

**ತಾರ್ಕಿಕಾಃ ಬಹವಃ ಸಂತಿ ಶಾಬ್ದಿ ಕಾಶ್ಚ ಸಹಸ್ರಶಃ ।**
**ವಿರಲಾಃ ಕವಯೋ ಲೋಕೇ ಸರಲಾಲಾಪಪೇಶಲಾಃ ॥ (1–22)**

**ನಿರ್ದೋಷಾಪ್ಯಗುಣಾ ವಾಣೀ ನ ವಿದ್ವಜ್ಜನರಂಜಿನೀ।**
**ಪತಿವೃತಾಪ್ಯರೂಪಾ ಸ್ತ್ರೀ ಪರಿಣೇತ್ರೆ ನ ರೋಚತೆ ॥**

ದೋಷ ರಹಿತವಾದರೂ ಗುಣಗಳಿಲ್ಲದಿದ್ದರೆ ಕಾವ್ಯ ಯಾರಿಗೆ ಮೆಚ್ಚಿಕೆಯಾದೀತು ? ಪತಿವ್ರತೆಯಾದರೂ ಸ್ತ್ರೀಗೆ ರೂಪವೂ ಮುಖ್ಯವಾಗುತ್ತದೆ ಎಂದಿದ್ದಾಳೆ. **ಪ್ರಬಂಧಮೀಷನ್ಮಾತ್ರೋಪಿ ದೋಷೋ ನಯತಿ ದೂಷ್ಯತಾಂ** – ಕಿಂಚಿತ್ ದೋಷವಿದ್ದರೂ ಪ್ರಬಂಧವೇ ದೂಷಿತವಾಗುತ್ತದೆ.

**ಪ್ರಭಾವ:** ಕಾಳಿದಾಸನ ಪ್ರಭಾವವನ್ನು ಈ ಕಾವ್ಯದಲ್ಲಿ ಗುರುತಿಸಬಹುದು. ಮಧುರೆಯ ವರ್ಣನೆಯಲ್ಲಿ ವಿದ್ವಾಂಸರು ಕಾಳಿದಾಸನ ರಘುವಂಶದಲ್ಲಿ ಬರುವ ಹಾಳುಬಿದ್ದ ಅಯೋಧ್ಯೆಯ ವರ್ಣನೆಯ ಛಾಯೆಯನ್ನು ಗುರುತಿಸಿದ್ದಾರೆ. ಗಂಗಾದೇವಿ ಕಾಳಿದಾಸನಿಂದ ಪ್ರೇರಿತಳಾಗಿರುವುದು ಇಲ್ಲಿ ಕಂಡುಬರುತ್ತದೆ. ಆದರೆ ಈ ಎರಡೂ ನಗರಗಳು ಹಾಳು ಬೀಳಲು ಕಾರಣವಾದ ಸಂದರ್ಭಗಳು ಮಾತ್ರ ತೀರ ಭಿನ್ನವಾದವಗಳು. ಅಯೋಧ್ಯಾನಗರದ ಅಧಿದೇವತೆಯು ಮಧ್ಯರಾತ್ರಿಯಲ್ಲಿ ಕುಶನ ಶಯ್ಯಾಗಾರಕ್ಕೆ ಬಂದು ಚಿತ್ರಿಸಿದ ಅಯೋಧ್ಯೆಯ ದುರ್ದಶೆಯ ಚಿತ್ರದಲ್ಲಿಯ ಅನೇಕ ಅಂಸಗಳನ್ನು ಗಂಗಾದೇವಿ ಮಧುರೆಯ ದುರವಸ್ಥೆಯನ್ನು ಚಿತ್ರಿಸುವ ಸಂದರ್ಭಕ್ಕೆ ತಕ್ಕಂತೆ ಮಾರ್ಪಾಡು ಮಾಡಿಕೊಂಡು ಪರಿಣಾಮಕಾರಿಯಾಗಿ ಬಳಸಿಕೊಂಡಿದ್ದಾಳೆ.

ಕಾಳಿದಾಸನು ವರ್ಣಿಸಿರುವ ಅಯೋಧ್ಯೆಯ ದುರ್ದಶೆಯು ಈ ರೀತಿಯಾಗಿವೆ. ರಾತ್ರಿಯಲ್ಲಿ ಅಭಿಸಾರಿಕೆರು ಸಂಚರಿಸುತ್ತಿರುವ ಅಯೋಧ್ಯೆಯ ಬೀದಿಗಳಲ್ಲಿ ಈಗ ನರಿಗಳು ಸಂಚರಿಸುತ್ತವೆ. ಪ್ರಮದೆಯರು ಸ್ನಾನ ಮಾಡುತ್ತಿದ್ದ ಕೊಳಗಳಲ್ಲಿ ಈಗ ಕೋಣಗಳು ನುಗ್ಗುತ್ತಲಿವೆ. ರಮಣೀಯರು ಪಾದಗಳಿಗೆ ಹಚ್ಚಿಕೊಂಡ ಬಣ್ಣದ ಹೆಜ್ಜೆಗಳು ಮೂಡುತ್ತಿದ್ದ ಅರಮನೆಗಳ ಸೋಪಾನಗಳ ಮೇಲೆ ಮೃಗಗಳನ್ನು ಕೊಂದು ತಿರುಗುವ ಹುಲಿಗಳ ಹೆಜ್ಜೆಗಳು ಮೂಡುತ್ತಲಿವೆ. ಇದೇ ಪ್ರಕಾರದಲ್ಲಿ ಗಂಗಾದೇವಿಯು ಮಧುರೆಯ ದುರ್ದಶೆಯನ್ನು ವರ್ಣಿಸಿದ್ದಾಳೆ[೪೩೮].

ಅಯೋದ್ಯೆಯ ಬೀದಿಗಳಲ್ಲಿ ರಾತ್ರಿಯಲ್ಲಿ ಅಭಿಸಾರಿಕೆರು ಸಂಚರಿಸುತ್ತಿದ್ದರೆ, ಈಗ ಈಗ ನರಿಗಳು ಸಂಚರಿಸುತ್ತವೆ ಎಂದು ಕಾಳಿದಾಸ ಹೇಳಿದರೆ, ಗಂಗಾದೇವಿಯ ಕಾವ್ಯದಲ್ಲಿ ಯುವತಿಯರ ಕಾಲ್ಗೆಜ್ಜೆಗಳ ಮಂಜುಳ ಧ್ವನಿ ಕೇಳಿಬರುತ್ತಿದ್ದ ಮಧುರೆಯ ಬೀದಿಗಳಲ್ಲಿ ನಾಗರೀಕರಿಗೆ ಹಾಕಿದ ಬೇಡಿಗಳ ಕರ್ಕಶಧ್ವನಿ ಕೇಳುತ್ತಿದೆ ಎಂದು ಮಧುರಾಧಿದೇವತೆ ನುಡಿಯುತ್ತಾಳೆ. "ಕಾಳಿದಾಸನ ಪ್ರಭಾವ ಅವಳ ಕಾವ್ಯದಮೇಲೆ ವಿಪುಲವಾಗಿದೆ"[೪೪].

ಈ ಕಾವ್ಯವು ಗಂಗಾದೇವಿ ಓದಿನ ಹರಹು ಹಾಗೂ ಪಾಂಡಿತ್ಯಗಳನ್ನು ಕುರಿತು ತಿಳಿಸುತ್ತದೆ. ಇವಳ ಧಾರ್ಮಿಕ ಭಾವನೆಯು ಕಾವ್ಯದಲ್ಲಿ ವ್ಯಕ್ತವಾಗಿದೆ. ಶೈವರಾಗಿದ್ದ ಸಂಗಮ ಮನೆನತದ ಸೊಸೆಯಾಗಿದ್ದರೂ ಶೈವ–ವೈಷ್ಣವ ಧರ್ಮಗಳನ್ನು ಸಮಾನವಾಗಿ ಕಾಣುವ ಇವಳ ದೃಷ್ಟಿ ಇಲ್ಲಿ ವ್ಯಕ್ತವಾಗಿದೆ. ರಾಮಾಯಣ, ಮಹಾಭಾರತ ಮೊದಲಾದ ಪುರಾಣಗಳ ಹೋಲಿಕೆಗಳನ್ನು ಸನ್ನಿವೇಷಕ್ಕೆ ತಕ್ಕಂತೆ ಬಳಸಿಕೊಂಡಿದ್ದಾಳೆ. ರಾವಣನಂಥ ತುರುಕನನ್ನು

ಸಂಹರಿಸಲು ಕಂಪಣನು ರಾಮನಂತೆ ಹೊರಟನು' (೩–೪೩) ಎಂದು ಹೇಳಿದ್ದಾಳೆ. ಕಂಪಣನನ್ನು ಹರಿಹರಾತ್ಮಜ ಎಂದೂ ಕರೆದಿದ್ದಾಳೆ (೫–೭). ಕಂಪಣನ ಜನನವನ್ನು 'ಪಾರ್ವತಿಯು ಸ್ಕಂದನನ್ನು ಪಡೆದಂತೆ' (೨–೧೪) ಎಂದು ಬಣ್ಣಿಸಿರುವಲ್ಲಿ, ತಾರಕನ ಸಂಹಾರಕ್ಕೆಂದೇ ಸ್ಕಂದನು ಹುಟ್ಟಿದ ವಿಚಾರವನ್ನು, ಯವನರ ಸಂಹಾರಕ್ಕೆಂದೇ ಕಂಪನು ಹುಟ್ಟಿದ ಎಂಬುದಕ್ಕೆ ಹೋಲಿಸಿದ್ದಾಳೆ.

ಶಾಸನಗಳನ್ನೂ ಇವಳು ಗಮನಿಸಿದ್ದಾಳೆ ಎನ್ನುವುದಕ್ಕೆ ಇವಳ ಕಾವ್ಯದ ಕೆಲವು ಸಾಲುಗಳನ್ನು ಕಾಣಬಹುದು. ಬುಕ್ಕನ ಕುರಿತು ಹೇಳುವಾಗ 'ಇವನ ದಾನಾಂಬುವಿನ ತಂಪು ಸಿಂಚನದಿಂದ ಭೂಮಿಯು ಮತ್ತೆ ಹೊಸ ತಳಿರನ್ನು ಬಿಡಲು ಆರಂಭಿಸಿತು' ಎಂಬ ಮಾತು ಎರಡನೆಯ ಹರಿಹರನ ಶಾಸನವೊಂದರಲ್ಲಿ ಈತನು ಮಾಡಿದ 'ಮಹಾದಾನಗಳ ನೀರಿನಿಂದ ಧರ್ಮವೃಕ್ಷವು ಸಮೃದ್ಧಿಯಾಗಿ ಬೆಳೆಯಿತು' ಎಂಬ ವಿವರಣೆ ಬಂದಿದೆ[೪೫].

ಈ ಕೆಲವೊಂದು ವಿಚಾರಗಳು ಇವಳ ವಿದ್ವತ್ತು, ಅಧ್ಯಯನ, ಸಮಕಾಲೀನ ವಿಚಾರಗಳ ಕುರಿತಾಗಿ ಗ್ರಹಿಸಿಕೊಂಡ ಮಾಹಿತಿಗಳನ್ನು ಕುರಿತು ತಿಳಿಸುತ್ತದೆ.

**ಗ್ರಂಥಸಂಪಾದನೆ:** ಮಧುರಾವಿಜಯ ವೀರಕಂಪರರಾಯ ಚರಿತ ಕೃತಿಯು ೧೯೨೪ರಲ್ಲಿ ಜಿ.ಹರಿಹರ ಶಾಸ್ತ್ರಿ ಹಾಗೂ ವಿ.ಶ್ರೀನಿವಾಸ ಶಾಸ್ತ್ರಿಗಳಿಂದ ಸಂಪಾದಿತವಾಗಿ ತಿರುವನಂತಪುರಂನಿಂದ ದ್ವಿತೀಯ ಮುದ್ರಣವಾಗಿ ಪ್ರಕಟವಾಗಿ ಹೊರಬಂದಿದೆ. ಇದನ್ನು ಮದ್ರಾಸು ವಿಶ್ವವಿದ್ಯಾನಿಲಯ ಬಿ.ಎ ತರಗತಿಗಳಿಗೆ ಪಠ್ಯವಾಗಿರಿಸಿತ್ತೆನ್ನುವುದು ಈ ಕೃತಿಯ ಐತಿಹಾಸಿಕ ಹಾಗೂ ಸಾಹಿತ್ಯಕ ಮಹತ್ವವನ್ನು ತಿಳಿಸುತ್ತದೆ. ಈ ಕೃತಿಯ ಸಂಪಾದಕರು ತಿಳಿಸಿರುವಂತೆ ಇದು ಏಕೈಕ ಹಸ್ತಪ್ರತಿಯಿಂದ ಸಂಪಾದನೆ ಮಾಡಲಾದ ಕೃತಿ. ದೊರೆತಿರುವ ಒಂದೇ ಪ್ರತಿಯೂ ಅಸಮಗ್ರಪ್ರತಿಯಾಗಿದ್ದು ಅನೇಕ ಕಡೆಗಳಲ್ಲಿ ತೃಟಿತವಾಗಿದೆ. ಇಂಥ ಕಡೆಗಳಲ್ಲಿ ಅಪೂರ್ಣ ಪಾಠ ಹಾಗೆಯೇ ಉಳಿದಿದೆ. ಇದನ್ನು ಕುಶಾಲಪ್ಪ ಗೌಡ.ಕೆ ಅವರು ಕಾವ್ಯರೂಪದಲ್ಲಿಯೇ ಕನ್ನಡಕ್ಕೆ ಅನುವಾದಿಸಿದ್ದಾರೆ[೪೬].

ಸರಳವಾದ ಭಾಷೆ, ಸಂದರ್ಭೋಚಿತವಾದ ಹೊಸ ಹೊಸ ಪರಿಕಲ್ಪನೆಗಳಿಂದ ಸೊಗಸಾದ ಕಾವ್ಯ ವಾಗಿದೆ. ಅತೀ ಎನಿಸುವಂಥ ಧೀರ್ಘ ವರ್ಣನೆಗಳು ಕಂಡುಬರುವುದಿಲ್ಲ. ಕೋಮಲವಾದ ಪರಿಚಿತ ಪದಗಳ ಮೂಲಕ ಮಾನವಭಾವನೆಗಳ ಸಂಪೂರ್ಣವಾದ ಅಭಿವ್ಯಕ್ತಿಯನ್ನು ಈ ಕಾವ್ಯದಲ್ಲಿ ಕಾಣುತ್ತೇವೆ. ಕವಯತ್ರಿಗೆ ಕೀರ್ತಿಯನ್ನೂ ಆಹ್ಲಾದವನ್ನೂ ಉಂಟುಮಾಡಿರುವ ಕೃತಿ ಇದಾಗಿದೆ. ಇದರ ಕುರಿತಾಗಿ ಸ್ವತಃ ಗಂಗಾದೇವಿಗೆ ಹೆಮ್ಮೆ ಇರುವುದನ್ನು ವ್ಯಕ್ತಪಡಿಸಿದ್ದಾಲೆ.

**ಕರೋತಿ ಕೀರ್ತಿಮರ್ಥಾಯ ಕಲ್ಪತೇ ಹಂತಿ ದುಷ್ಕೃತಮ್**
**ಉನ್ನೀಲಯತಿ ಚಾಲ್ಹಾದಮ್ ಕಿಮ್ ನ ಸೂತೇ ಕವೇಃ ಕೃತಿಃ॥**

ಈ ಕಾವ್ಯದಲ್ಲಿ ಹೊರಹೊಮ್ಮಿರುವ ವೈದರ್ಭೀ ಶೈಲಿಯು ಸಹಜವಾಗಿ ಮೂಡಿಬಂದಿದೆ. ಶಬ್ದಗಳಲ್ಲಿ ಚಮತ್ಕಾರವಿದೆ, ಕವಯತ್ರಿಯು ತನ್ನ ಪ್ರೇಮಭರಿತವಾದ ದೃಷ್ಟಿಯಿಂದ ಪ್ರಕೃತಿಯನ್ನು ನೋಡಿದ್ದಾಳೆ. ಆದಕಾರಣದಿಂದಲೇ ಈ ಕಾವ್ಯವು ಗಾತ್ರದಲ್ಲಿ ದೊಡ್ಡದಾಗಿಲ್ಲದಿದ್ದರೂ, ಕವಿತಾಗುಣಗಳ ದೃಷ್ಟಿಯಿಂದ ಬಹು ರೋಚಕವಾಗಿಯೂ ಮತ್ತು ಸರಸವಾಗಿಯೂ ಇದೆ. ಅಲಂಕಾರಗಳನ್ನು ಬಹು ಸರಳವಾಗಿಯೂ ಮತ್ತು ಸ್ವಾಭಾವಿಕವಾಗಿಯೂ ಉಪಯೋಗಿಸಿದ್ದಾಳೆ. ಯುದ್ಧರಂಗದ ಭೀಕರತೆಯನ್ನು ಬಣ್ಣಿಸುವಷ್ಟೇ ತನ್ಮಯಳಾಗಿ ಅಂತಃಪುರದ ಬಣ್ಣನೆಯನ್ನೂ ನೀಡಿದ್ದಾಳೆ. "ಸ್ತ್ರೀಯರೊಂದಿಗಿನ ಕ್ರೀಡಾ–ವಿನೋದಗಳನ್ನು ವರ್ಣಿಸುವಾಗ ವಿದುಷಿಯಾದ ಗಂಗಾದೇವಿಯಲ್ಲಿ ಸವತಿ ಮತ್ಸರ ಮುಂತಾದ ಕ್ಷುಲ್ಲಕ ಗುಣಗಳು ಕಿಂಚಿತ್ತೂ ಇರಲಿಲ್ಲವೆಂದು ಭಾವಿಸಬಹುದು"[೪೭].

ಗಂಗಾದೇವಿಯು ಮಹಾಕಾವ್ಯದ ಲಕ್ಷಣವನ್ನನುಸರಿಸಿ ಕಾವ್ಯ ರಚಿಸಿದ್ದಾಳೆ. ಒಂದೊಂದು ಸರ್ಗವನ್ನೂ ಬೇರೆ ಬೇರೆ ಛಂದಸ್ಸಿನ ವೃತ್ತಗಳಲ್ಲಿ ರಚಿಸಿದ್ದಾಳೆ. ಸರ್ಗಾಂತ್ಯದ ಪದ್ಯ ಭಿನ್ನ ಛಂದಸ್ಸಿನಿಂದ ಕೂಡಿದೆ. ಈ ಕಾವ್ಯದಲ್ಲಿ ಶೃಂಗಾರ ಹಾಗೂ ವೀರರಸಗಳು ಚೆನ್ನಾಗಿ ಮೂಡಿಬಂದಿದೆ. ಶೈಲಿಯೂ ಮಧುರವಾಗಿದೆ, ಕವಯತ್ರಿಯ ರಸಿಕತೆ, ಲೋಕಾನುಭವ, ವಿವೇಕ, ರಾಷ್ಟ್ರಭಕ್ತಿ, ರಾಜಕೀಯಪರಿಜ್ಞಾನಗಳು ಕಾವ್ಯದಲ್ಲಿ ಮೂಡಿಬಂದಿವೆ. ಇಲ್ಲಿ ಸಂಸ್ಕೃತಕಾವ್ಯಗಳ ಸಂಪ್ರದಾಯವೂ ಇದೆ–ಹೊಸತನವೂ ಇದೆ"[೪೮].

ಕವಯಿತ್ರಿಯೇ ಹೇಳಿದಂತೆ ಕಾವ್ಯವು ಕೀರ್ತಿಯನ್ನು, ಧನವನ್ನು ತಂದುಕೊಡುವುದಲ್ಲದೆ, ಪಾಪವನ್ನು ನಿವಾರಿಸುತ್ತದೆ, ಸಂತೋಷವನ್ನು ವರ್ಧಿಸುತ್ತದೆ. ಮಹಾಕವಿಯ ಕೃತಿಯಿಂದ ಯಾವ ಪ್ರಯೋಜನ ತಾನೆ ಉಂಟಾಗುವುದಿಲ್ಲ ಎಂದು ಕಾವ್ಯಪ್ರಯೋಜನವನ್ನು ಹೇಳಿದ್ದಾಳೆ. 'ಮನಃಕ್ಲೇಷವನ್ನು ತೊಳೆದು ಕೀರ್ತಿಯನ್ನೂ ಆನಂದವನ್ನೂ ಕಾವ್ಯ ಕೊಡಬಲ್ಲದು." ಕವಯತ್ರಿಗೆ ಕೀರ್ತಿಯನ್ನೂ, ಓದುಗರಿಗೆ ಆಹ್ಲಾದವನ್ನೂ ಉಂಟುಮಾಡುವ ಕನ್ನಡಿತಿ ಇಂತಹ ಕೃತಿಯೊಂದನ್ನಿತ್ತುದು ನಾಡಿಗೆ ಹೆಮ್ಮೆಯ ವಿಷಯ[೪೯].

ವಿಜಯನಗರ ಸಂಸ್ಥಾಪನೆಯಾದ ಕೆಲವೇ ವರ್ಷಗಳಲ್ಲಿ ಆ ರಾಜ್ಯಕ್ಕೆ ಸಂಬಂಧಸಿದಂತೆ ರಚಿತವಾದ ಚಾರಿತ್ರಿಕ ಕಾವ್ಯ ಎಂಬ ಹೆಗ್ಗಳಿಕೆ ಪಡೆದ ಕೃತಿ ಮಧುರಾವಿಜಯಂ ಅಥವಾ ವೀರಕಂಪರಾಯ ಚರಿತಂ.

## ತಿರುಮಲಾಂಬಾ

ವಿಜಯನಗರ ಕಾಲದ ಮತ್ತೊಂದು ಪ್ರಸಿದ್ಧ ಕಾವ್ಯ 'ವರದಾಂಬಿಕಾ ಪರಿಣಯ ಚಂಪು'. ಈ ಸಂಸ್ಕೃತ ಕಾವ್ಯವನ್ನು ಅಚ್ಯುತರಾಯನ ಅರಸಿ ತಿರುಮಲಾಂಬ ರಚಿಸಿದ್ದಾಳೆ. ಕೃಷ್ಣದೇವರಾಯನ ನಂತರ ವಿಜಯನಗರವನ್ನಾಳಿದ ಅರಸು ಅಚ್ಚ್ಯುತರಾಯನ ಆಳ್ವಿಕೆಯ ಕಾಲವನ್ನು ಇತಿಹಾಸಕಾರರು ಕ್ರಿ.ಶ.೧೫೨೯–೧೫೪೨ ಎಂದು ಗುರುತಿಸಿದ್ದಾರೆ. ಈ ಕಾವ್ಯದಲ್ಲಿ ಅಚ್ಯುತರಾಯನ ಮಗ ಚಿನ್ನವೆಂಕಟಾದ್ರಿಗೆ ಯುವರಾಜ ಪಟ್ಟಾಭಿಷೇಕ ನಡೆದ ವಿಚಾರ ಉಲ್ಲೇಖಿಸಿರುವುದರಿಂದ ಕಾವ್ಯವು ಕ್ರಿ.ಶ.೧೫೪೦ರ ಆಸುಪಾಸಿನಲ್ಲಿ ರಚಿತವಾಗಿದೆ ಎಂದು ತರ್ಕಿಸಬಹುದು. ಅಚ್ಯುತರಾಯನ ಕಾಲದವಳಾದ ಕವಯತ್ರಿಯ ಕಾಲವೂ ಕೂಡ ಹದಿನಾರನೆಯ ಶತಮಾನದ ಪೂರ್ವಾರ್ಧವೆಂದು ಖಚಿತವಾಗಿ ಹೇಳಬಹುದು.

ತಿರುಮಲಾಂಬೆಯು ಅಚ್ಯುತರಾಯನ ಪಟ್ಟದರಸಿಯಲ್ಲದಿದ್ದರೂ ಆತನ ಹಲವು ಅರಸಿಯರಲ್ಲೊಬ್ಬಳಾಗಿದ್ದಳು. ತನ್ನನ್ನು 'ರಾಜಾಧಿರಾಜಾಚ್ಯುತ ಸಾರ್ವಭೌಮಪ್ರೇಮ ಸರ್ವಸ್ವಭುವಾ' ಎಂದು ಕರೆದುಕೊಂಡಿರುವುದರಿಂದ, ಅರಸನ ಪ್ರಿಯ ಮಡದಿಯಾಗಿದ್ದಳೆನ್ನುವುದು ತಿಳಿದುಬರುತ್ತದೆ.

ಕವಯತ್ರಿ ತಿರುಮಲಾಂಬಾ, ಕಾವ್ಯದಲ್ಲಿ ತನ್ನ ಕುರಿತಾದ ಯಾವ ವಿಚಾರವನ್ನೂ ಹೇಳಿಕೊಂಡಿಲ್ಲ. ಕಾವ್ಯದ ನಾಯಕ ತನ್ನ ಪತಿ ಅಚ್ಯುತರಾಯನಾದರೂ, ಆ ಕಾವ್ಯದಲ್ಲಿ ತಾನು ಪಾತ್ರವಾಗಿ ಬಂದಿಲ್ಲ. ಹಲವು ಶಾಸನಗಳಲ್ಲಿ ತನ್ನನ್ನು 'ಓದುವ' ತಿರುಮಲಾಂಬೆ ಎಂದು ಕರೆದುಕೊಂಡಿರುವ ಕವಯತ್ರಿಯು, ಅಚ್ಯುತರಾಯನ ಆಸ್ಥಾನದಲ್ಲಿ ಓದುವ ಕಾಯಕದಲ್ಲಿದ್ದಿರ ಬಹುದು. ಇವಳ ಪಾಂಡಿತ್ಯ ಹಾಗೂ ಇತರ ಗುಣಗಳನ್ನು ಮೆಚ್ಚಿ ಅರಸನು ಇವಳನ್ನು ವರಿಸಿರುವ ಸಾಧ್ಯತೆಗಳಿವೆ. ಶ್ರೀರಂಗಂನ ಶಾಸನವು ಇವಳನ್ನು ಸ್ಪಷ್ಟವಾಗಿ 'ರಾಣಿ ತಿರುಮಲಾಂಬಾ' ಎಂದು ಉಲ್ಲೇಖಿಸಿದೆ[೫೦]. 'ಸುಭದ್ರಾ ಪರಿಣಯಂ' ಎಂಬ ತೆಲುಗು ಕೃತಿಯೂ ಇವಳನ್ನು ಅಚ್ಯುತರಾಯನ ಅರಸಿಯೆಂದೇ ಕರೆದಿದೆ. ಈ ಕಾವ್ಯವನ್ನು ಸಂಪಾದಿಸಿರುವ ಡಾ.ಸೂರ್ಯಕಾಂತ ಅವರು ಕಾವ್ಯಕ್ಕೆ ಸುದೀರ್ಘ ಮುನ್ನುಡಿ ಹಾಗೂ ಇಂಗ್ಲಿಷ ಅನುವಾದವನ್ನು ನೀಡಿದ್ದಾರೆ. ಇವರು ಅಚ್ಯುತರಾಯನ ಕಾಲದಲ್ಲಿ ಶಾಸನಗಳನ್ನು ರಚಿಸಿರುವ ಓದುವ

ತಿರುಮಲಾಂಬೆ ಹಾಗೂ 'ವರದಾಂಬಿಕಾ ಪರಿಣಯ ಚಂಪು' ಕೃತಿ ರಚಿಸಿರುವ ತಿರುಮಲಾಂಬ ಏಕವ್ಯಕ್ತಿಗಳಾಗಿದ್ದಾರೆ ಎಂದು ಹಲವಾರು ಆಧಾರಗಳಿಂದ ಸ್ಪಷ್ಟಪಡಿಸಿದ್ದಾರೆ[೫೧].

'ವರದಾಂಬಿಕಾ ಪರಿಣಯ ಚಂಪು' ಕೃತಿಯು ಇವಳು ರಚಿಸಿರುವ ಏಕೈಕ ಕಾವ್ಯವಾಗಿದೆ. ಆದರೆ ಇವಳು ತನ್ನ ಪತಿ ಅಚ್ಯುತರಾಯ ಹಂಪಿಯ ವಿಜಯವಿಟ್ಠಲ ದೇವಾಲಯದಲ್ಲಿ ನಡೆಸಿರುವ 'ಸುವರ್ಣ ಮೇರು' ದಾನದ ಕುರಿತಾಗಿ ಶಾಸನಗಳನ್ನು ರಚಿಸಿದ್ದಾಳೆ. ರಾಜಧಾನಿ ಹಂಪಿಯಲ್ಲಿ ಸಂಕ್ಷಿಪ್ತವಾದ ವಿಚಾರವನ್ನು ತಿಳಿಸವ ಶಾಸನವನ್ನು ರಚಿಸಿದರೆ, ಲೇಪಾಕ್ಷಿ ಹಾಗೂ ಶ್ರೀರಂಗಂ ದೇವಾಲಯಗಳಲ್ಲಿ ಇವಳು ರಚಿಸಿರುವ ಸುದೀರ್ಘ ಶಿಲಾಶಾಸನಗಳು ದೊರಕುತ್ತವೆ[೫೨]. ಇದಲ್ಲದೆ ಕಾಂಚಿಪುರದಲ್ಲಿ ಅರಸ ಅಚ್ಯುತರಾಯನ 'ಮುಕ್ತಾತುಲಾಭಾರ'ಕ್ಕೆ ಸಂಬಂಧಿಸಿದ ಮೂರು ಶ್ಲೋಕಗಳನ್ನೂ ರಚಿಸಿದ್ದಾಳೆ[೫೩]. ಇವಳು ರಾಣಿಯ ಸ್ಥಾನಮಾನಗಳನ್ನು ಗಳಿಸಿದ್ದಳೆಂಬುದು ಇಲ್ಲಿನ ಶಾಸನಗಳಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ.

'ವರದಾಂಬಿಕಾ ಪರಿಣಯಂ' ಕೃತಿಯ ಕಡೆಯ ಭಾಗಗಳಲ್ಲಿ ಇವಳು ವಿದ್ವಾಂಸರಿಗೂ, ಕವಿಗಳಿಗೂ ಆಶ್ರಯ ನೀಡಿದುದಾಗಿ ತಿಳಿಸಿದ್ದಾಳೆ. 'ಕಾವ್ಯ, ನಾಟಕ, ಪುರಾಣಗಳಷ್ಟೇ ಅಲ್ಲದೆ ಆಗಮರಹಸ್ಯಸಾರಗಳನ್ನು ಅರಿಯುವ ಶಕ್ತಿಯುಳ್ಳವಳೂ, ಗತಿಯುಳ್ಳಂಥವಳು, ಒಂದೇ ಸಲ ಕೇಳಿ ತಿಳಿಯುವ ಗ್ರಹಣಶಕ್ತಿಯುಳ್ಳವಳು (ಏಕಸಂದಿಗ್ರಾಹಿ) ಅನೇಕ ಭಾಷೆಗಳನ್ನು ಬಲ್ಲವಳು, ಮಧುರ ಕಂಠದವಳು, ಕವಿಗಳಿಗೆ ಆಶ್ರಯದಾತಳು, ಶಾಸನಗಳನ್ನು ಬರೆದವಳು' ಎಂದು ತನ್ನನ್ನು ಪರಿಚಯಿಸಿಕೊಂಡಿದ್ದಾಳೆ.

ಇಲ್ಲಿ ಇವಳ ಬಹುಮುಖ ಪ್ರತಿಭೆ ತಿಳಿದುಬರುತ್ತದೆ. ಇವಳ ಕಾವ್ಯವನ್ನು ಓದಿದವರು ಇವಳ ಸಂಸ್ಕೃತ ಪಾಂಡಿತ್ಯವನ್ನು ಮೆಚ್ಚದಿರರು, ಅಂತೆಯೇ ಇವಳು ಇನ್ನೂ ಹಲವು ಭಾಷೆಗಳನ್ನು ಬಲ್ಲವಳೆಂದು ಹೇಳಿಕೊಂಡಿದ್ದಾಳೆ. ಅಲ್ಲದೆ ತಾನು ಸರಸಪ್ರಬಂಧ ರಚಿಸುವ ಸಾಮರ್ಥ್ಯವುಳ್ಳವಳೆಂದೂ ಕವಿಗಳ ಗೋಷ್ಠಿಗೆ ಆನಂದವನ್ನು ತರುವವಳೆಂದೂ ಹೇಳಿಕೊಂಡಿರುವುದು ಇವಳ ಇನ್ನೂ ಕೆಲವು ರಚನೆಗಳಿದ್ದಿರ ಬಹುದೆ? ಎಂಬ ಅನುಮಾನ ಮೂಡಿಸುತ್ತದೆ. "ವಿಪಂಚೀಪ್ರಪಂಚಿತ ಪಂಚಮ ಮಧುರಿ ಮೋದಂಚನ ವಿಕಸ್ವರ ಕಂಠಸ್ವರಯಾ..." ಎಂದು ತನ್ನ ಕೋಗಿಲೆಯಂತಹ ಇನಿದನಿ ಕುರಿತು ಹೆಮ್ಮೆ ವ್ಯಕ್ತಪಡಿಸಿದ್ದಾಳೆ[೫೪].

ಕವಯತ್ರಿ ತಿರುಮಲಾಂಬೆಯು, ಈ ಕೃತಿಯ ರಚನೆಯಿಂದಾಗಿ "ಇಡೀ ಸಂಸ್ಕೃತ ಸಾಹಿತ್ಯದಲ್ಲಿಯೇ ಚಂಪೂಕಾವ್ಯ ರಚಿಸಿದ ಏಕೈಕ ಮಹಿಳೆ" ಎಂಬ ಹಿರಿಮೆಗೆ ಪಾತ್ರಳಾಗಿದ್ದಾಳೆ[೫೫]. ಭಾರತೀಯ ಇತಿಹಾಸದ ಮಧ್ಯಯುಗದಲ್ಲಿ ರಚಿತವಾದ ಹಲವಾರು ಚಂಪೂ ಕಾವ್ಯಗಳಲ್ಲಿ ಮೊದಲ ಸ್ಥಾನದಲ್ಲಿ ವರದಾಂಬಿಕಾಪರಿಣಯ ಚಂಪೂ ನಿಲ್ಲುತ್ತದೆ ಎಂಬುದು ಸಂಸ್ಕೃತ ಕಾವ್ಯ ವಿಮರ್ಶಕ ಬಲದೇವ ಉಪಾಧ್ಯಾಯ ಅವರು ಅಭಿಪ್ರಾಯ ಪಟ್ಟಿದ್ದಾರೆ[೫೬].

ಈ ಕಾವ್ಯದಲ್ಲಿ ಅಚ್ಯುತರಾಯನ ಜೀವನಚರಿತ್ರೆಯನ್ನು ವಿವರಿಸುವುದರ ಜೊತೆಗೆ ವಿಜಯನಗರವನ್ನಾಳಿದ ತುಳುವ ವಂಶದ ವೈಭವೀಕರಣಯುಕ್ತವಾದ, ಪ್ರಶಂಸಾತ್ಮಕವಾದ ವಿವರಗಳೂ ಬಂದಿವೆ. ಪುರಾಣಪ್ರಸಿದ್ಧವಾದ ಚಂದ್ರವಂಶದ ಅರಸರನ್ನು ಹೆಸರಿಸುತ್ತಾ, ಆ ವಂಶದಲ್ಲಿ ಜನಿಸಿದ ಈಶ್ವರನಾಯಕ ಹಾಗೂ ಬುಕ್ಕಮಾಂಬೆಯರ ಸುತನಾಗಿ ನರಸಿಂಹ ಹುಟ್ಟಿದ ವಿಚಾರ ತಿಳಿಸಿದ್ದಾಳೆ. ಇವನ ಮಗ ಅಚ್ಯುತರಾಯನೇ ಕಾವ್ಯದ ನಾಯಕ. ಕಾವ್ಯದ ಆರಂಭದಲ್ಲಿ ನರಸಿಂಹನ ರೂಪ, ಗುಣ, ಪರಾಕ್ರಮ, ದಿಗ್ವಿಜಯಗಳು, ಚೋಳದೇಶ, ಸಮುದ್ರ, ಕಾವೇರಿ ಹಾಗೂ ಯುದ್ಧದ ವರ್ಣನೆಗಳು ವಿವರವಾಗಿ ಬಂದಿವೆ. ದಿಗ್ವಿಜಯದನಂತರ ನರಸಿಂಹನು ವಿದ್ಯಾನಗರಕ್ಕೆ ಹಿಂದಿರುಗಿ ಬಂರುತ್ತಾನೆ. ಆನಂತರ ಓಮಾಂಬೆಯೊಂದಿಗೆ ವಿವಾಹ ನೆರವೇರುತ್ತದೆ. ಮುಂದೆ ಅಚ್ಯುತರಾಯನ ಜನನ, ತಾರುಣ್ಯ, ವಿದ್ಯಾಭ್ಯಾಸದ ವಿವರಗಳು ಬಂದಿವೆ. ನರಸಿಂಹನ ಮರಣಾನಂತರ, ಮಗ ಅಚ್ಯುತರಾಯನು ವಿಜಯನಗರದ ಸಿಂಹಾಸನವನ್ನೇರುತ್ತಾನೆ. ಭವಾನೀ ಮಂದಿರಕ್ಕೆ ಬಂದಾಗ ಒಮ್ಮೆ ರಾಜಕುಮಾರಿ ವರದಾಂಬೆಯ

ಭೇಟಿಯಾಗುತ್ತದೆ, ಒಬ್ಬರನ್ನೊಬ್ಬರು ಕಂಡು ಮನಸೋತು ಪರಿತಪಿಸುವ ಶೃಂಗಾರದ ಚಿತ್ರಣವನ್ನು ಕವಯತ್ರಿಯು ವಿಸ್ತಾರವಾಗಿ ನೀಡಿದ್ದಾಳೆ, ವಿವಾಹದೊಂದಿಗೆ ಇವರ ಪ್ರೇಮ ಪ್ರಕರಣವು ಸುಖಾಂತ ಗೊಳ್ಳುತ್ತದೆ, ಮುಂದೆ ಚಿನವೆಂಕಟಾದ್ರಿಯ ಜನನ, ಯುವರಾಜ ಪಟ್ಟಾಭಿಷೇಕದೊಂದಿಗೆ ಕಾವ್ಯ ಮುಕ್ತಾಯವಾಗುತ್ತದೆ.

**ಕಾವ್ಯ:** ಬೇರೆ ಕೃತಿಗಳಲ್ಲಿ ಕಂಡುಬರುವಂತೆ ಈ ಕಾವ್ಯವು ಆಶ್ವಾಸ ಅಥವಾ ಪರಿಚ್ಛೇದಗಳಲ್ಲಿ ವಿಭಕ್ತವಾಗದೆ ಒಂದೇ ಪ್ರಕರಣವಾಗಿರುವ ರುಚಿರ ಗ್ರಂಥವಾಗಿದೆ[೫೭], ಈ ಇಡೀ ಕಾವ್ಯದ ಮೊದಲರ್ಧವನ್ನು ಅಚ್ಯುತರಾಯನ ತಂದೆ ನರಸಿಂಹನ ದಕ್ಷಿಣ ಭಾರತದ – ವಿಶೇಷವಾಗಿ ಚೋಳಮಂಡಲದ ದಿಗ್ವಿಜಯದ ವರ್ಣನೆ ಎಂದೂ, ದ್ವಿತೀಯಾರ್ಧವನ್ನು ನರಸಿಂಹನನಂತರ ಸಿಂಹಾಸನದಲ್ಲಿ ಅಭಿಷಿಕ್ತನಾದ ಅಚ್ಯುತರಾಯನು ರಾಜಕುಮಾರಿ ವರದಾಂಬಿಕಾ ಎಂಬ ಸುಂದರಿಯನ್ನು ಕಂಡು ಮೋಹಗೊಂಡು ಅವಳೊಡನೆ ವಿವಾಹವಾಗುವ ವರ್ಣನೆ ಎಂದು ಎರಡು ವಿಭಾಗದಲ್ಲಿ ಕಾಣಬಹುದು.

ಈ ಕಥೆಯನ್ನು ಕವಯತ್ರಿಯು ತನ್ನ ಪ್ರತಿಭೆಯಿಂದ ವಿಸ್ತಾರವಾಗಿ ರಚಿಸಿದ್ದಾಳೆ. ಪದ್ಯಕ್ಕಿಂತಲೂ ಗದ್ಯವೇ ಇದರಲ್ಲಿ ಪ್ರಚುರವಾಗಿದೆ. ಇಲ್ಲಿನ ಪ್ರೌಢವಾದ, ಸಮಾಸಬಹುಳವಾದ ಶೈಲಿ ಪಾಂಡಿತ್ಯಪೂರ್ಣವೆನಿಸಿದೆ. ವರ್ಣನೆ ಕಲೆಯಲ್ಲಿಯೂ ತಿರುಮಲಾಂಬಾ ವಿಶೇಷವಾದ ಸಫಲತೆಯನ್ನು ಗಳಿಸಿದ್ದಾಳೆನ್ನುವ ಹಿರಿಮೆ ಈ ಕಾವ್ಯ ಅವಳಿಗೆ ತಂದುಕೊಟ್ಟಿದೆ. ತಿರುಮಲಾಂಬೆಯು, ರಾಜ ನರಸಿಂಹನ ಯುದ್ಧದ ವರ್ಣನೆಯಲ್ಲಿ ವೀರರಸ, ಪ್ರಣಯದ ಕಥೆಯ ಚಿತ್ರಣದಲ್ಲಿ ಶೃಂಗಾರರಸ ಮತ್ತು ಋತುವರ್ಣನೆಯಲ್ಲಿ ಚಮತ್ಕಾರದ ವಿನ್ಯಾಸವನ್ನು ತಂದಿದ್ದಾಳೆ. "ಅಚ್ಯುತರಾಯನ ಅಂಗ ಪ್ರತ್ಯಂಗಗಳ ವರ್ಣನೆಯು ಬಹು ಉತ್ಸಾಹದಿಂದ ಕೂಡಿದೆ. ಈ ವರ್ಣನೆಯು ಎಷ್ಟು ಸುಂದರ ಹಾಗೂ ರೋಚಕವಾಗಿದೆಯೆಂದರೆ, ಪ್ರಾಯಃ ಯಾವ ಸ್ತ್ರೀಯೂ ಪುರುಷನ ವರ್ಣನೆಯನ್ನು ಇಷ್ಟು ಸಾಂಗೋಪಾಂಗವಾಗಿ ಮಾಡಿರುವುದು ಕಂಡುಬರುವುದಿಲ್ಲ"[೫೮] ಕವಯತ್ರಿಗಿರುವ ಸಂಸ್ಕೃತ ಭಾಷೆಯ ಮೇಲಿನ ಪ್ರಭುತ್ವ, ಅಲಂಕಾರಗಳ ವಿನ್ಯಾಸದಲ್ಲಿನ ಅದ್ಭುತ ಸಾಮರ್ಥ್ಯ, ಈ ಕಾವ್ಯವನ್ನು ಚಂಪೂಕಾವ್ಯಗಳಲ್ಲಿ ಉತ್ತಮವಾದ ಸ್ಥಾನದಲ್ಲಿರಿಸಲು ಕಾಣರವಾಗಿದೆ.

**ಕರಕೃತಮಪರಾಧಂ ಕ್ಷಂತುಮರ್ಹಂತಿ ಸಂತಃ**
**ಅಕ್ಷರಂ ಯತ್ ಪರಿಭ್ರಷ್ಟಂ ಮಾತ್ರಾಹೀನಂ ತು ಯದ್ ಭವೇತ್ ।**
**ಕ್ಷಂತುಮರ್ಹಂತಿ ವಿದ್ವಾಂಸಃ ಕ್ಷಮಾ ಹಿ ವಿದುಷಾಂ ಧನಮ್ ॥**

ಅಕ್ಷರ ಅಥವಾ ಮಾತ್ರೆ ಬಿಟ್ಟುಹೋಗಿದ್ದರೆ ವಿದ್ವಾಂಸರು ಕ್ಷಮಿಸಬೇಕು ಎಂದು ಕವಯತ್ರಿ ತಿರುಮಲಾಂಬಳು ವಿನಮ್ರತೆಯಿಂದ ಕೇಳಿದ್ದಾಳೆ.

**ಐತಿಹಾಸಿಕ ವಿಚಾರ:** **'**ವರದಾಂಬಿಕೆಯ ಪರಿಣಯ ಚಂಪು**'** ಕೃತಿಯೊಂದು ಐತಿಹಾಸಿಕ ಕಾವ್ಯ ವೆನಿಸಿರುವುದರಿಂದ ಇಲ್ಲಿನ ಐತಿಹಾಸಿಕ ವಿಚಾರಗಳನ್ನು ವಿಶ್ಲೇಷಿಸಬೇಕಾಗಿದೆ. ಕಾವ್ಯದ ಕಥೆಯು ಕ್ರಿ.ಶ.೧೪೯೭ ರಿಂದ ೧೫೦೩ರ ವರೆಗೆ ಆಳಿದ ನರಸನಾಯಕ ಮತ್ತು ೧೫೩೦–೧೫೪೨ರ ವರೆಗೆ ಆಳಿದ ಅವನ ಮಗ ಅಚ್ಯುತದೇವರಾಯನ ಕಾಲದ ಘಟನೆಗಳಿಂದ ಕೂಡಿದೆ. ಅಚ್ಯುತರಾಯನ ಮಗ ಚಿನ್ನವೆಂಕಟಾದ್ರಿಗೆ ಯುವರಾಜ ಪಟ್ಟಾಭಿಷೇಕ ನಡೆಯುವಲ್ಲಿ ಕಾವ್ಯ ಮುಗಿಯುತ್ತದೆ.

ವಿಜಯನಗರವನ್ನಾಳಿದ ಸಂಗಮ, ಸಾಳ್ವ, ತುಳುವ ಹಾಗೂ ಅರವೀಡು ವಂಶಗಳಲ್ಲಿ ನರಸನಾಯಕನು ತುಳುವ ವಂಶದ ಪ್ರಸಿದ್ಧ ಅರಸು ಕೃಷ್ಣದೇವರಾಯನ ತಂದೆ. ನರಸನಾಯಕನಿಗೆ ಮೂರುಜನ ಹೆಂಡತಿಯರಿದ್ದರೂ ಮೂರನೆಯವಳಾದ, ಅಚ್ಯುತರಾಯನ ತಾಯಿ ಓಮಾಂಬೆಯನ್ನುಳಿದು ಇತರರ ಹೆಸರನ್ನು ಕಾವ್ಯದಲ್ಲಿ ಹೇಳಿಲ್ಲ. ಅಚ್ಯುತರಾಯನಿಗಿಂತ ಮೊದಲು, ೨೦ ವರ್ಷ ವಿಜಯನಗರದ ರಾಜ್ಯವಾಳಿದ್ದ ಕೃಷ್ಣದೇವರಾಯನಾಗಲೀ, ಅವನ

ಅಣ್ಣ ವೀರನರಸಿಂಹನ ಉಲ್ಲೇಖವಾಗಲೀ ಕೃತಿಯಲ್ಲಿಲ್ಲ. ಹಲವು ರಾಜಕೀಯ ಕಾರಣಗಳಿಂದಾಗಿ, ವೈಮನಸ್ಯ ದಿಂದಾಗಿ ಉಲ್ಲೇಖ ಮಾಡಿರಲಿಕ್ಕಿಲ್ಲ[೫೯].

ನರಸರಾಜ ಮತ್ತು ಅಚ್ಯುತರಾಯರ ನಡುವಿನ ಐತಿಹಾಸಿಕ ಘಟನೆಗಳನ್ನು ಉಲ್ಲೇಖಿಸಿಲ್ಲದಿರುವುದು ಐತಿಹಾಸಿಕ ಕೊರತೆಯಾಗಿದೆ.

ತಿರುಮಲಾಂಬೆಯು ತನ್ನ ಕಾವ್ಯದ ೫೧–೫೫ರ ವರೆಗಿನ ಪದ್ಯಗಳಲ್ಲಿ ವಿಜಯನಗರದ ಸಿಂಹಾಸನವನ್ನೇರಿದ ತನ್ನ ಮಾವ ನರಸಿಂಹ ನಡೆಸಿದ ದಿಗ್ವಿಜಯ ಕುರಿತಾಗಿ ತಿಳಿಸಿದ್ದಾಳೆ. ಆದರೆ ಇದನ್ನು ಇತಿಹಾಸಕಾರರು ತಳ್ಳಿಹಾಕುತ್ತಾರೆ.[೬೦] ಮೊದಲನೆಯದಾಗಿ ತುಳುವ ನರಸಿಂಹನು ವಿಜಯನಗರದ ಸಿಂಹಾಸವನ್ನು ಏರಿದವನೇ ಅಲ್ಲ. ಕ್ರಿ.ಶ.೧೪೯೫ರಲ್ಲಿ ಸೇನಾಪತಿಯಾಗಿ ಆಳ್ವಿಕೆ ನಡೆಸುತ್ತಿದ್ದ ಈತ, ಕ್ರಿ.ಶ.೧೪೯೬ರಲ್ಲಿ ಪ್ರಧಾನಿ ಯಾಗಿದ್ದನೆಂದು ಮಾಗಡಿಯ ೩೩ನೆಯ ಶಾಸನ ತಿಳಿಸುತ್ತದೆ[೬೧]. ಮುಂದೆ ೧೫೦೩ ರಲ್ಲಿ ಸಾಳ್ವ ಇಮ್ಮಡಿ ನರಸಿಂಹನ ಅಧೀನದಲ್ಲಿ ಕೆಲವು ಪ್ರದೇಶಗಳನ್ನು ಆಳ್ವಿಕೆ ನಡೆಸುತಿದ್ದ ವೇಳೆಯಲ್ಲಿ ಶಿವಲೋಕಕ್ಕೆ ಸಂದ ವಿಚಾರವನ್ನು ಶಾಸನವೊಂದು ತಿಳಿಸುತ್ತದೆ[೬೨]. ಈ ಎಲ್ಲ ಆಧಾರಗಳಿಂಗ ತುಳುವ ನರಸಿಂಹನಾಯಕ ವಿಜಯನಗರದ ಅಭಿಷಿಕ್ತ ದೊರೆ ಯಾಗಲೀ, ಸ್ವತಂತ್ರ ರಾಜ್ಯಾಡಳಿತ ನಡೆಸಿದವನಾಗಲೀ ಆಗಿರಲಿಲ್ಲ. ಆದರೆ ಇವನ ನಂತರ ಇವನ ಹಿರಿಯ ಹೆಂಡತಿಯ ಮಕ್ಕಳಾದ ಭುಜಬಲ ನರಸಿಂಹ ಹಾಗೂ ಪ್ರಸಿದ್ಧ ಅರಸು ಕೃಷ್ಣದೇವರಾಯರು ಕ್ರಮವಾಗಿ ನಾಲ್ಕು ಹಾಗೂ ಇಪ್ಪತ್ತು ವರ್ಷಗಳ ಕಾಲ ವಿಜಯನಗರದ ಗದ್ದುಗೆ ಏರಿ ಆಳ್ವಿಕೆ ನಡೆಸಿದರು.

ತಿರುಮಲಾಂಬೆಯು ನರಸಿಂಹನಾಯಕನ ನಂತರ ಅಚ್ಯುತರಾಯನ ಸಿಂಹಾಸನವನ್ನೇರಿದ ವಿಚಾರ ತಿಳಿಸಿ ಕಾವ್ಯವನ್ನು ಮುಂದುವರೆಸಿದ್ದಾಳೆ.

ಕಾವ್ಯದ ಮೊದಲರ್ಧವು ಕೇವಲ ಶಬ್ದಾಡಂಭರದಿಂದ ಕೂಡಿದ್ದರು ವರ್ಣನಾಪ್ರಧಾನವೂ ಆಗಿದೆ. ಮುಂದಿನ ಭಾಗದಲ್ಲಿ ಕಥೆ ಹೆಚ್ಚು ಹದವಾಗಿ ಬೆಳೆದಿದೆ, ಶಬ್ದಗಳ ಅಬ್ಬರ ತುಸು ಕಡಿಮೆಯಾಗಿದೆ. ಕಲ್ಪನೆಗಳಲ್ಲಿ ಒತ್ತಾಯ ಕಡಿಮೆಯಾಗುತ್ತ ನಡೆದು ಸಹಜತೆ ಮೂಡುತ್ತಾ ಬಂದಿದೆ. ಗದ್ಯಪದ್ಯಗಳ ಸಾಮರಸ್ಯ ಹೆಚ್ಚಿದೆ. ಕೇವಲ ಉದ್ದುದ್ದಾದ ವರ್ಣನೆಗಳು ಕಡಿಮೆಯಾಗಿ ಪಾತ್ರಗಳ ಸಂಖ್ಯೆ ಹೆಚ್ಚಿ ನಡುನಡುವೆ ಸಂವಾದಗಳು ಕೂಡಿಕೊಂಡಿವೆ. ಮೊದಲಭಾಗದಲ್ಲಿ ಕವಯತ್ರಿಯು ಸಂಸ್ಕೃತಭಾಷೆಯ ಮೇಲೆ ತನಗಿರುವ ಪ್ರಭುತ್ವವನ್ನು ತೋರಿಸುವ ಚಾಪಲ್ಯವೇ ಹೆಚ್ಚಾಗಿದ್ದು ಸಹಜ ಸುಂದರ ಕಾವ್ಯ ನಿರೂಪಣೆಯ ಕಡೆಗೆ ಅಷ್ಟೊಂದು ಗಮನಹರಿಸಿಲ್ಲದಿರುವುದನ್ನು ಗಮನಿಸಬಹುದು.

"ಬಹುಶಃ ಕವಯತ್ರಿಯು ಕಾವ್ಯದ ಮೊದಲಿನ ಭಾಗವನ್ನು ಬರೆದು ಕೆಲಕಾಲದ ನಂತರ ಮುಂದಿನ ಭಾಗವನ್ನು ಬರೆದಿರಬೇಕು. ಕಾವ್ಯವನ್ನು ಬರೆಯಲು ಆರಂಭಿಸುವಾಗ ತುಳು ಮನೆತನದ ಸಂಸ್ಥಾಪಕ ನರಸಿಂಹನ ಚರಿತ್ರೆಯಿಂದಾರಂಭಿಸಿ ವಿಸ್ತಾರವಾಗಿ ಬರೆಯುವ ಉದ್ದೇಶವನ್ನಿಟ್ಟುಕೊಂಡು ನರಸಿಂಹನ ದಿಗ್ವಿಜಯವೇ ಮೊದಲಾದುವುಗಳನ್ನು ದೀರ್ಘವಾಗಿ ಬರೆದಿರಬೇಕು. ಆನಂತರದ ರಾಜಕೀಯ ಕಾರಣಗಳಿಂದ ನಡುವಿನ ಕೆಲವು ವಿಚಾರಗಳನ್ನು ಬಿಟ್ಟು ಕೇವಲ ಅಚ್ಯುತರಾಯನ ವೃತ್ತಾಂತವನ್ನು ಮುಂದುವರೆಸಿರಬೇಕು"[೬೩]

ಪ್ರಾರಂಭದ ಭಾಗದಲ್ಲಿ ಬಾಣನ ಗದ್ಯಶೈಲಿಯ ಪ್ರಭಾವವಿದ್ದಂತಿದೆ. ಬಾಣನ ಕೃತಿಯಲ್ಲಿ ಕಂಡು ಬರುವಂತೆ ಆರೆಂಟು ಸಾಲುಗಳ ಸಮಾಸ ಇವಳ ಕಾವ್ಯದಲ್ಲಿಯೂ ಇದೆ (ಪು. ೩೨೭). ದೀರ್ಘ ವರ್ಣನೆಯ ಕೊನೆಗೆ ಶ್ಲೇಷ, ವಿರೋಧಾಭಾಸ ಇತ್ಯಾದಿ ಅಲಂಕಾರಗಳನ್ನು ಸೇರಿಸುವ ಸಂಪ್ರದಾಯವನ್ನು ಅನುಸರಿಸಿದ್ದಾಳೆ.

ಗದ್ಯಲಕ್ಷಣಗಳಾದ ಧೀರ್ಘ ಸಮಾಸಗಳು, ಉಪಮೆ, ಉತ್ಪ್ರೇಕ್ಷಾ, ರೂಪಕದಿ ಅಲಂಕಾರಗಳ ಸರಮಾಲೆ, ಜೊತೆಗೆ ಶಬ್ದಾಲಂಕಾರಗಳೂ ಹೇರಳವಾಗಿವೆ. ನರಸಿಂಹನದಿಗ್ವಿಜಯದ ಸಂದರ್ಭದಲ್ಲಿ ಬರುವ ತುಂಡೀರ ದೇಶದ ವರ್ಣನೆಯ ಒಂದು ಸಮಾಸಪದ, ಸಂಸ್ಕೃತ ಗದ್ಯಕಾವ್ಯಗಳಲ್ಲೇ ಅತ್ಯಂತ ದೀರ್ಘವಾದುದು ಎನಿಸಿದೆ[೬೪].

ಇತಿಹಾಸದಲ್ಲಿ ತಿಳಿದು ಬರುವ ಪ್ರಕಾರ ನರಸಿಂಹನ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯವು ಕರ್ನಾಟಕ, ಆಂಧ್ರ ಮತ್ತು ಒರಿಸ್ಸಾದ ಕೆಲವು ಭಾಗಗಳಷ್ಟಕ್ಕೆ ಮಾತ್ರ ಸೀಮಿತವಗಿತ್ತು. ಆದರೆ ತಿರುಮಲಾಂಬೆಯ ಕಾಲ್ಪನಿಕ ವರ್ಣನೆಯಲ್ಲಿ ನರಸಿಂಹ ದಿಗ್ವಿಜಯ ಹೊರಟು ಆಸೇತು ಹಿಮಾಚಲವಾದ ಇಡೀ ಭಾರತದ ಭೂಮಿಯನ್ನೇ ಗೆದ್ದವನಾಗಿದ್ದಾನೆ.

**ಕಾವ್ಯಾಂಶ:**

ಪದ್ಯಗಳಲ್ಲಿ ಕವಿಸಮಯಗಳನ್ನು ಧಾರಾಳವಾಗಿ ಬಳಸಿದ್ದರೂ, ಕಲ್ಪನೆಯ ನಾವಿನ್ಯತೆಯಿಂದ ಅಲ್ಲಲ್ಲಿ ಹೊಸತನ ಮಿಂಚಿದೆ. ಉದ್ಯಾನವನದ ಈ ವರ್ಣನೆಯನ್ನು ಉದಾಹರಣೆಗೆ ನೋಡಬಹುದು

**ತನ್ವನಾ ಮೃದುಚಂಕ್ರಮಾನ್ ವನಲತಾಧಾತ್ರೀ ಪ್ರವಾಲಾಂಗುಲೀ ರಾಲಂಬ್ಯ ಸ್ಮಯಮಾನಗುಚ್ಛನಯನೈರಾಲೋಕಿತಶ್ಯಾಭಿಃ ।**
**ಕ್ರೀಡತ್ ಷಟ್ ಪದ–ಕಿಂಕಿಣೀ ಮುಖರಿತಂ ಕ್ಷೀರ್ತ್ವಾ ಪರಾಗಾನ್ ಮುಹೂರ್ವಲ್ಗಂತಃ ಸ್ಪೃಹಣೀಯ ಶೈಶವದಶಾ**
**ವಾತಾಸ್ಸಮಾನಂದಯನ್ ॥**

ವನಲತೆಗಳೆಂಬ ದಾಯಿಗಳ ಚಿಗುರು ಕೈಗಳನ್ನು ಹಿಡಿದು ಮೃದುವಾಗಿ ಅತ್ತಿತ್ತ ಅಡ್ಡಾಡುತ್ತಾ, ಅರಳಿದ ಪುಷ್ಪಗುಚ್ಛಗಳೆಂಬ ಕಣ್ಣುಗಳಿಂದ ತರುಗಳು ನೋಡುತ್ತಿರಲಾಗಿ, ಝೇಂಕರಿಸುತ್ತಿರುವ ಭ್ರಮರಗಳೆಂಬ ಕಾಲುಗೆಜ್ಜೆಯ ಧ್ವನಿಯಿಂದ ಶಬ್ದಗೈಯುತ್ತಾ ಪುಷ್ಪಪರಾಗವೆಂಬ ಧೂಳನ್ನು ಎಬ್ಬಿಸುತ್ತಾ ಓಡುತ್ತಿರುವಂತೆ ತೋರುವ ಅತ್ಯಾಕರ್ಷಕವಾದ ಶೈಶವಲೀಲೆಯನ್ನು ಪ್ರಕಟಿಸುತ್ತಿದ್ದ ಮೆಲು ಗಾಳಿಯು ರಾಜನನ್ನು ಸಂತೋಷಗೊಳಿಸಿತು. "ಈ ತರು–ಲತೆಗಳೊಡನೆ ಆಟವಾಡುತ್ತಿರುವ ಮಂದಾನಿಲವನ್ನಾಧರಿಸಿದ ಈ ಕಲ್ಪನೆಯಲ್ಲಿ ಸುಕುಮಾರವಾದ ಶೈಶವ ರೀತಿ ತಾನೇ ತಾನಾಗಿ ಮೆರೆದಿದೆ."[೬೫].

ಚಿನವೆಂಕಟಾದ್ರಿಯನ್ನು ಗರ್ಭದಲ್ಲಿ ಹೊತ್ತ ವರದಾಂಬಿಕೆಯು ಪಾಂಡುರವರ್ಣಚ್ಛಾಯೆಯನ್ನು ಕವಯತ್ರಿಯು ಹೊಸದೊಂದು ರೀತಿಯಲ್ಲಿ ಉತ್ಪ್ರೇಕ್ಷಿಸಿದ್ದಾಳೆ

**ಉತ್ಪಲದೃಶೋ ಗರ್ಭವರ್ತಿನಶ್ಚಕ್ರವರ್ತಿನಃ ಕುಮಾರಸ್ಯ ಸಮುದ್ರಿಕ್ತ ಸತ್ವ ಗುಣೋನ್ಮೇಷ ವಿಶೇಷೇಣೇವ ಶನೈಃ**
**ಪಾಂಡಿಮಾನಮಪುಷತ್ ವಪುರವಿರಲಮ್ ॥**

ಗರ್ಭದಲ್ಲಿ ಶಿಶುವಿನ, ಸತ್ವಗುಣದ ಉತ್ಕರ್ಷವನ್ನು ತೋರುತ್ತಿದೆಯೋ ಎಂಬಂತೆ, ತಾಯಿಯ ಮೈ ಬಿಳುಪಾಗ ತೊಡಗಿತು ಎಂದಿಲ್ಲಿ ವಿಶೇಷ ರೀತಿಯಲ್ಲಿ ಬಣ್ಣಿಸಿದ್ದಾಳೆ.

ಉದ್ದುದ್ದ ಸಮಾಸ ಪದಗಳು, ಅಸಂಖ್ಯ ವಿಶೇಷಣಗಳು ಪಂಡಿತಪ್ರಿಯವೆನಿಸಿದರೂ ಕ್ಲಿಷ್ಟವಾಗಿವೆ, ಕೆಲವೊಮ್ಮೆ ಬೇಸರವನ್ನುಂಟುಮಾಡುತ್ತದೆ. ಆದರೆ ನಡುವೆ ಪದ್ಯಗಳು ಬಂದು ಬೇಸರ ನೀಗಿಸುತ್ತದೆ. ಅನೇಕಕಡೆ ಅರ್ಥಕ್ಕಿಂತ ಪ್ರಾಸವೇ ಪ್ರಧಾನವಾಗಿರುವುದು ಬೇಸರ ತರಿಸುತ್ತದಾದರೂ, ಅರ್ಥವತ್ತಾದ ಮಾತುಗಳು ಸೊಗಸಾಗಿ ಬಂದಿವೆ. ಕಾವ್ಯದ ಮೊದಲಭಾಗದಲ್ಲಿ ಕಥೆಯ ಬೆಳವಣಿಗೆಯೇ ಇಲ್ಲದೆ ವರ್ಣನೆಯೇ ತುಂಬಿವೆ. ಮುಂದಿನ ಭಾಗದಲ್ಲಿ ಕಥೆ ವರ್ಣನೆಗಳು ಹಾಸುಹೊಕ್ಕಾಗಿ ಬಂದಿದೆ.

ಕವಯತ್ರಿಯ ಪಾಂಡಿತ್ಯ ಪ್ರತಿಭೆ, ಲೋಕಾನುಭವ, ಮಾನವಸ್ವಭಾವ ಪರಿಚಯ ವರ್ಣನಾಕೌಶಲ್ಯ ಮೊದಲಾದವುಗಳನ್ನು ಕೆಳಗಿನ ಕೆಲವು ಸಂದರ್ಭಗಳಿಂದ ತಿಳಿದುಕೊಳ್ಳಬಹುದು.

"ನರಸರಾಜನ ರಾಜ್ಯದಲ್ಲಿ ಸಮುದ್ರದ ತೆರೆಗಳಲ್ಲಿ ಡೊಂಕು, ಕವಿತಾರಚನೆಯಲ್ಲಿ ಅರ್ಥಾಭಿಲಾಷೆಯೂ, ಛಂದಸ್ಸಿನಲ್ಲಿ ವಿಷಮ ವೃತ್ತವು, ಭ್ರಮರಗಳಲ್ಲಿ ಪಕ್ಷಪಾತವು, ಆನೆಗಳಲ್ಲಿ ಮದವು ...... ಕಾಂತೆಯರ ಕೂದಲಲ್ಲಿ ಕುಟಿಲತೆ–ಚಂಚಲತೆಗಳೂ, ತುಟಿಯಲ್ಲಿ ರಾಗವು, ನಡುವಿನಲ್ಲಿ ಶೂನ್ಯತೆ ಇತ್ತು" ಎಂದು ಕವಯತ್ರಿ ವರ್ಣಿಸುತ್ತಾಳೆ.

ಮಹಾಕವಿಗಳ ಪರಂಪರೆಯಲ್ಲಿ ಬಂದ ಇಂತಹ ವರ್ಣನೆಯನ್ನು ಈ ಕಾವ್ಯದಲ್ಲಿ ಕಾಣಬಹುದು. ಇದು, ಕವಯತ್ರಿಯ ಸಾಹಿತ್ಯ–ಶಾಸ್ತ್ರವ್ಯಾಸಂಗದ ಕುರುಹಾಗಿದೆ. ಕಾವೇರಿ ನದಿಯ ವರ್ಣನೆ ಬಂದಾಗಲೂ ಶ್ಲೇಷಾಲಂಕಾರ ತುಂಬಿ ಬಂದಿದೆ. ನರಸಿಂಹರಾಜನು ವಿಜಯ ಯಾತ್ರೆಗೆ ಹೊರಟಾಗ ದಾರಿಯಲ್ಲಿ ಕಂಡ ಕಾವೇರಿಯನ್ನು ಈ ರೀತಿಯಾಗಿ ಬಣ್ಣಿಸಿದ್ದಾಳೆ. **"ಸಾಂದ್ರತರತಟ ಮಹೀರುಹಾಂತರ ನಿಪತದರವಿಂದ ಬಂಧು ಮಯೂಖದಂಡ ಸಂದಿತ ಪರ್ಯಂತಂತತ ಪರಿವರ್ತಮಾನ ಜಲಾವರ್ತ ಚಕ್ರ ನಿರ್ವರ್ತಿ ಬಹಿರ್ವಿಸ್ತೃತ ಬಹುವಿಕಲಶಸಾರ್ಥ ಸಮರ್ಥನೀಯ ಶತಪತ್ರ ಮುಕುಲಜಾಲ ವಿಚಿತ್ರಾಮ್ ನಿದ್ರಾಂಭೋಜ ರಾಜಿವ್ಯಾಜ ವಿವರವಿರಾಜಿತ ಗಂಭೀರತಾ ನಿಷ್ಪಂದನೀರ ಪೂರ ವಿನೋದನ ಸಾಧನ ಫಲಂ ಕಾಂತರತರಲಭಸಲ ಕುಲನೀಲ ಮಣಿಜಾಲ ಪ್ರತಿಕ್ಷಣ ನಿಕ್ಷೇಪಣೋತ್ ಕ್ಷೇಪಣವಿಧಿ ಲಕ್ಷಣ ಪವನನವಶಕ್ಷು ಭಿತಾವನ ಮದ್ವಿಪಟಭುಜ ಸಲಕ್ಷ್ಮೀ ಕೋಭಯತಟಷೋಣೀರುಹ ಶ್ರೇಣಿಕಾಮ್** ।[೬೬] "ಕಾವೇರಿಯು ಪ್ರಶಸ್ತ ಪಾವನೆಯು.... ಯೋಗಿಗಳ ಚಿತ್ತದಂತೆ ಇನ್ನಿತರ ರಸಗಳನ್ನು ತೊರೆದು ಅಮೃತರುಚಿಯುಳ್ಳವಳು, ರಾಮ ಕಥೆಯಂತೆ ಬಹು ಲಹರಿ (ಬಹುಲ ಹರಿ)ಗಳುಳ್ಳವಳು, ನರ್ತಕಿಯಂತೆ ತೆರೆಗಳ ನಟನೆಯಿಂದ ಶೋಭಿಸುವವಳು, ಆಧ್ಯಾತ್ಮವಿದ್ಯೆಯಂತೆ ಹಂಸ (ಪರಮ ಹಂಸ) ಗತಿಯುಳ್ಳವಳು, ಸಮುದ್ರರಾಜನ ಪ್ರಧಾನ ಮಹಿಷಿ ಗಂಗೆಯನ್ನು ಮೀರಿಸಿದವಳು" ಎಂದು ಸೊಗಸಾಗಿ ವರ್ಣಿಸಿರುವಳು. ನದಿ, ಪರ್ವತ, ಋತುಗಳು, ಉದ್ಯಾನ ಮೊದಲಾದ ವರ್ಣನೆಗಳು ಸಾಂಪ್ರದಾಯಿಕವಾಗಿದ್ದರೂ, ಭಿನ್ನತೆ ತರುವುದು ಕವಿಗಳ ಸಾಮರ್ಥ್ಯವನ್ನು ತೋರುತ್ತದೆ. ಇಂತಹ ಕಡೆಗಳಲ್ಲಿ ವಿಮರ್ಶಕರ ಮೆಚ್ಚುಗೆಯನ್ನು ಕವಯತ್ರಿ ತಿರುಮಲಾಂಬೆ ಪಡೆದಿದ್ದಾಳೆ.

ನಿಸರ್ಗ ಸೌಂದರ್ಯವನ್ನು ಬಣ್ಣಿಸುವಂತೆ ವ್ಯಕ್ತಿಚಿತ್ರಣವನ್ನೂ ಕಟ್ಟಿಕೊಡುತ್ತಾಳೆ.

ಅಚ್ಯುತರಾಯನು ವಿನಯ, ನಯ, ವಿವೇಕ, ಪರಾಕ್ರಮಗಳಲ್ಲಿ ಅಚ್ಯುತನಾಗಿರುವನೆಂದು ಅವನಿಗೆ ಅವನ ತಂದೆ ನರಸಿಂಹನು ಆ ಹೆಸರನ್ನಿಟ್ಟನು ಎಂದು ಹೇಳಿದ್ದಾಳೆ. ಅನನ್ಯ ಸಾಮಾನ್ಯ ಸೌಜನ್ಯ ಕಾರುಣ್ಯ ದಾಕ್ಷಿಣ್ಯಾದಿಗುಣ ಶರಣ್ಯ, ಪುಣ್ಯತರ ಸರಣ್ಯ ಧೀನಮತಿ ವಿನ್ಯಾಸ, ನಿಯತಶುಭಾಚರಣ ಇತ್ಯಾದಿ ವಿಶೇಷಣಗಳಿಂದ ಈತನನ್ನು ಬಣ್ಣಿಸಿದ್ದಾಳೆ. ತರುಣ ಅಚ್ಯುತರಾಯನ ಎದೆಯು **'ಸಕಲ ಕಲಾ ಆಲಾಪ ಚಾತುರ್ಯ ಗಾಂಭೀರ್ಯ ಕರುಣಾರಸೌದಾರ್ಯ ಶೌರ್ಯಾರಾಧನ ವಿತರಣಾದಿ ಸ್ಪೃಹಣೀಯ ಮಹನೀಯ'** ಗುಣಗಳಿಗೆ ಅವಕಾಶಕೊಡುವುದಕ್ಕಾಗಿ ತುಂಬ ವಿಶಾಲವಾಗಿದ್ದಿತು. ಪರನಿಂದೆ ಪರನಾರೀವರ್ಣನೆ, ಚಾಡಿಗಳನ್ನು ತಡೆಯಲು ಕಟ್ಟಿಕೊಂಡ ಪ್ರಾಕಾರಗಳಂತೆ ಅವನ ಕಿವಿಗಳಿದ್ದವು. "ಅರಸು ಅಚ್ಯುತರಾಯನ ವಿಶೇಷಜ್ಞತೆಗೆ ವಿಲಾಸಸ್ಥಾನನೂ, ದಾನಕ್ಕೆ ವಿಶ್ವಾಸಭೂಮಿಯೂ, ಸುಶೀಲರಿಗೆ ಮೇರೆಯೂ, ಗಾಂಭೀರ್ಯಕ್ಕೆ ಆಶ್ರಯನೂ, ಸೌಜನ್ಯಕ್ಕೆ ರಕ್ಷಕನೂ, ಸುಚರಿತೆಗೆ ಆಗರನೂ, ಸಾಹಿತ್ಯ ಸಂಗೀತಗಳಿಗೆ ಸಂಕೇತಸ್ಥಾನನೂ, ಸೌಂದರ್ಯದ ರಾಶಿಯೂ, ಸತ್ಯವಚನಕ್ಕೆ ನಿತ್ಯವಿಲಾಸನೂ, ಎಲ್ಲ ಪ್ರಾಮಾಣಿಕ ಗುಣಗಳಿಗೆ ಆವಾಸಸ್ಥಾನನೂ ಆಗಿದ್ದನು" ಇತ್ಯಾದಿ ವರ್ಣನೆಗಳೂ **"ಅನುಚಿಂತತನಿಖಿಲ ಜನಹಿತ ಕೃತ್ಯ" "ಸೌಜನ್ಯ ಸೀಮಾವಧಿ"** ಇತ್ಯಾದಿ ವಿಶೇಷಣಗಳೂ ನಮ್ಮ ಕವಯತ್ರಿಯು ಚಿತ್ರಿಸಬೇಕೆಂದಿರುವ ಆದರ್ಶ ಮಾನವಸ್ವಭಾವದ ಕಲ್ಪನೆಯನ್ನು ತಂದುಕೊಡುತ್ತದೆ.

ತಿರುಮಲಾಂಬೆಯ ಕೃತಿಯು ವರ್ಣನಾಪ್ರಧಾನವಾಗಿದ್ದು ಸಂಸ್ಕೃತ ಭಾಷೆಯ ಮೇಲಿನ ತನ್ನ ಪಾಂಡಿತ್ಯ ಪ್ರದರ್ಶಿಸುವುದರಲ್ಲಿಯೇ ಗಮನೀಯವಾಗಿದ್ದರೂ ಕಥಾನಾಯಕನ ಶಬ್ದಚಿತ್ರಣದ ಪದರುಗಳಲ್ಲಿ ಮಾನವಸ್ವಭಾವ ಚಿತ್ರಣವೂ ಮೂಡಿ ಬಂದಂತೆ ಅವಳ ಇನ್ನಿತರ ವರ್ಣನೆಗಳಲ್ಲಿ ಅವಳ ನಿಸರ್ಗ ನಿರೀಕ್ಷಣೆಯೂ ಕಲ್ಪನೆಯ ಚಾತುರ್ಯವೂ ಪ್ರತಿಫಲಿತವಾಗಿದೆ.

**ಮುಹುಃ ಸರೋವಾರಿಷು ಕೇಲಿಲೋಲಾ ।ನಿಮಜ್ಜನೋನ್ಮಜ್ಜನಮಾಚರಂತೀ।**
**ಬಲಾಹಕಾಂತಃ ಪರಿದೃಶ್ಯಮಾನಾ । ಸೌದಾಮಿನೀವಾಜನಿ ಚಂಚಲಾಕ್ಷೀ ॥**

ಈ ಕೆಲವು ವರ್ಣನೆಗಳು ಇವಳ ಕಲ್ಪನಾ ಚಾತುರ್ಯವನ್ನೂ, ನಿಸರ್ಗ ಸೌಂದರ್ಯ ಪ್ರೇಮವನ್ನೂ ತೋರಿಸುತ್ತದೆ.

ಅಚ್ಯುತರಾಯನ ವರ್ಣನೆಯು ಆದರ್ಶ ರಾಜನ ಹಾಗೂ ಆದರ್ಶ ಮಾನವನ ವರ್ಣನೆಯಾಗಿದೆ. ಅಚ್ಯುತರಾಯನು 'ಸಕಲಕಲಾಪಚಾತುರ್ಯ ಗಾಂಭೀರ್ಯ ಕರುಣಾರಸ ಔದಾರ್ಯ ಶೌರ್ಯಾರಾಧನ ವಿತರಣಾದಿ ಸ್ಪೃಹಣೀಯ ಮಹನೀಯ'ಗುಣಗಳಿಗೆ ಆಗರದಂತಿದ್ದನು. ಅವನು ದಾನಕ್ಕೆ ವಿಶ್ವಾಸಭೂಮಿ. ಗಾಂಭೀರ್ಯಕ್ಕೆ ಆಶ್ರಯ ಸೌಜನ್ಯಕ್ಕೆ ರಕ್ಷಕ, ಸಾಹಿತ್ಯ-ಸಂಗೀತಗಳಿಗೆ ಆಧಾರ, ಸರ್ವಪ್ರಾಮಾಣಿಕ ಗುಣಗಳಿಗೆ ಆವಾಸಸ್ಥಾನವಾಗಿದ್ದನು. ಇಂತಹ ರಾಜನು ವರದಾಂಬಿಕೆಯನ್ನು ನೋಡಿದಾಗ, **"ನಿಯಂತ್ರಿತ ಇವ, ನಿಯಮಿತ ಇವ, ನಿರಭಿಜ್ಞ ಇವ, ನಿಶ್ಚಲಧ್ಯಾನಶೀಲ ಇವ, ನಿರುದ್ಧ ಮನೋವೃತ್ತಿಃ ನಿರ್ನಿಮೇಷ ವೀಕ್ಷಣಃ ಕ್ಷಣಮತಿಷ್ಠತ್"** ಎಂದು ಬಣ್ಣಿಸಿದ್ದಾಳೆ. ಸರೋಜಿನಿ ಮಹಿಷಿ ಅವರು, ಈ ಸಂದರ್ಭದಲ್ಲಿ **"ನ ಯಯೌ ನ ತಸ್ ಥೌ"** ಎಂದು ಕಾಲಿದಾಸನು ಎರಡೇ ಶಬ್ದದಲ್ಲಿ ಪಾರ್ವತಿಯ ಚಿತ್ರವನ್ನು ಕೊಟ್ಟುದು ಸ್ಮರಿಸಬಹುದು ಎಂದಿದ್ದಾರೆ.

ತಿರುಮಲಾಂಬೆಯ ಪದರಚನಾಪ್ರೌಢಿಮೆ, ಚಾತುರ್ಯ, ವರ್ಣನಾಕೌಶಲ್ಯಗಳು ಗ್ರಂಥದುದ್ದಕ್ಕೂ ವ್ಯಕ್ತವಾಗಿದೆ.

ಮುಗಿಲು ಕುಂಕುಮ ಕರಡಿಗೆ; ರವಿ ಅದರ ಮುಚ್ಚಳ; ತುಂಟ ಬಾಲಕ ಚಂದ್ರನು ಅದನ್ನು ತೆಗೆದುಬಿಟ್ಟನು! ಎಲ್ಲೆಡೆಗೂ ಕುಂಕುಮವೇ ಕುಂಕುಮ! ಸಂಧ್ಯಾರುಣರಾಗ! ಮನ್ಮಥನ ಚಟುವಟಿಕೆಗಳಿಗೆ ಪ್ರಾರಂಭ ಆಗ!

**ತ್ರಿಜಗದ್ ವಿಷಯೋತ್ಸವಂ ವಿಧಾತುಂ ಸ್ಮರದೇವಸ್ಯ ಸಮುದ್ಯತಃ ಪ್ರದೋಷಃ।**
**ಸ್ಫುರದಿಂದುಕರಾಂತರಾಪದೇಶಾದುದಯಸ್ತಂಭಮಲಂಬಯತ್ ಪತಾಕಾಮ್ ॥**
**.....ವಿಯನ್ ಮಘವ ನೀಲಕರಂಡಾತ್।**
**ಗಲಿತಂ ಯಥಾ ಘನಮದೃಶ್ಯತ ಸಂಧ್ಯಾ ॥**

**ವಸಂತಮಾಸದ ಬಣ್ಣನೆ**

**ಆಲಂಬ್ಯ ಕೋರಕಿತಕೋಮಲಚೂತಯಷ್ಟಿಮಾಸ್ವಾದ್ಯ ಕೇಲಿಸರಸಾಂ ಸರಸಾಂಬುಪೂರಮ್ ।**
**ಸರ್ವತ್ರ ಸೌರಭಭರಂ ವಿಧೃತಂ ವಿಕೀರ್ಯ ಶಾಂತಿಂ ಕಿಲಾಪನಯತಿ ಪ್ರಸೃತಃ ಸಮೀರಃ ॥**

ಮೊಗ್ಗು ಬಿಟ್ಟಿರುವ ಮಾವಿನಮರಗಳನ್ನು ಆಶ್ರಯಿಸುತ್ತಾ, ತಂಪಾಗಿರುವ ಸರೋವರದ ನೀರನ್ನು ಹಾಯ್ದು ಎಲ್ಲೆಡೆಯಲ್ಲಿಯೂ ಸುಗಂಧವನ್ನು ಬೀರುತ್ತಾ, ತಂಗಾಳಿಯು ಎಲ್ಲ ಶ್ರಮವನ್ನು ಹೋಗಲಾಡಿಸುತ್ತಿದೆ.

**ಬೆಳದಿಂಗಳ ವರ್ಣನೆ**

**ವೇಲಾತಿಪಾತೇನ ಪಯಃಪಯೋಧಿಃ ಜ್ಯೋತ್ಸ್ನಾಸಮುದ್ರಃ ಸುತರಾಂ ವಿಜಿತ್ಯ ।**
**ಅಪೂಪುರಜ್ಜೈತ್ರಶಶಾಂಕ ಶಂಕಂ ಪ್ರಾಪ್ತಶ್ಚ ತಾರಾಘನ ಪುಷ್ಪವೃಷ್ಟಿಮ್ ॥**

ಬೆಳದಿಂಗಳ ಸಮುದ್ರವು, ಎಲ್ಲೆಮೀರಿ ಹರಿದು ಕ್ಷೀರಸಂಬಂಧವನ್ನು ಜಯಿಸಿ (ತತ್ಫಲವಾಗಿ) ಶಶಾಂಕವೆಂಬ ಶಂಖಧ್ವನಿಯ ಸ್ವಾಗತವನ್ನೂ, ನಕ್ಷತ್ರಗಳೆಂಬ ಪುಷ್ಪವೃಷ್ಟಿಯನ್ನೂ ಪಡೆಯಿತು.

**ಅಲಂಕಾರ:** ಕಾವ್ಯದಲ್ಲಿನ ಕೆಲವು ಉಪಮಾಲಂಕಾರಗಳನ್ನು ಇಲ್ಲಿ ಗಮನಿಸಬಹುದು. "ಸರೋವರದಲ್ಲಿ ಜಲಕ್ರೀಡೆಯನ್ನಾಡುವಾಗ ಮುಳುಮುಳುಗಿ ಏಳುತ್ತಿದ್ದ ಓರ್ವ ಚಂಚಲಾಕ್ಷಿಯು ಮೋಡಗಳ ಅಂಚಿನಲ್ಲಿ ಮೂಡಿ ಮುಳುಗುವ ಮಿಂಚಿನ ಬಳ್ಳಿಯಂತೆ ಕಂಡಳು" ಎಂದು ಈ ಪದ್ಯದಲ್ಲಿ ಸಹಜ ಸುಂದರ ವರ್ಣನೆ ಬಂದಿದೆ.

**ಮುಹುಃ ಸರೋವಾರಿಷು ಕೇಲಿಲೋಲಾ ನಿಮಜ್ಜನೋನ್ಮಜ್ಜನಮಾಚರಂತೀ।**
**ಬಲಾಹಕಾಂತಃ ಪರಿದೃಶ್ಯಮಾನಾ ಸೌದಾಮಿನೀವಾಜನಿ ಚಂಚಲಾಕ್ಷೀ॥**
**ಸ್ಮಿತಾಮ್ ಪುರಸ್ತಾದತಿದೂರ ಏವ ।ಕ್ರಮೇಣ ಚ ಸ್ವಸ್ಯ ವಶಮ್ ಪ್ರಪನ್ನಾಮ್ ।**
**ವೋಢಾ ನವೋಢಾಮಿವ ಸಾನುರಾಗಃ ।ಛಾಯಾಮ್ ತರುಃ ಕ್ರೋಡಗತಾಮತಾನೀತ್ ॥**

"ವೃಕ್ಷವು ಮೊದಲು ದೂರವಿದ್ದು, ಕ್ರಮೇಣ ತನ್ನ ವಶದಲ್ಲಿ ಬರುತ್ತಿದ್ದ ನೆರಳನ್ನು, ಹೊಸದಾಗಿ ಮದುವೆಯಾದ ಯುವಕನು ತನ್ನ ಪ್ರಿಯೆಯನ್ನು ಬರಮಾಡಿಕೊಳ್ಳುವಂತೆ ಬರಮಾಡಿಕೊಂಡಿತು"

**ಅಭೇದರೂಪಕ**

**ಅರವಿಂದ ಬಂಧುಕುರವಿಂದಪಿಧಾನೇ ।ಚಪಲೇನ ಬಾಲಶಶಿನಾ ವ್ಯಪನೀತೇ ।**
**ಘುಸೃಣಮ್ ವಿಯನ್ಮಘವನೀಲಕರಂಡಾತ್ । ಗಲಿತಮ್ ಯಥಾ ಘನಮದೃಶ್ಯತ ಸಂಧ್ಯಾ ॥**

"ತುಂಟ ಬಾಲಕ ಚಂದಿರನು ಮುಗಿಲೆಂಬ ಕುಂಕುಮ ಕರಡಿಗೆಯ ಮುಚ್ಚಳದಂತಿದ್ದ ಸೂರ್ಯನನ್ನು ಕಿತ್ತೊಯ್ಯಲು ಮುಗಿಲಿನ ತುಂಬೆಲ್ಲ ಕುಂಕುಮ ಹರಡಿದಂತೆ ಕೆಂಬಣ್ಣ ಕಾಣುತ್ತದೆ"

ಸಂಧ್ಯಾಕಾಲದ ಸುಂದರವಾದ ಸಮಯ ಆಕಾಶವು ಕೆಂಪು ಬಣ್ಣದ ಛಾಯೆಯಿಂದ ಮಂಡಿತವಾಗಿದೆ. ಕವಯತ್ರಿಯ ದೃಷ್ಟಿಯು ಇದರಿಂದ ಆಹ್ಲಾದಿತವಾಗುತ್ತದೆ. ಮತ್ತು ಪ್ರಶಸ್ತವಾದ ಪದ್ಯದಲ್ಲಿ ಆ ಕಲ್ಪನೆಯ ವರ್ಣನೆ ಇರುತ್ತದೆ.

**ಅರವಿಂದ ಬಂಧು ಕುರವಿಂದ – ಪಿಧಾನೇ ಚಪಲೇನ ಬಾಲಶಶಿನಾ ವ್ಯಪನೀತೇ ।**
**ಘುಸೃಣಂ ವಿಯನ್ಮಘವನೀಲ ಕರಂಡಾತ್ ಗಲಿತಂ ಯಥಾಘನಮದೃಶ ಸಂಧ್ಯಾ ॥ (೧೫೭)**

ಆಕಾಶವು ನೀಲಿಮದ ಕೇಸರದಿಂದ ತುಂಬಿರುವ ಪೆಟ್ಟಿಗೆ; ಅದಕ್ಕೆ ಮಾಣಿಕ್ಯಮಣಿಯಿಂದ ಮಾಡಿರುವ ಮುಚ್ಚಳವು ಸ್ವಯಂ ಸೂರ್ಯ, ಚಂದ್ರನು ಉದಯಿಸುತ್ತಿದ್ದ ಹಾಗೇ ಸೂರ್ಯನು ಅಸ್ತಾಚಲದಲ್ಲಿ ಮುಳುಗಲು ಹೊರಟ, ಚಂದ್ರನು ತನ್ನ ಬಾಲ್ಯ ಸಹಜವಾದ ಚಪಲತೆಯಿಂದ ಆ ಮುಚ್ಚಳವನ್ನು ತೆಗೆದ. ನಾಲ್ಕು ಕಡೆಯೂ ಆ ಪೆಟ್ಟಿಗೆಯಿಂದ ಕೇಸರವು ಹರಡಿತು. ಪ್ರಾಕೃತ ದೃಶ್ಯದ ವಿಷಯದಲ್ಲಿ ನೂತನವಾದ ಈ ಕಲ್ಪನೆಯು ಬಹಳ ಮನೋಹರವಾಗಿದೆ.

**ಅರ್ಥಾಂತರನ್ಯಾಸ**

**ಗೃಹೀತಮಾತ್ರೇ ಯುಧಿ ಚೋಳಭೂಪೇ ಕೃಪಾನಿಧಿಃ ಶ್ರೀನರಸಿಂಹದೇವಃ।**
**ಸತಾಂ ನ್ಯಷೇಧತ್ ಸಮರಾತ್ಸ್ವಸೇನಾಂ ಸತಾಂ ಪ್ರಸಾದಃ ಸಹಜೋ ನ ರೋಷಃ ॥**

ಯುದ್ಧ ದಲ್ಲಿ ಚೋಳಭೂಪಾಲನು ಸೆರೆಸಿಕ್ಕಿದ ತರುವಾಯ, ಕೃಪಾಳುವಾದ ನರಸಿಂಹನು ತನ್ನ ಸೈನ್ಯದ ಹೋರಾಟವನ್ನು ನಿಷೇಧಿಸಿದನು. ಸಜ್ಜನರಿಗೆ ಅನುಗ್ರಹವು ಸಹಜ, ರೋಷವನ್ನಲ್ಲ.

## ಸ್ವಭಾವೋಕ್ತಿ

**ಹಸ್ತೇನ ಹಸ್ತಮ ವಕೃಷ್ಯ ರದೌ ರದಾಭ್ಯಾಂ ಸಂಘಟ್ಟ ನಿಷ್ಠುರಹತಿಸ್ಫುರಿತ ಸ್ಫುಲಿಂಗಮ್।**
**ಘಂಟಾನಿನಾದ ಮುಖರೌ ಕರಿಣೌ ತದೀಯೌ ಚಂಡಾಹವಕ್ರಮಚಮತ್ಕರಣಂ ವ್ಯಧತ್ತಾಮ್॥**

ಆ ಇಬ್ಬರು ರಾಜರ ಎರಡು ಆನೆಗಳು, ಸೊಂಡಿಲಿನಿಂದ ಎಳೆದಾಡುತ್ತಾ ಪರಸ್ಪರ ದಂತವನ್ನು ಉಜ್ಜಿ ಕಿಡಿಗಳನ್ನು ಹೊರಡಿಸುತ್ತಾ, ಕೊರಳಲ್ಲಿನ ಗಂಟೆಗಳ ಶಬ್ದ ಮಾಡಿಸುತ್ತಾ ಭಯಂಕರವಾದ ಯುದ್ಧದ ಚಮತ್ಕಾರವನ್ನು ಮಾಡಿದವು.

**ಕಾವ್ಯ ಪ್ರತಿಪಾದಿಸುವ ರಸಗಳು** : ವರದಾಂಬೆ ಅಚ್ಯುತರಾಯನ ಪ್ರೇಮ ಹಾಗೂ ವಿವಾಹವೇ ಕಾವ್ಯದ ಪ್ರಮುಖವಸ್ತುವಾಗಿರುವುದರಿಂದ ಶೃಂಗಾರರಸವೇ ಪ್ರಧಾನವಾಗಿ ಚಿತ್ರಿತವಾಗಿದೆ. ವೀರ, ರೌದ್ರಾದಿ ರಸಗಳು ಆನುಷಂಗಿಕವಾಗಿ ಬಂದಿವೆ. ಅಚ್ಯುತರಾಯ–ವರದಾಂಬಿಕೆಯರ ಮೊದಲ ನೋಟದಲ್ಲೇ ಅನುರಾಗವು ಅಂಕುರಿಸಿ, ಬೆಳೆದು ಪ್ರೇಮಿಗಳ ವಿಕ್ರಲಂಭ ಶೃಂಗಾರವು ಇಲ್ಲಿ ವರ್ಣಿತವಾಗಿದೆ.

ವಿದ್ವಾಂಸರು ಗುರುತಿಸಿರುವಂತೆ ಈ ಕೆಳಗಿನ ಪದ್ಯವು ಹೇತೋತ್ಪ್ರೇಕ್ಷೆ – ಸಮಾಸೋಕ್ತಿ ಇವೆರಡರ ಸಂಸೃಷ್ಟಿಯಿಂದ ಕೂಡಿದೆ. **ನಿರಂತರೇಂದಿಂದಿರ ರಸಂದೋಹಝುಂಕಾರ ಸೀತ್ಕಾರಾ, ಸಮುದಂಚಿತ ಬಾಲಮುಕುಲ ಮಿಷೇಣ, ಸಂಕುಚಿತಪಾಣಿಃ, ಅಧಿಗತಕಂಟಕ ಶ್ರೇಣೆರಂಬುಜಿನೀಪರಿಷದಂಬುಶೈತ್ಯಭಾರೇಣೇವ ಸಮೀರಣವಶೇನ ಸಮಾಲಂಬತ ಕಂಪಮ್**ಸತತವಾಗಿ ದುಂಬಿಗಳ ಹಿಂಡಿನ ಝೇಂಕಾರವೆಂಬ ಸೀತ್ಕಾರವನ್ನು ಕಮಲಿನಿಗಳ ಗುಂಪು ಹೊಂದಿತು. ಅದು ಮೇಲೆ ಬಂದಿದ್ದ ಎಳೆಯ ಮೊಗ್ಗುಗಳ ನೆವದಿಂದ ಅಂಗೈಯನ್ನು ಮಡಸಿಕೊಂಡಂತಿತ್ತು. ಮುಳ್ಳು ರೋಮಾಂಚ ಶ್ರೇಣಿಯನ್ನು ಹೊಂದಿತು. ನೀರಿನ ಶೀತಲತೆಯ ಹೆಚ್ಚಳದಿಂದಲೋ ಎಂಬಂತೆ ಗಾಳಿಯ ಕಾರಣದಿಂದ ನಡುಕವನ್ನು ಹೊಂದಿತ್ತು. ಸೀತ್ಕಾರ, ಪಾಣಿಸಂಕೋಚ, ರೋಮಾಂಚ, ಕಂಪನ ಇವೆಲ್ಲಾ ಶೈತ್ಯದ ಪರಿಣಾಮಗಳು. ಗಾಳಿಯ ಕಾರಣದಿಂದ ಉಂಟಾದ ಪರಿಣಾಮಕ್ಕೆ ಶೈತ್ಯವನ್ನು ಕಾರಣವೆಂದು ಉತ್ಪ್ರೇಕ್ಷಿಸಲಾಗಿದೆ.

ಶೃಂಗಾರವಲ್ಲದೆ ವೀರ ರೌದ್ರಾದಿ ರಸಗಳನ್ನು ಅನುಷಂಗಿಕವಾಗಿ ನಿರೂಪಿಸಿದ್ದಾಳೆ. ನರಸಿಂಹನಿಗೂ ಚೋಳರಾಜನಿಗೂ ನಡೆದ ಯುದ್ಧವನ್ನು ವರ್ಣಿಸುವಲ್ಲಿ ವೀರರಸದ ಚಿತ್ರಣವನ್ನು ಕಾಣಬಹುದು. .............. **ಸಂಗರಕೇಲಿಸರಃ ಪ್ರವಿಶ್ಯ ಮೃಣಾಲಕಾಂಡಾನೀವ ಬಾಹುದಂಡಾನುನ್ಮೂಲಯಂತಃ ನತರೋರುಕಾಂಡ್ಯೈ ರಂಭಾಸ್ತಂಭ ಸಂಭಾವನಾ ಮುತ್ತಂಭಯಂತಃ, ಕ್ರೋಧರಸಪುಷ್ಕಲ ವದನ ಪುಷ್ಕರಾಣಿ ಪುಷ್ಕರಾಗ್ರೇಣ ನಿಷ್ಕರುಣಂ ನಿಷ್ಪೀಡಯಂತಃ, ವೀರವರಧೈರ್ಯವಾರಿ ಪೂರಮಾವಿಲಯಂತಃ, ಸರಭಸಂಮಾಂಸಭೇದೋ ಮಸ್ತಿಷ್ಕ ಪಂಕಶೇಷಮಕುರ್ವನ್** ॥ 'ಯುದ್ಧವೆಂಬ ಕ್ರೀಡಾಸರೋವರವನ್ನು ಪ್ರವೇಶಿಸಿ, ಕಮಲದ ಕಾಂಡಗಳಂತೆ ಶತ್ರುಗಳ ಬಾಹುದಂಡಗಳನ್ನು ಕೀಳುತ್ತಾ, ಬಲಿಷ್ಠವಾದ, ದಪ್ಪನಾದ ತೊಡೆಗಳಿಂದ, ಬಾಳೆಯ ದಿಂಡಿನ ಭಾವನೆಯನ್ನು ಉಕ್ಕಿಸುತ್ತಾ, ಕ್ರೋಧವೆಂಬ ರಸ(ನೀರಿ)ದಿಂದ, ಪುಷ್ಟವಾಗಿ ಬೆಳೆದ ಮುಖ ಕಮಲಗಳನ್ನು, ಆನೆಯ ಸೊಂಡಿಲಿನ ತುದಿಯಿಂದ, ನಿಷ್ಕರುಣೆಯಿಂದ ಹಿಂಡುತ್ತಾ, ವೀರಶ್ರೇಷ್ಠರ ಧೈರ್ಯವೆಂಬ ನೀರಿನ ರಾಶಿಯನ್ನು ಬಗ್ಗಡಗೊಳಿಸುತ್ತಾ, ಅತಿಶೀಘ್ರವಾಗಿ ಆ ಕೊಳವನ್ನು ಮಾಂಸ, ಮೇದಸ್ಸು, ತಲೆಬುರುಡೆಗಳಿಂದ ತುಂಬಿದ ಕೆಸರುಳಿಯುವಂತೆ ಮಾಡಿದವು.

**ಪ್ರಭಾವ:** ಗದ್ಯದ ಶೈಲಿಯು ಬಾಣ, ಸುಬಂಧು, ದಂಡಿಯರ ಶೈಲಿಯನ್ನು ಅನುಸರಿಸಿದೆ. ದೀರ್ಘ ವರ್ಣನೆಗಳ ಕೊನೆಗೆ ಪರಿಸಂಖ್ಯೆ, ಶ್ಲೇಷ, ವಿರೋಧಾಭಾಸ ಮೊದಲಾದವುಗಳನ್ನು ಸೇರಿಸುವ ಗದ್ಯಕಾರರ ಸಂಪ್ರದಾಯವನ್ನು

ಅನುಸರಿಸಿದ್ದಾಳೆ. ತಿರುಮಲಾಂಬೆಯ ಕಾಲ್ಪನಿಕ ಪ್ರಕರಣವಾದ ಆಸೇತು ಹಿಮಾಚಲವಾದ ಇಡೀ ಭಾರತದ ಭೂಮಿಯನ್ನೇ ಗೆದ್ದ ನರಸಿಂಹನ ದಿಗ್ವಿಜಯ ವರ್ಣನೆಯಲ್ಲಿ ರಘುವಂಶದ ರಘುವಿನ ದಿಗ್ವಿಜಯದ ಪ್ರಭಾವ ಕಂಡುಬರುತ್ತದೆ.

ವಿದ್ವಾಂಸರು ಅಭಿಪ್ರಾಯ ಪಡುವಂತೆ ಕಥಾನಕದಲ್ಲಿ ಓಟ ಕಡಿಮೆ, ಕವಯತ್ರಿಯು ಓಜೋಗುಣಭೂಯಿಷ್ಠವಾದ ಗೌಡೀಶೈಲಿಯನ್ನು ಬಳಸಿಕೊಂಡಿದ್ದಾಳೆ. ದೀರ್ಘ ಸಮಾಸಪದಗಳುಳ್ಳ ಗದ್ಯ ಭಾಗವೇ ಅಧಿಕವಾಗಿವೆ. ಪದ್ಯಗಳು ಸುಂದರವಾಗಿವೆ.

ಕಾವ್ಯಾಂತ್ಯದಲ್ಲಿ ಅಚ್ಯುತರಾಯನನ್ನೂ, ಶೀಲವತಿಯಾದ ವರದಾಂಬಿಕೆಯನ್ನೂ ಶ್ರೇಯಸ್ಸಿಗೆ ಕಾರಣವಾದ ಚಿನವೆಂಕಟಾದ್ರಿಯನ್ನು ವೆಂಕಟೇಶ್ವರನು ಚಿರಕಾಲ ಕಾಪಿಡಲಿ ಎಂದು ಹೀಗೆ ಕೋರಿದ್ದಾಳೆ:

**ಅರ್ತಾದರಾತ್ ಅಚ್ಯುತದೇವರಾಯಂ ವರೇಣ್ಯ ಶೀಲಾಂ ವರದಾಂಬಿಕಾಂ ಚ**
**ಶ್ರೇಯೋವಿದಾನಮ್ ಚಿನ ವೇಂಕಟಾದ್ರಿಂ ಶ್ರೀ ವೇಂಕಟೇಶಃ ಚಿರಕಾಲ ಮವ್ಯಾತ್ ॥**

ಗಂಗಾದೇವಿಯು ವಿಜಯನಗರದ ಆರಂಭ ಕಾಲದ ಕವಯತ್ರಿಯಾದರೆ, ತಿರುಮಲಾಂಬಾ ಈ ಸಾಮ್ರಾಜ್ಯದ ಉತ್ಕರ್ಷಕಾಲದಲ್ಲಿ ಬಂದವಳು. "ಹನ್ನೆರಡನೆಯ ಶತಮಾನದ ಕ್ರಾಂತಿಯಿಂದ, ಹದಿನೇಳನೆಯ ಶತಮಾನದ ವರೆಗೆ ತೆರವು ಬಿದ್ದ ಸ್ಥಳವನ್ನು, ಕನ್ನಡ ಕವಯತ್ರಿಯರ ಅಭಾವವನ್ನು, ಈ ಕನ್ನಡಿತಿಯರು ಹೋಗಲಾಡಿಸಿದ್ದಾರೆ[೬೭].

ಕೇವಲ ಓದುವ ತಿರುಮಲಾಂಬೆಯಾಗಿ, ಶಾಸನ ರಚನೆಯಲ್ಲಷ್ಟೇ ತನ್ನ ಪ್ರತಿಭೆನ್ನು ವಿನಿಯೋಗಿಸದೆ, ಕಾವ್ಯರಚನೆಗೆ ತೊಡಗಿದ ಕವಯತ್ರಿಯು ತನ್ನ ಕವಿತಾ ಸಾಮರ್ಥ್ಯದಿಂದ ಅರಸನ ಮೆಚ್ಚುಗೆಗಳಿಸಿ, ಅವನ ಪ್ರಿಯ ಮಹಿಷಿಯರಲ್ಲೊಬ್ಬಳಾದವಳಷ್ಟೇ ಅಲ್ಲದೆ ತನ್ನ ಕಾವ್ಯದ ಮೂಲಕ ಸಹೃದಯರ ಮನಸ್ಸನ್ನೂ ಸೂರೆಗೊಂಡವಳಾಗಿದ್ದಾಳೆ.

**ಅಧ್ಯಯನದ ಫಲಿತ**

ಈ ಅಧ್ಯಾಯದಲ್ಲಿ ಸಂಸ್ಕೃತ ಕವಯತ್ರಿಯರ ಕೆಲವು ಕಾವ್ಯಗಳ ಅಧ್ಯಯಕ್ಕೆ ಬಳಸಿಕೊಳ್ಳಲಾಗಿದೆ. ಕರ್ನಾಟಕದ ಅರಸಿಯರು ರಚಿಸಿರುವ ಲಭ್ಯ ಕೃತಿಗಳು ಬೆರಳೆಣಿಕೆಯಷ್ಟಿದ್ದರೂ, ಪಾಂಡಿತ್ಯದಲ್ಲಿ ಯಾವ ಕವಿಯೂ ಕಡಿಮೆ ಇಲ್ಲದಂತಹ ರಚನೆಗಳನ್ನು ಇಲ್ಲಿ ಕಾಣಬಹುದು. ಇಲ್ಲಿ ವೈವಿಧ್ಯಮಯವಾದ ಕೃತಿಗಳನ್ನು ಕಾಣಬಹುದು. ವಿಭಿನ್ನ ಕಾಲಘಟ್ಟದ ಅರಸಿಯರು ವಿಭಿನ್ನ ಶೈಲಿ, ಛಂದಸ್ಸನ್ನು ತಮ್ಮ ಕೃತಿಗಳಲ್ಲಿ ಬಳಸಿಕೊಂಡಿರುವುದನ್ನು ಕಾಣುತ್ತೇವೆ. ವಿಜಯಭಟ್ಟಾರಿಕೆಯು ಅಂದಿನ ಕಾಲದಲ್ಲಿ ಬಹು ಮೆಚ್ಚುಗೆ ಪಡೆದಿದ್ದ, ಕಾವ್ಯೇಷು ನಾಟಕಂ ರಮ್ಯಂ ಎಂದು ಭಾವಿಸುತ್ತಿದ್ದ ನಾಟಕರಚನೆಗೆ ತೊಡಗಿದ್ದಳು. ಕನ್ನಡದ ಅರಸಿಯೋರ್ವಳು ರಚಿಸಿರುವ ಈ ನಾಟಕವು, ನಾಟಕ ಪ್ರಕಾರ ಅಂದಿನ ಕಾಲದಲ್ಲಿ ಕನ್ನಡ ನಾಡಿನಲ್ಲಿ ಪ್ರಚಲಿತದಲ್ಲಿತ್ತು ಎಂದು ಸಾಬೀತು ಪಡಿಸುವಲ್ಲಿ ಸಹಕಾರಿಯಾಗಿದೆ. ಪ್ರಾಚೀನ ಕನ್ನಡಸಾಹಿತ್ಯದ ನಾಟಕರಚನೆಗಳು ದೊರೆತಿಲ್ಲದ ಕಾರಣ ನಾಟಕಪ್ರಕಾರ ಕನ್ನಡ ನೆಲದಲ್ಲಿತ್ತೆ? ಎನ್ನುವ ಸಂಶಯಕ್ಕೆ ಉತ್ತರವನ್ನು ಕನ್ನಡನೆಲದಲ್ಲಿ ರಚಿತವಾದ ಈ ಸಂಸ್ಕೃತ ನಾಟಕ ನೀಡುತ್ತದೆ.

ಗಂಗಾದೇವಿ ಹಾಗೂ ತಿರುಮಲದೇವಿಯರು (ತಿರುಮಲಾಂಬೆ) ವಿಜಯನಗರಕಾಲದ ಐತಿಹಾಸಿಕ ವಿಚಾರಗಳನ್ನು ತಮ್ಮ ಕಾವ್ಯದಲ್ಲಿ ಕಲಾತ್ಮಕವಾಗಿ ತಂದಿದ್ದಾರೆ. ಐತಿಹಾಸಿಕ ವಿಚಾರಗಳನ್ನು ಕೇವಲ ಶಾಸನಗಳಿಂದ ಮಾತ್ರ ತಿಳಿದು ಕೊಳ್ಳಲು ಶಕ್ಯವಿಲ್ಲ. ಕೆಲವು ವಿಶಿಷ್ಟ ವರ್ಣನೆಗಳು, ಪ್ರಕರಣಗಳನ್ನು ಕಾವ್ಯಗಳು ದೀರ್ಘವಾಗಿ ಬಣ್ಣಿಸುತ್ತದೆ.

